**ಡಾ. ಸಿ.ಯು. ಮಂಜುನಾಥ್**

ಸಿ.ಯು. ಮಂಜುನಾಥ್ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆಯಲ್ಲಿ 30.4.1950ರಲ್ಲಿ ಸಿ.ಎಂ.ಉಮಾಪತಯ್ಯ–ಪುಟ್ಟವೀರಮ್ಮ ದಂಪತಿಗಳಿಗೆ ಜನಿಸಿದರು. ಚಿತ್ರದುರ್ಗ, ಬೆಂಗಳೂರುಗಳಲ್ಲಿ ವಿದ್ಯಾಭ್ಯಾಸ. ಪ್ರತಿಷ್ಠಿತ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಆನರ್ಸ್,(1970), ಎಂ.ಎ.,(1972) ರಾಷ್ಟ್ರೀಯ ಅರ್ಹತಾ ವಿದ್ಯಾರ್ಥಿವೇತನದೊಂದಿಗೆ ಪ್ರಥಮ ದರ್ಜೆ ಹಾಗೂ ರ್‍ಯಾಂಕ್ ಸಹಿತ ಮುಗಿಸಿ, ವಿದ್ಯಾಭ್ಯಾಸ ಮಾಡಿದ್ದ ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಯ ಆರಂಭ(1972). ಕ್ರಮೇಣ ಪ್ರವಾಚಕ, ವಿಭಾಗದ ಮುಖ್ಯಸ್ಥ ಹಾಗೂ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ನಿವೃತ್ತಿ(2007). ನಿರಂತರ 35 ವರ್ಷಗಳ ಬೋಧನಾನುಭವ. ಸೇವೆಯ ಜತೆಜತೆಯಲ್ಲಿ ಡಾ.ಎಂ.ಚಿದಾನಂದ ಮೂರ್ತಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ 'ಶಾಸನಗಳು ಮತ್ತು ಕರ್ಣಾಟಕ ಸಂಸ್ಕೃತಿ' – ಕ್ರಿ.ಶ.1150–1340 ನಿಬಂಧಕ್ಕೆ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪದವಿ ಪಡೆದರು(1991). ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಸರ್ಟಿಫಿಕೇಟ್ ಕೋರ್ಸಿನಲ್ಲಿ 18 ವರ್ಷಗಳ ಕಾಲ ಬೋಧನೆ. ಕಳೆದ ಐದು ವರ್ಷಗಳಿಂದ ಶೇಷಾದ್ರಿಪುರಂ ಕನ್ನಡ ಸ್ನಾತಕೋತ್ತರ ಕೇಂದ್ರ ಮತ್ತು ಎಂ.ಇ.ಎಸ್. ಕನ್ನಡ ಸ್ನಾತಕೋತ್ತರ ಕೇಂದ್ರಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಭಾಷಾ ವಿಜ್ಞಾನವನ್ನು ಬೋಧಿಸುತ್ತಿದ್ದಾರೆ.

ಹಲವಾರು ಸಂಭಾವನಾ ಗ್ರಂಥಗಳಲ್ಲಿ, ಸ್ಮರಣ ಸಂಪುಟಗಳಲ್ಲಿ, ಬೆಂಗಳೂರು ವಿಶ್ವವಿದ್ಯಾಲಯದ ಸಾಹಿತ್ಯ ಚರಿತ್ರೆಯ ಸಂಪುಟಗಳಲ್ಲಿ, ವಿದ್ವತ್ ಪತ್ರಿಕೆಗಳಲ್ಲಿ ಸುಮಾರು 80ಕ್ಕೂ ಅಧಿಕ ಸಂಪ್ರಬಂಧಗಳು ಮತ್ತು ಲೇಖನಗಳ ಪ್ರಕಟಣೆ. ತಾಲ್ಲೂಕು, ರಾಜ್ಯ ಹಾಗೂ ರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣಗಳಲ್ಲಿ ಪ್ರಬಂಧಗಳ ಮಂಡನೆ. ವಿಶ್ವವಿದ್ಯಾಲಯ, ಸಾಹಿತ್ಯ ಪರಿಷತ್ತು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಮಿಥಿಕ್ ಸೊಸೈಟಿ, ಬಸವ ಸಮಿತಿ, ವಿವಿಧ ಕಾಲೇಜುಗಳು ಹಾಗೂ ಹಲವು ಸಂಘ ಸಂಸ್ಥೆಗಳಲ್ಲಿ ವಿಶೇಷ ಉಪನ್ಯಾಸಗಳನ್ನು ಮಾಡಿದ್ದಾರೆ. ಹಲವು ಉನ್ನತ ಸಂಸ್ಥೆಗಳಲ್ಲಿ ಸಲಹೆಗಾರರಾಗಿ, ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯ ನಿರ್ವಹಿಸಿದ್ದಾರೆ.

'ಚನ್ನ ಬಸವಣ್ಣನವರ ವಚನಗಳು', 'ಘಟ್ಟಿವಾಳಯ್ಯನ ವಚನಗಳು', 'ಬಸವೋತ್ತರ ಯುಗದ ಶರಣರ ಆಯ್ದ ವಚನಗಳು' ಗ್ರಂಥಗಳನ್ನು ಸಂಪಾದಿಸಿದ್ದಾರೆ. ಅವುಗಳಲ್ಲಿ ಕೆಲವು ಮರಾಠಿ, ತಮಿಳು ಮತ್ತು ಇಂಗ್ಲಿಷ್ ಭಾಷೆಗಳಿಗೆ ಭಾಷಾಂತರವಾಗಿವೆ. ಮಕ್ಕಳಿಗಾಗಿ ಬರೆದ 'ಅಂಬಿಗರ ಚೌಡಯ್ಯ' ಕೃತಿ ಇಂಗ್ಲಿಷ್ ಭಾಷೆಗೆ ಅನುವಾದವಾಗಿದೆ. ಡಾ.ಎಂ.ಚಿದಾನಂದಮೂರ್ತಿಯವರೊಂದಿಗೆ 'ಭೂಷಣ' (ಸರ್ಪಭೂಷಣ ಶಿವಯೋಗಿಗಳ ದ್ವಿಶತಮಾನೋತ್ಸವ ಸಂಪುಟ), ಡಾ.ಬಿ.ಸಿ.ವೀರಪ್ಪನವರೊಂದಿಗೆ 'ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ' ಗ್ರಂಥಗಳನ್ನು ಸಂಪಾದಿಸಿದ್ದಾರೆ. ಇತರರೊಂದಿಗೆ 'ಬೆಳ್ಳಿ ಬೆಡಗು' ಗ್ರಂಥವನ್ನು ಸಂಪಾದಿಸಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಎರಡು ಪಠ್ಯಪುಸ್ತಕಗಳನ್ನು ಇತರರೊಂದಿಗೆ ಸಂಪಾದಿಸಿದ್ದಾರೆ. ಸ್ವತಂತ್ರವಾಗಿ 'ಹೇಮದೀಪ್ತಿ', 'ಕ್ರೀಯಾ ಚೇತನ', 'ಸ್ವರ್ಣರೇಣುಕ' ಮುಂತಾದ ಕೃತಿಗಳನ್ನು ಸಂಪಾದಿಸಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದ ಅಂಗೀಕೃತ ಪಿಎಚ್.ಡಿ ಮಾರ್ಗದರ್ಶಕರಾಗಿ 3 ವಿದ್ಯಾರ್ಥಿಗಳಿಗೆ ಯಶಸ್ವಿಯಾಗಿ ಮಾರ್ಗದರ್ಶನ ಮಾಡಿದ್ದಾರೆ. ಸಂಶೋಧನೆಗಾಗಿ ಕರ್ನಾಟಕದ ಬಹುಭಾಗವನ್ನು, ಭಾರತದ ಹಲವು ರಾಜ್ಯಗಳನ್ನು ಹಾಗೂ ಅಮೇರಿಕಾ ಪ್ರವಾಸ ಮಾಡಿದ ಅನುಭವ ಅವರ ಪಾಲಿಗಿದೆ.

ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಯುವ ಸಂಗಮದ ಸರ್ವಾಧ್ಯಕ್ಷರಾಗಿ 2003ರಲ್ಲಿ ಅಭಿನಂದಿತರಾಗಿದ್ದಾರೆ. ಹೈದರಾಬಾದಿನ ಎನ್ರಾನ್ ಸಂಸ್ಥೆಯಿಂದ ಬೋಧನೆ ಮತ್ತು ಸಂಶೋಧನೆಗಾಗಿ ಚಿನ್ನದ ಪದಕದೊಂದಿಗೆ ಫೆಲೊ ಆಗಿ 2006ರಲ್ಲಿ ಮಾನ್ಯತೆ ಪಡೆದಿದ್ದಾರೆ.

ನಿವೃತ್ತಿಯನಂತರವೂ ಅಧ್ಯಯನ, ಸಂಶೋಧನೆಯಲ್ಲಿ ನಿರತರಾಗಿ ಶಾಸನ ಶಾಸ್ತ್ರ, ಹಳಗನ್ನಡ ಸಾಹಿತ್ಯ ಮತ್ತು ಭಾಷಾ ವಿಜ್ಞಾನ ಕ್ಷೇತ್ರಗಳಲ್ಲಿ ಕ್ರಿಯಾಶೀಲವಾಗಿರುವ ಅವರ ವಿಶ್ರಾಂತ ಜೀವನದಲ್ಲಿ ಇನ್ನೂ ಕೆಲವು ಮೌಲಿಕ ಕೃತಿಗಳನ್ನು ನಿರೀಕ್ಷಿಸಬಹುದಾಗಿದೆ.

# ಶಾಸನಗಳು ಮತ್ತು ಕರ್ಣಾಟಕ ಸಂಸ್ಕೃತಿ

## ಕ್ರಿ.ಶ. ೧೧೫೦-೧೩೪೦



ಡಾ. ಸಿ.ಯು. ಮಂಜುನಾಥ್

ಚಿತ್ಕಲಾ ಪ್ರಕಾಶನ, ಕುಪ್ಪಂ

**SHASANAGALU MATTU KARNATAKA SAMSKRITI:** A research work by **Dr. C.U. Manjunath,** Rtd. Principal, SJRC College, Anandarao Circle, Bangalore, # 148, 7th C Main, 3rd Cross, Hampinagar, Bangalore-560 104, Ph: 09845031692

Publisher : **T.S. Narasimha Prasad** for **Chitkalaa Prakashana,** No. 13-151/1, Somaiah Street, Kuppam - 517425, Andhrapradesh. Ph: 08008368298
e-mail :chitkalaa_prakashana@yahoo.com

| | | |
|---|---|---|
| First Edition | : | **2012** |
| Pages | : | **xviii + 546 + 8 Colour Pages** |
| Copies | : | **1000** |
| Price | : | **₹ 500/-** |
| Size | : | **1/4 Crown** |
| Paper | : | **NS Maplithop70 GSM** |
| © | : | **Dr. C.U. Manjunath** |
| Cover page | : | **Lakshminarayana** |
| Printers | : | **Pragati Graphics**<br>Hampinagar<br>Bangalore |

ಗುರು ಶ್ರೇಷ್ಠರಾದ

**ಡಾ. ಎಂ. ಚಿದಾನಂದಮೂರ್ತಿ**

ಅವರಿಗೆ ಈ ಗ್ರಂಥವನ್ನು ಗೌರವಪೂರ್ವಕವಾಗಿ

ಅರ್ಪಿಸಲಾಗಿದೆ



ಈ ಪ್ರಬಂಧವನ್ನು ವಿವರವಾಗಿ ಓದಿದ್ದೇನೆ. ಈ ಪ್ರಬಂಧ ಬರೆಯಲು ಶ್ರೀ ಮಂಜುನಾಥ್ ಅವರು ಸಂಗ್ರಹಿಸಿರುವ ಮೂಲ ಮತ್ತು ದ್ವಿತೀಯ ಆಧಾರ ಸಾಮಗ್ರಿಗಳು ವಿಪುಲವಾಗಿವೆ. ಅವುಗಳನ್ನು ಉತ್ತಮವಾಗಿ ಜೋಡಿಸಿ, ವಿಶ್ಲೇಷಿಸಿ ಪ್ರಬಂಧ ರಚಿಸಲು ಶ್ರಮಿಸಿರುವ ಶ್ರೀ ಮಂಜುನಾಥರಿಗೆ ಅಭಿನಂದನೆಗಳು ಸಲ್ಲಬೇಕು. ಹಲವಾರು ಹೊಸ ವಿಷಯಗಳನ್ನು ಅವರು ಈ ಪ್ರಬಂಧದಲ್ಲಿ ಕಾಣಿಸಿದ್ದಾರೆ.

**ಡಾ. ಬಿ.ಆರ್. ಗೋಪಾಲ್**



ಶಾಸನಗಳು ಕರ್ನಾಟಕ ಸಂಸ್ಕೃತಿಯ ಪುನಾರಚನೆಗೆ ಬೇಕಾದ ವಿಪುಲ ಸಾಮಗ್ರಿಯ ದೊಡ್ಡ ಗಣಿ. ಆ ಗಣಿಯಿಂದ ಬೇಕಾದ ಮಾಹಿತಿಯನ್ನು ಪ್ರತ್ಯೇಕಿಸಿ ತೆಗೆಯುವುದು ಒಂದು ಕೆಲಸವಾದರೆ, ಆ ಮಾಹಿತಿಯನ್ನು ಪರಸ್ಪರ ಹೋಲಿಸಿ, ಸಾಹಿತ್ಯ ಮತ್ತು ಇತರ ಮೂಲಗಳಲ್ಲಿ ದೊರಕುವ ಮಾಹಿತಿಯ ಜೊತೆ ಬೆಸೆದು ವ್ಯಾಖ್ಯಾನಿಸುವುದು ಇನ್ನೊಂದು ಕೆಲಸ. ಆ ಎರಡೂ ಕೆಲಸಗಳು ಈ ನಿಬಂಧದಲ್ಲಿ ಅತ್ಯಂತ ಸಮರ್ಪಕವಾಗಿ ನಡೆದಿವೆ. ಈ ನಿಬಂಧದ ವಸ್ತುವಿನ ಕಾಲ(12–13–14ನೇ ಶ.ಮಾ.) ಕರ್ನಾಟಕದ ಪರಂಪರೆಯ ಅತ್ಯಂತ ಮಹತ್ವದ ಕಾಲ. ಕನ್ನಡ ಸಾಹಿತ್ಯದ ಮತ್ತು ಸಮಾಜದ ಪುನರುಜ್ಜೀವನ ಕಾಲವಾದ ವಚನಯುಗ ಮತ್ತು ಕನ್ನಡ ಸಂಸ್ಕೃತಿಗೆ ಬಿದ್ದ ಆಘಾತದ ಕಾಲ (ವಿಜಯನಗರ ಸಾಮ್ರಾಜ್ಯದ ಆರಂಭದ ಪೂರ್ವದ ಕಾಲ) ಎರಡೂ ಈ ಲವಧಿಗೆ ಸೇರುತ್ತದೆ. ಈ ಹಿನ್ನೆಲೆಯಲ್ಲಿ ಆ ಕಾಲದ ಶಾಸನಗಳು ತೋರಿ ಕೊಡುವ ಜನಜೀವನದ ಅಧ್ಯಯನ ಅತ್ಯಂತ ಉಪಯುಕ್ತವಾಗಬಲ್ಲುದು. ಕರ್ನಾಟಕ ಸಂಸ್ಕೃತಿಯ ಸಮಗ್ರ ಪುನಾರಚನೆಯಲ್ಲಿ ಈ ನಿಬಂಧ ಅತ್ಯಂತ ಮಹತ್ವದ ಆಕರ ಗ್ರಂಥವಾಗಬಲ್ಲುದು.

**ಡಾ. ಎಂ. ಚಿದಾನಂದ ಮೂರ್ತಿ**



ಶ್ರೀ ಸಿ.ಯು.ಮಂಜುನಾಥ್ ಅವರ 'ಶಾಸನಗಳು ಮತ್ತು ಕರ್ಣಾಟಕ ಸಂಸ್ಕೃತಿ' (ಕ್ರಿ.ಶ.1150–ಕ್ರಿ.ಶ.1340), ಒಂದು ನಿರ್ದಿಷ್ಟ ಕಾಲಮಾನದ ಕರ್ಣಾಟಕ ಸಂಸ್ಕೃತಿಯ ಚಿತ್ರವನ್ನು ಶಾಸನಗಳ ಆಧಾರಗಳಿಂದ ಕಟ್ಟಿಕೊಡುವ ಪ್ರಯತ್ನ; ಅತ್ಯಂತ ಯಶಸ್ವಿಯಾದ ಪ್ರಯತ್ನವೂ ಹೌದು.

ಈ ದಿಶೆಯಲ್ಲಿ ಡಾ.ಎಂ.ಚಿದಾನಂದ ಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' (ಕ್ರಿ.ಶ.450–ಕ್ರಿ.ಶ.1150)ವೊಂದು ಆದ್ಯ ಗ್ರಂಥ. ಡಾ.ಮೂರ್ತಿಯವರ ಕಾರ್ಯವನ್ನು ಶ್ರೀ ಮಂಜುನಾಥ್ ಶ್ಲಾಘ್ಯವಾಗಿ ಮುಂದುವರಿಸಿ, ಒಂದು ಮುಖ್ಯವಾದ ಘಟ್ಟಕ್ಕೆ ತಂದು ನಿಲ್ಲಿಸಿದ್ದಾರೆ. ಅವರು ಆರಿಸಿಕೊಂಡಿರುವ ಅವಧಿ ಕರ್ಣಾಟಕದ ಇತಿಹಾಸದಲ್ಲಿ ಹಲವು ಕಾರಣಗಳಿಂದ ಮಹತ್ತ್ವಪೂರ್ಣವಾದುದು; ಉಜ್ವಲವಾದುದು. ಸುಮಾರು ಎರಡು ಶತಮಾನಗಳ ಸಾಂಸ್ಕೃತಿಕ ಚರಿತ್ರೆಯನ್ನು ಶಾಸನಗಳ ಬೆಳಕಿನಲ್ಲಿ ಪುನರ್ರಚಿಸುವ ವಿದ್ವತ್ ಸಾಹಸದ ಪ್ರತೀಕವಾಗಿದೆ, ಶ್ರೀ ಮಂಜುನಾಥ್ ಅವರ ಬೃಹತ್ ನಿಬಂಧ. ಅದು ಕುತೂಹಲವನ್ನು ಕೆರಳಿಸುತ್ತದೆ; ಅಂತೆಯೆ ತಣಿಸುತ್ತದೆ.

ತಮ್ಮ ಉದ್ದೇಶಕ್ಕೆ ಶಾಸನಗಳನ್ನು ಪ್ರಮುಖವಾದ ಆಕರಗಳನ್ನಾಗಿ ಲೇಖಕರು ಬಳಸಿಕೊಂಡಿದ್ದಾರೆ; ಅವುಗಳಿಗೆ ಪೂರಕವಾಗಿ ಆ ಕಾಲದ ಸಾಹಿತ್ಯ ಕೃತಿಗಳನ್ನೂ, ಜನಪದ ಸಾಹಿತ್ಯವನ್ನೂ, ವಿವಿಧ ವಿದ್ವಾಂಸರ ಗ್ರಂಥಗಳನ್ನೂ ಸಮುಚಿತವಾಗಿ ಉಪಯೋಗಿಸಿಕೊಂಡಿದ್ದಾರೆ. ಯಾವೊಂದು ಆಧಾರವನ್ನೂ ಅವರು ಗಮನಿಸದೆ ಬಿಟ್ಟಿಲ್ಲ. ಹೀಗಾಗಿ ನಿಬಂಧಕ್ಕೊಂದು ಅಧಿಕೃತ ಸ್ವರೂಪ ಪ್ರಾಪ್ತವಾಗಿದೆ.

ನಿಬಂಧದ ಪ್ರತಿಯೊಂದು ಅಧ್ಯಾಯವೂ ಬೆರಗುಗೊಳಿಸುವಷ್ಟು ಸಮೃದ್ಧವಾದ ಸಾಮಗ್ರಿಗಳನ್ನೊಳಗೊಂಡು, ತಲಸ್ಪರ್ಶಿಯಾದ ಮತ್ತು ವಸ್ತುನಿಷ್ಠವಾದ ವಿಶ್ಲೇಷಣೆ, ವ್ಯಾಸಂಗಗಳನ್ನು ತೋರ್ಪಡಿಸುತ್ತದೆ; ಲೇಖಕರ ಅಗಾಧ ಶ್ರಮ, ಪರಿಶ್ರಮಗಳ ಒರೆಗಲ್ಲಾಗಿದೆ.

ತಮ್ಮ ವಿಷಯಕ್ಕೆ ಸಂಬಂಧಿಸಿದ ಅನೇಕ ಸಮಸ್ಯೆಗಳನ್ನು ಲೇಖಕರು ಬಿಡಿಸಿದ್ದಾರೆ; ಕೆಲವನ್ನು ಪ್ರಾಮಾಣಿಕವಾಗಿ ಹಾಗೆಯೇ ಉಳಿಸಿದ್ದಾರೆ. ಊಹೆ, ಕಲ್ಪನೆಗಳನ್ನು ಅವರು ಆಶ್ರಯಿಸಿಲ್ಲವೆಂಬುದು ಮೆಚ್ಚಬೇಕಾದ ಸಂಗತಿ. ವಿದ್ವಾಂಸರ ಭಿನ್ನಾಭಿಪ್ರಾಯಗಳನ್ನು ಅವರು ಉದ್ದಕ್ಕೂ ಉದ್ಧರಿಸಿ, ಚರ್ಚಿಸುತ್ತಾರೆ; ಸ್ವಂತ ಅಭಿಪ್ರಾಯವನ್ನು – ಇತ್ಯಾತ್ಮಕ ಅಥವಾ ನೇತ್ಯಾತ್ಮಕ – ಸೂಚಿಸುತ್ತಾರೆ. ನಿರ್ಣಯ, ಸಂಶಯ ಎರಡೂ ರೂಪಗಳಲ್ಲಿ ಅವರ ವಿವೇಚನೆಯ ಫಲ ಪ್ರಕಟವಾಗಿದೆ. ಅಲ್ಲೊಂದು ಇಲ್ಲೊಂದು ಹೇಳಿಕೆ ಭಿನ್ನಾಭಿಪ್ರಾಯಕ್ಕೆ ಎಡೆಗೊಡಬಹುದು; ಆದರೆ ನಿಬಂಧದ ಮೌಲಿಕತೆಗೆ ಅದರಿಂದ ಬಾಧಕವಿಲ್ಲ.

ಸಂಶೋಧನೆಗೆ ತಕ್ಕ ನಿರಾಡಂಬರವಾದ, ನೇರವಾದ ಮತ್ತು ಸ್ಪಷ್ಟವಾದ ಭಾಷೆ ಕೂಡ ಈ ನಿಬಂಧದ ಒಂದು ವೈಶಿಷ್ಟ್ಯವಾಗಿದೆ.

ಒಟ್ಟಿನಲ್ಲಿ ಇದೊಂದು ಶ್ರೇಷ್ಠವಾದ ನಿಬಂಧ; ಸಂಶೋಧನೆಯ ಪ್ರಕಾರಕ್ಕೊಂದು ಘನವಾದ ಕೊಡುಗೆ. ಕನ್ನಡ ವಿದ್ವತ್ತು ಮತ್ತು ಸಂಶೋಧನೆ ಇದರಿಂದ ಕೆಲವು ಹೆಜ್ಜೆಗಳಷ್ಟು ಮುಂದೆ ಹೋಗುವುದರಲ್ಲಿ ಸಂದೇಹವಿಲ್ಲ. ಇಂಥ ಕೆಲಸವನ್ನು ಕೈಗೊಳ್ಳುವವರಿಗೆ ಇದೊಂದು ಮಾದರಿಯಾಗಬಲ್ಲುದು.

**ಡಾ. ಸಿ.ಪಿ. ಕೃಷ್ಣಕುಮಾರ್**

## ಮೊದಲ ಮಾತು.....

ಸ್ನಾತಕೋತ್ತರ ಪದವಿ ಪಡೆದನಂತರ ಬೆಂಗಳೂರಿನಲ್ಲಿ ಉದ್ಯೋಗ ಪಡೆದು ನೆಲೆ ನಿಂತ ಮೇಲೆ ಕನ್ನಡದಲ್ಲಿ ಸಂಶೋಧನೆ ಮಾಡಿ, ನನ್ನ ಶಕ್ತ್ಯಾನುಸಾರ ಒಂದು ಕಾಣಿಕೆಯನ್ನು ಕನ್ನಡ ಜ್ಞಾನ ಪ್ರಪಂಚಕ್ಕೆ ಸಲ್ಲಿಸಬೇಕೆಂಬ ಪ್ರಬಲ ಆಸೆ ಮನಸ್ಸಿನಲ್ಲಿ ಮೂಡತೊಡಗಿತು. ಈ ನನ್ನ ಆಸೆಯನ್ನು ನನ್ನ ವಿದ್ಯಾಗುರುಗಳಾದ ಡಾ.ಚಿದಾನಂದ ಮೂರ್ತಿಯವರಲ್ಲಿ ಸಂಕೋಚದಿಂದ ಹೇಳಿಕೊಂಡಾಗ, ಅವರು ಅದನ್ನು ಕೇಳಿ ಸಂತೋಷ ಪಟ್ಟರು. ಅನಂತರ ಅವರನ್ನು ಸಂಶೋಧನೆಗೆ ಮಾರ್ಗದರ್ಶಕರಾಗಿರಬೇಕೆಂದು ಕೇಳಿಕೊಂಡೆ. ಅವರು ಒಪ್ಪಿ ಸಂಶೋಧನೆಗೆ ಕೆಲವು ವಿಷಯಗಳನ್ನು ಚರ್ಚಿಸಿದರು. ಕೊನೆಯಲ್ಲಿ 'ಶಾಸನಗಳು ಮತ್ತು ಕರ್ಣಾಟಕ ಸಂಸ್ಕೃತಿ' – ಕ್ರಿ.ಶ.1150–1340 ಎಂಬ ವಿಷಯವನ್ನು ಅಂತಿಮಗೊಳಿಸಿದೆವು. ಪಟ್ಟಿಕೆಗಳ ತಯಾರಿಕೆಯಿಂದ ಹಿಡಿದು ಟಿಪ್ಪಣಿ ಸಂಗ್ರಹ, ಕ್ಷೇತ್ರಕಾರ್ಯ ಮುಂತಾದ ಸಂಶೋಧನೆಯ ಎಲ್ಲ ವಿಧಾನಗಳನ್ನು ಕರಗತ ಮಾಡಿಕೊಟ್ಟರು. ಶ್ರವಣಬೆಳಗೊಳ, ಕಲ್ಯ, ಮಾಗಡಿ ಮುಂತಾದ ಅನೇಕ ಸ್ಥಳಗಳಿಗೆ ಕರೆದುಕೊಂಡು ಹೋಗಿ ಕ್ಷೇತ್ರಕಾರ್ಯದ ಪ್ರತ್ಯಕ್ಷ ಅನುಭವಗಳನ್ನು, ಸಂಶೋಧನೆಯ ಸೂಕ್ಷ್ಮಗಳನ್ನು ಧಾರೆ ಎರೆದರು. ಉಡುಪಿ, ಧಾರವಾಡ, ತಿರುಪತಿ ಮುಂತಾದ ಕಡೆ ನಡೆದ ವಿದ್ವತ್ ಗೋಷ್ಠಿಗಳಿಗೆ ಕರೆದೊಯ್ದು ವಿದ್ವತ್‌ಲೋಕದ ದಿಗ್ಗಜರನ್ನು ಪರಿಚಯಿಸಿದರು. ಗೋಷ್ಠಿಗಳಲ್ಲಿ ಸಂಪ್ರಬಂಧಗಳನ್ನು ಮಂಡಿಸಲು ಮಾಡಿಕೊಳ್ಳಬೇಕಾದ ಸಿದ್ಧತೆ, ಅನುಸರಿಸಬೇಕಾದ ವಿಧಾನ, ಕ್ರಮ ಮುಂತಾದವುಗಳನ್ನು ತಿಳಿಸಿಕೊಟ್ಟರು. ಅವರ ಸ್ವಂತ ಪುಸ್ತಕ ಸಂಗ್ರಹವನ್ನು ಧಾರಾಳವಾಗಿ ಉಪಯೋಗಿಸಲು ಅವಕಾಶ ಕೊಟ್ಟರು. ನನ್ನ ಅತಿ ನಿಧಾನದ ಕಾರ್ಯರೀತಿಯಿಂದ ಬೇಸರಗೊಳ್ಳದೆ ನನ್ನ ಸಂಶೋಧನೆಯ ಪ್ರತಿ ಹಂತದಲ್ಲಿ ಚರ್ಚೆ, ಮರು ಓದು, ಚಿಂತನೆಗಳಿಂದ ಕೈಹಿಡಿದು ನಡೆಸಿದ್ದಾರೆ. ಈ ನಿಬಂಧದಲ್ಲಿರುವ ಬಹುಪಾಲು ಉತ್ತಮ ಗುಣಗಳ ಶ್ರೇಯಸ್ಸು ಗುರುವರ್ಯರಿಗೆ ನ್ಯಾಯವಾಗಿ ಸಲ್ಲುತ್ತದೆ. ಅನೇಕ ವಿಷಯಗಳನ್ನು ಚರ್ಚೆಮಾಡಿದನಂತರ ಅಂತಿಮ ನಿರ್ಣಯವನ್ನು ನನಗೇ ಬಿಡುತ್ತಿದ್ದರು. ಗುರುಗಳೊಂದಿಗೆ ಸಂಶೋಧನ ಕ್ಷೇತ್ರದಲ್ಲಿ ವಿಹರಿಸಿದ ಅನುಭವ ನನ್ನ ಬದುಕಿನ ಅಪೂರ್ವ ಹಾಗೂ ಸ್ಮರಣೀಯ ಅನುಭವವಾಗಿದೆ.

ಕೈಹಿಡಿದು ನಡೆಸಿದ, ಶ್ರೇಷ್ಠಮಟ್ಟದ ಮಾರ್ಗದರ್ಶನ ನೀಡಿದ, ಉತ್ತಮ ಮಾನವತೆಯ ಬೀಜಗಳನ್ನು ನನ್ನಲ್ಲಿ ಬಿತ್ತಿದ ಗುರುಶ್ರೇಷ್ಠರಿಗೆ ಗುರು ಕಾಣಿಕೆಯಾಗಿ ನಾನು ಏನು ತಾನೆ ಕೊಡಬಲ್ಲೆ? ಪ್ರೀತಿ ಮತ್ತು ಭಕ್ತಿ ಪೂರ್ವಕವಾಗಿ ಈ ಗ್ರಂಥವನ್ನು ಅವರಿಗೆ ಅರ್ಪಿಸುತ್ತಿದ್ದೇನೆ. ಅರ್ಪಣೆಗೆ ಒಪ್ಪಿದ ಗುರುವರ್ಯರಿಗೆ ಪ್ರಣಾಮಗಳು.

ಸೆಂಟ್ರಲ್ ಕಾಲೇಜಿನಲ್ಲಿ ಆನರ್ಸ್ ಮತ್ತು ಎಂ.ಎ. ತರಗತಿಗಳಲ್ಲಿ ವಿದ್ಯಾಭ್ಯಾಸ ಮಾಡುವಾಗ ಕನ್ನಡ ಸಾಹಿತ್ಯ ಪ್ರಪಂಚ, ವಿದ್ವತ್ ಪ್ರಪಂಚದ ಆಳ ಅಗಲಗಳನ್ನು ಜೀವನ ಮೌಲ್ಯಗಳನ್ನು ಪರಿಚಯಿಸಿದ ಉನ್ನತ ವ್ಯಕ್ತಿತ್ವದ ಪ್ರಿಯಗುರುಗಳಾದ ಜಿ.ಪಿ.ರಾಜರತ್ನಂ, ಡಾ.ಜಿ.ಎಸ್.ಶಿವರುದ್ರಪ್ಪ, ಡಾ.ಎಂ.ಚಿದಾನಂದಮೂರ್ತಿ, ಪ್ರೊ.ರಂ.ಶ್ರೀ.ಮುಗಳಿ, ಪ್ರೊ.ಎಂ.ವಿ.ಸೀತಾರಾಮಯ್ಯ, ಡಾ.ಎಸ್.ವಿದ್ಯಾಶಂಕರ, ಡಾ.ಲಕ್ಷ್ಮೀನಾರಾಯಣಭಟ್ಟ, ಡಾ.ಕೆ.ಮರುಳಸಿದ್ದಪ್ಪ, ಪ್ರೊ.ಹು.ಕಾ.ಜಯದೇವ್, ಪ್ರೊ.ಕಿ.ರಂ.ನಾಗರಾಜ್ ಮುಂತಾದ ಎಲ್ಲ ಗುರು ಪರಂಪರೆಗೆ ನಮನಗಳನ್ನು ಸಲ್ಲಿಸ ಬಯಸುತ್ತೇನೆ.

ಸಂಶೋಧನೆಯನ್ನು ಪ್ರಾರಂಭಿಸಿದ ಮೇಲೆ ಎಲ್ಲ ಹಿರಿಯ ವಿದ್ವಾಂಸರ ಸಂಪರ್ಕವನ್ನಿಟ್ಟುಕೊಳ್ಳುವಂತೆ ಹೇಳಿ ಮಾರ್ಗದರ್ಶಕರು ಧಾರವಾಡ ಹಾಗೂ ಮೈಸೂರಿಗೆ ಕಳುಹಿಸಿಕೊಟ್ಟರು. ಧಾರವಾಡದಲ್ಲಿ ಹಿರಿಯ ವಿದ್ವಾಂಸರಾದ ಡಾ.ಎಂ.ಎಂ.ಕಲಬುರ್ಗಿ, ಡಾ.ಶ್ರೀನಿವಾಸ ರಿತ್ತಿ, ಡಾ.ಎಸ್.ಶೆಟ್ಟರ್, ಡಾ.ಅ.ಸುಂದರ ಅವರನ್ನು ಭೇಟಿಮಾಡಿ ನನ್ನ ಸಂಶೋಧನೆಯ ವಿಷಯಕ್ಕೆ ಸಂಬಂಧಿಸಿದಂತೆ ಹಲವು ಸಲಹೆ, ಸೂಚನೆಗಳನ್ನು ಕೇಳಿ ಪಡೆದು ಸಂಶೋಧನೆಯ ಮಾರ್ಗವನ್ನು ನಿಶ್ಚಿತ ಮಾಡಿಕೊಂಡೆ. ಬೆಂಗಳೂರಿನ ಡಾ.ಸೂರ್ಯನಾಥ ಕಾಮತರನ್ನು ಕಂಡು ಹಲವಾರು ಸಮಸ್ಯೆಗಳನ್ನು ಚರ್ಚಿಸಿ ಪರಿಹಾರಗಳನ್ನು ಕಂಡುಕೊಂಡಿದ್ದೇನೆ. ಸಂಶೋಧಕರ ಗಣಿಯಂತಿದ್ದ ಶ್ರೇಷ್ಠ ವಿದ್ವಾಂಸರಾಗಿದ್ದ ಎಸ್.ಶಿವಣ್ಣನವರ ಸಹಕಾರ ಅಮೂಲ್ಯವಾದದ್ದು.

ಎ.ಎಂ.ಅಣ್ಣಿಗೇರಿಯವರು ಸಾಹಿತ್ಯ ಪರಿಷತ್ತಿನ ಸಂಶೋಧನ ವಿಭಾಗದಲ್ಲಿದ್ದಾಗ ಶಾಸನ ಶಾಸ್ತ್ರ, ಲಿಪಿ ಶಾಸ್ತ್ರದ ಅಮೂಲ್ಯ ಮಾರ್ಗದರ್ಶನ ನೀಡಿದ್ದಾರೆ. ಸಂದರ್ಶಕ ವಿದ್ವಾಂಸರಾಗಿ ಬರುತ್ತಿದ್ದ ಡಾ.ಜಿ.ಎಸ್.ಗಾಯಿ ಅವರು ಶಾಸನಗಳ ಒಳನೋಟಗಳನ್ನು ಪರಿಚಯಿಸಿದ್ದಾರೆ.

ಶಿವಮೊಗ್ಗ ಮತ್ತು ಕೋಲಾರ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯಕ್ಕೆ ಹೋಗುವಾಗ ಜತೆಯಲ್ಲಿದ್ದು ಲಿಪಿ ಶಾಸ್ತ್ರ, ಶಿಲ್ಪ, ಶಾಸನ, ವಾಸ್ತು ಮುಂತಾದ ಹಲವಾರು ವಿಷಯಗಳಲ್ಲಿ ಮಾರ್ಗದರ್ಶನ ಮಾಡಿದ ಆತ್ಮೀಯ ಸಹಪಾಠಿ ಗೆಳೆಯ ಡಾ.ಶೇಷಶಾಸ್ತ್ರಿ ಮತ್ತು ಡಾ.ದೇವರಕೊಂಡಾರೆಡ್ಡಿ ಅವರನ್ನು ಪ್ರೀತಿ ಪೂರ್ವಕವಾಗಿ ನೆನೆಯುತ್ತೇನೆ. ನನ್ನ ಸಂಶೋಧನೆಯ ನಿಧಾನ ಗತಿಯನ್ನು ಗಮನಿಸಿ 'ಬೆರಣಿಯನಾಯಲಲ್ಲದೆ......' ಮಾತನ್ನು ಮತ್ತೆ ಮತ್ತೆ ಜ್ಞಾಪಿಸಿ ವೇಗಗತಿಯನ್ನು ರೂಢಿಸಿಕೊಳ್ಳುವಂತೆ ತಿಳಿ ಹೇಳುತ್ತಿದ್ದ ಶೇಷಶಾಸ್ತ್ರಿಯವರ ಮಾತು ನನ್ನ ಗತಿಯನ್ನೇನೂ ಬದಲಾಯಿಸಲಿಲ್ಲ; ನನ್ನ ಗತಿಗೇ ಅಂಟಿಕೊಂಡೆ.

ಸಂಶೋಧನೆಯ ಮಾರ್ಗದಲ್ಲಿ ಅಗತ್ಯ ಶಾಸನ ಸಂಪುಟಗಳಿಗೆ, ಗ್ರಂಥಗಳಿಗೆ, ಪತ್ರಿಕೆಗಳಿಗೆ ಹಲವಾರು ಗ್ರಂಥಭಂಡಾರಗಳನ್ನು ಸಂದರ್ಶಿಸಬೇಕಾಗಿತ್ತು. ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥಾಲಯ, ಸಾರ್ವಜನಿಕ ಗ್ರಂಥಾಲಯ, ಮಿಥಿಕ್ ಸೊಸೈಟಿ, ಕನ್ನಡ ಸಾಹಿತ್ಯ ಪರಿಷತ್ತಿನ ಸಂಶೋಧನ ವಿಭಾಗ, ಕನ್ನಡ ನಿಘಂಟು ವಿಭಾಗದ ಗ್ರಂಥಾಲಯಗಳನ್ನು ವಿಶೇಷವಾಗಿ ಬಳಸಿಕೊಂಡಿದ್ದೇನೆ. ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯ, ವಿಶೇಷವಾಗಿ ಅಪ್ರಕಟಿತ ಸಂಶೋಧನ ನಿಬಂಧಗಳು ಹಾಗೂ ಅಮೂಲ್ಯ ಗ್ರಂಥಗಳು ಮತ್ತು ವಿದ್ವತ್ ಪತ್ರಿಕೆಗಳನ್ನು ಉಪಯೋಗಿಸಿಕೊಂಡಿದ್ದೇನೆ. ಈ ಎಲ್ಲ ಗ್ರಂಥಭಂಡಾರಿಗಳ, ಅಧಿಕಾರಿಗಳ ಸೌಜನ್ಯಯುತ ಸೇವೆಯನ್ನು ಪ್ರೀತಿಯಿಂದ ನೆನೆಯುತ್ತೇನೆ.

1972ರಲ್ಲಿ ಕನ್ನಡ ಅಧ್ಯಾಪಕ ಹುದ್ದೆಯನ್ನು ನೀಡಿ ನಿರಂತರವಾಗಿ ನಾನು ನಿವೃತ್ತಿಯಾಗುವವರೆಗೆ(2007) ಆಶ್ರಯ ನೀಡಿದ ಶ್ರೀ ಜಗದ್ಗುರು ರೇಣುಕಾಚಾರ್ಯ ವಿದ್ಯಾಸಂಸ್ಥೆಗೆ ನನ್ನ ಗೌರವಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಅದೇ ಸಂಸ್ಥೆಯ ಕಾಲೇಜಿನ ವಿದ್ಯಾರ್ಥಿಯಾಗಿ, ಅಧ್ಯಾಪಕನಾಗಿ, ವಿಭಾಗದ ಮುಖ್ಯಸ್ಥನಾಗಿ ಕೊನೆಯ ಐದು ವರ್ಷಗಳು ಪ್ರಾಚಾರ್ಯನಾಗಿ ಸೇವೆ ಸಲ್ಲಿಸುವ ಅವಕಾಶ ಕಲ್ಪಿಸಿಕೊಟ್ಟ ಸಂಸ್ಥೆಗೆ ಚಿರಋಣಿಯಾಗಿದ್ದೇನೆ.

ಪದವಿಪೂರ್ವದಲ್ಲಿ ವಿದ್ಯಾರ್ಥಿಯಾಗಿದ್ದಾಗ ಗುರುಗಳಾಗಿದ್ದ ಅನಂತರ ಸಹೋದ್ಯೋಗಿಯಾಗಿ ವೃತ್ತಿಜೀವನದಲ್ಲಿ ಬೆಂಬಲಿಗರಾಗಿದ್ದ ಪ್ರೊ.ಆರ್.ರಾಚಪ್ಪನವರಿಗೆ ಗೌರವಪೂರ್ವಕ ನಮನಗಳು. ನಮ್ಮ ಮಹಾವಿದ್ಯಾಲಯದ ಗ್ರಂಥಪಾಲರಾಗಿದ್ದ ಶ್ರೀ ಶಿವಾನಂದ್ ಮತ್ತು ಪ್ರಸ್ತುತ ಗ್ರಂಥಪಾಲರಾಗಿರುವ ಶ್ರೀ ರಮೇಶ್ ಅವರ ಸಹಕಾರವನ್ನು ಪ್ರೀತಿಯಿಂದ ನೆನೆಯುತ್ತೇನೆ.

ತಮ್ಮ ಮಕ್ಕಳೆಲ್ಲ ವಿದ್ಯಾವಂತರಾಗಬೇಕೆಂದು ಹಂಬಲಿಸಿ ಅದಕ್ಕಾಗಿ ಅಪಾರ ತ್ಯಾಗಗಳನ್ನು ಮಾಡಿದ ನನ್ನ ತಂದೆ-ತಾಯಿಯರನ್ನು ನೆನೆಯುವುದು ಆದ್ಯ ಕರ್ತವ್ಯ. ಹಾಗೆಯೇ ವಿದ್ಯಾಭ್ಯಾಸದ ಒಂದು ಮುಖ್ಯ ಹಂತದಲ್ಲಿ ಸಹಾಯ ಹಸ್ತ ಚಾಚಿದ ನನ್ನ ಅಕ್ಕ ನಾಗರತ್ನಮ್ಮ ಹಾಗೂ ಭಾವ ಶ್ರೀ ಜಿ.ಕೆ.ಶ್ರೀಕಂಠಾರಾಧ್ಯ ಅವರನ್ನು ನೆನೆದರೆ ಮನಸ್ಸು ತುಂಬಿ ಬರುತ್ತದೆ. ಎಂದೆಂದಕ್ಕೂ ವಾತ್ಸಲ್ಯವನ್ನು ತೋರುತ್ತಾ ಬಂದಿರುವ, ನನ್ನ ವಿದ್ಯಾಭ್ಯಾಸಕ್ಕೆ ದಿಕ್ಕು ದಿಶೆಗಳನ್ನು ತೋರಿ, ನಾನು ಪಿಎಚ್.ಡಿ ಪದವಿ ಪಡೆದಾಗ ಅತ್ಯಂತ ಸಂತೋಷಪಟ್ಟ ನನ್ನ ಅಣ್ಣ ಶ್ರೀ ಸಿ.ಯು.ಮಲ್ಲಿಕಾರ್ಜುನಯ್ಯನವರು, ಕಷ್ಟದ ದಿನಗಳಲ್ಲಿ ನಾನಿದ್ದೇನೆ ಎಂದು ಭರವಸೆ ಕೊಟ್ಟು ರಕ್ಷಿಸಿದ ಶ್ರೀ ಷಡಕ್ಷರಮೂರ್ತಿ ಇವರನ್ನೆಲ್ಲ ನೆನೆದರೆ ಮನಸ್ಸು ಪ್ರಸನ್ನವಾಗುತ್ತದೆ.

ಸಂಶೋಧನೆಯ ಪ್ರಿಯ ವಿದ್ಯಾರ್ಥಿಗಳಾದ ಡಾ.ಎಸ್.ಲಕ್ಷ್ಮೀದೇವಿ ಮತ್ತು ಡಾ.ಎಸ್.ಎಲ್.ಶ್ರೀನಿವಾಸಮೂರ್ತಿ ಅವರಿಬ್ಬರೂ ತಮ್ಮ ಪಿಎಚ್.ಡಿ ಪದವಿ ಬಂದ ಮೇಲೆ ತಮ್ಮ ನಿಬಂಧಗಳನ್ನು ಪ್ರಕಟಿಸಲು(ನನ್ನ ನಿಬಂಧ ಪ್ರಕಟವಾಗಿಲ್ಲ ಎಂದು) ಸಂಕೋಚ ಪಡುತ್ತಿದ್ದರು. ನಾನು 'ಮೊದಲು ನಿಮ್ಮದಾಗಲಿ ಭವಿಷ್ಯದ ದೊಡ್ಡ ಬಾಗಿಲು ನಿಮಗಾಗಿ ತೆರೆದಿದೆ. ಅಂತಹ ತುರ್ತು ನನಗಿಲ್ಲ' ಎಂದು ಸಮಾಧಾನ ಪಡಿಸುತ್ತಿದ್ದೆ. ಅವರಿಬ್ಬರ ಪ್ರೀತಿಪೂರ್ವಕ ಒತ್ತಾಸೆ ಇಲ್ಲದಿದ್ದರೆ ಈಗಲೂ ಈ ನಿಬಂಧ ಪ್ರಕಟವಾಗುತ್ತಿತ್ತೋ ಇಲ್ಲವೋ ತಿಳಿಯದು. ಅವರ ಸಪ್ರೇಮ ಒತ್ತಾಸೆಗೆ ಏನು ಹೇಳಬೇಕೊ ತಿಳಿಯದು. ವಿದ್ಯಾರ್ಥಿಗಳ ರೂಪದಲ್ಲಿ ಎರಡು ಸಜ್ಜನ ಕುಟುಂಬಗಳು ನಮ್ಮ ಕುಟುಂಬಕ್ಕೆ ಆತ್ಮೀಯವಾದವು; ಇದು ಸಂಶೋಧನೆಯಿಂದ ಆದ ಬಹು ದೊಡ್ಡ ಲಾಭ ಎಂದು ಭಾವಿಸುತ್ತೇನೆ. ಡಾ.ಶ್ರೀನಿವಾಸಮೂರ್ತಿಯವರು ಅಂತಿಮ ಹಂತದ ಕರಡಚ್ಚನ್ನು ಪರಿಶೀಲಿಸಿ ಕೊಟ್ಟಿದ್ದಾರೆ. ಅದಕ್ಕಾಗಿ ಅವರ ಸೇವೆಯನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ನನ್ನ ಸಂಶೋಧನೆಯ ಕಾರ್ಯಗಳಿಗೆ ಸದಾ ಬೆಂಬಲ ನೀಡುತ್ತಾ, ನನ್ನ ಬಹಳಷ್ಟು ಬರವಣಿಗೆಯ ಮೊದಲ ಓದುಗರೂ, ತಿದ್ದುವವರೂ, ತಾಳೆ ನೋಡುವವರೂ, ವಿಮರ್ಶಿಸುವವರೂ ಆದ ನನ್ನ ಶ್ರೀಮತಿ ಎಂ.ಎಸ್.ಸುಜಯ ಅವರನ್ನು ಪ್ರೀತಿಯಿಂದ ನೆನೆಯುತ್ತೇನೆ. ನಮ್ಮ ಪ್ರೀತಿಯ ಮಗಳು ನನ್ನ ಸಂಶೋಧನೆಯ ಹಂತದಲ್ಲಿ ಸಾವಿರಾರು

ಪಟ್ಟಿಕೆಗಳನ್ನು ಜೋಡಿಸಿ ಕೊಡುವ ಶ್ರಮಸಾಧ್ಯವಾದ ಕಾರ್ಯವನ್ನು ಮಧ್ಯರಾತ್ರಿಗಳವರೆಗೂ ಎದ್ದಿದ್ದು ಮಾಡಿಕೊಟ್ಟಿದ್ದಾಳೆ. ಈಗ ತಜ್ಞ ವೈದ್ಯಳಾಗಿ ಪತಿಯೊಂದಿಗೆ ದೂರದ ಅಮೇರಿಕಾದಲ್ಲಿರುವ ಮಗಳು ಡಾ.ನಯನದೀಪ್ತಿಯನ್ನು ನೆನೆದರೆ ಮನಸ್ಸು ಆರ್ದ್ರವಾಗುತ್ತದೆ. ನನ್ನ ಅಧ್ಯಯನ ನಿರತ ಜೀವನವನ್ನು ಮೆಚ್ಚುವ ನನ್ನ ಕುಟುಂಬವನ್ನು ಮನಸ್ಸಿನಲ್ಲಿ ಆತ್ಮೀಯವಾಗಿ ನೆನೆಯುತ್ತೇನೆ.

ನನ್ನ ನಿಬಂಧದ ಪ್ರಕಟಣೆ ಹಾಗೂ ಅಧ್ಯಯನಗಳ ಬಗ್ಗೆ ಮತ್ತೆ ಮತ್ತೆ ವಿಚಾರಿಸುತ್ತಾ ಬಂದ ಪ್ರೊ.ಜಿ.ಎಸ್.ಸಿದ್ಧಲಿಂಗಯ್ಯನವರಿಗೆ, ಡಾ.ಎಂ.ಜಿ.ನಾಗರಾಜ್, ಡಾ.ಪಿ.ವಿ.ಕೃಷ್ಣಮೂರ್ತಿ, ಡಾ.ಎಚ್.ಎಸ್.ಗೋಪಾಲರಾವ್, ಪ್ರೊ.ಎಸ್.ವಿ.ಶಿವಕುಮಾರ್ ಮುಂತಾದವರಿಗೆ ನಮನಗಳು. ಯಾವುದಾದರೂ ಹೊಸ ವಿಚಾರ ಹೊಳೆದಾಗ ಆತ್ಮೀಯವಾಗಿ ಚರ್ಚಿಸುವ, ಹೊಸದಾಗಿ ಏನು ಓದಿದಿರಿ, ಏನು ವಿಚಾರ ಮಾಡಿದಿರಿ ಎಂದು ವಿಚಾರಿಸುವ, ವಿಚಾರಗಳ ವಿನಿಮಯ ಮಾಡಿಕೊಳ್ಳುವ ಡಾ. ಎಚ್.ಶಶಿಕಲಾ ಅವರ ಶೈಕ್ಷಣಿಕ ಆಸಕ್ತಿ ಸ್ಫೂರ್ತಿದಾಯಕ. ಅವರನ್ನು ವಿಶ್ವಾಸಪೂರ್ವಕವಾಗಿ ಇಲ್ಲಿ ನೆನೆಯುತ್ತೇನೆ.

ಈ ನಿಬಂಧಕ್ಕೆ ಬೆಂಗಳೂರು ವಿಶ್ವವಿದ್ಯಾಲಯ 1991ರಷ್ಟು ಹಿಂದೆಯೇ ಪಿಎಚ್.ಡಿ ಪದವಿ ಪ್ರದಾನ ಮಾಡಿತು. ನಿಬಂಧವನ್ನು ಮೌಲ್ಯಮಾಪನ ಮಾಡಿದ ಹಿರಿಯ ವಿದ್ವಾಂಸರಾದ ಡಾ.ಬಿ.ಆರ್.ಗೋಪಾಲ್ ಮತ್ತು ಡಾ.ಸಿ.ಪಿ.ಕೃಷ್ಣಕುಮಾರ್ ಅವರು ಮೌಲಿಕವಾದ ಮಾತುಗಳೊಂದಿಗೆ ಅಮೂಲ್ಯ ಸಲಹೆಗಳನ್ನು ನೀಡಿದ್ದಾರೆ. ಇವರೊಂದಿಗೆ ಸಂಯೋಜಿತ ವರದಿ ನೀಡಿದ ಮಾರ್ಗದರ್ಶಕರಾದ ಡಾ.ಎಂ.ಚಿದಾನಂದಮೂರ್ತಿಯವರಿಗೆ ಕೃತಜ್ಞತಾಪೂರ್ವಕ ವಂದನೆಗಳು. ಪರಿಷ್ಕರಣದಲ್ಲಿ ಮೂವರ ಸಲಹೆಗಳನ್ನು ಬಳಸಿಕೊಂಡಿದ್ದೇನೆ. ಮಾರ್ಗದರ್ಶಕರಿಂದ ಹಿಡಿದು ಅನೇಕ ವಿದ್ವಾಂಸರು, ಆತ್ಮೀಯರು ನಿಬಂಧದ ಪ್ರಕಟಣೆಯ ಬಗ್ಗೆ ಕೇಳುತ್ತಲೇ ಇದ್ದರು; ಆದರೂ ಆಸಕ್ತಿ ವಹಿಸಿರಲಿಲ್ಲ. ಪರಿಷ್ಕರಣೆ ಮಾಡಬೇಕೆಂದು ಕೆಲ ಕಾಲ ಮುಂದೆ ಹಾಕಿದೆ. ನಿವೃತ್ತಿಯಾದ ಮೇಲೆ ಪರಿಷ್ಕರಿಸಿ ಸಿದ್ಧಮಾಡಿದ್ದೇನೆ.

ಪ್ರಕಟಣೆಯ ವಿಷಯದಲ್ಲಿ ಅಭಿನವದ ಶ್ರೀ ರವಿಕುಮಾರ್ ವಿಶೇಷ ಆಸಕ್ತಿ ವಹಿಸಿದ್ದರು. ಅಂತಿಮವಾಗಿ ಚಿತ್ಕಲಾ ಪ್ರಕಾಶನದ ಶ್ರೀ ಟಿ.ಎಸ್.ನರಸಿಂಹ ಪ್ರಸಾದ್ ಗಡುವುಗಳನ್ನು ನೀಡುತ್ತಾ ಒತ್ತಾಯ, ಒತ್ತಡ ತಂದು ಪ್ರಕಟಣೆಯನ್ನು ಮಾಡಿ ಮುಗಿಸಿದ್ದಾರೆ. ಕೊನೆಯ ಸುಮಾರು ಅರವತ್ತು ಪುಟಗಳ ಛಾಯಾಕ್ಷರ ಜೋಡಣೆ ಮತ್ತು ಚಿತ್ರ ಸಂಪುಟ ಸಂಯೋಜನೆ ಈ ಎಲ್ಲಾ ಜವಾಬ್ದಾರಿಗಳನ್ನು ಪ್ರೀತಿಯಿಂದ ಸ್ವೀಕರಿಸಿ ನನ್ನ ಕೆಲಸಗಳನ್ನು ಹಗುರಗೊಳಿಸಿ, ವಿಶೇಷ ಆಸಕ್ತಿಯಿಂದ ಈ ಗ್ರಂಥ ಸುಂದರವಾಗಿ ಮೂಡಿ ಬರಲು ಎಲ್ಲ ರೀತಿಯ ಶ್ರಮವನ್ನು ತೆಗೆದುಕೊಂಡಿದ್ದಾರೆ. ಅವರ ವಿಶ್ವಾಸ ಬಹುದೊಡ್ಡದು.

ಛಾಯಾಕ್ಷರ ಜೋಡಣೆಯನ್ನು ಮಾಡಿಕೊಟ್ಟಿರುವ ವರ್ಷಿಣಿ ಗ್ರಾಫಿಕ್ಸ್‌ನ ಶ್ರೀಮತಿ ಪ್ರಿಯದರ್ಶಿನಿ ಅವರಿಗೆ ಹಾಗೂ ಅವರ ಸಿಬ್ಬಂದಿಯವರಿಗೆ ವಂದನೆಗಳು. ಸುಂದರವಾದ ಮುಖಪುಟ ವಿನ್ಯಾಸವನ್ನು ಮಾಡಿ ಕೊಟ್ಟ ಶ್ರೀ ಲಕ್ಷ್ಮೀನಾರಾಯಣ ಅವರಿಗೆ ವಿಶೇಷ ವಂದನೆಗಳು. ಮುದ್ರಣ ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿ ಕೊಟ್ಟಿರುವ ಪ್ರಗತಿ ಗ್ರಾಫಿಕ್ಸ್‌ನ ಡಾ.ಎಂ.ಬೈರೇಗೌಡ ಅವರಿಗೆ ಧನ್ಯವಾದಗಳು.

ಈ ಸಂಶೋಧನೆಯ ಹಿನ್ನೆಲೆಯಲ್ಲಿರುವ ಸಮಸ್ತ ಕನ್ನಡ ನಾಡಿನ ಸಂಸ್ಕೃತಿ ಧಾರೆಗೆ, ವ್ಯಕ್ತಿ-ಶಕ್ತಿಗಳಿಗೆ, ಸಾಹಿತ್ಯ, ಸಂಸ್ಕೃತಿ, ವಿದ್ವತ್ ಪರಂಪರೆಗೆ ಗೌರವ ಪೂರ್ವಕ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ. ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಈ ಕಾರ್ಯ ಯಶಸ್ವಿಯಾಗಿ ಪೂರ್ಣಗೊಳ್ಳಲು ಸಹಾಯ ಹಸ್ತ ಚಾಚಿರುವ ಎಲ್ಲರಿಗೆ ಹೃತ್ಪೂರ್ವಕ ವಂದನೆಗಳು.

ಬೆಂಗಳೂರು
31.8.2012

**ಡಾ. ಸಿ.ಯು. ಮಂಜುನಾಥ್**

# ಪರಿವಿಡಿ

# ಸಂಕ್ಷೇಪಗಳು

| | |
|---|---|
| ಅಪ್ರವ | : ವ್ಯೋಮ ಮೂರುತಿ ಅಲ್ಲಮ ಪ್ರಭುದೇವರ ವಚನಗಳು |
| ಅವಚಂ | : ಅಲ್ಲಮನ ವಚನ ಚಂದ್ರಿಕೆ |
| ಇದ | : ಇತಿಹಾಸ ದರ್ಶನ |
| ಕಕಚ | : ಕರ್ನಾಟಕ ಕವಿ ಚರಿತೆ |
| ಕಕನಿಘಂಟು | : ಕನ್ನಡ–ಕನ್ನಡ ನಿಘಂಟು |
| ಕಭಾ | : ಕರ್ನಾಟಕ ಭಾರತಿ |
| ಕಶಾಸಾಂಅ | : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ |
| ಕಸಾಪಪ | : ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ |
| ಚಬವ | : ಚನ್ನ ಬಸವಣ್ಣನವರ ವಚನಗಳು |
| ಜೇದಾವ | : ಜೇಡರ ದಾಸಿಮಯ್ಯನ ವಚನಗಳು |
| ತುನಾಶಾ | : ತುಳು ನಾಡಿನ ಶಾಸನಗಳು |
| ಧಾತಾಶಾ | : ಧಾರವಾಡ ತಾಲ್ಲೂಕಿನ ಶಾಸನಗಳು |
| ನಂರ | : ನಂಬಿಯಣ್ಣನ ರಗಳೆ |
| ನೂಪುರ | : ನೂತನ ಪುರಾತನರ ರಗಳೆಗಳು |
| ಪಂಭಾ | : ಪಂಪ ಭಾರತಂ |
| ಪ್ರಕ | : ಪ್ರಬುದ್ಧ ಕರ್ನಾಟಕ |
| ಪ್ರಕಂಇ | : ಪ್ರವಾಸಿ ಕಂಡ ಇಂಡಿಯಾ |
| ಬದೇರ | : ಬಸವರಾಜ ದೇವರ ರಗಳೆ |
| ಬಪ | : ಬಸವ ಪಥ |
| ಬವ | : ಬಸವಣ್ಣನವರ ವಚನಗಳು |
| ಮಾನ | : ಮಾನವಿಕ ಕರ್ನಾಟಕ |
| ಯಚ | : ಯಶೋಧರ ಚರಿತೆ |
| ವಚಸಾಂಅ | : ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ |
| ವಿಚಿ | : ವಿವೇಕ ಚಿಂತಾಮಣಿ |
| ಶಾಪಮಂ | : ಶಾಸನ ಪದ್ಯ ಮಂಜರಿ |
| ಶಾಶಿಶ | : ಶಾಸನಗಳಲ್ಲಿ ಶಿವಶರಣರು |
| ಶಿತಚಿಂ | : ಶಿವತತ್ತ್ವ ಚಿಂತಾಮಣಿ |
| ಶಿಮರ | : ಶಿವಭಕ್ತರ ಮಹಿಮಾ ರಗಳೆಗಳು |
| ಶಿಶಕರ | : ಶಿವಶರಣರ ಕಥಾರತ್ನಕೋಶ |
| ಶಿಶವ | : ಶಿವಶರಣೆಯರ ವಚನಗಳು |
| ಸಪ | : ಸಮಯ ಪರೀಕ್ಷೆ |
| ಸಪುವ | : ಸಕಲ ಪುರಾತನರ ವಚನಗಳು |

ಸಸಾಚ : ಸಮಗ್ರ ಸಾಹಿತ್ಯ ಚರಿತ್ರೆ

ಸಿಚಾ : ಸಿದ್ಧರಾಮ ಚಾರಿತ್ರ

ಸಿರಾವ : ಶ್ರೀ ಸಿದ್ಧರಾಮೇಶ್ವರ ವಚನಗಳು

ಹಕಾ : ಹರಿಶ್ಚಂದ್ರ ಕಾವ್ಯಂ

ಎಆರ್ಐಇ : Archaeological report of Indian Epigraphy

ಎಆರ್ಎಸ್ಐಇ : Archaeological report of South Indian Epigraphy

ಎಂಎಆರ್ : Archaeological survey of Mysore, Annual Report

ಎಕ : Epigraphia Carnatica

ಎಇ : Epigraphia Indica

ಇಆ : Indian Antiquary

ಇಹಿಕ್ವಾ : Indian Historical Quarterly

ಇಗ್ಲಾಆಪ್ರ : Inscriptional glossary of Andhra Pradesh

ಐಕೆಡಿ : Inscriptions of Kolhapur District

ಐಎಎಸ್ಡಿ : Inscriptions of Solapur District

ಜೆಇಹಿ : Journal of Indian History

ಜೆಕೆಯು : Journal of Karnatak University

ಜೆಒಯುಬಿ : Journal of University of Bombay

ಕಇ : Karnataka Inscriptions

ಕಇಆಪ್ರ : Kannada Inscriptions of Andhra Pradesh

ಕ್ಯುಜೆಎಂಎಸ್ : Quarterly journal of the Mythic Society

ಟಇ : Telangana Inscriptions

# ೧. ಅಧ್ಯಯನದ ಅಗತ್ಯ, ಉದ್ದೇಶ ಮತ್ತು ಆಕರ

ಕರ್ನಾಟಕದಲ್ಲಿ ಶಾಸನಗಳ ಅಧ್ಯಯನ ಎರಡು ಹಂತಗಳಲ್ಲಿ ನಡೆಯುತ್ತಾ ಬಂದಿದೆ. ಶಾಸನ ಪರಿವೀಕ್ಷಣೆ, ಸಂಗ್ರಹ, ಸಂಪಾದನೆ ಮತ್ತು ಪ್ರಕಟಣೆ ಮೊದಲ ಹಂತದ ಕಾರ್ಯವಾಗಿದೆ. ಇದು ವಿಶೇಷ ತರಬೇತಿ ಮತ್ತು ತಾಂತ್ರಿಕ ಪರಿಣತಿಯನ್ನು ಬಯಸುವ ಕಾರ್ಯವಾಗಿದೆ. ಇದನ್ನು ವಿದ್ವಾಂಸರು ಕ್ರಮವಾಗಿ ಮಾಡುತ್ತಾ ಬಂದಿದ್ದಾರೆ. ಎರಡನೆಯ ಹಂತದ ಅಧ್ಯಯನ-ಪ್ರಕಟವಾದ ಶಾಸನಗಳನ್ನು ಅರ್ಥೈಸುವ, ವಿಶ್ಲೇಷಿಸುವ, ಇತಿಹಾಸ ರಚಿಸುವ, ಭಾಷಿಕ, ಸಾಂಸ್ಕೃತಿಕ ಹಾಗೂ ವಿವಿಧ ಸಂಶೋಧನಾತ್ಮಕ ಸಂಶೋಧನೆಯ ಅಧ್ಯಯನಗಳನ್ನು ನಡೆಸುವುದಾಗಿದೆ. ಮೊದಲ ಹಂತದ ಕಾರ್ಯವನ್ನು ನಿರ್ವಹಿಸಿದವರು ಎರಡನೆಯ ಹಂತದ ಕಾರ್ಯವನ್ನು ನಿರ್ವಹಿಸಿರುವುದುಂಟು. ಒಟ್ಟಿನಲ್ಲಿ ಎರಡೂ ಹಂತದ ಅಧ್ಯಯನ ಕಾರ್ಯಗಳು ಕನ್ನಡ ಶಾಸನ ಅಭ್ಯಾಸಕ್ಕೆ ಅಗತ್ಯವಾಗಿವೆ.

ಶಾಸನಗಳನ್ನು ಆಧರಿಸಿ ಕನ್ನಡನಾಡಿನ ಚರಿತ್ರೆಯನ್ನು ಅನೇಕ ವಿದ್ವಾಂಸರು ರಚಿಸಿದ್ದಾರೆ. ರಾಜಕೀಯ ಚರಿತ್ರೆಗೆ ಸಂಬಂಧಿಸಿದ ಹಾಗೆ ಹೆಚ್ಚು ಅಧ್ಯಯನಗಳು ನಡೆದರೂ ಸಾಂಸ್ಕೃತಿಕ ಅಧ್ಯಯನಗಳೂ ಕೆಲವು ಮಟ್ಟಿಗೆ ನಡೆದಿವೆ. ಶ್ರೀಯುತರಾದ ಜೆ.ಎಫ್. ಫ್ಲೀಟ್, ಬಿ. ಎಲ್. ರೈಸ್, ಮೊರೇಸ್, ಅಳತೆಕರ್, ಸಾಲೆತೊರೆ, ಎಸ್. ಶ್ರೀಕಂಠಶಾಸ್ತ್ರಿ, ಜೆ.ಡೆರೆಟ್, ಪಿ.ಬಿ. ದೇಸಾಯಿ, ಎನ್. ಲಕ್ಷ್ಮೀನಾರಾಯಣ ರಾವ್, ಎಂ.ಎಚ್. ಕೃಷ್ಣ, ಕೆ.ಬಿ. ಪಾಠಕ್, ಆರ್. ನರಸಿಂಹಾಚಾರ್, ಆರ್.ರಾಮರಾವ್, ಕೆ.ಜಿ. ಕುಂದಣಗಾರ್, ಎಸ್.ಸಿ. ನಂದಿಮಠ, ಎ.ಎಂ. ಅಣ್ಣಿಗೇರಿ, ಮೇವುಂಡಿಮಲ್ಲಾರಿ, ಜಿ.ಎಸ್. ಗಾಯಿ, ಆರ್.ಎಸ್. ಪಂಚಮುಖಿ  ಇವರೇ ಮೊದಲಾದ ವಿದ್ವಾಂಸರು ಕರ್ನಾಟಕ ಇತಿಹಾಸಕ್ಕೆ ಗಣನೀಯ ಸೇವೆ ಸಲ್ಲಿಸಿದ್ದಾರೆ. ವಿವಿಧ ರಾಜಮನೆತನಗಳ ಇತಿಹಾಸದ ಅಧ್ಯಯನವನ್ನು ಶ್ರೀನಿವಾಸರಿತ್ತಿ, ಎ.ವಿ. ನರಸಿಂಹ ಮೂರ್ತಿ, ಬಿ. ಆರ್. ಗೋಪಾಲ್, ಎಂ.ಎಸ್. ಕೃಷ್ಣಮೂರ್ತಿ ಮೊದಲಾದ ವಿದ್ವಾಂಸರು ಕೈಗೊಂಡಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸವನ್ನು ಕುರಿತು ಪಿ.ಗುರುರಾಜ ಭಟ್, ಕೆ.ವಿ. ರಮೇಶ್ ಅವರು ಬರೆದ ಗ್ರಂಥಗಳು ಗಮನಾರ್ಹವಾಗಿವೆ. ಇವರಲ್ಲಿ ಕೆಲವರು ವಿಸ್ತಾರವಾಗಿ, ಕೆಲವರು ಸಂಕ್ಷಿಪ್ತವಾಗಿ ಸಾಂಸ್ಕೃತಿಕ ವಿಷಯಗಳನ್ನು ತಮ್ಮ ಗ್ರಂಥಗಳಲ್ಲಿ ಚರ್ಚಿಸಿದ್ದಾರೆ.

ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸವನ್ನು ಬರೆಯುವ ಉದ್ದೇಶವನ್ನು ಇಟ್ಟುಕೊಂಡು ರಚಿತವಾದವು ಕರ್ಮರ್‌ಕರ್ ಅವರ 'Cultural History of Karnataka'  ಮತ್ತು ರಂ. ಶ್ರೀ. ಮುಗಳಿಯವರ `The Heritage of Karnataka' ಕೃತಿಗಳು. ಕಾಲಮಾನದ ಹಿನ್ನೆಲೆಯಲ್ಲಿ ಒಬ್ಬ ನಿರ್ದಿಷ್ಟ ವ್ಯಕ್ತಿಯ ಜೀವನ ಚಿತ್ರಣವನ್ನು ಕೊಡಲು ಹೊರಟ ಕೃತಿಗಳೂ ಇವೆ. ಪಿ. ಬಿ. ದೇಸಾಯಿ ಅವರ 'Basavesvara and His times' ಇದಕ್ಕೆ ಉದಾಹರಣೆಯಾಗಿದೆ. ಇವುಗಳಿಗಿಂತ ಭಿನ್ನವಾಗಿ ಒಂದು ನಿರ್ದಿಷ್ಟ ಕಾಲಮಾನದ ಸಂಸ್ಕೃತಿಯನ್ನು ಕುರಿತು ಶಾಸನಗಳನ್ನೇ ಪ್ರಧಾನ ಆಕರಗಳನ್ನಾಗಿ ಮಾಡಿಕೊಂಡು, ಎಂ. ಚಿದಾನಂದಮೂರ್ತಿಯವರು 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' (ಕ್ರಿ. ಶ. 450 - ಕ್ರಿ.ಶ. 1150) ಎಂಬ ಗ್ರಂಥವನ್ನು ರಚಿಸಿದ್ದಾರೆ. ಶಾಸನ ಆಕರಗಳನ್ನು ಬಳಸಿಕೊಂಡು ಆ ವ್ಯಾಪ್ತಿಯಲ್ಲಿ ವ್ಯವಸ್ಥಿತವಾಗಿ ಮಾಡಿದ ಪ್ರಥಮ ಅಧ್ಯಯನವಿದು. ಶಾಸನಗಳಲ್ಲಿ ನಿಕ್ಷಿಪ್ತವಾಗಿದ್ದ ಮಾಹಿತಿಗಳ ಭಂಡಾರವನ್ನು ತೆರೆದು ತೋರಿಸಿದ ಈ ಕೃತಿ ಅಂಥ ಅಧ್ಯಯನಗಳಿಗೆ ಮಾರ್ಗದರ್ಶಿ ಗ್ರಂಥವಾಯಿತು.

ಕನ್ನಡ ಶಾಸನಗಳನ್ನು ಆಧರಿಸಿ ಕನ್ನಡ ನಾಡಿನ ಆಡಳಿತಾತ್ಮಕ, ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಸ್ಥಿತಿ ಗತಿಗಳ ಬಗ್ಗೆ ಅಲ್ಲಲ್ಲಿ ಅಭ್ಯಾಸ ನಡೆದಿವೆ. ಇದಕ್ಕೆ ಜಿ. ಎಸ್. ದೀಕ್ಷಿತ್ ಅವರ 'Local self government in mediaeval Karnataka', ಕೆ.ಆರ್. ಬಸವರಾಜ ಅವರ 'The Administrative System under the chalukyas of kalyana' (ಅಪ್ರಕಟಿತ ಪಿ.ಎಚ್‌ಡಿ ಮಹಾಪ್ರಬಂಧ ಕ.ವಿ.ವಿ ೧೯೭೦) ಎಸ್. ಗುರುರಾಜಾಚಾರ್ ಅವರ ' Some aspects of Economic and Social life in Karnataka', ಎ.ವಿ. ವೆಂಕಟರತ್ನಂ ಅವರ 'ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ', ಜಿ. ಆರ್. ಕುಪ್ಪುಸ್ವಾಮಿ ಅವರ 'Economic conditions in karnataka', ಲೀಲಾಶಾಂತಕುಮಾರಿ ಅವರ 'Agraharas in Ancient karnataka', (ಅಪ್ರಕಟಿತ ಪಿ.ಎಚ್.ಡಿ. ನಿಬಂಧ. ಕ.ವಿ.ವಿ ೧೯೭೦) ಬಿ.ಆರ್. ಹಿರೇಮಠ ಅವರ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು', ಚನ್ನಕ್ಕ ಪಾವಟೆ ಅವರ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' ಮುಂತಾದ ಗ್ರಂಥಗಳನ್ನು ಗಮನಿಸಬಹುದು. ಬಿ.ಜಿ.ಎಲ್. ಸ್ವಾಮಿಯವರ 'ಶಾಸನಗಳಲ್ಲಿ ಗಿಡಮರಗಳು' ಶಾಸನಗಳನ್ನು ಆಧರಿಸಿ ನಡೆಸಬಹುದಾದ ಅಧ್ಯಯನಕ್ಕೆ ನಿದರ್ಶನವಾಗಿದೆ. ಶಾಸನಗಳನ್ನೇ ಆಧರಿಸಿ ಅದರ ಪ್ರಭೇದವಾದ ವೀರಗಲ್ಲುಗಳ ಬಗೆಗೆ ಆರ್. ಶೇಷಶಾಸ್ತ್ರಿ ಅವರು 'ಕರ್ನಾಟಕದ ವೀರಗಲ್ಲುಗಳು', ಸತಿ ಪದ್ಧತಿ ಹಾಗೂ ಆಚರಣೆಯ ಬಗ್ಗೆ ಬಸವರಾಜ ಕಲ್ಗುಡಿಯವರು 'ಮಹಾಸತಿ ಆಚರಣೆ, ಒಂದು ಅಧ್ಯಯನ', ಬಿ.ಎಸ್. ಶೇಠೆ ಅವರು 'ಕರ್ನಾಟಕದಲ್ಲಿ ಸತಿ ಪದ್ಧತಿ' ಎಂಬ ಗ್ರಂಥಗಳನ್ನು ರಚಿಸಿದ್ದಾರೆ.

ಎಂ. ಎಂ. ಕಲಬುರ್ಗಿಯವರು ಶಾಸನ ಕ್ಷೇತ್ರದಲ್ಲಿ ಸಂಪಾದನೆ, ವಿಶ್ಲೇಷಣೆ ಈ ಎರಡೂ ಹಂತಗಳಲ್ಲಿ ಕಾರ್ಯಮಾಡಿದ್ದಾರೆ. ಅವರು 'ಶಾಸನಗಳಲ್ಲಿ ಶಿವಶರಣರು', 'ಬಸವಣ್ಣನವರನ್ನು ಕುರಿತ ಶಾಸನಗಳು' ಮತ್ತು 'ಶಾಸನ ವ್ಯಾಸಂಗ'ದ ಎರಡು ಸಂಪುಟಗಳನ್ನು ಪ್ರಕಟಿಸಿದ್ದಾರೆ. ಅಲ್ಲದೆ ಮಾರ್ಗದ ನಾಲ್ಕು ಸಂಪುಟಗಳಲ್ಲಿ ಅನೇಕ ಶಾಸನಾಧಾರಿತ ಸಂಶೋಧನ ಲೇಖನಗಳು ಪ್ರಕಟವಾಗಿವೆ. ಇವುಗಳಲ್ಲದೆ ಅವರು ರಚಿಸಿದ 'ಸಮಾಧಿ ಬಲಿದಾನ-ವೀರಮರಣ ಸ್ಮಾರಕಗಳು', 'ಮಹಾರಾಷ್ಟ್ರದ ಕನ್ನಡ ಶಾಸನಗಳು' ಗಣ್ಯ ಕೃತಿಗಳಾಗಿವೆ.

ಎಸ್. ಶೆಟ್ಟರ್ ಅವರು ಬೆಂಗಳೂರು ವಿಶ್ವವಿದ್ಯಾಲಯದ ಸಮಗ್ರ ಸಾಹಿತ್ಯ ಚರಿತ್ರೆಗೆ ಬರೆದ ಲೇಖನ 'ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಸಾಮಾಜಿಕ ಜೀವನ' (ಸ ಸಾ ಚ III ಪು. ೨೨-೪೧ ) ಮಾಹಿತಿ ಮತ್ತು ವಿಶ್ಲೇಷಣೆಗಳ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಅದೇ ಲೇಖಕರ 'Inviting death 'ಹಾಗೂ 'Pursuing death' ಕೃತಿಗಳು ವಿಶೇಷ ಕ್ಷೇತ್ರಕಾರ್ಯ ಬೆಂಬಲಿತ ವಿದ್ವತ್ ಕೃತಿಗಳು. ಮೈಸೂರು ವಿಶ್ವವಿದ್ಯಾಲಯದ ಸಾಹಿತ್ಯ ಚರಿತ್ರೆಯ ನಾಲ್ಕನೆಯ ಸಂಪುಟಕ್ಕೆ ಬರೆದ ಎಸ್. ನಾಗರಾಜು ಅವರ ಲೇಖನ (ಕ ಸಾ ಚ IV(i) ಪು. ೧೪೦-೧೬೦) ಆ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ವಿಶ್ಲೇಷಣೆಯನ್ನು ಸಮರ್ಥವಾಗಿ ನೀಡುತ್ತದೆ. ಡಿ.ವಿ. ಪರಮಶಿವಮೂರ್ತಿಯವರು ವ್ಯಾಪಕವಾದ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ರಚಿಸಿದ 'ಕನ್ನಡ ಶಾಸನ ಶಿಲ್ಪ' ಗಮನಾರ್ಹವಾದ ಕೃತಿಯಾಗಿದೆ. ದೇವರ ಕೊಂಡಾರೆಡ್ಡಿ ಅವರ 'ತಲಕಾಡಿನ ಗಂಗರ ದೇವಾಲಯಗಳು- ಒಂದು ಅಧ್ಯಯನ,' ಪಿ.ವಿ. ಕೃಷ್ಣಮೂರ್ತಿಯವರ 'ತಮಿಳುನಾಡಿನ ಕನ್ನಡ ಶಾಸನಗಳು', ಕೆ.ಆರ್. ಗಣೇಶ್ ಅವರ 'ಆಂಧ್ರಪ್ರದೇಶದ ಕನ್ನಡ ಶಾಸನಗಳು', ಕೆ.ಜಿ. ವೆಂಕಟೇಶ ಜೋಯಿಸ್ ಅವರ 'ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಕೆ. ಎಸ್. ಕುಮಾರಸ್ವಾಮಿಯವರ 'ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು' ಮುಂತಾದ ಕೃತಿಗಳು ಶಾಸನ, ಸಂಸ್ಕೃತಿ ಹಾಗೂ ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ಗಣ್ಯ ಕೃತಿಗಳಾಗಿವೆ.

ಶಾಸನಗಳನ್ನು ಆಧರಿಸಿ ಮಾಡಿದ ಸಾಂಸ್ಕೃತಿಕ, ಸಾಮಾಜಿಕ ಅಧ್ಯಯನಗಳಂತೆ ಸಾಹಿತ್ಯವನ್ನು ಆಧರಿಸಿ ಅಧ್ಯಯನಗಳು ನಡೆದಿವೆ. ಪಿ.ವಿ. ನಾರಾಯಣರ 'ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ', ನಂ. ತಪಸ್ವೀಕುಮಾರರ 'ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ', ಕೆ. ಶ್ರೀಕಂಠಯ್ಯನವರ 'ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ,' ಬೆಟಗೇರಿ ಕೃಷ್ಣಶರ್ಮರ 'ಕರ್ನಾಟಕ ಜನಜೀವನ' ಆ ಕ್ಷೇತ್ರದಲ್ಲಿ ಬಂದ ಪ್ರಮುಖ ಕೃತಿಗಳಾಗಿವೆ. ಇತ್ತೀಚೆಗೆ

ಪ್ರಕಟವಾದ ಎಚ್.ಜಿ. ಶ್ರೀಧರ ಅವರ 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧ ಕಲೆ' (ಕ್ರಿ.ಶ. ೪೫೦ ರಿಂದ ೧೩೫೦) ಅಚ್ಚುಕಟ್ಟಾದ ಉತ್ತಮ ಕೃತಿಯಾಗಿದೆ.

ಹೀಗೆ ಕನ್ನಡನಾಡಿನ ಪ್ರಾಚೀನ ಸಂಸ್ಕೃತಿಯ ವಿವಿಧ ಮುಖಗಳ ಅಧ್ಯಯನ ನಡೆದು ಬಂದಿದೆ. ಎಂ. ಚಿದಾನಂದ ಮೂರ್ತಿಯವರ ಪೂರ್ವೋಕ್ತ ಗ್ರಂಥ ಮತ್ತು ಒಂದೆರಡು ಗ್ರಂಥಗಳನ್ನು ಬಿಟ್ಟರೆ ಒಂದು ನಿರ್ದಿಷ್ಟ ಕಾಲದ ಕನ್ನಡ ನಾಡಿನ ಸಂಸ್ಕೃತಿಯನ್ನು ಅದರ ವಿವಿಧ ಮುಖಗಳಲ್ಲಿ ನಿರೂಪಿಸಲು ಪ್ರಯತ್ನಿಸಿಲ್ಲ. ಚಿದಾನಂದಮೂರ್ತಿಯವರ ಅಧ್ಯಯನ ಕ್ರಿ.ಶ. ೪೫೦ ರಿಂದ ಕ್ರಿ ಶ. ೧೧೫೦ ರ ವರೆಗೆ ನಡೆದಿದೆ. ಅಲ್ಲಿಂದ ಮುಂದಿನ ಕಾಲದ ಸಂಸ್ಕೃತಿಯ ಚಿತ್ರವನ್ನು ಶಾಸನಗಳನ್ನು ಆಧರಿಸಿ ಕೊಡುವ ಸಮಗ್ರ ಪ್ರಯತ್ನಗಳು ನಡೆದಿಲ್ಲ. ಆ ಕೊರತೆಯನ್ನು ತುಂಬಿ ಕೊಡುವುದು ಈ ನಿಬಂಧದ ಉದ್ದೇಶವಾಗಿದೆ. ಶಾಸನಗಳನ್ನು ಮೂಲ ಆಕರಗಳನ್ನಾಗಿ ಬಳಸಿಕೊಂಡು ಕ್ರಿ.ಶ. ೧೧೫೦ ರಿಂದ ಕ್ರಿ.ಶ. ೧೩೪೦ ರ ವರೆಗಿನ ಸಾಂಸ್ಕೃತಿಕ ಅಧ್ಯಯನ ಇಲ್ಲಿ ನಡೆದಿದೆ.

ಈ ಅವಧಿ ರಾಜಕೀಯವಾಗಿ ಅನೇಕ ಸ್ಥಿತ್ಯಂತರಗಳನ್ನು ಕಂಡ ಕಾಲವಾಗಿದೆ. ಅದು ಕಲ್ಯಾಣದ ಚಾಳುಕ್ಯರು ಬಲಹೀನರಾಗಿ ಕಳಚೂರ್ಯರು ಪ್ರಬಲರಾದ ಕಾಲ, ಸಾಮಂತರಾಗಿದ್ದ ಹೊಯ್ಸಳರು ಚಕ್ರವರ್ತಿಗಳಾಗಿ ಮೆರೆದು ಕ್ರಮೇಣ ದೆಹಲಿಯ ಸುಲ್ತಾನರ ತೀವ್ರದಾಳಿಗೆ ಸಿಕ್ಕು ನಾಶವಾದ ಕಾಲ. ಸುಲ್ತಾನರ ದಾಳಿಯಿಂದ ಉತ್ತರದಲ್ಲಿ ಸೇವುಣರೂ ಇತರ ರಾಜರೂ ತತ್ತರಿಸುತ್ತಿದ್ದ ಈ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಈ ನಾಡಿನ ಸಂಸ್ಕೃತಿಯ ಪುನರುತ್ಥಾನಕ್ಕೋ ಎಂಬಂತೆ ಕ್ರಿ.ಶ. ೧೩೩೬ ರಲ್ಲಿ ಉದಯವಾಯಿತು. ಈ ನಾಡಿನ ರಾಜಕೀಯ, ಧರ್ಮ, ಸಾಹಿತ್ಯ, ಸಂಗೀತ, ಶಿಲ್ಪಗಳು ಒಟ್ಟಾಗಿ ಇಡೀ ಕರ್ನಾಟಕದ ಬದುಕು ಒಂದು ಹೊಸ ಆಯಾಮವನ್ನು ಪಡೆದ ಅವಧಿಯಿದು. ಹೀಗಾಗಿ ಅದನ್ನು ಒಂದು ಪ್ರತ್ಯೇಕ ಘಟ್ಟವೆಂದು ಭಾವಿಸಿ, ಕಲ್ಯಾಣ ಚಾಲುಕ್ಯರ ಪತನ, ವಿಜಯನಗರದ ಉತ್ಥಾನ ಈ ಮಧ್ಯದ ಸುಮಾರು ೧೯೦ ವರ್ಷಗಳ ಸಾಂಸ್ಕೃತಿಕ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

ಧಾರ್ಮಿಕವಾಗಿಯೂ ಇದು ಅನೇಕ ಏರಿಳಿತಗಳನ್ನು ಕಂಡ ಕಾಲ. ಜೈನಧರ್ಮ ತನ್ನ ಜನಪ್ರಿಯತೆಯ ಶಿಖರದಿಂದ ಕೆಳಗೆ ಇಳಿಯುತ್ತಾ, ಆಗಲೇ ಪ್ರವರ್ಧಮಾನಕ್ಕೆ ಬಂದಿದ್ದ ಶೈವಧರ್ಮದೊಂದಿಗೆ ಸ್ಪರ್ಧಿಸುತ್ತಲಿದ್ದಿತು. ಉತ್ತರ ಕರ್ನಾಟಕದಲ್ಲಿ ಜೈನಧರ್ಮಕ್ಕೆ ಒದಗಿದ್ದ ದುಸ್ಥಿತಿಯನ್ನು ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನ ಸ್ಪಷ್ಟವಾಗಿ ಬಿಂಬಿಸುತ್ತದೆ. ದಕ್ಷಿಣಭಾಗದ ಕರ್ನಾಟಕದಲ್ಲಿ ರಾಮಾನುಜರ ಆಗಮನದ ಮೂಲಕ ಉದ್ದೀಪನಗೊಂಡ ಶ್ರೀವೈಷ್ಣವ ಧರ್ಮದ ಜತೆಯಲ್ಲಿ ಸ್ಪರ್ಧಿಸುವುದು ಅದಕ್ಕೆ ಅನಿವಾರ್ಯವಾಯಿತು. ಕ್ರಿ.ಶ. ಸುಮಾರು ೧೧೬೫ರ ಕಾಲದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ವೀರಶೈವ ಧರ್ಮ ಬಹುದೊಡ್ಡ ಪರಿಷ್ಕರಣಕ್ಕೆ ಒಳಗಾಗಿ ಪ್ರಬಲವಾಗಿ ಬೆಳೆಯಿತು. ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಪ್ರದೇಶದಿಂದ ಬಂದ ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ಆಳವಾಗಿ ಪ್ರತಿಪಾದಿಸಿದರು. ಹೀಗೆ ಧಾರ್ಮಿಕವಾಗಿಯೂ ಕೆಲವು ಸ್ಥಿತ್ಯಂತರಗಳು ಈ ಕಾಲದಲ್ಲಿ ಬೆಳೆದು ನಿಂತವು.

ಸಾಹಿತ್ಯ ಕ್ಷೇತ್ರದಲ್ಲಿ ಹತ್ತನೆಯ ಶತಮಾನದ ಪ್ರೌಢ ಚಂಪೂ, ಹನ್ನೆರಡನೆಯ ಶತಮಾನದ ಹೊತ್ತಿಗೆ ಸರಳ ವಚನ ರಚನೆಯ ಕಡೆಗೆ, ರಗಳೆ, ಷಟ್ಪದಿಯ ಕಡೆಗೆ ಹೊರಳಿತು. ಮಾರ್ಗ ಸಾಹಿತ್ಯದಿಂದ ದೇಸಿ ಸಾಹಿತ್ಯದ ಕಡೆಗೆ ಒಲವನ್ನು ತಿರುಗಿಸಿತು. ರಾಜ ವ್ಯವಸ್ಥೆಯನ್ನು ಪ್ರಶ್ನಿಸುವ ಪ್ರವೃತ್ತಿ ಸಮಾಜದಲ್ಲಿ ಹುಟ್ಟಿಕೊಂಡುದನ್ನು ಕೊಂಡಗುಳಿ ಕೇಶಿರಾಜನ ರಗಳೆಯ ಮೂಲಕ ಹರಿಹರ ಚಿತ್ರಿಸುತ್ತಾನೆ. ಪುರಾಣ ಪುರುಷರು, ರಾಜರು ಕಾವ್ಯದ ನಾಯಕರಾಗುವ ಪ್ರವೃತ್ತಿ ಇಳಿಮುಖವಾಗಿ ಸಾಮಾನ್ಯರೆಂದು ಲೋಕದ ದೃಷ್ಟಿಯಲ್ಲಿ ಭಾಸವಾದ ಅನೇಕ ಶಿವಶರಣರು ಕಾವ್ಯದ ನಾಯಕರಾದರು. ಹರಿಹರ- ರಾಘವಾಂಕರ ಕೃತಿಗಳಲ್ಲಿ ಈ ಬದಲಾದ ಧೋರಣೆಯನ್ನು ಕಾಣಬಹುದು.

ಹೀಗೆ ಎಲ್ಲ ದೃಷ್ಟಿಗಳಿಂದ ಅನೇಕ ಸ್ಥಿತ್ಯಂತರಗಳನ್ನು ಕಂಡ ಈ ಕಾಲಮಾನದ ಸಂಸ್ಕೃತಿಯ ಅಧ್ಯಯನ ಹೆಚ್ಚು ಕುತೂಹಲ ಕರವಾದುದಾಗಿದೆ. ಈ ಅಧ್ಯಯನಕ್ಕೆ ಅನುಸರಿಸಿದ ಮಾರ್ಗ, ಬಳಸಿಕೊಂಡ ಆಕರಗಳ ವಿಷಯವನ್ನು ಈಗ ತಿಳಿಯಬಹುದು.

ನಮ್ಮ ಉದ್ದೇಶಿತ ಅಧ್ಯಯನದ ಅವಧಿಯಲ್ಲಿ ರಚನೆಗೊಂಡು ದೊರೆಯುವ ಶಾಸನಗಳೇ ಪ್ರಸ್ತುತ ಅಭ್ಯಾಸಕ್ಕೆ ಮೂಲ ಆಕರಗಳು. ಇವು 'Epigraphia Karnatica,' 'South Indian Inscriptions,' 'Epigraphia Indica, Karnatak

Inscriptions' ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಶಾಸನ ಸಂಪುಟಗಳಲ್ಲಿ ಹಂಚಿ ಹೋಗಿವೆ. ಇವುಗಳಿಂದಲ್ಲದೆ ಹೊರನಾಡಿನಲ್ಲಿ ದೊರೆಯುವ ಶಾಸನಗಳಿಂದಲೂ ಮಾಹಿತಿಯನ್ನು ಸಂಗ್ರಹಿಸಲಾಗಿದೆ. 'Kananda Inscriptions of Andhra Pradesh,' 'Telangana Inscriptions, Inscriptions of Solapur District,' 'Inscriptions in Northern Karnataka and kolhapur state, Inscriptions from Nanded District,' ಮುಂತಾದ ಪ್ರಕಟಿತ ಶಾಸನ ಸಂಪುಟಗಳಿಂದ, ವಿವಿಧ ಪತ್ರಿಕೆಗಳಿಂದ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. Epigraphia Carnatika ದ ಹಳೆಯ ಎಲ್ಲ ಸಂಪುಟಗಳಲ್ಲದೆ ಪರಿಷ್ಕೃತ ಆರು ಸಂಪುಟಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇವುಗಳಲ್ಲದೆ 'Mysore Archealogical Report' ಗಳನ್ನು ಹಾಗೂ ಶಾಸನ ಸಂಬಂಧಿತ ಇತರ ವರದಿಗಳನ್ನು ಅಧ್ಯಯನದಲ್ಲಿ ಉಪಯುಕ್ತವಾದ ಕಡೆಗಳಲ್ಲಿ ಬಳಸಿಕೊಳ್ಳಲಾಗಿದೆ.

ಆಕರಗಳಿಂದ ಮಾಹಿತಿ ಸಂಗ್ರಹಿಸುವಾಗ ರಾಜಕೀಯ ಚರಿತ್ರೆಯ ವಿಷಯಕ್ಕೆ ಅಷ್ಟಾಗಿ ಗಮನಕೊಟ್ಟಿಲ್ಲ. ಅಧಿಕೃತ ಇತಿಹಾಸ ಪಠ್ಯಪುಸ್ತಕಗಳಲ್ಲಿ ಅವುಗಳ ವಿವರಗಳು ದೊರೆಯುವುದರಿಂದ ಆ ವಿಷಯದ ಕಡೆ ಗಮನ ಹರಿಸದೆ ಸಂಸ್ಕೃತಿಯ ದೃಷ್ಟಿಯಿಂದ ಮುಖ್ಯವಾದ ಅಂಶಗಳನ್ನು ಸುಮಾರು ನಾಲ್ಕು ಸಾವಿರಕ್ಕೂ ಹೆಚ್ಚಿನ ಶಾಸನಗಳಿಂದ ಇಲ್ಲಿ ಸಂಗ್ರಹಿಸಲಾಗಿದೆ. ಅಪ್ರಕಟಿತ ಶಾಸನಗಳ ಸಂಖ್ಯೆ ಸಾಕಷ್ಟು ಇರುವುದಾದರೂ ಅದನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿಲ್ಲ.

ಶಾಸನಗಳಿಗೆ ಪೂರಕವಾಗಿ ಆ ಕಾಲದಲ್ಲಿ ರಚಿತವಾದ ವಿಸ್ತಾರ ವಚನ ಸಾಹಿತ್ಯದಿಂದಲೂ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅಲ್ಲದೆ ವಚನ ಸಾಹಿತ್ಯಾನಂತರದ ಕಾಲದ ಹರಿಹರನ ರಗಳೆಗಳಿಂದ, ರಾಘವಾಂಕನ ಕೃತಿಗಳಿಂದ ಮತ್ತು ಆ ಕಾಲದ ಇನ್ನಿತರ ಕೃತಿಗಳಿಂದ ವಿಷಯಗಳನ್ನು ಬಳಸಿಕೊಳ್ಳಲಾಗಿದೆ.

ಬ್ರಹ್ಮಶಿವನ 'ಸಮಯಪರೀಕ್ಷೆ' ಧಾರ್ಮಿಕ ಅಧ್ಯಯನದ ದೃಷ್ಟಿಯಿಂದ ವಿಶೇಷವಾದ ಕೃತಿಯಾಗಿದೆ. ಜೈನಧರ್ಮ ಮತ್ತು ಇತರ ಧರ್ಮಗಳ ಬಗ್ಗೆ ಆಳವಾದ ತಿಳುವಳಿಕೆಯನ್ನು ಹೊಂದಿದ್ದ ಈ ಕವಿ, ಧಾರ್ಮಿಕ ಸಂಘರ್ಷದ ದೃಷ್ಟಿಯಿಂದ ವಿಪುಲ ಸಾಮಗ್ರಿಯನ್ನು ಒದಗಿಸಿದ್ದಾನೆ. ಜನಜೀವನವನ್ನು ತಿಳಿಯಲು ವ್ಯಾಪಕವಾದ ಸಾಮಗ್ರಿಯನ್ನು ಒದಗಿಸುವ ನಯಸೇನನ 'ಧರ್ಮಾಮೃತಂ', ಸಂಗೀತ, ಚಿತ್ರಕಲೆಯ ಬಗೆಗೆ ಅಮೂಲ್ಯ ಮಾಹಿತಿಯನ್ನು ನೀಡುವ ಅಗ್ಗಳನ 'ಚಂದ್ರಪ್ರಭ ಪುರಾಣಂ,' ಕೋಟೆಗಾಳಗ, ಲೆಂಕ, ಜೈನಧರ್ಮದ ಆಚರಣೆ ಮುಂತಾದ ವಿಷಯಗಳ ಬಗೆಗೆ ವಿವರಗಳನ್ನು ಒದಗಿಸುವ ಜನ್ನನ 'ಯಶೋಧರ ಚರಿತೆ,' 'ಅನಂತನಾಥಪುರಾಣಂ,' ನೇಮಿಚಂದ್ರನ 'ಲೀಲಾವತಿ', ರುದ್ರಭಟ್ಟನ 'ಜಗನ್ನಾಥ ವಿಜಯಂ' ಮೊದಲಾದ ಕೃತಿಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಎರಡನೆಯ ಚಾವುಂಡರಾಯನಿಂದ ರಚಿತವಾದ 'ಲೋಕೋಪಕಾರಂ' ಪುಟ್ಟ ವಿಶ್ವಕೋಶದಂತಹ ಕೃತಿ. ಪಂಚಾಂಗಫಲ, ವೈದ್ಯ, ಸೂಪಶಾಸ್ತ್ರ, ವೃಕ್ಷಾಯುರ್ವೇದ ಮುಂತಾದ ಹನ್ನೆರಡು ಆಶ್ವಾಸಗಳಲ್ಲಿ ಹರಡಿರುವ ಈ ಕೃತಿ ಅತಿ ವಿರಳವೆನ್ನಬಹುದಾದ ಮಾಹಿತಿಗಳನ್ನು ಒಳಗೊಂಡಿದೆ. ಸ್ವಲ್ಪ ಈಚಿನದಾಗಿರುವ 'ವಿವೇಕ ಚಿಂತಾಮಣಿ' ಮುಂತಾದ ಗ್ರಂಥಗಳಿಂದಲೂ ಮಾಹಿತಿಯನ್ನು ಉಪಯುಕ್ತ ಪೋಷಕಾಂಶವಾಗಿ ಬಳಸಲಾಗಿದೆ.

ಕನ್ನಡ ನಾಡಿನ ಇತಿಹಾಸ, ಸಂಸ್ಕೃತಿ ಮುಂತಾದ ವಿಷಯಗಳ ಬಗೆಗೆ ವಿದ್ವಾಂಸರು ಬರೆದ ಕನ್ನಡ ಮತ್ತು ಇಂಗ್ಲಿಷ್ ಗ್ರಂಥಗಳಿಂದಲೂ, ಅನೇಕ ವಿದ್ವತ್ ಪತ್ರಿಕೆಗಳಲ್ಲಿ ಚದುರಿ ಹೋಗಿರುವ ಲೇಖನಗಳಿಂದಲೂ ನೆರವು ಪಡೆಯಲಾಗಿದೆ. ಅಧ್ಯಯನವನ್ನು ಪ್ರಾರಂಭ ಮಾಡಿದನಂತರ ಈ ನಾಡಿನ ಮುಖ್ಯ ಸಾಂಸ್ಕೃತಿಕ ನೆಲೆಗಳಾದ ಬೇಲೂರು, ಹಳೆಯಬೀಡು, ಬನವಾಸಿ, ಬಂದಳಿಕೆ, ಬಳ್ಳಿಗಾವೆ, ಶ್ರವಣಬೆಳಗೊಳ, ಕೋಲಾರ, ಹಂಪೆ, ಮೇಲುಕೋಟೆ, ಸೋಮನಾಥಪುರ, ಕಲ್ಯ, ಬಸವಕಲ್ಯಾಣ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಚಿತ್ರದುರ್ಗ, ಉಡುಪಿ, ಕಂಚಿ, ತಾಳಗುಂದ, ಹುನುಗುಂದ, ಕುರುಡುಮಲೆ, ಮುಳಬಾಗಿಲು, ಹಳೆ ಶ್ರವಣಬೆಳಗೊಳ, ಹೂಜಿಗಲ್ಲು, ಗೋವಾ ಮುಂತಾದ ಸ್ಥಳಗಳಿಗೆ ಹೋಗಿ ಕ್ಷೇತ್ರಕಾರ್ಯ ನಡೆಸಲಾಗಿದೆ. ಎಲ್ಲ ಮಾರ್ಗಗಳಿಂದ ಸಮಗ್ರ ಮಾಹಿತಿಯನ್ನು ಪಟ್ಟಿಕೆ ಮಾಧ್ಯಮದಲ್ಲಿ ಅಳವಡಿಸಿಕೊಂಡು ವ್ಯವಸ್ಥಿತವಾಗಿ ಜೋಡಿಸಿ, ವಿಶ್ಲೇಷಿಸಿ ಈ ನಿಬಂಧವನ್ನು ರಚಿಸಲಾಗಿದೆ.

# ೨. ಶೈವಧರ್ಮ - ಇತರ ಶಾಖೆಗಳು

ಶೈವಧರ್ಮ ಭಾರತದ ಅತ್ಯಂತ ಪ್ರಾಚೀನಧರ್ಮಗಳಲ್ಲೊಂದು. ವೇದಪೂರ್ವ ಹರಪ್ಪ –ಮೊಹೆಂಜೊದಾರ್ರೋಗಳ ಕಾಲದಿಂದಲೂ ಅವ್ಯಾಹತವಾಗಿ ಸಾಗಿ ಬಂದ ಶಿವೋಪಾಸನೆ ಈ ಅವಧಿಯಲ್ಲಿಯೂ ನಾನಾ ಬಗೆಗಳಲ್ಲಿ ಬೆಳೆದು ಬಂದಿದೆ. ಋಗ್ವೇದದಲ್ಲಿ ಕಾಣಿಸಿಕೊಳ್ಳುವ ರುದ್ರ ಕ್ರಮೇಣ ಶಿವನಾಗಿ ಶೈವಧರ್ಮೀಯರಿಗೆ ಆರಾಧ್ಯದೈವವಾಗಿ ಬೆಳೆದ. ಶಿವನನ್ನು ಲಿಂಗರೂಪವಾಗಿಯೂ ಸಾಕಾರ ಮತ್ತು ನಿರಾಕಾರವಾಗಿಯೂ ಆರಾಧಿಸುವ ರೂಢಿ ಬೆಳೆದುಬಂದಿದೆ. ಶಿವೋಪಾಸನೆಗಳಿಗೆ ಆಧಾರಗಳಾದ ಶಿವಾಗಮಗಳನ್ನು ಶಿವನೇ ಪಾರ್ವತಿಗೆ ಉಪದೇಶಿಸಿದನೆಂಬ ನಂಬಿಕೆ ಇದೆ. ಅವುಗಳ ಸಂಖ್ಯೆ ಇಪ್ಪತ್ತೆಂಟು ಎಂದು ಹೇಳಲಾಗುತ್ತದೆ. ಕಾಲದ ಪ್ರವಾಹದಲ್ಲಿ ವೇದಗಳ, ಆಗಮಗಳ ಅಭಿಪ್ರಾಯಗಳು ಒಂದರೊಡನೊಂದು ಬೆರೆತು ಶಿವೋಪಾಸನೆಯಲ್ಲಿ ವಿಶಿಷ್ಟ ಸಂಕೀರ್ಣತೆ ತಲೆದೋರಿದೆ.

ಶಿವೋಪಾಸನಾ ಮಾರ್ಗದ ಇನ್ನೊಂದು ಹೆಸರು ಪಾಶುಪತಧರ್ಮ. ಅದು ಮಹಾಭಾರತದ ಶಾಂತಿಪರ್ವದಲ್ಲಿ ಉಕ್ತವಾಗಿದೆ.[೧] ಈ ಧರ್ಮದ ಸಂಸ್ಥಾಪಕ ಶಿವನೆಂದೂ, ಶ್ರೀಕಂಠನೆಂದೂ ಭಿನ್ನಾಭಿಪ್ರಾಯವಿದೆ. ಬಹುಜನ ವಿದ್ವಾಂಸರು ಶ್ರೀಕಂಠನೇ ಸ್ಥಾಪಕನೆಂದು,[೨] ಲಕುಲೀಶನು ಅದನ್ನು ವ್ಯವಸ್ಥಿತವಾಗಿ ಪ್ರತಿಪಾದಿಸಿದವನೆಂದು ಹೇಳುತ್ತಾರೆ. ಇನ್ನು ಕೆಲವರು ಪಾಶುಪತಧರ್ಮದ ಸ್ಥಾಪಕ ಲಕುಲೀಶ[೩]ನೆಂದೂ, ಚಿಂತ್ರಪ್ರಶಸ್ತಿಯಲ್ಲಿ ಬರುವಂತೆ (ರಚನೆ ಕ್ರಿ.ಶ. ಸು. ೧೨೭೪-೧೨೯೬)ಅವನು ಶಿವನ ಅವತಾರವೆಂದೂ ಅವತಾರ ಸ್ಥಳ ಲಾಟದೇಶದ ಕಾರೋಹಣವೆಂದೂ ಅಭಿಪ್ರಾಯಪಡುತ್ತಾರೆ. ಆ ಸ್ಥಳವನ್ನು ಅವರು ಬೂಲ್ಹರ್ ಈಗಿನ ಕಾರ್‍ವಾಣ್ ಎಂದು ಗುರುತಿಸಿದ್ದಾರೆ. ಅದು ಬರೋಡ ರಾಜ್ಯದ (ಈಗ ಗುಜರಾತ್ ರಾಜ್ಯ) ಡಬ್ಬೊಯಿಂದ ಪಶ್ಚಿಮಕ್ಕೆ ಏಳು ಮೈಲು ದೂರದಲ್ಲಿದೆ. ಲಕುಲೀಶನ ನಾಲ್ವರು ಶಿಷ್ಯರಾದ ಕುಶಿಕ, ಗಾರ್ಗ್ಯ, ಕೌರುಷ ಮತ್ತು ಮೈತ್ರೇಯರಿಂದ ಆ ಧರ್ಮದ ನಾಲ್ಕು ಶಾಖೆಗಳು ಉಂಟಾದವು.[೪] ಲಕುಲೀಶನು ಆ ಧರ್ಮವನ್ನು ಸ್ಥಾಪಿಸಿದ್ದರಿಂದ ಅದಕ್ಕೆ ಲಕುಲೀಶ ಪಾಶುಪತದರ್ಶನವೆಂಬ ಹೆಸರು ಬಂದಿತು. ಲಕುಲೀಶನೆಂದರೆ ಲಾಕುಳ ಹೆಸರಿನ ದಂಡವನ್ನು ಹಿಡಿದವರ ಸ್ವಾಮಿ ಎಂದು ದಲಾಲ್ ಅವರು ಗಣಕಾರಿಕಕ್ಕೆ (ಕ್ರಿಶ.೧೦ನೇ ಶತಮಾನದ ಕೃತಿ) ಮುನ್ನುಡಿ ಬರೆಯುತ್ತಾ ತಿಳಿಸಿದ್ದಾರೆ.[೫] ಲಕುಲೀಶನ ವಿಗ್ರಹ ಬಲಗೈಯಲ್ಲಿ ಮಾದಲ ಫಲವನ್ನು, ಎಡಗೈಯಲ್ಲಿ ದಂಡವನ್ನು ಹಿಡಿದಂತೆ ರೂಪಿತವಾಗಿರುತ್ತದೆ.

---

೧. M.R. Sakhare : History and Philosophy of Lingayat Religion, ಪು. ೨೧೨.

೨. V.S. Pathak : History of Saiva cults in Northern India. ಪು. ೪-೬.

೩. ಮಹೇಶ್ವರನು ಸತ್ತ ಬ್ರಹ್ಮಚಾರಿಯ ದೇಹವನ್ನು ಹೊಕ್ಕು ಲಕುಲೀಶನಾಗಿ ಅವತರಿಸಿದನೆಂದು ಬ್ರಹ್ಮಶಿವ ಎರಡು ಪದ್ಯಗಳಲ್ಲಿ ಟೀಕಿಸಿದ್ದಾನೆ. ನೋಡಿ: ಸ.ಪ. ೧೦-೧೩,೧೪.

೪. J.F. Fleet : 'Inscriptions of Ablur' ಎ.ಇ. V ಪು. ೨೨೨.

M.R. Majumdar : 'Antiquities incarven with reference to Lakulisa worship'. ಜೆಒಯು ಬಿ XVIII-೪ (New Series) ಪು. ೪೭-೪೮.

೫. S.N. Dasgupta : ಪೂರ್ವೋಕ್ತ. ಪು. ૭.

ಪಾಶುಪತಶೈವರು ಆರಂಭಕಾಲದಲ್ಲಿ ಒಂದು ಸ್ಥಳದಲ್ಲಿ ನಿಲ್ಲದೆ ಸಂಚರಿಸುತ್ತ ಲೋಕದ ಯಾವ ಬಂಧನವೂ ಇಲ್ಲದಂತೆ ಬದುಕುತ್ತಿದ್ದಂತೆ ಕಾಣುತ್ತದೆ. ಪಾಳುಮನೆಗಳಲ್ಲಿ, ಗುಹೆಗಳಲ್ಲಿ, ಕೆಲವು ಸಲ ಸ್ಮಶಾನಗಳಲ್ಲಿ ವಾಸಿಸುತ್ತಿದ್ದರು. ಅವರು ಸಾಮಾನ್ಯವಾಗಿ ಒಂದು ತುಂಡು ಬಟ್ಟೆಯನ್ನು ಮಾತ್ರ ಧರಿಸುತ್ತಿದ್ದರು. ಆದರೆ ಈ ಜೀವನ ರೀತಿಯನ್ನು ಮುಂದೆ ಕಟ್ಟುನಿಟ್ಟಾಗಿ ಅನುಸರಿಸಿದಂತಿಲ್ಲ. ಅವರ ನಡವಳಿಕೆಗಳಲ್ಲಿ ಮುಖ್ಯವಾಗಿ ಬೆಳಗ್ಗೆ, ಮಧ್ಯಾಹ್ನ ಮತ್ತು ಸಂಜೆ ಬೂದಿಯನ್ನು ಮೈತುಂಬ ಬಳಿದುಕೊಳ್ಳುವುದು, ನೀರಿನ ಗಡಿಗೆಗಳನ್ನು ಶಿವನಿಗೆ ಅರ್ಪಿಸುವುದು, ಸ್ವಹಿಂಸಾಚಾರದಲ್ಲಿ ತೊಡಗುವುದು ಇತ್ಯಾದಿ ಆಚರಣೆಗಳು ಎದ್ದು ಕಾಣುತ್ತವೆ.[೧] ಪ್ರಾಚೀನಕಾಲದಲ್ಲಿಯೇ ಲಕುಲೀಶಪಾಶುಪತಧರ್ಮ ನಿಶ್ಚಿತ ಆಕಾರವನ್ನು ಪಡೆದು ಬೆಳೆಯಿತು. ಮುಂದೆ ಬಂದ ಅನೇಕ ಶೈವಶಾಖೆಗಳು ಈ ಧರ್ಮದಿಂದ ತತ್ವಗಳನ್ನು ಸ್ವೀಕರಿಸಿ, ಬೇರೆಬೇರೆಯಾಗಿ ಬೆಳೆದವು. ಏನೇ ಅನ್ಯಶಾಖೆಗಳು ಬೆಳೆದು ಬಂದರೂ ಪಾಶುಪತವು ೧೨ನೆಯ ಶತಮಾನದ ವರೆಗೂ ಪ್ರಭಾವೀಧರ್ಮವಾಗಿಯೇ ಮುಂದುವರಿಯಿತು.[೨] ಎಸ್.ಎಸ್. ಹಿರೇಮಠ ಅವರು ಪಾಶುಪತ ದರ್ಶನವೆಂಬ ಕೃತಿಯಲ್ಲಿ ಪಾಶುಪತದ ಅಸ್ತಿತ್ವವನ್ನು ಜನಪದೀಯ ಮೂಲಕ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅವರ ಪ್ರಕಾರ ಅವೈದಿಕ ಧಾರೆಯಾದ ಇದು ಪುರುಷತತ್ವ ಪ್ರಧಾನ ಸಿದ್ಧಾಂತವಾಗಿದೆ.[೩]

ಪ್ರಾಚೀನ ಶೈವಧರ್ಮದ ಶಾಖೆಗಳನ್ನು ಗುರುತಿಸುವಾಗ ಅಷ್ಟಾಗಿ ಏಕರೂಪತೆ ಕಂಡುಬರುವುದಿಲ್ಲ. ಅದಕ್ಕೆ ಕಾರಣ ಕೆಲವು ಶೈವಶಾಖೆಗಳಲ್ಲಿ ಆಚರಣೆಯ ಸಾಮ್ಯಾಂಶಗಳು ಮೇಲುನೋಟಕ್ಕೆ ಒಂದೇ ಆಗಿ ಕಂಡಿರಬಹುದು ಮತ್ತು ಭಿನ್ನಧರ್ಮೀಯರಿಗೆ ಒಂದೊಂದು ಶಾಖೆಯ ಸೂಕ್ಷ್ಮ ಪ್ರಭೇದಗಳನ್ನು ಗುರುತಿಸಲು ಸಾಧ್ಯವಾಗದೇ ಇರಬಹುದು. ವಾಚಸ್ಪತಿಯು (ಕ್ರಿ.ಶ.೯ ಶ.ಮಾ.) ಭಾಮತಿಯಲ್ಲಿ ಶೈವಶಾಖೆಗಳನ್ನು ಹೇಳುತ್ತ ಶೈವ, ಪಾಶುಪತ, ಕಾಪಾಲಿಕ ಮತ್ತು ಕಾರುಣಿಕ ಸಿದ್ಧಾಂತಿ ಎಂದು ಹೇಳಿದ್ದಾನೆ. ಅದೇ ಕಾಲದ ಭಾಸ್ಕರ ತನ್ನ ಬ್ರಹ್ಮಸೂತ್ರ ಭಾಷ್ಯದಲ್ಲಿ ಅದೇ ವಿಭಾಗವನ್ನು ಹೇಳಿ ಕೊನೆಯದನ್ನು ಕಾಥಕ ಸಿದ್ಧಾಂತಿ ಎಂದು ಹೆಸರಿಸಿದ್ದಾನೆ. ಹನ್ನೊಂದನೆಯ ಶತಮಾನದಲ್ಲಿ ಯಾಮುನಾಚಾರ್ಯರು ಶೈವ, ಪಾಶುಪತ, ಕಾಪಾಳಿಕ ಮತ್ತು ಕಾಳಾಮುಖರೆಂದು ಗುರುತಿಸುತ್ತಾರೆ.[೪] ಶಂಕರಾಚಾರ್ಯರ ಭಾಷ್ಯಕ್ಕೆ ವ್ಯಾಖ್ಯಾನಗಳನ್ನು ಬರೆದ ವ್ಯಾಖ್ಯಾನಕಾರರು ಶೈವ, ಪಾಶುಪತ, ಕಾರುಣಿಕ ಸಿದ್ಧಾಂತಿ ಮತ್ತು ಕಾಪಾಲಿಕ ಎಂದು ಗುರುತಿಸಿದ್ದಾರೆ.[೫] ಹದಿನಾಲ್ಕನೆಯ ಶತಮಾನದಲ್ಲಿ ಮಾಧವರು ಸರ್ವದರ್ಶನ ಸಂಗ್ರಹದಲ್ಲಿ ನಕುಲೀಶ ಪಾಶುಪತ, ಶೈವ ಮತ್ತು ಪ್ರತ್ಯಭಿಜ್ಞ (ಕಾಶ್ಮೀರದ ಶೈವ) ಎಂದು ಗುರುತಿಸಿದ್ದಾರೆ.[೬] ವಚನಕಾರರು ಶೈವ ಪ್ರಭೇದಗಳನ್ನು ಹೆಸರಿಸುವಾಗ ಬೇರೊಂದು ಬಗೆಯನ್ನು ಹಿಡಿದಿದ್ದಾರೆ. ಅವರಲ್ಲಿಯೂ ಏಕರೂಪತೆ ಇಲ್ಲ.[೭] ಬ್ರಹ್ಮಶಿವನು ಶೈವರಲ್ಲಿ ಕಾಳಾಮುಖ, ಕಪಾಳಿ, ಪಾಶುಪತಿ ಮತ್ತು ಶೈವರೆಂಬ ನಾಲ್ಕು ಬಗೆಗಳನ್ನು ಹೇಳುತ್ತಾನೆ.[೮] ದಾಸಗುಪ್ತ ಅವರು ಭಾವಿಸುವಂತೆ ಲಕುಲೀಶ ಮತ್ತು ಪಾಶುಪತರಲ್ಲಿ ಅಷ್ಟು ವ್ಯತ್ಯಾಸವೇ ಇರಲಿಲ್ಲ.[೯] ಮಾಧವರು ತಮ್ಮ ಕೃತಿಯಲ್ಲಿ ಕಾಳಾಮುಖರನ್ನು ಹೆಸರಿಸಿಯೇ ಇಲ್ಲ. ಇವುಗಳೆಲ್ಲವೂ ಪ್ರಾಚೀನ ಕಾಲದಲ್ಲಿ ಶೈವ ಶಾಖೆಗಳನ್ನು ಗುರುತಿಸುವಾಗ ಇದ್ದಿರಬಹುದಾದ ಸ್ವಲ್ಪ ಮಟ್ಟಿನ ಗೊಂದಲವನ್ನು ಸೂಚಿಸುತ್ತವೆ.

---

೧. K. K. Handiqui : Yashastilaka and Indian culture. ಪು. ೧೯೯.

೨. ಅದೇ, ಪು. ೨೩೯.

೩. ಕೆ. ರವೀಂದ್ರನಾಥ್ : 'ಪಾಶುಪತರು' ಕನ್ನಡ ಅಧ್ಯಯನ ಸಂ. ೧೧-೧೨ ಸಂ ೧ ಮತ್ತು ೨ ಪು. ೧೫೪-೧೬೫.

೪. K.K. Handiqui ಪೂರ್ವೋಕ್ತ ಪು. ೨೩೪.

೫. ಅದೇ, ಪು. ೨೧೫.

೬. S.N. Dasgupta : A History of Indian Philosophy. ಪು. ೫೦.

೭. ಪಿ.ವಿ. ನಾರಾಯಣ : ವಚನ ಸಾಹಿತ್ಯ -ಒಂದು ಸಾಂಸ್ಕೃತಿಕ ಅಧ್ಯಯನ, ಪು. ೪೫೨-೪೫೫.

೮. ಸ.ಪ. ೧೪-೫೦.

೯. S.N. Dasgupta : A History of Indian Philosophy. ಪು. ೫೦.

**ಕಾಳಾಮುಖ:**

ಕಾಳಾಮುಖ ಮತ್ತು ಪಾಶುಪತಗಳು ಆರಂಭ ಕಾಲದಲ್ಲಿ ಭಿನ್ನ ಶಾಖೆಗಳಾಗಿದ್ದವೆಂದು ಕಾಣುತ್ತದೆ. ಆದರೆ ಅವುಗಳಿಗೆ ಸಂಬಂಧಿಸಿದ ವ್ಯತ್ಯಾಸಗಳಾವುವು ಎನ್ನುವುದನ್ನು ತಿಳಿಸಲು ಸದ್ಯಕ್ಕೆ ಆಧಾರಗಳು ಇಲ್ಲ. ಅವೆರಡೂ ಬೇರೆ ಬೇರೆಯೆಂಬುದು ಸ್ಪಷ್ಟ. ಏಕೆಂದರೆ ಸಿದ್ಧಲಿಂಗಯತಿಗಳೂ ಸೇರಿದಂತೆ ಅನೇಕ ವಚನಕಾರರು ಅವೆರಡನ್ನು ಬೇರೆಯಾಗಿ ಎಣಿಸಿದ್ದಾರೆ. ಆದರೂ ಈ ಎರಡು ಶಾಖೆಗಳಿಗೆ ಇದ್ದ ವ್ಯತ್ಯಾಸಗಳಾವುವು ಎನ್ನುವುದು ತಿಳಿಯದು. ಇದ್ದರೂ ಅಲ್ಪವಾಗಿರಬೇಕು.[೧] ತಾತ್ವಿಕವಾಗಿ ಅವೆರಡರ ನಡುವೆ ಭಿನ್ನತೆಗಳಿದ್ದರೂ ಸುಮಾರು ಹತ್ತು – ಹನ್ನೆರಡನೆಯ ಶತಮಾನಗಳಲ್ಲಿ ಇವೆರಡೂ ಅಭಿನ್ನವೆನ್ನುವಷ್ಟು ಸಾಮ್ಯಗಳನ್ನು ಪಡೆದಿದ್ದವು. ಶಾಸನಗಳಲ್ಲಿ ಈ ಎರಡೂ ಪಂಥಗಳ ಗುರುಗಳನ್ನು ಒಂದೇ ರೀತಿಯಲ್ಲಿ ವರ್ಣಿಸಲಾಗಿದೆ. ಅಲ್ಲದೆ ಅವರ ಪ್ರಮುಖ ಚಟುವಟಿಕೆ ಮತ್ತು ಕಾರ್ಯಕ್ಷೇತ್ರಗಳು ಒಂದೇ ಬಗೆಯವಾಗಿದ್ದವು. ಆ ಕಾಲದಲ್ಲಿ ಕಾಳಾಮುಖರು ಕರ್ನಾಟಕದಲ್ಲಿ ತುಂಬ ಪ್ರಬಲರಾಗಿದ್ದರು. ಅನೇಕ ರಾಜರಿಂದ, ಅಧಿಕಾರಿಗಳಿಂದ, ಸಾಮಾನ್ಯರಿಂದ ದಾನ ದತ್ತಿಗಳನ್ನು ಪಡೆದು, ರಾಜಗುರುಗಳಾಗಿ, ಸ್ಥಾನಪತಿಗಳಾಗಿ ವಿದ್ಯಾಭ್ಯಾಸ ಕೇಂದ್ರಗಳನ್ನು, ಛತ್ರಗಳನ್ನು ಮತ್ತು ಸಾಮಾಜಿಕ ಕಾರ್ಯಗಳನ್ನು ನಿರ್ವಹಿಸುತ್ತ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ತುಂಬ ಕ್ರಿಯಾಶೀಲರಾಗಿದ್ದರು.

ಕಾಳಾಮುಖರನ್ನು[೨] ಆ ಹೆಸರಿನಿಂದ ಗುರುತಿಸಲು ಮುಖ್ಯವಾಗಿ ಅವರು ಹಣೆಯ ಮೇಲೆ ಕಪ್ಪು ಗೆರೆಯನ್ನು ಧರಿಸುತ್ತಿದ್ದುದು ಕಾರಣವಾಗಿರಬೇಕೆಂದು ಅನೇಕ ವಿದ್ವಾಂಸರು ಭಾವಿಸುತ್ತಾರೆ.[೩] ಕಾಳಾಮುಖರಲ್ಲಿ ಪ್ರಧಾನವಾಗಿ ಎರಡು ಶಾಖೆಗಳು ಕಂಡು ಬರುತ್ತವೆ. ಒಂದು ಶಕ್ತಿ ಪರ್ಷೆ ಇನ್ನೊಂದು ಸಿಂಹ ಪರ್ಷೆ.[೪] ಶಕ್ತಿ ಪರ್ಷೆಯಲ್ಲಿ ಪರ್ವತಾವಳಿ, ಭುಜಂಗಾವಳಿ ಎಂಬ ಉಪಶಾಖೆಗಳು ಪ್ರಚಲಿತವಿದ್ದಂತಿದೆ. ಇಲ್ಲಿ ಬರುವ ಆವಳಿ ಪದಕ್ಕೆ ಸಾಲು, ವಂಶ ಎಂಬ ಅರ್ಥಗಳಿವೆ. ಕಾಳಾಮುಖರ ಶಾಸನಗಳಲ್ಲಿ ಪರ್ವತದ ಪ್ರಸ್ತಾಪ ಮತ್ತೆ ಮತ್ತೆ ಬರುವುದುಂಟು. ಅದು ಆಂಧ್ರ ಪ್ರದೇಶದಲ್ಲಿರುವ ಕರ್ನೂಲ್ ಜಿಲ್ಲೆಯ ಶ್ರೀಶೈಲವೇ[೫] ಆಗಿದೆ. ಅದು ಮೊದಲು ಕಾಪಾಲಿಕರಿಗೂ ಅನಂತರ ಕಾಳಾಮುಖರಿಗೂ ಮುಂದೆ ವೀರಶೈವರಿಗೂ ಪ್ರಮುಖ ಕೇಂದ್ರವಾಗಿದ್ದಿತು. ಭುಜಂಗಾವಳಿ ಶಬ್ದ ಸಂಸ್ಕೃತದ ಭುಜಂಗದಿಂದ ಬಂದಿದೆ. ಅದಕ್ಕೆ ಹಾವು ಎಂಬ ಅರ್ಥವಿದ್ದು ಹಾವಿನ

---

೧. ಎಂ. ಚಿದಾನಂದ ಮೂರ್ತಿ : ಲಿಂಗಾಯತ ಅಧ್ಯಯನಗಳು, ಪು. ೨೭೩.

R. Ramarao: 'Origin and development of Shiva worship with special reference to ViraShaivism' ಕ್ಯುಜೆಎಂಎಸ್ XIV-೨, ಪು. ೨೦೭.

೨. ಕಾಳಾಮುಖ -ಈ ರೂಪವನ್ನು ಕಾಳ=ಕಪ್ಪು ಎಂಬುದರಿಂದ ಅರ್ಥ ವಿವರಣೆ ಮಾಡಿದರೆ ಕಾಳಾ-ದಲ್ಲಿರುವ ದೀರ್ಘಕ್ಕೆ ವಿವರಣೆ ನೀಡುವುದು ಕಠಿಣ. ಪಂಪಾಮಹಾತ್ಮೆ ಎಂಬ ಕೃತಿಯಲ್ಲಿ ಕಳಾಮುಖರ ಬಗ್ಗೆ 'ಯಾವನು ಪಂಚ ಕಲೆಗಳನ್ನು ಬಲ್ಲವನೋ ಅವನು ಕಲಾಮುಖತತ್ತ್ವವನ್ನು ತಿಳಿದವನು. ಅವನೇ ಗುರುವು' ಎಂಬ ವಿವರಣೆ ಬರುತ್ತದೆ. ಆದರೆ ಕಲಾದಿಂದ ಅರ್ಥೈಸಲೂ ಕೆಲವು ತೊಡಕುಗಳಿವೆ. ಈ ವಿವರಣೆಗೆ ಅನ್ಯ ಪೋಷಕ ಆಧಾರಗಳು ಇಲ್ಲದಿರುವುದರಿಂದ ಅದನ್ನು ಇಲ್ಲಿ ಕೇವಲ ಸೂಚಿಸಲಾಗಿದೆ. ಅದೇ ಗ್ರಂಥದಲ್ಲಿ... ಕಪ್ಪು ಭಸ್ಮವನ್ನು ಗುರು ಹೇಳಿದ ಸ್ಥಾನಗಳಲ್ಲಿ ಧರಿಸಿಕೊಳ್ಳುವವರೂ ಆದ ಕಾಲಾಮುಖಮತಸ್ಥರನ್ನು ಕಾಲರೆಂದು ಕರೆಯುತ್ತಾರೆ ಎಂಬ ವಿವರಣೆಯೂ ಇದೆ. ಕಾಳಾಮುಖ ಪದದ ನಿಷ್ಪತ್ತಿಯಲ್ಲಿ, ಅರ್ಥೈಸುವಿಕೆಯಲ್ಲಿ ಇರುವ ತೊಡಕನ್ನು ನನ್ನ ಗಮನಕ್ಕೆ ತಂದು ಚರ್ಚಿಸಿ ಪಂಪಾಮಹಾತ್ಮೆ ಗ್ರಂಥವನ್ನು ಅಭ್ಯಾಸ ಮಾಡಲು ನೀಡಿದ ಎಂ. ಚಿದಾನಂದ ಮೂರ್ತಿಯವರಿಗೆ ವಿಶೇಷವಾಗಿ ಋಣಿಯಾಗಿದ್ದೇನೆ. ಓಂ ಸಿದ್ಧಲಿಂಗೇಶ್ವರ ಸ್ವಾಮಿಗಳು: ಶ್ರೀ ಪಂಪಾಮಹಾತ್ಮೆ. ಪು-೨೫೨-೨೬೧.

೩. David. N. Lorenzen: The Kapalikas and Kalamukhas Two last Saivite Sects. ಪು. ೯೭; M.R. Sakhare : History and Philosophy of Lingayat Religion. ಪು. ೨೨೦.

೪. ಎಂ. ಚಿದಾನಂದ ಮೂರ್ತಿ : ಕಶಾಸಾಂಅ. ಪರ್ಷೆ ಬಹುಶಃ ಪರಿಷತ್‌ನ ತದ್ಭವ. ಪು. ೧೩೧.

೫. ಪರ್ವತವು-ಹಿಮಾಲಯ ಪರ್ವತವನ್ನೂ ಸೂಚಿಸಬಹುದು. ಬಳ್ಳಿಗಾವೆಯ ಕೇದಾರ ಮಠವನ್ನು ದಕ್ಷಿಣದ ಕೇದಾರ ಎಂದು ಕರೆಯಲಾಗಿದೆ. ಅದೇ ಉತ್ತರದ ಕೇದಾರದ ಸಂಬಂಧ ಸೂಚಿಸುತ್ತದೆ ಮತ್ತು ಪಾರ್ವತಿ ಪರ್ವತರಾಜನ ವಂಶಕ್ಕೆ ಸೇರಿದವಳು ಆ ಶಿವ ಸಂಬಂಧವನ್ನೂ ಗಮನಿಸಬಹುದು ಎಂದಿದ್ದಾರೆ ಲೊರೆಂಜನ್ ಅವರು. ಪೂರ್ವೋಕ್ತ ಗ್ರಂಥ, ಪು. ೯೯.

ಮತ್ತು ಶಿವನ ಸಂಬಂಧದ ಸಂಕೇತದಿಂದ ಅದು ರೂಪುಗೊಂಡ ಆವಳಿಯಾಗಿರಬಹುದು.[೧] ಈ ಶಕ್ತಿಪರ್ಷೆಯ ಭುಜಂಗಾವಳಿಗೆ ಸೇರಿದ ಮೂವರ ಕೋಣೆಯ ಸಂತತಿ[೨] ಕೆಲವು ಶಾಸನಗಳಲ್ಲಿ ಬರುತ್ತದೆ. 'ಮೂವರು ಕೋಣೆಯ ಸಂತತಿ'ಗೆ ಸಮರ್ಪಕವಾದ ಅರ್ಥವನ್ನು ಹೇಳುವುದು ಕಠಿಣವಾಗಿದೆ. ಎಂ. ಚಿದಾನಂದ ಮೂರ್ತಿಯವರು ಮೂವರು ಪದ ಮೂರು ದೇವತೆಗಳನ್ನು ಸೂಚಿಸುವುದೆಂದೂ ಶಾಸನವೊಂದರ ಆಧಾರದ ಮೇಲೆ ಆ ಮೂವರು ದೇವತೆಗಳು ಪ್ರಖ್ಯಾತ ತ್ರಿಮೂರ್ತಿಗಳಾಗಿದ್ದಾರೆ ಎಂದು ಊಹಿಸಿದ್ದಾರೆ.[೩] ಜೆ.ಎಫ್. ಫ್ಲೀಟ್ ಅವರು ಮೂವರು ಕೋಣೆಯ ಸಂತತಿ ಕಾಳಾಮುಖದ ವಿಶಿಷ್ಟ ಉಪಶಾಖೆಯಾಗಿದ್ದು ಕೆಲವು ಆಚರಣೆಗಳಲ್ಲಿ ಭಿನ್ನವಾಗಿದ್ದಿರಬೇಕು ಎಂದು ಅಭಿಪ್ರಾಯಪಡುತ್ತಾರೆ.[೪]

ಕೆಲವು ಶಾಸನಗಳಲ್ಲಿ ಪರ್ವತಾವಳಿಗೆ ಸೇರಿದ 'ಕಿಟ್ಟಗಾವೆಯ ಸಂತತಿಯ ಉಲ್ಲೇಖ ಕಂಡುಬರುತ್ತದೆ. 'ಸಮನಿಸಿದ ಶಕ್ತಿಪರುಷೆಯೊಳವನೀನುತ ಕಿಟ್ಟಗಾವೆ ಸನ್ತತಿಯೊಳ್'[೫] ಎಂದು ಒಂದು ಶಾಸನದಲ್ಲಿ ಇನ್ನೊಂದು ಶಾಸನದಲ್ಲಿ 'ಧೃತ ತನುಧಾತು ಕಿಟ್ಟಮಿಳಿಯಲ್ತಪದೂಷ್ಮೆಗೆ ಕಿಟ್ಟಗಾವೆ ಸನ್ತತಿಯದು ಪರ್ವ್ವತಾಳಿಯೆನಿಪ್ಪುದು ನಿಶ್ಚಳವೃತ್ತಿಯಿಂ ವಿಯಾಮಿತ ನಿಯಮೊತ್ಥ ಕಾಳಮುಖದಿಂದಮೆ ಶಕ್ತ್ಯತಿಶಯ ಶಕ್ತಿ ಪರ್ಷೆಯಮೃತೇಶ ಮುನೀಶನೊಳೊಪ್ಪಿ ತೋಱಗುಂ'[೬] ಎಂದು, ಹಾವೇರಿ ತಾಲ್ಲೂಕಿಗೆ ಸೇರಿದ ಮತ್ತೊಂದು ಶಾಸನದಲ್ಲಿ 'ಅತಿಶಯ ಶಕ್ತಿ ...ಮದನಪ್ರಭೆ ಕಿಟ್ಟದ ಕಿಟ್ಟಗಾವೆ ಸಂತತಿ ಹರಪರ್ವ್ವತಾವಳಿ ಬುಧಸ್ತುತಂ'[೭] ಎಂದು ಬರುತ್ತದೆ. ರಟ್ಟಿಹಳ್ಳಿಯ ಶಾಸನವೊಂದು ಮೂರುಜಾವಿದೇವ ಪರ್ವತಾವಳಿಯ ಕಿಟ್ಟಗಾವೆಯ ಅನ್ವಯಕ್ಕೆ ಸೇರಿದವನೆಂದು ಹೇಳುತ್ತದೆ.[೮] ಹೀಗೆ ಒಟ್ಟು ನಾಲ್ಕು ಶಾಸನಗಳಲ್ಲಿ ಕಿಟ್ಟಗಾವೆಯ ಸಂತತಿ ಉಕ್ತವಾಗಿದೆ. 'ಕಿಟ್ಟಗಾವೆ' ಯಾವುದೋ ಒಂದು ಸ್ಥಳನಾಮವನ್ನು ಸೂಚಿಸುತ್ತದೆ. ಮೊದಲ ಮೂರು ಶಾಸನಗಳು ಧಾರವಾಡ ಜಿಲ್ಲೆಯ ಹಾವೇರಿ ತಾಲ್ಲೂಕಿಗೆ ಸೇರಿದ ಶಾಸನಗಳಾಗಿವೆ. ಕೊನೆಯದು ರಟ್ಟಿಹಳ್ಳಿ ಶಾಸನ, ಅದೇ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿಗೆ ಸೇರಿದ್ದಾಗಿದೆ.

ಪರ್ವತಾವಳಿಗೆ ಸೇರಿದ ಬೆಳ್ಳಿಯ ಸಂತಾನದ ಉಲ್ಲೇಖ ಶಾಸನವೊಂದರಲ್ಲಿ ಕಂಡುಬರುತ್ತದೆ. 'ಅನ್ತೆನಿಸಿದ ಪೊಂಬೊಳಲೊಳು ಬೊಂತೆಯ ಮುನಿ ಕಾಳಮುಖ ಮುನೀಸ್ವರನತಿ ನಿಶ್ಚಿಂತಾತ್ಮನಾಗಿ ಬೆಳ್ಳಿಯ ಸನ್ತಾನಂನೆಗಳ್ದ ಪರ್ವತಾವಳಿಯಿರ್ಪ್ಪಂ'.[೯] ಕುರುಗುಂದದ ಒಂದು ಶಾಸನ 'ಇಟ್ಟಿಗೆಯ ಜೀಯರಳಿಯ ಬಯ ಜೀಯರ ಮಯ್ದುನ ದೇವರಾಶಿ ಪಂಡಿತ'[೧೦]ರನ್ನು ಕುರಿತು ಹೇಳುತ್ತದೆ. ಲೊರೆಂಜನ್ ಅವರು ಬೆಳ್ಳಿಯ, ಇಟ್ಟಿಗೆ ಎಂಬ ಪದಗಳ ಅರ್ಥವನ್ನು ಮಾತ್ರ ಕೊಟ್ಟಿದ್ದಾರೆ.[೧೧] ಶಕ್ತಿ ಪರ್ಷೆಯ

---

೧. ಅದೇ, ಪು. ೯೯.
೨. (ರೈ) ಎಕ VII ಶಿಕಾರಿಪುರ ೧೦೮ ಕ್ರಿ. ಶ. ೧೧೬೪.
೩. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಅ ಪು. ೧೩೧.
೪. J. F. Fleet : 'Inscriptions of Ablur' ಎಇ V ಪು. ೨೨೨.
೫. ಎಸ್ಐಐ XVIII ಹಾವೇರಿ ೨೯೬ ಕ್ರಿ.ಶ. ೧೧೮೮.
೬. ಎಸ್ಐಐ XVIII ಹಾವೇರಿ ೨೯೫ ಕ್ರಿ.ಶ. ೧೧೮೮.
೭. ಎಸ್ಐಐ XVIII ಹಾವೇರಿ ೨೯೭ ಕ್ರಿ.ಶ. ೧೧೮೯.
೮. ಎಆರ್ಐಇ ೧೯೫೧-೫೨ ೯೫ ಪು. ೧೮ ಅಥವಾ ಕಇ VI ಹಿರೇಕೆರೂರು ೪೪ ಕ್ರಿ.ಶ. ೧೨೩೮.
೯. ಎಸ್ಐಐ XV ಗದಗು ೭೩ ಕ್ರಿ.ಶ. ೧೧೮೯.
೧೦. (ರೈ) ಎಕ V ಅರಸಿಕೆರೆ ೧೪೨ ಕ್ರಿ.ಶ. ೧೧೬೨.
೧೧. David N. Lorenzen : ಪೂರ್ವೋಕ್ತ ಪು. ೯೯.

ಭುಜಂಗಾವಳಿಯ ಇಟ್ಟಿಗೆಯ ಸಂತತಿ ಒಂದು ಶಾಖೆಯಾಗಿದೆ.[೧] ಇಟ್ಟಿಗೆ ಮತ್ತು ಬೆಳ್ಳಿ ಭಿನ್ನ ಸಂತತಿಯನ್ನು ಸೂಚಿಸುವಂತೆ ಕಾಣುತ್ತದೆ.

ಸಿಂಹಪರ್ಷೆ ಕಾಳಾಮುಖರ ಇನ್ನೊಂದು ಪ್ರಮುಖ ಶಾಖೆ. ಈ ಶಾಖೆಗೆ ಸಂಬಂಧಿಸಿದ ದೇವಸ್ಥಾನಗಳಿಗೆ ಆಂಧ್ರದ ಗುಂಟೂರು, ಕರ್ನಾಟಕದ ಬಳ್ಳಾರಿ, ಬಿಜಾಪುರ, ಗುಲ್ಬರ್ಗಾ ಜಿಲ್ಲೆಗಳಲ್ಲಿ ದಾನಗಳನ್ನು ಕೊಡಲಾಗಿದೆ. ಇಷ್ಟು ವಿಸ್ತಾರ ಪ್ರದೇಶದ ವ್ಯಾಪ್ತಿಯಲ್ಲಿ ಹರಡಿದ್ದರೂ ೫ ದೇವಸ್ಥಾನಗಳಿಗೆ ಸಂಬಂಧಿಸಿದಂತೆ ಒಟ್ಟು ೮ ಶಾಸನಗಳು ಮಾತ್ರ ದೊರಕುತ್ತವೆ.[೨] ಗುಲ್ಬರ್ಗ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಒಂದು ಶಾಸನ 'ಶ್ರೀಮದೇಳೆಮೆಲ ಶ್ರೀ ಸಿಂಹಪರ್ಷ(ನ್) ಮಂಡಳಿ ಮಲೆಯಾಳ ದೇವರ ಶಿಷ್ಯರಪ್ಪ ಮಿರಿಂಜೆಯ ಚಿಕ್ಕದೇವರ ಸಂತಾನಮ್'[೩] ಎಂದು ಹೇಳುತ್ತದೆ. ಈ ಶಾಸನದಲ್ಲಿ ಉಕ್ತನಾಗಿರುವ ಮಲೆಯಾಳದೇವರು ಇನ್ನೂ ಕೆಲವು ಶಾಸನಗಳಲ್ಲಿ ಉಕ್ತನಾಗಿದ್ದಾನೆ. ಅವನು ಸಿಂಹಪರಿಷತ್ತಿನ ಪ್ರಮುಖ ಧಾರ್ಮಿಕ ನಾಯಕನಾಗಿರಬೇಕು. ಏಕೆಂದರೆ ಆ ಪ್ರದೇಶದ ಆ ಶಾಖೆಯ ಕೆಲವು ಶಾಸನಗಳಲ್ಲಿ ಅವನಿಂದಲೇ ಗುರು ಪರಂಪರೆಯನ್ನು ಆರಂಭಿಸಿರುವುದನ್ನು ಕಾಣಬಹುದು.[೪]

ಶಕ್ತಿಪರಿಷತ್ತಿನ ಮತ್ತು ಸಿಂಹಪರಿಷತ್ತಿನ ಆ ಕಾಲದ ಧಾರ್ಮಿಕ ಚಟುವಟಿಕೆಗಳನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ಕರ್ನಾಟಕದಲ್ಲಿ ಶಕ್ತಿ ಪರಿಷತ್ತು ಹೆಚ್ಚು ಪ್ರಭಾವಿಯಾಗಿ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ. ಈ ಶಾಖೆಯ ಯತಿಗಳು ಎಲ್ಲ ಪ್ರಮುಖ ರಾಜವಂಶಗಳಿಂದ, ಹಿರಿಯ ಅಧಿಕಾರಿಗಳಿಂದ ದಾನ ದತ್ತಿಗಳನ್ನು ಪಡೆದು ಶಕ್ತಿಯುತವಾಗಿ ತಮ್ಮ ಶಾಖೆಯನ್ನು ಬೆಳೆಸಿದ್ದರು. ಅಲ್ಲದೆ ಅದರ ಉಪಶಾಖೆಗಳು ಸಾಕಷ್ಟು ವ್ಯಾಪಕವಾಗಿ ಕಾರ್ಯ ನಿರ್ವಹಿಸುತ್ತ ಶಿವಮೊಗ್ಗ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಮಡುಗಟ್ಟಿದಂತಿವೆ. ಈ ಶಾಖೆಯ ಕಾರ್ಯವ್ಯಾಪ್ತಿ ಈ ಜಿಲ್ಲೆಗಳನ್ನು ಮೀರಿ ಬೆಳೆದಿದ್ದುದಕ್ಕೆ ಸೂಚನೆಗಳು ಇವೆ.

ಕಾಳಾಮುಖರ ಧರ್ಮವನ್ನು ಅನೇಕ ಶಾಸನಗಳು ಎಕ್ಕೋಟಿ ಸಮಯವೆಂದು ಕರೆದು, ಅವರ ಮಠಗಳನ್ನು ಎಕ್ಕೋಟಿ ಮಠಗಳೆಂದು ಕರೆದಿವೆ.[೫] ಅನೇಕ ಶಾಸನಗಳು ಅವರನ್ನು ಎಕ್ಕೋಟಿ, ಎಕ್ಕೋಟಿ ಮಹಾದೇವರು ಎಂದು ನಿರ್ದೇಶಿಸಿವೆ. ಕೆಲವು ಶಾಸನಗಳು ಕಾಳಾಮುಖ ಗುರುಗಳನ್ನು 'ಶ್ರೀಮನು ಮಹಾವಾದಿ ಯಕ್ಕೋಟಿ ಚಕ್ರವರ್ತಿ ಸಕ್ತಿದೇವರ ಮಹಿಮೋನ್ನತಿ'[೬] ಎಂದೂ 'ಎಕ್ಕೋಟಿ ಮುನೀಂದ್ರ ವಂದನಾನಂದ'[೭] ಎಂದೂ ಕರೆದಿವೆ. ಎಕ್ಕೋಟಿ ಎಂಬುದು ಏಳ್ಕೋಟಿಯ ಇನ್ನೊಂದು ರೂಪವಾಗಿದೆ. "ಇದು ವಿಜ್ಞಾನ ಕಲರೆಂಬ ಪಶುಗಳಲ್ಲಿ ಸಮಾಪ್ತ ಕಲುಷರು ಅಸಮಾಪ್ತ ಕಲುಷರೆಂಬ ಎರಡು ಬಗೆ ಇರುವುದೆಂದೂ, ಸಮಾಪ್ತ ಕಲುಷರು ವೈದ್ಯೇಶ್ವರ ಪದವಿಯನ್ನು ಪಡೆದವರಾದರೆ ಅಸಮಾಪ್ತ ಕಲುಷರು ಮಂತ್ರಗಳಾದರೆಂದೂ ಈ ಮಂತ್ರಗಳು ಏಳುಕೋಟಿ. ಮಂತ್ರೇಶ್ವರರು ಏಳುಕೋಟಿಗಳು. ಅಂತೆಯೇ ಈ ಮತಕ್ಕೆ ಎಕ್ಕೋಟಿ ಸಮಯ ಎಂದು

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೩೨.

೨. David N. Lorenzen : ಪೂರ್ವೋಕ್ತ, ಪು. ೧೪೧.

೩. ಎಇ XII ೩೨ ಜಿ ಕ್ರಿ.ಶ. ೧೧೭೯.

೪. David N. Lorenzen : ಪೂರ್ವೋಕ್ತ, ಪು. ೧೪೧.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೩೫.

೬. ಕಇ V ಹಾನಗಲ್ಲು ೪೨ ಕ್ರಿ.ಶ. ೧೨೩೯.

೭. (ರೈ) ಎಕ V ಅರಸಿಕೆರೆ ೬೨ ಕ್ರಿ.ಶ. ೧೧೭೭.

ಹೆಸರು, ಇಂದಿಗೂ ಕರ್ನಾಟಕದಲ್ಲಿ ಮೈಲಾರನ ಒಕ್ಕಲುಗಳು 'ಏಳುಕೋಟಿ ಏಳುಕೋಟಿ ಉಘೇ ಚಾಂಗು ಭಲಾ' ಎಂದು ಶಿವನ ಜಯಘೋಷವನ್ನು ಮಾಡುತ್ತಾರೆ. ಇದುವೆ ಪೂರ್ವದ ಲಾಕುಳ ಸಿದ್ಧಾಂತವಿದ್ದಂತೆ ತೋರುತ್ತದೆ."[೧] ಎಂದು ಕಪಟರಾಳ ಕೃಷ್ಣರಾಯರು ಅಭಿಪ್ರಾಯ ಪಡುತ್ತಾರೆ. ಶಾಸನಗಳ ಶಾಪಾಶಯ ಭಾಗದಲ್ಲಿ 'ಯಕ್ಕೋಟಿ ಮುನಿ'ಗಳನ್ನು ಕೊಂದ ಪಾಪದ ಉಲ್ಲೇಖ ಬರುತ್ತದೆ.[೨] ಇದು ಸಾಮಾಜಿಕವಾಗಿ ಅವರು ಪಡೆದ ಉನ್ನತಿಯನ್ನು ತೋರಿಸುತ್ತದೆ. ಒಂದು ಶಾಸನ ಅವರನ್ನು 'ಏಕ್ಕೋಟಿ ವೀರಗಣಂಗಳುಂ'[೩] ಎಂದು ನಿರ್ದೇಶಿಸಿದೆ.

ಕಾಳಾಮುಖರ ಕೆಲವು ಶಾಸನಗಳಲ್ಲಿ 'ಪ್ರತಿಬದ್ಧ' ಎಂಬ ಮಾತು ಬರುತ್ತದೆ. ಇದು ಕೆಲವು ಮಟ್ಟಿಗೆ ಪಾರಿಭಾಷಿಕ ಪದವಾಗಿ ಬಳಕೆಯಾಗಿರುವಂತೆ ಕಾಣುತ್ತದೆ. 'ಹಗರಿಕಟ್ಟೆಯ ನಾಗೇಶ್ವರದೇವರ ಕುಂದಜೀಯನ ಪುತ್ರ ಪದ್ಮಸಿವಪಂಡಿತರ ಸಿಸ್ಯ ಕಾಳಾಮುಖ ಪ್ರತಿಬದ್ಧ ನಾಗರಾಸಿಯ ಸಿಸ್ಯ ಮಾದಜೀಯ'[೪] ಎಂದು ಒಂದು ಶಾಸನದಲ್ಲಿಯೂ 'ಕಾಳಾಮುಖ ಪ್ರತಿಬದ್ಧರಪ್ಪ ನಾಗರಾಸಿಪಂಡಿತರ ಸಿಸ್ಯ ಸಿವಸಕ್ತಿದೇವರು'.[೫] ಎಂದು ಇನ್ನೊಂದು ಶಾಸನದಲ್ಲಿಯೂ ಬರುತ್ತದೆ. ಪ್ರತಿಬದ್ಧ ಪದಕ್ಕೆ ಬಂಧಿಸಿದುದು, ಕಟ್ಟಲ್ಪಟ್ಟ, ಒಳಗೊಂಡ ಎಂಬಂತಹ ಅರ್ಥಗಳಿವೆ. ಶಾಸನದ ಸಂದರ್ಭವನ್ನು ಗಮನಿಸಿದರೆ ಕಾಳಾಮುಖ ಗುರುಗಳಿಂದ ಅಧಿಕೃತವಾಗಿ ಮಾನ್ಯತೆ ಪಡೆದ ವ್ಯಕ್ತಿಯೆಂದು ಅರ್ಥೈಸಬಹುದು. ಮೊದಲೇ ಇಳಿಮುಖವಾಗುತ್ತಿದ್ದ ಜೈನಧರ್ಮ ತನ್ನ ಕೆಲವು ಜಿನಾಲಯಗಳನ್ನು ಎಕ್ಕೋಟಿ ಸಮಯದೊಂದಿಗೆ 'ಪ್ರತಿಬದ್ಧ' ಮಾಡಿಕೊಂಡ ಕೆಲವು ನಿದರ್ಶನಗಳು ದೊರೆಯುತ್ತವೆ. ತೇರದಾಳದ ಶಾಸನವು ನೇಮಿತೀರ್ಥೇಶ್ವರ ಜಿನಾಲಯ ಕಲಿದೇವ ದೇವಾಲಯಕ್ಕೆ ಪ್ರತಿಬದ್ಧವಾದ ವಿಷಯವನ್ನು ತಿಳಿಸುತ್ತದೆ.[೬] ಕಸಬಾ ಅರಸಿಕೆರೆಯ ಒಂದು ಜೈನಶಾಸನದ ಮಧ್ಯೆ 'ಕಾಳಾಮುಖ ಪ್ರತಿಬದ್ಧ' ಎಂಬ ಮಾತು ಬಂದಿದೆ.[೭] ಆ ಕಾಲದ ಕೆಲವು ಜಿನಾಲಯಗಳಿಗೆ 'ಎಕ್ಕೋಟಿ ಜಿನಾಲಯ'[೮]ವೆಂದು ಕರೆದಿರುವುದರಿಂದ ಕಾಳಾಮುಖರು ಕೆಲವಾದರೂ ಜಿನಮಂದಿರಗಳ ಮೇಲೆ ಹತೋಟಿಯನ್ನು ಇಟ್ಟುಕೊಳ್ಳಲು ಮಾಡಿದ ಪ್ರಯತ್ನಗಳೆಂದು ಭಾವಿಸಬಹುದು.

ಕಾಳಾಮುಖ ಗುರುಗಳೆಲ್ಲರೂ ಲಾಕುಳಾಗಮದಲ್ಲಿ ಮಹಾ ಪಂಡಿತರಾಗಿದ್ದರು. ಅನೇಕ ಯತಿಗಳನ್ನು 'ಲಾಕುಳಾಗಮ ಸಮಯ ಸಮುದ್ಧರಣ'ರೆಂದು ಶಾಸನಗಳು ಕರೆದಿವೆ.[೯] ಬೆಣಚಮಟ್ಟಿಯ ಒಂದು ಶಾಸನದಲ್ಲಿ ಯೋಗೀಶ್ವರ ಯತಿಯನ್ನು 'ಲಕುಲಾಗಮಾಂಬುಜಮಿತ್ರಂ'[೧೦]. ಎಂದು ವರ್ಣಿಸಿದೆ. ಅದೇ ಶಾಸನ ವಿಗ್ರಹೇಶ್ವರ ಬ್ರತಿಯನ್ನು 'ಕಲಿಕಾಲೋಪಂಸ

---

೧. ಕಪಟರಾಳ ಕೃಷ್ಣರಾಯ : ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು. ೮೫-೮೬.

೨. ಕ.ಸಾ.ಪ.ಪ. ೨೮-೧ ಕ್ರಿ.ಶ. ೧೨೩೮; ಕಇ V ೪೨ ಕ್ರಿ.ಶ. ೧೨೩೯.

೩. (ರೈ) ಎಕ V ಅರಸಿಕೆರೆ ೮೮ ಕ್ರಿ.ಶ. ೧೧೮೪.

೪. (ರೈ) ಎಕ V ಅರಸಿಕೆರೆ ೬೯ ಕ್ರಿ.ಶ. ೧೧೭೪.

೫. (ರೈ) ಎಕ V ಅರಸಿಕೆರೆ ೪೮ ಕ್ರಿ.ಶ. ೧೧೮೯.

೬. ಕಇ V ಜಮಖಂಡಿ ೯೮ ಕ್ರಿ.ಶ. ೧೧೮೧.

೭. ಜೆಕೆಯು X, ೧ ಕ್ರಿ.ಶ. ೧೧೬೮ ಪು. ೧೬೬-೧೭೧.

೮. ಮಾ.ಕ. ೧೪-೧, ಕ್ರಿ.ಶ. ೧೨ ಶ.ಮಾ.; (ಮೈ) ಎಕ II ಶ್ರವಣಬೆಳಗೊಳ ೫೭೩ ೧೩ ಶ.ಮಾ. (ಮೈ) ಎಕ VII ನಾಗಮಂಗಲ ೧೭೦ ಕ್ರಿ.ಶ. ೧೨ ಶ.ಮಾ.

೯. ಕಇ V ಹಾನಗಲ್ಲು ೪೨ ಕ್ರಿ.ಶ. ೧೨೩೯; (ರೈ) ಎಕ V ಅರಸಿಕೆರೆ ೪೬ ಕ್ರಿ.ಶ. ೧೨೧೩.

೧೦. ಎಇ XX ರೋಣ ೧೨ ಕ್ರಿ.ಶ. ೧೧೬೬.

ಲಕುಲೀಶನೆನಿಪಂ' ಎಂದು ವರ್ಣಿಸುತ್ತದೆ. ಬಂಕಾಪುರದ ಒಂದು ಶಾಸನ ಒಬ್ಬ ಗುರುವನ್ನು 'ಕಾಳಾಮುಖ ಕುಮುದಿನೀ ಪೂರ್ಣ್ಣಚಂದ್ರರುಂ'[೧] ಎಂದು ವರ್ಣಿಸಿದೆ. ಹೀಗೆ ಬಹಳ ಗೌರವದಿಂದ ಆ ಯತಿಗಳ ಬಗ್ಗೆ ಹೇಳಲಾಗಿದೆ.

ಕಾಳಾಮುಖರು ಬಹು ವ್ಯವಸ್ಥಿತ ರೀತಿಯಲ್ಲಿ ದೇವಸ್ಥಾನ ಮತ್ತು ಮಠಗಳ ಮೂಲಕ ಧಾರ್ಮಿಕ ಚಟುವಟಿಕೆಗಳನ್ನು ನಡೆಸಿದರು. 'ಶಾಸನಗಳಲ್ಲಿ ಬರುವ ಸ್ಥಾನ, ನೈಷ್ಠಿಕ ಸ್ಥಾನ, ಸ್ಥಾನಪತಿ ಎಂಬವು ಒಂದು ರೀತಿಯಲ್ಲಿ ಪಾರಿಭಾಷಿಕ ಪದಗಳೆಂದು ಅಂಗೀಕರಿಸಬೇಕಾಗುತ್ತದೆ. ಶೈವ ಗುರುಗಳು ವಾಸವಾಗಿದ್ದ ದೇವಸ್ಥಾನಗಳು 'ಸ್ಥಾನಗಳು'. ಆ ದೇವಸ್ಥಾನದ ಆಗು ಹೋಗುಗಳನ್ನು ನೋಡಿಕೊಳ್ಳುವ ಕರ್ತವ್ಯವನ್ನು ಹೊತ್ತಿರುವವರು ಸ್ಥಾನಪತಿಗಳು ಅಥವಾ ಸ್ಥಾನಿಕರು. ಒಬ್ಬರಿಗಿಂತ ಹೆಚ್ಚಾಗಿ ಗುರುಗಳಿದ್ದರೆ ಅವರಲ್ಲಿ ಹಿರಿಯನೇ ಸಾಮಾನ್ಯವಾಗಿ ಸ್ಥಾನಪತಿ ಎನ್ನಿಸಿಕೊಳ್ಳುತ್ತಿದ್ದನು'[೨]. ಶೈವಗುರುಗಳಲ್ಲಿ ಕೆಲವರು ವಿವಾಹಿತರೂ ಆಗಿರುತ್ತಿದ್ದರೆಂದು ಕಾಣುತ್ತದೆ. ಇನ್ನು ಕೆಲವು ನೈಷ್ಠಿಕ ಸ್ಥಾನಗಳಾಗಿರುತ್ತಿದ್ದವು. ಅಂದರೆ ಆ ಸ್ಥಾನಾಚಾರ್ಯ ನೈಷ್ಠಿಕ ಬ್ರಹ್ಮಚಾರಿಯಾಗಿದ್ದು ಅಲ್ಲಿಗೆ ಬರುವ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿದ್ದನು. ಬೆಣಚಮಟ್ಟಿಯ ಶಾಸನ ಚಂದ್ರಮೌಳಿ ಯತೀಂದ್ರನನ್ನು 'ನೈಷ್ಠಿಕಾಗ್ರಗಣ್ಯಂ'[೩] ಎಂದು ಕರೆದಿದೆ. ಲಾಕುಳ ಗುರು ಕಾಲಭೈರವರೆಂಬ ಸ್ಥಾನಪತಿಯನ್ನು 'ಪರಮ ನೈಷ್ಠಿಕರು'[೪] ಎಂದು ಇನ್ನೊಂದು ಶಾಸನ ಕರೆದಿದೆ. ಕೆಲವು ಗುರುಗಳಾದರೂ ತಮ್ಮ ಸ್ಥಾನಕ್ಕೆ ಯೋಗ್ಯರಾಗಿ ನಡೆದುಕೊಳ್ಳುತ್ತಿರಲಿಲ್ಲವೆಂದು ಕಾಣುತ್ತದೆ. ನೈಷ್ಠಿಕ ಬ್ರಹ್ಮಚರ್ಯವನ್ನು ಆಚರಿಸದ ಗುರುಗಳನ್ನು ಮಠದಿಂದ ಹೊರಕ್ಕೆ ಕಳಿಸಿ ಬೇರೊಬ್ಬ ಪರಮ ನೈಷ್ಠಿಕರನ್ನು ಆ ಸ್ಥಾನದಲ್ಲಿ ಸ್ಥಾಪಿಸಬೇಕೆಂದು ಸ್ಪಷ್ಟವಾಗಿ ಶಾಸನವೊಂದು ಹೇಳುತ್ತದೆ. ಮಾಡಗಿ ಹಾಳಿನ ಶಾಸನದಲ್ಲಿ, ಕಲ್ಯಾಣ ದೇವರಿಗೆ ದಾನವನ್ನು ನೀಡಿ 'ಅದು ನೈಷ್ಠಿಕ ಸ್ಥಾನ ಬ್ರಹ್ಮಚಾರಿಮಠವಾಸ್ಥಾನದಲವರು ನಿಯಾಮದಿಂ ದೇವಕಾರ್ಯ್ಯ ತಪೋಧನರಾಹಾರದಾನ ನಡೆಯಿಸಿ ನೈಷ್ಠಿಕರಾಗಿ ನಡೆವರಲ್ಲದೆ ಯತೇಷ್ಠ ವೃತ್ತಿಯಿಂ ನಡೆದರಪ್ಪಡೆರೆಲ್ಲಂ ನೆರೆದು ಮತ್ತೊಬ್ಬ ನೈಷ್ಠಿಕರಪ್ಪ ದಿಬ್ಯತಪೋಧನರಂ ತಂದಾ ಸ್ಥಾನದಲಿರಿಸುವರು'[೫] ಎಂದು ಬರುತ್ತದೆ. ಇದೇ ರೀತಿಯ ಸೂಚನೆ ಇನ್ನೊಂದು ಶಾಸನದಲ್ಲೂ ಬರುತ್ತದೆ.[೬]

ಕಾಳಾಮುಖ ಗುರುಗಳ ಒಂದು ಚಿತ್ರವನ್ನು ಒಂದು ಶಾಸನ ವಿವರವಾಗಿ ನೀಡುತ್ತದೆ. ರಾಜಗುರು ಸರ್ವೇಶ್ವರ 'ಯಮನಿಯಮಸ್ವಾಧ್ಯಾಯಧಾರಣಮೋನಾನುಷ್ಠಾನಜಪತಪಸಮಾಧಿಸೀಲಗುಣಸಂಪಂನರುಂ ಯಜನಯಾಜನಧ್ಯಯನಧ್ಯಾಪನ ದಾನ ಪ್ರತಿಗ್ರಹ ಷಟ್ಕರ್ಮ ನಿಯತರುಂ ರುಗುವೇದ ಸಾಮವೇದಯಥರ್ವ್ವಣವ್ವೇದ ವೇದಾಂತ ಷಟತರ್ಕಬ್ಯಾಕರಣ ಛಂದಶು ನಿಘಂಟು ಕಾವ್ಯ ನಾಟಕ ಸಕಟ ವಿದ್ಯಾವಿನೋದರುಂ ಬ್ಯಾಸಯಗಸ್ತ್ಯದೂರ್ಬ್ಬಾಸ ವಿಶ್ವಾಮಿತ್ರ ನಾರದಾದಿ ದಿಬ್ಯಮುನಿ ಚಾರಿತ್ರರುಂ' ಎಂದು ಆ ಗುರುವಿನ ಜ್ಞಾನ ಮತ್ತು ತಪಸ್ವೀ ಬದುಕನ್ನು ಚಿತ್ರಿಸಿದರೆ ಮುಂದಿನ ಭಾಗದಲ್ಲಿ ಅವರ ವೇಷ ಭೂಷಣಗಳ ಚಿತ್ರವನ್ನು ನೀಡುತ್ತದೆ. ಭಸ್ಮಧಾರಣೆ, ಕೌಪೀನ ಧರಿಸುವಿಕೆ, ರುದ್ರಾಕ್ಷಮಾಲಾಧಾರಣೆಯನ್ನು ಹೇಳಿ 'ಜಂಗಮ ಲಿಂಗಾವತಾರ' ರೆಂದು ಕರೆದಿದೆ.[೭] ಆಂಧ್ರಪ್ರದೇಶದ ಗಂಗಾಪುರದ ಒಂದು ಶಾಸನ ಸಾಗರೇಶ್ವರ ದೇವರಿಗೆ ಪವಿತ್ರಕ್ಕೆ ಒಂದು

---

೧. ಎಸ್‌ಐಐ XVIII ಬಂಕಾಪುರ ೨೯೦ ಕ್ರಿ.ಶ. ೧೧೭೮.

೨. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೪೦.

೩. ಎಇ XX ರೋಣ ೧೨ ಕ್ರಿ.ಶ. ೧೧೬೬.

೪. ಎಸ್‌ಐಐ XVX ಬಾಗೆವಾಡಿ ೯೭ ಕ್ರಿ.ಶ. ೧೧೫೮.

೫. ಎಇ XV ಜತ್ ೨೦ ಕ್ರಿ.ಶ. ೧೧೭೨.

೬. ಕಇ VI ಹಿರೇಕೆರೂರು ೪೪ ಕ್ರಿ.ಶ. ೧೨೩೮.

೭. ಕಇ I ಸೌಂದತ್ತಿ ೩೧ ಕ್ರಿ.ಶ. ೧೨೫೨.

ಹಾಗ ಮತ್ತು ರುದ್ರಶಕ್ತಿ ಪಂಡಿತರಿಗೆ ಕೌಪೀನಕ್ಕೆ ಒಂದು ಹಾಗವನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೧] ನರಶಕ್ತಿ ಎಂಬ ಲಾಕುಳ ಯತಿಯನ್ನು ಒಂದು ಶಾಸನ, ಬಂದುರವಪ್ಪ ಕೆಂದಳಿರ ಕೆಂಜೆಡೆ ಪೂಗಣ ಲಾಕುಳಂ ಸುಭಾಸುರವೆಸಿಪಾ ವಿಭೂತಿಯೆ ಪರಾಗ ವಿಭೂತಿ ಫಳಂ ಕಮಂಡಳವು(೦)'[೨] ಎಂದು ವರ್ಣಿಸಿದೆ. ಇನ್ನೊಬ್ಬ ಕಾಳಾಮುಖಯತಿಯನ್ನು 'ವಿಭೂತಿ ಕುಂಕುಮೋದ್ಧೂಳಿತ ಗಾತ್ರ' ರೆಂದು ತಿಳಿವಳ್ಳಿಯ ಶಾಸನ ವರ್ಣಿಸುತ್ತದೆ.[೩] ಒಟ್ಟಿನಲ್ಲಿ ಆ ಯತಿಗಳು ವಿಭೂತಿ, ಕುಂಕುಮ, ರುದ್ರಾಕ್ಷಿ, ಕೌಪೀನ ಮತ್ತು ಕಮಂಡಲುಧಾರಿಗಳಾಗಿ ಬಹಳ ಸರಳವಾಗಿರುತ್ತಿದ್ದರೆಂದು ಭಾವಿಸಬಹುದು.

**ವಿದ್ವತ್ತು ಮತ್ತು ತಪಸ್ಸು:**

ಕಾಳಾಮುಖ ಗುರುಗಳು ವಿದ್ವತ್ತು, ತಪಸ್ಸು ಮತ್ತು ವ್ಯಕ್ತಿತ್ವದ ಔನ್ನತ್ಯದಿಂದ ರಾಜ ಮಹಾರಾಜರಿಂದ ಹಿಡಿದು ಜನಸಾಮಾನ್ಯರವರೆಗೂ ಎಲ್ಲರ ಗೌರವ ಮತ್ತು ಪೂಜ್ಯ ಭಾವನೆಯನ್ನು ಗಳಿಸಿದ್ದರು. ಬಳ್ಳಿಗಾವೆಯ ಕೇದಾರೇಶ್ವರ ದೇವಸ್ಥಾನದ ಸ್ಥಾನಪತಿಯಾಗಿ ಮಹತ್ವದ ಕಾರ್ಯವನ್ನು ನಿರ್ವಹಿಸಿದ ವಾಮಶಕ್ತಿಯನ್ನು ಕುರಿತು ಅನೇಕ ಶಾಸನಗಳು ದೊರೆಯುತ್ತವೆ. ಸುಮಾರು ಹತ್ತು ಶಾಸನಗಳಲ್ಲಿ ಪ್ರಸ್ತಾಪಿತನಾಗಿರುವ ವಾಮಶಕ್ತಿ (ಕ್ರಿ.ಶ. ೧೧೫೬ ರಿಂದ ಕ್ರಿ.ಶ. ೧೧೯೩) ಆ ಕಾಲದಲ್ಲಿ ಶೈವಧರ್ಮದ ಪ್ರಗತಿಗೆ ಆಧಾರಭೂತನಾಗಿದ್ದಂತೆ ಕಂಡು ಬರುತ್ತದೆ. ಒಂಬತ್ತು ಶಾಸನಗಳು ಬಳ್ಳಿಗಾವೆಯಲ್ಲಿ ದೊರೆಯುತ್ತವೆ. ಒಂದು ಮಾತ್ರ ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಹಳೆನಿಡನೇಗಿಲಿನಲ್ಲಿ ದಾನ ಸ್ವೀಕರಿಸಿದ ವಿಷಯವನ್ನು ತಿಳಿಸುತ್ತದೆ. ಚಾಳುಕ್ಯ, ಕಳಚೂರ್ಯ ಮತ್ತು ಹೊಯ್ಸಳ ಹೀಗೆ ಮೂರೂ ಪ್ರಮುಖ ರಾಜವಂಶಗಳ ಆಳ್ವಿಕೆಯಲ್ಲಿ ಸುಮಾರು ೪೦ ವರ್ಷಗಳ ಕಾಲ ದಾನ ದತ್ತಿಗಳನ್ನು ಸ್ವೀಕರಿಸಿ 'ರಾಜಗುರು' ಎಂದು ಪೂಜ್ಯನಾದವನು. ಅವನನ್ನು ಕುರಿತ ವರ್ಣನೆಯಲ್ಲಿ ಪ್ರಸಿದ್ಧವಾದುದು 'ವದನಂ ವಾಣೀಲೀಲಾಸದನಂ ನಿಜಹೃದೆಯಮಮಳಮಣಿಮಯಸದನಂ ಮದನಹರಂಗೆನೆ ಭೂತಳ ವಿದಿತ ಯಶಂ ವಾಮಶಕ್ತಿ ಪಂಡಿತ ದೇವಂ.[೪]

ಕೇದಾರೇಶ್ವರ ದೇವಸ್ಥಾನದ ಚಟುವಟಿಕೆಗಳು ತುಂಬ ಉದಾತ್ತ ಮಟ್ಟದಲ್ಲಿ ನಡೆಯುತ್ತಿದ್ದವು. ಅದು ನೈಷ್ಠಿಕ ಬ್ರಹ್ಮಚಾರಿಗಳ ವಾಸಸ್ಥಾನವಾಗಿದ್ದು ಅಲ್ಲಿಯ ವೈವಿಧ್ಯಮಯ ಕಾರ್ಯಗಳನ್ನು ಕ್ರಿ.ಶ.೧೧೬೨ರ ಶಾಸನ ವಿವರವಾಗಿ ನಿರೂಪಿಸುತ್ತದೆ. ಚತುರ್ವೇದಗಳು, ಕೌಮಾರ, ಪಾಣಿನೀಯ, ಶಾಕಟಾಯನ, ಶಬ್ದಾನುಶಾಸನಾದಿ ವ್ಯಾಕರಣ, ನ್ಯಾಯ, ವೈಶೇಷಿಕ, ಮೀಮಾಂಸಾ, ಸಾಂಖ್ಯ, ಬೌದ್ಧಾದಿ ದರ್ಶನಗಳು ಮತ್ತು ಲಾಕುಳ ಸಿದ್ಧಾಂತ, ಪಾತಂಜಲಾದಿ ಯೋಗ ಶಾಸ್ತ್ರ, ಅಷ್ಟಾದಶ ಪುರಾಣ, ಸಕಲ ಕಾವ್ಯ ನಾಟಕ ಮುಂತಾದ ಸಾಹಿತ್ಯ ಶಾಖೆಗಳು ಅಲ್ಲಿ ಅಧ್ಯಯನದ ವಿಷಯಗಳಾಗಿದ್ದವು. ನಾನಾ ಪ್ರದೇಶಗಳಿಂದ ಬಂದ ಬಡವರು, ಕುಂಟ, ಕಿವುಡ, ಕಥಕ, ಗಾಯಕ, ವಾಂಶಿಕ, ನರ್ತಕ, ವೈತಾಳಿ, ನಗ್ನ, ಭಗ್ನ, ಕ್ಷಪಣಕ, ಏಕದಂಡಿ, ತ್ರಿದಂಡಿ, ಪರಮಹಂಸ ಮುಂತಾದ ಭಿಕ್ಷುಗಳು ಬಂದು ದಾನವನ್ನು ಸ್ವೀಕರಿಸುತ್ತಿದ್ದುದುಂಟು. ಇದಲ್ಲದೆ ಅನಾಥರಾದ ರೋಗಿಗಳು ಬಂದು ಚಿಕಿತ್ಸೆ ಪಡೆಯುತ್ತಿದ್ದರು. ಅದು ಎಲ್ಲ ಜನರಿಗೆ ಅಭಯಸ್ಥಾನವಾಗಿತ್ತು.[೫] ಈ ಶಾಸನದಲ್ಲಿ ಉಕ್ತವಾದ ಧರ್ಮ ಶಾಸ್ತ್ರ ಕಾವ್ಯ ಪುರಾಣಗಳ ವೈವಿಧ್ಯವನ್ನು ಗಮನಿಸಿದರೆ ಮತ್ತು ಅಷ್ಟೊಂದು ವಿಷಯಗಳನ್ನು ಬೋಧಿಸಲು ಸನ್ನದ್ಧರಾದ ಆ ಸ್ಥಾನದ ಗುರುಗಳ ವಿದ್ವತ್ತು ಬೆರಗುಗೊಳಿಸುವಂತಹುದಾಗಿದೆ.

---

೧. ಕೆಐಎಪಿ ಮೆಹಬೂಬನಗರ ೪೮ ಕ್ರಿ.ಶ. ೧೧೪೮.

೨. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೩. ಕಇ V ಹಾನಗಲ್ಲು ೪೨ ಕ್ರಿ.ಶ. ೧೨೩೯.

೪. (ರೈ) ಎಕ VII ಶಿಕಾರಿಪುರ ೧೦೪ ಕ್ರಿ.ಶ. ೧೧೫೬.

೫. (ರೈ) ಎಕ VII ಶಿಕಾರಿಪುರ ೧೦೨ ಕ್ರಿ.ಶ. ೧೧೬೨.

ಇಷ್ಟೊಂದು ವ್ಯಾಪಕ ಚಟುವಟಿಕೆಗಳಿಗೆ ಕೇಂದ್ರಶಕ್ತಿಯಂತಿದ್ದ ವಾಮಶಕ್ತಿಯನ್ನು ಬಂಧಿಯಾಗಿ ಹಿಡಿದಾಗ ವೀರನೊಬ್ಬ ಹೋರಾಡಿ ಮಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೧] ಈ ಘಟನೆ ಕಾರಣಗಳೇನು ಎನ್ನುವುದು ಸ್ಪಷ್ಟವಾಗುವುದಿಲ್ಲ. ಉಳಿದಂತೆ ಎಲ್ಲ ಶಾಸನಗಳಲ್ಲಿ ಆತ ವಿಶೇಷವಾಗಿ ಕೀರ್ತಿತನಾಗಿದ್ದಾನೆ. ಅವನು ಅಷ್ಟಾಂಗಯೋಗದಲ್ಲಿ ಬಲ್ಲಿದನೆಂದೂ, ಸಕಲ ಶಾಸ್ತ್ರಾಗಮಗಳಲ್ಲಿ ಪರಿಣತನೆಂದೂ ಒಂದು ಶಾಸನ ವರ್ಣಿಸುತ್ತದೆ.[೨] ಅವನ ಪಾಂಡಿತ್ಯವಾದರೋ ಅದ್ಭುತವಾದುದು. 'ಶಬ್ದೇ ಪಾಣನಿ ಪಂಡಿತೋ ನಯ ಚಯೋ ಶ್ರೀಭೂಷಣಾಚಾರ್ಯ್ಯಕಃ ನಾಟ್ಯಾದೌ ಭರತಃ ಮುನಿ ಭರತಃ ಕಾವ್ಯೇ ಸುಬಂಧುಃ ಸ್ವಯಂ ಸಿದ್ಧಾನ್ತೇ ಲಕುಳೀಶ್ವರಃ ವಪದೇ ಸ್ಕಂದೋ ಮಹೀಮಂಡಳೇ ಸೋಯಂ ರಾಜಗುರುರ್ಯ್ಯಥಾರ್ತ್ಥ ಕಥಿತಃ ಶ್ರೀವಾಮ ಶಕ್ತಿರ್ಯ್ಯತಿಃ'[೩] ಎಂದು ಅವನ ವಿದ್ವತ್ತು, ಪ್ರತಿಭೆಗಳನ್ನು ಶಾಸನವೊಂದು ಕೀರ್ತಿಸಿದೆ.

ಬೇರೆ ಬೇರೆ ಸ್ಥಳಗಳಲ್ಲಿದ್ದ ಕಾಳಾಮುಖ ಯತಿಗಳು ವಿದ್ವತ್ತು ಮತ್ತು ತಪಸ್ಸಿನಲ್ಲಿ ಅದ್ಭುತ ಸಾಧಕರಾಗಿದ್ದರು. ಹೊಂಬಳದ ಶಾಸನವೊಂದರಲ್ಲಿ ಬೊಂತೆಯ ಮುನಿಯನ್ನು 'ಆ ಕಲಿಯುಗ ಸಿದ್ಧ ಲಕುಳೀಶ್ವರಾಪರ ನಾಮಧೇಯ' ನೆಂದು ಕರೆದಿದೆ. ಅಸಾಮಾನ್ಯ ವ್ಯಕ್ತಿತ್ವದ ಬೊಂತೆಯ ಗುರು 'ಅಣಿಮಾದಿ ಗುಣಗಣಾನ್ವಿತ' ನಾಗಿದ್ದ. ಅದೇ ಶಾಸನದಲ್ಲಿ ಅವನ ಒಂಬತ್ತು ಪವಾಡಗಳನ್ನು ವಿವರವಾಗಿ ವರ್ಣಿಸಲಾಗಿದೆ. ಕರಹಡದಲ್ಲಿ ಬೊಂತೆಯ ಮುನಿ ಭಿಕ್ಷೆಗಾಗಿ ಬರುತ್ತಿರುವಾಗ ಒಬ್ಬ ಉದ್ಧತ ವ್ಯಕ್ತಿ ಖಡ್ಗವನ್ನು ತೂಗಿ, ಹಿಡಿ ಭಿಕ್ಷೆಯನ್ನೆಂದು ತಿವಿಯುವಂತೆ ಬರಲು, ಆ ಖಡ್ಗ ಕರಗಿ ರಸವಾಗಿ ಪಾತ್ರೆಗೆ ಬೀಳಲು ಅದನ್ನು ಕುಡಿದು ಮುಂದೆ ನಡೆದನಂತೆ.[೪] ಇಂಥ ಪವಾಡಗಳನ್ನು ಗಮನಿಸಿದರೆ ಕೆಲವರಾದರೂ ಲಾಕುಳಯತಿಗಳು ಅತಿಮಾನವ ಸಿದ್ಧಿಗಳನ್ನು ಪಡೆದವರಾಗಿದ್ದರೆಂದು ಊಹಿಸಬಹುದಾಗಿದೆ.

ಹರಳಹಳ್ಳಿಯ ಶಾಸನದಲ್ಲಿ ಬರುವ ಕಲ್ಯಾಣಶಕ್ತಿಯನ್ನು ಉದಾತ್ತವಾಗಿ ಸ್ತುತಿಸಲಾಗಿದೆ. 'ಉರಗಂ ಮುಟ್ಟದು ಬಾಧೆ ಮುಟ್ಟದಳಿದೆಂದುಂ ಮುಟ್ಟದಾ ವ್ಯಾಧಿಯಬ್ಬರವೆಂದುಂ ತನುವಿಂಗೆ ಪುಟ್ಟದೆನಸುಂ ಕಲ್ಯಾಣಶಕ್ತಿ ಬ್ರತೀಶ್ವರನಂ ಸನ್ಮನದಿಂದಮೊರ್ಮೆ ನೆನೆದಂಗೆ'[೫]. ಬಂಕಾಪುರದ ಶಾಸನವೊಂದರಲ್ಲಿ ವಿಮಳಶಕ್ತಿ ಎಂಬ ಗುರುವನ್ನು 'ಜಂಗಮ ಪಾರಿಜಾತ' 'ಷಡಕ್ಷರಮಂತ್ರಸಿದ್ಧ'ನೆಂದು ಕೀರ್ತಿಸಲಾಗಿದೆ.[೬]

ಸಾಮಾನ್ಯವಾಗಿ ಶೈವಯತಿಗಳ ಹೆಸರುಗಳು ರಾಸಿ, ಪಂಡಿತ, ಶಕ್ತಿ ಮತ್ತು ಜೀಯಗಳಿಂದ ಕೊನೆಯಾಗುತ್ತವೆ. ಕಾಳಾಮುಖರಿಗಂತೂ ಶ್ರೀಶೈಲ ಪವಿತ್ರಕ್ಷೇತ್ರವಾಗಿತ್ತು. ಅನೇಕ ಯತಿಗಳು ಶ್ರೀಶೈಲ ಯಾತ್ರೆಯನ್ನು ಕೈಗೊಳ್ಳುತ್ತಿದ್ದರು. ರಾಜಗುರು ಕಲ್ಯಾಣಶಕ್ತಿ ತಮ್ಮ ತಮ್ಮಂದಿರಾದ ಧ್ರುವೇಶ್ವರ ದೇವರನ್ನು ಶ್ರೀಶೈಲಕ್ಕೆ ಕಳುಹಿಸಿದಾಗ ಮಾರ್ಗದಲ್ಲಿ ಆಕ್ರಮಣ ನಡೆದು ಕಾಳೆಯ ಎಂಬ ವೀರನು ಯತಿಯ ರಕ್ಷಣೆಗೆ ಧಾವಿಸಿ ಹೋರಾಡಿ ಮಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೭] ಆಕ್ರಮಣಕ್ಕೆ ಕಾರಣ ಸ್ಪಷ್ಟವಾಗುವುದಿಲ್ಲ.

---

೧. (ರೈ) ಎಕ VII ಶಿಕಾರಿಪುರ ೧೩೯ ಕ್ರಿ.ಶ. ೧೧೬೦.

೨. (ರೈ) ಎಕ VII ಶಿಕಾರಿಪುರ ೧೨೩ ಕ್ರಿ.ಶ. ೧೧೫೯.

೩. (ರೈ) ಎಕ VII ಶಿಕಾರಿಪುರ ೯೨ ಕ್ರಿ.ಶ. ೧೧೬೮.

೪. ಎಸ್ಐಐ XV ಗದಗು ೭೩ ಕ್ರಿ.ಶ. ೧೧೮೯.

೫. ಎಸ್ಐಐ XVIII ಹಾವೇರಿ ೨೯೫ ಕ್ರಿ.ಶ. ೧೧೮೮.

೬. ಎಸ್ಐಐ XVIII ಬಂಕಾಪುರ ೨೯೦ ಕ್ರಿ.ಶ. ೧೧೭೮.

೭. ಎಸ್ಐಐ XVIII ಹಾವೇರಿ ೩೭೬ ಕ್ರಿ.ಶ. ೧೨೦೬.

ಕೆಲವು ಶಾಸನಗಳಲ್ಲಿ ಕಾಳಾಮುಖ ಗುರುಗಳನ್ನು ಹೆಸರಿಸುವಾಗ ಕಾಶ್ಮೀರದ ಪ್ರಸಕ್ತಿ ಬರುತ್ತದೆ. ಬಾಗೇವಾಡಿ ತಾಲ್ಲೂಕಿನ ಮುತ್ತಗಿ ಶಾಸನದಲ್ಲಿ ಒಬ್ಬ ಯತಿಯನ್ನು ಶ್ರೀಮತ್ ಕಾಶ್ಮೀರ ದೇವರ ಶಿಷ್ಯನೆಂದು ಹೇಳಿ ಅವರ ಗುರು ಪರಂಪರೆಯನ್ನು ಕೊಡಲಾಗಿದೆ.[೧] ಅದೇ ಸ್ಥಳದ ಕ್ರಿ.ಶ೧೧೪೭ರ ಶಾಸನವೊಂದರಲ್ಲಿ ಕಾಶ್ಮೀರದಿಂದ ಬಂದು ಬಿಜಾಪುರದಲ್ಲಿ ನೆಲಸಿದ್ದ ಶೈವ ಗುರುಗಳನ್ನು ಕೀರ್ತಿಸಲಾಗಿದೆ.[೨] ಇಂಥ ಕೆಲವು ಆಧಾರಗಳಿಂದ, ಕಾಳಾಮುಖರು ಉತ್ತರದ ಕಾಶ್ಮೀರದಿಂದ ಬಂದವರೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟರು.[೩] ಕರ್ನಾಟಕ ಮತ್ತು ಕಾಶ್ಮೀರಗಳ ಮಧ್ಯೆ ಧಾರ್ಮಿಕವಾದ ಕೊಳುಕೊಡೆಗಳು ಇದ್ದುವೆಂಬುದಕ್ಕೆ ಆಧಾರಗಳೇನೋ ಇವೆ.[೪] ಆದರೆ ಶಾಸನಗಳಲ್ಲಿ ದೊರೆಯುವ ಕೆಲವೇ ಹೆಸರುಗಳಿಂದ ಕಾಶ್ಮೀರದಿಂದ ಕಾಳಾಮುಖರು ಕರ್ನಾಟಕಕ್ಕೆ ಬಂದು ನೆಲಸಿದರು ಎಂದು ಹೇಳಲು ಆಧಾರಗಳು ಸಾಲವು. ಡಾ.ಚಿದಾನಂದ ಮೂರ್ತಿಯವರು ಹೇಳುವಂತೆ ಕಾಶ್ಮೀರ ಶೈವ ಪ್ರವಾಹದ ಒಂದು ಹೊನಲು ಇಲ್ಲಿಯ ಶೈವಧರ್ಮವನ್ನು ೧೦ ಅಥವಾ ೧೧ನೆಯ ಶತಮಾನದಲ್ಲಿ ಕೂಡಿಕೊಂಡಂತೆ ಕಾಣುತ್ತದೆ.[೫]

ಕಾಳಾಮುಖರೆಂದು ನಿಶ್ಚಿತವಾಗಿ ಹೇಳುವ ಶಾಸನಗಳ ಉಲ್ಲೇಖಗಳು ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ಹರಡಿಹೋಗಿವೆ; ಶಿವಮೊಗ್ಗ, ಧಾರವಾಡ, ಬಿಜಾಪುರ, ಬೆಳಗಾಂ,[೬] ಹಾಸನ,[೭] ತುಮಕೂರು,[೮] ಚಿತ್ರದುರ್ಗ[೯] ಮತ್ತು ತುಳುನಾಡು[೧೦]ಗಳಲ್ಲಿ ಗುರುತಿಸಬಹುದಾಗಿದೆ. ಆದರೆ ನಿಶ್ಚಿತವಾಗಿ ಕಾಳಾಮುಖ ಎಂದು ಉಲ್ಲೇಖವಿಲ್ಲದಿದ್ದರೂ ಶೈವಯತಿಗಳಿಗೆ ಸಂಬಂಧಿಸಿದವೆಂದು ಗುರುತಿಸಬಹುದಾದ ಶಾಸನಗಳು ಮಂಡ್ಯ, ಬಳ್ಳಾರಿ, ಕಡೂರು ಜಿಲ್ಲೆಗಳಲ್ಲಿ ಕಂಡುಬರುತ್ತವೆ. ರಾಸಿ, ಜೀಯ, ಪಂಡಿತ ಎಂಬ ರೂಪಗಳಿಂದ ಕೊನೆಯಾಗುವ ಶೈವಗುರುಗಳ ಹೆಸರುಗಳು ದೊರೆಯುತ್ತವೆ. ನೂರಾರು ಗ್ರಾಮಗಳಲ್ಲಿ, ಊರುಗಳಲ್ಲಿ ಹರಡಿ ಹೋಗಿರುವ ಶಾಸನಗಳಲ್ಲಿ ಕಂಡು ಬರುವ ಈ ಗುರುಗಳನ್ನು ಕಾಳಾಮುಖರೆಂದಾಗಲೀ ಅಥವಾ ಲಕುಲೀಶ ಪಾಶುಪತರೆಂದಾಗಲೀ ಪ್ರತ್ಯೇಕಿಸಿ ಗುರುತಿಸಲು ಶಾಸನಗಳ ಆಧಾರದಿಂದ ಸಾಧ್ಯವಿಲ್ಲ.

ಕಾಳಾಮುಖರಾಗಲಿ ಲಕುಲೀಶ ಪಾಶುಪತರಾಗಲಿ ವೈಯಕ್ತಿಕ ಸಾಧನೆಗೆ ಎಷ್ಟು ಗಮನ ಕೊಟ್ಟರೋ ಅಷ್ಟೇ ಗಮನವನ್ನು ಸಾಮಾಜಿಕ ಚಟುವಟಿಕೆಗಳಿಗೂ ನೀಡಿದರು. ಅನ್ಯರು ನಿರ್ಮಿಸಿಕೊಟ್ಟ ದೇವಾಲಯಗಳಿಗಾಗಲಿ ಅಥವಾ ತಾವೇ ನಿರ್ಮಿಸಿದ ದೇವಾಲಯಗಳಿಗಾಗಲಿ ಸ್ಥಾನಪತಿಗಳಾಗಿದ್ದು ತುಂಬ ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ.

---

೧. ಎಸ್ಐಐ XV ಬಾಗೇವಾಡಿ ೯೭ ಕ್ರಿ.ಶ. ೧೧೫೮.

೨. ಎಸ್. ವಿದ್ಯಾಶಂಕರ : 'ಕಾಳಾಮುಖರು' ಬ.ಪ. ೧೧-೨, ಪು. ೮೯.

೩. A. Venkatasubbiah : 'A Twelth century university in Mysore', ಕ್ಯುಜೆಎಂಎಸ್ VII-೩, ಪು. ೧೭೬.
ಎಂ.ಎಚ್. ಕೃಷ್ಣ, ಬೆಂಗೇರಿ ಹುಚ್ಚರಾವ್- 'ಯಾದವ ಸಿಂಘಣನ ತಿಳಿವಳ್ಳಿಯ ಶಾಸನ ಶಕ ೧೧೬೦' ಕ.ಸಾ.ಪ.ಪ. ೨೮-೧, ಪು. ೧೫-೧೮.

೪. ಜೆ. ರುದ್ರಪ್ಪ : ಶೈವ ದರ್ಶನ, ಪು. ೨-೩.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೩೭.

೬. ಎಇ XII ಶೋರಾಪುರ ೩೨ಜಿ ಕ್ರಿ.ಶ. ೧೧೭೯.

೭. (ರೈ) ಎಕ V ಅರಸಿಕೆರೆ ೪೮ ಕ್ರಿ.ಶ. ೧೧೮೯.

೮. (ರೈ) ಎಕ XII ತಿಪಟೂರು ೯೧ ಕ್ರಿ.ಶ. ೧೧೬೯.

೯. (ರೈ) ಎಕ XI ಜಗಳೂರು ೮ ಕ್ರಿ.ಶ. ೧೧೬೬.

೧೦. P. Gururaja Bhat: Studies in Tuluva History and Culture, ಪು. ೨೮೭-೮೯.

ದೇವಾಲಯ- ಮಠಗಳಲ್ಲಿ ವಿದ್ಯೆಗೆ, ಚಿಕಿತ್ಸೆಗೆ, ಅನ್ನಛತ್ರಗಳಿಗೆ ಮಾಡಿದ ವ್ಯವಸ್ಥೆಗಳು ಆ ಕಾಲದಲ್ಲಿ ಸಾಮಾಜಿಕವಾಗಿ ಬಹುದೊಡ್ಡ ಸಾಧನೆಗಳಾಗಿವೆ. ಬಳ್ಳಿಗಾವೆಯ ಕೋಡಿಯ ಮಠ ವ್ಯವಸ್ಥೆಗೊಳಿಸಿದ್ದ ಕಾರ್ಯಕ್ಷೇತ್ರಗಳ ವ್ಯಾಪ್ತಿಯನ್ನು ಈಗಾಗಲೇ ಗಮನಿಸಲಾಗಿದೆ. ಅಷ್ಟೊಂದು ವೈವಿಧ್ಯಮಯ ಚಟುವಟಿಕೆಗಳನ್ನು ನಿರ್ವಹಿಸಿದ ಕೇಂದ್ರ ಪ್ರಾಚೀನ ಕರ್ನಾಟಕದ ಇತಿಹಾಸದಲ್ಲೇ ಅತ್ಯಪೂರ್ವವಾದುದು. ಎಂ. ಚಿದಾನಂದ ಮೂರ್ತಿಯವರು ಸರಿಯಾಗಿ ಗುರುತಿಸಿರುವಂತೆ 'ಬಳ್ಳಿಗಾವೆ ಶೈವರ ಶ್ರವಣಬೆಳಗೊಳ.'[೧] ಹೂಲಿ, ಹೊಂಬಳ, ಬಂಕಾಪುರ, ಮುತ್ತಗಿ ಮುಂತಾದ ಕೇಂದ್ರಗಳು ತುಂಬ ಕ್ರಿಯಾತ್ಮಕವಾಗಿ ಕಾರ್ಯ ನಿರ್ವಹಿಸಿವೆ. ಹೊಂಬಳದ ಶಾಸನವೊಂದು ರುದ್ರಶಕ್ತಿ ಎಂಬ ಕಾಳಾಮುಖ ಗುರು ತನ್ನ ಗುರುವಾದ ವಾಮಶಕ್ತಿಯ ಪರೋಕ್ಷ ವಿನಯಕ್ಕೆ ದೇವಾಲಯವನ್ನು ಕಟ್ಟಿಸಿ ಅದಕ್ಕೆ ಕುಮಾರ ಬೊನ್ತೇಶ್ವರ ಎಂದು ಹೆಸರು ಇಟ್ಟದ್ದನ್ನು ತಿಳಿಸುತ್ತದೆ.[೨] ಲಕ್ಷ್ಮೇಶ್ವರದ ಒಂದು ಶಾಸನ ನಾಗೇಶ್ವರ ಗುರು ಸೋಮನಾಥ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ ವಿಷಯವನ್ನು ತಿಳಿಸುತ್ತದೆ.[೩] ಹೂಲಿಯ ಶಾಸನವೊಂದು ದೇವಾಲಯದ ಸುಂದರ ಕಮಾನನ್ನು ಜ್ಞಾನಶಕ್ತಿ ಮಾಡಿಸಿದನೆಂದು ಹೇಳುತ್ತದೆ.[೪] ಅದೇ ಸ್ಥಳದ ಇನ್ನೊಂದು ಶಾಸನ ಜ್ಞಾನರಾಶಿಯ ಶಿಷ್ಯನಾದ ನಾಗರಾಶಿ ಒಂದು ಕಂಬವನ್ನು ಮಾಡಿಸಿದ ವಿಷಯವನ್ನು ತಿಳಿಸುತ್ತದೆ.[೫] ತಲದಬಾಗಿಯ ಶಾಸನ ಸೋವರಾಶಿಯ ಮಗ ಬೊಮ್ಮರಾಶಿ ದೇವಸ್ಥಾನದ ಗಾರೆ ಕೆಲಸದವನಿಗೆ ಶಿಖರ ನಿರ್ಮಾಣಕ್ಕಾಗಿ ಮನೆ ನಿವೇಶನವನ್ನು ಕೊಟ್ಟ ವಿಷಯವನ್ನು ತಿಳಿಸುತ್ತದೆ.[೬]

ಅನ್ನದಾನಕ್ಕೆ ವಿಶೇಷ ಪ್ರಾಶಸ್ತ್ಯವನ್ನು ಕಾಳಾಮುಖರು ಕೊಟ್ಟಿರುವುದು ಕಂಡುಬರುತ್ತದೆ. ಕಡ್ಲೆವಾಡದ ಒಂದು ಶಾಸನ ಸೋವರಾಶಿ ಪಂಡಿತನನ್ನು 'ದೀನಾನಾಥ ಜ(ಠ)ರ ದಾವಕ ಪಾವಕ ನಿವಾರಣ' ಎಂದು ವರ್ಣಿಸಿದೆ.[೭] ಬಂಕಾಪುರದ ಶಾಸನವೊಂದು ವಿಮಳಶಕ್ತಿ ಎಂಬ ಗುರುವನ್ನು 'ಆಹಾರಾಭಯ ಭೈಶಜ್ಯ ಶಾಸ್ತ್ರಪ್ರದಾನೋದ್ಯುಕ್ತ ಚಿತ್ತರುಂ' ಎಂದೂ, ಬಂದ ದಾನವನ್ನು ತಪೋಧನರ ಆಹಾರ ದಾನಕ್ಕೂ, ವಿದ್ಯಾ ದಾನಕ್ಕೂ, ಮತ್ತು 'ದೀನಾನಾಥರಿಗಿಕ್ಕುವ ವಾರಿಸತ್ರಕ್ಕೂ' ನಿರ್ವಹಿಸಿದ ವಿಷಯವನ್ನು ತಿಳಿಸುತ್ತದೆ.[೮] ಹೀಗೆ ದಾನಿಗಳಿಂದ ಪಡೆದ ದಾನವನ್ನು ಸಾಮಾಜಿಕ ಕಾರ್ಯಗಳಿಗೆ ಬಳಸುತ್ತಿದ್ದರೆಂಬುದು ಇಂಥ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ.

ಲಕುಲೀಶ ಪಾಶುಪತರು ತಾಂತ್ರಿಕಾಚರಣೆಗಳ ಕಡೆ ಅಷ್ಟಾಗಿ ಒಲಿದಂತೆ ಕಾಣಬರುವುದಿಲ್ಲ. ಹೊಂಬಳದ ಶಾಸನದಲ್ಲಿ ಬರುವ ಬೊಂತೆಯ ಮುನಿ ನಿರ್ವಹಿಸಿರುವ ಅನೇಕ ಪವಾಡಗಳು ನಿರೂಪಿತವಾಗಿವೆ.[೯] ಅವನು ಅತಿಮಾನುಷ ಶಕ್ತಿಗಳನ್ನು ಕರಗತ ಮಾಡಿಕೊಂಡಿದ್ದನೆಂದು ಊಹಿಸಬಹುದು. ಕೆಲವು ಶೈವಯತಿಗಳು ಭೈರವನನ್ನು ಆರಾಧಿಸುತ್ತಿದ್ದ ವಿಷಯ ತಿಳಿದುಬರುತ್ತದೆ. ಮಹಾಪ್ರಧಾನಿಯ ಮಗ ಮಂಚಯನಾಯಕ ಭೈರವ ದೇವರನ್ನು ಪ್ರತಿಷ್ಠಾಪಿಸಿ ರಾಮಜೀಯನಿಗೆ

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೫೦.

೨. ಎಸ್‌ಐಐ XV ಗದಗು ೭೩ ಕ್ರಿ.ಶ. ೧೧೮೯.

೩. ಎಸ್‌ಐಐ XX ಶಿರಹಟ್ಟಿ ೩೩೧ ಕ್ರಿ.ಶ. ೧೩ ಶ.ಮಾ.

೪. ಎಇ XVIII ಪರಸಗಡ ೨೨ ಕೆ ಕ್ರಿ.ಶ. ೧೨ ಶ.ಮಾ.

೫. ಎಇ XVIII ಪರಸಗಡ ೨೨ ಐ ಕ್ರಿ.ಶ. ೧೧೮೪.

೬. ಎಸ್‌ಐಐ XX ಜಮಖಂಡಿ ೨೧೯ ಕ್ರಿ.ಶ. ೧೨೬೯.

೭. ಎಸ್‌ಐಐ XX ಸಿಂದಗಿ ೧೨೮ ಕ್ರಿ.ಶ. ೧೧೮೬.

೮. ಎಸ್‌ಐಐ XVIII ಬಂಕಾಪುರ ೨೯೦ ಕ್ರಿ.ಶ. ೧೧೭೮.

೯. ಎಸ್‌ಐಐ XV ಗದಗು ೭೩ ಕ್ರಿ.ಶ. ೧೧೮೯.

ಪೂಜಾಕಾರ್ಯವನ್ನು ನಿರ್ವಹಿಸಲು ದಾನ ಮಾಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೧] ಕೊಮಾರ ಚಿಕ್ಕತಂಮಣಗಳು ಬೆಟ್ಟದ ಭೈರವ ದೇವರಿಗೆ ಜೀರ್ಣೋದ್ಧಾರ ಮಾಡಿಸಿ ದಾನ ನೀಡಿದ ವಿಷಯ ಇನ್ನೊಂದು ಶಾಸನದಿಂದ ತಿಳಿದುಬರುತ್ತದೆ.[೨] ಇದೇ ರೀತಿ ಕೆಲವು ಭೈರವ ದೇವಾಲಯಗಳನ್ನು ಮತ್ತು ಭೈರವ ವಿಗ್ರಹಗಳನ್ನು ಮಾಡಿಸಿದ ಉದಾಹರಣೆಗಳು ದೊರೆಯುತ್ತವೆ.[೩] ಕೆಲವು ಶೈವ ಗುರುಗಳು ಭೈರವನ ದೇವಾಲಯಗಳಲ್ಲಿ ಪೂಜಾಕಾರ್ಯಗಳನ್ನು ನಿರ್ವಹಿಸಿದ್ದಕ್ಕೆ ಉಲ್ಲೇಖಗಳಿವೆ. ಆದರೂ ಲಕುಲೀಶ ಪಾಶುಪತರ ಉಪಾಸನಾ ಮಾರ್ಗ ಸಾತ್ವಿಕ ಮಾರ್ಗದ್ದಾಗಿತ್ತು ಎಂದು ಭಾವಿಸಬಹುದು. ಅವರ ಆಚರಣೆಗಳಲ್ಲಿ ವೈದಿಕಾಂಶ ಬೆರೆತು ಹೋಗಿದ್ದಿತೆಂದು ಕಾಣುತ್ತದೆ. ಕನ್ನಡ ಶಾಸನಗಳನ್ನು ಗಮನಿಸಿದರೆ ಲಕುಲೀಶ ಪಾಶುಪತರು ವೈದಿಕರಾಗಿದ್ದು ಬ್ರಾಹ್ಮಣರಿಂದಲೂ ಪೂಜಿತರಾಗಿದ್ದರು ಎಂದು ಕಂಡುಬರುತ್ತದೆ. ಅವರು ಶಿವಾಗಮಗಳಲ್ಲಿ ಎಷ್ಟು ನಿಷ್ಣಾತರಾಗಿದ್ದರೋ ವೇದಗಳಲ್ಲೂ ಅಷ್ಟೇ ಪಾಂಡಿತ್ಯವನ್ನು ಪಡೆದಿದ್ದರು.[೪]

ಶೈವಧರ್ಮದಲ್ಲಿ ಕೆಲವು ಸನ್ಯಾಸಿನಿಯರೂ ಇದ್ದಂತೆ ಶಾಸನಗಳಿಂದ ತಿಳಿದು ಬರುತ್ತದೆ. ಇಂಗಳಗಿಯ ಶಾಸನದಲ್ಲಿ 'ಶ್ರೀಮೂಲಸ್ಥಾನದೇವರ ಪಾದಾರಾಧಕಿಯಪ್ಪ ಕ್ಷೇತ್ರ ಸನ್ಯಾಸಿ ಮಹಾನುಭಾವೆಯರಪ್ಪ ಬಲವ್ವೆಗಳ ಕಾಲಂ ತೊಳೆದು ಧಾರಾಪೂರ್ವಕಂ ಮಾಡಿ ಶ್ರೀ ಸಿದ್ಧರಾಮ ದೇವರ್ಗ್ಗಂ ಕೇದಾರ ದೇವರು ನಾಗೇಶ್ವರ ಇಂತೀ ಸಕಳ ಲಿಂಗ ದೇವರಿಗೆ ಶ್ರೀ ಗುಡ್ಡವ್ವೆಗಳು ಮುಖ್ಯವಾಗಿ ಗಣಮಠಕ್ಕೆ ಕೊಟ್ಟ ವೃತ್ತಿ' ಎಂಬ ಮಾತು ಬರುತ್ತದೆ.[೫] ಇಲ್ಲಿ ಬಲವ್ವೆ ಪಾದಪೂಜೆ ಪಡೆಯುವುದು ಗಮನಾರ್ಹವಾಗಿದೆ. ಈ ಶಾಸನೋಕ್ತ ಗುಡ್ಡವ್ವೆ ಷೋಡಶರಲ್ಲಿ ಒಬ್ಬಳಾಗಿದ್ದಾಳೆ. ಇವಳನ್ನು ಬಿಜಾಪುರದ ಶಾಸನಗಳು ಸ್ಮರಿಸಿವೆ. ಹೊಂಬಳದ ಶಾಸನದಲ್ಲಿ ಕಂಗಣಬ್ಬೆಯೆಂಬುವಳ ಪಾದಗಳನ್ನು ಭಕ್ತಿಯಿಂದ ಅರ್ಚಿಸುತ್ತ ಕಾಳಾಮುಖ ವಾಮಶಕ್ತಿಗಳ ಮಗ ನರಗುಂದದ ಬೆಟ್ಟದಲ್ಲಿ ತಪಸ್ಸನ್ನಾಚರಿಸುತ್ತಿದ್ದ ಉಲ್ಲೇಖ ಬರುತ್ತದೆ.[೬] ಶಿವಧರ್ಮದಲ್ಲಿ ಮನಸ್ಸನ್ನು ಆಳವಾಗಿ ತೊಡಗಿಸಿದ ಕುಂಜಸೆಟ್ಟಿ ಮಡಿಯಲು ಅವನ ತಂದೆ ಕಂಡ ನಂಬಿಸೆಟ್ಟಿ ಹೊಸವೂರಿನಲ್ಲಿ ತನ್ನ ಮಗನ ಹೆಸರಿನಲ್ಲಿ ಶಿವಾಲಯವನ್ನು ಕಟ್ಟಿಸಿ ದೋರಸಮುದ್ರದ ರಾಜಗುರು ರುದ್ರಶಕ್ತಿದೇವರು, ನೂರಿಪ್ಪತ್ತು ಸ್ಥಾನಿಕರು, ಕಂಪಣಾಚಾರ್ಯರು ಮುಖ್ಯವಾದ ಮಹಾಗಣಂಗಳ ಸಮಕ್ಷದಲ್ಲಿ ಗಾವುಂಡರು ಕಂಡನಂಬಿಸೆಟ್ಟಿಯ ಮಗಳು ಚಂದವ್ವೆಗೆ ಸಮಸ್ತ ದತ್ತಿಯನ್ನು ಮಠದೆರೆ ಮುಖ್ಯವಾಗಿ ಸಮಸ್ತ ತೆರೆಯನ್ನು ಬಿಟ್ಟು ಅವಳಿಗೆ 'ವಿಭೂತಿ ಪಟ್ಟ' ಕಟ್ಟಿ ಗಣಕುಮಾರಿತನವನ್ನು ಧಾರೆಯೆರೆದು ಕೊಟ್ಟುದಾಗಿ ಹಿರಿಯೂರ ಶಾಸನ ತಿಳಿಸುತ್ತದೆ.[೭] ಚಂದವ್ವೆಯ ಅಧಿಕಾರ ಸ್ವೀಕಾರ ಸಮಯದಲ್ಲಿ ಮೇಲೆ ಸೂಚಿಸಿರುವವರಲ್ಲದೆ ಮಾದಜೀಯ, ಭೂತಜೀಯ, ಮಚ್ಚರಜೀಯ, ಅನಂತಜೀಯ ಮುಂತಾದ ಅಸಂಖ್ಯಾತ ಗಣಗಳು ಇದ್ದ ವಿಷಯವನ್ನು ತಿಳಿಸುತ್ತದೆ. ಇದೇ ರೀತಿ ಗಣಕುಮಾರಿಯರ ಉಲ್ಲೇಖಗಳು ಇನ್ನೂ ಕೆಲವು ಶಾಸನಗಳಲ್ಲಿ ಬಂದಿದೆ. ಗಣಕುಮಾರಿ ಮತ್ತು ಗಣಕುಮಾರ[೮] ಪೀಠದ ಉಲ್ಲೇಖಗಳು ದೇವಸ್ಥಾನದ ಒಡೆತನವನ್ನು ಸೂಚಿಸುವಂತಿವೆ.[೯]

---

೧. (ಮೈ) ಎಕ VI ಪಾಂಡವಪುರ ೨೩೫ ಕ್ರಿ.ಶ. ೧೪ ಶ.ಮಾ.

೨. ((ರೈ) ಎಕ V ಬೇಲೂರು ೧೯೨ ಕ್ರಿ.ಶ. ೧೨೧೧.

೩. ಎಸ್‌ಐಐ XV ನವಲಗುಂದ ೬೧೧ ಕ್ರಿ.ಶ. ೧೨೧೩; ಎಸ್‌ಐಐ XV ಬಾದಾಮಿ ೬೩೨ ಕ್ರಿ.ಶ. ೧೩ ಶ.ಮಾ.

೪. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೪೪.

೫. ವಿ.ಎಸ್. ಕುಲಕರ್ಣಿ : 'ಇಂಗಳಗಿ ಗ್ರಾಮದ ಶಾಸನ' ಸಾಧನೆ ೯-೪, ಪು. ೮೫-೮೬, ಶಾಸನದ ಕಾಲ ಕ್ರಿ.ಶ. ೧೨೦೯. ಅದು ಚಿತಾಪುರ ತಾಲ್ಲೂಕು, ಕಲಬುರ್ಗಿ ಜಿಲ್ಲೆಯಲ್ಲಿದೆ.

೬. ಕಪಟರಾಳ ಕೃಷ್ಣರಾಯ : ಪೂರ್ವೋಕ್ತ, ಪು. ೧೦೬.

೭. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.

೮. ಎಸ್‌ಐಐ IX(i) ಹರಪನಹಳ್ಳಿ ೩೩೯, ಕ್ರಿ.ಶ. ೧೨೨೨.

೯. ಚೆನ್ನಕ್ಕ ಎಲಿಗಾರ : 'ಶಾಸನೋಕ್ತ ಗೊರವಿ-ಗಣಕುಮಾರ-ಗಣಕುಮಾರಿ' ಸಾಧನೆ ೧೪-೨, ಪು. ೩೯-೪೫.

ಬಸವಪೂರ್ವ ಯುಗದ ಲಕುಲೀಶಪಾಶುಪತ ಧರ್ಮವನ್ನು ಕ್ರಮೇಣ ವೀರಶೈವ ಧರ್ಮ ತನ್ನಲ್ಲಿ ಅಳವಡಿಸಿಕೊಂಡಂತೆ ಕಾಣುತ್ತದೆ. ವೀರಶೈವ ಧರ್ಮ ಪ್ರಬಲವಾಗಿ ಬೆಳೆದಂತೆಲ್ಲ ಕ್ರಮಕ್ರಮವಾಗಿ ಕಾಳಾಮುಖ-ಶೈವ ಅಧೀನದಲ್ಲಿದ್ದ ದೇವಾಲಯಗಳು-ಮಠಗಳು ವೀರಶೈವದ ಕಕ್ಷೆಗೆ ಬಂದಂತೆ ಕಂಡುಬರುತ್ತದೆ. ಹೂಲಿ, ಬಳ್ಳಿಗಾವೆ, ಗದಗಿನ ತ್ರಿಕೂಟೇಶ್ವರ ಮುಂತಾದ ಹೆಚ್ಚು ಕಡಮೆ ಎಲ್ಲ ಪ್ರಾಚೀನ ಕಾಳಾಮುಖಕೇಂದ್ರಗಳು ವೀರಶೈವವಾಗಿ ಮಾರ್ಪಟ್ಟಿವೆ.[೧] ಆ ಕಾಲದ ಅನೇಕ ಶೈವ ಧರ್ಮಾನುಯಾಯಿಗಳಾಗಿದ್ದವರು- ಉದಾಹರಣೆಗೆ ಏಕಾಂತದ ರಾಮಯ್ಯ,[೨] ಸಿದ್ಧರಾಮನಂತಹ[೩] ವ್ಯಕ್ತಿಗಳು ವೀರಶೈವದ ಕಡೆ ಒಲಿದಿರುವಂತೆ ಕಂಡುಬರುತ್ತದೆ. ಇದೇ ಅಭಿಪ್ರಾಯ ಹರಿಹರ, ರಾಘವಾಂಕ ಕವಿಗಳ ಬಗ್ಗೆಯೂ ಇದೆ. ಮುಂದೆ ಕ್ರಿ.ಶ. ೧೪೩೦ ರ ಕಾಲದಲ್ಲಿ ಲಕ್ಕಣ ದಂಡೇಶ ಎರಡನೆಯ ದೇವರಾಯನಲ್ಲಿ ದಂಡಾಧಿಪನಾಗಿದ್ದನು. ಈತನು ಅನೇಕ ಶಾಸನಗಳಲ್ಲಿ ಉಕ್ತನಾಗುವುದರೊಂದಿಗೆ ವೀರಶೈವಧರ್ಮದ ಬಹು ಪ್ರಮುಖ ಕೃತಿಗಳಲ್ಲೊಂದಾದ "ಶಿವತತ್ವ ಚಿಂತಾಮಣಿ"ಯನ್ನು ರಚಿಸಿದ್ದಾನೆ.[೪] ಅವನ ಗುರು ಪಾಶುಪತ ಧರ್ಮದ ಮಲ್ಲಿಕಾರ್ಜುನ. ಅಲ್ಲದೆ ಅವನು ಕ್ರಿಯಾಶಕ್ತಿರಾಯನೆಂಬ ಕಾಳಾಮುಖ ಗುರುವನ್ನು ಕೂಡ ಸ್ತುತಿಸಿದ್ದಾನೆ.[೫] ಕಾಳಾಮುಖ ಮಠಗಳು-ದೇವಾಲಯಗಳು ವೀರಶೈವವಾಗಿ ಮಾರ್ಪಟ್ಟ ಪ್ರಕ್ರಿಯೆ ಮತ್ತು ಪ್ರಮಾಣ ತುಂಬ ಕುತೂಹಲಕರ ಅಧ್ಯಯನದ ವಿಷಯವಾಗಿದೆ.

ಕಾಳಾಮುಖ ಧರ್ಮ ೧೧-೧೨ನೆಯ ಶತಮಾನದಲ್ಲಿ ಏರುಮುಖವನ್ನು ಪಡೆದು ೧೩-೧೪ ನೆಯ ಶತಮಾನದಲ್ಲಿ ಕ್ರಮೇಣ ಇಳಿಮುಖವನ್ನು ಪಡೆದಿರುವುದನ್ನು ಕಾಣಬಹುದು.[೬] ಎ. ವೆಂಕಟಸುಬ್ಬಯ್ಯನವರು ಅಭಿಪ್ರಾಯಪಟ್ಟಿರುವಂತೆ ಕಾಳಾಮುಖ ಗುರುಗಳ ಕೊನೆಯ ಉಲ್ಲೇಖ ಕ್ರಿ.ಶ. ೧೪೧೦ರ ಶಾಸನ.[೭] ಮೂರು ನಾಲ್ಕು ಶತಮಾನಗಳ ಕಾಲ ಬಹು ಶಕ್ತಿಯುತವಾಗಿ ಬೆಳೆದ ಧರ್ಮ ಕ್ರಮೇಣ ವೀರಶೈವದಲ್ಲಿ ಕರಗಿಹೋದ ಹಾಗೆ ಕಾಣುತ್ತದೆ.

ಕೆಲವು ಶಾಸನಗಳಲ್ಲಿ ಬ್ರಾಹ್ಮಣರ ಸಮ ಸಮವಾಗಿ ಗೊರವರ ಪ್ರಸ್ತಾಪ ಬರುತ್ತವೆ. ಇವರು ಕಾಳಾಮುಖ ಅಥವಾ ಪಾಶುಪತ ಗುರುಗಳಾಗಿದ್ದು ದೇವಾಲಯಗಳ ಮುಖ್ಯಸ್ಥರಾಗಿದ್ದರು.[೮] ಈಗಲೂ ಬೆಳಗಾಂ, ಬಿಜಾಪುರ ಜಿಲ್ಲೆಯ ದೇವಾಲಯಗಳ ಅರ್ಚಕರು ತಮ್ಮ ಹೆಸರಿನ ಜೊತೆ ರಾಸಿಯನ್ನು ಸೇರಿಸಿ ಹೆಸರನ್ನು ಹೇಳಿಕೊಳ್ಳುತ್ತಾರೆ. ಇವರನ್ನು ಗೊರವರು, ಪೂಜಾರರು, ಹೂಗಾರರು ಎಂದು ಕರೆಯಲಾಗುತ್ತದೆ. ಮಹಾರಾಷ್ಟ್ರದ ಗಡಿ ಪ್ರದೇಶದಲ್ಲಿ ಗುರವರೆಂದೂ, ಬಳ್ಳಾರಿ, ಗುಂತಕಲ್ಲು, ರಾಯಚೂರು

---

೧. S. C. Nandimutt : A Hand book of Virasaivism, ಪು. ೧೦.

Sadyojata Swamiji : Saiva and Virasaiva maltas in Karnataka, ಕ.ವಿ.ವಿ.ಕ್ಕೆ ಅರ್ಪಿಸಿದ ಪಿಎಚ್‌ಡಿ ನಿಬಂಧ ೧೯೭೪ ಅಪ್ರಕಟಿತ, ಪು. ೨೨೯.

೨. ಎಸ್. ವಿದ್ಯಾಶಂಕರ : 'ಕಾಳಾಮುಖರು' ಬಪ ೧೧-೨ ಪು. ೯೭. 'ಅಬ್ಬಲೂರಿನ ಶಾಸನದ ಪ್ರಕಾರದ ಅವನು ಬ್ರಹ್ಮೇಶ್ವರ ದೇವಸ್ಥಾನದಲ್ಲಿ ಧರ್ಮಬೋಧೆ ಮಾಡಿದನು. ಆ ದೇವಸ್ಥಾನವು ಕ್ರಿ.ಶ. ೧೧೪೪ ರವರೆವಿಗೂ ಮೂವರು ಕೋಣೆಯ ಸಂತತಿಯ ಕಾಳಾಮುಖ ಗುರುಗಳ ಆಳ್ವಿಕೆಗೆ ಒಳಪಟ್ಟಿತ್ತು. ಇದರಿಂದ ಕಾಳಾಮುಖ ಗುರುಗಳಿಗೂ ಏಕಾಂತದ ರಾಮಯ್ಯನಿಗೂ ಒಳ್ಳೆಯ ಸಂಬಂಧವಿದ್ದಿತೆಂದು ಹೇಳಬಹುದು... ಅವನು ಕಾಳಾಮುಖ ಪಂಥದವನೇ ಆಗಿರಬಹುದಾದ ಸಾಧ್ಯತೆ ಇದೆ.'

೩. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೫೭-೫೮.

೪. ಶಿವತತ್ತ್ವ ಚಿಂತಾಮಣಿ, ಸಂ. ಎಚ್. ದೇ.ೀರಪ್ಪ.

೫. ಅದೇ ೧-೪; ೩೮-೨೪೬.

೬. ಕಪಟರಾಳ ಕೃಷ್ಣರಾಯ : ಪೂರ್ವೋಕ್ತ, ಪು. ೧೦೦.

೭. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೫೬.

೮. M.V.Seetharamaiah : 'Goravas of Karnataka' SriKanthika ಪು. ೩೧೯.

ಜಿಲ್ಲೆಗಳಲ್ಲಿ ಜೀರರು ಎಂದು ಕರೆಯಲಾಗುತ್ತದೆ. ಅದು ಜೀಯರು ಎಂಬುದರ ಸಂಕ್ಷಿಪ್ತ ರೂಪ. ಆದ್ದರಿಂದ ಆಧುನಿಕ ಕಾಲದ ಜೀರರು, ಹೂಗಾರರು, ಗೊರವರು ಅಥವಾ ಪೂಜಾರರು ಮಧ್ಯ ಕಾಲೀನ ಸಮಾಜದ ಜೀಯರು ಮತ್ತು ಗೊರವರ ಉತ್ತರಾಧಿಕಾರಿಗಳು. ಕೆಲವರು ವೀರಶೈವ ಮತ ಪರಂಪರೆಯಲ್ಲಿ ಸೇರಿಹೋದರು, ಇನ್ನು ಕೆಲವರು ದೇವಾಲಯದ ಪೂಜೆ ಮತ್ತಿತರ ಕಾರ್ಯಗಳಲ್ಲಿ ಉಳಿದುಕೊಂಡುಬಂದರೆಂದು ಕಾಣುತ್ತದೆ. ಮಹಾರಾಷ್ಟ್ರ ಗಡಿ ಪ್ರದೇಶದಲ್ಲಿ ವೀರಶೈವ ಪ್ರಭಾವ ಕಡಮೆ ಇದ್ದು ಅವರೆಲ್ಲ ಮಧ್ಯಸ್ಥಿತಿಯಲ್ಲೇ ಉಳಿದಿರಬೇಕು.[೧] 'ಕಾಳಾಮುಖರು ಧಾರ್ಮಿಕ ಚಟುವಟಿಕೆಗಳಿಗೆ ನೀಡಿದಷ್ಟೇ ಮಹತ್ವವನ್ನು ಸಾಮಾಜಿಕ ಅಥವಾ ಜನಪರ ಚಟುವಟಿಕೆಗೆ ನೀಡಿದ್ದರೆ ಕರ್ನಾಟಕ ಸಂಸ್ಕೃತಿ ಅಧ್ಯಯನದಲ್ಲಿ ಮತ್ತಷ್ಟು ಅನಿವಾರ್ಯವಾಗುತ್ತಿದ್ದರು' ಎಂಬ ಮಾತು ಗಮನಾರ್ಹವಾಗಿದೆ.[೨]

**ಶುದ್ಧ ಶೈವ:**

ಸಾತ್ವಿಕ ಶೈವ ಪಂಥಗಳಲ್ಲಿ ಶುದ್ಧಶೈವವೂ ಒಂದಾಗಿದೆ. ಕೆಲವು ಶಾಸನಗಳಲ್ಲಿ ಶುದ್ಧ ಶೈವನೆಂದು ಕರೆಯಲಾದ ಗುರುಗಳ ಉಲ್ಲೇಖಗಳು ದೊರೆಯುತ್ತವೆ. ಕಡೂರು ತಾಲ್ಲೂಕಿನ ಶಾಸನವೊಂದು ನಾಕೇಶ್ವರ ದೇವರ ನೈಷ್ಠಿಕ ಸ್ಥಾನವನ್ನು ವಹಿಸಿಕೊಂಡ ತ್ರಿಲೋಚನಾಚಾರ್ಯನನ್ನು 'ಶುದ್ಧ ಶೈವ'ನೆಂದು ಕರೆದಿದೆ.[೩] ಸೌಂದತ್ತಿಯ ಒಂದು ಶಾಸನದಲ್ಲಿ ಶೈವ ಗುರುವನ್ನು 'ಶುದ್ಧ ಶೈವ ಮಾರ್ಗಿ' ಎಂದು ಕರೆದಿದೆ.[೪] ಉಳಿದಂತೆ ಶುದ್ಧ ಶೈವರ ಪ್ರಸ್ತಾಪ ಶಾಸನಗಳಲ್ಲಿ ಅಷ್ಟಾಗಿ ಕಂಡು ಬರುವುದಿಲ್ಲ. ಆದಯ್ಯ ಎಂಬ ವಚನಕಾರನು 'ಶುದ್ಧ ಶೈವ' ಎಂಬ ಮತವೊಂದನ್ನು ಹೆಸರಿಸಿ, ಶುದ್ಧ ಶೈವರು ಸ್ಥಾವರ ಲಿಂಗವನ್ನು ಪೂಜಿಸುವರೆಂದೂ, ವೀರಶೈವರು ಇಷ್ಟಲಿಂಗವನ್ನು ಪೂಜಿಸುವರೆಂದೂ ಹೇಳುತ್ತಾನೆ. ಈ ಶುದ್ಧ ಶೈವವು ಯಾವುದು ಎಂಬುದಿನ್ನೂ ತೀರ್ಮಾನವಾಗಬೇಕಾಗಿದೆ.[೫] ಶುದ್ಧ ಶೈವವನ್ನು ಕೆಲವು ವಚನಕಾರರೂ ಟೀಕಿಸಿದ್ದಾರೆ. ಶುದ್ಧ ಶೈವರ ಹಾಗೆ ವೀರಶೈವರು ನಂದಿ, ವೀರಭದ್ರ, ದುರ್ಗೆ, ಪಾವುಗೆ, ಕಂಥೆ, ಕಮಂಡಲು ಮತ್ತು ಲಿಂಗವನ್ನು ಎದುರಿಗಿಟ್ಟು ಪೂಜಿಸಬಾರದೆಂದು ಹೇಳಿರುವುದಲ್ಲದೆ ಶುದ್ಧ ಶೈವರು ಹಲವು ದೈವಗಳ ಎಂಜಲು ತಿನ್ನುವರೆಂದು ಹಳಿದಿದ್ದಾರೆ.[೬] ಶುದ್ಧ ಶೈವರೂ ಕೂಡ ವೀರಶೈವರಂತೆ ದೇಹದ ಮೇಲೆ ಲಿಂಗಧಾರಣೆ ಮಾಡುತ್ತಿದ್ದರು. ಆದರೆ ಅವರು ಆಗಾಗ್ಗೆ ದೇಹದ ಮೇಲಿನ ಲಿಂಗವನ್ನು ಹೊರತೆಗೆಯುತ್ತಿದ್ದುದೂ ಉಂಟು. ಇದನ್ನು ಶರಣರು ಖಂಡಿಸುತ್ತಾರೆ. ತಮಿಳುನಾಡಿನಲ್ಲಿ ಹುಟ್ಟಿ ಬೆಳೆದ ಶೈವ ಸಿದ್ಧಾಂತವೇ ಶುದ್ಧ ಶೈವ ಆಗಿರಬಹುದೆಂದು ಪಿ.ವಿ. ನಾರಾಯಣ ಅಭಿಪ್ರಾಯ ಪಟ್ಟಿದ್ದಾರೆ.[೭]

**ಕಾಶ್ಮೀರ ಶೈವ:**

ಕೆಲವು ಶಾಸನಗಳಲ್ಲಿ ಕಾಳಾಮುಖ ಗುರುಗಳ ವಿಷಯವನ್ನು ಹೇಳುವಾಗ ಅವರು ಕಾಶ್ಮೀರದಿಂದ ಬಂದವರೆಂದು ಹೇಳಿರುವುದನ್ನು ಈಗಾಗಲೇ ಗಮನಿಸಲಾಗಿದೆ. ಕಾಶ್ಮೀರದಲ್ಲಿ ಪ್ರಚಲಿತವಾಗಿರುವ ಶೈವ ಧರ್ಮವನ್ನು ತ್ರಿಕದರ್ಶನವೆಂದು ಕರೆಯುವ ವಾಡಿಕೆ ಇದೆ. ಕರ್ನಾಟಕ ಮತ್ತು ಕಾಶ್ಮೀರಗಳ ನಡುವೆ ಧಾರ್ಮಿಕ ಸಂಬಂಧವಿದ್ದುದು ಕೆಲವು ಶಾಸನ, ಕಾವ್ಯಗಳಿಂದ

---

೧. R.N. Gurava : Kadambas of Goa and their inscriptions : ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪಿಎಚ್‌ಡಿ ಅಪ್ರಕಟಿತ ನಿಬಂಧ ೧೯೬೯, ಪು. ೩೯೦.

ನೋಡಿ : ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೫೪-೧೬೦.

೨. ಡಿ.ವಿ. ಪರಮಶಿವಮೂರ್ತಿ : 'ಕಾಳಾಮುಖಪಂಥ' ಕನ್ನಡ ಅಧ್ಯಯನ ಸಂ. ೧೧ ಸಂ ೧ ಮತ್ತು ೨ ಪು. ೧೫೨.

೩. (ರೈ) ಎಕ VI ಕಡೂರು ೫೧ ಕ್ರಿ.ಶ. ೧೧೬೯.

೪. ಎಸ್‌ಐಐ XX ಪರಸಗಡ ೨೪೮ ಕ್ರಿ.ಶ. ೧೨೨೪.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೫೪.

೬. ಪಿ.ವಿ. ನಾರಾಯಣ : ಪೂರ್ವೋಕ್ತ, ಪು. ೪೫೬.

೭. ಅದೇ ಪು. ೪೫೬-೪೫೭.

ವ್ಯಕ್ತವಾಗುತ್ತದೆ. ಜೆ. ರುದ್ರಪ್ಪನವರು ಅಭಿಪ್ರಾಯಪಡುವಂತೆ ಕಾಶ್ಮೀರ ಶಿವಾದ್ವೈತಕ್ಕೂ ವೀರಶೈವ ವಿಶಿಷ್ಟಾದ್ವೈತಕ್ಕೂ ನಿಕಟ ಸಾಮ್ಯವನ್ನು ಗುರುತಿಸಬಹುದಾಗಿದೆ.[೧]

**ತಾಂತ್ರಿಕ ಶೈವ : ಕಾಪಾಲಿಕರು**

ಶೈವಧರ್ಮದ ವಾಮಾಚಾರದ ಪ್ರಮುಖ ಶಾಖೆಗಳಲ್ಲೊಂದು ಕಾಪಾಲಿಕರದು. ಕಾಪಾಲಿಕರಿಗೆ 'ಮಹಾವ್ರತಿ'ಗಳೆಂಬ ಇನ್ನೊಂದು ಹೆಸರು ಇದ್ದಂತೆ ತಿಳಿದುಬರುತ್ತದೆ. ಪ್ರಾಚೀನ ಶೈವ ಪಂಥಗಳನ್ನು ಗುರುತಿಸುವಾಗ ಸ್ವಲ್ಪಮಟ್ಟಿನ ಗೊಂದಲ ಆಗಿರುವುದನ್ನು ಈಗಾಗಲೇ ಗಮನಿಸಲಾಗಿದೆ. ರಾಮಾನುಜಾಚಾರ್ಯರು ಕಾಳಾಮುಖರನ್ನು, ಕಾಪಾಲಿಕರನ್ನು ಒಂದೇ ಆಗಿ ಭಾವಿಸಿದಂತಿದೆ. ಬಹುಶಃ ಅದನ್ನು ಅನುಸರಿಸಿ ಆರ್.ಜಿ. ಭಂಡಾರ್‌ಕರ್ ಅವರು ಆ ಅಭಿಪ್ರಾಯವನ್ನು ಅನುಮೋದಿಸಿದ್ದಾರೆ.[೨] ಆದರೆ ಕಾಳಾಮುಖರ ಸಮಾಜ ಸಮ್ಮುಖ ಜೀವನಕ್ಕೂ ಕಾಪಾಲಿಕರ ಸಮಾಜ ವಿಮುಖ ಜೀವನಕ್ಕೂ ಇರುವ ವ್ಯತ್ಯಾಸಗಳನ್ನು ಗಮನಿಸಿದರೆ ಎರಡೂ ಪಂಥಗಳಿಗೆ ಶಿವ ಆರಾಧ್ಯ ದೈವವೆಂಬುದನ್ನು ಬಿಟ್ಟರೆ ಪರಸ್ಪರ ಹೋಲಿಕೆಗಳು ಅಷ್ಟಾಗಿ ಇಲ್ಲ ಎಂಬುದು ಕರ್ನಾಟಕದಲ್ಲಿ ದೊರೆತಿರುವ ನೂರಾರು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಈ ವಿಷಯವನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ.[೩] ರಾಮಾನುಜ ಮತ್ತು ಯಾಮುನಾಚಾರ್ಯ ಈ ಇಬ್ಬರು ವೈಷ್ಣವ ಯತಿಗಳು ಉದ್ದೇಶಪೂರ್ವಕವಾಗಿಯೇ ಕಾಳಾಮುಖ, ಕಾಪಾಲಿಕ ಗೊಂದಲವನ್ನು ಉಂಟುಮಾಡಿದಂತಿದೆ ಎಂದು ಡೇವಿಡ್ ಎನ್ ಲೊರೆಂಜನ್ ಅಭಿಪ್ರಾಯ ಪಡುತ್ತಾರೆ.[೪] ಇದು ಏನೇ ಆದರೂ ಈಗಾಗಲೇ ದೊರೆತಿರುವ ಕಾಳಾಮುಖರ ನೂರಾರು ಶಾಸನಗಳು ಅವರ ಧರ್ಮನಿಷ್ಠ ಶುದ್ಧ ಬದುಕನ್ನು, ಸಾಮಾಜಿಕ ಬದ್ಧತೆಯನ್ನು ಬಹು ಸ್ಪಷ್ಟವಾಗಿ ಬಿಂಬಿಸುತ್ತವೆ. ಅವರು ಬಹು ಉನ್ನತ ನಡವಳಿಕೆಯಿಂದ ಕೂಡಿದವರಾಗಿ ಕಾಪಾಲಿಕರ ನಡವಳಿಕೆಯೊಂದಿಗೆ ಯಾವ ರೀತಿಯಲ್ಲೂ ಸಮೀಪಕ್ಕೆ ಬಾರದವರೆಂಬುದು ಸ್ಪಷ್ಟವಾಗಿಯೇ ಇದೆ.[೫]

ಕಾಪಾಲಿಕರ ಬಗ್ಗೆ ಅವರ ಪರವಾದ ಶಾಸನಗಳನ್ನು ಹೆಚ್ಚು ನಿರೀಕ್ಷಿಸುವಂತಿಲ್ಲ. ಅವರು ಕಾಳಾಮುಖರಂತೆ ಒಂದು ಸ್ಥಳದಲ್ಲಿ ನೆಲೆನಿಂತು ಸಮಾಜದೊಡನೆ ಬೆರೆತು ಬದುಕಿದವರಲ್ಲ. ವಿಚಿತ್ರ ಆಚರಣೆಗಳಿಂದ ಜನರು ಭೀತರಾಗಿ ದೂರವೇ ಉಳಿಯುವಂತೆ ಜೀವಿಸಿದವರು. ಈ ಕಾರಣಗಳಿಂದ ಸಾಮಾನ್ಯವಾಗಿ ಜನರಿಂದ ದಾನದತ್ತಿಗಳನ್ನು ಪಡೆಯುವ ಸಾಧ್ಯತೆಗಳು ಕಡಮೆ. ಆದ್ದರಿಂದ ಇವರ ವಿಷಯವನ್ನು ಹೇಳುವ ಶಾಸನಗಳು ಅತಿ ವಿರಳ. ಅನ್ಯ ಧರ್ಮೀಯರು, ಪಂಥದವರು ಅವರ ಬಗ್ಗೆ ಟೀಕಿಸುವ ಇಲ್ಲವೇ ಹೀಯಾಳಿಸುವ ಉದ್ದೇಶಗಳಿಂದ ಮಾತ್ರ ಪ್ರಸ್ತಾಪ ಮಾಡಿದ್ದಾರೆ. ಅಂತಹ ಉಲ್ಲೇಖಗಳಿಂದ ಕಾಪಾಲಿಕರ ಚಿತ್ರವನ್ನು ಪಡೆಯುವುದು ಸಾಧುವಾದುದಲ್ಲ. ಆದರೆ ಅವರ ಬಗ್ಗೆ ದೊರೆಯುವ ಉಲ್ಲೇಖಗಳೇ ಆ ಸ್ವರೂಪದವಾಗಿವೆ.

---

೧. ಜೆ. ರುದ್ರಪ್ಪ : ಪೂರ್ವೋಕ್ತ, ಪು. ೨,೩ ಮತ್ತು ೩೦೯-೧೦.

೨. R. G. Bhandarkar : Vaisnavism Saivism and Minor Religious systems, ಪು. ೧೨೮.

೩. S.C. Nandimutt : ಪೂರ್ವೋಕ್ತ, ಪು. ೮.
S. N. Dasgupta : ಪೂರ್ವೋಕ್ತ, ಪು. ೮೮.

೪. David N. Lorenzen : ಪೂರ್ವೋಕ್ತ, ಪು. ೬.

೫. ಆರ್. ರಾಮರಾವ್ : ಪೂರ್ವೋಕ್ತ ಲೇಖನ - ಕ್ಯುಜೆಎಂಎಸ್ XIV-೨, ಪು. ೨೦೯.

ಬೇಲೂರು ತಾಲ್ಲೂಕಿನ ಲಕ್ಕುಂದದ ಒಂದು ಶಾಸನದಲ್ಲಿ 'ನೆಕುನಾಡ ನೆಕುಂದದ ಕಪಾಳೇಶ್ವರ ದೇವರ ಮೂಲಿಗ ಬ್ರಹ್ಮಾದಿರಾಯ ಬ್ರಹ್ಮಕುಳತಿಳಕ ಮಲ್ಲಿದೇವ ಮಾಡಿಸಿದ ವಾಸಂತಿಕಾದೇವಿಶ್ರೀ' ಎಂಬ ಉಲ್ಲೇಖ ಬರುತ್ತದೆ.[೧] ಶ್ರವಣಬೆಳಗೊಳದ ೧೦ನೆಯ ಶತಮಾನದ ಶಾಸನವೊಂದು ಬಂಕಾಪುರದಲ್ಲಿ ಗಂಗರಾಜ ಮಾರಸಿಂಹ ಮೂರುದಿನ ಆರಾಧನವಿಧಿಯಿಂದ ಅಜಿತಸೇನ ಭಟ್ಟಾರಕರ ಪಾದದಲ್ಲಿ ಕುಳಿತು ಮರಣ ಹೊಂದಿದ ವಿಷಯವನ್ನು ಹೇಳುತ್ತದೆ. ಗಂಗರಾಜ ಪಲ್ಲವರ ಮೇಲೆ ಪ್ರದರ್ಶಿಸಿದ ಶೌರ್ಯವನ್ನು ಹೊಗಳುತ್ತಾ 'ಕಾಪಾಲಿಕರು ಹಸಿತಲೆಗಳನ್ನು ಪೋಣಿಸುತ್ತಿದ್ದಂತೆ' ಎಂಬ ಹೋಲಿಕೆ ಬರುತ್ತದೆ.[೨] ಇದು ಒಂದು ಸಾಂದರ್ಭಿಕ ಹೋಲಿಕೆಯಾಗಿ ಬಂದಿದ್ದರೂ ಅವರು ಬೀಭತ್ಸ ಆಚರಣೆಯವರು ಎಂಬುದನ್ನು ಅದು ಸೂಚಿಸುತ್ತದೆ. ಶ್ರವಣಬೆಳಗೊಳದ ಇನ್ನೊಂದು ಶಾಸನ ಮಲ್ಲಿಷೇಣನಿಗಿಂತ ಮೊದಲಿನ ಕೊಂಡಕುಂದ ಶಾಖೆಯ ಗುರುಗಳನ್ನು ಕುರಿತು ಹೇಳುತ್ತದೆ. ವಿಮಲಚಂದ್ರಮುನೀಂದ್ರನು ಸಾರ್ವಜನಿಕವಾಗಿ ಒಂದು ಸೂಚನೆಯನ್ನು ತಗುಲಿಹಾಕಿದ್ದನಂತೆ. ಆ ಸವಾಲಿನ ಸೂಚನೆ ಶೈವರನ್ನು, ಪಾಶುಪತರನ್ನು, ಬೌದ್ಧರನ್ನು, ಕಾಪಾಲಿಕರನ್ನು ಮತ್ತು ಕಾಪಿಲರನ್ನು ಕುರಿತದ್ದು.[೩] ಇನ್ನೊಂದು ಶಾಸನವೂ ಸಂಸ್ಕೃತ ಭಾಷೆಯಲ್ಲಿ ರಚಿತವಾದ ಜೈನಪರವಾದ ಶಾಸನ. ನಂದಿಸಂಘದ ಚಂದ್ರಪ್ರಭಮುನಿ ಸಲ್ಲೇಖನವ್ರತದಿಂದ ಮರಣ ಹೊಂದಿದಾಗ ಆ ಮುನಿಯ ಗುರುಪರಂಪರೆಯನ್ನು ನಿರೂಪಿಸುತ್ತದೆ. ವಿಮಲಚಂದ್ರನೆಂಬ ದಿಗಂಬರ ಮುನಿ ಅನೇಕ ರಾಜರು, ಅತ್ಯುತ್ತಮ ಗಜಗಳು, ಅಶ್ವಗಳು ಸದಾ ಹಾದು ಹೋಗುವ ಮುಖ್ಯದ್ವಾರದ ಮೇಲೆ ಉನ್ನತ ಮತ್ತು ಹೃದ್ಯ ಭಾಷೆಯಲ್ಲಿ ತನ್ನ ಎದುರಾಳಿಗಳಾದ ದುಷ್ಟ ಮನಸ್ಸನ್ನುಳ್ಳ ಶೈವ, ಪಾಶುಪತ, ತಥಾಗತ ಅನುಯಾಯಿಗಳಿಗೆ, ಕಾಪಾಲಿಕರಿಗೆ ಮತ್ತು ಕಾಪಿಲರಿಗೆ ಭಯಂಕರವಾಗಿರುವಂತೆ ಉದ್ದೇಶಿಸಿ ಸೂಚನೆಯನ್ನು ಹಾಕಿದ್ದಾನೆ.[೪] ಮೇಲಿನ ಎರಡೂ ಶಾಸನಗಳಲ್ಲಿ ಕಾಪಾಲಿಕರನ್ನು ಎದುರಾಳಿ ಮತಗಳಾಗಿ ಪರಿಗಣಿಸಲಾಗಿದೆ. ಅಲ್ಲದೆ ಎರಡೂ ಶಾಸನೋಕ್ತ ವಿಮಲಚಂದ್ರಯತಿ ಒಬ್ಬನೇ ವ್ಯಕ್ತಿ ಆಗಿದ್ದಾನೆ. ಅದೇ ಭಾಗದಲ್ಲಿ ಬರುವ ಕಾಪಿಲರು ಕಪಿಲ ಮುನಿಯಿಂದ ರಚಿತವಾದ ಸಾಂಖ್ಯ ತತ್ತ್ವಸಿದ್ಧಾಂತವನ್ನು ಅನುಸರಿಸುವವರಾಗಿದ್ದಾರೆ.

ಕಾಪಾಲಿಕರು ಸೋಮಸಿದ್ಧಾಂತವನ್ನು ಅನುಸರಿಸುತ್ತಿದ್ದರು. ಸೋಮಸಿದ್ಧಾಂತ ಕಾಪಾಲಿಕರ ತತ್ವ ಗ್ರಂಥವೆಂದು ತಿರುವಾರ್‍ರಿಯೂರಿನ ಶಾಸನದಿಂದ ಅಭಿಪ್ರಾಯಪಡಲಾಗಿದೆ.[೫] ಯಶಸ್ತಿಲಕ ಚಂಪೂವಿನಲ್ಲಿ ತಮ್ಮ ದೇಹದ ಮಾಂಸವನ್ನೇ ಮಾರುತ್ತಿದ್ದ ಮಹಾವ್ರತಿಗಳ ಪ್ರಸ್ತಾಪವಿದೆ. ಇದೇ ರೀತಿ ಮಾಲತೀಮಾಧವ, ನಳಚಂಪು, ಕಥಾಸರಿತ್ಸಾಗರ, ಕಾದಂಬರಿ, ಹ್ಯುಯೆನ್‌ತ್ಸಾಂಗನ ಕಥನ ಮುಂತಾದ ಕೆಲವು ಕೃತಿಗಳಲ್ಲಿ ಮಹಾವ್ರತಿಗಳ ಉಲ್ಲೇಖಗಳು ಕಂಡುಬರುತ್ತವೆ.[೬] ವಚನಕಾರರಿಗೂ ಕಾಪಾಲಿಕರ ಬಗ್ಗೆ ಗೌರವ ಭಾವನೆ ಇಲ್ಲ. ಅವರನ್ನು ಅನೇಕ ಕಡೆ ಟೀಕಿಸಿದ್ದಾರೆ.[೭] ಕಾಪಾಲಿಕರ ಪ್ರಮುಖ ಚಿಹ್ನೆಗಳೆಂದರೆ ನರಕಪಾಲ ಮತ್ತು ಖಟ್ವಾಂಗ. ಸಾಮಾನ್ಯವಾಗಿ ಅವರು ನರಕಪಾಲದಲ್ಲಿ ಭಿಕ್ಷೆಯನ್ನು ಬೇಡುತ್ತಿದ್ದಂತೆ ಕಂಡುಬರುತ್ತದೆ. ಮಹಾವ್ರತ ಮಾಡುವವನು ಬ್ರಾಹ್ಮಣ ಹತ್ಯೆ ಮಾಡಿದವನಾಗಿದ್ದು ಅದರ ಪಾಪ ಪರಿಹಾರಕ್ಕಾಗಿ ಹನ್ನೆರಡು ವರ್ಷ ಕಠಿಣ ವ್ರತವನ್ನು ವನವಾಸಿಯಾಗಿದ್ದು ಆಚರಿಸಬೇಕು. ಕಾಪಾಲಿಕರಿಗೂ ಇವರಿಗೂ ಇರುವ ಸಾಮ್ಯಾಂಶ ಮೂಲತಃ ಬ್ರಹ್ಮನ ತಲೆಯನ್ನು ಕತ್ತರಿಸಿದ ಶಿವನ ಪ್ರಾಯಶ್ಚಿತ್ತದ ಮೂಲಕತೆಯಲ್ಲಿ ಇದ್ದಂತಿದೆ.[೮]

---

೧. ಎಂಎಆರ್ ೧೯೪೦ ಬೇಲೂರು ೨೫ ಕ್ರಿ.ಶ. ೯೫೪.
೨. (ಮೈ) ಎಕ II ಶ್ರವಣಬೆಳಗೊಳ ೬೪ ಕ್ರಿ.ಶ. ೧೦ ಶ.ಮಾ.
೩. (ಮೈ) ಎಕ II ಶ್ರವಣಬೆಳಗೊಳ ೭೭ ಕ್ರಿ.ಶ. ೧೧೨೯.
೪. (ಮೈ) ಎಕ V ತಿ.ನರಸೀಪುರ ೩೮ ಕ್ರಿ.ಶ. ೧೧೮೩.
೫. David N. Lorenzen : ಪೂರ್ವೋಕ್ತ ಪು. ೩೯೨.
೬. ಸಂಸ್ಕೃತ ಗ್ರಂಥಗಳ ಉಲ್ಲೇಖಗಳಿಗೆ ನೋಡಿ : ಎಸ್. ವಿದ್ಯಾಶಂಕರ, ವಚನಾನುಶೀಲನ, ಪು. ೧೩೩-೧೩೬.
೭. ಪಿ.ವಿ. ನಾರಾಯಣ : ಪೂರ್ವೋಕ್ತ, ಪು. ೪೬೧.
೮. David N. Lorenzen : ಪೂರ್ವೋಕ್ತ ಪು. ೭೭.

ಕಾಪಾಲಿಕರು ಶಿವನ ಉಗ್ರರೂಪವಾದ ಭೈರವನನ್ನು ಆರಾಧಿಸುತ್ತಿದ್ದರು. ಕರ್ನಾಟಕದಲ್ಲಿ ಕೆಲವು ಭೈರವ ದೇವಾಲಯಗಳು ಇದ್ದುದಕ್ಕೆ ಶಾಸನಗಳು ಆಧಾರವನ್ನು ಒದಗಿಸುತ್ತವೆ.[೧] ಆದರೆ ಆ ಎಲ್ಲವೂ ಕಾಪಾಲಿಕರವು ಎಂದು ಹೇಳಲು ಸಾಧ್ಯವಿಲ್ಲ. ಒಂದು ಶಾಸನ, ಸಿಂಗಯ ಹೆಗ್ಗಡೆಯು 'ಕಂನೇಶ್ವರ ಭೈರವ ಗೃಹಮನೆಗಳ್ದೂರಿಂದೆ ಪೊರಗೆಯೂರೊಳ್ ಚೆಂನಮರೆ ಮಲ್ಲಿಕಾರ್ಜುನಕಂ ನೆರೆ ಮಾಡಿಸಿದನೊಸೆದು' ಎಂದು ಹೇಳುತ್ತದೆ.[೨] ಊರ ಒಳಗಿನ ಚನ್ನಮಲ್ಲಿಕಾರ್ಜುನ ದೇವಾಲಯ ಸಾತ್ವಿಕ ಪೂಜಾಕಾರ್ಯಗಳಿಗೂ ಊರ ಹೊರಗಿನ ಕನ್ನೇಶ್ವರ ಭೈರವ ದೇವಾಲಯ ತಾಂತ್ರಿಕ ವಾಮಾಚಾರದ ಪೂಜೆಗಳಿಗೆ ಬಳಕೆಯಾಗುತ್ತಿದ್ದಿತ್ತೆಂದು ಊಹಿಸಲು ಅವಕಾಶವಿದೆ. ತಾಂತ್ರಿಕ ಪೂಜೆಯ ಅಂಗಗಳಲ್ಲಿ ಒಂದಾದ ಬಲಿ ಮುಂತಾದವು ಜನರ ಕಣ್ಣಿಂದ ದೂರವಾಗಿ ನಡೆಯಲಿ ಎಂಬ ಉದ್ದೇಶವಿರಬಹುದು. ಇದು ಬಹುಶಃ ಕಾಪಾಲಿಕರ ದೇವಾಲಯವಾಗಿರುವ ಸಾಧ್ಯತೆ ಇದೆ. ಈಗ ಉಳಿದು ಬಂದಿರುವ ಭೈರವ ದೇವಾಲಯಗಳಲ್ಲಿ ಕೆಲವಾದರೂ ಕಾಪಾಲಿಕರ ಪೂಜಾ ಮಂದಿರಗಳಾಗಿದ್ದಿರಬಹುದು.[೩] ಕಾಪಾಲಿಕರ ಕೆಲವು ಆಚರಣೆಗಳನ್ನು ಮತ್ತು ತತ್ವಗಳನ್ನು ಮುಖಬೋಳು ಸಿದ್ಧರಾಮನ (೧೮೯೬) 'ಷಟ್‌ಸ್ಥಲ ತಿಲಕ'ದಲ್ಲಿ ಮತ್ತು ಶಂಕರಾಚಾರ್ಯರ ಸೌಂದರ್ಯಲಹರೀ ಎಂಬ ಗ್ರಂಥಕ್ಕೆ ಕನ್ನಡ ಟೀಕನ್ನು ಬರೆದ ಜಕ್ಕಣಾಮಾತ್ಯನ (೧೭ ಶ. ಮಾ) ಷಟ್ಚಕ್ರ ದೀಪಿಕೆಯಲ್ಲಿ ದೊರೆಯುವ ಮಾಹಿತಿಯನ್ನು ಎಸ್. ವಿದ್ಯಾಶಂಕರ ಅವರು ಹೊರತಂದಿದ್ದಾರೆ.[೩ಎ]

ಕಾಪಾಲಿಕರದು ತಾಂತ್ರಿಕ ಪಂಥವಾದುದರಿಂದ ಪಂಚ 'ಮ' ಕಾರಗಳನ್ನು ಅನುಸರಿಸುತ್ತಿದ್ದರು. ಅವುಗಳಲ್ಲಿ ಮೊದಲ ನಾಲ್ಕು ಮಧು, ಮಾಂಸ, ಮೀನು, ಮುದ್ರಾ ಉತ್ತೇಜಕಗಳಾಗಿ ಕೊನೆಯದಾದ ಮೈಥುನಕ್ಕೆ ಅಣಿಗೊಳಿಸುತ್ತಿದ್ದವು.[೪] ಶ್ಲೇಷ್ಮ, ಮಲ ಮೂತ್ರ ಸೇವನೆ, ಬೂದಿಯ ಮೇಲೆ ಮಲಗುವಿಕೆ, ತಲೆಬುರುಡೆ ಎಲುಬುಧಾರಣೆ, ತಲೆಯೋಡುಗಳಲ್ಲಿ ಆಹಾರ ಸೇವನೆ, ಸ್ಮಶಾನವಾಸ ಇಂಥ ಬೀಭತ್ಸ ಆಚರಣೆಗಳು, ಜನರನ್ನು ಇವರಿಂದ ದೂರವೇ ಇಟ್ಟಿರುತ್ತಿದ್ದವೆಂದು ಕಾಣುತ್ತದೆ.[೫] ಸಾಮಾನ್ಯವಾಗಿ ಕಾಪಾಲಿಕರು, ಮಹಾವ್ರತಿಗಳು ಒಂದೇ ಪಂಥಕ್ಕೆ ಸೇರಿದವರೆಂದು ಭಾವಿಸಲಾಗಿದೆಯಾದರೂ ಚನ್ನ ಬಸವಣ್ಣನ ವಚನದಲ್ಲಿ ಅವೆರಡೂ ಬೇರೆ ಎಂಬ ಸೂಚನೆ ಇದೆ. ಆದರೂ ಆ ಎರಡು ಪಂಥಗಳಲ್ಲಿ ಅಂಥ ಮಹತ್ವದ ವ್ಯತ್ಯಾಸವಿರಲಿಲ್ಲವೆಂದು ತಿಳಿಯಬಹುದು.[೬] ಕಾಪಾಲಿಕರ ಪಂಥವು ಹದಿನಾಲ್ಕನೆಯ ಶತಮಾನದ ಹೊತ್ತಿಗೆ ಕಣ್ಮರೆಯಾಗಿ ಶೈವ ಪಂಥದ ತಾಂತ್ರಿಕ ಶಾಖೆಗಳಾದ ಕಾನಫತ ಮತ್ತು ಅಘೋರಿಗಳಲ್ಲಿ ಲೀನವಾಗಿ ಹೋಗಿರಬೇಕು.[೭]

**ನಾಥಪಂಥ**

ಕರ್ನಾಟಕದಲ್ಲಿ ನಾಥಪಂಥ ಸ್ವಲ್ಪಮಟ್ಟಿಗೆ ಪ್ರಚಾರದಲ್ಲಿ ಇದ್ದಿತ್ತೆಂದು ತಿಳಿದು ಬರುತ್ತದೆ. ಆದರೆ ಶಾಸನಾಧಾರಗಳು ತುಂಬ ಕಡಮೆ ಎಂದು ಹೇಳಬಹುದು. ಜಗಲೂರು ತಾಲ್ಲೂಕಿನ ಕಲ್ಲೇದೇವಪುರದ ಶಾಸನ[೮] ಆ ದೃಷ್ಟಿಯಿಂದ

---

೧. ಎಸ್‌ಐಐ IX(i) ರಾಯದುರ್ಗ ೨೯೮ ಕ್ರಿ.ಶ. ೧೧೯೬; (ಮೈ) ಎಕ VI ಪಾಂಡವಪುರ ೨೩೫, ೧೪ ಶ.ಮಾ. ಎಸ್‌ಐಐ XV ನವಲಗುಂದ ೬೧೧ ಕ್ರಿ.ಶ. ೧೨೩೧; ಎಸ್‌ಐಐ XV ಬಾದಾಮಿ ೬೩೨ ಕ್ರಿ.ಶ. ೧೩ ಶ.ಮಾ.

೨. ಎಸ್‌ಐಐ IX(ii) ರಾಯದುರ್ಗ ೨೯೮ ಕ್ರಿ.ಶ. ೧೧೯೬.

೩. ಎಂ. ಚಿದಾನಂದ ಮೂರ್ತಿ : ಸಂಶೋಧನ ತರಂಗ ಭಾಗ-೨, ಪು. ೨೫೯.

೩ಎ. ಎಸ್. ವಿದ್ಯಾಶಂಕರ : 'ಕಾಪಾಲಿಕರು' ಕನ್ನಡ ಅಧ್ಯಯನ ಸಂ. ಸಂ. ಮತ್ತು ೨ ಪು. ೧೦೭-೧೦೮.

೪. David N. Lorenzen : ಪೂರ್ವೋಕ್ತ ಪು. ೮೯.

೫. ಅವರ ಷಣ್ಮುದ್ರಿಕೆಗಳಿಗೆ, ಬೀಭತ್ಸ ಆಚರಣೆಗಳಿಗೆ ನೋಡಿ: ಎಂ.ಆರ್. ಶ್ರೀನಿವಾಸ ಮೂರ್ತಿ : ಭಕ್ತಿ ಭಂಡಾರಿ ಬಸವಣ್ಣನವರು, ಪು. ೧೭೧.

೬. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೬೦.

೭. David N. Lorenzen : ಪೂರ್ವೋಕ್ತ, ಪು. ೫೩.

೮. (ಮೈ) ಎಕ XI ಜಗಲೂರು ೩೦ ಕ್ರಿ.ಶ. ೧೨೭೯.

ಪ್ರಮುಖವಾದುದಾಗಿದೆ. ದೇವಗಿರಿ ಯಾದವ ರಾಮಚಂದ್ರನಿಗೆ ಪ್ರತ್ಯೋತ್ಸವವಾದ ಸಮಯದಲ್ಲಿ ಅವನ ಪರಮ ವಿಶ್ವಾಸಿ ಮೊಂಡೆರಾಯ ರಾಮಚಂದ್ರನ ಅಪ್ಪಣೆಯಂತೆ ಕೊಟ್ಟೂರನಾಡಿನಲ್ಲಿ ಕಲಿದೇವರ ಆಸ್ಥಾನಿಕರಿಗೆ ದತ್ತಿಯನ್ನು ಬಿಟ್ಟ ವಿಷಯವನ್ನು ಹೇಳುವಾಗ, ದತ್ತಿ ಸ್ವೀಕರಿಸಿದ ಶಿವಯೋಗಿ ಚಕ್ರವರ್ತಿ ಪ್ರಸಾದ ದೇವರನ್ನು ವಿಶೇಷವಾಗಿ ಕೀರ್ತಿಸಲಾಗಿದೆ. ಅವನನ್ನು ಕೀರ್ತಿಸುವಾಗ ನಾಥಪಂಥದ ಯೋಗಿಗಳ ಹೆಸರುಗಳು ಬಂದಿದೆ. 'ಆದಿಗದ ಎದುದುನಾಥ। ಚತುರರಗಿ ನಾಥ। ಗೋರಖನಾಥ।ವಿಸ್ತರಾ ದೇವಿ. ನಾಥ। ಕಾಹಳಿನಾವಿ। ಸುಪ್ರಾಣನಾಥ। ಲೋಕನಾಥ। ನರನಾಥ। ಪಂಥಮಾನ ಘೋಷನುಂ।' ಶಾಸನ ಪಾಠ ಅಲ್ಲಲ್ಲಿ ಶುದ್ಧವಾಗಿಲ್ಲದಿದ್ದರೂ ನಾಥ ಪಂಥದ ಯತಿಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಇದೇ ಶಾಸನದಲ್ಲಿ 'ಚೇರ ಚೋಳ ನಂಬಿ ಸಂಬಿ ಚಿಕ್ಕ ಕಕ್ಕ ಚೆಂನ ಹೊಂನ ಬಂಕ ಬಸವರಾಜ ಭೋಜಾದಿ ಮರ್ತ್ಯಲೋಕದ ಮಹಾಗಣಾಚಾರ' ಎಂದು ಬರುವುದನ್ನು ಗಮನಿಸಿ ಮತ್ತು ಕೆಲವು ಅನ್ಯ ಆಧಾರಗಳನ್ನು ನೀಡಿ ವೀರಶೈವ ಧರ್ಮದ ಬಸವಣ್ಣ, ಅಲ್ಲಮ ಪ್ರಭು ಮತ್ತು ಸಿದ್ಧರಾಮರು ನಾಥ ಸಂಪ್ರದಾಯಕ್ಕೆ ಸೇರಿದವರೆಂದು ಕಪಟರಾಳ ಕೃಷ್ಣರಾವ್ ಅಭಿಪ್ರಾಯ ಪಡುತ್ತಾರೆ.[೧] ಆದರ ಈ ಆಭಿಪ್ರಾಯದ ಖಚಿತತೆಗೆ ಅಧಿಕ ಆಧಾರಗಳ ಕೊರತೆ ಇದೆ. ವೀರಶೈವರು ಇತರ ಎಲ್ಲ ಶೈವ ಸಂಪ್ರದಾಯಗಳಿಂದ ಅನೇಕ ಅಂಶಗಳನ್ನು ಪಡೆದಿರುವುದರಿಂದ ಶರಣರ ವಚನಗಳಲ್ಲಿ ಅವುಗಳ ಉಲ್ಲೇಖಗಳನ್ನು ಕಾಣಬಹುದು. ಆ ಕಾರಣಕ್ಕಾಗಿ ಎಲ್ಲರನ್ನೂ ಆ ಸಂಪ್ರದಾಯದವರೆಂದು ಹೇಳಲಾಗುವುದಿಲ್ಲ.[೨] ಅಲ್ಲದೆ ಅನ್ಯ ಶೈವ ಪಂಥದವರೂ, ವೀರಶೈವ ಧರ್ಮದ ಪ್ರಮುಖ ವ್ಯಕ್ತಿಗಳಾದ ಬಸವಣ್ಣ, ಅಲ್ಲಮ ಪ್ರಭು ಮುಂತಾದವರನ್ನು ತಮ್ಮ ಆವರಣಗಳಲ್ಲಿ ಸ್ಮರಿಸಿರುವುದು ಕಂಡುಬರುತ್ತದೆ.

ಅಲ್ಲಮಪ್ರಭು ಶ್ರೀಶೈಲಕ್ಕೆ ಹೋಗುವ ಮಾರ್ಗದಲ್ಲಿ ಗೋರಕ್ಷನೆಂಬ ಕಾಪಾಲಿಕ ಯೋಗಿಯೊಡನೆ ಸಂವಾದ ಮಾಡಿ ಗೆದ್ದ ವಿಷಯವನ್ನು ಪ್ರಭುಲಿಂಗಲೀಲೆ ತಿಳಿಸುತ್ತದೆ. ಆ ಕೃತಿಯ ಕಾಲಕ್ಕಾಗಲೇ ಕಾಪಾಲಿಕ ಮತ್ತು ನಾಥಪಂಥದವರು ಅಭಿನ್ನರಾಗಿ ಪರಿಗಣಿತವಾಗುತ್ತಿದ್ದರೆಂದು ಕಾಣುತ್ತದೆ.[೩] ನಾಥಪಂಥದವರು ರಹಸ್ಯ ಸಿದ್ಧಿಗಳನ್ನು ಪಡೆಯುತ್ತಿದ್ದರು. ಅದಕ್ಕಾಗಿ ಅವರು ದೇಹವನ್ನು ಅತ್ಯಂತ ಬಲಿಷ್ಠಗೊಳಿಸಲು ಪ್ರಯತ್ನಿಸುತ್ತಿದ್ದರು. ಅದಕ್ಕಾಗಿ ಪಾದರಸ ಮತ್ತು ಅಭ್ರಕಗಳಿಂದ ತಯಾರಿಸಿದ ಗುಳಿಗೆಗಳನ್ನು ತೆಗೆದುಕೊಳ್ಳುತ್ತಿದ್ದರು. ಅಂಥವರನ್ನು ಘುಟಿಕಾಸಿದ್ಧರೆಂದು ಕರೆಯುತ್ತಿದ್ದರು. ವಚನಕಾರರು ಇವರನ್ನು ವಿಡಂಬಿಸಿರುವುದುಂಟು.[೪]

ಕರ್ನಾಟಕದಲ್ಲಿ ನಾಥಪಂಥದ ಕೇಂದ್ರಗಳು ಕೆಲವು ಇದ್ದವೆಂಬುದು ಖಚಿತವಾಗಿದೆ. ಬೌದ್ಧ ವಜ್ರಯಾನದ ಕೇಂದ್ರವಾಗಿದ್ದಿರಬಹುದಾದ ಮಂಗಳೂರಿನ ಬಳಿಯ ಕದ್ರಿಗುಡ್ಡಗಳು ಕ್ರಮೇಣ ನಾಥ ಸಂಪ್ರದಾಯದ ಪಾಲಾಗಿರುವುದು ಕಂಡು ಬರುತ್ತದೆ. ಅಲ್ಲಿ ನಾಥಪಂಥದ ಮತ್ಸ್ಯೇಂದ್ರ, ಗೋರಕ್ಷ ಮತ್ತು ಚೌರಂಗಿನಾಥರ ಶಿಲಾವಿಗ್ರಹಗಳು ಸ್ಥಾಪಿತವಾಗಿವೆ.[೫]

---

೧. ಶಾಸನದಲ್ಲಿ ಬರುವ ಕಕ್ಷ ಕಂಠ ಕರ ವಕ್ಷೋತ್ತಮಾಂಗ ಲಿಂಗೈಕಸಂಗನುಂ ಎನ್ನುವುದನ್ನು ಮತ್ತು ಶಾಸನೋಕ್ತ ಶಿವಯೋಗಿಯ ಸಂಪ್ರದಾಯಗಳನ್ನು ಗಮನಿಸಿ ಬಸವಣ್ಣ ನಾಥ ಸಂಪ್ರದಾಯದವನೆಂದು ಅಭಿಪ್ರಾಯಪಡುತ್ತಾರೆ. ಹಠಯೋಗ ಪ್ರದೀಪಿಕೆಯಲ್ಲಿ ಅಲ್ಲಮಪ್ರಭುವಿನ ಹೆಸರು ಉಕ್ತವಾಗಿರುವುದರಿಂದ ಮತ್ತು ಪ್ರಭುಲಿಂಗ ಲೀಲೆಯಲ್ಲಿ ಗೋರಕ್ಷನು ಕಾಪಾಲಿಕನೆಂದು ಉಕ್ತವಾಗಿದ್ದರೂ ಅವನಿಗಿಂತಲೂ ಅಧಿಕ ಸಿದ್ಧಿ ಪಡೆದವನಾದ್ದರಿಂದ ಅವನೂ ನಾಥಪಂಥದವನೆಂದು ಭಾವಿಸುತ್ತಾರೆ. ಸಿದ್ಧರಾಮನ ಒಂದು ವಚನದಲ್ಲಿ ಜಂಗಮರನ್ನು ಕಂಥೆ, ಭಸ್ಮ, ರುದ್ರಾಕ್ಷಿ, ಕೌಪೀನ, ಮೇಖಲೆಗಳನ್ನು ಧರಿಸಿದವರೆಂದು ವರ್ಣಿಸಿದ್ದಾನೆ. ಅವು ನಾಥಪಂಥದ ಷಣ್ಮುದ್ರಿಕೆಗಳನ್ನು ಸೂಚಿಸುವುದರಿಂದ ಅವನೂ ನಾಥಪಂಥದವನೆಂದು ಭಾವಿಸುತ್ತಾರೆ. ವಿವರಗಳಿಗೆ ನೋಡಿ: ಕಪಟರಾಳ ಕೃಷ್ಣರಾವ್ : ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು. ೧೩೭, ೧೨೨-೨೬, ೫೨-೫೩.

೨. ಪಿ.ವಿ. ನಾರಾಯಣ : ಪೂರ್ವೋಕ್ತ, ಪು. ೪೬೩.

೩. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೬೨.

೪. ಪಿ.ವಿ. ನಾರಾಯಣ : ಪೂರ್ವೋಕ್ತ, ಪು. ೪೬೩. ಕಲ್ಲೇದೇವಪುರದ ಶಾಸನದಲ್ಲಿ 'ರಸ ರಸಾಯನ ಘುಟಿಕಾಂಜನ ಮುಖಾಂಜನ ಮೂಳಿಕಾಸಿಕಾಯ ವಸ್ತವಾದ. ಯ ಸ್ತಂಭವೊಡ್ಡಿಮರ ಮಹೇಂದ್ರಜಾಲ ಹರಮೇಖಲಾ...' ಎಂದು ಬರುತ್ತದೆ.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೬೧.

ಇದೇ ರೀತಿಯಲ್ಲಿ ಆದಿಚುಂಚನಗಿರಿಯನ್ನು ಈಗ ಒಕ್ಕಲಿಗರು ತಮ್ಮ ಕೇಂದ್ರವೆಂದು ಭಾವಿಸಿದ್ದಾರೆ. ಅದೂ ಕೂಡ ನಾಥ ಸಂಪ್ರದಾಯದವರ ಒಂದು ಕೇಂದ್ರವಾಗಿದ್ದಂತಿದೆ. ಏಕೆಂದರೆ ಆದಿಚುಂಚನಗಿರಿ ಮಹಾತ್ಮ್ಯದಲ್ಲಿ ಬರುವಂತೆ ಅದನ್ನು ಕಾಪಾಲಿ ಮಠವೆಂದು ಕರೆಯಲಾಗಿದೆ. ಆ ಗ್ರಂಥದಲ್ಲಿ ಬರುವ ನವನಾಥರೆಲ್ಲ ಕಾಪಾಲಿಕರೇ ಆಗಿದ್ದಾರೆ. ಈಗಿನ ಮಠಾಧಿಪತಿಗಳು ಕೂಡ ತಮ್ಮ ಹೆಸರನ್ನು 'ನಾಥ' ಎಂದೇ ಕೊನೆಯಾಗಿಸಿಕೊಳ್ಳುತ್ತಾರೆ. ಆದಿಚುಂಚನಗಿರಿಯಲ್ಲಿ ದೊರೆತಿರುವ ಹದಿನೇಳನೆಯ ಶತಮಾನದ ಶಾಸನವೂ ಅದು ನಾಥಪಂಥದ ಕೇಂದ್ರವಾಗಿದ್ದಿತೆಂಬುದನ್ನು ಸೂಚಿಸುತ್ತದೆ.[೧]

**ಭೈರವರು:**

ಶಿವನ ಉಗ್ರರೂಪವನ್ನು ಆರಾಧಿಸುವ ಪಂಥಗಳಲ್ಲಿ ಭೈರವಪಂಥವೂ ಒಂದಾಗಿದೆ. ಭೈರವ ದೇವಾಲಯಗಳು, ಭೈರವ ವಿಗ್ರಹಗಳು ಆರಾಧನೆಗೊಳ್ಳುತ್ತಿದ್ದುದನ್ನು ಕೆಲವು ಶಾಸನಗಳು ಖಚಿತಪಡಿಸುತ್ತವೆ. ಅಂಥ ಕೆಲವು ಉದಾಹರಣೆಗಳನ್ನು ಹಿಂದೆಯೇ ಗಮನಿಸಲಾಗಿದೆ.[೨] ಕರ್ನಾಟಕದ ಅನೇಕ ಕಡೆಗಳಲ್ಲಿರುವ ಭೈರವ ವಿಗ್ರಹ, ಭೈರವ ಪಾದದ ಶಿಲ್ಪ, ದೇವಾಲಯಗಳನ್ನು ನೋಡಿದರೆ ಅವುಗಳ ಕೆತ್ತನೆ, ಸ್ಥಾಪನೆ ನಿರ್ಮಾಣಗಳು ಕಲ್ಯಾಣ ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ ಕಾಲದಲ್ಲಿ ಹೆಚ್ಚು ಆದಂತೆ ತೋರುತ್ತದೆ. ಚಿತ್ರದುರ್ಗ ಬೆಟ್ಟಗಳ ಪರಿಸರದಲ್ಲೂ ಈ ಪಂಥ ಸಾಕಷ್ಟು ಕಾಲ ಬಾಳಿದ್ದಂತೆ ಮತ್ತು ಪ್ರಭಾವವನ್ನು ಹೊಂದಿದ್ದಂತೆ ಕಾಣಿಸುತ್ತದೆ. ಚಿತ್ರದುರ್ಗದ ಹುಲಿಗೊಂದಿ (ಚಂದ್ರವಳ್ಳಿ) ಪ್ರದೇಶದಲ್ಲಿ ಒಂದು ಭೈರವ ದೇವಾಲಯವಿದೆ, ಈಗಲೂ ಇಲ್ಲಿ ಪೂಜೆ ಉತ್ಸವ ಹರಕೆ ನಡೆಯುತ್ತದೆ. ಇದು ಶಿಲ್ಪದ ದೃಷ್ಟಿಯಿಂದ ಕ್ರಿ.ಶ. ೧೩೦೦ ರ ಅವಧಿಯದೆಂದು ಎಂ. ಎಚ್. ಕೃಷ್ಣ ಅಭಿಪ್ರಾಯಪಟ್ಟಿದ್ದಾರೆ. ಈ ದೇವಾಲಯ ಮತ್ತು ಪರಿಸರದ ಶಿಲ್ಪ, ಬಲಿಕಲ್ಲುಗಳು, ಮಾನವ ಬಲಿ, ಪ್ರಾಣಬಲಿ ಶಿಲ್ಪಗಳು ಗಮನಾರ್ಹವಾಗಿವೆ. ಇಂಥ ಇನ್ನೂ ಅನೇಕ ಮಧ್ಯಕಾಲೀನ ಶಿಲ್ಪ ಮತ್ತು ವಿಗ್ರಹ ಮುಂತಾದವುಗಳನ್ನು ವಿಶೇಷವಾಗಿ ಬಿ. ರಾಜಶೇಖರಪ್ಪ ಅವರು ಗುರುತಿಸಿದ್ದಾರೆ.[೩] ಎರೆಕಟ್ಟೆಯ ಒಂದು ಶಾಸನದಲ್ಲಿ ಅನೇಕ ಪ್ರಮುಖರು ಸೇರಿ ಗಂಠೆಯ ಬೋಳಂಗೆ ದಾನಮಾಡಿದ ಸಂದರ್ಭದ ಸಾಕ್ಷಿಗಳಲ್ಲಿ ಶ್ರೀಗೊಂದಿಯ ಭಯಿರವ, ಶ್ರೀ ಕಪ್ಪನಾಥ ಭಯಿರವ... ಶ್ರೀ ಭಯಿರವ ಎಂದು ಬರುತ್ತದೆ.[೪] ದೊರೆತಿರುವ ಉಲ್ಲೇಖಗಳಿಂದ ಮಧ್ಯಕಾಲೀನಯುಗದಲ್ಲಿ ಭೈರವ ಪಂಥ ಪ್ರಚಲಿತವಾಗಿದ್ದಿತೆಂದು ಖಚಿತವಾಗಿ ಗುರುತಿಸಬಹುದು. ಬ್ರಹ್ಮಶಿವನು ಸಮಯ ಪರೀಕ್ಷೆಯಲ್ಲಿ ಅರವತ್ನಾಲ್ಕು ಭೈರವರನ್ನು, ಅರವತ್ನಾಲ್ಕು ಯೋಗಿನಿಯರನ್ನು ಉಲ್ಲೇಖಿಸಿದ್ದಾನೆ.[೫] ಈ ಪಂಥದ ಅಧ್ಯಯನ ವ್ಯಾಪಕ ಕ್ಷೇತ್ರಕಾರ್ಯದೊಂದಿಗೆ ಸಂಶೋಧನೆಯನ್ನು ಬಯಸುತ್ತದೆ.

---

೧. ಅದೇ, ಪು. ೨೬೩-೬೪.

೨. (ಮೈ) ಎಕ VI ಪಾಂಡವಪುರ ೨೩೫ ಕ್ರಿ.ಶ. ೧೪ ಶ.ಮಾ.; ಎಸ್‌ಐಐ XV ಬಾದಾಮಿ ೬೩೨ ಕ್ರಿ.ಶ. ೧೩ ಶ.ಮಾ.; ಎಸ್‌ಐಐ XV ನವಲಗುಂದ ೬೧೧ ಕ್ರಿ.ಶ. ೧೨೩೧.

೩. ಬಿ. ರಾಜಶೇಖರಪ್ಪ : ಇತಿಹಾಸ ಕಥನ ಪು. ೫೮, ೫೯.

೪. (ಮೈ) ಎಕ XVI ಚಿಕ್ಕನಾಯಕನಹಳ್ಳಿ ೮೭ ಕ್ರಿ.ಶ. ೧೩೪೦.

೫. ಸ.ಪ. ೮:೧೭೬.

**ಸಮಾರೋಪ:**

ಶೈವ ಧರ್ಮ ಮತ್ತು ಅದರ ಶಾಖೆಗಳ ಅಧ್ಯಯನ ತುಂಬ ಜಟಿಲವಾದ ವಿಷಯವಾಗಿದೆ. ಲಭ್ಯ ಶಾಸನ, ಸಾಹಿತ್ಯ ಸಾಮಗ್ರಿಯಿಂದ ಒಂದೊಂದು ಶಾಖೆಯ ಲಕ್ಷಣಗಳನ್ನು ಖಚಿತವಾಗಿ ಪ್ರತ್ಯೇಕಿಸಿ ತೋರಿಸುವುದು ಕಠಿಣವೆಂದೇ ತೋರುತ್ತದೆ. ಶೈವ ಶಾಖೆಗಳ ವಿಂಗಡಣೆಯಲ್ಲಿ ಪ್ರಾಚೀನ ಕಾಲದಲ್ಲಿಯೇ ಸ್ವಲ್ಪಮಟ್ಟಿಗೆ ಗೊಂದಲವಿದ್ದುದನ್ನು ಈಗಾಗಲೇ ಗಮನಿಸಲಾಗಿದೆ. ಎಲ್ಲ ಶೈವ ಶಾಖೆಗಳ ಆರಾಧ್ಯದೈವ ಶಿವನೇ ಆಗಿರುವುದರಿಂದ ಒಂದೊಂದು ಶಾಖೆಯ ಆಚರಣೆಗಳ, ತತ್ವದ ಸೂಕ್ಷ್ಮ ವ್ಯತ್ಯಾಸಗಳನ್ನು ಅನ್ಯ ಧರ್ಮದವರು ಗ್ರಹಿಸುವುದು ಸ್ವಲ್ಪಮಟ್ಟಿಗೆ ಕಠಿಣವೇ ಆಗಿದ್ದಿರಬೇಕು. ಅಲ್ಲದೆ ಶೈವ ಶಾಖೆಗಳ ಪರಸ್ಪರ ಕೊಳುಕೊಡೆಗಳು, ಪ್ರಭಾವಗಳು ಆ ಸಮಸ್ಯೆಯನ್ನು ಇನ್ನೂ ಜಟಿಲವಾಗಿಸಿರಬೇಕು. ಒಟ್ಟಿನಲ್ಲಿ ಶೈವ ಧರ್ಮ ಮತ್ತು ಶೈವ ಶಾಖೆಗಳ ಅಧ್ಯಯನ ಸರ್ವ ಸಾಮಗ್ರಿಗಳ ಬೆಳಕಿನಲ್ಲಿ ಇನ್ನೂ ವ್ಯಾಪಕ ಅಭ್ಯಾಸವನ್ನು ಬಯಸುತ್ತದೆ.

# ೩. ವೀರಶೈವ ಧರ್ಮ

ಹನ್ನೆರಡನೆಯ ಶತಮಾನದಲ್ಲಿ ತೀವ್ರ ಪರಿಷ್ಕರಣಕ್ಕೆ ಒಳಗಾದ ವೀರಶೈವ ಧರ್ಮದ ಆರಂಭದ ಇತಿಹಾಸ ಅಸ್ಪಷ್ಟತೆಯಲ್ಲಿ ಅಡಗಿ ಹೋದಂತೆ ಕಂಡು ಬರುತ್ತದೆ.[೧] ಸದ್ಯದಲ್ಲಿ ಇರುವ ಆಧಾರಗಳಿಂದ ಅದರ ಉಗಮವನ್ನು ಮನದಟ್ಟಾಗುವಂತೆ ವಿವರಿಸಿ ನಿರ್ಧರಿಸುವುದು ಅಸಾಧ್ಯದ ಮಾತಾಗಿದೆ. ವೀರಶೈವದ ತತ್ವ ಉಪನಿಷತ್ತಿನಷ್ಟು ಪ್ರಾಚೀನದಲ್ಲೇ ಇರುವುದೆಂದೂ ಕಾಳಿದಾಸನ ಕೃತಿಗಳಲ್ಲಿ ಹೆಚ್ಚು ಕಡಮೆ ವ್ಯವಸ್ಥಿತರೂಪದಲ್ಲಿ ಆ ಸಿದ್ಧಾಂತಗಳು ಸೂಚ್ಯರೂಪದಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದೆಂದು ಕೆಲವು ವಿದ್ವಾಂಸರು ಭಾವಿಸಿದ್ದಾರೆ.[೨] ಇನ್ನು ಕೆಲವರು ವೇದ ಪೂರ್ವ ಹರಪ್ಪ ಮೊಹೆಂಜೊದಾರೊ ಪೂರ್ವದಲ್ಲಿಯೇ ವೀರಶೈವದ ಉಗಮವನ್ನು ಗುರುತಿಸಿದ್ದಾರೆ.[೩] ವೀರಶೈವ ಧರ್ಮದ ಕೆಲವು ಗ್ರಂಥಗಳಲ್ಲಿ ಅದರ ಉಗಮವನ್ನು ಐದು ಆಚಾರ್ಯರಿಗೆ ಅನ್ವಯಿಸಿ ಹೇಳುತ್ತಾರೆ.[೪] ಆ ಐದು ಆಚಾರ್ಯರು ಪರಮೇಶ್ವರನ ಪಂಚಮುಖಗಳಿಂದ ಉದ್ಭವಿಸಿದ ಪಂಚ ಗಣಾಧೀಶ್ವರರೆಂದೂ ಯುಗಯುಗಾಂತರಗಳಲ್ಲಿ ಬೇರೆ ಬೇರೆ ನಾಮಗಳಿಂದ ಭೂಮಿಗೆ ಅವತರಿಸಿ ವೀರಶೈವ ಮಾರ್ಗವನ್ನು ಸ್ಥಾಪಿಸಿದರೆಂದೂ ಕಲಿಯುಗದಲ್ಲಿ ಕೊಲ್ಲಿಪಾಕಿ, ವಟಕ್ಷೇತ್ರ, ಸುಧಾಕುಂಡ, ದ್ರಾಕ್ಷಾರಾಮ, ವಾರಣಾಸಿಗಳೆಂಬ ಭರತಖಂಡದ ಪ್ರಸಿದ್ಧ ಕ್ಷೇತ್ರಗಳಲ್ಲಿ ಮೂಡಿಬಂದರೆಂಬ ಪ್ರತೀತಿ ಇದೆ. ಇವರಿಗೆ ಕಲಿಯುಗದಲ್ಲಿ ರೇವಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮ, ವಿಶ್ವಾರಾಧ್ಯರೆಂದು ಹೆಸರು. ಇವರಿಂದ ಸ್ಥಾಪಿಸಲ್ಪಟ್ಟವೆಂದು ಪ್ರತೀತಿಯಿದ್ದ ಮಠಗಳು ಈಗಲೂ ಅಸ್ತಿತ್ವದಲ್ಲಿವೆ.[೫]

ಬಸವಣ್ಣನವರ ಕಾಲದಲ್ಲಿ ಪ್ರಕರ್ಷ ಸ್ಥಿತಿಯಲ್ಲಿ ವೀರಶೈವ ಧರ್ಮ ಪ್ರಕಟಗೊಂಡದ್ದರಿಂದ ಅವರನ್ನೇ ಆ ಧರ್ಮ ಸ್ಥಾಪಕರೆಂದು ಭಾವಿಸಿದ್ದುದುಂಟು.[೬] ಆದರೆ ಅವರ ವಚನಗಳಲ್ಲೇ ಆದ್ಯರ ಪ್ರಸ್ತಾಪವಿರುವುದರಿಂದ, ಅಲ್ಲದೆ ಆದ್ಯರನ್ನು ಅವರು ಗೌರವಯುತವಾಗಿ ಸ್ಮರಿಸಿರುವುದರಿಂದ ಅವರಿಗಿಂತ ಹಿಂದಿನಿಂದ ಆ ಧರ್ಮ ಇದ್ದುದು ಸ್ಪಷ್ಟವೇ ಇದೆ. ವಚನಕಾರರು ತಮ್ಮ ಅನೇಕ ವಚನಗಳಲ್ಲಿ ಸಮಕಾಲೀನ ಅನ್ಯ ಧರ್ಮಗಳನ್ನು ಟೀಕಿಸಿದ್ದಾರೆ. ಅಂತೆಯೇ ಶೈವ ಧರ್ಮದ ಶಾಖೆಗಳಾದ ಕಾಳಾಮುಖ, ಪಾಶುಪತ, ಕಾಪಾಲಿಕ ಮುಂತಾದುವನ್ನೂ ಟೀಕಿಸಿದ್ದಾರೆ. ವೀರಶೈವಧರ್ಮ ಶೈವಧರ್ಮದ ಯಾವ ಶಾಖೆಯಿಂದ

---

೧. S.C. Nanadimutt : A Hand book of Virasaivism ಪು.೨-೩.

೨. S.N.Dasgupta : History of Indian Philosophy ಸಂ V ಪು. ೪೬.

೩. ಟಿ. ಎನ್. ಮಲ್ಲಪ್ಪ : ವೀರಶೈವದ ಉಗಮ ಮತ್ತು ಪ್ರಗತಿ, ಪು.೪೮-೪೯.

೪. ಎಸ್.ಸಿ. ನಂದಿಮಠ : ಕನ್ನಡ ನಾಡಿನ ಚರಿತ್ರೆ. ಭಾಗ ೨ ಪು. ೪೧.

೫. ಅದೇ.

೬. M.R.Sakhare : History and Philosophy of Lingayaṭ Religion ಪು.೪೧೩-೧೪.

ಯಾವ ಕಾಲದಲ್ಲಿ ಕವಲೊಡೆದು ಬೆಳೆಯಿತು ಎಂಬುದನ್ನು ನಿರ್ಧರಿಸುವುದು ಸಾಧ್ಯವಾಗಿಲ್ಲ. ವೀರಶೈವವು ಬಸವಣ್ಣನವರನಂತರದ ಕಾಲದಲ್ಲಿ ಕಾಳಾಮುಖ ಮಠಗಳು ವೀರಶೈವವಾಗಿ ಪರಿವರ್ತಿತವಾಗಿರುವುದು ಕಂಡು ಬರುವುದಾದರೂ ಕಾಳಾಮುಖ ಪಾಶುಪತದಿಂದ ನೇರವಾಗಿ ಮೂಡಿ ಬಂದಿತೆಂದು ಹೇಳುವುದೂ ಸಾಧ್ಯವಿದ್ದಂತಿಲ್ಲ[೧]. ಬಸವಣ್ಣನವರ ಹಿರಿಯ ಸಮಕಾಲೀನರಾದ ಕೊಂಡಗುಳಿ ಕೇಶಿರಾಜ ಮೊದಲಾದವರ ಧರ್ಮವನ್ನು ವೀರಶೈವವೆಂದೇ ಭಾವಿಸುವುದಾದರೆ ಅದನ್ನು ಬಸವಣ್ಣ ಮೊದಲಾದವರ ವೀರಶೈವ ಧರ್ಮದ ಪೂರ್ವರೂಪವೆಂದು ಭಾವಿಸಬೇಕಾಗುತ್ತದೆ.[೨]

ವೀರಶೈವಾಚಾರಣೆಯನ್ನು ಶೈವಾಚರಣೆಯಿಂದ ಬೇರ್ಪಡಿಸುವ ಮುಖ್ಯವಾದ ಕೆಲವು ವ್ಯತ್ಯಾಸಗಳೆಂದರೆ ಅಂಗದ ಮೇಲೆ ಲಿಂಗ ಧರಿಸಿರುವುದು, ಇಷ್ಟಲಿಂಗ ಪೂಜೆ, ಷಟ್‌ಸ್ಥಲ ಮಾರ್ಗಾನುಸರಣೆಗಳು. ಇವು ಅನ್ಯ ಶೈವಮಾರ್ಗಗಳಲ್ಲಿ ಕಂಡು ಬರುವ ಅಂಶಗಳಾಗಿಲ್ಲ. ಕರ್ನಾಟಕದ ಮಧ್ಯಯುಗದಲ್ಲಿ ಅತ್ಯಂತ ಪ್ರಬಲ ಶೈವ ಶಾಖೆಯಾಗಿದ್ದ ಕಾಳಾಮುಖರಲ್ಲಿ ಲಿಂಗಧಾರಣೆ ಯಾವ ಶಾಸನದಲ್ಲಿಯೂ ಕಂಡು ಬರುವುದಿಲ್ಲ. ಅವರು ಮುಖ್ಯವಾಗಿ ಸ್ಥಾವರ ಲಿಂಗಾರಾಧಕರು. ಇನ್ನು ಹರಿಹರನ ಕೃತಿಗಳಲ್ಲಿ ವಿಶೇಷವಾಗಿ ಮಾನ್ಯರಾದ ತಮಿಳುನಾಡಿನ ಶಿವಭಕ್ತರು ವೀರಶೈವರಿಂದ ಭಿನ್ನರಾಗಿಯೇ ಕಂಡುಬರುತ್ತಾರೆ; ಅವರೂ ಮುಖ್ಯವಾಗಿ ಸ್ಥಾವರ ಲಿಂಗಾರಾಧಕರು. ಆಚರಣೆಯಲ್ಲಿ ಪರಸ್ಪರ ವಿರುದ್ಧಾಂಶಗಳು ಮೂಲಭೂತವಾಗಿ ಇದ್ದರೂ ವಚನಕಾರರು, ಕನ್ನಡ ವೀರಶೈವ ಕವಿಗಳು ಇವರನ್ನು ಮನಸಾರೆ ಸ್ತುತಿಸಿದ್ದಾರೆ. ಇವರ ಜೀವನ ಕಥನವನ್ನು ಸಂದರ್ಭೋಚಿತವಾಗಿ ಉಪಕಥೆಗಳ ರೂಪದಲ್ಲಿ ಹೇಳಿ ಇಲ್ಲವೇ ತಮ್ಮ ಕೃತಿಗೆ ಇವರ ಇಡೀ ಬದುಕನ್ನೇ ವಸ್ತುವಾಗಿಸಿಕೊಂಡಿದ್ದಾರೆ.[೩] ತಮಿಳುನಾಡಿನ ಶಿವಭಕ್ತರಿಗೂ ವೀರಶೈವರಿಗೂ ಇದ್ದ ಸಮಾನಭೂಮಿಕೆ ಎಂದರೆ ಮುಖ್ಯವಾಗಿ ಶಿವಭಕ್ತಿಯೊಂದೇ ಎಂದು ಹೇಳಬಹುದು. ಬಸವಪೂರ್ವದಲ್ಲಿ ವೀರಶೈವದ ಅಸ್ತಿತ್ವ ಮತ್ತು ಚಲನೆಯನ್ನು ಸಾಕಷ್ಟು ಗುರುತಿಸಬಹುದು.[೪] ಹಿರೇಮಲ್ಲೂರು ಈಶ್ವರನ್ ಅವರು, ಬಸವ ಪೂರ್ವಯುಗದಲ್ಲಿ ವೀರಶೈವ ಪರಿಭಾಷೆ ಬಳಕೆಯಲ್ಲಿದ್ದರೂ ಕೊಂಡಗುಳಿ ಕೇಶಿರಾಜ, ಜೇಡರ ದಾಸಿಮಯ್ಯ, ಕೆಂಭಾವಿ ಭೋಗಣ್ಣ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ ಇಂಥವರು ನಡೆಸಿದ ಪ್ರಯತ್ನಗಳು ಸಾಂಘಿಕ ಹಾಗೂ ಸಾಂಸ್ಥಿಕ ಸ್ವರೂಪವನ್ನು ಪಡೆದಿರಲಿಲ್ಲ ಮತ್ತು ಸಂಮೋಹಕ ವ್ಯಕ್ತಿತ್ವ ಇಲ್ಲದ ಅವರಿಗೆ ವೈಯಕ್ತಿಕ ಪ್ರಯತ್ನಗಳ ಮೂಲಕ ಮುಟ್ಟಬೇಕಾಗಿದ್ದ ಗುರಿಯನ್ನು ಮುಟ್ಟಲು ಸಾಧ್ಯವಾಗಲಿಲ್ಲ[೫] ಎಂದು ಅಭಿಪ್ರಾಯ ಪಡುತ್ತಾರೆ.

ಬಸವಣ್ಣನವರ ಕಾಲದಲ್ಲಿ ಅದು ಅಭೂತಪೂರ್ವ ಯಶಸ್ಸನ್ನು ಪಡೆಯಿತು. ಆ ಕಾಲದಲ್ಲಿ ಅಗತ್ಯವಾದ ಎಲ್ಲ ಸಾಂಘಿಕ ಶಕ್ತಿ ಕೂಡಿ ಬಂದಿತು. ಆ ಹಿನ್ನೆಲೆಯಲ್ಲಿ ಮೂಡಿಬಂದ ವೀರಶೈವ ಧರ್ಮದ ಮುಖವಾಣಿ ಎನ್ನಬಹುದಾದ ವಚನ ಸಾಹಿತ್ಯ

---

೧. ಪಿ. ವಿ. ನಾರಾಯಣ : ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೩೮೭.

೨. ಎಂ. ಚಿದಾನಂದ ಮೂರ್ತಿ : ವಚನ ಸಾಹಿತ್ಯ, ಪು. ೩೩.

ಬಸವಪೂರ್ವದ ವೀರಶೈವರನ್ನು ಎಂ. ಎಂ. ಕಲಬುರ್ಗಿಯವರು 'ಸಂಕ್ರಮಣ ಕಾಲದ ವೀರಶೈವ'ರೆಂದು ಕರೆದಿದ್ದಾರೆ. ಶಾಸನಗಳಲ್ಲಿ ಶಿವಶರಣರು, ಪು. ೧೦.

೩. ಎಸ್. ವಿದ್ಯಾಶಂಕರ : 'ತಮಿಳುನಾಡಿನ ಪುರಾತನರು ಹಾಗೂ ವಚನಕಾರರು' ಸಾಧನೆ ೮-೨ ಪು. ೪೦.

೪. ಎಂ. ಎಂ. ಕಲಬುರ್ಗಿ : ಕೊಂಡಗುಳಿ ಕೇಶಿರಾಜನ ಕೃತಿಗಳು, ಮುನ್ನುಡಿ ಪು. VIII-XVI. ಎಂ. ಚಿದಾನಂದ ಮೂರ್ತಿ : ಲಿಂಗಾಯತ ಅಧ್ಯಯನಗಳು ಗ್ರಂಥದ ಮೊದಲ ಎರಡು ಲೇಖನಗಳು-'ಕೊಂಡಗುಳಿ ಕೇಶಿರಾಜ 'ಮತ್ತು' ಬಸವಪೂರ್ವಯುಗದ ವಚನಕಾರರು' ಪು. ೧-೪೫. ಶಾಂತರಸ : 'ಇತರ ಶರಣರು' ಬಸವ ಮಾರ್ಗ ಪು. ೩೯-೪೯.

೫. ಹಿರೇಮಲ್ಲೂರು ಈಶ್ವರನ್ : ಲಿಂಗಾಯತ ಧರ್ಮ, ಸಂಸ್ಕೃತಿ ಮತ್ತು ಸಮಾಜ. ಪು. ೪೧.

ಆ ಧರ್ಮದ ಎಲ್ಲ ಪರಿಭಾಷೆಯನ್ನು, ಧರ್ಮದ ತಿರುಳನ್ನು, ಸಂಘರ್ಷ ಸಾಧನೆ ಸಿದ್ಧಿಗಳನ್ನು ಸಮರ್ಥವಾಗಿ ಬಿಂಬಿಸಿದೆ. ಶಾಸನಗಳಿಂದ ಆ ಧರ್ಮದ ವಿವರಗಳನ್ನು ಗ್ರಹಿಸುವ ಪ್ರಯತ್ನವನ್ನು ಮಾಡಿದರೆ ಅನೇಕ ಸಂಕೀರ್ಣ ವಿವರಗಳು ಹೊರ ಬರುತ್ತವೆ. ಶೈವ, ಜೈನ ಧರ್ಮಗಳಿಗೆ ಹೋಲಿಸಿದರೆ ವೀರಶೈವ ಧರ್ಮ ಸಂಬಂಧಿಯಾದ ಶಾಸನಗಳ ಸಂಖ್ಯೆಯ ಕೊರತೆ ಎದ್ದು ಕಾಣುವ ಅಂಶವಾಗಿದೆ. ಅದಕ್ಕೆ ಕಾರಣ ಆ ಧರ್ಮ ತನ್ನಲ್ಲಿ ರೂಢಿಸಿಕೊಂಡ ತತ್ವಗಳು. ಸ್ಥಾವರ ಲಿಂಗಾರಾಧನೆಯ ನಿರಾಕರಣೆ, ದೇವಾಲಯ ನಿರ್ಮಾಣ ನಿರಾಕರಣೆ, ದಾನ ನೀಡಿಕೆ-ಸ್ವೀಕಾರ ಇವುಗಳನ್ನು ನಿರ್ಲಕ್ಷಿಸಿದ್ದು ಮುಖ್ಯ ಕಾರಣಗಳಾಗಿವೆ.[೧] ಆದರೆ ಮುಂದೆ ಬಹುಬೇಗ ಈ ಕೆಲವು ವಿಷಯಗಳಲ್ಲಿ ರಾಜಿ ಮಾಡಿಕೊಳ್ಳುವುದು ಅನಿವಾರ್ಯವಾದಂತೆ ತೋರುತ್ತದೆ. ಸ್ಥಾವರ ಲಿಂಗ ಪೂಜೆಗೆ ವಿರೋಧವನ್ನು ಅವರು ಮನಃಪೂರ್ವಕವಾಗಿ ವ್ಯಕ್ತಪಡಿಸಿದರೇ ಎನ್ನುವುದು ಸಂದೇಹಾಸ್ಪದ.[೨] ಅನೇಕ ಪ್ರಮುಖ ವಚನಕಾರರ ಅಂಕಿತಗಳೇ ಒಂದಲ್ಲ ಒಂದು ಸ್ಥಾವರಲಿಂಗದ ಹೆಸರನ್ನು ಒಳಗೊಂಡಿವೆ. ವೀರಶೈವ ಧರ್ಮ ಸ್ಥಾವರಲಿಂಗಾರಾಧನೆಯ ವಿಷಯದಲ್ಲಿ ಮಾಡಿಕೊಂಡ ರಾಜಿಯ ಕಾರಣವೇ ವೀರಶೈವ ಧರ್ಮದ ಅಷ್ಟೂ ಇಷ್ಟೂ ವಿವರಗಳು ಶಾಸನಗಳಲ್ಲಿ ಲಭ್ಯವಾಗಲು ಬಹುಶಃ ಸಾಧ್ಯವಾಯಿತು. ದೇವಾಲಯ ನಿರ್ಮಾಣ, ಸ್ಥಾವರಲಿಂಗಕ್ಕೆ ನೀಡಿದ ದಾನ ದತ್ತಿಗಳ ಸಂದರ್ಭಗಳಲ್ಲಿ ವೀರಶೈವ ಧರ್ಮದ ಕೆಲವು ವಿವರಗಳು ಬಿಡಿ ಬಿಡಿಯಾಗಿ ದೊರಕುತ್ತವೆ. ಆ ಧರ್ಮದ ಸಾಹಿತ್ಯ ಸಮೃದ್ಧಿಯೊಡನೆ ಹೋಲಿಸಿದರೆ ಶಾಸನ ಸಾಹಿತ್ಯ ತುಂಬ ಪೇಲವವಾಗಿ ಕಾಣುತ್ತದೆ.

ವಚನಕಾರರು ತಮ್ಮ ಕಾಲದ ಅನೇಕ ಶೈವ ಶಾಖೆಗಳನ್ನು ಟೀಕಿಸಿದ್ದಾರೆ. ಶಾಸನಗಳಲ್ಲಿ ತಮಿಳುನಾಡಿನ ಶೈವರನ್ನು ಪುರಾತನರು ಎಂದು ಗುರುತಿಸಲಾಗಿದೆ. ವಚನಕಾರ ಆದಯ್ಯ ಅರವತ್ತು ಮೂವರು ಪುರಾತನರನ್ನು ಶುದ್ಧ ಶೈವರೆಂದು ಕರೆದಿರುವುದರಿಂದ ತಮಿಳು ಶೈವವನ್ನೇ ಶುದ್ಧ ಶೈವವೆಂದು ಕರೆಯುತ್ತಿದ್ದರೆಂದು ಭಾವಿಸಬಹುದು[೩] ಎಂದು ಅಭಿಪ್ರಾಯವಿದೆ. ಆದರೆ ಹರಿಹರ ಬಸವಣ್ಣನನ್ನೇ 'ಶುದ್ಧ ಶೈವ ಸರೋನಿಧಿ' ಎಂದು ಕರೆದಿದ್ದಾನೆ.[೪] ಅಲ್ಲದೆ ಕೆಲವು ಶಾಸನಗಳಲ್ಲಿ ಕನ್ನಡ ನಾಡಿನ ಕೆಲವು ಶೈವ ಯತಿಗಳನ್ನು ಶುದ್ಧ ಶೈವ ಎಂದು ಕರೆದಿರುವುದುಂಟು.[೫] ಆದ್ದರಿಂದ ಶುದ್ಧ ಶೈವ ಪದ ಆ ಕಾಲದಲ್ಲಿ ನಿರ್ದಿಷ್ಟವಾಗಿ ಬಳಕೆಯಾದಂತಿಲ್ಲ. ಈ ಶುದ್ಧ ಶೈವವು ಯಾವುದು ಎಂಬುದಿನ್ನೂ ತೀರ್ಮಾನವಾಗಬೇಕಾಗಿದೆ.[೬]

ತಮಿಳುನಾಡಿನ ಶೈವರು ಸಾಕಷ್ಟು ಕನ್ನಡ ಶಾಸನಗಳಲ್ಲಿ ಉಕ್ತರಾಗಿದ್ದಾರೆ. ಹರಿಹರನ ಕಾವ್ಯಗಳ ಪ್ರಧಾನ ನಾಯಕರಾಗಿ ವಿಜೃಂಭಿಸಿದ್ದಾರೆ. ಅನೇಕ ಕನ್ನಡ ಶಾಸನಗಳಲ್ಲಿ ಕನ್ನಡನಾಡಿನ ಶಿವಶರಣರೊಂದಿಗೆ ಸಮಸಮವಾಗಿ ಗೌರವಾರ್ಹರಾಗಿದ್ದಾರೆ.[೭] ಕೇವಲ ಶಾಸನಗಳಲ್ಲಿ ಮಾತ್ರವಲ್ಲ, ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದಲ್ಲಿ ಮತ್ತು ಚಾಮರಾಜನಗರದ ಚಾಮರಾಜೇಶ್ವರ

---

೧. ಎಂ. ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು ಗ್ರಂಥದ 'ಶರಣದೃಷ್ಟಿ-ಶಾಸನ ಸೃಷ್ಟಿ' ಎಂಬ ಭಾಗ. ಪು.೯-೧೧.

೨. ಎಂ. ಚಿದಾನಂದ ಮೂರ್ತಿ : ಲಿಂಗಾಯತ ಅಧ್ಯಯನಗಳು, ಪು. ೩೬೫.

೩. ಪಿ. ವಿ. ನಾರಾಯಣ : ಪೂರ್ವೋಕ್ತ, ಪು.೪೫೫.

ಬಸವರಾಜದೇವರ ರಗಳೆ : ಪು.೮೨.

೫. (ರೈ) ಎಕ VI ಕಡೂರು ೫೧ ಕ್ರಿ.ಶ. ೧೧೬೯; ಎಸ್‌ಐಐ XX ಪರಸಗಡ ೨೪೮ ಕ್ರಿ.ಶ. ೧೨೨೮.

೬. ಎಂ. ಚಿದಾನಂದ ಮೂರ್ತಿ : ಕಶಾಸಾಂಅ ಪು. ೧೫೮.

೭. (ರೈ) ಎಕ V ಅರಸಿಕೆರೆ ೧೦೯ ಕ್ರಿ.ಶ. ೧೨೫೮; ಎಸ್‌ಐಐ XV ಬಿಜಾಪುರ ೫೬ ಕ್ರಿ.ಶ. ೧೧೮೪. ಎಂ. ಎ. ಆರ್. ೧೯೪೦ ಅರಕಲಗೋಡು ೧೦. ಕ್ರಿ.ಶ. ೧೩೦೨; (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦; (ರೈ) ಎಕ XI ದಾವಣಗೆರೆ ೩೦ ಕ್ರಿ.ಶ. ೧೨೭೯; ಎಇ XX ರೋಣ ೧೨ ಬಿ ಕ್ರಿ.ಶ. ೧೧೮೭.

ದೇವಾಲಯದಲ್ಲಿ ಅರವತ್ತು ಮೂವರು ಪುರಾತನರ ವಿಗ್ರಹಗಳು (ಸಹಜವಾಗಿ ಈಚಿನ ಕಾಲದವು) ಹೆಸರುಗಳೊಂದಿಗೆ ಕಂಡು ಬರುತ್ತದೆ. ಆದರೆ ಅವುಗಳ ಸಂಖ್ಯೆ ಮತ್ತು ಹೆಸರುಗಳಲ್ಲಿ ಏಕರೂಪತೆ ಇಲ್ಲ. ಇವುಗಳಲ್ಲದೆ ಬಳ್ಳಾರಿಯ ಮಲ್ಲಿಕಾರ್ಜುನ ದೇವಾಲಯದಲ್ಲಿಯೂ ಅರವತ್ತು ಮೂವರ ವಿಗ್ರಹಗಳಿದ್ದುದಾಗಿ ತಿಳಿದು ಬಂದಿದೆ.[೧] ವೀರಶೈವ ಪರಂಪರೆಯಲ್ಲಿ ತಮಿಳುನಾಡಿನ ಶಿವಭಕ್ತರನ್ನು ಪುರಾತನರೆಂದೂ, ಬಸವಣ್ಣ ಮತ್ತು ಸಂಗಡಿಗರನ್ನು ನೂತನರೆಂದೂ ಕರೆಯುವ ರೂಢಿ ಇದೆ. ಈ ಪರಂಪರೆಯಂತೆಯೇ ಶಾಸನಗಳಲ್ಲೂ ಕರೆಯಲಾಗಿದೆ. ತಾಳಿಕೋಟೆ ಶಾಸನದಲ್ಲಿ 'ಪುರಾತನ ನೂತನರೆನಿಸಿದ ಅಸಂಖ್ಯಾತ ಗಣಂಗಳ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ'[೨] ಎಂದು ಗುರುತಿಸಲಾಗಿದೆ. ಅರ್ಜುನವಾಡದ ಶಾಸನದಲ್ಲಿ '(ತೇ) ಸಷ್ಠಿ ಪುರಾಥಪಾದಾರ್ಚ್ಚಕರು'[೩] ಎಂದು ಬರುತ್ತದೆ. ಹೀಗೆ ಶಾಸನಗಳಲ್ಲಿ ಒಟ್ಟಾಗಿಯೂ ವೈಯಕ್ತಿಕವಾಗಿಯೂ ಹೆಸರುಗೊಂಡಿದ್ದಾರೆ*. ಚೋಳ(ರು)[೪] ಚೇರ,[೫] ಸಿರಿಯಾಳ[೬] ನಂಬಿಯಣ್ಣ,[೭] ಬೇಡರ ಕಣ್ಣಪ್ಪ[೮], ಕುಂಬಾರ ಗುಂಡ,[೯] ಆಂಡವಲ,[೧೦] ಸಿಂಧುಬಲ್ಲಾಳ,[೧೧] ಕಾರಿಕಾಲಮ್ಮ[೧೨], (ಕಡವಲ)ನಂಬಿ,[೧೩] ಮಾದಾರ ಚನ್ನಯ್ಯ[೧೪] ಇವರೆಲ್ಲರೂ ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾರೆ. ಹೀಗೆ ಕನ್ನಡ

---

೧. ಎಂ. ಎಂ. ಕಲಬುರ್ಗಿ · ಶಾ.ಶಿ.ಶ ಪು. ೧೪-೧೫ ನಂಜನಗೂಡು ಮತ್ತು ಚಾಮರಾಜನಗರದ ದೇವಾಲಯಗಳಲ್ಲಿ ಕಂಡು ಬರುವ ವಿಗ್ರಹಗಳ ವಿವರಗಳಿಗೆ ನೋಡಿ.

೨. ಎಸ್‌ಐಐ XV ಬಿಜಾಪುರ ೫೬ ಕ್ರಿ.ಶ. ೧೧೮೪; ತಮಿಳುನಾಡಿನ ಶಿವಭಕ್ತರ ವಿವರಗಳಿಗೆ ನೋಡಿ-ಎಸ್. ವಿದ್ಯಾಶಂಕರ : ವೀರಶೈವ ಪುರಾಣಗಳು ಪು. ೮೧-೯೩.

೩. ಎಇ XXI ಹುಕ್ಕೇರಿ ೨ ಕ್ರಿ.ಶ. ೧೨೬೦.

೪. (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦; (ರೈ) ಎಕ XI ದಾವಣಗೆರೆ ೩೦ ಕ್ರಿ.ಶ. ೧೨೭೯. (ರೈ) ಎಕ V ಅರಸಿಕೆರೆ ೧೦೯ ಕ್ರಿ.ಶ. ೧೨೫೮. ಈ ಶಾಸನಗಳಲ್ಲಿ ಬರುವ ಚೋಳ(ರು) ನಿರ್ದಿಷ್ಟವಾಗಿ ಯಾರಿಗೆ ಅನ್ವಯವಾಗುತ್ತದೆ ಎಂಬುದು ಸ್ಪಷ್ಟವಿಲ್ಲ.

೫. (ರೈ) ಎಕ XI ದಾವಣಗೆರೆ ೩೦ ಕ್ರಿ.ಶ. ೧೨೭೯.

೬. (ರೈ) ಎಕ V ಅರಸಿಕೆರೆ ೧೦೯ ಕ್ರಿ.ಶ. ೧೨೫೮; (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦. ಎಇ XXIX, III ಪು. ೧೪೨ ಹಿರೇಕೆರೂರು ಕ್ರಿ.ಶ. .೧೨ ಶ.ಮಾ.

೭. (ರೈ) ಎಕ V ಅರಸಿಕೆರೆ ೧೦೯ ಕ್ರಿ.ಶ. ೧೨೫೮. ಈ ಶಾಸನದ...ಬಾಣ ಸುಂಧರ=ಸುಂದರನಾದರೆ ನಂಬಿಯ ಪರ್ಯಾಯ ನಾಮವಾದುದರಿಂದ ಅವನಿಗೆ ಅನ್ವಯಿಸುತ್ತದೆ ಎಂದು ಎಂ.ಎಂ. ಕಲಬುರ್ಗಿ ಅಭಿಪ್ರಾಯಪಡುತ್ತಾರೆ. ಎಇ XX ರೋಣ ೧೨ ಬಿ ಕ್ರಿ.ಶ. ೧೧೮೭.

೮. ಎಂ. ಎಂ. ಕಲಬುರ್ಗಿ : ಶಾ.ಶಿ.ಶ. ಪು. ೨೧.

೯. ಎಇ XXIX. III ಪು. ೧೪೨ ಹಿರೇಕೆರೂರು ಕ್ರಿ.ಶ. ೧೨ ಶ.ಮಾ. (ಮೈ) ಎಕ VII ಮಂಡ್ಯ ೭ ಕ್ರಿ.ಶ. ೧೨೮೦.

೧೦. (ಮೈ) ಎಕ VII ಮಂಡ್ಯ ೭ ಕ್ರಿ.ಶ. ೧೨೮೦.

೧೧. (ರೈ) ಎಕ V ಅರಸಿಕೆರೆ ೧೦೯ ಕ್ರಿ.ಶ. ೧೨೫೮.

೧೨. ಎಂ. ಎಂ. ಕಲಬುರ್ಗಿ : ಪೂರ್ವೋಕ್ತ, ಪು. ೨೦.

೧೩. (ರೈ) ಎಕ XI ದಾವಣಗೆರೆ ೩೦ ಕ್ರಿ.ಶ. ೧೨೭೯. ಈ ಶಾಸನದಲ್ಲಿ ಎರಡು ಸಾರಿ ನಂಬಿ ಎಂಬ ಹೆಸರು ಬರುವುದರಿಂದ ಒಂದು ನಂಬಿ ಕಡವಲ ನಂಬಿಗೆ ಅನ್ವಯವಾಗುವುದೆಂದು ಎಂ. ಎಂ. ಕಲಬುರ್ಗಿ ಅಭಿಪ್ರಾಯಪಡುತ್ತಾರೆ.

೧೪. (ರೈ) ಎಕ XI ದಾವಣಗೆರೆ ೩೦ ಕ್ರಿ.ಶ. ೧೨೭೯; ಎಇ V ಪು. ೨೪೫ ಕ್ರಿ.ಶ.೧೨೦೦. ಇವನು ರಚಿಸಿದ ವಚನಗಳೂ ದೊರೆತಿವೆ. ಡಿ. ಎಲ್.ಎ. ನರಸಿಂಹಾಚಾರ್ ಅವರು, ಈತನು ಕನ್ನಡ ನಾಡಿನಿಂದ ತಮಿಳು ನಾಡಿಗೆ ಹೋದವನಾಗಿರಬಹುದೆ? ಎಂಬ ಅನುಮಾನ ಸೂಚಿಸಿದ್ದಾರೆ. ಪೀಠಿಕೆಗಳು ಲೇಖನಗಳು ಪು. ೪೪೭-೪೮. ಜೇಡರ ದಾಸಿಮಯ್ಯನಿಗಿಂತ ಹಿರಿಯ. ಕಾಲ ಸು. ಕ್ರಿ.ಶ. ೧೧೨೦-೩೦. ವಚನ ರಚನೆ ಕ್ರಿ.ಶ. ೧೧೬೦ಕ್ಕಿಂತ ಈಚೆಗೆ ಎಂದಿದ್ದಾರೆ ಎಂ. ಚಿದಾನಂದಮೂರ್ತಿಯವರು. ಲಿಂಗಾಯತ ಅಧ್ಯಯನಗಳು. ಪು. ೩೫. ಶಾಂತರಸರು ಇವನನ್ನು ಪ್ರಥಮ ವಚನಕಾರನೆನ್ನುತ್ತಾರೆ. ಕ್ರಿ.ಶ. ೧೧೨೦ ಕ್ಕಿಂತ ಈಚೆ ಬಾಳಿರುವ ಸಾಧ್ಯತೆ ಇಲ್ಲ ಎನ್ನುತ್ತಾರೆ. 'ಇತರ ಶರಣರು' ಬಸವ ಮಾರ್ಗ ೨ ಪು. ೪೧, ೪೭.

ಶಾಸನ ಮತ್ತು ಕಾವ್ಯಗಳಲ್ಲಿ ತುಂಬ ಗೌರವಾನ್ವಿತವಾಗಿ ಉಲ್ಲೇಖಗೊಂಡಿರುವ ತಮಿಳು ನಾಡಿನ ಶಿವಭಕ್ತರು ವೀರಶೈವದ ತಾತ್ವಿಕ ಮತ್ತು ಆಚರಣೆಯ ಮಟ್ಟದಲ್ಲಿ ಎಷ್ಟು ಪ್ರಭಾವವನ್ನು ಬೀರಿದ್ದಾರೆ ಎಂಬ ಅಧ್ಯಯನ ಇನ್ನೂ ಆಗಬೇಕಾಗಿದೆ. ತಮಿಳುನಾಡಿನ ಶಿವಭಕ್ತರು ಎಲ್ಲ ವರ್ಗ ಜಾತಿಗಳಿಂದ ಬಂದವರಾಗಿದ್ದರು. ಉತ್ತಮ ಕುಲದವರು, ಹೀನವೆಂದು ಪರಿಗಣಿತವಾದ ಕುಲದವರು, ವಿದ್ವಾಂಸರು, ರಾಜರು, ಅಧಿಕಾರಿಗಳು, ಸಾಮಾನ್ಯರು ಹೀಗೆ ಎಲ್ಲರೂ ಭಗವಂತನ ಭಕ್ತಿಗಾಗಿ ಸರ್ವಾರ್ಪಣೆ ಮಾಡಿ ಕರುಣೆಗೆ ಪಾತ್ರರಾದವರು. ಅವರ ಪ್ರಭಾವ ಕನ್ನಡ ನಾಡಿನ ಶಿವಶರಣರ ಮೇಲೆ ಆಗಿರುವುದನ್ನು ಶಾಸನಗಳು, ಸಾಹಿತ್ಯ ಕೃತಿಗಳು ಮತ್ತು ಶಿಲ್ಪಗಳು ಖಚಿತಪಡಿಸುತ್ತವೆ.

ಡಿ. ಎಲ್. ನರಸಿಂಹಾಚಾರ್ ಅವರು 'ತಮಿಳುನಾಡಿನ ಅರವತ್ತು ಮೂರು ನಾಯನಾರುಗಳ ಪುರಾಣ ಕಥೆಗಳನ್ನು ಸ್ವೀಕರಿಸಿದಂತೆಯೇ ಅವರ ಧರ್ಮೋಪದೇಶ ತತ್ಪರವಾದ ಹಾಡುಗಳನ್ನು ಅಂಗೀಕರಿಸಿರಬಹುದು. ಗದ್ಯದಲ್ಲಿಯೇ ತಾಳ ಮಾನವನ್ನಿಟ್ಟು ಅದನ್ನೇ ಗೀತವೆಂದು ಕರೆದಿರುವಂತೆ ತೋರುತ್ತದೆ. ಹೀಗಿದ್ದರೆ ಅವರ ಈ ಪ್ರಯತ್ನವೇ ವಚನಗಳ ಆದಿ ಎಂದು ತೋರುತ್ತದೆ'[೧] ಎಂದು ಅಭಿಪ್ರಾಯಪಟ್ಟರು. ಆದರೆ ಈ ಅಭಿಪ್ರಾಯ ವಿದ್ವಾಂಸರಿಂದ ಅಷ್ಟಾಗಿ ಮಾನ್ಯತೆ ಪಡೆದಂತಿಲ್ಲ. ವಚನ ಸಾಹಿತ್ಯದ ಮೂಲವನ್ನು ಕುರಿತು ಬೇರೆ ಬೇರೆ ವಾದಗಳು ಪ್ರಚಲಿತವಾಗಿವೆ.[೨]

ವೀರಶೈವರಿಗೆ ಪೂಜ್ಯರಾದ ಬಾಣ,[೩] ಮಯೂರ,[೪] ಓಹಿಲ[೫], ಕಾಳಿದಾಸ,[೬] ಹಲಾಯುಧ,[೭] ಉದ್ಭಟ,[೮] ಮಳಯೇಶ್ವರ,[೯] ಭೋಜ[೧೦] -ಇವರೆಲ್ಲರೂ ಕನ್ನಡ ಶಾಸನಗಳಲ್ಲಿ ಕೀರ್ತಿತರಾಗಿದ್ದಾರೆ. ಈ ಶಿವೋಪಾಸಕರು ಯಾವ ನಿರ್ದಿಷ್ಟ ಶೈವ ಪಂಥಕ್ಕೆ ಸೇರಿದವರೆಂಬುದು ಸ್ಪಷ್ಟವಾಗುವುದಿಲ್ಲ. ಆದರೆ ಶಿವಭಕ್ತಿ ಇವರೆಲ್ಲರಲ್ಲಿ ಸಾಮಾನ್ಯ ವಿಷಯವಾಗಿರುವ ಕಾರಣದಿಂದ ಬಸವಣ್ಣನವರೊಂದಿಗೆ, ಇತರ ಶಿವಭಕ್ತರೊಂದಿಗೆ ಕೆಲವು ಸಾರಿ ಸ್ಮರಿಸಲ್ಪಟ್ಟಿದ್ದಾರೆ.

---

೧. ಡಿ. ಎಲ್. ನರಸಿಂಹಾಚಾರ್ : ಪೀಠಿಕೆಗಳು ಲೇಖನಗಳು ಪು.೪೪೨.

೨. (ಸಂ) ಎಲ್. ಬಸವರಾಜು : ಅಲ್ಲಮನ ವಚನ ಚಂದ್ರಿಕೆ, ಪು. ೧೨-೧೩; ೧೯-೨೭. ಎಂ. ಚಿದಾನಂದ ಮೂರ್ತಿ : ಸಂಶೋಧನ ತರಂಗ ಪು. ೧೬-೩೧. ಎಂ. ಆರ್. ಶ್ರೀನಿವಾಸ ಮೂರ್ತಿ : ವಚನ ಧರ್ಮಸಾರ. ಪು. ೧೦.

೩. ಎಇ V ಪು. ೨೪೫ ಅಬ್ಬಲೂರು ಕ್ರಿ.ಶ. ೧೨೦೦; (ರೈ) ಎಕ V ಅರಸಿಕೆರೆ ೧೦೯ ಕ್ರಿ.ಶ. ೧೨೫೮; ಎಇ XX ರೋಣ ೧೨ ಬಿ. ಕ್ರಿ.ಶ. ೧೧೮೭.

೪. (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦.

೫. ಎಇ XX ರೋಣ ೧೨ ಬಿ. ಕ್ರಿ.ಶ. ೧೧೮೭; ಎಇ V ಪು. ೨೪೫ ಅಬ್ಬಲೂರು ಕ್ರಿ.ಶ.೧೨೦೦; (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦.

೬. (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦.

೭. ಎಇ V ಪು. ೨೪೫ ಅಬ್ಬಲೂರು ಕ್ರಿ.ಶ.೧೨೦೦.

೮. (ರೈ) ಎಕ V ಅರಸಿಕೆರೆ ೧೦೯ ಕ್ರಿ.ಶ. ೧೨೫೮; ಎಇ V ಪು. ೨೪೫ ಕ್ರಿ.ಶ. ೧೨೦೦;
(ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦.

೯. ಎಇ V ಪು. ೨೪೫ ಅಬ್ಬಲೂರು ಕ್ರಿ.ಶ. ೧೨೦೦.

೧೦. (ರೈ) ಎಕ XI ದಾವಣಗೆರೆ ೩೦ ಕ್ರಿ.ಶ. ೧೨೭೯.

ಇದೇ ರೀತಿ ಬಸವ ಪೂರ್ವ ಮತ್ತು ಬಸವ ಸಮಕಾಲೀನರೆನ್ನಬಹುದಾದ ಕೆಲವು ಶಿವಭಕ್ತರು ಶಾಸನಗಳಲ್ಲಿ ಉಕ್ತರಾಗಿದ್ದಾರೆ. ಇವರನ್ನು ಕೂಡ ನಿರ್ದಿಷ್ಟವಾಗಿ ಯಾವುದೇ ಶೈವ ಪಂಥಕ್ಕೆ ಸಮಾವೇಶಗೊಳಿಸುವುದು ಕಠಿಣ.[೧] ಇವರಲ್ಲಿ ಕಾಣುವ ಸಾಮಾನ್ಯ ಅಂಶವೆಂದರೆ ಇವರೆಲ್ಲರೂ ಸ್ಥಾವರಲಿಂಗಪೂಜಕರು ಮತ್ತು 'ವೀರ' ಗುಣವನ್ನು ವಿಶೇಷವಾಗಿ ಮೈಗೂಡಿಸಿಕೊಂಡವರು. ಪ್ರಖ್ಯಾತ ತಾಳಿಕೋಟೆ ಶಾಸನ[೨] ಈ ಶಿವಭಕ್ತರನ್ನು ನೇರವಾಗಿ ಹೆಸರಿಸದೇ ಹೋದರೂ ಬಳಸಲಾದ ವಿವಿಧ ಸ್ಥಳನಾಮಗಳ ಮೂಲಕ ವಿಶೇಷಣಗಳ ಮೂಲಕ ಅವರ ಉಗ್ರ ಶಿವಭಕ್ತಿ ಪರಿಚಯವಾಗುವಂತೆ ಮಾಡುತ್ತದೆ. ಅವರಿಗೆ ಬಳಸಲಾದ ವಿಶೇಷಣಗಳಲ್ಲಿ ಕೆಲವು ಹೀಗಿವೆ. 'ಪರಸಮಯ ಗಿರಿವಜ್ರದಂಡರುಂ, ಜಿನಸಮಯ ದಹನ ದಾವಾನಳರುಂ, ಮುನಿದರ್ಗೆ ಹಾಳಾಹಳರುಂ, ಬೌದ್ಧ ಸಮಯ ವಿಧ್ವಂಸನ ಪ್ರವೀಣರುಂ, ಅನ್ಯಸಮಯಿಗಳ ಬೆನ್ನ ಬಾರನೆತ್ತುವರುಂ, ಸೆಣಸುವರ ನೆತ್ತರಂ ಮರುಳ್ಗಳಿಂ ಕುಡಿಸುವರುಂ, ಪರಸಮಯ ಘರಟ್ಟರುಂ'. ಇಂಥ ವಿಶೇಷಣಗಳಿಂದ ಕೀರ್ತಿತರಾದ ಅವರ ಸಾಧನೆಗಳು ಪರಿಯಳಿಗೆ, ಅಣಿಲೆವಾಡ, ಉಣಕಲ್ಲು, ಸಂಪಗಾವಿ, ಅಬ್ಬಲೂರು, ಮಾರುಡಿಗೆ, ಅಣಂಪೂರು, ಕರಹಾಡ, ಕೆಂಬಾವಿ, ಬಮ್ಮಕೂರು ಮೊದಲಾದ ಸ್ಥಳಗಳಲ್ಲಿ ಬಸದಿಗಳನ್ನು 'ಹೊಸೆದು ಮುಕ್ಕಿ ಶಿವಲಿಂಗ ಸಿಂಹಾಸನಮಂ (ಕ)ಸ್ಗೊಳ್ಸಿ'ದ್ದಾಗಿದೆ. ಈ ಶಾಸನದಲ್ಲಿ ಉಕ್ತವಾದ ಕೆಲವು ಸ್ಥಳಗಳ ಶಿವಭಕ್ತರ ಬಗ್ಗೆ ಮಾತ್ರ ವಿವರಗಳು ದೊರೆಯುತ್ತವೆ.

ಷೋಡಶ ಗಣದಲ್ಲಿ ಸೇರ್ಪಡೆಯಾಗುವ ಗುಡ್ಡವ್ವೆ ಆ ಕಾಲದ ಪ್ರಖ್ಯಾತ ಧಾರ್ಮಿಕ ಸ್ತ್ರೀಯೆಂದು ಹೇಳಬಹುದು. ಎಂ. ಎಂ ಕಲಬುರ್ಗಿಯವರು ಅಭಿಪ್ರಾಯಪಡುವಂತೆ ಅಣಂಪೂರು ಗುಡ್ಡವ್ವೆಯ ಸಾಧನೆಯನ್ನು ಸೂಚಿಸುತ್ತದೆ.[೩] ಇಂಗಳಗಿಯ ಶಾಸನ ಗುಡ್ಡವ್ವೆಯ ಸಮಕ್ಷದಲ್ಲಿ 'ಶ್ರೀಮೂಲಸ್ಥಾನದೇವರ ಪಾದಾರಾಧಕಿಯರಪ್ಪ ಕ್ಷೇತ್ರಸಂನ್ಯಾಸಿ ಮಹಾನುಭಾವೆಯನುಮಪ್ಪ ಚಲವ್ವೆಗಳ ಕಾಬುಂ(ಕಾಲಂ)ತೊಳೆದು' ಧಾರಾಪೂರ್ವಕವಾಗಿ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೪] ಈ ಶಾಸನೋಕ್ತ ಗುಡ್ಡವ್ವೆ ಸುಮಾರು ಅರವತ್ತು ವರ್ಷಗಳಷ್ಟರಲ್ಲಿ ದೇವತೆಯ ಸ್ಥಾನ ಹೊಂದಿ ಪೂಜೆಗೊಳ್ಳುತ್ತಿದ್ದಳೆಂದು ಬಿಜಾಪುರದ ಎರಡು ಶಾಸನಗಳಿಂದ ತಿಳಿದುಬರುತ್ತದೆ.[೫]

ತಾಳಿಕೋಟೆ ಶಾಸನ- ಮಾರುಡಿಗೆ ನಾಚಯ್ಯ, ಪರಿಯಳಿಗೆ ವೈಜಕವ್ವೆ, ಕೆಂಭಾವಿ ಭೋಗಣ್ಣರನ್ನು ಸೂಚಿಸುತ್ತದೆ.[೬] ಈ ಭೋಗಣ್ಣ ಇನ್ನೂ ಎರಡು ಶಾಸನಗಳಲ್ಲಿ ಉಕ್ತನಾಗಿದ್ದಾನೆ.[೭] ಇವನ ಹೆಸರಿನಲ್ಲಿ ಕೆಲವು ವಚನಗಳು ಪ್ರಕಟವಾಗಿವೆ. ಆದರೆ ಅಂಕಿತದಲ್ಲಿ ಏಕರೂಪತೆ ಇಲ್ಲ. ಕೆಲವೊಮ್ಮೆ ನಿಜಗುರು ಭೋಗಸಂಗ, ಇನ್ನು ಕೆಲವೊಮ್ಮೆ ನಿಜಗುರು ಭೋಗೇಶ್ವರ ಎಂದು ಬರುತ್ತದೆ.[೮] ಇವನು ಬಸವಣ್ಣನವರ ಹಿರಿಯ ಸಮಕಾಲೀನನೊ, ಪುರಾತನರಲ್ಲಿ ಒಬ್ಬನೊ ಎಂಬ ವಿಷಯದಲ್ಲಿ ಸಂಶಯವಿದ್ದಂತಿದೆ.[೯]

---

೧. ಪಾಲ್ಕುರಿಕೆ ಸೋಮನಾಥನ 'ಗಣ ಸಹಸ್ರ'ದಲ್ಲಿ ಷೋಡಶರು, ತೇರಸರು, ದಶಗಣರ ಹೆಸರುಗಳು ಬರುತ್ತವೆ. ಅವನು ಸಂಖ್ಯಾನುಗುಣವಾಗಿ ಮಾಡಿದ ವಿಭಾಗಕ್ಕೆ ಯಾವ ತತ್ವದ ಆಧಾರ ಎಂಬುದು ಸ್ಪಷ್ಟವಾಗದು. ಶಾಂತರಸ : 'ಇತರ ಶರಣರು' ಬಸವಮಾರ್ಗ- ೨ ಪು. ೪೦.

೨. ಎಸ್‌ಐಐ XV ಬಿಜಾಪುರ ೫೬ ಕ್ರಿ.ಶ. ೧೧೮೪.

೩. ಎಂ. ಎಂ. ಕಲಬುರ್ಗಿ : ಶಾಶಿಶ ಪು. ೩೦.

೪. ಸಾಧನೆ ೯-೪ ಪು. ೮೫-೮೬ ಕ್ರಿ.ಶ. ೧೨೦೯.

೫. ಐಎನ್‌ಕೆ ಅಂಡ್ ಕೆಎಸ್ ೨೧ಎ ಕ್ರಿ.ಶ. ೧೨೬೮ ಮತ್ತು ೨೧ಬಿ.

೬. ಎಂ. ಎಂ. ಕಲಬುರ್ಗಿ : ಶಾಶಿಶ ಪು. ೩೨-೩೪..

೭. (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦; (ರೈ) ಎಕ V ಅರಸಿಕೆರೆ ೧೦೯ ಕ್ರಿ.ಶ. ೧೨೫೮.

೮. ಸ. ಪು. ವ. ಭಾಗ ೩ ಪು. ೨೦೬.

೯. ಶಾಂತರಸ : 'ಇತರ ಶರಣರು' ಬಸವ ಮಾರ್ಗ-೨ ಪು. ೬೩.

**ಕೊಂಡಗುಳಿ ಕೇಶಿರಾಜ :**

ವೀರಶೈವ ಧರ್ಮದ ಇತಿಹಾಸದ ದೃಷ್ಟಿಯಿಂದ ಬಹು ಪ್ರಮುಖ ವ್ಯಕ್ತಿಗಳಲ್ಲಿ ಕೇಶಿರಾಜನು ಒಬ್ಬನಾಗಿದ್ದಾನೆ. ವೀರಶೈವ ಧರ್ಮದ ಪ್ರಥಮ ಕವಿಯಾಗಿ, ಆರಂಭ ಕಾಲದ ಪ್ರತಿಭಟನೆಯ ಕೇಂದ್ರವಾಗಿ ಗಮನಾರ್ಹನಾಗಿದ್ದಾನೆ. ಅಬ್ಬಲೂರು ಶಾಸನದಲ್ಲಿ ಓಹಿಲ, ದಾಸ, ಚನ್ನ, ಸಿರಿಯಾಳ ಮುಂತಾದವರ ಜೊತೆಯಲ್ಲಿ ಕೇಶವರಾಜನೆಂದು, ಮರಡಿಪುರದ ಶಾಸನದಲ್ಲಿ ಕೇಶಿರಾಜ ದಣಾಯಕನೆಂದು ಉಲ್ಲೇಖಗೊಂಡಿದ್ದಾನೆ. ಇವನನ್ನು ಬಿಜ್ಜಳನ ಮಂತ್ರಿಯಾಗಿ, ಕವಿಯಾಗಿ ಭಾವಿಸಲಾಗಿತ್ತು.[೧] ಆದರೆ ಕೇಶಿರಾಜನ ಸ್ವಸ್ಥಳವಾದ ಕೊಂಡಗುಳಿಯಲ್ಲೇ ಶಾಸನಗಳು ದೊರೆಯುವುದರ ಮೂಲಕ ಸ್ಪಷ್ಟವಾಗಿ ಅವನ ಕಾಲ, ವ್ಯಕ್ತಿತ್ವ ತನ್ಮೂಲಕ ವೀರಶೈವ ಧರ್ಮದ ಮೇಲೆ ಹೊಸ ಬೆಳಕು ಬಿದ್ದಿದೆ.[೨] ಕೇಶಿರಾಜನು ನಿಂಬಣ ದಂಡನಾಥನ[೩] ಮಗ. ತಂದೆಯಂತೆ ದಂಡನಾಯಕನಾಗಿ ಚಾಲುಕ್ಯ ತ್ರಿಭುವನ ಮಲ್ಲನಲ್ಲಿ ಕಾರ್ಯನಿರ್ವಹಿಸಿರುವುದು ಕಂಡುಬರುತ್ತದೆ. ವಾಜಿಕುಲಕ್ಕೆ ಸೇರಿದ ಕೇಶಿರಾಜನ ಬಗ್ಗೆ ದೊರೆಯುವ ಕ್ರಿ.ಶ. ೧೧೦೭ ರ ಶಾಸನದಲ್ಲಿ ಬರುವ ವಿಶೇಷಣಗಳು ಗಮನಾರ್ಹವಾಗಿವೆ. 'ಸುಕವಿಶುಕಚೂತ ಬನ್ಧುವನವಸನ್ತ ವಚಶ್ರೀವಧೂಕಾನ್ತ ಸಾಹಿತ್ಯ ಸರೋರುಹಮಧುಬ್ರತ ಸತ್ಯಸತ್ಯಬ್ರತ ಹರಚರಣ ರಜೋರಂಜಿತೋತ್ತಮಾಂಗ'. ಈ ವಿಶೇಷಣಗಳು ಹರಿಹರನು ಚಿತ್ರಿಸಿರುವ 'ಕೇಶಿರಾಜ ದಣ್ಣಾಯಕರ ರಗಳೆ'ಯ ವ್ಯಕ್ತಿಚಿತ್ರಕ್ಕೆ ಬಹುಮಟ್ಟಿಗೆ ಹೊಂದುವುದನ್ನು ರಗಳೆಯ ಅಭ್ಯಾಸದಿಂದ ಕಂಡುಕೊಳ್ಳಬಹುದು. 'ನಿಚ್ಚಲೆಂಟು ಪದ್ಯಮಂ ಸೋಮನಾಥಂಗೆ ಅಚ್ಚರಿ ಮಿಗಲ್ಕೆ ಪೇಳ್ವಂ ಶಿವನಾಥಂಗೆ', 'ಪದ್ಯಂಗಳಂ ಶಿವಂಗನುದಿನಂ ಪೇಳುತಂ ಚೋದ್ಯವೆನೆ ಶಂಕರ ಸ್ತೋತ್ರದೊಳೆ ಬಾಳುತಂ'[೪] ಎಂಬ ರಗಳೆಯ ಭಾಗ ಶಾಸನದ ಅಭಿಪ್ರಾಯವನ್ನು ಪೋಷಿಸುತ್ತದೆ.

ಕೇಶಿರಾಜನ ಕೃತಿಗಳಲ್ಲಿ[೫] ವೀರಶೈವ ಧರ್ಮದ ಸ್ಪಷ್ಟ ಉಲ್ಲೇಖಗಳನ್ನು ಮತ್ತು ವಿವರಣೆಗಳನ್ನು ಕಾಣಬಹುದು. ಉದಾಹರಣೆಗೆ ವೀರಶೈವ (ಶ್ರೀಮಹತ್ವದ ಕಂದ ೧ ಪು. ೫೯) ಭೃತ್ಯಾಚಾರ (ಮಂತ್ರಮಹತ್ವದ ಕಂದ-೯೯) ಲಿಂಗಧಾರಣೆ (ಶೀಲ ಮಹತ್ವದ ಕಂದ ೨೭) ಗುರುಲಿಂಗಜಂಗಮ (ಶೀಲಮಹತ್ವದ ಕಂದ ೨೯) ಜಂಗಮದ ಪಾದ ತೀರ್ಥ (ಶೀಲಮಹತ್ವದ ಕಂದ ೨೮) ಪಾದುದಕ (ಶೀಲಮಹತ್ವದ ಕಂದ-೭೮) ಭವಿ (ಶೀಲಮಹತ್ವದ ಕಂದ ೧೬) ಕಾಯಕ (ಶೀಲಮಹತ್ವದ ಕಂದ ೯೮) ಲಿಂಗಾಯತ (ಶೀಲಮಹತ್ವದ ಕಂದ ೩೩, ೩೯) ಇತ್ಯಾದಿ. ಬಸವಪೂರ್ವದ ವೀರಶೈವ ಧರ್ಮದ ಬಹುಮುಖ್ಯ ಆಕರ ಕೃತಿಯಾಗಿ ಕೇಶಿರಾಜನ ಕೃತಿಗಳು ಮಹತ್ವದ್ದಾಗಿದೆ. ವಿದ್ಯಾಶಂಕರ ಅವರು "ವೀರಶೈವ ಧರ್ಮ ಬಸವಾದಿ ಶಿವಶರಣರ

---

೧. ಆರ್. ನರಸಿಂಹಾಚಾರ್ : ಕರ್ಣಾಟಕ ಕವಿಚರಿತೆ ಸಂ ೧ ಪು. ೧೯೯-೨೦೧.

೨. ಎಸ್‌ಐಐ XX ಸಿಂದಗಿ ೬೯ ಕ್ರಿಶ. ೧೧೦೭; ಎಇ XXXVII-IV ಸಿಂದಗಿ ಕ್ರಿಶ. ೧೧೩೨.

ಈ ಎರಡೂ ಶಾಸನಗಳು ಕೊಂಡಗುಳಿ ಕೇಶಿರಾಜನಿಗೆ ಸಂಬಂಧಿಸಿದವು ಎಂದು ಬಹುತೇಕ ವಿದ್ವಾಂಸರು ಭಾವಿಸುತ್ತಾರೆ. ಆದರೆ ವಿ. ಶಿವಾನಂದರು ವಾದಿಸುವಂತೆ ಎರಡನೆಯ ಶಾಸನ ಕೇಶಿರಾಜನಿಗೆ ಸಂಬಂಧಿಸಿದ್ದಲ್ಲ. ಹರಿಹರನ ಪ್ರಕಾರ ಕೇಶಿರಾಜನ ಇಷ್ಟದೈವ ಸೋಮನಾಥಲಿಂಗವಾದುದರಿಂದ ಕ್ರಿಶ. ೧೧೦೭ರ ಶಾಸನದಲ್ಲಿ ಸೋಮೇಶ್ವರ ಶಿವಾಲಯವನ್ನು ಕಟ್ಟಿಸಿದ ವ್ಯಕ್ತಿ ಶಿವಶರಣ ಕೇಶಿರಾಜನಾಗುತ್ತಾನೆ. ಆದರೆ ತನ್ನ ಹೆಸರಿನಲ್ಲಿ ದೇವಾಲಯ ಕಟ್ಟಿಸಿ ಮಹಾಜನಗಳಿಂದ ಅದಕ್ಕೆ ದತ್ತಿ ಕೊಡಿಸುವ ಈ ಕೇಶಿಮಯ್ಯ ದಂಡನಾಯಕ ಕೇಶವ ದೇವರ ಭಕ್ತ. ಅಗ್ರಹಾರವೆನಿಸಿದ್ದ ಕೊಂಡಗುಳಿಯಲ್ಲಿ ಬ್ರಾಹ್ಮಣರಿಗೆ ಅಧ್ಯಾಪನ ನಿಮಿತ್ತವಾಗಿ ದತ್ತಿಬಿಡುವುದರಿಂದ ಈತ ಬ್ರಾಹ್ಮಣನಾಗಿರಲೂ ಬಹುದು. ಇನ್ನೂ ಕೆಲವು ವಾದಗಳನ್ನು ಮಂಡಿಸಿ ಆ ಶಾಸನವನ್ನು ನಿರಾಕರಿಸಿದ್ದಾರೆ. ನೋಡಿ- ವಿ. ಶಿವಾನಂದ : 'ಕೆಲವು ಶಿವಶರಣರ ವ್ಯಕ್ತಿ ಚಿತ್ರಗಳು' ಸಿದ್ಧಗಂಗಾಶ್ರೀ ಪು. ೭೩೬-೭೪೨.

೩. ನಿಂಬಣ ದಂಡನಾಥನ ಬಗ್ಗೆ ದೊರೆಯುವ ಕೆಲವು ಶಾಸನಗಳು : ಎಸ್‌ಐಐ XI (i) ಬೀಳಗಿ (ಇ) ೧೧೬ ಕ್ರಿಶ. ೧೦೭೬; ಎಸ್‌ಐಐ XI (ii) ಮುದ್ದೇಬಿಹಾಳು ೧೩೨ ಕ್ರಿಶ. ೧೦೮೬.

೪. 'ಕೇಶಿರಾಜ ದಣ್ಣಾಯಕರ ರಗಳೆ' ನೂತನ ಪುರಾತನರ ರಗಳೆಗಳು. ಪು. ೧೮೪.

೫. ಎಂ. ಎಂ. ಕಲಬುರ್ಗಿ (ಸಂ) : ಕೇಶಿರಾಜನ ಕೃತಿಗಳು.

ಅನುಭವ ಗೋಷ್ಠಿಯಲ್ಲಿ ತನ್ನ ತಾತ್ವಿಕಾಂಶಗಳನ್ನು ರೂಪಿಸಿಕೊಂಡಿತೆಂದು ಭಾವಿಸಲಾಗಿತ್ತು. ಆದರೆ ಕೊಂಡಗುಳಿ ಕೇಶಿರಾಜನ ಕೃತಿಗಳನ್ನು ಪರಿಶೀಲಿಸಿದಾಗ ವೀರಶೈವ ಧರ್ಮ ತನ್ನ ತಾತ್ವಿಕ ನಿಲುಮೆಯನ್ನು ಹನ್ನೊಂದನೆಯ ಶತಮಾನದ ಕೊನೆಯಲ್ಲಿ ಹಾಗೂ ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ರೂಪಿಸಿಕೊಂಡಿರಬೇಕೆಂಬ ಸ್ಪಷ್ಟವಾದ ಸೂಚನೆಗಳು ಕಾಣಬರುತ್ತವೆ"[೧] ಎಂದಿದ್ದಾರೆ.

ಕೇಶಿರಾಜನಿಗೆ ಸಂಬಂಧಿಸಿದಂತೆ ಜೇಡರ ದಾಸಿಮಯ್ಯನ ಒಂದು ವಚನ 'ಜಗವೆಲ್ಲಾ ಅರಿಯಲು ತೊಱೆಯೊಳಗೆ ಬಿದ್ದ ಲಿಂಗ ಕರೆದರೆ ಬಂತು ಕರಸ್ಥಳಕ್ಕೆ' ಎಂದು ಇಷ್ಟಲಿಂಗ ಕಳೆದು, ದೊರೆತ ಪ್ರಸಂಗವನ್ನು ನಿರೂಪಿಸುತ್ತದೆ.[೨] ಇಷ್ಟಲಿಂಗ ಕಳೆದು ಹೋದಾಗ ಪ್ರಾಣತ್ಯಾಗಕ್ಕೆ ಪ್ರಯತ್ನಿಸುವ ವಿಷಯ ಪರಿಹರನ ಕೇಶಿರಾಜ ದಣ್ಣಾಯಕರ ರಗಳೆಯಲ್ಲಿಯೂ ಬರುತ್ತದೆ. ಕೇಶಿರಾಜ ಇಷ್ಟಲಿಂಗವನ್ನು ನದೀತೀರದಲ್ಲಿ ಪೂಜಿಸುತ್ತಿರುವಾಗ ಗರುಡ ಪಕ್ಷಿ ಅದನ್ನು ಎತ್ತಿಕೊಂಡು ಹೋಗಿ ನದಿಯಲ್ಲಿ ಹಾಕಲು ಕೇಶಿರಾಜನು ಕಠಾರಿಯನ್ನು ತೆಗೆದು ಆತ್ಮಹತ್ಯೆಗೆ ಮುಂದಾಗುವನು. ಆಗ ಶರಣರು ಅವನನ್ನು ತಡೆದು ಲಿಂಗವನ್ನು ಹುಡುಕಿದನಂತರ ಅದು ದೊರೆಯದಿದ್ದರೆ ಅಪನಿಷ್ಟದಂತೆ ನಡೆದುಕೊಳ್ಳಬೇಕೆಂದು ಹೇಳುವರು. ಅನಂತರ ಅವನಿಗೆ ಮರಳಿ ಅವನ ಇಷ್ಟಲಿಂಗ ದೊರೆಯುವುದು. ಇಷ್ಟಲಿಂಗ ಭಿನ್ನವಾದಾಗ ಆತ್ಮಹತ್ಯೆಗೆ ಮುಂದಾಗುವುದನ್ನು ಅಲ್ಲಮಪ್ರಭು, ಚನ್ನ ಬಸವಣ್ಣ ಮುಂತಾದವರು ವಿರೋಧಿಸಿದ್ದಾರೆ.[೩] ಇಷ್ಟಲಿಂಗ ಭಿನ್ನವಾದಾಗ ಆತ್ಮಘಾತಕ್ಕೆ ಮುಂದಾಗುವ ಶರಣರನ್ನು 'ಒಂದರ್ಥದಲ್ಲಿ ಇಷ್ಟಲಿಂಗದ ವೇಳೆವಾಳಿಗಳು' ಎಂದು ಎಂ. ಎಂ. ಕಲಬುರ್ಗಿ ಅವರು ಕರೆದಿದ್ದಾರೆ.[೪]

ನಿಷ್ಠಾವಂತ ವೀರಶೈವನಾದ ಕೇಶಿರಾಜ ವೀರಶೈವ ಧರ್ಮದ ಸಮೃದ್ಧ ವಿವರಗಳನ್ನು ನೀಡುವ ಕೃತಿಗಳನ್ನು ರಚಿಸಿದ್ದಾನೆ. ಶಾಸನದಲ್ಲಿ ನಿರೂಪಿತವಾದಂತೆ ಸೋಮೇಶ್ವರ ದೇವಾಲಯವನ್ನು ಕಟ್ಟಿಸಿ ಅದಕ್ಕೆ ದಾನಗಳನ್ನು ನೀಡಿದ್ದಾನೆ. ಕೇಶಿರಾಜನ ಕಾಲದಲ್ಲಿ ದೇವಾಲಯ ನಿರ್ಮಾಣ, ದಾನ ದತ್ತಿ ಸ್ವೀಕಾರ ಮತ್ತು ಕೊಡುಗೆಯನ್ನು ಆ ಕಾಲದ ವೀರಶೈವರು ಒಪ್ಪಿದ್ದರೆಂದು ತಿಳಿಯಬೇಕಾಗುತ್ತದೆ. ಮುಂದೆ ಬಸವಣ್ಣನವರ ಕಾಲದಲ್ಲಿ ವೀರಶೈವ ಧರ್ಮ ಪರಿಷ್ಕರಣಕ್ಕೆ ಒಳಗಾದಾಗ ದೇವಾಲಯ ನಿರ್ಮಾಣವನ್ನು ತೀವ್ರವಾಗಿ ವಿರೋಧಿಸಿರಬೇಕು. ಕೇಶಿರಾಜನ ಬದುಕು ಮತ್ತು ಕೃತಿಗಳ ಅಧ್ಯಯನ ವೀರಶೈವ ಧರ್ಮ ಮತ್ತು ಸಾಹಿತ್ಯದ ಆರಂಭದ ಸ್ಥಿತಿಯನ್ನು ಅರಿಯಲು ಬಹುಮುಖ್ಯ ಆಕರಗಳಾಗಿವೆ.

**ದೇವರ ದಾಸಿಮಯ್ಯ-ಜೇಡರ ದಾಸಿಮಯ್ಯ :**

ದೇವರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ ಅಭಿನ್ನರೆಂದು ಬಹಳ ಕಾಲ ತಿಳಿಯಲಾಗಿತ್ತು. ಹೀಗಾಗಿ ಕಾಲಾನುಕ್ರಮ ಜೋಡಣೆ ಅತ್ಯಂತ ಕ್ಲಿಷ್ಟವಾಗಿತ್ತು. ಜೇಡರ ದಾಸಿಮಯ್ಯನ ವಚನಗಳನ್ನು ಸಂಪಾದಿಸಿದ ಎಚ್. ದೇವೀರಪ್ಪ ಮತ್ತು ಆರ್. ರಾಚಪ್ಪ ಅವರು ಸಾಧಾರವಾಗಿ ಅವರು ಭಿನ್ನ ವ್ಯಕ್ತಿಗಳೆಂದು ಪ್ರತಿಪಾದಿಸಿದರು.[೫] ದೇವರ ದಾಸಿಮಯ್ಯ ಪೊಟ್ಟಲಕೆರೆಯ[೬] ಜಯಸಿಂಹನ ಕಾಲದವನು. ಜಯಸಿಂಹನ ರಾಣಿ ಸುಗ್ಗಲ ದೇವಿ ದಾಸಿಮಯ್ಯನ ಶಿಷ್ಯೆ. ದಾಸಿಮಯ್ಯನು

೧. ಎಸ್. ವಿದ್ಯಾಶಂಕರ : 'ಬಸವಪೂರ್ವಯುಗದ 'ವೀರಶೈವ'ದ ಅಧ್ಯಯನಕ್ಕೊಂದು ಆಕರ' :ಸಾಧನೆ ೮-೪ ಪು. ೩೬.

೨. ಜೇಡರ ದಾಸಿಮಯ್ಯನ ವಚನಗಳು. ವ-೧೬.

೩. ಈ ವಿಷಯದ ಚರ್ಚೆಗೆ ನೋಡಿ : ಎಸ್. ವಿದ್ಯಾಶಂಕರ : 'ವಚನಕಾರರು ಹಾಗೂ ಆತ್ಮ ಬಲಿ' ಎಂಬ ಲೇಖನ, ವಚನಾನುಶೀಲನ. ಪು. ೪೨೫-೪೩೫.

೪. ಎಂ. ಎಂ. ಕಲಬುರ್ಗಿ : ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು-ಪು. ೨೫.

೫. ಜೇಡರ ದಾಸಿಮಯ್ಯನ ವಚನಗಳು ಪೀಠಿಕೆ ಪು. IX-XXIX.

೬. P.B. Desai : A History of Karnataka ಪು. ೧೮೮. ಈಗಿನ ಆಂಧ್ರದ ಪೊಟಂಚರುವೇ ಪೊಟ್ಟಲಕೆರೆ ಎಂದು ಗುರುತಿಸಿದ್ದಾರೆ.

ಪೊಟ್ಟಲ ಕೆರೆಗೆ ಹೋಗಿ ಪವಾಡದಿಂದ ಶೈವಧರ್ಮದ ಶ್ರೇಷ್ಠತೆಯನ್ನು ಸ್ಥಾಪಿಸುತ್ತಾನೆ. ಈ ಜಯಸಿಂಹ ಕಲ್ಯಾಣ ವಂಶದ ಇಮ್ಮಡಿ ಜಯಸಿಂಹ ಅಥವಾ ಒಂದನೆ ಜಗದೇಕಮಲ್ಲ (ಕ್ರಿ.ಶ. ೧೦೧೫-೪೪) ಎಂಬುದರಲ್ಲಿ ಅನುಮಾನವಿಲ್ಲ. ಜೇಡರ ದಾಸಿಮಯ್ಯ ಶಿವನಿಂದ ತವನಿಧಿ ಪಡೆದವನು; ಇವನ ವೃತ್ತಿ ನೇಯ್ಗೆ ಕೆಲಸ; ಹೆಂಡತಿಯ ಹೆಸರು ದುಗ್ಗಳೆ. ಈತನು ಶಂಕರ ದಾಸಿಮಯ್ಯನಿಂದ ಅಹಂಕಾರ ಕಳೆದುಕೊಂಡವನು.[೧] ಇವನು ಕೊಂಡಗುಳಿ ಕೇಶಿರಾಜನನ್ನು ಸ್ಮರಿಸಿದ್ದಾನೆ. ಇವನನ್ನು ಬಸವಣ್ಣನವರು ಸ್ಮರಿಸಿದ್ದಾರೆ. ಆದ್ದರಿಂದ ಜೇಡರ ದಾಸಿಮಯ್ಯನ ಕಾಲ ಕ್ರಿ.ಶ. ಸುಮಾರು ೧೧೪೦. ಜೇಡರ ದಾಸಿಮಯ್ಯನೇ ಆದ್ಯ ವಚನಕಾರನೆಂದು ವಿದ್ವಾಂಸರು ಒಪ್ಪಿದ್ದಾರೆ. ಅನೇಕ ಶಾಸನಗಳಲ್ಲಿ ಉಕ್ತನಾಗಿರುವ ಇವನು ರಾಮನಾಥ ಎಂಬ ಅಂಕಿತದಲ್ಲಿ ರಚಿಸಿದ ೧೩೩ ವಚನಗಳು ಪ್ರಕಟವಾಗಿವೆ. ಇವನನ್ನು ಬಸವಣ್ಣನವರ ಹಿರಿಯ ಸಮಕಾಲೀನನೆಂದು ಭಾವಿಸಲಾಗಿದೆ.

ಜೇಡರ ದಾಸಿಮಯ್ಯನ ಬಗೆಗೆ ದೊರೆಯುವ ಶಾಸನಗಳಲ್ಲಿ ಗೊಬ್ಬೂರು ಶಾಸನವೂ ಒಂದಾಗಿದೆ. ಅದರಲ್ಲಿ 'ಪಿರಿಯ ಗೊಬ್ಬೂರಶೇಷ ಮಹಾಜನಂಗಳ ದಿವ್ಯಪಾದಾರಾಧಕರು ಶ್ರೀ ರಾಮೇಶ್ವರ ದೇವರ ಗಂಧವಾರಣರ್ ಜಾಡಕುಲತಿಲಕ ದಾಸಿಮಯ್ಯ ಪ್ರಿಯಪುತ್ರರಪ್ಪ ಸಕಲಜಾಡ ಗೊತ್ತಳಿಗಳು ಕುಲದೇವನಪ್ಪ ಗೊಜ್ಜೇಶ್ವರ'[೨] ಎಂದಿದೆ. ಕ್ರಿ.ಶ. ೧೧೪೮ರ ಈ ಶಾಸನ ಜೇಡರ ದಾಸಿಮಯ್ಯನ ಶಿಷ್ಯರು (ಪ್ರಿಯಪುತ್ರ..ಗೊತ್ತಳಿಗಳು) ಗೊಜ್ಜೇಶ್ವರ ದೇವರಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಚಿಕ್ಕ ಮುದೇನೂರಿನ ಶಾಸನ ಮುದೇನೂರ ದಾಸಯ್ಯನೆಂದು ಹೇಳುವುದರಿಂದ ಅದು ಜೇಡರ ದಾಸಿಮಯ್ಯನನ್ನೇ ಸೂಚಿಸುತ್ತದೆ.[೩] ಕಿರಿಯಿಂಡಿಯ ಶಾಸನವು 'ದೋಡರ ದಾಸನ' ಕುಲದಲ್ಲಿ ಸೋಮಯ್ಯ ಹುಟ್ಟಿದನೆಂದೂ ಅವನ ಸತಿ ಪತಿವ್ರತೆಯಾದ ಹೊಲ್ಲೌವ್ವೆ ಎಂದು ತಿಳಿಸುತ್ತದೆ.[೪] ಈ ಶಾಸನೋಕ್ತ ದೋಡರ ದಾಸ ಜೇಡರ ದಾಸಿಮಯ್ಯನಾಗಿರಬಹುದೆಂದು ಭಾವಿಸಲಾಗಿದೆ. ಗೀಜಗನ ಹಳ್ಳಿಯ ಶಾಸನದಲ್ಲಿ 'ಜೇಡರ ದಾಸಿಮಯ್ಯನ ಮಗ ಕಾಟಿಗೌಡ' ಎಂದು ಬರುತ್ತದೆ.[೫] ಇಲ್ಲಿ ಮಗ ಎನ್ನುವುದನ್ನು ಶಿಷ್ಯ ಸಂಪ್ರದಾಯ ಎಂದು ಭಾವಿಸಬೇಕಾಗುತ್ತದೆ. ಬಿದಿರೆಯ ಶಾಸನ ಜೇಡರ ದಾಸಿಮಯ್ಯ ಹೇಗೆ ದಕ್ಷಿಣ ಕರ್ನಾಟಕ ಪ್ರದೇಶಕ್ಕೆ ಪ್ರಚಾರವಾಗಿದ್ದ, ಅವನ ವಿಷಯ ಗಾದೆಮಾತಿನಂತೆ ಹೋಲಿಕೆಗೆ ಬಳಕೆಯಾಗುತ್ತಿತ್ತು ಎಂಬ ವಿಷಯಗಳನ್ನು ಸ್ಪಷ್ಟಪಡಿಸುತ್ತದೆ. ಚಾಂಕಣವ್ವೆ ಎನ್ನುವವಳು ಬೆಳ್ಳಪ ಎಂಬ ಮಗನನ್ನು ಪಡೆದ ವರ್ಣನೆ ಹೀಗೆ ಬಂದಿದೆ:

ಬಡವರು ಚಿಂತಾಮಣಿಯಂ<br>
ಪಡೆದಂತಿರೆ ದಾಸನೀಶನ ಕೈಯಲು<br>
ಪಡದಾ ತವನಿಧಿಯಂತಿರೆ<br>
ಪಡೆದಳು ತಾಂ ಚಾಂಕಣವ್ವೆ ಬೆಳ್ಳಪ ಸುತನಂ[೬]

ಜೇಡರ ದಾಸಿಮಯ್ಯ ಉತ್ತರದ ಮುದೇನೂರಿನವನು. ದಕ್ಷಿಣ ಭಾಗದ ಕರ್ನಾಟಕಕ್ಕೆ ಸೇರಿದವು ಗೀಜಗನ ಹಳ್ಳಿ (ಅರಸಿಕೆರೆ ತಾಲ್ಲೂಕು) ಮತ್ತು ಬಿದಿರೆ (ಚನ್ನರಾಯಪಟ್ಟಣ ತಾಲ್ಲೂಕು). ಮೊದಲ ಶಾಸನದಲ್ಲಿ ಅವನ ಶಿಷ್ಯ ಪರಂಪರೆ

---

೧. ಎಂ. ಚಿದಾನಂದ ಮೂರ್ತಿ : ವಚನ ಸಾಹಿತ್ಯ ಪು. ೧೩-೧೪.

೨. ಎಂ. ಎಂ. ಕಲಬುರ್ಗಿ : ಶಾಶಿಶ. ಪು. ೩೫.

೩. ಅದೇ. ಪು. ೩೫-೩೬.

೪. ಐಎನ್‌ಕೆ ಅಂಡ್ ಕೆಎಸ್ ಬಿಜಾಪುರ. ೧೭ ಕ್ರಿಶ. ೧೨೦೧.

೫. ಎಂ. ಎ. ಆರ್. ೧೯೨೮ ಅರಸಿಕೆರೆ : ೧೫ ಕ್ರಿಶ. ೧೨೦೧.

೬. (ರೈ) ಎಕ V ಚನ್ನರಾಯಪಟ್ಟಣ ೨೧೦ ಕ್ರಿಶ. ೧೧೬೫.

ಹಬ್ಬಿದ ವಿಷಯವನ್ನು ಹೇಳಿದರೆ, ಬಿದಿರೆ ಶಾಸನ ಕ್ರಿ.ಶ. ೧೧೬೫ ರ ಹೊತ್ತಿಗೆ ಅವನ ವಿಷಯ ಗಾದೆಯ ಮಾತಿನಂತೆ ಇಷ್ಟು ದೂರದ ಪ್ರದೇಶದಲ್ಲಿ ಪ್ರಚಾರವಾಗಿರುವುದನ್ನು ಹೇಳುತ್ತದೆ. ಜೇಡರ ದಾಸಿಮಯ್ಯನ ವಿಷಯ ಎಷ್ಟು ಬೇಗ ಪ್ರಸಾರ ಪಡೆಯಿತು ಎಂಬುದು ಆಶ್ಚರ್ಯ ತರುವಂತಹದಾಗಿದೆ. ಶಿಲ್ಪ ಸಹಿತ ಶಾಸನದಲ್ಲಿಯೂ ಜೇಡರ ದಾಸಿಮಯ್ಯ ಉಕ್ತನಾಗಿದ್ದಾನೆ. 'ಜೇಡರ ದಾಸಿಮಯ್ಯಂಗಳು ದೇವರಿಗೆ ವಸ್ತ್ರವ ಕುಡುವ ಟಾಲು' ಎಂದು ಅಬ್ಬಲೂರು ಶಾಸನದಲ್ಲಿ ಬರುತ್ತದೆ.[೧] ಇವಲ್ಲದೆ ಪೂರ್ವೋಕ್ತವಾದ ಮರದಿಪುರ, ಹಿರಿಯೂರು ಶಾಸನಗಳಲ್ಲೂ ಈತನ ಹೆಸರು ಉಳಿದ ಶಿವಶರಣರೊಂದಿಗೆ ಕಂಡುಬರುತ್ತದೆ. ಗೊಬ್ಬೂರು, ಗೀಜಗನ ಹಳ್ಳಿ ಶಾಸನಗಳು ದಾಸಿಮಯ್ಯನ ಶಿಷ್ಯ ಪರಂಪರೆ ಗೊಜ್ಜೇಶ್ವರ ದೇವರಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಸ್ಥಾವರಲಿಂಗಾರಾಧನೆ ಬಸವಾದಿಗಳ ಕಾಲಕ್ಕೆ ತಿರಸ್ಕಾರಕ್ಕೆ ಒಳಗಾಯಿತು. ಬಹುಶಃ ಕೊಂಡಗುಳಿ ಕೇಶಿರಾಜನಂತೆ ಇವನೂ ಸ್ಥಾವರಲಿಂಗಾರಾಧಕನಾಗಿದ್ದನೆಂದು ಭಾವಿಸಬೇಕಾಗುತ್ತದೆ. ವಚನಕಾರರನಂತರದ ಜೇಡರ ದಾಸಿಮಯ್ಯನ ಶಿಷ್ಯ ಪರಂಪರೆ ಮತ್ತೆ ಸ್ಥಾವರಾರಾಧನೆಯ ಕಡೆ ಒಲಿದಿರುವುದನ್ನು ಕಾಣಬಹುದು. ಜೇಡರ ದಾಸಿಮಯ್ಯನ ವಚನಗಳನ್ನು ಕುರಿತು ಬರೆಯುತ್ತಾ ಬಿ. ಜಿ. ಎಲ್. ಸ್ವಾಮಿಯವರು ಅವನಲ್ಲಿ ವೀರಶೈವ ಪರಿಭಾಷೆ ಇಲ್ಲವೆಂದೂ ವರ್ಣಾಶ್ರಮವನ್ನು ನಿಷ್ಠೆಯಿಂದ ಆಚರಣೆಯಲ್ಲಿಟ್ಟುಕೊಂಡಂತೆ ಕಾಣುವ ದಾಸಿಮಯ್ಯನ ಮತ ಮತ್ತು ಬಸವಣ್ಣನವರ ವೀರಶೈವ ಮತ ಭಿನ್ನವೆಂದು ವಾದಿಸಿದ್ದರು.[೨] ಆದರೆ ಎಂ. ಚಿದಾನಂದ ಮೂರ್ತಿಯವರು ಆ ಲೇಖನದಲ್ಲಿ ಎತ್ತಿದ ಸಂಶಯಗಳಿಗೆ ಸೂಕ್ತ ಉತ್ತರವನ್ನು ನೀಡಿ, ಬ್ರಾಹ್ಮಣ ಚಾಂಡಾಲ ಹೊರವೇಷದಲ್ಲಿ ಮಾತ್ರ ಭಿನ್ನರು ಎಂದು ಹೇಳಿರುವ ವಚನವನ್ನು ಮತ್ತು ಚನ್ನಯ್ಯ, ಡೋಹರ ಕಕ್ಕಯ್ಯರಂತಹ ಅಸ್ಪೃಶ್ಯರನ್ನು ಹೊಗಳಿರುವ ವಚನಗಳನ್ನು ಉದಾಹರಿಸಿ ಹೇಗೆ ವೀರಶೈವತ್ವದ ಚೌಕಟ್ಟಿನಲ್ಲಿ ಅಳವಡುತ್ತಾನೆಂಬುದನ್ನು ತೋರಿಸಿಕೊಟ್ಟಿದ್ದಾರೆ.[೩]

**ರೇವಣಸಿದ್ಧ :**

ವೀರಶೈವ ಸಂಪ್ರದಾಯದ ಪಂಚಾಚಾರ್ಯರಲ್ಲಿ ಒಬ್ಬರಾದ ರೇಣುಕಾಚಾರ್ಯ, ಸಿದ್ಧರಾಮನಿಗೆ ಜನನ ಭವಿಷ್ಯ ನುಡಿದ, ಶೈವಮತ ಪ್ರಸಾರಕ್ಕೆ ಶ್ರಮಿಸಿದ ರೇವಣಸಿದ್ಧ ಇವರು ಭಿನ್ನರೋ ಅಭಿನ್ನರೋ ಎಂಬ ವಿಷಯದಲ್ಲಿ ವಿದ್ವಾಂಸರು ಸಾಕಷ್ಟು ಚರ್ಚೆ ನಡೆಸಿದ್ದಾರೆ. ಆದರೆ ತೃಪ್ತಿಕರ ಉತ್ತರ ಇನ್ನೂ ದೊರೆತಂತಿಲ್ಲ. ರೇವಣಸಿದ್ಧರ ಅಭಿಜ್ಞೆ (Identification) ವೀರಶೈವ ಧರ್ಮದ ಇತಿಹಾಸದಲ್ಲಿ ಅತ್ಯಂತ ತೊಡಕಿನ ಸಮಸ್ಯೆಗಳಲ್ಲಿ ಒಂದಾಗಿದೆ. ಪುರಾಣ-ಇತಿಹಾಸಗಳು ಒಂದುಗೂಡಲಾರದ ನಿರ್ವಾತ ಭೂಮಿಕೆ ಉಂಟಾಗಿದೆ. ಶಾಸನದಿಂದಲೇ ಆರಂಭ ಮಾಡುವುದಾದರೆ ರೇವಣಸಿದ್ಧನ ಬಗ್ಗೆ ದೊರೆತಿರುವ ತುಂಬ ಪ್ರಮುಖ ಶಾಸನವೆಂದರೆ ಸಿರಿವಾಳದ ಶಾಸನ.[೪] ಅದರಲ್ಲಿ ಮೊದಲು ಶಿವಯೋಗಿ ಶಾಂತಿಮಯ್ಯನನ್ನು ಹೊಗಳಲಾಗಿದೆ. ಅವನಿಗೆ 'ಶ್ರೀಮದಣಿಮಾದ್ಯಷ್ಟಗುಣಸಂಪಂನರುಂ ತತ್ವಜ್ಞಾನಪ್ರಸಂನರುಂ ಷಡಂಗಯೋಗಸಂಗದರುಂ ಸಸಾರಭ್ಯ ಸಂಗ ನಿಸಂಗರುಮಪ್ಪ' ಎಂಬ ವಿಶೇಷಣಗಳನ್ನು ಬಳಸಲಾಗಿದೆ. ಮುಂದೆ ಅವನ ಮಗ ರೇವಣಸಿದ್ಧಯ್ಯನ ವಿಷಯ ಬಂದಿದೆ. ಇವನ ಕೆಲವು ಪವಾಡಗಳು ವರ್ಣಿತವಾಗಿವೆ. ಒಬ್ಬಳ (= ಒಂದು ಬಳ್ಳ) ತಂಡುಲ ಪವಾಡ, ತೊರೆಯ ಪವಾಡ, ಧರೆ ಬೆಂದ ಪವಾಡ, ತವನಿಧಿಯ ಪವಾಡ, ಗೀತ ಪವಾಡ, ಮತ್ತು ನೃತ್ಯ ಪವಾಡಗಳೆಂದು ಆರು ಪವಾಡಗಳು ವರ್ಣಿತವಾಗಿವೆ. ಅನಂತರ ಇವನು ಸಿದ್ಧ ಸಾತೇಶ್ವರ ದೇವಾಲಯಕ್ಕಾಗಿ ಪಾದ ಪ್ರಕ್ಷಾಳನ ಮಾಡಿಸಿಕೊಂಡು ದಾನವನ್ನು ಪಡೆದ ವಿಷಯವನ್ನು

---

೧. ಎಇ XXIX, III ಪು. ೧೪೨ ಕ್ರಿಶ. ೧೨ ಶ.ಮಾ.

೨. ಬಿ. ಜಿ. ಎಲ್. ಸ್ವಾಮಿ : 'ಜೇಡರ ದಾಸಿಮಯ್ಯನ ಮತವಿಚಾರ' ಸಾಧನೆ ೯-೧ ಪು. ೬೫-೬೮.

೩. ಎಂ. ಚಿದಾನಂದ ಮೂರ್ತಿ : ಲಿಂಗಾಯತ ಅಧ್ಯಯನಗಳು, ಪು.೬೭-೭೦.

೪. ಕ.ಭಾ. ೯:೩ ಶಹಪುರ (ತಾ) ಕ್ರಿಶ. ೧೧೮೭.

ತಿಳಿಸುತ್ತದೆ. ಈ ಶಾಸನದಿಂದ ರೇವಣದೇವಯ್ಯ ಶಾಂತಿಮಯ್ಯನ ಶಿಷ್ಯನಾಗಿದ್ದು ಸಿದ್ಧಸಾತೇಶ್ವರ ದೇವಾಲಯದ ಸ್ಥಾನಪತಿಯಾಗಿದ್ದನೆಂದು ಭಾವಿಸಲು ಅವಕಾಶವಿದೆ. ಈ ರೀತಿಯ ದಾನ ಸ್ವೀಕಾರ ಮತ್ತು ಸ್ಥಾವರ ಆರಾಧನೆ ವೀರಶೈವ ಧರ್ಮದ ದೃಷ್ಟಿಯಿಂದ ಅಷ್ಟೇನೂ ಪ್ರಿಯವಾದ ನಡವಳಿಕೆಯಾಗಿರಲಿಲ್ಲ. ಆದರೆ ಈ ವಿಷಯದಲ್ಲಿ ಬಸವ ಪೂರ್ವ ಮತ್ತು ಬಸವಣ್ಣನವರನಂತರದ ಕಾಲದಲ್ಲಿ ಆ ನಿಲವು ಅಷ್ಟು ಗಟ್ಟಿಯಾಗೇನೂ ಉಳಿದು ಬಂದಂತಿಲ್ಲ. ಇಂಥ ಕಡೆ ಶೈವ-ವೀರಶೈವಗಳ ಮಧ್ಯೆ ಗೆರೆಯನ್ನು ಎಳೆದು ತೋರಿಸುವುದು ಕ್ಲಿಷ್ಟವೇ ಆಗುತ್ತದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ವಿಷಯವೆಂದರೆ ರೇವಣಸಿದ್ಧನ ಗುರು ಶಾಂತಿಮಯ್ಯನನ್ನು ಹೊಗಳುವಾಗ 'ಶ್ರೀಮದಣಿಮಾದ್ಯಷ್ಟ ಗುಣಸಂಪನರುಂ' ಎಂಬ ವಿಶೇಷಣ ಬರುತ್ತದೆ. ಇವು ಸಾಧಕರ ಅಷ್ಟ ಸಿದ್ಧಿಗಳಾಗಿದ್ದ, ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ ಮತ್ತು ವಶಿತ್ವ[೧] - ಇವು ವೀರಶೈವದ ಸಾಧನಪಥಕ್ಕಿಂತಲೂ ಸಿದ್ಧ-ನಾಥ ಪಂಥದ ಒಲವನ್ನು ತೋರಿಸುತ್ತವೆ. ಶಾಂತಿಮಯ್ಯ ಈ ಶಾಸನದಲ್ಲಿ ವಿಶೇಷವಾಗಿ ಕೀರ್ತಿತನಾಗಿದ್ದಾನೆ. ಈ ಹೆಸರಿಗೆ ಸಮೀಪವಾದ ಹೆಸರುಗಳಿರುವ ಇನ್ನೂ ಎರಡು ಶಾಸನಗಳು ದೊರೆಯುತ್ತವೆ.[೨]

ಸಿರಿವಾಳದ ಶಾಸನದಲ್ಲಿ ರೇವಣದೇವಯ್ಯನ ಪವಾಡಗಳನ್ನು ಹೇಳುವಾಗ ತವನಿಧಿಯ ಪವಾಡ ಹೇಳುವ ಸಂದರ್ಭದಲ್ಲಿ 'ಮುನ್ನೊಮ್ಮೆ ಸಿದ್ಧನಾಗಿಯು' ಎಂದು ಬರುವುದರಿಂದ ಈ ಶಾಸನದ ರೇವಣನಿಗಿಂತ ಹಿಂದೆ ಸಿದ್ಧರೇವಣನೊಬ್ಬ ಇದ್ದನೆಂದು ಊಹಿಸಲು ಅವಕಾಶವಿದೆ. ರೇವಣಸಿದ್ಧನ ಆರು ಪವಾಡಗಳಲ್ಲಿ ಒಬ್ಬೆಳ ತಂಡುಲ ಪವಾಡ, ಧರೆ ಬೆಂದ ಪವಾಡ ಮತ್ತು ತವನಿಧಿಯ ಪವಾಡಗಳು ಹರಿಹರ ರಚಿಸಿರುವ ರೇವಣ ಸಿದ್ಧೇಶ್ವರ ರಗಳೆಯಲ್ಲಿ ಉಕ್ತವಾಗಿವೆ. ಶಾಸನೋಕ್ತ ರೇವಣಸಿದ್ಧ ಮತ್ತು ಹರಿಹರ ಕವಿಯ ರೇವಣಸಿದ್ಧ ಒಬ್ಬ ವ್ಯಕ್ತಿಯೇ ಎಂದು ನಂಬಲು ಸಾಧ್ಯವಿಲ್ಲವೆಂದು ಶಾಂತರಸರು ಹೇಳುವರಾದರೂ ಅದಕ್ಕೆ ಖಚಿತ ಕಾರಣಗಳನ್ನು ನೀಡಿಲ್ಲ.[೩]

ರೇವಣಸಿದ್ಧರ ವಿಷಯ ಲಕ್ಷ್ಮೇಶ್ವರದ ಶಾಸನದಲ್ಲಿ ಉಕ್ತವಾಗಿದೆ.[೪] 'ಶ್ರೀಮದುಮಾಮನೋಹರವೆನಿಪ್ಪ ಸದಾಶಿವನಾ ಮಹಾಗಣಸ್ತೋಮದ ಮಧ್ಯದಲ್ಲಿ ರಜತಾದ್ರಿಯೊಳೋಲಗವಿತ್ತು ದಿವ್ಯ ತೇಜೋಮಯಮೂರ್ತಿ ದಾರುಕನಿಮಿತ್ತದ ಸೊಂಕಿನೊಳಂದು ರೇಣುಕಂಗೀ ಮಹಿಯಲ್ಲಿ ಲಿಂಗದುದರೋದ್ಭವನೇಮವನಿತ್ತಕ್ಕಜಂ' ಎಂದು ಹೇಳಿ ಲಿಂಗೋದ್ಭವನಾದ

---

೧. ಟಿ.ವಿ. ವೆಂಕಟಾಚಲ ಶಾಸ್ತ್ರೀ : ಶ್ರೀವತ್ಸ ನಿಘಂಟು ಪು. ೪೮೭-೪೮.

೨. i. ಭೂಯಾರ ಶಾಸನದಲ್ಲಿ ನೆಲುವಿಗೆಯ ಸಾತ್ಯೆಯಗಳ ವಿಷಯ ಬರುತ್ತದೆ. ಅಭಿನವ ಮಲ್ಲಿಕಾರ್ಜುನ ದೇವಾಲಯಕ್ಕೆ ನೆಲುವಿಗೆಯ ಶಿವಯೋಗಿ ಸಾತೈಯ್ಯರ ಶಿಷ್ಯ ಬಸವಯ್ಯ ದಾನ ಪಡೆದ ವಿಷಯವನ್ನು ತಿಳಿಸುತ್ತದೆ. ಎಸ್‌ಐಐ XX ಇಂಡಿ ೧೩೮ ಕ್ರಿಶ. ೧೧೬೨.

ii. ಬಸವಾಪಟ್ಟಣದ ಶಾಸನೋಕ್ತ ನೆಲುವಿಗೆಯ ಶಿವಯೋಗಿ ಸಾತಯ್ಯನಿಗೆ ರೇವಣನೆಂಬ ಮಗ, ಕಂಚಲದೇವಿ ಎಂಬ ಮಗಳು ಮತ್ತು ಕುಮಾರ ರೇವಣನೆಂಬ ಮೊಮ್ಮಗ ಇದ್ದ ವಿಷಯವನ್ನು ತಿಳಿಸುತ್ತದೆ. ಈ ಎರಡು ಶಾಸನೋಕ್ತ ನೆಲುವಿಗೆ ಸಾತಯ್ಯರು ಅಭಿನ್ನರೆಂದು ತಿಳಿಸುವ ಬಿ. ಆರ್. ಹಿರೇಮಠ ಅವರ ಸಮೀಕರಣ ಸಂಭಾವ್ಯವೆನ್ನಿಸುತ್ತದೆ. (ರೈ) ಎಕ V ಅರಕಲಗೂಡು ೪೨ ಕ್ರಿಶ. ೧೨೬೨. ಇವರಿಂದ ಸಿರಿವಾಳದ ಶಾಂತಿಮಯ್ಯ ಬೇರೆಯಾಗಿ ನಿಲ್ಲುತ್ತಾನೆ. ಬಿ. ಆರ್. ಹಿರೇಮಠ: 'ಶಾಸನೋಕ್ತ ಮರುಳಸಿದ್ಧ ಹಾಗೂ ರೇವಣಸಿದ್ಧ' ಬ.ಪ. ೧೧-೨ ಪು. ೬೭-೭೦.

iii. ಇವರಲ್ಲದೆ ಕಡ್ಲೆವಾಡದ ಶಾಸನದಲ್ಲಿ ಸೋಮನಾಥ ದೇವರ ಹಿರಿಯ ಮಠದಾಚಾರ್ಯ ಸಾತಿಮಯ್ಯಗಳು ಕಾಲು ತೊಳೆಸಿಕೊಂಡು ದಾನಪಡೆದ ಪ್ರಸಕ್ತಿ ಇದೆ. ಇವನೂ ಭಿನ್ನನಾಗಿಯೇ ಕಾಣುತ್ತಾನೆ. ಎಸ್‌ಐಐ XX ಸಿಂದಗಿ ೮೦ ಕ್ರಿಶ. ೧೧೯೨.

೩. ಶಾಂತರಸ : ಪೂರ್ವೋಕ್ತ ಪು. ೭೨-೭೩.

೪. ಶಿವಾನುಭವ ೪-೩ ಪು. ೧೨೯-೧೩೦ ಕ್ರಿಶ. ೧೫೧೩.

ರೇಣುಕರು ಸಾವಿರದ ನಾಲ್ಕು ನೂರು ವರ್ಷ ಲೀಲೆಯಿಂದಿದ್ದುದನ್ನು ಹೇಳುತ್ತದೆ. ಈ ವರ್ಣನೆ ವೀರಶೈವ ಪುರಾಣಗಳಲ್ಲಿ ನಿರೂಪಿತವಾದ ವೀರಶೈವ ಪಂಚಾಚಾರ್ಯರಲ್ಲೊಬ್ಬರಾದ ರೇಣುಕಾಚಾರ್ಯರಿಗೆ ಸರಿಹೊಂದುತ್ತವೆ. ಆದ್ದರಿಂದ ಈ ಶಾಸನೋಕ್ತ ರೇಣುಕ, ಪಂಚಾಚಾರ್ಯರಲ್ಲಿ ಒಬ್ಬರಾದ ರೇಣುಕರೆಂಬುದು ನಿಶ್ಚಿತ. ರೇವಣಸಿದ್ಧ ಹದಿನಾಲ್ಕು ನೂರು ವರ್ಷ ಮರ್ತ್ಯದಲ್ಲಿದ್ದು ಸೋಮೇಶ್ವರನಲ್ಲಿ ಐಕ್ಯನಾಗಿ ಜಗದೀಶ ತನ್ನನ್ನು ಕಳುಹಿಸಿದ ಕಥನ ತೀರಲೆಂದು ಮತ್ತೆ ಸಿದ್ಧೇಶ್ವರನೆಂಬ ಹೆಸರಿನಿಂದ ಜಂಗಮಾಕಾರನಾಗಿ ಭಕ್ತಗಣಕ್ಕಾನಂದವನ್ನು ಹುಟ್ಟಿಸುತ್ತಾ ಲೀಲಾವಿನೋದದಿಂದ ಇದ್ದು ಪುಲಿಗೆರೆಗೆ ಬಂದು ತನ್ನ ಸಗುಣ ಲೀಲೆ ಸಾಕೆಂದು ಸೋಮೇಶ್ವರ ಸಾನ್ನಿಧ್ಯದಲ್ಲಿ ಐಕ್ಯನಾದನೆಂದು ಶಾಸನ ಹೇಳುತ್ತದೆ. ರೇಣುಕರ ಈ ಎರಡನೆಯ ಜನ್ಮದ ವಿಷಯ ಈ ಶಾಸನವನ್ನು ಬಿಟ್ಟರೆ ಬೇರೆಲ್ಲಿಯೂ ಉಕ್ತವಾದಂತೆ ಕಂಡು ಬರುವುದಿಲ್ಲ.[೧]

ಚೌಡದಾನಪುರದ ಒಂದು ಶಾಸನದಲ್ಲಿ ಕಾರಣಿಕರೊಳು ಕಾರಣಿಕರೆನಿಪ ಸಿದ್ದರೇವಣದೇವನ ಕಾರುಣ್ಯದ ಶಿಶು ಭಕ್ತ್ಯಾಚಾರದ ಚೀಲಾಳದೇವನ ಪ್ರಸ್ತಾಪ ಬರುತ್ತದೆ.[೨] ಈ ಶಾಸನೋಕ್ತ ಸಿದ್ಧರೇವಣ ಮತ್ತು ಸಿರಿವಾಳ ಶಾಸನೋಕ್ತ ರೇವಣದೇವ ಭಿನ್ನರೆಂದು ಬಿ. ಆರ್. ಹಿರೇಮಠ ಅವರು ಭಾವಿಸುತ್ತಾರೆ.[೩] ಆದರೆ ಅದು ಅಷ್ಟು ಸಮರ್ಥನೀಯವಾಗಿಲ್ಲ. ಬಯಿರತ್ತಿ ಶಾಸನದ ರೇವಣಸಿದ್ಧ (ಕ್ರಿ.ಶ. ೧೦೦೦) ಪಂಚಾಚಾರ್ಯ ರೇವಣಸಿದ್ಧ ಒಬ್ಬನೇ ಎಂದು ಶ್ರೀ ಮಲ್ಲಿಕಾರ್ಜುನ ಅಭಿಪ್ರಾಯ ಪಡುತ್ತಾರೆ.[೪] ಅವ್ವೆಯರ ಹಳ್ಳಿ ಶಾಸನದಲ್ಲಿ ಒಂದು ಪವಾಡ ಸಂದರ್ಭದಲ್ಲಿ ಉಕ್ತನಾಗುವ ಮರುಳಸಿದ್ಧ ರೇವಣಸಿದ್ಧರ ಮಗ ಎಂಬ ವಿಷಯ ಬರುತ್ತದೆ (ಕ್ರಿ.ಶ. ೧೧೯೩)[೫].

ಇದುವರೆಗೆ ಗಮನಿಸಿದ ಸಿರಿವಾಳ ಶಾಸನೋಕ್ತ ರೇವಣದೇವ (ಕ್ರಿ.ಶ. ೧೧೮೭), ಲಕ್ಷ್ಮೇಶ್ವರ ಶಾಸನದ ರೇವಣಾಚಾರ್ಯ (ಕ್ರಿ.ಶ.೧೫೧೩), ಚೌಡದಾನಪುರ ಶಾಸನದ (ಕ್ರಿ.ಶ. ೧೨೬೨) ಸಿದ್ಧರೇವಣ, ಅವ್ವೆಯರ ಹಳ್ಳಿ ಶಾಸನದ ಮರುಳಸಿದ್ಧನ ತಂದೆ ರೇವಣಸಿದ್ಧ (ಕ್ರಿ.ಶ. ೧೧೯೩), ಬಯಿರತ್ತಿ ಶಾಸನದ ರೇವಣಸಿದ್ದಯ ದೇವ (ಕ್ರಿ.ಶ. ೧೦೦೦)- ಈ ಶಾಸನಗಳ ಜೊತೆಯಲ್ಲಿ ಮಸೂತಿ (ಕ್ರಿ.ಶ ೧೧೫೨), ನರೇಗಲ್ಲ (ಕ್ರಿ.ಶ. ೧೧೮೨) ಇಂಗಳಗಿ ರೇವಣೇಶ್ವರ ಎಂಬ ದೇವರ ಹೆಸರು; ಪುಳಜೆ ಶಾಸನ (ಕ್ರಿ.ಶ. ೧೨೦೦)ದಲ್ಲಿ ರೇವಣಮಡು ಎಂಬ ಜಲಾಶಯದ ಹೆಸರು ಕಂಡುಬರುತ್ತದೆ.[೬]

ಸಿರಿವಾಳದ ಶಾಸನವೊಂದರಲ್ಲಿ ಮಾತ್ರ 'ಭೂಲೋಕ ಸಿದ್ಧ ಪ್ರಸಿದ್ಧರಪ್ಪ ರೇವಣ ದೇವಯ್ಯ'ಗಳು ನೇರವಾಗಿ ದಾನವನ್ನು ಸ್ವೀಕರಿಸುವುದು ಕಂಡುಬರುತ್ತದೆ. ಚೌಡದಾನಪುರದ ಶಾಸನದಲ್ಲಿ 'ಕಾರಣಿಕರೆನಿಪರೊಳು ತಾಂ ಕಾರಣಿಕನೆನಿಪ್ಪ ಸಿದ್ಧರೇವಣದೇವನ

---

೧. ರೇಣುಕಾಚಾರ್ಯರ ಪುನರಾವತಾರ ಬೇರೆ ಯಾವುದೇ ಮೂಲದಲ್ಲಿ ಬರದೆ ಇದೊಂದೇ ಶಾಸನದಲ್ಲಿ ಬರುವುದರಿಂದ, ಪುಲಿಯ ಸಿದ್ಧೇಶ್ವರನನ್ನು ಪುರಾಣ ಪ್ರಸಿದ್ಧ ರೇಣುಕಾಚಾರ್ಯರೊಂದಿಗೆ ಸಮೀಕರಿಸಿ ಅವರ ಅವತಾರವೆಂದು ಹೇಳಿ ಸಿದ್ಧೇಶ್ವರನನ್ನು ಬಹುಶಃ ಉದಾತ್ತೀಕರಿಸಲು ಹೀಗೆ ಕಲ್ಪಿಸಿರಬಹುದೆಂಬ ಅನುಮಾನ ಬರುತ್ತದೆ.

೨. ಎಸ್ಐಐ XVIII ರಾಣೆಬೆನ್ನೂರು ೨೪೫ ಕ್ರಿಶ. ೧೨೬೨.

೩. ಬಿ. ಆರ್. ಹಿರೇಮಠ : ಪೂರ್ವೋಕ್ತ ಲೇಖನ ಬ.ಪ ೧೧-೨ ಪು. ೬೯. ಸಿರಿವಾಳ ಶಾಸನೋಕ್ತ (ಕ್ರಿಶ. ೧೧೮೭) ಶಾಂತಿಮಯ್ಯನ ಶಿಷ್ಯ ರೇವಣ; ಚೌಡದಾನಪುರ ಶಾಸನೋಕ್ತ ಸಿದ್ಧರೇವಣನ ಶಿಷ್ಯ-ಚೀಲಾಳ (ಕ್ರಿಶ. ೧೨೬೨). ಈ ಎರಡೂ ಶಾಸನಗಳಲ್ಲಿ ಸಾಮಾನ್ಯ ವ್ಯಕ್ತಿ 'ರೇವಣ'. ಒಂದು ಶಾಸನದಲ್ಲಿ ಶಿಷ್ಯ ಇನ್ನೊಂದರಲ್ಲಿ ಗುರು; ಎರಡೂ ಶಾಸನಗಳು ಕಾಲದ ದೃಷ್ಟಿಯಿಂದ ರೇವಣನಿಗೆ ಹೊಂದಿಕೆಯಾಗುತ್ತವೆ. ಆದ್ದರಿಂದ ಭಿನ್ನರಾಗಬೇಕಿಲ್ಲ.

೪. ಎಂ. ಎಂ. ಕಲಬುರ್ಗಿ : ಶಾಶಿಶ ಪು. ೪೮.

೫. ಅದೇ. ಪು. ೫೧.

೬. ಅದೇ. ಪು. ೫೩.

ಕಾರುಣ್ಯದ ಶಿಶು ಚೀಲಾಳನ' ವಿಷಯ ಬರುತ್ತದೆ. ಅವ್ವೆಯರ ಹಳ್ಳಿ ಶಾಸನದಲ್ಲಿ ರೇವಣ ಸಿದ್ಧ ತಂದೆ ಅಥವಾ ಗುರುವಾಗಿ ಕಂಡು ಬರುತ್ತಾನೆ. 'ಮೂಲೋಕ ಅಜಿವಹಿ ಪವಡದ' ವಿಷಯ ಬರುತ್ತದೆ. ಬಯಿರತ್ತಿ ಶಾಸನದಲ್ಲಿಯೂ 'ಮುಸಕುಂದ ಮಹಾರುಸಿಯ ಪಿತಾಮ ರೇವಣಸಿದ್ದೆಯ ದೇವರಿದ' ಗುರುವಾಗಿಯೇ ಕಾಣಿಸಿಕೊಳ್ಳುತ್ತಾನೆ. ಅವ್ವೆಯರ ಹಳ್ಳಿಯ ಮತ್ತು ಚೌಡದಾನಪುರದ ಶಾಸನಗಳು ಗುರುಸ್ಥಾನದಲ್ಲಿ ರೇವಣರನ್ನು ಉಲ್ಲೇಖಿಸುತ್ತವೆ. ಅಲ್ಲದೆ ಇವು ಸಿರಿವಾಳದ ಶಾಸನದ ಕಾಲಕ್ಕೆ ಹೊಂದುತ್ತವೆ. ಲಕ್ಷ್ಮೇಶ್ವರದ ಶಾಸನ ಕಾಲದ ದೃಷ್ಟಿಯಿಂದ ಈಚಿನ ಶಾಸನವಾದರೂ ರೇವಣಸಿದ್ಧನ ಕಾಲವನ್ನು ಅದರಿಂದ ನಿರ್ದಿಷ್ಟಪಡಿಸಲು ಸಾಧ್ಯವಿಲ್ಲ. ಬಯಿರತ್ತಿ ಶಾಸನದ ಕಾಲ ಕ್ರಿ.ಶ. ೧೦೦೦. ಇದೊಂದು ಶಾಸನ ಮಾತ್ರ ಕಾಲದ ದೃಷ್ಟಿಯಿಂದ ರೇವಣಸಿದ್ಧನಿಗೆ ಅನ್ವಯವಾಗುವುದಿಲ್ಲ. ಈ ದೃಷ್ಟಿಯಿಂದ ಸಿರಿವಾಳದ, ಚೌಡದಾನಪುರದ, ಅವ್ವೆಯರ ಹಳ್ಳಿಯ ಮತ್ತು ಲಕ್ಷ್ಮೇಶ್ವರದ ಶಾಸನಗಳಲ್ಲಿ ಬರುವ ರೇವಣರು ಒಬ್ಬ ವ್ಯಕ್ತಿಗೆ ಅನ್ವಯವಾಗುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಅಲ್ಲದೆ ಭೂಲೋಕ ಸಿದ್ಧಪ್ರಸಿದ್ಧ, ಕಾರಣಿಕರೆನಿಪರೊಳು ಕಾರಣಿಕನೆನಿಪ್ಪ, ಮೂಲೋಕ ಅಜಿವಹಿ ಪವಡ, ಎಂಬಂತಹ ವಿಶೇಷಣಗಳು ಪ್ರಸಿದ್ಧಿಯ ದೃಷ್ಟಿಯಿಂದ ಸಾಮಾನ್ಯ ಅಂಶವನ್ನು ಒಳಗೊಂಡಂತೆ ಕಾಣುತ್ತವೆ.

ಹರಿಹರ ಕವಿ ಚಿತ್ರಿಸಿರುವ ರೇವಣ ಸಿದ್ಧೇಶ್ವರ ರಗಳೆಯಲ್ಲಾಗಲೀ[1] ಅಥವಾ ಶಿವಯೋಗಿ ರಚಿಸಿರುವ ಸಿದ್ಧಾಂತ ಶಿಖಾಮಣಿಯಲ್ಲಾಗಲೀ[2] ರೇಣುಕರು ಭೂಲೋಕದಲ್ಲಿ ಹುಟ್ಟಲು ಶಿವನ ಆಜ್ಞೆಯೇ ಕಾರಣವಾಗಿದೆ. ಹರಿಹರನ ರಗಳೆಯಲ್ಲಿ ಬರುವ ಚಿತ್ರ ಲಾಕುಳಶೈವನ ವರ್ಣನೆಗೆ ಹತ್ತಿರವಿದೆ. ಲಾಕುಳದ ಲಾಕ್ಷಣಿಕನಮ್ಮಮ್ಮ ಬರುತಿರ್ದ ಆಕಸ್ಮಿಕಂ ಮರುಳನಂತು ನಡೆತರುತಿರ್ದ, ಕಂತೆಯ ಕಮನೀಯ ರೂಪಂ, ವಜ್ರಕುಂಡಲದ ವಜ್ರಧರ, ಲಾಕುಳದ ಲೋಕೈಕ ಬಂಧು[3] ಎಂಬ ವರ್ಣನೆಗಳಾಗಲಿ, ತಟಾಕಂಗಳಂ ಕಟ್ಟಿಸುತ್ತಂ, ಶಿವನಿಳಯಗಳನೆತ್ತಿಸುತ್ತಂ, ಆರವೆಗಳನಿಕ್ಕಿಸುತ್ತಂ, ಶಿವಪುರಂಗಳ ಮಾಡಿಸುತ್ತಂ, ಸತ್ರಂಗಳಂ ನಿರ್ಮಿಸುತ್ತಂ[4] ಎಂಬ ಸಾಮಾಜಿಕ-ಧಾರ್ಮಿಕ ಚಟುವಟಿಕೆಗಳಾಗಲಿ ಅವನನ್ನು ಲಾಕುಳ ಶೈವನನ್ನಾಗಿಯೇ ಪರಿಭಾವಿಸಿದಂತೆ ಪ್ರೇರಣೆ ನೀಡುತ್ತವೆ. ಅಲ್ಲದೆ ಶಿವಾಗಮಗಳಲ್ಲಿ ರಚಿತವಾದಂತೆ ಶಿವನ ಮುಖದಿಂದ ಅವನು ಜನ್ಮವನ್ನು ಪಡೆದಿಲ್ಲ.[5] ಸಾಂಪ್ರದಾಯಿಕವಾಗಿ ಅವನು ೧೪೦೦ ವರ್ಷಗಳು ಜೀವಿಸಿದನೆಂದು ಹೇಳುವುದುಂಟು. ಆದರೆ ಅದು ಅಸಾಧ್ಯ. ರೇವಣ ಸಿದ್ಧೇಶ್ವರ ಬಿಜ್ಜಳನ ಕಾಲದಲ್ಲಿ ಮಂಗಳವಾಡಕ್ಕೆ ಬಂದಂತೆ ಮತ್ತು ಅವನ ಮಗಳನ್ನು ಮದುವೆಯಾದಂತೆ ಹರಿಹರ, ರಗಳೆಯಲ್ಲಿ ತಿಳಿಸುತ್ತಾನೆ. ಅಲ್ಲದೆ ಚೋಳ, ಚೇರ, ಮಲೆಯಾಳ ರಾಜಪುತ್ರಿಯರನ್ನೂ ಮದುವೆಯಾದಂತೆ ವರ್ಣಿಸಿದ್ದಾನೆ. ಚೋಳರಾಜ ಪುತ್ರಿ ಸೌಂದರಿಯ ಗರ್ಭದಲ್ಲಿ ರುದ್ರಮುನಿ ಹುಟ್ಟಿದನೆಂದು ತಿಳಿದು ಬರುತ್ತದೆ. ಅಲ್ಲದೆ ರೇವಣಸಿದ್ಧನ ಮಡದಿಯರ ಕೆಲವು ವಚನಗಳು ದೊರೆತಿವೆ[6] ಎಂಬ ಅಭಿಪ್ರಾಯವಿರುವುದಾದರೂ ಅವುಗಳ ಪ್ರಾಮಾಣ್ಯ ಸಿದ್ಧವಾಗಬೇಕಾಗಿದೆ. ಶಾಂತರಸರು "ಪುರಾಣೋಕ್ತ ಮತ್ತು ಹರಿಹರ ರಗಳೆಯಲ್ಲಿ ಬಂದಿರುವ ರೇವಣಸಿದ್ಧ ಒಬ್ಬನೇ

---

೧. (ಸಂ) ಎಂ.ಎಸ್ ಸುಂಕಾಪುರ : ರೇಸಿರ ನೂ. ಪು.ರ.ಪು. ೧೫೦-೫೨.

೨. (ಸಂ) ಕಾಶೀನಾಥ ಶಾಸ್ತ್ರೀ : ಸಿದ್ಧಾಂತ ಶಿಖಾಮಣಿ-ಪರಿಚ್ಛೇದ : ೩. ಪು. ೩೨.

೩. (ಸಂ) ಎಂ. ಎಸ್. ಸುಂಕಾಪುರ. ರೇಸಿರ ನೂ.ಪು.ರ. ಪು. ೧೬೦.

೪. ಅದೇ ಪು. ೧೭೨.

೫. M. R. Sakhare : History and Philosophy of Lingayat Religion. ಪು.೨೫೦.

೬. ಸಂ: ಎಂ.ಎಸ್. ಸುಂಕಾಪುರ. ಸಕಲ ಪುರಾತನರ ವಚನಗಳು-೩.
ರೇಕಮ್ಮನ ವಚನಗಳು. ಅಂಕಿತ ಶ್ರೀಗುರು ಸಿದ್ಧೇಶ್ವರ;
ಚೆನ್ನಮಲ್ಲಿಕಾರ್ಜುನ : ಸಕಲ ಪುರಾತನರ ವಚನಗಳು. ಪು. ೧೯೩.

ಆಗಿದ್ದು ಅವನು ಆರಂಭದಲ್ಲಿ ಶೈವನಾಗಿದ್ದು ಮುಂದೆ ವೀರಶೈವಕ್ಕೆ ವಾಲಿರುವ ಸಾಧ್ಯತೆ ಇದೆಯೆಂದೂ ಅವನ ಕಾಲ ಕ್ರಿ.ಶ. ೧೦೫೦ ರಿಂದ ೧೧೩೦ ರ ವರೆಗೆ ಎಂದು ಭಾವಿಸಬಹುದೆಂದು ಹೇಳಿ ಮುಂದೆ ಬಂದ ಪುರಾಣಕಾರರು ಆತನನ್ನು ಪವಾಡಪುರುಷನನ್ನಾಗಿ ಮಾಡಿ ಆತನ ಸುತ್ತ ನಂಬಲಾಗದಂತಹ ಸಂಗತಿಗಳನ್ನು ಪೆಣೆದರೆಂದು ಕಾಣುತ್ತದೆ" ಎಂದು ಅಭಿಪ್ರಾಯಪಟ್ಟಿದ್ದಾರೆ.[೧] ಒಟ್ಟಿನಲ್ಲಿ ಆತ ಆರಂಭದಲ್ಲಿ ಲಾಕುಳ ಶೈವನಾಗಿದ್ದು ಮುಂದೆ ಬಸವ ಮುಂತಾದವರಂತೆ ಲಿಂಗಧಾರಣ ಮಾರ್ಗವನ್ನು ಅನುಸರಿಸಿ ಅದನ್ನು ಪ್ರಚಾರಪಡಿಸಿರಬೇಕು.[೨] ಆದರೆ ಈ ಅಭಿಪ್ರಾಯಗಳು ಇನ್ನೂ ವಿದ್ವಾಂಸರ ಆಳವಾದ ಪರೀಕ್ಷೆಗೆ ಒಳಗಾಗಬೇಕಾಗಿದೆ.

ರೇವಣ ಸಿದ್ಧರ ಕಾಲವನ್ನು ಕ್ರಿ.ಶ. ೧೦೫೦-೧೧೩೦ ಎಂದು ಶಾಂತರಸರು ಹೇಳಿರುವುದನ್ನು ಒಪ್ಪುವುದು ಕಠಿಣ. ಹರಿಹರನ ಕೃತಿಯಂತೆ ಬಿಜ್ಜಳನ ಮಗಳನ್ನು ಮದುವೆಯಾದನೆಂದು ಭಾವಿಸಿಕೊಂಡರೂ, ಸಿದ್ಧರಾಮನ ಜನ್ಮ ಭವಿಷ್ಯ ಹೇಳಿದನೆಂದು ಭಾವಿಸಿದರೂ ಅವರು ಸೂಚಿಸಿರುವ ಕಾಲ ಹೆಚ್ಚು ಪ್ರಾಚೀನವೆಂದೇ ತೋರುತ್ತದೆ. ಅಲ್ಲದೆ ದೊರೆಯುವ ಮುಖ್ಯ ಶಾಸನಗಳಿಂದ ಸಂಪೂರ್ಣವಾಗಿ ರೇವಣಸಿದ್ಧನನ್ನು ದೂರವಿಡಬೇಕಾಗುತ್ತದೆ. "ಇದರಿಂದ ವ್ಯಕ್ತವಾಗುವ ವಿಷಯವೆಂದರೆ, ಹರಿಹರ ಕವಿಯ ಕಾಲಕ್ಕಾಗಲೇ ಶ್ರೀಜಗದ್ಗುರು ರೇಣುಕ ಭಗವತ್ಪಾದರ ಮತ್ತು ಅವರ ಅವತಾರ ಪುರುಷರೆಂದು ಪ್ರಸಿದ್ಧರಾಗಿದ್ದ ಮಹಾನುಭಾವರ ಚರಿತ್ರೆಗಳು ಐತಿಹ್ಯಗಳಾಗಿ ಮಾರ್ಪಟ್ಟಿದ್ದವು. ಪ್ರಾಚೀನತೆಯ ಕುರುಹುಗಳಾಗಿ ಪೌರಾಣಿಕ ಅಂಶಗಳಿಂದ ಪ್ರಭಾವಿತವಾಗಿದ್ದವು ಎಂಬುದು. ಕವಿಯ ಕಾಲಕ್ಕೆ ಹತ್ತಿರದವರಾದ ರೇವಣಸಿದ್ಧರ ಚರಿತ್ರೆಯೊಂದಿಗೆ ಅವುಗಳನ್ನು ಬೆಸೆದು ಕವಿಯು ತನ್ನ ರಗಳೆಯನ್ನು ಸೃಷ್ಟಿಸಿರುವುದು ಸ್ಪಷ್ಟ... ಹೀಗೆ ರೇಣುಕರು, ರೇವಣಸಿದ್ಧರು, ರೇಣುಕಸಿದ್ಧರು, ಸಿದ್ಧರೇವಣ ಮುಂತಾಗಿ ಪ್ರಸಿದ್ಧರಾದ ಮಹಾತ್ಮರು ಒಬ್ಬರೇ ಎಂಬ ಭಾವನೆ ಬಲಿತು ರೇವಣಸಿದ್ಧೇಶ್ವರ ರಗಳೆ, ರೇಣುಕ ವಿಜಯ ಮುಂತಾದ ಗ್ರಂಥಗಳು ಜನರಲ್ಲಿ ಪ್ರಚಾರಕ್ಕೆ ಬಂದವು."[೩] ಇಂಥ ಒಂದು ಅಭಿಪ್ರಾಯವೂ ಇರುವುದರಿಂದ ರೇಣುಕರು ಪ್ರಕಟವಾಗಿ ೭೦೦ ವರ್ಷ, ಅಪ್ರಕಟವಾಗಿ ೭೦೦ ವರ್ಷ ಇದ್ದರೆಂದು ಪರಂಪರೆ ಮತ್ತು ಶಾಸನವೊಂದು ನಿರೂಪಿಸುವುದರಿಂದ ರೇಣುಕರ ಮುಂದಿನವರನ್ನು ಒಂದು ಪರಂಪರೆಯಾಗಿ ಪರಿಗಣಿಸಬೇಕಾಗುತ್ತದೆ. ಹೆಚ್ಚು ಹೆಚ್ಚು ಹೊಸ ಸಾಮಗ್ರಿಗಳ ಬೆಳಕಿನಲ್ಲಿ ರೇಣುಕರ, ರೇವಣಸಿದ್ಧರ ವಿಷಯ ಸಂಶೋಧನೆಗೆ ತೆರೆದ ಮಾರ್ಗವೇ ಆಗಿದೆ.

**ಬಸವಯುಗ : ಬಸವಣ್ಣ**

ವೀರಶೈವ ಧರ್ಮ ತನ್ನ ಶಿಖರವನ್ನು ಮುಟ್ಟಿದ ಕಾಲವನ್ನು ಬಸವಯುಗ ಎಂದು ಸಾಮಾನ್ಯವಾಗಿ ನಿರ್ದೇಶಿಸಲಾಗುತ್ತದೆ. ಬಸವಣ್ಣ, ವಚನಕಾರರು ಮತ್ತು ವಚನ ಸಾಹಿತ್ಯವನ್ನು ಕುರಿತಂತೆ ಸಮೃದ್ಧವಾದ ಸಾಹಿತ್ಯ ನಿರ್ಮಾಣವಾಗಿದೆ. ಮುಖ್ಯ ಶಾಸನಗಳ ಬೆಳಕಿನಲ್ಲಿ ಬಸವಣ್ಣ ಮತ್ತು ಕೆಲವು ಶರಣರನ್ನು ತಿಳಿಯುವ ಮತ್ತು ವೀರಶೈವ ಧರ್ಮದ ಪ್ರಾಚುರ್ಯವನ್ನು ಅರಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಭಕ್ತಿಯ ಪ್ರತಿಮೂರ್ತಿಯಾದ ಬಸವಣ್ಣನವರು ವೀರಶೈವ ಧರ್ಮಕ್ಕೆ ತಮ್ಮ ಸರ್ವಸ್ವವನ್ನು ಅರ್ಪಿಸಿಕೊಂಡವರು. ವೀರಶೈವ ಧರ್ಮದ ಮೇಲೆ ಎಷ್ಟು ದಟ್ಟವಾದ ಪ್ರಭಾವ ಮುದ್ರೆಯನ್ನು ಒತ್ತಿದರೆಂದರೆ ಮುಂದೆ ಬಂದ ಅನೇಕರು ಅವರೇ ಆ ಧರ್ಮದ ಸ್ಥಾಪಕರೆಂದು ಭಾವಿಸುವಂತಾಯಿತು. ಆದರೆ ವಸ್ತುಸ್ಥಿತಿ ಬೇರೆ ಎಂಬುದು ಈಗಾಗಲೇ ಸ್ಪಷ್ಟವಾಗಿದೆ. ಧಾರ್ಮಿಕ, ಸಾಮಾಜಿಕವಾದ ಬಹು ದೊಡ್ಡ ಆಂದೋಲನದ ಕೇಂದ್ರದ ಕೇಂದ್ರಲ್ಲಿದ್ದ ಬಸವಣ್ಣನವರ ಬದುಕಿಗೆ ಸಂಬಂಧಿಸಿದಂತೆ ಸಮಕಾಲೀನ ಶಾಸನಗಳ ಅಭಾವ, ಕೆಲವು ವಿದ್ವಾಂಸರನ್ನು ಅವರು ಕೇವಲ ಪೌರಾಣಿಕ

---

೧. ಶಾಂತರಸ : ಪೂರ್ವೋಕ್ತ ಪು. ೭೬-೭೭.

೨. ಫ. ಗು. ಹಳಕಟ್ಟಿ : 'ವೀರಶೈವ ಚರಿತ್ರೆಯಲ್ಲಿ ರೇವಣಸಿದ್ಧ ಬಸವಾದಿಗಳಿಗೆ ಸ್ಥಾನವಿದೆಯೇ' ಶಿವಾನುಭವ ೧೩-೧ ಪು. ೨೬೭.

೩ . ಎಂ. ಶಿವಕುಮಾರಸ್ವಾಮಿ : 'ಶ್ರೀ ರೇಣಕ ಭಗವತ್ಪಾದರ ಪವಿತ್ರ ಪರಂಪರೆ' (ಸಂ.) ಸಿ. ಯು. ಮಂಜುನಾಥ್: 'ಹೇಮದೀಪ್ತಿ' ಪು. ೩೨.

ವ್ಯಕ್ತಿಯೆಂದು ಭಾವಿಸುವಂತೆಯೂ ಮಾಡಿದ್ದುಂಟು.[೧] ಆ ಹಿನ್ನೆಲೆಯಲ್ಲಿ ಶಾಸನ ಸಂಪುಟಗಳಲ್ಲಿ ಮತ್ತು ಅಪ್ರಕಟಿತ ಶಾಸನಗಳಲ್ಲಿ ಬಸವಣ್ಣನವರ ವಿಷಯವನ್ನು ಹುಡುಕಲಾರಂಭಿಸಿದರು. ಉದ್ವೇಗದ ಹುಡುಕಾಟದಲ್ಲಿ ಬಸವಣ್ಣನಿಗೆ ಸಂಬಂಧಿಸದ ಮತ್ತು ಸಂಬಂಧಿಸಿದ ಶಾಸನಗಳನ್ನು ಗುರುತಿಸಲಾಯಿತು. ಕೆಲವು ಸಾರಿ ಅದು ಅತಿರೇಕದ ಸ್ಥಿತಿಗೆ ಮುಟ್ಟಿ ಕಸಪಯ್ಯನನ್ನೇ ಕೆಲವರು ಬಸವನೆಂದು ಭ್ರಮಿಸುವಂತೆ ಕೆಲ ಕಾಲ ಮಾಡಿದ್ದುಂಟು.[೨] ಮುಂದೆ ಬಸವಣ್ಣನವರಿಗೆ ಸಂಬಂಧಿಸಿದ ಶಾಸನಗಳನ್ನು ಸಂಪೂರ್ಣವಾಗಿ ಮರುಪರೀಕ್ಷೆ ಮಾಡಬೇಕಾದ ಅಗತ್ಯವೂ[೩] ಒದಗಿತು.

ಬಸವಣ್ಣ ಬಿಜ್ಜಳನಲ್ಲಿ ಉನ್ನತ ಅಧಿಕಾರಿಯಾಗಿದ್ದು, ಧಾರ್ಮಿಕವಾಗಿಯೂ ಅತ್ಯಂತ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದೂ, ಸಮಕಾಲೀನ ಶಾಸನಗಳಲ್ಲಿ ಉಕ್ತವಾಗಿಲ್ಲದಿರುವುದಕ್ಕೆ ತೃಪ್ತಿಕರ ವಿವರಣೆಯನ್ನು ಕೊಡುವುದು ಸ್ವಲ್ಪ ಕಷ್ಟವೇ ಆದರೂ ತನ್ನ ಧಾರ್ಮಿಕ ನಂಬಿಕೆಗೆ ಸಂಪೂರ್ಣ ಬದ್ಧರಾಗಿದ್ದ ಸಂಗಡಿಗರೊಂದಿಗೆ ಬಸವಣ್ಣ ದಾನ ಸ್ವೀಕಾರ, ದಾನ ನೀಡಿಕೆ, ದೇವಾಲಯ ನಿರ್ಮಾಣಗಳನ್ನು ವಿರೋಧಿಸಿದ್ದರಿಂದ ಸಮಕಾಲೀನ ಶಾಸನಗಳಲ್ಲಿ ಉಕ್ತನಾದಂತಿಲ್ಲ. ಬಸವಣ್ಣನ ವಚನಗಳನ್ನು ಗಮನಿಸಿದರೆ ಬಸವಣ್ಣ ಭಂಡಾರದ ಅಧಿಕಾರಿಯಾಗಿದ್ದುದು ಸ್ಪಷ್ಟ. ಆದರೆ ಮುಂದಿನ ಕಾವ್ಯ ಪುರಾಣಗಳು ಮಂತ್ರಿ ಎಂಬಂತೆ ಚಿತ್ರಿಸಿರುವುದು ಕಂಡು ಬರುತ್ತದೆ. ಆ ಕಾಲದಲ್ಲಿ ಉನ್ನತ ಅಧಿಕಾರಿಗಳೆಲ್ಲರಿಗೂ ದಂಡನಾಯಕ, ಮಂತ್ರಿ ಎಂಬಂತಹ ಗೌರವ ಬಿರುದುಗಳನ್ನು ಕೆಲವು ಸಾರಿ ಬಳಸುತ್ತಿದ್ದುದುಂಟು. ಬಹುಶಃ ಅದರಿಂದ ಸಾಹಿತ್ಯ ಕೃತಿಗಳು ಹಾಗೆ ಗ್ರಹಿಸಿ ವರ್ಣಿಸಿರುವ ಸಾಧ್ಯತೆಯೂ ಇದೆ. ಅಲ್ಲದೆ ಬಿಜ್ಜಳನ ಆಸ್ಥಾನದಲ್ಲಿ ಬಹುಮುಖ್ಯ ಮತ್ತು ಆಪ್ತ ಸ್ಥಾನ ಬಸವಣ್ಣನಿಗೆ ಇದ್ದಿರುವ ಸಾಧ್ಯತೆಯೂ ಇದೆ.[೪]

ಶಾಸನಗಳ ಮೂಲಕ ಬಸವಣ್ಣನವರ ವಿಷಯವನ್ನು ಗಮನಿಸಬಹುದು. ಹಿರಿಯೂರು ಶಾಸನ ಕಾಲದ ದೃಷ್ಟಿಯಿಂದ ಬಸವಣ್ಣನವರ ಉಲ್ಲೇಖವಿರುವ ಪ್ರಾಚೀನವಾದ ಶಾಸನ.[೫] ಶಿವಭಕ್ತ ಕುಂಜಸೆಟ್ಟಿ ಶಿವಪದವನ್ನು ಸೇರಲು ತಂದೆ ಕಂಡಸಂಬಿ ಸೆಟ್ಟಿ ಕುಂಜೇಶ್ವರ ದೇವಾಲಯವನ್ನು ಕಟ್ಟಿಸಿದನು. ಆ ದೇವಾಲಯದಲ್ಲಿ ನಿಲ್ಲಿಸಿದ ಶಾಸನದಲ್ಲಿ ಸಿರಿಯಾಳ ಬಾಣ ಚೋಳ ಉದ್ಭಟ ಮುಂತಾದವರ ಹೆಸರಿನ ಮಧ್ಯೆ ಬಸವಣ್ಣನವರ ಹೆಸರು ಉಕ್ತವಾಗಿದೆ. ಬಸವಣ್ಣನವರ ಕಾಲಾನಂತರದ ಸುಮಾರು ೮೦ ವರ್ಷಗಳಲ್ಲಿ ದೂರದ ಅರಸಿಕೆರೆ ತಾಲ್ಲೂಕಿನ ಹಿರಿಯೂರಿನ ಶಾಸನದಲ್ಲಿ ಅವರ ಹೆಸರು ಕಾಣಿಸಿಕೊಂಡಿರುವುದು ವಿಶೇಷವಾಗಿದೆ.

ಬಸವಣ್ಣನವರ ಜೀವನದ ತಿಳವಳಿಕೆಯ ಮೇಲೆ ಅನೇಕ ಹೊಸ ಸಂಗತಿಗಳನ್ನು ತಿಳಿಸಿದ, ಕೆಲವು ಸಂಗತಿಗಳನ್ನು ಸ್ಥಿರಪಡಿಸಿದ ಬಹು ಮುಖ್ಯವಾದ ಶಾಸನವೆಂದರೆ ಅರ್ಜುನವಾಡದಲ್ಲಿ ದೊರೆತ ಶಾಸನ.[೬] ಅದರಲ್ಲಿ 'ಮತ್ತಂ ತರ್ದ್ದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜನ ಮಹಿಮೆಯೆಂತೆಂದಡೆ ಮಂಗಳಮೂರ್ತಿ ಪುರಾತನ ಜಂಗಮ ಲಿಂಗೈಕ ಭಕ್ತಿ ನಿರ್ಭರ ಲೀಲಾಸಂಗಂ ಸಂಗನ ಬಸವಂ ಸಂಗತಿಯಂ ಮಾಳ್ಕೆ ಭಕ್ತಿಯೊಳು (ಳ)ಗನವರತಂ'

---

೧. J.F. Fleet : Bombay gazetteer. ಪು. ೪೮೧.

ಎ. ವೆಂಕಟಸುಬ್ಬಯ್ಯ : ಕೆಲವು ಕನ್ನಡ ಕವಿಗಳ ಕಾಲವಿಚಾರ. ಪು. ೨೭೩.

೨. ಎಂ. ಆರ್. ಶ್ರೀನಿವಾಸ ಮೂರ್ತಿ : ಭಕ್ತಿ ಭಂಡಾರಿ ಬಸವಣ್ಣನವರು, ಪು. ೧೩೪ ಅಡಿಟಿಪ್ಪಣಿ. ಚಿಲಕೂರು ನಾರಾಯಣರಾಯ 'ವೀರಶೈವ ವಾಙ್ಮಯಾವತಾರ' ಪ್ರಕ ೨೧-೪ ಪು. ೮೪.

೩. ಎಂ. ಎಂ. ಕಲಬುರ್ಗಿ : ಬಸವಣ್ಣನವರನ್ನು ಕುರಿತ ಶಾಸನಗಳು, ಪು. ೧೫-೬೭.

೪. P.B.Desai : Basaveshvara and His Times. ಪು. ೫೨-೫೩.

೫. (ರೈ) ಎಕ V ಅರಸಿಕೆರೆ ೧೦೯ ಕ್ರಿಶ. ೧೨೫೮.

೬. ಎಇ XXI ೨ ಪು, ೧೨-೧೪. ಕ್ರಿಶ. ೧೨೬೦.

ಎಂದಿದೆ. ಯಾದವ ಕನ್ನರನ ಕಾಲದಲ್ಲಿ ಅವನ ಪಾದಪದ್ಮೋಪಜೀವಿಗಳಾದ ಚೌಡಿಸೆಟ್ಟಿ ನಾಗರಸರು ಮುಮ್ಮುರಿ ದಂಡಗಳು ಕೊಟ್ಟ ಎರಡು ದತ್ತಿಗಳ ವಿಷಯವನ್ನು ಇದು ಮುಖ್ಯವಾಗಿ ನಿರೂಪಿಸುತ್ತದೆ. ದಾನ ಪಡೆದವನು ಬಸವಣ್ಣನವರ ವಂಶಜ ಯತಿರಾಯ ಹಾಲ ಬಸವಿದೇವ. ಈ ಶಾಸನದ ಅತ್ಯಂತ ಗಮನಾರ್ಹ ಅಂಶವಿರುವುದು ಆ ಶಾಸನ ನೀಡುವ ವಂಶವೃಕ್ಷ ಭಾಗದಲ್ಲಿ :

ಸಂಗನ ಬಸವನ ಅಗ್ರ x
x ಗೈಕಂ ದೇವರಾಜ ಮುನಿಪನ ತನಯಂ।
ಜಂಗಮ ಪರುಸಂxx ರ।
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸರು

ಈ ಪದ್ಯದ ನಷ್ಟ ಅಕ್ಷರಗಳನ್ನು ವಿವಿಧ ವಿದ್ವಾಂಸರು ಬೇರೆ ಬೇರೆಯಾಗಿ ತುಂಬಿ ಕೊಟ್ಟಿದ್ದಾರೆ.[೧] ಅವುಗಳಲ್ಲೆಲ್ಲ ಎಸ್. ಲಕ್ಷ್ಮೀನಾರಾಯಣರಾಯರು ತುಂಬಿ ಕೊಟ್ಟ ಪಾಠವನ್ನು ಹೆಚ್ಚು ವಿದ್ವಾಂಸರು ಒಪ್ಪಿದ್ದಾರೆ.

ಸಂಗನ ಬಸವನ ಅಗ್ರಜ
ಲಿಂಗೈಕಂ ದೇವರಾಜ ಮುನಿಪನ ತನಯಂ।
ಜಂಗಮ ಪರುಸಂ ಕಾವರ।
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸರು[೨]

ಅರ್ಜುನವಾಡದ ಮುಂದಿನ ಶಾಸನ ಪದ್ಯ ಈ ರೀತಿಯಾಗಿದೆ.

ಕಲಿದೇವ ಮುನಿಪನಾತ್ಮಜ।
ಸಲೆ ಮೂಜಗದೊಳಗೆ ಮೆಱೆವ ಮಾ (ನ)ವ ದೇವಂ
ಗೆಲಿದಂ ಅಶನ ಬೆಸನವ।
ಛಲರಧಿಕಂ ಹಾಲ ಬಸವಿದೇವ ಮುನೀಶಂ

ಶಾಸನದ ಈ ಎರಡು ಪದ್ಯಗಳನ್ನು ಅನುಸರಿಸಿ ಮುಂದಿನ ವಂಶವೃಕ್ಷವನ್ನು ಎಸ್.ಲಕ್ಷ್ಮೀನಾರಾಯಣರಾಯರು ಕೊಟ್ಟಿದ್ದಾರೆ.

ಮಾದಿರಾಜ
- ದೇವರಾಜಮುನಿಪ
  - ಕಾವರಸ (ಕ್ರಿ.ಶ.೧೧೮೫-೧೨೧೦)
    - ಕಲಿದೇವರಸ (ಕ್ರಿ.ಶ. ೧೨೧೦-೧೨೩೫)
      - ಹಾಲಬಸವಿದೇವ (ಕ್ರಿ.ಶ. ೧೨೩೫-೧೨೬೦)
- ಸಂಗನ ಬಸವ (ಕ್ರಿ.ಶ.೧೧೬೦-೧೧೮೫)

---

೧. ವಿವರಗಳಿಗೆ ನೋಡಿ : ಎಂ. ಎಂ. ಕಲಬುರ್ಗಿ : ಶಾಶಿಶ ಪು. ೬೩.

೨. ಎಇ XXI ಪು. ೧೬.

ಬಹಳ ವರ್ಷಗಳು ಒಪ್ಪಿಗೆಯಾಗಿದ್ದ ಈ ವಂಶವೃಕ್ಷವನ್ನು ಎಂ.ಎಂ. ಕಲಬುರ್ಗಿಯವರು ಒಪ್ಪದೆ 'ತನಯಂ' ಎಂದರೆ ನೇರವಾದ ಮಗನೆಂದೂ 'ಪ್ರಿಯಸುತಂ' ಎಂದರೆ ಶಿಷ್ಯನೆಂದೂ ಅರ್ಥ ಮಾಡಬೇಕು ಎಂದಿದ್ದಾರೆ. ಅಲ್ಲದೆ ಯಾವ ವ್ಯಕ್ತಿಯೂ ತಾನು ತಂದೆಗೆ ಪ್ರೀತಿಯ ಮಗನೆಂದು ಕರೆದುಕೊಳ್ಳುವುದು ಕೃತ್ರಿಮವೆಂದು ಹೇಳಿ ಬೇರೊಂದು ರೀತಿಯ ವಂಶವೃಕ್ಷವನ್ನು ನೀಡಿದ್ದಾರೆ.[೧]




ಆದರೆ ಸೀತಾರಾಮ ಜಾಗೀರದಾರರು ಈ ವಂಶವೃಕ್ಷವನ್ನು ಒಪ್ಪದೆ ಶಾಸನ ಹಾಕಿಸಿದ ವ್ಯಕ್ತಿ ಕಲಿದೇವನಾಗಿದ್ದರೆ ಕಲಬುರ್ಗಿಯವರ ವಾದ ಸಮರ್ಥನೀಯವಾಗುತ್ತಿತ್ತೆಂದೂ ಶಾಸನವನ್ನು ಹಾಕಿಸಿದವರು ಬೇರೆಯವರಾದ್ದರಿಂದ 'ಪ್ರಿಯಸುತಂ' ಎಂಬ ಮಾತು ಮಗನ ಅರ್ಥದಲ್ಲೇ ಗ್ರಹಿಸಬೇಕೆಂದು ಅಭಿಪ್ರಾಯಪಟ್ಟು ಲಕ್ಷ್ಮೀನಾರಾಯಣರಾಯರು ಅರ್ಥೈಸಿದ ರೀತಿಯನ್ನೇ ಸ್ವೀಕಾರಾರ್ಹವೆಂದು ಭಾವಿಸುತ್ತಾರೆ.[೨]

ಅರ್ಜುನವಾಡದ ಶಾಸನದಿಂದ ಬಸವಣ್ಣನವರ ನಂತರ ಸುಮಾರು ೯೦ ವರ್ಷಗಳಲ್ಲಿ ಬಸವಣ್ಣನ ವಂಶಸ್ಥನಾದ ಹಾಲಬಸವಿ ದೇವ ದಾನ ಸ್ವೀಕರಿಸುವುದು ತಿಳಿದು ಬರುತ್ತದೆ. ಇದು ವೀರಶೈವ ಧರ್ಮ, ಬಸವಣ್ಣನವರ ನಂತರ ಸುಮಾರು ತೊಂಬತ್ತು ವರ್ಷಗಳಲ್ಲಿ ತೆಗೆದುಕೊಳ್ಳುತ್ತಿದ್ದ ಹೆಜ್ಜೆಗಳನ್ನು ಸೂಚಿಸುವಂತಿದೆ. ದಾನವನ್ನು ನಿರಾಕರಿಸುತ್ತಿದ್ದ ವೀರಶೈವ ಧರ್ಮ ಅದನ್ನು ಅಳವಡಿಸಿಕೊಳ್ಳಬೇಕಾಯಿತು. ಮುಂದಿನ ಕೆಲವು ಶಾಸನಗಳಲ್ಲಿ ಕಂಡು ಬರುವ ಸ್ಥಾವರಾರಾಧನೆಯ ಒಲವು, ಹೇಗೆ ಕೆಲವು ವಿಷಯಗಳಲ್ಲಿ ವೀರಶೈವ ಧರ್ಮ ತನ್ನ ಬಿಗಿ ನಿಲುವನ್ನು ಸಡಿಲಗೊಳಿಸಿತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಶಾಸನವಲ್ಲಿ ಬರುವ 'ಮಹಾಮಹೇಶ್ವರರುಂ ಕವಿಳಾಸ ಪುರವರಾಧೀ(ಶ್ವ)ಶ್ವರರುಂ ಸುವರ್ಣ್ನ ವೃಷಭಧ್ವಜಂ ತೇಸಶ್ತಿ ಪುರಾಥ ಪದಾರ್ಚ್ಚಕರುಂ ಮಹಾಲಿಂಗಜಂಗಮಪ್ರಸಾದನಿಯತರುಂ ಸಮಯ ಭಕ್ತಿ ಸಂಪಂನ್ನ ಶ್ರೀ ಬಸರಾಜನನ್ವಯರುಂ... ತಪಚಕ್ರವರ್ತಿ, ವೀರಬ್ರತಿ' ಮುಂತಾದ ವಿಶೇಷಣಗಳು ಬಸವಣ್ಣ ಮತ್ತು ಅವರ ವಂಶಜರು ಉನ್ನತ ಕೀರ್ತಿವಂತರಾಗಿ ಉಳಿದಿದ್ದರೆಂಬುದನ್ನು ಸ್ಪಷ್ಟಪಡಿಸುತ್ತದೆ. ಗಂಗಾಂಬಿಕೆಯಲ್ಲಿ ಬಸವಣ್ಣನಿಗೆ ಜನಿಸಿದ ಚಿಕ್ಕಸಂಗಯ್ಯ ಅಥವಾ ಸಿದ್ಧರಸನೆಂಬ ಮಗನಿದ್ದನೆಂದು ಕಾವ್ಯ-ಪುರಾಣಗಳಿಂದ ತಿಳಿದು ಬರುವುದು. ಆದರೆ ಅವನು ಪ್ರಾಪ್ತವಯಸ್ಕನಾಗುವ ಮೊದಲೇ ಮರಣ ಹೊಂದಿದಂತೆ ಕಾಣುತ್ತದೆ. ಈ ಶಾಸನದಲ್ಲಿ ಅವನು ಉಕ್ತನಾಗದಿರುವುದು ಈ ಅಂಶಕ್ಕೆ ಪೋಷಕವಾದಂತಿದೆ. ಬಸವಣ್ಣನ ಸ್ಥಳ ತರ್ದವಾಡಿ ಮಧ್ಯದ ಗ್ರಾಮ ಬಾಗವಾಡಿ ಮತ್ತು ಅದರ ಪುರವರಾಧೀಶ್ವರ ಮಾದಿರಾಜ ತನುಜ ಬಸವರಾಜ ಎಂಬ ಹೇಳಿಕೆ ಅವನ ಜನ್ಮಸ್ಥಳ ಮತ್ತು ತಂದೆಯ ವಿಷಯವನ್ನು ಸ್ಪಷ್ಟವಾಗಿ ತಿಳಿಸುತ್ತದೆ.[೩]

---

೧. ಎಂ. ಎಂ. ಕಲಬುರ್ಗಿ : ಬಸವಣ್ಣನವರನ್ನು ಕುರಿತ ಶಾಸನಗಳು ಪು. ೫೨.

೨. ಸೀತಾರಾಮ ಜಾಗೀರದಾರ : 'ಅರ್ಜುನವಾ ತ ಶಿಲಾಶಾಸನ ಸಮೀಕ್ಷೆ-ಒಂದು ಪ್ರತಿಕ್ರಿಯೆ' ಸಾಧನೆ ೩-೩ ಪು. ೧೬೯-೭೪.

೩. ಇತ್ತೀಚೆಗೆ ಬಂಜಗೆರೆ ಜಯಪ್ರಕಾಶ ಅವರು 'ಆನು ದೇವಾ ಹೊರಗಣವನು' ಎಂಬ ಕೃತಿ ರಚಿಸಿ ಬಸವಣ್ಣನವರು ಬ್ರಾಹ್ಮಣ ಕುಲದಲ್ಲಿ ಹುಟ್ಟಿದವರಲ್ಲವೆಂದೂ ಅವರು ಅನ್ಯ ಜಾತಿಮೂಲದಿಂದ ಅಥವಾ ದೇವಾಲಯದ ಸಿಸುಮಗನಾಗಿ ಬಂದಿರಬೇಕೆಂಬ ಅಭಿಪ್ರಾಯಕ್ಕೆ ಪುರಾವೆಗಳನ್ನು ನೀಡಿ ತಮ್ಮ ವಾದವನ್ನು ಸಮರ್ಥಿಸಲು ಪ್ರಯತ್ನಿಸಿದ್ದಾರೆ. ಆದರೆ ಅವರು ಆಧರಿಸಿರುವ ಪುರಾವೆಗಳು, ವಾದಗಳು ತೀರಾ ದುರ್ಬಲವಾದ ಎಳೆಗಳಿಂದ ಕೂಡಿರುವುದರಿಂದ ಅವರ ಕಲ್ಪಿತ ಸಂಶೋಧನ ತೀರ್ಮಾನಗಳೂ ಒಪ್ಪುವಂತಹುದಾಗಿಲ್ಲ.

ಹಾಲ ಬಸವಿದೇವ ದಾನವಾಗಿ ಪಡೆದ ಕವಿಳಾಸಪುರವನ್ನು ಅಭಿಜ್ಞ ಮಾಡಲು ಕೆಲವರು ಪ್ರಯತ್ನಗಳನ್ನು ಮಾಡಿದ್ದಾರೆ. ಅದನ್ನು ಮಸಗೂಳಿ ಎಂದು, ಚೌಡದಾನಪುರವೆಂದು ಗುರುತಿಸಲು ಮೊದಲು ಪ್ರಯತ್ನಗಳು ನಡೆದದ್ದುಂಟು. ಎಂ. ಎಂ. ಕಲಬುರ್ಗಿಯವರು ಅರ್ಜುನವಾಡ ಶಾಸನದಲ್ಲಿ ಬರುವ ಮೇರೆಗಳನ್ನು ಸೂಚಿಸಿ ಬರೆದಿದ್ದಾರೆ.[೧] ಅದನ್ನು ಅನುಸರಿಸಿ ಮುತಾಲಿಕ ಅವರು ಶಾಸನೋಕ್ತ ಮಲ್ಲಿಕಾರ್ಜುನ, ನಾಗೇಶ್ವರ, ಬಸವನಗೋಡಿ ತೊರೆಯ ಕೂಡಿದ ಹಳ್ಳ... ಮಸರಗುತ್ತಿ ಕೊಟ್ಟಿಸಿ... ಕವಿಳಾಸಪುರ ಎಲ್ಲವನ್ನು ನಕ್ಷೆಯ ಸಮೇತ ಗುರುತಿಸಿ ತೋರಿಸಿದ್ದಾರೆ.[೨]

ಅರ್ಜುನವಾಡ ಶಾಸನ ದೊರೆತ ಪ್ರದೇಶದಲ್ಲಿಯೇ ಹೊಲದ ಮೇರೆಯನ್ನು ಗುರುತಿಸುವ ಲಿಂಗಮುದ್ರೆಯ ಕಲ್ಲಿನ ಮೇಲೆ ಇದ್ದ ಶಾಸನವನ್ನು ಎಂ. ಎಂ. ಕಲಬುರ್ಗಿಯವರು ಪ್ರಕಟಿಸಿದ್ದಾರೆ.[೩] ಆ ಕಲ್ಲಿನ ಮೇಲೆ 'ಶ್ರೀ ಬಸವ ದಂಣಾಯಕರ ಕೆಯ್' ಎಂದಿದೆ. ಸುಮಾರು ೧೩ನೆಯ ಶ.ಮಾ.ಕ್ಕೆ ಸೇರಿದ ಈ ಬರಹ ಬಸವಣ್ಣನವರನ್ನು ದಣ್ಣಾಯಕ  ಎಂದು ಕರೆದ ಏಕೈಕ ಶಾಸನವಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.[೪] ಆದರೆ ಕೇರಳಾಪುರದ ಶಾಸನದಲ್ಲಿ 'ದಂಣಾಯಕ ದೇವರ ಜ್ಞಾನ ಸಂಮುಂಪ ದೇವರ ವಾಗೀಶ ದೇವರ ನಂಬಿಯಂಣಂಗಳ' ಎನ್ನುವ ಸಂದರ್ಭದಲ್ಲಿ ದಂಣಾಯಕರೆಂದು ಬಸವಣ್ಣನವರನ್ನು ಕುರಿತು ಕರೆದಿರುವುದು ಮುಂದೆ ಶಾಸನದ ಕೊನೆಯಲ್ಲಿ ಬರುವ 'ಶ್ರೀ ಬಸವರಾಜ" ಎಂಬುದರಿಂದ ಸಮರ್ಥಿತವಾಗುತ್ತದೆ.[೫]

ಚೌಡದಾನಪುರದ ಎರಡು ಶಾಸನಗಳಲ್ಲಿ ಬಸವಣ್ಣನವರ ಬಗ್ಗೆ ವಿವರಗಳು ಬರುತ್ತವೆ. ಚೌಡದಾನಪುರದ ಒಂದು ಶಾಸನದಲ್ಲಿ ಬರುವಂತೆ-

> ಎನೆ ಕೇಳ್ದದ್ರಿಜೆ ಬಿನ್ನಪಂ ಶಿವ ಜಗಕ್ಕೀ ಮಾರ್ಗಮಂ ತೋರಬೇ।
> ಳ್ಕೆನಲಂದಾ ಪ್ರಭು ನಂದಿನಾಥನ ಮೊಗ ನೋಡಲ್ಕೆ ಶ್ರೀಸಂಗಮೇ।
> ಶನ ಪುತ್ರಂ ಬಸವಯ್ಯ ಬಂಕನದರಿಂ ಶಿವಮುದ್ದುದೇವಂ ಜಗ।
> ಕ್ಕನಿಮಿತ್ತಂ ಶಿವದೇವನಾಗಿಯು ಗಣ ಶ್ರೀಪಾದಮಂ ತೋರುವೆಂ[೬]

ಈ ಪದ್ಯದ ಹಿಂದಿನ ಪದ್ಯವನ್ನು ಅನ್ವಯಿಸಿಕೊಂಡು ಗಮನಿಸಿದರೆ ವೇದ ಶಾಸ್ತ್ರಗಳಿಗೂ ಸಾಧ್ಯವಾಗದ ಭಕ್ತಿ ಪ್ರಸಾದವನ್ನು ಭೂಲೋಕದಲ್ಲಿ ಪ್ರಸಾರ ಮಾಡಲು ನಂದಿನಾಥ ಸಂಗಮಮೇಶನ ಪುತ್ರನಾಗಿ ಬಂದಂತೆ ಶಿವದೇವನು ಭೂಮಿಗೆ ಆಗಮಿಸಿದನೆಂದು ಸ್ಥೂಲವಾಗಿ ಅರ್ಥಮಾಡಬಹುದು. ಅಂದರೆ ಈ ಶಾಸನದ ಹೊತ್ತಿಗೆ ಬಸವಣ್ಣನವರು ನಂದಿಯ ಅವತಾರವೆಂಬ ವಿಷಯ ಶಾಸನೋಕ್ತವಾಗುವಷ್ಟು ಪ್ರಚಲಿತವಾಗಿದ್ದಿರಬೇಕು. ಅಲ್ಲದೆ 'ಸಂಗಮೇಶನ ಪುತ್ರಂ' ಎಂಬ ಮಾತೂ ಕೂಡ ಸಂಗಮೇಶನಿಗೆ ಬಸವಣ್ಣನಿಗೆ ಇದ್ದ ಸಂಬಂಧಾಧಿಕ್ಯವನ್ನು ಖಚಿತಪಡಿಸುತ್ತದೆ. ಅದೇ ಸ್ಥಳದ ಇನ್ನೊಂದು ಶಾಸನ ಬಸವಣ್ಣನವರ ಭಕ್ತಿ ಮಾರ್ಗವನ್ನು ಸ್ವಲ್ಪ ಮಟ್ಟಿಗೆ ಪರಿಚಯಿಸುತ್ತದೆ.

> ಲಿಂಗಕ್ಕೆ ಜಂಗಮಕ್ಕಂ
> ಹಿಂಗದೆ ದಾಸತ್ವ ಮಾಳ್ಪುದೇ ಬೆಸನೆಂದಾ।
> ಸಂಗನ ಬಸವಂ ಬೆಸಸೆ ಮ
> ನಂಗೊಂಡರ್ಚಿಸುವನುಭಯಲಿಂಗವ ಮುದದಿಂ॥

---

೧. ಎಂ. ಎಂ. ಕಲಬುರ್ಗಿ : ಪೂರ್ವೋಕ್ತ, ಪು. ೪೬.

೨. ಮುತಾಲಿಕ : 'ಅರ್ಜುನವಾಡ ಶಾಸನದ ಕವಿಳಾಸಪುರ', ಕಭಾ ೨-೧ ಪು.೧೨೦-೧೨೬.

೩. ಕ. ಭಾ. ೯-೪ ಕ್ರಿಶ. ೧೩ ಶ.ಮಾ.

೪. ಎಂ. ಎಂ. ಕಲಬುರ್ಗಿ : ಶಾಶಿಶ ಪು. ೬೬.

೫. ಬ. ಪ. ೨-೫ ಕ್ರಿಶ. ೧೩೦೨.

೬. ಎಸ್ಐಐ XVIII ರಾಣೆಬೆನ್ನೂರು ೨೪೫ ಕ್ರಿಶ. ೧೨೬೨.

> ಮೃಡಗಣ ವರ ಪ್ರಸಾದಮ।
> ಪಡೆದಂ ಜಗವರಿಯಲಂದು ಸಂಗನ ಬಸವಂ।
> ಪಡೆದಾ ಪ್ರಸಾದಸಿದ್ಧಿಯ।
> ಕಡುವೀರಬ್ರತದಿ ಪಡೆದನೀ ಶಿವದೇವಂ[೧]

ಬಸವಣ್ಣನವರ 'ಲಿಂಗ-ಜಂಗಮ' ಅನನ್ಯ ಭಕ್ತಿ, ಶಿವಭಕ್ತರಿಂದ ಬಸವಣ್ಣ ಪಡೆದ ಮಾನ್ಯತೆ ಈ ಶಾಸನದಿಂದ ಖಚಿತವಾಗುತ್ತವೆ. ಅಲ್ಲದೆ ಬಸವಣ್ಣನವರ ಮಾರ್ಗವನ್ನು ಮುಂದೆ ಶಿವದೇವನಂಥವರು ಆದರ್ಶ ಮಾರ್ಗವಾಗಿ ಭಾವಿಸಿದ್ದರು ಎಂಬುದೂ ಇದರಿಂದ ತಿಳಿದು ಬರುತ್ತದೆ.

ಕಲ್ಲೇಪುರದ ಶಾಸನದಲ್ಲಿ ಬಸವಣ್ಣನವರು ಮರ್ತ್ಯಲೋಕದ ಗಣಾಚಾರಿಗಳಾದ ಚೇರ ಚೋಳ ನಂಬಿ ನಂಬಿ ಚಿಕ್ಕ ಕಕ್ಕ ಚೆಂನ ಮುಂತಾದವರೊಂದಿಗೆ ಬಸವರಾಜ ಎಂದು ಸ್ಮರಿಸಲ್ಪಟ್ಟಿದ್ದಾರೆ.[೨] ಈ ಶಾಸನ ಮುಂದೆ ಯೋಗಿ ಚಕ್ರವರ್ತಿ ಪ್ರಸಾದ ದೇವರಿಗೆ ದಾನವನ್ನು ಕೊಟ್ಟ ವಿಷಯವನ್ನು ತಿಳಿಸುತ್ತದೆ. ಆದರೆ ಈ ಶಾಸನದಲ್ಲಿ ಅಧಿಕವಾಗಿ ಶೈವ ಅದರಲ್ಲೂ ವಿಶೇಷವಾಗಿ ನಾಥ ಸಂಪ್ರದಾಯದ ಸ್ಫುಟತ್ವ ಎದ್ದು ಕಾಣುವಂತಹುದಾಗಿದೆ. 'ಪಂಚ ಮುದ್ರಾಧರ ವರ ತಪೋನಿಷ್ಠಾನಿಕಾಮನುಂ' ಎಂಬ ವಿಶೇಷಣ, ಅನೇಕ ನಾಥಪಂಥದ ಪ್ರಮುಖರ ಹೆಸರುಗಳು, ನಾಥಪಂಥದ ವಾತಾವರಣ ಶಾಸನದಲ್ಲಿ ಪೂರ್ಣವಾಗಿ ವ್ಯಾಪಿಸಿರುವುದನ್ನು ಕಾಣಬಹುದು.[೩] ಇಂಥ ಶಾಸನಗಳಲ್ಲಿ ಶೈವ-ವೀರಶೈವಗಳು ಯಾವುದರಲ್ಲಿ ಯಾವುದು ಸಮಾವೇಶವಾಗಿದೆ ಎಂಬುದನ್ನು ನಿರ್ಧರಿಸುವುದು ಕಠಿಣವಾಗುತ್ತದೆ. ಇಲ್ಲವೆ ಎರಡರ ಗಡಿಗಳು ತೆಳುವಾಗುತ್ತಾ ನಡೆದಿವೆ. ವಚನಕಾರರ ಕಾಲದಲ್ಲಿ ಅನ್ಯ ಮತಗಳನ್ನು ಟೀಕಿಸಿದರೂ ಮುಂದೆ ಬೇರೆ ಬೇರೆ ಶೈವ ಪಂಥಗಳೊಂದಿಗೆ ಒಡಂಬಡಿಕೆ-ಒಪ್ಪಂದಗಳನ್ನು ಮಾಡಿಕೊಳ್ಳುವುದು ಅನಿವಾರ್ಯವಾಗಿರಬೇಕು. ಈ ಶಾಸನದ ಪ್ರಸಾದದೇವ ನಾಥಪಂಥದವನೆಂದು ಭಾವಿಸಿದರೂ ಅವರ ಶಾಸನಗಳಲ್ಲಿ ವೀರಶೈವದ ಬಸವಣ್ಣ ಗೌರವದಿಂದ ಉಲ್ಲೇಖ ಹೊಂದುವಷ್ಟು ಮಾನ್ಯತೆ ಪಡೆದಿದ್ದರೆಂದು ಭಾವಿಸಬಹುದು. ಹೀಗೆ ಕ್ರಮೇಣ ಮುಂದೆ ವೀರಶೈವದ ಕೈ ಮೇಲಾಗಿ ವ್ಯಾಪಕತೆಯನ್ನು ಪಡೆದಿರಬಹುದು. ಇದೇ ರೀತಿ ಮರಡಿಪುರದ ಶಾಸನದಲ್ಲೂ ಮರ್ತ್ಯದ ಗಣಾವತಾರಗಳ ಮಧ್ಯೆ ಸಂಗನ ಬಸವಯ್ಯನೆಂದು ಉಲ್ಲೇಖಗೊಂಡಿದ್ದಾರೆ.[೪] ಇದಲ್ಲದೆ ಗುಡಿಹಾಳ ಕುಂಟೋಜಿ ಶಾಸನ[೫] ಮತ್ತು ಇನ್ನೂ ಕೆಲವು ಶಾಸನಗಳಲ್ಲಿ ಬಸವಣ್ಣನವರ ಉಲ್ಲೇಖಗಳಿರುವುದನ್ನು ಎಂ. ಎಂ. ಕಲಬುರ್ಗಿಯವರು ತೋರಿಸಿಕೊಟ್ಟಿದ್ದಾರೆ.[೬]

---

೧. ಎಸ್ಐಐ XVIII ರಾಣೆಬೆನ್ನೂರು ೨೪೬ ಕ್ರಿಶ. ೧೨೬೩.

೧. (ರೈ) ಎಕ XI ಜಗಲೂರು ೩೦ ಕ್ರಿಶ.೧೨೭೯.

೩. ಈ ಶಾಸನದಲ್ಲಿ ಬರುವ ನಾಥಪಂಥದ ಸಿದ್ಧರ ವಿವರಗಳನ್ನು ಗಮನಿಸಿ ಬಸವಣ್ಣನೂ ನಾಥ ಸಿದ್ಧ ಪಂಥದ ಅನುಯಾಯಿಯೆಂದು ಕಪಟರಾಳ ಕೃಷ್ಣರಾಯರು ವಾದಿಸಿರುವುದುಂಟು. ಆದರೆ ಈ ಶಾಸನದಲ್ಲಿ ಚೇರ ಚೋಳ ನಂಬಿ ಮುಂತಾದ ಶಿವಭಕ್ತರು ಉಲ್ಲೇಖಗೊಂಡಿದ್ದಾರೆ. ಅವರೆಲ್ಲರನ್ನು ನಾಥಪಂಥದವರೆಂದು ಸಮರ್ಥಿಸಬೇಕಾಗುತ್ತದೆ. ಆದ್ದರಿಂದ ಬಸವಣ್ಣನವರು ನಾಥಪಂಥದ ಅನುಯಾಯಿ ಎಂಬುದು ಸಮರ್ಥನೀಯವಲ್ಲ. ನೋಡಿ : ಕಪಟರಾಳ ಕೃಷ್ಣರಾವ್ : 'ಬಸವೇಶ್ವರನು ನಾಥ ಸಿದ್ಧ ಪಂಥದ ಅನುಯಾಯಿ' ಎಂಬ ಲೇಖನ. ಕರ್ನಾಟಕ ಸಂಸ್ಕೃತಿಯ ಸಂಶೋಧನೆ ಪು. ೧೩೪-೧೩೭.

೪. (ಮೈ) ಎಕ VII ಮಂಡ್ಯ ೧೩ ಕ್ರಿಶ. ೧೨೮೦.

೫. ಎಸ್ಐಐ XV ೬೫೮ ಕ್ರಿಶ. ೧೪ ಶ.ಮಾ. ಈ ಶಾಸನ ನೇರವಾಗಿ ಬಸವಣ್ಣನವರನ್ನು ಕುರಿತದ್ದೇ ಎಂದು ಹೇಳಬರುವಂತಿಲ್ಲ ಎಂದು ಎಂ. ಎಂ. ಕಲಬುರ್ಗಿಯವರು ಅನುಮಾನಿಸಿದ್ದಾರೆ. ಸೀತಾರಾಮಜಾಗೀರದಾರರು 'ಕುಂಟೋಜಿಯ ಬಸವಣ್ಣ(ನಂದಿ) ದೇವರಿಗೆ ಸಂಬಂಧಪಟ್ಟಿದೆ; ಅರ್ಥಾತ್ ವಚನಕಾರ ಬಸವಣ್ಣನೆಂಬ ವ್ಯಕ್ತಿಗಲ್ಲ. ನಮ್ಮ ಬಿಜಾಪುರ ಜಿಲ್ಲೆಯಲ್ಲಿ ಕುಂಟೋಜಿ ಒಂದು ಪ್ರಸಿದ್ಧ ದೇವತೆ. ಕುಂಟೋಜಿಯ ಈಶ್ವರ ದೇವಸ್ಥಾನದ ನಂದಿಗೆ ಸಂಬಂಧಪಟ್ಟ ಮಾನ್ಯದ ಹೊಲವನ್ನು ಈ ಶಾಸನದಲ್ಲಿ ಹೇಳಿದೆ.' ಎಂದಿದ್ದಾರೆ. ಸೀತಾರಾಮ ಜಾಗೀರದಾರ : 'ಶಾಸನಗಳಲ್ಲಿ ದಂಡನಾಯಕ ಬಸವೇಶ್ವರರು ಮತ್ತು ಕೆಲವು ಶರಣರು', ಬಪ ೨-೫ ಪು. ೬೮ ಅಡಿ ಟಿಪ್ಪಣಿ.

೬. ಎಂ. ಎಂ. ಕಲಬುರ್ಗಿ : ಶಾಶಿಶ. ಪು. ೭೦-೭೩.

ಕ್ರಮೇಣ ಬಸವಣ್ಣನವರ ಹೆಸರಿನಲ್ಲಿ ಮಠಗಳು, ದೇವಾಲಯಗಳು ಪ್ರಾರಂಭವಾಗತೊಡಗಿದವೆಂದು ಕಾಣುತ್ತದೆ. ಆ ದೃಷ್ಟಿಯಿಂದ ಕೇರಳಾಪುರದ ಶಾಸನ ಅತ್ಯಂತ ಗಮನಾರ್ಹವಾದದ್ದು. 'ದಂಣಾಯಕದೇವರ ಜ್ಞಾನಸಂಮಂದ ದೇವರ ವಾಗೀಶದೇವರ ನಂಬಿಯಂಣಂಗಳ ಗಣಮಠದ ವ್ರಿತ್ತಿ ಸಾಲ್ಕಜ ಆ ಕೊಂಡಿದೇವ ಸೋಮವೆವ್ವೊಳಗಾದ ಮಠಪತಿಗಳಿಗೆಯೂ'[1] ಎಂದಿದೆ. ಬಸವಣ್ಣನವರೊಂದಿಗೆ ತಮಿಳುನಾಡಿನ ಶಿವಭಕ್ತರಿಗೂ ಗಣಮಠ ಸ್ಥಾಪನೆಯಾಗಿರುವುದನ್ನು ಈ ಶಾಸನ ನಿರೂಪಿಸುತ್ತದೆ. ಅಲ್ಲದೆ ಶಾಸನದ ಕೊನೆಯಲ್ಲಿ 'ಶ್ರೀ ಬಸವರಾಜ ಶ್ರೀನಂಬಿಯಂಣ ಶ್ರೀ ಜ್ಞಾನಸಂಮಂಥ ಶ್ರೀ ವಾಗೀಶ' ಎಂಬ ಅಂಕಿತಗಳನ್ನು ಹಾಕಲಾಗಿದೆ. ಈ ಶಾಸನದ ಬಗ್ಗೆ ಬರೆಯುತ್ತಾ ಸೀತಾರಾಮಜಾಗೀರದಾರರು ಬಸವಣ್ಣನವರ ಹೆಸರಿನಲ್ಲಿ ಗಣಮಠವೊಂದನ್ನು ಸ್ಥಾಪಿಸಿದ ಸಂಗತಿ ಸದ್ಯ ದೊರೆತ ದಾಖಲೆಗಳಲ್ಲಿ ಇದುವೆ ಮೊದಲನೆಯದು ಎಂದಿದ್ದಾರೆ.[2] 'ಸೋಹು ಸುಗೂರ ಕಲಿನಾಗಪ್ಪನವರ ಮಗ ವೀರಂಣಗಲುಡರು ಬಸವರಾಜದೇವರನು ಮೂರ್ತಿಗೊಳ್ಳಿ ದೇವರ ಅಮ್ರುತ ಪಡಿಗೆ' ದಾನ ಮಾಡಿದ ವಿಷಯವನ್ನು ಮಳವಳ್ಳಿ ತಾಲ್ಲೂಕಿನ ಶಾಸನವೊಂದು ತಿಳಿಸುತ್ತದೆ.[3] ಅದೇ ರೀತಿ ಕರ್ನೂಲು ಜಿಲ್ಲೆಯ ನಂದಿಕೋಟೂರು ತಾಲೂಕಿನ ನಾಗಲೂಟಿಯ ತೆಲುಗು ಶಾಸನದಲ್ಲಿ 'ಕಲ್ಯಾಣ ಬಸವೇಶ್ವರುನಿ ಪ್ರತಿಷ್ಟ ಚೇಶಿ'[4] ಎಂಬ ಮಾತೂ ಬಸವಣ್ಣನವರು ದೇವರಂತೆ ಪ್ರತಿಷ್ಠೆಗೊಂಡು ಪೂಜೆಗೊಳ್ಳುತ್ತಿದ್ದರೆಂದು ತಿಳಿಯಲು ಸಹಾಯ ಮಾಡುತ್ತದೆ.

ಬಸವಣ್ಣನವರ ಹೆಸರಿನಲ್ಲಿ ಗಣಮಠ ಸ್ಥಾಪನೆ ಮತ್ತು ಕೊಂಡಿದೇವ ಮತ್ತು ಸೋಮವ್ವೆ ಮಠಪತಿಗಳಾಗಿದ್ದರು ಎಂಬ ವಿವರದಂತೆ ಸೋಮವ್ವೆ ಮಠಪತಿಯಾಗಿದ್ದಳೆಂಬ ವಿವರ ಅಸಾಧಾರಣವಾದುದಾಗಿದೆ. ಶೈವ ಶಾಸನಗಳಲ್ಲಿ ಗಣಕುಮಾರಿಯರ ಪ್ರಸ್ತಾಪ ಬಂದಿರುವುದನ್ನು ಹಿಂದೆ ಗಮನಿಸಲಾಗಿದೆ. ಆದರೆ ಸ್ತ್ರೀ ಮಠಪತಿಯಾಗಿರುವುದು ಅಪರೂಪದ ಉದಾಹರಣೆಯಾಗಿದೆ. ಬಸವಣ್ಣನವರು ದೇವರಂತೆ ಪ್ರತಿಷ್ಠೆಗೊಂಡು ಪೂಜೆಗೊಳಗಾದ ಮೇಲಿನ ಶಾಸನಗಳು, ವೀರಶೈವ ಧರ್ಮ ಸ್ಥಾವರಾರಾಧನೆಯನ್ನು ಹೇಗೆ ಒಂದು ಕಾಲದಲ್ಲಿ ನಿರಾಕರಿಸಿದರೂ ಮತ್ತೆ ಸ್ವೀಕರಿಸಿ ಒಪ್ಪುತ್ತಾ ಹೋಗಿದೆ ಎಂಬುದಕ್ಕೆ ಬಹು ಸ್ಪಷ್ಟ ಉದಾಹರಣೆಗಳಾಗುತ್ತವೆ.

ವೀರಶೈವ ಧರ್ಮದ ಪ್ರಮುಖ ಪರಿಷ್ಕರಣ ಕಾರ್ಯದಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸಿ ಆ ಕಾಲದ ಅಮೂಲ್ಯ ಸಾಂಸ್ಕೃತಿಕ ವ್ಯಕ್ತಿಯಾಗಿದ್ದ ಬಸವಣ್ಣನವರ ಉನ್ನತ ವ್ಯಕ್ತಿತ್ವದ ಬಗ್ಗೆ ಸಾಕಷ್ಟು ಬರವಣಿಗೆಗಳು ಈಗಾಗಲೇ ಬಂದಿವೆ. ಕೆಲವು ಶಾಸನಗಳ ಪ್ರಕಟಣೆಗಳಿಂದ ಅವರ ಜೀವನ ಸಾಧನೆಗಳು ಐತಿಹಾಸಿಕವಾಗಿ ಮೂಡಿ ಬಂದಿವೆ. ಆದರೂ ಇನ್ನೂ ಅನೇಕ ವಿವರಗಳು, ಪ್ರಶ್ನೆಗಳು ಇನ್ನೂ ಹಾಗೆಯೇ ಉಳಿದಿವೆ. ಬಸವಣ್ಣನವರ ಜನ್ಮಕಾಲದ ಬಗ್ಗೆ ವಿದ್ವಾಂಸರಲ್ಲಿ ತುಂಬ ಭಿನ್ನಾಭಿಪ್ರಾಯಗಳಿವೆ. ಹೆಚ್ಚು ವಿದ್ವಾಂಸರು ಒಪ್ಪಿರುವಂತೆ ಕ್ರಿ.ಶ. ೧೧೦೬ ವೈಶಾಖ ಶುದ್ಧ ತದಿಗೆಯಂದು ಹುಟ್ಟಿದರೆಂದು ಭಾವಿಸಲಾಗಿದೆ.[5] ತಂದೆ ಬಾಗೆವಾಡಿಯ ಪುರಪ್ರಭು ಮಾದರಸ -ತಾಯಿ ಮಾದಲಾಂಬಿಕೆ. ಸಮಕಾಲೀನ ವಚನವೊಂದು

---

೧. ಬ.ಪ. ೨-೫ ಕ್ರಿಶ. ೧೩೦೨.

೨. ಸೀತಾರಾಮ ಜಾಗೀರದಾರ : ಪೂರ್ವೋಕ್ತ ಬ.ಪ ೨-೫ ಪು.೭೦.

೩. (ಮೈ) ಎಕ VII ಮಳವಳ್ಳಿ ೩೨ ಕ್ರಿಶ. ೧೪೪೦.

೪. ಎಂ. ಎಂ. ಕಲಬುರ್ಗಿ : ಶಾಸನ ವ್ಯಾಸಂಗ-೨ ಪು. ೮೩.

೫. ಬಸವಣ್ಣನವರ ಜನ್ಮಕಾಲದ ಬಗ್ಗೆ ಇರುವ ಕೆಲವು ಚರ್ಚೆಗಳು :

P.B.Desai : Basaveshvara and His Times -ಕ್ರಿಶ. ೧೧೦೬-೧೧೬೮. ಬಸವಣ್ಣನವರು ಜೀವಿಸಿದ್ದು ಮೂವತ್ತಾರು ವರ್ಷಗಳೆಂಬ ಸಾಂಪ್ರದಾಯಿಕ ನಂಬಿಕೆ ಇದೆ. ಆ ಕಾಲಮಾನ ಕೂಡಲ ಸಂಗಮದಿಂದ ಹೊರಟು ಮುಂದೆ ಅಲ್ಲಿಗೆ ಬಂದು ಐಕ್ಯವಾಗುವವರೆಗಿನ ಕಾಲವನ್ನು ಸೂಚಿಸುವುದೆಂದು ಪಿ. ಬಿ ದೇಸಾಯಿ ಸೂಚಿಸುತ್ತಾರೆ. ಪು. ೨೯೨-೩೦೦.

(ಮುಂದಿನ ಪುಟದಲ್ಲಿ ಮುಂದುವರಿದಿದೆ)

ಇದನ್ನು ದೃಢಪಡಿಸುತ್ತದೆ.[೧] ಅರ್ಜುನವಾಡ ಶಾಸನದಲ್ಲಿ ಸ್ತುತನಾದ ದೇವರಾಜ ಮುನಿಪನನಂತರ, ಸುಪ್ರಸಿದ್ಧ ಶರಣೆಯೆಂದು ಕೀರ್ತಿ ಪಡೆದ ನಾಗಲಾಂಬಿಕೆ (ಶಾಸನದಲ್ಲಿ ಉಕ್ತವಾಗಿಲ್ಲ), ಅನಂತರ ಬಸವಣ್ಣ ಮೂರನೆಯ ಮಗುವಾಗಿ ಜನಿಸಿದ್ದು ಈಗಿನ ಬಿಜಾಪುರ ಜಿಲ್ಲೆಯ ಬಾಗೆವಾಡಿ ಎಂಬ ಅಗ್ರಹಾರದಲ್ಲಿ. ಹರಿಹರ ನಿರೂಪಿಸುವಂತೆ ಚಿಕ್ಕ ವಯಸ್ಸಿನಲ್ಲಿಯೇ ತನ್ನ ತಂದೆ ತಾಯಿಗಳನ್ನು ಕಳೆದುಕೊಂಡು ಅಜ್ಜಿಯ ಆಸರೆಯಲ್ಲಿ ಬೆಳೆಯಬೇಕಾಯಿತು. ಅಗ್ರಹಾರದ ಪರಿಸರದಲ್ಲಿ ಬೆಳೆದ ಕಾರಣ ಸಂಸ್ಕೃತ ಕನ್ನಡ ಭಾಷಾಜ್ಞಾನಗಳು ಆಳವಾಗಿದ್ದವು ಎಂದು ಭಾವಿಸಬಹುದು. ಅದೇ ಹಿನ್ನೆಲೆಯಲ್ಲಿ ವೈದಿಕಾಚರಣೆಗಳ ವಿರೋಧಾಭಾಸಗಳ ಸೂಕ್ಷ್ಮ ಅರಿವೂ ಉಂಟಾಗಿರಬೇಕು.

ಬಸವಣ್ಣನವರ ಜೀವನದ ಮುಖ್ಯ ಘಟನೆಗಳಲ್ಲಿ ಒಂದೆಂದರೆ ಅವರು ಬಾಗೆವಾಡಿಯನ್ನು ತ್ಯಜಿಸಿದ ಪ್ರಸಂಗ. ಅದಕ್ಕೆ ಕಾರಣ ಉಪಯನದ ವಿರುದ್ಧ ಸಿಡಿದೆದ್ದದ್ದು ಎಂದು ಭೀಮಕವಿಯ ಬಸವಪುರಾಣ ಹೇಳುತ್ತದೆ. ಆದರೆ ಕಪ್ಪಡಿ ಸಂಗಮಕ್ಕೆ ಬರುವಷ್ಟರಲ್ಲಿ ಉಪನಯನವಾಗಿದ್ದಿತೆಂಬ ಸೂಚನೆ ಹರಿಹರನಲ್ಲಿ ಇದೆ. ಬಹುಶಃ ಅಗ್ರಹಾರದಲ್ಲಿ ಬ್ರಾಹ್ಮಣ ಸಮಾಜದೊಂದಿಗೆ ಹೊಂದಿಕೆಯಾಗದೆ ಅಲ್ಲಿಂದ ಹೊರಟಿರುವ ಸಾಧ್ಯತೆಯೂ ಇದೆ. ಆದರೆ ಈ ವಿಷಯದ ಬಗ್ಗೆ ಪುರಾಣ-ಕಾವ್ಯಗಳಲ್ಲಿ ಏಕರೂಪತೆ ಇಲ್ಲ. ಅನಂತರ ಬಸವಣ್ಣನವರು ಕಪ್ಪಡಿ ಸಂಗಮದಲ್ಲಿ ಈಶಾನ್ಯ ಗುರುಗಳ ರಕ್ಷೆಯಲ್ಲಿ ಕೆಲಕಾಲ ಇದ್ದಿರಬೇಕು. ಆದರೆ ಬಸವಣ್ಣನವರಿಗೆ ಲಿಂಗದೀಕ್ಷೆಯಾದದ್ದು ಯಾರಿಂದ ಎಂಬ ಬಗ್ಗೆ ಅಸ್ಪಷ್ಟತೆ ಇದೆ. ಬಸವ ಪುರಾಣದಲ್ಲಿ ಜನ್ಮಕಾಲದಲ್ಲೇ ಲಿಂಗದೀಕ್ಷೆಯನ್ನು ಶಿವನೇ ಕೊಡುತ್ತಾನೆಂದು ಹೇಳಲಾಗಿದೆ.[೨] ಜಾತವೇದ ಮುನಿಗಳಿಂದ ಆಯಿತೆಂದು ಸಿಂಗಿರಾಜ ಪುರಾಣ ಹೇಳುತ್ತದೆ. ಬಸವಣ್ಣ ಮಂಗಳವಾಡಕ್ಕೆ ಹೋಗುವ ಮೊದಲು ನಂದಿಯಿಂದ ಲಿಂಗ ನೀಡಲ್ಪಟ್ಟಿತೆಂದು ಹರಿಹರ ನಿರೂಪಿಸುತ್ತಾನೆ.[೩] ಆದ್ದರಿಂದ ಈ ವಿಷಯದಲ್ಲಿ ಏಕಾಭಿಪ್ರಾಯವಿಲ್ಲ. ಇದರಿಂದಾಗಿ ಕಪ್ಪಡಿ ಸಂಗಮದಲ್ಲಿ ಬಸವಣ್ಣನಿಗೆ ಶಿವದೀಕ್ಷೆ ಆಯಿತೆಂದು ಭಾವಿಸಬಹುದೇ ಹೊರತು ಯಾರಿಂದ ಎಂಬುದು ತಿಳಿಯುವುದಿಲ್ಲ.[೪] ಬಸವಣ್ಣನವರು ಬದುಕುವ ದಾರಿಯನ್ನು ಹುಡುಕಿಕೊಂಡು ಮಂಗಳವಾಡಕ್ಕೆ ಬರುವ ಮುಂಚೆ ತಮ್ಮ ಧಾರ್ಮಿಕ ಮಾರ್ಗವನ್ನು ನಿರ್ಧರಿಸಿದ್ದರೆಂದು ವಿದಿತವಾಗುತ್ತದೆ.[೫]

ಈ ರೀತಿ ಮಂಗಳವಾಡಕ್ಕೆ ಬಂದು ಬದುಕಿನ ಮಾರ್ಗಕ್ಕೆ ತೊಡಗುವರು. ತಮ್ಮ ಬುದ್ಧಿವಂತಿಕೆಯಿಂದ ಸಿದ್ಧ ದಂಡಾಧಿಪನನ್ನು ಮೆಚ್ಚಿಸಿ ಬಿಜ್ಜಳನ ಭಂಡಾರದಲ್ಲಿ ಗಣಕನಾಗಿ ನೇಮಕವಾಗಿರಬೇಕು. ಬಸವಣ್ಣನವರಿಗೆ ಗಂಗಾದೇವಿ

---

ಫ.ಗು. ಹಳಕಟ್ಟಿ : 'ಬಸವೇಶ್ವರನ ಕಾಲವು' ಶಿವಾನುಭವ ೧-೨ ಪು. ೯-೧೫.

ಲಕ್ಕಣ ದಂಡೇಶನು ಹೇಳಿರುವ ಕಾಲದ ಆಧಾರದ ಮೇಲೆ ಕ್ರಿಶ. ೧೧೩೯ ಜನ್ಮವರ್ಷ.

ಎಂ.ಗೋವಿಂದ ಪೈ : 'ಬಸವೇಶ್ವರನ ಕಾಲ ನಿರ್ಣಯ' ಶಿವಾನುಭವ ೧೪-೨ ಪು. ೨೨೭-೨೩೬.

B. R. Gopal : The Chalukyas of Kalyana and the Kalachuris. ಪು. ೩೬೩-೬೪□- ಕ್ರಿಶ. ೧೧೦೫.

ಎಲ್. ಬಸವರಾಜು : 'ಬಸವೇಶ್ವರನ ಜೀವನಾವಧಿ' ಉಪಾಯನ ಪು.೧೭೭-೧೯೫. ಕ್ರಿಶ. ೧೧೪೦-೧೧೮೦.

ಎಂ. ಎಂ. ಕಲಬುರ್ಗಿ: 'ಬಸವಣ್ಣನವರ ಜೀವನ ಚರಿತ್ರೆ' ಶ್ರೀ ಬಸವೇಶ್ವರರು ಪು. ೫೮-೫೯ ಕ್ರಿ. ೧೧೩೧.

R.C.Hiremutt : 'Sri Basaveshvara a Biography' Sri Basaveshvara- A commemoration volume ಪು.೧೧ ಕ್ರಿಶ. ೧೧೩೧.

೧. 'ಮಂಡಗೆಯ ಮಾದಿರಾಜ ಮಾದಲಾಂಬೆಯರ ಮಗನನೆನ್ನಬಹುದೆ ಬಸವೇಶ್ವರನ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ನಿಲ್ಲು ಮಾಣು' -ಘಟ್ಟಿವಾಳಯ್ಯ.

೨. ಬ.ಪು. ಸಂ. ೩. ೨೪-೨೯.

೩. ಬಸವರಾಜದೇವರ ರಗಳೆ : ಪು. ೧೭.

೪. ಎಂ. ಚಿದಾನಂದ ಮೂರ್ತಿ : ಬಸವಣ್ಣನವರು ಪು.೪೯.

೫. ಪಿ. ವಿ. ನಾರಾಯಣ : 'ಕಾಲ ಪ್ರಭಾವ, ಜೀವನ, ವ್ಯಕ್ತಿತ್ವ ಇತ್ಯಾದಿ' ಬಸವೇಶ್ವರ ಪು.೨೨.

ಮತ್ತು ನೀಲಲೋಚನೆ ಎಂಬ ಇಬ್ಬರು ಪತ್ನಿಯರಿದ್ದಂತೆ ತಿಳಿದು ಬರುತ್ತದೆ. ಇವರಲ್ಲಿ ಗಂಗಾದೇವಿ, ಬಿಜ್ಜಳನ ಬಳಿ ಇನ್ನೊಬ್ಬ ಅಧಿಕಾರಿಯಾಗಿದ್ದ ಬಲದೇವನ ಮಗಳು. ಗಂಗಾಂಬಿಕೆಯಲ್ಲಿ ಬಸವಣ್ಣನವರಿಗೆ ಜನಿಸಿದ ಮಗ ಚಿಕ್ಕಸಂಗಯ್ಯ. ಆದರೆ ಅವನು ಅಪ್ರಾಪ್ತ ವಯಸ್ಸಿನಲ್ಲಿಯೇ ಮರಣಹೊಂದಿದಂತಿದೆ.

ಬಸವಣ್ಣನವರು ತಮ್ಮ ಸಾಮರ್ಥ್ಯದಿಂದ ಭಂಡಾರಿಯಾಗಿ, ದಂಡಾಧೀಶರಾಗಿ ಬೆಳೆದಂತೆ ಧಾರ್ಮಿಕವಾಗಿಯೂ ಬೆಳೆದರು. ವೀರಶೈವ ಧರ್ಮಕ್ಕೆ ಜನರನ್ನು ಎಲ್ಲ ಧರ್ಮ, ಜಾತಿ ಮತ್ತು ವರ್ಗಗಳಿಂದ ಸ್ವಾಗತಿಸಿದರು. ಕಾಲದ ದೃಷ್ಟಿಯಿಂದ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ದೂರದೃಷ್ಟಿಯನ್ನು ತೋರಿದ ಬಸವಣ್ಣನವರು ಕ್ರಮೇಣ ಸಾಂಪ್ರದಾಯಿಕ ಶಕ್ತಿಗಳೊಂದಿಗೆ ಘರ್ಷಣೆಗಳಿಗೆ ಇಳಿಯಬೇಕಾಯಿತು. ಶೈವ ಧರ್ಮಾವಲಂಬಿಯಾದ ಕಳಚೂರ್ಯ ಬಿಜ್ಜಳನಿಗೂ ಪರಿಷ್ಕರಣಗೊಳ್ಳುತ್ತಿದ್ದ ವೀರಶೈವ ಧರ್ಮಕ್ಕೂ ಕೆಲವು ಸಾರಿ ಮುಖಾಮುಖಿಯಾಗಬೇಕಾದ ಸಂದರ್ಭಗಳು ಒದಗಿ ಬಂದಿರಬೇಕು. ಇದೇ ಕಾಲದಲ್ಲಿ ಶೈವರಿಗೂ ಜೈನರಿಗೂ ಘರ್ಷಣೆಗಳು ನಡೆಯುತ್ತಿದ್ದವು.[೧] ಹೀಗಾಗಿ ಮುಂದಿನ ಜೈನ ಪುರಾಣಗಳಲ್ಲಿ ಬಸವಣ್ಣ -ಬಿಜ್ಜಳರ ಘರ್ಷಣೆಗಳನ್ನು (ಧರಣಿ ಪಂಡಿತ, ಚಂದ್ರಸಾಗರ ವರ್ಣಿ) ಬಿಜ್ಜಳ ಜೈನನೆಂದೂ ಅವನ ರಾಜ್ಯಾಪಹರಣ, ಪ್ರಾಣಾಪಹರಣಗಳಲ್ಲಿ ಬಸವಣ್ಣನವರು ತೊಡಗಿದ್ದರೆಂದೂ ಕೋಪತಾಪಗಳಿಂದ ಬರೆದರು.[೨]

ಬಸವಣ್ಣನವರು ಅಲ್ಲಮ ಪ್ರಭು, ಸಿದ್ಧರಾಮ, ಅಕ್ಕಮಹಾದೇವಿ, ಚನ್ನಬಸವಣ್ಣ[೩] ಮುಂತಾದ ಶಿವಶರಣರ ಸಮರ್ಥ ಬೆಂಬಲದಿಂದ ಬಹುದೊಡ್ಡ ಗುಂಪಿನ ಸಾಂಘಿಕ ಶಕ್ತಿಯಾಗಿ ಬೆಳೆದಿದ್ದರು. ಬಿಜ್ಜಳನಿಗೆ ಬಸವಣ್ಣನವರ ಈ ಬೆಳವಣಿಗೆ ಒಂದೊಂದು ಸಾರಿ ಆತಂಕವನ್ನೂ ತಂದಿರಲು ಸಾಧ್ಯ. ಇದಕ್ಕೆ ಪೋಷಕವಾಗಿ ಸಾಂಪ್ರದಾಯಿಕ ಶಕ್ತಿಗಳು ಬಸವಣ್ಣನವರ ಮತ್ತು ಅವರ ಸಂಗಡಿಗರ ಜಾತಿ, ಸಂಪ್ರದಾಯಗಳನ್ನು ಮೀರಿದ ನಡವಳಿಕೆಗಳನ್ನು ಅತಿರಂಜಿತವಾಗಿ ವರ್ಣಿಸಿ ಬಿಜ್ಜಳನನ್ನು ಕೆರಳಿಸುತ್ತಿದ್ದಿರಬೇಕು; ಇದು ಒಳಗೊಳಗೇ ಬಸವಣ್ಣ ಮತ್ತು ಅವರ ಅನುಯಾಯಿಗಳ ಬಗ್ಗೆ ಅಸಮಾಧಾನ ಹೆಚ್ಚಿಸುತ್ತಾ ಹೋಗಿರಬೇಕು. ರಾಜಶಕ್ತಿಗೆ ಹೆದರದ ತಮ್ಮ ನಡೆ ನುಡಿ ವ್ಯವಹಾರಗಳಿಂದ ಪ್ರಾಮಾಣಿಕ ನೈತಿಕತೆಯ ಉನ್ನತಿಯಲ್ಲಿದ್ದ ಬಸವಣ್ಣ ಶುದ್ಧಹಸ್ತರಾಗಿದ್ದರು. ಸಾಂಘಿಕ ಶಕ್ತಿ, ವ್ಯಾವಹಾರಿಕ ಮತ್ತು ಚಾರಿತ್ರ ಶುದ್ಧಿ, ಭೇದಭಾವ ಮೀರಿದ ವಿನಯಪರ ನಡವಳಿಕೆ ಇವುಗಳಿಂದ, ಬಿಜ್ಜಳನಿಗೆ ಯಾವ ಕ್ರಮ ಜರುಗಿಸಲೂ ಅಸಾಧ್ಯವಾಗಿರಬೇಕು. ಆ ಹೊತ್ತಿಗೆ ಬಸವಣ್ಣನವರ ಮತ್ತು ವೀರಶೈವದ ಸಂಘಟನೆ ಪ್ರಸಿದ್ಧವಾಗಿ ದೇಶದ ನಾನಾ ಮೂಲೆಗಳಿಂದ ಶಿವಭಕ್ತರು ಕಲ್ಯಾಣಕ್ಕೆ ಬಂದು ನೆಲಸಹತ್ತಿದ್ದರು.

ಕಲ್ಯಾಣದಲ್ಲಿದ್ದ ಹರಳಯ್ಯನೆಂಬ ಅಸ್ಪೃಶ್ಯನ ಮಗನಿಗೂ ಮಧುವಯ್ಯನೆಂಬ ಬ್ರಾಹ್ಮಣನ ಮಗಳಿಗೂ ಬಸವಣ್ಣನವರ ನೇತೃತ್ವದಲ್ಲಿ ವಿವಾಹ ನಡೆದು, ಇದು ವರ್ಣ ಸಂಕರವೆಂದೂ, ರಾಜ ಧರ್ಮ ವಿರೋಧಿ ಎಂದೂ ಸಾಂಪ್ರದಾಯಿಕ ಶಕ್ತಿಗಳು ಪ್ರತಿಭಟಿಸಿ ಬಿಜ್ಜಳನಿಗೆ ದೂರು ನೀಡಿದಾಗ, ಹರಳಯ್ಯ-ಮಧುವಯ್ಯರನ್ನು ತುಂಬ ಘೋರವಾಗಿ ಶಿಕ್ಷಿಸಿದ.[೪] ಇದು ಮುಂದೆ ಬಹು ದೊಡ್ಡ ವಿಘಟನೆಗೆ ನಾಂದಿಯಾಗಿ ಕಲ್ಯಾಣ ಕ್ರಾಂತಿಯಲ್ಲಿ ಪರ್ಯವಸಾನವಾಯಿತು. ಈ ಎಲ್ಲ ಘಟನೆಗಳಿಂದ

---

೧. P. B.Desai : Basaveshvara and His Times. ಪು. ೭೪.

೨. ಎಂ. ಆರ್. ಶ್ರೀನಿವಾಸ ಮೂರ್ತಿ : ಭಕ್ತಿ ಭಂಡಾರಿ ಬಸವಣ್ಣನವರು ಪು. ೧೧೬. ಜೈನ ಪುರಾಣಗಳು ಕಾಲದ ದೃಷ್ಟಿಯಿಂದ ಈಚಿನವು.

೩. ಇವನು ಬಸವಣ್ಣನವರ ಸಹೋದರಿ ನಾಗಲಾಂಬಿಕೆಯ ಮಗ. ಇವನ ಹುಟ್ಟಿನ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.

೪. ಈ ವಿಷಯಕ್ಕೆ ಸಂಬಂಧಿಸಿದ ವಿವರಗಳಿಗೆ ನೋಡಿ. ಸಿ.ಯು ಮಂಜುನಾಥ್ : 'ಹರಳಯ್ಯ ಮಧುವಯ್ಯ' -ಸಿದ್ಧಗಂಗಾಶ್ರೀ ಪು. ೭೯೬-೮೦೪.

ಮನನೊಂದು ಬಸವಣ್ಣ ಕಲ್ಯಾಣ ತ್ಯಜಿಸಿ ಕಪ್ಪಡಿ ಸಂಗಮದಲ್ಲಿ ಶಿವಸಾನಿಧ್ಯ ಹೊಂದಿರಬೇಕು.[೧] ಬಿಜ್ಜಳನು ರಾಜ್ಯತ್ಯಾಗ ಮಾಡಿ ಮಗ ಸೋವಿದೇವನಿಗೆ ರಾಜ್ಯವನ್ನು ಒಪ್ಪಿಸಿ ಮುಂದೆ ಕ್ರಿ.ಶ.೧೧೬೮ರವರೆಗೆ ಜೀವಿಸಿದ್ದನೆಂದು ನದಿಹರಳು ಶಾಸನದಿಂದ ತಿಳಿದುಬರುತ್ತದೆ. ವೀರಶೈವ ಅನುಯಾಯಿಗಳಾದ ಮೊಲ್ಲೆ ಬೊಮ್ಮಣ್ಣ ಮತ್ತು ಜಗದೇವರಿಂದ[೨] ಬಿಜ್ಜಳ ಹತನಾಗಿರಬೇಕು.[೩]

ಬಸವಣ್ಣನವರು ರಚಿಸಿದ ಸಾವಿರಕ್ಕೂ ಮೇಲ್ಪಟ್ಟ ವಚನಗಳು ಪ್ರಕಟವಾಗಿವೆ. ಅವುಗಳು ಅವರ ವೈಯಕ್ತಿಕ ಸಾಧನೆಯನ್ನೂ, ಸಾಮಾಜಿಕ ಕಳಕಳಿಯನ್ನೂ, ಆರ್ಥಿಕ ದೃಷ್ಟಿಕೋನವನ್ನೂ ಮತ್ತು ಧಾರ್ಮಿಕ ಸಮರ್ಪಣೆಯನ್ನೂ ಸಮರ್ಥವಾಗಿ ಬಿಂಬಿಸುತ್ತವೆ. ವಚನಸಾಹಿತ್ಯದ ಅತ್ಯುತ್ತಮ ಪ್ರತಿನಿಧಿಗಳಲ್ಲಿ ಬಸವಣ್ಣನವರು ಒಬ್ಬರಾಗಿದ್ದಾರೆ. ಅವರ ಸಾಹಿತ್ಯಕ ಸಾಧನೆಯನ್ನು ಕುರಿತು ಕನ್ನಡದಲ್ಲಿ ಸಾಕಷ್ಟು ಸಾಹಿತ್ಯ ಬಂದಿದೆ.

**ಸಿದ್ಧರಾಮ :**

ಬಸವಣ್ಣನವರ ಕಾಲದಲ್ಲಿ ಅವರಿಗೆ ಮತ್ತು ವೀರಶೈವ ಧರ್ಮಕ್ಕೆ ಬೆಂಬಲವಾಗಿ ನಿಂತ ಅಲ್ಲಮ ಪ್ರಭು, ಚೆನ್ನಬಸವಣ್ಣ ಮುಂತಾದವರ ಬಗ್ಗೆ ಶಾಸನಗಳು ದೊರಕಿದರೂ ಕಾಲದ ದೃಷ್ಟಿಯಿಂದ ಈಚಿನವಾಗಿವೆ. ಬಸವಣ್ಣನವರ ಪ್ರಮುಖ ಬೆಂಬಲಿಗರಲ್ಲಿ ಒಬ್ಬನಾಗಿ ಆರಂಭದಲ್ಲಿ ಸೊನ್ನಲಿಗೆಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ಗಮನಾರ್ಹ ಸಾಧನೆಯನ್ನು ಮಾಡಿದ ಸಿದ್ಧರಾಮನಿಗೆ ಸಂಬಂಧಿಸಿದ ಅನೇಕ ಶಾಸನಗಳು ದೊರೆಯುತ್ತವೆ. ಸಿದ್ಧರಾಮನ ಹೆಸರು ಸೂಚಿತವಾದ ಎರಡು ಗದ್ಯ ಖಂಡಗಳು ಸುಮಾರು ಇಪ್ಪತ್ತೈದು ಸೇವುಣ ಶಾಸನಗಳಲ್ಲಿ ಉದಾಹೃತವಾಗಿವೆ.[೪] ಇದಲ್ಲದೆ ಅನ್ಯ ರಾಜವಂಶದ ಶಾಸನಗಳಲ್ಲೂ ಸಿದ್ಧರಾಮನ

---

೧. ಶಿವಸಾನ್ನಿಧ್ಯ ಹೊಂದಿದ ವರ್ಷದ ಬಗೆಗೆ ಬಹಳ ಭಿನ್ನಾಭಿಪ್ರಾಯಗಳಿವೆ : R.C.Hiremutt : 'Sri Basaveshvara a Biography' Sri Basaveshvara- A commemoration volume ಪು. ೩೦. ಕ್ರಿಶ. ೧೧೬೭.

ಎಲ್. ಬಸವರಾಜು : 'ಬಸವೇಶ್ವರನ ಜೀವನಾವಧಿ' ಉಪಾಯನ ಪು.೧೭೭-೧೯೫. ಕ್ರಿಶ. ೧೧೮೦.

ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ ಪು. ೧೩೯. ಕ್ರಿಶ. ೧೧೬೭-೬೮.

R.Ramarao : Origin and Developement of Shiva worship with special reference to Virasaivism ಕ್ಯುಜೆಎಂ ಎಸ್ XIV -೪ ಪು. ೨೯೫ ಕ್ರಿಶ. ೧೧೬೮.

B.Ramayya :'Note on the Arjunavada inscription' -Studies in Indian Epigraphy. ಪಂಡಿತಾರಾಧ್ಯ ಚರಿತ್ರ, ಅರ್ಜುನವಾಡದ ಶಾಸನ ಮತ್ತು ವಚನಗಳ ಆಧಾರದ ಮೇಲೆ ಬಸವಣ್ಣನವರು ೧೨ ಡಿಸೆಂಬರ್ ೧೧೯೬ ರವರೆಗೆ ಬದುಕಿದ್ದರೆಂದು ವಾದಿಸಿದ್ದಾರೆ. ಪು. ೧೨೭-೧೩೭. ಬಿ. ಆರ್. ಗೋಪಾಲ್ ಅವರು ಮೇಲಿನ ವಾದಕ್ಕೆ ಅನೇಕ ಆಕ್ಷೇಪಣೆಗಳನ್ನು ಎತ್ತಿ, ಕ್ರಿಶ. ೧೧೬೭ರ ಆಚೆ ಜೀವಿಸಿರಲಿಲ್ಲವೆಂದು ಹೇಳಿದ್ದಾರೆ. The Chalukyas of Kalyana and the Kalachuris ಪು. ೩೬೫-೬೬. ಕೆ.ಲಲಿತಾಂಬ ಅವರು ತಮ್ಮ ಗ್ರಂಥದಲ್ಲಿ ಕೊಡುವ ಕೆಲವು ಆಧಾರಗಳು ಗಮನಾರ್ಹವಾಗಿವೆ. ಬಸವಣ್ಣನವರನ್ನು ನೋಡಲು ಕಲ್ಯಾಣದ ಕಡೆಗೆ ಹೊರಟಿದ್ದ ಮಲ್ಲಿಕಾರ್ಜುನ ಪಂಡಿತ ಬಸವಣ್ಣನ ಸಾವಿನ ಸುದ್ದಿ ತಿಳಿದು ವಾಣಿಪುರದಿಂದ ಶ್ರೀಶೈಲದ ಕಡೆ ಹೊರಟ. ವೆಲ್ಲತೂರನ್ನು ತಲುಪಿದಾಗ ಶ್ರೀಶೈಲ ಸ್ವಲ್ಪದೂರವಿದ್ದರೂ ಮುಂದಕ್ಕೆ ಹೋಗಲಿಲ್ಲ. ಶಿವರಾತ್ರಿ ಸಮೀಪ ಬಂದಿತ್ತು. ಆದಾದ ಕೆಲಕಾಲಾನಂತರ ಅವನು ಸೋಮನಾಥನಲ್ಲಿ ಐಕ್ಯವಾದ. ಸಂಗಮೇಶ್ವರದ ಶಾಸನದ (ಕ್ರಿಶ.೧೧೮೫) ಆಧಾರದಿಂದ ಮಲ್ಲಿಕಾರ್ಜುನ ಪಂಡಿತ ದಾನ ಸ್ವೀಕರಿಸಿದ್ದಾನೆ. ಈ ಎಲ್ಲಾ ಆಧಾರದ ಮೇಲೆ ಕ್ರಿಶ. ೧೧೮೩-೮೪ ರಲ್ಲಿ ಮರಣ ಹೊಂದಿರಬೇಕು. Virasaivism in Andhra ಪು.೨೭-೨೯. ಡಾ. ಜಿ. ಎಸ್. ದೀಕ್ಷಿತ್ ಅವರು ಕ್ರಿ.ಶ. ೧೧೮೪-೮೫ ರಲ್ಲಿ ಬಸವಣ್ಣನವರು ಲಿಂಗೈಕ್ಯರಾಗಿರಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ. 'ಬಸವಣ್ಣನವರ ಜೀವಮಾನಕಾಲ' ಸಂ: ಎಂ. ಚಿದಾನಂದಮೂರ್ತಿ ಅಧ್ಯಯನ ಪು. ೬೨೭-೬೩೦. ಜಿ. ಎಸ್. ದೀಕ್ಷಿತ್ : 'ಬಿಜ್ಜಳನ ಸಾವಿನ ಬಗೆ ಮತ್ತು ಕಾಲ' ಇದ. ಸಂ. ೧೪ ಪು. ೨೧೦-೨೧೨. ಕ್ರಿ.ಶ. ೧೧೮೫-೮೬.

೨. ಮರಡಿಪುರ ಶಾಸನದಲ್ಲಿ ಇವನು ಉಲ್ಲೇಖಿತನಾಗಿದ್ದಾನೆ. ಕೊಂಚಾಪುರ ಶಾಸನದಲ್ಲಿ ಬಿಜ್ಜಗ ಶಿರಚ್ಛೇದಕ ಎಂಬ ಪ್ರಶಸ್ತಿಯೊಂದಿಗೆ ಉಲ್ಲೇಖಿತನಾಗಿದ್ದಾನೆ. ನೋಡಿ : ಎಂ. ಎಂ.ಕಲಬುರ್ಗಿ : 'ಬಸವಣ್ಣನವರ ಜೀವನ ಚರಿತ್ರೆ' ಶ್ರೀ ಬಸವೇಶ್ವರರು. ಪು.೮೦.

೩. ಪಿ. ಬಿ. ದೇಸಾಯಿ : 'ಕರ್ನಾಟಕದ ಕಲಚುರಿಗಳು' ಕ.ಸಾ.ಪ.ಪ. ೩೭, ೧-೨ ಪು. ೯೬-೯೭.

೪. ಎ. ವಿ. ನರಸಿಂಹ ಮೂರ್ತಿ : ಕರ್ನಾಟಕದ ಸೇವುಣರ ಇತಿಹಾಸ ಪು. ೧೧೨.

ಉಲ್ಲೇಖಗಳು ದೊರೆಯುತ್ತವೆ. ಕ್ರಿ.ಶ. ೧೧೯೦ ರಿಂದ ೧೩೫೬ ರವರೆಗಿನ ಕಾಲವ್ಯಾಪ್ತಿಯಲ್ಲಿ ಬರುವ ಈ ಶಾಸನಗಳು ಬಿಜಾಪುರ, ಸೊಲ್ಲಾಪುರ, ಉಸ್ಮಾನಾಬಾದ್, ಧಾರವಾಡ, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳಲ್ಲಿ ಹರಡಿವೆ.[೧] ಮರಡಿಪುರ ಶಾಸನದಲ್ಲಿ ಕೇಶಿರಾಜ, ಬಸವಣ್ಣ, ಜಗದೇವ, ಏಕಾಂತದ ರಾಮಯ್ಯ ಮುಂತಾದವರೊಂದಿಗೆ 'ಸೊಂನಲಿಗೆ ರಾಮಯ್ಯ'ನೆಂದು ಉಲ್ಲೇಖ ಹೊಂದಿದ್ದಾನೆ.[೨] 'ಸಿದ್ಧರಾಮನಾಥ ದೇವರ್ಗೆ' ಎಂದು ಬೇರೆ ದೇವರುಗಳ ಜೊತೆಯಲ್ಲಿ ಇಂಗಳಗಿ ಶಾಸನದಲ್ಲಿ[೩] ಬರುವುದರಿಂದ ಅದು ಸಿದ್ಧರಾಮನನ್ನು ಸೂಚಿಸುವುದೆಂದು ಮತ್ತು ಆ ಕಾಲಕ್ಕೆ ಸಿದ್ಧರಾಮ ಮೂರ್ತಿ ಸ್ವರೂಪದಲ್ಲಿ ಪೂಜೆಗೊಳ್ಳುತ್ತಿದ್ದುದಾಗಿ ಎಂ.ಎಂ.ಕಲಬುರ್ಗಿಯವರು ಭಾವಿಸುತ್ತಾರೆ.[೪]

ಘಡಕೇನೂರು ಶಾಸನದಲ್ಲಿ ಸಿದ್ಧರಾಮನನ್ನು ವಿಶೇಷವಾಗಿ ಸ್ತುತಿಸಲಾಗಿದೆ.[೫] 'ಅಣಿಮ ಲಘಿಮಮಹಿಮ ಪ್ರಾಪ್ತ್ಯ ಪ್ರಾಕಾಮ್ಯ ಈಶತ್ವ ವಸಿತ್ವವೆಂಬ ಅಷ್ಟಮಾದಿ ಗುಣೈಸ್ವರ್ಯ್ಯ ಸಂಪನನುಂ... ಸಿದ್ಧಕುಳ ವಾರ್ಧಿವರ್ದ್ಧನ ಸುಧಾಕರನುಂ ನಾಡಿಭಾಳನುಂ' ಎಂಬಂತಹ ವಿಶೇಷಣಗಳು ಶೈವ ಪರಂಪರೆಯ ಸಿದ್ಧ-ನಾಥರ ವಿಶೇಷಣಗಳೂ ಆಗಿವೆ. ಇವುಗಳನ್ನು ನೋಡಿದರೆ ಅವನು ವೀರಶೈವ ಧರ್ಮದಿಂದ ಪ್ರಭಾವಿತನಾಗಿ ಆ ಧರ್ಮಕ್ಕೆ ಬರುವ ಮೊದಲು ಇದ್ದ ಶೈವ ಪಂಥವನ್ನು ಸೂಚಿಸುತ್ತವೆ. ಇಲ್ಲವೇ ವೀರಶೈವಕ್ಕೆ ಬಂದ ನಾನಾ ಪಂಥಗಳ ಶೈವರ ಮೂಲಕ 'ಸಂಕೀರ್ಣ ಸ್ವರೂಪದ ವೀರಶೈವ' ತನ್ನಲ್ಲಿ ಸ್ಥಾವರಾರಾಧನೆ, ದಾನ ದತ್ತಿ ಸ್ವೀಕಾರ ಮುಂತಾದವನ್ನು ಅಳವಡಿಸಿಕೊಂಡು ಬೆಳೆದ ಬಗೆಯನ್ನು ಸೂಚಿಸುವಂತೆ ಕಾಣುತ್ತದೆ. ಸಿದ್ಧರಾಮನ ಘನ ವ್ಯಕ್ತಿತ್ವವನ್ನು ಕೀರ್ತಿಸುವ ವಿಶೇಷಣಗಳಾದ ಪರಮಾರಾಧ್ಯಂ, ಲೋಕೈಕನಾಥಂ, ಸ್ವಚ್ಛಂದ ಮೃತ್ಯುಂಜಯ ಮುಂತಾದವು ಅವನು ಪಡೆದಿದ್ದ ಪ್ರಭಾವವನ್ನು ಸೂಚಿಸುತ್ತವೆ. ಬುಡರಸಿಂಗಿ ಶಾಸನದಲ್ಲಿ ಸಿದ್ಧರಾಮನನ್ನು ಉದಾತ್ತವಾಗಿ ಕೀರ್ತಿಸಲಾಗಿದೆ. ಇದು, ಕದಂಬರಾಜ ಚಟ್ಟಯ್ಯ ದೇವ ಸೊನ್ನಲಿಗೆ ಕ್ಷೇತ್ರದ ಕಪಿಲಸಿದ್ಧ ಮಲ್ಲಿಕಾರ್ಜುನನಿಗೆ ಉಚ್ಚಂಗಿ ಎಂಬ ಹಳ್ಳಿಯನ್ನು ದಾನವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ. ಸಿದ್ಧರಾಮನನ್ನು 'ಶ್ರೀ ಪರಮ ಸಿದ್ಧರಾಮಮ್ ಪಾಪಹರಮ್ ಮರ್ತ್ಯದೊಳಗೆ ಉದಭವಿಸಿ ನಿಂದಮ್' ಎಂದು ಕೀರ್ತಿಸುತ್ತದೆ.[೬] ಈ ಶಾಸನದಲ್ಲಿ ಬರುವ 'ಚಾಪಳ ವಿಶೇಷನಯನಂ' ಎಂಬ ವಿಶೇಷಣ ರಾಘವಾಂಕನ ವರ್ಣನೆಗೆ ಹತ್ತಿರವಾಗಿದೆ.[೭] ಗುಂಡಕರ್ಜಗಿ ಶಾಸನ ತುಂಬ ಸವೆದು ಹೋಗಿರುವುದಾದರೂ ಅದರಲ್ಲಿ ಬರುವ 'ಉರಸ್ಥಳೋದ್ಭಾಸಕ, ತ್ರಿಜಗದ್ರಕ್ಷಕ' ಎಂಬಂತಹ ಪದಗಳು ಅವನಿಗೆ ವಿಶೇಷಣಗಳಾಗಿ ಬಳಕೆಯಾಗಿರುವುದನ್ನು ಕಾಣಬಹುದು.[೮] ಈ ಕೆಲವು ಶಾಸನಗಳಿಂದ ಸಿದ್ಧರಾಮನು ಜನಮನದಲ್ಲಿ ಪಡೆದಿದ್ದ ಉನ್ನತ ಭಾವನೆಗಳನ್ನು ಅರಿಯಬಹುದಾಗಿದೆ.

ಸಿದ್ಧರಾಮನ ಹೆಸರಿನಲ್ಲಿ ಲಭಿಸುವ ಸುಮಾರು ಇಪ್ಪತ್ತೈದು ಗದ್ಯಖಂಡಗಳು ವಿವಿಧ ಶಾಸನಗಳಲ್ಲಿ ಬಳಕೆಯಾಗಿವೆ. ಈ ಗದ್ಯಖಂಡಗಳಲ್ಲಿ ಬರುವ ಕಪಿಲಸಿದ್ಧ ಮಲ್ಲಿನಾಥ, ವಚನ ಎಂಬ ಮಾತುಗಳು ಅವನ್ನು ಸಿದ್ಧರಾಮನೇ ರಚಿಸಿರುವ

---

೧. ಎಂ.ಬಿ. ಕೊಟ್ರಶೆಟ್ಟಿ : ಸಿದ್ಧರಾಮ ಶಿವಯೋಗಿ ಪು.೫೪-೫೫.

೨. (ಮೈ) ಎಕ VII ಮಂಡ್ಯ ೧೩ ಕ್ರಿಶ. ೧೨೮೦.

೩. ಸಾಧನೆ ೯-೪ ಚಿತಾಪುರ ಕ್ರಿಶ. ೧೨೦೯.

೪. ಶಾಶಿಶ. ಪು. ೮೫.

೫. ಎಸ್ಐಐ XV ಮುದ್ದೇಬಿಹಾಳ ೧೯೦ ಕ್ರಿಶ. ೧೨೫೬-೫೭.

೬. ಜೆಕೆಯು VI ಪು. ೧೨೮ ಕ್ರಿಶ. ೧೨೫೭.

೭. ಸಿ. ಚಾ-೧-೩.

೮. ಎಸ್ಐಐ XV ಮುದ್ದೇಬಿಹಾಳ ೧೮೪ ಕ್ರಿಶ. ೧೩ ಶ.ಮಾ.

ವಚನಗಳೆಂದು ಭಾವಿಸುವಂತೆ ಮಾಡಿದ್ದವು. ಆದರೆ ಇದುವರೆಗೆ ಪ್ರಕಟವಾದ ಸಿದ್ಧರಾಮನ ಯಾವುದೇ ವಚನಗಳಲ್ಲಿ ಈ ಭಾಗಗಳು ಕಂಡು ಬರುವುದಿಲ್ಲ. ಶಾಸನಗಳಲ್ಲಿ ಕಂಡು ಬರುವ ವಚನಗಳ ರಚನೆಯ ಸ್ವರೂಪದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಎಂ. ಎಸ್. ವೃಷಭೇಂದ್ರಸ್ವಾಮಿಯವರು ಶಾಸನೋಕ್ತ ಗದ್ಯಖಂಡಗಳನ್ನು ಸಮೀಕ್ಷಿಸಿ, ಕಪಿಲಸಿದ್ಧ ಮಲ್ಲಿಕಾರ್ಜುನ ಎಂಬ ಪ್ರಯೋಗ ಅಂಕಿತರೂಪವಾಗಿ ಬಂದಿಲ್ಲವೆಂದೂ ಸ್ಥಾವರಲಿಂಗಕ್ಕೆ ದತ್ತಿ ಮತ್ತು ಅದನ್ನು ರಕ್ಷಿಸಬೇಕೆಂಬ ವಿಚಾರಗಳು ಶರಣರ ಕ್ರಾಂತಿ ವಿಚಾರಗಳ ಚೌಕಟ್ಟಿನೊಳಗೆ ಸೇರಲಾರವೆಂದು ಹೇಳಿ ಅವು ವಚನ ಸಾಹಿತ್ಯ ಪ್ರಕಾರಕ್ಕಂತೂ ಸೇರುವುದೇ ಇಲ್ಲವೆಂದು ಅಭಿಪ್ರಾಯಪಡುತ್ತಾರೆ. ಮತ್ತು ಶಾಸನಗಳಲ್ಲಿ ಸಿದ್ಧರಾಮನ ವಚನಗಳಿವೆ ಎಂಬ ಹೇಳಿಕೆಗಳು ನಿರಾಧಾರವಾದವು ಎಂದು ಹೇಳದೆ ವಿಧಿ ಇಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ.[೧]

**ಮಡಿವಾಳ ಮಾಚಿದೇವ :**

ಕಲ್ಯಾಣದಲ್ಲಿದ್ದ ಈ ಶರಣನನ್ನು ಅಗಸರು ಅಭಿಮಾನದಿಂದ ತಮ್ಮವನೆಂದು ಗುರುತಿಸಿಕೊಂಡು ತಾವು ಅವನ ಸಂತಾನವೆಂದು ಭಾವಿಸುತ್ತಾರೆ. ಮೂರನೆಯ ತೈಲನ ಮಡಿವಳನಾದ ಬಸವ, ಮಡಿವಳ ಮಾಕೆಯನಿಗೆ ದಾನ ಕೊಟ್ಟ ವಿಷಯವನ್ನು ಹೇಳುವ ಶಾಸನವೊಂದು ದೊರತಿದೆ. ಪಿ. ಬಿ.ದೇಸಾಯಿ ಅವರು, ಮಡಿವಳ ಮಾಕೆಯನೆಂದರೆ ಮಡಿವಾಳ ಮಾಚಯ್ಯನೆಂದು ಭಾವಿಸಿದ್ದಾರೆ.[೨] ಎಂ.ಎಂ. ಕಲಬುರ್ಗಿಯವರು ಈ ಅಭಿಜ್ಞೆಯನ್ನು ಸ್ವಲ್ಪ ಅನುಮಾನಿಸಿದ್ದಾರೆ.[೩] ಅಮ್ಮಿನಭಾವಿ ವಿಗ್ರಹಶಾಸನದಲ್ಲಿ, ಮೇಲೆ ಆನೆಯನ್ನು ಮರ್ದಿಸುತ್ತಿರುವ ವಿಗ್ರಹದ ಕೆಳಗೆ ಅಮ್ಮಿನಭಾವಿಯ ಮಡಿವಳರು ಮಡಿವಳ ಮಾಚಿದೇವನ ವಿಗ್ರಹ ಪ್ರತಿಷ್ಠೆ ಮಾಡಿದ ವಿಷಯವನ್ನು ಹೇಳುವಂತೆ ಕಾಣುತ್ತದೆ.[೪] ಶಾಸನದ ಕಾಲ ಕ್ರಿ.ಶ. ೧೨೮೪. ಮಡಿವಳ ಮಾಚಿದೇವನ ಕಾಲಾನಂತರ ಸುಮಾರು ಒಂದು ನೂರು ವರ್ಷಗಳಷ್ಟು ಸಮಯಕ್ಕೆ ದೇವರ ಸ್ಥಾನವನ್ನು ಹೊಂದಿ ಪೂಜೆಗೊಳ್ಳುತ್ತಿದ್ದ ವಿಷಯ ಗಮನಾರ್ಹವಾಗಿದೆ. ಇದೇ ರೀತಿ ಆನೆಯನ್ನು ಮರ್ದಿಸುತ್ತಿರುವ ಶಿಲ್ಪ ಮುಳಗುಂದದಲ್ಲಿ ದೊರೆತಿರುವುದಾದರೂ ಅದರಲ್ಲಿ ಶಾಸನವಿಲ್ಲ.[೫]

**ಹುಳಿಯಮೇಶ್ವರ ಚಿಕ್ಕಯ್ಯ :**

ಇವನಿಗೆ ಸಂಬಂಧಿಸಿದ ಎರಡು ಶಾಸನಗಳು ದೊರೆಯುತ್ತವೆ. ದೇವರ ಗುಡಿಯ ಮೊದಲನೆಯ ಶಾಸನ ಸಂಯೋಜಿತ ಶಾಸನವಾಗಿದೆ. ಮೊದಲ ಭಾಗದಲ್ಲಿ ದಾನದಲ್ಲಿ (ಕ್ರಿ.ಶ.೧೧೦೦) ಹುಳಿಯಮೇಶ್ವರ ಲಿಂಗಕ್ಕೆ 'ಕೇದಾರಪಂಡಿತರ ಕಾಲಂ ಕರ್ಚಿ' ದಾನಮಾಡಿದ ವಿಷಯ ತಿಳಿಸುತ್ತದೆ. ಹೆಸರನ್ನು ಗಮನಿಸಿದರೆ ದಾನ ಸ್ವೀಕರಿಸಿದ ಯತಿ ಶೈವನೆಂದು ಭಾವಿಸಬಹುದು. ಕ್ರಿ.ಶ. ೧೧೬೮ರ ಕಾಲದ ಶಾಸನ 'ಚಿಕ್ಕಯ್ಯ ಪಂಡಿತರ ಕಾಲಂ ಕರ್ಚಿ' ದಾನ ಮಾಡಿದ ವಿಷಯ ತಿಳಿಸುತ್ತದೆ. ಚಿಕ್ಕಯ್ಯ ಪಂಡಿತ ಮೂರು ಸಂದರ್ಭಗಳಲ್ಲಿ ಹುಳಿಯಮೇಶ್ವರನಿಗಾಗಿ ದಾನವನ್ನು ಪಡೆದಿದ್ದಾನೆ. ಮೂರೂ ಸಂದರ್ಭಗಳಲ್ಲಿ

---

೧. ಎಂ. ಎಸ್. ವೃಷಭೇಂದ್ರ ಸ್ವಾಮಿ : 'ಶಾಸನಗಳಲ್ಲಿ ಸಿದ್ಧರಾಮನ ವಚನಗಳು' ಜೆಕೆಯು X ಪು. ೧೯೨-೨೧೪.

ಸಿದ್ಧರಾಮನ ವಚನಗಳೆಂದು ಭಾವಿಸುವ ಆ ಶಾಸನದ ಬರವಣಿಗೆಗಳು ಶಾಪಾಶಯಗಳೆಂದು ಎಂ. ಚಿದಾನಂದ ಮೂರ್ತಿಯವರು ಭಾವಿಸುತ್ತಾರೆ.

೨. P.B.Desai : Basaveshvara and His Times ಪು. ೩೬೪.

೩. ಎಂ. ಎಂ. ಕಲಬುರ್ಗಿ : ಶಾಶಿಶ ಪು. ೮೭.

೪. ಕಭಾ ೬:೪. ಕ್ರಿಶ. ೧೨೮೪.

೫. ಅದೇ.

'ಮಠದಾಚಾರ್ಯ' ಎಂದು ಬರುವುದರಿಂದ ಅವನು ಹುಳಿಯಮೇಶ್ವರ ಮಠದ ಸ್ಥಾನಪತಿಯಾಗಿದ್ದು ದಾನ ಸ್ವೀಕರಿಸಿದ್ದಾನೆ.[೧] ಅದೇ ಸ್ಥಳದ ಇನ್ನೊಂದು ಶಾಸನದಲ್ಲಿ ಹುಳಿಯಮೇಶ್ವರ ದೇವಾಲಯಕ್ಕೆ ಮಠದಾಚಾರ್ಯನಾಗಿದ್ದುಕೊಂಡು ಚಿಕ್ಕಯ್ಯ ದಾನ ಸ್ವೀಕರಿಸಿದ್ದಾನೆ.[೨] ಈ ಶಾಸನ ಕಾಲ ಕ್ರಿ.ಶ. ೧೨೦೨. ಒಂದು ಅಂಶವನ್ನು ಇಲ್ಲಿ ಗಮನಿಸಬಹುದು. ಮೊದಲ ಶಾಸನದ ಮೂರೂ ದಾನಗಳಲ್ಲಿ 'ಚಿಕ್ಕಯ್ಯ ಪಂಡಿತ'ನೆಂಬ ಉಲ್ಲೇಖಗಳಿದ್ದರೆ, ಈ ಶಾಸನದಲ್ಲಿ 'ಚಿಕ್ಕಯ್ಯ'ನೆಂದು ಮಾತ್ರವಿದೆ. ಇವನು ವಹಿಸಿಕೊಂಡಿರುವ ಸ್ಥಾನಪತಿತ್ವ, ಸ್ಥಾವರಲಿಂಗಾರಾಧನೆ ಮತ್ತು ಇವನ ವಚನಗಳಲ್ಲಿ ಬರುವ ಶೈವಪರ ನಿಲುವು ಇವನ ಶೈವ ಒಲವನ್ನು ಸೂಚಿಸುತ್ತವೆ. ಇದರೊಂದಿಗೆ ಅವನ ವಚನದಲ್ಲಿ ಬರುವ ಬಸವಣ್ಣ, ಚನ್ನಬಸವಣ್ಣರ ಕೀರ್ತನೆ ಅವನ ವೀರಶೈವ ಒಲವನ್ನೂ ವ್ಯಕ್ತಪಡಿಸುತ್ತದೆ. ಈ ಕೆಲವು ಆಧಾರಗಳಿಂದ ಕಲಬುರ್ಗಿಯವರು ಇವನು, ಶೈವ-ವೀರಶೈವಗಳೆರಡನ್ನೂ ಮನ್ನಿಸಿದ ಮಹಿಮನಾಗಿರಬಹುದೆಂದು ಊಹಿಸಿದ್ದಾರೆ.

**ಹಾವಿನಹಾಳ ಕಲ್ಲಿಸೆಟ್ಟಿ :**

ಕುರಗೋಡ ಶಾಸನ ಮಹಾವಿನಹಾಳ ಕಲ್ಲಿಸೆಟ್ಟಿಯೆಂಬ ಶಿವಭಕ್ತನ ವರ್ಣನೆಯನ್ನು ಕೊಡುತ್ತದೆ. 'ಆತನ ಹೃದಯ ಕಮಳದೊಳ್ ಮನಃಪ್ರೇರಕ ಮಹಾದೇವಂ ಜೀವನಾಗಿರ್ಪನೆನ್ತೆನೆ'-

ಚಿನ್ತಾಮಣಿ ಲಿಂಗಂ ಹೃದ
ಯಾನ್ತರದೊಳ್ನಿನ್ದು ಕಲ್ಲಿಸೆಟ್ಟಿಗೆ ದಯೆಯಿಂ।
ದಿನ್ತು ನಡೆಯಿನ್ತು ನುಡಿಯೆಂ
ದಿಂತು ಸದಾ ಶಿಕ್ಷಿಸುತ್ತ ರಕ್ಷಿಸುತಿರ್ಪ್ಪಂ[೩]

ಇಂಥ ಶಿವಪ್ರೇರಣೆಯ ನಡೆ ನುಡಿಯ ವರ್ಣನೆ ಕಲ್ಯಾಣದ ಶರಣ ಹಾವಿನ ಹಾಳ ಕಲ್ಲಯ್ಯನನ್ನು ನೆನಪಿಗೆ ತರುವುದಾದರೂ ಅವರಿಬ್ಬರ ಸಮೀಕರಣ ಕ್ಲಿಷ್ಟವೆಂದು ಕಲಬುರ್ಗಿಯವರು ಭಾವಿಸುತ್ತಾರೆ.[೪] ಅವನು ಕಲ್ಯಾಣ ಕ್ರಾಂತಿಯ ವಿಪ್ಲವದ ನಂತರ ಕುರಗೋಡಿನಲ್ಲಿ ಹೋಗಿ ನೆಲಸಿರುವ ಸಾಧ್ಯತೆ ಅಷ್ಟಾಗಿ ಕಂಡು ಬರುವುದಿಲ್ಲ. ಏಕೆಂದರೆ ಕಲ್ಯಾಣದ ಕ್ರಾಂತಿಯ ನಂತರದ ಕೆಲವೇ ವರ್ಷಗಳಲ್ಲಿ ಹುಟ್ಟಿರುವ ಈ ಶಾಸನದ ಮಹಾವಿನಹಾಳ ಕಲ್ಲಿಸೆಟ್ಟಿ ಸ್ಥಾವರ ಲಿಂಗಾರಾಧಕ ಎಂಬುದು ಸ್ಪಷ್ಟವಿದೆ. ಈ ಕಲ್ಲಿಸೆಟ್ಟಿಯು ಕಲಿದೇವರನ್ನು ಪ್ರತಿಷ್ಠೆಗೊಳಿಸಿ ಆ ದೇವಾಲಯದ 'ಸ್ಥಾನಾಚಾರ್ಯ ಶಿವಶಕ್ತಿಸುತಂ ಕಲಿದೇವರಾಂಘ್ರಿಸರೋಜಪೂಜಕಂ ಸಕಲಗುಣೋದ್ಭವ ಕಾಳಾಮುಖತಿಳಕಂ... ಅಮೃತರಾಶಿ ಮುನೀಂದ್ರನಿಗೆ ಕಾಲಂ ಕರ್ಚಿ' ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಆದ್ದರಿಂದ ಬಸವಣ್ಣನವರ ಆಂದೋಳನದಲ್ಲಿ ಭಾಗವಹಿಸಿ ಬಂದ ಕೆಲವೇ ವರ್ಷಗಳಲ್ಲಿ ದೇವಾಲಯ ಕಟ್ಟಿಸಿ ಕಾಳಾಮುಖ ಅಮೃತರಾಶಿ ಮುನೀಂದ್ರನ ಕಾಲು ತೊಳೆದು ದಾನ ಮಾಡುವ ಸಾಧ್ಯತೆ ತೀರ ಕಡಮೆಯಾದ್ದರಿಂದ ಆ ಇಬ್ಬರೂ ಭಿನ್ನರೆಂದು ಭಾವಿಸುವುದೇ ಸುರಕ್ಷಿತವೆಂದು ಭಾಸವಾಗುತ್ತದೆ.

**ಏಕಾಂತದ ರಾಮಯ್ಯ :**

ವೀರಶೈವ ಧರ್ಮದ ಇತಿಹಾಸದಲ್ಲಿ ಆಗಿ ಹೋದ ಶರಣ ಪರಂಪರೆಯಲ್ಲಿ ಏಕಾಂತದ ರಾಮಯ್ಯನದು ಅದ್ಭುತ ವ್ಯಕ್ತಿತ್ವ. ಸ್ಥಾವರ ಲಿಂಗದ ಪರ ಪರಮಾವೇಶವನ್ನು ತೋರಿ ಶಿವನಿಷ್ಠೆಗಾಗಿ ತಲೆಯನ್ನು ಪಣವಾಗಿ ಒಡ್ಡುವ ಇವನ ವ್ಯಕ್ತಿತ್ವ

೧. ಎಂ. ಎಂ. ಕಲಬುರ್ಗಿ : ಶಾಶಿಶ. ಪು. ೬೧.

೨. ಎಂ. ಎಂ. ಕಲಬುರ್ಗಿ : ಅಲ್ಲೇ, (ಅಪ್ರಕಟಿತ ಶಾಸನ) ಪು. ೬೩-೬೪.

೩. ಎಸ್ಐಐ IX(i) ಬಳ್ಳಾರಿ ೨೯೬ ಕ್ರಿಶ. ೧೧೭೬.

೪. ಎಂ. ಎಂ. ಕಲಬುರ್ಗಿ : ಪೂರ್ವೋಕ್ತ ಪು. ೬೫.

ಅಸಾಧಾರಣವಾದುದು. ಅಬ್ಬಲೂರು ಶಾಸನ ಕರ್ನಾಟಕದ ಧಾರ್ಮಿಕ ಇತಿಹಾಸದ ದೃಷ್ಟಿಯಿಂದ ಬಹು ಪ್ರಮುಖವಾದುದು.[1] ಜೈನರು ಬ್ರಹ್ಮೇಶ್ವರ ದೇವಾಲಯದಲ್ಲಿ ಜಿನ ಪಾರಮ್ಯ ಘೋಷಿಸಿದಾಗ ಸ್ಪರ್ಧೆಯಂತೆ ತನ್ನ ತಲೆಯನ್ನು ಕತ್ತರಿಸಿಕೊಂಡು ಮರಳಿ ಪಡೆದವನು. ಹರಿಹರನ ಏಕಾಂತರಾಮಿ ತಂದೆಗಳ ರಗಳೆಯಲ್ಲಿ ಜೈನನೊಬ್ಬ ಲಿಂಗದ ಕಡೆ ಕಾಲು ಮಾಡಿ ಮಲಗಿದುದು ಘರ್ಷಣೆಗೆ ಕಾರಣವೆಂದು ನಿರೂಪಿತವಾಗಿದೆ.[2] ಬಸವಪುರಾಣದಲ್ಲಿಯೂ ಅವನ ಕತೆ ಬರುತ್ತದೆ. ಫ್ಲೀಟ್ ಅವರು ಏಕಾಂತದ ರಾಮಯ್ಯನ ಶಾಸನವನ್ನು ಗಮನಿಸಿ ಅವನೇ ವೀರಶೈವ ಧರ್ಮದ ಸ್ಥಾಪಕನೆಂದು ಭಾವಿಸಿದರು.[3] ಆದರೆ ಈ ಅಭಿಪ್ರಾಯ ಸಾಧುವಾದುದಲ್ಲವೆಂಬುದು ಸ್ಪಷ್ಟವೇ ಇದೆ. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯ ಕಾಳಾಮುಖ ಮೂವರ ಕೋಣೆಯ ಸಂತತಿಯ ಅಧೀನದಲ್ಲಿ ಕ್ರಿ.ಶ. ೧೧೪೪ ರವರೆಗೆ ಇದ್ದುದರಿಂದ ಏಕಾಂತದ ರಾಮಯ್ಯನೂ ಕಾಳಾಮುಖನಾಗಿರಲು ಸಾಧ್ಯವೆಂದು ಡೇವಿಡ್ ಲೊರೆಂಜನ್ ಅವರು ಅಭಿಪ್ರಾಯಪಡುತ್ತಾರೆ. ಪಿ. ಬಿ. ದೇಸಾಯಿ ಅವರು ಅಭಿಪ್ರಾಯ ಪಡುವಂತೆ ಬಿಜ್ಜಳ ಬಸವಣ್ಣನವರ ಕಾಲದಲ್ಲಿ ಸಾಂಪ್ರದಾಯಿಕ ಶೈವರು ಜೈನ ಧರ್ಮದ ವಿರುದ್ಧ ಉಗ್ರ ಹೋರಾಟವನ್ನೇ ಮಾಡುತ್ತಿದ್ದರು. ಅವರು ಬಸವಣ್ಣನವರಂತೆ ಸೌಮ್ಯ ಭಕ್ತಿ ಮಾರ್ಗದವರಾಗಿರಲಿಲ್ಲ.[4] ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನ ೧೦೫ ಸಾಲುಗಳಲ್ಲಿ ವಿವರವಾಗಿ ನಿರೂಪಿತವಾಗಿರುವ ಪುಟ್ಟ ಚಂಪೂ ಕಾವ್ಯದಂತೆ ಇದೆ. ಕೈಲಾಸದಲ್ಲಿ ಶಿವನಾಣತಿಯಂತೆ ಮನುಷ್ಯ ಲೋಕದಲ್ಲಿ ವೀರಭದ್ರನ ಅಂಶದಿಂದ ಪುರುಷೋತ್ತಮ ಭಟ್ಟರಿಗೆ ಮತ್ತು ಸೀತಾದೇವಿ[5]ಯರಿಗೆ ಮಗನಾಗಿ ಏಕಾಂತದ ರಾಮಯ್ಯ ಹುಟ್ಟುತ್ತಾನೆ. ಶಿವಪಾರಮ್ಯವನ್ನು ಸ್ಥಿರಪಡಿಸಲು ಜೈನರೊಂದಿಗೆ ಪಣತೊಟ್ಟು ಅದರಂತೆ ಓಲೆಯನ್ನು ಪಡೆದು ತಲೆಯನ್ನು ಕತ್ತರಿಸಿಕೊಂಡು ಮರಳಿ ಪಡೆಯುತ್ತಾನೆ. ಅನಂತರ ಬಸದಿಗಳನ್ನು ನಾಶ ಪಡಿಸುತ್ತಾನೆ. ಶಾಸನದಂತೆ ಇದು ನಡೆದದ್ದು ಅಬ್ಬಲೂರಿನಲ್ಲಿ. ಈ ಸಾಧನೆಯಿಂದ ಕಳಚುರ್ಯ ಬಿಜ್ಜಳ (ಕ್ರಿ.ಶ. ೧೧೬೨-೧೧೬೭), ಚಾಳುಕ್ಯ ಸೋಮೇಶ್ವರ (ಕ್ರಿ.ಶ.೧೧೮೨-೧೧೮೯) ಮತ್ತು ಮಹಾಮಂಡಲೇಶ್ವರ ಕಾಮದೇವ (ಕ್ರಿ.ಶ. ೧೧೮೧-೧೨೦೩) ಈ ಮೂವರಿಂದಲೂ ಸನ್ಮಾನಿತನಾದ ವಿವರಗಳು ಶಾಸನದಲ್ಲಿ ವರ್ಣಿತವಾಗಿವೆ. ಪಣದಂತೆ, ಬಸದಿಗಳನ್ನು ಅವನು ನಾಶ ಮಾಡಿದಾಗ ಜೈನರೆಲ್ಲ ಬಿಜ್ಜಳನಲ್ಲಿ ದೂರು ಹೇಳಲು ಬಿಜ್ಜಳ ಬಂದು ವಿಚಾರಿಸುತ್ತಾನೆ. ಈ ಶಾಸನದಲ್ಲಿ ಬಸವಣ್ಣನವರಾಗಲಿ ಅವರ ಸಂಗಡಿಗರಲ್ಲಿ ಯಾರೂ ಬಿಜ್ಜಳನೊಂದಿಗೆ ಬಂದ ಉಲ್ಲೇಖವಿಲ್ಲ. ಬಿಜ್ಜಳ ಜಯಪತ್ರವನ್ನು ಕೊಟ್ಟು ಏಕಾಂತದ ರಾಮಯ್ಯನನ್ನು ಗೌರವಿಸಿದರೆ,

---

೧. ಎಇ V ಕ್ರಿಶ. ೧೨೦೦.

೨. 'ಏ.ರಾ.ರಗಳೆ', ನೂ.ಪು.ರ ಪು. ೩೪೩:೪೪:೪೫

-ಹರನತ್ತ ಕಾಲಾಗಿ ಪಟ್ಟಿರೆ ಸವಣಗುನ್ನಿ
ಹರನಣುಗನೀಕ್ಷಿಸುತ್ತೇಳೆಲೊ ಹುಳಿತ ಕುನ್ನಿ

೩. David N. Lorenzen : The Kapalikas and Kalamukhas. Two last Saivite sects. ಪು. ೧೬೯-೧೭೦.

೪. P.B.Desai: ಪೂರ್ವೋಕ್ತ , ಪು. ೭೫:೭೬.

೫. ಶಾಸನದಲ್ಲಿ 'ಆ ವಿಪ್ರನ ಸತಿ ಸೀತಾದೇವಿಗವಾ (ಸ)ತ್ಯ ತಪನಸತಿಗಂ ಗುಣ ಸದ್ಭಾವದೆ ಪದ್ಮಾಂಬಿಕೆ ಸಲೆ ಪಾವನಸುಚರಿತ್ರೆ ಪತಿಹಿತ ಬ್ರ (ವ್ರ)ತೆಯೆನಿಪಳ್' ಎಂದು ಬರುತ್ತದೆ. ಈ ಪದ್ಯದ ಅನ್ವಯ ಸ್ವಲ್ಪ ಕ್ಲಿಷ್ಟಕರವಾಗಿದೆ. ಪದ್ಮಾಂಬಿಕೆಯೂ ಪುರುಷೋತ್ತಮ ಭಟ್ಟರ ಮಡದಿಯ ಹೆಸರಾಗುವ ಸಾಧ್ಯತೆಯೂ ಇದ್ದಂತಿದೆ. ಏಕಾಂತದ ರಾಮಯ್ಯನ ವಿಷಯ ಮುಂದಿನ ಅನೇಕ ವೀರಶೈವ ಕೃತಿಗಳಲ್ಲಿ ಬಂದಿದೆ. ಏಕಾಂತದ ರಾಮಯ್ಯನ ವಿಷಯವನ್ನೇ ಮುಖ್ಯವಾಗಿಟ್ಟುಕೊಂಡು ಬರೆದ 'ಅಬ್ಬಲೂರು ಚರಿತೆ' ಎಂಬ ಗ್ರಂಥದ ಪೀಠಿಕಾ ಭಾಗದಲ್ಲಿ ಅದರ ಸಂಪಾದಕರಾದ ಎನ್.ಬಸವಾರಾಧ್ಯರು ಶಾಸನಕ್ಕೂ ಆ ಕಾವ್ಯಕ್ಕೂ ಇರುವ ಕೆಲವು ಮುಖ್ಯ ವ್ಯತ್ಯಾಸಗಳನ್ನು ಚರ್ಚಿಸಿದ್ದಾರೆ. ವಿವರಗಳಿಗೆ ನೋಡಿ. ಪು.XXI-XXII.

ಎಸ್. ವಿದ್ಯಾಶಂಕರ ಅವರು ಶಾಸನ, ಹರಿಹರನ ರಗಳೆ ಮತ್ತು ಕೆಲವು ವೀರಶೈವ ಕೃತಿಗಳಲ್ಲಿ ಬರುವ ಏಕಾಂತದ ರಾಮಯ್ಯನ ಕೆಲವು ಅಂಶಗಳನ್ನು ತೌಲನಿಕವಾಗಿ ನೋಡಿದ್ದಾರೆ. ನೋಡಿ : ವಚನಾನುಶೀಲನ. ಪು. ೪೫೫-೪೬೭.

ಚಾಳುಕ್ಯ ಸೋಮೇಶ್ವರ ಆನೆಯ ಮೇಲೆ ಕೂರಿಸಿ ಮೆರವಣಿಗೆ ಮಾಡಿಸುತ್ತಾನೆ. ರಾಮಯ್ಯನು ಅಬ್ಬಲೂರಿನಲ್ಲಿ ಸೋಮೇಶ್ವರ ದೇವಾಲಯವನ್ನು ಕಟ್ಟಿಸಿದ ವಿಷಯವನ್ನು ಶಾಸನ ನಿರೂಪಿಸುತ್ತದೆ. ಏಕಾಂತದ ರಾಮಯ್ಯನ ಸ್ಥಾವರ ಲಿಂಗ ನಿಷ್ಠೆ, ದೇವಾಲಯ ನಿರ್ಮಾಣ, ದಾನ ಸ್ವೀಕಾರ ಇವು ಅವನು ಆರಂಭದಲ್ಲಿ ಶೈವ ಮಾರ್ಗದಲ್ಲಿದ್ದವನೆಂಬುದನ್ನು ಸೂಚಿಸುತ್ತವೆ. ಮುಂದೆ ಕ್ರಮೇಣ ವೀರಶೈವ ಮಾರ್ಗಕ್ಕೆ ಪರಿವರ್ತನೆ ಹೊಂದಿರಬೇಕು. ಅವನ ಕೆಲವು ವಚನಗಳೂ ದೊರೆಯುತ್ತವೆ.[೧] ಬಹಿರಂಗವಾಗಿ ನಡೆದ ಈ ಧಾರ್ಮಿಕ ಸಂಘರ್ಷ ಶಾಸನೋಕ್ತವಾಗಿ, ಏಕಾಂತದ ರಾಮಯ್ಯನ ಕೀರ್ತಿಸ್ತಂಭದಂತೆ ಈ ಶಾಸನವಿದೆ.

ಅಬ್ಬಲೂರಿನ ಧಾರ್ಮಿಕ ಸಂಘರ್ಷದ ಕೆಲವು ಸನ್ನಿವೇಶಗಳನ್ನು ಶಿಲ್ಪಗಳಲ್ಲಿ ಕಂಡರಿಸಿದ ಶಿಲ್ಪ ಶಾಸನಗಳು ಸೋಮೇಶ್ವರ ದೇವಾಲಯದ ಗೋಡೆಯ ಮೇಲೆ ದೊರೆಯುತ್ತವೆ. ಒಂದು ವಿಗ್ರಹ ಶಾಸನ 'ಶ್ರೀಮದ್ ಏಕಾಂತದ ರಾಮಯ್ಯಂಗೆ ಸಂಕಗೌಂಡನು ಓಲೆಯ ಕುಡುವ ಠಾವು'[೨] ಎಂದಿದ್ದು, ಅದರ ಕೆಳಗೆ ಅದಕ್ಕೆ ಸಂಬಂಧಿಸಿದ ಚಿತ್ರವಿದೆ. ಏಕಾಂತದ ರಾಮಯ್ಯನ ಮುಖ್ಯ ಶಾಸನದಲ್ಲಿ ಜೈನರ ಜೊತೆಯಲ್ಲಿ ಏಕಾಂತದ ರಾಮಯ್ಯ ವಾದ ಮಾಡುವ ಸಂದರ್ಭದಲ್ಲಿ ಸಂಕಗೌಡ ಜೈನರ ಪರವಾಗಿ ಬಂದಿರುತ್ತಾನೆ. ಇನ್ನೊಂದು ವಿಗ್ರಹ ಶಾಸನದಲ್ಲಿ 'ಯೆ ಏಕಾನ್ತದ ರಾಮಯ್ಯಂಗಳು ಜಿನನನೊಡೆದ ಲಿಂಗಪ್ರತಿಷ್ಠೆಯಂ ಮಾಡಿದ ಠಾವು' ಎಂದು ಬರುತ್ತದೆ.[೩] ಅದೇ ಸ್ಥಳದ ಇನ್ನೊಂದು ವಿಗ್ರಹ ಶಾಸನ 'ಶ್ರೀ ಬ್ರಹ್ಮೇಸ್ವ(ಶ್ವ)ರ ದೇವರಲ್ಲಿ ಏಕಾಂತದ ರಾಮಯ್ಯಂ ಬಸದಿಯ ಜಿನನೊಡ್ಡವಾಗಿ ತಲೆಯರಿದು ಹಡೆದ ಠಾವು॥ ಸಂಕಗಾವುಂಡಂ ಬಸದಿಯನೊಡೆಯಲೀಯದೆ ಆಳುಂ ಕುದುರೆಯನೊಡ್ಡಿರಲು ಏಕಾಂತದ ರಾಮಯ್ಯಂ ಕಾದಿ ಗೆಲ್ದು ಜಿನನೊಡೆದು ಲಿಂಗ ಪ್ರತಿಷ್ಟೆ(ಷ್ಠೆ)ಯಂ ಮಾಡಿದ ಟಾ(ವು)'॥[೪] ಎಂದು ಶಿಲ್ಪಸಮೇತವಾಗಿ ನಿರೂಪಿಸುತ್ತದೆ. ಹೀಗೆ ಬಹಿರಂಗವಾಗಿ ಜೈನರ ಮೇಲಿನ ವಿಜಯವನ್ನು ನಿರೂಪಿಸುವ ಈ ಶಿಲ್ಪ-ಶಾಸನಗಳು ಆ ಕಾಲದ ಧಾರ್ಮಿಕ ಸಂಘರ್ಷ ಹಿಡಿದ ಮಾರ್ಗವನ್ನು ಹೇಳುತ್ತದೆ. ಮತ್ತು ಶೈವಧರ್ಮವು ಜೈನಧರ್ಮದ ಮೇಲೆ ಸಾಧಿಸುತ್ತಿದ್ದ ಹಿಡಿತವನ್ನು ಕೆಲವು ಮಟ್ಟಿಗೆ ಸ್ಪಷ್ಟಪಡಿಸುತ್ತವೆ.[೫] ಏಕಾಂತದ ರಾಮಯ್ಯನಂತೆ ಆದಯ್ಯ ಎಂಬ ಶಿವಭಕ್ತನೂ ಕೂಡ ಜೈನರ ಮೇಲೆ ಸ್ಪರ್ಧೆ ಹೂಡಿ ಸೌರಾಷ್ಟ್ರದ ಸೋಮನಾಥನನ್ನು ಪುಲಿಗೆರೆಗೆ ತಂದು ಪ್ರತಿಷ್ಠಾಪಿಸಿದ ವಿಷಯ ಹರಿಹರನ ಆದಯ್ಯನ ರಗಳೆಯಲ್ಲಿ ಮತ್ತು ರಾಘವಾಂಕನ ಸೋಮನಾಥ ಚರಿತೆಯಲ್ಲಿ ವಿವರವಾಗಿ ನಿರೂಪಿತವಾಗಿದೆ. ಇವನೂ ವಚನಗಳನ್ನು ರಚಿಸಿದ್ದಾನೆ. ಅಲ್ಲದೆ ಇವನೂ ಏಕಾಂತದ ರಾಮಯ್ಯನ ಸಮಕಾಲೀನನಾಗಿರುವಂತೆ ಕಾಣುತ್ತದೆ. ಆದರೆ ಇವನಿಗೆ ಸಂಬಂಧಿಸಿದ ಶಾಸನಗಳು ಉಪಲಬ್ಧವಾಗಿಲ್ಲ.

---

೧. ಡಿ. ಎಲ್. ನರಸಿಂಹಾಚಾರ್ ಅವರು 'ಪೀಠಿಕೆಗಳು ಲೇಖನಗಳು' ಗ್ರಂಥದಲ್ಲಿ ಎನ್ನಯ್ಯ ಚೆನ್ನರಾಮ, ಚೆನ್ನರಾಮೇಶ್ವರಲಿಂಗ ಎಂಬ ಎರಡು ಅಂಕಿತಗಳನ್ನು ಕೊಟ್ಟು ಇವು ಭಿನ್ನ ವಚನಕಾರರನ್ನು ಹೇಳುವುದೆಂದು ಭಾವಿಸುತ್ತಾರೆ. ಪು. ೪೫೨-೫೩.
ಎಸ್. ಬಸವಾರಾಧ್ಯರು ಆ ಎರಡೂ ಅಂಕಿತಗಳು ಒಬ್ಬನೇ ವಚನಕಾರನಾದ "ಏಕಾಂತದ ರಾಮಯ್ಯ'ನನ್ನು ಸೂಚಿಸುವುದೆಂದು ಅಭಿಪ್ರಾಯ ಪಡುತ್ತಾರೆ. ಅವನ ಹೆಸರಿನಲ್ಲಿ ಆರು ವಚನಗಳು ಮಾತ್ರ ದೊರೆತಿವೆ. ಅಬ್ಬಲೂರು ಚರಿತೆ ಪೀಠಿಕೆ. ಪು. XXII-XXIV. ಸಮಗ್ರ ವಚನ ಸಂಪುಟದಲ್ಲಿ ಏಳು ವಚನಗಳು ಪ್ರಕಟವಾಗಿವೆ.

೨. ಎಇ XXIX ೧೯ (ಐ) ಪು. ೧೪೧ ಕ್ರಿಶ. ೧೨ ಶ.ಮಾ.

೩. ಎಇ XXIX II ಪು.೧೪೧ ಕ್ರಿಶ.೧೨ ಶ.ಮಾ.

೪. ಎಇ XXIX ೧೯ ಎಫ್ ಪು. ೧೪೦ ಕ್ರಿಶ. ೧೨ ಶ.ಮಾ.

೫. ಜೈನ ಧರ್ಮದ ಮೇಲೆ ಶೈವ ಧರ್ಮದ ಮೇಲ್ಮೆಯನ್ನು ಪ್ರಕಟಿಸುವ ಇದೇ ಕಾಲದ ಇದೇ ರೀತಿಯ ಶಿಲ್ಪ ಶಾಸನಗಳು ತಮಿಳುನಾಡಿನ ಉತ್ತರ ಆರ್ಕಾಟ್ ಜಿಲ್ಲೆಯ ತಿರುವತ್ತೂರು ದೇವಾಲಯದ ಗೋಡೆಯ ಮೇಲೆ ಕಂಡು ಬರುವುದನ್ನು ಪಿ. ಬಿ.ದೇಸಾಯಿ ಅವರು ತಿಳಿಸುತ್ತಾರೆ. ಎಇ XXIX ಪು. ೧೪೪ ಅಡಿ ಟಿಪ್ಪಣಿ (ಎಆರ್‌ಎಸ್‌ಐಇ-೧೯೨೩ ಪು. ೪)

ಏಕಾಂತದ ರಾಮಯ್ಯನು ಅಬ್ಬಲೂರು ಶಾಸನಗಳಲ್ಲಿ ಅಲ್ಲದೆ ತಾಳಿಕೋಟೆ ಶಾಸನದಲ್ಲಿ[೧] ಮತ್ತು ಇತರ ಶರಣರೊಂದಿಗೆ ಮರಡಿಪುರ ಶಾಸನದಲ್ಲಿಯೂ ಉಕ್ತನಾಗಿದ್ದಾನೆ.[೨] ಬಂದಳಿಕೆಯ ಒಂದು ಶಾಸನದಲ್ಲಿ 'ಏಕಾನ್ತದ ರಾಮಯ್ಯಂಗಳ ಮಂಮ ರಾಮದೇವ ಭಟ್ಟರ ವೃತ್ತಿ ೧' ಎಂಬ ಉಲ್ಲೇಖ ಬರುತ್ತದೆ.[೩] ಏಕಾಂತದ ರಾಮಯ್ಯ ಮೂಲತಃ ಶೈವ ಬ್ರಾಹ್ಮಣನಾಗಿದ್ದು ವೀರಶೈವ ಆಂದೋಳನಕ್ಕೆ ಹೊರಳಿದರೂ ಆತನ ವಂಶಜರಲ್ಲಿ ಕೆಲವರಾದರೂ ಮೂಲ ವೈದಿಕ ಧರ್ಮದಲ್ಲಿ ಉಳಿದಿರುವ ಸಾಧ್ಯತೆಯನ್ನು ಈ ಶಾಸನ ಸೂಚಿಸುತ್ತದೆ. ಈ ಶಾಸನೋಕ್ತ ರಾಮದೇವಭಟ್ಟ ಏಕಾಂತದ ರಾಮಯ್ಯನ ಮಗಳ ಮಗನಿರಬಹುದೇ ಎಂಬ ಅಭಿಪ್ರಾಯವೂ ಇದೆ.[೪] ಏಕಾಂತದ ರಾಮಯ್ಯನ ಅನ್ವಯೋದ್ಭೂತ (ವಂಶಜ)ನಾದ ಏಕಾಂತದ ಬಸವೇಶ್ವರ ಇದ್ದನೆಂಬ ಹೊಸ ಸಂಗತಿಯನ್ನು ಕ್ರಿ.ಶ. ೧೫ನೆಯ ಶತಮಾನದ ಶಾಸನ ತಿಳಿಸುತ್ತದೆ. ಇವನು ಅಸಾಮಾನ್ಯ ವ್ಯಕ್ತಿಯಾಗಿದ್ದು ಶಾಸನದಲ್ಲಿ ಏಕಾಂತ ಬಸವೇಶ್ವರನು 'ವೀರಶೈವಮತಸ್ಥಾಪನಾಚಾರ್ಯ' ಎಂಬ ಮಾತುಗಳು ಬಳಕೆಯಾಗಿವೆ. ಇವು ಅವನ ಎತ್ತರದ ವ್ಯಕ್ತಿತ್ವವನ್ನು ಬಿಂಬಿಸುತ್ತದೆ. ಈತನಿಗೆ ವೃಷಭಾಧೀಶ ದೇಶಿಕ ಎಂಬ ಪ್ರತಿನಾಮವೂ ಇದ್ದಿತು. ಏಕಾಂತದ ರಾಮಯ್ಯನನಂತರ ೩೦೦ ವರ್ಷಗಳಾದರೂ ಅವನ ವಂಶ ಪರಂಪರೆ ಮುಂದುವರಿದಿರುವುದು ಗಮನಿಸಬಹುದಾದ ಅಂಶವಾಗಿದೆ. ಅಲ್ಲದೆ ಮುಳಬಾಗಿಲ ಆವನಿಯ ಬೆಟ್ಟದಲ್ಲಿ ಏಕಾಂತದ ರಾಮಯ್ಯನ ದೇವಾಲಯವಿದ್ದುದು ತಿಳಿದುಬರುತ್ತದೆ.[೫]

ಕಕ್ಕಯ್ಯ, ಜಗದೇವ ದಣ್ಣಾಯಕ, ಸುರಿಗೆಯ ಚೌಡಯ್ಯ, ಹುಲಿಗೆರೆ ಪೊನ್ನಯ್ಯ ಮುಂತಾದ ಶಿವಶರಣರ ಹೆಸರುಗಳು ಶಾಸನೋಕ್ತವಾಗಿರುವುದನ್ನು ಕಾಣಬಹುದು.[೬]

**ಬಸವೋತ್ತರ ಯುಗ :**

ವೀರಶೈವದ ಕೇಂದ್ರವಾಗಿದ್ದ ಕಲ್ಯಾಣದಲ್ಲಿ ನಡೆದ ವಿಪ್ಲವದ ಕಾರಣ ಆ ಧರ್ಮದ ಚಟುವಟಿಕೆಗಳು ನಾಡಿನಾದ್ಯಂತ ಚದುರಿ ಹರಡಿದ ಮುಂದಿನ ಕಾಲವನ್ನು ಬಸವೋತ್ತರ ಯುಗವೆಂದು ಸಾಮಾನ್ಯವಾಗಿ ಗುರುತಿಸಲಾಗುತ್ತದೆ. ಬಸವಣ್ಣ ಮತ್ತು ಆ ಕಾಲದ ಶರಣರು ಬಿತ್ತಿದ ವೀರಶೈವದ ಬೀಜಗಳು ನಾಡಿನ ಬೇರೆ ಬೇರೆ ಕಡೆ ಚದುರಿ ಮೊಳಕೆಯೊಡೆದು ಬೆಳೆದವು. ಅನೇಕ ಶೈವ ಶಾಖೆಗಳನ್ನು ತನ್ನಲ್ಲಿ ಅಂತರ್ಗತ ಮಾಡಿಕೊಂಡ ವೀರಶೈವ, ಶಕ್ತ ಶೈವಗಳ ಪ್ರಭಾವಕ್ಕೂ ಅನಿವಾರ್ಯವಾಗಿ ಒಳಗಾಗಬೇಕಾಯಿತು. ವೀರಶೈವರು ಕಲ್ಯಾಣದಿಂದ ವಿಕೇಂದ್ರೀಕರಣ ಹೊಂದಿದ ಕಾರಣವೋ ಏನೋ ಅಷ್ಟು ಕಟ್ಟುನಿಟ್ಟಾಗಿ ಶುದ್ಧ ವೀರಶೈವತ್ವವನ್ನು ಉಳಿಸಿಕೊಳ್ಳಲು ಸಾಧ್ಯವಾಗಿರುವಂತೆ ತೋರುವುದಿಲ್ಲ. ಹೀಗಾಗಿ ವಚನ ಸಾಹಿತ್ಯದಲ್ಲಿ ಕಾಣುವ ವೀರಶೈವ ಧರ್ಮದ ತಾತ್ವಿಕ ಮತ್ತು ಆಚರಣಾಂಶಗಳು[೭] ಮುಂದಿನ ಶಾಸನಗಳಲ್ಲಿ ಮತ್ತು ಅನೇಕ ಸಾಹಿತ್ಯ ಕೃತಿಗಳಲ್ಲಿ

---

೧. ಎಸ್‌ಐಐ XV ಬಿಜಾಪುರ ೫೬ ಕ್ರಿಶ. ೧೧೮೪.

೨. (ಮೈ) ಎಕ VII ಮಂಡ್ಯ ೭ ಕ್ರಿಶ. ೧೨೮೦.

೩. (ರೈ) ಎಕ VII ಶಿಕಾರಿಪುರ ೨೩೫ ಕ್ರಿಶ. ೧೨೦೭.

೪. ಹನುಮಾಕ್ಷಿ ಗೋಗಿ : 'ಏಕಾಂತದ ರಾಮಯ್ಯಗಳ ಮಂಮ ರಾಮದೇವ ಭಟ್ಟ' ಕ.ಭಾ ೧೦:೩, ೧೪೦-೪೧.

೫. ಬಿ.ಆರ್.ಹಿರೇಮಠ : 'ಏಕಾಂತದ ರಾಮಯ್ಯ-ಇತ್ತೀಚಿನ ಶೋಧಗಳು: ಒಂದು ಸಮೀಕ್ಷೆ, ಪು. ೧-೬. ಎಚ್.ಜೆ.ಲಕ್ಕಪ್ಪಗೌಡ ಪ್ರಧಾನ ಸಂ. ಅಭಿಜ್ಞ, ಡಾ. ಸಾ.ಶಿ.ಮ. ಅಭಿನಂದನ ಗ್ರಂಥ.

೬. ಎಂ. ಎಂ. ಕಲಬುರ್ಗಿ : ಪೂರ್ವೋಕ್ತ ಪು. ೧೦೧-೧೦೫.

೭. ಎಚ್. ತಿಪ್ಪೇರುದ್ರಸ್ವಾಮಿ : ವಚನಗಳಲ್ಲಿ ವೀರಶೈವ ಧರ್ಮ. (ವಚನಗಳಲ್ಲಿ ಬಂದಿರುವ ವೀರಶೈವ ಧರ್ಮದ ವಿವರಗಳಿಗೆ ಈ ಗ್ರಂಥವನ್ನು ನೋಡಬಹುದು)

ಕಂಡುಬರುವುದಿಲ್ಲ. ವೀರಶೈವಧರ್ಮವು ಶೈವಧರ್ಮದ ಜೊತೆ ಯಥೇಚ್ಛವಾಗಿ ಒಪ್ಪಂದ-ರಾಜಿಗಳನ್ನು ಮಾಡಿಕೊಂಡು ಬೆಳೆದಂತೆ ಭಾಸವಾಗುತ್ತದೆ. ಕಲ್ಯಾಣದ ಶರಣರು ನಿರಾಕರಿಸಿದ ಸ್ಥಾವರ ಲಿಂಗೋಪಾಸನೆ, ಇತರೆ ಶೈವ ಶಾಖೆಗಳಲ್ಲಿದ್ದ ಆಚರಣೆಗಳ ನಿರಾಕರಣೆ, ದಾನ ದತ್ತಿಗಳ ಬಗ್ಗೆ ಅಸಮಾಧಾನ ಮುಂತಾದವು ಮುಂದಿನ ಕಾಲದಲ್ಲಿ ವೀರಶೈವದ ಅಂತರ್ಗತ ಭಾಗವಾಗಿ ಬೆಳೆದಿರುವುದನ್ನು ಕಾಣಬಹುದು. ಎ. ಕೆ. ರಾಮಾನುಜಂ ಅವರು 'ಭಕ್ತಿ ಪಂಥದ ಅಂತರ್‌ರಚನೆಯ ಬೆಳವಣಿಗೆ, ತನ್ನ ನಡವಳಿಕೆಗೆ ಮತ್ತು ನಂಬಿಕೆಗೆ ಅನೇಕ ಸಾರಿ ತಾನು ನಿರಾಕರಿಸಿದ ಅಂಶ ಮತ್ತು ರಚನೆಗಳಿಂದಲೇ ರೂಪಿತವಾಗಿರುತ್ತದೆ'[೧] ಎಂದು ಸರಿಯಾಗಿ ಗುರುತಿಸಿದ್ದಾರೆ. ಹೀಗಾಗಿ ಮುಂದಿನ ಕಾಲದ ಶಾಸನಗಳಲ್ಲಿ ಶೈವ, ವೀರಶೈವ, ತಮಿಳುನಾಡಿನ ಶೈವ, ಕಾಳಾಮುಖ ಪಾಶುಪತ, ಸಿದ್ಧ-ನಾಥ, ಉಗ್ರ ಸೌಮ್ಯ ಶಿವಭಕ್ತಿ ಇವೆಲ್ಲವೂ ಶಿವನಿಷ್ಠೆಯಲ್ಲಿ ಬೆರೆತು ಹೋಗಿ ಯಾವುದರಲ್ಲಿ ಯಾವುದು ಬೆರೆತಿದೆ ಎಂದು ಎಷ್ಟೋ ಬಾರಿ ಖಚಿತವಾಗಿ ಬೇರ್ಪಡಿಸಿ ತೋರಿಸಲಾರದಷ್ಟು ಐಕ್ಯರಚನೆಯನ್ನು ಹೊಂದಿದೆ.

**ಮೂರುಜಾವಿದೇವ :**

ಏಕಾಂತದ ರಾಮಯ್ಯನ ಶಿರ ಪವಾಡದ ಸಂದರ್ಭದಲ್ಲಿ ಸೂರ್ಯನು ಮುಳುಗದ ಹಾಗೆ ತಡೆದು ಅವನ ತಲೆ ಕಾದವನು ಮೂರುಜಾವಿದೇವ ಎಂದು ಗುಬ್ಬಿಯ ಮಲ್ಲಣಾಚಾರ್ಯನ ವೀರಶೈವ ಪುರಾಣದಲ್ಲಿದೆ. ಶಾಸನಗಳಲ್ಲಿ ಮೂರುಜನ ಮೂರುಜಾವಿದೇವರು ಬರುತ್ತಾರೆ. ಹಿರೇಮಗಲಗೇರಿಯ ಶಾಸನ ಮೂರುಜಾವಿಪಂಡಿತನ ಕಾಲ ಕ್ರಿ.ಶ. ೧೦೫೯[೨] ಎಂದಿದೆ. ರಟ್ಟಿಹಳ್ಳಿ ಶಾಸನದಲ್ಲಿ ಮೂರುಜಾವಿದೇವನ ಪ್ರಸ್ತಾಪ ಬರುತ್ತದೆ.[೩] ಇವನು ಪರ್ವತಾವಳಿಯ ಕಿಟ್ಟಗಾವೆ ಸಂತತಿಯ ಕಾಳಾಮುಖ ಶೈವ ಶಾಖೆಗೆ ಸೇರಿದವನಾಗಿದ್ದಾನೆ. ಅದೇ ಹೆಸರಿನ ಇಬ್ಬರು ಆ ಪರಂಪರೆಯಲ್ಲಿ ಇದ್ದಂತೆ ಶಾಸನದಲ್ಲಿ ಸೂಚನೆ ಇದೆ. ಒಬ್ಬನು ಲಕುಲೀಶನ ಶಿಷ್ಯ, ಇನ್ನೊಬ್ಬ ಲಕುಲೀಶನ ಗುರು. ಈ ಶಾಸನದಲ್ಲಿ ಸಿಂಘಣನ ಅಧಿಕಾರಿಯಾದ ಮಲ್ಲನ ಮಕ್ಕಳ ವಿಷಯ ಹೇಳುವಾಗ ಹೊನ್ನಬೊಮ್ಮನನ್ನು ಕುರಿತು:

> ಜಂಗಮದಿಚ್ಛೆ ಜಂಗಮದ ನಚ್ಚಿಕೆ ಜಂಗಮ ಮೆಚ್ಚು ಮತ್ತವಾ।
> ಜಂಗಮದಾಟ ಜಂಗಮದ ನೋಟಮೆ ಜಂಗಮ ಕೂಟವಾಗಳುಂ।
> ಜಂಗಮದಾಸೆ ಜಂಗಮದ ಭಾಸೆಯೊಳುದ್ಭವಿಕಾಸೆ ರಾಜಿಸಿ।
> ಪ್ಪಂ ಗಡನೆಂದು ಬಣ್ಣಿಪುದು ಭೂವಳಿಯಂ ನೆಱಿ ಹೊಂನಬೊಂಮನಂ॥

ಎಂಬ ವರ್ಣನೆ ಬರುತ್ತದೆ. ಈ ಜಂಗಮ ಸ್ತುತಿ ಹೊನ್ನಬೊಮ್ಮನ ಜಂಗಮ ನಿಷ್ಠೆ, ಜಂಗಮ ಪಾರಮ್ಯವನ್ನು ಎತ್ತಿ ತೋರಿಸುತ್ತದೆ. ಇವನು ಕಡಂಬೇಶ್ವರ ದೇವರ ಪ್ರವಿಷ್ಟದಲ್ಲಿ ಮಲ್ಲೇಶ್ವರ ರಾಜೇಶ್ವರ ದೇವರನ್ನು ಪ್ರತಿಷ್ಠಿಸಿ ಮೂರುಜಾವಿದೇವರಿಗೆ ಪಾದಪ್ರಕ್ಷಾಳನ ಮಾಡಿ ದಾನ ಮಾಡುತ್ತಾನೆ. ಜಂಗಮ ಪಾರಮ್ಯ ವೀರಶೈವದ ಒಲವನ್ನು ಸೂಚಿಸುವಂತೆ ಕಂಡರೆ, ದೇವ ಪ್ರತಿಷ್ಠಾಪನೆ, ಕಾಳಾಮುಖ ಮೂರುಜಾವಿದೇವನಿಗೆ ಕೊಡುವ ದಾನ ಶೈವ ಒಲವನ್ನೂ ಸೂಚಿಸುತ್ತದೆ.

---

೧. A.K.. Ramanujan : Speaking of Shiva ಪು. ೩೫. "Yet Bhakthi Communities, while proclaming anti structure necessarily develop their own structure for behaviour and belief, often minimal, frequently composed of elements selected from the very structures they deny or reject".

೨. ಎಂ. ಎಂ. ಕಲಬುರ್ಗಿ : ಪೂರ್ವೋಕ್ತ, ಪು. ೧೦೮.

೩. ಕಇ VI ಹಿರೇಕೆರೂರು ೪೪ ಕ್ರಿಶ. ೧೨೩೮.

ರಟ್ಟಿಹಳ್ಳಿಯ ಇನ್ನೂ ಮೂರು ಶಾಸನಗಳಲ್ಲಿ ಮೂರುಜಾವಿದೇವ ಉಲ್ಲೇಖಗೊಂಡಿದ್ದಾನೆ. ಅವುಗಳಲ್ಲಿ ಎರಡು ಹದಿಮೂರನೆಯ ಶತಮಾನಕ್ಕೆ ಸೇರಿದವು.[೧] ಒಂದು ಹನ್ನೆರಡನೆಯ ಶತಮಾನಕ್ಕೆ ಸೇರಿದುದು[೨]. ಒಟ್ಟು ಹನ್ನೊಂದು, ಹನ್ನೆರಡು ಮತ್ತು ಹದಿಮೂರು ಹೀಗೆ ಮೂರು ಬೇರೆ ಬೇರೆ ಶತಮಾನಗಳಲ್ಲಿ ಮೂರುಜಾವಿದೇವರು ಉಲ್ಲೇಖಗೊಂಡಿದ್ದಾರೆ. ಇವುಗಳಲ್ಲದೆ ಇನ್ನೂ ಕೆಲವು ಮೂರುಜಾವಿದೇವರ ಉಲ್ಲೇಖಗಳು ಬರುವುದುಂಟು. ಏಕಾಂತದ ರಾಮಯ್ಯನ ಸಮಕಾಲೀನನೆಂದು ಅವನನ್ನು ಭಾವಿಸಿದರೆ ಹನ್ನೆರಡನೆಯ ಶತಮಾನದ ಲಕುಲೀಶ್ವರನ ಗುರು ಮೂರುಜಾವಿದೇವನಾಗುವ[೩] ಸಾಧ್ಯತೆ ಇದೆ.

**ಗುಂಡ ಬ್ರಹ್ಮಯ್ಯಗಳು :**

ಬಿಜ್ಜಳನನ್ನು ಕೊಂದ ಜಗದೇವ, ಮೊಲ್ಲೆ ಬೊಮ್ಮಣ್ಣಗಳು ಓರಂಗಲ್ಲಿನಲ್ಲಿ ವೀರಗುಂಡ ಬ್ರಹ್ಮರೆಂಬ ಶಿವಶರಣರಾಗಿ ಹುಟ್ಟಿದರು. ಚೋರರಿಬ್ಬರು (ಶಿವ ಮತ್ತು ನಾರದನೆಂದು ಕತೆ ಹೇಳುತ್ತದೆ) ರಾಜನ ಬೊಕ್ಕಸದಲ್ಲಿ ಕಳ್ಳತನ ಮಾಡಿ ಗುಂಡ ಬ್ರಹ್ಮರ ರಕ್ಷಣೆ ಕೋರುವರು. ಆಗ ಅವರು ಕಳ್ಳರ ಪರವಾಗಿ ತಾವೇ ಶೂಲಕ್ಕೆ ಅರ್ಪಿಸಿಕೊಂಡ ಕತೆ ವೀರಶೈವ ಪುರಾಣಗಳಲ್ಲಿ ಬರುತ್ತದೆ. ಅವರ ಶಿಲ್ಪಗಳು ಕರ್ನಾಟಕದ ಕೆಲವು ಸ್ಥಳಗಳಲ್ಲಿ ದೊರೆಯುತ್ತದೆ. ಸಾಮಾನ್ಯವಾಗಿ ಕೈಯಲ್ಲಿ ಇಷ್ಟಲಿಂಗವನ್ನು ಹಿಡಿದ ಗುಂಡ ಬ್ರಹ್ಮಯ್ಯಗಳು ಶೂಲ ಏರಿದ್ದನ್ನು ಸಾಂಕೇತಿಕವಾಗಿಯೋ ಅಥವಾ ನೇರವಾಗಿಯೋ ಸೂಚಿಸುವ ಇಪ್ಪತ್ತೂರು ಶಿಲ್ಪಗಳು ಇದುವರೆಗೂ ವಿದ್ವಾಂಸರಿಂದ ಗುರುತಿಸಲ್ಪಟ್ಟಿವೆ.[೪] ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಶೂಲದ ಹಬ್ಬ ಆಚರಣೆಯಲ್ಲಿದೆ.

---

೧. ಕಇ VI ರಟ್ಟಿಹಳ್ಳಿ ೪೩ ಕ್ರಿಶ. ೧೨೩೮; ಕಇ VI ರಟ್ಟಿಹಳ್ಳಿ ೪೨ ಕ್ರಿಶ. ೧೨೩೭.

೨. ಕಇ VI ರಟ್ಟಿಹಳ್ಳಿ ೩೭ ಕ್ರಿಶ. ೧೧೭೪, ರಟ್ಟಿಹಳ್ಳಿ ೪೪ರ ಶಾಸನದ ಗುರು ಪರಂಪರೆ ಮತ್ತು ಈ ಶಾಸನದ ಗುರು ಪರಂಪರೆ ಒಂದೇ ಆಗಿದೆ. ಹೆಚ್ಚಿನ ಚರ್ಚೆಗೆ ಮತ್ತು ಶಾಸನಾಧಾರಗಳಿಗೆ ನೋಡಿ- ಡಿ.ವಿ. ಪರಮಶಿವಮೂರ್ತಿ : ಶಾಸನ ಸಂಶೋಧನೆ ಪು. ೧೮-೨೭

೩. ಮೂರುಜಾವಿದೇವನ ವಿಷಯ ಕೆಲವು ಸಮಸ್ಯೆಗಳನ್ನು ಒಳಗೊಂಡಿದೆ.

i. ಡೇವಿಡ್ ಎನ್ ಲೊರೆಂಜನ್ ಭಾವಿಸುವಂತೆ ಏಕಾಂತದ ರಾಮಯ್ಯ ಕಾಳಾಮುಖನಾಗಿರುವ ಸಾಧ್ಯತೆಗೆ ಮೂರುಜಾವಿದೇವ (ಪರ್ವತಾವಳಿ ಕಿಟ್ಟಗಾವೆ ಸಂತತಿಗೆ ಸೇರಿದವನು) ಸಹಾಯ ಮಾಡಿದನೆನ್ನುವುದು ಪೋಷಕವಾಗಬಲ್ಲದು.

ii. ಅಬ್ಬಲೂರು ಚರಿತೆಯ ಐದನೆಯ ಸಂಧಿಯಲ್ಲಿ ಬರುವಂತೆ ಸೂರ್ಯನನ್ನು ಮೂರನೆಯ ಜಾವಕ್ಕೆ ಹಿಂದಕ್ಕೆ ಕಳುಹಿಸಿದವನು ಚಿಕ್ಕೇಶ ಗುರು. ಈ ಕೃತಿಯನ್ನು ಸಂಪಾದಿಸಿದ ಎನ್. ಬಸವರಾಧ್ಯರು ಚಿಕ್ಕೇಶ ಅಥವಾ ಮೂರುಜಾವದಯ್ಯ ಎಂದು ಬರೆದಿದ್ದಾರೆ ಪು. XXV.

iii. ಎಸ್.ವಿದ್ಯಾಶಂಕರ. ವಚನಾನುಶೀಲನ ಪು. ೪೬೭ ಅಡಿ ಟಿಪ್ಪಣಿ. ವಿರತ ತೋಂಟದಾರ್ಯನ ಸಿದ್ಧೇಶ್ವರ ಪುರಾಣದಂತೆ ಏಕಾಂತದ ರಾಮಯ್ಯನ ಶಿರವನ್ನು ಏಳು ದಿನ ಪವಿತ್ರ ಕ್ಷೇತ್ರಗಳಿಗೆ ತೆಗೆದುಕೊಂಡು ಹೋದಾಗ ಅಟ್ಟೆಯನ್ನು ಕಾಯುತ್ತಿದ್ದ ಅಗ್ಗಣಿಯ ದೇವರಸ ಸೂರ್ಯ ಮುಳುಗುವ ಸಮಯವಾದಾಗ ಸೂರ್ಯನನ್ನು ಪ್ರಾರ್ಥಿಸಿ ಮೂರು ಜಾವದ ಸ್ಥಾನಕ್ಕೇರಲು ಆಜ್ಞೆ ಮಾಡಿದ. ಆದ್ದರಿಂದ ಅಂದಿನಿಂದ ಅಗ್ಗಣಿಯ ದೇವರಸನಿಗೆ ಮೂರು ಜಾವದ ದೇವರೆಂದು ಹೆಸರಾಯಿತು.

iv. ಮೂರುಜಾವಿದೇವನ ವಿಷಯ ಅಬ್ಬಲೂರಿನ ಶಾಸನದಲ್ಲಿ ಇಲ್ಲ. ಯಾವ ಮೂಲದಿಂದ ಅವನ ಪ್ರಸಂಗ ರೂಪಿತವಾಯಿತು ಎನ್ನುವುದು ಕುತೂಹಲಕರವಾಗಿದೆ.

೪. i. ಬಿ.ಎಸ್. ಗದ್ದಿಗೌಡ : 'ಶಾಸನೋಕ್ತ ವೀರಶೈವರು' ವಿಭೂತಿ. ಪು. ೨೭೩. (ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿ ಇತರ ಶರಣರೊಂದಿಗೆ ಹೆಸರಿನ ಸಮೇತ)

ii. ವಿ. ಶಿವಾನಂದ (ಸಂ) ಗುಂಡ ಬ್ರಹ್ಮಯ್ಯ ಚರಿತೆ ಪು. ೨೩ (ಗುಂಡೇನಹಳ್ಳಿ ಶಿಲ್ಪ ಮತ್ತು ಚಿತ್ರದುರ್ಗದ ಸಂಪಿಗೆ ಸಿದ್ಧೇಶ್ವರ ದೇವಾಲಯದಲ್ಲಿರುವುವು).

iii. ಎಂ. ಎಂ. ಕಲಬುರ್ಗಿ : ಶಾಸನ ವ್ಯಾಸಂಗ, ಸಂ ೨. ಪು . ೧೦೮ (ಹಾವೇರಿಯ ಶಿಲ್ಪ).

(ಮುಂದುವರಿದಿದೆ.)

ಕುಮಾರ ರಾಮನ ಸಾಂಗತ್ಯದಲ್ಲಿ ಶೂಲದ ಹಬ್ಬದ ಪ್ರಸಕ್ತಿ ಬರುತ್ತವೆ.[೧] ಸುಮಾರು ಹದಿಮೂರನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಶಿವಭಕ್ತರ ವಿಷಯ ಶಿಲ್ಪದಲ್ಲಿ ಮತ್ತು ಆಚರಣೆಯಲ್ಲಿ ಉಳಿದು ಬಂದಿರುವುದು ವಿಶೇಷವಾಗಿದೆ.

**ಚೌಡದಾನಪುರದ ಶಿವದೇವ :**

ಚೌಡದಾನಪುರ ಈಗಿನ ರಾಣೆಬೆನ್ನೂರು ತಾಲ್ಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮ. ತುಂಗಭದ್ರಾ ತೀರದ ದಕ್ಷಿಣಕ್ಕಿರುವ ಈ ಊರು ತುಂಬ ಪ್ರಾಚೀನವಾದ ಊರುಗಳಲ್ಲಿ ಒಂದಾಗಿದೆ. ಅಲ್ಲಿರುವ ಮುಕ್ತೇಶ್ವರ ದೇವಾಲಯ ಚಾಳುಕ್ಯ-ಹೊಯ್ಸಳ ಶೈಲಿಯದು. ಸಂಪ್ರದಾಯವು ಹನ್ನೆರಡನೆಯ ಶತಮಾನದ ಅಂಬಿಗರ ಚೌಡಯ್ಯನ ಜೊತೆ ಈ ಊರಿನ ಸಂಬಂಧವನ್ನು ಕಲ್ಪಿಸುತ್ತದೆಯಾದರೂ ಇದುವರೆಗೆ ದೊರೆತಿರುವ ಆ ಪ್ರದೇಶದ ಯಾವ ಶಾಸನಗಳಲ್ಲಿಯೂ ಆ ಸ್ಥಳವನ್ನು ಚೌಡದಾನಪುರವೆಂದು ಕರೆದಿಲ್ಲ. ಅದು ಬಹುಶಃ ಈಚಿನ ಹೆಸರಾಗಿರಬಹುದು. ಶಾಸನಗಳಲ್ಲಿ ಆ ಸ್ಥಳವನ್ನು ಮುಕ್ತಿ ಕ್ಷೇತ್ರ, ಗೋಪೆ, ಶಿವಪುರ, ಶಿವದೇವಪುರ, ಮುಕ್ತಿನಾಥ ಕ್ಷೇತ್ರ ಎಂಬಂತಹ ಹೆಸರುಗಳಿಂದ ನಿರ್ದೇಶಿಸಲಾಗಿದೆ. ಆದರೆ ನಿರ್ದಿಷ್ಟವಾಗಿ ಚೌಡದಾನಪುರ ಎಂಬ ಹೆಸರು ಯಾವ ಕಾಲದಲ್ಲಿ ಬಂದಿತು ಎಂಬುದು ತಿಳಿದಿಲ್ಲ. ಆ ಪ್ರದೇಶದಲ್ಲಿ ೧೦ನೆಯ ಶತಮಾನದ ಶಾಸನ ದೊರೆಯುವುದರಿಂದ[೨] ಆ ಕಾಲದಿಂದಲೂ ಅದು ಪ್ರಸಿದ್ಧಿ ಪಡೆದಿರಬೇಕು. ಒಟ್ಟು ಎಂಟು ಶಾಸನಗಳು ಚೌಡದಾನಪುರದಲ್ಲಿ ದೊರೆಯುತ್ತವೆ.[೩] 'ಶಿವದೇವ ವಿಜಯಂ' ಎಂಬ ಕೃತಿ ದೊರೆಯುವುದಾದರೂ ಅದು ತೀರಾ ಈಚಿನ ಕೃತಿಯಾಗಿದೆ. ಹತ್ತನೆಯ ಶತಮಾನದಿಂದ ಹದಿಮೂರನೆಯ ಶತಮಾನದವರೆಗೆ ಶಾಸನಗಳ ಹರಹು ಇದೆ. ಬಸವಣ್ಣನವರ ನಂತರದ ಪ್ರಮುಖ ವೀರಶೈವ ಕೇಂದ್ರವಾಗಿ ಬೆಳೆದ ಈ ಕ್ಷೇತ್ರ ತನ್ನ ಕೀರ್ತಿಯ ಶಿಖರವನ್ನು ಮುಟ್ಟಿದ್ದು ಶಿವದೇವ ಎಂಬ ಯತಿಯ ಕಾಲದಲ್ಲಿ. ಅವನ ಕೀರ್ತಿ ಉನ್ನತ ರೀತಿಯಲ್ಲಿ ಶಾಸನಗಳಲ್ಲಿ ನಿರೂಪಿತವಾಗಿದೆ.

---

iv. ಬಿ. ಆರ್. ಹಿರೇಮಠ : 'ನೀತಿಗೆರೆಯಲ್ಲಿಯ ಗುಂಡಬ್ರಹ್ಮಯ್ಯಗಳ ವಿಗ್ರಹ' ಕಭಾ ೯:೪ ಪು. ೧೫೧-೧೫೨. (ಬಳ್ಳಾರಿಯ ಮಲ್ಲಿಕಾರ್ಜುನ ದೇವಸ್ಥಾನದ ಪೌಳಿಗೋಡೆಯ ಮೇಲೆ).

v. ಎಂ. ಚಿದಾನಂದ ಮೂರ್ತಿ : ಪಗರಣ, ಪು. ೧೬೩-೧೬೫ (ಶಿವಮೊಗ್ಗ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ನೀತಿಗೆರೆ ಮತ್ತು ಶಿವಮೊಗ್ಗ ತಾಲ್ಲೂಕಿನ ಕುಸ್ಕೂರಿನ ಶಿಲ್ಪಗಳು).

vi. ಚನ್ನಕ್ಕ ಎಲಿಗಾರ : 'ವರದ ಮೂಲದ ಗುಂಡಬ್ರಹ್ಮಯ್ಯಗಳ ವಿಗ್ರಹ' ವರದಮೂಲ ಸಾಗರ (ತಾ)ಗುಂಡಬ್ರಹ್ಮಯ್ಯನ ವಿಗ್ರಹ ಗುರುತಿಸಿದ್ದಾರೆ. ಕಭಾ ೧೧-೧ ಪು. ೧೪೭-೧೫೦.

vii. ಬಿ. ರಾಜಶೇಖರಪ್ಪ : 'ಕೆಲವು ಹೊಸ ಶೂಲಬ್ರಹ್ಮ ಶಿಲ್ಪಗಳು' ಅಸಗೋಡು (ಜಗಲೂರು ತಾ) ಚಿಕ್ಕಪುರ, ಹಿಡಂಬೇಶ್ವರ ದೇವಾಲಯದ ವೀರಭದ್ರ ದೇವರ ಕೋಣೆಯಲ್ಲೊಂದು, ಹಿರೇಗುಂಟೂರು (ಮೂರು ಚಿತ್ರದುರ್ಗ ತಾ), ಹೊಸದುರ್ಗ, ಶ್ರೀರಾಮಪುರ (ಎರಡೂ ಹೊಸದುರ್ಗ ತಾ) ಮತ್ತು ಬುಕ್ಕಾಂಬುದಿ (ತರೀಕೆರೆ ತಾ) ಒಟ್ಟು ೭ ಶೂಲಬ್ರಹ್ಮ ವಿಗ್ರಹಗಳನ್ನು ಗುರುತಿಸಿದ್ದಾರೆ. ಕಭಾ ೧೪-೧, ೨ ಪು. ೧೨೯-೧೩೯.

viii. ಡಿ.ವಿ. ಪರಮಶಿವಮೂರ್ತಿ : ಶಾಸನ ಶಿಲ್ಪ ಪು. ೨೩೩-೩೪ (ಮೂರು ಶಿಲ್ಪಗಳು)

ix. ಎಸ್. ತಿಪ್ಪೇಸ್ವಾಮಿ : ಶೂಲಬ್ರಹ್ಮಶಿಲ್ಪ ಪತ್ತೆ, ಬಿ.ದುರ್ಗ, ;ಚಿತ್ರದುರ್ಗ ಜಿಲ್ಲೆ. ವರದಿ, ಪ್ರಜಾವಾಣಿ ೩-೨-೨೦೦೭

X ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾ. ಚಿಕ್ಕಜಾಜೂರಿನಿಂದ ಸುಮಾರು ೩ ಕಿ.ಮೀ,. ದೂರದಲ್ಲಿರುವ ಕಡೂರಿನ ವೀರಭದ್ರ ದೇವಾಲಯದ ಆವರಣದಲ್ಲಿ ಶೂಲಬ್ರಹ್ಮ ವಿಗ್ರಹವನ್ನು ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗುರುತಿಸಲಾಗಿದೆ. ಉಬ್ಬುಕೆತ್ತನೆಯ ಈ ಶಿಲ್ಪ ೩೨ ಅಂಗುಲಗಳ ಎತ್ತರವಿದ್ದು ೨೬ ಅಂಗುಲಗಳ ಅಗಲವಿದೆ. ವಿಗ್ರಹ ಶಿಲ್ಪಗಳು ೨೦ ಅಂಗುಲಗಳಷ್ಟು ಎತ್ತರವಾಗಿದೆ. ಚಿತ್ರ ಸಂಪುಟ ಭಾಗದಲ್ಲಿ ಅದನ್ನು ಗಮನಿಸಬಹುದು.

೧. ಶೂಲದ ಹಬ್ಬದ ವಿವರಗಳಿಗೆ ನೋಡಿ : ಎಂ. ಚಿದಾನಂದ ಮೂರ್ತಿಯವರ ಲೇಖನ 'ಶೂಲದ ಹಬ್ಬ' ಗ್ರಾಮೀಣ ಪು. ೫೪-೭೨.

೨. Srinivasa Ritti : The Holy land of the Tungabhadra. Chowdayyadanapura a Monograph. ಪು. ೧೨.

೩. S. C.Nandimutt: Chowdanapur stone inscriptions. Chowdayyadanapura a Monograph ಪು. ೭೮-೧೨೦.

ಶಿವದೇವನು ಭೂಲೋಕದಲ್ಲಿ ಶಿವಮಾರ್ಗ ತೋರಲು ಶಿವನು 'ನನ್ದಿನಾಥನ ಮೊಗನ್ನೋಡಲ್ಕೆ ಶ್ರೀ ಸಂಗಮೇಶನ ಪುತ್ರಂ ಬಸವಯ್ಯ ಬಂಕನದಱಿಂ[೧] ಶಿವಮುದ್ದು ದೇವಂ ಜಗಕ್ಕನಿಮಿತ್ತಂ ಶಿವದೇವ'ನಾಗಿ ಬಂದನೆಂದು ತಿಳಿದುಬರುತ್ತದೆ. ಈ ಹಿಂದೆ ಶಿವಮಾರ್ಗ ತೋರಲು ನಂದಿನಾಥನು ಸಂಗಮೇಶನ ಪುತ್ರ ಬಸವಯ್ಯನಾಗಿ ಅವತರಿಸಿದಂತೆ ಬಂಕ ಶಿವದೇವನಾಗಿ ಅವತರಿಸಿದನೆಂದು ಸ್ಥೂಲವಾಗಿ ಅರ್ಥ ಹೇಳಬಹುದು. ಶಿವದೇವ ಕ್ರಿ.ಶ.೧೨೨೫ ರಲ್ಲಿ ಮುಕ್ತಿಕ್ಷೇತ್ರವನ್ನು ಪ್ರವೇಶಿಸಿದನಂತೆ. ಅವನು ಮಹಾಸಾಧಕನಾಗಿದ್ದು ಭೈರವನನ್ನು ಬೆನ್ನಟ್ಟಿದವನು, ಆರು ದರ್ಶನಗಳನ್ನು ಲಿಂಗ ಜಂಗಮಗಳಿಗೆ ಮಾಡುವ ಕ್ರಮವನ್ನು ತಿಳಿದವನು. ಶಿವದೇವನು 'ಲಿಂಗವನಪ್ಪಿದ ತೋಳ್ಗಳಿನಂಗನೆಯನಪ್ಪೆನಳಿಪಿ ನೋಡೆಂ ಕೂಡೆಂ' ಎಂಬಂತಹ ನೈಷ್ಠಿಕ ಬ್ರಹ್ಮಚರ್ಯವನ್ನು ಅನುಸರಿಸಿದವನು. ಇಂಥ ಅನೇಕ ಭಾಷೆಗಳನ್ನು ಶಿವನಿಗೆ ಕೊಟ್ಟವನು. 'ತಲೆದಂಡ ಸ್ವರ್ಗಮುಕ್ತಿಯ ಫಲವನಪೇಕ್ಷಿಸಿದೆನಾದಡೆಲೆ ಶಂಕರಾ,' 'ಶಂಕರನೊಳಾದೊಡಂ ಬೇಡೆಂ ಕೇಳ್ ಬೇಡಿದಡೆ ಯೆಂನ ತಲೆಯ ದಂಡವು'[೨] ಎಂಬಂತಹ ನಿರಪೇಕ್ಷಿತ ಭಕ್ತಿ ಉಳ್ಳವನು. ಸ್ವಧರ್ಮನಿಷ್ಠೆ ಅನ್ಯಧರ್ಮೀಯರನ್ನು ಅಡಗಿಸುವಂತಹದೂ ಆಗಿತ್ತು ಎನ್ನುವುದು 'ಎಲೆ ಗಳ ವಾದಿಗೀದಿ ಫಡ ವೈಷ್ಣವ ಗೀಷ್ಣವ ಸೌರಗೀವ್ರ ಮಾಣೆಲಗಳ ಬೊಂಮಿ ಗಿಂಮಿ ನಿಗಮಾರ್ಥವನಱಿಯದಜ್ಜಿಗಿಜ್ಜಿ ಬೇಡೆಲೆಗಳ ಬೌದ್ಧ ಗಿದ್ಧ ಬಱಿಯಾಗಮಿ ಗೀಗಮಿ ಮಂತ್ರವಾದಿ ಸಾಕುಲಿಯದಿರೆಂದು ಬಗ್ಗಿಪುದು ಶ್ರೀ ಶಿವದೇವನ ಕಾಲ ಹೊಂದೊಡರ್'[೩]ಎಂಬ ಮಾತುಗಳಿಂದ ಸ್ಪಷ್ಟವಾಗುತ್ತದೆ. ಲಿಂಗ ಜಂಗಮದ ಸೇವೆ ಮಾಡುತ್ತ ವೀರವ್ರತ ಅನುಸರಿಸಿದ್ದಾನೆ-'ಶಿವಸದ್ವಿದ್ಯೆಯೆ ವಿದ್ಯೆಯೆಂದು ಶಿವಭಾವಂ ಭಾವಮೆಂದುವಾ ಶಿವಮಂತ್ರಗಳೆ ಮಂತ್ರವೆಂದು ಶಿವಮೂರ್ತಿ ಧ್ಯಾನವೆ ಧ್ಯಾನವೀ ಶಿವ ನಿತ್ಯೋತ್ಸವವುತ್ಸವಂ ಶಿವ ಕಥಾಳಾಪಂಗಳಾಳಾಪ ಮಿಕ್ಕುವಸೇಬ್ಯಂಗಳೆನುತ್ತ ವೀರಶಿವದೇವಂ ತಾಳ್ದ ವೀರಬ್ರತಂ'[೪]. ಒಂದು ಶಾಸನದಲ್ಲಿ 'ಆ ಕಳಶಾಂತಂಬರೆ ಮೂಲೋಕವಱಿಯೆ ಜೀರ್ಣ್ನವಾದ ಶಿವಭವನವನೆತ್ತಿ ಕಳಸಂ ಬರೆ ಶಿಲೆಯಿಂ ಲೋಕೋತ್ತಮವಾಗಿ

೧. 'ಬಂಕನದಱಿಂ' ಎಂಬ ಭಾಗಕ್ಕೆ ಅರ್ಥ ಹಚ್ಚುವುದು ಇನ್ನೂ ಸಾಧ್ಯವಾಗಿಲ್ಲ ಎಂದು ಎಂ. ಎಂ. ಕಲಬುರ್ಗಿಯವರು ಅಭಿಪ್ರಾಯ ಪಟ್ಟಿದ್ದಾರೆ. ಶಾಶಿಶ. ಪು. ೧೨೨ ಅಡಿಟಿಪ್ಪಣಿ. ಆದರೆ ಕಲ್ಲೇದೇವಪುರದ ಶಾಸನದಲ್ಲಿ ಅನೇಕ ಶಿವಭಕ್ತರ ಹೆಸರಿನ ಜೊತೆಯಲ್ಲಿ ' ಚಿಕ್ಕ ಕಕ್ಕ ಚೆಂನ ಹೊಂನ ಬಂಕ ಬಸವ ರಾಜ ಭೋಜಾದಿ ಮರ್ತ್ಯಲೋಕದ ಮಹಾಗಣಾಚಾರ' ಎಂಬ ಮಾತಿನಿಂದ ಬಂಕ ಒಬ್ಬ ಶಿವಭಕ್ತ ಎನ್ನುವುದು ಸ್ಪಷ್ಟ. ಕನ್ನಡ ಸಾಹಿತ್ಯದಲ್ಲಿ ಬಂಕ ಹೆಸರಿನ ಹಲವರು ಇದ್ದಾರೆ. ತೊರಗಲ್ಲಿನ ವಚನಕಾರ ಬಂಕನಾಥ, ಶಂಕರಕೂಚಿಯನ್ನು ಕೊಂದ ಬಂಕಯ್ಯ, ಸುಂಕದ ಬಂಕಯ್ಯ, ಪ್ರಸಾದಿ ಬಂಕಯ್ಯ (ಶಿಶಕರ-ಕೋಶ ಪು. ೨೬೦-೨೬೧). ಬಂಕಯ್ಯ ಎಂಬ ಇನ್ನೊಬ್ಬ ಭಕ್ತ ಮೊರಟೂರಿನವನು. ಬರಡು ಆಕಳಿಂದ ಹಾಲನ್ನು, ಕೊರಡಿನಿಂದ ಪತ್ರೆಯನ್ನು ನೀಡಿ ಚರಲಿಂಗ ಸೇವೆ ಮಾಡಿದವನು. ಮಹಾಕಾಳನೂ ಗೋವಿಂದಭಟ್ಟರನ್ನು ಅನುಸರಿಸಿ ತಲೆ ಕತ್ತರಿಸಿ ಪಡೆದು ಮತ್ತೆ ಮತ್ತೆ ಕತ್ತರಿಸಿಕೊಳ್ಳುತ್ತಾ ಶಿವನ ಗುಡಿಯನ್ನು ರುಂಡಗಳಿಂದ ತುಂಬಿದವನು. ಶಿವತತ್ವ ಚಿಂತಾಮಣಿಯಲ್ಲಿ ಇವನ ಮೊದಲ ಪವಾಡ ಅಲ್ಪ ವ್ಯತ್ಯಾಸದೊಂದಿಗೆ ನಿರೂಪಿತವಾಗಿದೆ. (ಶಿ.ತ.ಚಿಂ. ३೭-೭, ೮,೯) ಗುರುರಾಜ ಚಾರಿತ್ರದಲ್ಲಿ ಬಸವಾದಿ ಪ್ರಮಥರ ಕತೆ ಹೇಳುವಾಗ ಜಂಬೂರಿನ ಮಹಾಕಾಳದೇವಯ್ಯ ಎಂಬಾತ ಶಿವನನ್ನು ಪೂಜಿಸಿ ತನ್ನ ತಲೆ ಅರ್ಪಿಸಿ ಪಡೆದಾಗ ಶಿರ ನಿರ್ಮಾಲ್ಯವಲ್ಲವೇ ಎಂದು ಮಗ ಹೇಳಿದಾಗ, ನೀನು ತೋರಿಸು ಎಂದಾಗ ಅವನು ಶಿರ ಅರ್ಪಿಸಿ ಮರಳಿ ಪಡೆಯಲಿಲ್ಲ. ಆಗ ಬಂಕಯ್ಯ ತನ್ನ ಶಿರವನ್ನು ಅರ್ಪಿಸುವನು. ತಲೆ ಮೊಳೆಯಲು ಮತ್ತೆ ಕತ್ತರಿಸುವನು. ಹೀಗೆ ೬೨ ಬಾರಿ ಆಗಲು ಶಿವನು ಮೆಚ್ಚಿ ವರ ಬೇಡು ಎಂದಾಗ ಶಿವನ ಕೃಪೆ ಇದ್ದರೆ ಏನಾಗದು ಎನ್ನುವನು. ಆಗ ಶಿವನು ೬೩ ರುಂಡಗಳಿಗೆ ಶರೀರವಿತ್ತು ೬೩ ಪುರಾತನರನ್ನು ಕೈಲಾಸಕ್ಕೆ ಕರೆದೊಯ್ದು ಎಂದು ಬರುತ್ತದೆ (೮: ೯೭-೯೯). ಈ ಬಂಕಯ್ಯ ವೀರವ್ರತಿ. ಚೌಡದಾನಪುರದ ಶಿವದೇವನನ್ನು ಶಾಸನ ಹಲವು ಬಾರಿ ವೀರವ್ರತಿ ಎಂದು ಕರೆದಿದೆ. ಕಲ್ಲೇದೇವಪುರದ ಮತ್ತು ಚೌಡದಾನಪುರದ ಶಾಸನದ ಹಿನ್ನೆಲೆಯಲ್ಲಿ ಈ ಬಂಕ ಒಬ್ಬ ಶಿವಗಣನಾಗಿದ್ದು, ನಂದಿ- ಬಸವಣ್ಣನಾಗಿ ಅವತರಿಸಿದಂತೆ, ಬಂಕ ಶಿವದೇವನಾಗಿ ಅವತರಿಸಿದನೆಂದು ಸದ್ಯಕ್ಕೆ ಆ ಶಾಸನ ಪದ್ಯವನ್ನು ಅರ್ಥೈಸಬಹುದಾಗಿದೆ.

೨. ಶಿವದೇವನ ಈ ಮಾತುಗಳು ಬಸವಣ್ಣನವರ 'ಎನ್ನ ಒಡಲವಸರಕ್ಕೆ ಕುದಿದೆನಾದಡೆ ತಲೆದಂಡ' ಎಂಬ ಮಾತನ್ನು ನೆನಪಿಗೆ ತರುತ್ತದೆ (ಬವ. ೭೦೯).

೩. ಎಸ್‌ಐಐ XVIII ರಾಣೆಬೆನ್ನೂರು ೨೪೬ ಕ್ರಿ.ಶ. ೧೨೬೩.

೪. ಅದೇ.

ಮಾಡಿಸಿದ ಶಿವದೇವನು'[1] ಎಂದು ಬರುತ್ತದೆ. ಆದರೆ ಯಾವ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದನೆನ್ನುವುದು ಸ್ಪಷ್ಟವಾಗುವುದಿಲ್ಲ. ಶಿವದೇವನಿಗೆ ಇರುವ ಕೆಲವು ವಿಶೇಷಣಗಳು ಹೀಗಿವೆ. 'ಪರದೈವ ಮಾನಮರ್ದನ, ಪರದೈವ ಘರಟ್ಟ, ದಿಟ್ಟ ಪರದೈವ ಕುಭೃದ್ವರ ವಜ್ರಪತನೆನಿಪಂ ಹರಗಣತೇಜಪ್ರಭಾವದಿಂದ ಶಿವದೇವನು'.[2]

ಶಿವದೇವನ ಕಾಲದಲ್ಲಿ ಚೌಡದಾನಪುರ ದಕ್ಷಿಣ ವಾರಣಾಸಿ ಎಂದು ಹೆಸರು ಪಡೆದಿತ್ತೆಂದು ಒಂದು ಶಾಸನದಲ್ಲಿ ಬರುತ್ತದೆ. ಕಾರಣಿಕರಲ್ಲಿ ಕಾರಣಿಕನಾದ ಸಿದ್ಧದೇವಣದೇವನ ಶಿಷ್ಯ ಚೀಲಾಳದೇವ[3] ಲೊಕ್ಕಿಯಲ್ಲಿದ್ದನು. ಚೀಲಾಳನು ಕಲ್ಲರಸನ[4] ಮಡದಿ ಕನ್ನಾದೇವಿಗೆ ಶಿವದೀಕ್ಷೆ ಕೊಟ್ಟನಂತೆ. ಮುಂದೆ ಕಲ್ಲರಸನು ಮರಣ ಹೊಂದಲು ಅವಳು ಸಿದ್ಧದೇವಣನ ಅಪ್ಪಣೆಯಂತೆ ಮುಕ್ತಿಕ್ಷೇತ್ರದಲ್ಲಿ ಬಂದು ನೆಲಸಿ ಕಲಿದೇವರ ದೇವಾಲಯವನ್ನು ಕಟ್ಟಿಸಿದ ವಿಷಯ ಚೌಡದಾನಪುರದ ಇನ್ನೊಂದು ಶಾಸನದಲ್ಲಿ ಬರುತ್ತದೆ.[5] ಕ್ರಿ.ಶ.೧೨೬೩ ರ ಒಂದು ಶಾಸನದಲ್ಲಿ ಬರುವ :

> ಶಿವನಂ ತೋರುವ ಮಾರ್ಗ್ಗಮಾರ್ಗ್ಗ ಶಿವ ಸದಾಚಾರಂಗಳಾಚಾರವೀ।
> ಶಿವಸಂಯೋಗವೆ ಯೋಗ ನಿತ್ಯ ಶಿವ ಪೂಜಾಕರ್ಮವೇ ಕರ್ಮವೀ।
> ಶಿವನೇ ದೇವನು ದೇವನನ್ಯ ವಿಷಯಂ ಬೇಡಲ್ಲ ಹೊಲ್ಲೆಂದು ಶ್ರೀ।
> ಶಿವದೇವಪ್ರಭುವೆತ್ತಿದಂ ಧ್ವಜಪತಾಕೋದ್ದಂಡಮಂ ದಂಡಮಂ॥

ಈ ಮಾತುಗಳು ವೀರಶೈವ ಧರ್ಮದ ದೃಷ್ಟಿಯಿಂದ ಗಮನಾರ್ಹವಾಗಿದೆ. ಬಸವಣ್ಣನವರು ಜಗತ್ತಿಗೇ ತಿಳಿಯುವಂತೆ ಪಡೆದ ಮೃಡಗಣವರಪ್ರಸಾದವನ್ನು ಶಿವದೇವ 'ವೀರವ್ರತ'ದಿಂದ ಪಡೆದನೆಂದು ಬರುತ್ತದೆ.

> 'ಲಿಂಗಕ್ಕೆ ಜಂಗಮಕ್ಕಂ
> ಹಿಂಗದೆ ದಾಸತ್ವ ಮಾಳ್ಪುದೇ ಬೆಸನೆಂದಾ
> ಸಂಗನ ಬಸವಂ ಬೆಸಸೆ ಮ
> ನಂಗೊಂಡರ್ಚಿಸುವನುಭಯಲಿಂಗವ ಮುದದಿಂ॥
> ಮೃಡಗಣ ವರಪ್ರಸಾದಮ
> ಪಡೆದಂ ಜಗವರಿಯಲಂದು ಸಂಗನಬಸವಂ
> ಪಡೆದಾ ಪ್ರಸಾದ ಸಿದ್ಧಿಯ
> ಕಡು ವೀರಬ್ರತದಿ ಪಡೆದನೀ ಶಿವದೇವಂ ॥'[6]

---

೧. ಜೆಕೆಯು. II ಕ್ರಿ.ಶ. ೧೨೬೦.

೨. ಎಸ್‌ಐಐ XVIII ರಾಣೆಬೆನ್ನೂರು ೨೪೫ ಕ್ರಿ.ಶ. ೧೨೬೫.

೩. ಈ ಶಾಸನೋಕ್ತ ಚೀಲಾಳ ದೇವಗಿರಿಯ ಯಾದವ ಅರಸನೆಂದೂ, ಯಾದವ ಭಿಲ್ಲಮನ ಅಣ್ಣನ ಮಗ ಕಾಳಿಯ ಬಲ್ಲಾಳನೆಂದೂ ವಿದ್ವಾಂಸರು ಊಹಿಸಿದ್ದಾರೆ. ಅಲ್ಲದೆ ಶಾಸನದಲ್ಲಿ ಬರುವ ವಿಶೇಷಣಗಳಿಂದ ಅವನು ವೀರಶೈವನೆಂಬುದಕ್ಕೆ ಸಾಕ್ಷಿ ಇದೆ ಎಂಬ ಅಭಿಪ್ರಾಯವಿದೆ. ಎಂ. ಎಂ. ಕಲಬುರ್ಗಿ : ಶಾಶಿಶ. ಪು. ೧೩೦-೧೩೧.

೪. ಈ ಶಾಸನೋಕ್ತ ಕಲ್ಲರಸ ಮತ್ತು ಅರ್ಜುನವಾಡ ಶಾಸನದ ಕಲಿದೇವ ಒಬ್ಬನೇ ಆಗಿರಬಹುದೆಂದು ಎಂ. ಜಿ. ನಂಜುಂಡಾರಾಧ್ಯರು ಊಹಿಸಿದ್ದಾರೆ. ಎಂ. ಎಂ. ಕಲಬುರ್ಗಿ: ಶಾಶಿಶ ಪು. ೬೫ ಅಡಿಟಿಪ್ಪಣಿ.

೫. ಎಸ್‌ಐಐ XVIII ರಾಣೆಬೆನ್ನೂರು ೨೪೫ ಕ್ರಿ.ಶ. ೧೨೬೨.

೬. ಎಸ್‌ಐಐ XIII ರಾಣೆಬೆನ್ನೂರು ೨೪೬ ಕ್ರಿ.ಶ. ೧೨೬೩.

ಈ ಶಾಸನದಲ್ಲಿ ಕೆಲವು ಬಾರಿ ಅವನನ್ನು 'ವೀರವ್ರತಿ' ಎಂದು ಕರೆಯಲಾಗಿದೆ. ಅದೇ ಶಾಸನ ಶಿವದೇವನನ್ನು 'ಲಿಂಗಕ್ಕೆ ಕಟ್ಟಿದೊರೆ ಕೊಟ್ಟ ಬಾಸೆ ದಿಟ್ಟಿವಾರಿಯ[೧] ಕಟ್ಟಾಳು' ಎಂದು ಕರೆದಿದೆ. ಆ ಮಾತುಗಳು ಶಿವದೇವನ ಕಡುಲಿಂಗನಿಷ್ಠೆ ಮತ್ತು ಅವನ ವೀರವ್ರತದ ಶಿವಾಚರಣೆಯನ್ನು ಖಚಿತಪಡಿಸುತ್ತದೆ. ಗುತ್ತರಸರು ಶಿವದೇವನನ್ನು ರಾಜಗುರು ಎಂದು ಪರಿಗಣಿಸಿದ್ದರು. ಸುಮಾರು ೪೦ ವರ್ಷಗಳಿಗೂ ಮೇಲ್ಪಟ್ಟು ಚೌಡದಾನಪುರದಲ್ಲಿದ್ದು ವೀರಶೈವಧರ್ಮದ ಬೆಳವಣಿಗೆಗೆ, ಸ್ಥಿರತೆಗೆ ತನ್ನ ವ್ಯಕ್ತಿತ್ವದ ಘನತೆಯಿಂದ ಪ್ರಯತ್ನಿಸಿದ ಶಿವದೇವ ಬಸವೋತ್ತರ ವೀರಶೈವ ಧರ್ಮದ ಪ್ರಮುಖ ವ್ಯಕ್ತಿಯಾಗಿದ್ದಾನೆ. ಅವನು ದೇವಾಲಯ ಕಟ್ಟಿದ್ದರೂ, ದಾನ ಸ್ವೀಕರಿಸಿದರೂ ಉನ್ನತ ಸ್ವಾಭಿಮಾನಿಯಾಗಿದ್ದ ಎಂಬುದು ಒಂದು ಶಾಸನದಿಂದ ಸ್ಪಷ್ಟವಾಗುತ್ತದೆ.[೨] ಯಾದವ ಮಹಾದೇವನ ಸರ್ವಾಧಿಕಾರಿ ದೇವರಸನು ಶಿವದೇವನಿಗೆ ಸಾಷ್ಟಾಂಗ ಎರಗಿ ತನ್ನ ರಾಜನು ಒಂದು ಗ್ರಾಮವನ್ನು ಶಿವದೇವನಿಗೆ ನೀಡುವಂತೆ ಆಜ್ಞೆಯಿತ್ತಿದ್ದಾನೆ ಅದನ್ನು ಸ್ವೀಕರಿಸಬೇಕು ಎಂದು ಕೇಳಿದಾಗ ಶಿವದೇವನು 'ತ್ರಿಭುವನವೆಂಮದು ಪಟ್ಟಿಯ ಪ್ರಭುತ್ವವೇಂ ಶ್ಲಾಘ್ಯವೆಯದಲ್ಲದು ಮಾಣ್' ಎಂದುಉತ್ತರಿಸಿದನೆಂದು ಬರುತ್ತದೆ.* ಈ ಸಂದರ್ಭದಲ್ಲಿ ಶಿವದೇವನ ಆತ್ಮಾಭಿಮಾನ, ಸನ್ಯಾಸಿಯ ನೈತಿಕ ಸ್ಥೈರ್ಯ ಉನ್ನತ ರೀತಿಯಲ್ಲಿ ಪ್ರಕಟವಾಗಿರುವುದನ್ನು ಕಾಣಬಹುದು. ಮುಂದೆ ಹೇಗೊ ದೇವರಸನು ದಾನ ಸ್ವೀಕಾರಕ್ಕೆ ಶಿವದೇವನನ್ನು ಒಪ್ಪಿಸುತ್ತಾನೆ. ಕ್ರಿ.ಶ. ೧೨೯೨ರ ಒಂದು ಶಾಸನದಲ್ಲಿ 'ಗೋಪೆಯ ನೂಜಿಪ್ಪತ್ತಿರ ಷಂನಿದಿಯಲ್ಲಿ' ದಾನ ನಡೆಯುವುದರಿಂದ ಅಷ್ಟು ಹೊತ್ತಿಗೆ ಶಿವದೇವ ಮರಣ ಹೊಂದಿರಬಹುದೆಂದು ಭಾವಿಸಬೇಕಾಗುತ್ತದೆ.[೩]

ಚೌಡದಾನಪುರದ ಕ್ರಿ.ಶ. ೧೧೯೨ರ ಒಂದು ಶಾಸನದಿಂದ[೪] ಅದು ಶಿವದೇವನ ಕಾಲದಲ್ಲಿ ವೀರಶೈವ ಅಧೀನಕ್ಕೆ ಒಳಪಡುವ ಮೊದಲು ಶೈವ ಯತಿಗಳ ಅಧೀನದಲ್ಲಿ ಇದ್ದುದಕ್ಕೆ ಒಂದು ಸೂಚನೆ ಇದೆ; ಕಾಮೆಯ ನಾಯಕನು ತನ್ನ ಸ್ವಾಮಿಯಿಂದ ಪಾರಿತೋಷಿಕವಾಗಿ ಪಡೆದ ಹೊನ್ನವತ್ತಿಯ ಹೊಲದಲ್ಲಿ ಕೆಲವು ಭಾಗವನ್ನು ಮುಕ್ತೇಶ್ವರ ದೇವಾಲಯದ ಅಂಗರಂಗಭೋಗ ಜೀರ್ಣೋದ್ಧಾರಕ್ಕೆ ಮುಕ್ತಜೀಯರ ಕಾಲನ್ನು ತೊಳೆದು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.

ಶಿವದೇವನ ದೇವಾಲಯ ಜೀರ್ಣೋದ್ಧಾರ, ಲಿಂಗಜಂಗಮ ಸೇವೆ, ದಾನ ಸ್ವೀಕಾರದ ಹಿಂದಿರುವ ಸ್ವಾಭಿಮಾನಿ ಮನೋಭಾವ, ವೀರವ್ರತ ಇವೆಲ್ಲವೂ ಶೈವ- ವೀರಶೈವಗಳ ವ್ಯತ್ಯಾಸವಳಿದ ಸಂಯೋಗವನ್ನು ಸೂಚಿಸುತ್ತದೆ.

---

೧. ಇದು ಶಿವನ ಬಗ್ಗೆ ಉಗ್ರ ನಿಷ್ಠೆಯ ವ್ರತವನ್ನು ಹೇಳುತ್ತದೆ. ತನಗೂ ಶಿವನಿಗೂ ಮಧ್ಯೆ ಬಂದವರನ್ನು ನಿವಾರಿಸುವ ಪ್ರತಿಜ್ಞೆಯನ್ನು ಸೂಚಿಸುತ್ತದೆ. ನಡುಗನ್ನಡ ಕಾವ್ಯಗಳನ್ನು ವಿಶೇಷವಾಗಿ ಅನುಲಕ್ಷಿಸಿ ಎಂ. ಚಿದಾನಂದ ಮೂರ್ತಿಯವರು ದಿಟ್ಟಿವಾರಿ ಶಬ್ದದ ನಿಷ್ಪತ್ತಿ ಮತ್ತು ಅರ್ಥ ವಿವರಣೆಯನ್ನು ಮಾಡಿದ್ದಾರೆ. (ಸಮಕಾಲೀನ ಶಾಸನದಲ್ಲಿಯೂ ಆ ಶಬ್ದ ಪ್ರಯೋಗವಾಗಿರುವುದನ್ನು ಈ ಪ್ರಯೋಗದಿಂದ ತಿಳಿಯಬಹುದು) ಅವರು ಆ ಪದಕ್ಕೆ ದಿಟ್ಟಿವಾರೆ, ದೃಷ್ಟಿವಾರಿ ಎಂಬ ರೂಪಗಳಿರುವುದನ್ನು ತೋರಿಸಿ ಆ ಪದದ ನಿಷ್ಪತ್ತಿ ದಿಟ್ಟಿ+ವಾರಿ ಎಂದೂ ದಿಟ್ಟಿ ಎಂಬುದು ದೃಷ್ಟಿಯ ತದ್ಭವ, ವಾರಿ -ಸಂಸ್ಕೃತದ 'ವ' ಧಾತುವಿನಿಂದ ಜನ್ಯವಾದುದು. ವಾರಣ ಎಂದರೆ ತಡೆಯುವುದು, ಪ್ರತಿಭಟಿಸುವುದು ಎಂದರ್ಥ ಎಂದಿದ್ದಾರೆ. ವಿವರಗಳಿಗೆ ನೋಡಿ : 'ದಿಟ್ಟಿವಾರಿ'-ವಿಶಿಷ್ಟ ಭಕ್ತರು ಮತ್ತು ಶೂರರು (ಶಬ್ದದ ಅರ್ಥ ಮತ್ತು ನಿಷ್ಪತ್ತಿ) ಎಂಬ ಲೇಖನ, ಲಿಂಗಾಯತ ಅಧ್ಯಯನಗಳು ಪು.೪೫೭-೪೬೫.

೨. ಎಸ್ಐಐ XVIII ರಾಣೆಬೆನ್ನೂರು ೨೪೭ ಕ್ರಿ.ಶ. ೧೨೬೫. *ಶಾಸನ ಪ್ರಪಂಚದಲ್ಲಿ ಶಿವದೇವನ ಮನೋಭಾವ ತುಂಬ ವಿರಳ ಉದಾಹರಣೆಯಾಗಿದೆ.

೩. ಎಸ್ಐಐ XVIIII ರಾಣೆಬೆನ್ನೂರು ೨೬೮ ಕ್ರಿ.ಶ. ೧೨೯೨.

೪. ಎಸ್ಐಐ XVIII ರಾಣೆಬೆನ್ನೂರು ೨೯೯ ಕ್ರಿ.ಶ. ೧೧೯೨.

ಕರ್ನಾಟಕದ ಕಾಳಾಮುಖ, ಶೈವ ದೇವಾಲಯ-ಮಠಗಳು ವೀರಶೈವ ಧರ್ಮದ ಆಡಳಿತಕ್ಕೆ ಒಳಪಟ್ಟ ಉದಾಹರಣೆಗಳಿವೆ. ಆ ಹಲವು ಉದಾಹರಣೆಗಳಲ್ಲಿ ಇದೂ ಒಂದಾಗಿರುವಂತೆ ಕಾಣುತ್ತದೆ.

**ಧರ್ಮದ ಪ್ರಸಾರ :**

ವೀರಶೈವ ಧರ್ಮ ಕಲ್ಯಾಣದಿಂದ ಅನಿವಾರ್ಯವಾಗಿ ಚದುರಬೇಕಾಗಿ ಬಂದದ್ದರಿಂದ ಅಲ್ಲಿಂದ ಚದುರಿ ಬೇರೆ ಬೇರೆ ಕಡೆಗೆ ಹೋಗಿ ಕ್ರಮೇಣ ನೆಲೆಯೂರಬೇಕಾದ ಪರಿಸ್ಥಿತಿ ಬಂದಿತು. ಮಹಾ ಸಂಘಟನೆ ಒಡೆದಾಗ ಅದು ನಾಡಿನ ವಿವಿಧ ಭಾಗಗಳಲ್ಲಿ ಹರಿದ ಸಂದರ್ಭ ಮತ್ತು ಅದು ವಿವಿಧ ಪರಿಸ್ಥಿತಿಗಳನ್ನು ಎದುರಿಸಿ ಬೆಳೆದ ವಿಷಯದ ಅಧ್ಯಯನ ಇನ್ನೂ ವ್ಯಾಪಕವಾಗಿ ನಡೆಯಬೇಕಿದೆ.

ವೀರಶೈವ ಧರ್ಮದ ಪ್ರಸಾರ ಕಲ್ಯಾಣದ ಕ್ರಾಂತಿ ಆಗುವ ಮೊದಲೇ ಹೊಯ್ಸಳ ನಾಡಿನ ಗಡಿಗಳಿಗೆ ವ್ಯಾಪಿಸಿತ್ತೆಂದು ಭಾವಿಸಲು ಅವಕಾಶವಿದೆ. ಬಿದಿರೆ ಶಾಸನದಲ್ಲಿ ಬರುವಂತೆ ಚಾಕವ್ವೆ ಬೆಳ್ಳಪ್ಪನೆಂಬ ಮಗನನ್ನು ಪಡೆದಾಗ ದಾಸನು ಈಶನ ಕೈಯಿಂದ ತವನಿಧಿಯನ್ನು ಪಡೆದಂತೆ ಎಂಬ ಹೋಲಿಕೆಯನ್ನು ಈಗಾಗಲೇ ಗಮನಿಸಲಾಗಿದೆ. ಕ್ರಿ.ಶ. ಸು.೧೧೪೦ ರಲ್ಲಿ ಇದ್ದನೆಂದು ಭಾವಿಸಲಾಗಿರುವ ಜೇಡರ ದಾಸಿಮಯ್ಯ ಆದ್ಯ ವಚನಕಾರನೂ ಆಗಿದ್ದಾನೆ. ಅವನ ಜೀವನದ ಘಟನೆ ಹಾಸನ ಜಿಲ್ಲೆಯ ಚನ್ನರಾಯಪಟ್ಟಣದ ಬಿದಿರೆ ಗ್ರಾಮದಲ್ಲಿ ಕ್ರಿ.ಶ. ೧೧೬೫ ರಲ್ಲಿ ಗಾದೆ ಮಾತಿನಂತೆ ಶಾಸನೋಕ್ತವಾಗಿರುವುದು ಆಶ್ಚರ್ಯಕರವಾಗಿದೆ.

ಮಂಡ್ಯ ತಾಲ್ಲೂಕಿನ ರಾಯಸೆಟ್ಟಿಪುರದ ಶಾಸನ[೧] ಇನ್ನೊಂದು ದೃಷ್ಟಿಯಿಂದ ಬಹಳ ಗಮನಾರ್ಹವಾದದ್ದು. ಎರಡನೆಯ ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ. ೧೧೮೫) ಕೆರೆಗೋಡುನಾಡಿನ ಬಿದಿರುಕೋಟೆಯನ್ನು ಮಲ್ಲೆಯನಾಯಕ ಮತ್ತು ಸೋಮೆಯನಾಯಕ ಸೇರಿ ತಮ್ಮ ಹಳ್ಳಿಯನ್ನು ಶಿವಪುರವಾಗಿ ಪರಿವರ್ತಿಸಿ ಭಕ್ತರಿಗೆ[೨] ಧಾರಾಪೂರ್ವಕ ಮಾಡಿಕೊಟ್ಟರು. ಆದರೆ ಇದಾದ ಎಪ್ಪತ್ತು ವರ್ಷಗಳ ಮೇಲೆ ವೀರಸೋಮೇಶ್ವರನ ಕಾಲದಲ್ಲಿ (ಕ್ರಿ.ಶ.೧೨೫೧) ಮಾದೆಯನಾಯಕ ಶಿವಪುರವನ್ನು ಬಿಡದೆ ಬಲವಾಗಿ ವಿರೋಧಿಸಿದಾಗ ವೀರಮಲಯ್ಯನೆಂಬುವನು ತನ್ನನ್ನು ಕುತ್ತಿಕೊಂಡು ಬಹುಶಃ ಆ ಶಿವಪುರದ ನಾಲ್ಕು ಸೀಮೆಕಲ್ಲುಗಳ ಬಳಿಯವರೆಗೆ ಓಡಾಡಿ ಪ್ರಾಣಾರ್ಪಣೆ ಮಾಡಿರಬೇಕು. ಅವನು ಪ್ರಾಣತ್ಯಾಗ ಮಾಡಿದನೇ ಎಂಬುದು ಸ್ಪಷ್ಟವಿಲ್ಲ. ಇದಾದನಂತರ ಮಾದೆಯನಾಯಕ ಮಣಿದು ಶಿವಪುರವನ್ನು ಅಲ್ಲಿನ ಮುಖ್ಯಸ್ಥನಿಗೆ ಬಿಟ್ಟನು. ಅವರು ಅದಕ್ಕೆ ಸೋಮನಾಥಪುರವೆಂದು ಹೆಸರಿಟ್ಟರು. ಮುಂದೆ ಶಾಸನದಲ್ಲಿ ೩೪ ವೃತ್ತಿಗಳ ಮರುಹಂಚಿಕೆಯ ವಿವರಗಳಿವೆ. ವೃತ್ತಿಗಳು ಸೋಮನಾಥ ದೇವರಿಗೂ 'ಸ್ತಾನಾಪತಿ' ಮಾದಿರಾಜನಿಗೂ ಸಂದಿವೆ. ವೃತ್ತಿವಂತರ ಹೆಸರುಗಳಲ್ಲಿ ಕೆಲವು ವೀರಶೈವರವು ಎಂಬುದನ್ನು ಸಮರ್ಥಿಸುವಂತಿದೆ. ಉದಾ : ಕರಸ್ತಳದ ಬಸವದೇವಂಗೆ, ನೀಲಕಂಠದೇವಂಗೆ, ಪ್ರಮಥಯ್ಯಂಗೆ, ಸಂಭುದೇವ ಇತ್ಯಾದಿ. ವಿಶೇಷವೆಂದರೆ ಸ್ತ್ರೀಯರಿಗೂ ವೃತ್ತಿ ಸಂದಿದೆ. ತವರದ ಮಾರಿಸೆಟ್ಟಿಯ ಮಗಳು ಚಂಗಣವೆ ಮಾದವ್ವೆಗೆ.. ಎಂದಿದೆ. ಇದು ವೀರಶೈವರಿಗೇ ನೀಡಿದ ಶಿವಪುರವಾದರೆ ಪ್ರಥಮ ವೀರಶೈವ ಶಿವಪುರವಾಗುವಂತೆ ಕಾಣುತ್ತದೆ. ಅಲ್ಲದೆ ಕಲ್ಯಾಣದಿಂದ ಚದುರಿದ ವೀರಶೈವರು ಕ್ರಿ.ಶ. ೧೧೮೫ ರಲ್ಲೇ ಇಲ್ಲಿ ಬಂದು ನೆಲಸಿದರು ಎಂದು ಭಾವಿಸಬೇಕಾಗುತ್ತದೆ.

ಕೇರಳಾಪುರದ ಶಾಸನ[೩] ಇನ್ನೊಂದು ದೃಷ್ಟಿಯಿಂದ ಮುಖ್ಯವಾದದ್ದು. ಈ ಶಾಸನ ಮಾರುಡಿಗೆಯ ಮಲ್ಲಣ್ಣನು ದಣ್ಣಾಯಕದೇವರ, ಜ್ಞಾನಸಂಮಂದದೇವರ ವಾಗೀಶದೇವರ ನಂಬಿಯಂಣಂಗಳ ಗಣಮಠಗಳನ್ನು ಸ್ಥಾಪಿಸಿದ ವಿಷಯವನ್ನು ತಿಳಿಸುತ್ತದೆ. ಶಾಸನದ ಕೊನೆಯಲ್ಲಿ ಬಸವರಾಜ ಎಂಬ ಒಪ್ಪ ದಣ್ಣಾಯಕ ಎಂಬುದು ಬಸವಣ್ಣನವರಿಗೆ ಅನ್ವಯವಾಗುವುದನ್ನು ಸಮರ್ಥಿಸುತ್ತದೆ. ಹಾಸನ ಜಿಲ್ಲೆಯ ಅರಕಲುಗೂಡು ತಾಲ್ಲೂಕಿನ ಈ ಶಾಸನ, ಹನ್ನೆರಡನೆಯ ಶತಮಾನದ ಕೊನೆಗೆ ಆಗಲೇ ವೀರಶೈವರು ಮಠ, ಶಿವಪುರಗಳನ್ನು ನಿರ್ಮಿಸಿಕೊಂಡು ನೆಲೆಯೂರತೊಡಗಿದರೆಂಬುದನ್ನು ಸಮರ್ಥಿಸುತ್ತದೆ.

---

೧. (ಮೈ) ಎಕ VII ಮಂಡ್ಯ ೩೪ ಕ್ರಿ.ಶ. ೧೧೮೫:೧೨೫೧.

೨. ಈ ಶಾಸನದಲ್ಲಿ ಭಕ್ತರಿಗೆ ಎಂಬ ಪದಕ್ಕೆ ವೀರಶೈವರು ಎಂದು ಶಾಸನ ಸಂಪಾದಕರು ಅರ್ಥೈಸಿದ್ದಾರೆ. ಪೀಠಿಕೆ LXiii.

೩. ಬ. ಪ ೨:೫ ಕ್ರಿ.ಶ. ೧೩೦೨.

ಬಸವಾಪಟ್ಟಣದ ಶಾಸನೋಕ್ತ ನೆಲುವಿಗೆ ಶಿವಯೋಗಿ ಸಾತಯ್ಯ ಮತ್ತು ಭೂಯಾರ ಶಾಸನದ ನೆಲುವಿಗೆ ಸಾತೈಯ್ಯ ಅಭಿನ್ನ ವ್ಯಕ್ತಿಗಳೆಂದು ಬಿ. ಆರ್. ಹಿರೇಮಠ ಅವರು ಭಾವಿಸುತ್ತಾರೆ.[೧] ಇದು ಒಪ್ಪಿತವಾದರೆ ಭೂಯಾರ ಶಾಸನೋಕ್ತ ನೆಲುವಿಗೆ ಸಾತೈಯ್ಯ ಬಸವಣ್ಣನವರ ಸಮಕಾಲೀನನಾಗುತ್ತಾನೆ. ಇವನ ವಂಶಜರು ಹಾಸನ ಜಿಲ್ಲೆಯ ಅರಕಲುಗೂಡು ತಾಲ್ಲೂಕಿನ ಬಸವಾಪಟ್ಟಣದಲ್ಲಿ ನೆಲಸಿರುವುದು ಕಂಡುಬರುತ್ತದೆ. ಸಾತೈಯ್ಯನಿಗೆ ರೇವಣನೆಂಬ ಮಗನೂ ಕಂಚಲ ದೇವಿಯೆಂಬ ಮಗಳೂ ಇದ್ದುದಾಗಿಯೂ ಮೊಮ್ಮಗ ಇಮ್ಮಡಿ ಸಾತಿದೇವ ಅಜ್ಜನ ಸಮಾಧಿಯನ್ನು ಕಟ್ಟಿಸಿದುದಾಗಿ ಬರೆದಿರುವುದರಿಂದ ಈಗಿರುವ ಶಾಂತೇಶ್ವರ ದೇವಸ್ಥಾನ ಸಾತೈಯ್ಯನ ಸಮಾಧಿಯಾಗಿರಬೇಕು ಎಂದು ತೋರುತ್ತದೆ[೨] ಎಂದು ಸೀತಾರಾಮ ಜಾಗೀರದಾರರು ಅಭಿಪ್ರಾಯ ಪಡುತ್ತಾರೆ. ಹಿಂದೆ ಹೆಸರಿಸಿದ ಕೆಂಪನಪುರದ ಶಾಸನದಲ್ಲಿ ಉಕ್ತನಾದ ಏಕಾಂತದ ಬಸವೇಶ್ವರ ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಪುರಾಣ (೮-೮-೪೪)ದಲ್ಲಿಯೂ ಉಕ್ತನಾಗಿದ್ದಾನೆ. (ಕ್ರಿ.ಶ. ೧೫೩೦). ಮೈಸೂರು ಜಿಲ್ಲೆಯ ಚಾಮರಾಜನಗರ ಶಾಸನದಲ್ಲಿ ಉಲ್ಲೇಖವಾಗಿರುವುದು ಗಮನಾರ್ಹ. ಅಲ್ಲದೆ ಆವನಿಯ ಬೆಟ್ಟದಲ್ಲಿ ಏಕಾಂತದ ರಾಮಯ್ಯನ ದೇವಾಲಯವಿದ್ದುದು ತಿಳಿದುಬರುತ್ತದೆ.[೩] ಈ ಕೆಲವು ಉದಾಹರಣೆಗಳಿಂದ ವೀರಶೈವ ಧರ್ಮದ ಪ್ರಭಾವ ಕ್ರಮೇಣ ತುಂಗಭದ್ರಾ ನದಿಯನ್ನು ದಾಟಿ ಹಾಸನಜಿಲ್ಲೆ, ಕೋಲಾರ ಜಿಲ್ಲೆ, ಮಂಡ್ಯ ಜಿಲ್ಲೆಯವರೆಗೂ ಹಬ್ಬುತ್ತಿತ್ತು ಎನ್ನುವುದನ್ನು ಗುರುತಿಸಬಹುದು. ಉತ್ತರ ಕರ್ನಾಟಕದ ಗುಲ್ಬರ್ಗ ಜಿಲ್ಲೆಯ ಸಿರಿವಾಳದ ಶಾಸನ, ಇಂಗಳಗಿಯ ಗುಡ್ಡವ್ವೆಗೆ ಸಂಬಂಧಿಸಿದ ಶಾಸನ, ಬಿಜಾಪುರದ ತಾಳಿಕೋಟೆ ಶಾಸನ, ಕಿರಿಇಂಡಿ ಶಾಸನ, ಬೆಳಗಾಂ ಜಿಲ್ಲೆಯ ಅರ್ಜುನವಾಡದ ಶಾಸನ, ಬಳ್ಳಾರಿ ಜಿಲ್ಲೆಯ ಹಾವಿನಹಾಳ ಕಲ್ಲಿಸೆಟ್ಟಿ ವಿಷಯ ಹೇಳುವ ಕುರುಗೋಡ ಶಾಸನ, ಧಾರವಾಡ ಜಿಲ್ಲೆಯ ಅಬ್ಬಲೂರು ಶಾಸನಗಳು, ರಟ್ಟಿಹಳ್ಳಿ ಶಾಸನ, ಚೌಡದಾನಪುರದ ಶಾಸನಗಳು, ಶಿವಮೊಗ್ಗ ಜಿಲ್ಲೆಯ ಬಂದಳಿಕೆ ಶಾಸನ, ಚಿತ್ರದುರ್ಗದ ಕಲ್ಲೇದೇವಪುರದ ಶಾಸನ ಮುಂತಾದವು ವೀರಶೈವ ಧರ್ಮದ ಒಂದು ಸ್ಥೂಲ ವ್ಯಾಪ್ತಿಯ ಚಿತ್ರವನ್ನು ಕೊಡುತ್ತವೆ. ಇವುಗಳಲ್ಲದೆ ಸಿದ್ಧರಾಮನಿಗೆ ಸಂಬಂಧಿಸಿದ ಸುಮಾರು ಇಪ್ಪತ್ತೈದು ಶಾಸನಗಳು ಹೊರನಾಡಿನ ಉಸ್ಮಾನಾಬಾದ್, ಸೊಲ್ಲಾಪುರ ಜಿಲ್ಲೆಗಳಿಂದ ಹಿಡಿದು ಮಧ್ಯ ಕರ್ನಾಟಕದ ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳು ಸೇರಿದಂತೆ ಮಂಡ್ಯ ಜಿಲ್ಲೆಯ ಮರಡಿಪುರ ಶಾಸನದವರೆಗೆ ಹಾಗೂ ಮೈಸೂರು ಜಿಲ್ಲೆ ಚಾಮರಾಜನಗರ, ಕೋಲಾರ ಜಿಲ್ಲೆ ಆವನಿ ಹೀಗೆ ನಾನಾ ಸ್ಥಳಗಳಲ್ಲಿ ವ್ಯಾಪಿಸಿರುವುದನ್ನು ಕಾಣಬಹುದು. ಮೇಲೆ ಹೆಸರಿಸಿರುವ ಶಾಸನಗಳು ದೇವಾಲಯ ಮತ್ತು ಒಂದಲ್ಲ ಒಂದು ರೀತಿಯಲ್ಲಿ ವೀರಶೈವ ಧರ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು, ಚಟುವಟಿಕೆಗಳನ್ನು, ಶಿವಶರಣರ ಹೆಸರುಗಳನ್ನು ಒಳಗೊಂಡಿವೆ.

ಆಂಧ್ರ ಪ್ರದೇಶದಲ್ಲಿ ವೀರಶೈವ ಧರ್ಮ ಪ್ರಸಾರವಾಗಲು ಕಾರಣ ಪಂಡಿತತ್ರಯರಾದ ಶ್ರೀಪತಿ ಪಂಡಿತ,[೪] ಶಿವಲೆಂಕ ಪಂಡಿತ[೫] ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯರೆಂದು[೬] ಕೆಲವರು ಭಾವಿಸುವುದುಂಟು. ಆದರೆ ಮೂವರೂ ಶಿವಭಕ್ತರಾದರೂ

---

೧. ಬಿ.ಆರ್. ಹಿರೇಮಠ : 'ಶಾಸನೋಕ್ತ ಮರುಳಸಿದ್ಧ ಹಾಗೂ ರೇವಣಸಿದ್ಧ' ಬಪ ೧೧-೨ ಪು. ೬೭-೬೮.

೨. ಸೀತಾರಾಮ ಜಾಗೀರದಾರ : 'ಶಾಸನಗಳಲ್ಲಿ ದಂಡನಾಯಕ ಬಸವೇಶ್ವರರು ಮತ್ತು ಕೆಲವು ಶಿವಶರಣರು' ಬ.ಪ. ೨:೫ ಪು. ೭೧-೭೨.

೩. ಬಿ.ಆರ್. ಹಿರೇಮಠ : ಪೂರ್ವೋಕ್ತ.

೪. ಶ್ರೀಪತಿ ಪಂಡಿತ ಅಗ್ನಿಪವಾಡ ಮಾಡಿದ ವಿಷಯ ಬೆಜವಾಡದ ಶಾಸನದಲ್ಲಿ ಬಂದಿದೆ. ಆದರೆ ಆ ಶಾಸನದ ಕಾಲ ತಿಳಿದಿಲ್ಲ. ಶ್ರೀಕರಭಾಷ್ಯ ಗ್ರಂಥವನ್ನು ಇವನು ಬರೆದನೆಂಬ ಆಧಾರದ ಮೇಲೆ ವೀರಶೈವನೆಂದು ಹೇಳುವರಾದರೂ ಅದರಲ್ಲಿ ಸಿದ್ಧಾಂತ ಶಿಖಾಮಣಿ ಉದಾಹೃತವಾಗಿರುವುದರಿಂದ ಶ್ರೀಕರಭಾಷ್ಯದ ಕಾಲ ೧೪ನೆಯ ಶತಮಾನವೆಂದು ಹಯವದನರಾವ್ ಅವರು ಹೇಳಿದ್ದಾರೆ. ಆದ್ದರಿಂದ ಶ್ರೀಕರಭಾಷ್ಯ ಬರೆದ ಶ್ರೀಪತಿಪಂಡಿತ ಈಚಿನ ಬೇರೆಯವನು ಎಂಬ ಅಭಿಪ್ರಾಯವಿದೆ. K. Lalita Virasaivism in Andhra. ಪು. ೨೦.

೫. ಇವನ ಬಗ್ಗೆ ಹೆಚ್ಚು ವಿವರಗಳು ದೊರೆಯುವುದಿಲ್ಲ. ಇವನು ಕಲ್ಯಾಣಕ್ಕೆ ಬಂದಿದ್ದನೆಂಬ ಹೇಳಿಕೆಗಳುಂಟು. ಇವನು ಮತ್ತು ವಚನಕಾರ ಶಿವಲೆಂಕ ಮಂಚಣ್ಣ ಭಿನ್ನವೋ ಅಭಿನ್ನವೋ ಸ್ಪಷ್ಟವಿಲ್ಲ.

೬. ಇವನಿಗೆ ಬಸವಣ್ಣನವರ ಬಗ್ಗೆ ಅಪಾರ ಪ್ರೀತಿ ಇದ್ದ ಹಾಗೆ ಕಾಣುತ್ತದೆ. ತನ್ನ ಕೊನೆಗಾಲದಲ್ಲಿ ಕಲ್ಯಾಣಕ್ಕೆ ಹೊರಟು, ಬಸವಣ್ಣನವರು ಲಿಂಗೈಕ್ಯವಾದ ವಿಷಯ ತಿಳಿದು ಶ್ರೀಶೈಲ ಮಾರ್ಗದಲ್ಲಿ ಲಿಂಗೈಕ್ಯನಾದ.

ಅವರು ವೀರಶೈವರೆಂದು ನಿರ್ಧರಿಸಲು ಆಧಾರಗಳ ಕೊರತೆ ಇದೆ. ಆದರೂ, ಕೆಲವು ಮಟ್ಟಿಗೆ ಮಲ್ಲಿಕಾರ್ಜುನಪಂಡಿತ ವೀರಶೈವಧರ್ಮ ಹಬ್ಬಲು ಕಾರಣವಾಗಿದ್ದಾನೆ.[೧] ಆಂಧ್ರದಲ್ಲಿ ವೀರಶೈವ ಧರ್ಮ ಪ್ರಸಾರವಾಗಲು ಪಾಲ್ಕುರಿಕೆ ಸೋಮನಾಥ ಪ್ರಮುಖ ಪಾತ್ರ ವಹಿಸಿದ್ದನೆಂಬ ವಿಷಯ ಈಗಾಗಲೇ ಪ್ರಸಿದ್ಧವಾಗಿದೆ. ಅವನು ರಚಿಸಿರುವುದು ನಾಲ್ಕು ಕೃತಿಗಳನ್ನಾದರೂ ಬಸವಪುರಾಣ, ವೃಷಾಧಿಪಶತಕ ಮತ್ತು ಚತುರ್ವೇದಸಾರಮು ಬಸವಣ್ಣನವರ ಮಹತ್ವವನ್ನು ಶ್ರುತಪಡಿಸುವ ಕೃತಿಗಳಾಗಿವೆ. ಬಸವಪುರಾಣ ತುಂಬ ಮಹತ್ವದ ಕೃತಿ, ಅದಕ್ಕೆ ತೆಲುಗು ಭಾಷೆಯಲ್ಲಿ ಬಹು ಮಹತ್ವದ ಸ್ಥಾನವಿದೆ.

ತುಳುನಾಡಿಗೆ ಸ್ವಲ್ಪ ತಡವಾಗಿಯೇ ವೀರಶೈವಧರ್ಮ ಪ್ರವೇಶಿಸಿದ ಹಾಗೆ ಕಾಣುತ್ತದೆ. ಆ ನಾಡಿನ ಶಿವದೇವಾಲಯಗಳ ಶಿವನನ್ನು ಕ್ರಿ.ಶ. ೧೪೬೩ರ ಮೊದಲು ಮಹದೇವ ಎಂದು ಕರೆಯುತ್ತಿದ್ದರೆಂದೂ ವೀರಶೈವ ಪ್ರಭಾವಾನಂತರ ಮಹಾಲಿಂಗ ಎಂದು ಶಿವಲಿಂಗಗಳನ್ನು ಕರೆಯುವ ಪರಿಪಾಠ ಬಂದಿರಬೇಕೆಂದು ಪಿ. ಗುರುರಾಜಭಟ್ಟರು ಭಾವಿಸುತ್ತಾರೆ. ಅಲ್ಲದೆ ಕೋಟೇಶ್ವರದ ಕ್ರಿ.ಶ. ೧೩೬೨ ರ ಒಂದು ಶಾಸನ ನಂದಿನಾಥ ಬ್ರಂಗಿನಾಥ ವೀರಭದ್ರದೇವ ಮತ್ತು ಗಣಕುಮಾರ ಹೆಗ್ಗಡೆ ಸೇರಿ ಭೂಮಿಯನ್ನು ಕೊಂಡು ಕೋಟೇಶ್ವರ ದೇವರ ದೇವಾಲಯಕ್ಕೆ ದಾನ ನೀಡಿ ಅದರಲ್ಲಿ ಉಭಯ ಜಂಗಮರಿಗೆ ಕೋಟೆಯ ಹಬ್ಬದಲ್ಲಿ ಆಹಾರ ವ್ಯವಸ್ಥೆ ಮಾಡಬೇಕೆಂದು ತಿಳಿಸುತ್ತದೆ. ಆದ್ದರಿಂದ ಜಂಗಮರು ಬಹುವಾಗಿ ಮಾನ್ಯರಾಗಿದ್ದರೆಂದು ತಿಳಿಸುತ್ತಾರೆ.[೨]

ವೀರಶೈವಧರ್ಮ ಮೂರ್ತಿಪೂಜೆಯನ್ನು ವಿರೋಧಿಸಿದರೂ ಕ್ರಮೇಣ ಇತರ ಕೆಲವು ವಿಷಯಗಳಂತೆ ಇದನ್ನೂ ತನ್ನಲ್ಲಿ ಕ್ರಮೇಣ ಅಳವಡಿಸಿಕೊಂಡಿತು. ತಮಿಳುನಾಡಿನ ಪುರಾತನರನ್ನು, ಅಬ್ಬಲೂರಿನ ಏಕಾಂತದ ರಾಮಯ್ಯನ ಜೀವನದ ಕೆಲವು ಘಟನೆಗಳನ್ನು, ಗುಂಡಬ್ರಹ್ಮಯ್ಯರು ಶೂಲವೇರಿದ ವಿಷಯವನ್ನು ಮತ್ತು ಜೇಡರ ದಾಸಿಮಯ್ಯ ವಸ್ತ್ರ ನೀಡುವ ಘಟನೆಯನ್ನು ನಿರೂಪಿಸುವ ಶಿಲ್ಪಗಳ ವಿಷಯವನ್ನು ಈಗಾಗಲೇ ಗಮನಿಸಲಾಗಿದೆ. ಅಬ್ಬಲೂರಿನ ಸೋಮೇಶ್ವರ ದೇವಾಲಯದ ಶಿಲ್ಪ ಶಾಸನದಲ್ಲಿ 'ಸಿರಿಯಾಳ ಸೆಟ್ಟಿ ಚಂಗಳವ್ವೆ ದೇವಂಗೆ ಮಗನಿಕ್ಕುವ ಟಾವು'[೩] ಎಂಬ ಶಾಸನದ ಕೆಳಗೆ ಆ ಘಟನೆಯ ವಿವರಗಳು ಕೆತ್ತಲ್ಪಟ್ಟಿವೆ.[೪] ಈ ಶಾಸನೋಕ್ತ ಸಿರಿಯಾಳ ಸೆಟ್ಟಿ ತಮಿಳುನಾಡಿನ ಪುರಾತನ ಶಿವಭಕ್ತರಲ್ಲಿ ಒಬ್ಬನಾಗಿದ್ದಾನೆ. ಅದೇ ಅಬ್ಬಲೂರು ಶಾಸನದಲ್ಲಿ 'ಕುಂಬಾರ ಗು(ಂ)ಡನ ಮುಂದೆ ಬಂಧಾ(ದಾ)ಡಿದ ನಮ್ಮ ಶಿವನು'[೫] ಎಂಬ ಶಾಸನದ ಕೆಳಗೆ ಕುಂಬಾರ ಗುಂಡನು ಗಡಿಗೆ ಬಾರಿಸುತ್ತಿರುವ ಶಿಲ್ಪವನ್ನು ಕೆತ್ತಲಾಗಿದೆ.

ಬಸವಣ್ಣನವರ ವಿಗ್ರಹ ಪ್ರತಿಷ್ಠೆಯಾಗಿದ್ದಕ್ಕೆ ಕರ್ನೂಲಿನ ಶಾಸನದಲ್ಲಿ ಉಲ್ಲೇಖ ಕಂಡು ಬಂದರೂ ಅದು ಇನ್ನೂ ಬೆಳಕಿಗೆ ಬಂದಿಲ್ಲ. ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನ, ಉಜ್ಜಯಿನಿಯಲ್ಲಿರುವ ವಿಗ್ರಹವೊಂದನ್ನು[೬] ಗುರುತಿಸಿ ಎಚ್. ದೇವೀರಪ್ಪನವರು ಅದು ಬಸವಣ್ಣನವರೆಂದು ಹೇಳಿರುವರಾದರೂ ಅದು ವಿದ್ವಾಂಸರಿಂದ ಸಮ್ಮತಿ ಪಡೆದಂತಿಲ್ಲ. ಅದೇ ರೀತಿ ಶ್ರೀಶೈಲದ ಕದಳೀವನದಲ್ಲಿರುವ ಸ್ತ್ರೀವಿಗ್ರಹ ಅಕ್ಕಮಹಾದೇವಿಯದೆಂದು ಇನ್ನೂ ನಿರ್ಧಾರವಾದಂತಿಲ್ಲ.

---

೧. K.Lalita : Virasaivism in Andhra. ಪು. ೨೦.

೨. P. Gururaja Bhat : Studies in Tuluva History and culture ಪು. ೨೮೯:೯೦.

೩. ಎಇ XXIX ೧೯ ಪು. ೧೪೨ ಕ್ರಿ.ಶ. ೧೨೦೦.

೪. ಶಿಲ್ಪಚಿತ್ರಕ್ಕೆ ನೋಡಿ : ಎಂ. ಎಂ. ಕಲಬುರ್ಗಿ : ಶಾಶಿಶ ಪು. ೧೮೨ ರ ಎದುರು ಪುಟ.

೫. ಎಇ XXIX ೧೯ ಪು. ೧೪೨ ಕ್ರಿ.ಶ. ೧೨೦೦.

೬. ಎಚ್. ದೇವೀರಪ್ಪ : ಸಂಶೋಧನ ಸಂಪುಟ ಪು. ೪೪೨-೪೪೪.

ಬನವಾಸಿಯ ಮಧುಕೇಶ್ವರ ದೇವಾಲಯದ ಶಿಲಾಮಂಟಪದ ಸುತ್ತ ಹೆಸರಿನೊಂದಿಗೆ ಇರುವ ವಿಗ್ರಹಗಳು ಗಮನಾರ್ಹವಾಗಿವೆ. ಲಧೆ ಸೋಮಣ್ಣ, ಮೋಳಿಗೆ ಅಯ್ಯ, ನೂಲಿ ಚಂದಯ್ಯ, ಆಧಕಿ ಮಾರಯ್ಯ, ಇಕ್ಕದ ಮಾರಯ್ಯ, ಹಡಪದ ಅಪ್ಪಂಣ, ಹೋಳಿನ ಹಂಪಣ್ಣ, ಅಗ್ಗಣಿ ಹೊಂನಯ್ಯ ಮತ್ತು ಗುಂಡಬ್ರಹ್ಮಯ್ಯಗಳ ಹೆಸರಿನೊಂದಿಗೆ ದೊರೆಯುವುದು ವಿಶೇಷವಾಗಿದೆ. ಹಿರೇಮಗಲಗೇರಿ, ರಟ್ಟಿಹಳ್ಳಿ ಮುಂತಾದ ಶಾಸನಗಳಲ್ಲಿ ಉಕ್ತನಾದ ಮೂರುಜಾವಿದೇವನ ವಿಗ್ರಹ ಅಂತರವಳ್ಳಿ ಗ್ರಾಮದಲ್ಲಿ ಪೂಜೆಗೊಳ್ಳುತ್ತಿದೆ.[೧] ಈ ರೀತಿಯ ಶಿಲ್ಪಗಳ ಅಧ್ಯಯನ ಇನ್ನೂ ನಡೆಯಬೇಕಿದೆ.

ಕೆಲವು ಶಾಸನಗಳಲ್ಲಿ ವೀರಶೈವ ಧರ್ಮದ ಅಂಶಗಳು ಕಂಡುಬರುತ್ತದೆ. ಅವುಗಳನ್ನು ಗಮನಿಸಿದರೆ ವೀರಶೈವದ ಅಂಶಗಳು ಹೇಗೆ ತನ್ನ ಪ್ರಭಾವವನ್ನು ಬೀರಿದ್ದವು ಎಂಬುದು ತಿಳಿದುಬರುತ್ತದೆ. ಕೋಕಟನೂರು ಶಾಸನದಲ್ಲಿ ಭಾಯ್ಯ ಎನ್ನುವವನ ವರ್ಣನೆ ಬರುತ್ತದೆ. 'ಅಷ್ಟವಿಧಾರ್ಚನೆ ನೇಮಂ ನಿಷ್ಠೆಯ ಲಿಂಗಾನುಪ್ರೇಮ ಭಯ ಭಕ್ತಿಚಲಂ ಸ್ರಿಷ್ಟಿಗತಿ ಹೊಸತು ಸಿವಪಥ ದ್ರಿಷ್ಟಾಂತಂ ಕಂಡು ಭಾಯ್ಯ ಲಿಂಗನುಗೊಂಡಂ....... ಸ್ಥಾವರ ಜಂಗಮ ದ್ವಿವಿಧಲಿಂಗಮುಮೆಂಬ ಮಹಾ ಮಹಾ (ತ್ವ) ಮತ್ತಾವಗಜಾಂಡಕೋಟಿಗಳು ತಂಮವಳೋಕನ ಮಾತ್ರ ಪುಟ್ಟಿಕುಂ ಕಾವುದನಂತಕಾಲನುಮಿಸಾರ್ದ್ಧಾದಿ ಭಕ್ತಿಪುದೆಂದೊಡಿಂನು ಹೇಳಾವನು ಬಂಣ್ಣಿಪಂ ಸಿವಗಣದೊಂದು ಸಮಗ್ರ ಸಕ್ತಿಯಿಂ'[೨]. ಈ ಶಾಸನಭಾಗದಲ್ಲಿ ಬರುವ ಅಷ್ಟವಿಧಾರ್ಚನೆ, ಸ್ಥಾವರ ಜಂಗಮ, ದ್ವಿವಿಧಲಿಂಗ, ಸಿವಗಣ, ಸಿವಪಥ ಎಂಬಂತಹ ಮಾತುಗಳು ವೀರಶೈವ ಪರಿಭಾಷೆಗಳಾಗಿರುವುದು ಗಮನಾರ್ಹವಾಗಿದೆ.

ಧಾರವಾಡದ, ಅಲ್ಲಲ್ಲಿ ತ್ರುಟಿತವಾದ ಶಾಸನವೊಂದರಲ್ಲಿ 'ಶ್ರೀಮತ ಗುರುಲಿಂಗ ಜಂಗಮ ತಿದ್ದು ಪ್ರಶಾವಿಣಲು ಬಗೆಯ ಕೊಮಾರ ದೇವನ ಅಂಣು ಬಸವಿಸೆಟ್ಟಿಯ ಮಾ(ಡಿ) (ದ) ಸ (ತ್ರ) ರ ಶ್ರೀ ಸರಣು ಗುರುಲಿಂಗ ಜಂಗಮದ ಪದತೀರ್ಥ ಪಡದ ಅಂದು'[೩] ಎಂದು ಬರುತ್ತದೆ. ಇಲ್ಲಿಯೂ ಗುರುಲಿಂಗ ಜಂಗಮ, ಪದತೀರ್ಥ ಎಂಬ ಪದಗಳು ವೀರಶೈವ ಪರಿಭಾಷೆಗಳಾಗಿರುವುದನ್ನು ಕಾಣಬಹುದು.

ಹಿರೇಕೋಗಿಲೂರಿನ ಒಂದು ವೀರಗಲ್ಲಿನ ಪ್ರಕಾರ, ರಾಯದಂಡನಾಥ ಪೇಸಣಿ ಹನುಮ ಎಂಬ ಬಿರುದುಳ್ಳ ಚೌಂಡರಸ ಯುದ್ಧವೊಂದರಲ್ಲಿ ಹೋರಾಡಿ ಮಡಿಯಲು ಅವನ ಸಂಸ್ಕಾರವನ್ನು ವೀರಶೈವ ಪದ್ಧತಿಯಂತೆ ಮಾಡಿದ ಹಾಗೆ ಕಾಣುತ್ತದೆ. 'ಕಟ್ಟಿಸಿದುಪ್ಪರ ಮುಡಿಯಂ ಎತ್ತಿಸಿದಂ ಅಭವನೋಲ್ವ ನಂದಿಯ ಸಿಂದಂ ಹೋ ಉಘೇ ಎಂದೆನುತಂ ವೀರೇಶ್ವರನೊಪ್ಪುಗೌಡ ಚಲುಂಡನುಮಂ'[೪]. ಉಪ್ಪುರ, ಮುಡಿಕಟ್ಟಿಸಿದ್ದು, ಉಘೇ ಉಘೇ ಎಂದು ಕೂಗಿದ್ದು, ನಂದಿಧ್ವಜ, ವೀರೇಶ್ವರ ಬದ್ಧತೆ ಇವು ವೀರಶೈವ ಸಂಸ್ಕಾರವನ್ನು ತಿಳಿಸುತ್ತದೆ.

ಮಾಚಿದೇವ ಎನ್ನುವವನನ್ನು 'ಜಂಗಮ ಪರುಸಂ' ಎಂದು ಒಂದು ಶಾಸನ ಕರೆಯುತ್ತದೆ.[೫] ಇಂಗಳಗಿ ಶಾಸನದಲ್ಲಿ ಗಣಮಠ, ಸ್ಥಿರಪಟ್ಟ ಎಂಬಂತಹ ಪದಗಳು[೬] ಮತ್ತು ಗಣಮಠ,[೭] ಮಠಪತಿ,[೮] ವಿಭೂತಿಪಟ್ಟ,[೯] ಸಜ್ಜೆಯ ಲಿಂಗ[೧೦],

---

೧. ಎಂ. ಎಂ. ಕಲಬುರ್ಗಿ : 'ಶಿಲ್ಪಗಳಲ್ಲಿ ಶಿವಶರಣರು' ಸಿದ್ಧಗಂಗಾಶ್ರೀ. ಪು. ೭೩೫.

೨. ಕಇ II ಅಥಣಿ ೩೮ ಕ್ರಿ.ಶ. ೧೨೩೫.

೩. ಎಸ್ಐಐ XV ಧಾರವಾಡ ೬೮೯ ಕ್ರಿ.ಶ. ೧೩. ಶ.ಮಾ.

೪. (ರೈ) ಎಕ VII ಚನ್ನಗಿರಿ ೨೪ ಕ್ರಿ.ಶ. ೧೨೮೦.
ನೋಡಿ: ಶಿವಾನಂದ ಗುಬ್ಬಣ್ಣವರ : ಲಿಂಗಾಯತ ಸಂಸ್ಕಾರಗಳು ಪು. ೧೫೭.

೫. (ಮೈ) ಎಕ VII ನಾಗಮಂಗಲ ೧೭೨ ಕ್ರಿ.ಶ. ೧೨೬೦.

೬. ಸಾಧನೆ ೯:೪ ಚಿತಾಪುರ ಕ್ರಿ.ಶ. ೧೨೦೯ ಪು.೮೫-೮೬.

೭. ಎಸ್ಐಐ XV ಬಿಜಾಪುರ ೫೬ ಕ್ರಿ.ಶ. ೧೧೮೪; ಎಸ್ಐಐ XVIII ಬಿಜಾಪುರ ೨೦೩ ಕ್ರಿ.ಶ. ೧೨೦೮.

೮. ಬ.ಪ. ೨-೫ ಅರಕಲಗೂಡು ಕ್ರಿ.ಶ. ೧೩೦೨.

೯. (ರೈ) ಎಕ XI ದಾವಣಗೆರೆ ೧೦೫ ಕ್ರಿ.ಶ. ೧೨೧೮.

೧೦. ಎಸ್ಐಐ XV ಹುನಗುಂದ ೨೦೩ ಕ್ರಿ.ಶ. ೧೩೦೭.

ವೀರಶೈವಾಚಾರ್ಯ,[೧] ಸಮಯಾಚಾರ,[೨] ಕಲಿಯುಗ ವೀರಭದ್ರನುಂ ಮಹೇಸ್ವರ ಗಣಾವತಾರ ಸಿವಸಮಯವಾರ್ದ್ಧಿವರ್ದ್ಧನ ಸುಧಾಕರ,[೩] ಭೃತ್ಯಾಚಾರ,[೪] ಶಿವಶರಣ ದೀಕ್ಷಾಪುತ್ರ[೫] ಎಂಬಂತಹ ಪದಗಳು ಶಾಸನಗಳಲ್ಲಿ ಬಳಕೆಯಾಗಿವೆ. ಎಷ್ಟೋ ಶಾಸನಗಳಲ್ಲಿ ಶೈವ -ವೀರಶೈವ ಭೇದಗಳಿಲ್ಲದೆ ಎಲ್ಲರೂ ಒಟ್ಟಾಗಿ ಹೆಸರುಗೊಂಡಿರುವುದುಂಟು. ಬಸವಣ್ಣನವರ ನಂತರದ ಶಾಸನಗಳಲ್ಲಿ ಶೈವ ವಾತಾವರಣದಲ್ಲಿ ವೀರಶೈವ ಪರಿಭಾಷೆ ಬಳಕೆಯಾಗಿದೆ. ಈಗ ದೊರಕಿರುವಷ್ಟಾದರೂ ವೀರಶೈವದ ಶಾಸನೋಲ್ಲೇಖಗಳು ಲಭ್ಯವಾಗಲು ಕಾರಣ ದೇವಸ್ಥಾನ ನಿರ್ಮಾಣ ಮತ್ತು ದಾನ ಸ್ವೀಕಾರಗಳೇ ಎಂದು ಹೇಳಬಹುದು. ಅರ್ಜುನವಾಡದ ಶಾಸನವಾಗಲೀ, ಚೌಡದಾನಪುರದ ಶಾಸನಗಳಾಗಲೀ, ಸಿದ್ಧರಾಮನಿಗೆ ಸಂಬಂಧಿಸಿದ ಉಲ್ಲೇಖಗಳಾಗಲೀ, ರೇವಣಸಿದ್ಧನಿಗೆ ಸಂಬಂಧಿಸಿದ ಶಾಸನಗಳಾಗಲೀ ಅಥವಾ ಯಾವುದೇ ಶರಣರಿಗೆ ಸಂಬಂಧಿಸಿದ ಶಾಸನಗಳಾಗಲೀ ಕಾಣಿಸಿಕೊಳ್ಳುವುದು ದೇವಾಲಯ ನಿರ್ಮಾಣ ಸಂದರ್ಭದಲ್ಲಿ ಅಥವಾ ದಾನದತ್ತಿ ಸ್ವೀಕಾರ ಸಂದರ್ಭಗಳಲ್ಲಿಯೇ ಎನ್ನುವುದನ್ನು ಇದುವರೆಗೂ ಗಮನಿಸಿದ ಹಲವಾರು ಶಾಸನಗಳಿಂದ ಮನಗಾಣಬಹುದು.

ಶಾಸನಗಳಲ್ಲಿ ವೀರಶೈವದ ತತ್ವ-ಆಚಾರಗಳ ವಿಷಯ (ಉದಾ: ಷಟ್ಸ್ಥಲ ಸಿದ್ಧಾಂತ, ಅಷ್ಟಾವರಣ ಇತ್ಯಾದಿ) ಅಷ್ಟಾಗಿ ಕಾಣಿಸಿಕೊಳ್ಳುವುದಿಲ್ಲ. ಅಲ್ಲದೆ ಶಾಸನಗಳ ಉದ್ದೇಶ ಖಂಡಿತವಾಗಿಯೂ ಅವುಗಳ ನಿರೂಪಣೆ ಅಲ್ಲವೇ ಅಲ್ಲ. ಹೀಗಾಗಿ ಆ ಧರ್ಮದ ತಾತ್ವಿಕ ಪರಿಭಾಷೆಯನ್ನು ಅವುಗಳಲ್ಲಿ ನಿರೀಕ್ಷಿಸುವುದು ಸಾಧುವಾದುದಲ್ಲ. ಬಸವಣ್ಣನವರು ಮತ್ತು ಅವರ ಸಂಗಡಿಗರು ನಡವಳಿಕೆಯಲ್ಲಿ ಮತ್ತು ಸಾಹಿತ್ಯದಲ್ಲಿ ಸ್ವಲ್ಪ ಕಟುವಾಗಿಯೇ ದೇವಾಲಯ ನಿರ್ಮಾಣ ಮತ್ತು ದಾನದತ್ತಿಗಳನ್ನು[೬] ವಿರೋಧಿಸಿದ್ದರಿಂದ ಯಾವ ಶರಣರೂ ಸ್ವಲ್ಪ ಕಾಲ ಅವುಗಳನ್ನು ಮಾಡಹೊರಡಲು ಮುಂದಾಗಲಿಲ್ಲ. ಹೀಗಾಗಿ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಸಮಕಾಲೀನ ಉಲ್ಲೇಖಗಳು ಇಲ್ಲವೇ ಇಲ್ಲ ಎನ್ನುವಷ್ಟು ಅತ್ಯಲ್ಪವಾಗಿವೆ. ಮುಂದೆ ಕಲ್ಯಾಣದಿಂದ ಚದುರಿದ ಮೇಲೆ ಸಾಂಸ್ಕೃತಿಕವಾಗಿ ವೀರಶೈವ ಧರ್ಮವನ್ನು ರಕ್ಷಿಸಿ ಪ್ರಸಾರ ಮಾಡಹೊರಟಾಗ, ಕೇವಲ ಸಾಹಿತ್ಯದಿಂದ ಅದು ಅಸಾಧ್ಯ ಎಂದು ಶಿವಶರಣರು ಮನಗಂಡಿರಬೇಕು. ಅಲ್ಲದೆ ಹಿಂದಿನಿಂದ ಕಾಳಾಮುಖ ಪಾಶುಪತರು ಕಟ್ಟಿದ್ದ ಮತ ದೇವಾಲಯಗಳ ಸಾಂಸ್ಕೃತಿಕ ಮಹತ್ವವನ್ನು ಮತ್ತು ಅವುಗಳು ಜನಸಾಮಾನ್ಯರನ್ನು ತಲುಪಲು ಇರುವ ಅತ್ಯುತ್ತಮ ಮಾರ್ಗಗಳೆಂಬುದನ್ನು ಅರಿತುಕೊಂಡರು. ಇಷ್ಟಲಿಂಗದ ಆರಾಧನೆ ಎಷ್ಟೇ ಮಹತ್ವದ್ದೆಂದು ಅವರು ಭಾವಿಸಿದರೂ ಅದು

---

೧. ಶಿವಾನುಭವ ೬-೧ ಮಲಕಾಪುರ ಕ್ರಿ.ಶ. ೧೨೬೧.

೨. ಎಸ್‌ಐಐ XX ಶಿರಹಟ್ಟಿ ೨೦೬.

೩. (ರೈ) ಎಕ VI ಚಿಕ್ಕಮಗಳೂರು ೧ ಕ್ರಿ.ಶ. ೧೨೫೭.

೪. ಎಸ್‌ಐಐ XV ಮುದ್ದೇಬಿಹಾಳ ೫೬ ಕ್ರಿ.ಶ. ೧೧೮೪.

೫. (ರೈ) ಎಕ V ಅರಸಿಕೆರೆ ೧೪೯ ಕ್ರಿ.ಶ. ೧೨೭೮.

೬. i. ಕಲ್ಲಮನೆಯ ಮಾಡಿ ಕಲ್ಲ ದೇವರ ಮಾಡಿ ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೊ ಲಿಂಗ ಪ್ರತಿಷ್ಠೆ ಮಾಡಿದವರಿಗೆ ನಾಯಕ ನರಕ (ಅಪ್ರವ. ೨೧೦).

ii. ಅಂಗದ ಮೇಲೆ ಲಿಂಗದೇವವಿದ್ದಂತೆ, ಇತರ ಸ್ಥಾವರ ಲಿಂಗಕ್ಕೆ ಹೋಗಿ ಹೋಗಿ ದೇವರ ಕಂಡೆನೆಂದು ನಲಿದು ಉಲಿವುತ್ತಿಪ್ಪ ಸಲೆ ಮನುಜರುಗಳಿಗೆ ಉಪದೇಶವ ಮಾಡುವ ಗುರುವಿಂಗೆ ಪುಣ್ಯದ ಬಟ್ಟೆಯ ಕೊಡ ಉರಿಲಿಂಗತಂದೆ (ಸ. ಪುವ ೩೩ ಪು. ೪೨೦). ಹತ್ತು ಮತ್ತರ ಭೂಮಿ, ಬತ್ತದ ಹಯನು, ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು ಅವರ ನುಡಿಯ ಕೇಳಲಾಗದು (ಬವ. ೨೨೫ ಪು. ೯೪).

ವೈಯಕ್ತಿಕವಾದುದು; ಸ್ಥಾವರ ಲಿಂಗಾರಾಧನೆ ಬಹಿರಂಗ ಆರಾಧನೆ; ಅದು ಜನ ಸಮಷ್ಟಿಯನ್ನು ಒಂದೆಡೆ ಸಾಂಸ್ಕೃತಿಕವಾಗಿ ಒಟ್ಟಿಗೆ ತರುವಂತಹದು. ಬಹುಶಃ ಹೀಗಾಗಿ ಅದನ್ನು ಸಂಪೂರ್ಣವಾಗಿ ನಿರಾಕರಿಸುವುದು ಸಾಧ್ಯವಾಗಲಿಲ್ಲ.

ದೇವಾಲಯಗಳು ಗ್ರಾಮದ, ಊರಿನ, ನಗರದ ಸಾಂಸ್ಕೃತಿಕ ಕೇಂದ್ರಗಳಾಗಿ ನೂರಾರು ವರ್ಷಗಳಿಂದ ಬೆಳೆದು ಬಂದಿದ್ದವು. ಅಂಥ ಒಂದು ಸಾಂಸ್ಕೃತಿಕ ಸಂಘಟನೆಯನ್ನು ಒಡೆಯಲು ಹನ್ನೆರಡನೆಯ ಶತಮಾನದ ಶಿವಶರಣರು ಸ್ವಲ್ಪ ತೀವ್ರವಾಗಿಯೇ ಪ್ರಯತ್ನಿಸಿದರೂ ಅದನ್ನು ಸ್ವಲ್ಪ ಕಾಲ ಮಾತ್ರ ಅಲುಗಿಸಲು ಸಾಧ್ಯವಾಯಿತೆಂದು ಕಾಣುತ್ತದೆ. ಮುಂದಿನ ವೀರಶೈವ ಅನುಯಾಯಿಗಳು ಚದುರಿದ್ದ ಸಂಘಟನೆಯನ್ನು ಒಗ್ಗೂಡಿಸಿ ಸಂವರ್ಧನೆಗೊಳಿಸಬೇಕಾದ ಅನಿವಾರ್ಯ ಜವಾಬ್ದಾರಿಯನ್ನು ಹೊತ್ತಿದ್ದರು. ಹೀಗಾಗಿ ಮತ್ತೆ ಅಷ್ಟೇ ಶಕ್ತಿಯುತವಾಗಿ ದೇವಾಲಯ ನಿರ್ಮಾಣ, ದಾನ ದತ್ತಿಗಳು ಬೆಳೆದವು. ಆದ್ದರಿಂದ ಹನ್ನೆರಡನೆಯ ಶತಮಾನದ[೧] ಚೌಕಟ್ಟಿನಲ್ಲಿ ಮುಂದಿನ ವೀರಶೈವ ಧರ್ಮವನ್ನು ನೋಡುವುದು ಸಾಧ್ಯವಿಲ್ಲ. ಬದಲಾದ ಪರಿಸ್ಥಿತಿಗಳಿಗನುಸಾರವಾಗಿ ಅನೇಕ ಶೈವ ಶಾಖೆಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡುದರಿಂದ ಎಷ್ಟೋ ಕಡೆ ಶೈವ-ವೀರಶೈವ ಎಂದು ಶಾಸನಗಳಲ್ಲಿ ಬಿಡಿಸಿ ತೋರಿಸುವುದು ಕಠಿಣವಾಗುತ್ತದೆ. ಕಾಲಕ್ರಮೇಣ ಶೈವ ಅಂಶಗಳು ವೀರಶೈವದಲ್ಲಿ ಬೆರೆಯುತ್ತಾ ವೀರಶೈವ ತಾನು ಒಂದು ಕಾಲದಲ್ಲಿ ತಿರಸ್ಕರಿಸಿದ್ದ, ನಿರ್ಲಕ್ಷಿಸಿದ್ದ ಬೇರೆ ಬೇರೆ ಶೈವದ ಅಂಶಗಳನ್ನು ಅಂತರ್ಗತ ಮಾಡಿಕೊಂಡು ಬೆಳೆಯಿತು.

ವೀರಶೈವಧರ್ಮ ಕಲ್ಯಾಣದಿಂದ ಚದುರಿದ ಮೇಲೆ ನಾಡಿನ ಬೇರೆ ಬೇರೆ ಭಾಗಗಳಲ್ಲಿ ನೆಲೆಯೂರಲು ಪ್ರಯತ್ನಿಸುತ್ತಿತ್ತು.[೨] ಹದಿಮೂರನೆಯ ಶತಮಾನದ ಕೊನೆಯ ಭಾಗದ ಹೊತ್ತಿಗೆ ಅಲ್ಲಾವುದ್ದೀನ್ ಖಿಲ್ಜಿಯ ದಾಳಿ ಅನುಸರಿಸಿ ಬಂದ ಮಲ್ಲಿಕಾಫೂರನ ದಾಳಿಗಳ ಮೂಲಕ ಯಾದವ, ಹೊಯ್ಸಳರ ಸಾಮ್ರಾಜ್ಯಗಳು ನಾಶವಾಗಿ ಕರ್ನಾಟಕದ ಧಾರ್ಮಿಕ ಸಾಹಿತ್ಯಕ ಚಟುವಟಿಕೆಗಳು ಕೆಲ ಕಾಲ ತಟಸ್ಥವಾದಂತೆ, ದಿಕ್ಕು ತಪ್ಪಿದಂತೆ ಭಾಸವಾಗುತ್ತದೆ. ಮುಂದೆ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾಗಿ ಧರ್ಮ ಸಾಹಿತ್ಯ ಸಂಸ್ಕೃತಿಗಳು ಸ್ಥಿರತೆಯನ್ನು ಪಡೆಯತೊಡಗಿದವು. ವಿಜಯನಗರದ ಎರಡನೆಯ ದೇವರಾಯನ ಕಾಲದಲ್ಲಿ ಲಕ್ಕಣ ದಂಡೇಶನ ಸಂಘಟನೆ, ಅನಂತರ ಮುಂದೆ ತುಮಕೂರು ಜಿಲ್ಲೆಯ ಎಡೆಯೂರಿನಲ್ಲಿ ಸಿದ್ಧಲಿಂಗಯತಿಗಳ ನೇತೃತ್ವದಲ್ಲಿ ವೀರಶೈವದ ಸಂಘಟಿತ ಬೆಳವಣಿಗೆಯನ್ನು ಗುರುತಿಸಬಹುದು.[೩] ಈ ಮೇಲಿನ ಅಧ್ಯಯನ ವಿಷಯಗಳು ನಾವು ಹಾಕಿಕೊಂಡ ಅಧ್ಯಯನದ ಕಾಲವ್ಯಾಪ್ತಿಯಾಚೆ ಬರುವುದರಿಂದ ಆ ವಿಷಯವನ್ನು ವಿಸ್ತರಿಸಿಲ್ಲ.

---

೧. ಇತ್ತೀಚೆಗೆ ಹನ್ನೆರಡನೆಯ ಶತಮಾನದ ವಚನಕಾರರ ಚಳವಳಿಯ ಕಾರಣಗಳನ್ನು ಆರ್ಥಿಕ ಮತ್ತು ಸಾಮಾಜಿಕ ಕಾರಣಗಳಲ್ಲಿ ಮುಖ್ಯವಾಗಿ ಗುರುತಿಸುತ್ತಾ ಕಾಯಕ ಜೀವಿಗಳಿಗೆ ವಿಧಿಸಿದ ತೆರಿಗೆಯ ಆಧಿಕ್ಯ, ಅಗ್ರಹಾರ, ದೇವಾಲಯ ಮತ್ತು ವಿದ್ಯಾಭ್ಯಾಸಗಳ ಅವನತಿಗಳು ಕಾರಣಗಳೆಂಬಂತೆ ಸಿ. ವೀರಣ್ಣ ಪ್ರತಿಪಾದಿಸಿದ್ದಾರೆ. ಆದರೆ ತೆರಿಗೆಗಳ ಪರಿಕ್ರಮವನ್ನು ಗಮನಿಸಿದರೆ ಒಂದೇ ಕಾಲದಲ್ಲಿ ಒಂದೇ ಸ್ಥಳದಲ್ಲಿ ತೆರಿಗೆಯ ಆಧಿಕ್ಯವನ್ನು ಖಚಿತವಾಗಿ ತೋರಿಸುವುದು ಕಠಿಣ. ತೆರಿಗೆಗಳು ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತಾ ನಡೆದಿವೆ. ಆದ್ದರಿಂದ ಅವರ ವಾದಕ್ಕೆ ಸರ್ವ ಸಾಮಗ್ರಿಗಳ ಬೆಂಬಲದ ಅಗತ್ಯವಿದೆ. ಸಿ. ವೀರಣ್ಣ : ಹನ್ನೆರಡನೇ ಶತಮಾನದ ಕಾಯಕ ಜೀವಿಗಳ ಚಳವಳಿ. ಪು. ೧೩-೨೪.

೨. ಈ ವಿಷಯದ ಹೆಚ್ಚಿನ ಚರ್ಚೆಗೆ ಗಮನಿಸಿ: ಸಿ. ಯು. ಮಂಜುನಾಥ್ : 'ವಚನಯುಗದ ದ್ವಿತೀಯ ಘಟ್ಟ-ರಾಜಕೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆ'-ಡಾ. ಎಸ್. ವಿದ್ಯಾಶಂಕರ (ಸಂ) 'ವಚನ ಸಾಹಿತ್ಯ ದ್ವಿತೀಯ ಘಟ್ಟ' ಪು. ೧ರಿಂದ ೧೦.

೩. ವೀರಶೈವದ ಬೆಳವಣಿಗೆಯ ಚರ್ಚೆಗೆ ನೋಡಿ - ಎಂ. ಚಿದಾನಂದ ಮೂರ್ತಿ: ಲಿಂಗಾಯತ ಅಧ್ಯಯನಗಳು ಗ್ರಂಥದ 'ವೀರಶೈವ ಧರ್ಮದ ಬೆಳವಣಿಗೆಯಲ್ಲಿ ನಾಲ್ಕು ಪ್ರಮುಖ ಘಟ್ಟಗಳು' ಪು. ೩೬೨-೩೬೮.

# ೪. ಜೈನಧರ್ಮ

**ಜೈ**ನಧರ್ಮ ಕರ್ನಾಟಕದಲ್ಲಿ ವ್ಯಾಪಕವಾಗಿ ಬಾಳಿ ಬದುಕಿದ ಧರ್ಮಗಳಲ್ಲಿ ಒಂದು. ಕರ್ನಾಟಕದಲ್ಲಿ ಕ್ರಿ.ಪೂ. ೩ನೆಯ ಶತಮಾನದಿಂದ ಇದು ಅಸ್ತಿತ್ವದಲ್ಲಿದ್ದಿತೆಂದು ವಿದ್ವಾಂಸರು ಭಾವಿಸುತ್ತಾರೆ.[೧] ಜೈನಧರ್ಮದ ಮೂರು ಪ್ರಮುಖ ಶಾಖೆಗಳಾದ ದಿಗಂಬರ, ಶ್ವೇತಾಂಬರ ಮತ್ತು ಯಾಪನೀಯಗಳು ಈ ನಾಡಿನಲ್ಲಿ ಅಸ್ತಿತ್ವದಲ್ಲಿದ್ದವು. ಈ ನಾಡಿನ ಪ್ರಮುಖ ರಾಜಮನೆತನಗಳ ಬೆಂಬಲ, ಪ್ರೋತ್ಸಾಹಗಳನ್ನು ಗಳಿಸಿಕೊಂಡು ಬೆಳೆಯುತ್ತಾ ಬಂದ ಜೈನಧರ್ಮ ನಾಡಿನ ಮೂಲೆ ಮೂಲೆಗಳಿಗೆ ಹರಡಿತು. ದಿಗಂಬರ ಮತ್ತು ಶ್ವೇತಾಂಬರ ಶಾಖೆಗಳು ತಮ್ಮ ಶಾಖೆಯೇ ಪ್ರಾಚೀನ, ಆದ್ಯ ಎಂದು ಸಾಧಿಸಿ ತೋರಿಸಲು ಪ್ರಯತ್ನಿಸಿರುವುದುಂಟು.[೨] ಈ ಶಾಖೆಗಳು ಇದ್ದಕ್ಕಿದ್ದ ಹಾಗೆ ಒಡೆದು ಮೂಡಿದುವಲ್ಲ; ಕಾಲಕ್ರಮೇಣ ಪರಸ್ಪರ ಭೇದಗಳು ಬೆಳೆಯುತ್ತಾ ಹೋಗಿರುವುದು ಕಂಡುಬರುತ್ತದೆ. ತಾತ್ವಿಕವಾಗಿ ಶ್ವೇತಾಂಬರ ಮತ್ತು ದಿಗಂಬರ ಶಾಖೆಗಳಲ್ಲಿ ಅಂಥ ದೊಡ್ಡ ಭಿನ್ನಾಭಿಪ್ರಾಯಗಳು ಇಲ್ಲದೇ ಹೋದರೂ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿವೆ.[೩]

ಶ್ವೇತಾಂಬರರು ಸಾಕಷ್ಟು ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಇದ್ದರೆಂಬುದಕ್ಕೆ ಕದಂಬರ ತಾಮ್ರಪಟಗಳು ಮಾತ್ರ ಸಾಕ್ಷಿಯಾದರೂ ಆ ಪಂಥ ಎಂದೂ ಪ್ರಬಲವಾಗಿ ಬೆಳೆದಂತಿಲ್ಲ. ಅಲ್ಪ ಸಂಖ್ಯಾತರಾಗಿದ್ದ ಅವರು ಕ್ರಮೇಣ ಅಳಿದು ಹೋದರೆಂದು ಕಾಣಿಸುತ್ತದೆ. ಹತ್ತನೆಯ ಶತಮಾನದ ಸೋಮದೇವನ ಯಶಸ್ತಿಲಕ ಚಂಪೂವಿನಲ್ಲಾಗಲಿ ಹನ್ನೆರಡನೆಯ ಶತಮಾನದ ಬ್ರಹ್ಮಶಿವನ ಸಮಯಪರೀಕ್ಷೆಯಲ್ಲಾಗಲೀ ಶ್ವೇತಾಂಬರರ ಉಲ್ಲೇಖಗಳ ಅಭಾವ ಅವರ ಇಲ್ಲದಿರುವಿಕೆಯನ್ನು ಅಥವಾ ಇದ್ದರೂ ತುಂಬ ಗೌಣ ಸ್ಥಿತಿಯನ್ನು ಸೂಚಿಸುವ ಹಾಗೆ ಕಾಣುತ್ತದೆ.

ದಿಗಂಬರ ಶಾಖೆ ಕರ್ನಾಟಕದಲ್ಲಿ ಹೆಚ್ಚು ಶಕ್ತಿಯುತವಾಗಿ, ಪ್ರಭಾವಶಾಲಿಯಾಗಿ ಬೆಳೆದು ಬಂದಿತು. ಅದು ಬಹು ಪ್ರಾಚೀನ ಕಾಲದಲ್ಲಿಯೇ ಶ್ರವಣಬೆಳಗೊಳ ಮತ್ತು ಕೊಪ್ಪಳಗಳನ್ನು ಕೇಂದ್ರಗಳನ್ನಾಗಿ ಮಾಡಿಕೊಂಡು ಕರ್ನಾಟಕದ ಎಲ್ಲ ಪ್ರಮುಖ ರಾಜಮನೆತನಗಳ ಬೆಂಬಲದಿಂದ ಸಮೃದ್ಧವಾಗಿ ಬೆಳೆಯಿತು. ಮೂರು ಶಾಖೆಗಳಲ್ಲಿ ದಿಗಂಬರ ಶಾಖೆಯೇ ಅತ್ಯಂತ ಪ್ರಬಲವಾಗಿ ಬೆಳೆದದ್ದು. ಈ ಶಾಖೆ ಸುಮಾರು ಹತ್ತನೆಯ ಶತಮಾನದವರೆಗಂತೂ ಪ್ರಬಲ ಪ್ರತಿಸ್ಪರ್ಧಿಯೇ

---

೧. ಟಿ.ಕೆ. ತುಕೋಳ್ : 'ಕರ್ನಾಟಕದಲ್ಲಿ ಜೈನ ಪರಂಪರೆ', ಕರ್ನಾಟಕದಲ್ಲಿ ಜೈನ ಧರ್ಮ. ಒಂದು ಅಧ್ಯಯನ, ಪು. ೨.

೨. Muni Uttam Kamal Jain : Jaina Sects and Schools, ಪು. ೩೯-೪೦; ೪೦-೪೨; ಕಶಾಸಾಂಅ ಪು. ೭೧.

೩. ದಿಗಂಬರರು ೨೪ ಜನ ತೀರ್ಥಂಕರರನ್ನು ಹೇಳುತ್ತಾರೆ. ಅವರೆಲ್ಲರೂ ಪುರುಷರು. ಸ್ತ್ರೀಯರಿಗೆ ಮೋಕ್ಷವಿಲ್ಲ. ಪುರುಷನಾಗಿ ಹುಟ್ಟಿ ಮೋಕ್ಷ ಪಡೆಯಬೇಕು. ಇವರ ತೀರ್ಥಂಕರರ ಮೂರ್ತಿಗಳೆಲ್ಲವೂ ನಗ್ನ, ಮುಖ್ಯವಾಗಿ ಈ ಪಂಥದ ಮುನಿಗಳು ವಸ್ತ್ರ ಧರಿಸುವುದಿಲ್ಲ. ಶ್ವೇತಾಂಬರರು- ಹೆಸರೇ ಸೂಚಿಸುವಂತೆ ಬಿಳಿ ಬಟ್ಟೆಯನ್ನು, ಧರಿಸುವವರು ಸ್ತ್ರೀಯರಿಗೆ ಮೋಕ್ಷವಿದೆಯೆಂದು ಹೇಳುತ್ತಾರೆ. ಇವರ ತೀರ್ಥಂಕರ ವಿಗ್ರಹಗಳು ಅಲಂಕೃತವಾಗಿರಬಹುದು ಇತ್ಯಾದಿ. ಇಂಥ ವ್ಯತ್ಯಾಸಗಳು ಕಂಡುಬರುತ್ತವೆ.

ಇಲ್ಲವೇನೊ ಎನ್ನುವಂತೆ ಬೆಳೆಯಿತು. ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಸ್ವಲ್ಪ ಮಟ್ಟಿಗೆ ಪ್ರಭಾವಶಾಲಿಗಳಾಗಿದ್ದ ಯಾಪನೀಯ ಪಂಥದ ಉಲ್ಲೇಖಗಳು ಮತ್ತು ಇತರ ಪ್ರದೇಶಗಳಲ್ಲಿ ಚದುರಿದಂತೆ ಅಲ್ಲಲ್ಲಿ ಕೆಲವು ಉಲ್ಲೇಖಗಳನ್ನು ಬಿಟ್ಟರೆ ಜೈನ ಧರ್ಮವೆಂದರೆ ಕರ್ನಾಟಕದ ಮಟ್ಟಿಗೆ ದಿಗಂಬರವೆಂದೇ ಭಾವಿಸಬಹುದು.

**ಯಾಪನೀಯ ಪಂಥ:**

ಯಾಪನೀಯ ಪಂಥ ಉತ್ತರ ಕರ್ನಾಟಕದಲ್ಲಿ ಸಾಕಷ್ಟು ಶಕ್ತಿಶಾಲಿಯಾಗಿ ಕೆಲಕಾಲ ಪ್ರಚಲಿತವಾಗಿದ್ದುದಕ್ಕೆ ಶಾಸನಾಧಾರಗಳಿವೆ. ಈ ಶಾಖೆ ಉತ್ತರ ಭಾರತದಲ್ಲಿ ಪ್ರಚಾರದಲ್ಲಿದ್ದುದಕ್ಕೆ ಖಚಿತ ಆಧಾರಗಳು ಇದ್ದಂತಿಲ್ಲ.[೧] ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಲಿತವಿದ್ದುದಕ್ಕೆ ಬೆಳಗಾಂ, ಧಾರವಾಡ, ಮತ್ತು ಗುಲ್ಬರ್ಗಾ ಜಿಲ್ಲೆಯ ಕೆಲವು ಸ್ಥಳಗಳು ಆಧಾರಗಳನ್ನು ಒದಗಿಸುತ್ತವೆ. ಹಾಸನ ಜಿಲ್ಲೆಯ ಅರಸಿಕೆರೆಯಲ್ಲಿ ಯಾಪನೀಯ ಪಂಥದ ಎರಡು ಶಾಸನಗಳನ್ನು ಎಸ್. ಶೆಟ್ಟರ್ ಅವರು ತೋರಿಸಿಕೊಟ್ಟಿದ್ದಾರೆ.[೨] ಅಲ್ಲದೆ ಅವರು ದಕ್ಷಿಣ ಮೈಸೂರಿನ ಸಾಲಿಗ್ರಾಮ, ಸಿದ್ಧ ಕೇದಾರದಲ್ಲಿ ಸಿಕ್ಕ ಶಾಸನಗಳು ಯಾಪನೀಯ ಸಂಘದ ಶಾಸನಗಳಾಗಿವೆ ಎಂದು ಭಾವಿಸುತ್ತಾರೆ. ಹಾಸನ, ಶಿವಮೊಗ್ಗ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಅಲ್ಲಲ್ಲಿ ಯಾಪನೀಯ ಸಂಘದ ಸ್ಪಷ್ಟ ಕುರುಹುಗಳಿವೆ.[೩]

ಯಾಪನೀಯ ಶಾಖೆಯ ಮೂಲದ ಬಗ್ಗೆ ಹಲವು ವಿವರಣೆಗಳಿವೆ. ಶ್ರೀಕಲಶನೆಂಬ ಶ್ವೇತಾಂಬರ ಯತಿ ಆ ಸಂಘವನ್ನು ಕಲ್ಯಾಣ ನಗರದಲ್ಲಿ ವಿಕ್ರಮ ಶಕೆ ೨೦೫ ರಲ್ಲಿ ಸ್ಥಾಪಿಸಿದನೆಂಬ ಅಭಿಪ್ರಾಯವಿದೆ.[೪] ಇನ್ನೊಂದು ಕತೆಯ ಪ್ರಕಾರ ಕರಹಾಟದ ರಾಣಿಯೊಬ್ಬಳು ರಾಜನನ್ನು ಮೆಚ್ಚಿಸಲು ಶ್ವೇತಾಂಬರ ಮುನಿಗಳನ್ನು ವಸ್ತ್ರ ತ್ಯಜಿಸುವಂತೆ ಕೇಳಿಕೊಂಡಳು; ಅವರು ಅವಳ ಪ್ರಾರ್ಥನೆಯಂತೆ ದಿಗಂಬರರಾದರು; ಅವರೇ ಯಾಪನೀಯರು. ಅವರು ದಿಗಂಬರ ರೂಪದಲ್ಲಿದ್ದರೂ ಶ್ವೇತಾಂಬರ ಪದ್ಧತಿಯನ್ನು ಅನುಸರಿಸಿದರು.[೫] ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಪಡುವಂತೆ ಯಾಪನೀಯ ಸಂಘಕ್ಕೆ ಕಾರಣಕರ್ತನಾದವನು ಉತ್ತರ ಭಾರತದ ಶ್ವೇತಾಂಬರ ಸಂಪ್ರದಾಯದ ವ್ಯಕ್ತಿ; ಅವನು ಸಂಘವನ್ನು ಸ್ಥಾಪಿಸಿದ್ದು ದಕ್ಷಿಣ ಭಾರತದಲ್ಲಿ, ಬಹುಶಃ ಕರ್ನಾಟಕದಲ್ಲಿ.[೬]

ದಿಗಂಬರ ಶಾಖೆಯವರು ಯಾಪನೀಯವನ್ನು ತುಂಬ ತಿರಸ್ಕಾರದಿಂದ ಕಾಣುತ್ತಾರೆ. ಇಂದ್ರನಂದಿಯು ತನ್ನ ನೀತಿಸಾರದಲ್ಲಿ ಐದು ಪಂಥಗಳನ್ನು ಜೈನಾಭಾಸಗಳೆಂದು ಕರೆಯುವಾಗ ಅದರಲ್ಲಿ ಯಾಪನೀಯವನ್ನು ಸೇರಿಸಿದ್ದಾನೆ.[೭]

ಗೋಪುಚ್ಛಿಕಾಃ ಶ್ವೇತವಾಸಾ ದ್ರಾವಿಡೋ ಯಾಪನೀಯಕಃ
ನಿಃಪಿಂಚಶ್ಚೇತಿ ಪಂಚೈತೇ ಜೈನಾಭಾಸಃ ಪ್ರಕೀರ್ತಿತಾಃ

---

೧. ಎಂ. ಚಿದಾನಂದ ಮೂರ್ತಿ : ಕಶಾಸಾಂಅ, ಪು. ೭೫.

೨. ಎಸ್. ಶೆಟ್ಟರ್ : 'ಅರಸಿಕೆರೆಯಲ್ಲಿ ದೊರೆತ ಜೈನಧರ್ಮದ ಯಾಪನೀಯಸಂಘದ ಶಿಲಾಶಾಸನಗಳು' ಜೆ.ಕೆ.ಯು. X, ಪು. ೧೫೯-೧೬೬.

೩. ಹಂಪನಾ : 'ಕಸಲಗೆರೆ ಶಾಸನ: ಯಾಪನೀಯ ದಾಖಲೆ'. ಚಂದ್ರಕೊಡೆ ಪು. ೧೧-೧೩.

೪. A.N.Upadhye : 'Upadhye Papers' ಪು. ೧೯೫. ಈ ಗ್ರಂಥದಲ್ಲಿ ಪ್ರಕಟವಾಗಿರುವ 'More light on Yapaniyas : A Jaina sect.' ಎಂಬ ಲೇಖನದಲ್ಲಿ ಯಾಪನೀಯ ಪಂಥದ ವಿಷಯವನ್ನು ವಿವರವಾಗಿ ಲೇಖಕರು ಚರ್ಚಿಸಿದ್ದಾರೆ.

೫. ಅದೇ, ಪು. ೧೯೬.

೬. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೭೬.

೭. A.N.Upadhye : ಪೂರ್ವೋಕ್ತ, ಪು. ೧೯೪.

ಶ್ರವಣಬೆಳಗೊಳದಲ್ಲಿ ಯಾಪನೀಯ ಪಂಥಕ್ಕೆ ಸೇರಿದ ಒಂದು ಶಾಸನವೂ ದೊರೆತಿಲ್ಲ. ಆದ್ದರಿಂದ ಈ ಪಂಥ ಉತ್ತರ ಕರ್ನಾಟಕ ಮತ್ತು ಮಧ್ಯ ಕರ್ನಾಟಕದ ಕೆಲವು ಪ್ರದೇಶಗಳಿಗೆ ಮಾತ್ರ ಸೀಮಿತವಾಗಿದ್ದಿತೆಂದು ಶಾಸನಾಧಾರಗಳಿಂದ ಭಾವಿಸಬಹುದಾಗಿದೆ.

ಯಾಪನೀಯದ ಮೂಲಾರ್ಥ ಸ್ವಲ್ಪ ಸಮಸ್ಯಾತ್ಮಕವಾಗಿರುವುದನ್ನೂ ತಿಳಿಸಿ ಆ ಪದದ ವಿವಿಧ ರೂಪಗಳನ್ನು ಉಪಾಧ್ಯೆಯವರು ನೀಡುತ್ತಾರೆ. (ಯಾಪನೀಯ, ಜಾಪನೀಯ, ಯಾಪನೀ, ಯಾಪುಲಿಯ, ಆಪುಲಿಯ,[೧] ಜಾಪುಲಿ, ಜಾವುಲಿಯ, ಜಾವಿಲಿಯ ಇತ್ಯಾದಿ). ಅನಂತರ 'ಯಂ' ಧಾತುವಿನಿಂದ ನಿಷ್ಪತ್ತಿ ಮಾಡಿ ಯಾವ ಜೈನ ಯತಿಗಳು ಯಮ-ಯಾಮದ ಜೀವನವನ್ನು ನಡೆಸುವರೋ ಅವರ ಪಂಥ ಯಾಪನೀಯವೆಂಬ ಪಂಥವಾಗಿ ಬೆಳೆದು ಬಂದಿರಬೇಕು ಎಂದು ಅಭಿಪ್ರಾಯ ಪಡುತ್ತಾರೆ.[೨]

ಯಾಪನೀಯ ಪಂಥ ಕದಂಬರ ಕಾಲದಿಂದಲೂ ದಾನ ದತ್ತಿಗಳನ್ನು ಸ್ವೀಕರಿಸಿ ಬಹುವಾಗಿ ಮಾನ್ಯತೆ ಪಡೆದಿದ್ದಿತು. ಮುಂದೆಯೂ ಕೂಡ ಆ ಪಂಥ ಸಾಕಷ್ಟು ಮಾನ್ಯತೆ ಪಡೆದು ಮುಂದುವರಿದಿರುವುದು ಶಾಸನಗಳಿಂದ ಖಚಿತವಾಗುತ್ತದೆ. ಒಂದು ಸಂಯೋಜಿತ ಶಾಸನದಲ್ಲಿ, ಲಚ್ಚಿಯಬ್ಬರಸಿಯು ಹೂಲಿಯ ಮಹಾಜನರಿಂದ ಭೂಮಿಯನ್ನು ಪಡೆದು ಬಸದಿಯನ್ನು ಮಾಡಿಸಿ ಯಾಪನೀಯ ಸಂಘದ ಪುನ್ನಾಗ ವೃಕ್ಷ ಮೂಲಗಣದ ಬಾಲಚಂದ್ರ ಭಟ್ಟಾರಕ ದೇವರ ಕಾಲುತೊಳೆದು ದಾನವನ್ನು ಮಾಡಿದ ವಿಷಯ ತಿಳಿದು ಬರುತ್ತದೆ. ಈ ದಾನದ ಕಾಲ ಕ್ರಿ.ಶ.೧೦೪೫. ಮುಂದೆ ಸೇವುಣ ಹೆಗ್ಗಡೆ ತನ್ನ ಮುತ್ತವ್ವೆ ಲಚ್ಚಿಯಬ್ಬರಸಿ ಮಾಡಿಸಿದ ಬಸದಿಯಲ್ಲಿದ್ದ ಋಷಿಯರ ಆಹಾರ ದಾನಕ್ಕಾಗಿ ಆಚಾರ್ಯ ರಾಮಚಂದ್ರ ದೇವರ ಕಾಲು ತೊಳೆದು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಈ ದಾನದ ಕಾಲ ಕ್ರಿ.ಶ. ೧೧೪೫.[೩]

ಬೆಳಗಾಂ ಜಿಲ್ಲೆಯ ಬಡ್ಲಿ ಗ್ರಾಮಕ್ಕೆ ಸೇರಿದ ಒಡೆದು ಹೋಗಿರುವ ಶಾಸನದಲ್ಲಿ ಯಾಪನೀಯ ಪಂಥಕ್ಕೆ ಸೇರಿದ ಕಾರೆಯ ಗಣದ ಮಹಾಮಂಡಲಾಚಾರ್ಯರಾದ ಮಾಧವ ಭಟ್ಟಾರಕ, ವಿನಯದೇವ, ಕೀರ್ತಿಭಟ್ಟಾರಕ, ಜಿನದೇವ, ಕನಕ ಪ್ರಭ ಮತ್ತು ಶ್ರೀಧರ ತ್ರೈವಿಧ್ಯರ ಹೆಸರುಗಳು ಬರುತ್ತವೆ. ಶಾಸನ ಒಡೆದು ಹೋಗಿರುವುದರಿಂದ ಹೆಚ್ಚಿನ ವಿವರಗಳು ತಿಳಿದುಬರುವುದಿಲ್ಲ.[೪]

ಹನ್ನೆರಡು ಹದಿಮೂರನೆಯ ಶತಮಾನದಲ್ಲಿ ಯಾಪನೀಯರು ಧಾರವಾಡ ಜಿಲ್ಲೆಯ ಪ್ರದೇಶದಲ್ಲಿ ಹೆಚ್ಚು ಚಟುವಟಿಕೆಗಳಿಂದ ಪ್ರಭಾವಶೀಲರಾಗಿದ್ದಂತೆ ಕಂಡುಬರುತ್ತದೆ. ಗರಗಿನ ಶಾಸನವೊಂದು 'ಯಾಪನೀಯ ಸಂಘ ಕುಮುಡಿ ಗಣದ ಬೆಳದಿಗೆ(ಯಿ)' ಎಂದು ಶಾಸನವಿರುವ ಹೊಲ ಅವರಿಗೆ ಸೇರಿದ್ದಿತೆಂಬುದನ್ನು ಸೂಚಿಸುವ ಹಾಗೆ ಕಾಣುತ್ತದೆ.[೫] ಅದೇ ಊರಿನ ಇನ್ನೊಂದು

---

೧. ಎಂ. ಚಿದಾನಂದ ಮೂರ್ತಿ : 'ಯಾಪನೀಯ (ಜಾಪುಲಿ=ಆಪುಲಿ) ಸಂಘದ ಒಂದು ಅಪೂರ್ವ ಉಲ್ಲೇಖ' ಸಾಧನೆ ೧೦-೩, ಪು. ೧೩೯-೧೪೦. ವಡ್ಡಾರಾಧನೆಯಲ್ಲಿ ಬಂದಿರುವ ಜಾಪುಲಿ ಸಂಘವು ಯಾಪನೀಯವಾಗಿದೆಯೆಂದೂ ಮತ್ತು ರಾಘವಾಂಕನ ಸೋಮನಾಥ ಚಾರಿತ್ರದಲ್ಲಿ (೫-೪೩) ಬರುವ ಮೂಲ ಸಂಘ, ಆಪುಲಿ ಸಂಘಗಳು ಕ್ರಮವಾಗಿ ಮೂಲ ಸಂಘ ಮತ್ತು ಯಾಪನೀಯ (ಜಾಪುಲಿ) ಸಂಘವನ್ನು ಸೂಚಿಸುವುದನ್ನು ಎಂ. ಚಿದಾನಂದ ಮೂರ್ತಿಯವರು ತೋರಿಸಿದ್ದಾರೆ.

೨. A.N.Upadhye : ಪೂರ್ವೋಕ್ತ, ಪು. ೧೯೪.

೩. ಎಇ XVIII ಪರಸಗಡ ೨೨ ಬಿ ಕ್ರಿ.ಶ. ೧೦೪೩ ಮತ್ತು ೧೧೪೫. ಪು. ೧೭೬-೭೬.

೪. ಕಇ I ಸೌಂದತ್ತಿ ೩೨ ಕ್ರಿ.ಶ. ೧೨೧೯.

೫. ಎಸ್‌ಐಐ XV ಧಾರವಾಡ ೬೧೮ ಕ್ರಿ.ಶ. ೧೩ ಶ.ಮಾ.

ಶಾಸನ 'ಯಾಪನೀಯ ಸಂಘ ಕುಂಮಡಿ ಗಣದ ಆಚಾರ್ಯ್ಯ ಶಾಂತಿ ವೀರದೇವರು ಸಮಾಧಿಯಿಂ ಮುಡಿಪಿ ಮೋಕ್ಷಪದ'ವನ್ನು ಪಡೆದ ವಿಷಯವನ್ನು ತಿಳಿಸುತ್ತದೆ.[೧] ಶಿರೂರಿನ ಶಾಸನವೊಂದು ಯಾಪನೀಯ ಸಂಘದ ವೃಕ್ಷಮೂಲಗಣದ ಸಿರಿಯ ಕುಸುಮ ಜಿನಾಲಯಕ್ಕೆ... ಕಾಳಿಸೆಟ್ಟಿ ಪಾರ್ಶ್ವ ಭಟ್ಟಾರಕ ಪ್ರತಿಮೆಯನ್ನು ಮಾಡಿಸಿಕೊಟ್ಟ ವಿಷಯವನ್ನು ತಿಳಿಸುತ್ತದೆ.[೨] ಹೆಬ್ಬಳ್ಳಿಯ ಒಡೆದ ಶಾಸನವೊಂದು ಯಾಪನೀಯ ಸಂಘದ ಪುನ್ನಾಗ ವೃಕ್ಷ ಮೂಲಗಣಕ್ಕೆ ಸಂದ ದಾನದ ವಿಷಯವನ್ನು ತಿಳಿಸುತ್ತದೆ.[೩] ತಡಕೋಡಿನ ಶಾಸನವೊಂದು ಸಂಸ್ಕೃತ ಭಾಷೆಯಲ್ಲಿದೆ. ಅದರಲ್ಲಿ ಯಾಪನೀಯ ಸಂಘದ ಸ್ವರ್ಣಪಾಷಾಣ ಗಚ್ಛಕ್ಕೆ ಮತ್ತು ವೃಕ್ಷಮೂಲಗಣಕ್ಕೆ ಸೇರಿದ ಬಾಲಚಂದ್ರರ ಶಿಷ್ಯರಾದ ವಾಸುಪೂಜ್ಯರಿಗೆ ರಕ್ಷಣೆ ಕೋರಿ ಚಂದ್ರನಾಥಜಿನನಿಗೆ ಪ್ರಾರ್ಥನೆ ಸಲ್ಲಿಸಲಾಗಿದೆ.[೪] ಗೋವೆಯ ಕದಂಬರ ಶಾಸನವೊಂದು ಮಣಿಗುಂಡಗೆ ಅಥವಾ ಮಾಣಿಕ್ಯ ಪುರದ ನಗರ ಜಿನಾಲಯಕ್ಕೆ ಸೇರಿದ ಯಾಪನೀಯ ಗುರುಪರಂಪರೆಯನ್ನು ಕೊಡುತ್ತದೆ.[೫] ಧಾರವಾಡ ಜಿಲ್ಲೆಯ ಕಲ್ಘಟಗಿ ತಾಲ್ಲೂಕಿನ ಮಲ್ಕನ್ ಕೊಪ್ಪದ ಶಾಸನವೊಂದು ಬಮ್ಮಿ ಸೆಟ್ಟಿ ಯಾಪನೀಯ ಸಂಘದ ಮೈಳಾಪಾನ್ವಯ ಮತ್ತು ಕಾರೆಯ ಗಣದ ಶಾಂತವೀರ ದೇವನ ಪಾದ ತೊಳೆದು ತಾನು ಕಟ್ಟಿಸಿದ ಬಸದಿಗೆ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಅಲ್ಲದೆ ಅದೇ ಸಂದರ್ಭದಲ್ಲಿ ಎಕ್ಕೋಟಿ ಚಕ್ರವರ್ತಿಗಳು ಜೋಗವಟಿಗೆಯನ್ನು ದಾನ ಮಾಡಿದ ವಿಷಯವನ್ನೂ ಅದು ತಿಳಿಸುತ್ತದೆ.[೬]

ಯಾಪನೀಯ ಸಂಘಕ್ಕೆ ಸೇರಿದ ಶಾಸನಗಳು ಹೆಚ್ಚಾಗಿ ದೊರಕಿರುವುದು ಬೆಳಗಾಂ, ಧಾರವಾಡ ಜಿಲ್ಲೆಯ ಪ್ರದೇಶಗಳಲ್ಲಿಯೇ. ಎಸ್. ಶೆಟ್ಟರ್ ಅವರು ಆ ಸಂಘದ ಅರಸಿಕೆರೆಯ ಎರಡು ಶಾಸನಗಳನ್ನು ಗುರುತಿಸಿ ಪ್ರಕಟಿಸಿದ್ದಾರೆ. ಮೊದಲನೆಯ ಶಾಸನ ಎಕ್ಕೋಟಿ ಜಿನಗೃಹಕ್ಕೆ ಯಾಪನೀಯ ಸಂಘದ ಮಡುವಣಗಣದ ಕುಮಾರ ಕೀರ್ತಿ ಸಿದ್ಧಾಂತ ದೇವರ ಶಿಷ್ಯ ಪಾರಿಶ್ವ ಪಂಡಿತರ ಕಾಲು ತೊಳೆದು ದಾನ ಮಾಡಿದ ವಿಷಯ ತಿಳಿಸುತ್ತದೆ. ಮಾಣಿಕಶೆಟ್ಟಿಯನ್ನು ಶಾಸನ 'ಪೊಂನಾಗವ್ರಿಕ್ಷಮೂಲಗಣ (ಯಾಪನೀಯ) ಸಂಘದ ಗುಡ್ಡ' ಎಂದು ಕರೆದಿದೆ. ಈ ಶಾಸನದ ೫೪ನೆಯ ಸಾಲಿನಲ್ಲಿ 'ಕಾಳಾಮುಖ ಪ್ರತಿಬದ್ಧ' ಎಂಬ ಮಾತು ಬಂದಿದೆ.[೭] ಈ ಶಾಸನದಲ್ಲಿ ಎಲ್ಲೆಲ್ಲಿ ಯಾಪನೀಯ ಎಂದು ಬಂದಿದೆಯೋ ಅಲ್ಲೆಲ್ಲ ಅದನ್ನು ಅಳಿಸುವ ಪ್ರಯತ್ನ ನಡೆದಿರುವುದನ್ನು ಸಂಪಾದಕರು ತಿಳಿಸಿದ್ದಾರೆ.[೮] ಎರಡನೆಯ ಶಾಸನವು ನಗರ ಜಿನಾಲಯಕ್ಕೆ ಯಾಪನೀಯ ಸಂಘದ ಶ್ರೀ ಪಟ್ಟಣ ಸ್ವಾಮಿ ಸೋಮಯ್ಯ ಮಾಡಿದ ದಾನವನ್ನು ತಿಳಿಸುತ್ತದೆ.[೯] ಈ ಶಾಸನಗಳಲ್ಲಿ ಯಾಪನೀಯ ಸಂಘದ ಅನುಯಾಯಿಗಳನ್ನು ತುಂಬ ಸ್ಪಷ್ಟವಾಗಿ ಹೇಳಿರುವುದನ್ನು ಗಮನಿಸಬಹುದು.

---

೧. ಎಸ್‌ಐಐ XV ಧಾರವಾಡ ೬೧೦ ಕ್ರಿ.ಶ. ೧೨೩೦.

೨. ಎಸ್‌ಐಐ XX ಕುಂದಗೋಳ ಕ್ರಿ.ಶ. ೧೨-೧೩ ಶ.ಮಾ.

೩. ಧಾತಾ. ಶಾ ೭೩ ಕ್ರಿ.ಶ. ೧೩ ಶ.ಮಾ.

೪. ಎಸ್‌ಐಐ XV ಧಾರವಾಡ ೫೫೨ ಕ್ರಿ.ಶ. ೧೨ ಶ.ಮಾ.

೫. ಕಇ V ಧಾರವಾಡ ೬೮ ಕ್ರಿ.ಶ. ೧೨೧೫-೧೨೧೭.

೬. ಎಆರ್‌ಐಇ ೧೯೬೫-೬೬ ४೦४ ಕಲ್ಘಟಗಿ ಕ್ರಿ.ಶ. ೧೧೦४, ಪು. ೮೧.

೭. ಜೆಕೆಯು X ಅರಸಿಕೆರೆ ೧ ಕ್ರಿ.ಶ. ೧೧೬೮. ಶಾಸನದಲ್ಲಿ ಯಾಪನೀಯ ಎಂಬುದನ್ನು ಅಳಿಸಿ ಕಾಳಾಮುಖ ಪ್ರತಿಬದ್ಧ ಎಂದು ಸೇರಿಸಿದ್ದಾರೆ -ಎಂಬ ಎಸ್. ಶೆಟ್ಟರ್ ಅವರ ಅಭಿಪ್ರಾಯಕ್ಕೆ ಎ.ಎನ್. ಉಪಾಧ್ಯೆಯವರು ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾ ಯಾಪನೀಯರ ಬಗ್ಗೆ ಮತ್ಸರವಿದ್ದವರು ಯಾರೋ ಹಾಗೆ ಮಾಡಿರಬೇಕೆಂದೂ ಯಾಪನೀಯರಿಗೂ ಕಾಳಾಮುಖರಿಗೂ ಸಂಬಂಧವಿದ್ದುದಕ್ಕೆ ಎಲ್ಲಿಯೂ ಆಧಾರಗಳಿಲ್ಲ ಎಂದಿದ್ದಾರೆ. (Upadhye Papers ಪೂರ್ವೋಕ್ತ ಲೇಖನ, ಪು. ೧೯೬) ಆದರೆ ಜೈನ ದಿಗಂಬರ ಪಂಥಕ್ಕೆ ಮತ್ತು ಕಾಳಾಮುಖಕ್ಕೆ ಸಂಬಂಧವಿದ್ದಂತೆ (ಮುಂದೆ ಎಕ್ಕೋಟಿ ಜಿನಾಲಯಗಳ ಚರ್ಚೆ ಸಂದರ್ಭದಲ್ಲಿ ಈ ವಿಷಯವನ್ನು ಚರ್ಚಿಸಲಾಗಿದೆ) ಯಾಪನೀಯರಿಗೂ ಮತ್ತು ಕಾಳಾಮುಖರಿಗೂ ಸಂಬಂಧವಿದ್ದುದಕ್ಕೆ ಶಾಸನಾಧಾರಗಳಿವೆ. ನೋಡಿ: ಎಆರ್‌ಐಇ ೧೯೬೫-೬೬, ४೦४. ಮಲ್ಕನ್‌ಕೊಪ್ಪ ಶಾಸನ ಕಲ್ಘಟಗಿ ಕ್ರಿ.ಶ. ೧೧೦४, ಪು. ೮೧.

೮. ಜೆಕೆಯು X ಅದೇ, ಪು. ೧೫೯.

೯. ಅದೇ, ಅರಸಿಕೆರೆ ೨.

ಯಾಪನೀಯ ಸಂಘವನ್ನು[೧] ಕುಮುದಿಗಣ, ಕಾಣೂರ್‌ಗಣ, ಪುನ್ನಾಗವೃಕ್ಷಮೂಲಗಣ ಮತ್ತು ಮೂಲಸಂಘದೊಂದಿಗೆ ಬೆರಸಿಯೂ ಹೇಳಲಾಗುತ್ತದೆ. ಅಲ್ಲದೆ ವಂದಿಯೂರ ಗಣ, ಕಾರೆಯಗಣ, ನಂದಿಗಚ್ಛ ಮತ್ತು ಮೈಲಾಪಾನ್ವಯಗಳ ಜೊತೆಯೂ ಸೇರಿರುವುದುಂಟು. ಯಾಪನೀಯ ಸಂಘವು ಈ ರೀತಿಯ ಭಿನ್ನ ಗಣದೊಂದಿಗೆ ಸಂಬಂಧ ಹೊಂದಿದ್ದರಿಂದ ಅದು ಕಾಲಕ್ರಮದಲ್ಲಿ ಸ್ವಂತಿಕೆಯನ್ನು ಕಳೆದುಕೊಂಡು ಭಿನ್ನ ಗಣ ರೂಪದಲ್ಲಿ ಬಾಳಲು ಕಾರಣವಾಯಿತು. ಯಾಪನೀಯ ಸಂಘದ ಮುನಿಯೊಬ್ಬನನ್ನು 'ಜಾತರೂಪಧರ' ಎಂದು ದಿಗಂಬರರಲ್ಲಿ ಕರೆಯುವಂತೆ ಕರೆದಿರುವುದರಿಂದ ಅವರು ದಿಗಂಬರರಲ್ಲಿ ಕ್ರಮೇಣ ಅಂತರ್ಗತರಾದರೆಂಬ ಸ್ಥಿತಿಯನ್ನು ಸೂಚಿಸುತ್ತದೆ.

ಯಾಪನೀಯರು ಸ್ತ್ರೀಯರಿಗೆ ಈ ಜನ್ಮದಲ್ಲೇ ಮೋಕ್ಷವೆಂದು ಹೇಳಿದರು. ಅವರ ಅಧೀನದಲ್ಲಿದ್ದ ಬಸದಿಗಳಲ್ಲಿ ನೇಮಿನಾಥ ಹಾಗೂ ಪಾರ್ಶ್ವನಾಥ ಪ್ರತಿಮೆಗಳಿಗೆ ಪ್ರಾಶಸ್ತ್ಯವಿದ್ದಂತಿದೆ. ಯಾಪನೀಯ ಯತಿಗಳು ಸ್ಥಾನಪತಿಗಳಂತೆ ಕಾರ್ಯ ನಿರ್ವಹಿಸುತ್ತ ಪ್ರತಿಷ್ಠಿತರಿಂದ ದಾನ ದತ್ತಿಗಳನ್ನು ಪಡೆದರು. ಗಣಭೇದ ಕೃತಿಯ ಪ್ರಕಾರ ಕೊಪ್ಪಳ ಯಾಪನೀಯ ಕೇಂದ್ರವಾಗಿತ್ತು. ಅಲ್ಲಿ ಪಾಲ್ಕಿಗುಂಡಿನ ಮೇಲೆ ಜಟಿಲ ಅಥವಾ ಜಟಾಚಾರ್ಯನ ಪಾದ ಮುದ್ರಿಕೆಗಳು ಇವೆ. ಅಲ್ಲದೆ ಜನ್ನ ಕವಿ ಅನಂತನಾಥ ಪುರಾಣದಲ್ಲಿ ಜಟಾಸಿಂಹ ನಂದಿಯನ್ನು ಕಾಣೂರ್ ಗಣದವರೆಂದು ಹೇಳಿದ್ದಾನೆ.[೨] ಆ ಗಣ ಯಾಪನೀಯ ಸಂಘದೊಂದಿಗೆ ನಿಕಟ ಸಂಬಂಧ ಹೊಂದಿತ್ತು. ಶಾಸನ ಹಾಗೂ ಸಾಹಿತ್ಯಕ ಆಧಾರಗಳಿಂದ ಯಾಪನೀಯರು ದಿಗಂಬರರ ಜೊತೆ ಜೊತೆಯಾಗಿ ಬಾಳಿದಂತೆ ತೋರುತ್ತದೆ. ಕೆಲವು ಬಸದಿಗಳಲ್ಲಿ ಯಾಪನೀಯರು ಪ್ರತಿಷ್ಠಾಪಿಸಿದ ಮೂರ್ತಿಗಳನ್ನು ದಿಗಂಬರರು ಅರ್ಚಿಸುತ್ತಿರುವರು. ಕೆಲವು ಸಂಪ್ರದಾಯಸ್ಥರು ಯಾಪನೀಯರು ಪ್ರತಿಷ್ಠಾಪಿಸಿದ ಮೂರ್ತಿಗಳನ್ನು ಪೂಜಿಸಬಾರದೆಂದು ಹೇಳುತ್ತಾರೆ.

ಯಾಪನೀಯರು ತಂತ್ರ ಮಂತ್ರಗಳನ್ನು ಅಭ್ಯಾಸ ಮಾಡುತ್ತಿದ್ದುದಕ್ಕೆ ಅಷ್ಟಾಗಿ ಶಾಸನಗಳಲ್ಲಿ ಆಧಾರಗಳಿಲ್ಲ. ಆದರೆ ಯಾಪನೀಯವನ್ನು ಸಾಹಿತ್ಯ ಕೃತಿಗಳು 'ಗೋಪ್ಯ'ವೆಂದು ಕರೆದಿರುವುದುಂಟು.[೩] ದಿಗಂಬರ ಮತ್ತು ಶ್ವೇತಾಂಬರ ಎರಡೂ ಪಂಗಡಗಳಿಂದ ದೂರವಾಗಿ ಬಹಳ ಕಾಲ ಉಳಿಯುವುದು ಕಷ್ಟವಾಗಿರಬಹುದು. ಕಾಲ ಕ್ರಮೇಣ ಶಕ್ತಿಯುತ ಪಂಥವಾಗಿದ್ದ ದಿಗಂಬರರಲ್ಲಿ ಅಂತರ್ಗತವಾದಂತೆ ಕಂಡುಬರುತ್ತದೆ.[೪] ಯಾಪನೀಯರು ಆರಾಧಿಸುತ್ತಿದ್ದ ವಿಗ್ರಹಗಳೂ ನಗ್ನವಾಗಿದ್ದು ದಿಗಂಬರರ ವಿಗ್ರಹಗಳೂ ಹಾಗೇ ಇದ್ದುದರಿಂದ ಮುಂದಿನ ಕಾಲದಲ್ಲಿ ಖಚಿತವಾಗಿ ಯಾರ ವಿಗ್ರಹಗಳೆಂದು ನಿರ್ಧರಿಸುವುದು ಕಷ್ಟವಾಗಿದೆ. ಬೆಳಗಾಮಿನ ದೊಡ್ಡಬಸ್ತಿಯ ನೇಮಿನಾಥ ವಿಗ್ರಹದ ಭಗ್ನ ಶಾಸನದಂತೆ ಆ ವಿಗ್ರಹವನ್ನು ಕ್ರಿ.ಶ. ೧೦೭೦ ರಲ್ಲಿ ಮಾಡಿಸಿದವನು ಯಾಪನೀಯ ಪಂಥದ ಅನುಯಾಯಿ ಪಾರಿಸಯ್ಯ, ಪ್ರತಿಷ್ಠಾಪಿಸಿದ್ದು ಯಾಪನೀಯರು. ಈಗ ಅದು ದಿಗಂಬರರಿಂದ ಪೂಜೆಗೊಳ್ಳುತ್ತಿದೆ.[೫] ಯಾಪನೀಯರ ಧರ್ಮಗ್ರಂಥಗಳೂ ಕೂಡ ದಿಗಂಬರ ಗ್ರಂಥಗಳೊಂದಿಗೆ ಬೆರೆತು ಹೋಗಿರಬಹುದು.

---

೧. ಈ ಮತ್ತು ಮುಂದಿನ ಪ್ಯಾರಾವನ್ನು ಬರೆಯುವಾಗ ಎ.ಎನ್. ಉಪಾಧ್ಯೆಯವರ ಪೂರ್ವೋಕ್ತ ಲೇಖನದ ಸಹಾಯವನ್ನು ವಿಶೇಷವಾಗಿ ಪಡೆಯಲಾಗಿದೆ.

೨. ವಂದ್ಯರ್ ಜಟಾಸಿಂಹ ನಂದ್ಯಾಚಾರ್ಯರಿಂದ್ರ
ನಂದ್ಯಾಚಾರ್ಯಾದಿ ಮುನಿಪರಿಂ ಕಾನೂರ್ಗ
ಣಂ ದ್ಯಾವಾಪೃಥ್ವಿಯೊಳಗೆಲ್ಲಂ. ೧-೭

೩. P. B. Desai : Jainism in South India and some Jaina Epigraphs. ಪು. ೫೧.

೪. Muni Uttam Kamal Jain : ಪೂರ್ವೋಕ್ತ ಪು. ೧೩೩.

೫. ಅದೇ, ಪು. ೧೩೫.

ಯಾಪನೀಯ ಸಂಬಂಧವನ್ನು ಉಳ್ಳ ಶಾಕಟಾಯನ ಬರೆದ ವ್ಯಾಕರಣ ದಕ್ಷಿಣದಲ್ಲಿ ದಿಗಂಬರರಲ್ಲಿಯೂ, ಎರಡು ಪ್ರಕರಣಗಳು ಶ್ವೇತಾಂಬರರಲ್ಲಿಯೂ ಪ್ರಚಲಿತವಾಗಿವೆ.[೧]

ಕರ್ನಾಟಕದಲ್ಲಿ ದಿಗಂಬರ ಪಂಥ ಅತ್ಯಂತ ಶಕ್ತಿಯುತವಾಗಿ ಬೆಳೆಯಿತು. ಎಲ್ಲ ಪ್ರಮುಖ ರಾಜವಂಶಗಳ, ಉನ್ನತ ಅಧಿಕಾರಿಗಳ ಬೆಂಬಲ ಪ್ರೋತ್ಸಾಹಗಳಿಂದ ದಾನ ದತ್ತಿಗಳನ್ನು ಪಡೆದು ಬಸದಿಗಳನ್ನು ಜೈನ ಕೇಂದ್ರಗಳನ್ನು ನಿರ್ಮಾಣ ಮಾಡಿಕೊಂಡು ಬಹುಮುಖ ಚಟುವಟಿಕೆಯಿಂದ ಈ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಸಮೃದ್ಧಗೊಳಿಸಿತು.

**ಜೈನಮುನಿಗಳ ವಿದ್ವತ್ತು ಮತ್ತು ತಪಸ್ಸು:**

ಜೈನ ಮುನಿಗಳು ತಮ್ಮ ಘನ ವಿದ್ವತ್ತಿನಿಂದ, ಕಠೋರ ತಪಸ್ಸಿನಿಂದ ಖ್ಯಾತರಾಗಿದ್ದಾರೆ. ಎಲೆವಾಳದ ಒಂದು ಶಾಸನದಲ್ಲಿ ಮುನಿಚಂದ್ರನೆಂಬ ಯತಿಯನ್ನು 'ವೀರತಪಶ್ರೀ' ಎಂದೂ 'ಗಣಿತ ಸ್ಥಿತಿ ತತ್ಸಾರತರ ಸೂಕ್ಷ್ಮ ತತ್ವ ವಿಚಾರಂ ಹಸ್ತಾಮಳಕಂ' ಎಂದು ಕೀರ್ತಿಸಲಾಗಿದೆ.[೨] ಹೆರಗಿನ ಶಾಸನವು ನಯಕೀರ್ತಿದೇವ ಯತಿಯನ್ನು 'ಸಕಳ ವ್ಯಾಕರಣಾರ್ಥ ಶಾಸ್ತ್ರಚಯದೊಳು ಕಾವ್ಯಂಗಳೊಳು ಮಿ. ಟೀಕದೊಳು ವಸುವಿಕತ್ವದೊಳು ನೆಗಳ್ದ ಸಿದ್ಧಾಂತಗಳೊಳು ಪಾರಮಾರ್ಥಿಕದೊಳು...ಕಿತದೊಳ್ಸಲೆ ಸಕಳೆಯೊಳ್ಪಾಂಗಿನ ನುಡಿಯ...ಕನಾದಂ...ಸಿದ್ಧಾಂತ ಚಕ್ರೇಶ್ವರಂ'[೩] ಎಂದು ಕೀರ್ತಿಸುತ್ತದೆ. ಭಾನುಕೀರ್ತಿ ಎಂಬ ಗುರುವನ್ನು 'ಶಾನ್ತಿನಾಥಘಟಿಕಾಸ್ಥಾನದ ಮಣ್ಡಳಾಚಾರ್ಯ' ಎಂದು ಒಂದು ಶಾಸನ ನಿರೂಪಿಸುತ್ತದೆ.[೪] ಅನೇಕ ಜೈನ ಶಾಸನಗಳು ಚತುರ್ವಿಧ ದಾನದ ಪ್ರಸ್ತಾಪ ಮಾಡುತ್ತವೆ.[೫] ಚತುರ್ವಿಧ ದಾನಗಳಲ್ಲಿ[೬] ಒಂದಾದ 'ಶಾಸ್ತ್ರದಾನ' ಜೈನ ಮುನಿಗಳ ವಿದ್ವತ್ತು ಬೆಳೆಯಲು, ಪ್ರಸಾರವಾಗಲು ಕಾರಣವಾಗಿರಬೇಕು. ಕುಮುದಚಂದ್ರಭಟ್ಟಾರಕ ಎಂಬ ಗುರುವನ್ನು 'ರಾಯರಾಜಗುರು ಮಂಡಳಾಚಾರ್ಯ್ಯರುಂ ತ್ರಿಭುವನ ವಿದ್ಯಾಚಕ್ರವರ್ತ್ತಿಗಳುಂ ತಪರಾಜ ರಾಜರುಂ ತಪಚಕ್ರವರ್ತ್ತಿಗಳುಂ ಯತಿ ಶ್ರೀ ನಿಳಯರುಂ ಗುರುಕುಳ ಜ್ಯೋತಿರೂಪರುಂ ಗುರುಕುಳ ಸಮಯ ಸಮುಧರಣರುಂ ಮಧ್ಯಾ(ಂ)ಷ್ನ ಕಲ್ಪವೃಕ್ಷರುಂ ವಾದೀಭ ವಜ್ರಾಂಕುಸರುಂ...[೭] ಎಂದು ಒಂದು ಶಾಸನ ವರ್ಣಿಸುತ್ತದೆ. ಉದ್ರಿಯ ಶಾಸನವೊಂದು ಜೈನ ಗುರು ಪರಂಪರೆಯನ್ನು ಹೇಳುತ್ತಾ ಅವರಲ್ಲಿ ಸಕಳಚಂದ್ರಭಟ್ಟಾರಕ ಎಂಬ ಗುರುವನ್ನು 'ಶ್ರೀವನಿತೆಗೆ ಮೊಗವಿತ್ತು ತಪೋವನಿತೆಗೆ ಮೆಯ್ಯನೊಡ್ಡಿ ಮುಕ್ತ್ಯಂಗನೆಯಂ ಭಾವಿಸುವ ಬ್ರಹ್ಮ ಚಾರಿಯನೇವೊಗಳ್ವುದೊ ... ಸಕಳಾಗಮಕೋವಿದಂ ಸಕಳ ಜಗದ್ಭರಿತ ಕೀರ್ತ್ತಿ ಲಕ್ಷ್ಮೀಶ್ವರರಂ ಸಕಳಾತ್ಮಕರಂ... ಎಂದು ಕೀರ್ತಿಸುತ್ತದೆ.'[೮]

ಜೈನಮುನಿಗಳ ತಪಸ್ಸು ಬಹು ಕಠಿಣವಾದುದು. ನಿಷ್ಠುರವಾದ ದೇಹ ದಂಡನೆ ಅವರ ಸಾಧನ ಮಾರ್ಗದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಶಾಸನಗಳು ಕೆಲವು ಜೈನಯತಿಗಳನ್ನು ಹೆಸರಿಸುವಾಗ ಅವರು ನಿರ್ವಹಿಸಿದ ಕಠೋರ ಆಸನ, ಮಾಡಿದ

---

೧. A. N. Upadhye : ಪೂರ್ವೋಕ್ತ ಪು. ೧೯೬.

೨. (ರೈ) ಎಕ VIII ಸೊರಬ ೩೮೪ ಕ್ರಿ.ಶ. ೧೨೩೭.

೩. (ರೈ) ಎಕ V ಹಾಸನ ೫೭ ಕ್ರಿ.ಶ. ೧೧೫೫.

೪. (ರೈ) ಎಕ VIII ಸೊರಬ ೩೮೪ ಕ್ರಿ.ಶ. ೧೨೩೭.

೫. (ಮೈ) ಎಕ VII ನಾಗಮಂಗಲ ೨೬ ಕ್ರಿ.ಶ. ೧೧೬೮; (ಮೈ) ಎಕ VII ನಾಗಮಂಗಲ ೧೩೨ ಕ್ರಿ.ಶ. ೧೧೭೯.

೬. ಚತುರ್ವಿಧ ದಾನಗಳು - ಆಹಾರ, ಅಭಯ, ಭೈಷಜ್ಯ, ಶಾಸ್ತ್ರ. ಶ್ರೀವತ್ಸ ನಿಘಂಟು, ಪು. ೧೯೭. ಇವು ಚತುರ್ವಿಧ ದಾನಗಳೆಂದು ಕೆಲವು ಶಾಸನಗಳಲ್ಲೂ ಇನ್ನೂ ಕೆಲವು ಶಾಸನಗಳಲ್ಲಿ ಹೆಸರುಗಳಿಂದಲೂ ಉಕ್ತವಾಗಿವೆ.

೭. ತು.ನಾ.ಶಾ. I ಕಾರ್ಕಳ ೪೭ ಕ್ರಿ.ಶ. ೧೩೩೪.

೮. (ರೈ) ಎಕ VIII ಸೊರಬ ೧೪೦ ಕ್ರಿ.ಶ. ೧೧೯೮.

ಕಠೋರ ಉಪವಾಸಗಳನ್ನು ಅವರ ವಿಶೇಷಣಗಳಾಗಿ ಹೇಳಿವೆ. ಜಿನನಾಥಪುರದ ಒಂದು ಶಾಸನ 'ಶ್ರೀ ಮತ್ಕುಕ್ಕುಟಾಸನ ಮಳಧಾರಿ ದೇವರ ಶಿಷ್ಯ ಶುಭಚಂದ್ರ ಸಿದ್ಧಾನ್ತ' ಎಂದಿದೆ.[೧] ಕೆಳಗೆರೆ ಶಾಸನವು ಅಷ್ಟೋಪವಾಸಿ ಕನಕಚಂದ್ರ, ಮಾಸೋಪವಾಸಿ ರವಿಚಂದ್ರ ಎಂದು ಅವರನ್ನು ಕುರಿತು ಹೇಳಿದೆ.[೨] ದಿಗಂಬರ ಮುನಿಗಳು ಆಹಾರದ ವಿಷಯದಲ್ಲಿ ತುಂಬ ಸಂಯಮದಿಂದ ಇರಬೇಕಾಗಿತ್ತು. ಭಿಕ್ಷೆ ಎತ್ತುವ ರೀತಿ, ಸ್ವೀಕಾರ, ಯಾವ ಮನೆಗಳಿಗೆ ಹೋಗಬೇಕು, ಹೋಗಬಾರದು ಮುಂತಾದ ವಿಷಯಗಳಲ್ಲಿ ನಿಷ್ಠುರ ನಿಯಮಗಳಿದ್ದುವು ತಿಳಿದು ಬರುತ್ತದೆ. ಯತಿಗಳು ಒಂದು ಸ್ಥಳದಲ್ಲಿ ಹೆಚ್ಚು ಕಾಲ ನಿಂತರೆ ಯಾವುದಾದರೂ ರೀತಿಯ ಮೋಹಕ್ಕೆ ಒಳಗಾಗಬಹುದೆಂದು ಒಂದು ಸ್ಥಳದಲ್ಲಿ ಹೆಚ್ಚು ಕಾಲ ನಿಲ್ಲದಂತೆ ಜೈನ ಧರ್ಮ ವಿಧಿಸಿತ್ತು.[೩] ಬ್ರಹ್ಮಚರ್ಯದ ವಿಷಯದಲ್ಲೂ ಅತಿಕಠೋರವಾದ ನಿಯಮಗಳಿದ್ದವು. ಪರಸ್ತ್ರೀಯರ ಜೊತೆಯಲ್ಲಲ್ಲದೆ, ಸಹಧರ್ಮಿಗಳಾದ ಕಂತಿಯರೊಡನೆಯೂ ಅವರು ಮಾತನಾಡುವಂತಿರಲಿಲ್ಲ.[೪]

ಅನೇಕ ಶಾಸನಗಳು ಜೈನಪಂಡಿತರು ಇತರ ಧರ್ಮಗಳ ಪಂಡಿತರನ್ನು ವಾದದಲ್ಲಿ ಸೋಲಿಸಿದ ವಿಷಯವನ್ನು ತಿಳಿಸುತ್ತವೆ. ಉದಾಹರಣೆಗೆ ಶ್ರವಣಬೆಳಗೊಳದ ಒಂದು ಶಾಸನ ದೇವಕೀರ್ತಿ ಪಂಡಿತನು ಚಾರ್ವಾಕ ಬೌದ್ಧ ನೈಯಾಯಿಕ ಕಾಪಾಲಿಕ ಮತ್ತು ವೈಶೇಷಿಕರನ್ನು ಪರಾಭವಗೊಳಿಸಿದನೆಂದು ಹೇಳುತ್ತದೆ.[೫] ಇದೇ ರೀತಿ ಒಂದು ಶಾಸನ ಕನಕ ನಂದಿಯನ್ನೂ[೬] ಇನ್ನೊಂದು ಶಾಸನ ವಾಮನಂದಿ ತ್ರೈವಿಧ್ಯ ಮುನೀಶ್ವರನನ್ನೂ[೭] ವರ್ಣಿಸುತ್ತವೆ. ವರಾಂಗದ ಶಾಸನ ಪ್ರಭಾಚಂದ್ರ ಮುನಿಯನ್ನು 'ಪರಸಮಯಾದ್ರಿಗೆ ವಜ್ರಂ ಬಿರುದಿಂ ಮಾರಮ್ಮಲೆವ ವಾದಿಕೋಳಾಹಳನುರ್ವ್ವರೆಗಧಿಕಂ ತ್ರೈವಿದ್ಯಾಭರಣಮ್ ವಿಭುದಾರ್ಚ್ಚಿತಂ...'[೮] ಎಂದು ಅವನ ಸಿದ್ಧಿ ಸಾಧನೆಗಳನ್ನು ಕೀರ್ತಿಸುತ್ತದೆ. ಕೆಲವು ಜೈನ ಯತಿಗಳು ತಮ್ಮ ವಿದ್ವತ್ತು ಪಾಂಡಿತ್ಯಗಳ ಮೂಲಕ ಇತರ ಧರ್ಮೀಯರಿಗೆ ಸ್ಪರ್ಧಾಹ್ವಾನಗಳನ್ನು ನೀಡುತ್ತಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಶ್ರವಣಬೆಳಗೊಳದ ಒಂದು ಸಂಸ್ಕೃತ ಶಾಸನದಲ್ಲಿ ಅನೇಕ ಜೈನಗುರುಗಳ ವಿಷಯವನ್ನು ಹೇಳುತ್ತಾ ವಿಮಲಚಂದ್ರನ ವಿದ್ವತ್ತನ್ನು ಕೀರ್ತಿಸಿ ಶೈವ, ಪಾಶುಪತ, ಬೌದ್ಧ, ಕಾಪಾಲಿಕ ಮತ್ತು ಕಾಪಿಲರನ್ನು ಉದ್ದೇಶಿಸಿದ ಎಚ್ಚರಿಕೆ ಪತ್ರವನ್ನು ಶತ್ರುಭಯಂಕರನೆಂಬ ಅರಸನ ವಿಶಾಲವಾದ ಅರಮನೆಯ ದ್ವಾರದಲ್ಲಿ ಹಾಕಿಸಿ ಅದರಿಂದ ಅವರ ಹೃದಯದಲ್ಲಿ ದುಗುಡವನ್ನುಂಟು ಮಾಡಿದ ವಿಷಯವನ್ನು ತಿಳಿಸುತ್ತದೆ.[೯] ಚಂದ್ರಪ್ರಭ ಮುನಿಯ ಸಲ್ಲೇಖನವನ್ನು ಹೇಳುವ ಜೋಡಿ ಬಸವನಪುರದ ವಿಮಲಚಂದ್ರನೆಂಬ

---

೧. (ಮೈ) ಎಕ II ಶ್ರವಣಬೆಳಗೊಳ ೫೩೧ ಕ್ರಿ.ಶ. ೧೨ ಶ.ಮಾ. ಕುಕ್ಕುಟಾಸನ : 'ಇದೊಂದು ರೀತಿಯ ಧ್ಯಾನ ಭಂಗಿ, ಮಲಗುವಾಗಲೂ ಗುರುವಿನ ಅಪ್ಪಣೆಯನ್ನು ಪಡೆದು, ಎಡಪಾರ್ಶ್ವದ ಮೇಲೆ ಮಲಗಿ ತನ್ನ ಕಾಲುಗಳನ್ನು ಮೆತ್ತಗೆ ಕೋಳಿ ಚಾಚುವಂತೆ ಚಾಚಬೇಕಾಗಿತ್ತು.' ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು ೮೦. ಅಡಿಟಿಪ್ಪಣಿ.

೨. (ಮೈ) ಎಕ VII ನಾಗಮಂಗಲ ೬೦ ಕ್ರಿ.ಶ. ೧೩ ಶ.ಮಾ. ಆ ವಿಶೇಷಣಗಳು ಆ ಯತಿಗಳು ಉಪವಾಸವಿದ್ದು ಮಾಡಿದ ಕಠೋರ ತಪಸ್ಸಿನ ದಿನಗಳನ್ನು ಸೂಚಿಸುತ್ತವೆ.

೩. ಧರ್ಮಾಮೃತಂ- ಗದ್ಯಭಾಗ ಪು. ೩೦೩. 'ಗ್ರಾಮೇಕರಾತ್ರಂ ನಗರೇ ಪಂಚರಾತ್ರಮಟವ್ಯಾಂ ದಶರಾತ್ರಮೆಂಬ ಪೂರ್ವ ಶಾಸ್ತ್ರೋಕ್ತಿಯಿಂ ವಿಹಾರಿಸುತ್ತುಂ...'

೪. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೮೧.

೫. (ಮೈ) ಎಕ II ಶ್ರವಣಬೆಳಗೊಳ ೭೦ ಕ್ರಿ.ಶ. ೧೧೬೩.

೬. (ಮೈ) ಎಕ II ಶ್ರವಣಬೆಳಗೊಳ ೭೧ ಕ್ರಿ.ಶ. ೧೧೬೩.

೭. (ಮೈ) ಎಕ II ಶ್ರವಣಬೆಳಗೊಳ ೭೩ ಕ್ರಿ.ಶ. ೧೧೭೬.

೮. ತುನಾಶಾ I ಕಾರ್ಕಳ ೩೯ ಕ್ರಿ.ಶ. ೧೩ ಶ.ಮಾ.

೯. (ಮೈ) ಎಕ II ಶ್ರವಣಬೆಳಗೊಳ ೭೭ ಕ್ರಿ.ಶ. ೧೧೨೯.

(ಶ್ರವಣಬೆಳಗೊಳದ ವಿಮಲಚಂದ್ರ ಮತ್ತು ಈ ಶಾಸನದ ವಿಮಲಚಂದ್ರ ಒಬ್ಬನೇ ಆಗಿರಬೇಕು) ಯತಿಯನ್ನು-ಶೈವ, ಪಾಶುಪತ, ತಥಾಗತಾನುಯಾಯಿಗಳು, ಕಾಪಾಲಿಕರು ಮತ್ತು ಕಾಪಿಲರನ್ನು ಉದ್ದೇಶಿಸಿ ರಾಜರು, ಆನೆ, ಕುದುರೆಗಳು ಸದಾ ಹಾದು ಹೋಗುವ ದ್ವಾರದ ಮೇಲೆ ಅವನ ಕೀರ್ತಿಯನ್ನು ರಚಿಸಲಾಗಿದೆ ಎಂದು ಬೇರೊಂದು ಶಾಸನ ತಿಳಿಸುತ್ತದೆ.[೧] ಈ ಶಾಸನೋಕ್ತ ವಿಮಲಚಂದ್ರ ದಿಗಂಬರ ಪಂಥಕ್ಕೆ ಸೇರಿದವನು. ಮಹೇಶ್ವರನೆಂಬ ಜೈನಮುನಿಯು ಎಪ್ಪತ್ತು ಮಹಾ ಸಭೆಗಳಲ್ಲಿ ವಾದ ಮಾಡಿ ವಿಜಯಶಾಲಿಯಾದ ವಿಷಯವನ್ನು ಶ್ರವಣಬೆಳಗೊಳದ ಶಾಸನವೊಂದು ತಿಳಿಸುತ್ತದೆ. ಈ ಶಾಸನಗಳು, ಜೈನ ಗುರುಗಳು ತಮ್ಮ ಪಾಂಡಿತ್ಯವನ್ನು ಪ್ರಕಟಗೊಳಿಸಲು, ಇತರ ಧರ್ಮೀಯರೊಂದಿಗೆ ಸ್ಪರ್ಧಾಹ್ವಾನ ನೀಡುವುದನ್ನು ಸಾರ್ವಜನಿಕವಾಗಿ ಸಾರುವ ಮಟ್ಟಕ್ಕೆ ಹೋಗಿರುವುದನ್ನು ತಿಳಿಸುತ್ತವೆ.

**ಸನ್ಯಾಸಿನಿಯರು:**

ಜೈನ ಪುರುಷಯತಿಗಳು ತಮ್ಮ ಜ್ಞಾನ ಮತ್ತು ತಪಸ್ಸಿನಿಂದ ಪ್ರಖ್ಯಾತರಾಗಿದ್ದಂತೆ ಸನ್ಯಾಸಿನಿಯರೂ ಖ್ಯಾತರಾಗಿದ್ದರು. ಅವರು ಸಾಕಷ್ಟು ಸಂಖ್ಯೆಯಲ್ಲಿ ಇದ್ದುದನ್ನು ಶಾಸನಗಳು ತಿಳಿಸುತ್ತವೆ. ಜೈನ ಸನ್ಯಾಸಿನಿಯರನ್ನು ಕಂತಿ ಮತ್ತು ಅಜ್ಜಿಯರೆಂದು ಕರೆಯುತ್ತಿದ್ದರು.[೨] ಇವರು 'ಲೋಯ' (ಕೇಶ ವಿಚ್ಛೇದನ)ವನ್ನು ಮಾಡಿಕೊಳ್ಳಬೇಕಿತ್ತು. ಆದರೆ ಇವರಿಗೆ ನಗ್ನತೆಯನ್ನು ವಿಧಿಸಿಲ್ಲ. ಬಿಳಿಯ ಬಟ್ಟೆಗಳನ್ನು ಹಾಕಿಕೊಳ್ಳಬೇಕು; ಬಟ್ಟೆಗಳನ್ನು ಬಿಸಿಲಲ್ಲಿ ಒಣಗಿಸಬಹುದು, ಆದರೆ ನೀರಿನಲ್ಲಿ ಹಾಕಿ ಒಗೆಯ ಕೂಡದು ಎಂಬ ನಿಯಮಗಳಿದ್ದವು.[೩] ಜೈನ ಸನ್ಯಾಸಿನಿಯರಲ್ಲಿ ಮೇಲೆ ಸೂಚಿಸಿದ ಗುಂಪುಗಳಲ್ಲದೆ 'ಭಟ್ಟಾರಕಿ' ಎಂಬ ಪ್ರತ್ಯೇಕ ವರ್ಗವೂ ಇದ್ದಿತು. ಬಹುಶಃ ಇದು ಜೈನ ಸ್ತ್ರೀಗುರುವನ್ನು ಸೂಚಿಸುತ್ತದೆ. ಕರಿಂಗಾಲದ ಶಾಸನ 'ಶ್ರೀಮತು ಪಣ್ಡೆಕರೆಂಬ ಭೂಮಿಯ ಭಟ್ಟಾರಕಿಗೆ ಬಿಟ್ಟರು'... ಎಂದು ಹೇಳುತ್ತದೆ.[೪] ನುಗ್ಗಿಗೇರಿಯ ಶಾಸನ (ಕೇಮಣ ರೇಚಣ ಜೀರ್ಣೋದ್ಧಾರ ಮಾಡಿಸಿದ ಬಸದಿ) 'ಚಂದ್ರನಾಥಸ್ವಾಮಿಗಳ ಅಷ್ಟವಿಧಾರ್ಚನೆಗೆ ರಿಷಿಯರಜ್ಜಿಯರಾಹಾರದಾನಕ್ಕೆ ದಾನ ನೀಡಿ ಬಸದಿ ಆಚಾರ್ಯ್ಯ ಬಾಹುಬಲದೇವರ ಶಿಷ್ಯೆ ರಾಜಮತಿಕಂತಿಯರ ಕಾಲನ್ನು ತೊಳೆದು' 'ಉಗುರ ಮೂನೂರ್ವ್ವರು' ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೫] ಇಲ್ಲಿ ರಾಜಮತಿಕಂತಿಯ ಪಾದಪೂಜೆ ಮಾಡಿ ದಾನ ಮಾಡಿದ ವಿಷಯ ಗಮನಾರ್ಹವಾಗಿದೆ. ಆದರೆ ಸನ್ಯಾಸಿನಿಯರಿಗೆ ಸಾಮಾನ್ಯವಾಗಿ ಅಷ್ಟೊಂದು ಉನ್ನತ ಸ್ಥಾನವಿದ್ದಂತಿಲ್ಲ. ಅವರನ್ನು ಪುರುಷ ಸನ್ಯಾಸಿಗಳಿಗಿಂತ ಕೀಳಾಗಿ ಭಾವಿಸುತ್ತಿದ್ದರು. ಹೊಸದಾಗಿ ಸನ್ಯಾಸಿಯಾದ ಪುರುಷ ಬಹಳ ಕಾಲದ ಹಿಂದೆಯೇ ಸನ್ಯಾಸಿನಿಯಾದ ಸ್ತ್ರೀಗಿಂತ ಮೇಲೆಂದು ಭಾವಿತವಾಗುತ್ತಿದ್ದ.[೬] ಅಜ್ಜಿಯರಿಗೆ ಸನ್ಯಾಸಿನಿಗಳಿಗಿರುವಷ್ಟು ಸ್ವಾತಂತ್ರ್ಯವೂ ಇರಲಿಲ್ಲ. ವರಾಂಗ ಚರಿತೆಯಲ್ಲಿ ಬರುವಂತೆ ವರದತ್ತ ಅಜ್ಜಿಗೆ ಬೋಧಿಸಹೇಳಿದರೂ ಅವಳು ಹೊಸದಾಗಿ ಬಂದ ಸ್ತ್ರೀಗೆ ಸನ್ಯಾಸವನ್ನು ಕೊಡುವಂತಿರಲಿಲ್ಲ.[೭]

---

೧. (ಮೈ) ಎಕ V ತಿ.ನರಸೀಪುರ ೩೮ ಕ್ರಿ.ಶ. ೧೧೮೩.

೨. ಅಜ್ಜಿ ಮತ್ತು ಕಂತಿಯರಿಗೆ ಸ್ವಲ್ಪ ವ್ಯತ್ಯಾಸವನ್ನು ಪಿ.ಬಿ. ದೇಸಾಯಿ ಅವರು ಮಾಡುತ್ತಾರೆ. (ಜೈನವ್ರತವನ್ನು ಸ್ವೀಕರಿಸಿ ಸಂಸಾರ ತ್ಯಾಗಮಾಡಿದ ಸಾಮಾನ್ಯವರ್ಗದ ಸ್ತ್ರೀಯರು ಅಜ್ಜಿಯರು. ಕಠೋರ ತಪಸ್ಸನ್ನು ಕೈಕೊಂಡು ಸಾಧನೆಯಲ್ಲಿ ಮುಂದುವರಿದವರು ಕಂತಿಯರು) ಆದರೆ ಲಭ್ಯ ಶಾಸನಾಧಾರಗಳಿಂದ ವ್ಯತ್ಯಾಸಗಳನ್ನು ಮಾಡುವುದು ಕಠಿಣ ನೋಡಿ: ಎಂ. ಚಿದಾನಂದ ಮೂರ್ತಿ : ಕಶಾಸಾಂಅ, ಪು. ೮೩ ಅಡಿಟಿಪ್ಪಣಿ.

೩. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೮೩.

೪. ಎಸ್‌ಐಐ IX(i) ಮಂಗಳೂರು ೩೯೯ ಕ್ರಿ.ಶ. ೧೨ ಶ.ಮಾ.

೫. ಧಾತಾಶಾ ೪೫ ಕ್ರಿ.ಶ. ೧೨ ಶ.ಮಾ.

೬. Rambhushan Prasad Singh : Jainism in Early Medieval Karanataka ಪು. ೧೨೮.

೭. ಅದೇ, ೧೨೮-೧೨೯.

ಕೇವಲ ಅಜ್ಜಿಯರಿಗೆ ಅಥವಾ ಕಂತಿಯರಿಗೆ ಪ್ರತ್ಯೇಕ ದಾನವಿಲ್ಲದಿರುವುದರಿಂದ ಅವರ ಪ್ರತ್ಯೇಕ ಸ್ವತಂತ್ರ ಸಂಘ ಅಸ್ತಿತ್ವದಲ್ಲಿ ಇದ್ದಿರಲಾರದು. ಸನ್ಯಾಸಿನಿಯರೂ ವಿದ್ವತ್ತನ್ನು ಪಡೆಯಲು, ತಪಸ್ಸನ್ನು ಮಾಡಲು ಅವಕಾಶ ಇದ್ದಿತು. ಕಾರೆ ಹಳ್ಳಿಯ ಶಾಸನವೊಂದು ಪರಮತಿ ಕಂತಿಯರು ಮುಡಿಪಿದ ವಿಷಯವನ್ನು ತಿಳಿಸುತ್ತದೆ.[೧] ಅನೇಕ ಶಾಸನಗಳು ಋಷಿಯರಿಗೆ ಮತ್ತು ಅಜ್ಜಿಯರಿಗೆ ಜೊತೆ, ಜೊತೆಯಾಗಿ ಆಹಾರ ದಾನದ ವ್ಯವಸ್ಥೆಯನ್ನು ಏರ್ಪಡಿಸಿದ್ದನ್ನು ತಿಳಿಸುತ್ತವೆ. ಉಜ್ಜಿಲಿಯ ಶಾಸನ ಬುದ್ಧಿ ಜಿನಾಲಯದ ಚೆನ್ನಪಾರ್ಶ್ವದೇವರ ಅಂಗರಂಗಭೋಗಕ್ಕೆ ದಾನ ನೀಡಿದನಂತರ ಬಂದು ಹೋಗುವ ಋಷಿಯರ, ಅಜ್ಜಿಯರ ಆಹಾರದಾನಕ್ಕೆ ಮಾಡಿದ ದಾನವನ್ನು ಹೇಳುತ್ತದೆ.[೨] ಲಕ್ಕುಂಡಿಯ ಶಾಸನ ನೋಂಪಿಯ ಬಸದಿಗೆ ದಾನ ಮಾಡಿದ ವಿಷಯವನ್ನು ಹೇಳಿ 'ಹನ್ನಿರ್ವರು ಅಜ್ಜಿಯರ' ವಸ್ತ್ರದಾನಕ್ಕೆಂದು ಬಿಟ್ಟ ದಾನವನ್ನು ನಿರೂಪಿಸುತ್ತದೆ.[೩] ಈ ದಾನ ಜೈನ ಸನ್ಯಾಸಿನಿಯರು ವಸ್ತ್ರ ಧರಿಸುತ್ತಿದ್ದರೆಂಬ ವಿಷಯವನ್ನು ದೃಢಪಡಿಸುತ್ತದೆ. ನದಿಹರಳ ಹಳ್ಳಿಯ ಶಾಸನ ಋಷಿಯರ ಮತ್ತು ಅಜ್ಜಿಯರ ಆಹಾರ ದಾನಕ್ಕಾಗಿ ಕೊಟ್ಟ ದತ್ತಿಯನ್ನು ತಿಳಿಸುತ್ತದೆ.[೪] ಜೈನ ಋಷಿಯರು, ಮತ್ತು ಅಜ್ಜಿಯರು ತುಂಬ ನೈಷ್ಠಿಕ ಜೀವನವನ್ನು ನಡೆಸಬೇಕಾಗಿದ್ದಿತು. ಮಾಳವ ಕಟ್ಟಿಯ ಶಾಸನ 'ನೈಷ್ಠಿಕ ರಿಷಿಯರಜ್ಜಿಯರಾಹಾರ ದಾನಕ್ಕೆಂದು'[೫] ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಈ ಕೆಲವು ಶಾಸನಗಳ ಆಧಾರದಿಂದ, ಋಷಿಯರ ಕಂತಿಯರ ಆಹಾರಕ್ಕೆ ವ್ಯವಸ್ಥೆಯನ್ನು ಮಾಡಿರುವುದನ್ನು ಗಮನಿಸಿದರೆ ಅವರು ಮೊದಲಿನಂತೆ ಭಿಕ್ಷೆ ಬೇಡಿ ಊಟವನ್ನು ಮಾಡುತ್ತಿದ್ದ ಜೀವನ ವಿಧಾನವನ್ನು ಕ್ರಮೇಣ ತ್ಯಜಿಸುತ್ತಾ, ಸ್ವೀಕರಿಸಿದ ದಾನಗಳ ಉತ್ಪನ್ನಗಳಿಂದ ಜೀವಿಸುತ್ತಿದ್ದರೆಂದೂ ಮತ್ತು ಒಂದು ಸ್ಥಳದಲ್ಲಿ ನೆಲೆ ನಿಲ್ಲದೆ (ಚಾತುರ್ಮಾಸವನ್ನುಳಿದು) ಚಲಿಸುತ್ತಿರಬೇಕೆಂಬ ನಿಯಮಗಳು ಕ್ರಮೇಣ ಸಡಿಲವಾಗಿ ಅವರು ಅಲ್ಲಲ್ಲಿ ಬಸದಿಗಳನ್ನು ಕಟ್ಟಿಸಿಕೊಂಡು ದಾನ ದತ್ತಿಗಳನ್ನು ಪಡೆಯುತ್ತಾ ನೆಲೆ ನಿಲ್ಲತೊಡಗಿದ ರೀತಿಯನ್ನು ತಿಳಿಸುತ್ತದೆ. ಉಜ್ಜಿಲಿ ಶಾಸನ ಆ ಸ್ಥಳಕ್ಕೆ ಬಂದು ಹೋಗುವ ಸನ್ಯಾಸಿಗಳಿಗೆ ದಾನ ನೀಡಿರುವುದನ್ನು ಗಮನಿಸಿದರೆ ಸ್ಥಳೀಯ ಸನ್ಯಾಸಿಗಳಲ್ಲದೆ ಅನ್ಯ ಸ್ಥಳಗಳಿಂದ ಆಗಮಿಸಿದವರೂ ಭಿಕ್ಷೆ ಬೇಡುತ್ತಿರಲಿಲ್ಲವೆಂಬುದನ್ನು ಸೂಚಿಸುವಂತೆ ಕಾಣುತ್ತದೆ.

ಜೈನಧರ್ಮದ ಪುರುಷ ಅನುಯಾಯಿಗಳನ್ನು ಶ್ರಾವಕರೆಂದೂ ಸ್ತ್ರೀ ಅನುಯಾಯಿಗಳನ್ನು ಶ್ರಾವಕಿಯರೆಂದೂ ಕರೆಯುತ್ತಿದ್ದರು.[೬] ಗುರುಗಳ ಪುರುಷ ಶಿಷ್ಯರನ್ನು ಗುಡ್ಡರೆಂದೂ ಶಿಷ್ಯೆಯರನ್ನು ಗುಡ್ಡಿಯರೆಂದೂ ಕರೆಯಲಾಗಿದೆ.[೭] ಗುರುಗಳ ಮಾರ್ಗದರ್ಶನ ಪಡೆದು ಗುಡ್ಡರು[೮] ಮತ್ತು ಗುಡ್ಡಿಯರು[೯] ಜೈನ ವಿಧಿಯಿಂದ ಸ್ವರ್ಗಸ್ಥರಾದ ವಿಷಯವನ್ನು ಅನೇಕ ಶಾಸನಗಳು ತಿಳಿಸುತ್ತವೆ.[೧೦]

**ಚಾತುರ್ವರ್ಣ ಶ್ರವಣ ಸಂಘ:**

ಕೆಲವು ಶಾಸನಗಳಲ್ಲಿ ಕಂಡು ಬರುವ ಜೈನಧರ್ಮದ ಈ ಸಂಘಟನೆ 'ಮುನಿಗಳಿಗೆ (ಅಥವಾ ಮಠಗಳಿಗೆ) ಮತ್ತು ಜೈನಸಮಾಜಕ್ಕೆ ಸಂಪರ್ಕವನ್ನು ಕಲ್ಪಿಸಲು ಮಾಡಿದ ಪ್ರಯತ್ನಗಳಲ್ಲೊಂದು. ಜನಸಾಮಾನ್ಯರಲ್ಲಿ ಜೈನಧರ್ಮ ಪ್ರಸಾರ ಮಾಡಲು,

---

೧. (ರೈ) ಎಕ VI ತರೀಕೆರೆ ೬೦ ಕ್ರಿ.ಶ. ೧೨೩೮.

೨. ಕಇಆಪ್ರ ಮೆಹಬೂಬನಗರ ೬೧ ಕ್ರಿ.ಶ. ೧೧-೧೨ ಶ.ಮಾ.

೩. ಎಸ್‌ಐಐ XV ಗದಗು ೬೭ ಕ್ರಿ.ಶ. ೧೧೮೫.

೪. ಎಸ್‌ಐಐ XVIII ರಾಣಿಬೆನ್ನೂರು ೧೮೦ ಕ್ರಿ.ಶ. ೧೧೭೬೮.

೫. ಐಎಸ್‌ಡಿ ದ. ಸೊಲ್ಲಾಪುರ ೧೭ ಕ್ರಿ.ಶ. ೧೧೭೬.

೬. (ಮೈ) ಎಕ I ವಿರಾಜಪೇಟೆ ೧೦೦ ಕ್ರಿ.ಶ. ೧೧ ಶ.ಮಾ.

೭. ಜೈನಾನುಯಾಯಿಗಳಲ್ಲಿ ಜೈನ ಮತೀಯರು (ಶಿಷ್ಯರು) ಅಜೈನಮತೀಯರು (ಗುಡ್ಡರು) ಎಂದು ಎಂ.ಎಂ. ಕಲಬುರ್ಗಿಯವರು ಪ್ರತ್ಯೇಕಮಾಡುತ್ತಾರೆ. ನೋಡಿ : ಮಾರ್ಗ-೪ ಪು. ೧೧೧. ಇದು ಕೂಲಂಕುಷ ಅಭ್ಯಾಸವನ್ನು ಬಯಸುವಂತೆ ಕಾಣುತ್ತದೆ.

೮. ಕಇ V ಹಾನಗಲ್ಲು ೪೩ ಕ್ರಿ.ಶ. ೧೨೫೭; (ರೈ) ಎಕ VII ಶಿಕಾರಿಪುರ ೧೧೩ ಕ್ರಿ.ಶ. ೧೨೦೩.

೯. ಎಂಎಆರ್ ೧೯೩೧ ನಗರ ೬೩ ಕ್ರಿ.ಶ. ೧೧೯೦; ಕಇ V ಹಾನಗಲ್ಲು ೧೦೮ ಕ್ರಿ.ಶ. ೧೨೬೨.

೧೦. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೮೫.

ಅವರಲ್ಲಿ ಜೈನಧರ್ಮದ ಮೇಲಿನ ಶ್ರದ್ಧೆ ಕುಂದದಂತೆ ಮಾಡಲು ಅನುಸರಿಸಿದ ಮಾರ್ಗಗಳಲ್ಲೊಂದು ಇದು. ದೇಕಿ ಸೆಟ್ಟಿ ಎಂಬಾತನು ತಾನು ಮಾಡಿಸಿದ ಶಾಂತಿನಾಥ ಬಸದಿಯ ಜೀರ್ಣೋದ್ಧಾರಕ್ಕೆ, ಅಜ್ಜಿಯರ ಆಹಾರ ದಾನಕ್ಕೆ ಮತ್ತು 'ಚಾತುರ್ವರ್ಣ್ಣ ಶ್ರವಣ ಸಂಘಕ್ಕೆಂದು' ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೧] ಪಂಡಿತರ ಹಳ್ಳಿಯ ಶಾಸನವೊಂದು ಒಂದು ಬಸದಿಯನ್ನು ಕೆರೆಯನ್ನು ಕಟ್ಟಿಸಿದ ಹೆಗ್ಗಡತಿ ಮಾಚಿಯಕ್ಕನನ್ನು 'ಚಾತುರ್ವರ್ಣ್ಣ ಸಮುದಯ್ಯ ಶರಣೆ' ಎಂದು ಕರೆಯುತ್ತದೆ.[೨] ಬಂದಳಿಕೆಯ ಶಾಸನವೊಂದು ಅಲ್ಲಿಯ ಮಹಾಜನರು ಶಾಂತಿನಾಥ ದೇವರ ಪೂಜಾ ಕಾರ್ಯಗಳಿಗೆ ಪಾತ್ರಪಾವುಳಕ್ಕೆ ಜೀರ್ಣೋದ್ಧಾರಕ್ಕೆ ಮತ್ತು ಚಾತುರ್ವರ್ಣ್ಣದಾಹಾರಕ್ಕೆ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೩] ನಾಗಕುಮಾರ ಚರಿತೆ ಮುಂತಾದ ಗ್ರಂಥಗಳಲ್ಲಿ ಚತುಃಸಂಘವೆಂದರೆ ಜೈನ ಸನ್ಯಾಸಿ, ಸನ್ಯಾಸಿನಿ, ಗೃಹಸ್ಥ ಮತ್ತು ಗೃಹಿಣಿ ಎಂದು ಹೇಳುತ್ತವೆ. ಚಾತುರ್ವರ್ಣದವರ ಮನೆಯಲ್ಲಿ ಭಿಕ್ಷೆ ಬೇಡಲು ಧರ್ಮವು ಅನುವು ಮಾಡಿಕೊಟ್ಟಿದೆ. ಜೈನ ಧರ್ಮ ಅಷ್ಟಾಗಿ ಜಾತಿಗಳನ್ನು ಪರಿಗಣಿಸುವುದಿಲ್ಲ. ಅಲ್ಲದೆ ಜೈನಗ್ರಂಥಗಳು ಜಾತಿಯನ್ನು ನಿರ್ದಿಷ್ಟವಾಗಿ ವಿರೋಧಿಸುವುದೂ ಇಲ್ಲ. ಅದು ಒಂದು ಸಾಮಾಜಿಕ ನಡವಳಿಕೆಯೆಂದೂ ಧರ್ಮಕ್ಕೂ ಜಾತಿಗೂ ಸಂಬಂಧವಿಲ್ಲವೆಂದೂ ಮತ್ತು ಜಾತಿಯನ್ನು ಕ್ರಮಪಡಿಸುವುದು ಅದರ ಕರ್ತವ್ಯ ಅಲ್ಲವೆಂದು ಭಾವಿಸುತ್ತದೆ.[೪] ಆದರೆ ಶೂದ್ರರನ್ನು ಯತಿವರ್ಗಕ್ಕೆ ಸೇರಿಸಿಕೊಳ್ಳದಿರುವುದು ಆರಂಭದ ಮಧ್ಯಕಾಲೀನ ಜೈನಧರ್ಮದ ಪ್ರಮುಖ ಲಕ್ಷಣವಾಗಿದೆ.[೫] ಅಲ್ಲದೆ ಸೋಮದೇವನು ತನ್ನ ಕೃತಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರು ಮಾತ್ರ ಜೈನ ದೀಕ್ಷೆಗೆ ಅರ್ಹರೆಂದು ಹೇಳಿದ್ದಾನೆ. ಜೈನ ಧರ್ಮ ಆರಂಭ ಕಾಲದಲ್ಲಿ ವರ್ಣ ವ್ಯವಸ್ಥೆಯನ್ನು ವಿರೋಧಿಸಿದರೂ ಕ್ರಮೇಣ ಹಿಂದೂಧರ್ಮದ ವರ್ಣವ್ಯವಸ್ಥೆ ಪೂರ್ವಮಧ್ಯಕಾಲೀನ ಜೈನಧರ್ಮವನ್ನು ಪ್ರವೇಶಿಸಿದಂತಿದೆ.[೬]

**ಚೈತ್ಯಾಲಯ-ಬಸದಿ:**

ಜಿನ ಮಂದಿರಗಳನ್ನು ಚೈತ್ಯಾಲಯ,[೭] ಬಸದಿ, ಜಿನಾಲಯ, ಜೈನ ಗೃಹ, ಜೈನ ನಿವಾಸ, ಜಿನರಾಜಗೇಹ ಎಂಬಂತಹ ಹೆಸರುಗಳಿಂದ ಶಾಸನಗಳು ಕರೆದಿವೆ. ಜೈನ ಯತಿಗಳು ಮಳೆಗಾಲದ ನಾಲ್ಕು ತಿಂಗಳುಗಳನ್ನು ಬಿಟ್ಟು ಉಳಿದಂತೆ ಸದಾ ವಿಹರಿಸುತ್ತಿರಬೇಕೆಂಬ ನಿಯಮವಿದೆ. ಆದರೆ ಕ್ರಮೇಣ ಈ ನಿಯಮ ಸಡಿಲಗೊಂಡು ಅವರು ಒಂದು ಸ್ಥಳದಲ್ಲಿ ನೆಲೆ ನಿಲ್ಲತೊಡಗಿದರು. ಈ ಕಾರಣದಿಂದ ಬಸದಿಗಳ ನಿರ್ಮಾಣ ವ್ಯಾಪಕವಾಗಿ ನಡೆಯತೊಡಗಿರಬೇಕು. ಅರಸಿಕೆರೆಯಲ್ಲಿ ಬಲ್ಲಾಳನ ಮಂತ್ರಿ ರೇಚರಸನು ಸಹಸ್ರಕೂಟ ಜಿನಬಿಂಬಗಳನ್ನು ಪ್ರತಿಷ್ಠಾಪಿಸಲು ಆ ನಗರದ ನಕರಂಗಳು ಸಹಸ್ರಕೂಟ ಚೈತ್ಯಾಲಯವನ್ನು ಕಟ್ಟಿಸಿದ ವಿಷಯವನ್ನು ತಿಳಿಸುತ್ತದೆ.[೮] ಹೊಯ್ಸಳ ನರಸಿಂಹನ ಹಿರಿಯ ಹಡವಳನ ಪತ್ನಿ ಜಕ್ಕವ್ವೆಯು

---

೧. (ರೈ) ಎಕ VIII ಸೊರಬ ೩೮೪ ಕ್ರಿ.ಶ. ೧೨೩೭.

೨. (ರೈ) ಎಕ XII ತುಮಕೂರು ೩೮ ಕ್ರಿ.ಶ. ೧೧೬೦.

೩. (ರೈ) ಎಕ VII ಶಿಕಾರಿಪುರ ೨೨೫ ಕ್ರಿ.ಶ. ೧೨೦೪.

೪. Vilas A Sangve : Jaina community -A social survey ಪು. ೭೩.

೫. Ram Bhushan Prasad Singh : ಪೂರ್ವೋಕ್ತ, ಪು. ೭೩.

೬. ಅದೇ, ಪು. ೭೪.

೭. ಚೈತ್ಯಾಲಯ -ಇವು ಮೂಲತಃ ಜಿನಮಂದಿರಗಳಾಗಿದ್ದು, ಬಸದಿಗಳು- ಜೈನ ಯತಿಗಳು ಉಳಿಮುಕೊಳ್ಳಲು ಕಟ್ಟಿದ ಕಟ್ಟಡಗಳಾಗಿರ ಬಹುದು. ಕ್ರಮೇಣ ಎರಡರ ವ್ಯತ್ಯಾಸ ಅಳಿದು ಹೋಗಿರಬಹುದೇ ಎಂಬ ಸಂಶಯ ಬರುತ್ತದೆ. ಏಕೆಂದರೆ ಚೈತ್ಯಾಲಯ ಮೂಲತಃ ಚಿತೆಗೆ ಸಂಬಂಧಿಸಿದ್ದು; ಬಸದಿ ಮೂಲತಃ ವಸತಿಗೆ ಸಂಬಂಧಿಸಿದ್ದು. ನೋಡಿ: ಕಕ ನಿಘಂಟು III, ಪು. ೨೮೯೭-೯೮.

೮. (ರೈ) ಎಕ V ಅರಸಿಕೆರೆ ೭೭ ಕ್ರಿ.ಶ. ೧೨೨೦.

ಮಹೋತ್ಸಾಹದಿಂದ ತೋವುಹೆರಗಿನಲ್ಲಿ ಚೆನ್ನ ಪಾರ್ಶ್ವನಾಥ ಸ್ವಾಮಿಗಳ ಅಷ್ಟವಿಧಾರ್ಚನೆಗೆ ಮತ್ತು ಉತ್ತುಂಗ ಚೈತ್ಯಾಲಯಕ್ಕೆ ಋಷಿಯರಾಹಾರಕ್ಕೆ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೧] ಬಸದಿ ಕಟ್ಟಿಸುವುದು ಪುಣ್ಯಕಾರ್ಯವೆಂದು ತಿಳಿಯಲಾಗಿತ್ತು.[೨]

ಬಸದಿ ನಿರ್ಮಾಣ ಮತ್ತು ಜೀರ್ಣೋದ್ಧಾರ ಇವು ಪುಣ್ಯಕಾರ್ಯಗಳೆಂದು ಬಗೆದು ಇವನ್ನು ಬಹು ವ್ಯಾಪಕವಾಗಿ ಅನೇಕರು ಮಾಡಿದಂತೆ ಶಾಸನಗಳಿಂದ ತಿಳಿದು ಬರುತ್ತದೆ. ಹೊಯ್ಸಳ ಮಂತ್ರಿ ಗಂಗರಾಜ ದಂಡಾಧೀಶನ ವ್ಯಾಪಕ ಕಾರ್ಯವನ್ನು 'ಮತ್ತಿನ ಮಾತವತ್ತಿರಲಿ ಜೀರ್ಣ್ಣಜಿನಾಲಯಕೋಟಿಯಂ ಕ್ರಮಂಬೆತ್ತಿರೆ ಮುಂನಿನಸ್ತೆ ಪಲವೂರ್ಗ್ಗಳುಮಂ ನೆಜಿ ಮಾಡಿಸುತ್ತವತ್ಯುತ್ತಮ ಪಾತ್ರದಾನದೊದವಂ ಮೆಱೆವುತ್ತಿರೆ ಗಂಗವಾಡಿ ತೊಂಭತ್ತಱು ಸಾಯಿರಂ ಕೊಪಣವಾದುದು ಗಂಗಣ ದಂಡನಾಥನಿಂ'[೩] ಎಂದು ಶಾಸನವೊಂದು ವರ್ಣಿಸುತ್ತದೆ. ಏಚನೆಂಬ ಮಂತ್ರಿ ಗೊಗ್ಗವೆಂಬ ಗ್ರಾಮದಲ್ಲಿ ಬಸದಿಯನ್ನು ಕಟ್ಟಿಸಿದ್ದನ್ನು ನಿರೂಪಿಸುವ ಶಾಸನ 'ಊರೂರೊಳ್ ತಪ್ಪದೆ ಬಸದಿಯನೋರಂತಿರೆ ಮಾಡಿ ಬೆಳಗುವತ್ತಿಯ ನಾಡಂ ಧಾರಿಣಿಗೆ ನೆಗಟ್ದ ಕೊಪಣಕ್ಕೋರಗೆ ಮಾಡಿದನುದಾರನಿಧಿ ಏಚರಸಂ'[೪] ಎಂದು ಅವನನ್ನು ಕೀರ್ತಿಸುತ್ತದೆ. ಜೈನಧರ್ಮ ವ್ಯಾಪಕವಾಗಿ ಹರಡಿದ ಕೊಪಣ ಪ್ರದೇಶದಂತೆ ಗಂಗವಾಡಿ ಮತ್ತು ಬೆಳಗುವತ್ತಿ ಪ್ರದೇಶಗಳಲ್ಲಿ ಆ ಧರ್ಮ ಹರಡಲು ಗಂಗರಾಜ ಮತ್ತು ಏಚರಸ ಪ್ರಯತ್ನಿಸಿದರೆಂದು ಭಾವಿಸಬಹುದು.

ಬಸದಿಗಳಿಗೆ ಅನೇಕ ರೀತಿಯ ಹೆಸರುಗಳನ್ನು ಇಡುತ್ತಿದ್ದರು. ಕೆಲವು ಸಾರಿ ಆಯಾ ಗಚ್ಛದ ಹೆಸರುಗಳ ಮೇಲೂ ಕರೆಯುತ್ತಿದ್ದಂತೆ ತಿಳಿದು ಬರುತ್ತದೆ. ಚಂಗಾಳ್ವ ವಂಶದ ರಾಜನೊಬ್ಬ ಕಟ್ಟಿಸಿದ ಬಸದಿಯನ್ನು ಪುಸ್ತಕ ಗಚ್ಛದ ಬಸದಿ ಎಂದು ಕರೆಯಲಾಗಿದೆ.[೫] ಹಿರೇಕೆರೂರು ತಾಲ್ಲೂಕಿನ ಒಂದು ಶಾಸನದಲ್ಲಿ 'ಕ್ರಾಣೂರ್ಗ್ಗಣದ ಮೇಷಪಾಷಾಣ ಗಚ್ಛದ ಬಸದಿ'ಯ ಉಲ್ಲೇಖ ಬರುತ್ತದೆ.[೬] ಇಂಥ ಬಸದಿಗಳು ಆಯಾ ಶಾಖೆಯ ಯತಿಗಳ ವಾಸದ ಉದ್ದೇಶಕ್ಕಾಗಿ ನಿರ್ಮಾಣವಾದವುಗಳೆಂದು ಭಾವಿಸಬಹುದು. ರಟ್ಟವಂಶದ ಕಾರ್ತವೀರ್ಯನು ಕಟ್ಟಿಸಿದ ಜಿನಾಲಯವನ್ನು (ತನ್ನ ವಂಶದ ಹೆಸರಿನಲ್ಲಿ)ರಟ್ಟ ಜಿನಾಲಯವೆಂದು ಕರೆಯಲಾಗಿದೆ.[೭] ಕೆಲವು ಸಾರಿ ಬಸದಿಗಳನ್ನು ತಮಗೆ ಇಷ್ಟವಾದವರ ಸ್ಮರಣಾರ್ಥವಾಗಿಯೂ ಕಟ್ಟಿಸಿರುವುದುಂಟು. ಮಹಾಮಂಡಲೇಶ್ವರ ಹಾಕಿಬಲ್ಲದೇವ ತನ್ನ ತಂದೆ ಮಾವುಲಿದೇವನ ಪರೋಕ್ಷ ವಿನಯವಾಗಿ ಬಸದಿಯನ್ನು ನಿರ್ಮಿಸಿದ ವಿಷಯವನ್ನು ತಿಳಿಸುತ್ತದೆ.[೮] ಶ್ರವಣಬೆಳಗೊಳದ ಬಲ್ಲಾಳನ ಮಂತ್ರಿ ಚಂದ್ರಮೌಳಿಯ ಮಡದಿ ಆಚಲದೇವಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೯] ಗದಗು ತಾಲ್ಲೂಕಿನ ಒಂದು ಬಸದಿಯನ್ನು ಶಾಸನವೊಂದು ನೋಂಪಿ ಬಸದಿಯೆಂದು ಕರೆಯುತ್ತದೆ. ಸಂಧಿವಿಗ್ರಹಿ ಬೂಚಿರಾಜ ಕಟ್ಟಿಸಿದ ಬಸದಿಯನ್ನು 'ತ್ರಿಕೂಟ ಜಿನಾಲಯ'[೧೦] ಎಂದು ಕರೆಯಲಾಗಿದೆ. ಇದು ಬಸದಿಯ ವಾಸ್ತುರಚನೆಯ ಮೇಲೆ ಇಟ್ಟ ಹೆಸರಾಗಿದೆ.

---

೧. (ರೈ) ಎಕ V ಹಾಸನ ೫೭ ಕ್ರಿ.ಶ. ೧೧೫೫.
೨. (ರೈ) ಎಕ V ಅರಸಿಕೆರೆ ೧ ಕ್ರಿ.ಶ. ೧೧೬೯.
೩. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.
೪. ಆರ್. ನರಸಿಂಹಾಚಾರ್ (ಸಂ) : ಶಾಸನ ಪದ್ಯ ಮಂಜರಿ ೧೯೯೮ ಪು. ೨೪೭ ಕ್ರಿ.ಶ. ೧೨೦೫.
೫. (ಮೈ) ಎಕ V ಕೃಷ್ಣರಾಜನಗರ ೨೧ ಕ್ರಿ.ಶ. ೧೨ ಶ.ಮಾ.
೬. ಎಸ್ಐಐ XVIII ಹಿರೇಕೆರೂರು ೩೪೫ ಕ್ರಿ.ಶ. ೧೧-೧೨ ಶ.ಮಾ.
೭. ಎಇ XIII ಬೆಳಗಾಂ ೩ಬಿ ಕ್ರಿ.ಶ. ೧೨೦೪.
೮. ಸಾಧನೆ ೩-೩- ಕಲ್ಭಟಗಿ ಕ್ರಿ.ಶ. ೧೧೨೫. ಪು. ೯೯-೧೦೬.
೯. (ರೈ) ಎಕ V ಚನ್ನರಾಯಪಟ್ಟಣ ೧೫೦ ಕ್ರಿ.ಶ. ೧೧೮೨.
೧೦. ಎಸ್ಐಐ XV ಗದಗು ೬೭ ಕ್ರಿ.ಶ. ೧೧೮೫.

ಕೆಲವು ಬಸದಿಗಳನ್ನು ಶಾಸನಗಳು 'ಕನ್ನೆ ಬಸದಿಗಳೆಂದು' ಕರೆದಿರುವುದುಂಟು. ಎಂ. ಚಿದಾನಂದ ಮೂರ್ತಿಯವರು ಇದಕ್ಕೆ ಮೊದಲ ಬಸದಿ ಎಂದು ಅರ್ಥ ಕೊಟ್ಟು ಪ್ರಶ್ನೆಯ ಚಿಹ್ನೆಯನ್ನು ಹಾಕಿದ್ದಾರೆ.[೧] ಕನ್ನಡ ನಿಘಂಟಿನಲ್ಲಿ ಒಬ್ಬನು ಕಟ್ಟಿದ ಬಸದಿಗಳಲ್ಲಿ ಮೊದಲನೆಯದು ಎಂದು ಅರ್ಥ ಕೊಟ್ಟಿದ್ದಾರೆ. ಅಲ್ಲದೆ 'ರೂವಾರಿ ದ್ರೋಹಘರಟ್ಟಾಚಾರಿ ಕನ್ನೆವಸದಿಯಂ ಮಾಡಿದ' ಎಂಬ ಶಾಸನ ಪ್ರಯೋಗ ಕೊಟ್ಟಿದ್ದಾರೆ.[೨] ಪ್ರಯೋಗವಷ್ಟನ್ನೇ ನೋಡಿದರೆ ಕನ್ನೆವಸದಿ ಮಾತು ಆ ಶಿಲ್ಪಿ ರೂಪಿಸಿದ ಮೊದಲ ಬಸದಿ ಎಂದು ಅರ್ಥೈಸಲೂ ಅವಕಾಶವಿದೆ. ಆದರೆ ಕೆಲವು ಶಾಸನಗಳಲ್ಲಿ ಬರುವ 'ಕಂನೆವಸದಿಯಾಗಿ ಮಾಡಿಸಿ'[೩] ಎಂಬ ಮಾತಿಗೆ ಒಬ್ಬ ವ್ಯಕ್ತಿ ಕಟ್ಟಿಸಿದ ಮೊದಲ ಬಸದಿ ಎಂದು ಅರ್ಥೈಸಲೂ ತೊಡಕಿದೆ. ಏಕೆಂದರೆ ಶ್ರವಣಬೆಳಗೊಳದ ಶಾಸನವೊಂದರಲ್ಲಿ ಭರತಮಯ್ಯ ಎಂಬ ದಂಡನಾಯಕ ಭರತ ಬಾಹುಬಲಿ ಕೇವಲಿಗಳ ಪ್ರತಿಮೆಗಳನ್ನು ಬಸದಿಗಳನ್ನು ತೀರ್ಥ ದ್ವಾರ... ಮೆಟ್ಟಿಲು ಇತ್ಯಾದಿಗಳನ್ನು ಮಾಡಿಸಿದನೆಂದು ಹೇಳಿ 'ಪ್ರಕಟ ಯಶೋವಿಭುವೆಣ್ಬತ್ತು ಕನ್ನೆವಸದಿಗಳನೊಸೆದು ಜೀರ್ಣೋದ್ಧಾರಪ್ರಕರಮನಿನ್ನೂಱನಲೌಕಿಕ ಧೃತಿ ಮಾಡಿಸಿದನೆಸೆಯೆ ಭರತ ಚಮೂಪಂ'[೪] ಎಂದು ಬರುವುದರಿಂದ ಕನ್ನೆ ವಸದಿಯನ್ನು ಅರ್ಥೈಸುವುದು ಇನ್ನೂ ಕಠಿಣವಾಗುತ್ತದೆ.

ಕೆಲವು ಬಸದಿಗಳನ್ನು ತುಂಬಾ ಪ್ರಾಚೀನ ಬಸದಿಗಳೆಂಬ ನಂಬಿಕೆ ಹುಟ್ಟಿಸಲು ಅಥವಾ ಅನ್ಯ ಧರ್ಮೀಯರ ಒಲವನ್ನು ಗಳಿಸಲೋ ಎಂಬಂತೆ ರಾಮಾಯಣ, ಮಹಾಭಾರತದ ಪಾತ್ರಗಳ ಸಂಬಂಧವನ್ನು ಬಸದಿಗಳಿಗೆ ಕಲ್ಪಿಸಿ ಹೇಳುವ ಪರಿಪಾಠ ಪ್ರಾಚೀನ ಕಾಲದಿಂದಲೂ ಇದ್ದಂತಿದೆ.[೫] ಶ್ರೀರಾಮನು ಮಾಡಿಸಿದ ೬೪ ಬಸದಿಗಳಲ್ಲಿ 'ಗಂಗರ್ಪ್ಪಡಿಸಲಿಸೆ' ಬಂದ ಬಸದಿಗಳಲ್ಲಿ ಯಾದವ ಚಂಗಾಳ್ವ ಶ್ರೀ ರಾಜೇಂದ್ರ ಚೋಳ ನನ್ನಿ ಚೆಂಗಾಳ್ವ ಪುನರ್ನ್ನವಂ ಮಾಡಿಸಿದ ಪನಸೋಗೆಯ ಬಸದಿ, ದೇಸಿಗಗಣದ ಹೊತ್ತಗೆಗಚ್ಛದ ಬಸದಿ ೬೪ಕ್ಕೆ ಮುಖ್ಯವಾದದ್ದೆಂದು ಹೇಳಲಾಗಿದೆ.[೬] ಹೀಗೆ ಬಸದಿಗಳನ್ನು ನಾನಾ ರೀತಿಯಲ್ಲಿ ಹೆಸರಿಸಿ ಕರೆಯುವ ರೂಢಿಯನ್ನು ಕಾಣಬಹುದು.

**ಆಚಾರ್ಯರು:**

ಬಸದಿಯ ಪೂಜಾಕಾರ್ಯಗಳನ್ನು ನಿರ್ವಹಿಸುತ್ತಿದ್ದ ಜೈನಮಠಗಳ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದವರನ್ನು ಅಚಾರ್ಯರೆಂದು ಕರೆಯುತ್ತಿದ್ದರು.[೭] 'ಮಾಗಣ್ಡಿಯ ರತ್ನತ್ರಯ ಬಸದಿಯಾಚಾರ್ಯ್ಯರ್ಭಾನುಕೀರ್ತಿಸಿದ್ಧಾನ್ತ ದೇವರಂ ಬರಿಸಿ' ಎಂದು ಒಂದು ಶಾಸನ ಉಲ್ಲೇಖಿಸುತ್ತದೆ.[೮] ಬಂದಳಿಕೆಯ ಒಂದು ಶಾಸನ 'ತೀರ್ಥಾಚಾರ್ಯ ಶುಭಚಂದ್ರ ಪಂಡಿತದೇವ' ಪಾದ ತೊಳೆಸಿಕೊಂಡು ದಾನ ಪಡೆದ ವಿಷಯವನ್ನು ತಿಳಿಸುತ್ತದೆ.[೯] ಶಾಸನಗಳ ಪ್ರಯೋಗಗಳನ್ನು ಗಮನಿಸಿದರೆ ಜೈನ ಆಚಾರ್ಯರು ಹೆಚ್ಚು ಕಡಮೆ ಶೈವಧರ್ಮದ ಸ್ಥಾನಾಚಾರ್ಯರ ರೀತಿಯಲ್ಲಿ ಕಾರ್ಯ ನಿರ್ವಹಿಸಿದ ಹಾಗೆ ಕಂಡುಬರುತ್ತದೆ. ಕೆಲವು ಆಚಾರ್ಯರನ್ನು

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೮೮.

೨. ಕನ್ನಡ ಕನ್ನಡ ನಿಘಂಟು (ಕ.ಸಾ.ಪ.) ಸಂ. II ಪು. ೧೪೯೪.

೩. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.

೪. (ಮೈ) ಎಕ II ಶ್ರವಣಬೆಳಗೊಳ ೩೭೩ ಕ್ರಿ.ಶ. ೧೨ ಶ.ಮಾ.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೮೯.

೬. (ಮೈ) ಎಕ V ಕೃಷ್ಣರಾಜನಗರ ೨೫ ಕ್ರಿ.ಶ. ೧೧-೧೨ ಶ.ಮಾ.

೭. Ram Bhushan Prasad Singh : ಪೂರ್ವೋಕ್ತ, ಪು. ೪೮-೪೯. ೭-೮ ನೆಯ ಶತಮಾನದ ಪೂರ್ವದಲ್ಲಿ ಭೋಜ ಅಥವಾ ಭೋಜಕವೆಂದು ಕರೆಯಲ್ಪಡುತ್ತಿದ್ದ ಆಚಾರ್ಯವರ್ಗವಿದ್ದಿತೆಂದೂ ಮುಂದಿನ ಶಾಸನಗಳಲ್ಲಿ ಅವರ ಪ್ರಸ್ತಾಪ ಕಂಡುಬರುವುದಿಲ್ಲವೆಂದು ಅಭಿಪ್ರಾಯ ಪಡುತ್ತಾರೆ.

೮. (ರೈ) ಎಕ VII ಶಿಕಾರಿಪುರ ೧೯೭ ಕ್ರಿ.ಶ. ೧೧೮೨.

೯. (ರೈ) ಎಕ VII ಶಿಕಾರಿಪುರ ೨೨೫ ಕ್ರಿ.ಶ. ೧೨೦೪.

'ಮಂಡಲಾಚಾರ್ಯ, ಮಹಾಮಂಡಲಾಚಾರ್ಯ'[೧] ಎಂಬ ವಿಶೇಷಣಗಳೊಂದಿಗೆ ಶಾಸನಗಳು ಹೇಳಿವೆ. ಆದರೆ ಅವುಗಳ ಅರ್ಥವ್ಯಾಪ್ತಿ ಶಾಸನಗಳಿಂದ ಸ್ಪಷ್ಟವಾಗುವುದಿಲ್ಲ.

**ಸಂಘ, ಗಣ, ಗಚ್ಛ, ಅನ್ವಯ, ಬಳಿ:**

ಶಾಸನಗಳಲ್ಲಿ ಜೈನ ಮುನಿಗಳನ್ನು ಹೇಳುವಾಗ ಅವರ ಸಂಘ, ಗಣ, ಗಚ್ಛ, ಅನ್ವಯ, ಬಳಿಗಳನ್ನು ಹೆಸರಿಸುವ ಸಂಪ್ರದಾಯ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರುವುದು ಕಂಡುಬರುತ್ತದೆ. ಕೆಲವು ಶಾಸನಗಳಲ್ಲಿ ಮುನಿಗಳನ್ನು ಹೆಸರಿಸುವಾಗ ಕೇವಲ ಸಂಘದ ಹೆಸರನ್ನು ಹೇಳಿದೆ, ಇನ್ನು ಕೆಲವು ಕಡೆ ಗಣವನ್ನು ಮಾತ್ರ ಹೇಳಿದೆ. ಕೆಲವು ಸಾರಿ ಸಂಘ ಮತ್ತು ಗಣದ ಹೆಸರನ್ನು ಹೇಳಲಾಗಿದೆ. ಕೆಲವು ಶಾಸನಗಳು ಸಂಘ, ಗಣ, ಗಚ್ಛ ಮತ್ತು ಅನ್ವಯವನ್ನು ಹೇಳಿ ಮುನಿಗಳ ಹೆಸರನ್ನು ಹೇಳುವುದುಂಟು.[೨] ಆದರೆ ಮುನಿಗಳ ಸಂಘ, ಗಣ ಇತ್ಯಾದಿಗಳನ್ನು ಹೇಳುವಾಗ ಏಕರೂಪ ವಿಧಾನವನ್ನು ಶಾಸನಗಳು ಅನುಸರಿಸಿಲ್ಲ. ಜೈನ ಧರ್ಮದ ಎಲ್ಲ ಶಾಖೆಗಳಲ್ಲೂ ಸಂಘ, ಗಣ ಮುಂತಾದವುಗಳ ವಿಭಾಗ ಕಂಡು ಬರುತ್ತದೆ. ಶ್ವೇತಾಂಬರರಲ್ಲಿ ಭಾವಹರ್ಷಗಚ್ಛ, ನಾಗೇಂದ್ರ ಗಚ್ಛದಿಂದ ಹಿಡಿದು ಸಂಕೇಶ್ವರ ಗಚ್ಛದವರೆಗೆ ೧೧೭ ಗಚ್ಛಗಳಿವೆ.[೩]

ನಮ್ಮ ಅಧ್ಯಯನಾವಧಿಯ ಶಾಸನಗಳಲ್ಲಿ ಕಂಡು ಬರುವ ಸಂಘ, ಗಣ, ಗಚ್ಛ, ಅನ್ವಯ ಮತ್ತು ಬಳಿಗಳನ್ನು ಕೊಡಲಾಗಿದೆ.

**ಸಂಘಗಳು** : ಮೂಲ ಸಂಘ,[೪] ಶ್ರೀಮದ್ರವಿಳ ಸಂಘ,[೫] ಯಾಪನೀಯ,[೬] ನಂದಿ.[೭]

**ಗಣಗಳು** : ಬಲಾತ್ಕಾರ,[೮] ಮಡುವ,[೯] ಕ್ರಾನೂರ್[೧೦] ಅಥವಾ ಕಾಣೂರ್, ದೇಸಿ,[೧೧] ಸೂರಸ್ಥ,[೧೨] ಸೇನ,[೧೩] ಕಾರೆಯ,[೧೪] ದೇವ,[೧೫] ಕುಮುಡಿ,[೧೬] ಪುನ್ನಾಗ ವೃಕ್ಷ[೧೭] (ವೃಕ್ಷ ಮೂಲವೆಂದೂ ಬರುತ್ತದೆ).

---

೧. ಕಇ I ಸೌಂದತ್ತಿ ೩೨ ಕ್ರಿ.ಶ. ೧೨೧೯.
೨. (ಮೈ) ಎಕ II ಶ್ರವಣಬೆಳಗೊಳ ೨೯೭ ಕ್ರಿ.ಶ. ೧೨ ಶ.ಮಾ.
೩. Muni Uttam Kamal jain : ಪೂರ್ವೋಕ್ತ, ಪು. ೭೦.
೪. (ಮೈ) ಎಕ V ಕೃಷ್ಣರಾಜನಗರ ೨೯ ಕ್ರಿ.ಶ. ೧೨ ಶ.ಮಾ.
೫. (ರೈ) ಎಕ VI ಕಡೂರು ೬೯ ಕ್ರಿ.ಶ. ೧೧೬೦.
೬. ಜೆ.ಕೆ.ಯು. X-I ಅರಸಿಕೆರೆ ಕ್ರಿ.ಶ. ೧೧೬೮.
೭. ಕಇ V ಖಾನಾಪುರ ೩೩ ಕ್ರಿ.ಶ. ೧೧೭೬.
೮. (ಮೈ) ಎಕ II ಶ್ರವಣಬೆಳಗೊಳ ೪೫೬ ಕ್ರಿ.ಶ. ೧೨೮೨.
೯. ಜೆಕೆಯ X-I ಅರಸಿಕೆರೆ ಕ್ರಿ.ಶ. ೧೧೬೮.
೧೦. (ರೈ) ಎಕ VII ಶಿಕಾರಿಪುರ ೧೯೭ ಕ್ರಿ.ಶ. ೧೧೮೨.
೧೧. (ಮೈ) ಎಕ VII ನಾಗಮಂಗಲ ೨೬ ಕ್ರಿ.ಶ. ೧೧೬೮.
೧೨. ಎಸ್‌ಐಐ XVIII ಹಾವೇರಿ ೧೫೧ ಕ್ರಿ.ಶ. ೧೧೪೮.
೧೩. ಕಇಆಪ್ರ ಮೆಹಬೂಬನಗರ ೬೧ ಕ್ರಿ.ಶ. ೧೧-೧೨ ಶ.ಮಾ.
೧೪. ಧಾ ತಾ ಶಾ. ೪೫ ಕ್ರಿ.ಶ. ೧೨ ಶ.ಮಾ.
೧೫. ಎಸ್‌ಐಐ XV ಗದಗು ೫೫೬ ಕ್ರಿ.ಶ. ೧೨ ಶ.ಮಾ.
೧೬. ಎಸ್‌ಐಐ XV ಗದಗು ೬೧೦ ಕ್ರಿ.ಶ. ೧೨೩೦.
೧೭. ಧಾ ತಾ ಶಾ ೭೩ ಕ್ರಿ.ಶ. ೧೩ ಶ.ಮಾ.

**ಗಚ್ಛಗಳು** : ಪುಸ್ತಕ[೧] (ಹೊತ್ತಗೆ ಎಂದು ಬರುವುದುಂಟು) ಚಿತ್ರಕೂಟ,[೨] ತಿಂತ್ರಿಣಿ,[೩] (ತಿಂತ್ರಿಕ), ಮೇಷ ಪಾಷಾಣ,[೪] ವಕ್ರ,[೫] ಕೌರೂರ್,[೬] ಪೊಗಲೆ,[೭] ಸ್ವರ್ಣ ಪಾಷಾಣ,[೮] ಸರಸ್ವತಿ.[೯]

**ಅನ್ವಯಗಳು** : ಕೊಂಡಕುಂದ,[೧೦] ಅರುಂಗಳ,[೧೧] ಚಿತ್ರಕೂಟ,[೧೨] ಶ್ರೀಮೈಣ,[೧೩] ಮೈಳಾಪ.[೧೪]

**ಬಳಿ** : ಇಂಗುಳೇಶ್ವರ,[೧೫] ಹನಸೋಗೆ.[೧೬]

ಸಂಘ, ಗಣ, ಗಚ್ಛಗಳಿಗೆ ಪೂರ್ಣ ಸಮರ್ಪಕ ವಿವರಣೆ ಇದುವರೆಗೂ ಆಗಿರುವಂತೆ ತೋರುವುದಿಲ್ಲ. ಮೂವರು ಸನ್ಯಾಸಿಗಳ ಗುಂಪನ್ನು ಗಣವೆಂದೂ, ಏಳುಜನ ಸನ್ಯಾಸಿಗಳ ಗುಂಪನ್ನು ಗಚ್ಛವೆಂದೂ, ಸನ್ಯಾಸಿಗಳ ಸಮುದಾಯವನ್ನು ಸಂಘವೆಂದೂ ಗುರುತಿಸಿರುವುದುಂಟು.[೧೭] ಒಬ್ಬ ಆಚಾರ್ಯನ (ಗಣಿನ) ನೇತೃತ್ವದಲ್ಲಿದ್ದ ಮುನಿ ಸಮುದಾಯವೇ ಗಣ. ಗಚ್ಛವೆಂಬುದು ಈಚಿನ ಕಲ್ಪನೆ. ಇದಕ್ಕೂ ಗಣಕ್ಕೂ ಎಷ್ಟೋ ಕಡೆ ಏನು ಸಂಬಂಧವೆಂಬುದೇ ಗೊತ್ತಾಗುವುದಿಲ್ಲ. ಬಹುಶಃ ಗಣ, ಗಚ್ಛಗಳೆರಡೂ ರಚನೆಯಲ್ಲಿ ಒಂದೇ ಆಗಿದ್ದು, ಗಣವು ದೊಡ್ಡ ಗುಂಪನ್ನು, ಗಚ್ಛವು ಅದರ ಒಳಗುಂಪುಗಳನ್ನು ಸೂಚಿಸುತ್ತದೆ. ಅನ್ವಯ (ಅಥವಾ ಕುಲ)ಗಳ ಸಮುದಾಯವೇ ಗಣ[೧೮] ಎಂಬ ವಿವರಣೆಯೂ ಇದೆ. ಸಂಘಗಳಲ್ಲಿ ಮೂಲ ಸಂಘದ ಪ್ರಸ್ತಾಪ ಅಧಿಕವಾಗಿರುವುದನ್ನು ಗಮನಿಸಿದರೆ ಅದು ಕರ್ನಾಟಕದಲ್ಲಿ ಶಕ್ತಿಯುತವಾಗಿದ್ದಿತೆಂದು ಭಾವಿಸಬಹುದು. ಸಂಘ, ಗಣ, ಗಚ್ಛಗಳ ವಿಕಾಸ ಹೇಗೆ ಉಂಟಾಯಿತು ಎಂಬುದು ಇನ್ನೂ ಕುತೂಹಲದ ವಿಷಯವೇ ಆಗಿದೆ. ಕೆಲವು ವ್ಯಕ್ತಿ ನಾಮಗಳಂತೆಯೂ ಕೆಲವು ಸ್ಥಳನಾಮಗಳಂತೆ, ವೃಕ್ಷನಾಮಗಳಂತೆಯೂ ಕಂಡು ಬರುವ ಇವುಗಳ ಅಧ್ಯಯನ ಆಳವಾಗಿ ಇನ್ನೂ ನಡೆಯಬೇಕಿದೆ.

---

೧. (ಮೈ) ಎಕ V ಕೃಷ್ಣರಾಜನಗರ ೨೯ ಕ್ರಿ.ಶ. ೧೨ ಶ.ಮಾ.
೨. ಎಸ್‌ಐಐ XVIII ಹಾವೇರಿ ೧೫ ಕ್ರಿ.ಶ. ೧೧೪೮.
೩. ಎಸ್‌ಐಐ XV ಮುಂಡರಗಿ ೫೬೮ ಕ್ರಿ.ಶ. ೧೨ ಶ.ಮಾ.
೪. ಎಸ್‌ಐಐ XVIII ಹಿರೇಕೆರೂರು ೩೪೫ ಕ್ರಿ.ಶ. ೧೧-೧೨ ಶ.ಮಾ.
೫. (ರೈ) ಎಕ V ಬೇಲೂರು ೧೨೯ ಕ್ರಿ.ಶ. ೧೧೯೨.
೬. ಕಇಆಪ್ರ ಮೆಹಬೂಬನಗರ ೬೧ ಕ್ರಿ.ಶ. ೧೧-೧೨ ಶ.ಮಾ.
೭. (ರೈ) ಎಕ XI ದಾವಣಗೆರೆ ೧೩ ಕ್ರಿ.ಶ. ೧೨೭೧.
೮. ಎಸ್‌ಐಐ XV ಧಾರವಾಡ ೫೫೨ ಕ್ರಿ.ಶ. ೧೨ ಶ.ಮಾ.
೯. ಎಐರ್‌ಐಇ ೧೯೫೮-೫೯ ಸೊಲ್ಲಾಪುರ ೬೪೭ ಕ್ರಿ.ಶ. ೧೩೪೦.
೧೦. (ಮೈ) ಎಕ II ಶ್ರವಣಬೆಳಗೊಳ ೨೯೦ ಕ್ರಿ.ಶ. ೧೨ ಶ.ಮಾ.
೧೧. (ರೈ) ಎಕ VI ಕಡೂರು ೬೯ ಕ್ರಿ.ಶ. ೧೧೬೦.
೧೨. ಎಸ್‌ಐಐ XX ಶಿರಹಟ್ಟಿ ೨೨೪ ಕ್ರಿ.ಶ. ೧೨೯೫.
೧೩. ಎಂಎಆರ್ ೧೯೪೩ ನಗರ ೩೬ ಕ್ರಿ.ಶ. ೧೩ ಶ.ಮಾ.
೧೪. ಧಾತಾಶಾ ೪೫ ಕ್ರಿ.ಶ. ೧೨ ಶ.ಮಾ.
೧೫. ಕಇಆಪ್ರ ರಾಯಚೂರು ೧೧ ಕ್ರಿ.ಶ. ೧೨ ಶ.ಮಾ.
೧೬. (ಮೈ) ಎಕ IV ಚಾಮರಾಜನಗರ ೩೬೫ ಕ್ರಿ.ಶ. ೧೩೫೫.
೧೭. A.N. Upadhye : ಪೂರ್ವೋಕ್ತ ಪು. ೧೯೨-೯೩.
೧೮. ಎಂ. ಚಿದಾನಂದ ಮೂರ್ತಿ : ಸಾಂ ಪೂರ್ವೋಕ್ತ, ಪು. ೮೭.

ಕೆಲವು ಬಸದಿಗಳನ್ನು ನಿಶ್ಚಿತವಾದ ಗಚ್ಛದವರಿಗೆಂದೇ ಕಟ್ಟಿಸಿದಂತೆ ಕೆಲವು ಶಾಸನಗಳಿಂದ ತಿಳಿದು ಬರುತ್ತದೆ. ಚಂಗಾಳ್ವ ರಾಜನೊಬ್ಬ ಕಟ್ಟಿಸಿದ ಬಸದಿಯನ್ನು 'ಪುಸ್ತಕ ಗಚ್ಛದ ಬಸದಿ'[೧] ಎಂದು ಕರೆಯಲಾಗಿದೆ. ಅದೇ ರೀತಿ ಹಿರೇಕೆರೂರು ತಾಲ್ಲೂಕಿನ ಒಂದು ಬಸದಿಯನ್ನು 'ಕ್ರಾಣೂರ್ಗ್ಗಣದ ಮೇಷಪಾಷಾಣ ಗಚ್ಛದ ಬಸದಿ'[೨] ಎಂದು ಒಂದು ಶಾಸನ ಹೆಸರಿಸಿದೆ. ಆದರೆ ಗಣ, ಗಚ್ಛ, ಅನ್ವಯಗಳಲ್ಲಿ ಪರಸ್ಪರ ಇದ್ದ ವ್ಯತ್ಯಾಸ, ತತ್ವಭೇದ ಮುಂತಾದವುಗಳ ವಿವರಗಳು ತಿಳಿದು ಬರುವುದಿಲ್ಲ.

**ಸಮಾಧಿಮರಣ:**

ವೈರಾಗ್ಯವನ್ನು ತನ್ನ ಉನ್ನತ ತತ್ವವಾಗಿ ಬೋಧಿಸಿದ ಧರ್ಮಗಳಲ್ಲಿ ಜೈನ ಧರ್ಮವೂ ಒಂದಾಗಿದೆ. ಜೈನ ಯತಿಗಳು ಸಮಾಧಿ ಮರಣವನ್ನು ವಿಶೇಷವಾಗಿ ಮಾನ್ಯ ಮಾಡಿದ್ದರು. ಜೈನರಲ್ಲಿ ಮಾತ್ರವಲ್ಲ ಹಿಂದೂಗಳಲ್ಲಿಯೂ ನಿಶ್ಚಿತ ದಿನಗಳಲ್ಲಿ ಪ್ರಾಣತ್ಯಾಗ ಮಾಡುವುದರಿಂದ ಸದ್ಗತಿ ದೊರೆಯುವುದೆಂಬ ನಂಬಿಕೆ ಇದ್ದಿತು. ಆದರೆ ಯಾವುದೇ ಪ್ರಮುಖ ಹಿಂದೂಧರ್ಮ ಅದನ್ನು ಧರ್ಮದ ಪ್ರಧಾನ ವಿಷಯವನ್ನಾಗಿ ಭಾವಿಸಿದಂತಿಲ್ಲ. ಶ್ರವಣಬೆಳಗೊಳದ ಶಾಸನಗಳನ್ನು ಆಧರಿಸಿ ಏಳು ರೀತಿಯ ಧಾರ್ಮಿಕ ಮರಣಗಳನ್ನು ಎಸ್. ಶೆಟ್ಟರ್ ಗುರುತಿಸುತ್ತಾರೆ. ಆರಾಧನಾ, ಪಂಚಪಾದ, ಸನ್ಯಸನ, ಸಲ್ಲೇಖನ, ಸಮಾಧಿ, ಪಂಡಿತ ಮತ್ತು ಪೌಗ್ಗಮಣ (=ಸಂ. ಪ್ರಾಯೋಪಗಮನ).[೩] ಇವುಗಳಲ್ಲಿ ಕೆಲವು ಮಾತ್ರ ಹೆಚ್ಚು ಪ್ರಚಾರದಲ್ಲಿದ್ದಂತೆ ಕಂಡು ಬರುತ್ತದೆ. ಸಾಮಾನ್ಯವಾಗಿ ಈ ರೀತಿಯ ಮರಣಗಳನ್ನು ಪ್ರಶಸ್ತ ಸ್ಥಳಗಳಲ್ಲಿ ಅಥವಾ ಪವಿತ್ರ ಸ್ಥಳಗಳಲ್ಲಿ ಸ್ವೀಕರಿಸಬೇಕೆಂದು ಜೈನ ಗ್ರಂಥಗಳು ಹೇಳುತ್ತವೆ. 'ಆ ಮೇರೆಗೆ ಸ್ವಗ್ರಾಮ ಬಸದಿಯಲ್ಲಿ, ಬೆಳ್ಗೊಳ, ಕೊಪ್ಪಳ ಮುಂತಾದ ಜೈನಪುಣ್ಯಸ್ಥಳಗಳಲ್ಲಿ ವ್ರತ ಹಿಡಿದಿರುವುದುಂಟು.'[೪] ಎಲ್ಲ ಸಂದರ್ಭಗಳಲ್ಲಿ ಸಾವನ್ನಪ್ಪುವ ಸ್ವಾತಂತ್ರ್ಯ ಜೈನ ಧರ್ಮದಲ್ಲಿ ಇರಲಿಲ್ಲ. ಅದಕ್ಕೆ ವಿಶೇಷ ಪರಿಮಿತಿಗಳು ಇದ್ದವು. ವಾಸಿಯಾಗದ ರೋಗ ಬಂದಾಗ, ಕ್ಷಾಮಕಾಲದಲ್ಲಿ, ಅಪಾಯ, ಮುಪ್ಪು ಇವು ಪರಿಹಾರವಿಲ್ಲವೆಂದಾಗ ಧಾರ್ಮಿಕ ವಿಧಿಯಿಂದ ಮರಣವನ್ನಪ್ಪಲು ಅವಕಾಶವಿದೆ. ರತ್ನಕರಂಡಕ, ಶಾಸ್ತ್ರಸಾರ ಸಮುಚ್ಚಯ, ಭಗವತೀ ಆರಾಧನ ಮೊದಲಾದ ಗ್ರಂಥಗಳು ಈ ವಿವರಗಳನ್ನು ನೀಡುತ್ತವೆ.[೫]

ಜೈನಧರ್ಮ ಸಮಾಧಿಮರಣಕ್ಕೆ ಒಂದು ವಿಶಿಷ್ಟ ಚೌಕಟ್ಟನ್ನು ಒದಗಿಸಿಕೊಟ್ಟಿದೆ. ಕರ್ನಾಟಕದಲ್ಲಿ ಪ್ರಚಾರದಲ್ಲಿದ್ದು, ಶಾಸನಗಳಲ್ಲಿ ಹೆಚ್ಚಾಗಿ ಕಂಡುಬರುವುದು ಸನ್ಯಸನ ವಿಧಿ, ಸಮಾಧಿ ಮರಣ ಮತ್ತು ಸಲ್ಲೇಖನ ವಿಧಿ. ಇನ್ನು ಕೆಲವು ಧಾರ್ಮಿಕ ಮರಣಗಳು ಯಾವ ವಿಧಿಯಿಂದ ನಡೆಯುತ್ತಿತ್ತು ಎಂಬುದು ಸ್ಪಷ್ಟವಾಗುವುದಿಲ್ಲ.

ಸನ್ಯಸನ ವಿಧಿಯಿಂದ ಮರಣ ಹೊಂದಿದ ಕೆಲವು ಉದಾಹರಣೆಗಳನ್ನು ಗಮನಿಸಬಹುದು. ಹಿರೆಕೊಣಚಿಯ ಶಾಸನವೊಂದು 'ಶ್ರೀ ಸಾತಿ ಸೆಟ್ಟಿಯರ ಮಡದಿ ಕಾಮವೆ ಸನ್ಯಸನಮಂ ತಳೆದು ಸ್ವರ್ಗಸ್ತೆ' ಯಾದ ವಿಷಯವನ್ನು ತಿಳಿಸುತ್ತದೆ.[೬] ಮೇಚಚಮೂಪನು ಕೊಪಣ ಬೆಳ್ಗೊಳ ಮುಂತಾದೆಡೆ ಜಿನೇಂದ್ರಭವನಗಳನ್ನು ಕಟ್ಟಿಸಿ ಸನ್ಯಸನವಿಧಿಯಿಂದ ಶರೀರ ತ್ಯಾಗ

---

೧. (ಮೈ) ಎಕ V ಕೃಷ್ಣರಾಜನಗರ ೨೧ ಕ್ರಿ.ಶ. ೧೨ ಶ.ಮಾ.

೨. ಎಸ್‌ಐಐ XVIII ಹಿರೇಕೆರೂರು ೩೪೫ ಕ್ರಿ.ಶ. ೧೧-೧೨ ಶ.ಮಾ.

೩. S.Settar : Inviting Death. ಪು. ೧೦೧.

೪. ಎಂ.ಎಂ. ಕಲಬುರ್ಗಿ : ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು, ಪು. ೬.

೫. ಅದೇ.

೬. ಕಇ VI ಹಿರೇಕೆರೂರು ೪೯ ಕ್ರಿ.ಶ. ೧೨೭೧.

ಮಾಡಿ ಸುರಲೋಕವಾಸಿಯಾದನೆಂದು ಶ್ರವಣಬೆಳಗೊಳದ ಶಾಸನವೊಂದು ತಿಳಿಸುತ್ತದೆ.[೧] 'ರಾಜ ಭಟಾರರು...ನೋನ್ತು ಸನ್ಯಸನ' ಮಾಡಿ ಮಡಿದ ವಿಷಯವನ್ನು ಹನ್ನೊಂದನೆಯ ಶತಮಾನದ ಶಾಸನವೊಂದು ತಿಳಿಸುತ್ತದೆ.[೨]

ಇದೇ ರೀತಿ ಸಮಾಧಿ ವಿಧಿಯಿಂದ ಮಡಿದ ವಿಷಯವನ್ನು ಕೆಲವು ಶಾಸನಗಳು ತಿಳಿಸುತ್ತವೆ. ಬಾಳೂರಿನ ಶಾಸನವೊಂದು 'ಸರ್ಬ್ಬಾಧಿಕಾರಿ ಕಾವಯನ ತಾಯಿ ಚಿಕ್ಕಣಂದಿ ದೇವರ ಗುಡ್ಡಿ ಮಲ್ಲವೆ ಸಮಾಧಿವಡೆದರು'[೩] ಎಂದು ತಿಳಿಸುತ್ತದೆ. ಇನ್ನೊಂದು ಶಾಸನ 'ಅಮೃತಚಂದ್ರಭಟ್ಟಾರಕದೇವರ ಗುಡ್ಡ ಕೇಸಸೆಟ್ಟಿಯ ಮಾದೈಯ್ಯಂ ಸಮಾಧಿವಿಧಿಯಿಂ ಮುಡಿಪಿ ಸುರಲೋಕ ಪ್ರಾಪ್ತನಾದ'[೪] ವಿಷಯವನ್ನು ತಿಳಿಸುತ್ತದೆ.

ಸಲ್ಲೇಖನ ವಿಧಿಯಿಂದ ಮರಣವನ್ನಪ್ಪುವ ವಿಧಾನವೂ ಆ ಕಾಲದಲ್ಲಿ ಪ್ರಚಲಿತವಿದ್ದಿತು. ಜಿನನಾಥಪುರದ ಶಾಸನವೊಂದು ಕಾಳಬ್ಬೆ ಎಂಬುವವಳು ಸಲ್ಲೇಖನ ವಿಧಿಯಿಂದ ಮರಣ ಹೊಂದಿದ ವಿಷಯವನ್ನು ತಿಳಿಸುತ್ತದೆ.[೫] ಜೋಡಿ ಬಸವನಪುರದ ಶಾಸನವು ಚಂದ್ರಪ್ರಭಮುನಿಯು ಸಲ್ಲೇಖನ ವಿಧಿಯಿಂದ ಪ್ರಾಣತ್ಯಾಗ ಮಾಡಿದ ವಿಷಯವನ್ನು ತಿಳಿಸುತ್ತದೆ.[೬]

ಜೈನಧರ್ಮಾನುಯಾಯಿಗಳಾಗಿ ವ್ರತ ಹಿಡಿದು ಮರಣ ಹೊಂದಿದವರಲ್ಲಿ, ಮೂರು ದಿನಗಳಿಂದ ಹಿಡಿದು ಮೂರು ತಿಂಗಳವರೆಗೆ ಜೀವಿಸಿದ್ದು ಅನಂತರ ಮರಣ ಹೊಂದಿದ ವಿಷಯವನ್ನು ಶಾಸನಗಳು ತಿಳಿಸುತ್ತವೆ.[೭] ಜೈನ ಧರ್ಮವು ಸಮಾಧಿ ಮರಣಕ್ಕೆ ಕೆಲವು ಅನಿವಾರ್ಯ ಕಾರಣಗಳನ್ನು ಹೇಳಿದ್ದರೂ ಅದೇ ಚೌಕಟ್ಟಿನಲ್ಲಿಯೇ ಎಲ್ಲ ಸಾರಿ ನಡೆದ ಹಾಗಿಲ್ಲ. 'ಮಗಳು ಶಾಂತಲೆಗಾಗಿ ತಾಯಿ ಮಾಚಿಕಬ್ಬೆ, ಮಲ್ಲಿಸೆಟ್ಟಿಗಾಗಿ ಪ್ರಿಯಪುತ್ರ ಮಾಳಯ್ಯ, ಅತ್ತೆ ಮಾಳವ್ವೆಗಾಗಿ ಸೊಸೆ ಚೌಡಿಯಕ್ಕ ಹಿಡಿದ ಸಲ್ಲೇಖನಗಳು ಉದಾಹರಣೆಯಾಗಿವೆ. ಇವು ಜೈನ ಸಮಾಧಿಮರಣದ ವಲಯ ವಿಸ್ತಾರವಾಗುತ್ತಿದ್ದುದರ ಅಂದರೆ ಹಿಂದೂ ಮರಣಕ್ಕೆ ಹೊಂದಿಕೊಳ್ಳುತ್ತಿದ್ದುದರ ಸೂಚನೆಗಳಾಗಿವೆ.'[೮]

ನಿಸಿದಿ:

ಜೈನ ಧಾರ್ಮಿಕವಿಧಿಗಳಿಂದ ಮರಣ ಹೊಂದಿದವರ ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಇಂಥ ಸ್ಮಾರಕಗಳನ್ನು ನಿಸಿಧಿ,[೯] ನಿಸಿದ್ಧಿ,[೧೦] ನಿಶಿಧಿ,[೧೧] ನಿಷಿಧಿ[೧೨] ಎಂಬ ರೂಪಗಳಿಂದ ಶಾಸನಗಳು ಕರೆದಿವೆ. ಶ್ರವಣಬೆಳಗೊಳದ ಶಾಸನಗಳಲ್ಲಿ ಕಂಡು ಬರುವ ನಿಸಿದಿಗೆ ಸಂಬಂಧಿಸಿದ ವಿವಿಧ ಭಿನ್ನರೂಪಗಳನ್ನು ಅಭ್ಯಸಿಸಿ ಎ.ಎನ್. ಉಪಾಧ್ಯೆ ಅವರು ಆ ಎಲ್ಲ ರೂಪಗಳಿಗೆ

---

೧. (ಮೈ) ಎಕ II ಶ್ರವಣಬೆಳಗೊಳ ೫೩೨ ಕ್ರಿ.ಶ. ೧೨ ಶ.ಮಾ.
೨. (ಮೈ) ಎಕ IV ಚಾಮರಾಜನಗರ ೧೦೧ ಕ್ರಿ.ಶ. ೧೧ ಶ.ಮಾ.
೩. ಕಇ V ಹಾನಗಲ್ಲು ೧೦೮ ಕ್ರಿ.ಶ. ೧೨೬೨.
೪. (ರೈ) ಎಕ VII ಶಿಕಾರಿಪುರ ೧೧೩ ಕ್ರಿ.ಶ. ೧೨೦೩.
೫. (ಮೈ) ಎಕ II ಶ್ರವಣಬೆಳಗೊಳ ೧೧೩ ಕ್ರಿ.ಶ. ೧೨೦೩.
೬. (ಮೈ) ಎಕ V ತಿ.ನರಸೀಪುರ ೩೮ ಕ್ರಿ.ಶ. ೧೧೮೩.
೭. ಎಂ.ಎಂ. ಕಲಬುರ್ಗಿ : ಪೂರ್ವೋಕ್ತ, ಪು. ೧೨.
೮. ಅದೇ, ಪು. ೧೩.
೯. (ಮೈ) ಎಕ II ಶ್ರವಣಬೆಳಗೊಳ ೩೫೮ ಕ್ರಿ.ಶ. ೧೩ ಶ.ಮಾ.
೧೦. ಕಇಅಪ್ರ ರಾಯಚೂರು ೫೬ ಕ್ರಿ.ಶ. ೧೩ ಶ.ಮಾ.
೧೧. ಎಸ್‌ಐಐ XX ಸಿಂದಗಿ ೩೧೮ ಕ್ರಿ.ಶ. ೧೨-೧೩ ಶ.ಮಾ.
೧೨. (ರೈ) ಎಕ VIII ಸೊರಬ ೪೭೮ ಕ್ರಿ.ಶ. ೧೧೯೮.

ಮೂಲಧಾತು ಸದ್ (ಸೀದ್) ಎಂದೂ ಅದರ ಅರ್ಥ ಪೀಠ, ಕುಳಿತುಕೊಳ್ಳುವ ಸ್ಥಳ, ಧಾರ್ಮಿಕ ಉದ್ದೇಶಕ್ಕೆ ತೆಗೆದುಕೊಂಡ ಪೀಠ ಎಂಬ ಅರ್ಥವಿರುವುದನ್ನು ಹೇಳಿ ಸಮಾಧಿ ಮರಣಕ್ಕೆ, ಸಲ್ಲೇಖನಕ್ಕೆ ಯತಿಗಳು, ಕಂತಿಯರು, ಶ್ರಾವಕರು ಬಳಸಿದ ಸ್ಥಳ, ಪೀಠ, ಅಂತಿಮವಾಗಿ ಬಳಸಿದ ಪೀಠವೆಂದು ಅರ್ಥ ಹೇಳಿ-ಅದು ಅವರ ಸ್ಮಾರಕ ಸ್ಥಳವೆಂದು ಮತ್ತು ಅವರ ದೇಹವನ್ನು ಸುಟ್ಟು, ಇಟ್ಟ ಭಸ್ಮವನ್ನು ಸ್ಥಳವೆಂದೂ ಅಥವಾ ಅಸ್ಥಿ ಮುಂತಾದುವನ್ನು ಇಟ್ಟ ಸ್ಥಳವೆಂದೂ, ಸಮಾಧಿ ಮಾಡಿದ ಸ್ಥಳವೆಂದು ಭಾವಿಸಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ.[೧]

ಎಂ. ಚಿದಾನಂದ ಮೂರ್ತಿಯವರು ನಿಷೀದಿಕಾ ಎಂಬ ರೂಪವೇ ಸರಿಯೆಂದು ಆದರೆ ಕನ್ನಡ ಶಾಸನಗಳಲ್ಲಿ ದೊರೆಯುವ ನಿಸಿಧಿ, ನಿಶೀಧಿಕಾ ಮುಂತಾದ ಕಡೆ ಮಹಾಪ್ರಾಣ ಕಂಡು ಬರುವುದಕ್ಕೆ ಉಪಾಧ್ಯೆಯವರು ಹೇಳುವಂತೆ ಸಂಸ್ಕೃತದ 'ನಿಷೀದಿಕಾ'ಕ್ಕೆ ಪ್ರಾಕೃತದ 'ನಿಸೀಹಿಯಾ' ಸಮಾನ- ಅದನ್ನು ಸಂಸ್ಕೃತಕ್ಕೆ ತಿರುಗಿಸುವಾಗ ಮಹಾಪ್ರಾಣರೂಪ ಬಂದಿರಬೇಕು ಎಂದಿದ್ದಾರೆ.[೨] ಜೈನರಿಗೆ ಆ ಸ್ಥಳಗಳು ಬಹು ಪವಿತ್ರವಾದ ಸ್ಥಳಗಳಾಗಿದ್ದವು. ನಿಸಿದಿ ಶಾಸನಗಳು ಬೆಟ್ಟದ ಮೇಲೆ, ಹೊಲಗಳಲ್ಲಿ, ಬಸದಿಗಳ ಬಳಿ ಸಾಮಾನ್ಯವಾಗಿ ದೊರೆಯುತ್ತವೆ. ಆದುದರಿಂದ ಮುನಿಗಳಿಗೆ, ಶ್ರಾವಕರಿಗೆ ಎಲ್ಲಿ ಸರಿ ಎನಿಸುತ್ತಿತ್ತೊ ಅಲ್ಲಿ ಸಮಾಧಿ ಮರಣವನ್ನು ಅವರು ಸ್ವೀಕರಿಸುತ್ತಿದ್ದರು ಎನ್ನಬಹುದು. ಸ್ಮಾರಕಗಳನ್ನು ವೀರಗಲ್ಲುಗಳಂತೆ ಪರೋಕ್ಷ ವಿನಯವಾಗಿ ನಿರ್ಮಿಸುತ್ತಿದ್ದರೆಂದು ಭಾವಿಸಬಹುದು.

ಕೆಲವು ಸಾರಿ ಜೈನಮುನಿಗಳು ತಮ್ಮ ನಿಷಿದಿಗೆಗೆ ಮೊದಲೇ ಅಗತ್ಯ ವ್ಯವಸ್ಥೆ ಮಾಡಿರುತ್ತಿದ್ದರು. ತೆಲುಗ ಆದಿ ದೇವರು ಮತ್ತು ಲಲಿತ ಕೀರ್ತಿ ಭಟ್ಟಾರಕರು 'ತಮ್ಮ ನಿಶಿದ್ಧಿ ನಿಮಿತ್ತವಾಗಿ ಕನಕಗಿರಿಯಲ್ಲಿ ಮಾಡಿಸಿದ ವಿಜಯದೇವರ ಪ್ರತುಮೆಗೆ ಅವರ ಮುಖ್ಯವಾದ ಆಚಾರ್ಯ್ಯ ಓಲಗರು ಮಂಗಳ ಮಹಾ ಶ್ರೀ ಶ್ರೀ ಶ್ರೀ'[೩] ಎಂದು ಒಂದು ಶಾಸನದಲ್ಲಿ ಬರುತ್ತದೆ. ಈ ಶಾಸನ ತೆಲುಗ ಆದಿದೇವ ಮತ್ತು ಲಲಿತಕೀರ್ತಿ ಭಟ್ಟಾರಕರು ಕನಕಗಿರಿಯಲ್ಲಿ ವಿಜಯದೇವ ಪ್ರತಿಮೆಯನ್ನು ತಮ್ಮ ನಿಸಿದಿಗಾಗಿ ಮಾಡಿಸಿದರೆಂಬ ವಿಷಯವನ್ನು ಸ್ಪಷ್ಟವಾಗಿ ಹೇಳುತ್ತದೆ.

ನಿಷಿದಿ ಶಾಸನಗಳಲ್ಲಿ ಕೆಲವು ಲಿಪಿ ಮತ್ತು ಶಿಲ್ಪ ರೂಪದಲ್ಲಿಯೂ ಇನ್ನು ಕೆಲವು ಲಿಪಿ ರೂಪದಲ್ಲಿ ಮಾತ್ರವಿರಬಹುದು. ಇನ್ನು ಕೆಲವು ಕೇವಲ ಶಿಲ್ಪರೂಪದಲ್ಲಿ ಮಾತ್ರ ಇರಬಹುದು. ಗುರು ಶಿಷ್ಯರ ಮಧ್ಯೆ ವ್ಯಾಸಪೀಠವಿರುವಂತೆ ಶಿಲ್ಪವಿರಬಹುದು. ಕೆಲವು ಸಾರಿ ತೀರ್ಥಂಕರನ ಪಾದ ಸಮೀಪ ಕೈಮುಗಿದು ಕುಳಿತ ಶಿಷ್ಯನ ಚಿತ್ರವಿರಬಹುದು. ಹೀಗೆ ಇವುಗಳಲ್ಲಿ ಕೆಲವು ವೈವಿಧ್ಯಗಳಿರುವುದನ್ನು ಕಾಣಬಹುದು.[೪]

ಶ್ರವಣಬೆಳಗೊಳದಲ್ಲಿ ದೊರೆಯುವ ೧೦೮ ನಿಷಿದಿ ಶಾಸನಗಳನ್ನು ಗಮನಿಸಿ 'ಸುಮಾರು ೫೬ ಶಾಸನಗಳು ಕ್ರಿ.ಶ. ೭ ನೆಯ ಶತಮಾನಕ್ಕೆ ಸಂಬಂಧಿಸಿದವು. ಕ್ರಿ.ಶ. ೮ ನೆಯ ಶತಮಾನದಲ್ಲಿ ೩, ೯ ನೆಯ ಶತಮಾನದಲ್ಲಿ ೧, ೧೦ ನೆಯ ಶತಮಾನದಲ್ಲಿ ೭, ೧೧ ನೆಯ ಶತಮಾನದಲ್ಲಿ ೪, ೧೨ ನೆಯ ಶತಮಾನದಲ್ಲಿ ೧೨, ೧೩ ನೆಯ ಶತಮಾನದಲ್ಲಿ ೩, ೧೪ ನೆಯ ಶತಮಾನದಲ್ಲಿ ೬, ಅನಂತರದ ಶತಮಾನಗಳಲ್ಲಿ ೪ ಶಾಸನಗಳು ಈ ವಿಷಯವನ್ನು ನಿರೂಪಿಸುತ್ತವ. ಇದರಿಂದ

---

೧. A. N.Upadhye : 'Nisidhi -Its meaning'. Memorial stones ಪು. ೪೬.

೨. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೯೮.

೩. (ಮೈ) ಎಕ IV ಚಾಮರಾಜನಗರ ೩೬೫ ಕ್ರಿ.ಶ. ೧೩೫೫.

೪. ವಿವರಗಳಿಗೆ ನೋಡಿ : ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೯೭ ಮತ್ತು ಎಂ.ಎಂ. ಕಲಬುರ್ಗಿ : ಪೂರ್ವೋಕ್ತ, ಪು.೧೫.

ಕ್ರಿ.ಶ. ೭ ನೆಯ ಶತಮಾನದಲ್ಲಿ ಮತ್ತು ೧೨ ನೆಯ ಶತಮಾನದಲ್ಲಿ ಸಮಾಧಿ ಮರಣವನ್ನಪ್ಪುವ ಪದ್ಧತಿ ಅಧಿಕವಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ.'[೧] ಎಂದು ಬಿ.ವಿ. ಶಿರೂರ ಅವರು ಅಭಿಪ್ರಾಯ ಪಡುತ್ತಾರೆ. ಈ ಅಂಕಿ ಸಂಖ್ಯೆಯನ್ನು ಗಮನಿಸಿದಾಗ ೭ ನೆಯ ಶತಮಾನದಲ್ಲಿ ಸಮಾಧಿಮರಣ ಅಧಿಕವಾಗಿದ್ದು ಇಳಿಮುಖವಾಗುತ್ತಾ ಮತ್ತೆ ೧೨ ನೆಯ ಶತಮಾನದಲ್ಲಿ ಅದರ ಪುನರುತ್ಥಾನ ಪ್ರಯತ್ನ ನಡೆದು ಅದು ಮುಂದೆ ಜನಪ್ರಿಯತೆಯನ್ನು ಕಳೆದುಕೊಂಡಿರುವುದು ಕಾಣುತ್ತದೆ.

ಸಮಾಧಿವಿಧಿಯಿಂದ ಮರಣವನ್ನಪ್ಪುವವರು ಕೆಲವು ಸಾರಿ ಬಸದಿಗಳಲ್ಲಿ ನೆರವೇರಿಸಿಕೊಳ್ಳುತ್ತಿದ್ದರು. ಕವಿರಿಯಯ್ಯನೆನ್ನುವವನು ಚಾಂಗಳದ ಬಸದಿಯಲ್ಲಿ 'ಪನ್ನೆರಡಂ ನೋಂತು ಮುಡಿಪಿದ' ವಿಷಯವನ್ನು ನಲ್ಲೂರಿನ ಶಾಸನ ಹೇಳುತ್ತದೆ.[೨] ಸನ್ಯಸನ ವಿಧಿಯಿಂದ ಮರಣವನ್ನಪ್ಪುವವರು ರತ್ನಕರಂಡಕ ನಿರೂಪಿಸುವಂತೆ ಮೊದಲ ಘಟ್ಟದಲ್ಲಿ ಗಟ್ಟಿ ಆಹಾರವನ್ನು ತ್ಯಜಿಸಬೇಕು, ಎರಡನೆಯ ಘಟ್ಟದಲ್ಲಿ ಗಟ್ಟಿ ದ್ರವಾಹಾರವನ್ನು ತ್ಯಜಿಸಬೇಕು. ಮೂರನೆಯ ಘಟ್ಟದಲ್ಲಿ ಎಲ್ಲ ರೀತಿಯ ಆಹಾರಗಳನ್ನು ತ್ಯಜಿಸಬೇಕು.[೩]

**ಹಬ್ಬಗಳು-ನೋಂಪಿಗಳು:**

ಜೈನಸನ್ಯಾಸಿಗಳು ಯಾವಾಗ ಬಸದಿಗಳನ್ನು ಕಟ್ಟಿ ದಾನ ದತ್ತಿಗಳನ್ನು ಸ್ವೀಕರಿಸಿ ನೆಲೆ ನಿಲ್ಲತೊಡಗಿದರೊ ಆಗ ಸಹಜವಾಗಿ ಸಾಮಾಜಿಕವಾಗಿ ಉಳಿದ ಹಿಂದೂ ಧರ್ಮೀಯರಂತೆ ಹಬ್ಬ ವ್ರತ ಆಚರಣೆಗಳ ಕಡೆ ಗಮನ ಕೊಡಬೇಕಾಯಿತೆಂದು ಕಾಣುತ್ತದೆ. ಜೈನರಲ್ಲಿ ಜೀವದಯಾಷ್ಟಮಿ ಮತ್ತು ನಂದೀಶ್ವರದಷ್ಟಮಿ ಹಬ್ಬಗಳು ವಿಶೇಷವಾಗಿ ಬಳಕೆಯಲ್ಲಿದ್ದವು. ಮಲೆಯೂರಿನ ಒಂದು ಸಂಸ್ಕೃತ ಶಾಸನದಲ್ಲಿ ಪಾರ್ಶ್ವನಾಥನನ್ನು ಪೂಜಿಸಲು 'ಪಂಚ ಪರ್ವ'[೪]ಗಳಿಗೆ ಮತ್ತು ಋಷಿಗಳ ಆಹಾರದಾನಕ್ಕೆ ಚಿಕ್ಕತಾಯಿ ಒಂದು ಹಳ್ಳಿಯನ್ನು ದಾನ ಮಾಡಿದ ವಿಷಯ ಉಲ್ಲೇಖಗೊಂಡಿದೆ. ಮಹಾವಡ್ಡಬ್ಯವಹಾರಿಯೊಬ್ಬ ತಾನು ಕಟ್ಟಿಸಿದ ಶಾಂತಿನಾಥ ದೇವರ ಬಸದಿಯಲ್ಲಿ ನಡೆಯಬೇಕಾದ ಪೂಜಾಕಾರ್ಯಗಳನ್ನು ನಿಯೋಜಿಸಿ ಬಸದಿಯ ಆಚಾರ್ಯರಿಗೆ ಒಪ್ಪಿಸುತ್ತಾನೆ. ಅವನು ನಿಯೋಜಿಸುವ ಪೂಜಾಕಾರ್ಯಗಳು ಈ ರೀತಿಯಲ್ಲಿ ಇವೆ. ನಂದೀಶ್ವರ, ಶ್ರುತಪಂಚಮೀ ಪುಷ್ಪಾಂಜಳಿ, ಜೀವದಯಾಷ್ಟಮಿ, ಜಕ್ಕಣಬ್ಬೆಯುಯ್ಯಲ ಪರ್ವ ಮತ್ತು ಗ್ರಹಣ ಸಂಕ್ರಮಣ ದೀಪೋತ್ಸವ.[೫] 'ಜೀವದಯಾಷ್ಟಮಿ-ಗೊತ್ತಿದ್ದೊ ಗೊತ್ತಿಲ್ಲದೆಯೋ ಮಾಡಿದ ಜೀವಹಿಂಸೆಯ ದೋಷ ಪರಿಹಾರಾರ್ಥವಾಗಿ ಆಚರಿಸುತ್ತಿದ್ದ ವ್ರತವಾಗಿರಬೇಕು. ಅಹಿಂಸಾ ತತ್ವ ಬೋಧಿಸುವ ಯಶೋಧರ ವೃತ್ತಾಂತವನ್ನು ಅದಕ್ಕೆ ಹೊಂದಿಸಿಕೊಂಡಿರಬಹುದು.'[೬] ಇಂಥ ಅನೇಕ ವ್ರತಗಳು ಜೈನರಲ್ಲಿ ಪ್ರಚಲಿತವಾಗಿದ್ದವು. ವ್ರತ ಪದಕ್ಕೆ ಅಚ್ಚಗನ್ನಡ ಪದವಾದ ನೋಂಪಿ ಜೈನಸಾಹಿತ್ಯದಲ್ಲಿ ವಿಶೇಷವಾಗಿ ಬಳಕೆಯಲ್ಲಿದೆ. ಅಂಥ

---

೧. ಬಿ.ವಿ. ಶಿರೂರ : ಶ್ರವಣಬೆಳಗೊಳ, ಪು. ೩೧೫.

೨. (ಮೈ) ಎಕ I ವಿರಾಜಪೇಟೆ ೧೦೧ ಕ್ರಿ.ಶ. ೧೧ ಶ.ಮಾ.

೩. S.Settar and Ravi K. Kori Settar : 'Nishidhis in Karnataka- A survey.' Memorial Stones ಪು.೨೮೪.

೪. (ಮೈ) ಎಕ IV ಚಾಮರಾಜನಗರ ೩೭೧ ಕ್ರಿ.ಶ. ೧೧೮೧. ಈ ಶಾಸನೋಕ್ತ ಪಂಚಪರ್ವಗಳು ಹಿಂದೂಗಳ-ದವನ, ವಸಂತ, ಪವಿತ್ರಾರೋಪಣ, ದೀಪೋತ್ಸವ, ನವಾನ್ನ (ಶ್ರೀವತ್ಸ ನಿಘಂಟು ಪು. ೨೫೩) ಈ ಹಬ್ಬಗಳೇ ಎಂಬುದು ಅನುಮಾನ.

೫. (ರೈ) ಎಕ V ಬೇಲೂರು ೧೨೯ ಕ್ರಿ.ಶ. ೧೧೯೨.

೬. ಕ.ವೆಂ. ರಾಘವಾಚಾರ್ (ಸಂ) ಯಶೋಧರ ಚರಿತ ಪೀಠಿಕೆ, ಪು. ೬೭ ಮತ್ತು ಜೀವದಯಾಷ್ಟಮಿ ನೋಂಪಿಯ ಕಥೆ ಅನುಬಂಧ-೨.

ನೋಂಪಿಗಳು ಕಥಾರೂಪದಲ್ಲಿ ನೋಂಪಿಯ ಕತೆಗಳೆಂದು ಪ್ರಸಿದ್ಧವಾಗಿವೆ. ಇವು ಒಬ್ಬನಿಂದಲಾಗಲೀ, ಒಂದೇ ಕಾಲದಲ್ಲಾಗಲೀ ರಚಿತವಾದಂತಿಲ್ಲ. ಚಂದಣವರ್ಣಿಯ ನಂದೀಶ್ವರ ನೋಂಪಿಯ ಕಥೆ ಒಂದು ಚಂಪೂ ಗ್ರಂಥ.[೧]

ಕೆಲವು ಶಾಸನಗಳಲ್ಲಿ ನೋಂಪಿಗಳೊಂದಿಗೆ ಪಂಚಪರಮೇಷ್ಠಿಗಳ ಪ್ರತಿಮೆಗಳನ್ನೂ, ತೀರ್ಥಂಕರರ ಪ್ರತಿಮೆಗಳನ್ನೂ ಮಾಡಿಸಿದ ಉಲ್ಲೇಖಗಳು ಬರುವುದನ್ನು ನೋಡಿದರೆ ಆ ರೀತಿ ಪ್ರತಿಮೆಗಳನ್ನು ಮಾಡಿಸುವುದು ನೋಂಪಿಯ ಒಂದು ಭಾಗವಾಗಿದ್ದಿತೆಂದು ಭಾವಿಸಬೇಕಾಗುತ್ತದೆ. ಎರಂಬರಗೆಯ ಸೇನಬೋವ ಆಚಣ್ಣನ ಮಗ ದೇವಣ್ಣ ಸಿದ್ಧಚಕ್ರದ ನೋಂಪಿ ಶ್ರುತಪಂಚಮಿ ನೋಂಪಿಗೆ ಮಾಡಿಸಿದ ಪಂಚ ಪರಮೇಷ್ಠಿಗಳ ಪ್ರತಿಮೆ ಎಂಬ ಉಲ್ಲೇಖ ಬರುತ್ತದೆ.[೨] ಕೃಷ್ಣರಾಜ ನಗರ ತಾಲ್ಲೂಕಿನ ಶಾಸನವೊಂದರಲ್ಲಿ ಸಂಬುದೇವನ ಮದವಳಿಗೆ ಬೊಮ್ಮವ್ವೆ 'ಆಣತಿನೋಂಪಿ'ಗಾಗಿ ಚತುರ್ವಿಂಶತಿ ತೀರ್ಥಂಕರರನ್ನು ಮಾಡಿಸಿದ ವಿಷಯ ಬರುತ್ತದೆ.[೩] ಇದೇ ರೀತಿ ಕೊಪ್ಪಳದ ಒಂದು ಶಾಸನದಲ್ಲಿ 'ಎಲ್ಲ ನೋಂಪಿಗೆಯು ಚೌವೀಶ ತೀರ್ಥಂಕರ ಮಾಡಿಸಿಕೊಟ್ಟರು'[೪] ಎಂಬ ಮಾತು ಬರುತ್ತದೆ. ಲಕ್ಕುಂಡಿಯ ಒಂದು ಬಸದಿಯನ್ನು ನೋಂಪಿಯ ಬಸದಿಯೆಂದು ಕರೆಯಲಾಗಿದೆ.[೫] ಶಾಸನದಿಂದ ಆ ಬಸದಿಯನ್ನು ಏಕೆ ಹಾಗೆ ಕರೆಯುತ್ತಿದ್ದರೆಂಬುದು ಸ್ಪಷ್ಟವಾಗುವುದಿಲ್ಲ. ಬಹುಶಃ ನೋಂಪಿಯ ಭಾಗವಾಗಿ ಪ್ರತಿಮೆಗಳನ್ನು ಮಾಡಿಸಿದಂತೆ, ಕಟ್ಟಿಸಿದ ಬಸದಿಯಾಗಿರಬಹುದು. 'ದಂಡನಾಯಕ ಬೊಪ್ಪದೇವನ ತಾಯಿ ಜಕ್ಕಮವ್ವೆ ಮೋಕ್ಷತಿಳಕಮಂ ನೋಂತು ನೋಂಬರೆ ನಯಣ ದೇವರ ಮಾಡಿಸಿ ಪ್ರತಿಷ್ಠೆ ಮಾಡಿಸಿದರು'[೬] ಎಂದು ಶ್ರವಣಬೆಳಗೊಳದ ಶಾಸನವೊಂದರಲ್ಲಿ ಬರುತ್ತದೆ. ಒಟ್ಟಿನಲ್ಲಿ ಯಾವುದೇ ನೋಂಪಿಯನ್ನು ಮಾಡಿದರೂ ಅದರ ಭಾಗವಾಗಿ ಜೈನ ಧಾರ್ಮಿಕ ಮೂರ್ತಿಗಳ ಪ್ರತಿಷ್ಠಾಪನೆಯನ್ನು ನೆರವೇರಿಸುತ್ತಿದ್ದರು ಎಂದು ಭಾವಿಸಬಹುದು. ಶಾಸನಗಳಲ್ಲಿ ಕಿಳ್ತೋಗು ನೋಂಪಿ, ಗಣಪೂಜೆ, ಪಂಚೋಪಚಾರ ಪೂಜೆ, ವಿಮಾನ ಪೂಜೆಗಳ ಉಲ್ಲೇಖಗಳೂ ಬರುತ್ತದೆ.[೭] ಅನೇಕ ಹಿಂದೂ ಹಬ್ಬಗಳನ್ನು ಜೈನರು ತಮ್ಮದಾಗಿ ಮಾಡಿಕೊಂಡಿರುವ ಉದಾಹರಣೆಗಳಿವೆ. ಬ್ರಹ್ಮಶಿವನು ದೀಪಾವಳಿಯನ್ನು ಜಿನನಿಂದ ಬಂದ ಹಬ್ಬವೆಂದು ಹೇಳುತ್ತಾನೆ.[೮] ಹಿಂದೂ ಧರ್ಮದ ಪ್ರಭಾವ ಜೈನಧರ್ಮದ ಮೇಲೆ ಸಾಕಷ್ಟು ಮಟ್ಟದಲ್ಲಿ ಆಗಿದ್ದಿರಬೇಕು. ಏಕೆಂದರೆ ಎಷ್ಟೋ ಹಿಂದೂ ದೇವತೆಗಳನ್ನು, ಆಚರಣೆಗಳನ್ನು ತಮ್ಮವೆಂದು ಹೇಳಿಕೊಳ್ಳುವುದನ್ನು ಸಮಯ ಪರೀಕ್ಷೆಯಲ್ಲಿ ಕಾಣಬಹುದು. ಕೆ. ಅನಂತರಾಮು ಅವರ 'ಕವಿ ಬ್ರಹ್ಮಶಿವ- ಒಂದು ಅಧ್ಯಯನ' ಕೃತಿಯಲ್ಲಿ ಹಿಂದೂಧರ್ಮದ ಹಿನ್ನೆಲೆ ಮತ್ತು ಪರಿಶೀಲನೆ ಅಧ್ಯಾಯವನ್ನು ಗಮನಿಸಬಹುದು.[೯]

---

೧. ನೋಂಪಿಯ ಕತೆಯ ಸಾಹಿತ್ಯಕ ವಿವರಗಳಿಗೆ ನೋಡಿ : ಹು.ಕ. ಜಯದೇವ್ : ಶಾಸನ ಮತ್ತು ಗದ್ಯ, ಪು. ೧೬೮-೧೭೧ ಮತ್ತು ಹಂಪ ನಾಗರಾಜಯ್ಯ 'ನೋಂಪಿ ಕತೆಗಳು' ಸ.ಸಾ.ಚ. ೪-೨, ಪು. ೭೧೨-೭೪೪.

೨. ಕಣಆಪ್ರ ರಾಯಚೂರು ೧೧ ಕ್ರಿ.ಶ. ೧೨ ಶ.ಮಾ.

೩. (ಮೈ) ಎಕ V ಕೃಷ್ಣರಾಜನಗರ ೫೯ ಕ್ರಿ.ಶ. ೧೨ ಶ.ಮಾ.

೪. ಕಣಆಪ್ರ ರಾಯಚೂರು ೧೦ ಕ್ರಿ.ಶ. ೧೨ ಶ.ಮಾ.

೫. ಎಸ್‌ಐಐ XV ಗದಗು ೬೭ ಕ್ರಿ.ಶ. ೧೧೮೫.

೬. (ಮೈ) ಎಕ II ಶ್ರವಣಬೆಳಗೊಳ ೫೦೩. ಕ್ರಿ.ಶ. ೧೨ ಶ.ಮಾ. ಈ ಶಾಸನದಲ್ಲಿ ಬರುವ 'ನಯಣ' ಪದಕ್ಕೆ ಗಿರಿಯ ತಪ್ಪಲಿನಲ್ಲಿ ವಿಶ್ರಾಂತಿಗಾಗಿ ಕಟ್ಟಿಸಿದ ಶಿಲಾಮಂಟಪ ಎಂಬ ಅರ್ಥವಿದೆ. ಕ.ಕ. ನಿಘಂಟು ಸಂ. ೪ ಪು. ೪೩೬೫. ಬಹುಶಃ ಶಾಸನೋಕ್ತ ಜಕ್ಕಮವ್ವೆ ಅಂಥ ವಿಶ್ರಾಂತಿ ಮಂಟಪ ಕಟ್ಟಿಸಿ ಅದರಲ್ಲಿ ಜಿನ ಪ್ರತಿಷ್ಠಾಪನೆಯನ್ನು ಮಾಡಿಸಿರಬೇಕು.

೭. (ಸಂ) ಎಂ.ಎಂ. ಕಲಬುರ್ಗಿ : ಧಾ ತಾ ಶಾ, ಪು. XIX.

೮. ಬೆಳಗಪ್ಪ ಜಾವದೊಳ್ ಸೊಡರ್ಗುಡಿಗಳ ಬೆಳಗಿ ಪೂಜೆಗೆಯ್ತರೆ ದೀಪಾವಳಿಯೆಂಬುದಾಯ್ತುಮಾದಿನದೊಳಗೀಗಳ್ಪರ್ವಮಾದುದಾ ಜಿನನಿಂದಂ, ಸ.ಪ. ೨-೪೫.

೯. ಕೆ.ಅನಂತರಾಮು: ಕವಿ ಬ್ರಹ್ಮಶಿವ- ಒಂದು ಅಧ್ಯಯನ ಪು.೧೭೩-೩೦೯.

**ರಾಜಾಶ್ರಯ:**

ವಿದ್ವಾಂಸರು ಸಾಮಾನ್ಯವಾಗಿ ಅಭಿಪ್ರಾಯಪಡುವಂತೆ ಸುಮಾರು ಹನ್ನೊಂದನೆಯ ಶತಮಾನದಿಂದ ಜೈನಧರ್ಮ ತನ್ನ ನೆಲೆಯನ್ನು ಕಳೆದುಕೊಳ್ಳತೊಡಗಿತು. ಈ ಪ್ರಕ್ರಿಯೆ ಒಂದೇ ಸಾರಿ ನಡೆದಂತಿಲ್ಲ. ಕ್ರಮ ಕ್ರಮವಾಗಿ ತನ್ನ ಜನಪ್ರಿಯತೆಯನ್ನು ಕಳೆದುಕೊಳ್ಳುತ್ತಾ ಹೋದಂತಿದೆ. ಅದು ಒಂದು ಕಡೆ ನೆಲೆಯನ್ನು ಕಳೆದುಕೊಂಡಂತೆ ಹೊಸ ನೆಲೆಗಳತ್ತ ಚಲಿಸಿರುವುದನ್ನು ಕಾಣಬಹುದು. ರಾಜಾಶ್ರಯವನ್ನಾಗಲೀ ಅಧಿಕಾರಿಗಳ ಬೆಂಬಲವನ್ನಾಗಲೀ ಒಂದೇ ಸಾರಿ ಕಳೆದುಕೊಳ್ಳಲಿಲ್ಲ. ರಾಜರು ತಮ್ಮ ವೈಯಕ್ತಿಕ ಒಲವು ಯಾವುದೇ ಧರ್ಮಕ್ಕಿದ್ದರೂ ಸಾಮಾನ್ಯವಾಗಿ ಎಲ್ಲ ಧರ್ಮಗಳನ್ನೂ ಸಮಾನವಾಗಿ ಕಂಡಿರುತ್ತಾರೆ. ಇದರಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸವಿರಬಹುದೇ ವಿನಃ ಯಾವುದೇ ಧರ್ಮವನ್ನು ಅತ್ಯಧಿಕವಾಗಿ ಬೆಂಬಲಿಸುವುದಾಗಲೀ ಕಡೆಗಣಿಸುವುದನ್ನಾಗಲೀ ಮಾಡಿದಂತಿಲ್ಲ.

ಕರ್ನಾಟಕದ ಎಲ್ಲ ಪ್ರಮುಖ ರಾಜ ಮನೆತನಗಳು ಜೈನಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿವೆ. ಹೊಯ್ಸಳ ರಾಜಮನೆತನಕ್ಕೆ ಆರಂಭ ಕಾಲದಲ್ಲಿ ಜೈನಗುರುವಿನ ಬೆಂಬಲವನ್ನು ಸೂಚಿಸುವ ಪ್ರಚಲಿತ ಸಾಮಾನ್ಯ ಕತೆಗಿಂತ ಗೋವಿಂದನ ಹಳ್ಳಿಯ ಶಾಸನದಲ್ಲಿ ಬರುವ ಕತೆ ಸ್ವಲ್ಪ ಭಿನ್ನವಾಗಿದೆ. ಸಳನೆಂಬ ರಾಜನು ತನ್ನ ಕುಲದೈವವಾದ ವಾಸಂತಿಕಾ ದೇವಿಯನ್ನು ಆರಾಧಿಸಲು ಶಶಕಪುರಕ್ಕೆ ಹೋಗಿದ್ದನು. ಅಲ್ಲಿ ವೀತಾಯುಧವ್ರತ (ಆಯುಧಗಳನ್ನು ಧರಿಸದೆ ಇರುವ ವ್ರತ)ದಿಂದ ದೇವಿಯನ್ನು ಆರಾಧಿಸಿ ಮುನಿಯನ್ನು ಸತ್ಕರಿಸುತ್ತಿದ್ದಾಗ ಹುಲಿಯೊಂದು ಅಲ್ಲಿಗೆ ಬಂದಿತು. ಹೊಯ್ಸಳ ಎಂದು ಮುನಿಯು ಸಳನಿಗೆ ಆದೇಶ ಮಾಡಿ ಸಲಾಕೆಯೊಂದನ್ನಿತ್ತನು. ಅದನ್ನು ಉಪಯೋಗಿಸಿದ್ದರ ಫಲವಾಗಿ ಹುಲಿ ಸತ್ತಿತು. ಎಂದೇ ಆತನ ವಂಶಸ್ಥರಿಗೆ ಹೊಯ್ಸಳರೆಂಬ ಹೆಸರು ಬಂದಿತು.[೧]

ಸೌಂದತ್ತಿಯ ರಟ್ಟರು ಜಿನನ ನಿಷ್ಠಾವಂತ ಅನುಯಾಯಿಗಳಾಗಿದ್ದರು. ಅವರ ರಾಜಗುರುವಾಗಿದ್ದ ಮುನಿಚಂದ್ರ ಅವರ ಮಂತ್ರಿಯೂ ಆಗಿದ್ದನು. ತನ್ನ ವಿವೇಕ ಮತ್ತು ಯುದ್ಧ ಪರಿಣತಿಯಿಂದ ರಟ್ಟ ರಾಜ್ಯದ ಗಡಿಗಳನ್ನು ವಿಸ್ತರಿಸಿದ್ದನು.[೨] ರಟ್ಟ ವಂಶದ ಕಾರ್ತವೀರ್ಯನ ಕಾಲದಲ್ಲಿ ಅವನ ಸಚಿವ ಬೀಚ ವೇಣುಗ್ರಾಮದಲ್ಲಿ ರಟ್ಟ ಜಿನಾಲಯವನ್ನು ಕಟ್ಟಿಸಿದ ವಿಷಯವನ್ನು ಮತ್ತು ಅದಕ್ಕಾಗಿ ರಾಜನು ಗ್ರಾಮವನ್ನು ದಾನವಾಗಿ ನೀಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೩] ಚಂಗಾಳ್ವ ವಂಶದ ವೀರ ರಾಜೇಂದ್ರ ಹನಸೋಗೆಯಲ್ಲಿ ಪುಸ್ತಕಗಚ್ಛದ ಬಸದಿಯನ್ನು ನಿರ್ಮಿಸಿದಂತೆ ಒಂದು ಶಾಸನ ತಿಳಿಸುತ್ತದೆ.[೪]

ಅನೇಕ ರಾಜರು ಜೈನಧರ್ಮಕ್ಕೆ ತಮ್ಮ ಬೆಂಬಲ, ಪ್ರೋತ್ಸಾಹ, ದಾನ ದತ್ತಿಗಳನ್ನು ಮುಂದುವರಿಸಿದಂತೆ ಸಚಿವರು, ರಾಣಿಯರು ಮತ್ತು ಇತರ ಪ್ರಮುಖರು ಹನ್ನೆರಡನೆಯ ಶತಮಾನದಲ್ಲಿ ಮತ್ತೆ ಅಧಿಕವಾಗಿ ಜಿನಾಲಯ ನಿರ್ಮಾಣ, ಜೀರ್ಣೋದ್ಧಾರ ಕಾರ್ಯ ಮತ್ತು ರಾಜರ ಮನವೊಲಿಸಿ ದಾನ ಕಾರ್ಯಗಳನ್ನು ಮಾಡಿಸಿರುವುದು ಕಂಡು ಬರುತ್ತದೆ. ಹೊಯ್ಸಳ ನರಸಿಂಹನ ಮಹಾಪ್ರಧಾನ ಚಾವಿಮಯ್ಯನ ಮಡದಿ ಜಕ್ಕವ್ವೆ ಉತ್ಸಾಹದಿಂದ ಜೈನಗೇಹಗಳನ್ನು ಮಾಡಿಸುತ್ತಿದ್ದಳಂತೆ. ಹೆರಗಿನಲ್ಲಿ ಉತ್ತುಂಗ ಚೈತ್ಯಾಲಯ ಮಾಡಿಸಿ ರಾಜನಿಂದ ದಾನ ಕಾರ್ಯವನ್ನು ಎಲ್ಲರ ಸಮಕ್ಷದಲ್ಲಿ ಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೫] ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯಲ್ಲಿ ಒಂದು ಶಾಸನ 'ಜೀರ್ಣ್ಣ ಜಿನಾಲಯ ಕೋಟಿಯಂ ಕ್ರಮಂಬೆತ್ತಿರೆ

---

೧. (ಮೈ) ಎಕ VI ಕೃಷ್ಣರಾಜಪೇಟೆ ೩೯ ಕ್ರಿ.ಶ. ೧೨೩೬.

೨. ಕಇ V ಧಾರವಾಡ ೭೩ ಕ್ರಿ.ಶ. ೧೨೨೮.

೩. ಎಇ XIII ಬೆಳಗಾಂ ೩ಬಿ ಕ್ರಿ.ಶ. ೧೨೦೪.

೪. (ಮೈ) ಎಕ V ಕೃಷ್ಣರಾಜನಗರ ೨೧ ಕ್ರಿ.ಶ. ೧೧ ಶ.ಮಾ.

೫. (ರೈ) ಎಕ V ಹಾಸನ ೫೭ ಕ್ರಿ.ಶ. ೧೧೫೫.

ಮುಂನಿನನ್ತೆ ಪಲವೂರ್ಗ್ಗಳುಮಂ ನೆಱೆ ಮಾಡಿಸುತ್ತವತ್ಯುತ್ತಮ ಪಾತ್ರದಾನದೊದವಂ ಮೆಱೆವುತ್ತಿರೆ ಗಂಗವಾಡಿ ತೊಂಭತ್ತಱು ಸಾಯಿರಂ ಕೊಪಣವಾದುದು ಗಂಗದಂಡನಾಥನಿಂ'[೧] ಎಂದು ಗಂಗರಾಜ ದಂಡಾಧಿಪನು, ಕೊಪ್ಪಣ ಪ್ರದೇಶದಲ್ಲಿ ಜೈನಧರ್ಮ ಮೆರೆದಂತೆ ಗಂಗವಾಡಿ ಪ್ರದೇಶದಲ್ಲಿ ಆ ಧರ್ಮ ಪಸರಿಸಲು ಕಾರಣವಾದನೆಂದು ತಿಳಿಸುತ್ತದೆ.

ಹಲವು ಶಾಸನಗಳು ಜೈನಯತಿಗಳನ್ನು 'ರಾಜಗುರು'ಗಳೆಂದು ಕರೆದಿವೆ. ವರಾಹನಾಥ ಕಲ್ಲ ಹಳ್ಳಿಯ ಶಾಸನವೊಂದು 'ಗುಂಮಟ ದೇವ'ನನ್ನು ರಾಜಗುರುವೆಂದು ಕರೆದಿದೆ.[೨] ಹಿರಿಯಂಗಡಿಯ ಶಾಸನವೊಂದು ಚಾರುಕೀರ್ತಿ ಪಂಡಿತ ದೇವನನ್ನು 'ರಾಯರಾಜಗುರು ಮಂಡಳಾಚಾರ್ಯ್ಯರುಂ ರಾಯ ಜೀವ ರಕ್ಷಾಪಾಳರುಂ ಬಲ್ಲಾಳ ರಾಯಚಿತ್ತ ಚಮತ್ಕಾರರುಂ'[೩] ಎಂದು ಕರೆದಿದೆ. ಶ್ರವಣಬೆಳಗೊಳದ ಶಾಸನವೊಂದರಲ್ಲಿ ಬಾಳಚಂದ್ರ ಗುರುವನ್ನು 'ಹೊಯ್ಸಳರಾಯ ರಾಜಗುರು' ಎಂದು ಕರೆದಿದೆ.[೪] ವಿಷ್ಣುವರ್ಧನನ ಕಾಲವು ಹೊಯ್ಸಳ ಯುಗದಲ್ಲಿ ಜೈನಧರ್ಮದ ದೃಷ್ಟಿಯಿಂದ ಸ್ವರ್ಣಯುಗವೆಂದು ಕರೆಯಬಹುದು. ಅವನು ರಾಮಾನುಜಾಚಾರ್ಯರ ಪ್ರಭಾವಕ್ಕೆ ಒಳಗಾಗಿ ಜೈನರ ವಿಷಯದಲ್ಲಿ ಅಸಹನೆಯಿಂದ ನಡೆದುಕೊಂಡನೆಂಬ ವಿಷಯಕ್ಕೆ ಶಾಸನಾಧಾರಗಳು ಇಲ್ಲವೆಂದೇ ಹೇಳಬಹುದು. ಜೈನಧರ್ಮಕ್ಕೆ ಅನುಮಾನವಿಲ್ಲದೆ ಅವನು ಅತ್ಯಂತ ಗೌರವವನ್ನು ತೋರಿರುವುದು ಕಂಡು ಬರುತ್ತದೆ. ಅಲ್ಲದೆ ಅವನ ರಾಣಿ ಶಾಂತಲೆ ಜೈನಧರ್ಮದ ರತ್ನವೆಂದು ಗುರುತಿಸಲ್ಪಟ್ಟಿದ್ದಾಳೆ.[೫]

ವಿಷ್ಣುವರ್ಧನನನಂತರವೂ ಆ ರಾಜಮನೆತನ ಸತತವಾಗಿ ಜೈನಧರ್ಮಕ್ಕೆ ಪ್ರೋತ್ಸಾಹವನ್ನು ನೀಡುತ್ತಾ ಬಂದಿತು. ಹೊಯ್ಸಳ ಎರಡನೆಯ ಬಲ್ಲಾಳನು ಕುಮಾರ ನಾರಸಿಂಘದೇವನ ಜನ್ಮೋತ್ಸವ ಮಹಾದಾನದಲ್ಲಿ ಸಿಂದಗೆರೆಯ ಅಣುವ ಸಮುದ್ರದಲ್ಲಿ ಕನ್ನೆ ಬಸದಿಯನ್ನು ಕಟ್ಟಿಸಿ ದಾನ ಮಾಡಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೬] ವೀರನರಸಿಂಹನು ದೋರಸಮುದ್ರದ ತ್ರಿಕೂಟ ರತ್ನತ್ರಯದ ಶ್ರೀ ಶಾಂತಿನಾಥ ದೇವರಿಗೆ ಹಳ್ಳಿಗಳನ್ನು ದಾನ ಮಾಡಿದ ವಿಷಯವನ್ನು ಇನ್ನೊಂದು ಶಾಸನ ತಿಳಿಸುತ್ತದೆ.[೭] ಯಾದವ ಸಿಂಘಣನ ಪ್ರಧಾನಿ ಚಕ್ರಪಾಣಿಯ ಆಡಳಿತದಲ್ಲಿ ಪಾರ್ಶ್ವನಾಥ ಬಸದಿಗೆ ದಾನ ನೀಡಿದ ವಿಷಯ ತಿಳಿದು ಬರುತ್ತದೆ.[೮] ಬಲ್ಲಾಳನ ಮಂತ್ರಿ ಏಚರಸ ಜೈನಧರ್ಮದ ಬೆಳವಣಿಗೆಗೆ ವಿಶೇಷ ಪ್ರೋತ್ಸಾಹ ನೀಡಿದ್ದಾನೆ. ಅವನು ಗೊಗ್ಗ ಗ್ರಾಮದಲ್ಲಿ ಜಿನಾಲಯ ಕಟ್ಟಿಸಿದ ವಿಷಯವನ್ನು ತಿಳಿಸುತ್ತ, 'ಊರೂರೊಳ್ ತಪ್ಪದೆ ಬಸದಿಯನೋರಂತಿರೆ ಮಾಡಿ ಬೆಳಗುವತ್ತಿಯನಾಡಂ ಧಾರಿಣಿಗೆ ನೆಗಟ್ದ ಕೊಪಣಕ್ಕೋರಗೆ ಮಾಡಿದನುದಾರನಿಧಿಯೇಚರಸಂ'[೯] ಎಂದು ಶಾಸನ ಕೀರ್ತಿಸಿದೆ.

ಎರಡನೆಯ ಬಲ್ಲಾಳನ ಇನ್ನೊಬ್ಬ ಮಂತ್ರಿ ಚಂದ್ರಮೌಳಿ ಬ್ರಾಹ್ಮಣ. ಅವನ ಮಡದಿ ಆಚಿಯಕ್ಕ ಜೈನ ಧರ್ಮೀಯಳು. ಅವಳು ಶ್ರವಣಬೆಳಗೊಳದಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದಳು. ಅದು ಅಕ್ಕನ ಬಸದಿಯೆಂದು ಪ್ರಸಿದ್ಧವಾಗಿದೆ.

---

೧. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.

೨. (ಮೈ) ಎಕ VI ಕೃಷ್ಣರಾಜಪೇಟೆ ೧೦೮ ಕ್ರಿ.ಶ. ೧೩೩೪.

೩. ತುನಾಶಾ I ಕಾರ್ಕಳ ೪೭ ಕ್ರಿ.ಶ. ೧೩೩೪.

೪. (ಮೈ) ಎಕ II ಶ್ರವಣಬೆಳಗೊಳ ೪೫೬ ಕ್ರಿ.ಶ. ೧೨೮೨.

೫. A. V. Narasimha Murthy : 'Karnataka Kings and Jainism'- Jainism A Study ಪು. ೬೪.

೬. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.

೭. (ಮೈ) ಎಕ VII ನಾಗಮಂಗಲ ೬೦ ಕ್ರಿ.ಶ. ೧೩ ಶ.ಮಾ.

೮. ಎಸ್‌ಐಐ XV ಹುನಗುಂದ ೧೬೪ ಕ್ರಿ.ಶ. ೧೨೨೦.

೯. ಆರ್. ನರಸಿಂಹಾಚಾರ್ (ಸಂ) ಪೂರ್ವೋಕ್ತ, ೧೪೯೮ ಪು. ೨೪೭ ಕ್ರಿ.ಶ. ೧೨೦೫.

ಈ ಬಸದಿಗೆ ಬಲ್ಲಾಳನು ಒಂದು ಹಳ್ಳಿಯನ್ನು ನೀಡಿದನು, ಆಚಿಯಕ್ಕ ದೊರೆಯಿಂದ ಗೊಮ್ಮಟನ ಪೂಜೆಗಾಗಿ ಇನ್ನೊಂದು ಹಳ್ಳಿಯನ್ನು ದಾನವಾಗಿ ಪಡೆದಳು.[೧] ಇದೇ ರೀತಿ ಅನೇಕ ಸಚಿವರು, ಹೆಗ್ಗಡೆಗಳು, ಶ್ರೀಕರಣದವರು ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿರುವುದನ್ನು ಕಾಣಬಹುದು. ಒಂದನೆಯ ನರಸಿಂಹನಲ್ಲಿ ಭಂಡಾರಿಯಾಗಿದ್ದ ಹುಳ್ಳ ಜೈನಧರ್ಮಕ್ಕೆ ವಿಶೇಷ ಬೆಂಬಲ ನೀಡಿದನು. ಅವನನ್ನು ಕೆಲವು ಶಾಸನಗಳು ವಿಶೇಷವಾಗಿ ಕೀರ್ತಿಸಿವೆ. ಅವನು ಬಂಕಾಪುರದಲ್ಲಿ, ಕೊಪ್ಪಣದಲ್ಲಿ, ಕೆಲ್ಲಂಗೆರೆಯಲ್ಲಿ ಅನೇಕ ಬಸದಿಗಳನ್ನು ಜೀರ್ಣೋದ್ಧಾರ ಮಾಡಿಸಿದ ವಿಷಯವನ್ನು ಶಾಸನಗಳು ತಿಳಿಸುತ್ತವೆ. ಅಲ್ಲದೆ ಶ್ರವಣಬೆಳಗೊಳದಲ್ಲಿ ಚತುರ್ವಿಂಶತಿ ಬಸದಿಯನ್ನು ಭವ್ಯವಾಗಿ ಕಟ್ಟಿಸಿದ ವಿಷಯವನ್ನೂ ಶಾಸನಗಳು ತಿಳಿಸುತ್ತವೆ.[೨] ಅರಸಿಕೆರೆಯ ಒಂದು ಶಾಸನ ರೇಚರಸನ ವಿಷಯವನ್ನು ಹೇಳುತ್ತ ಅವನು ಮೊದಲು ಕಳಚೂರ್ಯರಲ್ಲಿ ಸಚಿವನಾಗಿದ್ದು ಮುಂದೆ ಬಲ್ಲಾಳನಲ್ಲಿ ಸಚಿವನಾದನು ಮತ್ತು ಅವನು ಅರಸಿಕೆರೆಯಲ್ಲಿ ಸಹಸ್ರಕೂಟ ಜಿನಾಲಯವನ್ನು ಕಟ್ಟಿಸಿದನೆಂದು ಹೇಳಿ ಅವನನ್ನು 'ಜೈನಾರ್ಣವವರ್ಧನಂ' ಎಂದು ಕರೆದಿದೆ.[೩]

ರಾಜಾಶ್ರಯ, ಅಧಿಕಾರಿಗಳು ಅವರ ಬಂಧು-ಬಾಂಧವರ ಪ್ರೋತ್ಸಾಹ ಬೆಂಬಲಗಳ ಜೊತೆ ವ್ಯಾಪಾರಿ ವರ್ಗದ ಬೆಂಬಲವನ್ನೂ ಜೈನಧರ್ಮ ಗಳಿಸಿಕೊಂಡಿತ್ತು. ಹಟ್ಟಣದ ಶಾಸನ ಪಟ್ಟಣಸ್ವಾಮಿಯಾದ ಸೋವಿಸೆಟ್ಟಿ ಪಾರ್ಶ್ವದೇವರ ಬಸದಿ ನಿರ್ಮಿಸಿ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೪] ಬಸ್ತಿಹಳ್ಳಿ ಶಾಸನ ಮಹಾ ವಡ್ಡಬ್ಯವಹಾರಿ ಕವಡಮಯ್ಯನ ದೇವಿಸೆಟ್ಟಿ ಮಾಡಿಸಿದ ಶ್ರೀ ಶಾಂತಿದೇವರ ಬಸದಿಯ ವಿಷಯವನ್ನು ನಿರೂಪಿಸುತ್ತದೆ.[೫] ವರ್ತಕ ವರ್ಗದಿಂದ ಆದ ವಿವಿಧ ದಾನಗಳು ಶಾಸನೋಕ್ತವಾಗಿವೆ.[೬] ಬೆಳ್ಳಿಯ ದಾಸಿಸೆಟ್ಟಿಯನ್ನು ಶಾಸನ 'ಪಡೆವಂ ಸದ್ಧರ್ಮಮರ್ಯ್ಯಾದೆಯೊಳೆ ಪರದಗೆಯ್ದರ್ತ್ಥಮಂ ನ್ಯಾಯದಿಂದುಂ ಪಡೆದರ್ತ್ಥ ದೇವಾ ಪೂಜೆಗೆ ಬಸದಿಗೆ ಶಿಷ್ಟೇಷ್ಟ ದಾನಕ್ಕೆ ಪಡೆದುಂ ದಾಸಂ ವಿಯನ್ಮಂಡಪ ಕಳಿತಯಶಃವಲ್ಲೀವಿಳಾಸಂ'[೭] ಎಂದು ಹೊಗಳುತ್ತದೆ. ಅವನು ದೋರಸಮುದ್ರದಲ್ಲಿ ಹೊಯ್ಸಳ ಜಿನಾಲಯವನ್ನು ಮಾಡಿಸಿದ ವಿಷಯವನ್ನು ಅದು ತಿಳಿಸುತ್ತದೆ.

ಜನಸಾಮಾನ್ಯರೂ ಕೂಡ ಜೈನಧರ್ಮಕ್ಕೆ ತಮಗೆ ಸಾಧ್ಯವಾದ ದಾನ ಧರ್ಮಗಳನ್ನು ಮಾಡಿರುವುದು ಕಂಡುಬರುತ್ತದೆ. ಜೇವಿಸೆಟ್ಟಿಯ ಮಗಳು ರಾಜವ್ವೆ ಲಕ್ಕುಂಡಿಯ ನಗರೇಶ್ವರ ದೇವಾಲಯದಲ್ಲಿ ಜಿನ ವಿಗ್ರಹ ನಿರ್ಮಿಸಿದ ವಿಷಯ ತಿಳಿದು ಬರುತ್ತದೆ.[೮] ಮಾದರಸ ಎಂಬುವವನು ಜಿನ ಪಾದಗಳನ್ನು ಮಾಡಿಸಿದ್ದನ್ನು ಒಂದು ಶಾಸನ ತಿಳಿಸುತ್ತದೆ.[೯] ಜೈನ ಮಹಿಳೆಯೊಬ್ಬಳು ಪಾರ್ಶ್ವಜಿನ ವಿಗ್ರಹ ಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೧೦] ಕೋಗಳಿಯ ಒಂದು ಶಾಸನ ಪಾರ್ಶ್ವ

---

೧. (ರೈ) ಎಕ V ಚನ್ನರಾಯಪಟ್ಟಣ ೧೫೦ ಕ್ರಿ.ಶ. ೧೧೮೨.

೨. (ಮೈ) ಎಕ II ಶ್ರವಣಬೆಳಗೊಳ ४೭೬, ४೮೧. ಕ್ರಿ.ಶ. ೧೧೫೯. ಈ ಬಸದಿಯನ್ನು ಈಗ ಭಂಡಾರಿ ಬಸದಿ ಎಂದು ಕರೆಯಲಾಗುತ್ತಿದೆ.

೩. (ರೈ) ಎಕ V ಅರಸಿಕೆರೆ ೭೭ ಕ್ರಿ.ಶ. ೧೨೨೦.

೪. (ಮೈ) ಎಕ VII ನಾಗಮಂಗಲ ೧೧೮ ಕ್ರಿ.ಶ. ೧೧೭೮.

೫. (ರೈ) ಎಕ V ಬೇಲೂರು ೧೨೯ ಕ್ರಿ.ಶ. ೧೧೯೨.

೬. (ಮೈ) ಎಕ II ಶ್ರವಣಬೆಳಗೊಳ ೨೮೮, ೨೭೯, ೨೮೭, ೩೩೭, ೩೩೮ ಇತ್ಯಾದಿ ಕ್ರಿ.ಶ. ೧೨ ಶ.ಮಾ. ಕ಼ಇ V ಖಾನಾಪುರ ೩೩ ಕ್ರಿ.ಶ. ೧೧೭೬; ಎಸ್‌ಐಐ XV ಮುಂಡರಗಿ ೭೯ ಕ್ರಿ.ಶ. ೧೨೬೯.

೭. (ರೈ) ಎಕ V ಅರಸಿಕೆರೆ ೧ ಕ್ರಿ.ಶ. ೧೧೬೯.

೮. ಎಸ್‌ಐಐ XVIII ಗದುಗು ४೦೧ ಕ್ರಿ.ಶ. ೧೩ ಶ.ಮಾ.

೯. ಎಸ್‌ಐಐ XVIII ಹಾವೇರಿ ೩೯೦ ಕ್ರಿ.ಶ. ೧೩ ಶ.ಮಾ.

೧೦. ಧಾ ತಾ ಶಾ ೬೦ ಕ್ರಿ.ಶ. ೧೨ ಶ.ಮಾ.

ದೇವರಿಗೆ ಅಕ್ಷಯ ಭಂಡಾರವಾಗಿ ನಾಳ್ಪ್ರಭು ಮಹದೇವ ಸೆಟ್ಟಿಯ ಜೊತೆ ೩೭ ಜನ ವಿವಿಧ ವೃತ್ತಿಗೆ ಸೇರಿದ (ಬೋಗಾರ, ನಾವಿದ, ಗವಜಿ, ಕಂಮಾಜಿ ಇತ್ಯಾದಿ) ವ್ಯಕ್ತಿಗಳು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಅವರಲ್ಲಿ ಇಬ್ಬರು ಸ್ತ್ರೀಯುರು ಇದ್ದಾರೆ.[೧]

**ಕೆಲವು ಕೇಂದ್ರಗಳು:**

ಸುಮಾರು ಎರಡು ಸಾವಿರ ವರ್ಷಗಳಿಗೂ ಮೇಲ್ಪಟ್ಟ ನಿರಂತರ ಇತಿಹಾಸವಿರುವ ಶ್ರವಣಬೆಳಗೊಳ ಅಪರೂಪದ ಜೈನ ಕೇಂದ್ರ. ಜೈನ ಧರ್ಮದ ಅತ್ಯಂತ ಬಲಿಷ್ಠ ಕೇಂದ್ರವಾಗಿ ಬೆಳೆದ ಆ ಸ್ಥಳ ಜ್ಞಾನ, ಧರ್ಮ, ಶಿಲ್ಪ, ಸಾಹಿತ್ಯ, ರಾಜಕೀಯ, ವಿದ್ಯೆ, ವ್ಯಾಪಾರ, ಸ್ಮಾರಕಗಳು, ಕಲೆ ಹೀಗೆ ಸಂಸ್ಕೃತಿಯ ಸರ್ವಮುಖಗಳನ್ನು ಒಳಗೊಂಡದ್ದಾಗಿದೆ. ಈ ಸ್ಥಳದ ಸಾಂಸ್ಕೃತಿಕ ವಿವಿಧ ಮುಖಗಳನ್ನು ಗ್ರಹಿಸಿ ಎಂ.ಚಿದಾನಂದ ಮೂರ್ತಿಯವರು 'ಶ್ರವಣಬೆಳಗೊಳ ಕರ್ನಾಟಕ ಸಂಸ್ಕೃತಿಯ ಸಂಕ್ಷಿಪ್ತಾಕೃತಿ' ಎಂದೂ 'ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ' ಎಂದೂ ಕರೆದಿದ್ದಾರೆ.[೨] ಶ್ರವಣಬೆಳಗೊಳದ ದೊಡ್ಡ ಬೆಟ್ಟದ ಮೇಲೆ ಗೊಮ್ಮಟಮೂರ್ತಿ ಸುಮಾರು ಹತ್ತನೆಯ ಶತಮಾನದ ಕೊನೆಯಲ್ಲಿ (ಸು.೯೮೦) ನಿರ್ಮಾಣವಾಯಿತು. ಅದಕ್ಕೂ ಮೊದಲು ಬಹುಶಃ ಕೇವಲ ಧಾರ್ಮಿಕ ಕೇಂದ್ರವಾಗಿದ್ದುದು ಮುಂದೆ ಆ ಪ್ರದೇಶ ಸಂಸ್ಕೃತಿಯ ಸರ್ವಾಂಗೀಣ ಬೆಳವಣಿಗೆಯನ್ನು ಪಡೆಯಿತು.[೩]

ಅನೇಕ ಶಾಸನಗಳು ಕೊಪಣವನ್ನು ಜೈನಕೇಂದ್ರವಾಗಿ ಕೀರ್ತಿಸಿವೆ. ಇತರೆ ಜೈನಕೇಂದ್ರಗಳು ಕೊಪಣದ ಸಮವಾಗಿ ಬೆಳೆಯಬೇಕೆಂಬ ಆಶಯ ಹಲವು ಶಾಸನಗಳಲ್ಲಿ ವ್ಯಕ್ತವಾಗಿದೆ.[೪] ಇದೇ ರೀತಿ ಲಕ್ಕುಂಡಿಯೂ ಜೈನಧರ್ಮದ ಕೇಂದ್ರವಾಗಿದ್ದಿತು. ಬಹುಶಃ ಶೈವ ವೀರಶೈವದ ಪ್ರಭಾವಯುತ ಬೆಳವಣಿಗೆ ಆ ಪ್ರದೇಶದ ಜೈನಧರ್ಮದ ಬೆಳವಣಿಗೆಯನ್ನು ಕೆಲವು ಮಟ್ಟಿಗೆ ಕುಂಠಿತಗೊಳಿಸಿದವು. ಬಂದಳಿಕೆ, ತೇರದಾಳ, ಚಿಕ್ಕ ಹನಸೋಗೆ, ಕಲ್ಯ ಮುಂತಾದವು ಜೈನಕೇಂದ್ರಗಳಾಗಿ ಬೆಳೆದವು. ಸುಮಾರು ಹನ್ನೆರಡನೆಯ ಶತಮಾನದಲ್ಲಿ ದಕ್ಷಿಣ ಕನ್ನಡದ ಕರಾವಳಿ ಪ್ರದೇಶ ಮತ್ತು ತುಳುನಾಡಿಗೆ ಕ್ರಮೇಣ ಹೆಜ್ಜೆಯೂರಿರುವುದನ್ನು ಕಾಣಬಹುದು. ಮುಂದೆ ಮೂಡಬಿದಿರೆ, ವರಾಂಗ, ಹುಂಚ, ಕಾರ್ಕಳ, ಹಿರಿಯಂಗಡಿ, ಬೀಳ್ಗಿ, ಗೇರುಸೊಪ್ಪೆ ಮುಂತಾದ ಸ್ಥಳಗಳಿಗೆ ಅದು ವ್ಯಾಪಿಸಿದ್ದನ್ನು ಕಾಣಬಹುದು.

**ಯಕ್ಷಿ ಆರಾಧನೆ:**

ಯಾವುದೇ ಧರ್ಮ ತನ್ನ ಉಗಮದ ಆರಂಭ ಕಾಲದಲ್ಲಿ ಇಟ್ಟುಕೊಂಡ ಆದರ್ಶಗಳನ್ನು ಸದಾ ಕಾಲವೂ ಉಳಿಸಿಕೊಂಡು ಬಂದಿರುವುದು ಮಾನವನ ಇತಿಹಾಸದಲ್ಲಿ ಕಾಣಸಿಗುವಂತಿಲ್ಲ. ಧರ್ಮದಲ್ಲಿ ನಾನಾ ಮನೋಧರ್ಮದ, ಭಿನ್ನಸ್ತರದ ಜನ

---

೧. ಎಸ್ಐಐ IX(i) ಹಡಗಲಿ ೩೪೭ ಕ್ರಿ.ಶ. ೧೨೭೬.

೨. ಶ್ರವಣಬೆಳಗೊಳ ಒಂದು ಸಾಂಸ್ಕೃತಿಕ ಕೇಂದ್ರವಾಗಿರುವ ವಿಷಯದ ವಿವರವಾದ ಚರ್ಚೆಗೆ ಎಂ. ಚಿದಾನಂದ ಮೂರ್ತಿಯವರ 'ಶ್ರವಣ ಬೆಳಗೊಳ : ಒಂದು ಸಾಂಸ್ಕೃತಿಕ ಕೇಂದ್ರವಾಗಿ' ಎಂಬ ಲೇಖನವನ್ನು ಗಮನಿಸಿ. ಶ್ರವಣಬೆಳಗೊಳ : ಒಂದು ಸಮೀಕ್ಷೆ ಪು. ೧೮-೩೯.

೩. ಈಗಿನ ಶ್ರವಣಬೆಳಗೊಳದ ಉತ್ತರಕ್ಕೆ ೩ ಮೈಲುಗಳ ದೂರದಲ್ಲಿ ಹಳೆಯ ಬೆಳ್ಗೊಳವಿದೆ. ಆ ಗ್ರಾಮದಲ್ಲಿರುವ ಕೊಳದಿಂದಲೇ ಆ ಊರಿಗೆ ಹೆಸರಾಗಿದೆ. ಕೊನೆಯ ಪಕ್ಷ ೧೦೦೦-೫೦ರ ವರೆಗೆ ಶ್ರವಣಬೆಳಗೊಳದ ಸಾಂಸ್ಕೃತಿಕ ಮಹತ್ವ ಹಳೆಯ ಬೆಳ್ಗೊಳಕ್ಕೆ ಸಲ್ಲುತ್ತದೆ. ಈ ವಿಷಯದ ವಿವರವಾದ ಚರ್ಚೆಗೆ ನೋಡಿ : ಎಂ. ಚಿದಾನಂದ ಮೂರ್ತಿ : 'ಶ್ರವಣ ಬೆಳ್ಗೊಳಕ್ಕೆ ಮೂಲ "ಹಳೆಯ ಬೆಳ್ಗೊಳ" -ಸಾಧನೆ ೧೪-೧, ಪು. ೧೧-೪೧.

೪. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨; ಆರ್. ನರಸಿಂಹಾಚಾರ್ (ಸಂ) : ಪೂರ್ವೋಕ್ತ, ೧೪೯೮, ಪು. ೨೪೭ ಕ್ರಿ.ಶ. ೧೨೦೫.

ಸಾಂಘಿಕವಾಗಿ ಭಾಗವಹಿಸುವುದರಿಂದ ಅದರಲ್ಲಿ ಎಲ್ಲ ವೈಯಕ್ತಿಕ ಭಿನ್ನ ಅಂಶಗಳು ಅಳವಡುತ್ತಾ ಆದರ್ಶ-ವಾಸ್ತವಗಳ ಸಂಘರ್ಷ ಸದಾ ನಡೆದೇ ಇರುತ್ತದೆ. ಜೈನಧರ್ಮವೂ ಈ ಎಲ್ಲ ಅಂಶಗಳನ್ನು ಹಂತ ಹಂತವಾಗಿ ಪಡೆಯುತ್ತಾ ಹೋಯಿತು. ದಿಗಂಬರರಲ್ಲಂತೂ ಪುರುಷರಿಗೆ ವಿಶೇಷ ಮಾನ್ಯತೆ ; ಪುರುಷರು ಮಾತ್ರ ಗೌರವ ಮತ್ತು ಆರಾಧನೆಗೆ ಅರ್ಹರೆಂಬ ಭಾವನೆ ರೂಢಮೂಲವಾಗಿತ್ತು. ಹೀಗಾಗಿ ಜೈನರಲ್ಲಿ ಆರಂಭ ಕಾಲದಲ್ಲಿ ಸ್ತ್ರೀ ದೇವತೆಗಳಿಗೆ ಸ್ಥಾನವಿರಲಿಲ್ಲವೆಂದೇ ಹೇಳಬಹುದು. ಆದರೆ ಈಗಲೂ ಸಾಮಾನ್ಯ ಜನರಿಗೆ ಮತ್ತು ಕೆಳವರ್ಗದವರೆಂದು ಹೇಳಲಾಗುವ ಜನರಿಗೆ ಸ್ತ್ರೀದೇವತೆಗಳ ಬಗೆಗೆ ವಿಶೇಷ ಪ್ರೀತಿ ಇರುವುದನ್ನು ಕಾಣಬಹುದಾಗಿದೆ. ಈಗಲೂ ಊರೂರುಗಳಲ್ಲಿ ಹಳ್ಳಿ ಹಳ್ಳಿಗಳಲ್ಲಿ ವ್ಯಾಪಕವಾಗಿ ಸ್ತ್ರೀದೇವತಾರಾಧನೆ ನಡೆಯುವುದನ್ನು ಕಾಣಬಹುದು. 'ಹೀಗಾಗಿ ಮಾತೃಪೂಜೆಯು ಜೈನರಿಗೆ ಹೊಸದಾದರೂ, ಜನಸಾಮಾನ್ಯರ ದೃಷ್ಟಿಯಿಂದ ಜೈನಧರ್ಮವು ಬಹು ಹಿಂದೆಯೇ ಮಾತೃಪೂಜೆಯನ್ನು ಆರಂಭಿಸಿತು. ತೀರ್ಥಂಕರನಿಗೆ ಸಲ್ಲಬೇಕಾದ ಪೂಜೆಯ ಜೊತೆಯಲ್ಲಿ ಅವನ ಪಕ್ಕದ ಶಾಸನ ದೇವತೆಗಳಿಗೂ ಪೂಜೆ ಸಲ್ಲಲು ಆರಂಭವಾಗಿ ಮುಂದೆ ದೇವತೆಗಳಿಗೇ ಸ್ವತಂತ್ರ ಪೂಜೆ ಸಲ್ಲಲು ಆರಂಭವಾಯಿತು.[೧]

ಜೈನ ದಿಗಂಬರರು ದೂರವಿಟ್ಟಿದ್ದ ಸ್ತ್ರೀ ಆರಾಧನೆ ಯಾವಾಗ ಧರ್ಮವನ್ನು ಪ್ರವೇಶ ಮಾಡಿತೋ ಕ್ರಮೇಣ ವ್ಯಾಪಕವಾಗಿ ಪರಿವಾರ ದೇವತೆಗಳು ಸ್ವತಂತ್ರ ದೇವತೆಗಳಾಗಿ ಆರಾಧನೆ ಪಡೆಯತೊಡಗಿದರು. ಜ್ವಾಲಮಾಲಿನಿ, ಪದ್ಮಾವತಿ, ಕೂಷ್ಮಾಂಡಿನಿ ಮುಂತಾದ ಯಕ್ಷಿಗಳ ಆರಾಧನೆ ವ್ಯಾಪಕವಾಗಿ ಬೆಳೆಯತೊಡಗಿತು. ಈ ಆರಾಧನೆಯನ್ನೇ ಪಿ.ಬಿ. ದೇಸಾಯಿಯವರು 'ಯಕ್ಷೀ ಆರಾಧನೆ' (Yakshi Cult) ಎಂದು ಗುರುತಿಸಿದ್ದಾರೆ.[೨] ಈ ಯಕ್ಷಿಯರ ಆರಾಧನೆಯು ಕ್ರಮೇಣ ತಾಂತ್ರಿಕ ಆರಾಧನೆಯ ಕಡೆ ಮುಖ ಮಾಡಿದ್ದನ್ನು ಗುರುತಿಸಬಹುದು. ಈ ತಾಂತ್ರಿಕ ಆರಾಧನೆಯ ಒಲವು ಆ ಕಾಲಮಾನದಲ್ಲಿಯೇ ಮೂಡಿಬಂದಂತೆ ಕಾಣುತ್ತದೆ. ಬೌದ್ಧಧರ್ಮವೂ ತಾಂತ್ರಿಕತೆಯ ಕಡೆ ಒಲಿದಿದ್ದನ್ನು ಈಗಾಗಲೇ ಗಮನಿಸಲಾಗಿದೆ.

ಯಕ್ಷಿ ಆರಾಧನೆಯಲ್ಲಿ ಕೆಲವು ಯಕ್ಷಿಯರು ಕರ್ನಾಟಕದಲ್ಲಿ ವಿಶೇಷ ಪ್ರಾಮುಖ್ಯವನ್ನು ಪಡೆದರು. ಅವರಲ್ಲಿ ಜ್ವಾಲಮಾಲಿನಿ ಅತ್ಯಂತ ಪ್ರಮುಖಳೆಂದು ಹೇಳಬಹುದು. ಇವಳು ಎಂಟನೆಯ ಜಿನ ಚಂದ್ರಪ್ರಭನ ಯಕ್ಷಿ. ಇಂದ್ರನಂದಿಯು ಹತ್ತನೆಯ ಶತಮಾನದಲ್ಲಿ 'ಜ್ವಾಲಿನೀಕಲ್ಪ'ವನ್ನು ಬರೆದಿದ್ದಾನೆ. ಅದರಲ್ಲಿ ಅವಳನ್ನು ಬಹು ಶಕ್ತಿಶಾಲಿ ದೇವತೆಯಾಗಿ ಚಿತ್ರಿಸಲಾಗಿದೆ. ಅವಳು ಎಂಟು ಕೈಗಳಲ್ಲಿ ಭಯಂಕರ ಆಯುಧಗಳನ್ನು ಹಿಡಿದವಳಾಗಿ ಚಿತ್ರಿತಳಾಗಿದ್ದಾಳೆ. ಜ್ವಾಲಿನೀಕಲ್ಪವು ಜ್ವಾಲಿನೀ ಆರಾಧನೆಯ ಉಗಮವನ್ನು ಕುರಿತ ಕತೆಯೊಂದನ್ನು ನಿರೂಪಿಸುತ್ತದೆ. ಹೇಲಾಚಾರ್ಯ (ದ್ರಾವಿಡ ಸಂಘಕ್ಕೆ ಸೇರಿದವನು) ಮೊದಲು ನೀಲಗಿರಿ ಬೆಟ್ಟದ ಹೇಮ ಗ್ರಾಮದಲ್ಲಿ ಜ್ವಾಲಿನಿಯನ್ನು ಪೂಜಿಸಲು ಆರಂಭಿಸಲು ಕಾರಣ ಕಮಲಶ್ರೀ ಎಂಬ ತನ್ನ ಸ್ತ್ರೀ ಅನುಯಾಯಿಗೆ ಹಿಡಿದ ಬ್ರಹ್ಮ ರಾಕ್ಷಸವನ್ನು ಬಿಡಿಸುವುದಾಗಿತ್ತು.[೩] ಜ್ವಾಲಮಾಲಿನಿಗಾಗಿ ದೇವಾಲಯವೊಂದು ಧಾರವಾಡ ಜಿಲ್ಲೆ ನವಲಗುಂದ ತಾಲ್ಲೂಕಿನ ಜಾವೂರಿನಲ್ಲಿ ಕ್ರಿ.ಶ. ೧೦೫೫ಕ್ಕಿಂತ ಮೊದಲು ನಿರ್ಮಾಣವಾದಂತಿದೆ.[೪] ಇದು ಯಾಪನೀಯ ಪಂಥದ ಯತಿಯೊಬ್ಬರಿಂದ ಬಹುಶಃ ಪ್ರತಿಷ್ಠಾಪಿತವಾಯಿತೆಂದೂ ಯಾಪನೀಯ ಸಂಘದ ಜೈನರು ಮೈಸೂರಿನಲ್ಲಿ ತಾಂತ್ರಿಕ ಆರಾಧನೆ ಮತ್ತು ಸ್ತ್ರೀ ದೇವತಾರಾಧನೆಯನ್ನು ವೈಭವೀಕರಿಸಿದರೆಂಬ ಅಭಿಪ್ರಾಯವಿದೆ.[೫] ಆದರೆ ಇದನ್ನು ಸಮಕಾಲೀನ ಶಾಸನಗಳು ಬೆಂಬಲಿಸುವಂತೆ ಕಾಣುವುದಿಲ್ಲ. ಗದುಗಿನ ಒಂದು ಶಾಸನ ಜ್ವಾಳಿನೀ ಯಕ್ಷಿಯನ್ನು ವಿಶೇಷವಾಗಿ ಕೀರ್ತಿಸುತ್ತದೆ.

---

೧. ಎಂ. ಚಿದಾನಂದ ಮೂರ್ತಿ : ಕಶಾಸಾಂಅ. ಪು. ೧೦೦.

೨. P. B. Desai : Jainism in south India and some Jaina Epigraphs ಪು. ೭೨.

೩. Rambhushan Prasad Singh : ಪೂರ್ವೋಕ್ತ, ಪು. ೫೩.

೪. P. B. Desai : Jainism in south India and some Jaina Epigraphs ಪು. ೧೪೩.

೫. Rambhushan Prasad Singh : ಪೂರ್ವೋಕ್ತ, ಪು. ೫೪.

'ಜ್ವಾಳಿನೀ ಸಮಗ್ರಗುಣ... ಮಣಿಮಾಳಿನೀ ಸಾಧಕವಿನಯಸುಬ್ರತಿಜನತಾಪಾಳಿನೀ ದುರಿತಮಳಪ್ರಕ್ಷಾಳಿನೀ ಸಂಪಿದೆಯೆನಿಪ್ಪಳಂತಾ ಪುರದೊಳ್' ಕೆಂಚಗನೆಂಬುವನು ಜ್ವಾಳಿನೀದೇವಿಗೆ 'ನಿಂನಂ ಬಲಿಗೊಂಡೆನಾವಗವೆನ್ನಿಷ್ಟ ಮನೀವುದೆಂದು ಕಾರುಣಕ್ಕಾನಮಾ- ನಾಗಿರ್ಪುದು' ಎಂದು ಹೇಳಿರುವುದು ಕಂಡುಬರುತ್ತದೆ. ಇವನ ವಂಶದ ರಾಯದೇವನನ್ನು 'ಬೆಳ್ವೊಲಾದಿತ್ಯ ಜ್ವಾಳಿನೀದೇವಿಲಬ್ಧವರಪ್ರಸಾದಿತ' ಎಂದು ಸ್ತುತಿಸಲಾಗಿದೆ.[೧] ಜಾವೂರಿನ ಶಾಸನವು ಜ್ವಾಳಮಾಳಿನೀ ದೇವಿಯ ಬಸದಿಯ ಶ್ರೀ ಕಾರ್ಯಕ್ಕೆ ಮಲ್ಲಿದೇವನು ಜಾವೂರನ್ನು ಶ್ರೀ ಸಕಳಚಂದ್ರ ಭಟ್ಟಾರಕ ದೇವರಿಗೆ ದಾನ ಮಾಡಿದ್ದನ್ನು ಬೀಚಿಸೆಟ್ಟಿ ಪುನರ್ಧರ್ಮ್ಮ ಮಾಡಿದಂತೆ ತಿಳಿಸುತ್ತದೆ.[೨] ಈ ಶಾಸನದ ಕೊನೆಯ ಸಾಲು 'ಶ್ರೀಮತು ನವಿಲುಗುಂದದ ಜ್ವಾಳಿನೀ ದೇವಿಯ ಬಸದಿಯ ಹಳಿ' ಎಂದಿದೆ.

ಪದ್ಮಾವತಿ ಯಕ್ಷಿ ೨೩ನೆಯ ತೀರ್ಥಂಕರನ ಯಕ್ಷಿ. ಪದ್ಮಾವತಿ ಯಕ್ಷಿಯ ವಿಗ್ರಹದ ಪೀಠದ ಮೇಲಿನ ಶಾಸನದಲ್ಲಿ ವಿಜಯಕೀರ್ತಿ ಆ ವಿಗ್ರಹವನ್ನು ಕೆತ್ತಿಸಿದ ವಿಷಯವನ್ನು ಸೂಚಿಸುವಂತೆ ಕಾಣುತ್ತದೆ.[೩] ಹನ್ನೊಂದು ಹನ್ನೆರಡನೆಯ ಶತಮಾನದಲ್ಲಿ ಶಿಲಾಹಾರದ ರಟ್ಟರು ಈ ದೇವತೆಯ ಆರಾಧಕರಾಗಿದ್ದರೆಂದು ತಿಳಿದುಬರುತ್ತದೆ.[೪]

ಕೂಷ್ಮಾಂಡಿನಿಗೆ ಅಂಬಿಕಾ ಎಂಬ ಹೆಸರೂ ಇದೆ. ಇವಳು ೨೨ನೆಯ ತೀರ್ಥಂಕರನ ಯಕ್ಷಿ. ಶ್ರವಣಬೆಳಗೊಳದ ದೊಡ್ಡಬೆಟ್ಟದ ಸುತ್ತಾಲಯದ ಕೊನೆಯ ಗುಡಿಯಲ್ಲಿರುವ ಕೂಷ್ಮಾಂಡಿನಿಯ ಪೀಠದಲ್ಲಿ ಆಲವ್ವೆಯ ಮಗ ಬಸವಣ್ಣಂಗೆ ರಾಚಮಲ್ಲಸೆಟ್ಟಿ ಪರೋಕ್ಷವಿನಯವಾಗಿ ಯಕ್ಷಿ ದೇವತೆಯ ವಿಗ್ರಹ ಮಾಡಿಸಿದ ವಿಷಯವನ್ನು ಆ ಪೀಠ ಶಾಸನ ತಿಳಿಸುತ್ತದೆ.[೫]

ಗುಂಡಕರ್ಜಿಯ ಜೈನ ಪ್ರತಿಮೆಯ ಮೇಲೆ ಅಪರಾಜಿತಾ ದೇವಿ, ವ್ರಿಷಭಯಕ್ಷ, ಪಾತಾಳ ಯಕ್ಷ, ಕುಬೇರ ಯಕ್ಷ, ಮಹಾಮಾನನೀ ಯಕ್ಷ, ಅನಂತಮತಿ, ಚಕ್ರೇಶ್ವರಿ, ಶಾಂತಿನಾಥಸ್ವಾಮಿ ಎಂದು ಲಿಖಿತವಾಗಿರುವ ಶಾಸನದಲ್ಲಿ ಯಕ್ಷ-ಯಕ್ಷಿಯರ ಹೆಸರುಗಳನ್ನು ಕಾಣಬಹುದು.[೬]

ಜೋಡಿ ಬಸವನಪುರದ ಸಂಸ್ಕೃತ ಶಾಸನವೊಂದರಲ್ಲಿ 'ಇಂದ್ರಣಂದಿ ಮುನೀಂದ್ರೋಯಂ ವಂದ್ಯೋ ಯೇನ ಪ್ರಕಲ್ಪಿತೌ ಪ್ರತಿಷ್ಠಾ ಜ್ವಾಳಿನೀ ಕಲ್ಪೌ ಕಲ್ಪಾಂತಕೃತಿ[೭] ಎಂದು ಬರುತ್ತದೆ. ಈ ಇಂದ್ರನಂದಿ ಹೇಲಾಚಾರ್ಯನ ೫ನೆಯ ತಲೆಮಾರಿನ ಶಿಷ್ಯನಾಗಿದ್ದನು. ಹೇಲಾಚಾರ್ಯನ ಕಾಲವನ್ನು ಒಂಬತ್ತನೆಯ ಶತಮಾನವೆಂದು ಭಾವಿಸಲಾಗುತ್ತದೆ. ಅವನೇ ಜ್ವಾಲಮಾಲಿನಿಯ ಆರಂಭದ ಆರಾಧಕನೆಂದು ತಿಳಿಯಲಾಗಿದೆ. ಕ್ರಮೇಣ ಯಕ್ಷಿಯರು ಪ್ರಭಾವಶೀಲರಾ ಕಂಡುಬರುತ್ತದೆ.[೮] ಯಕ್ಷಿ ಆರಾಧನೆ ಬೆಳೆದ ಹಾಗೆ ಮಕ್ಕಳಿಲ್ಲದವರಿಗೆ ಮಕ್ಕಳು, ಕಬ್ಬಿಣವನ್ನು ಬಂಗಾರ ಮಾಡುವುದು ಇಂಥ ಅಲೌಕಿಕ ಆಶೀರ್ವಾದಗಳನ್ನು

---

೧. ಎಸ್ಐಐ XV ಗದಗು ೨೧೪ ಕ್ರಿ.ಶ. ೧೧೯೯.

೨. ಎಸ್ಐಐ XV ನವಲಗುಂದ ೬೩೭ ಕ್ರಿ.ಶ. ೧೨ ಶ.ಮಾ.

೩. (ಮೈ) ಎಕ VI ಕೃಷ್ಣರಾಜಪೇಟೆ ೩ ಕ್ರಿ.ಶ. ೧೩ ಶ.ಮಾ. ಈ ವಿಗ್ರಹ ಬಹುಶಃ ಕ್ರಿ.ಶ. ೧೧೮೩ರಲ್ಲಿ ಕಟ್ಟಲ್ಪಟ್ಟ ಪಾರ್ಶ್ವನಾಥ ಬಸದಿಯಲ್ಲಿದೆ.

೪. Rambhushan Prasad Singh : ಪೂರ್ವೋಕ, ಪು. ೫೫.

೫. (ಮೈ) ಎಕ II ಶ್ರವಣಬೆಳಗೊಳ ೩೦೧ ಕ್ರಿ.ಶ. ೧೨ ಶ.ಮಾ.

೬. ಎಸ್ಐಐ XV ಮುದ್ದೇಬಿಹಾಳ ೫೯೧ ಕ್ರಿ.ಶ. ೧೨ ಶ.ಮಾ.

೭. (ಮೈ) ಎಕ V ತಿ.ನರಸೀಪುರ ೩೮ ಕ್ರಿ.ಶ. ೧೧೮೩.

೮. ನಯಸೇನ ಕವಿಯೂ ತನ್ನ ಕೃತಿಯ ಆರಂಭ ಭಾಗದಲ್ಲಿ ಸಿದ್ಧಾಯಿನಿ ಯಕ್ಷಿಯನ್ನು ಪ್ರಾರ್ಥಿಸಿದ್ದಾನೆ. ಧರ್ಮಾಮೃತಂ ೧-೬.

ಅವರು ನೀಡಬಲ್ಲರೆಂಬ ಪ್ರತೀತಿ ಹಬ್ಬಿತು. ಅಲ್ಲದೆ ಜ್ವಾಲಿನಿಯನ್ನು ಮರದ ಕೆಳಗೆ, ರಸ್ತೆಗಳ ಸಂಧಿಸ್ಥಳದಲ್ಲಿ, ಊರ ಹೊರ ವಲಯಗಳಲ್ಲಿ ಆರಾಧಿಸತೊಡಗಿ ಅದು ಪ್ರಾಕೃತ ಆರಾಧನೆ (Primitive Cult)ಯ ಹತ್ತಿರ ಸರಿಯಲಾರಂಭಿಸಿತು.[೧]

ಜೈನ ಧರ್ಮದಲ್ಲಿ ಯಕ್ಷಿ ಆರಾಧನೆ ಪ್ರಬಲವಾದಂತೆ ಮಾಟ, ಮಾಯ ಇಂಥ ಅಲೌಕಿಕ ಶಕ್ತಿ ಗಳನ್ನು ಜೈನ ಯತಿಗಳು ಪಡೆದವರೆಂದು ಶಾಸನಗಳು ಹೇಳತೊಡಗಿದವು. ಶ್ರವಣಬೆಳಗೊಳದ ಒಂದು ಶಾಸನ ಕಲ್ಯಾಣಕೀರ್ತಿಮುನಿಯನ್ನು ಶಾಕಿನಿ ಮೊದಲಾದ ದುಷ್ಟಶಕ್ತಿಗಳನ್ನು ಉಪಯೋಗಿಸಿಕೊಳ್ಳುವಲ್ಲಿ ಪರಿಣತನೆಂದು ಕರೆದಿದೆ.[೨] ಭಾನುಕೀರ್ತಿ ಎಂಬ ಜೈನ ಮುನಿಯನ್ನು 'ಉರಗೋಗ್ರಹ ಶಾಕಿನೀ ನಿವಹಗ್ರ ಭೂತ ಪ್ರೇತ ಝೋಟ್ಟಿಂಗ ಭೀಕರ ಬೇತಾ... ನಿನಾಥೋಗ್ರಾಜ್ಞೆ ಸಾಮಾನ್ಯಮೇ'[೩] ಎಂದು ಹೊಗಳಿರುವುದುಂಟು. ಶ್ರವಣಬೆಳಗೊಳದ ಚಿಕ್ಕಬೆಟ್ಟದ ಶಾಸನವೊಂದರಲ್ಲಿ ಅನಂತಕೀರ್ತಿ ಮುನಿಯನ್ನು ಹಾವಿನ ವಿಷ ನಿವಾರಿಸಬಲ್ಲವನೆಂದೂ, ವಿಷಯುಕ್ತ ಹಾವಿನ ಹಲ್ಲನ್ನು ಕೀಳಬಲ್ಲವನೆಂದೂ ಹೊಗಳಲಾಗಿದೆ.[೪] ಹನ್ನೊಂದನೆಯ ಶತಮಾನದಲ್ಲಿದ್ದ ಜೈನಆಚಾರ್ಯ ಮಲ್ಲಿಷೇಣಸೂರಿ ಮುಳಗುಂದದಲ್ಲಿದ್ದು ಮಂತ್ರ ತಂತ್ರಗಳಿಗೆ ಸಂಬಂಧಿಸಿದ ಭೈರವ ಪದ್ಮಾವತೀಕಲ್ಪ, ಜ್ವಾಲಿನೀಕಲ್ಪ, ಸರಸ್ವತೀಕಲ್ಪ ಎಂಬ ಕೃತಿಗಳನ್ನು ಬರೆದಂತೆ ತಿಳಿದುಬರುತ್ತದೆ.[೫]

ಜನಸಾಮಾನ್ಯರು ಅಲೌಕಿಕ ಶಕ್ತಿಗಳಿಂದ ತಮ್ಮತ್ತ ಒಲಿಯುವರೆಂದು ಭಾವಿಸಿ ಆ ತಂತ್ರಸಿದ್ಧಿಯ ಕಡೆ ಜೈನಮುನಿಗಳು ಹೆಜ್ಜೆ ಹಾಕಲಾರಂಭಿಸಿದರು. ಶಾಸನವೊಂದು ಚಾರುಕೀರ್ತಿ ಪಂಡಿತ ದೇವನೆಂಬ ಜೈನ ಯತಿಯನ್ನು 'ಮಂತ್ರವಾದಿ ಮಕರ ಧ್ವಜ'ನೆಂದು ಕರೆದಿದೆ.[೬] ಮುನಿಚಂದ್ರನೆಂಬ ಜೈನಯತಿಯ ಶಿಷ್ಯನನ್ನು ಮಂತ್ರವಾದಿ ಭಾಗಕೀರ್ತಿ ಸೈದ್ಧಾಂತಿ ಎಂದು ಕರೆದು 'ಪೆಸರ್ವೆತ್ತುಗ್ರ ಸಮಗ್ರ ದೇವತೆಯರುಂ ತಂತಮ್ಮ ಪೀಠಾಗ್ರದಿಂ ಪೆಸರ್ಗೇಳಲು ಬಜಿತೋಡಿ ಪೋಗಿ ನಡುಗುತ್ತಿರ್ಪ್ಪರ್ಕ್ಕರಂ ಯಕ್ಷ ರಾಕ್ಷಸ ಗಂಧರ್ವ್ವ ಪಿಶಾಚ ಭೂತ ಫಣಿವೇತಾಳಾದಿ ತೀಬ್ರಗ್ರಹಂ ಬೆಸನೇನೆಂಬುವು ಭಾನುಕೀರ್ತಿ ಮುನಿಪಾಜ್ಞಾಶಕ್ತಿ ಸಾಮಾನ್ಯಮೇಂ' ಎಂದು ಅವನ ಅಲೌಕಿಕ ಶಕ್ತಿಗಳ ಪ್ರಾಬಲ್ಯವನ್ನು ಶಾಸನವೊಂದು ಕೀರ್ತಿಸುತ್ತದೆ.[೭]

ಜೈನಧರ್ಮ ತನ್ನ ಉನ್ನತ ಜನಪ್ರಿಯತೆಯ ಶಿಖರದಿಂದ ಕ್ರಮೇಣ ಇಳಿಮುಖವಾಗತೊಡಗಿ ಮತ್ತೆ ಜನರನ್ನು ಒಲಿಸಿಕೊಳ್ಳಲು ಬಯಸಿ ತಾಂತ್ರಿಕ, ಅಲೌಕಿಕ ಶಕ್ತಿಗಳನ್ನು ತನ್ನಲ್ಲಿ ಪ್ರೋತ್ಸಾಹಿಸತೊಡಗಿರಬೇಕು. ಇದು ಒಂದು ರೀತಿಯಲ್ಲಿ ಜೈನಧರ್ಮವನ್ನು ಅವನತಿಗೆ ತರುವಲ್ಲಿ ಕೆಲವು ಮಟ್ಟಿಗೆ ಕಾರಣವಾಗಿರುವ ಸಾಧ್ಯತೆ ಇದೆ. ಜೈನಧರ್ಮ ಹೀಗೆ ಆಂತರಿಕವಾಗಿ ತನ್ನಲ್ಲಿ ಯಕ್ಷಿ ಆರಾಧನೆ, ತಾಂತ್ರಿಕ ಮಾಯ ಮಾಟಗಳ ಕಡೆ ಒಲಿಯುತ್ತಿದ್ದಂತೆ, ಕರ್ನಾಟಕದಲ್ಲಿ ಬಾಹ್ಯ ವಾತಾವರಣವೂ ಆ ಧರ್ಮಕ್ಕೆ ಪ್ರತಿಕೂಲವಾಗಿಯೇ ಪರಿಣಮಿಸಿದಂತಿದೆ. ಆಂತರಿಕ ಮತ್ತು ಬಾಹ್ಯ ಒತ್ತಡಗಳನ್ನು ಪ್ರತ್ಯೇಕಿಸಿ ಹೇಳುವುದು ಕಠಿಣ. ಏಕೆಂದರೆ ಅವು ಒಂದನ್ನೊಂದು ಅನುಸರಿಸುತ್ತಿರುತ್ತವೆ.

ಕರ್ನಾಟಕಕ್ಕೆ ರಾಮಾನುಜಾಚಾರ್ಯರ ಆಗಮನದನಂತರ ಶಕ್ತಿಯುತವಾಗಿ ಬೆಳೆಯತೊಡಗಿದ ಶ್ರೀವೈಷ್ಣವ ಧರ್ಮ ಹೊಯ್ಸಳ ಸಾಮ್ರಾಜ್ಯದಲ್ಲಿ ತನ್ನ ಸ್ಥಾನವನ್ನು ಸ್ಥಾಪಿಸುತ್ತಾ ಜೈನಧರ್ಮದ ಸ್ಥಾನವನ್ನು ಹಿಂದಕ್ಕೆ ತಳ್ಳತೊಡಗಿತು. ಇನ್ನು ಚಾಳುಕ್ಯ

---

೧. R.N.Nandi : Religious Institutions and cults in the Deccan ಪು. ೧೧೪-೧೧೫.

೨. (ಮೈ) ಎಕ II ಶ್ರವಣಬೆಳಗೊಳ ೬೪ ಕ್ರಿ.ಶ. ೧೧೬೩.

೩. (ರೈ) ಎಕ VIII ಸೊರಬ ೩೮೪ ಕ್ರಿ.ಶ. ೧೨೩೭.

೪. (ಮೈ) ಎಕ II ಶ್ರವಣಬೆಳಗೊಳ ೭೨ ಕ್ರಿ.ಶ. ೧೩೧೩.

೫. ಬಿ.ವ್ಹಿ. ಮಲ್ಲಾಪುರ : ನಯಸೇನ ಮತ್ತು ಅವನ ಕೃತಿಗಳು, ಪು. ೩೮.

೬. ತುನಾಶಾ I ಕಾರ್ಕಳ ೪೭ ಕ್ರಿ.ಶ. ೧೩೩೪.

೭. (ರೈ) ಎಕ VIII ಸೊರಬ ೩೪೫ ಕ್ರಿ.ಶ. ೧೧೭೧.

ಸಾಮ್ರಾಜ್ಯದ ಭಾಗಗಳಲ್ಲಿ ಕಳಚೂರ್ಯ ಬಿಜ್ಜಳನ ಕಾಲದಲ್ಲಂತೂ ಅವನೇ ಸ್ವತಃ ಶೈವನಾಗಿದ್ದುದು ಮತ್ತು ಬಸವಣ್ಣನವರ ಮತ್ತು ಸಂಗಡಿಗರ ಭಕ್ತಿ ಮಾರ್ಗದ ಪ್ರಚಾರ ಅಲ್ಲದೆ ಕೆಲವು ಉಗ್ರ ಭಕ್ತಿಯ ಶೈವರು ಜೈನಧರ್ಮದ ಮೇಲೆ ಮಾಡಿದ ಆಕ್ರಮಣಗಳು ಜೈನಧರ್ಮಕ್ಕೆ ಆಘಾತವನ್ನು ಮಾಡತೊಡಗಿರಬೇಕು. ತಾಳಿಕೋಟೆ ಶಾಸನದಲ್ಲಿ ಬರುವ 'ಜಿನಸಮಯ ದಹನ ದಾವಾನಳರುಂ ಮುನಿದರ್ಗೆ ಹಾಳಾಹಳರುಂ'[೧] ಎಂಬಂತಹ ಮಾತುಗಳು ಆ ಕಾಲದಲ್ಲಿ ಜೈನಧರ್ಮ ಎದುರಿಸಬೇಕಾಗಿ ಬಂದ ಪ್ರತಿಕೂಲ ಪರಿಸ್ಥಿತಿಯ ಚಿತ್ರವನ್ನು ತೋರಿಸಿಕೊಡುತ್ತವೆ. ಏಕಾಂತ ರಾಮಯ್ಯ ಜೈನರೊಂದಿಗೆ ಸ್ಪರ್ಧೆ ಹೂಡಿ ಶಿರಪವಾಡವನ್ನು ಮೆರೆದದ್ದು, ಬಸದಿಗಳನ್ನು ನಾಶಪಡಿಸಿದ್ದು – ಈ ಎಲ್ಲವನ್ನು ಶಾಸನ ಶಿಲ್ಪಗಳ ಮೂಲಕ ಬಹಿರಂಗವಾಗಿ ಸಾರ್ವಜನಿಕ ಸ್ಥಳದಲ್ಲಿ ತೋರ್ಪಡಿಸಿದ್ದು ಆ ಪ್ರದೇಶದಲ್ಲಿ ಜೈನಧರ್ಮ ಅನುಭವಿಸಬೇಕಾಗಿ ಬಂದ ದುಃಸ್ಥಿತಿಯನ್ನು ಮನವರಿಕೆ ಮಾಡಿಕೊಡುತ್ತದೆ.[೨] ಇದೇ ರೀತಿ ಹರಿಹರ, ರಾಘವಾಂಕರ ಕೃತಿಗಳಲ್ಲಿ ಬರುವ ಆದಯ್ಯನೂ ಕೂಡ ಬಸದಿಯನ್ನೊಡೆದು ಸೋಮನಾಥನನ್ನು ಸ್ಥಾಪಿಸುತ್ತಾನೆ. ಅಣ್ಣಿಗೇರಿಯ ಶಾಸನವೊಂದು ಗೊಗ್ಗರಸನಿಂದ ಜೈನ ಧರ್ಮಕ್ಕೆ ಆದ ಹಾನಿಯನ್ನು ಹೀಗೆ ತಿಳಿಸುತ್ತದೆ. 'ಜಯಿನಮ್ರಿಗ ಬೇಂಟ್ಟೆಕಾಜಿಂ ಜಯಿನಾಗಮ ಧೂಮಕೇತು ಜಯಿನ ಕ(ಠಾ) ರಂ ಜಯಿನ ಫಣಿವಯಿನತೇಯಂ ಜಯಿನಾನ್ತಕನೆನಿಸಿ ನೆಗಳ್ದನೀ ಗೊಗ್ಗರಸಂ ಅಗ್ಗದ ಘಟಾಂತಿಕೆಯಂ ಅದು ನುರ್ಗ್ಗಾಗಿರೆಯೊಡೆದು ಕಳೆದು ಜಿನನಂತಾಗಲೆ ದುರ್ಗ್ಗತಿಯೊಳಿಕ್ಕಿ ಮೆಟ್ಟಿದ ಗೊಗ್ಗರಸಾಗ್ರಣಿ.[೩] ಇಂಥ ಆಕ್ರಮಣಗಳು ಜೈನ ಧರ್ಮವನ್ನು ಹೇಗೆ ಹಿಮ್ಮೆಟ್ಟಿಸುತ್ತಿದ್ದವೆಂಬುದನ್ನು ಖಚಿತಪಡಿಸುತ್ತವೆ. ದೇವರದಾಸಿಮಯ್ಯನಂಥ ಧಾರ್ಮಿಕ ವ್ಯಕ್ತಿಗಳು ತನ್ನ ಕಾಲದ ಜೈನಮುನಿಗಳನ್ನು ಧಾರ್ಮಿಕ ಚರ್ಚೆಯಲ್ಲಿ ಸೋಲಿಸಿದ ವಿಷಯವೂ ಮುಂದೆ ವೀರಶೈವ ಕೃತಿಗಳಲ್ಲಿ ನಿರೂಪಿತವಾಗಿದೆ.

**ಎಕ್ಕೋಟಿ ಜಿನಾಲಯಗಳು:**

ಇಂಥ ಆಘಾತಗಳಿಂದ ಉಳಿದುಕೊಳ್ಳಲೋ ಎಂಬಂತೆ ಜೈನಧರ್ಮ ತನ್ನ ಕಾಲದ ಶಕ್ತಿಯುತ ಧರ್ಮವಾಗಿದ್ದ ಕಾಳಾಮುಖ ಶೈವದೊಂದಿಗೆ ಅನೇಕ ಒಡಂಬಡಿಕೆಗಳನ್ನು ಮಾಡಿಕೊಂಡದ್ದನ್ನು ಶಾಸನಗಳು ತೋರ್ಪಡಿಸುತ್ತವೆ. ಅಗ್ರಹಾರದ ಬ್ರಾಹ್ಮಣರು ಜಿನಾಲಯ ಕಟ್ಟಿಸಿದಾಗ ಮತ್ತು ವಿಶೇಷ ದಾನಗಳನ್ನು ನೀಡಿದ ಕೆಲವು ಸಂದರ್ಭಗಳಲ್ಲಿ 'ಬ್ರಹ್ಮ ಜಿನಾಲಯ'ವೆಂದು ಹೆಸರಿಟ್ಟು ಕರೆದಿರುವುದು ಕಂಡುಬರುತ್ತದೆ.[೪] ಬಹುಶಃ ಈ ಮಾದರಿಯಲ್ಲಿ ಕಾಳಾಮುಖರು ಜೋಗವಟ್ಟಿಗೆ, ನಂದಿಕೋಲನ್ನು ಜಿನಾಲಯಗಳಿಗೆ ಕೊಟ್ಟು ಅವನ್ನು 'ಎಕ್ಕೋಟಿ ಜಿನಾಲಯ' ಗಳೆಂದು ಕರೆದಿರುವುದು ಕಂಡುಬರುತ್ತದೆ.[೫] ಬಾಹುಬಲಿ ಶೆಟ್ಟಿ ಮತ್ತು ಪಾರಿಸ ಸೆಟ್ಟಿಯರು ಕಾಂತರಾಜಪುರದಲ್ಲಿ ಮಾಡಿಸಿದ ಒಂದು ಜಿನಾಲಯವನ್ನು ಎಕ್ಕೋಟಿ ಜಿನಾಲಯವೆಂದು ಕರೆಯಲಾಗಿದೆ.[೬] ಆದರೆ ಈ ಶಾಸನದಲ್ಲಿ ಶೈವ ಸಂಬಂಧದ ವಿವರಗಳು ಇಲ್ಲ. ಸೊರಬದ ಶಾಸನವೊಂದರಲ್ಲಿ ನೇಮಿಸೆಟ್ಟಿ ಶಾಂತಿನಾಥಜಿನಮಂದಿರವನ್ನು ಮಾಡಿಸಿದನಂತರ 'ವರದ ಶ್ರೀಕಂಠ ಬ್ರತಿಪತಿ ಪರಿಕಿದರ್ಶಾನ್ತಿನ ಗ್ರಿಹಾಚಾರ್ಯ್ಯರ್ಗ್ಗೊಪಿರೆ ಯೋಗಪೆಟ್ಟಿಗೆಯನಾದರದಿಂದಂ ವಜ್ರಪಂಜರಮನಿಕ್ಕುವವೊಲು ಯಿದು ಜೋಗವಟ್ಟಿಗೆ ನಾನ್ತುದು ಮದ್ಧರ್ಮ್ಮದಲೆಂದ ಸಂಖ್ಯಾತಗಣಾತ್ಯುದಿತ ಯಶರ್ಪ್ರತಿಪಾಳಿಪರುದಾತ್ತದಿ ಶಾನ್ತಿನಾಥ ಜಿನಮಂದಿರಮಂ'[೭] ಎಂದು ಬರುತ್ತದೆ. ಈ ಶಾಸನದಲ್ಲಿ

---

೧. ಎಸ್ಐಐ XV ಮುದ್ದೇಬಿಹಾಳ ೫೬ ಕ್ರಿ.ಶ. ೧೧೮೪.

೨. ಎಇ V ಕ್ರಿ.ಶ. ೧೨೦೦ ಮತ್ತು ಎಇ XXIX, ಪು. ೧೪೧.

೩. ಎಸ್ಐಐ XV ನವಲಗುಂದ ೫೯ ಕ್ರಿ.ಶ. ೧೧೮೪.

೪. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೧೪.

೫. ಮಾ.ಕ. ೧೪-೧ ಶಿವಮೊಗ್ಗ ಕ್ರಿ.ಶ. ೧೨ ಶ.ಮಾ; (ರೈ) ಎಕ XII ಶಿರಾ ೩೨ ಕ್ರಿ.ಶ. ೧೨೭೭.

೬. (ಮೈ) ಎಕ II ಶ್ರವಣಬೆಳಗೊಳ ೫೭೩ ಕ್ರಿ.ಶ. ೧೩ ಶ.ಮಾ.

೭. (ರೈ) ಎಕ VIII ಸೊರಬ ೨೮ ಕ್ರಿ.ಶ. ೧೨೦೮.

ಉಕ್ತನಾದ ಶ್ರೀಕಂಠ (ಬಹುಶಃ ಶೈವಯತಿ) ಶಾಂತಿನಾಥ ಜಿನಾಲಯದ ಆಚಾರ್ಯನಿಗೆ ಯೋಗಪೆಟ್ಟಿಗೆಯನ್ನು ಕೊಟ್ಟ ವಿಷಯವನ್ನು ತಿಳಿಸುತ್ತದೆ. ಇಲ್ಲಿ 'ಯೋಗಪೆಟ್ಟಿಗೆಯನಾದರದಿಂದಂ ವಜ್ರಪಂಜರಮನಿಕ್ಕುವವೊಲು' ಎಂಬ ಮಾತುಗಳು ಗಮನಾರ್ಹ. ಕಸಲಗೆರೆಯ ಶಾಸನವೊಂದು 'ಕಲ್ಕಣಿ ನಾಡ ಎಕ್ಕೋಟಿ ಜಿನಾಲ್ಯಾವೆಂದು ಸಮೆದು... ಕೂಡಿ ಕೊಟ್ಟ ಹೆಸರು' ಎಂದು ಹೇಳುತ್ತದೆ.[೧] ಬಲ್ಲಾಳನ ನಾಲ್ವರು ಮಂತ್ರಿಗಳಾದ 'ಅಮ್ರಿತ ದಂಡಾಧಿಪ', ಕಲ್ಲ, ಮಸಣಯ್ಯ ಮತ್ತು ಬಸವರು ಸೇರಿ ವಕ್ಕಲುಗೆರೆಯಲ್ಲಿ ಕಟ್ಟಿಸಿದ ಜಿನಾಲಯಕ್ಕೆ ಎಕ್ಕೋಟಿ ಜಿನಾಲಯವನ್ನು ಪ್ರತಿಷ್ಠೆಗೊಳಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೨]

ಕಂಬದ ಹಳ್ಳಿ ಶಾಸನ ಕೆಲವು ವಿಶೇಷಣಗಳನ್ನು ಹೇಳಿ 'ಲಾಕುಳೀಸ್ವರ ಸಿದ್ಧಾಂತ ಕುಟುಂಬಿನಿದೀನಾನಾಥಯೂಥರುಂ ಸಪ್ತಕೋಟಿ ಸಮಾಗ್ರಗಣ್ಯರುಂ ಅಗಣ್ಯ ಪುಣ್ಯರು ಅನೇಕ ತೀರ್ತ್ಥವಗಾಹನ ಪವಿತ್ರೀಕ್ರಿತೋತ್ತಮಾಂಗರುಂ ಸೋಯಾಯಿಕ ನರ್ತ್ತಕೆನಟೀನಾಟ್ಯರಂಗರುಂ ಪಂಚಪ್ರಕಾರ ದೀಕ್ಷಾ ಕ್ರಿಯಾ ಪ್ರತಿಷ್ಠಿತರುಂ ಅಂನದಾನ ಸುವರ್ಣ್ನದಾನ ವಿನೋದರುಂಮಪ್ಪ ಏಳು ಕೋಟಿ ಶ್ರೀ ರುದ್ರರ್ಿಪ್ಪ ಶ್ರೀ ಮೂಲ ಸಂಘ ದೇಸಿ ಗಣದ ಪೊಸ್ತಕ ಗಚ್ಛದ ಕಂಬದ ಹಳ್ಳಿ ತೀರ್ತ್ಥವ ಎಕ್ಕೋಟಿ ಜಿನಾಲೆಯವೆಂದು ಹೆಸರಂ ಭೇರೀ ಪಂಚಮಹಾಶಬ್ದವಂ ಎಕ್ಕೋಟಿ ಮಹಾರುದ್ರರಿಳ್ದು ಕೊಟ್ಟರು ಅದನಾಗದೆಂದವಂ ಶಿವದ್ರೋಹಿ ಶ್ರೀ'[೩] ಎಂದು ನಿರೂಪಿಸುತ್ತದೆ. ಅರಸಿಕೆರೆಯ ಶಾಸನದಲ್ಲಿ ಬಲ್ಲಾಳನ ಮಂತ್ರಿ ರೇಚರಸ ಸಹಸ್ರಕೂಟ ಜಿನಾಲಯವನ್ನು ಕಟ್ಟಿಸಿ ದಾನ ಮಾಡಿದ ವಿಷಯವನ್ನು ಹೇಳಿದ ಮೇಲೆ 'ಏಳ್ಕೋಟಿಗಳೀ ಧರ್ಮ್ಮಮನಳ್ಕಱ ಪೆರ್ಚಿಂದೆ ನಡೆಯಿಪ... ನೆಲೆಯೊಳ್ ಬಲ್ವೆ... ಧರ್ಮ್ಮಮಂದಿರರೇಳ್ಕೋಟಿ ಜಿನಾಲಯಾಂಕಮಾದತ್ತಾದಂ'[೪] ಎಂಬ ಮಾತುಗಳು ಬರುತ್ತವೆ. ಮಲ್ಕನ್‌ಕೊಪ್ಪದ ಶಾಸನದಲ್ಲಿ ಯಾಪನೀಯ ಸಂಘದ ಶಾಂತಿವೀರದೇವನ ಕಾಲು ತೊಳೆದು ದಾನ ಮಾಡಿದ ಬಮ್ಮಿ ಸೆಟ್ಟಿಯ ವಿಷಯ ಹೇಳಿದ ಮೇಲೆ ಎಕ್ಕೋಟಿ ವ್ರತಿಗಳು ಜೋಗವಟಿಗೆಯನ್ನು ದಾನವಾಗಿ ನೀಡಿದ್ದನ್ನು ನಿರೂಪಿಸುತ್ತದೆ.[೫] ವರಂಗದ ಶಾಸನದಲ್ಲಿ 'ಕುರುಳಿಕುಂದದ ವರಾಂಗದ ಅಲೆವೂರ ಬಸದಿಗಳ್ಕೋಟಿ ಕೂಟದ ಸಂಬಂಧ'[೬] ಎಂದು ಬರುತ್ತದೆ.

ಈ ಕೆಲವು ಶಾಸನಗಳನ್ನು ಗಮನಿಸಿದರೆ ಆ ಕಾಲದ ಧಾರ್ಮಿಕ ಸ್ಥಿತಿಗತಿಯ ಬಗ್ಗೆ ಕೆಲವು ವಿಷಯಗಳು ಸ್ಪಷ್ಟವಾಗುತ್ತವೆ. ಆ ಕಾಲದ ಜೈನಧರ್ಮ ಮತ್ತು ಶೈವಧರ್ಮಕ್ಕೆ ಇದ್ದ ಸಂಬಂಧವನ್ನು ಹೇಳುವುದರ ಜೊತೆಗೆ ಇಳಿಮುಖವಾಗುತ್ತಿದ್ದ ಜೈನಧರ್ಮ ಕ್ರಮವಾಗಿ ಶೈವ ಕಕ್ಷೆಗೆ ಒಳಗಾಗುತ್ತಿದೆಯೇನೊ ಎಂಬ ಅನುಮಾನಕ್ಕೆ ಅವಕಾಶವನ್ನು ನೀಡುತ್ತದೆ. ಜಿನಾಲಯಗಳಿಗೆ ಕೊಡುವ 'ಜೋಗವಟ್ಟಿಗೆ' ಪದ ಶಾಸನಗಳಲ್ಲಿ ಭಿನ್ನ ರೂಪಗಳಲ್ಲಿ ಕಾಣಿಸಿಕೊಂಡಿದೆ. ಜೋಗಮಟ್ಟಿಗೆ, ಜೋಗವಟಿಗೆ, ಯೋಗಪೆಟ್ಟಿಗೆ, ಜೋಗವಟ್ಟಿಗೆ ಎಂಬ ರೂಪಗಳು ಕಂಡುಬರುತ್ತವೆ. ಈ ರೂಪಗಳಲ್ಲಿ, ಜೋಗವಟ್ಟಿಗೆ ಸರಿಯಾದ ರೂಪವಾಗಿದ್ದು ಅದು ಸಂಸ್ಕೃತದ 'ಯೋಗಪಟ್ಟಿಕಾ' ದ ತದ್ಭವವಾಗಿದೆ. ಇದು ಧ್ಯಾನ ಕಾಲದಲ್ಲಿ ಕುಳಿತುಕೊಳ್ಳಲು ಅನುಕೂಲವಾಗುವಂತೆ ಯೋಗಿಯು ಬೆನ್ನು ಮತ್ತು ಮೊಳಕಾಲುಗಳನ್ನು ಸೇರಿಸಿ ಸುತ್ತಿಕೊಳ್ಳುವ ಬಟ್ಟೆಯಾಗಿದೆ.[೭] ಎಕ್ಕೋಟಿಗಳು ಜಿನಾಲಯಗಳಿಗೆ ಜೋಗವಟ್ಟಿಗೆಯನ್ನು, ನಂದಿಧ್ವಜವನ್ನು ಮತ್ತು ಇತರ ಕೆಲವು ವಸ್ತುಗಳನ್ನು ಕೊಟ್ಟು ಎಕ್ಕೋಟಿ

---

೧. (ಮೈ) ಎಕ VII ನಾಗಮಂಗಲ ೧೭೦ ಕ್ರಿ.ಶ. ೧೨ ಶ.ಮಾ.

೨. (ರೈ) ಎಕ VI ಕಡೂರು ೩೬ ಕ್ರಿ.ಶ. ೧೨೦೩.

೩. (ಮೈ) ಎಕ VII ನಾಗಮಂಗಲ ೩೧ ಕ್ರಿ.ಶ. ೧೩ ಶ.ಮಾ.

೪. (ರೈ) ಎಕ V ಅರಸಿಕೆರೆ ೭೭ ಕ್ರಿ.ಶ. ೧೨೨೦.

೫. ಎಆರ್‌ಐಇ ೧೯೬೫-೬೬, ೪೦೪ ಕಲ್ಘಟಗಿ ಕ್ರಿ.ಶ. ೧೧೦೪, ಪು. ೮೧.

೬. ತುನಾಶಾ I ಕಾರ್ಕಳ ೩೯ ಕ್ರಿ.ಶ. ೧೪ ಶ.ಮಾ.

೭. ಕ.ಕ. ನಿಘಂಟು ಸಂ. III ಪು. ೩೧೦೯.

ಜಿನಾಲಯವೆಂದು ಹೆಸರಿಸುವ ಸಂಪ್ರದಾಯವನ್ನು ಕಾಣುತ್ತೇವೆ. ಶಿವಮೊಗ್ಗೆಯ ಕೋಟೆ ಆಂಜನೇಯ ದೇವಾಲಯದ ಶಾಸನಾಧಾರದಿಂದ ಎಚ್.ಆರ್.ರಘುನಾಥ ಭಟ್ಟ ಅವರು 'ಮಧ್ಯಕಾಲೀನ ಕರ್ನಾಟಕದಲ್ಲಿ ಕಾಳಾಮುಖ ಶೈವರು ಉದಾರ ಸಿದ್ಧಾಂತ ನೀತಿಯಿಂದಾಗಿ ಇತರ ಮತಗಳೊಂದಿಗೆ ಸಹಬಾಳ್ವೆಗೆ ಎಷ್ಟು ಅನುಕೂಲತೆಯನ್ನುಂಟು ಮಾಡಿದರೆಂಬುದು ಶಿವಮೊಗ್ಗ ಶಾಸನದಿಂದಲೂ ರುಜುವಾತಾಗುತ್ತದೆ'[೧] ಎಂದು ಅಭಿಪ್ರಾಯಪಡುತ್ತಾರೆ.

ತೇರದಾಳದ ಶಾಸನ ಶೈವ- ಜೈನ ಸಂಬಂಧವನ್ನು ಇನ್ನೊಂದು ರೀತಿಯಲ್ಲಿ ತಿಳಿಸುತ್ತದೆ. ತೇರದಾಳದ ನೇಮಿತೀರ್ಥೇಶ್ವರ ಜಿನಾಲಯ ಹಿಂದೆ ಕೊಲ್ಲಾಪುರದ ರೂಪನಾರಾಯಣ ಬಸದಿಯ ಆಡಳಿತದಲ್ಲಿ ಇದ್ದಿತೆಂದೂ ಆದರೆ ಅದೇ ಊರಿನ ಎಲ್ಲಾ ನಕರಗಳ ವಿನಂತಿಯಂತೆ ಕೊಲ್ಲಾಪುರದ ಘಟಿಕಾಸ್ಥಾನದ ಆಚಾರ್ಯರು ಮತ್ತು ಎಕ್ಕೋಟಿಯಸಂಖ್ಯಾತ ಗಣಂಗಳು ಒಂದು ಗೂಡಿ ಆ ಜಿನಾಲಯವನ್ನು ಅದೇ ಊರಿನ ಕಲಿದೇವ ದೇವಾಲಯಕ್ಕೆ ಪ್ರತಿಬದ್ಧ ಮಾಡಿದ ವಿಷಯವನ್ನು ಅದು ನಿರೂಪಿಸುತ್ತದೆ.[೨] ಶಾಸನ ಮುಂದುವರಿದು ತೇರದಾಳದ ಗೊಂಕ ಜಿನಾಲಯ ಹೊಸ ಒಪ್ಪಂದದಂತೆ ಅದರ ಆಚಾರ್ಯರಾಗಿದ್ದ ಪ್ರಭಾಚಂದ್ರ ಪಂಡಿತರಿಗೆ 'ಇಗ್ಗಿಳೆಯ ಜೋಗವಟ್ಟೆಗೆಯ ಸ್ಥಾನವೆನ್ದು ಜೋಗವಟ್ಟಗೆಯನಿಕ್ಕಿದರು', ಅಲ್ಲದೆ ಬಸದಿಯ ಮೇಲೆ ಶೂದ್ರಕನ, ಸಿಂಹದ, ಚಕ್ರದ ಚಿಹ್ನೆಗಳನ್ನು ಮತ್ತು ತ್ರಿಶೂಲದ ಘಂಟೆಯನ್ನು ಪಜಿಯನ್ನು ಇಟ್ಟರೆಂದು ಹೇಳಿ ಇದನ್ನು ಒಪ್ಪದವನು ಏಳು ಕೋಟಿ ತಾಪಸಿಗೆ ಮಹಾವಿರೋಧಿ ಎಂದು ತಿಳಿಸುತ್ತದೆ. ಈ ಶಾಸನವನ್ನು ಅನುಲಕ್ಷಿಸಿ ಎಸ್.ನಾಗರಾಜು ಅವರು ' ಅಂದು ನಡೆಯುತ್ತಿದ್ದ ಧಾರ್ಮಿಕ ಆಂದೋಲನದ ಚಿತ್ರವನ್ನೂ ಅಂಥ ದುರ್ಘಟನೆ ತೇರದಾಳದ ಬಸದಿಗೆ ಒದಗಬಾರದೆಂಬ ಉದ್ದೇಶದಿಂದ ಶೈವ ರಕ್ಷೆಯನ್ನೇ ಬೇಡಿದ ಒಂದು ಸಂದರ್ಭವನ್ನೂ ನಿರೂಪಿಸುವ ಈ ಶಾಸನ ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಕರ್ನಾಟಕದಲ್ಲಿ ಜೈನಧರ್ಮ ಯಾವ ಸ್ಥಿತಿಯಲ್ಲಿದ್ದಿತೆಂಬುದಕ್ಕೆ ಸೂಚಕವಾಗಿದೆ. ೧೩ನೆಯ ಶತಮಾನದಲ್ಲಿ ಇದೇ ಪರಿಸ್ಥಿತಿ ಮುಂದುವರಿದಿರಬೇಕು. ಈಗ ಉತ್ತರ ಕರ್ನಾಟಕದಲ್ಲಿ ಕಾಣುವ ಹಲವು ಶಿವಾಲಯಗಳು ಮೂಲತಃ ಜಿನಾಲಯಗಳಾಗಿದ್ದುವೆಂಬುದನ್ನೂ ಈ ಪರಿವರ್ತನೆ ಬಹು ಹಿಂದೆ ನಡೆದಿರಬೇಕೆಂಬುದನ್ನೂ ಅನೇಕ ಸಾಂದರ್ಭಿಕ ಸಾಕ್ಷ್ಯಗಳಿಂದ ಊಹಿಸಬಹುದು. ೧೩ನೆಯ ಶತಮಾನದ ಉತ್ತರಾರ್ಧ ಮತ್ತು ೧೪ನೆಯ ಶತಮಾನದ ಪ್ರಥಮಾರ್ಧ ಇಸ್ಲಾಮಿಯರ ಧಾಳಿಗಳು, ಅದನ್ನು ಅನುಸರಿಸಿ ಬಂದ ಇಸ್ಲಾಮೀ ರಾಜ್ಯ ಸ್ಥಾಪನೆ ಇವು ಈ ಪ್ರದೇಶದಲ್ಲಿ ಜೈನಧರ್ಮ ಮತ್ತೆ ಚೇತರಿಸಿಕೊಳ್ಳುವ ಅವಕಾಶವನ್ನು ಮೂಲೆಗೊತ್ತಿದವು. ಅಲ್ಲದೆ ಉತ್ತರ ಕರ್ನಾಟಕದಲ್ಲಿ ಆದಂತೆ ಜೈನರು ಮತ್ತು ಜೈನ ಸಂಸ್ಥೆಗಳ ದಾಳಿಗಳೇನೂ ನಡೆಯಲಿಲ್ಲವಾದರೂ (ದಕ್ಷಿಣ ಭಾಗದಲ್ಲಿ) ಬೆಂಬಲದ ಕ್ಷೀಣತೆ ಮಾತ್ರ ಗಮನಾರ್ಹವಾಗಿ ಕಾಣಿಸಿಕೊಳ್ಳುತ್ತದೆ' ಎಂದು ಅಭಿಪ್ರಾಯ ಪಡುತ್ತಾರೆ.[೩]

ಜೈನರು ತಮ್ಮ ಧರ್ಮ ಇಳಿಮುಖವಾಗುತ್ತಿದ್ದುದನ್ನು ಗಮನಿಸಿ ಕಾಳಾಮುಖ ಧರ್ಮದೊಂದಿಗೆ ಒಂದು ರೀತಿಯ ಒಡಂಬಡಿಕೆಯನ್ನು ಮಾಡಿಕೊಳ್ಳುವುದರ ಮೂಲಕ ರಕ್ಷಣೆಗೆ ಪ್ರಯತ್ನಿಸಿದಂತೆ ಕಾಣುತ್ತದೆ. ಶೈವ ಧರ್ಮವು ಆ ಸಂದರ್ಭವನ್ನು ಉಪಯೋಗಿಸಿಕೊಂಡು ತನ್ನ ಪ್ರಭಾವವನ್ನು, ಹಿಡಿತವನ್ನು ಜೈನಧರ್ಮದ ಮೇಲೆ ಬಲಗೊಳಿಸಿರುವ ಸಾಧ್ಯತೆ ಇದೆ. ಉತ್ತರ ಕರ್ನಾಟಕದಲ್ಲಿ ಶೈವ ಉಗ್ರ ಭಕ್ತರಿಂದ ಹಲವಾರು ಬಸದಿಗಳು ಶಿವಾಲಯಗಳಾಗಿ ಮಾರ್ಪಟ್ಟವು ಎಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.[೪] ಅ. ಸುಂದರ ಅವರು ನರಗುಂದ ತಾಲ್ಲೂಕಿನ ಕೊಣ್ಣೂರಿನ ಈಗಿನ ಪರಮೇಶ್ವರ ದೇವಾಲಯ ಮೂಲತಃ

---

೧. ಎಚ್.ಆರ್. ರಘುನಾಥ ಭಟ್ಟ : 'ಶಿವಮೊಗ್ಗೆಯ ಕೋಟೆ ಆಂಜನೇಯ ದೇವಾಲಯದ ಶಾಸನ', ಮಾಕ ೧೪-೧, ಪು.೪೯-೬೨.

೨. ಕಇ V ಜಮಖಂಡಿ ೯೮ ಕ್ರಿ.ಶ. ೧೧೮೧.

೩. ಎಸ್. ನಾಗರಾಜು : 'ಕರ್ನಾಟಕದ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜನಜೀವನ' ಕ.ಸಾ.ಚ.ಸಂ. IV(i) ಪು.೧೪೩-೪೪.

೪. R. G. Bhandarkar : Early History of Deccan. ಪು. ೧೦೫.

ಜೈನ ಮಂದಿರವಾಗಿದ್ದಿತೆಂಬುದನ್ನು ಶಾಸನ ಮತ್ತು ಶಿಲ್ಪಗಳ ಆಧಾರದಿಂದ ಖಚಿತವಾಗಿ ತೋರಿಸಿಕೊಟ್ಟಿದ್ದಾರೆ.[೧] ನೆರೆರಾಜ್ಯವಾದ ಆಂಧ್ರದಲ್ಲಿಯೂ 'ಜೈನರ ಮೇಲೆ ಉಳಿದ ಧರ್ಮೀಯರು ನಡೆಸಿದ ಅನಾಯಾಸ ದಬ್ಬಾಳಿಕೆಗಳಿಂದ ಮತ್ತು ಸಾಮಾನ್ಯವಾಗಿ ಜೈನರು ತಮ್ಮ ವ್ಯಾಪಾರ ವಹಿವಾಟಿನ ಕಾರಣದಿಂದ ಒಂದು ಕಡೆ ನಿಲ್ಲದೆ ವಲಸೆ ಹೋಗುತ್ತಿದ್ದುದರಿಂದ, ರಾಜಾಶ್ರಯವೂ ತಪ್ಪಿಹೋದುದರಿಂದ ಬಸದಿಗಳು ತಮ್ಮ ಮಹತ್ವವನ್ನು ಅಸ್ತಿತ್ವವನ್ನು ಕಳೆದುಕೊಂಡಂತೆ ತೋರುತ್ತದೆ.'[೨]

ಜೈನಧರ್ಮ ಕಾಳಾಮುಖರೊಂದಿಗೆ ದಕ್ಷಿಣ ಭಾಗದ ಕರ್ನಾಟಕದಲ್ಲಿ ಒಡಂಬಡಿಕೆಗಳನ್ನು ಮಾಡಿಕೊಳ್ಳುತ್ತಿದ್ದುದನ್ನು ಈಗಾಗಲೇ ಗಮನಿಸಲಾಗಿದೆ. ಬಹಳ ಕಾಲ ಸುರಕ್ಷಿತವಾಗಿದ್ದ ಈ ಭಾಗವೂ ರಾಮಾನುಜಾಚಾರ್ಯರ ಆಗಮನದೊಂದಿಗೆ ಕೆಲವು ತೊಡಕುಗಳನ್ನು ಒಡ್ಡಿರಬೇಕು. ಶ್ರೀವೈಷ್ಣವ ಧರ್ಮ ಪ್ರಬಲವಾಗಿ ಬೆಳೆದ ಹಾಗೆ ತಮ್ಮ ಸ್ಥಾನಮಾನಕ್ಕೆ ಧಕ್ಕೆ ಉಂಟಾಗಿ ಜೈನಧರ್ಮ ಇಕ್ಕಟ್ಟಿಗೆ ಸಿಕ್ಕಿಕೊಂಡಿತು. ಆಗಾಗ್ಗೆ ಘರ್ಷಣೆಗಳು ಅನಿವಾರ್ಯವಾದವೆಂದು ಕಾಣುತ್ತದೆ. ಬುಕ್ಕನ ಕಾಲದಲ್ಲಿ ಆ ರೀತಿಯ ಘರ್ಷಣೆಗಳನ್ನು ಪರಿಹರಿಸುವ ಉದ್ದೇಶದಿಂದ ಜೈನರಿಗೂ ವೈಷ್ಣವರಿಗೂ ರಾಜಿ ಮಾಡಿಸುವ ಪ್ರಯತ್ನ ನಡೆದದ್ದನ್ನು ಶ್ರವಣಬೆಳಗೊಳದ ಶಾಸನ ಸ್ಪಷ್ಟಪಡಿಸುತ್ತದೆ. ಶಾಸನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಜೈನರು ಮತ್ತು ಬಸದಿಗಳು ಶ್ರೀವೈಷ್ಣವರ ಕೃಪೆಯಲ್ಲಿರಬೇಕಾದ ಪರಿಸ್ಥಿತಿ ಉದ್ಭವವಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ. ಶಾಸನದಲ್ಲಿರುವಂತೆ- ಜೈನರಿಗೆ ಶ್ರೀವೈಷ್ಣವರಿಂದ ಅನ್ಯಾಯವಾಗಲು ಆನೆಯಗೊಂದಿ, ಹೊಸಪಟ್ಟಣ, ಪೆನುಗೊಂಡೆ, ಕಲ್ಲೆಹ ಪಟ್ಟಣ ಒಳಗಾದ ಸಮಸ್ತ ಜೈನರು ಬುಕ್ಕರಾಯನ ಬಳಿಗೆ ಬಿನ್ನಹ ಮಾಡಿಕೊಂಡರು ಎಂಬ ವಿಷಯ, ಅನಂತರ ಶ್ರೀವೈಷ್ಣವರ ಕೈಯಲ್ಲಿ ಕೈ ಹಿಡಿದು ಕೊಟ್ಟು ಜೈನದರ್ಶನಕ್ಕೆ ಪೂರ್ವ ಮರ್ಯಾದೆಯಂತೆ ಪಂಚಮಹಾವಾದ್ಯಗಳು ಮತ್ತು ಕಳಶ ಸಲ್ಲುತ್ತವೆ ಎಂಬ ಮಾತು, ಜೈನದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿವೃದ್ಧಿಯಾದರೂ ವೈಷ್ಣವ ಹಾನಿ ವೃದ್ಧಿಯಾಗಿ ಪಾಲಿಸುವರು ಎಂಬ ಮಾತು ಮತ್ತು ಈ ಮರ್ಯಾದೆಯಲ್ಲಿ ಎಲ್ಲಾ ರಾಜ್ಯದೊಳಗೂ ಇರುವಂತಹ ಬಸದಿಗಳಿಗೆ ಶ್ರೀವೈಷ್ಣವರು ಶಾಸನವನ್ನು ನಟ್ಟು ಪಾಲಿಸಬೇಕು ಎಂಬ ಮಾತುಗಳು ಜೈನಧರ್ಮಕ್ಕೆ ಒದಗಿದ ದುರ್ದೆಸೆಯನ್ನು ಖಚಿತವಾಗಿ ಸೂಚಿಸುತ್ತದೆ.[೩] ಈ ಶಾಸನದ ಪ್ರತಿ ಮಾಗಡಿ ತಾಲ್ಲೂಕಿನ ಕಲ್ಯ ಗ್ರಾಮದಲ್ಲಿ ಕೂಡ ದೊರೆಯುತ್ತದೆ.[೪] ಬುಕ್ಕರಾಜನ ಬಳಿಗೆ ದೂರು ಒಯ್ದವರಲ್ಲಿ ಕಲ್ಯದ ಜೈನರೂ ಇದ್ದುದು ಗಮನಾರ್ಹವಾಗಿದೆ. ಜೈನರ ದುರ್ದೆಸೆಯನ್ನು ನಿರೂಪಿಸುವ ಮೇಲಿನ ಶಾಸನ ಅವರ ಭದ್ರಕೋಟೆಯಂತಿದ್ದ ಶ್ರವಣಬೆಳಗೊಳದಲ್ಲಿ ದೊರೆತಿರುವುದೂ ವಿಶೇಷ ಸಂಗತಿಯಾಗಿದೆ.

ಜೈನ ಧರ್ಮಕ್ಕೆ ತನ್ನಲ್ಲಿ ಮೂಲತಃ ಆಕ್ರಮಣಶೀಲತೆಯ (Militency) ಕೊರತೆ ಇದ್ದುದರಿಂದ ಉಳಿದ ಧರ್ಮಗಳೊಂದಿಗೆ ಹೋರಾಡಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳದೇ ಹೋಯಿತು. ಈ ಆಕ್ರಮಣಶೀಲತೆಯ ಕೊರತೆಯೇ ಆ ಧರ್ಮದ ಇಳಿಮುಖಕ್ಕೆ ಒಂದು ಕಾರಣವಾಗಿದೆ ಎಂದು ಎಂ.ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[೫] ಇತರ ಧರ್ಮಗಳು ಈ ಧರ್ಮದ ಮೇಲೆ ಮಾಡಿರುವ ಆಕ್ರಮಣಗಳನ್ನು ಗಮನಿಸಿದರೆ ಈ ಧರ್ಮದ ಸ್ವರೂಪದಲ್ಲೇ ಅಡಗಿರುವ ತತ್ವಗಳು ಹೇಗೆ ಈ ಧರ್ಮವನ್ನು ಪ್ರತಿ ಆಕ್ರಮಣದಿಂದ ತಡೆದಿದ್ದವು ಎಂಬುದು ಸ್ಪಷ್ಟವಾಗುತ್ತದೆ.

---

೧. ಅ. ಸುಂದರ : 'ಉತ್ತರ ಧಾರವಾಡದ ಜಿಲ್ಲೆಯ ಕ್ರಿ.ಶ. ೯-೧೦ನೇ ಶತಮಾನದ ದೇವಾಲಯಗಳು ಮತ್ತು ಹೊಯ್ಸಳ ವಾಸ್ತುಶಿಲ್ಪ' ಸಾಧನೆ ೧-೨, ಪು. ೧೦೬.

೨. ಕೆ.ಆರ್. ಗಣೇಶ್ : ಆಂಧ್ರ ಪ್ರದೇಶದ ಕನ್ನಡ ಶಾಸನಗಳು. ಪು. ೧೧೩.

೩. (ಮೈ) ಎಕ II ಶ್ರವಣಬೆಳಗೊಳ ೪೭೫ ಕ್ರಿ.ಶ. ೧೩೬೮.

೪. (ರೈ) ಎಕ IX ಮಾಗಡಿ ೧೮ ಕ್ರಿ.ಶ. ೧೩೬೮.

೫. ಈ ವಿಷಯದ ವಿವರವಾದ ಚರ್ಚೆಗೆ ನೋಡಿ: M. Chidananda Murthy : 'The Concept of war and ahimsa in Jainism in Karnataka', Jainism and Karnataka Culture. ಪು. ೧೨೭-೧೩೮.

ಕೆಲವೊಮ್ಮೆ ಜೈನಮುನಿಗಳು ಅನ್ಯ ಧರ್ಮಗಳ ಬಗ್ಗೆ ಅಸಹನೆಯ ಮನೋಭಾವದಲ್ಲಿ ಸಾರ್ವಜನಿಕ ಸೂಚನೆ ನೀಡಿರುವುದನ್ನು ಕೆಲವು ಜೈನ ಶಾಸನಗಳು ತಿಳಿಸುತ್ತವೆ. ಶ್ರವಣಬೆಳಗೊಳದ ಒಂದು ಶಾಸನದಲ್ಲಿ ವಿಮಲ ಚಂದ್ರ ಮುನೀಂದ್ರನು ಸಾರ್ವಜನಿಕವಾಗಿ ಒಂದು ಸೂಚನೆಯನ್ನು ತಗುಲಿ ಹಾಕಿದ್ದನಂತೆ. ಆ ಸವಾಲಿನ ಸೂಚನೆ ಶೈವರನ್ನು, ಪಾಶುಪತರನ್ನು, ಬೌದ್ಧರನ್ನು, ಕಾಪಾಲಿಕರನ್ನು ಮತ್ತು ಕಾಪಿಲರನ್ನು ಕುರಿತದ್ದು.[೧] ಈ ಶಾಸನದ ಹಾಗೆ ಇನ್ನೊಂದು ಶಾಸನವೂ ಸಂಸ್ಕೃತ ಭಾಷೆಯಲ್ಲಿದ್ದು ಬಹುಶಃ ಅದೇ ವಿಮಲಚಂದ್ರನೆಂಬ ದಿಗಂಬರಮುನಿಯನ್ನು ಕುರಿತಂತೆ ಕಾಣುತ್ತದೆ. ಅವನು ಅನೇಕ ರಾಜರು, ಅತ್ಯುತ್ತಮ ಗಜಗಳು, ಅಶ್ವಗಳು ಸದಾ ಹಾದು ಹೋಗುವ ಮುಖ್ಯ ದ್ವಾರದ ಮೇಲೆ ಉನ್ನತ ಮತ್ತು ಹೃದ್ಯ ಭಾಷೆಯಲ್ಲಿ ಸೂಚನೆಯನ್ನು ತನ್ನ ಎದುರಾಳಿಗಳಾದ ದುಷ್ಟ ಮನಸ್ಸುಳ್ಳ ಶೈವ, ಪಾಶುಪತ, ತಥಾಗತ ಅನುಯಾಯಿಗಳಿಗೆ, ಕಾಪಾಲಿಕರಿಗೆ ಮತ್ತು ಕಾಪಿಲರಿಗೆ ಭಯಂಕರವಾಗಿರುವಂತೆ ಉದ್ದೇಶಿಸಿ ತೂಗು ಹಾಕಿದ್ದನು.[೨] ಅನ್ಯ ಧರ್ಮಗಳ ಆಕ್ರಮಣಶೀಲತೆಗಳನ್ನು ಗಮನಿಸಿದರೆ ಇದು ಕೇವಲ ಬೌದ್ಧಿಕ ಆಹ್ವಾನದಂತೆ ಕಂಡು ಬರುತ್ತದೆ.

ಜೈನಧರ್ಮದ ಹಿಮ್ಮೆಟ್ಟುವಿಕೆ ಹಲವಾರು ಕ್ಷೇತ್ರಗಳಲ್ಲಿ ಆಗಿದೆ. ರಾಘವಾಪುರದ ಶಾಸನ ಅಂತಹ ಒಂದು ಹಿಮ್ಮೆಟ್ಟುವಿಕೆಯನ್ನು ಹೇಳುತ್ತದೆ. ಹೊಯ್ಸಳ ಬಲ್ಲಾಳನಿಂದ ಕೇತಯ ದಂಡನಾಯಕ ಗೊಮ್ಮಟಹಳ್ಳಿ ಮತ್ತು ಕಾಚಗಾವುಂಡನ ಮಾದೆಯ ಹಳ್ಳಿಗಳನ್ನು ಪಡೆದು ಅವುಗಳನ್ನು ರಾಘವ ದೇವನ ಮಗನಾದ ಶ್ರೀಕರಣ ನಾರಾಯಣ ದೇವಣ್ಣನಿಗೆ ಅಗ್ರಹಾರಗಳಾಗಿ ಪರಿವರ್ತಿಸಲು ನೀಡಿದ. ಹಾಗೆ ಅಗ್ರಹಾರವಾಗಿ ಪರಿವರ್ತಿಸಿ ಭಿನ್ನ ಗೋತ್ರದ ಬ್ರಾಹ್ಮಣರಿಗೆ ನೀಡಿ ಗೊಮ್ಮಟಹಳ್ಳಿಯನ್ನು ರಾಘವಪುರವಾಗಿ ತನ್ನ ತಂದೆಯ ಹೆಸರಿನ ಸ್ಮರಣೆಗಾಗಿ ಬದಲಾಯಿಸಿ ಇನ್ನೊಂದು ಹಳ್ಳಿಯನ್ನು ರಾಘವಪುರಕ್ಕೆ ಕಾಲುವಳ್ಳಿಯಾಗಿ ಮಾಡಿದನು.[೩] ಗೊಮ್ಮಟಹಳ್ಳಿಯ ಹೆಸರೇ ಸೂಚಿಸುವಂತೆ ಜೈನ ಆವರಣವನ್ನು ಒಳಗೊಂಡಿದೆ. ಅದು ಅಗ್ರಹಾರವಾಗಿ ರಾಘವಪುರವಾಗುವುದು ಜೈನ ಧರ್ಮದ ಹಿಂಜರಿತದ ಸೂಚನೆಯಾಗಿದೆ.

ಕಲ್ಲುಹಳ್ಳಿಯ ಒಂದು ತಮಿಳು ಭಾಷೆಯ ಶಾಸನ ಮಗ್ಗ, ಅಕ್ಕಸಾಲಿಗ, ಅಂಗಡಿ, ಗಾಣಗಳಿಗೆ ತೆರಿಗೆಯನ್ನು ಹೇಳುತ್ತಾ 'ಆಜೀವಕ'ರಿಗೂ ತೆರಿಗೆ ಹಾಕಿರುವುದನ್ನು ಹೇಳುತ್ತದೆ.[೪] ಈ ಶಾಸನದ ಪ್ರಕಾರ ಜೈನರಿಗೂ ಆ ಊರಿನಲ್ಲಿ ತೆರಿಗೆ ಹಾಕುತ್ತಿದ್ದರೆಂದು ಭಾವಿಸಬೇಕಾಗುತ್ತದೆ.

ಜೈನಧರ್ಮ ಉತ್ತರ ಕರ್ನಾಟಕದಲ್ಲಿ, ದಕ್ಷಿಣ ಭಾಗದ ಕರ್ನಾಟಕದ ಭಾಗದಲ್ಲಿ ತನ್ನ ನೆಲೆಯನ್ನು ಕ್ರಮೇಣ ಕಳೆದು ಕೊಳ್ಳುತ್ತಾ ಬಂದ ಹಾಗೆ ಅದು ತನ್ನ ನೆಲೆಯನ್ನು ದಕ್ಷಿಣ ಕನ್ನಡದ ಕರಾವಳಿ ತುಳುನಾಡಿನ ಪ್ರದೇಶಕ್ಕೆ ಬದಲಾಯಿಸಿಕೊಂಡ ಹಾಗೆ ಕಾಣುತ್ತದೆ. ತುಳುನಾಡಿಗೆ ಜೈನ ಧರ್ಮ ಯಾವಾಗ ಹೆಜ್ಜೆ ಇಟ್ಟಿತು ಎಂಬುದು ಖಚಿತವಾಗಿಲ್ಲದಿದ್ದರೂ ಮೂಡಬಿದಿರೆಯ ಕ್ರಿ.ಶ.೧೨೧೫ರ ಶಾಸನದಲ್ಲಿ ಬರುವ 'ಬಿದಿರೆಯ ಪಾರ್ಶ್ವದೇವ ಬರೆಯಿಸಿ' ಎಂಬ ಮಾತು ಜೈನಧರ್ಮದ ಪ್ರಾಚೀನತೆಯನ್ನು ಆ ಪ್ರದೇಶಕ್ಕೆ ಸಂಬಂಧಿಸಿದಂತೆ ಹೇಳುವುದೆಂದು ಅಭಿಪ್ರಾಯವಿದ್ದರೂ[೫] ಅದರ ಬಗ್ಗೆ ಒಮ್ಮತವಿಲ್ಲ.[೬] ಪಿ. ಗುರುರಾಜಭಟ್ಟರು,

---

೧. (ಮೈ) ಎಕ II ಶ್ರವಣಬೆಳಗೊಳ ೭೭ ಕ್ರಿ.ಶ. ೧೧೨೯.

೨. (ಮೈ) ಎಕ V ತಿ.ನರಸೀಪುರ ೩೮ ಕ್ರಿ.ಶ. ೧೧೮೩.

೩. (ಮೈ) ಎಕ III ಗುಂಡ್ಲುಪೇಟೆ ೪೦ ಕ್ರಿ.ಶ. ೧೩೨೦.

೪. (ರೈ) ಎಕ X ಕೋಲಾರ ೧೮ ಕ್ರಿ.ಶ. ೧೨೯೪.

೫. P.Gururaja Bhat : ಪೂರ್ವೋಕ್ತ ಪು. ೪೩೦.

೬. K.V. Ramesh : A History of South Canara. ಪು. ೨೯೬-೯೭. ಪಾರ್ಶ್ವದೇವ ಎಂದು ಶಾಸನದಲ್ಲಿ ಬರುವುದು ವ್ಯಕ್ತಿನಾಮವೇ ಹೊರತು ಅದು ಪಾರ್ಶ್ವನಾಥ ದೈವವಾಗಿ ಬಂದಿಲ್ಲವೆಂದು ಅಭಿಪ್ರಾಯಪಡುತ್ತಾರೆ.

ಮೂಡಬಿದಿರೆಯ ಒಂದು ಶಾಸನದಲ್ಲಿ (ಕ್ರಿ.ಶ. ೧೨ ಶ.ಮಾ) ಉತ್ತಮ ಸೆಟ್ಟಿಯು ಸಮಾಧಿ ವಿಧಿಯಿಂದ ಮರಣ ಹೊಂದಿದ ವಿಷಯ ಬರುವುದರಿಂದ ಜೈನ ಧರ್ಮ ಒಂದು ಶತಮಾನ ಪೂರ್ವದಲ್ಲಿಯಾದರೂ ಆ ಪ್ರದೇಶವನ್ನು ಪ್ರವೇಶಿಸಿತ್ತು ಎಂಬುದನ್ನು ಖಚಿತಪಡಿಸುತ್ತದೆ ಎಂದಿದ್ದಾರೆ.[೧] ಅನಂತರದ ಕಾಲದಲ್ಲಿ ಜೈನಧರ್ಮವು ವರಾಂಗ, ಮೂಡಬಿದಿರೆ, ಹುಂಚ, ಕಾರ್ಕಳ, ಹಿರಿಯಂಗಡಿ, ಬೀಳ್ಗಿ, ಭಟ್ಕಳ, ಗೇರುಸೊಪ್ಪೆ ಮುಂತಾದ ಸ್ಥಳಗಳಲ್ಲಿ ಹಬ್ಬಿ ಬೆಳೆದದ್ದನ್ನು ಕಾಣಬಹುದು. ತುಳುನಾಡಿನ ಆಳುಪರಾಜರ ಸಾಮಂತರಾಜರೆಲ್ಲರೂ ಜೈನರಾಗಿದ್ದು ಈ ಪ್ರದೇಶದಲ್ಲಿ ಜೈನಧರ್ಮ ನೆಲೆಯೂರಿ ಬೆಳೆಯಲು ಕಾರಣವಾಗಿರಬೇಕು.[೨]

---

೧. P. Gururaja Bhat : ಪೂರ್ವೋಕ್ತ, ಪು. ೪೩೦.

೨. ಅದೇ, ಪು. ೪೩೮-೪೪೧.

# ೫. ವೈಷ್ಣವ ಧರ್ಮ

ಭಾರತದ ತುಂಬ ಜನಪ್ರಿಯ ಮತ್ತು ಶಕ್ತಿಯುತ ದೇವರಲ್ಲಿ ಒಬ್ಬನಾಗಿ, 'ತ್ರಿಮೂರ್ತಿ'ಗಳಲ್ಲಿ ಒಂದು ಸ್ಥಾನವನ್ನು ಪಡೆದುಕೊಂಡಿರುವ ವಿಷ್ಣು ವೈಷ್ಣವರ ಆರಾಧ್ಯ ದೈವ. ಈ ದೇಶದ ಎಲ್ಲ ದೇವ ದೇವತೆಗಳ ವಿಕಾಸದಂತೆ ವಿಷ್ಣುವಿನ ಕ್ರಮವಿಕಾಸವೂ ಕುತೂಹಲಕರವಾಗಿದೆ. ವೈಷ್ಣವ ಧರ್ಮದ ಮೂಲಗಳನ್ನು ವೇದಗಳಲ್ಲಿ ಗುರುತಿಸುತ್ತಾರೆ. ವೈಷ್ಣವ ಧರ್ಮ ಬೆಳೆಯುತ್ತಾ ಭಾಗವತ ಧರ್ಮವನ್ನು ಅವತಾರಗಳ ಹಿನ್ನೆಲೆಯಲ್ಲಿ ಒಳಗೊಂಡು ಕೃಷ್ಣ, ರಾಮ ಮತ್ತು ಬುದ್ಧರನ್ನೂ ತನ್ನಲ್ಲಿ ಅಳವಡಿಸಿಕೊಂಡಿತು.[೧] ಕರ್ನಾಟಕದ ವೈಷ್ಣವ ಧರ್ಮದಲ್ಲಿ ಪ್ರಮುಖವಾಗಿ ಮೂರು ಸೆಲೆಗಳು ಬೆಳೆದು ಬಂದಿರುವುದನ್ನು ಕಾಣಬಹುದು. ಮೊದಲನೆಯದು ವೈದಿಕ-ಭಾಗವತ ಮೂಲದ ವೈಷ್ಣವ ಧರ್ಮ ಕ್ರಿಸ್ತಶಕದ ಮೊದಲ ಹತ್ತು ಅಥವಾ ಹನ್ನೊಂದು ಶತಕಗಳಲ್ಲಿ ಪ್ರಚುರವಾಗಿದ್ದಿರಬೇಕು.[೨] ಎರಡನೆಯದು ರಾಮಾನುಜರು ಕರ್ನಾಟಕಕ್ಕೆ ಬರುವ ಮೊದಲೇ ಅಲ್ಪ ಸ್ವಲ್ಪ ಮಟ್ಟಿಗೆ ಪರಿಚಿತವಾಗಿದ್ದ ಆಳ್ವಾರರ ವೈಷ್ಣವಧರ್ಮ, ಅವರ ಆಗಮನದೊಂದಿಗೆ ಶ್ರೀವೈಷ್ಣವಧರ್ಮ ೧೧-೧೨ನೆಯ ಶತಮಾನದಲ್ಲಿ ಹೆಚ್ಚು ಪ್ರಚಾರವನ್ನು ಪಡೆದು ಮುಂದೆ ವೈಭವದಿಂದ ಬೆಳೆಯಿತು. ಮೂರನೆಯದು ಕರ್ನಾಟಕದ ದಕ್ಷಿಣ ಕನ್ನಡ ಪ್ರಾಂತ್ಯದಿಂದ ಹುಟ್ಟಿಬಂದ ಮಧ್ವಾಚಾರ್ಯರಿಂದ (ಕ್ರಿ.ಶ. ೧೩ನೆಯ ಶ.ಮಾ.) ಬೆಳೆದು ಬಂದ ಮಾಧ್ವ ಸಂಪ್ರದಾಯ, ಮುಂದೆ ಹರಿದಾಸ ಪರಂಪರೆಯಾಗಿ ಸಮೃದ್ಧವಾಗಿ ಬೆಳೆಯಿತು.

ವೈಷ್ಣವ ಧರ್ಮದ ಈ ಮೂರು ಪರಂಪರೆಗಳು ಪರಸ್ಪರ ಪ್ರಭಾವವನ್ನು ಬೀರಿರುವುವಾದರೂ ತಮ್ಮ ತಮ್ಮ ಅಸ್ತಿತ್ವವನ್ನು ಇಂದಿಗೂ ಉಳಿಸಿಕೊಂಡು ಬಂದಿರುವುದು ಗಮನಾರ್ಹವಾಗಿದೆ.

**ಕರ್ನಾಟಕದಲ್ಲಿ ವೈಷ್ಣವ ಧರ್ಮ:**

ವೈಷ್ಣವ ಧರ್ಮ ಕ್ರಿ.ಶ. ಆರಂಭದ ಕಾಲದಲ್ಲಿಯೇ ಕರ್ನಾಟಕದಲ್ಲಿ ಪ್ರಚಲಿತವಿದ್ದಂತೆ ಕಂಡು ಬರುತ್ತದೆ. ಬಹುಶಃ ಈ ಧರ್ಮ ವೈದಿಕ ಪ್ರಭಾವಿತ ಭಾಗವತ ಧರ್ಮವಿರಬೇಕು. ಶಾಸನಗಳಲ್ಲಿ ಭಾಗವತ, ವೈಷ್ಣವ ಎಂಬ ಉಕ್ತಿಗಳು ದೊರೆಯುತ್ತವೆ.[೩]

---

೧. ವೈಷ್ಣವ ಧರ್ಮದ ಬೆಳವಣಿಗೆಯನ್ನು ತಿಳಿಯಲು ಈ ಗ್ರಂಥಗಳನ್ನು ಗಮನಿಸಬಹುದು: Encylopaedia of Religion and Ethics II, ಪು. ೫೭೯-೫೮೩; R.G.Bhandarkar : Vaisnavism and Saivism and Minor Religious systems ಪು. ೩೩-೩೫. B. V. Ramanujam : Vaisnavism in South India up to Ramanuja. ಪು. ೧೧೮-೧೨೦. K.N. Shastri ; Culture and History of the Tamils. ಪು. ೧೧೧-೧೧೩. ವಿಷ್ಣುದೈವದ ಕ್ರಮ ವಿಕಾಸ ಹಾಗೂ ದಶಾವತಾರಗಳ ಬೆಳವಣಿಗೆಯನ್ನು ಎಸ್.ಕೆ. ರಾಮಚಂದ್ರರಾವ್ ಅವರು ಮೂರ್ತಿಶಿಲ್ಪ ನೆಲೆ - ಹಿನ್ನೆಲೆ ಗ್ರಂಥದಲ್ಲಿ ವಿವರವಾಗಿ ಚರ್ಚಿಸಿದ್ದಾರೆ, ಗಮನಿಸಿ ಪು. ೧೩೦-೧೬೦.

೨. ಎಂ. ಚಿದಾನಂದ ಮೂರ್ತಿ : ಕಶಾಸಾಂಅ, ಪು. ೧೬೪.

೩. ಅದೇ.

ಅಲ್ಲದೆ ಲಕ್ಕುಂಡಿ ಶಾಸನದಲ್ಲಿ ಅಗ್ರಹಾರವನ್ನು ವರ್ಣಿಸುವಾಗ (ಕ್ರಿ.ಶ. ೧೦೦೭) ಬಳಸಿರುವ 'ವೈಷ್ಣವ ಗೀತಿ ಮನೋಹರರ್' ಎಂಬ ಮಾತು ಗಮನಾರ್ಹವಾದುದು.[೧] ಹಾವೇರಿಯ ಶಾಸನವು (ಹಾವೇರಿ ತಾಲ್ಲೂಕು, ಧಾರವಾಡ ಜಿಲ್ಲೆ) ವಿಜಯಾಪುರದ ಕರಿಯನಾಗಿಸೆಟ್ಟಿಯರ ಮಗ ಮಲ್ಲಸೆಟ್ಟಿಯರು ದೇವರ ಭಂಡಾರವಾಗಿ ಕೊಟ್ಟಂತಹ ಹಣದ ಬಡ್ಡಿಯಲ್ಲಿ ಹೂದೋಟವನ್ನು ಮಾಡಿ ಹೂವನ್ನು ಗೋಪಾಲ ದೇವರಿಗೆ ನಡೆಸಬೇಕೆಂದೂ ಆ ದಾನವನ್ನು ಮಹಾಜನಗಳೂ, ಬೊಮ್ಮರಸನೂ ಅವರ ಪುತ್ರ ಪೌತ್ರಾದಿಗಳು ಮತ್ತು ಮುಖ್ಯವಾಗಿ ಭಾಗವತ ಜನಂಗಳುಂ ಸಮಸ್ತ ವಾರಿಕಾರರು ವರುಷವೂ ನಡೆಸಬೇಕೆಂದು ಹೇಳುತ್ತದೆ[೨]. ಇಂತಹ ಉದಾಹರಣೆಗಳಿಂದ ವೈದಿಕ ಭಾಗವತವನ್ನು ಅನುಸರಿಸುವ ವಿಷ್ಣುಭಕ್ತರು ಕರ್ನಾಟಕದಲ್ಲಿ ಇದ್ದರೆಂದು ಖಚಿತವಾಗಿ ಭಾವಿಸಬಹುದು. ಆದರೆ ಇವರಲ್ಲಿ ಪ್ರಭೇದಗಳು ಎಷ್ಟಿದ್ದವೆಂಬುದನ್ನು ಎಣಿಸಲು ಬರುವುದಿಲ್ಲ.[೩]

ಶಾಸನಗಳಲ್ಲಿ ವಿಷ್ಣ ದೇವಾಲಯಗಳ ನಿರ್ಮಾಣ, ಪೂಜಾ ಕಾರ್ಯಗಳಿಗೆ ದಾನ ದತ್ತಿಗಳು, ಧರ್ಮಕಾರ್ಯಗಳ ವಿವರಗಳು ಕಂಡುಬರುತ್ತವೆ. ಬಾಗೆವಾಡಿ ತಾಲ್ಲೂಕಿನ ಮುತ್ತಗಿಯ ಶಾಸನವೊಂದು ನಾಚಿಸೆಟ್ಟಿಯನ್ನು 'ವೈಷ್ಣವನಂ' ಎಂದು ಕರೆದಿದೆ. ಅಷ್ಟೇ ಅಲ್ಲದೆ ನಾಚಿಸೆಟ್ಟಿ ತನ್ನ ಮಡದಿಯೊಂದಿಗೆ ಶ್ರೀನಾಥನನ್ನು ಕುರಿತು ನಾನಾ ವ್ರತಗಳನ್ನು ಆಚರಿಸಿ ಕೈಹಿಸೆಟ್ಟಿಯೆಂಬ ಮಗನನ್ನು ಪಡೆದದ್ದಾಗಿ ಹೇಳುತ್ತದೆ.[೪] ಮುತ್ತಗಿಯಲ್ಲಿ ವಡ್ಡ ವ್ಯವಹಾರ ಚೌಡಿ ಸೆಟ್ಟಿ ಪ್ರತಿಷ್ಠೆ ಮಾಡಿಸಿದ ಲಕ್ಷ್ಮೀನರಸಿಂಹ ದೇವರಿಗೆ ಚಕ್ರವರ್ತಿ ಬಿಲ್ಲಮ ದೇವರಸ ಒಂದು ಹಳ್ಳಿಯನ್ನು ದಾನ ಮಾಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೫] ಪರಸಗಡ ತಾಲ್ಲೂಕಿನ ಹೂಲಿಯ ಶಾಸನ, ಹೆಗ್ಗಡೆ ದಾಸಿಮಯ್ಯನು ನಗರಖಂಡಿಯ ಶ್ರೀಕೇಶವ ದೇವಾಲಯ 'ಜೀರ್ನಿಸಿ'ರುವುದನ್ನು ನೋಡಿ ಜೀರ್ಣೋದ್ಧಾರವನ್ನು ಪುನಃ ಪ್ರತಿಷ್ಠೆ ಸಹಿತ ಮಾಡಿಸಿ ದಾನ ಕಾರ್ಯವನ್ನು ಮಾಡಿದ್ದನ್ನು ತಿಳಿಸುತ್ತದೆ.[೬] ಸಿಂದಗಿ ತಾಲ್ಲೂಕಿನ ಕೊಂಡಗುಳಿ ಶಾಸನ ಕೊಂಡಗುಳಿ ಅಗ್ರಹಾರದ ಮಹಾಜನ ಕೇಶವ ದೇವರಿಗೆ ದೀಪದಾನವಾಗಿ ಸೊಲ್ಲಗೆ ಎಣ್ಣೆಯನ್ನು ಬಿಟ್ಟ ವಿಷಯವನ್ನು ತಿಳಿಸುತ್ತದೆ.[೭] ಇಲ್ಲಿ ಗಮನಿಸಬೇಕಾದ ವಿಷಯಗಳೆಂದರೆ ನಗರಖಂಡಿಯ ದೇವಸ್ಥಾನವನ್ನು ಕ್ರಿ.ಶ. ೧೧೬೨ರಲ್ಲಿ ಜೀರ್ಣೋದ್ಧಾರ ಮಾಡಿಸಿ ಪುನಃ ಪ್ರತಿಷ್ಠೆ ಮಾಡಿಸಿದ ವಿಷಯ ಮತ್ತು ಕೊಂಡಗುಳಿ ಶಾಸನದಲ್ಲಿ ಕ್ರಿ.ಶ. ೧೧೩೨ ರಲ್ಲಿ ಆಗಲೇ ಇದ್ದ ದೇವಾಲಯಕ್ಕೆ ಮಹಾಜನರು ದಾನ ಮಾಡಿರುವ ವಿಷಯವನ್ನು ಹೇಳುತ್ತಿರುವುದು. ಬೇಲೂರು ತಾಲ್ಲೂಕಿನ ಇಬ್ಬೀಡು ಗ್ರಾಮದ ಒಂದು ಶಾಸನ ಎರಡನೆಯ ಬಲ್ಲಾಳನನ್ನು 'ವೈಷ್ಣವ ಚಕ್ರವರ್ತಿ' ಎಂದು ಕರೆಯುತ್ತದೆ.[೮] ಚಿಕ್ಕಮಗಳೂರು ತಾಲ್ಲೂಕಿನ ಅಂಬಳೆಯ ಒಂದು ಶಾಸನ ಎರಡನೆಯ ಬಲ್ಲಾಳನು ಶ್ರೀ ವೀರ ಬಲ್ಲಾಳ ಕೇಶವ ದೇವರನ್ನು ಪ್ರತಿಷ್ಠಾಪಿಸಿ ೧೨ ಜನ ಬ್ರಾಹ್ಮಣರಿಗೆ ದಾನ ಮಾಡಿ ಅಂಮಳೆಯಲ್ಲಿ ಶ್ರೀ ತೊಳಸಿಯ ಬನಕ್ಕಾಗಿ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೯]

---

೧. ಶಾಸನ ಸಂಪದ ೧೪ ಪು. ೩೦.

೨. ಎಸ್‌ಐಐ XVIII ಹಾವೇರಿ ೨೩೫ ಕ್ರಿ.ಶ. ೧೨೫೪.

೩. ಆರ್.ಎಸ್. ಪಂಚಮುಖಿ : 'ಹರಿದಾಸ ಪರಂಪರೆ' ಕ.ಸಾ.ಪ.ಪ. ೩೩-೩೪, ಪು. ೨೭.

೪. ಎಸ್‌ಐಐ XV ಬಾಗೇವಾಡಿ ೧೧೧ ಕ್ರಿ.ಶ. ೧೧೬೫.

೫. ಎಇ XV ಬಾಗೇವಾಡಿ ೩ ಬಿ ಕ್ರಿ.ಶ. ೧೧೮೯.

೬. ಎಇ XVIII ಪರಸಗಡ ೨೨ ಎಲ್ ಕ್ರಿ.ಶ. ೧೧೬೨.

೭. ಎಇ XXXVII ಸಿಂದಗಿ ೩೪ ಕ್ರಿ.ಶ. ೧೧೩೨.

೮. (ರೈ) ಎಕ V ಬೇಲೂರು ೨೨೪ ಕ್ರಿ.ಶ. ೧೨೧೭.

೯. (ರೈ) ಎಕ VI ಚಿಕ್ಕಮಗಳೂರು ೨೧ ಕ್ರಿ.ಶ. ೧೧೭೮.

ವೈದಿಕ ಭಾಗವತವು ಕರ್ನಾಟಕದಲ್ಲಿ ರಾಮಾನುಜರ ಪೂರ್ವದಿಂದಲೂ ಬೆಳೆದು ಬಂದಿರುವುದನ್ನು ಗಮನಿಸಬಹುದು. ರಾಮಾನುಜರ ಪ್ರಭಾವ ಕರ್ನಾಟಕದ ಮೇಲೆ ಆಗುತ್ತಿದ್ದ ಕಾಲದಲ್ಲಿಯೂ ಭಾಗವತ ತನ್ನ ಧರ್ಮವನ್ನು ಉಳಿಸಿಕೊಂಡು ಬಂದು ರಾಜರಿಂದ, ಅಧಿಕಾರಿಗಳಿಂದ, ಮಹಾಜನರಿಂದ ಮತ್ತು ಜನಸಾಮಾನ್ಯರಿಂದ ಪ್ರೋತ್ಸಾಹಗೊಂಡಿರುವುದನ್ನು ಕಾಣಬಹುದಾಗಿದೆ. ಇಂತಹ ಧಾರ್ಮಿಕ ಚಟುವಟಿಕೆಗಳಿಗೆ ಸಾಕಷ್ಟು ಉದಾಹರಣೆಗಳು ಶಾಸನಗಳಿಂದ ದೊರೆಯುತ್ತವೆ.[೧]

ಶಾಸನಗಳಲ್ಲಿ ವಿಷ್ಣುವಿನ ಅವತಾರಗಳನ್ನು ಅನೇಕ ಪ್ರಾರ್ಥನಾ ಪದ್ಯಗಳಲ್ಲಿ ಕಾಣಬಹುದು. ಪ್ರಖ್ಯಾತ ಹಲ್ಮಿಡಿ ಶಾಸನ (ಕ್ರಿ.ಶ. ೪೫೦) ವಿಷ್ಣುವಿನ ಪ್ರಾರ್ಥನೆಯಿಂದಲೇ ಪ್ರಾರಂಭವಾಗುತ್ತದೆ. ವಿಷ್ಣುವಿನ ಹತ್ತು ಅವತಾರಗಳಲ್ಲಿ ಪ್ರಾಚೀನ ಕನ್ನಡಿಗರ ಮನಸ್ಸನ್ನು ವಿಶೇಷವಾಗಿ ಸೆಳೆದದ್ದು ವರಾಹಾವತಾರ.[೨] ಹೊಯ್ಸಳ ವಿಷ್ಣುವರ್ಧನನನ್ನು ವಿಷ್ಣುವಿನ ಅವತಾರಗಳ ಹಿನ್ನೆಲೆಯಲ್ಲಿ ವರ್ಣಿಸುತ್ತ ಅದರಲ್ಲಿ ಬುದ್ಧಾವತಾರವನ್ನೂ ಅಳವಡಿಸಿಕೊಂಡಿರುವುದನ್ನು ಗಮನಿಸಬಹುದು.

ಪದದೊಳ್ ಕೂರ್ಮಸ್ವರೂಪಂ ನಯನಯುಗದೊಳ್ ಮತ್ಸ್ಯರೂಪಂ ಘನಗ್ರೀ
ವದೊಳಾದಿಕ್ರೋಡರೂಪಂ ನಡುವಿನೊಳೆ ನೃಸಿಂಹತ್ವಮಾತ್ಮಪ್ರಭಾವಾ
ಸ್ಪದದೊಳ್ ರಾಮತ್ರಯತ್ವಂ ಮತಿವಿಕಸನದೊಳ್ ಬುದ್ಧರೂಪಾಗಿ ಗುಜ್ಜಾ
ಗದ ಕಲ್ಕಿತ್ವಕ್ಕೆ ಮೆಯ್ದಾರದ ಹರಿಯೆನಿಪಂ ವಿಷ್ಣುಜಿಷ್ಣುಕ್ಷಿತೀಶಂ[೩]

ಕೃಷ್ಣರಾಜಪೇಟೆಯ ಗೋವಿಂದನ ಹಳ್ಳಿಯಲ್ಲಿ ವಿಷ್ಣುವಿನ ಹನ್ನೆರಡು ವಿಗ್ರಹಗಳ ಕೆಳಗೆ ಆಯಾ ವಿಗ್ರಹಗಳ ಹೆಸರುಗಳನ್ನು ಕೆತ್ತಲಾಗಿದೆ. ಅದು ಈ ಕ್ರಮದಲ್ಲಿದೆ. ಶ್ರೀ ಕೇಸವಾ, ಶ್ರೀ ನಾರಾಯಣ, ಶ್ರೀ ಮಾಧವಾ, ಶ್ರೀ ಗೋವಿಂದ, ಶ್ರೀ ವಿಷ್ಣು, ಶ್ರೀ ಮಧುಸೂದನ, ಶ್ರೀ ವಿಕ್ರಮ, ಶ್ರೀ ವಾಮನಂ, ಶ್ರೀಧರಂ, ಶ್ರೀ ರಿ(೦)ಶಿಕೇಶಿ, ಶ್ರೀ ಪದುಮನಾಭಂ ಮತ್ತು ಶ್ರೀ ದಾಮೋದರ ಎಂದಿದೆ.[೪]

ಸುಮಾರು ೧೧೫೦ಕ್ಕಿಂತ ಮುನ್ನ ಕೃಷ್ಣನು ಕನ್ನಡಿಗರ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದ್ದಂತೆ ತೋರುವುದಿಲ್ಲ ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಟ್ಟಿದ್ದಾರೆ.[೫] ರಾಮಾನುಜಾಚಾರ್ಯ ಮತ್ತು ಮಧ್ವಾಚಾರ್ಯರ ನಂತರ ಕೃಷ್ಣನಿಗೆ ವಿಶೇಷ ಮಾನ್ಯತೆ ಮತ್ತು ಜನಪ್ರಿಯತೆ ಪ್ರಾಪ್ತವಾಗಿರುವ ಸಾಧ್ಯತೆ ಇದೆ. ಉಡುಪಿಯಲ್ಲಿ ಮಧ್ವಾಚಾರ್ಯರು ಕೃಷ್ಣ ವಿಗ್ರಹವನ್ನು ಪ್ರತಿಷ್ಠಾಪಿಸಿದರೆಂಬ ನಂಬಿಕೆ ಇದ್ದರೂ ಆ ಕೃಷ್ಣನ ವಿಷಯ ಕ್ರಿ.ಶ. ೧೩೬೬-೬೭ರಲ್ಲೇ ಮೊದಲ ಬಾರಿಗೆ ಶಾಸನೋಕ್ತವಾಗಿರುವುದು.[೬]

ದಕ್ಷಿಣದ ತಮಿಳುನಾಡಿನಲ್ಲಿ ಭಾಗವತ ಮೂಲದ ಭಕ್ತಿ ಪರಂಪರೆಯೇ ಹೆಚ್ಚು ಅಭಿವೃದ್ಧಿ ಹೊಂದಿದೆ. ಈ ಪರಂಪರೆಯ ಆರಂಭಕಾಲದಲ್ಲಿ ಆಳ್ವಾರರು ಕಾಣಬರುತ್ತಾರೆ. 'ಆಟ್ವಾರರು' ಎಂದರೆ ಭಗವಂತನ ಗುಣಗಳಲ್ಲಿ ಧುಮುಕಿದವರು ಎಂದು

---

೧. ಎಸ್‌ಐಐ XVIII ಬಿಜಾಪುರ ೧೯೮ ಕ್ರಿ.ಶ. ೧೧೯೬; ಸಾಧನೆ ೬-೧ ಕಲ್ಭಟಗಿ ಕ್ರಿ.ಶ. ೧೧೫೬; ಕಸಾಪಪ ೨೮-೧ ಹಾನಗಲ್ಲು ಕ್ರಿ.ಶ. ೧೨೩೮; ಎಸ್‌ಐಐ IX-i, ಹರಪನಹಳ್ಳಿ ೨೬೭ ಕ್ರಿ.ಶ. ೧೧೬೦; ಎಸ್‌ಐಐ XVIII ರಾಣೆಬೆನ್ನೂರು ೧೯೪ ಕ್ರಿ.ಶ. ೧೧೯೭; (ರೈ) ಎಕ XII ಕುಣಿಗಲ್ಲು (೧) ಕ್ರಿ.ಶ. ೧೧೫೭; (ರೈ) ಎಕ IX ಮಾಗಡಿ ೭೬, ಕ್ರಿ.ಶ. ಸುಮಾರು ೧೧೫೦ ಇತ್ಯಾದಿ.

೨. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು ೧೬೮.

೩. ಶಾಸನ ಪದ್ಯ ಮಂಜರಿ ೯೬೦ ಪು. ೧೬೫.

೪. (ಮೈ) ಎಕ VI ಕೃ.ಪೇಟೆ ೪೧ ಕ್ರಿ.ಶ. ೧೩ ಶ.ಮಾ.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೬೯.

೬. K.V.Ramesh : A History of South Canara ಪು. ೩೦೦.

ಹೇಳುವುದುಂಟು.[೧] ಅವರು ಬಹು ದೊಡ್ಡ ವಿಷ್ಣು ಭಕ್ತರಾಗಿದ್ದು ತಮ್ಮನ್ನು ತಾಯಿಯಾಗಿಯೂ ಭಗವಂತನನ್ನು ಮಗುವಾಗಿಯೂ (ಬಾಲಕೃಷ್ಣನಾಗಿ) ಪರಿಭಾವಿಸಿ ಸ್ತುತಿಸಿ ಹಾಡಿದ ವಾತ್ಸಲ್ಯ ಗೀತೆಗಳೇ ಆಳ್ವಾರರ ಪ್ರಬಂಧಗಳಾಗಿವೆ.[೨] ಹೀಗೆ ಭಗವದ್ಭಕ್ತಿಯನ್ನು ಹಾಡಿದ ಆಳ್ವಾರರು ಹನ್ನೆರಡು ಜನ. ಇವರು ಕ್ರಿ.ಶ. ೨ನೆಯ ಶತಮಾನದಿಂದ ಕ್ರಿ.ಶ. ಸುಮಾರು ೯ನೆಯ ಶತಮಾನದವರೆಗೆ ಜೀವಿಸಿದ್ದರು.[೩] ಅಷ್ಟು ಜನ ರಚಿಸಿದ ಪ್ರಬಂಧಗಳ ಸಂಖ್ಯೆ ನಾಲ್ಕು ಸಾವಿರವೆಂದು ತಿಳಿಯಲಾಗಿದೆ. ಆಳ್ವಾರರ ಕಾಲದ ನಂತರ ಆಚಾರ್ಯರ ಪರಂಪರೆಯನ್ನು ಗುರುತಿಸಲಾಗುತ್ತದೆ. ಆಚಾರ್ಯರಲ್ಲಿ ನಾಥಮುನಿಗಳು ಮೊದಲನೆಯವರು (ಕ್ರಿ.ಶ. ೧೦ನೆಯ. ಶ.ಮಾ.) ಅವರು ವೈಷ್ಣವ ಧರ್ಮಕ್ಕೆ ಒಂದು ವ್ಯವಸ್ಥೆಯನ್ನು ತರಲು ಪ್ರಯತ್ನಿಸಿದರು. ೧೨ನೆಯ ಶತಮಾನದ ರಾಮಾನುಜರ ಕಾಲದಲ್ಲಿ ಆಳ್ವಾರರ ಪ್ರಬಂಧಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸುವ ಕಾರ್ಯ ನಡೆದಂತಿದೆ. ವೈಷ್ಣವ ಧರ್ಮದ ತತ್ತ್ವಗಳನ್ನು ಒಂದು ವ್ಯವಸ್ಥಿತ ಸಿದ್ಧಾಂತವಾಗಿ ಪ್ರತಿಪಾದಿಸಿ ರಾಮಾನುಜರು ವಿಶಿಷ್ಟಾದ್ವೈತವನ್ನು ನೆಲೆಗೊಳಿಸಿದರು. ರಾಮಾನುಜರು ಪ್ರತಿಪಾದಿಸಿದ ವೈಷ್ಣವಧರ್ಮ ಶ್ರೀವೈಷ್ಣವಧರ್ಮವಾಗಿ ಬೆಳೆಯಿತು.

**ರಾಮಾನುಜಾಚಾರ್ಯ-ವಿಶಿಷ್ಟಾದ್ವೈತ**

ರಾಮಾನುಜಾಚಾರ್ಯರು ತಮಿಳುನಾಡಿನ ಶ್ರೀ ಪೆರಂಬುದೂರಿನಲ್ಲಿ ಆಸೂರಿ ಪೆರುಮಾಳ್ ಮತ್ತು ಭೂಮಿ ಪಿರಾಟ್ಟಿ (ಕಾಂತಿಮತಿ) ಎಂಬ ದಂಪತಿಗಳಿಗೆ ಕ್ರಿ.ಶ. ೧೦೧೭ ರಲ್ಲಿ ಜನಿಸಿ ಕ್ರಿ.ಶ. ೧೧೩೭ ರವರೆಗೆ ಜೀವಿಸಿದ್ದರು ಎಂದು ತಿಳಿದು ಬರುತ್ತದೆ.[೪] ಸಾಂಪ್ರದಾಯಿಕ ನಂಬಿಕೆಯಂತೆ ಕರ್ನಾಟಕದಲ್ಲಿ ಅವರು ೧೨ ರಿಂದ ೨೦ ವರ್ಷಗಳು ಇದ್ದರೆಂದೂ, ಆ ಕಾಲದಲ್ಲಿ ಹೊಯ್ಸಳ ರಾಜನಾಗಿದ್ದ ವಿಷ್ಣುವರ್ಧನನ ಪ್ರೋತ್ಸಾಹದಿಂದ ಶ್ರೀವೈಷ್ಣವಧರ್ಮದ ಪ್ರಚಾರ ಮಾಡಿದರೆಂದೂ ತಿಳಿದು ಬರುತ್ತದೆ. ಆದರೆ ಅವರು ಇಲ್ಲಿಗೆ ಬರುವ ಮುನ್ನವೇ ತಮಿಳುನಾಡಿನ ಆಳ್ವಾರರ ಧರ್ಮದ ಪ್ರಭಾವವು ಕರ್ನಾಟಕದ ಮೇಲೆ ಆಗಿತ್ತು ಎನ್ನುವುದಕ್ಕೆ ಒಂದೆರಡು ಶಾಸನಾಧಾರಗಳಿವೆ.[೫] ತಮಿಳುನಾಡಿನ ಆಳ್ವಾರರ ಪ್ರಭಾವ ಎಷ್ಟರ ಮಟ್ಟಿಗೆ ರಾಮಾನುಜರ ಪೂರ್ವದಲ್ಲಿ ಕರ್ನಾಟಕದ ಮೇಲೆ ಆಗಿತ್ತು ಎನ್ನುವುದನ್ನು ಹೇಳಲು ಖಚಿತ ಆಧಾರಗಳಿಲ್ಲ.

ರಾಮಾನುಜರು ಕರ್ನಾಟಕಕ್ಕೆ ಏಕೆ ಬಂದಿರಬೇಕು ಎಂಬ ವಿಷಯದಲ್ಲಿ ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಶೈವಧರ್ಮಕ್ಕೆ ಸೇರಿದ್ದ ಚೋಳರಾಜ ಆ ನಾಡಿನಲ್ಲಿ ಶ್ರೀವೈಷ್ಣವರಿಗೆ ಹಿಂಸೆ ಕೊಟ್ಟಿದ್ದರಿಂದ ಮುಂದಿನ ಅಪಾಯದ ಸೂಚನೆಯನ್ನು ಶಿಷ್ಯರಿಂದ ಅರಿತು ಹೊಯ್ಸಳ ರಾಜ್ಯಕ್ಕೆ ಬಂದರೆಂಬ ನಂಬಿಕೆ ಇರುವುದಾದರೂ ಅದಕ್ಕೆ ಐತಿಹಾಸಿಕ ಆಧಾರಗಳು ಅಷ್ಟಾಗಿ ಇಲ್ಲದ ಕಾರಣ ಧರ್ಮಪ್ರಚಾರಕ್ಕಾಗಿ ಬಂದಿರಬೇಕೆಂಬ ಅಭಿಪ್ರಾಯವೂ ಇದೆ.[೬]

---

೧. K.N.Shastri : ಪೂರ್ವೋಕ್ತ ಪು. ೧೧೨.

೨. B. V. Ramanujam : ಪೂರ್ವೋಕ್ತ ಪು. ೨೪೪.

೩. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೬೪ - ಉದಾಹರಿಸಿದ್ದಾರೆ.
S.Krishnaswamy Iyengar : Contributions of South India to Indian Culture ಪು. ೨೮೬.

೪. R.G. Bhandarkar : ಪೂರ್ವೋಕ್ತ ಪು. ೫೧-೫೨.
B.R.Gopal : Sri Ramanuja in Karnataka. ಪು. ೯.
ಎನ್.ಎಸ್. ಅನಂತರಂಗಾಚಾರ್ಯ : ರಾಮಾನುಜ ದರ್ಶನ, ಪು. ೪೧.
'ಶ್ರೀವತ್ಸ' : ಭಗವಾನ್ ರಾಮಾನುಜ. ೧.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೬೫.

೬. ಎಸ್. ಶ್ರೀಕಂಠ ಶಾಸ್ತ್ರಿ : ಭಾರತೀಯ ಸಂಸ್ಕೃತಿ, ಪು. ೧೨೪.

ಆದರೆ ರಾಮಾನುಜರ ಶಿಷ್ಯನಾದ ಕೂರೇಶನ ಒಂದು ಪದ್ಯದಲ್ಲಿ ತಾವು ಶ್ರೀರಂಗಕ್ಕೆ ಎಂದು ಹಿಂತಿರುಗುವೆವೊ, ರಾಮಾನುಜರ ಸೇವೆ ಎಂದು ಲಭಿಸುವುದೋ ಎಂದು ಹಾಡಿರುವುದರಿಂದ ಅವರು ಊರನ್ನು ಬಿಡಲು ಪ್ರತಿಕೂಲ ಪರಿಸ್ಥಿತಿ ಉಂಟಾಗಿರಬೇಕು. ರಾಜನ ನೇರ ತೊಂದರೆ ಇಲ್ಲದಿದ್ದರೂ, ಅಹಿತವಾದ ವಾತಾವರಣವಿದ್ದುದರಿಂದ ಅವರು ಅಲ್ಲಿಂದ ಹೊರಟು ಅನುಕೂಲ ವಾತಾವರಣವಿದ್ದ ಹೊಯ್ಸಳ ನಾಡಿಗೆ ಬಂದಿರಬೇಕು[೧] ಎನ್ನಬಹುದು.

ರಾಮಾನುಜರು ತಮಿಳುನಾಡಿನಿಂದ ಹೊಯ್ಸಳ ರಾಜ್ಯಕ್ಕೆ ಬರುವಾಗ ಕ್ರಮಿಸಿದ ಮಾರ್ಗದ ಬಗ್ಗೆ ಯಾವುದೇ ಸೂಚನೆಗಳು ಇಲ್ಲದೇ ಹೋದರೂ ಕಾವೇರಿ ನದಿಯ ಪಾತ್ರದ ಹಾದಿಯಲ್ಲಿಯೇ ಬಂದು ಮಿಥಿಲಾ-ಸಾಲಿಗ್ರಾಮದ ಮೂಲಕ ತೊಣ್ಣೂರಿಗೆ ಬಂದು ತಲುಪಿರಬೇಕು ಎಂದು ತಿಳಿಯಲಾಗಿದೆ.[೨] ಮಿಥಿಲಾ-ಸಾಲಿಗ್ರಾಮಗಳನ್ನು ಈ ಕಾಲದ ಮಿರ್ಲೆ ಮತ್ತು ಸಾಲಿಗ್ರಾಮ ಗಳೆಂದು ಗುರುತಿಸಲಾಗಿದೆ. ಮಿರ್ಲೆ ಆ ಕಾಲದಲ್ಲಿ ಬಹು ದೊಡ್ಡ ಪಟ್ಟಣವಾಗಿರಬೇಕು. ಅಲ್ಲಿಯ ಒಂದು ಶಾಸನದಲ್ಲಿ 'ತೆಂಕಣಯ್ಯಾವೊಳೆಯಪ್ಪ ಮಿರಿಲೆ' ಎಂದು ವರ್ಣಿಸಲಾಗಿದೆ.[೩] ಅಲ್ಲದೆ ಅದು ಒಂದು ಜೈನ ಕೇಂದ್ರವೂ ಆಗಿರುವ ಸಾಧ್ಯತೆ ಇದೆ. ಏಕೆಂದರೆ ಪೆರ್ಮಾಡಿಯ ಹೆಗ್ಗಡೆಯಾದ ಬೀರಯ್ಯ 'ಅಯ್ದ ನೋನ್ತು ಮುಡಿಪಿದರ್' ಎಂದು ಒಂದು ಶಾಸನದಲ್ಲಿ ಬರುವುದರಿಂದ, ಜೈನ ಸನ್ಯಸನ ವಿಧಿಯಿಂದ ಮರಣ ಹೊಂದಿದ್ದನ್ನು ಅದು ಹೇಳುತ್ತದೆ.[೪] ಮಿರ್ಲೆಯಲ್ಲಿ ರಾಮಾನುಜರ ಮತ್ತು ಶ್ರೀ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಹಾಗೆ ಹೆಚ್ಚಿನ ವಿವರಗಳೇನೂ ಆ ಕಾಲದ ಶಾಸನಗಳಲ್ಲಿ ದೊರೆಯುವುದಿಲ್ಲ.

ಸಾಲಿಗ್ರಾಮವು ಕೂಡ ಆ ಕಾಲದಲ್ಲಿ ಜೈನ ಕೇಂದ್ರವಾಗಿದ್ದಿತು. ಅಲ್ಲಿದ್ದ ಅನಂತಸ್ವಾಮಿ ಬಸದಿಗೆ ಹಲವಾರು ದಾನ ಕಾರ್ಯಗಳು ಆ ಕಾಲದಲ್ಲಿ ನಡೆದಂತೆ ತಿಳಿದುಬರುತ್ತದೆ. ಶ್ರೀ ಮೂಲಸಂಘ ಬಲತ್ಕಾರಗಣದ ಮಾಘಣಂದಿ ಸಿದ್ಧಾಂತ ಚಕ್ರವರ್ತಿಗಳ ಪ್ರಿಯ ಗುಡ್ಡ ಸಂಬುದೇವನ ಮದವಳಿಗೆ ಬೊಂಮವ್ವೆಯು ಚತುರ್ವಿಂಶತಿ ತೀರ್ಥಕರರ ವಿಗ್ರಹಗಳನ್ನು ಮಾಡಿಸಿಕೊಟ್ಟ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೫] ಇನ್ನೊಂದು ಶಾಸನವು ತುಂಬ ಒಡೆದಿದ್ದು 'ಪುಸ್ತಕಗಚ್ಛದ ಕೊಣ್ಡಕುನ್ದಾನ್ವಯ ಇಂಗಳೇಶ್ವರ ಬಳಿಯ' ಜೈನ ಗುರುಗಳಿಗೆ ಸಂಬಂಧಿಸಿದಂತೆ ಸೂಚನೆ ನೀಡುತ್ತದೆ.[೬] ಸಾಲಿಗ್ರಾಮದಲ್ಲಿ ರಾಮಾನುಜರಿಗೆ ಸಂಬಂಧಪಟ್ಟ ವಿಷಯಗಳನ್ನು ಹೇಳುವ ಆಧಾರಗಳಿವೆ. ಅಲ್ಲಿ ಈಗಲೂ ರಾಮಾನುಜರ ಒಂದು ಚಿಕ್ಕ ಗುಡಿ ಇದೆ. ಅದರಲ್ಲಿ ರಾಮಾನುಜರದೆಂದು ಹೇಳುವ ಪಾದಮುದ್ರಿಕೆಗಳು ಇವೆ.[೭] ಈ ಊರಿನಲ್ಲಿಯೇ ರಾಮಾನುಜರ ಪರಮ ಶಿಷ್ಯರಲ್ಲೊಬ್ಬನಾದ ವಡಗನಂಬಿ ಎಂಬ ನಿಷ್ಠಾವಂತ ಶ್ರೀವೈಷ್ಣವಧರ್ಮಕ್ಕೆ ಸೇರಿದನೆಂದು ಹೇಳಲಾಗುತ್ತದೆ. ರಾಮಾನುಜರ ಗುಡಿಯ ಬಳಿಯಿರುವ ಕೊಳದ ಬಾಗಿಲ ತೊಲೆಯ ಮೇಲಿರುವ ಒಂದು ಶಾಸನ 'ಶ್ರೀವೈಷ್ಣವರಿಗೆ ಶ್ರೀರಂಗದ ಮಟದಲ್ಲಿ ಎಂಬಾರುಂ ಆಳನುಂ ಆಚಾನುಂ' ದಾನ ಮಾಡಿದಂತೆ ತಿಳಿಸುತ್ತದೆ.[೮] ಬಿ.ಆರ್. ಗೋಪಾಲ್ ಅವರು ಈ ಶಾಸನದಲ್ಲಿ ಬರುವ ಆಳನ್ ಹೆಸರನ್ನು ಆಂಡವನ್ ಆಗಿ ಓದಿರುವುದನ್ನು ಹೇಳಿ ಅವನನ್ನು ದಾಶರಥಿ ಅಥವಾ ಮುದಲಿಯಾಣ್ಡಾನ್ ಎಂದು ಗುರುತಿಸಿರುವುದನ್ನು

---

೧. B. R. Gopal : ಪೂರ್ವೋಕ್ತ ಪು. ೧೨-೧೩.

೨. ಅದೇ, ಪು. ೯.

೩. (ಮೈ) ಎಕ V ಕೃಷ್ಣರಾಜನಗರ ೮೯ ಕ್ರಿ.ಶ. ೧೨೯೯.

೪. (ಮೈ) ಎಕ V ಕೃಷ್ಣರಾಜನಗರ ೯೦ ಕ್ರಿ.ಶ. ೧೨ನೇ ಶತಮಾನ.

೫. (ಮೈ) ಎಕ V ಕೃಷ್ಣರಾಜನಗರ ೫೯ ಕ್ರಿ.ಶ. ೧೨ನೇ ಶ.ಮಾ.

೬. (ಮೈ) ಎಕ V ಕೃಷ್ಣರಾಜನಗರ ೬೩ ಕ್ರಿ.ಶ. ೧೨ನೇ ಶ.ಮಾ.

೭. ಎಂಎಆರ್ ೧೯೧೩ ಪು. ೧೩.

೮. (ಮೈ) ಎಕ V ಕೃಷ್ಣರಾಜನಗರ ೫೧ ಕ್ರಿ.ಶ. ೧೨ನೇ ಶ.ಮಾ. ಈ ಶಾಸನ ಸಂಸ್ಕೃತದ 'ರಾಮಾನುಜಾಯ ನಮಃ' ಎಂಬ ಸ್ತುತಿಯಿಂದ ಪ್ರಾರಂಭವಾಗುತ್ತದೆ.

ತಿಳಿಸಿ ಆ ಶಾಸನೋಕ್ತರನ್ನು ಗೋವಿಂದ, ಆನಂದಾಳ್ವಾರ್ ಮತ್ತು ಕಡಾಂಬಿ ಆಚ್ಚಾನ್ ಎಂದು ಕ್ರಮವಾಗಿ ಗುರುತಿಸಬಹುದೆಂದು ಹೇಳಿದ್ದಾರೆ. ಅವರಲ್ಲಿ ಆನಂದಾಳ್ವಾರ್ ಮೂಲತಃ ಅನಂತ ಸೂರಿಯೆಂದು ಗುರುತಿಸಿ ಅವನು ಶ್ರೀರಂಗಪಟ್ಟಣದ ಬಳಿಯ ಕಿರಂಗೂರಿನವನೆಂದು ಸೂಚಿಸಿದ್ದಾರೆ. ಈ ಮೂರೂ ಜನ ರಾಮಾನುಜರ ನೇರ ಶಿಷ್ಯರು ಅಥವಾ ಅವರ ಪರಂಪರೆಯವರಿರಬೇಕು ಎಂದಿದ್ದಾರೆ.[೧] ಕೆ. ಟಿ. ರಾಮಸ್ವಾಮಿಯವರು ಆ ಶಾಸನೋಕ್ತ ವ್ಯಕ್ತಿಗಳು ರಾಮಾನುಜರ ನೇರ ಶಿಷ್ಯರೆಂದು ಹೇಳಿ ಅವರಲ್ಲಿ ಮೊದಲಿಬ್ಬರು ಗುರುಗಳ ಹತ್ತಿರದ ಸಂಬಂಧಿಗಳು ಎಂದು ಅಭಿಪ್ರಾಯ ಪಟ್ಟಿದ್ದಾರೆ.[೨] ಒಟ್ಟಿನಲ್ಲಿ ಆ ಶಾಸನ ರಾಮಾನುಜರು ಸಾಲಿಗ್ರಾಮಕ್ಕೆ ಬಂದದ್ದನ್ನು ದೃಢಪಡಿಸುತ್ತದೆ. ಆ ಊರಿನಲ್ಲಿರುವ ಕೊಳ ಅವರನಂತರ ಪವಿತ್ರವೆಂದು ಭಾವಿಸಲ್ಪಟ್ಟಿರಬೇಕು. ಸಾಲಿಗ್ರಾಮಕ್ಕೆ ಮೊದಲು ಸಿಂಗರ್ ಕೋಯಿಲ್ ಎಂದು ಹೆಸರಿದ್ದಿತೆಂದು ಅದಕ್ಕೆ ರಾಮಾನುಜರು ಸಾಲಿಗ್ರಾಮವೆಂದು ಹೆಸರಿಟ್ಟರೆಂದು 'ಗುರುಪರಂಪರೈ'ಯನ್ನು ಆಧರಿಸಿದ ಅಭಿಪ್ರಾಯವಿದೆ.[೩] ಆದರೆ ಅದಕ್ಕೆ ಶಾಸನಾಧಾರಗಳು ಇದ್ದಂತಿಲ್ಲ.

**ತೊಣ್ಣೂರು:**

ರಾಮಾನುಜಾಚಾರ್ಯರ ಸಂಬಂಧದಲ್ಲಿ ಹೆಚ್ಚು ಖ್ಯಾತವಾಗಿರುವ ಊರುಗಳಲ್ಲಿ ತೊಣ್ಣೂರು ಪ್ರಮುಖವಾದುದು. ಅದು ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿನಲ್ಲಿದೆ. ಆ ಊರಿಗೆ ಯಾದವಪುರ, ಯಾದವ ನಾರಾಯಣ ಚತುರ್ವೇದಿ ಮಂಗಲ, ತೊಂಡನೂರು[೪] ಎಂಬ ಹೆಸರುಗಳಿದ್ದುವೆಂಬ ಉಲ್ಲೇಖಗಳು ದೊರೆಯುತ್ತವೆ. ಅದು ಹೊಯ್ಸಳ ವಿಷ್ಣುವರ್ಧನನ ರಾಜಧಾನಿಯಾಗಿದ್ದಂತೆ ಕಂಡುಬರುತ್ತದೆ. ತೊಣ್ಣೂರಿನ ಗುಡ್ಡದ ಮೇಲೆ ೧೨ ನೆಯ ಶತಮಾನಕ್ಕೆ ಸೇರಿದ ನರಸಿಂಹ ದೇವಸ್ಥಾನವಿದೆ. ಗರ್ಭಗೃಹದಲ್ಲಿ ಯೋಗನರಸಿಂಹ ವಿಗ್ರಹವಿದೆ. ಈಶಾನ್ಯದಲ್ಲಿ ಶ್ರೀರಾಮಾನುಜರ ವಿಗ್ರಹವಿದೆ. ಆದರೆ ಅದು ಗಾರೆಯಿಂದ ಮಾಡಿದ್ದಾಗಿದ್ದು, ರಾಮಾನುಜರು ಪದ್ಮಾಸನದಲ್ಲಿ ಕುಳಿತು ದಂಡವನ್ನು ಹಿಡಿದಿರುವಂತಿದೆ. ತಲೆಯ ಮೇಲೆ ಏಳು ಹೆಡೆಯ ಆದಿಶೇಷನಿರುವನು. ಆ ವಿಗ್ರಹ ರಾಮಾನುಜರ ಸಮಕಾಲೀನವೆಂಬ ನಂಬಿಕೆ ಇದ್ದರೂ ಅದು ಈಚಿನದೆಂದು ಕಂಡುಬರುತ್ತದೆ.[೫] ತೊಣ್ಣೂರಿನ ಕೆರೆಯನ್ನು ರಾಮಾನುಜರ ಆಜ್ಞೆಯಂತೆ ಕಟ್ಟಲಾಯಿತೆಂದೂ ಅವರೇ ಅದಕ್ಕೆ ತಿರುಮಲ ಸಾಗರವೆಂದು ಹೆಸರು ಇಟ್ಟರೆಂಬ ನಂಬಿಕೆ ಇದೆ. ಆದರೆ ಕೃಷ್ಣರಾಜಪೇಟೆಯ ಕ್ರಿ.ಶ. ೧೧೫೦ರ ಒಂದು ಶಾಸನ ಅದನ್ನು ಯಾದವಸಮುದ್ರವೆಂದು ಕರೆದಿದೆ.[೬]

---

೧. B.R. Gopal : ಪೂರ್ವೋಕ್ತ ಪು. ೧೩-೧೪.

೨. K.T.Ramaswamy : 'Sri Vaishnavas in Hoysala Period', The Hoysala Dynasty ಪು. ೩೧೧.

೩. ಅದೇ.

೪. ಎಚ್.ಎಂ. ನಾಗರಾಜು : 'ತೊಣ್ಣೂರು' ಮಾ.ಕ. ೬-೧ ಪು. ೭೫-೭೮.
ತೊಣ್ಣಮಾರನೆಂಬುವನು ಇಲ್ಲಿ ರಾಜ್ಯಭಾರ ಮಾಡಿದ್ದರಿಂದ ತೊಂಡನೂರು ಎಂಬ ಹೆಸರು ಬಂದಿತ್ತೆಂಬ ಐತಿಹ್ಯವಿದೆ.
B. R. Gopal : ಪೂರ್ವೋಕ್ತ ಗ್ರಂಥದಲ್ಲಿ 'ತೊಂಡ ಎಂದರೆ ತಮಿಳಿನಲ್ಲಿ ಭಕ್ತ ಅಥವಾ ಸೇವಕ ಎಂದು ಮೂಲತಃ ಅರ್ಥ. ತಮಿಳಿನ ಪ್ರಭಾವ ಆ ಪದದ ಮೇಲಾಗಿದೆಯೆಂದೂ ಬಹುಶಃ ರಾಮಾನುಜರು ಬಂದಾಗ ಆ ಊರಿಗೆ ಯಾದವಪುರವೆಂಬ ಹೆಸರಿದ್ದು ರಾಮಾನುಜರ ಶಿಷ್ಯರು ಅಲ್ಲಿ ಅವರ ಜೊತೆ ಬಂದು ನೆಲಸಿದ ಮೋಲೆ ತೊಂಡನೂರು ಆಗಿರಬಹುದು ಎಂದು ಊಹಿಸಿದ್ದಾರೆ' ವಿವರಗಳಿಗೆ ಪು. ೧೪-೧೭.

೫. ಎಸ್. ಶ್ರೀಕಂಠಶಾಸ್ತ್ರಿ : ಹೊಯ್ಸಳ ವಾಸ್ತುಶಿಲ್ಪ, ಪು. ೯೩.

೬. R.Vasanta : Tonnur-Its Importance in the History of Karnataka. Srikanthika ಪು. ೧೨೬.

ತೊಣ್ಣೂರಿನಲ್ಲಿ ನಾಲ್ಕು ದೇವಾಲಯಗಳಿವೆ; ಒಂದು ಶೈವ, ಮೂರು ವೈಷ್ಣವ ದೇವಾಲಯಗಳು. ವೈಷ್ಣವ ದೇವಾಲಯಗಳಲ್ಲಿ ಯೋಗನರಸಿಂಹ, ಲಕ್ಷ್ಮೀನಾರಾಯಣ ಮತ್ತು ಕೃಷ್ಣ ದೈವಗಳು ಕಂಡು ಬರುತ್ತವೆ. ಯೋಗನರಸಿಂಹ ದೇವಾಲಯದ ತಮಿಳು ಶಾಸನವೊಂದು ಶ್ರೀಕೃಷ್ಣದೇವರಿಗೆ ಶ್ರೀ ಜಯಂತಿಯನ್ನು ಮತ್ತು ಇತರ ಪೂಜೆಗಳನ್ನು ನೆರವೇರಿಸಲು ಆರು ಪೊನ್ನುಗಳನ್ನು ಮುಟ್ಟಿಯಂಬಾಕ್ಕಂನ ಆಂಡಾಳ್ ಕೊಟ್ಟದ್ದಾಗಿ ಹೇಳುತ್ತದೆ. ಆ ದೇವಸ್ಥಾನವನ್ನು ಯಾದವ ನಾರಾಯಣ ಚತುರ್ವೇದಿ ಮಂಗಳದಲ್ಲಿ ಕಟ್ಟಿಸಿದ್ದು ಚೊಕ್ಕಾಣ್ಡೈ ಪೆರ್ಗಡಿ ಎಂದು ಹೇಳುತ್ತದೆ.[೧] ಅಂದರೆ ಶಾಸನದ ಕಾಲಕ್ಕಾಗಲೇ ಕೃಷ್ಣಮಂಟಪ ಅಸ್ತಿತ್ವದಲ್ಲಿ ಇದ್ದಿತೆಂದು ಭಾವಿಸಬಹುದು. ಬಿ.ಆರ್. ಗೋಪಾಲ್ ಅವರು ಕ್ರಿ.ಶ. ೧೧೩೬ ರ ತಮಿಳು ಶಾಸನವನ್ನು ಉದಾಹರಿಸಿ ಆ ಕಾಲಕ್ಕೇ ಕೃಷ್ಣಮಂಟಪ ಅಸ್ತಿತ್ವದಲ್ಲಿ ಇದ್ದಿತೆಂದು ನಿರ್ಧರಿಸಿದ್ದಾರೆ.[೨]

ಲಕ್ಷ್ಮೀನಾರಾಯಣ ದೇವಾಲಯದಲ್ಲಿರುವ ಒಂದು ಶಾಸನ ಯಾದವ ನಾರಾಯಣ ಚತುರ್ವೇದಿ ಮಂಗಲದ ಶ್ರೀಕರಣ ಕಲಿಯಣ್ಣನು ಒಂಬತ್ತು ವೃತ್ತಿಗಳನ್ನು ಶ್ರೀಮನ್ಮಹಾಪ್ರಧಾನ ಸರ್ವಾಧಿಕಾರಿ ಮಹಾಪಸಾಯ್ತ ಶ್ರೀಕರಣದ ಎಚಿಯಣ್ಣನಿಂದ ಕ್ರಯದಾನ ಪಡೆದು ಶ್ರೀಕಾಂಚೀಪುರದ ಅಲ್ಲಾಳು ಪೆರುಮಾಳು ದೇವರಿಗೆ ದಾನವನ್ನು ಬಿಟ್ಟ ವಿಷಯವನ್ನು ತಿಳಿಸುತ್ತದೆ.[೩] ತಮಿಳುನಾಡಿನಲ್ಲಿರುವ ದೂರದ ಕಾಂಚೀಪುರಕ್ಕೆ ಕರ್ನಾಟಕದ ತೊಣ್ಣೂರಿನಿಂದ ದಾನ ಮಾಡಿರುವುದು ಕುತೂಹಲಕರ ವಿಷಯವಾಗಿದೆ. ಆ ಕಾಲದಲ್ಲಿ ಕಾಂಚೀಪುರ ತಮಿಳುನಾಡಿನ ಪ್ರಮುಖ ಶ್ರೀವೈಷ್ಣವಕೇಂದ್ರವಾಗಿತ್ತು ಎನ್ನುವುದು ಸ್ಪಷ್ಟವೇ ಇದೆ. ತಮಿಳು ಶಾಸನವೊಂದು, ಅರ್ಧ ನಿವೇಶನವನ್ನು ಅಣ್ಣುವಣ್ಣನ್ ಎಂಬುವವನಿಗೆ ಮಾರಿ ಬಂದ ೫ ಹೊನ್ನುಗಳಿಂದ ಉತ್ತಮನಂಬಿಯೆಂಬ ಶ್ರೀವೈಷ್ಣವ, ಲಕ್ಷ್ಮೀನಾರಾಯಣ ದೇವಾಲಯದಲ್ಲಿ ದೀಪವನ್ನು ಬೆಳಗಿಸಲು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೪] ಉತ್ತಮನಂಬಿ ದೇವಾಲಯದ ಆಡಳಿತ ನೋಡಿಕೊಳ್ಳುತ್ತಿದ್ದ ವ್ಯಕ್ತಿಯ ಹಾಗೆ ಕಾಣುತ್ತದೆ. ಅದಕ್ಕೂ ಮೊದಲು ದೇವಾಲಯದ ಆಡಳಿತ ವ್ಯವಸ್ಥೆ ನೋಡಿಕೊಳ್ಳುತ್ತಿದ್ದುದು ತಿರುವರಂಗದಾಸ ಎಂಬ ವ್ಯಕ್ತಿ. ಶ್ರೀ ಮನ್ಮಹಾ ಪ್ರಧಾನಿ ಸರ್ವಾಧಿಕಾರಿ ಮಕ್ಕಳ ದಂಡದಧಿಷ್ಠಾಯಕಂ ಮಹಾಪಸಾಯ್ತಂ ಹಿರಿಯ ಹೆಗ್ಗಡೆ ಮಾಚಯ್ಯ ಹೆಗ್ಗಡೆ ಕೇಶಿಯಣ್ಣ ಹೆಗ್ಗಡೆ ಬೊಮ್ಮಣ್ಣ ಲಕ್ಷ್ಮೀನಾರಾಯಣ ದೇವರ ಪೂಜಾ ಕಾರ್ಯಕ್ಕೆ ಮಾಡಿದ ದಾನವನ್ನು ತಿರುವರಂಗದಾಸನ ವಶದಲ್ಲಿ ಬಿಡುತ್ತಾರೆ.[೫] ಇದೇ ತಿರುವರಂಗನ ಹೆಸರು ಇನ್ನೊಂದು ಶಾಸನದಲ್ಲಿ ಬರುತ್ತದೆ.[೬] ಆದರೆ ಕ್ರಿ.ಶ. ೧೧೭೩ ರ ಒಂದು ಶಾಸನದಲ್ಲಿ ಮಹಾಜನರು ಕೊಟ್ಟ ದಾನವನ್ನು ಕುಲಶೇಖರದಾಸರ್ ಲಕ್ಷ್ಮೀನಾರಾಯಣ ಸ್ವೀಕರಿಸುವುದು ಕಂಡುಬರುತ್ತದೆ.[೭] ೧೩ನೆಯ ಶತಮಾನದ ಒಂದು ಶಾಸನವು ಲಕ್ಷ್ಮೀನಾರಾಯಣ ದೇವಾಲಯದ ಶ್ರೀವೈಷ್ಣವ ಮಹಾಜನರು ೨ ಗದ್ಯಾಣಗಳಿಗೆ ಅಣ್ಣನ್ ಎಂಬುವನಿಗೆ

---

೧. (ಮೈ) ಎಕ VI ಪಾಂಡವಪುರ ೧೧೯ ಕ್ರಿ.ಶ. ೧೧೫೨.

೨. (ಮೈ) ಎಕ VI ಪಾಂಡವಪುರ ೧೨೦ ಕ್ರಿ.ಶ. ೧೨ ಶ.ಮಾ. ಶಾಸನ ಸಂಪುಟದಲ್ಲಿ ಇಲ್ಲಿ ಕಾಣಿಸಿರುವ ಕಾಲಸೂಚನೆ ಇದೆ. ಆದರೆ ಅವರ Sri Ramanuja in Karnataka ಗ್ರಂಥದಲ್ಲಿ ಪು. ೧೭-೨೧ ಶಾಸನದ ಕಾಲವನ್ನು ಕ್ರಿ.ಶ. ೧೧೩೬ ಎಂದು ನಿರ್ಧರಿಸಿದ್ದಾರೆ. ಈ ಶಾಸನದಲ್ಲಿ ಇಳಬೀರನ್ ಭಟ್ಟನ್ ಮತ್ತು ಅವನ ಹೆಂಡತಿ ನಾಂಗೈ (ಮುಟ್ಟಿಯಾಂಬಾಕಮ್ಮಿನ ಆಂಡಾಳ್) ಹತ್ತು ಹೊನ್ನುಗಳನ್ನು ನೀಡಿ ಅದರ ಬಡ್ಡಿಯಲ್ಲಿ ನಿಶ್ಚಿತ ಪ್ರಮಾಣದ ಪ್ರಸಾದವನ್ನು ವೆಣ್ಣೈಕೂತ್ತಪಿಳ್ಳೈಗೆ ವ್ಯವಸ್ಥೆ ಮಾಡುತ್ತಾರೆ. ೧೬ ವರ್ಷಗಳ ಅನಂತರ ಶ್ರೀಜಯಂತಿಯ ಆಚರಣೆಗೆ ಮುಟ್ಟಿಯಾಂಬಾಕಮ್ಮಿನ ಆಂಡಾಳ್ ಒಬ್ಬಳೇ ದಾನ ಮಾಡಿರುವುದನ್ನು ಗುರುತಿಸಿದ್ದಾರೆ.

೩. (ಮೈ) ಎಕ VI ಪಾಂಡವಪುರ ೬೪ ಕ್ರಿ.ಶ. ೧೧೭೫.

೪. (ಮೈ) ಎಕ VI ಪಾಂಡವಪುರ ೭೧ ಕ್ರಿ.ಶ. ೧೧೯೬.

೫. (ಮೈ) ಎಕ VI ಪಾಂಡವಪುರ ೬೩ ಕ್ರಿ.ಶ. ೧೧೭೪.

೬. (ಮೈ) ಎಕ VI ಪಾಂಡವಪುರ ೬೦ ಕ್ರಿ.ಶ. ೧೧೭೪.

೭. (ಮೈ) ಎಕ VI ಪಾಂಡವಪುರ ೭೨ ಕ್ರಿ.ಶ. ೧೧೭೩.

ಭೂಮಿಯನ್ನು ಮಾರಿದ ವಿಷಯವನ್ನು ತಿಳಿಸುತ್ತದೆ.[೧] ತೊಣ್ಣೂರಿನ ಇನ್ನೊಂದು ತಮಿಳು ಶಾಸನ ಲಕ್ಷ್ಮೀನಾರಾಯಣ ದೇವರ ಪ್ರಸಾದಕ್ಕಾಗಿ ೧೦ ಸಲಗೆ ಕಳನಿ ಭೂಮಿಯನ್ನು ಶ್ರೀವೈಷ್ಣವರಿಂದ ತತ್ಕಾಲೀನ ಬೆಲೆಗೆ ಸೇನಾಪತಿ ಪೆರುವಿಳ್ಳೆಯಾಗಿ ಕೊಂಡು ಲಕ್ಷ್ಮೀನಾರಾಯಣ ದೇವರ ಪರ್ವದಿನಗಳಲ್ಲಿ ತಿರುವಾಯ್ಮೊಳಿ ಚಿರಪ್ಪಿಗಾಗಿ ವಿಟಣ್ಣರ್ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಶ್ರೀವೈಷ್ಣವ ಮಹಾಜನರು ಈ ಶಾಸನಕ್ಕೆ ಸಾಕ್ಷಿಗಳಾಗಿದ್ದಾರೆ.[೨]

ತೊಣ್ಣೂರಿನ ವೈಷ್ಣವ ದೇವಾಲಯಗಳ ಆಡಳಿತ ಶ್ರೀವೈಷ್ಣವರ ಕೈಯಲ್ಲಿ ಇದ್ದದ್ದು ಮೇಲಿನ ಶಾಸನಗಳಿಂದ ಸ್ಪಷ್ಟವಾಗಿದೆ. ರಾಮಾನುಜರು ಆ ಊರಿನಲ್ಲಿ ಎಷ್ಟು ವರ್ಷವಿದ್ದರೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲವಾದರೂ ಸುಮಾರು ಆರು ವರ್ಷಗಳು ಅಲ್ಲಿ ವಾಸಿಸಿದ್ದರೆಂದು ಹೇಳಬಹುದು.[೩] ಆ ಊರಿನ ಯೋಗನರಸಿಂಹ ದೇವಾಲಯದಲ್ಲಿ ರಾಮಾನುಜರು ಕೆಲಕಾಲ ವಾಸವಾಗಿದ್ದಿರಬೇಕು. ತಿರುವರಂಗದಾಸನು ರಾಮಾನುಜರ ಶಿಷ್ಯನಾಗಿದ್ದು ಆ ದೇವಾಲಯದ ಸ್ಥಾನಪತಿ ಯಾಗಿದ್ದಿರಬೇಕು. ಅವನು ಶ್ರೀವೈಷ್ಣವಧರ್ಮ ಪ್ರಸಾರವಾಗಲು ಸಾಕಷ್ಟು ಕಾರಣನಾದಂತಿದೆ. ದಾನಕಾರ್ಯಗಳನ್ನು ಮಾಡಿದವರಲ್ಲಿ ಹೆಚ್ಚಿನ ಜನ ತಮಿಳುನಾಡಿನಿಂದ ಬಂದವರಂತೆ ಕಾಣುತ್ತಾರೆ. ಕೆಲವರು ಸ್ಥಳೀಯರೂ ದಾನಕಾರ್ಯಗಳನ್ನು ಮಾಡಿದ್ದಾರೆ. ಅವರಲ್ಲಿ ಮಹಾಪಸಾಯ್ತ ಮಾಚಮಯ್ಯ, ದಂಡನಾಯಕ ಹೆಗ್ಗಡೆ ಕೇಸಿಯಣ್ಣ, ಹೆಗ್ಗಡೆ ಕೋಮಣ್ಣ, ಹೆಗ್ಗಡೆ ಮಹದೇವಣ್ಣ ಒಟ್ಟಾಗಿ ವಿರುಂದ ಪೆರುಮಾಳಿಗೆ ನಂದಾದೀವಿಗೆಗೆ ಮತ್ತು ಪೂಜಾ ಕಾರ್ಯಗಳಿಗೆ ಭೋಗನ ಹಳ್ಳಿಯ ಕಾಲುಹಳ್ಳಿಗಳ ಸಹಿತವಾಗಿ ಅನೇಕ ತೆರಿಗೆಯೊಡನೆ ದಾನವನ್ನು ಬಿಟ್ಟ ವಿಷಯವನ್ನು ಶಾಸನ ತಿಳಿಸುತ್ತದೆ.[೪] ವಿಷ್ಣುವರ್ಧನನ ಮಹಾಪ್ರಧಾನ, ತಂತ್ರಾದಿಷ್ಠಾಯಕ, ಮಹಾಪಸಾಯಿತ ಹೆಗ್ಗಡೆ ಎಂದು ವರ್ಣಿತವಾಗಿರುವ ಸುರಿಗೆಯ ನಾಗಯ್ಯ ಪ್ರಮುಖ ದಾನಿಗಳಲ್ಲಿ ಒಬ್ಬನಾಗಿದ್ದಾನೆ. ಅವನು ಓಲಗಶಾಲೆಯನ್ನು ಕಟ್ಟಿಸಿಕೊಟ್ಟಂತೆ ಒಂದು ಶಾಸನದಲ್ಲಿ ತಿಳಿಸಲಾಗಿದೆ.[೫] ಇನ್ನೊಂದು ಶಾಸನದಲ್ಲಿ ಇದೇ ನಾಗಯ್ಯನ ಆಣತಿಯಂತೆ ಹೆಗ್ಗಡೆ ಮಾರಣ, ಎಲೆಗಳ ಮೇಲೆ ಪನ್ನಾಯವನ್ನು ಬಿಟ್ಟ ವಿಷಯ ತಿಳಿಸುತ್ತದೆ.[೬] ಇನ್ನೂ ಎರಡು ತಮಿಳು ಶಾಸನಗಳಲ್ಲಿ 'ಗೋಮಠ'ದ ಪ್ರಸ್ತಾಪ ಬರುವುದಾದರೂ ಅರ್ಥ ಸ್ಪಷ್ಟವಾಗುವುದಿಲ್ಲ.[೭] ೧೪ನೆಯ ಶತಮಾನದ ಒಂದು ಶಾಸನ, ಮಹಾಜನರು ರಾಮಾನುಜ ಮಠಕ್ಕೆ ಭೂಮಿಯನ್ನು ದಾನವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ.[೮] ಆದರೆ ಆ ಮಠ ಯಾವ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿತ್ತು ಮತ್ತು ಅದರ ಸ್ವರೂಪವೇನು ಎಂಬ ವಿವರಗಳು ತಿಳಿಯುವುದಿಲ್ಲ.

**ಮೇಲುಕೋಟೆ:**

ಮೇಲುಕೋಟೆ ಶ್ರೀವೈಷ್ಣವರ ಬಹು ಮುಖ್ಯ ಕೇಂದ್ರಗಳಲ್ಲಿ ಒಂದು. ಚೆಲುವ ನಾರಾಯಣ ಸ್ವಾಮಿಯ ಸಾನ್ನಿಧ್ಯದೊಂದಿಗೆ ರಾಮಾನುಜರು ಅಲ್ಲಿಗೆ ಬಂದಿದ್ದರು, ವಾಸಿಸಿದ್ದರು ಎಂಬ ಕಾರಣಗಳಿಂದಲೂ ಆ ಸ್ಥಳ ಶ್ರೀವೈಷ್ಣವರಿಗೆ ತುಂಬ

---

೧. (ಮೈ) ಎಕ VI ಪಾಂಡವಪುರ ೬೭ ಕ್ರಿ.ಶ. ೧೩ ಶ.ಮಾ.

೨. (ಮೈ) ಎಕ VI ಪಾಂಡವಪುರ ೬೭ ಕ್ರಿ.ಶ. ೧೨೮೬.

೩. B. R.Gopal : ಪೂರ್ವೋಕ್ತ, ಪು. ೨೭.

೪. (ಮೈ) ಎಕ VI ಪಾಂಡವಪುರ ೮೦ ಕ್ರಿ.ಶ. ೧೧೭೭.

೫. (ಮೈ) ಎಕ VI ಪಾಂಡವಪುರ ೭೩ ?

೬. (ಮೈ) ಎಕ VI ಪಾಂಡವಪುರ ೭೯ ಕ್ರಿ.ಶ. ೧೧೭೫.

೭. (ಮೈ) ಎಕ VI ಪಾಂಡವಪುರ ೭೦ ಕ್ರಿ.ಶ. ೧೩ ಶ.ಮಾ.
(ಮೈ) ಎಕ VI ಪಾಂಡವಪುರ ೬೬ ಕ್ರಿ.ಶ. ೧೩ ಶ.ಮಾ.

೮. (ಮೈ) ಎಕ VI ಪಾಂಡವಪುರ ೫೫ ಕ್ರಿ.ಶ. ೧೪ ಶ.ಮಾ.

ಪವಿತ್ರವಾದುದಾಗಿದೆ. ಈ ಕ್ಷೇತ್ರವೂ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿನಲ್ಲಿಯೇ ಇದೆ. ರಾಮಾನುಜರು ತೊಣ್ಣೂರಿನಿಂದ ಈ ಕ್ಷೇತ್ರಕ್ಕೆ ಬಂದರೆಂದು ಸಾಮಾನ್ಯವಾಗಿ ನಂಬಲಾಗಿದೆ. ಹಾಗೆ ಅವರು ಅಲ್ಲಿಗೆ ಬರಲು ಕಾರಣ 'ತಿರುಮಣ್'[೧] ಎಂದು ತಿಳಿಯಲಾಗಿದೆ. ಸುಮಾರು ೧೪ನೆಯ ಶತಮಾನದ ಹೊತ್ತಿಗೆ ರಾಮಾನುಜರ ಸಂಬಂಧದಲ್ಲ ಅಲ್ಲಿಯ ತಿರುಮಣ್ ಪ್ರಖ್ಯಾತವಾಗಿದ್ದಿತೆಂದು ತಿಳಿಯಲು ಅವಕಾಶವಿದೆ. ಮೇಲುಕೋಟೆಯ ಶಾಸನವೊಂದರಲ್ಲಿ 'ಹೆಡತಲೆಯ ಇಂಮಡಿ ರಾವುತ್ತರಾಯ ಪೆರುಮಾಳುದೇವ ದಂಣಾಯ್ಕರ ಮಕ್ಕಳು ಇಂಮಡಿ ರಾವುತ್ತರಾಯ ಮದಪ್ಪದಂಣಾಯ್ಕರು ಎಂಬೆರುಮಾನರು ಕಂಡ ತಿರಿಮಂಣ ಸಾಮ್ಯವನು ಮಾದಪದಂಣಾಯ್ಕರು ತಿರಿಮಂಣ ಪೆರುಮಾಳಿಗೆ ಕೊಟ್ಟ ಧರ್ಮ'[೨] ಎಂದು ಬರುತ್ತದೆ. ಈ ಶಾಸನದಂತೆ ರಾಮಾನುಜರು ಕಂಡ ತಿರುಮಣ್ಣು ಎಂಬ ನಂಬಿಕೆ ಆ ಕಾಲಕ್ಕಾಗಲೇ ಆಳವಾಗಿ ಪ್ರಚಲಿತವಾದಂತಿದೆ. ಮೇಲುಕೋಟೆಯ ಮೇಲೆ ದೊರೆಯುವ ಅತ್ಯಂತ ಪ್ರಾಚೀನ ಶಾಸನ ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದ್ದು. ಅದರಲ್ಲಿ ಆ ಸ್ಥಳವನ್ನು ಯಾದವಗಿರಿ ಎಂದು ಕರೆಯಲಾಗಿದೆ. ಅಲ್ಲಿರುವ ನಾರಾಯಣಸ್ವಾಮಿ ದೇವಾಲಯದ ರಂಗಮಂಟಪದ ನೆಲದ ಮೇಲೆ ಹಾಸಿರುವ ಕಲ್ಲಿನ ಮೇಲೆ ಅದು ದೊರೆಯುತ್ತದೆ. ಹೆಗ್ಗಡೆ ಸುರಿಗೆಯ ನಾಗಿದೇವಣ್ಣನು ಯಾದವಗಿರಿಯ ನಾರಾಯಣ ದೇವರಿಗೆ ಮಾಡಿದ ದಾನವನ್ನು ಆ ಶಾಸನ ತಿಳಿಸುತ್ತದೆ. ಬಿ.ಆರ್. ಗೋಪಾಲ್ ಅವರು ಈ ಶಾಸನೋಕ್ತ ಸುರಿಗೆಯ ನಾಗಿದೇವಣ್ಣ ಮತ್ತು ತೊಣ್ಣೂರಿನ ಶಾಸನಗಳಲ್ಲಿ ಉಕ್ತನಾದ ಸುರಿಗೆಯ ನಾಗಯ್ಯ ಒಬ್ಬನೇ ವ್ಯಕ್ತಿಯೆಂದು ಗುರುತಿಸಿ ಅವನೇ ಮೇಲ್ಕೋಟೆಯ ದೇವಾಲಯದ ಕಟ್ಟಡದ ಕೆಲವು ಭಾಗಗಳ ನಿರ್ಮಾಣಕ್ಕೂ ಕಾರಣನಾಗಿರಬೇಕು ಎಂದು ತಿಳಿಸಿದ್ದಾರೆ.[೩] ರಾಮಾನುಜಾಚಾರ್ಯರು ಆ ದೇವಾಲಯದ ವಿಗ್ರಹಕ್ಕಾಗಿ ದೆಹಲಿಗೆ ಹೋಗಿ ಬಂದರೆಂಬ ನಂಬಿಕೆ ಇದೆ. ಆದರೆ ಆ ಕಾಲದಲ್ಲಿ ಮುಸ್ಲಿಮರ ಆಕ್ರಮಣಗಳಾಗುತ್ತಿದ್ದು ರಾಜಕೀಯವಾಗಿ ಅತ್ಯಂತ ಗೊಂದಲಮಯವಾದ ವಾತಾವರಣ ಸೃಷ್ಟಿಯಾಗಿತ್ತು. ಆದುದರಿಂದ ಆ ಕಾಲದ ಸಾರಿಗೆ ವ್ಯವಸ್ಥೆ ಇತ್ಯಾದಿಗಳನ್ನು ಗಮನಿಸಿದರೆ ಅದು ಸ್ಪಷ್ಟವಾಗಿ ಅವಾಸ್ತವ ಮತ್ತು ಕಲ್ಪನೆಯ ಐತಿಹ್ಯವೆಂದು ಭಾವಿಸಬಹುದಾಗಿದೆ.[೪]

ತೆರಕಣಾಂಬಿಯ 'ಚೆನಪ ಶೆಟ್ಟಿಯರ ಮಕ್ಕಳು ಅಳಗಿಯ ಮಳವಾಳ ದಾಸರಾದ ಕೇತಿಯಪ್ಪ ಸೆಟ್ಟಿಯರು' ರಾಮಾನುಜ ಕೂಟಕ್ಕೆ ಬಿಟ್ಟ ದಾನವನ್ನು ಹೇಳಿ ಅದನ್ನು ಅಲ್ಲಿಯ ೫೨ ಜನ ಶ್ರೀವೈಷ್ಣವರಿಗೆ ವಹಿಸಿಕೊಟ್ಟಂತೆ ಶಾಸನ ತಿಳಿಸುತ್ತದೆ.[೫] ಇದರಿಂದ ಅಲ್ಲಿ ಶಾಸನದ ಕಾಲಕ್ಕಾಗಲೇ ರಾಮಾನುಜ ಕೂಟವೆಂಬ ಸಂಘಟನೆ ಅಸ್ತಿತ್ವಕ್ಕೆ ಬಂದಿತ್ತೆನ್ನುವುದೂ ಮತ್ತು ಅದು ದೇವಾಲಯದ ಆಡಳಿತ ನಿರ್ವಹಣೆ ನೋಡಿಕೊಳ್ಳುತ್ತಿತ್ತೆಂದು ಊಹಿಸಬಹುದಾಗಿದೆ. ಈ ಶಾಸನದಲ್ಲಿ ಉಕ್ತರಾದ ೫೨ ಮಹಾಜನರ ವಿಷಯ ಮುಂದಿನ ಕೆಲವು ಶಾಸನಗಳಲ್ಲೂ ಬರುತ್ತದೆ. ಅವರನ್ನು 'ರಾಮಾನುಜರ ಪ್ರಿಯಶಿಷ್ಯರು' ಎಂದೂ ಕರೆದಿರುವುದುಂಟು.[೬] ಮೇಲುಕೋಟೆಯ ದೇವಾಲಯ ಮುಂದೆಯೂ ವಿಜಯನಗರದ ಅರಸರಿಂದ, ಮೈಸೂರು ಒಡೆಯರ ಕಾಲದಲ್ಲಿಯೂ ಸಾಕಷ್ಟು ದಾನದತ್ತಿಗಳನ್ನು ಪಡೆದು ಬೆಳೆಯಿತು.

---

೧. ತಿರುಮಣ್ :ಶ್ರೀವೈಷ್ಣವರು ಧರಿಸುವ ಬಿಳಿಯ ನಾಮಕ್ಕೆ ಅಗತ್ಯವಾದ ಮಣ್ಣು.

೨. (ಮೈ) ಎಕ VI ಪಾಂಡವಪುರ ೧೮೫ ಕ್ರಿ.ಶ. ೧೩೧೯.

೩. ಆರ್. ನರಸಿಂಹಾಚಾರ್ ಅವರು ಆ ದೇವಾಲಯದ ನಿರ್ಮಾಣವನ್ನು ವಿಷ್ಣುವರ್ಧನ ಮಾಡಿಸಿದನೆಂದು ಅಭಿಪ್ರಾಯಪಟ್ಟಿದ್ದಾರೆ. ಆದರ ಬಿ.ಆರ್. ಗೋಪಾಲ್ ಅವರು ಕ್ರಿ.ಶ. ೧೧೪೪-೪೫ರ ಹೊತ್ತಿಗೆ ವಿಷ್ಣುವರ್ಧನನ ಆಡಳಿತ ಕಾಲದಲ್ಲಿ ನಿರ್ಮಾಣ ವಾಗಿರಬೇಕು ಎಂದಿದ್ದಾರೆ. ನೋಡಿ: ಪೂರ್ವೋಕ್ತ ಗ್ರಂಥ, ಪು. ೨೪.

೪. ಅದೇ, ಪು. ೨೬.

೫. (ಮೈ) ಎಕ VI ಪಾಂಡವಪುರ. ೧೮೨ ಕ್ರಿ.ಶ. ೧೨೫೬.

೬. (ಮೈ) ಎಕ VI ಪಾಂಡವಪುರ. ೧೨೭ ಕ್ರಿ.ಶ. ೧೫೩೪.

ರಾಮಾನುಜರು ಮೇಲುಕೋಟೆಯಿಂದ ಶ್ರೀರಂಗಕ್ಕೆ ಹೋಗುವ ಮೊದಲು ಬೇಲೂರಿಗೆ ಬಂದು ಅಲ್ಲಿಯ ಸೌಮ್ಯ ಕೇಶವನನ್ನು ಮೂವತ್ತು ದಿನಗಳು ಸ್ವಹಸ್ತದಿಂದ ಪೂಜಿಸಿದರೆಂದು ವೇಲಾಪುರದ ಮಹಾತ್ಮ್ಯ ಹೇಳುತ್ತದೆ.[೧] ಬೇಲೂರಿನಲ್ಲಿ ಚೆನ್ನ ಕೇಶವ ದೇವಾಲಯವನ್ನು ಕ್ರಿ.ಶ. ೧೧೧೭ ರಲ್ಲಿ ವಿಷ್ಣುವರ್ಧನ ಮತ್ತು ಶಾಂತಲೆಯರು ಕಟ್ಟಿಸಿದರು. ಕಾಲದಿಂದ ಕಾಲಕ್ಕೆ ಆ ದೇವಾಲಯ ವಿಸ್ತಾರ ಹೊಂದುತ್ತಾ ಹೋಗಿದೆ. ಹನ್ನೆರಡನೆಯ ಶತಮಾನದ ಮಧ್ಯದ ಕಾಲಕ್ಕೆ ಅದು ಶ್ರೀವೈಷ್ಣವರ ಪ್ರಭಾವಕ್ಕೆ ಸಾಕಷ್ಟು ಒಳಗಾಗಿದೆ. ಬಲ್ಲಾಳನು ಶ್ರೀ ವಿಜಯನಾರಾಯಣ ದೇವರಿಗೆ ಜಪ ಹೋಮ ನಿತ್ಯ ಸೇವೆಗಾಗಿ ಶ್ರೀ ಕೇಶವ ಪುರದ ೧೨೦ ಭಟ್ಟರಿಗೆ, ಶುಭಪುರದ ೨೧ ಭಟ್ಟರಿಗೆ, ಬೇಲೂರಿನ ಸ್ಥಾನಿಕ ಮೂವತ್ತು ಶ್ರೀವೈಷ್ಣವರಿಗೆ ಕ್ರಮವಾಗಿ ಅನೇಕ ಹಳ್ಳಿಗಳನ್ನು ದಾನ ಮಾಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೨] ಇದೇ ರೀತಿ ಬೇಲೂರಿನ ಇನ್ನೊಂದು ಶಾಸನವೂ ಅಲ್ಲಿದ್ದ ಶ್ರೀವೈಷ್ಣವರಿಗೆ ಮತ್ತು ದೇಶಾಂತರದ ಶ್ರೀವೈಷ್ಣವರ ಭೋಜನಕ್ಕೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೩] ಶ್ರೀವೈಷ್ಣವರು ಸ್ಥಳೀಯ ಬ್ರಾಹ್ಮಣರಂತೆ ದಾನ ದತ್ತಿಗಳನ್ನು ಪಡೆಯುತ್ತಾ ಅನೇಕ ಅಗ್ರಹಾರಗಳಲ್ಲಿ ನೆಲೆ ನಿಂತರು. ರಾಜರ ಮತ್ತು ಹಿರಿಯ ಅಧಿಕಾರಿಗಳ ಬೆಂಬಲದಿಂದ ಅನೇಕ ಅಗ್ರಹಾರಗಳನ್ನು, ವಿಷ್ಣುಮಂದಿರಗಳನ್ನು ನಿರ್ಮಿಸಿಕೊಳ್ಳುತ್ತ ಶಕ್ತಿಯುತವಾಗಿ ಈ ಕಾಲದಲ್ಲಿ ಬೆಳೆದರು. ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಗ್ರಾಮವು ಶ್ರೀವೈಷ್ಣವ ಅಗ್ರಹಾರವಾಗಿ ಪರಿವರ್ತಿತವಾಗಿ ಅಲ್ಲಿ ತ್ರಿಕೂಟ ಶ್ರೀಲಕ್ಷ್ಮೀನಾರಾಯಣ ದೇವರು, ಗೋಪಾಳ ದೇವರು, ಕೋಡಿಯ ಮಾಧವ ದೇವರ ದೇವಾಲಯ ನಿರ್ಮಾಣವಾಗಿ 'ತಂಬಿಯಣ್ಣನೂ ತಿರಿವರಂಗ ಪೆರುಮಾಳೆ ನಂಬಿಯರು ತಿರುನಾರಾಯಣ ಪುರವಾದ ಮೇಲುಗೋಟೆಯ ಶ್ರೀವೈಷ್ಣವರ ಮುಂದೆವೂ ತೊಂಡನೂರ ಶ್ರೀ ಲಕ್ಷ್ಮೀನಾರಾಯಣ ದೇವರು ದಾಸರ ದೇವಾಲ್ಯದ ಶ್ರೀವೈಷ್ಣವರು ನಾಗಮಂಗಲದ ಶ್ರೀ ಚೆನ್ನ ಕೇಶವ ದೇವರ ಶ್ರೀ ವಯಿಷ್ಣವರು ದಡಿಗನ ಮಹಾಜನಂಗಳು ಆ ಚೆಂನಕೇಶವ ದೇವರ ಶ್ರೀ ವೈಷ್ಣವರು ಮುಂತಾದ ಪದಿನೆಂಟು ನಾಡ ಶ್ರೀವೈಷ್ಣವರ ಮುಂದೆವೂ ವೊಡಂಬಟ್ಟು' ಇವರ ಸರ್ವಸಾಕ್ಷಿಯಲ್ಲಿ ತಂಬಿಯಣ್ಣ ಮತ್ತು ತಿರುವರಂಗ ಪೆರುಮಾಳೆ ನಂಬಿಯಾರರು ಮಾಡಿಕೊಂಡ ಒಂದು ಒಪ್ಪಂದವನ್ನು ಈ ಶಾಸನ ತಿಳಿಸುತ್ತದೆ.[೪] ಈ ಶಾಸನದಲ್ಲಿ ಬರುವ ಬೇರೆ ಬೇರೆ ಊರುಗಳು ಮತ್ತು ಅವುಗಳಲ್ಲಿದ್ದ ಶ್ರೀವೈಷ್ಣವ ಮಹಾಜನಗಳು ಮತ್ತು ಅವರ ಆ ಪ್ರದೇಶದ ಸಂಘಟನೆ ಇವುಗಳ ಒಂದು ಚಿತ್ರವನ್ನು ಇದು ಕೊಡುತ್ತದೆ.

ರಾಮಾನುಜರ ಜೊತೆಯಲ್ಲಿ ಮತ್ತು ಅನಂತರದ ಕಾಲದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಶ್ರೀವೈಷ್ಣವರು ಹೊಯ್ಸಳ ನಾಡಿಗೆ ವಲಸೆ ಬಂದಿರಬೇಕು. ಕರ್ನಾಟಕದ ಅನೇಕ ಜನ ರಾಮಾನುಜರ ಪ್ರಭಾವಕ್ಕೆ ಒಳಗಾಗಿ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿದರು. ಹೊಯ್ಸಳ ವಿಷ್ಣುವರ್ಧನನಿಂದ ಹೆಚ್ಚು ಪ್ರೋತ್ಸಾಹ ಪಡೆದು ಅನಂತರ ಪಟ್ಟಕ್ಕೆ ಬಂದ ಒಂದನೆಯ ನರಸಿಂಹನಿಂದಲೂ ಸಾಕಷ್ಟು ಪ್ರೋತ್ಸಾಹ ಪಡೆದರು. ನೂರಾರು ಅಗ್ರಹಾರಗಳು, ವಿಷ್ಣು ದೇವಾಲಯಗಳು ತಲೆಯೆತ್ತಿದವು. ಅನಂತರ ಬಂದ ಎರಡನೆಯ ಬಲ್ಲಾಳ ಮತ್ತು ಮುಂದಿನ ಅರಸರೂ ಕೂಡ ಅಗ್ರಹಾರಗಳಿಗೆ, ದೇವಾಲಯಗಳಿಗೆ ದಾನ ದತ್ತಿಗಳನ್ನು ತಾವೇ ಸ್ವತಃ ಕೊಟ್ಟರು, ಇಲ್ಲವೇ ತಮ್ಮ ಅಧಿಕಾರಿಗಳು ಆ ಕಾರ್ಯಗಳನ್ನು ಮಾಡಿದಾಗ ಪ್ರೋತ್ಸಾಹಿಸಿದರು. ಕದಲಗೆರೆ,[೫] ಯೆರಗಂಬಳ್ಳಿ,[೬]

---

೧. ಎಸ್. ಶ್ರೀಕಂಠ ಶಾಸ್ತ್ರಿ : ಪೂರ್ವೋಕ್ತ, ಪು. ೨೧.
೨. (ರೈ) ಎಕ V ಬೇಲೂರು ೫೯ ಕ್ರಿ.ಶ. ೧೧೭೪.
೩. (ರೈ) ಎಕ V ಬೇಲೂರು ೨೫ ಕ್ರಿ.ಶ. ೧೧೭೩.
೪. (ಮೈ) ಎಕ VII ನಾಗಮಂಗಲ ೮೩ ಕ್ರಿ.ಶ. ೧೨೬೯.
೫. (ಮೈ) ಎಕ VI ಪಾಂಡವಪುರ ೨೨೦ ಕ್ರಿ.ಶ. ೧೪ ಶ.ಮಾ.
೬. (ಮೈ) ಎಕ IV ಯಳಂದೂರು ೨೦೩ ಕ್ರಿ.ಶ. ೧೨೧೨.

ಚಾಮರಾಜನಗರ,[೧] ಸೋಮನಾಥಪುರ,[೧ಅ] ಶ್ರೀರಂಗಪಟ್ಟಣ,[೨] ಸೋಮನಹಳ್ಳಿ,[೩] ಮದ್ದೂರು,[೪] ಅರಕೆರೆ,[೫] ಕಿತ್ತನೆಕೆರೆ,[೬] ಕೆಂಬಾಳು,[೭] ಮುದಿಗೆರೆ,[೮] ಹಾರನಹಳ್ಳಿ,[೯] ನರಸಿಂಹಪುರ,[೧೦] ನಾಗಮಂಗಲ,[೧೧] ಬನ್ನಹಳ್ಳಿ,[೧೨] ಹೊಸ್ಸಾವರ,[೧೩] ತಲಕಾಡು,[೧೪] ಮಾರೆಹಳ್ಳಿ,[೧೫] ಸಂತೆ ಶಿವರ,[೧೬] ಮತ್ತು ಬ್ರಹ್ಮ ಸಮುದ್ರ[೧೭] ಮುಂತಾದ ಊರುಗಳಲ್ಲಿ ಕಂಡುಬರುವ ಅಗ್ರಹಾರಗಳು, ವಿಷ್ಣು ಮಂದಿರಗಳು ಹೇಗೆ ಆ ಕಾಲದಲ್ಲಿ ಶ್ರೀವೈಷ್ಣವ ಧರ್ಮ ಜನಪ್ರಿಯವಾಯಿತು ಎಂಬುದಕ್ಕೆ ಉದಾಹರಣೆಗಳಾಗಿವೆ. ಡಾ.ಎಸ್. ಶೆಟ್ಟರ್ ಅವರು, ೧೧೫೦ ರ ಸುಮಾರಿಗೆ ಹೊಯ್ಸಳ ರಾಜ್ಯದಲ್ಲಿ ಶ್ರೀವೈಷ್ಣವರು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡು ತಮ್ಮ ಕಾಲ ಮೇಲೆ ತಾವು ನಿಲ್ಲುವ ಸ್ಥಿತಿಯಲ್ಲಿದ್ದರೆಂದು[೧೮] ಅಭಿಪ್ರಾಯಪಟ್ಟಿದ್ದಾರೆ. ಸ್ಥೂಲವಾಗಿ ಗಮನಿಸಿದರೆ ಶ್ರೀವೈಷ್ಣವರ ಹರಡುವಿಕೆ ಮಂಡ್ಯ, ಮೈಸೂರು, ಕಡೂರು, ಹಾಸನ ಜಿಲ್ಲೆಗಳಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಅವರ ಕಾರ್ಯವ್ಯಾಪ್ತಿಯು ಇಂದಿನ ಅರಸಿಕೆರೆ ತಾಲೂಕಿನ ಉಂಡಿಗೇನಹಾಳಿನಿಂದ ತಿರುಮಕೂಡ್ಲು ನರಸೀಪುರ ತಾಲೂಕಿನ ತಲಕಾಡಿನವರೆಗೂ ಹಬ್ಬಿತ್ತು. ಇವುಗಳಲ್ಲೆಲ್ಲಾ ಬೇಲೂರು ಅವರ ಅಗ್ರ ಕೇಂದ್ರವಾಗಿತ್ತು.[೧೯] ವಿಷ್ಣುವರ್ಧನ ಅಪಾರ ಮೊತ್ತದ ಹಣವನ್ನು ಶ್ರೀ ವೈಷ್ಣವ ದೇವಾಲಯಗಳ ನಿರ್ಮಾಣಕ್ಕೆ ವೆಚ್ಚ ಮಾಡಿದ. ಅವುಗಳಲ್ಲಿ ಬೇಲೂರಿನ ಚೆನ್ನಕೇಶವದೇವಾಲಯ ಆ ರಾಜವಂಶದವರು ಕಟ್ಟಿಸಿದ ದೇವಾಲಯಗಳಲ್ಲೇ ಉಳಿದು ಬಂದಿರುವ ಅತ್ಯುತ್ತಮ ಸ್ಮಾರಕವಾಗಿದ್ದು ಫಲದಾಯಕ ಪೋಷಣೆಗೆ ಉದಾಹರಣೆಯಾಗಿದೆ.

---

೧. (ಮೈ) ಎಕ IV ಚಾಮರಾಜನಗರ ೬೨ ಕ್ರಿ.ಶ. ೧೩೪೦.

೧ಅ. (ಮೈ) ಎಕ V ತಿ.ನರಸೀಪುರ ೯೧ ಕ್ರಿ.ಶ. ೧೨೮೧.

೨. (ಮೈ) ಎಕ VI ಶ್ರೀರಂಗಪಟ್ಟಣ ೧ ಕ್ರಿ.ಶ. ೧೨೧೦.

೩. (ಮೈ) ಎಕ VII ಮಳವಳ್ಳಿ ೧೦೯ ಕ್ರಿ.ಶ. ೧೨ ಶ.ಮಾ.

೪. (ಮೈ) ಎಕ VII ಮದ್ದೂರು ೧ ಕ್ರಿ.ಶ. ೧೨೭೮.

೫. (ಮೈ) ಎಕ VII ಶ್ರೀರಂಗಪಟ್ಟಣ ೮ ಕ್ರಿ.ಶ. ೧೧೭೯-೮೦.

೬. (ರೈ) ಎಕ V ಅರಸಿಕೆರೆ ೬೮ ಕ್ರಿ.ಶ. ೧೨೫೪.

೭. (ರೈ) ಎಕ V ಚನ್ನರಾಯಪಟ್ಟಣ ೨೦೩ ಕ್ರಿ.ಶ. ೧೨೨೪.

೮. (ರೈ) ಎಕ VI ತರೀಕೆರೆ ೮೩ ಕ್ರಿ.ಶ. ೧೧೭೩.

೯. (ರೈ) ಎಕ V ಅರಸಿಕೆರೆ ೫೦೩ ಕ್ರಿ.ಶ. ೧೨೩೭.

೧೦. (ರೈ) ಎಕ VI ಕೊಪ್ಪ ೧೧ ಕ್ರಿ.ಶ. ೧೩೨೭.

೧೧. (ಮೈ) ಎಕ VII ನಾಗಮಂಗಲ ೧ ಕ್ರಿ.ಶ. ೧೧೭೩.

೧೨. (ಮೈ) ಎಕ VII ಮದ್ದೂರು ೧೦೧ ಕ್ರಿ.ಶ. ೧೩೧೪.

೧೩. (ರೈ) ಎಕ V ಹಾಸನ ೬೬ ಕ್ರಿ.ಶ. ೧೧೭೦.

೧೪. (ಮೈ) ಎಕ V ತಿ. ನರಸೀಪುರ ೧೬೭.?

೧೫. (ಮೈ) ಎಕ VII ಮಳವಳ್ಳಿ ೫೪ ಕ್ರಿ.ಶ. ೧೨-೧೩ ಶ.ಮಾ.

೧೬. (ರೈ) ಎಕ V ಚನ್ನರಾಯಪಟ್ಟಣ ಕ್ರಿ.ಶ. ೧೨೩೫.

೧೭. (ರೈ) ಎಕ VI ಕಡೂರು ೬೫, ಕ್ರಿ.ಶ. ೧೨೬೧.

೧೮. ಎಸ್. ಶೆಟ್ಟರ್ : 'ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಸಾಮಾಜಿಕ ಜೀವನ'- ಸಮಗ್ರ ಕನ್ನಡ ಸಾಹಿತ್ಯ ಚರಿತ್ರ, ಸಂ.೩, ಪು. ೨೬.

೧೯. J. D.M. Derrett: The Hoysalas. ಪು. ೪೩.

**ಶ್ರೀವೈಷ್ಣವ ಧರ್ಮದ ಪ್ರಭಾವ :**

ರಾಮಾನುಜರು ಕರ್ನಾಟಕಕ್ಕೆ ಬಂದದ್ದರಿಂದ ಅನಂತರದ ಕಾಲದಲ್ಲಿ ಶ್ರೀವೈಷ್ಣವ ಧರ್ಮ ಸಾಕಷ್ಟು ಜನಪ್ರಿಯತೆಯನ್ನು, ಹೊಂದಿ, ರಾಜಾಶ್ರಯವನ್ನು ಪಡೆದು ವ್ಯಾಪಕವಾಗಿ ಹರಡಿತು. ಇದು ಸಹಜವಾಗಿ ಕರ್ನಾಟಕದ ಧಾರ್ಮಿಕ ಮತ್ತು ಸಾಂಸ್ಕೃತಿಕ ಜಗತ್ತಿನ ಮೇಲೆ ಪ್ರಭಾವವನ್ನು ಬೀರಿರುವುದನ್ನು ಕೆಲವು ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು.

ದೇವಾಲಯಗಳು ಪ್ರಾಚೀನ ಕರ್ನಾಟಕದ ಸಾಂಸ್ಕೃತಿಕ ಕೇಂದ್ರದಂತಿದ್ದವು. ದೇವಾಲಯಗಳ, ಪೂಜೆಯ ಆಚರಣೆ ಮುಂತಾದವುಗಳಲ್ಲಿ ಸಾಕಷ್ಟು ಪ್ರಭಾವವನ್ನು ಶ್ರೀವೈಷ್ಣವ ಧರ್ಮ ಮತ್ತು ತಮಿಳು ಭಾಷೆ ಮಾಡಿರುವುದನ್ನು ಗುರುತಿಸಬಹುದು. ತೊಣ್ಣೂರು, ಮೇಲುಕೋಟೆ ಮುಂತಾದ ಸ್ಥಳಗಳಲ್ಲಿ ಬರೆಯಿಸಿದ ಶಾಸನಗಳು ತಮಿಳು ಭಾಷೆಯಲ್ಲಿವೆ. ಸ್ಥಳೀಯರು ದಾನ ಕೊಟ್ಟಾಗ ಹಾಕಿಸಿದ ಶಾಸನಗಳು ಕನ್ನಡ ಭಾಷೆಯಲ್ಲಿದ್ದರೂ ತಮಿಳು ಪದಗಳು ಧಾರಾಳವಾಗಿ ಬಳಕೆಯಾಗಿವೆ. ತೊಣ್ಣೂರಿನ ಕೃಷ್ಣಗುಡಿಯ ದೇವರನ್ನು ತಮಿಳು ಶಾಸನದಲ್ಲಿ ಪಿಳ್ಳೈ ಎಂದು ಸಂಬೋಧಿಸಲಾಗಿದೆ.[೧] ಇನ್ನೊಂದು ತಮಿಳು ಶಾಸನದಲ್ಲಿ ವೆಣ್ಣೈಕೂತ್ತ ಪಿಳ್ಳೈ ಎಂದು ಸಂಬೋಧಿಸಲಾಗಿದೆ.[೨] ಕನ್ನಡ ಶಾಸನ ಒಂದು 'ಶ್ರೀ ಕಾಂಜಿಉರದ ಅಲ್ಲಾಳು ಪೆರುಮಾಳು' ದೇವರಿಗೆ ಕೊಟ್ಟ ದಾನವನ್ನು ಹೇಳುತ್ತದೆ.[೩] ಅಲ್ಲಾಳು ಪೆರುಮಾಳು ಪದ ವಿಷ್ಣುವನ್ನು ಕುರಿತದ್ದಾಗಿದೆ. ಕನ್ನಡದ ಇನ್ನೊಂದು ಶಾಸನ ಮೇಲುಕೋಟೆಯ ದೇವರನ್ನು 'ತಿರುನಾರಾಯಣ ಪೆರುಮಾಳಿಗೆ' ಎಂದು ನಿರ್ದೇಶಿಸಿದೆ.[೪] ಮೇಲುಕೋಟೆಯ ದೇವರನ್ನು ೧೫-೧೬ನೆಯ ಶತಮಾನದ ಕನ್ನಡ ಶಾಸನಗಳು ಚೆಲಪಿಳೆರಾಯ ಎಂದು ಕರೆಯುತ್ತವೆ.[೫] ತೊಣ್ಣೂರಿನ ಇನ್ನೊಂದು ಕನ್ನಡ ಶಾಸನ ವಿಷ್ಣು ಪ್ರತಿಷ್ಠೆಯನ್ನು 'ವಿತ್ತಿರುಂದ ಪೆರುಮಾಳ ತಿರು ಪ್ರತಿಷ್ಠೆಯಂ ಮಾಡಿಸಿ' ಎಂದು ವರ್ಣಿಸುತ್ತದೆ.[೬]

ದೇವಾಲಯಗಳ ಪೂಜಾವಿಧಿಗಳಲ್ಲಿ 'ತಿರುವಾಯ್ಮೊಳಿ'ಯ ಪಠನ ಆರಂಭವಾಯಿತು. ತಿರುವಾಯ್ಮೊಳಿ ಶ್ರೀವೈಷ್ಣವ ಸಂತರಾದ ನಮ್ಮಾಳ್ವಾರರು ರಚಿಸಿದ ತಮಿಳು ಪ್ರಬಂಧ. ಇದನ್ನು ತಮಿಳುನಾಡಿನ ವೈಷ್ಣವ ದೇವಾಲಯಗಳಲ್ಲಿ ಪಠಿಸುವ ಪದ್ಧತಿ ಇದೆ. ಈ ಸಂಪ್ರದಾಯವನ್ನು ಕನ್ನಡನಾಡಿನ ದೇವಾಲಯಗಳಲ್ಲಿಯೂ ತರಲಾಗಿದೆ. ತೊಣ್ಣೂರಿನ ತಮಿಳು ಶಾಸನವೊಂದರಲ್ಲಿ ವಿಟಣ್ಣರ್ ಎನ್ನುವ ವ್ಯಕ್ತಿ ಪರ್ವದಿನಗಳಂದು ತಿರುವಾಯ್ಮೊಳಿ ಚಿಜಿಪ್ಪಿನ ಪ್ರಾಯಶ್ಚಿತ್ತಕ್ಕಾಗಿ ದೇವಾಲಯದ ತತ್ಕಾಲೋಚಿತ ಬೆಲೆ ಕೊಟ್ಟು ಭೂಮಿಯನ್ನು ಕೊಂಡನೆಂದು ಹೇಳಿದೆ.[೭] ತಮಿಳಿನ ಒಂದು ತ್ರುಟಿತ ಶಾಸನದಲ್ಲಿ ಲಕ್ಷ್ಮೀನಾರಾಯಣ ದೇವಾಲಯದಲ್ಲಿದ್ದ ವೀರಬಲ್ಲಾಳ ಮಂಟಪಕ್ಕೆ 'ತಿರುವಾಯ್ಮೊಳಿಯ ಗಾಯಕ (ಹೆಸರು ಸ್ಪಷ್ಟವಿಲ್ಲ) ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ[೮]. ಇನ್ನೊಂದು ತಮಿಳು ಶಾಸನ ಲಕ್ಷ್ಮೀನಾರಾಯಣ ದೇವಾಲಯದಲ್ಲಿರುವ ಶ್ರೀವಲ್ಲಾಳ ಮಂಟಪಕ್ಕೆ ಸುಣ್ಣ ಬಳಿಸಲು ತಿರುವಾಯ್ಮೊಳಿ ಗಾಯಕನಾದ ತಿರುನರೈಯಾರ್‌ದಾಸ ಮತ್ತು ಗೋಮಠದ ರಾಮಪಿರಾನ್ ೫೦ ಗದ್ಯಾಣಗಳನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೯]

---

೧. (ಮೈ) ಎಕ VI ಪಾಂಡವಪುರ ೧೧೯ ಕ್ರಿ.ಶ. ೧೧೫೨.

೨. (ಮೈ) ಎಕ VI ಪಾಂಡವಪುರ ೧೨೦.?

೩. (ಮೈ) ಎಕ VI ಪಾಂಡವಪುರ ೬೪ ಕ್ರಿ.ಶ. ೧೧೭೫. ಅಲ್ಲಾಳು-(ತಮಿಳು. ಅರುಳಾಳ್)

೪. (ಮೈ) ಎಕ VI ಪಾಂಡವಪುರ ೧೬೧ ಕ್ರಿ.ಶ. ೧೪ ಶ.ಮಾ.

೫. (ಮೈ) ಎಕ VI ಪಾಂಡವಪುರ ೧೩೩, ೧೩೪ ಇತ್ಯಾದಿ. ಚೆಲಪಿಳೆ- (ತಮಿಳು. ಶೆಲ್ವಪಿಳ್ಳೈ)

೬. (ಮೈ) ಎಕ VI ಪಾಂಡವಪುರ ೮೮ ಕ್ರಿ.ಶ. ೧೧೫೭.

೭. (ಮೈ) ಎಕ VI ಪಾಂಡವಪುರ ೬೮ ಕ್ರಿ.ಶ. ೧೨೮೬.

೮. (ಮೈ) ಎಕ VI ಪಾಂಡವಪುರ ೬೬ ಕ್ರಿ.ಶ. ೧೩ ಶ.ಮಾ.

೯. (ಮೈ) ಎಕ VI ಪಾಂಡವಪುರ ೭೦ ಕ್ರಿ.ಶ. ೧೩ ಶ.ಮಾ.

ಮೇಲುಕೋಟೆಯ ಕೆಲವು ಕನ್ನಡ ಶಾಸನಗಳಲ್ಲಿ ರಾಮಾನುಜರನ್ನು 'ಎಂಬೆರುಮಾನರು' (ಎಮ್+ ಪೆರುಮಾನಾರ್= ನಮ್ಮ ಶ್ರೇಷ್ಠ ವ್ಯಕ್ತಿ) ಎಂಬ ತಮಿಳು ಪದದಿಂದ ನಿರ್ದೇಶಿಸಲಾಗಿದೆ.[೧] ಅದೇ ಶಾಸನದಲ್ಲಿ 'ತಿರಿಮಣ್' ಎಂಬ ಶಬ್ದ ಬಳಕೆಯಾಗಿದೆ. ಮುಂದಿನ ಶಾಸನಗಳಲ್ಲಿ ತಿರುತೋರಣ, ತಿರುನಾಳ್ ಎಂಬಂತಹ ಶಬ್ದಗಳು ಸಾಮಾನ್ಯವಾಗಿ ಬಳಕೆಯಾಗುತ್ತವೆ. ಅರಕೆರೆ ಗ್ರಾಮದ ಒಂದು ಶಾಸನದಲ್ಲಿ ಆ ಗ್ರಾಮದ ಕುಮಾಂಡೂರಾಚರ ಹೆಂಡತಿ ಐಯ್ಯಾದ್ಯಕೆ ಆ ಊರಿನ ತನ್ನ ಪಾಲಿಗೆ ಬಂದ ಭೂಮಿಯ ವೃತ್ತಿಯ ಕಾಲುಭಾಗವನ್ನು ಕೇಶವ ದೇವರಿಗೆ ತಿರುನಾಮದ ಕಾಣಿಕೆಯಾಗಿ ಕೊಟ್ಟಂತೆ ತಿಳಿದುಬರುತ್ತದೆ.[೨] ಈ ಶಾಸನದ ಬಗ್ಗೆ ಬರೆಯುತ್ತಾ ಅದೇ ಸಂಪುಟದ ಪೀಠಿಕೆಯಲ್ಲಿ ಬಿ. ಆರ್. ಗೋಪಾಲ್ ಅವರು 'ತಿರುನಾಮ ಕಾಣಿಕೆ ಎಂಬುದು ಶೈವ ದೇವಾಲಯಗಳಿಗೆ ಕೊಡಲಾದ, ಸೇರಿದ ಭೂಮಿಗೆ ಅನ್ವಯವಾಗುವ ಹೆಸರು. ಆದರೆ ಇಲ್ಲಿನ ಕೇಶವ ದೇವರು ವೈಷ್ಣವ ದೇವರು. ಇದನ್ನು ಗಮನಿಸಿದರೆ ತಿರುನಾಮ ಕಾಣಿಕೆ ಎಂಬುದು ಬಹಳ ಸಾಮಾನ್ಯವಾದ ಅರ್ಥದಲ್ಲಿ ದೇವಾಲಯಗಳಿಗೆ ನೀಡಿದ ಭೂಮಿ ಎನ್ನಬೇಕಾಗುತ್ತದೆ'[೩] ಎಂದಿದ್ದಾರೆ. ಆದರೆ ಬೇರೆ ಸಂದರ್ಭಗಳಲ್ಲಿ ಬರುವ 'ತಿರುನಾಮ' ಶ್ರೀವೈಷ್ಣವ ಅಥವಾ ವೈಷ್ಣವ ಸಂಬಂಧವನ್ನು ಹೇಳುವ ಹಾಗೆ ಕಾಣುತ್ತದೆ.[೪] ಅಲ್ಲದೆ ಅದೇ ಶಾಸನದಲ್ಲಿ ಬರುವ ಪ್ರತಿ ವರ್ಷದ ಸಮಸ್ತ ಬೆಳೆ ಉತ್ಪತ್ತಿಯನ್ನು ಆ ದೇವರ 'ತಿರಿನಂದಾವನ ಮಾಡುವವರ' ಎಂಬ ಮಾತುಗಳಲ್ಲಿ ಬರುವ ತಿರಿನಂದಾವನ ಅದಕ್ಕೆ ಪೋಷಣೆಯನ್ನು ನೀಡುತ್ತದೆ. ತಮಿಳುನಾಡಿನ ಧಾರ್ಮಿಕ ಪ್ರಭಾವದನಂತರವೇ ತಿರುನಾರಾಯಣ, ತಿರುನಾಳ್, ತಿರುತೋರಣ, ತಿರುಮಣ್ಣು ಎಂಬಂತಹ ಪದಗಳು ಕನ್ನಡದಲ್ಲಿ ಬಳಕೆಗೆ ಬಂದಿವೆ.

ತೊಣ್ಣೂರಿನ ಅಧಿಕ ಶಾಸನಗಳು ತಮಿಳು ಭಾಷೆಯಲ್ಲಿವೆ. ಮೇಲುಕೋಟೆಯಲ್ಲೂ ತಮಿಳು ಶಾಸನಗಳು ಕಂಡುಬರುತ್ತವೆ. ಬಿ. ಆರ್. ಗೋಪಾಲ್ ಅವರು ಗಮನಿಸಿರುವಂತೆ ವಿಜಯನಗರ ಕಾಲದ ಶಾಸನಗಳ ಭಾಷೆ ಕನ್ನಡದಲ್ಲಿದ್ದರೂ ತಮಿಳು ಪದಗಳು ಗಮನಾರ್ಹ ಸಂಖ್ಯೆಯಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು. ಅವರು ಕೊಡುವ ಉದಾಹರಣೆಗಳು ಹೀಗಿವೆ. ಸಂದಿ(ವಿಶೇಷ ಪೂಜೆ), ಕರಿ-ಅಮುದು (ಬೇಯಿಸಿದ ತರಕಾರಿಗಳು), ಶೂರ್ಪ್ಪ ಅಮುದು (ಎಲೆ ಅಡಕೆ ಅರ್ಪಿಸಿದ್ದು), ಅಮಿಶೈ (ಆಹಾರದ ಅರ್ಪಣೆ), ತಿರುನಾಳ್ (ಪವಿತ್ರ ದಿನ), ಅರುಳಪಾಡು (ಭಗವಂತನ ಕರುಣೆಯನ್ನು ಮೆಚ್ಚುವ ಹಾಡು).[೫]

ಒಂದನೆಯ ಬುಕ್ಕರಾಯನ ಕಾಲದ ಶಾಸನವೊಂದರಲ್ಲಿ 'ಶ್ರೀ ನಾರಾಯಣ ದೇವರ ತಿರುವೆಡೆಯಾಟ ಮಯಿಲನ ಹಳ್ಳಿಯ ಕೆರೆಯ ಕೆಳಗಣ ಕುಂಬಾಱಕಟ್ಟೆಯ ಕಾಡೊಳಗುಳ್ಳ ಆ ಭೂಮಿ ಮಾಡುವವರಿಗೆ ತಿರುವೆಡೆಯಾಟವಾಗಿ ನಡವಂತಾಗಿ ದೇವರ ಅಮೃತಪಡಿ' ಎಂದಿದೆ. ಇಲ್ಲಿ ಬರುವ ತಿರುವೆಡೆಯಾಟ ಎಂಬುದು ತಮಿಳಿನ ತಿರುವಿಡೈಯಾಟ್ಟಂ ಎಂಬ ಪದವಾಗಿದ್ದು ಕನ್ನಡ ಶಾಸನದಲ್ಲಿ ಧಾರಾಳವಾಗಿ ಬಳಕೆಯಾಗಿದೆ. ಆ ಪದಕ್ಕೆ ತಮಿಳು ನಿಘಂಟು 'ದೇವಾಲಯಗಳಿಗೆ ಬಿಟ್ಟ ದತ್ತಿ' ಎಂಬ ಅರ್ಥವನ್ನು ಕೊಡುತ್ತದೆ.[೬] ತೊಣ್ಣೂರಿನ ಒಂದು ತಮಿಳು ಶಾಸನ ಭೂಮಿ ಕ್ರಯವನ್ನು 'ಪೆರುವಿಲೈ' ಎಂದು ಕರೆದಿದೆ. 'ವಿಷ್ಣು ದೇವಾಲಯಕ್ಕೆ ಸೇರಿದ ಭೂಮಿಯನ್ನು ಸೇನೈಮೊದಲಿಯಾರರ-ವಿಷ್ವಕ್ಸೇನರ-ಹೆಸರಿನಲ್ಲಿ ಮಾರುವುದಕ್ಕೆ ತಮಿಳಿನಲ್ಲಿ ಸೇನಾಪತಿ ಪೆರುವಿಲೈ ಎಂದು ಹೆಸರು.'[೭] ಹೊಸ ಬೂದನೂರಿನ ಶಾಸನವೊಂದರಲ್ಲಿ ಸ್ಥಾನಿಕ ನಂಜಿಪಿಳ್ಳೆಯ

---

೧. (ಮೈ) ಎಕ VI ಪಾಂಡವಪುರ ೧೮೫ ಕ್ರಿ.ಶ. ೧೩೭೯.

೨. (ಮೈ) ಎಕ VI ಶ್ರೀರಂಗಪಟ್ಟಣ ೯೮ ಕ್ರಿ.ಶ. ೧೨೫೪.

೩. (ಮೈ) ಎಕ VI ಪೀಠಿಕೆ, ಪು. xlvii.

೪. ಕ.ಕ. ನಿಘಂಟು ಕ.ಸಾ.ಪ. ಸಂ. ೪ ಪು. ೩೪೯೨.

೫. B.R.Gopal : ಪೂರ್ವೋಕ್ತ, ಪು. ೩೭.

೬. Tamil Lexicon. vol III ಪು. ೧೯೧೯.

೭. (ಮೈ) ಎಕ VI ಪೀಠಿಕೆ ಪು. IX.

ಮಗ ಪುರುಷೋತ್ತಮ, ಅವನ ಅಣ್ಣ ಅದೂರನ ಮಗ ನಂಜಿಪಿಳ್ಳೆಯೂ ಉದ್ಭವ ಸರ್ವಜ್ಞಪದ್ಮ ನಾಭಪುರದ ಮಹಾಜನಗಳಿಗೆ ಕುಡಿನಿಂಕಾ ದೇವದಾನವಾಗಿ ಕೊಟ್ಟ ವಿಷಯವಿದೆ. ಕುಡಿನಿಂಕಾ ದೇವದಾನ ಎನ್ನುವುದು ತಮಿಳು ಪದ. ಭೂಮಿಯಲ್ಲಿ ಉಳುತ್ತಿದ್ದ ಒಕ್ಕಲುಗಳನ್ನು ಹೊರದೂಡದೆ ದೇವರಿಗೆ ಬಿಟ್ಟ ಭೂಮಿ ಎಂದು ಇದರ ಅರ್ಥ.[೧] ಈ ಕಾಲದ ಶಾಸನಗಳ ಭಾಷಿಕ ಅಧ್ಯಯನ ತುಂಬ ಫಲಕಾರಿಯಾಗಬಲ್ಲದು.

ರಾಮಾನುಜರ ಆಗಮನದೊಂದಿಗೆ ಕನ್ನಡನಾಡಿಗೆ ತಮಿಳುನಾಡಿನ ಬೇರೆ ಬೇರೆ ಗುಂಪಿನ ಬ್ರಾಹ್ಮಣ ಕುಟುಂಬಗಳು ಬಂದವು. ಭಟ್ಟರು, ಹೆಬ್ಬಾರರು, ಹೆಮ್ಮಿಗೆಯರು, ಕಡಾಂಬಿಯರು, ಕಂದಾಡೈಯರು, ನಲ್ಲಾನ್ ಚಕ್ರವರ್ತಿಗಳು, ತಾತಾಚಾರ್ಯರು ಮತ್ತು ಇತರ ಧರ್ಮನಿಷ್ಠ ಹಾಗೂ ವಿದ್ವಾಂಸರಾದ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ಕುಟುಂಬಗಳು ವಲಸೆಯಾಗಿ ಬಂದು ಈ ನಾಡಿನಲ್ಲಿ ನೆಲೆ ನಿಂತರು.[೨] ರಾಮಾನುಜರು ಬಹಳ ಉದಾರ ಮನೋಭಾವದವರಾಗಿದ್ದರೆಂದು ತಿಳಿದು ಬರುತ್ತದೆ. ಯಾರನ್ನು ಅಸ್ಪೃಶ್ಯರೆಂದು ಸಮಾಜ ದೂರವಿಟ್ಟಿದ್ದಿತೋ ಅಂಥವರಿಗೆ ಮೇಲುಕೋಟೆಯ ದೇವಾಲಯದೊಳಗೆ ಪ್ರವೇಶ ಕೊಟ್ಟರೆಂಬ ನಂಬಿಕೆ ಇದೆ. ಆ ಜನರು ತಮಗೆ ದೈವಕಾರ್ಯದಲ್ಲಿ ಮಾಡಿದ ಸಹಾಯಕ್ಕೆ ಪ್ರತಿಯಾಗಿ ಆಚಾರ್ಯರು ಈ ಅವಕಾಶ ಮಾಡಿಕೊಟ್ಟಂತಿದೆ. ಈಗಲೂ ಹರಿಜನರಿಗೆ ವರ್ಷದಲ್ಲಿ ನಿರ್ದಿಷ್ಟವಾದ ಮೂರು ದಿನಗಳಲ್ಲಿ ಮೇಲುಕೋಟೆಯ ದೇವಾಲಯದೊಳಗೆ ನಿರ್ದಿಷ್ಟ ದೂರದವರೆಗೆ ಪ್ರವೇಶವನ್ನು ಕೊಡಲಾಗುತ್ತದೆ.

ಶ್ರೀವೈಷ್ಣವ ಮತದ ಪ್ರಚಾರಕ್ಕೆ ತೊಡಗಿದಾಗ ಆಚಾರ್ಯರು ಜೈನ ಮತ್ತು ಶೈವ ಮತ ಮುಂತಾದ ಅನ್ಯಮತ ಧರ್ಮಾಚರಣೆಗಳಿಗೆ ಸೇರಿದವರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳಬೇಕಾಯಿತು. ಇದನ್ನು ಸಾಧಿಸಲು ಅನ್ಯಮತಸ್ಥರಿಗೆ 'ಶ್ರೀ ವೈಷ್ಣವ ಪಂಚ ಸಂಸ್ಕಾರ' (ವಿಶಿಷ್ಟಾದ್ವೈತ ಸಂಪ್ರದಾಯದ ಐದು ಧಾರ್ಮಿಕ ಆಚಾರಗಳು) ಎಂಬ ಮತದೀಕ್ಷೆಯನ್ನು ಕೊಟ್ಟರು. ತಪ,* ಪುಂಡ್ರ*, ನಾಮ*, ಮಂತ್ರ*, ಯಜ್ಞ* ಎಂಬಿವೇ ಆ ಪಂಚ ಸಂಸ್ಕಾರಗಳು.[೩]

ರಾಮಾನುಜರು ತಮ್ಮ ಕಾಲದಲ್ಲಿ ವಿಶಿಷ್ಟಾದ್ವೈತವನ್ನು ಭದ್ರವಾಗಿ ನೆಲೆಗೊಳಿಸಿದರು. ಮುಂದೆ ೧೩-೧೪ನೆಯ ಶತಮಾನಗಳಲ್ಲಿ 'ಪ್ರಪತ್ತಿ'ಯನ್ನು ಅರ್ಥೈಸುವ ವಿಷಯದಲ್ಲಿ ಶ್ರೀವೈಷ್ಣವರಲ್ಲಿ ದೊಡ್ಡ ಭಿನ್ನಾಭಿಪ್ರಾಯಗಳು ತಲೆದೋರಿದವು. ಕೆಲವರು ಭಗವಂತನ ಕರುಣೆಯನ್ನು ಗಳಿಸಲು ಭಕ್ತನು ಶ್ರಮಿಸಬೇಕೆಂದು ಹೇಳಿದರೆ, ಇನ್ನು ಕೆಲವರು ಭಕ್ತನು ದಾಸ್ಯಭಾವದಿಂದ ಆ ಮಾರ್ಗಕ್ಕೆ ಬಂದ ಕಾರಣ ಆತ್ಮಕ್ಕೆ ತಾನಾಗಿ ಭಗವಂತನ ಕರುಣೆ ಉಂಟಾಗುವುದೆಂದು ಭಾವಿಸಿದರು. ಮೊದಲು ವ್ಯಕ್ತವಾದ

---

೧. ಕೆ. ರಮಾನಂದ : ದಕ್ಷಿಣ ಕರ್ನಾಟಕದಲ್ಲಿ ಪ್ರಾಚೀನ ಅಗ್ರಹಾರಗಳು, ಬೆಂ.ವಿ.ವಿ.ಕ್ಕೆ ಎಂ.ಫಿಲ್‌ಗಾಗಿ ಅರ್ಪಿಸಿದ ಪ್ರಬಂಧ (ಅಪ್ರಕಟಿತ) ೧೯೮೧, ಪು. ೯೩-೯೪.

೨. The Cultural Heritage of India. II ಪು. ೯೧.

೩. ವಿವರಗಳಿಗೆ ನೋಡಿ : i) ಎಂ. ಯಾಮುನಾಚಾರ್ಯ : 'ಶ್ರೀವೈಷ್ಣವ ಮತ', ಕರ್ನಾಟಕದ ಪರಂಪರೆ I, ಪು. ೫೦೦.
ii. V.M. Hebsur : Religious conditions during Hoysala peroid. ಕ.ವಿ.ವಿ.ಕ್ಕೆ ಅರ್ಪಿಸಿದ ಪಿಎಚ್‌ಡಿ ಪ್ರಬಂಧ (ಅಪ್ರಕಟಿತ), ಪು. ೭೪-೭೫.

* 'ತಪ' ಅಥವಾ ತಾಪ : ಇದು ಶಂಖ ಚಕ್ರಗಳ ಕಾದ ಮುದ್ರೆಯನ್ನು ಭುಜಗಳ ಮೇಲೆ ಒತ್ತುವುದು. ಇದನ್ನು ಸಂಪ್ರದಾಯಸ್ಥ ಶ್ರೀವೈಷ್ಣವರು ಈಗಲೂ ಮಾಡಿಸಿಕೊಳ್ಳುತ್ತಾರೆ; ಇದಕ್ಕೆ 'ಸಮಾಶ್ರಯಣ' ಎಂಬ ಹೆಸರಿದೆ. ಬಹುಶಃ ಇದನ್ನು ಬಸವಣ್ಣನವರು ಒಂದು ವಚನದಲ್ಲಿ 'ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದ ಕಂಡೆ' ಎಂದು ಟೀಕಿಸಿದ್ದಾರೆ. ಬ.ವ. ೫೬೮. (ಸಂ) ಆರ್.ಸಿ. ಹಿರೇಮಠ.

* ಪುಂಡ್ರ : ಶ್ರೀವೈಷ್ಣವಪಂಥದ ಲಾಂಛನವಾದ ನಾಮಧಾರಣೆ. (ಬಹುಶಃ) ಇದನ್ನು ಕೆಲವು ವಚನಕಾರರು ಖಂಡಿಸುತ್ತಾರೆ. ಪಿ.ವಿ. ನಾರಾಯಣ: 'ಕಾಲ, ಪ್ರಭಾವ, ಜೀವನ, ವ್ಯಕ್ತಿತ್ವ ಇತ್ಯಾದಿ', ಬಸವೇಶ್ವರ, ಪು. ೫.

* ನಾಮ : ವಿಷ್ಣುವಿನ ಹೆಸರನ್ನು ಇಟ್ಟುಕೊಳ್ಳುವುದು.

* ಮಂತ್ರ : ವಿಷ್ಣುವಿಗೆ ಸಂಬಂಧಿಸಿದ ಮೂರು ವಿಧದ ಮಂತ್ರಗಳು.

* ಯಜ್ಞ (ಅಥವಾ ಯಾಗ) : ವಿಷ್ಣುವಿನ ಪೂಜೆ. ಶ್ರೀವತ್ಸ ನಿಘಂಟು ಪು. ೪೦೩.

ಅಭಿಪ್ರಾಯದ ಪಂಥವನ್ನು ವಡಗಲೈ (ಉತ್ತರ ಶಾಖೆ) ಎಂಬ ಹೆಸರಿನಿಂದ ಗುರುತಿಸುತ್ತಾರೆ. ಇದನ್ನು 'ಮರ್ಕಟ ಕಿಶೋರ ನ್ಯಾಯ' ಪರಿಭಾಷೆಯಲ್ಲಿ ಸಾಮಾನ್ಯವಾಗಿ ಗ್ರಹಿಸುವುದುಂಟು. ಎರಡನೆಯ ಅಭಿಪ್ರಾಯದ ಪಂಥವನ್ನು ತೆಂಗಲೈ (ದಕ್ಷಿಣ ಶಾಖೆ) ಎಂದು ಗುರುತಿಸಲಾಗಿದೆ. ಇದನ್ನು 'ಮಾರ್ಜಾಲ ಕಿಶೋರ ನ್ಯಾಯ' ಪರಿಭಾಷೆಯಲ್ಲಿ ಸಾಮಾನ್ಯವಾಗಿ ಗ್ರಹಿಸುವುದುಂಟು. ಈ ಪಂಥಗಳಲ್ಲಿ ಕ್ರಮೇಣ ಸಾಕಷ್ಟು ಅಭಿಪ್ರಾಯಭೇದಗಳು ಬೆಳೆದಿವೆ.[೧] ತೆಂಗಲೈ ಪಂಥದವರು ನಿರ್ಧಾರಕವಾಗಿ ಸಂಸ್ಕೃತಕ್ಕಿಂತಲೂ ತಮಿಳಿಗೆ ಪ್ರಾಶಸ್ತ್ಯವನ್ನು ಕೊಟ್ಟರು. ಈ ಎರಡು ಪಂಥಗಳ ಹದಿನೆಂಟು ಮುಖ್ಯ ಭೇದಗಳನ್ನು ಗುರುತಿಸಲಾಗುತ್ತದೆ.[೨] ದಕ್ಷಿಣ ಶಾಖೆಯವರು ಪಿಳ್ಳೈ ಲೋಕಾಚಾರ್ಯರನ್ನು (ಜನ್ಮ ಕ್ರಿ.ಶ. ೧೨೧೩) ಸ್ಥಾಪಕಾಚಾರ್ಯರೆಂದು ಭಾವಿಸುತ್ತಾರೆ. ಅವರು ಹದಿನೆಂಟು ಕೃತಿಗಳನ್ನು ಬರೆದ ದೊಡ್ಡ ವಿದ್ವಾಂಸರು. ಉತ್ತರ ಶಾಖೆಯವರು ವೇದಾಂತ ದೇಶಿಕರನ್ನು (ಜನ್ಮ ಕ್ರಿ.ಶ. ೧೨೬೮) ತಮ್ಮ ನಾಯಕರನ್ನಾಗಿ ಭಾವಿಸುತ್ತಾರೆ. ಇವರು ಕವಿ, ತತ್ವಜ್ಞಾನಿ ಮತ್ತು ಕಾರ್ಯಶೀಲ ವ್ಯಕ್ತಿಯಾಗಿದ್ದರು. ಮುಂದೆ ಶ್ರೀವೈಷ್ಣವ ಧರ್ಮವು ವಿಜಯನಗರ ಮುಂತಾದ ರಾಜವಂಶಗಳ ಸತತ ಪ್ರೋತ್ಸಾಹದಲ್ಲಿ ಯಾವುದೇ ಶಾಖೆಗಳಾಗಿ ಒಡೆಯದೆ ಬೆಳೆಯಿತು.[೩]

## ಮಧ್ವಾಚಾರ್ಯ-ದ್ವೈತ ಸಿದ್ಧಾಂತ

ವೇದಾಂತವನ್ನು ವಿಭಿನ್ನ ಮಾರ್ಗಗಳಿಂದ ಪ್ರತಿಪಾದಿಸಿ ಸಿದ್ಧಾಂತಗೊಳಿಸಿದ ದಕ್ಷಿಣ ಭಾರತದ ಮೂವರು ಆಚಾರ್ಯರಲ್ಲಿ ಮಧ್ವಾಚಾರ್ಯರು ಅರ್ವಾಚೀನರು. ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆಯಿಂದ ಹುಟ್ಟಿ ಬಂದ ಮಧ್ವಾಚಾರ್ಯರು ಒಂದು ದೊಡ್ಡ ಪರಂಪರೆಯ ಉಗಮಸ್ಥಾನವಾಗಿದ್ದಾರೆ. ಅವರ ಜನ್ಮಕಾಲದ ಬಗ್ಗೆ ವಿದ್ವಾಂಸರಲ್ಲಿ ತುಂಬ ಭಿನ್ನಾಭಿಪ್ರಾಯವಿದೆ. ಅವರು ಕ್ರಿ.ಶ. ೧೧೯೯ ರಲ್ಲಿ ಜನಿಸಿದರೆಂಬ ಅಭಿಪ್ರಾಯವನ್ನು ಹೆಚ್ಚು ಜನ ವಿದ್ವಾಂಸರು ಒಪ್ಪಿದಂತಿದೆ.[೪] ಅವರು ಮಧ್ಯಗೇಹ

---

೧. ಹಲವು ವರ್ಷಗಳ ಹಿಂದೆ ಕಾಂಚೀಪುರದ ದೇವಸ್ಥಾನದ ಆನೆಯ ಹಣೆಗೆ ವಡಗಲೈ ಪಂಥದ ನಾಮವನ್ನು ಹಾಕಬೇಕೆ, ತೆಂಗಲೈ ಪಂಥದ ನಾಮವನ್ನು ಹಾಕಬೇಕೆ ಎಂಬ ವಿಷಯದಲ್ಲಿ ಎರಡು ಪಂಥದವರಿಗೆ ಭಿನ್ನಾಭಿಪ್ರಾಯ ಬಂದು ಈ ವಿವಾದ ನ್ಯಾಯಾಲಯಕ್ಕೆ ಹೋದದ್ದನ್ನು ಸ್ಮರಿಸಬಹುದು.

೨. ಎಸ್.ಎಸ್. ಅನಂತರಂಗಾಚಾರ್ಯ : ಪೂರ್ವೋಕ್ತ, ಅನುಬಂಧ-೩, ಪು. ೨೬೨-೨೬೮.

೩. ಶ್ರೀವೈಷ್ಣವಧರ್ಮದ ಎರಡು ಶಾಖೆಗಳ ವಿಷಯವನ್ನು K.N. Shastri ಅವರ Culture and History of the Tamils ಗ್ರಂಥದ ಸಹಾಯದಿಂದ ಬರೆಯಲಾಗಿದೆ.

೪. ಬಿ.ಎನ್.ಕೆ. ಶರ್ಮ, ಎಸ್.ಕೆ. ರಾಮಚಂದ್ರರಾವ್ ಮುಂತಾದ ಕೆಲವರು ಕ್ರಿ.ಶ. ೧೨೩೮ ಜನ್ಮ ವರ್ಷವೆಂದು ಭಾವಿಸುತ್ತಾರೆ. ವಿವರವಾದ ಚರ್ಚೆಗೆ ಗಮನಿಸಿ:

B.N.K.Sharma : A History of Dvaita school of literature. ಪು. ೨೭೪.

B.N. K. Sharma : Philosophy of Madhvacharya. ಪು. XI ಮತ್ತು XII.

K.V.Acharya : ' Sri Madhvacharya : His peroid Srikanthika' ಪು. ೨೮೩-೨೮೬.

ಎಸ್.ಕೆ. ರಾಮಚಂದ್ರರಾವ್ : ಪೂರ್ಣಪ್ರಜ್ಞ ಪ್ರಶಸ್ತಿ, ಪು. ೧೯-೨೧.

R.G.Bhandarkar :ಪೂರ್ವೋಕ್ತ, ಪು. ೫೮-೫೯.

ಹೊಸಬೆಟ್ಟು ಸೀತಾರಾಮಾಚಾರ್ಯ : 'ತೊರವೆ ರಾಮಾಯಣದಲ್ಲಿ ಇತಿಹಾಸದ ಸುಳುಹು-ಹೊಳಹು' ಶ್ರೀಕಂಠ ತೀರ್ಥ, ಪು.೬೫೬-೬೫೮.

ಆರ್.ಎಸ್. ಪಂಚಮುಖಿ : 'ಹರಿದಾಸ ಸಾಹಿತ್ಯ' ಕ.ಸಾ.ಪ.ಪ. ೩೩-೩೪.

B.L.Rice : Mysore gazetter. ಪು. ೪೭೭.

ಭಟ್ಟರಿಗೆ ಮಗನಾಗಿ ಶಿವಳ್ಳಿಯಲ್ಲಿ ಜನಿಸಿದರು.[೧] ಅದು ಉಡುಪಿಗೆ ಸುಮಾರು ಎಂಟು ಮೈಲಿಗಳ ದೂರದಲ್ಲಿದೆ. ಹುಟ್ಟಿದ ಮಗುವಿಗೆ ಜನ್ಮನಾಮವಾಗಿ ವಾಸುದೇವ ಎಂಬ ಹೆಸರಿಟ್ಟರು. ಅವರು ಚಿಕ್ಕ ವಯಸ್ಸಿನಲ್ಲಿಯೇ ಅದ್ಭುತ ಶಕ್ತಿಯನ್ನು, ಮೇಧಾವಿತನವನ್ನು ತೋರಿಸಿದರು. ಅವರಿಗೆ ಬಾಲ್ಯದಲ್ಲಿ ವಿದ್ಯಾಭ್ಯಾಸವನ್ನು ನೀಡಿದವರು ಅದ್ವೈತಿಗಳಾದ ಅಚ್ಯುತಪ್ರೇಕ್ಷರು. ಶಾಸ್ತ್ರಾಭ್ಯಾಸಗಳನ್ನು ಆಳವಾಗಿ ಅಧ್ಯಯನ ಮಾಡಿದ ಮಧ್ವರು ಅಸಾಧಾರಣ ಪಾಂಡಿತ್ಯವನ್ನು ಪಡೆದರು. ಅಚ್ಯುತಪ್ರೇಕ್ಷರು ಶಿಷ್ಯನಿಗೆ ಆನಂದ ತೀರ್ಥರೆಂಬ ಹೆಸರನ್ನು ಕೊಟ್ಟರು. ಅದನ್ನೇ ಮುಂದೆ ಮಧ್ವರು ತಮ್ಮ ಕಾವ್ಯನಾಮವಾಗಿ ಬಳಸಿದರು. ವಿದ್ಯಾಭ್ಯಾಸ ಮುಗಿದನಂತರ ಅವರು ತಾವು ಅರ್ಥೈಸಿಕೊಂಡ ದ್ವೈತ ಸಿದ್ಧಾಂತವನ್ನು ಭಾರತದಾದ್ಯಂತ ಪ್ರಚಾರ ಮಾಡಲು ಸಂಚರಿಸಿದರು. ಅವರು ಉತ್ತರ ಭಾರತದ ಹಿಮಾಲಯ ಶ್ರೇಣಿಗಳಲ್ಲಿ ಏಕಾಂಗಿಯಾಗಿ ಸಂಚರಿಸುತ್ತಿರುವಾಗ ಮಹಾಭಾರತದ ಕರ್ತೃ ವ್ಯಾಸರ ಸಾನ್ನಿಧ್ಯ ದೊರೆತು ಹರಿದ್ವಾರಕ್ಕೆ ಬಂದು ತಮ್ಮ ಸಿದ್ಧಾಂತವನ್ನು ಪ್ರಕಟಪಡಿಸಿದರೆನ್ನುತ್ತಾರೆ. ಈ ಪ್ರವಾಸ ಕಾಲದಲ್ಲಿ ಅವರು ಅನೇಕ ಶಿಷ್ಯರನ್ನು ಸಂಪಾದಿಸಿದರು. ನರಹರಿತೀರ್ಥರು ಮಧ್ವರ ಪ್ರಮುಖ ಶಿಷ್ಯರಲ್ಲೊಬ್ಬರಾಗಿದ್ದು, ಮೊದಲು ಕಳಿಂಗ ರಾಜ್ಯದ ರಾಜಪುರೋಹಿತರಾಗಿದ್ದು ಗುರುಗಳ ವ್ಯಕ್ತಿತ್ವಕ್ಕೆ ಮನಸೋತು ಶಿಷ್ಯರಾದವರು. ಮಧ್ವರು ದ್ವೈತ ಸಿದ್ಧಾಂತವನ್ನು ನೆಲೆಗೊಳಿಸಲು ಅಗತ್ಯವಾದ ಎಲ್ಲ ಅಗತ್ಯ ಗ್ರಂಥಗಳನ್ನು ರಚಿಸಿ ನೆಮ್ಮದಿಯ ಮನಃಸ್ಥಿತಿಯಲ್ಲಿ ಅಧ್ಯಯನ, ಪೂಜೆಗಳಲ್ಲಿ ತಮ್ಮ ಕೊನೆಯ ದಿನಗಳನ್ನು ಉಡುಪಿಯಲ್ಲಿ ಕಳೆದಂತಿದೆ. ಇವರು ತಮ್ಮ ಜ್ಞಾನಬೋಧೆಯನ್ನು ಯೋಗ್ಯ ಶಿಷ್ಯರಿಗೆ ನೀಡಿ ತಮ್ಮ ೭೯ನೆಯ ವರ್ಷದಲ್ಲಿ (ಕ್ರಿ.ಶ. ೧೨೭೮) ಕಾಲವಾದರು.

ಮಧ್ವರು ಪೂರ್ವಜನ್ಮದಲ್ಲಿ ಮಹಾಭಾರತದ ಭೀಮನೂ ರಾಮಾಯಣದ ಆಂಜನೇಯನೂ ಆಗಿದ್ದರೆಂಬ ನಂಬಿಕೆ ಇದೆ. ಈ ಅಭಿಪ್ರಾಯ ಏನೇ ಇರಲಿ ಮಾವಿನ ಕೆರೆಯ ಒಂದು ಶಾಸನ ಅವರು ಅಸಾಧಾರಣ ಬಲಶಾಲಿಯಾಗಿದ್ದರು ಎಂಬುದನ್ನು ದೃಢಪಡಿಸುತ್ತದೆ.

ಶ್ರೀ ಮಧ್ವಾಚಾರ್ಯೈರೇಕ ಹ
ಸ್ತೇ ನಾನೀಯ ಸ್ಥಾಪಿತ ಶಿಲಾ[೨]

ಈ ಶಾಸನದ ಮಾತನ್ನು ದೃಢಪಡಿಸುವಂತೆ ಮಧ್ವವಿಜಯ ಕಾವ್ಯದಲ್ಲಿ ಒಂದು ಸನ್ನಿವೇಶವಿದೆ. ಬೃಹತ್ತಾದ ಕಲ್ಲು ಒಂದೆಡೆ ಬಿದ್ದಿರುವುದನ್ನು ಕಂಡು ಮಧ್ವರು ಅದನ್ನು ಯಾರು ತಂದು ಅಲ್ಲಿ ಬಿಟ್ಟಿದ್ದಾರೆಂದು ಅಲ್ಲಿದ್ದ ಜನರನ್ನು ಕೇಳಿದಾಗ ಜನರು ಸಾವಿರ ಜನ ಅಲ್ಲಿಯವರೆಗೆ ತಂದರೆಂದೂ ಮುಂದೆ ಸಾಗಿಸಲಾಗದೆ ಬಿಟ್ಟುಬಿಟ್ಟರೆಂದು ಹೇಳಿ, ಅದನ್ನು ಭೀಮನಿಂದಲೂ ಕೂಡ ಸಾಗಿಸುವ ಕಾರ್ಯ ಅಸಾಧ್ಯವೆಂದು ಹೇಳಿದರು. ಆಗ ಮಧ್ವರು ಕೇವಲ ಒಂದೇ ಕೈಯಲ್ಲಿ ಸುಲಭವಾಗಿ ಅದನ್ನು ಹನುಮಂತ ಗಂಧಮಾಧನ ಪರ್ವತ ಎತ್ತಿದಂತೆ ಎತ್ತಿ ತಂದು ಈಗಿರುವ ಸ್ಥಳದಲ್ಲಿ ಇಟ್ಟರೆಂದು ತಿಳಿಸುತ್ತದೆ.[೩]

---

೧. ಪಿ. ಗುರುರಾಜ ಭಟ್ಟ : 'ಕುಂಜಾರುಗಿರಿ ಒಂದು ಸಮೀಕ್ಷೆ' : ಸಾಧನೆ ೧-೨, ಪು. ೯೫.

ಮಧ್ವಾಚಾರ್ಯರ ತವರೂರು ಕುಂಜಾರು. ಅದರ ಒಂದು ಭಾಗವೇ ಪಾಜಕ ಕ್ಷೇತ್ರ ಎಂದಿದ್ದಾರೆ. ಎಸ್.ಕೆ. ರಾಮಚಂದ್ರರಾವ್ ಅವರು, ಜನ್ಮಸ್ಥಳ ಬೆಳ್ಳೆ-ಶಿವಬೆಳ್ಳೆ ಎಂದೂ ಅದು ಪಾಜಕ ಕ್ಷೇತ್ರವೆಂದು ಪ್ರಸಿದ್ಧಿ ಪಡೆದಿತ್ತು, ಮಧ್ಯಗೇಹಭಟ್ಟರಿಗೆ ಮೊದಲ ಇಬ್ಬರು ಗಂಡುಮಕ್ಕಳು ತೀರಿಹೋಗಿದ್ದರು. ಮಗಳೊಬ್ಬಳಿದ್ದಳು. ಅನಂತರ ಮಧ್ವರು ಹುಟ್ಟಿದ್ದು. ಅಲ್ಲದೆ ಮಧ್ವರಿಗೆ ತಮ್ಮನೊಬ್ಬನಿದ್ದ. ಅವನು ಮುಂದೆ ಮಧ್ವರಿಂದಲೇ ದೀಕ್ಷೆ ಪಡೆದು ವಿಷ್ಣುತೀರ್ಥನೆಂಬ ಹೆಸರು ಪಡೆದನು ಎಂದಿದ್ದಾರೆ. ನೋಡಿ: ಪೂರ್ಣಪ್ರಜ್ಞ ಪ್ರಶಸ್ತಿ, ಪು. ೫೯, ೬೧, ೮೫.

೨. (ರೈ) ಎಕ VI ಮೂಡಿಗೆರೆ ೮೯ ಕ್ರಿ.ಶ. ಸು. ೧೨೪೦.

೩. (ರೈ) ಎಕ VI ಪೀಠಿಕೆ, ಪು. ೨೭.

ಮಧ್ವರಿಗೆ ದೀಕ್ಷಾಗುರುಗಳಾಗಿದ್ದ ಅಚ್ಯುತಪ್ರೇಕ್ಷರು ಯಾರು ಮತ್ತು ಅವರ ಹಿನ್ನೆಲೆಗಳೇನು ಎಂಬ ವಿಷಯದಲ್ಲಿ ಇನ್ನೂ ಖಚಿತವಾಗಿ ಹೇಳಲು ಆಧಾರಗಳು ಸಾಲವು. ಅವರು ಅದ್ವೈತಿಗಳೆಂದು ಕೆಲವರು ಭಾವಿಸುವುದುಂಟು. ನಾರಾಯಣ ಪಂಡಿತಾಚಾರ್ಯನಿಂದ ರಚಿತವಾದ ಮಣಿಮಂಜರಿಯ ಆಧಾರದಿಂದ ಅವರು ಭಾಗವತ ಸಂಪ್ರದಾಯಕ್ಕೆ ಸೇರಿದವರೆಂದು ಭಾವಿಸಲು ಅವಕಾಶವಿದೆ. ಗುರುಗಳು ಮಧ್ವರಿಗೆ ಮೊದಲು ಭಾಗವತವನ್ನು ಬೋಧಿಸಿದ ಉಲ್ಲೇಖವಿದೆ.[೧] ಈ ಭಾಗವತದ ಪ್ರಭಾವ ಮಧ್ವರ ಮೇಲೆ ದಟ್ಟವಾಗಿ ಆಗಿರಬೇಕು. ಏಕೆಂದರೆ ಮಧ್ವರೂ ರಾಮಾನುಜರಂತೆ ಭಕ್ತಿಮಾರ್ಗವನ್ನೇ ಮುಂದೆ ಉಪದೇಶಿಸಿದ್ದು. ಅಲ್ಲದೆ ಸತ್ಯದ ಸಮಸ್ಯೆಯನ್ನು ಬಿಡಿಸಲು ತರ್ಕಬದ್ಧವಾದ ಬೌದ್ಧಿಕ ಮಾರ್ಗದ ಅಗತ್ಯವನ್ನು ವಿಶೇಷವಾಗಿ ಹೇಳಿದ್ದಾರೆ.

ಮಧ್ವಾಚಾರ್ಯರ ಸಾಂಪ್ರದಾಯಿಕ ಗುರುಪರಂಪರೆ ಈ ಕ್ರಮದಲ್ಲಿದೆ :

ಶ್ರೀ ಹಂಸ (ನಾರಾಯಣ)
|
ಬ್ರಹ್ಮ
|
ನಾಲ್ಕು ಸನರು
|
ದೂರ್ವಾಸರು
|
ಜ್ಞಾನನಿಧಿ ತೀರ್ಥ
|
ಗರುಡವಾಹನ ತೀರ್ಥ
|
ಕೈವಲ್ಯ ತೀರ್ಥ
|
ಜ್ಞಾನೀಶ ತೀರ್ಥ
|
ಪರ ತೀರ್ಥ
|
ಸತ್ಯಪ್ರಜ್ಞ ತೀರ್ಥ
|

೧. ಎಸ್.ಕೆ. ರಾಮಚಂದ್ರ ರಾವ್ : ಪೂರ್ಣಪ್ರಜ್ಞ ಪ್ರಶಸ್ತಿ, ಪು. ೬೮.

|

ಪ್ರಾಜ್ಞ ತೀರ್ಥ

|

X X X X X

(೩೦೦ ವರ್ಷಗಳ ಶೂನ್ಯ ಕಾಲ)

|

ಅಚ್ಯುತಪ್ರೇಕ್ಷ

|

ಆನಂದ ತೀರ್ಥ (ಮಧ್ವಾಚಾರ್ಯ)[೧]

ಪ್ರಾಜ್ಞತೀರ್ಥರಿಗೂ ಅಚ್ಯುತಪ್ರೇಕ್ಷರಿಗೂ ಮಧ್ಯದ ೩೦೦ ವರ್ಷಗಳ ಶೂನ್ಯ ಕಾಲವನ್ನು ತುಂಬಿಕೊಡುವುದು ಕಷ್ಟಕರವಾಗಿದೆ. ಅದ್ವೈತದ ಪ್ರಭಾವ ಮತ್ತು ಒತ್ತಡದಲ್ಲಿ ಕೆಲವು ಕಾಲ ಸ್ತಬ್ಧವಾಗಿದ್ದಂತೆ ಇದ್ದು ಮುಂದೆ ಮೂರು ತಲೆಮಾರುಗಳ ನಂತರ ದ್ವೈತ ಪರಂಪರೆ ಕಾಣಿಸಿಕೊಂಡಿತೆಂಬ ಅಭಿಪ್ರಾಯವೂ ಇದೆ. ಗುರು ಪರಂಪರೆಯನ್ನು ಸಾಂಪ್ರದಾಯಿಕವಾಗಿ ಹೇಳಿದರೂ ಕೂಡ ಅಚ್ಯುತ ಪ್ರೇಕ್ಷರು ಮಧ್ವರಿಗೆ ಬೋಧಿಸಿದುದು ವಿಮುಕ್ತಾತ್ಮ ದ ಇಷ್ಟಸಿದ್ಧಿ. ಆದ್ದರಿಂದ ಅವರು ಅದ್ವೈತದ ಒಲವಿದ್ದವರೆಂದು ತಿಳಿಯಲಾಗಿದೆ.

ನಾರಾಯಣ ಪಂಡಿತನ ಮಧ್ವ ವಿಜಯದಲ್ಲಿ ಬರುವ ಒಂದು ಘಟನೆಯನ್ನು ಇತಿಹಾಸದಲ್ಲಿ ಗುರುತಿಸುವ ಪ್ರಯತ್ನಗಳು ನಡೆದಿವೆ. ಮಧ್ವರು ಉಡುಪಿಯಿಂದ ಉತ್ತರಕ್ಕೆ ಹೋಗುತ್ತಿರುವ ಮಾರ್ಗದಲ್ಲಿ ದೇವಗಿರಿಯೆಂಬ ಪಟ್ಟಣದಲ್ಲಿ ಈಶ್ವರ (ಮಹಾದೇವ) ದೇವನೆಂಬ ರಾಜನು ಆಳುತ್ತಿದ್ದನು. ಅವನು, ರಾಜ್ಯದ ಮೂಲಕ ಹಾದು ಹೋಗುತ್ತಿದ್ದ ಜನರಿಂದ ಕೆರೆ ತೋಡುವ ಬಿಟ್ಟಿ ಕೆಲಸವನ್ನು ಮಾಡಿಸುತ್ತಿದ್ದ. ಅದೇ ರೀತಿ ಮಧ್ವರನ್ನು ಒತ್ತಾಯಿಸಿದಾಗ ಆ ರಾಜನನ್ನು ಮೈಮರೆಸಿ, ನೆಲ ಅಗಿಯಲು ತೊಡಗಿಸಿ ಉತ್ತರದ ಕಡೆ ಹೋದರೆಂಬ ಅಭಿಪ್ರಾಯವಿದೆ. ಈಶ್ವರದೇವ ದೇವಗಿರಿಯ ಸೇವುಣ ಮಹಾದೇವನೇ (ಕ್ರಿ.ಶ.೧೨೬೧-೧೨೭೦) ಆಗಿರಬೇಕು ಎಂಬ ಅಭಿಪ್ರಾಯವಿದೆ.[೨] ಆದರೆ ಶ್ರೀನಿವಾಸರಿತ್ತಿಯವರು, ಮಧ್ವರಿಗೆ ತೊಂದರೆ ಕೊಟ್ಟ ಈಶ್ವರದೇವ ಸೇವುಣವಂಶದ ಮಹಾದೇವ ಅಲ್ಲವೆಂದಿದ್ದಾರೆ. ಮೊದಲನೆಯದಾಗಿ ಮಹಾದೇವನನ್ನು ಯಾವ ಶಾಸನದಲ್ಲಿಯೂ ಈಶ್ವರ ದೇವನೆಂದು ಹೇಳಿಲ್ಲದಿರುವುದು ಮತ್ತು ಮಧ್ವರು ಎರಡನೆಯ ಬಾರಿ ಉತ್ತರ ಭಾರತದ ಪ್ರವಾಸಕ್ಕೆ ಹೋಗುವಾಗ ಈ ಘಟನೆ ನಡೆಯಿತೆಂದು ಹೇಳುವುದರಿಂದ (ಕ್ರಿ.ಶ. ೧೨೭೬-೧೨೮೬) ಆ ಕಾಲಕ್ಕೆ ಮಹಾದೇವ ಸಿಂಹಾಸನದಲ್ಲಿರಲಿಲ್ಲ. ಆದ್ದರಿಂದ ಈ ಘಟನೆ ನಡೆದಿದೆ ಎನ್ನುವುದಾದರೆ ಈ ಘಟನೆಯಲ್ಲಿ ಉಕ್ತನಾದ ಈಶ್ವರದೇವ ರಾಮಚಂದ್ರನ ಕಾಲದಲ್ಲಿದ್ದ ಯಾರೋ ಒಬ್ಬ ಸಣ್ಣ ಅಧಿಕಾರಿಯಾಗಿರಬೇಕು ಎಂದಿದ್ದಾರೆ.[೩]

ಮಧ್ವಾಚಾರ್ಯರನಂತರ ಆ ಪರಂಪರೆಯ ಪೀಠವನ್ನು ಸ್ವೀಕರಿಸಿದವರು ಪದ್ಮನಾಭ ತೀರ್ಥರು. ಗೋದಾವರಿ ತೀರದಲ್ಲಿ ಶೋಭನ ಭಟ್ಟರನ್ನು ಮಧ್ವಾಚಾರ್ಯರು ವಾದದಲ್ಲಿ ಸೋಲಿಸಿ ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡರು. ಅವರೇ ಮೊದಲನೆಯ

---

೧. B.N.Krishnamurthy Sharma : 'The life and works of Madhva' ಇಹಿಕ್ವಾ XVI-ii, ಪು. ೪೦.

೨. ಹೊಸಬೆಟ್ಟು ಸೀತಾರಾಮಾಚಾರ್ಯ : ಪೂರ್ವೋಕ್ತ ಲೇಖನ-ಶ್ರೀಕಂಠ ತೀರ್ಥ, ಪು. ೬೫೭.

೩. Srinivasa Ritti : The Sevunas. ಪು. ೨೬೫-೬೬.

ಶಿಷ್ಯರಾಗಿ ಪದ್ಮನಾಭ ತೀರ್ಥರೆಂದು ಖ್ಯಾತರಾದವರು. ಮುಂದೆ ಅವರು ಮಧ್ವರ ಕೃತಿಗಳಿಗೆ ಸುಪ್ರಸಿದ್ಧ ಭಾಷ್ಯಕಾರರೂ ಆದರು. ಇವರನಂತರ ಗುರುಪೀಠಕ್ಕೆ ಬಂದವರು ಶ್ರೀ ನರಹರಿ ತೀರ್ಥರು. ಇವರ ಬಗ್ಗೆ ಶಾಸನಗಳು ದೊರೆಯುವುದರಿಂದ ಕೆಲವು ಖಚಿತ ಮಾಹಿತಿಗಳು ಲಭ್ಯವಾಗಿವೆ. ಪ್ರಖ್ಯಾತವಾದ ಶ್ರೀಕೂರ್ಮದ ಶಾಸನ ಒರಿಸ್ಸಾ ರಾಜ್ಯದ ಗಂಜಾಂ ಜಿಲ್ಲೆಯ ಚಿಕಕೊಲೆ ತಾಲ್ಲೂಕಿನಲ್ಲಿದೆ. ಸಂಸ್ಕೃತದ ಒಂಬತ್ತು ಶ್ಲೋಕಗಳಿರುವ ಈ ಶಾಸನ ಮಹತ್ವದ ಕೆಲವು ವಿಷಯಗಳನ್ನು ತಿಳಿಸುತ್ತದೆ.[೧] ಇದರಲ್ಲಿ ಬರುವಂತೆ ಪುರುಷೋತ್ತಮ ಮಹಾತೀರ್ಥರ ಶಿಷ್ಯ ಆನಂದ ತೀರ್ಥ-ಅವರ ಶಿಷ್ಯ ನರಹರಿ ತೀರ್ಥ. ಇವರು ಶ್ರೀಕೂರ್ಮವನ್ನು ಶಬರರ ಆಕ್ರಮಣದಿಂದ ರಕ್ಷಿಸಿದರೆಂದು ಮತ್ತು ಶಕ ೧೨೦೩ ರಲ್ಲಿ ಯೋಗಾನಂದ ನೃಸಿಂಹನ ಮಂಟಪವನ್ನು ದೇವಾಲಯದೆದುರು ಶ್ರೀಕೂರ್ಮದಲ್ಲಿ ಕಟ್ಟಿಸಿದರೆಂದು ತಿಳಿದುಬರುತ್ತದೆ.

ಈ ಶಾಸನದಲ್ಲಿ ಬರುವ ಪುರುಷೋತ್ತಮ ಮಹಾತೀರ್ಥ ಎಂಬ ಆನಂದ ತೀರ್ಥರ ಗುರುವಿನ ಹೆಸರು ಸಾಂಪ್ರದಾಯಿಕ ಗುರುಪರಂಪರೆಯಲ್ಲಿ ಕಾಣಬರುವುದಿಲ್ಲ. ಆದರೆ ಪುರುಷೋತ್ತಮ ಮಹಾತೀರ್ಥ ಮತ್ತು ಅಚ್ಯುತ ಪ್ರೇಕ್ಷ ನಾಮಾಂತರಗಳೆಂದು ಭಾವಿಸುವುದುಂಟು. ಮಧ್ವರು ಉತ್ತರ ಭಾರತದ ಪ್ರವಾಸ ಕಾಲದಲ್ಲಿ ಒರಿಸ್ಸಾ ಪ್ರಾಂತ್ಯಕ್ಕೆ ಹೋಗಿದ್ದಾಗ ಅಲ್ಲಿ ಶಾಮಶಾಸ್ತ್ರಿ (ನರಹರಿ ತೀರ್ಥರ ಪೂರ್ವಾಶ್ರಮದ ಹೆಸರು) ಗುರುಗಳ ಪ್ರಭಾವಕ್ಕೆ ಒಳಗಾಗಿ ಶಿಷ್ಯರಾಗಿ ಸಂನ್ಯಾಸ ಸ್ವೀಕರಿಸಿ, ಅಲ್ಲಿಯ ರಾಜನ ಮಗ ಎಳೆಯ ಪ್ರಾಯದವನಿದ್ದುದರಿಂದ ಗುರುವಿನ ಆಜ್ಞೆಯಂತೆ ರಾಜಕುಮಾರ ಪ್ರಾಪ್ತವಯಸ್ಕನಾಗುವವರೆಗೆ ರಾಜ್ಯಭಾರ ನಿರ್ವಹಿಸಿದರು.[೨] ಅನಂತರ ಈ ರಾಜ್ಯದಿಂದ ಗುರುಗಳು ಬಯಸಿದ ಸೀತಾರಾಮರ ವಿಗ್ರಹಗಳನ್ನು ಗುರುಗಳಿಗೆ ತಂದುಕೊಟ್ಟರು. ಮುಂದೆ ಪದ್ಮನಾಭತೀರ್ಥರ ನಂತರ ಕ್ರಿ.ಶ. ೧೩೨೪ ರಿಂದ ೧೩೩೩ ರವರೆಗೆ ಗುರುಪರಂಪರೆಯ ಪೀಠವನ್ನು ನಿರ್ವಹಿಸಿದರು ಎಂದು ತಿಳಿದುಬರುತ್ತದೆ.

ಮಧ್ವಾಚಾರ್ಯರು ತಮ್ಮ ಎಲ್ಲ ಕೃತಿಗಳನ್ನು ಸಂಸ್ಕೃತ ಭಾಷೆಯಲ್ಲಿಯೇ ರಚಿಸಿದ್ದಾರೆ. ಅವರು ರಚಿಸಿದ ೩೭ ಕೃತಿಗಳು ಉಪಲಬ್ಧವಿದೆ.[೩] ಅವುಗಳಲ್ಲಿ ಅವರು ತಮ್ಮೆಲ್ಲ ಅಭಿಪ್ರಾಯಗಳನ್ನು ಸೂತ್ರರೂಪವಾಗಿ ಹಿಡಿದಿಟ್ಟಿದ್ದಾರೆ. ಆದ್ದರಿಂದ ವ್ಯಾಖ್ಯಾನಗಳಿಲ್ಲದೆ ಕೆಲವು ಕೃತಿಗಳನ್ನು ಅರ್ಥಮಾಡಿಕೊಳ್ಳುವುದು ಕಠಿಣವೆಂದು ವಿದ್ವಾಂಸರು ಭಾವಿಸುತ್ತಾರೆ. ಅವರ ಕೃತಿಗಳಲ್ಲಿ ಕೆಲವು ಮುಖ್ಯವಾದವುಗಳೆಂದರೆ: ದ್ವಾದಶ ಸ್ತೋತ್ರ, ಅನು ವ್ಯಾಖ್ಯಾನ, ಬ್ರಹ್ಮಸೂತ್ರಭಾಷ್ಯ, ಮಹಾಭಾರತ ತಾತ್ಪರ್ಯ ನಿರ್ಣಯ, ವಿಷ್ಣು ತತ್ವ ನಿರ್ಣಯ, ಅಣುಭಾಷ್ಯ, ಗೀತಾತಾತ್ಪರ್ಯ ಮುಂತಾದವು. ಅವರ ಒಟ್ಟು ಕೃತಿಗಳನ್ನು 'ಸರ್ವ ಮೂಲ' ಎಂದು ಕರೆಯುತ್ತಾರೆ.

ಮಧ್ವಾಚಾರ್ಯರು ಸುಮಾರು ಹನ್ನೊಂದನೆಯ ವಯಸ್ಸಿನಲ್ಲಿಯೇ ಸಂನ್ಯಾಸ ಸ್ವೀಕರಿಸಿದವರು. ತಮ್ಮ ಪೂರ್ಣ ಬದುಕನ್ನು ತಪೋನಿಷ್ಠರಾಗಿ, ಜ್ಞಾನದಾಹಿಗಳಾಗಿ ಕಳೆದು ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದರು. ಅದ್ವೈತ ವಾದವನ್ನು ಸಾಕಷ್ಟು ಹರಿತವಾಗಿಯೇ ಖಂಡಿಸಿದ್ದಾರೆ. ಅದ್ವೈತ ಸಿದ್ಧಾಂತದ ಪರಂಪರೆಯವರಿಗೂ ದ್ವೈತ ಸಿದ್ಧಾಂತ ಪ್ರತಿಪಾದಕರಾದ ಮಧ್ವರಿಗೂ ಅನೇಕ ವಿದ್ವತ್ ಗೋಷ್ಠಿಗಳಲ್ಲಿ ಘರ್ಷಣೆಗಳು ನಡೆದಂತೆ ಕಾಣುತ್ತದೆ. ಅದ್ವೈತ ಸಿದ್ಧಾಂತದ ಕೇಂದ್ರಗಳಲ್ಲೊಂದಾದ ಶೃಂಗೇರಿ ಉಡುಪಿಯಿಂದ ಕೇವಲ ನಲವತ್ತು ಕಿಲೊ ಮೀಟರುಗಳ ದೂರದಲ್ಲಿದೆ. ಅದ್ವೈತಿಗಳು ವೈಮನಸ್ಸಿನಿಂದ ದ್ವೈತ

---

೧. ಎಇ VI ಚಿಕಕೊಲೆ ೨೫ ಕ್ರಿ.ಶ. ೧೨೮೧.

೨. ಎಇ VI ಎಚ್. ಕೃಷ್ಣ ಶಾಸ್ತ್ರಿ '(ಪೋಸ್ಟ್ ಸ್ಕ್ರಿಪ್ಟ್)' ಕ್ರಿ.ಶ. ೧೨೬೪-೧೨೯೪ರ ಅವಧಿಯ ಐದು ಶಾಸನಗಳು ನರಹರಿ ತೀರ್ಥರು ರಾಜನ ಪರವಾಗಿ ಮಾಡಿದ ದಾನಗಳನ್ನು ತಿಳಿಸುತ್ತವೆ. ೨೬೦-೬೩ (೧೨೬೪, ೧೨೯೨, ೧೨೯೨, ೧೨೯೩ ಮತ್ತು ೧೨೯೪).

೩. ಕೆ.ಎಂ. ಕೃಷ್ಣರಾವ್ : 'ಶ್ರೀಮದಾನಂದತೀರ್ಥ ವಿರಚಿತ ತತ್ವ ನಿರ್ಣಯ' ಕ.ಸಾ.ಪ.ಪ. ೪೭-೧, ಪು. ೫೫-೫೭. ಮಧ್ವಾಚಾರ್ಯರ ಸಮಗ್ರ ಕೃತಿಗಳು ಮತ್ತು ಅವುಗಳ ಕಿರುಪರಿಚಯ ಕೊಟ್ಟಿದ್ದಾರೆ.

ಸಿದ್ಧಾಂತವನ್ನು ನಿರ್ಮೂಲ ಮಾಡುವ ಉದ್ದೇಶದಿಂದ ಮಧ್ವರ ಇಡೀ ಗ್ರಂಥ ಭಂಡಾರವನ್ನು ಹೊತ್ತುಕೊಂಡು ಹೋದಂತೆಯೂ ಆಗ ವಿಷ್ಣುಮಂಗಲದ ಜಯಸಿಂಹನೆಂಬ ರಾಜಕುಮಾರ ಮಧ್ಯೆ ಪ್ರವೇಶಿಸಿ ಈ ಗ್ರಂಥಗಳು ಮರಳಿ ದೊರಕುವಂತೆ ಮಾಡಿದನೆಂದು ತಿಳಿದು ಬರುತ್ತದೆ.[೧] ಈ ಘಟನೆಗೆ ಖಚಿತ ಐತಿಹಾಸಿಕ ಆಧಾರಗಳು ದೊರೆಯದೇ ಹೋದರೂ ಪರಸ್ಪರ ವೈಮನಸ್ಸು ಇಂಥ ದುರ್ಘಟನೆಗೆ ದಾರಿ ಮಾಡಿಕೊಡುತ್ತಿತ್ತೆಂದು ಊಹಿಸಬಹುದು.

ಮಧ್ವರು ಅಸಾಧಾರಣ ವ್ಯಕ್ತಿತ್ವ ಮತ್ತು ಪಾಂಡಿತ್ಯದಿಂದ ಆ ಕಾಲದ ಅನೇಕ ಪಂಡಿತರನ್ನು ಸೋಲಿಸಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಶೋಭನ ಭಟ್ಟರು, ಶಾಮ ಶಾಸ್ತ್ರಿಗಳು, ತ್ರಿವಿಕ್ರಮ ಪಂಡಿತರು, ಬುದ್ಧಿ ಸಾಗರ, ವಾದಿಸಿಂಹ ಮೊದಲಾದ ವಿದ್ವನ್ಮಣಿಗಳು ಇವರ ಜ್ಞಾನದ ಮುಂದೆ ಶರಣಾದರು. ನೂರಾರು ಜನ ಇವರ ವ್ಯಕ್ತಿತ್ವಕ್ಕೆ ಮನಸೋತು ದ್ವೈತ ಸಂಪ್ರದಾಯಕ್ಕೆ ಸೇರಿದರು. ಜನರ ಅಪಾರ ಬೆಂಬಲ ಪಡೆದು ಕರ್ನಾಟಕದಾದ್ಯಂತ ಮುಂದೆ ಈ ಮತ ಬೆಳೆಯಿತು. ಅಲ್ಲದೆ ಆಂಧ್ರ, ತಮಿಳುನಾಡು, ಕೊಂಕಣ, ಮಹಾರಾಷ್ಟ್ರ, ಗುಜರಾತ್, ಬಂಗಾಳ[೨] ಮತ್ತು ಗಯಾಗಳವರೆಗೂ ಹಬ್ಬಿ ಹರಡಿತು.[೩] ಆದರೂ ಕರ್ನಾಟಕದಲ್ಲಿ ದ್ವೈತ ಮತವನ್ನು ಅನುಸರಿಸುವವರು ಅಧಿಕವಾಗಿ ಕಂಡು ಬರುತ್ತಾರೆ.

ಮಧ್ವರ ಸಿದ್ಧಾಂತಗಳಿಗೆ ವಿವರವಾದ ವ್ಯಾಖ್ಯಾನಗಳನ್ನು ಬರೆದವರಲ್ಲಿ ಅತ್ಯಂತ ಪ್ರಮುಖರು ಜಯತೀರ್ಥರು (ಕ್ರಿ.ಶ.೧೩೬೫-೮೮). ಅವರು ಸಾಂಪ್ರದಾಯಿಕವಾಗಿ ತಿಳಿದಿರುವಂತೆ ಮಂಗಳವೇಡದವರು. ಚಿಕ್ಕವಯಸ್ಸಿನಲ್ಲಿಯೇ ಲೌಕಿಕ ಸುಖಗಳನ್ನು ತ್ಯಜಿಸಿ ಅಕ್ಷೋಭ್ಯರಲ್ಲಿ (ಇವರು ಮಧ್ವರ ನೇರ ಶಿಷ್ಯರು) ಅಧ್ಯಯನ ಮಾಡಿ ಮುಂದೆ (ಕ್ರಿ.ಶ. ೧೩೬೫ರಲ್ಲಿ) ಅಕ್ಷೋಭ್ಯರ ಉತ್ತರಾಧಿಕಾರಿಯಾದರು. ಇವರು ಮಧ್ವರ ಎಲ್ಲ ಮುಖ್ಯ ಗ್ರಂಥಗಳಿಗೆ ವ್ಯಾಖ್ಯಾನ ಬರೆದಿದ್ದಾರೆ. ಅಲ್ಲದೆ ಪ್ರಮಾಣ ಪದ್ಧತಿ, ವಾದಾವಲಿ ಎಂಬ ಅನ್ಯ ಕೃತಿಗಳನ್ನೂ ಬರೆದಿದ್ದಾರೆ. ಅವರಿಗೆ ಸಂಪ್ರದಾಯ 'ಟೀಕಾಚಾರ್ಯ'ಎಂಬ ಬಿರುದನ್ನು ಕೊಟ್ಟು ಗೌರವಿಸಿದೆ.[೪] ಅವರ ವ್ಯಾಖ್ಯಾನಗಳಿಗೆ ಎಷ್ಟು ಅಧಿಕೃತತೆ ಇದೆಯೆಂದರೆ ದ್ವೈತ ವೇದಾಂತದ ಗ್ರಂಥಗಳು ಟೀಕಾಚಾರ್ಯರ ಅಭಿಪ್ರಾಯವನ್ನು ಅನುಸರಿಸದೆ ಒಂದು ವಾಕ್ಯವನ್ನೂ ಪ್ರಯೋಗಿಸುವುದಿಲ್ಲ.[೫]

---

೧. Encyclopaedia of Religion and Ethics. VIII, ಪು. ೨೩೨-೨೩೪.

ಮಧ್ವರ ಅನುಯಾಯಿಗಳಿಗೆ ಅದ್ವೈತ ಸಿದ್ಧಾಂತದ ಆಚಾರ್ಯ ಶಂಕರರ ಬಗ್ಗೆ ಗೌರವಯುತ ಭಾವನೆಗಳು ಇರಲಿಲ್ಲವೆಂಬ ಸಂಗತಿಗೆ, ಅವರ ಎಲ್ಲ ಗ್ರಂಥಗಳಲ್ಲಿ ಶಂಕರ ಎಂದು ಅವರನ್ನು ನಿರ್ದೇಶಿಸದೆ 'ಸಂಕರ'ನೆಂದು ನಿರ್ದೇಶಿಸಿರುವುದು ಆಧಾರವಾಗಬಲ್ಲದು. ಅದೇ ಗ್ರಂಥದ ಅಡಿಟಿಪ್ಪಣಿ.

೨. ಬಂಗಾಲದ ಚೈತನ್ಯರು (೧೪೮೫-೧೫೩೪) ವೈಷ್ಣವ ಧರ್ಮವನ್ನು ಆ ನಾಡಿನಲ್ಲಿ ವಿಶೇಷವಾಗಿ ಪ್ರಚಾರ ಮಾಡಿದರು. ಇವರಿಗೆ ದೀಕ್ಷೆ ನೀಡಿದ ಗುರು ಮಾಧವೇಂದ್ರ ಪೂರಿ ಎಂಬಾತ. ಬಂಗಾಲದ ಕವಿ ಕರ್ಣಪೂರ 'ಗೌರ ಗಣದ್ದೇಶ ದೀಪಿಕ'ದಲ್ಲಿ ಮಧ್ವರಿಂದ ಚೈತನ್ಯರವರೆಗೆ ೧೬ ಗುರುಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ಅಲ್ಲದೆ ಕೆಲವು ಬ್ರಾಹ್ಮಣರು ತಮ್ಮನ್ನು ಮಾಧ್ವ ಗೌಡೀಯರೆಂದು ಕರೆದುಕೊಳ್ಳುತ್ತಾರೆ. ಈ ಗುರು ಪರಂಪರೆಯ ವಿಷಯದಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳು ಇವೆ. ವಿವರಗಳಿಗೆ ನೋಡಿ- A.K. Majumdar : Chaitanya -His life and Doctrine. ಪು. ೨೬೦-೬೫.

೩. ಬಿ.ಎನ್.ಕೆ. ಶರ್ಮ : 'ದ್ವೈತ ವೇದಾಂತ' ಕರ್ನಾಟಕ ದರ್ಶನ, ಪು. ೨೩೨-೩೪.

೪. B.N.K.Sharma : 'Philosophy of Sri Madhvacharya' ಪು. XIV-XV.

೫. ಆರ್.ಎಸ್. ಪಂಚಮುಖಿ : ಪೂರ್ವೋಕ್ತ, ೩೩-೩೪, ಪು. ೫೩.

ಮಧ್ವಾಚಾರ್ಯರು ವಾದಿನಿಗ್ರಹ ಪ್ರವಾಸದಲ್ಲಿರುವಾಗ ಗ್ರಂಥಗಳನ್ನು ಹೊರುತ್ತಿದ್ದ ಎತ್ತು ಮತ್ಸರಿ ಶಿಷ್ಯರ ವಿಷ ಪ್ರಯೋಗದಿಂದ ಬಳಲುತ್ತಿದ್ದಾಗ ದ್ವಾದಶ ಸ್ತೋತ್ರವನ್ನು ಮನಸ್ಸಿನಲ್ಲೇ ಪಠಿಸುತ್ತಿತ್ತು. ಆಗ ಈ ಎತ್ತು ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ನನ್ನ ಗ್ರಂಥಗಳಿಗೆ ಯಥಾರ್ಥವಾದ ಟೀಕೆಗಳನ್ನು ಬರೆಯುವನೆಂದು ಮಧ್ವಾಚಾರ್ಯರು ಹೇಳಿದರಂತೆ. ಈ ವೃಷಭವೇ ಧೋಂಡೋ ಪಂತರಾಗಿ ಹುಟ್ಟಿ ಗುರುಕುಲ ವಾಸ ಮಾಡದಿದ್ದರೂ ಗುರುಗಳ ಅನುಗ್ರಹದಿಂದ ಜ್ಞಾನಿಯಾಗಿ ಟೀಕಾಚಾರ್ಯರೆಂದು ಖ್ಯಾತರಾದರು.

ಹರಿದಾಸ ಸಾಹಿತ್ಯದ ರಚನೆ ಯಾರಿಂದ ಮೊದಲಾಯಿತು ಎನ್ನುವ ವಿಷಯದಲ್ಲಿ ತುಂಬ ಅಭಿಪ್ರಾಯ ಭೇದಗಳು ವಿದ್ವಾಂಸರಲ್ಲಿವೆ. ಮಧ್ವರೇನೊ ಎಲ್ಲ ಕೃತಿಗಳನ್ನು ರಚಿಸಿದ್ದು ಸಂಸ್ಕೃತ ಭಾಷೆಯಲ್ಲಿಯೇ. ಕೆಲವರು ಹಡಗಿನಿಂದ ಗೋಪಿಚಂದನದ ಗಡ್ಡೆಗಳನ್ನು ಮಧ್ವರು ಹೊತ್ತು ತರುವಾಗ ಹಾಡಿದ 'ದ್ವಾದಶ ಸ್ತೋತ್ರ' ವೇ ಭಕ್ತಿ ಸಾಹಿತ್ಯಕ್ಕೆ ಮೂಲವೆಂದು ಹೇಳುವರು.[೧] ಆದರೆ ಯಾವ ಚೌಕಟ್ಟಿನಲ್ಲಿ ಹರಿದಾಸರ ಕೀರ್ತನೆಗಳನ್ನು ಗುರುತಿಸಲಾಗುವುದೋ ಆ ಚೌಕಟ್ಟಿನಲ್ಲಿ ಅದು ಅಳವಡುವುದಿಲ್ಲ. ಬೇಲೂರು ಕೇಶವದಾಸರು ದಾಸ ಸಾಹಿತ್ಯದ ಉಗಮವನ್ನು ಕ್ರಿ.ಶ. ೮೭೯ ರಲ್ಲಿದ್ದರೆನ್ನಲಾದ ಅಚಲಾನಂದರ ಕೀರ್ತನೆಯನ್ನು ಉದಾಹರಿಸಿ ಅವರೇ ಹರಿದಾಸ ಸಾಹಿತ್ಯದ ಮೊದಲಿಗರೆಂದಿದ್ದಾರೆ.[೨] ಆದರೆ ಅವರು ಉದಾಹರಿಸುವ ಕೀರ್ತನೆಯ ಭಾಷೆ ಖಚಿತವಾಗಿ ೧೫-೧೬ ನೆಯ ಶತಮಾನಕ್ಕೆ ಸೇರಿದ್ದೇ ಹೊರತು ೯ನೆಯ ಶತಮಾನಕ್ಕೆ ಸೇರಲು ಸಾಧ್ಯವಿಲ್ಲ. ಅಲ್ಲದೆ ಅಚಲಾನಂದರದೆಂದು ಹೇಳುವ ಒಂದು ಕೀರ್ತನೆಯಲ್ಲಿ 'ಕೇಳೊ ಜೀವನವೆ ನೀ ಮಧ್ವಮತವನನುಸರಿಸಿ'[೩] ಎಂಬ ಮಾತೂ ಬರುತ್ತದೆ. ಆದ್ದರಿಂದ ಅಚಲಾನಂದರು ಖಚಿತವಾಗಿ ಮಧ್ವಾಚಾರ್ಯರನಂತರದವರೇ ಆಗುತ್ತಾರೆ. ಆದರೆ ಮಧ್ವ ಪೂರ್ವದಲ್ಲಿ ಒಬ್ಬ ಅಚಲಾನಂದರು ಇರುವುದನ್ನು ಮತ್ತು ೧೫-೧೬ನೆಯ ಶತಮಾನದಲ್ಲಿ ಕೀರ್ತನಕಾರ ಅಚಲಾನಂದ ಇರುವ ವಾದಗಳನ್ನು ಗಮನಿಸಿ ಜಿ. ವರದರಾಜ ರಾವ್ ಅವರು, ಬೇರೆ ಬೇರೆ ಕಾಲಕ್ಕೆ ಸೇರಿದ ಇಬ್ಬರು ಅಚಲಾನಂದರು ಇದ್ದಿರಬೇಕು ಎನ್ನುವುದು ಸೂಕ್ತವಾದುದು[೪] ಎಂದು ಅಭಿಪ್ರಾಯಪಟ್ಟಿದ್ದಾರೆ.

ನರಹರಿತೀರ್ಥರೇ ಹರಿದಾಸ ಸಾಹಿತ್ಯದ ಪ್ರವರ್ತಕರೆಂಬ ಅಭಿಪ್ರಾಯವಿದೆ.[೫] ಅವರು ರಚಿಸಿರುವರೆನ್ನಲಾದ 'ಇಂತು ಮರುಳಾದೆ' ಎಂದು ಪ್ರಾರಂಭವಾಗುವ ಕೀರ್ತನೆ ಹರಿದಾಸ ಸಾಹಿತ್ಯದ ಆದ್ಯ ಕೃತಿಯೆಂದು ತಿಳಿಯಲಾಗಿದೆ. ಅವರು ರಚಿಸಿದ ಒಟ್ಟು ನಾಲ್ಕು ಕೀರ್ತನೆಗಳು ದೊರೆಯುತ್ತವೆ. ಪಾಠದ ತೊಡಕುಗಳಿದ್ದು ಅಂಕಿತದ ತೊಡಕೂ ಇದೆ... ಆದ್ದರಿಂದ ಶ್ರೀ ನರಹರಿತೀರ್ಥರನ್ನು ಕನ್ನಡ ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರೆಂದು ಒಪ್ಪಿಕೊಳ್ಳುವಲ್ಲಿ ಎಷ್ಟು ಸಮಸ್ಯೆಗಳು ಉದ್ಭವಿಸುವುವೋ ಅಲ್ಲಗಳೆಯುವಲ್ಲಿಯೂ ಅಷ್ಟೇ ಸಮಸ್ಯೆಗಳು ಬಂದಪ್ಪಿಕೊಳ್ಳುವುವು.[೬] ಒರಿಸ್ಸಾ ದೇಶದಿಂದ ಬದುಕಿನ ಉತ್ತರಾರ್ಧದಲ್ಲಿ ಬಂದು ಕನ್ನಡ ಭಾಷೆಯನ್ನು ಕಲಿತು ರಚಿಸಲು ಸಾಧ್ಯವಾಗಬಲ್ಲುದೇ ಎಂಬಂತಹ ಸಂದೇಹಗಳು ಹುಟ್ಟುವುದು ಸಹಜವಾಗಿದೆ. ಅವರನ್ನು ಹರಿದಾಸ ಸಾಹಿತ್ಯದ ಆದ್ಯರೆಂದು ಒಪ್ಪಿದರೂ ಹರಿದಾಸ ಸಾಹಿತ್ಯ ಪರಂಪರೆಯ ನಿರ್ಮಾಪಕರೆಂದು ಕರೆಯುವುದು ಕಷ್ಟ.[೭]

ಶ್ರೀಪಾದರಾಜರನ್ನು ಹರಿದಾಸ ಪರಂಪರೆಯ ಪಿತಾಮಹರೆಂದು ಕರೆಯುವ ರೂಢಿ ಇದೆ. (ಕ್ರಿ.ಶ.ಸು. ೧೪೫೦). ಮುಂದಿನ ಎಲ್ಲ ಪ್ರಮುಖ ಕೀರ್ತನಕಾರರು ಶ್ರೀಪಾದರಾಯರನ್ನು ಹರಿದಾಸ ಗುಂಪಿಗೆ ಮೊದಲಿಗರೆಂದು ಹೇಳಿದ್ದಾರೆ.

---

೧. ಕೆ.ಎಂ. ಕೃಷ್ಣರಾವ್ : ಶ್ರೀ ಜಗನ್ನಾಥ ದಾಸರು, ಪು. ೪೪-೪೫; ಎಚ್.ಎಸ್. ವೆಂಕಟೇಶಮೂರ್ತಿ. **ಕೀರ್ತನಕಾರರು** ಪು.೫.

೨. ಬೇಲೂರು ಕೇಶವದಾಸರು : ಪೂರ್ವೋಕ್ತ, ಪು. ೩೫-೩೭.

೩. ಎಚ್ಚೆಸ್ಕೆ (ಸಂ) : ದಾಸ ಸಾಹಿತ್ಯ ದರ್ಶನ, ಪು. ೩೩.

೪. ಜಿ. ವರದರಾಜರಾವ್ : ಶ್ರೀಪಾದರಾಜರ ಕೃತಿಗಳು, ಪೀಠಿಕೆ, ಪು. VII.

೫. ಆರ್.ಎಸ್. ಪಂಚಮುಖಿ : 'ಹರಿದಾಸ ಸಾಹಿತ್ಯ' ಕ.ಸಾ.ಪ.ಪ. ೩೩-೩೪ ಪು. ೫೧-೫೨.

Masti Venkatesha Iyengar : **Popular culture in Karnataka** ಪು. ೫೯.

ರಂ.ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಪು. ೨೮೭.

ಎಚ್.ಎಸ್. ವೆಂಕಟೇಶಮೂರ್ತಿ : ಪೂರ್ವೋಕ್ತ, ಪು. ೫.

೬. ಶಾಲಿನಿ ರಘುನಾಥ : 'ಹರಿದಾಸ ಸಾಹಿತ್ಯದ ಇತಿಹಾಸ', ದಾಸ ಸಾಹಿತ್ಯ ದರ್ಶನ, ಪು. ೩೪-೩೫.

೭. ನರಹರಿತೀರ್ಥರ ಹೆಸರಿನಲ್ಲಿ ಪ್ರಚುರವಿರುವ ನಾಲ್ಕು ಕೀರ್ತನೆಗಳು ಅವರ ರಚನೆಗಳಲ್ಲವೆಂದು ಅಂತರಿಕ ಮತ್ತು ಬಾಹ್ಯ ಕಾರಣಗಳನ್ನು ನೀಡಿ ಶ್ರೀನಿವಾಸ ಹಾವನೂರರು ಇತ್ತೀಚೆಗೆ ಪ್ರತಿಪಾದಿಸಿದ್ದಾರೆ. ಭಾಷೆ, ವಿಚಾರ, ಶಬ್ದಾರ್ಥ ದೋಷ ಇವುಗಳಲ್ಲದೆ ನಾಲ್ಕು ಹಾಡುಗಳಲ್ಲಿ ಅನುಪಲ್ಲವಿ ಇದೆ. ಈ ಕ್ರಮ ೧೫ನೆಯ ಶತಮಾನದನಂತರ ಮಾತ್ರ ಬಳಕೆಯಲ್ಲಿದ್ದಿತು. ಈ ಎಲ್ಲ ಮತ್ತು ಇನ್ನೂ ಕೆಲವು ಆಧಾರಗಳಿಂದ ಅವು ನರಹರಿತೀರ್ಥರ ರಚನೆಗಳಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ. ಶ್ರೀನಿವಾಸ ಹಾವನೂರು 'ನರಹರಿ ತೀರ್ಥರು ಕೀರ್ತನೆ ರಚಿಸಿದ್ದಾರೆಯೆ?' ಕನ್ನಡ ಅಧ್ಯಯನ ಸಂ ೧೧. ಸಂ.೧ ಮತ್ತು ೨, ಪು. ೩೨-೪೧.

ನರಹರಿತೀರ್ಥರ ಹೆಸರನ್ನು ಹೇಳಿಲ್ಲ. ಶ್ರೀಪಾದರಾಜರು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಬೇಕಾಗಿ ಬಂದ ಹಿನ್ನೆಲೆಯನ್ನು ಕೆ. ಎಂ. ಕೃಷ್ಣರಾವ್ ವಿವರಿಸಿ ಹೇಗೆ ಅವರು ಹರಿದಾಸ ಪರಂಪರೆಯ ನಿರ್ಮಾಪಕರಾದರು ಎನ್ನುವುದನ್ನು ತಿಳಿಸಿದ್ದಾರೆ.[೧]

ನರಹರಿ ತೀರ್ಥರ ಕಾಲದನಂತರ (ಕ್ರಿ.ಶ. ೧೩೩೩) ಮತ್ತೆ ಶ್ರೀಪಾದರಾಜರಲ್ಲಿಯೇ (ಕ್ರಿ.ಶ. ೧೪೭೦-೧೪೮೬) ಹರಿದಾಸ ಪಂಥದ ಸುಳಿವನ್ನು ಕಾಣುವುದು. ಅವರಿಬ್ಬರ ಮಧ್ಯದಲ್ಲಿ ಸುಮಾರು ೧೭೫ ವರ್ಷಗಳು ಆ ಪಂಥದ ಚಟುವಟಿಕೆ ಅಷ್ಟಾಗಿ ಕಾಣಬರುವುದಿಲ್ಲ. ಕೆಲವು ಆಖ್ಯಾಯಿಕೆಗಳು, ಕೆಲವು ಆರಾಧ್ಯ ಶೈವ ಬ್ರಾಹ್ಮಣರು ಹರಿದಾಸ ಕೃತಿ ರಚಿಸಿ ಆದ್ಯರೆಂದು ಪ್ರಸಿದ್ಧರಾದರೆಂದು ತಿಳಿಸುತ್ತವೆ. ಈ ಆದ್ಯರನ್ನು ನರಹರಿ ತೀರ್ಥರ ಪೂರ್ವದಲ್ಲಿಯೂ, ನರಹರಿ ತೀರ್ಥ ಮತ್ತು ಶ್ರೀಪಾದರಾಜರ ಕಾಲದ ಮಧ್ಯದಲ್ಲಿಯೂ ಇದ್ದರೆಂದು ಹೇಳುವುದುಂಟು.[೨] ಅವರು ಅರವತ್ತು ಜನರಿದ್ದು ಅವರೇ ಪ್ರಾಚೀನ ಹರಿದಾಸರೆಂದು ಹೇಳುವ ಐತಿಹ್ಯವಿದೆ. ತೀರ್ಥಹಳ್ಳಿ ತಾಲ್ಲೂಕಿನ ಶಾಸನವೊಂದರಲ್ಲಿ[೩] 'ಶ್ರೀವೈಷ್ಣವ ಸಿದ್ಧಾಂತದ ಪ್ರತಿಷ್ಠಾಪನಾಚಾರ್ಯ್ಯರುಂ... ಶ್ರೀ ತೀರ್ಥಪಾದಂಗಳ ದಿವ್ಯ ಶ್ರೀ ಪಾದಗಳಾರಾಧಕರುಮಪ್ಪ ಶ್ರೀಮತಂ ಸುಲಭತೀರ್ಥ ಶ್ರೀಪಾದಂಗಳಾರಾಧಿಸುವ' ಎಂದು ಬರುತ್ತದೆ. ಮುಂದೆ ನೀರೇಜನಾಭ ವ್ರತಿ, ಮಾಧವಾರ್ಯ, ತ್ರೈಲೋಕ್ಯ ಭೂಷಣ, ಸುಲಭಾಚಾರ್ಯ ಎಂಬ ಹೆಸರುಗಳು ಬರುತ್ತವೆ. ಕೆಲವು ಆರಾಧ್ಯರಿಗೆ ಭೂಭಾಗಗಳನ್ನು ಕೊಟ್ಟ ವಿವರ ಬರುತ್ತದೆ. ಶಾಸನದ ಕೊನೆಯ ಭಾಗದಲ್ಲಿ 'ಶ್ರೀಮಧ್ವಶಾಸ್ತ್ರ ಸುಧಯಾಪ್ಲುತ ಹುತ್ಸರೋಜ ಶ್ರೀಕಾಂನ್ತ ಪಾದಯುಗ ಚಿತ್ತ ವ್ರಿತ್ತಿಂ' ಎಂದು ಹೇಳಿ ಮಾಧವಾರ್ಯ, ತ್ರೈಲೋಕ್ಯ ಭೂಷಣ ಗುರುಗಳ ಪ್ರಸ್ತಾಪ ಬರುತ್ತದೆ. ಅನಂತರ ದಾಸಕ್ಕೆ ಸಾಕ್ಷಿಯಿದ್ದ ಹೆಗ್ಗಡೆಗಳ ವಿಷಯ ಬರುತ್ತದೆ. ಈ ದಾನಗಳು ನಡೆಯುವುದು ಅರಗ ಎಂಬ ಊರಿನ ಸುತ್ತ ಮುತ್ತಲಿನ ಪ್ರದೇಶದಲ್ಲಿ. ಈ ಶಾಸನದ ಆಧಾರದ ಮೇಲೆ ಕಪಟರಾಳ ಕೃಷ್ಣರಾಯರು ಗುರುಪರಂಪರೆಯನ್ನು ಕೊಟ್ಟು ಈ ಆರಾಧ್ಯರು ೧೫ನೆಯ ಶತಮಾನದ ಆರಂಭ ಕಾಲದಲ್ಲಿ ಇದ್ದರೆಂದು ಭಾವಿಸುತ್ತಾರೆ.[೪] ಆದರೆ ಈ ಪರಂಪರೆ ನರಹರಿತೀರ್ಥರಿಂದ ಮುಂದುವರಿದದ್ದೆ ಅಥವಾ ಶಾಖೆಯಾಗಿ ಬೆಳದದ್ದೆ ಎಂಬಂತಹ ವಿವರಗಳು ಇನ್ನೂ ಲಭಿಸಿಲ್ಲ. ಕೇವಲ ಆ ಹೆಸರುಗಳ ಮೇಲೆ ಗುರುಪರಂಪರೆಯ ಮುಂದುವರಿಕೆ ಎಂದು ಭಾವಿಸುವುದು ಕಷ್ಟ ಸಾಧ್ಯವಾಗಿದೆ.

ಪಂಡರಪುರದ ವಿಠಲ ಪ್ರಾಚೀನ ಕರ್ನಾಟಕದ ಕೆಲವು ರಾಜರಿಗೂ, ಕವಿಗಳಿಗೂ ಬಹಳ ಪ್ರಿಯವಾದ ದೈವವಾಗಿರುವಂತೆ ಕಂಡುಬರುತ್ತದೆ. ಹೊಯ್ಸಳ ವೀರ ಸೋಮೇಶ್ವರನ (ಕ್ರಿ.ಶ.೧೨೩೭) ಶಾಸನವೊಂದು ಅಲ್ಲಿ ದೊರೆಯುತ್ತದೆ. ಕವಿ ಚೌಂಡರಸ (ಕ್ರಿ.ಶ. ೧೩೦೦)ನಂತೂ ವಿಠಲನ ಭಕ್ತನಾಗಿದ್ದಾನೆ.[೫] ಅವನು ವಿಠಲಾಷ್ಟಕವನ್ನು ಬರೆದಿದ್ದಾನೆ. ಮಧ್ವಾಚಾರ್ಯರ ಶಿಷ್ಯರಾದ ಅಕ್ಷೋಭ್ಯರು ಪಂಡರಪುರದಿಂದ ೬ ಮೈಲು ದೂರದ ಸಂಧ್ಯಾವಳಿಯಲ್ಲಿ ಭೀಮಾತೀರದಲ್ಲಿ ಮಂಗಳವೇಢೆಯ ದೇಶಪಾಂಡೆಯ ಮನೆತನದ ಧೋಂಡೋ ರಘುನಾಥ ದೇಶಪಾಂಡೆಗೆ ಸನ್ಯಾಸವನ್ನು ಕೊಟ್ಟು ಜಯತೀರ್ಥನೆಂದು ನಾಮಕರಣ ಮಾಡಿದರು. ಇದರಿಂದ ವಿಠಲ ಸನ್ನಿಧಾನದಲ್ಲಿ ದ್ವೈತ ಮತದ ಆಚಾರ್ಯರು ವಿಷ್ಣು ಭಕ್ತಿಯನ್ನು ಹರಡಲು ಪ್ರಯತ್ನಿಸಿದರು.[೬] ಪಂಡರ

---

೧. ಕೆ.ಎಂ. ಕೃಷ್ಣರಾವ್ : ಪೂರ್ವೋಕ್ತ, ಪು. ೪೯-೫೦.
ಜಿ. ವರದರಾಜರಾವ್ : ಪೂರ್ವೋಕ್ತ, ಪೀಠಿಕೆ, ಪು. XIX.

೨. ಶಾಲಿನಿ ರಘುನಾಥ : ಪೂರ್ವೋಕ್ತ, ಪು. ೩೫.

೩. (ರೈ) ಎಕ VIII ತೀರ್ಥಹಳ್ಳಿ ೨೪ ಕ್ರಿ.ಶ. ೧೪೦೫.

೪. ಕಪಟರಾಳ ಕೃಷ್ಣರಾವ್ : 'ಹರಿದಾಸರ ಪರಂಪರೆ', ಪ್ರ.ಕ. ೪೬-೧, ಪು. ೧೫೧-೧೭೦.

೫. ರಂ.ಶ್ರೀ. ಮುಗಳಿ : ಪೂರ್ವೋಕ್ತ, ಪು. ೨೨೩. ದಶಕುಮಾರ ಚರಿತೆಯಲ್ಲಿ ಮೊದಲ ಪದ್ಯದಲ್ಲಿಯೇ 'ಪಂಡರೀರಾಯನಭಂಗ ವಿಟ್ಠಲಂ' ಎಂದಿದೆ.

೬. ಆರ್.ಎಸ್. ಪಂಚಮುಖಿ : ಪೂರ್ವೋಕ್ತ, ಪು. ೪೭.

ಪುರದ ವಿಠಲ ಮೂರ್ತಿಯನ್ನು 'ಅಭಂಗ ವಿಠಲ'[೧] ಎಂದು ಕರೆಯುತ್ತಾರೆ. ಮುಂದೆ ಹರಿದಾಸ ಪರಂಪರೆಯ ಪ್ರಖ್ಯಾತ ಹರಿದಾಸರಾದ ಪುರಂದರದಾಸರಿಗೂ ವಿಠಲ ಆರಾಧ್ಯದೈವವಾಗಿರುವುದನ್ನು ಕಾಣಬಹುದು.

ಮಧ್ವಾಚಾರ್ಯರು ತಮ್ಮ ಶಿಷ್ಯರನ್ನು, ಭಕ್ತರನ್ನು ಒಟ್ಟಿಗಿಡಲು ಒಂದು ಕೇಂದ್ರವನ್ನು ಸ್ಥಾಪಿಸಲು ಬಯಸಿ ಉಡುಪಿಯಲ್ಲಿ ಕೃಷ್ಣನನ್ನು ಪ್ರತಿಷ್ಠಾಪಿಸಿದರು.[೨] ತಮ್ಮ ಅಪಾರ ಅನುಯಾಯಿಗಳಿಗೆ ಸೂಕ್ತ ಮಾರ್ಗದರ್ಶನವನ್ನು ನೀಡಿದರು. ಕೃಷ್ಣನ ಪೂಜೆಗಾಗಿ ಎಂಟು ಮಠಗಳನ್ನು[೩] ವ್ಯವಸ್ಥೆಗೊಳಿಸಿ 'ಪರ್ಯಾಯ' ಪೂಜೆಯನ್ನು ಅಳವಡಿಸಿದರು.[೪] ಮುಂದೆ ಮಾಧ್ವ ಪರಂಪರೆ ಹರಿದಾಸ ಪರಂಪರೆಯಾಗಿ ಕನ್ನಡ ನಾಡಿನ ವಿವಿಧ ಕೇಂದ್ರಗಳಲ್ಲಿ ಅಭಿವೃದ್ಧಿ ಹೊಂದಿ ನಾಡಿನ ಸಾಂಸ್ಕೃತಿಕ ಮತ್ತು ಸಾಹಿತ್ಯಕ ಜೀವನಕ್ಕೆ ದೊಡ್ಡ ಕಾಣಿಕೆಗಳನ್ನು ನೀಡಿತು.

ಸಂಪ್ರದಾಯಸ್ಥ ಮಾಧ್ವ ಮತದ ಅನುಯಾಯಿಗಳು ಸ್ನಾನಾನಂತರ ದೇಹದ ದ್ವಾದಶಸ್ಥಾನಗಳಲ್ಲಿ (ಲಲಾಟ, ಉದರ, ಹೃದಯ, ಕಂಠಮೂಲ, ಪಾರ್ಶ್ವದ್ವಯ, ಬಾಹುದ್ವಯ, ಕರ್ಣದ್ವಯ, ಬೆನ್ನು, ಬೆನ್ನುಹುರಿ) ಗೋಪಿಚಂದನವನ್ನು ಧರಿಸುತ್ತಾರೆ. ಗೋಪಿಚಂದನವೆಂಬ ಮೃತ್ತಿಕೆಯಿಂದ ವಿಷ್ಣುವಿನ ಶಂಖ, ಚಕ್ರ ಮತ್ತು ಇತರ ಆಯುಧಗಳ ಮುದ್ರೆಗಳನ್ನು ಒತ್ತಿಕೊಳ್ಳುವ ರೂಢಿ ಇದೆ. ಕಾಯಿಸಿದ ಲೋಹದ ಮುದ್ರೆಗಳನ್ನು ಭುಜಗಳಲ್ಲಿ ಧರಿಸುವ ಪದ್ಧತಿಯೂ ಇದೆ.[೫] ಶ್ರೀವಿಜಯದಾಸರು ಹರಿದಾಸರ ಬಗ್ಗೆ ಹೇಳುತ್ತಾ 'ತಪ್ತ ಮುದ್ರಾಂಕಿತ ಧರಿಸಬೇಕು ಭುಜದಿ' ಎಂದು ಹೇಳಿದ್ದಾರೆ.[೬]

ಹರಿದಾಸ ಪರಂಪರೆಯಲ್ಲಿ ಗಮನಾರ್ಹವಾದ ಪಂಥಭೇದಗಳು ಇಲ್ಲದೇ ಹೋದರೂ ವ್ಯಾಸಕೂಟ ಮತ್ತು ದಾಸಕೂಟ ಎಂಬ ಪರಿಭಾಷೆಗಳನ್ನು ಆ ಪರಂಪರೆಗೆ ಸಂಬಂಧಿಸಿದಂತೆ ಬಳಸುತ್ತಾರೆ. ಈ ಪರಿಭಾಷೆ ಪುರಂದರ ದಾಸರ ಕಾಲಕ್ಕೆ ಬಳಕೆಗೆ ಬಂದಿದೆ ಎಂದು ವಿದ್ವಾಂಸರು ಭಾವಿಸುತ್ತಾರೆ. 'ವ್ಯಾಸ ಎಂದರೆ ಶ್ರೀ ವೇದವ್ಯಾಸರು-ಬಾದರಾಯಣರು. ಈ ವ್ಯಾಸ ಕೃತವಾದ ಸಾಹಿತ್ಯ ಶಾಸ್ತ್ರಗಳನ್ನು ಬಲ್ಲವರು-ಪಂಡಿತರು ವ್ಯಾಸಕೂಟದವರೆಂತಲೂ, ಪುರಂದರ ದಾಸರೇ ಮೊದಲಾದ ದಾಸಾರ್ಯರು ಸಾಹಿತ್ಯಜ್ಞರು ದಾಸ ಕೂಟದವರೆಂತಲೂ ಪ್ರತೀತಿ. ಅಂದರೆ ಸಾಮಾನ್ಯವಾಗಿ ಅಧ್ಯಾತ್ಮ ಶಾಸ್ತ್ರ ವಿಷಯ, ನೀತಿ

---

೧. R.S.Panchamukhi : Abhanga Vithala of Pandarpur ಜೆಒಯುಬಿ XXI-1. (New Series) 'ಅಭಂಗ' ಎಂದು ಆ ದೈವವನ್ನು ಕರೆಯುವುದನ್ನು ಕೆಲವು ವಿದ್ವಾಂಸರು ಜ್ಞಾನೇಶ್ವರ, ತುಕಾರಾಮ ಮುಂತಾದವರು ಬಳಸಿದ ಒಂದು ಬಗೆಯ ಛಂದಸ್ಸು ಎಂದು ಗುರುತಿಸುತ್ತಾರೆ. ಅಭಂಗ ಎಂದರೆ ತಡೆ ಇಲ್ಲದ್ದು, ಯಾವುದೇ ತಡೆಗಳಿಲ್ಲದ ದೈವ ಎಂಬ ಅರ್ಥವನ್ನು ಗ್ರಹಿಸುವುದುಂಟು. ಆದರೆ ಮೂಲತಃ ಅಭಂಗ ಎನ್ನುವುದು ವಿಗ್ರಹದ ನೇರ ನಿಲುವಿಗೆ ಸಂಬಂಧಿಸಿದ್ದು. (ದ್ವಿಭಂಗ, ತ್ರಿಭಂಗ, ಸಮಭಂಗ ಇದ್ದ ಹಾಗೆ). ಅದೇ ಆ ವಿಗ್ರಹದ ವಿಶೇಷವೂ ಆಗಿದೆ. ಈ ನಿಲುವಿನಿಂದಿರುವ ದೇವರನ್ನು ಕುರಿತು ಹಾಡಿದ್ದಕ್ಕೆ ಅಭಂಗಗಳೆಂದು ಆ ಹಾಡುಗಳಿಗೆ ಹೆಸರಾಯಿತೊ ಅಥವಾ ಆ ಅಭಂಗದ ಹಾಡುಗಳನ್ನು ಆ ದೇವರನ್ನು ಕುರಿತು ಹಾಡಿದ್ದಕ್ಕೆ ಆ ದೇವರಿಗೆ ಹೆಸರು ಬಂದಿತೋ ಕುತೂಹಲದ ವಿಷಯ. ಹೆಚ್ಚಿನ ವಿವರಗಳಿಗೆ ಆ ಲೇಖನವನ್ನು ನೋಡಬಹುದು.

೨. K.V.Ramesh : ಪೂರ್ವೋಕ್ತ ಪು. ೩೦೦.

೩. ಟಿ.ವಿ. ವೆಂಕಟಾಚಲ ಶಾಸ್ತ್ರೀ: ಶ್ರೀವತ್ಸ ನಿಘಂಟು ಪು. ೩೧೬. ಫಲಿಮಾರು, ಅದಮಾರು, ಕೃಷ್ಣಾಪುರ, ಶೀರೂರು, ಕಾಣಿಯಾರು, ಪುತ್ತಿಗೆ, ಸೋದೆ, ಪೇಜಾವರ.

೪. P. Gururaja Bhat : Studies in Tuluva History and culture ಪು. ೩೭೩-೭೪.

೫. ಶ್ರೀವೈಷ್ಣವರಲ್ಲಿ ಇಂಥದೇ ಸಂಪ್ರದಾಯವಿದೆ. ಈ ಸಂಪ್ರದಾಯ ಶ್ರೀ ವೈಷ್ಣವರಿಂದ ಮೊದಲಾಯಿತೋ ಅಥವಾ ವೈದಿಕ ಭಾಗವತದಲ್ಲೇ ಇದ್ದಿತೋ ಎಂಬುದು ಕುತೂಹಲಕರ ಪ್ರಶ್ನೆಯಾಗಿದೆ. ('ತಪ್ತ'ದ ವಿವರವಾದ ವರ್ಣನೆಗೆ ನೋಡಿ- ಬೋಳಾರ ಬಾಬೂರಾಯರ ವಾಗ್ದೇವಿ ಕಾದಂಬರಿ (೧೯೦೫) ಪು. ೩-೫.

೬. ಕೆ.ಎಂ. ಕೃಷ್ಣರಾವ್ : ಪೂರ್ವೋಕ್ತ, ಪು. ೫೫.

ರೀತಿಗಳ ವಿವರಗಳನ್ನು ವಿಶದವಾಗಿ ಗೀರ್ವಾಣ ಭಾಷೆಯಲ್ಲಿ ಶ್ಲೋಕರೂಪದಿಂದ ಹೇಳಿದವರಿಗೆ, ಅವುಗಳಲ್ಲಿ ಪಾಂಡಿತ್ಯವುಳ್ಳವರಿಗೆ ವ್ಯಾಸಕೂಟದವರೆಂದೂ ಅದೇ ವಿಷಯವನ್ನೇ ಕ್ರೋಡೀಕರಿಸಿ, ಕನ್ನಡದಲ್ಲಿ (ಪ್ರಾಕೃತದಲ್ಲಿ) ರಸಭರಿತವಾದ ಗದ್ಯ ಪದ್ಯಗಳಿಂದ ಅಲ್ಪಜ್ಞರಿಗೆ ಸುಲಭವಾಗಿ ತಿಳಿಯುವಂತೆ ಹೇಳಿದವರಿಗೆ, ಅದನ್ನನುಸರಿಸುವವರಿಗೆ ದಾಸಕೂಟಸ್ಥರೆಂದೂ ಸರ್ವ ಸಾಮಾನ್ಯವಾದ ಹೆಗ್ಗುರುತು. ಈ ಪ್ರಭೇದ ಈಚೆಗೆ ಬಂದದ್ದು'[೧]. ಈ ಮಾತುಗಳಿಂದ ದಾಸ ಕೂಟ-ವ್ಯಾಸಕೂಟಗಳಲ್ಲಿ ತಾತ್ವಿಕವಾದ ಯಾವುದೇ ಪ್ರಮುಖ ಭೇದಗಳು ಇರುವಂತೆ ಕಾಣುವುದಿಲ್ಲ. ಅದು ಕೇವಲ ಗ್ರಹಿಕೆ ಮತ್ತು ಅಭಿವ್ಯಕ್ತಿಯ ಉಪಕ್ರಮಗಳೆಂದು ಭಾವಿಸಬಹುದು.

**ಮಹಾನುಭಾವ ಪಂಥ:**[೨]

ಮಹಾನುಭಾವ ಪಂಥ ಸೇವುಣರ ಕಾಲದಲ್ಲಿ ಉನ್ನತ ಸ್ಥಿತಿಯಲ್ಲಿ ಇದ್ದುದು ಕಂಡುಬರುತ್ತದೆ. ಈ ಪಂಥದ ಸ್ಥಾಪಕ, ಸಾಂಪ್ರದಾಯಿಕವಾಗಿ ದತ್ತಾತ್ರೇಯನೆಂದು ಭಾವಿಸಲಾಗಿದೆ. ಈ ಪಂಥದ ಪ್ರಥಮ ಯತಿ ಚಕ್ರಧರ ಸ್ವಾಮಿ. ಇವನನ್ನೇ ಈ ಪಂಥದ ಸ್ಥಾಪಕನೆಂದು ಭಾವಿಸುತ್ತಾರೆ. ಈತನ ಬಗ್ಗೆ ಹೆಚ್ಚು ಐತಿಹಾಸಿಕ ವಿವರಗಳು ತಿಳಿದು ಬರುವುದಿಲ್ಲ. ಮರಾಠಿ ಗ್ರಂಥಗಳಲ್ಲಿ ಇವನ ವಿಷಯ ತಿಳಿದು ಬರುತ್ತದೆ. ಈ ಪಂಥದವರು ಶ್ರೀ ಕೃಷ್ಣನನ್ನು ಆರಾಧ್ಯ ದೈವವಾಗಿ ಭಾವಿಸುತ್ತಿದ್ದರು. ಶ್ರೀ ಕೃಷ್ಣನನ್ನು ದತ್ತಾತ್ರೇಯ ಎಂದೂ ಆರಾಧಿಸುತ್ತಿದ್ದರು; ಇದು ದತ್ತಾತ್ರೇಯ ಸಂಪ್ರದಾಯವೆಂದೂ ಪ್ರಸಿದ್ಧವಾಗಿದೆ. ಪುರುಷ ಮತ್ತು ಸ್ತ್ರೀಯರು ಇದರ ಅನುಯಾಯಿಗಳಾಗಬಹುದು. ಜಾತಿ ಭೇದವನ್ನು ಮಾಡದ ಈ ಪಂಥ ಶೂದ್ರರನ್ನೂ ತನ್ನ ಪಂಥದಲ್ಲಿ ಸೇರಿಸಿಕೊಂಡಿದೆ. ಈ ಪಂಥದ ಸನ್ಯಾಸಿಗಳು ಮದುವೆಯಾಗಲು ಅವಕಾಶವಿರಲಿಲ್ಲ. ಸೇವುಣರು ವೈಷ್ಣವ ಪಂಥಕ್ಕೆ ಸೇರಿದವರಾದರೂ ಈ ಪಂಥಕ್ಕೆ ಬೆಂಬಲ ನೀಡಿರುವುದು ಕಂಡು ಬರುತ್ತದೆ. ಸೇವುಣರ ಕೃಷ್ಣ, ಮಹಾದೇವ ಈ ಪಂಥಕ್ಕೆ ದಾನ ದತ್ತಿಗಳನ್ನು ನೀಡಿದ್ದಾರೆ. ಕೆಲವು ರಾಣಿಯರೂ ಈ ಪಂಥವನ್ನು ಬೆಂಬಲಿಸಿದ್ದರು. ಮಹಾನುಭಾವ ಪಂಥ ಬಲವಾಗಿ ಸ್ಥಾಪಿತವಾಗಿದ್ದರೂ ಚಕ್ರಧರಸ್ವಾಮಿಯನಂತರದ ಅನುಯಾಯಿಗಳು ಕೆಲವು ವಾಮಾಚಾರಗಳಲ್ಲಿ ತೊಡಗಿ, ಶಿಸ್ತು ಸಂಯಮಗಳಿಲ್ಲದೆ ಕಾಲಕ್ರಮದಲ್ಲಿ ಅವರ ಸಂಘ ಶಿಥಿಲವಾದಂತೆ ಕಂಡು ಬರುತ್ತದೆ. ಆದರೂ ಕೆಲವು ಶತಮಾನಗಳವರೆಗೆ ಗುಪ್ತ ಸಂಘಗಳಲ್ಲಿ ಅಲ್ಲಲ್ಲಿ ಕಂಡು ಬಂದರು.

---

೧. ಕೆ.ಎಂ. ಕೃಷ್ಣರಾವ್ : ಶ್ರೀ ಜಗನ್ನಾಥ ದಾಸರು ಪು. ೫೭; Carnatic Historical Review. IV ಜನವರಿ ಜುಲೈ ೧೯೩೭, ಪು. ೮೭-೯೫.

೨. ಈ ಪಂಥದ ವಿಷಯಗಳನ್ನು ಎಸ್.ಎಚ್. ರಿತ್ತಿಯವರ The Sevunas (ಪು. ೨೬೬-೬೭) ಮತ್ತು ಎ.ವಿ. ನರಸಿಂಹಮೂರ್ತಿಯವರ ಕರ್ಣಾಟಕದಲ್ಲಿ ಸೇವುಣರ ಇತಿಹಾಸ (ಪು. ೧೦೨-೧೦೬) ಎಂಬ ಗ್ರಂಥಗಳಿಂದ ಗ್ರಹಿಸಲಾಗಿದೆ.

# ೬. ಬೌದ್ಧಧರ್ಮ

ಭಾರತದ ಪ್ರಾಚೀನ ಧರ್ಮಗಳಲ್ಲಿ ಒಂದಾದ ಬೌದ್ಧಧರ್ಮ ಭಾರತದಲ್ಲಿ ಜನ್ಮ ಪಡೆದು ವಿಸ್ತಾರವಾಗಿ ಹರಡಿ ಅನೇಕ ಹೊರದೇಶಗಳಲ್ಲಿ ತನ್ನ ವ್ಯಾಪಕ ಪ್ರಸಾರವನ್ನು ಪಡೆದು ಭಾರತದಲ್ಲಿ ಬಹು ಕ್ಷೀಣವಾಗಿ ಉಳಿದು ಬಂದ ಧರ್ಮವಾಗಿದೆ. ಕರ್ನಾಟಕದಲ್ಲಿ ಅಶೋಕನ ಕಾಲದ ಶಾಸನಗಳ ಕಾಲದಿಂದಲೂ ಬೌದ್ಧ ಧರ್ಮವನ್ನು ನಾವು ಗುರುತಿಸಬಹುದಾದರೂ ಅದು ಎಂದೂ ಕರ್ನಾಟಕದ ಪ್ರಬಲ ಧರ್ಮವಾಗಿ ಉಳಿಯಲಿಲ್ಲ. ಹೇಗೆ ಆ ಧರ್ಮ ಹೀನಯಾನ ಮಹಾಯಾನ ಮತ್ತು ವಜ್ರಯಾನ ಪಂಥಗಳಾಗಿ ಒಡೆದು ಕ್ರಮವಿಕಾಸವನ್ನು ಪಡೆಯಿತೋ ಆ ಎಲ್ಲ ಪರಿಕ್ರಮಗಳು ಕರ್ನಾಟಕದ ಬೌದ್ಧ ಧರ್ಮಗಳಲ್ಲಿ ಕಾಣಿಸಿಕೊಂಡಿವೆ. ಕರ್ನಾಟಕದಲ್ಲಿ ಕ್ರಿ.ಪೂ. ಮೂರನೆಯ ಶತಮಾನದ ಅಶೋಕನ ಕಾಲದಿಂದ ಕ್ರಿ.ಶ. ಹದಿನಾರನೆಯ ಶತಮಾನದವರೆಗೆ ಆ ಧರ್ಮದ ಅಸ್ತಿತ್ವಕ್ಕೆ ಆಧಾರಗಳು ದೊರೆಯುತ್ತವೆ. ಅಶೋಕನ ಕಾಲದಲ್ಲಿ ಪ್ರಚಾರವಾದುದು ಬೌದ್ಧ ಧರ್ಮದ ಹೀನಯಾನ ಪಂಥವೆಂದೂ, ಕ್ರಿ.ಶ. ಐದು-ಆರು-ಏಳನೆಯ ಶತಮಾನಗಳಲ್ಲಿ ಮಹಾಯಾನ ಪಂಥವು ಪ್ರಚಾರವಾಗಿದ್ದಿತೆಂದೂ ಹೇಳಬಹುದು. ಮುಂದೆ ಒಂಬತ್ತನೆಯ ಶತಮಾನದಿಂದ ಬೌದ್ಧ ಧರ್ಮದ ತಾಂತ್ರಿಕ ಪ್ರಭೇದವಾದ ವಜ್ರಯಾನವು ಆಕ್ರಮಿಸಿಕೊಳ್ಳಲಾರಂಭಿಸಿರುವುದನ್ನು ಕಾಣಬಹುದು.

ಬುದ್ಧನು ಬೋಧಿಸಿದ ಧರ್ಮವನ್ನು ಮುಂದೆ ಹೀನಯಾನ ಎಂದು ಗುರುತಿಸಲಾಗಿದೆ. ಇದು ಸರ್ವರಿಗೂ ಒಳಿತನ್ನು ಬಯಸುತ್ತದೆ ವೈಯಕ್ತಿಕ ಸಾಧನೆ ಮತ್ತು ಸಿದ್ಧಿಗಳಿಗೆ ಅಡ್ಡಿಯುಂಟು ಮಾಡುವುದಿಲ್ಲ. ಈ ಪಂಥದ ಧಾರ್ಮಿಕ ಕೃತಿಗಳು ಪಾಲಿ ಭಾಷೆಯಲ್ಲಿದ್ದು ಇದು ಹೆಚ್ಚಾಗಿ ದಕ್ಷಿಣ ದೇಶಗಳಲ್ಲಿ (ಸಿಲೋನ್, ಬರ್ಮ, ಸಯಾಂ ಮುಂತಾದ ದೇಶಗಳಲ್ಲಿ) ಪ್ರಚಾರದಲ್ಲಿದ್ದು ದಕ್ಷಿಣ ಬೌದ್ಧ ಧರ್ಮವೆಂದು ಕರೆಸಿಕೊಂಡಿದೆ.

ಈ ಹೀನಯಾನ ಪಂಥವನ್ನು ವಿರೋಧಿಸಿ ಪ್ರತಿಭಟನೆಯಂತೆ ಕ್ರಿ. ಶ. ೧-೨ ನೆಯ ಶತಮಾನದಲ್ಲಿ ಮಹಾಯಾನ ಪಂಥವು ಬೆಳೆದು ಬಂದಿತು. ಇದು ಚೀನಾ, ಜಪಾನ್ ದೇಶಗಳಲ್ಲಿ ಪ್ರಚಾರದಲ್ಲಿದ್ದು ಉತ್ತರ ಬೌದ್ಧವೆಂದು ಕರೆಸಿಕೊಂಡಿದೆ. ಈ ಪಂಥ ವೈಯಕ್ತಿಕ ಸಾಧನೆ, ಮುಕ್ತಿಗಿಂತಲೂ ವ್ಯಾಪಕ ಮನೋಭಾವವನ್ನೂ, ಸ್ವತಂತ್ರ ವಿಚಾರಧಾರೆಯನ್ನೂ ಪ್ರಕಟಿಸುತ್ತಾ ಬುದ್ಧ ಕೇವಲ ವೈಯಕ್ತಿಕ ಮುಕ್ತಿ ಸಾಧಕನಲ್ಲ, ಸಾಧನೆಯಿಂದ ಅಸಾಧ್ಯವಾದದ್ದನ್ನು ಸಾಧ್ಯವಾಗಿಸಬಹುದೆಂದು ಸಾಧಿಸಿ ತೋರಿಸಲು ಮಾನವ ದೇಹ ಧರಿಸಿ ಬಂದ ತಥಾಗತನೆಂದು ಭಾವಿಸುತ್ತದೆ.

ಇಷ್ಟು ಮುಕ್ತವಾಗಿ, ಉದಾತ್ತವಾದ ಧ್ಯೇಯಗಳನ್ನು ಹೊಂದಿದ್ದ ಮಹಾಯಾನ ದುರದೃಷ್ಟಕರ ರೀತಿಯಲ್ಲಿ ತಾಂತ್ರಿಕ ಬೌದ್ಧ ಪಂಥವಾಗಿ ಅಥವಾ ವಜ್ರಯಾನವಾಗಿ ಬೆಳೆಯಿತು. ಬುದ್ಧ ತನ್ನ ಕಾಲದಲ್ಲಿ ಸ್ತ್ರೀಯರನ್ನು ತನ್ನ ಧರ್ಮಕ್ಕೆ ಆರಂಭದಲ್ಲಿ ಸೇರಿಸಿಕೊಳ್ಳಲು ಅಷ್ಟಾಗಿ ಬಯಸಿದ್ದಂತೆ ಕಾಣುವುದಿಲ್ಲ; ತನ್ನ ಕಾಲದಲ್ಲಿ ಗಂಡು- ಹೆಣ್ಣು ಸನ್ಯಾಸಿಗಳ ನಡತೆಯ ಸಡಿಲತೆಯನ್ನು ಗಮನದಲ್ಲಿಟ್ಟುಕೊಂಡು ತುಂಬ ಬಿಗಿಯಾದ ನೀತಿ ನಿಯಮಗಳನ್ನು ವಿಧಿಸಿದ್ದಂತೆ ಕಾಣುತ್ತದೆ. ಆದರೆ ಮಹಾಯಾನದ ತುಂಬಾ ಉದಾರನೀತಿಯು ಅತಿ ಉದಾರತೆಗೆ ದಾರಿಯಾಗಿ ತಾಂತ್ರಿಕ ಕೃತಿಗಳಾದ ಗುಹ್ಯ ಸಮಾಜ, ಸಾಧನಮೂಲ, ಜ್ಞಾನ ಸಿದ್ಧಿ ಮತ್ತು ಹೇವಜ್ರಕಲ್ಪದಂತಹ ಕೃತಿಗಳು ರಚನೆಯಾಗತೊಡಗಿದವು. ಅದರಲ್ಲೂ ಗುಹ್ಯ ಸಮಾಜದಂತಹ ಕೃತಿಗಳು ಕೊಲೆ, ಕಳ್ಳತನ, ಅಸತ್ಯ ನುಡಿ, ಲೈಂಗಿಕ ಕ್ರಿಯೆಗಳು ಧಾರ್ಮಿಕ ಕ್ರಿಯೆಗಳೆಂದು ಅವನ್ನು ಶಿಫಾರಸು ಮಾಡತೊಡಗಿದವು.

ವಜ್ರಯಾನದಲ್ಲಿ ದೇವ ದೇವತೆಗಳ ಸಂಖ್ಯೆ ಅಧಿಕ. ಅನೇಕ ಬಾರಿ ಬುದ್ಧನನ್ನು ಅನೇಕ ದೇವತೆಗಳ ಮಧ್ಯೆ ಇರುವಂತೆ ಚಿತ್ರಿಸಲಾಗಿದೆ. ಹಿಂದೂಗಳ ಪರಬ್ರಹ್ಮನಂತೆ ವಜ್ರಯಾನದ ವಜ್ರಸತ್ವ. ವಜ್ರಸತ್ವನ ಐದು ಗುಣಗಳಿಂದ ಐದು ಧ್ಯಾನಿ ಬುದ್ಧರು ಉದ್ಭವವಾದರು. ಅವರು ಕ್ರಮವಾಗಿ ವೈರೋಚನ, ರತ್ನಸಂಭವ, ಅಮಿತಾಭ, ಅಮೋಘ ಸಿದ್ಧಿ ಮತ್ತು ಅಕ್ಷೋಭ್ಯ. ಪ್ರತಿಯೊಬ್ಬಧ್ಯಾನಿ ಬುದ್ಧನಿಗೆ ಒಬ್ಬೊಬ್ಬ ಸ್ತ್ರೀ ಶಕ್ತಿ ಸಹಾಯಕಿ ಇದ್ದಾಳೆ. ಅವರು ಕ್ರಮವಾಗಿ ವಜ್ರಧಾತೇಶ್ವರಿ, ಲೋಚನ, ಮಾಮಕಿ, ಪಾಂಡರ ಮತ್ತು ಆರ್ಯತಾರ. ಯಾರು ಆ ತಾಂತ್ರಿಕ ಗ್ರಂಥಗಳನ್ನು ಅನುಸರಿಸಿ ಆರಾಧಿಸುತ್ತಾರೊ ಅವರು ವಜ್ರಸತ್ವರಾಗುವರೆಂಬ ನಂಬಿಕೆ ಇದೆ. ಈ ಆರಾಧನೆಯ ವಿಧಿ ವಿಧಾನಗಳನ್ನು ಹೇಳುವ ಗ್ರಂಥಗಳ ಭಾಷೆ ಗೂಢಭಾಷೆಯಾಗಿದ್ದು ಅದನ್ನು 'ಸಂಧಾಭಾಷೆ' ಎಂದು ಗುರುತಿಸಲಾಗಿದೆ. ಸಾಮಾನ್ಯ ಓದುಗನಿಗೆ ಕೆಲವು ಸಾರಿ ಅಸಂಬದ್ಧವಾಗಿಯೋ ಅಥವಾ ಮೇಲ್ಸ್ತರದ ಅರ್ಥ ಪ್ರತೀತಿ ಆಗಬಹುದಾದರೂ ಆ ಭಾಷಾ ಪರಿಣತರಿಗೆ ಮಾತ್ರ ಒಳ ಅರ್ಥಗಳ ಪ್ರತೀತಿಯಾಗುವುದು. ಇದಲ್ಲದೆ ವಜ್ರಯಾನ ಪಂಥವು 'ಪಂಚ ಮಕಾರ' ಗಳನ್ನು (ಮತ್ಸ್ಯ, ಮಾಂಸ, ಮದ್ಯ, ಮುದ್ರಾ ಮತ್ತು ಮೈಥುನ) ತನ್ನ ಅನುಯಾಯಿಗಳಿಗೆ ವಿಧಿಸಿತು. ಇದು ರೂಕ್ಷವಾಗಿ, ನೈತಿಕತೆಯ ಎಲ್ಲೆಗಳನ್ನು ಮೀರಿದ್ದಾಗಿ ಬೆಳೆಯಿತು. ಈ ಪಂಥದ ಬೌದ್ಧ ಧರ್ಮ ಭಾರತದಲ್ಲಿ ಕೆಲವು ಕಾಲವಿದ್ದು ಕ್ರಮೇಣ ಕಣ್ಮರೆಯಾಗಿದೆ.[೧] ಆ ಕಾಲದ ಜನಗಳ ಅಭಿರುಚಿಗೆ, ಅಗತ್ಯಗಳಿಗೆ ಮತ್ತು ತನ್ನ ಧರ್ಮದ ಅಸ್ತಿತ್ವಕ್ಕೆ ಬೆಳೆದು ಬಂದ ಸಹಜ ಅನಿವಾರ್ಯ ಬೆಳವಣಿಗೆ ಆದಾಗಿರಬಹುದು. ಕೆಲವರ ಅಭಿಪ್ರಾಯದಂತೆ ಈ ಪಂಥದ ಉಗಮಸ್ಥಾನ ಬಂಗಾಳ ಅಥವಾ ಅಸ್ಸಾಂ. ಇದು ಏನೇ ಆಗಿರಲಿ ಮುಂದೆ ಕ್ರಮೇಣ ಭಾರತದಾದ್ಯಂತ ಭಕ್ತಿ ಪಂಥಗಳು ಅಲೆಅಲೆಯಾಗಿ ಎದ್ದು ಬರಲು ಇಂಥ ಧಾರ್ಮಿಕ ಅಧಃಪತನಗಳು ಭೂಮಿಕೆಯನ್ನು ಸಿದ್ಧಪಡಿಸಿದಂತೆ ಕಾಣುತ್ತದೆ.

ಕರ್ನಾಟಕದಲ್ಲಿ ಅಶೋಕನ ಶಾಸನಗಳು ಸಿಗುವ ಸ್ಥಳಗಳಾದ ಸಿದ್ಧಾಪುರ, ಜಟಿಂಗ ರಾಮೇಶ್ವರ, ಬ್ರಹ್ಮಗಿರಿ, ಮಸ್ಕಿ, ಕೊಪ್ಪಳ ಮುಂತಾದವು[೨] ಕರ್ನಾಟಕದಲ್ಲಿ ಬೌದ್ಧಧರ್ಮ ಪ್ರಬಲವಾಗಿತ್ತು ಎನ್ನುವುದಕ್ಕಿಂತ ಮೌರ್ಯ ಸಾಮ್ರಾಜ್ಯದ ವ್ಯಾಪ್ತಿಯನ್ನು ಹೇಳುವ ಪ್ರಬಲ ಸಾಧನಗಳು.[೩] ಪುರಾತತ್ವ, ಶಾಸನ, ಇತಿಹಾಸ ಮತ್ತು ಸಾಹಿತ್ಯ ಸಂಶೋಧಕರ ಪರಿಶ್ರಮದಿಂದ ಬನವಾಸಿ, ಮಹಿಷಮಂಡಲ, ಬಳ್ಳಿಗಾವೆ, ಡಂಬಳ, ಸನ್ನತಿ,[೪] ತೊರ್ಕೆ,[೫] ಕದಿರೆ ಮುಂತಾದವು ಬೌದ್ಧ ಕೇಂದ್ರಗಳೆಂದು ಗುರುತಿಸಲ್ಪಟ್ಟಿವೆ. ಈಚೆಗೆ ಹಂಪಿಯಲ್ಲಿ ದೊರೆತ ಬೌದ್ಧ ಪಟ್ಟಿಕೆಗಳೂ ಗಮನಾರ್ಹವಾಗಿವೆ.[೬] ತನ್ಮೂಲಕ ಬೌದ್ಧ ಧರ್ಮ ಕರ್ನಾಟಕದಲ್ಲಿ ಹರಡಿದ್ದ ವ್ಯಾಪ್ತಿಯ ಒಂದು ಅಂದಾಜು ಬರಲು ಸಾಧ್ಯವಿದೆ.

---

೧. ಬೌದ್ಧ ಧರ್ಮದ ಮೇಲಿನ ಭಾಗವನ್ನು ಬರೆಯಲು '2500 Years of Buddhism ,' ಕ್ಯುಜೆಎಂಎಸ್ Liii - ೪ ರಲ್ಲಿ ಬಂದಿರುವ ಎಂ. ಚಿದಾನಂದ ಮೂರ್ತಿಯವರ 'Buddhism in Karnataka' ಎಂಬ ಲೇಖನ ಮತ್ತು Encylopaedia of Religion and Ethics. 'vol VII Indian Buddhism' (ಪು. ೨೦೯-೨೧೫ ) ಎಂಬ ಲೇಖನ ಮತ್ತು ತಾಳ್ತಜೆ ವಸಂತ ಕುಮಾರ ಅವರ ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ ಮತ್ತು ಬೌದ್ಧಾಯನ ಎಂಬ ಎರಡು ಗ್ರಂಥಗಳ ನೆರವನ್ನು ಪಡೆಯಲಾಗಿದೆ.

೨. ಶ್ರೀನಿವಾಸ ರಿತ್ತಿ : ಅಶೋಕನ ಧರ್ಮ ಶಾಸನಗಳು ಪು. ೧೧-೧೨.

೩. ಎಂ. ಚಿದಾನರದ ಮೂರ್ತಿ : ಕಶಾಸಾಂಅ ಪು. ೧೧೩.

೪. ಪಿ.ಬಿ. ದೇಸಾಯಿ : 'ಅಪೂರ್ವ ಬೌದ್ಧ ಕ್ಷೇತ್ರ' : ಕ.ಭಾ ೧-೧ ಪು. ೩-೯.

೫. ಕೆ.ಜಿ. ಕುಂದಣಗಾರ : 'ತಗರ' ಕ.ಸಾ.ಪ.ಪ ೧೯-೩ ಪು. ೨೩೧-೨೩೪. ಕನ್ನಡ ಶಾಸನಗಳಲ್ಲಿ ಬರುವ ಶಿಲಾಹಾರರ 'ತಗರ' ಪುರವೇ 'ತೊರ್ಕೆ' ಎಂದು ಕೆಲವು ಆಧಾರಗಳಿಂದ ತೋರಿಸಿದ್ದಾರೆ.

೬. ತಾಳ್ತಜೆ ವಸಂತಕುಮಾರ : ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ ಪು. ೨೫೮ ರ ಅಡಿಟಿಪ್ಪಣಿ.

ಇತ್ತೀಚಿನ ಉತ್ಖನನ ಇನ್ನೊಂದು ಬೌದ್ಧ ಕೇಂದ್ರವನ್ನು ಗುರುತಿಸಿದೆ. ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರದಿಂದ ಎಂಟು ಕಿಲೊಮೀಟರ್ ಈಶಾನ್ಯಕ್ಕೆ ಇರುವ ಚಿಕ್ಕಗ್ರಾಮ ರಾಜಘಟ್ಟದಲ್ಲಿ ಸುಮಾರು ಹತ್ತು ವರ್ಷಗಳಿಂದ ನಡೆದಿರುವ ಪುರಾತತ್ವ ಅನ್ವೇಷಣೆಗಳು ಕ್ರಿಸ್ತ ಪೂರ್ವದ ಶತಮಾನಗಳಿಗೆ ಸೇರಿರಬಹುದಾದ ಬೃಹತ್ ಶಿಲಾಯುಗದ ಸಂಸ್ಕೃತಿಯ ಅನೇಕ ಸಮಾಧಿಗಳನ್ನು ಬೆಳಕಿಗೆ ತಂದಿದೆ. ಅಲ್ಲದೆ ರಾಜಘಟ್ಟವು ಒಂದು ಪ್ರಸಿದ್ಧವಾದ ಬೌದ್ಧ ನೆಲೆಯೂ ಆಗಿತ್ತು ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳು ಉತ್ಖನನಗಳಿಂದ ದೊರೆತಿವೆ. ರಾಜಘಟ್ಟ ಎಂಬ ಹೆಸರು ಈ ಪ್ರದೇಶಕ್ಕೆ ಔತ್ತರೇಯ ಸಂಸ್ಕೃತಿಯ ಕೊಡುಗೆಯಾಗಿ ಬಂದಿರಲೂ ಸಾಧ್ಯ. ರಾಜಘಟ್ಟದ ಬೂದಿಗುಂಡಿಯೆಂದು ಕರೆಯುತ್ತಿದ್ದ ಪ್ರದೇಶದಲ್ಲಿ ಉತ್ಖನನ ನಡೆಸಿದಾಗ ಗೋಚರಿಸಿದ ಬೌದ್ಧ ಚೈತ್ಯಾಲಯದ ಅವಶೇಷಗಳು ದಕ್ಷಿಣ ಕರ್ನಾಟಕದಲ್ಲೇ ಪ್ರಪ್ರಥಮವಾಗಿ ದೊರೆತಂತಾಯಿತು. ಈ ಚೈತ್ಯಾಲಯದಿಂದ ಸುಮಾರು ಎರಡು ಫರ್ಲಾಂಗ್ ಪೂರ್ವದಲ್ಲಿ ಮಣ್ಣಿನಿಂದ ಮಾಡಿದ ಅನೇಕ ಸಣ್ಣ ಸಣ್ಣ ಹರಕೆಸ್ತೂಪಗಳು ಉತ್ಖನನದಲ್ಲಿ ದೊರೆತಿವೆ. ಈ ಚೈತ್ಯಾಲಯದ ಕಾಲವನ್ನು ಹರಕೆಸ್ತೂಪಗಳ ಮೇಲಿರುವ ಲಿಪಿಯ ಆಧಾರದಿಂದ ಕ್ರಿ.ಶ.೪ ರಿಂದ ೬ನೆಯ ಶತಮಾನವೆಂದು ನಿರ್ಧರಿಸಲಾಗಿದೆ. ಈ ಮಾದರಿಯ ಸ್ತೂಪಗಳ ಅರ್ಪಣೆ ಟಿಬೆಟ್‌ನ ಬೌದ್ಧಧರ್ಮೀಯರಲ್ಲಿ ಈಗಲೂ ಇರುವುದಾಗಿ ತಿಳಿದು ಬಂದಿದೆ. ರಾಜಘಟ್ಟದ ಆ ಕಾಲದ ಬೌದ್ಧಧರ್ಮ ಮಹಾಯಾನ ಪಂಥದ್ದಾಗಿರಬಹುದೆಂದು ಭಾವಿಸಲಾಗಿದೆ. ನೂರಾರು ಹರಕೆ ಸ್ತೂಪಗಳು ದೊರೆತಿರುವುದು ಅಪೂರ್ವ ಮತ್ತು ಅಭೂತಪೂರ್ವವಾದುದಾಗಿದೆ. ಇದು ಭಾರತದ ಮಟ್ಟಿಗೆ ಮೊಟ್ಟ ಮೊದಲನೆಯದು. ಅವುಗಳನ್ನು ಹಸಿಮಣ್ಣಿನಲ್ಲಿ ತಯಾರಿಸಿರುವ ರೀತಿಯೂ ವಿಶಿಷ್ಟವಾಗಿದೆ.

ರಾಜಘಟ್ಟದಲ್ಲಿ ದೊರೆತಿರುವ ಚೈತ್ಯಾಲಯ ತನ್ನ ತಳವಿನ್ಯಾಸದ ಆಕಾರದಲ್ಲಿ ಇಡೀ ದಕ್ಷಿಣ ಭಾರತದಲ್ಲೇ ಅದ್ವಿತೀಯವಾದದ್ದು. ಇಷ್ಟು ದೊಡ್ಡ ಸಂಕೀರ್ಣವುಳ್ಳ ಏಕೈಕ ಬೌದ್ಧ ಸಂಕೀರ್ಣ ಇಡೀ ದಕ್ಷಿಣ ಭಾರತದಲ್ಲೇ ವಿರಳವೆನ್ನಬಹುದು.[೧]

ಮುಡಿಯನೂರು ತಾಮ್ರಶಾಸನ (ಕ್ರಿ. ಶ. ೩೩೮) ಜಾಣದೊರೆ ಮಲ್ಲದೇವ ನಂದಿವರ್ಮ ಬೋಧಿಸತ್ವನಂತೆ ಕರುಣಾಮಯಿ ಆಗಿದ್ದನೆಂದು ಪ್ರಶಂಸಿಸುತ್ತದೆ. ಈ ಅಂಶ ಬೋಧಿಸತ್ವ, ಆತನ ತತ್ವಗಳು, ಆತನ ಪೂಜೆ, ಆತನ ಮಹತ್ವ ಆ ಕಾಲದಲ್ಲಿ ದಕ್ಷಿಣಭಾರತದಲ್ಲಿ ಸಾಕಷ್ಟು ಜನಜನಿತವಾಗಿದ್ದಿತೆಂಬುದನ್ನು ಸೂಚಿಸುತ್ತದೆ.

ಕೋಲಾರ ಜಿಲ್ಲೆಯ ಕುರುಡುಮಲೈಯಲ್ಲಿ ಬುದ್ಧನ ಪ್ರತಿಮೆಯೊಂದು ದೊರಕಿರುವುದು ವರದಿಯಾಗಿದೆ. ಈ ಎಲ್ಲಾ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ನೋಡಿದಾಗ ದಕ್ಷಿಣ ಕರ್ನಾಟಕದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬೌದ್ಧಧರ್ಮ ನೆಲೆಯೂರಿತ್ತು ಎಂಬ ಅಂಶ ಸ್ಪಷ್ಟವಾಗುತ್ತದೆ.

ನಮ್ಮ ಪ್ರಸ್ತುತ ಅಧ್ಯಯನದ ಅವಧಿಯಲ್ಲಿ ಕರ್ನಾಟಕದಲ್ಲಿ ಪ್ರಚುರವಾಗಿದ್ದುದು ಹಿಂದೆ ಸೂಚಿಸಿದ ವಜ್ರಯಾನ ಪಂಥವೇ ಆಗಿದೆ. ವಜ್ರಯಾನ ಪಂಥದ ಹೆಸರು ಆ ಕಾಲದ ಅಥವಾ ಮುಂದಿನ ಶಾಸನಗಳಲ್ಲಿ ದೊರೆಯುವುದಿಲ್ಲ. ಇತರ ಧರ್ಮದ ಸಾಹಿತ್ಯ ಕೃತಿಗಳು ಬೌದ್ಧಧರ್ಮವನ್ನು ಬಹು ಹೀನಾಯವಾಗಿ ದೂಷಿಸುವುದನ್ನು ಕಂಡರೆ ಮತ್ತು ದೊರೆಯುವ ಶಾಸನಾಧಾರಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಕೆಲವು ಕಡೆ ಗೌರವದಿಂದ, ಕೆಲವು ಕಡೆ ಅವಹೇಳನಕರ ಭಾವನೆಯಿಂದ ಇನ್ನು ಕೆಲವು ಕಡೆ ಸಾಂಪ್ರದಾಯಿಕವಾಗಿರುವ ಉಲ್ಲೇಖಗಳಂತೆ ಕಂಡುಬರುತ್ತವೆ. ಕ್ರಿ. ಶ. ಏಳನೆಯ ಶತಮಾನಕ್ಕೆ ಸೇರಿದ ಪ್ರಸಿದ್ಧ ಬೌದ್ಧ ತಾಂತ್ರಿಕ ನಾಗಾರ್ಜುನ, ತಾಂತ್ರಿಕ ಬೌದ್ಧ ಧರ್ಮ ದಕ್ಷಿಣದಲ್ಲಿ ಹರಡಲು ಕಾರಣವೆಂಬ ಅಭಿಪ್ರಾಯವಿದೆ.[೨]

---

೧. ಎಂ.ಎಸ್. ಕೃಷ್ಣಮೂರ್ತಿ ಮತ್ತು ಎಂ.ಪಿ. ಮಹದೇವಯ್ಯ : 'ಕರ್ನಾಟಕದ ಬೌದ್ಧ ಧರ್ಮದ ಮೇಲೆ ಹೊಸಬೆಳಕು -ರಾಜಘಟ್ಟ ಉತ್ಖನನ. ಇ .ದ. ಸಂ. ೧೭ ಪು. ೧-೧೧ ಎಂ.ಎಸ್. ಕೃಷ್ಣಮೂರ್ತಿ ಮತ್ತು ಎಂ.ವಿ.ಕೃಷ್ಣಪ್ಪ : 'ಕರ್ನಾಟಕದ ಬೌದ್ಧಧರ್ಮದ ಮೇಲೆ ಹೊಸ ಬೆಳಕು -ರಾಜಘಟ್ಟ ಉತ್ಖನನ- ಭಾಗ ೨ ಇ.ದ. ಸಂ. ೨೦ ಪು. ೨೦-೩೧.

೨. M. Chidananda Murthy: 'Buddhism in Karnataka' ಕ್ಯು ಜೆಎಂ.ಎಸ್ Liii- ೪ ಪು. ೧೩೩.

ಕರ್ನಾಟಕದಲ್ಲಿ ಬಹುಶಃ ೧೦-೧೧ನೆಯ ಶತಮಾನಗಳಿಂದ ಅದರ ಪರಿಣಾಮಗಳು ಕಾಣಿಸಿಕೊಳ್ಳತೊಡಗಿರಬೇಕು. ಬಳ್ಳಿಗಾವೆಯ ಕ್ರಿ.ಶ. ೧೦೬೫ರ ಶಾಸನ, ದಂಡನಾಯಕ ರೂಪಭಟ್ಟಾರಕನು ಜಯಂತಿ ಪ್ರಭ ಬೌದ್ಧ ವಿಹಾರವನ್ನು ಕಟ್ಟಿಸಿ ತಾನು ಮಾಡಿಸಿದ ತಾರಾಭಗವತಿಯ, ಕೇಶವ ದೇವರ, ಲೋಕೇಶ್ವರ ದೇವರ, ಬೌದ್ಧ ದೇವರ ಮತ್ತು ಸಮಸ್ತ ಪರಿವಾರ ದೇವರ ಅರ್ಚನೆ ಪೂಜೆ ನಿಮಿತ್ತವಾಗಿ ದಾನ ಮಾಡಿ ಅಲ್ಲಿಯ ಯೋಗಿನಿಯರ, ಕುಸಳಿಯರ(?) ಸನ್ಯಾಸಿಗಳ ಆಹಾರದಾನಕ್ಕಾಗಿ ಚಾಳುಕ್ಯ ಚಕ್ರವರ್ತಿಯ ಒಪ್ಪಿಗೆ ಪಡೆದು ದಾನ ನೀಡುತ್ತಾನೆ ಎಂದು ಹೇಳಿದೆ.[೧] ಆ ವಿಹಾರದಲ್ಲಿ ಸನ್ಯಾಸಿ ಮತ್ತು ಸನ್ಯಾಸಿನಿಯರು ಸಹವಾಸವನ್ನು ಮಾಡುತ್ತಿದ್ದರೆಂದು ಊಹಿಸಲು ಅವಕಾಶವಿರುವುದರಿಂದ ವಜ್ರಯಾನ ತತ್ವಗಳಿಗನುಸಾರವಾಗಿ ಸಾಧನ ಮಾರ್ಗವನ್ನು ಅನುಸರಿಸುತ್ತಿದ್ದಿರಬಹುದೆಂದು ಆಲೋಚಿಸಬಹುದು. ಬಳ್ಳಿಗಾವೆಯ ಅದೇ ಸ್ಥಳದ ಇನ್ನೊಂದು ಶಾಸನವು ಚಾಳುಕ್ಯ ಚಕ್ರಿ ತ್ರೈಲೋಕ್ಯಮಲ್ಲನ ಸಹವಾಸಿ ಹಂಪಚಟ್ಟನ ಕುಲವಧುವಾದ ನಾಗಿಯಕ್ಕ ತಾರಾಭಗವತಿಯನ್ನು ಮಾಡಿಸಿ ಚಕ್ರವರ್ತಿಯನ್ನು ಪ್ರಾರ್ಥಿಸಿ ಪರಮೇಶ್ವರ ದತ್ತಿಯಾಗಿ ..........[೨] ಪ್ರಭ ಬೌದ್ಧಭಳಾರರ ಕಾಲನ್ನು ತೊಳೆದು ಭೂಮಿಯನ್ನು ದಾನ ಮಾಡಿರುವ ವಿಷಯವನ್ನು ತಿಳಿಸುತ್ತದೆ.[೩] ಇದೇ ರೀತಿ ಡಂಬಳ ಶಾಸನವೂ ತಾರಾದೇವಿಯ ವಿಹಾರ ಕಟ್ಟಿಸಿ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೪] ಕೋಳಿವಾಡದ ಕ್ರಿ.ಶ. ೧೨ - ೧೩ನೆಯ ಶತಮಾನಕ್ಕೆ ಸೇರಿದ ಶಾಸನವೊಂದು ತಾರಾವಿಗ್ರಹದ ಪೀಠದ ಮೇಲೆ ಇದೆ. ಅದು ತಾರಾದೇವಿಯನ್ನು ಪ್ರಾರ್ಥಿಸಿ, 'ಬುದ್ಧನು ಹೇಳಿದಂತೆ ಅಮೌಲ್ಯಕ್ಕೆ ತಡೆಯನ್ನುಂಟು ಮಾಡಬೇಕೆಂದು'[೫] ಹೇಳಿರುವಂತೆ ಕಾಣುತ್ತದೆ. ಈ ವಿಗ್ರಹದ ಇರುವಿಕೆ ಕೋಳಿವಾಡವು ಒಂದು ಬೌದ್ಧ ಕೇಂದ್ರವಾಗಿದ್ದ ವಿಷಯವನ್ನು ಸ್ಪಷ್ಟಪಡಿಸುತ್ತದೆ. 'ಹ್ರೀಂ - ಸ್ತ್ರೀಂ- ಹ್ರೂಂ -ಫಟ್' ಇದು ತಾರಾಮಂತ್ರ. ಈ ಮಂತ್ರದ ನಾಲ್ಕಕ್ಷರಗಳ ಸ್ಥಳಪಲ್ಲಟದಿಂದ ಇನ್ನೂ ಏಳು ಮಂತ್ರಗಳು ಹುಟ್ಟುತ್ತವೆ. ಆ ಮಂತ್ರಗಳ ಅಧಿದೇವತೆಗಳು ಉಗ್ರಾ, ಮಹೋಗ್ರಾ, ವಜ್ರಾ, ಕಾಲೀ, ಸರಸ್ವತೀ, ಕಾಮೇಶ್ವರೀ, ಮತ್ತು ಭದ್ರಕಾಲೀ.[೬] ಕೋಳಿವಾಡದ ತಾರಾ ವಿಗ್ರಹದ ಒಡೆದಿರುವ ಪ್ರಭಾವಳಿಯ ಮೇಲೆ ಎರಡು ವಿಗ್ರಹಗಳಿವೆ. ಕ್ರಮವಾಗಿ ಏಳು ಇರಬೇಕು. ತಾರಾದೇವತೆ ಮೂಲತಃ ಟಿಬೆಟ್ಟಿನಿಂದ ಬಂದವಳು ಎಂಬ ಅಭಿಪ್ರಾಯವೂ ಇದೆ. ಅಲ್ಲದೆ ಕಾಳೀ, ತಾಂತ್ರಿಕ ಪೂಜೆಯ ಸರಸ್ವತಿ-ಇವರು ಮೂಲತಃ ಬೌದ್ಧ ದೇವತೆಗಳೆಂದೂ, ಹಿಂದೂ ತಂತ್ರಗಳು ಮುಂದೆ ಇವರನ್ನು ತಮ್ಮವರನ್ನಾಗಿ ಮಾಡಿಕೊಂಡರೆಂದೂ ಕೆಲವರು ಅಭಿಪ್ರಾಯ ಪಡುತ್ತಾರೆ.[೭]

ಕ್ರಿ.ಶ. ೧೧೯೬ ರ ಬಿಜಾಪುರದ ಒಂದು ಶಾಸನ ಕಿರಿಯಿಂಡಿಯ ಮಹಿಮೋನ್ನತಿಯನ್ನು ಹೇಳುತ್ತಾ 'ಹರಿಗ್ರಿಹದಿಂ ಸುರಗೃಹದಿಂದರುಹಗೃಹದೆ ಬೌದ್ಧಾಲಯದಿಂ ಗೊರವರ ಸವಣರ ಬೌದ್ಧರ ನೆರವಿಗಳಿಂದಿಂಡಿ ನಾಡೆ ಸೊಗಯಿಸಿ ತೋರ್ಕುಂ'[೮] ಎಂದು ಬೌದ್ಧಾಲಯಗಳ ಮತ್ತು ಬೌದ್ಧ ಧರ್ಮೀಯರ ಇರುವಿಕೆಯನ್ನು ಖಚಿತಪಡಿಸುತ್ತದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕು ಹೆಗ್ಗೆರೆ ಗ್ರಾಮದ ಶಾಸನ ಸಾಮಂತಚಟ್ಟನ ಸತಿಯನ್ನು ವರ್ಣಿಸುತ್ತ 'ಸ್ಥಿರ ಗಂಭೀರ ಉದಾತ್ತ ಸದ್ಗುಣ ಸದಾಚಾರತ್ವವೆಂಬೀ

---

೧. (ರೈ) ಎಕ VII ಶಿಕಾರಿಪುರ ೧೭೦ ಕ್ರಿ. ಶ. ೧೦೬೫.

೨. ಈ ತುಟಿತ ಭಾಗವನ್ನು 'ಜಯಂತಿ' ಎಂದು ಎಂ.ಚಿದಾನಂದ ಮೂರ್ತಿಯವರು ಊಹಿಸಿದ್ದಾರೆ. ಕಶಾಸಾಂಅ ಪು. ೧೧೫.

೩. (ರೈ) ಎಕ VII ಶಿಕಾರಿಪುರ ೧೬೯ ಕ್ರಿ. ಶ. ೧೦೬೭.

೪. ಇ ಆ X ಪು. ೧೮೫ ಕ್ರಿ. ಶ. ೧೦೯೫-೬.

೫. ಕ ಇ V ಹುಬ್ಬಳ್ಳಿ ೧೦೭ ಪು. ೩೦೮ ಕ್ರಿ. ಶ. ೧೨:೧೩ ಶ. ಮಾ. It may be translated as Om salutation to respectable Arya Tara. Thus spoke the great Monk obstrution (should be made) to the course of demerit as told by the Lord Buddha.

೬. ಎಂ. ಚಿದಾನಂದ ಮೂರ್ತಿ: ಪೂರ್ವೋಕ್ತ ಪು. ೧೨೨.

೭. ಅದೇ. ಪು. ೧೨೩.

೮. ಎಸ್.ಐ.ಐ. XVIII ಬಿಜಾಪುರ ೧೯೯ ಕ್ರಿ.ಶ. ೧೧೯೬.

ಗುಣೋನ್ನತಿಯಂ ತಾಳ್ದಿ ಮಹೇಶ್ವರಾಗಮ ಜಿನಶ್ರೀಧರ್ಮ ಸದ್ವೈಷ್ಣವಾಶ್ರಿತ ಬೌದ್ಧಾಗಮಮೆಂಬ ನಾಲ್ಕು ಸಮಯ ವ್ಯಾಪಾರಮಂ ಮಾಳ್ಪ ಸಂಗತ ಚಾತುರ್ಯ್ಯಗೆ ಕಾನ್ತೆ ಶಾನ್ತಲೆಗೆ ಪೇಳಾರುಂ ಸಮಂ ಬಪ್ಪರೇ'[೧] ಎಂದು ತಿಳಿಸುತ್ತದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಕೈಡುನಾಡು ಮತ್ತು ದೊಡತೇಕಲವಟ್ಟಿ[೨] ಶಾಸನಗಳು ಸಾವಂತಗೋವಿಯನ್ನು 'ಮಾಹೇಶ್ವರ ಬೌದ್ಧ ವೈಷ್ಣವಾರುಹತ ಚತುಸ್ಸಮಯ ಸಮುದ್ಧರಣ' ನೆಂದು ಕೀರ್ತಿಸುತ್ತವೆ. ತಿಳಿವಳ್ಳಿಯ ಶಾಸನವೊಂದು ಅಲ್ಲಿಯ ಅಗ್ರಹಾರದ ಬ್ರಾಹ್ಮಣರನ್ನು ವರ್ಣಿಸುತ್ತ ವೇದ ಪಾರಾವಾರ ವಿಶೇಷ ವೈಶೇಷಿಕ ನಯ್ಯಾಯಿಕ ಲೋಕಾಯತ ಸಾಂಖ್ಯ ಬೌದ್ಧಾರ್ಹತಾನೇಕ ತರ್ಕ್ಕವ್ಯಾಕರಣ ಶಾಸ್ತ್ರ ವಿಶಾರದರು ಎಂದು ಕೀರ್ತಿಸುತ್ತದೆ.[೩] ಅಂದರೆ ವೈಯಕ್ತಿಕವಾಗಿ ಯಾವುದೇ ಧರ್ಮಕ್ಕೆ ಸೇರಿರಲಿ ಜ್ಞಾನದ ವಿಷಯಗಳಾಗಿ ಅನ್ಯಧರ್ಮತತ್ವಗಳನ್ನು ಅಧ್ಯಯನ ನಡೆಸುತ್ತಿದ್ದರೆಂದು ಇದರಿಂದ ಸ್ಪಷ್ಟವಾಗುತ್ತದೆ.

ಎಷ್ಟೋ ಬೌದ್ಧ ಕ್ಷೇತ್ರಗಳು ತಮ್ಮ ಪ್ರಭಾವ ಕಳೆದುಕೊಂಡು ಅನ್ಯಮತದಲ್ಲಿ ಲೀನವಾಗಿಯೋ ಹೇಗೋ ಅಂತೂ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳತೊಡಗಿದ್ದುದು ಒಂದು ಶಾಸನದಿಂದ ಸೂಚಿತವಾಗಿದೆ. ಬಾಗೇವಾಡಿ ತಾಲ್ಲೂಕಿನ ಭೈರವಾಡಿಗೆಯ ಶಾಸನದಲ್ಲಿ ಸ್ಪಷ್ಟವಾಗಿ 'ತಮ್ಮ ಬೌದ್ಧವಾಡಿಗೆಯ ಪಡುವಗೇರಿಯ' ಎಂದು ಬರುತ್ತದೆ. ಇದು ಶಾಸನ ರಚಿತವಾದ ಕಾಲದಲ್ಲಿ 'ಬೌದ್ಧವಾಡಿಗೆ' ಯಾಗಿದ್ದು ಬಹುಶಃ ಬೌದ್ಧ ಕೇಂದ್ರವಾಗಿದ್ದು ಕಾಲಕ್ರಮೇಣ ಭೈರವಾಡಿಗೆಯಾಗಿರಬೇಕು.[೪]

ಕೆಲವು ಶಾಸನಗಳಲ್ಲಿ ಸ್ವಧರ್ಮವನ್ನು, ಸ್ವಧರ್ಮದ ಯತಿಗಳನ್ನು ಹೊಗಳುವಾಗ ಅನ್ಯ ಧರ್ಮಗಳ ಜೊತೆ ಬೌದ್ಧ ಧರ್ಮವನ್ನು ಅವಹೇಳನಕಾರಿಯಾಗಿ ನಿಂದಿಸಿರುವುದು ಕಂಡು ಬರುತ್ತದೆ. ಜೋಡಿಬಸವನಪುರದ ಶಾಸನದಲ್ಲಿ ವಿಮಲ ಚಂದ್ರಮುನಿ ಶೈವ, ಪಾಶುಪತ, ಬೌದ್ಧ, ಕಾಪಾಲಿಕ ಮತ್ತು ಕಾಪಿಲರನ್ನು ಉದ್ದೇಶಿಸಿ ಬಹಳ ಜನ ಹಾದು ಹೋಗುವ ದ್ವಾರದ ಮೇಲೆ ಎಚ್ಚರಿಕೆಯನ್ನು ತೂಗುಹಾಕಿದ್ದಂತೆ ಉಲ್ಲೇಖವಿದೆ.[೫] ಸೂಡಿಯ ಶಾಸನವೊಂದರಲ್ಲಿ 'ಎಲೆ ಚಾರ್ವಾಕ ವರಾಕ ಮೂಕಪದ... ವೆನಿರ್ವುದ್ಧಿಯೆನಿಪ್ಪ ಬೌದ್ಧ ಬಿಡು ನೀಂ ವಾದಿ' ಎಂದಿದೆ.[೬] ಚೌಡದಾನಪುರದ ಶಾಸನವೊಂದು 'ಎಲೆಗಳ ವಾದಿಗೀದಿ ಪಡ ವೈಷ್ಣವ ಗೀಷ್ಣವ ಸೌರಗಿವುರ ಮಾಣೆಲಗಳ ಬೊಂಮಿ ಗಿಂಮಿ ನಿಗಮಾರ್ಥವನಜ'ಯದ ಯಜ್ವಿ ಗಿಜ್ವಿ ಬೇಡೆಲಗಳ ಬೌದ್ಧ ಗಿದ್ಧ ಬರಿಯಾಗಮಿ ಗೀಗಮಿ ಮಂತ್ರವಾದಿ ಸಾಕುಲಿಯದಿರೆಂದು ಬಗ್ಗಿಪುದು ಶ್ರೀ ಶಿವದೇವನ ಕಾಲ ಹೊಂದೊಡರು' ಎಂದು ಹೇಳುತ್ತದೆ.[೭] ವೀರಶೈವನಾದ ಶಿವದೇವನನ್ನು ಹೊಗಳುತ್ತ, ಅನ್ಯಮತಗಳನ್ನು ಅವಹೇಳನ ಮಾಡುವಾಗ ಬೌದ್ಧಧರ್ಮವನ್ನು, ಆರ್ಯರಿಯರನ್ನು ಹೆಸರಿಸಿ ನಿಂದಿಸಿದೆ. ತಾಳಿಕೋಟೆಯ ಶಾಸನದಲ್ಲಿ ಕೇವಲ ನಿಂದನೆಯಲ್ಲಿ ಬೌದ್ಧ ಧರ್ಮದ ಮೇಲಿನ ಆಕ್ರಮಣವನ್ನು ಶೈವಧರ್ಮ ಸೂಚಿಸುತ್ತದೆ.[೮] 'ಮುನಿದರ್ಗೆ ಹಾಳಾಹಳರುಂ ಬೌದ್ಧ ಸಮಯ ವಿಧ್ವಂಸನ ಪ್ರವೀಣರುಂ ಬಗೆಯಲು ಜಾಣರುಂ ಅನ್ಯಸಮಯಿಗಳ ಬೆನ್ನ ಬಾರನೆತ್ತುವರುಂ ಸೆಣಸುವರ ನೆತ್ತರಂ ಮಗ್ಗುಳಿಂ

---

೧. (ರೈ)ಎಕ XII ಚಿಕ್ಕನಾಯಕನ ಹಳ್ಳಿ ೨೧ ಕ್ರಿ.ಶ. ೧೧೮೧.

೨. (ರೈ)ಎಕ XII ಚಿಕ್ಕನಾಯಕನ ಹಳ್ಳಿ ೧೪ ಕ್ರಿ.ಶ. ೧೧೮೭.

೩. ಕ ಸಾ ಪ ಪ ೨೮-೧ ಕ್ರಿ.ಶ. ೧೨೩೮.

೪. ಎಸ್ ಐ ಐ XV ಬಾಗೇವಾಡಿ ೧೫೧ ಕ್ರಿ.ಶ. ೧೧೯೧.

೫. (ಮೈ) ಎಕ V ತಿ. ನರಸೀಪುರ ೩೮ ಕ್ರಿಶ. ೧೧೮೩.

೬. ಎಸ್ ಐ ಐ XV ೯೨ ಕ್ರಿ.ಶ. ೧೨ ಶ.ಮಾ.

೭. ಎಸ್ ಐಐ XVIII ರಾಣೆಬೆನ್ನೂರು ೨೪೬ ಕ್ರಿ. ಶ. ೧೨೬೩.

೮. ಎಸ್‌ಐಐ XV ಮುದ್ದೇಬಿಹಾಳ ೫೬ ಕ್ರಿ.ಶ. ೧೧೮೪.

ಕುಡಿಸುವರುಂ ಪರಸಮಯಘರಟ್ಟರುಂ'. ಚೌಡದಾನಪುರದ ಇನ್ನೊಂದು ಶಾಸನ 'ಕೇಶವ ಜಿನ ಬೌದ್ಧಾದಿಗಳೀಶನ ಕಿಂಕರರು (ಬೇ)ಜಿ ದೇವತೆಯಲ್ಲೆಂದಾ ಶಿವಮುದ್ದುಬ್ರತಿಪ ಮಹೇಶನನೊಲಿದಾಲಿಸಿದಂ ಜಗತ್ರಯವಜಿ'ಯಲು[೧] ಎಂದು ಅನ್ಯ ದೈವಗಳ ಜೊತೆ ಬುದ್ಧನೂ ಶಿವನ ಕಿಂಕರನೆಂದು ನಿಂದಿಸಿದೆ. ಹುಲಗೂರಿನ ಸಂಸ್ಕೃತ ಶಾಸನವೊಂದರಲ್ಲಿ ಬರುವ 'ಬ್ರಸ್ಮ ಪುಷ್ಕಲಕ' ಪದ ಬ್ರಾಹ್ಮಣ ಭಿಕ್ಷುವನ್ನು ಹೇಳಬಹುದು. ಇದು ಸಾಮಾನ್ಯಾರ್ಥದಲ್ಲಿ ೧೩ನೇ ಶತಮಾನದಲ್ಲಿ ಬಳಕೆಯಾಗಿರಬಹುದು. ಅಥವಾ ಬೌದ್ಧ ಧರ್ಮದಿಂದ ಸ್ವೀಕರಿಸಿದ ಪರಿಭಾಷೆಯಾಗಿರಬಹುದೆಂದು ಶಾಸನ ಸಂಪಾದಕರು ಅಭಿಪ್ರಾಯಪಟ್ಟಿದ್ದಾರೆ.[೨]

ಆದರೆ, ಮೇಲೆ ಉದಾಹರಿಸಿದ ಕೆಲವು ಶಾಸನಗಳಂತೆ ಎಲ್ಲ ಅನ್ಯ ಧರ್ಮೀಯರೂ ಬೌದ್ಧ ಧರ್ಮದ ಬಗ್ಗೆ ನಿಷ್ಠುರ ನಿಲುವನ್ನು ತಾಳಿದರೆಂದು ಭಾವಿಸಬೇಕಾಗಿಲ್ಲ. ತುಮಕೂರು ಜಿಲ್ಲೆಯ ಕೈದಾಳದ ಶಾಸನ ಶಿವ, ಬ್ರಹ್ಮ, ಸುಗತ (ಬುದ್ಧ) ಮತ್ತು ವಿಷ್ಣು ಒಬ್ಬನೇ ದೇವನಾದ ಸಕಲಾತ್ಮನ ಬೇರೆ ಬೇರೆ ಹೆಸರುಗಳೆಂದು ಉದಾತ್ತ ತತ್ವವನ್ನು ಮುಂದಿಟ್ಟಿದೆ.[೩]

ತುಳುನಾಡಿನಲ್ಲಿ ಬೌದ್ಧ ಧರ್ಮ ಹರಡಿತ್ತೆ ಇಲ್ಲವೆ ಎನ್ನುವುದು ಚರ್ಚೆಯ ವಿಷಯವಾಗಿದೆ. ಮುಖ್ಯವಾಗಿ ಕದಿರೆಯ ಮಂಜುನಾಥ ದೇವಸ್ಥಾನದಲ್ಲಿರುವ ಲೋಕೇಶ್ವರನ ಕಂಚಿನ ಪ್ರತಿಮೆಯ ಮೇಲಿರುವ ಒಂಬತ್ತು ಶ್ಲೋಕಗಳಿರುವ ಕುಂದವರ್ಮನ ಶಾಸನ[೪] ಮತ್ತು ಅಲ್ಲಿರುವ ಕೆಲವು ವಿಗ್ರಹಗಳು, ಇವಲ್ಲದೆ ಕದಿರೆಯ ಬೆಟ್ಟದಲ್ಲಿರುವ ಕೆಲವು ಗುಹೆಗಳು ಬೌದ್ಧ ಗುಹೆಗಳ ನೆನಪನ್ನು ತರುವ ವಿಷಯವೇ ಆಗಿದೆ. (ಕುಂದವರ್ಮನ ಶಾಸನದಲ್ಲಿ ಬರುವ ಬಾಲಚಂದ್ರ ಶಿಖಾಮಣಿಯು ಬೌದ್ಧ ಸನ್ಯಾಸಿ ಇರಬೇಕೆಂದೂ ಲೋಕೇಶ್ವರ ವಿಗ್ರಹ ಬೌದ್ಧ ಧರ್ಮದ ಅವಲೋಕಿತೇಶ್ವರನೆಂದೂ, ಈ ಶಾಸನದಲ್ಲಿ ಬಳಕೆಯಾಗಿರುವ ವಿಹಾರ ಶಬ್ದ ಬೌದ್ಧ ವಿಹಾರವನ್ನು ಸೂಚಿಸುವುದೆಂದೂ ಮತ್ತು ಲೋಕೇಶ್ವರ ಮೂರ್ತಿಯು ಶಿಲ್ಪ ಶಾಸ್ತ್ರದ ದೃಷ್ಟಿಯಿಂದ ಬೌದ್ಧ ಮತಕ್ಕೆ ಸೇರುವ ಲಕ್ಷಣಗಳನ್ನು ಹೊಂದಿರುವುದಲ್ಲದೆ ಮಂಜುನಾಥ ದೇವಾಲಯದಲ್ಲಿರುವ ಮಂಜುಶ್ರೀ ಅಥವಾ ಮಂಜುಘೋಷ ಮತ್ತು ಬುದ್ಧನ ಕಂಚಿನ ಪ್ರತಿಮೆಗಳನ್ನು ಇಡಲಾಗಿರುವುದನ್ನು ತಿಳಿಸಲಾಗಿದೆ.) ಬಿ. ಎ. ಸಾಲೆತೊರೆಯವರು ಆ ವಿಗ್ರಹಗಳ ಬಗ್ಗೆ ಬರೆಯುತ್ತಾ ಅವು ಬೌದ್ಧ ಎಂದು ಅಭಿಪ್ರಾಯಪಟ್ಟಿದ್ದಾರೆ.[೫] ಗೋವಿಂದ ಪೈಯವರೂ ಕದಿರೆಯಲ್ಲಿ ವಜ್ರಯಾನದ ಶಾಖೆ ಇದ್ದಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.[೬] ಆದರೆ ಪಿ. ಗುರುರಾಜ ಭಟ್ ಅವರು ಲೋಕೇಶ್ವರ ವಿಗ್ರಹವು ನಾಥಪಂಥಕ್ಕೆ ಸೇರಿದ್ದೆಂದು ಅಭಿಪ್ರಾಯಪಡುತ್ತಾರೆ. ಬೌದ್ಧ ಧರ್ಮ ದಕ್ಷಿಣ ಕನ್ನಡವನ್ನು ಪ್ರವೇಶಿಸಲು ಸಾಧ್ಯವಾಗದಿದ್ದುದು, ಶ್ರವಣಬೆಳಗೊಳ ಜೈನ ಧರ್ಮದ ಅತ್ಯಂತ ಪ್ರಬಲ ಕೇಂದ್ರವಾಗಿದ್ದುದರಿಂದ ಆ ಪ್ರದೇಶವನ್ನು ದಾಟಿಕೊಂಡು ಬರಲಾಗದಿದ್ದುದೇ ಇರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[೭] ಎಂ. ಚಿದಾನಂದ ಮೂರ್ತಿಯವರು, ಕದಿರೆಯ ಗುಹೆಗಳಿಗೆ ಬೌದ್ಧ ಗುಹೆಗಳ ಹೋಲಿಕೆ ಇರುವುದನ್ನು ಗುರುತಿಸಿ, ಮಂಜುನಾಥ ಈಗ ಹಿಂದೂಗಳಿಂದ ಪೂಜೆಗೊಳ್ಳುತ್ತಿದ್ದರೂ

---

೧. ಎಸ್ ಐಐ XVIII ರಾಣೆಬೆನ್ನೂರು ೨೪೪ ಕ್ರಿ.ಶ. ೧೨೬೨.

೨. ಕ ಇ IV ೫೪ ಕ್ರಿ. ಶ. ೧೨೪೫ ಪು. ೧೦೯.

೩. (ರೈ) ಎಕ. XII ತುಮಕೂರು. ೯ ಕ್ರಿ. ಶ. ೧೧೫೧.

೪. ತುನಾಶಾ I, ಕುಂದಾಪುರ ೨೫, ಕ್ರಿ. ಶ. ೯೬೮.

೫. B. A. Saletore : History of Tuluva. ಪು. ೩೭೭.

೬. P. Gururaja Bhat : Studies in Tuluva History and culture ನಲ್ಲಿ ಉಲ್ಲೇಖಗೊಂಡಿದೆ. ಪು. ೩೭೦.

೭. ಅದೇ. ಪುಟ ೩೭೦-೩೭೩.

ಆ ಹೆಸರು ಮೂಲತಃ ಬೌದ್ಧರದೆಂದು ಅಭಿಪ್ರಾಯಪಟ್ಟಿದ್ದಾರೆ. ಲೋಕೇಶ್ವರ ವಿಗ್ರಹವು, ಬೌದ್ಧದೇವತೆ ಅವಲೋಕಿತೇಶ್ವರನದಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[೧]

ಕೆ.ವಿ. ರಮೇಶ್‌ರವರು ಮೇಲಿನ ವಿಷಯಗಳು ವಿವಾದಗ್ರಸ್ತವಾಗಿಯೇ ಉಳಿದಿವೆ ಎಂದು ಹೇಳಿ ಬಾಲಚಂದ್ರ ಶಿಖಾಮಣಿ ಬೌದ್ಧ ಗುರುವೊಬ್ಬನ ಹೆಸರಿತ್ತೆನ್ನುವುದಕ್ಕಿಂತಲೂ ಪರಮಶಿವನ ಗುಣವಾಚಕವೆಂದುಕೊಳ್ಳುವುದೂ, ಲೋಕೇಶ್ವರನು ಅವಲೋಕಿತೇಶ್ವರನಲ್ಲ ಈಶ್ವರನೇ ಎಂದು ಗ್ರಹಿಸುವುದು ಹೆಚ್ಚು ಸಮಂಜಸವೆಂದು ಹೇಳಿ ವಿಹಾರ ಶಬ್ದವು ಕೇವಲ ಬೌದ್ಧ ದೇವಾಲಯವನ್ನಷ್ಟೇ ಅಲ್ಲದೇ ಹಿಂದೂ ದೇವಾಲಯಗಳನ್ನೂ ಸೂಚಿಸುವುದೆಂದು ಕಿಟ್ಟಲ್ ನಿಘಂಟನ್ನು ಉದಾಹರಿಸಿದ್ದಾರೆ. ಅವರು ಮುಂದುವರಿದು, ಬೌದ್ಧ ಧರ್ಮದ ಕೆಲವು ತತ್ವಗಳು ಕೆಲವು ಶೈವ ಪಂಥಗಳ ಮೇಲೆ ಪರಿಣಾಮಕಾರಿಯಾದ ಪ್ರಭಾವ ಬೀರಿದ್ದವೆಂಬುದು ವಿದ್ವಾಂಸರು ಒಪ್ಪಿಕೊಂಡಿರುವ ವಿಷಯವೆಂದು, ಮತ್ತು ಕದಿರೆಯ ೧೨ನೆಯ ಮತ್ತು ೧೪ನೆಯ ಶತಮಾನಕ್ಕೆ ಸೇರಿದ ಶಾಸನಗಳು ಆ ದೇವಾಲಯವು ನಾಥಪಂಥಕ್ಕೆ ಸೇರಿದ್ದಾಗಿತ್ತೆಂಬುದನ್ನು ಸ್ಪಷ್ಟಪಡಿಸುವ ಕಾರಣಗಳಿಂದಾಗಿ ಬೌದ್ಧಮತದ ಪ್ರತಿಮೆಗಳಂತೆ ಕಾಣುವ ಕದಿರೆಯ ಲೋಕೇಶ್ವರಮೂರ್ತಿಯು ಬೌದ್ಧ ಮತದ ಪ್ರಭಾವಕ್ಕೊಳಗಾಗಿದ್ದ ಶೈವ ಧರ್ಮದವರ ಈಶ್ವರ ಪ್ರತಿಮೆ ಎಂದು ಅಭಿಪ್ರಾಯಪಟ್ಟಿದ್ದಾರೆ.[೨] ಅಲ್ಲದೆ ಇದೇ ವಿಷಯವನ್ನು ಇನ್ನೂ ವಿವರವಾಗಿ ಚರ್ಚಿಸಿ ಕುಂದವರ್ಮನ ಕಾಲದಲ್ಲಿ ಮಾತ್ರ ಬೌದ್ಧ ಧರ್ಮ ಕದಿರೆ ಪ್ರದೇಶದಲ್ಲಿದ್ದಿತೆಂದು ವಿವರಿಸುವುದು ಅನ್ಯರ್ಥ ದಾಖಲೆಗಳ (ಪೂರ್ವದಲ್ಲಾಗಲೀ ಅನಂತರದಲ್ಲಾಗಲೀ) ಅಭಾವವಿರುವುದರಿಂದ ಕಷ್ಟಸಾಧ್ಯವೆಂದು ಅಭಿಪ್ರಾಯಪಟ್ಟಿದ್ದಾರೆ.[೩] ಈ ಅಭಿಪ್ರಾಯಗಳನ್ನು ಗಮನಿಸಿ ಜಿ.ಎಸ್.ದೀಕ್ಷಿತ್ ಅವರು ಅವು ಬೌದ್ಧ ಧರ್ಮ ಪ್ರಭಾವಿತವಾದದ್ದು ವಿವಾದಾತೀತವೆಂದು ಅಭಿಪ್ರಾಯಪಡುತ್ತಾರೆ.[೪] ಪಿ. ಗುರುರಾಜ ಭಟ್ಟರು ಮೂಡಬಿದರೆ ತಾಲ್ಲೂಕಿನ ಪುತ್ತಿಗೆ ದೇವಸ್ಥಾನದಲ್ಲಿ ದೊರೆತ ಅಕ್ಷೋಭ್ಯ ಬೋಧಿಸತ್ವನ ವಿಗ್ರಹ ಆ ಪ್ರದೇಶದಲ್ಲಿ ೧೨-೧೩ ನೆಯ ಶತಮಾನದಲ್ಲಿ ಬೌದ್ಧಧರ್ಮದ ಅಸ್ತಿತ್ವಕ್ಕೆ ಆಧಾರವಾಗಬಲ್ಲದು ಎಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಕುಂದೂರು ತಾಲ್ಲೂಕಿನ ಹಟ್ಟಿಯಂಗಡಿಯ ಲೋಕನಾಥೇಶ್ವರ ದೇವಾಲಯದಲ್ಲಿ ಇಟ್ಟಿರುವ ಜಾಂಬಾಲವು ಬೌದ್ಧಧರ್ಮದ ಶಿಲ್ಪಕ್ಕೆ ಆಧಾರವಾಗಬಲ್ಲದು ಎಂದಿದ್ದಾರೆ.[೫] ಶೃಂಗೇರಿಯ ವಿದ್ಯಾಶಂಕರ ದೇವಾಲಯದ ನವರಂಗ ಆಕಾರವು ಬೌದ್ಧರ ಚೈತ್ಯಾಲಯದ ಆಕಾರವನ್ನು ಹೋಲುತ್ತದೆ ಮತ್ತು ಕರಾವಳಿಯ ಮೂವತ್ತಕ್ಕೂ ಹೆಚ್ಚು ದೇವಾಲಯಗಳು ಗಜಪೃಷ್ಠಾಕಾರವನ್ನು ಒಳಗೊಂಡಿವೆ. ಇದು ಬೌದ್ಧರ ಚೈತ್ಯಾಲಯವನ್ನು, ವಾಸ್ತುವನ್ನು ಅನುಸರಿಸಿರುವುದು ಸೂಚಿತವಾಗಿದೆ. [೬]

---

೧. M.Chidananda Murthy : Buddhism in Karnataka, ಕ್ಯುಜೆಎಂಎಸ್ Liii - ೪ಪು. ೧೨೮-೧೨೯.

೨. ಕೆ.ವಿ. ರಮೇಶ್ : ತುಳುನಾಡಿನ ಇತಿಹಾಸ. ಪು. ೪೬:೪೭.

೩. K.V.Ramesh :A History of South Canara ಪು. ೨೯೫.

೪. G. S.Dixit : `Social and Religious conditions of Karnataka before Basava'-Sri Basaveshvara. ಪು. ೧೩೦.

೫. P.Gururaja Bhat : ಪೂರ್ವೋಕ್ತ ಪು. ೩೭೩.

೬. ತಾಳ್ತಜೆ ವಸಂತಕುಮಾರ : ಬೌದ್ಧಾಯನ- ಪು.೨೨೨ ಬೌದ್ಧಧರ್ಮದ ಪ್ರಭಾವದ ಬಗೆಗೆ ಹೆಚ್ಚಿನ ವಿವರಗಳನ್ನು ಈ ಗ್ರಂಥದ 'ಸಾಂಸ್ಕೃತಿಕ ನೆಲೆಗಳು' ಭಾಗದಲ್ಲಿ ಗಮನಿಸಬಹುದು.

ಕರ್ನಾಟಕದಲ್ಲಿ ಇದುವರೆಗೂ ದೊರೆತಿರುವ ಬೌದ್ಧಧರ್ಮದ ಕೇಂದ್ರಗಳ ದೃಷ್ಟಿಯಿಂದ ಕರ್ನಾಟಕದ ಯಾವ ಭಾಗದಲ್ಲಿ ಬೌದ್ಧ ಧರ್ಮ ಪ್ರಚಾರದಲ್ಲಿತ್ತೆಂಬುದನ್ನು ನಿರ್ಧರಿಸಲು ಎಂ. ಚಿದಾನಂದ ಮೂರ್ತಿಯವರು ಸೂಚನೆಯನ್ನು ನೀಡಿದ್ದಾರೆ. ಹಳೆಯ ಮೈಸೂರಿನ ಮಧ್ಯೆ ಮತ್ತು ದಕ್ಷಿಣ ಭಾಗಗಳಲ್ಲಿ ಜೈನಧರ್ಮವು ಶ್ರವಣಬೆಳಗೊಳವನ್ನು ತನ್ನ ಕೇಂದ್ರವನ್ನಾಗಿ ಮಾಡಿಕೊಂಡು ಆ ಕಡೆ ಬೌದ್ಧಧರ್ಮ ಹರಡದಂತೆ ನೋಡಿಕೊಂಡಂತೆ ಕಾಣುತ್ತದೆ. (ತುಮಕೂರು ಜಿಲ್ಲೆಯ ತಾಮ್ರಪಟವು ಎಲ್ಲಿ ಲಿಖಿತವಾಯಿತೋ ತಿಳಿಯದು). ಹಳೆಯ ಮೈಸೂರಿನ ಉತ್ತರ ಭಾಗದ ಅಥವಾ ಮಧ್ಯ ಕರ್ನಾಟಕದ ಚಂದ್ರವಳ್ಳಿಯಿಂದ ಪಶ್ಚಿಮಕ್ಕೆ ಬನವಾಸಿಯನ್ನು ಹಾದು ಸಮುದ್ರವನ್ನು ಸೇರುವಂತೆ ರೇಖೆಯನ್ನು ಎಳೆದರೆ ಆ ರೇಖೆಯ ಉತ್ತರಕ್ಕೆ ಬೌದ್ಧ ಧರ್ಮ ಪ್ರಚಾರದಲ್ಲಿತ್ತೆಂದು ಸ್ಥೂಲವಾಗಿ ಹೇಳಬಹುದು.[೧] ಇತ್ತೀಚೆಗೆ ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ಸಮೀಪದ ರಾಜಘಟ್ಟದಲ್ಲಿ ಬೌದ್ಧ ಚೈತ್ಯಾಲಯದ ಅವಶೇಷಗಳು ಮತ್ತು ಹರಕೆಸ್ತೂಪಗಳು ದೊರೆತಿರುವುದರಿಂದ ಎಂ. ಚಿದಾನಂದ ಮೂರ್ತಿಯವರು ಸೂಚಿಸಿರುವ ಬೌದ್ಧಧರ್ಮ ಪ್ರಸರಣದ ವ್ಯಾಪ್ತಿಯಲ್ಲಿ ಸ್ವಲ್ಪ ಬದಲಾವಣೆ ಅಗತ್ಯವಾಗುತ್ತದೆ.

ಜೈನಧರ್ಮ ತನ್ನ ಪ್ರತಿಸ್ಪರ್ಧಿಯಾಗಿ ಬೌದ್ಧಧರ್ಮವನ್ನು ಮೊದಲು ಕರ್ನಾಟಕದಲ್ಲಿ ಪರಿಗಣಿಸಿದಂತೆ ತೋರುತ್ತದ. ಅದರಲ್ಲೂ ಬ್ರಹ್ಮಶಿವ ಕವಿಯಂತೂ ತನ್ನ ಸಮಯ ಪರೀಕ್ಷೆಯಲ್ಲಿ ಬುದ್ಧನ ಹುಟ್ಟಿನಿಂದ ಹಿಡಿದು ಬೌದ್ಧ ಧರ್ಮದ ಆಹಾರ ಕ್ರಮ, ತತ್ವ ಎಲ್ಲವನ್ನೂ ಹೀಗಳೆದು ಮಾತನಾಡುತ್ತಾನೆ. ಅನೇಕ ಸಾರಿ ಬೌದ್ಧಧರ್ಮಕ್ಕಿಂತ ಬುದ್ಧನ ಮೇಲೆ ತೀರ ಆಕ್ರಮಣಕಾರಿಯಾದ ವೈಯಕ್ತಿಕ ಆರೋಪಣೆಯನ್ನು ಮಾಡಲೂ ಹಿಂದೆಗೆಯುವುದಿಲ್ಲ.

ಜನನಿಯ ಯೋನಿಯೊಳೊಗೆವುದು
ಕನಿಷ್ಟವೆನಗೆಂದು ತೇಟಿ ತೆಱದಿಂದಂ ತಾಂ
ಜನನಿಯ ಬಸಿಱಂ ಸೀಳ್ದೊಗೆ
ದನಾಪ್ತನಲ್ಲೆಂತುಮಪ್ರಬುದ್ಧಂ ಬುದ್ಧಂ[೨]

ಬುದ್ಧನು ಹುಟ್ಟಿದ ಸ್ವಲ್ಪ ಕಾಲದಲ್ಲೇ ಅವನ ತಾಯಿ ಮರಣ ಹೊಂದಿದ್ದರಿಂದ ಅದನ್ನು, ಚೇಳಿನ ಮರಿಗಳು ತಾಯಿ ಚೇಳಿನ ಬೆನ್ನನ್ನು ಸೀಳಿಕೊಂಡು ಹೊರಬರುತ್ತವೆ ಎನ್ನುವ ಬಹಳ ಪ್ರಾಚೀನ ಕಾಲದಿಂದಲೂ ಇರುವ- ಜನಪದ ನಂಬಿಕೆಯನ್ನು ಬಳಸಿಕೊಂಡು ಈ ಪದ್ಯದಲ್ಲಿ ಟೀಕೆ ಮಾಡಿದ್ದಾನೆ. ಈ ಜಾನಪದ ನಂಬಿಕೆಯನ್ನು ಅನೇಕ ಕನ್ನಡ ಕವಿಗಳು ಬಳಸಿದ್ದಾರೆ.[೩]

ನಯಸೇನ ಕವಿ ತನ್ನ ಧರ್ಮಾಮೃತದಲ್ಲಿ ಜೈನ- ಬೌದ್ಧ ಸ್ಪರ್ಧೆಯಲ್ಲಿ ಹೇಗೆ ಜೈನರ ಕೈ ಮೇಲಾಯಿತೆಂಬುದನ್ನು ಬುದ್ಧ ದಾಸಿಯೆಂಬುವಳ ಕತೆಯಲ್ಲಿ ನಿರೂಪಿಸಿದ್ದಾನೆ. ಮಧುರೆಯ ದೊರೆ ಪಾಂಡ್ಯನಿಗೆ ಇಬ್ಬರು ಹೆಂಡತಿಯರು. ಹಿರಿಯರಾಣಿ ಜೈನ ಧರ್ಮೀಯಳು, ಕಿರಿಯಳು ಬೌದ್ಧ ಧರ್ಮಾನುಯಾಯಿ. ಹಿರಿಯ ರಾಣಿ ಜಿನ ರಥೋತ್ಸವ ಮಾಡಿದಾಗ ಬುದ್ಧನ ರಥೋತ್ಸವ ಮಾಡಲು ಕಿರಿಯ ರಾಣಿ ಸಿದ್ಧತೆ ನಡೆಸಿದಳು. ಅದು ಘರ್ಷಣೆಯ ದಾರಿ ಹಿಡಿಯಿತು. ಹಿರಿಯ ರಾಣಿ ಜೈನ

---

೧. ಎಂ. ಚಿದಾನಂದ ಮೂರ್ತಿ : ಕಶಾಸಾಂಅ, ಪು. ೧೧೮.

೨. ಸ.ಪ, ೮-೧೧೭.

೩. ವಿವರಗಳಿಗೆ ನೋಡಿ- ಸಿ. ಯು. ಮಂಜುನಾಥ್: 'ಚೇಳು' ಸಾಹಿತ್ಯ ಕೃತಿಗಳಲ್ಲಿ ಮತ್ತು ಗಾದೆಗಳಲ್ಲಿ- ಅಂಕಣ ೪-೩, ಪು. ೭-೧೧. ಚೇಳು ತನ್ನ ಮರಿಗಳಿಗೆ ಸಹಜವಾಗಿಯೇ ಜನ್ಮ ನೀಡುತ್ತದೆ. ಆದರೆ ತಾಯಿ ಚೇಳು ದುರ್ಬಲವಾದ ಸ್ಥಿತಿಯಲ್ಲಿರುವ ಎಳೆ ಮರಿಗಳನ್ನು ೧೦-೧೬ ದಿನಗಳವರೆಗೆ ತನ್ನ ಬೆನ್ನಿನ ಮೇಲೆ ಕೂರಿಸಿಕೊಂಡು ಓಡಾಡುತ್ತದೆ. ಕ್ರಮೇಣ ಮರಿಗಳು ಸ್ವತಂತ್ರವಾಗಿ ಓಡಾಡುತ್ತವೆ. ಹತ್ತಾರು ಮರಿಗಳು ತಾಯಿ ಚೇಳಿನ ಬೆನ್ನಿನ ಮೇಲಿರುವುದರಿಂದ ಈ ನಂಬಿಕೆ ಬಂದಿರಬೇಕು.

ಮುನಿಗಳ ಪ್ರಭಾವದಿಂದ ವಿದ್ಯಾಧರರ ಪ್ರಭಾವ ಬಳಸಿ ಬೌದ್ಧ ಉತ್ಸವ ನೆರವೇರದಂತೆ ನೋಡಿಕೊಂಡಳೆಂಬ ವಿಷಯ ಬರುತ್ತದೆ.[೧] ಕೌಟುಂಬಿಕ ನೆಲೆಯಲ್ಲಿ ಭಿನ್ನ ಧರ್ಮಗಳ ತಾಕಲಾಟ, ಪ್ರಬಲ ಧರ್ಮದವರು ದುರ್ಬಲ ಅಲ್ಪಸಂಖ್ಯಾತರ ಧರ್ಮವನ್ನು ಹೇಗೆ ದಮನ ಮಾಡುತ್ತಿದ್ದರು ಎಂಬುದಕ್ಕೆ ಈ ಕತೆ ಸಾಕ್ಷಿಯನ್ನು ಒದಗಿಸುತ್ತದೆ.

ಧರ್ಮಾಮೃತದ ಇನ್ನೊಂದು ಕತೆಯಲ್ಲಿ ಜೈನರು ಆ ಕಾಲದಲ್ಲಿ ಬೌದ್ಧ ಧರ್ಮೀಯರನ್ನು ಹೇಗೆ ಮತಾಂತರಗೊಳಿಸಲು ಪ್ರಯತ್ನಿಸುತ್ತಿದ್ದರು ಮತ್ತು ಹೇಗೆ ಮತಾಂತರ ಹೊಂದಿದವರು ತಮ್ಮ ಹಿಂದಿನ ಮತಕ್ಕೆ ಹಿಂತಿರುಗಲು ಪ್ರಯತ್ನಿಸುತ್ತಿದ್ದರು, ಹೇಗೆ ಮತಾಂತರಗೊಳಿಸಿದವರು ಮತಾಂತರಗೊಂಡವರನ್ನು ಸ್ವಮತಕ್ಕೆ ಹೋಗಲು ಬಿಡುತ್ತಿರಲಿಲ್ಲ ಎಂಬಂತಹ ವಿವರಗಳು ಹನ್ನೊಂದನೆಯ ಅಶ್ವಾಸದಲ್ಲಿ ಬರುವ ಸಂಘಶ್ರೀಯ ಕತೆಯಲ್ಲಿ ವ್ಯಕ್ತವಾಗುತ್ತದೆ. ಆಂಧ್ರದ ವೆಂಗಿಮಂಡಲದ ಪ್ರತಿಪಾಲ ಪುರವೆಂಬ ಊರನ್ನು ಧನದ ಎಂಬ ರಾಜ ಆಳುತ್ತಿರುವಾಗ ಅವನು ಬೌದ್ಧನಾದ ಸಂಘಶ್ರೀಯ ಮಗಳಾದ ಕಮಳಶ್ರೀಯನ್ನು ಬಯಸಿ ಮದುವೆಯಾದ. ಮತ್ತು ತನ್ನ ಧರ್ಮವಾದ ಜೈನ ಧರ್ಮಕ್ಕೆ ಅವರಿಬ್ಬರನ್ನೂ ಪರಿವರ್ತಿಸಿದ. ಆದರೆ ಸ್ವಲ್ಪ ಕಾಲವಾದ ಮೇಲೆ ಸಂಘಶ್ರೀ ತನ್ನ ಬೌದ್ಧ ಗುರು ಬುದ್ಧ ಶ್ರೀ ಎಂಬುವರ ಬೋಧನೆಯಂತೆ ಮತ್ತೆ ಬೌದ್ಧನಾದನು. ಆದರೆ ಮಹಾ ರಾಜನು ಸಂಘಶ್ರೀಯನ್ನು ಜೈನ ಮತಕ್ಕೆ ಪರಿವರ್ತಿಸಲು ಪ್ರಯತ್ನಿಸುತ್ತಿರುವಾಗ ಸಂಘಶ್ರೀ ಒಂದು ಸುಳ್ಳು ಹೇಳಿದ ಕಾರಣ ಕುರುಡಾದ. ಅವನ ವಂಶದವರು ಕುರುಡರಾದರು, ಅವರ ದೇಶ ಅಂಧಕ ದೇಶವೆನಿಸಿತಂತೆ.[೨]

ಆದರೆ ಜೈನರಲ್ಲಿ ಈ ರೀತಿ ಆಕ್ರಮಣಕಾರಿ ಮನೋಭಾವ ಮಾತ್ರ ಇದ್ದಿತೆಂದು ಭಾವಿಸಬೇಕಾಗಿಲ್ಲ. ಏಕೆಂದರೆ ಬೊಪ್ಪಣ ಪಂಡಿತನ 'ನಿರ್ವಾಣ ಲಕ್ಷ್ಮೀಪತಿ ನಕ್ಷತ್ರ ಮಾಲಿಕೆ' ಎಂಬ ಪುಟ್ಟ ಕೃತಿಯಲ್ಲಿ ಎಲ್ಲ ಧರ್ಮಗಳ ಬಗ್ಗೆ ಉದಾತ್ತ ಮನೋಭಾವ ವ್ಯಕ್ತವಾಗಿರುವುದನ್ನು  ಬೇರೆ ಬೇರೆ ಕೆಲವು ಶಾಸನಗಳಲ್ಲಿ ಕಂಡಿರುವಂತೆ ಇಲ್ಲಿಯೂ ಗುರುತಿಸಬಹುದಾಗಿದೆ. 'ಪರಮೇಶಂ ಪರಮೇಷ್ಠಿ ಶಂಭುವಭವಂ ಬ್ರಹ್ಮಂ ಶಿವಂ ಶಂಕರಂ ಸ್ಮರಸಂಹಾರಕನಚ್ಯುತಂ ಪುರಹರಂ ಬುದ್ಧ ಜಿನಂ ವಿಷ್ಣು'[೩] ಎಂಬುದಾಗಿದೆ.

ಮುಂದೆ ವಚನಕಾರರು ಮತ್ತು ವೀರಶೈವ ಕವಿಗಳು ಇತರ ಧರ್ಮೀಯರಾದ ಶೈವ, ಜೈನ, ಬೌದ್ಧ ಮತ್ತು ಇನ್ನೂ ಕೆಲವರನ್ನು ಟೀಕಿಸಿದ್ದಾರೆ. ಉರಿಲಿಂಗಪೆದ್ದಿಯು ಒಂದು ವಚನದಲ್ಲಿ ಬೌದ್ಧ ದರ್ಶನವನ್ನು ಕಾಯದರ್ಶನವೆಂದು ಹೇಳಿದ್ದಾನೆ.[೪] ಅಲ್ಲಮಪ್ರಭುವಿನ ವಚನವೊಂದರಲ್ಲಿ ವಜ್ರಯಾನದ ಆರಾಧ್ಯ ದೇವತೆಯಾದ ವಜ್ರಿಯ ಉಲ್ಲೇಖವನ್ನು ಕಾಣಬಹುದು.[೫] 'ತಟ್ಟಿ ಕುಂಚ ಕಮಂಡಲುಗಳೆಂಬ ಲೋಚು ಮುಟ್ಟಿಯೆ ಹಿಡಿದು ಭೂತಕಾಯವಾಗಿ ಆತನನರಿಯದ ಬೌದ್ಧಕಾರಿಗಳು ಕೇಳಿರೋ' ಎಂದು ಮನುಮುನಿ ಗುಮ್ಮಟದೇವ ಟೀಕಿಸಿದ್ದಾನೆ.[೬] ಇದೇ ರೀತಿ ಹರಿಹರನ ಓಹಿಲಯ್ಯನ ರಗಳೆಯಲ್ಲಿ 'ಬೌದ್ಧರ್ಭಾರ್ಯಾರೆ'[೭] ಎಂದೂ ಹಾವಿನ ಹಾಳ ಕಲ್ಲಯ್ಯನ ರಗಳೆಯಲ್ಲಿ 'ಬೌದ್ಧರಂ ಸೋಲಿಸುತೆ'[೮] ಎಂಬಂತಹ ಮಾತುಗಳು ಬರುತ್ತವೆ. ಜೈನಧರ್ಮದ ಕವಿಗಳಾಗಲಿ ಅಥವಾ ವೀರಶೈವ ಕವಿಗಳಾಗಲಿ ಬೌದ್ಧ ಧರ್ಮವನ್ನು ಕೀಳಾಗಿ ಪರಿಭಾವಿಸಿ ಟೀಕಿಸಿದ್ದಾರೆ. ಆ ಎರಡೂ

---

೧. ಧರ್ಮಾಮೃತಂ. ಆಶ್ವಾಸ ೮.

೨. ಅದೇ. ಪು. ೬೪-೬೫.

೩. ಟಿ.ವಿ. ವೆಂಕಟಾಚಲ ಶಾಸ್ತ್ರೀ: '**ಬೌದ್ಧ ಧರ್ಮ ಮತ್ತು ಕನ್ನಡ ಸಾಹಿತ್ಯ**' ಹರಿತಿ ಸಿರಿ : ಕೆಬಿ ೧೪೯ ಹಸ್ತಪ್ರತಿ ಭಂಡಾರ. ಕ ಅ ಸಂಸ್ಥೆ. ಪು. ೧೨೧.

೪. ಪಿ.ವಿ. ನಾರಾಯಣ ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ. ಪುಟ ೪೭೨.

೫. ಅ.ವ.ಚಂ.ಪು. ೧೫೮.

೬. ಸ.ಪು.ವ ೪ ಪು. ೨೪೬.

೭. ಶಿ. ಮರ ಸ್ಥಲ ೩ ಪು. ೬೭.

೮. ನೂ.ಪು.ರ ಪು. ೪೫೨.

ಧರ್ಮೀಯರೂ ಬೌದ್ಧ ಧರ್ಮವನ್ನು 'ಗುರುತಿಸುವಷ್ಟಾದರೂ' ತಮ್ಮ ಪ್ರತಿಸ್ಪರ್ಧಿಗಳು ಎಂದು ಭಾವಿಸಿರುವುದೇ ಪರಮತ ವಿಡಂಬನೆಯ ಭಾಗಗಳಲ್ಲಿ ಅವರ ಉಲ್ಲೇಖ ಬರಲು ಕಾರಣವಾಗಿರಬೇಕು. ತಮ್ಮ ತಮ್ಮ ಧರ್ಮದ ಅಗ್ಗಳಿಕೆಯನ್ನು ಹೊಗಳಿಕೊಳ್ಳುವ ಭರದಲ್ಲಿ ಮೊದಲೇ ಅಲ್ಪಸಂಖ್ಯಾತರೂ ದುರ್ಬಲರೂ ಆಗಿದ್ದವರ ಮೇಲೆ ಇನ್ನೂ ಹೆಚ್ಚಿನ ಆಕ್ರಮಣ ಮಾಡಿದಂತಿದೆ.

ವೈಷ್ಣವ ಕವಿಗಳ ಸಾಹಿತ್ಯ ಕೃತಿಗಳಿಗೆ ಬಂದರೆ ನಾವು ಬೇರೊಂದು ನೆಲೆಯನ್ನು ಕಾಣುತ್ತೇವೆ. ಶಿವ ಪುರಾಣ, ಭಾಗವತ ಪ್ರಥಮ ಸ್ಕಂಧಗಳಲ್ಲಿಯೇ ಬುದ್ಧನನ್ನು ವಿಷ್ಣುವಿನ ಒಂಬತ್ತನೆಯ ಅವತಾರವಾಗಿ ಪರಿಭಾವಿಸಿರುವುದು ಕಂಡು ಬರುತ್ತದೆ. ಅಲ್ಲದೆ ಹನ್ನೆರಡನೇ ಶತಮಾನದ ಹೊಯ್ಸಳ ದೇವಸ್ಥಾನಗಳಲ್ಲಿ ಬುದ್ಧನ ವಿಗ್ರಹಗಳು (ವಿರಳವಾಗಿ ಉಷ್ಣೀಷವಿಲ್ಲದ ವಿಗ್ರಹಗಳು) ದೊರಕುತ್ತವೆ. ಬುದ್ಧನನ್ನು ಹಿಂದೂಗಳು ವಿಷ್ಣುವಿನ ಅವತಾರವೆಂದು ಭಾವಿಸಿ ತಮ್ಮ ದೇವತೆಗಳಲ್ಲಾಗಲೇ ಸೇರಿಸಿಕೊಂಡಿದ್ದರು.[೧] ಇದಕ್ಕೆ ಉದಾಹರಣೆಯಾಗಿ ಸೋಂದಾದಲ್ಲಿನ ಹುಣಸೆ ಹೊಂಡದ ವೆಂಕಟೇಶ್ವರ ದೇವಾಲಯದಲ್ಲಿನ ದಶಾವತಾರ ಶಿಲ್ಪವನ್ನು ಗಮನಿಸಬಹುದು.[೨] ಹದಿನೈದನೆಯ ಶತಮಾನದ ಕೀರ್ತನಕಾರರ ಕಾಲಕ್ಕೆ ಬುದ್ಧ ವಿಷ್ಣುವಿನ ಅವತಾರವೆಂಬುದಕ್ಕೆ ಪುರಂದರದಾಸ, ಕನಕದಾಸರ ಕೀರ್ತನೆಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. 'ಮೃಗಧರಗೊಲಿದು ಬತ್ತಲೆ ನಿಂದು ತ್ರಿಪುರವ ಬಗಿದು ಮೆರೆವ ಬೌದ್ಧಾವತಾರನು ನೀನೇ'[೩] ಎಂದು ಪುರಂದರದಾಸರ ಒಂದು ಕೀರ್ತನೆಯಲ್ಲಿದೆ. ಕನಕದಾಸರು ಒಂದು ಕೀರ್ತನೆಯಲ್ಲಿ ಮಧ್ವರನ್ನು 'ಬೌದ್ಧ ಚಾರ್ವಾಕ ಮಾಯ್ಗಳ ಜರಿದಗೆ'[೪] ಎಂದು ಕೀರ್ತಿಸಿದ್ದಾರೆ. ಆದ್ದರಿಂದ ಹರಿದಾಸರು ಬೌದ್ಧಧರ್ಮವನ್ನು ಮತ್ತು ಬುದ್ಧನನ್ನು ಸಂಪೂರ್ಣ ಸ್ವೀಕಾರ ಮಾಡಿಕೊಂಡಂತೆ ಕಾಣುವುದಿಲ್ಲ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬರುವ ಕೆಲವು ಮುಖ್ಯ ಬೌದ್ಧ ಉಲ್ಲೇಖಗಳನ್ನು ಉಳ್ಳ ಕೃತಿಗಳನ್ನು ಸಮೀಕ್ಷಿಸಿ ಟಿ. ವಿ. ವೆಂಕಟಾಚಲ ಶಾಸ್ತ್ರಿಯವರು ಅದನ್ನು ಸಾರಾಂಶ ರೂಪದಲ್ಲಿ ನೀಡಿದ್ದಾರೆ. ಅದು ಹೀಗಿದೆ.[೫] :- ೧. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸ್ವತಂತ್ರ ಬೌದ್ಧ ಕೃತಿ ಯಾವುದೂ ಇಲ್ಲ; ಬೌದ್ಧ ಸಾಹಿತ್ಯದ ಸಂಪ್ರದಾಯವೂ ಇಲ್ಲ. ೨. ದೊರೆಯುವ ಬೌದ್ಧ ಉಲ್ಲೇಖಗಳು ಅನ್ಯಮತ ಗ್ರಂಥಗಳಲ್ಲಿ ದೊರೆಯುವಂಥವು; ಆದ್ದರಿಂದ ಪಕ್ಷಪಾತದಿಂದ ಕೂಡಿದವು. ಅಲ್ಲದೆ ಅವು ಗೌಣವಾದವು, ಗಂಭೀರವಾದುವಲ್ಲ. ೩. ಹೆಚ್ಚಿನ ಉಲ್ಲೇಖಗಳು ಜುಗುಪ್ಸೆ ಹುಟ್ಟಿಸುವಂತೆ ಅವಹೇಳನಕರವಾದವು, ಸಹಾನುಭೂತಿ ಪರವಾದುವಲ್ಲ. ೪. ಸುಮಾರು ೧೦ -೧೧ನೆಯ ಶತಮಾನದಲ್ಲಿ ಬೌದ್ಧ ಧರ್ಮ ಕರ್ನಾಟಕದಲ್ಲಿ ಸ್ಥಾನ ಕಳೆದುಕೊಂಡಿತ್ತು ಎನ್ನುವುದನ್ನು ಶಾಸನಗಳ ಹಾಗೆಯೇ ಸಾಹಿತ್ಯ ಕೃತಿಗಳೂ ಸಮರ್ಥಿಸುತ್ತವೆ. ೫. ಮೊದಲು ಜೈನಧರ್ಮವೂ ಬಳಿಕ ವೀರಶೈವವೂ ಅದರ ಪ್ರತಿಕಕ್ಷಿಗಳಾಗಿ ಅದು ತಲೆಯೆತ್ತದಂತೆ ಮಾಡಿದವು. ೬. ಅನ್ಯಮತಗಳವರು ತಮ್ಮ ಅಗ್ಗಳಿಕೆಯ

---

೧. ಎಂ. ಚಿದಾನಂದ ಮೂರ್ತಿ: ಪೂರ್ವೋಕ್ತ ಪು. ೧೧೬.

೨. ಗಣಪತಿ ಗೌಡ. ಎಸ್. 'ಉತ್ತರ ಕನ್ನಡ ಜಿಲ್ಲೆಯಲ್ಲಿ ಬೌದ್ಧ ಧರ್ಮ' ಇ.ದ ಸಂ.೨೦ ಪು. ೬೫-೬೮.

೩. ಟಿ.ವಿ. ವೆಂಕಟಾಚಲ ಶಾಸ್ತ್ರೀ : ಪೂರ್ವೋಕ್ತ : ಹರಿತಿಸಿರಿ (ಸಂ) ಲಕ್ಷ್ಮಣ್ ತೆಲಗಾವಿ ಪು. ೧೨೬.

೪. ಅದೇ .

೫. ಅದೇ .

ಸಲುವಾಗಿ ಬೌದ್ಧ ಧರ್ಮ ಹಾಗೂ ಅದರ ಸಂಸ್ಥಾಪಕನ ಹೆಸರನ್ನು ಎಳೆದು ತಂದಿರುವುದಲ್ಲದೆ, ಒಂದು ಜೀವಂತ ಪ್ರಭಾವವಾಗಿದ್ದ ಸ್ಥಿತಿಯಲ್ಲಿ ಅದನ್ನು ಎದುರಿಸಿದಂತೆ ತೋರುವುದಿಲ್ಲ. ೬. ಜೈನ ಬೌದ್ಧಗಳಿಗೆ ವ್ಯತ್ಯಾಸ ಮಾಡದ ಗೊಂದಲ ಅಲ್ಲಲ್ಲಿದೆ.

ಕೊಂಡಗುಳಿಯ ಶಾಸನಗಳು ಅನೇಕ ದೃಷ್ಟಿಗಳಿಂದ ಮಹತ್ವವಾದವು ಎಂಬುದು ಪ್ರಸಿದ್ಧವಾಗಿದೆ. ಆದರೆ ಅವುಗಳಲ್ಲಿ ಒಂದು ಶಾಸನ ಕರ್ನಾಟಕದ ಮಧ್ಯಕಾಲೀನ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅತ್ಯಂತ ಉಪಯುಕ್ತ ಮಾಹಿತಿಯನ್ನು ನೀಡುವುದನ್ನು ಇಲ್ಲಿ ಗಮನಿಸಬಹುದು. ಕೊಂಡಗುಳಿ ಅಗ್ರಹಾರದಲ್ಲಿ ಬೋಧನೆಗೆ ನಿಗದಿ ಪಡಿಸಿದ ಅನೇಕ ವಿಷಯಗಳಲ್ಲಿ 'ಮತ್ತೆ ವ್ಯಕ್ಷರ ವ್ಯಾಕರಣ ರೂಪಾವತಾರಮಿಂತಿನಿತುಂ ಪೇರ್ವುವಾ(ಬಾ)ಲ ಶಿಕ್ಷೆಯಂ ಮಾರ್ಪ ಉಪಾಧ್ಯಾಯರ್ಗೆ ಪೊಂಸವೃದ್ಧಿಯಲೆ ಗ್ರಾಸಂ ನಡೆವಂತಾಗಿ.[೧] ಅಕ್ಷರಾಭ್ಯಾಸ ಮತ್ತು ವ್ಯಾಕರಣಗಳ ಜೊತೆ ರೂಪಾವತಾರವೆಂಬ ಪಠ್ಯ ಪುಸ್ತಕವನ್ನು ಗೊತ್ತುಪಡಿಸಿದ್ದಾರೆ. ಬಹಳ ಆಸಕ್ತಿದಾಯಕ ವಿಷಯವೆಂದರೆ ಆ ವ್ಯಾಕರಣ ಗ್ರಂಥವನ್ನು ರಚಿಸಿದ ವ್ಯಕ್ತಿ ಧರ್ಮಕೀರ್ತಿ ಒಬ್ಬ ಬೌದ್ಧಭಿಕ್ಷು. ಅವನು ತನ್ನ ಕೃತಿಯ ಆರಂಭದಲ್ಲಿಯೇ ಆ ಕೃತಿ ಚಿಕ್ಕವಯಸ್ಸಿನವರಿಗೆ ಎಂದು ಸ್ಪಷ್ಟಪಡಿಸಿದ್ದಾನೆ.[೨] ಬೌದ್ಧರನ್ನೂ, ಬೌದ್ಧಧರ್ಮವನ್ನೂ ಕಡೆಗಣ್ಣಿನಿಂದ ನೋಡುತ್ತಿದ್ದಂತಹ ಕಾಲದ ಹಿನ್ನೆಲೆಯಲ್ಲಿ ಅಗ್ರಹಾರದಲ್ಲಿ ಬೌದ್ಧಭಿಕ್ಷುವಿನಿಂದ ರಚಿತವಾದ ಗ್ರಂಥ ಪಠ್ಯಪುಸ್ತಕವಾಗಿರುವುದು ಮತ್ತು ಅದು ಪಠ್ಯಪುಸ್ತಕವಾಗುವಷ್ಟು ಗಮನಾರ್ಹ ಕೃತಿಯಾಗಿರುವುದು ವಿಶೇಷವಾಗಿದೆ. ವಿದ್ಯೆ ಆ ಕಾಲದಲ್ಲಿ ಒಂದು ಮಟ್ಟದಲ್ಲಾದರೂ ಮತ ಧರ್ಮದ ಗಡಿಯನ್ನು ದಾಟಿ ನಡೆಯುತ್ತಿತ್ತು ಎಂಬುದನ್ನು ಆಗಲೇ ಒಂದೆರಡು ಶಾಸನಗಳಲ್ಲಿ ಗಮನಿಸಿದ್ದೇವೆ. ಕಾಳಾಮುಖಶೈವದ ಗುರುವೊಬ್ಬ ಎಷ್ಟು ದೊಡ್ಡ ವಿದ್ವಾಂಸನೆಂದರೆ ಸುಗತ ಶಾಸ್ತ್ರವನ್ನು (ಬೌದ್ಧ ಧಾರ್ಮಿಕ ಗ್ರಂಥಗಳು) ಸುಗತರಿಗೇ (ಬೌದ್ಧರಿಗೆ) ಬೋಧಿಸುವಷ್ಟು ಸಮರ್ಥನಾಗಿದ್ದನಂತೆ.[೩] ವಿದ್ವಾಂಸರು ಸ್ವಧರ್ಮದ ಗ್ರಂಥಗಳನ್ನಲ್ಲದೆ ಅನ್ಯಧರ್ಮದ ಪಾಂಡಿತ್ಯವನ್ನು ಪಡೆಯುತ್ತಿದ್ದರೆಂದು ಭಾವಿಸಬಹುದು. ಅದು ಜ್ಞಾನಾಕಾಂಕ್ಷಿಗಳಾಗಿಯೂ ಇರಬಹುದು ಅಥವಾ ತಮ್ಮ ಬಳಿ ಬರುವ ಆ ವಿಷಯದ ಆಸಕ್ತ ವಿದ್ಯಾರ್ಥಿಗಳಿಗೆ ಬೋಧಿಸಲಾದರೂ ಇರಬಹುದು. ಅಲ್ಲದೆ ಆ ಕಾಲದ ಕೆಲವು ಶಾಸನಗಳಲ್ಲಿ ಶೈವ ಮತ್ತು ಜೈನ ವಿದ್ವಾಂಸರು ಬೌದ್ಧ ವಿದ್ವಾಂಸರನ್ನು ಸೋಲಿಸಿದ ಉಲ್ಲೇಖಗಳು ದೊರೆಯುತ್ತವೆ.[೪] ಆದ್ದರಿಂದ ಈ ಕಾರಣಕ್ಕಾಗಿಯೂ ಅನ್ಯಮತ ಗ್ರಂಥಗಳ ಆಳವಾದ ಅಭ್ಯಾಸವನ್ನು ಮಾಡುತ್ತಿದ್ದರೆಂದು ಭಾವಿಸಬಹುದು.

ಕರ್ನಾಟಕದಲ್ಲಿ ಬೌದ್ಧಧರ್ಮ ತನ್ನ ಅಸ್ತಿತ್ವವನ್ನು ಕ್ರಮೇಣ ಕಳೆದುಕೊಳ್ಳುತ್ತಾ ಹೋಗಲು ಕಾರಣಗಳೇನಿರಬಹುದು ಎಂಬ ವಿಷಯದಲ್ಲಿ ಸಾಕಷ್ಟು ಚರ್ಚೆಯನ್ನು ವಿದ್ವಾಂಸರು ಮಾಡಿದ್ದಾರೆ. ಬೌದ್ಧ ಧರ್ಮದ ಕ್ಷೀಣಿಸುವಿಕೆಗೆ ಆಂತರಿಕ ಮತ್ತು ಬಾಹ್ಯ ಎಂದು ಎರಡು ಕಾರಣಗಳನ್ನು ಗುರುತಿಸಬಹುದು. ಆ ಧರ್ಮದ ಒಳಗಡೆ ಉಂಟಾದ ಪಂಥ ಭೇದಗಳು ಅದರ ಅಖಂಡತೆಗೆ ಕ್ರಮೇಣ ಒಡಕು ಮಾಡಿ ಜನಪ್ರಿಯತೆಯನ್ನು ಕಡಮೆ ಮಾಡಿರಬೇಕು. ಆ ಜನಪ್ರಿಯತೆಯನ್ನು ಉಳಿಸಿಕೊಳ್ಳಲೊ ಎಂಬಂತೆ ಅದು ಹಿಡಿದ ತಾಂತ್ರಿಕ ಪಥ ಜನರಿಂದ ಅದನ್ನು ಇನ್ನೂ ದೂರ ಮಾಡಿರಬೇಕು. ಕಾಲ ಕಾಲಕ್ಕೆ ಬೆಳೆದ ಅನ್ಯ ಧರ್ಮಗಳ ಒತ್ತಡವನ್ನು ತಡೆದುಕೊಂಡು ತನ್ನ ಪ್ರಭಾವವನ್ನು ಅದು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಪಿ.ಬಿ. ದೇಸಾಯಿ

---

೧. ಎಇ. XXXVII - ೩೪. ಕ್ರಿ. ಶ. ೧೧೩೨. ಪು. ೧೮೯.

೨. ಅದೇ. ಪುಟ ೧೯೦ (ಸಂ). ಕೆ.ವಿ. ರಮೇಶ್.

೩. M. Chidananda Murthy, Buddhism in Karnataka : ಕ್ಯುಜೆಎಂಎಸ್ LIII- ೩-೪ ಪು. ೧೨೬

೪. ಎಸ್ ಐ ಐ XI (i) ೧೫೭.

ಅವರು ಅಭಿಪ್ರಾಯ ಪಡುವಂತೆ, ಬೌದ್ಧಧರ್ಮ ಎಂದೂ ಜನಪ್ರಿಯತೆಯನ್ನು ಗಳಿಸಿಕೊಳ್ಳಲಿಲ್ಲ. ಉತ್ತರ ಭಾರತದಂತೆ ವ್ಯಾಪಕವಾಗಿ ಹರಡದೆ ಇಲ್ಲಿ ಅದು ನಿಯಮಿತ ಪ್ರಭಾವವನ್ನು ಜನರ ಮೇಲೆ ಬೀರಲು ಸಾಧ್ಯವಾಯಿತು. ಹೀಗಾಗಿ ಅದು ಸಾಧಾರಣ ಸಂಖ್ಯೆಯ ಜನರನ್ನು ಗಳಿಸಲು ಸಾಧ್ಯವಾಯಿತು.[೧] ಆರ್.ಸಿ.ಮಜುಂದಾರರು- ಬೌದ್ಧ ಧರ್ಮ ಕ್ಷೀಣಿಸಲು ರಾಜಾಶ್ರಯ ತಪ್ಪಿದ್ದು, ವಿದೇಶಿಯರ ಆಕ್ರಮಣಗಳು ಇವುಗಳ ಜೊತೆ ಅನ್ಯ ಧರ್ಮಗಳ ಆಕ್ರಮಣ ಮತ್ತು ಆ ಧರ್ಮದಲ್ಲಿ ಉಂಟಾದ ಧಾರ್ಮಿಕ ಸ್ಥಗಿತತೆ ಮುಂತಾದವು ಕಾರಣಗಳೆಂದಿದ್ದಾರೆ.[೨] ಬೌದ್ಧ ಧರ್ಮೀಯರ ವಿಹಾರಗಳಲ್ಲಿ ಕಂಡು ಬಂದ ನೈತಿಕ ಪತನವನ್ನು ಗಮನಿಸಿದಾಗ, ಯಾರು ವೈದಿಕ ಸಂಸ್ಥೆಗಳ ವಿರುದ್ಧ ಬೆರಳೆತ್ತಿ ನೈತಿಕ ಅಧಃಪತನವನ್ನು ತೋರಿಸಿದ್ದರೋ ಅದೇ ಅಪರಾಧಗಳು ಇನ್ನೂ ಕೀಳ್ಮಟ್ಟದಲ್ಲಿ ಇಲ್ಲಿ ಉಂಟಾದವು ಎಂದು ದೀಪಕ್ ಕುಮಾರ್ ಬರುವ ಹೇಳಿದ್ದಾರೆ.[೩]

ಆರ್. ಎಸ್. ನಂದಿಯವರು ಹೇಳುವಂತೆ ಬೌದ್ಧ ವಿಹಾರಗಳು ಬಂಡೆಯಲ್ಲಿ ಕೊರೆದು ಮಾಡಿದವು ಮತ್ತು ಗ್ರಾಮ ಅಥವಾ ಊರಿನಲ್ಲಿ ಸಮತಟ್ಟಾದ ಪ್ರದೇಶಗಳಲ್ಲಿ ನಿರ್ಮಿಸಿದವು. ಇವೆರಡೂ ರೀತಿಯವು ೭-ಟನೆಯ ಶತಮಾನದವರೆಗೆ ನಿರ್ಮಾಣಗೊಂಡವು. ಬಹು ಜನಪ್ರಿಯತೆಯನ್ನು ಮುಂದೆ ಅಷ್ಟಾಗಿ ಇವು ಕಂಡು ಬರುವುದಿಲ್ಲ. ಮುಂದೆ ಜನರ ಬೆಂಬಲವನ್ನು ಅವು ಕಳೆದುಕೊಂಡವು. ಶಾತವಾಹನ, ಕ್ಷಾತ್ರಪ, ಅಭೀರ ಮತ್ತು ವಾಕಾಟಕರು ಈ ನಿರ್ಮಾಣಗಳನ್ನು ಮಾಡಿಸಿಕೊಡುತ್ತಿದ್ದರು. ಇವರೂ ಕ್ರಮೇಣ ನಿಲ್ಲಿಸಿದಂತಿದೆ. ವೀರಶೈವದ ಉಗಮದನಂತರ ಮುಂದೆ ಬೌದ್ಧ ವಿಹಾರಗಳು ದಖನ್ನಿನಲ್ಲಿ ಶಾಶ್ವತವಾಗಿ ಕೊನೆಯಾದವು.[೪] ಎ.ಎಸ್. ಆಲ್ಟೇಕರ್ ಅವರು, ಶಿಸ್ತಿನ ಕೊರತೆ ಮತ್ತು ಯೋಗ್ಯರಲ್ಲದ ಜನರಿಗೆ ವಿಹಾರಗಳಿಗೆ ಪ್ರವೇಶಾವಕಾಶ ನೀಡಿದ್ದು ಮತ್ತು ನೈತಿಕ ಮಟ್ಟ ಕುಸಿದದ್ದು ಇವು ಬೌದ್ಧ ಧರ್ಮದ ಅಧಃಪತನವನ್ನು ವೇಗಗೊಳಿಸಿದವು ಎಂದಿದ್ದಾರೆ.[೫] ಹತ್ತನೆಯ ಶತಮಾನದ ಹೊತ್ತಿಗೆ ಬೌದ್ಧ ಧರ್ಮದಲ್ಲಿ ಗಮನಾರ್ಹವಾದಷ್ಟು ಆಹಾರ -ಪಾನೀಯಗಳ ವಿಷಯದಲ್ಲಿ ಸಡಿಲತೆ ಮತ್ತು ಬದುಕುವ ರೀತಿಯಲ್ಲಿ ಮೃದುತೆ ಇವುಗಳು ಮೈಗೂಡಿದ್ದವು. ಬಹುಶಃ ಇವು ಬೌದ್ಧ ಧರ್ಮದ ನಿರ್ಗಮನಕ್ಕೆ ಕಾರಣವಾಗಿರುವ ಸಾಧ್ಯತೆ ಇದೆ ಎಂದು ಕೆ.ಕೆ. ಹಂದಿಕಿ ಅಭಿಪ್ರಾಯ ಪಡುತ್ತಾರೆ.[೬] ಬೌದ್ಧ ಧರ್ಮ ಕ್ಷೀಣಿಸುತ್ತಿದ್ದುದು ಅಷ್ಟೋ ಇಷ್ಟೋ ಅಲ್ಲಲ್ಲಿ ಉಳಿದಿದ್ದನ್ನು ಗಮನಿಸಿದರೆ, ಆ ಕಾಲದ ರಾಜರ ಸರ್ವಧರ್ಮ ಸಹಿಷ್ಣುತೆಯ ನಿಯಮ ಪಾಲನೆ ಆ ಧರ್ಮ ಉಳಿದು ಬರಲು ಕಾರಣವಾಗಿರಬೇಕು. ಬಳ್ಳಿಗಾವೆ ಪ್ರಖ್ಯಾತ ಜೈನ ಕೇಂದ್ರವಾದರೂ ಅದಕ್ಕಿಂತಲೂ ಹೆಚ್ಚಾಗಿ ಶೈವ ಕೇಂದ್ರವಾಗಿತ್ತು. ಆದರೆ ಬೇರೆ ಸಮಯಗಳಲ್ಲಿ ನಿರ್ದೇಶಿಸುವಾಗ ಪಂಚ ಮಠಗಳ ಉಲ್ಲೇಖ ಬರುತ್ತದೆ[೭] ಎಂದು ಬಿ.ಆರ್. ಗೋಪಾಲ್ ಅವರು ಅಭಿಪ್ರಾಯ ಪಡುತ್ತಾರೆ.

ಕರ್ನಾಟಕದ ಪ್ರಮುಖ ಧರ್ಮಗಳೆಲ್ಲವೂ ಕನ್ನಡ ಸಾಹಿತ್ಯಕ್ಕೆ ತಮ್ಮ ಸಾಹಿತ್ಯದ ಕಾಣಿಕೆಗಳನ್ನು ನೀಡಿವೆ. ಇದೇ ಪ್ರಶ್ನೆಯನ್ನು ನಾವು ಬೌದ್ಧ ಧರ್ಮದ ಬಗ್ಗೆ ಹಾಕಿದರೆ ಅಂತಹ ಉತ್ಸಾಹದಾಯಕವಾದ ಉತ್ತರವೇನೂ ಬರಲು ಸಾಧ್ಯವಿದ್ದಂತಿಲ್ಲ.

---

೧. P.B.Desai : Basaveshvara and his times. ಪು. ೧೧೧.

೨. R.C.Majumdar : Ancient India. ಪು. ೪೩೮-೨೯.

೩. Deepak Kumar Baruva : Viharas in Ancient India. ಪು. ೨೨೧

೪. R.N.Nandi : Religious and Cults in Deccan ಪು. ೧೧೦-೧೧.

೫. A. S.Altekar : The Position of Woman in Hindu Civilization ಪು. ೨೬೪.

೬. K.K.Handiqui : Yashastilaka and Indian Culture ಪು. ೩೭೩.

೭. B.R.Gopal : The Chalukyas and Kalachuris ಪು. ೪೧೪.

ಟಿ. ವಿ. ವೆಂಕಟಾಚಲ ಶಾಸ್ತ್ರಿಯವರು 'ಕನ್ನಡದಲ್ಲಿ ಸ್ವತಂತ್ರ ಬೌದ್ಧ ಕೃತಿಯೂ ಇಲ್ಲ, ಬೌದ್ಧ ಸಾಹಿತ್ಯದ ಸಂಪ್ರದಾಯವೂ ಇಲ್ಲ' ಎಂದು ಹೇಳಿರುವುದನ್ನು ಆಗಲೇ ಗಮನಿಸಿದ್ದೇವೆ. ಟಿ.ಎಸ್.ವೆಂಕಣ್ಣಯ್ಯನವರು ತಮ್ಮ ಒಂದು ಲೇಖನದಲ್ಲಿ ಕನ್ನಡದಲ್ಲಿ ಬೌದ್ಧರು ಬರೆದಿದ್ದಾರೆಯೇ ಎಂಬ ಪ್ರಶ್ನೆ ಹಾಕಿಕೊಂಡು 'ಬೌದ್ಧರೇ ಕನ್ನಡ ಭಾಷೆಗೆ ಆದಿಕವಿಗಳು; ಸುಮಾರು ಕ್ರಿ.ಶ.ದ ಆದಿಭಾಗದಿಂದಲೂ ಕನ್ನಡ ಭಾಷೆಯಲ್ಲಿ ಗ್ರಂಥ ರಚನೆಯಾಗುತ್ತಿದ್ದಿರಬೇಕು. ಬೌದ್ಧ ಮತದ ನಾಶದೊಂದಿಗೆ ಬೌದ್ಧ ಗ್ರಂಥಗಳೂ ನಾಶವಾದವು'[೧] ಎಂದು ಅಭಿಪ್ರಾಯವನ್ನೇನೋ ಪಟ್ಟಿದ್ದಾರೆ. ಆದರೆ ಈ ಅಭಿಪ್ರಾಯಕ್ಕೆ ಅನುಕೂಲವಾಗಬಹುದಾದ ಬೌದ್ಧ ಕೃತಿಯೊಂದೂ ದೊರೆಯದೆ ಇರುವುದರಿಂದ ಆ ಅಭಿಪ್ರಾಯ ಊಹೆಯ ಮಟ್ಟದಲ್ಲಿಯೇ ಇದೆ.

ಕರ್ನಾಟಕದಲ್ಲಿ ಬೌದ್ಧ ಧರ್ಮದ, ಸದ್ಯದಲ್ಲಿ ದೊರೆತಿರುವ ತೀರ ಕೊನೆಯ ಉಲ್ಲೇಖವೆಂದರೆ ಕ್ರಿ. ಶ. ೧೫೩೩ರ ಒಂದು ಸಂಸ್ಕೃತ ತಾಮ್ರ ಪಟ.[೨] ಅದರಲ್ಲಿ ವಿವಿಧ ಜಾತಿಗೆ ಸೇರಿದ ಒಂಬತ್ತು ಜನ ಬ್ರಾಹ್ಮಣರಿಗೆ ದತ್ತಿಗಳನ್ನು ನೀಡಿ ಆ ಗ್ರಾಮಕ್ಕೆ 'ತ್ರೈಲಿಂಗಪಾಲಕ' ವೆಂದು ಹೆಸರು ನೀಡಿ ಅದರ ಮೇರೆಗಳನ್ನು ಹೇಳುವಾಗ ಆಗ್ನೇಯ ದಿಕ್ಕಿನಲ್ಲಿ 'ಬೌದ್ಧಾವಾಸಾಮಹಾಪುರೀ ಕಲವತೀ' ಇದ್ದಿತೆಂದು ಹೇಳಲಾಗಿದೆ. ತೀರಾ ಇತ್ತೀಚಿನವರೆಗೆ ಎಲ್ಲ ವಿದ್ವಾಂಸರು ಬಹುಶಃ ಬಿ.ಎಲ್.ರೈಸ್ ರವರ ಅಭಿಪ್ರಾಯವನ್ನು ಅನುಸರಿಸಿ ಅದು ಆಂಧ್ರ ಪ್ರದೇಶದಲ್ಲಿರಬಹುದೆಂದು ಭಾವಿಸಿ ಆ ಸ್ಥಳ ಬೌದ್ಧ ಧರ್ಮದ ಕೇವಲ ಈಚಿನ ಉಲ್ಲೇಖ ಮಾತ್ರ ಎಂದು ಭಾವಿಸಿದ್ದರು. ಎಂ. ಚಿದಾನಂದ ಮೂರ್ತಿಯವರು, ತಾಮ್ರಪಟದಲ್ಲಿ ವ್ಯಕ್ತವಾಗಿರುವ ವ್ಯಕ್ತಿನಾಮಗಳು ಮತ್ತು ಸ್ಥಳನಾಮಗಳನ್ನು ಸೂಕ್ಷ್ಮವಾಗಿ ಗಮನಿಸಿ ವ್ಯಾಪಕ ಕ್ಷೇತ್ರಕಾರ್ಯವನ್ನು ಕೈಗೊಂಡು ಆ ಶಾಸನದಲ್ಲಿ ಸೂಚಿತವಾದ ಕಲಾವತೀನಗರ ಬೆಂಗಳೂರು ಜಿಲ್ಲೆ ಮಾಗಡಿ ತಾಲೂಕಿನಲ್ಲಿರುವ ಕಲ್ಯವೇ ಎಂದು ಅಭಿಜ್ಞೆ ಮಾಡಿದ್ದಾರೆ.[೩] ಅಲ್ಲದೆ ಶಾಸನೋಕ್ತವಾದ ಎಲ್ಲ ಜಾಗಗಳು ಅಲ್ಲೇ ಆಸುಪಾಸಿನಲ್ಲಿವೆ. ನಳಿನಾವತಿ ಬಹುಶಃ ಈಗಿನ ತಾವರೆಕೆರೆ(ನಳಿನ = ತಾವರೆ). ಇದು ಮಾಗಡಿಗೆ ವಾಯವ್ಯದಲ್ಲಿ, ತಿಪ್ಪಸಂದ್ರ ಹೋಬಳಿಯಲ್ಲಿದೆ. ಭೈರವಾದ್ರಿಯು ಈಗಿನ ಭೈರವ ದುರ್ಗ ಎಂಬ ಗುಡ್ಡ (ಈ ಗುಡ್ಡದ ಬದಿಯಲ್ಲಿ ಭೈರಾಪುರವಿದೆ). ಈ ಗುಡ್ಡವು ತಾವರೆಕೆರೆಗೆ ಪೂರ್ವದಲ್ಲಿದೆ. ಭೈರವ ದುರ್ಗದ ದಕ್ಷಿಣಕ್ಕೆ ಶ್ರೀನಿವಾಸಪುರವಿದೆ. ತಾಮ್ರಪಟದಲ್ಲಿರುವಂತೆಯೇ ಶ್ರೀನಿವಾಸಪುರದ ಪೂರ್ವಕ್ಕೆ ಹೂಜಿಗಲ್ಲು ಎಂಬ ಗ್ರಾಮವೂ ಆಗ್ನೇಯಕ್ಕೆ ಕಲ್ಯ ಎಂಬ ಗ್ರಾಮವೂ ಇದೆ. ಕಲಾವತಿಯು ಈಗಿನ ಕಲ್ಯ ಎಂಬಲ್ಲಿ ಅನುಮಾನವಿಲ್ಲ. ತಾವರೆಕೆರೆಯನ್ನು 'ನಳಿನಾವತಿ' ಎಂದು ಸಂಸ್ಕೃತೀಕರಿಸಿರುವಂತೆ ಕಲ್ಯವನ್ನು 'ಕಲಾವತಿ' ಎಂದು ಸಂಸ್ಕೃತೀಕರಿಸಲಾಗಿದೆ. ಕಲ್ಯದ ಜನಪದ ಹಾಡುಗಳು ಆ ಊರನ್ನು ಕಲಾವತೀ ನಗರವೆಂದು ನಿರ್ದೇಶಿಸುತ್ತವೆ. ಶಾಸನದಲ್ಲಿ ಉಲ್ಲೇಖಿತ ಹರಿಣಾಟವಿ ಕಲ್ಯದ ಸಮೀಪದಲ್ಲೇ ಇರುವ ಸಾಧ್ಯತೆ ಕಂಡುಬರುತ್ತದೆ. ಎಂ. ಚಿದಾನಂದ ಮೂರ್ತಿಯವರು ಸ್ಥಳಾಭಿಜ್ಞೆ ಮಾಡಿದ ಮೇಲೆ ಕಲ್ಯ ಒಂದು ಬೌದ್ಧ ಕೇಂದ್ರವಾಗಿದ್ದಿರಬಹುದೆ ಎಂಬ ಕಡೆ ಗಮನ ಹರಿಸಿದ್ದಾರೆ. ಆದರೆ ಕಲ್ಯದ ಸುತ್ತ ಮುತ್ತಣ ಪರಿಸರವನ್ನು ಎಚ್ಚರದಿಂದ ಶೋಧಿಸಿದರೂ ಇಲ್ಲಿಯವರೆಗೆ ಬೌದ್ಧ ಎಂದು ಖಚಿತವಾಗಿ ನಿರ್ದೇಶಿಸಬಹುದಾದ ಯಾವೊಂದು ಕುರುಹೂ ದೊರಕಿಲ್ಲ. ಹರಿಣಾಟವಿ ಎಂಬ ಶಾಸನದ ಮಾತು ಬೌದ್ಧರಿಗೆ ಪ್ರಿಯವಾದ 'ಮೃಗದಾಮ' ವನ್ನು ನೆನಪಿಗೆ ತರುತ್ತದೆ. ಪ್ರಮುಖ ಬೌದ್ಧ ಕೇಂದ್ರಗಳ ಸಮೀಪದಲ್ಲಿ ಅಂಥ ಮೃಗದಾಮಗಳಿದ್ದುದನ್ನು ಇತಿಹಾಸ ಈಗಾಗಲೇ ಗುರುತಿಸಿದೆ. ಬಳ್ಳಿಗಾವೆ ಶಾಸನದಲ್ಲಿ

---

೧. ಟಿ.ಎಸ್. ವೆಂಕಣ್ಣಯ್ಯ : ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು ಪು. ೧೮.

೨. (ರೈ)ಎಕ XII ತಿಪಟೂರು I ಕ್ರಿ.ಶ. ೧೫೩೩.

೩. ಎಂ. ಚಿದಾನಂದ ಮೂರ್ತಿ : ಬೌದ್ಧ ಕೇಂದ್ರ 'ಕಲಾವತಿ' ನಗರದ ಅಭಿಜ್ಞೆ -ಈಗಿನ ಕಲ್ಯ ಜೊತೆ. ಸಾಧನೆ. ೧೫, ೧೬, ೩-೪;೧-೨ ಸಂಯುಕ್ತ ಸಂಚಿಕೆ ಪು. ೧೨-೧೯.

ಬರುವ 'ಪುಲ್ಲೆಯ ಬಯಲ್' ಎಂಬುದು ಮೃಗದಾಮಕ್ಕೆ ಸಮಾನವಾದ ಕನ್ನಡ ರೂಪವೆಂದು ಸಿ. ಹಯವದನರಾಯರು ಮೊದಲೇ ಗುರುತಿಸಿದ್ದರು. ಈಗಿನ ಕಲ್ಯದ ಸಮೀಪದ ಶಾಸನ ನಿರ್ದೇಶಿತ ಹರಿಣಾಟವಿ ಮೃಗದಾಮವೇ ಆಗಿದ್ದಲ್ಲಿ ಅದು ಬೌದ್ಧ ಧರ್ಮದ ಸ್ಪಷ್ಟ ಕುರುಹಾಗುತ್ತದೆ. ಕಲ್ಯದಲ್ಲಿ ಜೈನರು ವಾಸವಾಗಿದ್ದರೆಂದು ಹೇಳುವುದಕ್ಕೆ ಸಾಕಷ್ಟು ಶಾಸನ ಮತ್ತು ಇತರ ಆಧಾರಗಳು ಕಂಡುಬರುತ್ತವೆ. ಶಾಸನ ಬರೆಯುವಾತ ಇವರನ್ನೇ ಬೌದ್ಧರೆಂದು ಭಾವಿಸಿ ಹೇಳಿದನೊ ಎಂಬ ಅನುಮಾನವನ್ನು ವ್ಯಕ್ತಗೊಳಿಸಿದ್ದಾರೆ. ವಾಸ್ತವವಾಗಿ ಅದು ಬೌದ್ಧ ಕೇಂದ್ರವೇ ಆಗಿದ್ದರೆ ಕರ್ನಾಟಕದ ಅತಿ ಪ್ರಮುಖ ಬೌದ್ಧ ಕೇಂದ್ರಗಳಲ್ಲಿ ಒಂದಾಗುವುದರ ಜೊತೆಗೆ ಭಾರತದಲ್ಲೇ ಬೌದ್ಧ ಧರ್ಮದ ಇತಿಹಾಸ ಹದಿನಾರನೆಯ ಶತಮಾನದಷ್ಟು ಈಚೆಗೆ ತರಲು ಶಾಸನದ ಉಲ್ಲೇಖ ಸಹಾಯ ಮಾಡುತ್ತದೆ. ಬಹುಶಃ ಆ ಪ್ರದೇಶದ ವ್ಯಾಪಕ ಉತ್ಖನನಗಳಾಗಿ ಸಂಶೋಧನೆಯಾದರೆ ಕರ್ನಾಟಕದ ಮತ್ತು ಭಾರತದ ಬೌದ್ಧ ಇತಿಹಾಸಕ್ಕೆ ಮಹತ್ವದ ಕಾಣಿಕೆಯಾಗಬಹುದು.

# ೭. ತಾಂತ್ರಿಕ ಮತಗಳು

**ಕ**ರ್ನಾಟಕ ಹೇಗೆ ಶೈವ, ವೈಷ್ಣವ, ಬೌದ್ಧ, ಜೈನ ಮತ್ತು ವೀರಶೈವಧರ್ಮಗಳಿಗೆ ಆಶ್ರಯ ಸ್ಥಾನವಾಯಿತೋ ಹಾಗೆಯೇ ಈ ಕೆಲವು ಪ್ರಮುಖ ಧರ್ಮಗಳ ಭಾಗವಾಗಿ ಹಾಗೂ ಸ್ವತಂತ್ರವಾಗಿ ಅಸ್ತಿತ್ವಕ್ಕೆ ಬಂದ ಕೆಲವು ತಾಂತ್ರಿಕ ಮತಗಳಿಗೂ ಆಶ್ರಯವನ್ನು ನೀಡಿದೆ. ಈಗಾಗಲೇ ಬೌದ್ಧರ ವಜ್ರಯಾನ, ಜೈನರ ಯಕ್ಷಿ ಆರಾಧನೆ, ಶೈವರ ಭೈರವ, ಕಾಪಾಲಿಕ ಮುಂತಾದ ಶಾಖೆಗಳ ತಾಂತ್ರಿಕ ಆಚರಣೆಗಳನ್ನು ಗಮನಿಸಲಾಗಿದೆ. ಪೂರ್ವ ಮಧ್ಯ ಕಾಲದಲ್ಲಿ ಎಲ್ಲ ಪ್ರಮುಖ ಧರ್ಮಗಳೂ ತಾಂತ್ರಿಕ ಆಲೋಚನೆಗಳ ಮತ್ತು ಆಚರಣೆಗಳ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣಬಹುದು.[೧] ಸಾಮಾನ್ಯವಾಗಿ ಈ ತಾಂತ್ರಿಕ ಮತದವರು ಪಂಚ'ಮ'ಕಾರಗಳಲ್ಲಿ (ಮತ್ಸ್ಯ, ಮದ್ಯ, ಮಾಂಸ, ಮುದ್ರಾ ಮತ್ತು ಮೈಥುನ) ಆಸಕ್ತಿ ತೋರಿಸುತ್ತಾ ಹಿಂಸಾಚರಣೆಗಳಲ್ಲಿ ತೊಡಗುತ್ತಾ ಅತಿಮಾನುಷ ಸಿದ್ಧಿಗಳನ್ನು ಪಡೆಯಲು ರಹಸ್ಯವಾಗಿ ಸಾಧನೆಗಳಲ್ಲಿ ತೊಡಗುತ್ತಿದ್ದರು. ಅತಿಮಾನುಷ ಶಕ್ತಿಗಳು ಎಲ್ಲ ಕಾಲದಲ್ಲೂ ಜನ ಸಾಮಾನ್ಯರನ್ನು ಆಕರ್ಷಿಸುವ ವಿಷಯಗಳೇ ಆಗಿದ್ದುದರಿಂದ ಬಹಳಷ್ಟು ಸಾಧಕರು ಆ ಮಾರ್ಗದಲ್ಲಿ ಸಾಗಿದ್ದನ್ನು ಕಾಣಬಹುದು. ವೈರಾಗ್ಯದ ಪರಾಕಾಷ್ಠೆಯನ್ನು ಬೋಧಿಸಿದ ಜೈನ ಯತಿಗಳೂ ಭೂತ ಪ್ರೇತಗಳನ್ನು ವಶಪಡಿಸಿಕೊಳ್ಳುವ, ಮಾಯ ಮಾಟಗಳನ್ನು ಆಚರಿಸುವ ಶಾಸನೋಲ್ಲೇಖಗಳು ಆ ಕಾಲಮಾನದ ತಾಂತ್ರಿಕ ಆಕರ್ಷಣೆ ಆ ಧರ್ಮವನ್ನು ಹೇಗೆ ತಟ್ಟಿತ್ತು ಎಂಬುದನ್ನು ತೋರಿಸುತ್ತವೆ.

ಭಕ್ತಿಪಂಥಗಳನ್ನು ಹೊರತುಪಡಿಸಿದರೆ ಉಳಿದಂತೆ ಎಲ್ಲ ಪ್ರಮುಖ ಧರ್ಮಗಳು ತಾಂತ್ರಿಕತೆಯ ಕಡೆ ಒಲಿದಿರುವುದು ಆ ಕಾಲದ ಗುಣವಾಗಿ ಪರಿಣಮಿಸಿದಂತಿದೆ. ತಾಂತ್ರಿಕ ಪಂಥಗಳು ಪ್ರಮುಖವಾಗಿ ರಹಸ್ಯ ಸಾಧನೆಯ ಪಂಥಗಳಾದುದರಿಂದ ಅವು ಯಾವಾಗಲೂ ಸಮಾಜಕ್ಕೆ ವಿಮುಖವಾಗಿಯೇ ಸಾಗಿದವು. ಸಾಮಾಜಿಕವಾಗಿ ಜನರಿಂದ ಅನಾದರಣೆಗೆ, ಟೀಕೆಗೆ ಒಳಗಾಗಿರುವುದೇ ಹೆಚ್ಚು. ಈ ಕಾರಣಗಳಿಂದ ಈ ಪಂಥಗಳಿಗೆ ದಾನದತ್ತಿಗಳನ್ನು ಪಡೆಯುವ ಗೌರವ ಅಷ್ಟಾಗಿ ಇಲ್ಲವೆಂದೇ ಹೇಳಬೇಕು. ಹೀಗಾಗಿ ಈ ಪಂಥಗಳ ಬಗ್ಗೆ ಶಾಸನೋಲ್ಲೇಖಗಳು ಇಲ್ಲವೆನ್ನುವಷ್ಟು ವಿರಳವಾಗಿವೆ. ಸಾಹಿತ್ಯ ಕೃತಿಗಳಲ್ಲಿ ಕೆಲವು ಪಂಥಗಳನ್ನು ಕುರಿತು ವಿವರಗಳು ಕಂಡು ಬರುತ್ತವೆ. ಕೆಲವು ಕೃತಿಗಳಲ್ಲಿ ಪ್ರಾಸಂಗಿಕವಾಗಿ ಬಂದರೆ ಇನ್ನು ಕೆಲವು ಕೃತಿಗಳಲ್ಲಿ ಟೀಕಾ ದೃಷ್ಟಿಯಿಂದ ಬಂದಿದೆ. ವಚನಕಾರರಲ್ಲಿ ಕೆಲವು ತಾಂತ್ರಿಕ ಮತಗಳ ಬಗ್ಗೆ ಕಟು ಟೀಕೆಯನ್ನು ಕಾಣಬಹುದು. ಅದೇ ರೀತಿಯಲ್ಲಿ ಬ್ರಹ್ಮಶಿವನ ಸಮಯ ಪರೀಕ್ಷೆ ತನ್ನ ಸಮಕಾಲೀನ ಧರ್ಮ ಮತ್ತು ಮತಗಳ ಬಗ್ಗೆ ಸಮೃದ್ಧ ವಿವರಗಳನ್ನು ಒದಗಿಸುತ್ತದೆ. ಇನ್ನುಮುಂದೆ ತಾಂತ್ರಿಕತೆಯೇ ಪ್ರಧಾನವಾಗಿರುವ ಕೆಲವು ಮತಗಳನ್ನು ಗಮನಿಸಬಹುದು.

**ಸೌರ:**

ಸೂರ್ಯನ ಉಪಾಸನೆ ಋಗ್ವೇದದ ಕಾಲದಿಂದಲೂ ಪ್ರಚಲಿತವಾಗಿದೆ. ಸೂರ್ಯನ ದೇವಾಲಯಗಳು ಕರ್ನಾಟಕದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದೊರೆಯುತ್ತವೆ. ಕೆಲವು ದೇವಾಲಯಗಳಲ್ಲಿ ಅನ್ಯ ದೈವಗಳೊಂದಿಗೆ ಸೂರ್ಯನಿಗೆ ಆರಾಧನೆ ನಡೆದಿದ್ದರೆ,

---

೧. R. N.Nandi : Religious Institutions and Cults in the Deccan, ಪು. ೧೫೭.

ಇನ್ನು ಕೆಲವು ದೇವಾಲಯಗಳು ಸೂರ್ಯನಿಗಾಗಿಯೇ ಪ್ರತ್ಯೇಕವಾಗಿ ನಿರ್ಮಾಣವಾಗಿದೆ. ಅನೇಕ ಸೂರ್ಯ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ ಮತ್ತು ಅವುಗಳಿಗೆ ನೀಡಿದ ದಾನದ ವಿಷಯಗಳು ಶಾಸನಗಳಲ್ಲಿ ನಿರೂಪಿತವಾಗಿವೆ. ರಾಜನ ಸಿರಿವೂರಿನ ಒಂದು ಶಾಸನದಲ್ಲಿ ಮುದ್ದಾಚಾರಿ ಎಂಬುವನು 'ಸೂರ್ಯ ಪ್ರತಿಷ್ಠೆ ಗ್ರಿಹಸಹಿತ' ಮಾಡಿಸಿದನೆಂದು ಬರುತ್ತದೆ.[೧] ನಿಡೋಣಿ ಗ್ರಾಮದ ಒಂದು ಶಾಸನದಲ್ಲಿ ಸೋವರಸನ ಮಗ ಬಂಧುದೇವನು ಸೂರ್ಯಗೃಹ ಮತ್ತು ಗವರೇಶ್ವರ 'ಕೆಡೆದೊಡೆದಿರ್ದವಂ' ಮತ್ತೆ ಮಾಡಿಸಿದ ವಿಷಯವು ತಿಳಿದು ಬರುತ್ತದೆ.[೨] ಇನ್ನೊಂದು ಶಾಸನ ಮಲ್ಲಿದೇವನೆಂಬುವನು ಮಲ್ಲಿಕಾರ್ಜುನದೇವ, ಲಕ್ಷ್ಮಣೇಶ್ವರ, ಯಿರುಂಗೋಳೇಶ್ವರ, ಮಹಾದೇವೇಶ್ವರ ಮತ್ತು ಸೂರ್ಯದೇವರನ್ನು ಪ್ರತಿಷ್ಠೆ ಮಾಡಿ ದಾನ ಮಾಡಿದ ವಿಷಯ ತಿಳಿಸುತ್ತದೆ.[೩] ಇದೇ ರೀತಿ ಹಲವು ಶಾಸನಗಳು ಸೂರ್ಯ ದೇವಾಲಯಕ್ಕೆ ನೀಡಿದ ದಾನ ದತ್ತಿಗಳ ವಿವರಗಳನ್ನು ತಿಳಿಸುತ್ತದೆ.[೪] ಸೂರ್ಯ ಗ್ರಹಣದ ಸಂದರ್ಭವನ್ನು ತುಂಬ ಉತ್ತಮ ಕಾಲವೆಂದು ಭಾವಿಸಲಾಗಿತ್ತು. ಆ ದಿನಗಳಲ್ಲಿ ಹಿಂದೂ ದೇವಾಲಯಗಳಲ್ಲಿ ಜೈನ ದೇವಾಲಯಗಳಲ್ಲಿ ವಿಶೇಷ ಪೂಜಾ ಕಾರ್ಯಗಳು, ದಾನ ಕಾರ್ಯಗಳು ನಡೆಯುತ್ತಿದ್ದವು.[೫]

ಕೆಲವು ಭಕ್ತರು ಸೂರ್ಯ ಗ್ರಹಣದ ದಿನ ಆತ್ಮ ಬಲಿಯನ್ನು ಮಾಡಿಕೊಳ್ಳುತ್ತಿದ್ದುದುಂಟು. ಹಾನಗಲ್ಲು ತಾಲ್ಲೂಕಿನ ಬಾಳೂರಿನ ಶಾಸನದಲ್ಲಿ ಮೊಲ್ಲೆಯನ ಮಗ ಚಂಡ ಸೂರ್ಯಗ್ರಹಣದಂದು 'ಕಿಚ್ಚು ಹಾಯ್ದು ಸ್ವರ್ಗಸ್ತ'ನಾಗಲು ಕಾಳಗೌಡ ಶಾಸನ ಹಾಕಿಸಿದ ವಿಷಯ ನಿರೂಪಿತವಾಗಿದೆ.[೬] ಅದೇ ತಾಲ್ಲೂಕಿನ ತಿಳಿವಳ್ಳಿಯ ಶಾಸನ ಬೊಪ್ಪನು ಸೂರ್ಯಗ್ರಹಣದಂದು ಪ್ರಾಣತ್ಯಾಗ ಮಾಡಲು ಬಂಟ ಸಾಸಿರ್ವರು ಶಾಸನ ಹಾಕಿಸಿದ ವಿಷಯವನ್ನು ತಿಳಿಸುತ್ತದೆ.[೭] ಈ ರೀತಿಯ ಆತ್ಮ ಬಲಿಯ ಒಟ್ಟು ಆರು ಪ್ರಕರಣಗಳನ್ನು ಎಂ. ಚಿದಾನಂದ ಮೂರ್ತಿಯವರು ಗುರುತಿಸಿದ್ದಾರೆ.[೮] ಒಟ್ಟಿನಲ್ಲಿ ಸೂರ್ಯ ದೇವಾಲಯ ನಿರ್ಮಾಣ,[೯] ಸೂರ್ಯಾರಾಧನೆ, ಸೂರ್ಯಗ್ರಹಣದಂದು ದೇವಾಲಯಗಳಲ್ಲಿ ಪೂಜಾ ವಿಶೇಷಗಳು ಮತ್ತು ಆತ್ಮ ಬಲಿ ಇವು ಮಧ್ಯಕಾಲೀನ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದವು ಎಂಬುದಕ್ಕೆ ಶಾಸನ ಶಿಲ್ಪಗಳು ಆಧಾರಗಳನ್ನು ಒದಗಿಸುತ್ತವೆ. ತುಳುನಾಡಿನಲ್ಲಿ ಕುಂಭಾಸಿ, ನಾರಾವಿ, ಮಾರೋಲಿ, ಬಾರಕೂರು ಮತ್ತು ಬೆಳ್ಳಿಗಳಲ್ಲಿ ಸೂರ್ಯ ದೇವಾಲಯಗಳಿರುವುದನ್ನು ಗುರುತಿಸಲಾಗಿದೆ.[೧೦]

ಸೂರ್ಯನ ಆರಾಧನೆ ಇಷ್ಟು ವ್ಯಾಪಕವಾಗಿ ಕಂಡು ಬಂದರೂ ಎಲ್ಲವನ್ನು ಸೌರರಿಗೆ ಅನ್ವಯಿಸುವುದು ಸಾಧ್ಯವಿಲ್ಲ. ಆತ್ಮ ಬಲಿ ಮಾಡಿಕೊಂಡ ಆರೂ ಜನರು 'ಸೌರ ಸಾಧಕರಲ್ಲದಿದ್ದರೂ ಸೌರ ಪಂಥದ ಪ್ರಭಾವ ಅವರ ಮೇಲೆ ಸ್ವಲ್ಪವಾದರೂ

---

೧. ಎಂ.ಎ.ಆರ್. ೧೯೪೦ ಬೇಲೂರು ೨೪ ಕ್ರಿ.ಶ. ೧೩ ಶ.ಮಾ. ಪು. ೧೪೪.

೨. ಎಸ್ಐಐ XVIII ಬಿಜಾಪುರ ೧೮೧ ಕ್ರಿ.ಶ. ೧೧೭೦.

೩. ಎಸ್ಐಐ IX(i) ಕಲ್ಯಾಣದುರ್ಗ ೨೭೩ ಕ್ರಿ.ಶ. ೧೧೭೯.

೪. ಎಸ್ಐಐ IX(i) ಹಡಗಲಿ ೩೨೯ ಕ್ರಿ.ಶ. ೧೨೦೯; (ರೈ) ಎಕ VI ಕಡೂರು ೧೪೮ ಕ್ರಿ.ಶ. ೧೨-೧೩ ಶ.ಮಾ.

೫. (ರೈ) ಎಕ VII ಶಿಕಾರಿಪುರ ೧೮೫ ಕ್ರಿ.ಶ. ೧೧೫೭; ಕಇ V ಧಾರವಾಡ ೭೦ ಕ್ರಿ.ಶ. ೧೨೨೧; ಎಸ್ಐಐ XX ಇಂಡಿ ೧೫೪ ಕ್ರಿ.ಶ. ೧೧೭೦; ಎಸ್ಐಐ XVIII ಬಿಜಾಪುರ ೧೭೮ ಕ್ರಿ.ಶ. ೧೧೬೩; (ರೈ) ಎಕ V ಅರಸಿಕೆರೆ ೧೭೨ ಕ್ರಿ.ಶ. ೧೧೬೩.

೬. ಕಇ V ಹಾನಗಲ್ಲು ೯೬ ಕ್ರಿ.ಶ. ೧೧೩೦.

೭. ಕಇ V ಹಾನಗಲ್ಲು ೯೭ ಕ್ರಿ.ಶ. ೧೧೪೧.

೮. ಎಂ. ಚಿದಾನಂದ ಮೂರ್ತಿ : ಪೂರ್ಣ ಸೂರ್ಯಗ್ರಹಣ, ಪು. ೨೮-೩೦. ಮತ್ತು ಸೂರ್ಯಗ್ರಹಣ ಶಾಸನಗಳಲ್ಲಲ್ಲದೆ ಶಿಲ್ಪಗಳಲ್ಲೂ ವ್ಯಕ್ತವಾಗಿರುವುದನ್ನು ತೋರಿಸಿದ್ದಾರೆ.

೯. Lalta Prasad Pande : Sun Worship in Ancient India., ಪು. ೨೬೫-೬೬. ಇನ್ನೂ ಕೆಲವು ಸೂರ್ಯ ದೇವಾಲಯಗಳನ್ನು ಈ ಗ್ರಂಥದಲ್ಲಿ ಗುರುತಿಸಿದ್ದಾರೆ.

೧೦. P. Gururaja Bhat : Studies in Tuluva History and Culture. ಪು. ೩೩೮-೩೪೧.

ಇರಬಹುದು' ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುತ್ತಾರೆ. ಸೌರ ಪಂಥದ ನೇರವಾದ ಉಲ್ಲೇಖ ಒಂದೇ ಒಂದು ಶಾಸನದಲ್ಲಿ ಮಾತ್ರ ಕಂಡು ಬರುತ್ತದೆ. ಚೌಡದಾನಪುರದ ಶಾಸನದಲ್ಲಿ ಶಿವದೇವನನ್ನು ಕೀರ್ತಿಸುವ ಸಂದರ್ಭದಲ್ಲಿ 'ಎಲಗಳ ವಾದಿಗೇದಿ ಪಡ ವೈಷ್ಣವ ಗೀಷ್ಣವ ಸೌರಗಿವುರ ಮಾಣಲಗಳ ಬೊಂಮಿ ಗಿಂಮಿ ನಿಗಮಾರ್ಥವನಜ಼ಿಯದ ಯಜ್ವಿ ಗಿಜ್ವಿ ಬೇಡಲಗಳ ಬೌದ್ಧ ಗಿದ್ಧ ಬಜ಼ಿಯಾಗಮಿ ಗೀಗಮಿ ಮಂತ್ರವಾದಿ ಸಾಕುಲಿಯದಿರೆಂದು ಬಗ್ಗಿಪುದು ಶ್ರೀ ಶಿವದೇವನ ಕಾಲ ಹೊಂದೊಡರು'[೧] ಎಂದಿದೆ. ಈ ಶಾಸನದಲ್ಲಿ ವೀರಶೈವನಾದ ಶಿವದೇವನನ್ನು ಕೀರ್ತಿಸುತ್ತಾ ಅನ್ಯ ಮತಗಳನ್ನು ತಿರಸ್ಕರಿಸುವಾಗ ಸೌರದ ಪ್ರಸ್ತಾಪ ಬಂದಿದೆ. ಸಾಹಿತ್ಯ ಕೃತಿಗಳು ಸೌರರ ಬಗ್ಗೆ ಹೆಚ್ಚು ವಿವರಗಳನ್ನು ಒದಗಿಸುತ್ತವೆ. ವಚನಕಾರರಲ್ಲಿ ಸೌರರ ಬಗ್ಗೆ ಕೆಲವು ಉಲ್ಲೇಖಗಳು ದೊರೆಯುತ್ತವೆ.[೨] ಸೌರನು ವಿಶ್ವರಚನೆಯ ಬಗ್ಗೆ ಇಟ್ಟುಕೊಂಡಿದ್ದ ತತ್ವವೆಂದರೆ 'ಘಟಾದಿ ಮೂಲಬಿಂದು, ದಿಟವಪ್ಪುದೇ ನಾದ' ಎಂಬುದೆಂದು ಚನ್ನಬಸವಣ್ಣ ಹೇಳುತ್ತಾನೆ.[೩]

ಬ್ರಹ್ಮಶಿವ ಸೌರರ ಬಗ್ಗೆ ಹೆಚ್ಚು ತಿಳಿದವನಾಗಿದ್ದನು. ಕವಿಯೇ ತನಗೆ ಸೌರರ ಬಗ್ಗೆ ಉತ್ತಮ ಅರಿವು ಇರುವುದಾಗಿ ಹೇಳಿಕೊಂಡಿದ್ದಾನೆ.[೪] ಅನೇಕ ಪದ್ಯಗಳಲ್ಲಿ ಸೌರರ ಆರಾಧನೆ ಮತ್ತು ಆಚರಣೆಗಳ ಬಗ್ಗೆ ಟೀಕಿಸಿದ್ದಾನೆ. ಸೌರರು ಸೂರ್ಯನನ್ನು ಆರಾಧಿಸುವ ಜೊತೆಯಲ್ಲಿ ಉಳಿದ ಎಲ್ಲ ಗ್ರಹಗಳನ್ನು ಒಂದೇ ಮಣೆಗೆ ತಂದು ಪೂಜಿಸುವರೆಂದು ಟೀಕಿಸುತ್ತಾನೆ.[೫] ಸೌರರಲ್ಲಿ ಪ್ರಯೋಜನ ತಿಳಕ, ಮಾರ್ತಂಡ ಭೈರವ ಮತ್ತು ರಣಜಯವೆಂದು ಹಲವು ರೀತಿಯ ಸೌರಾರಾಧನೆಗಳು ಇವೆಯೆಂದು ಹೇಳುತ್ತಾನೆ.[೬] ಸೌರ ಮತದವನು ಧ್ಯಾನ ಮಾಡುವಾಗ ಆಕಾಶದಲ್ಲಿ ಹೊಳೆಯುವ ವೃತ್ತಾಕಾರವನ್ನು ನೆನೆಯುವನೋ ಅಥವಾ ಭೈರವನನ್ನೊ ಅಥವಾ ಪದ್ಮಹಸ್ತ ಮೂರ್ತಿಯನ್ನು ನೆನೆಯುವನೋ ಎಂದು ಸಂದೇಹವನ್ನು ವ್ಯಕ್ತಪಡಿಸುತ್ತಾನೆ.[೭] ಹೀಗೆ ಇನ್ನೂ ಅನೇಕ ರೀತಿಯಲ್ಲಿ ಸೌರರನ್ನು ಅವನು ಟೀಕಿಸುತ್ತಾನೆ. ಅಲ್ಲದೆ ಗ್ರಹಣದ ಸಂದರ್ಭದಲ್ಲಿ ಆತ್ಮಬಲಿ ಮಾಡಿಕೊಳ್ಳುವುದನ್ನು ಅವನು ಟೀಕಿಸಿದ್ದಾನೆ.[೮]

---

೧. ಎಸ್ಐಐ XVIII ರಾಣೆಬೆನ್ನೂರು ೨೪೬ ಕ್ರಿ.ಶ. ೧೨೬೩.

೨. ಪಿ.ವಿ. ನಾರಾಯಣ : ವಚನ ಸಾಹಿತ್ಯ -ಒಂದು ಸಾಂಸ್ಕೃತಿಕ ಅಧ್ಯಯನ, ಪು. ೪೭೧.

೩. ಅದೇ.

೪. ಸೌರಂ ಕಾಳೋತ್ತರಮಂ
ಬಾರಾಧನೆಗಳೊಳಮಖಿಳ ವೇದ ಸ್ಮೃತಿ ತ
ತ್ಪೌರಾಣಮೆನಿಪ್ಪುವಱೊಳ್
ಸಾರಮನಿಂಬಾಗಿ ನೆಱೆಯೆ ನಿರುತಂ ಬಲ್ಲಂ ಸ.ಪ. ೧-೫೮

೫. ಅದೇ. ೮-೧೬೪.

೬. ಚಳ ಬುದ್ಧಿಗಳ ಪ್ರಯೋಜನ
ತಿಳಕಂ ಮಾರ್ತ್ತಂಡ ಭೈರವಂ ರಣಜಯಮೆಂ
ದೆಳೆಯೊಳ್ಸೌರಾರಾಧನೆ
ಪಲವುಂ ತೆಱನೆಂದು ಪೇಳ್ವರಾ ಸಮಯದವರ್ ಸ.ಪ. ೮-೧೬೬.

ಶ್ರೀವತ್ಸ ನಿಘಂಟಿನಲ್ಲಿ ಆರು ರೀತಿಯ ಸೂರ್ಯಾರಾಧಕರನ್ನು ಹೆಸರಿಸಲಾಗಿದೆ. ಉದಯ ಮಂಡಲಾರಾಧಕರು, ಖಮಧ್ಯವರ್ತಿ ಸೂರ್ಯಾರಾಧಕರು, ಅಸ್ತಮಯ ಬಿಂಬಾರಾಧಕರು, ತ್ರಿಕಾಲ ಮಂಡಲ ಸೇವಿಗಳು, ಮಂಡಲೇಕ್ಷಣ ವ್ರತಾನುಯಾಯಿಗಳು, ಸೂರ್ಯಮಂಡಲ ಚಿಹ್ನಧಾರಿಗಳು, ಪು. ೪೯೪.

೭. ಸ.ಪ. ೮-೧೬೯; ಸೌರರ ಟೀಕೆಗೆ ನೋಡಿ ೮-೧೬೫, ೧೬೭, ೧೬೮, ೧೭೨.

೮. ರವಿಯ ವಿಮಾನಕೆ ರಾಹುವಿನ ವಿಮಾನವಡ್ಡಮಾಗೆ ತತ್ಪತಿಯುಂ ರಾಹುವೆ ನುಂಗಿತೆಂದು ತಡದಿರದೆ ವಹ್ನಿಯಂ ಪೊಕ್ಕು ಮುರುಟಿ ಸಾವಮೂರ್ಖರ್ (ಸ.ಪ. ಅನುಬಂಧ I, ३೮೦-೨೬).

ಆನಂದಗಿರಿಯ ಕೃತಿಯಲ್ಲಿ ಶಂಕರರು ಸೌರರನ್ನು ದಕ್ಷಿಣದ ಸುಬ್ರಹ್ಮಣ್ಯ ಅಥವಾ ತಿರುವನಂತಪುರದಲ್ಲಿ ಸಂಧಿಸಿದ್ದನ್ನು ತಿಳಿಸುತ್ತಾ ಸೌರರ ನಾಯಕ ದಿವಾಕರ ಎಂಬ ಹೆಸರಿನವನೆಂದೂ, ಅವರೆಲ್ಲರೂ ವೃತ್ತಾಕಾರದ ಕೆಂಪು ಗಂಧವನ್ನು ತಮ್ಮ ಹಣೆಯ ಮೇಲೆ ಧರಿಸಿ ಕೆಂಪು ಹೂ ಮುಡಿದಿದ್ದರೆಂದೂ ತಿಳಿಸುತ್ತಾನೆ.[೧] ಸೂರ್ಯನ ವಿಗ್ರಹಗಳೆಲ್ಲವೂ ಸಾಮಾನ್ಯವಾಗಿ ಕೈಯಲ್ಲಿ ಪದ್ಮಗಳನ್ನು ಹಿಡಿದಂತೆ ರೂಪಿತವಾಗಿರುತ್ತವೆ. ಸೌರರು ಸೂರ್ಯನ ವಿಶಿಷ್ಟ ಉಪಾಸಕರು. ಅವರ ಮತದ ಬಗೆಗೆ, ಅವರ ತತ್ವ ಮತ್ತು ಆಚರಣೆಗಳ ಬಗೆಗೆ ಇನ್ನೂ ಆಳವಾದ ಅಭ್ಯಾಸ ನಡೆಯಬೇಕಿದೆ.

**ಗಾಣಪತ್ಯ:**

ಗಣಪತಿಯ ಆರಾಧನೆ ಕರ್ನಾಟಕದಲ್ಲಿ ಇದ್ದುದಕ್ಕೆ ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ಸಾಕಷ್ಟು ಆಧಾರಗಳನ್ನು ಒದಗಿಸುತ್ತವೆ. ಈ ಕಾಲದಲ್ಲಿ ಗಣಪತಿ ಎಲ್ಲ ಪ್ರಮುಖ ಹಿಂದೂ ಧರ್ಮದವರಿಂದ ಆರಾಧಿಸಲ್ಪಟ್ಟರೂ ಆ ಕಾಲದಲ್ಲಿ ಇಷ್ಟೊಂದು ವ್ಯಾಪಕವಾಗಿ ಅದು ಹರಡಿದ್ದಂತೆ ಕಾಣುವುದಿಲ್ಲ. ಪೌರಾಣಿಕವಾಗಿ ಶಿವನ ಮಗನಾಗಿ ಅವನು ಬೆಳೆದು ಬಂದಿದ್ದಾನೆ. ಸೊರಬ ತಾಲ್ಲೂಕಿನ ಮೈಸಾವಿ ಗ್ರಾಮದ ಶಾಸನದಲ್ಲಿ ಎಚಿಯಮಗೌಂಡ ವಿಘ್ನೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿ ದಾನಮಾಡಿದ ವಿಷಯ ಬರುತ್ತದೆ.[೨] 'ಶ್ರೀಮದ್ವಿಘ್ನೇಶ್ವರ ಶಂಕರಸುತನಮರೇಂದ್ರಾ ಸುರೇಂದ್ರೊ' ಎಂದು ಪ್ರಾರಂಭವಾಗುವ ಒರುವಾಯಿಯ ಶಾಸನದಲ್ಲಿ ಏಚನೆನ್ನುವವನು 'ವಿಘ್ನರಾಜನಿಳಯಮನೆನಸುಂ ಮನದೊಲವಿಂ ಮಾಡಿಸಿದಂ' ಎಂದಿದ್ದು ಸಿಂಧುವಂಶದ ರಾಚಮಲ್ಲ ಆ ದೇವಾಲಯದ ಪೂಜಾಕಾರ್ಯಗಳಿಗೆ, ಜೀರ್ಣೋದ್ಧಾರಕ್ಕೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೩] ಅರ್ಧಾಪುರದ ಒಂದು ಶಾಸನ ಯಾದವ ಸಿಂಘಣನ ಸರ್ವಾಧಿಕಾರಿ ಸಂಕಮ ಮತ್ತು ಸರ್ವಾಧಿಕಾರಿ ಲಕ್ಕಣ ಪಂಡಿತರು ಅನೇಕ ದೇವರುಗಳಿಗೆ ದಾನ ಮಾಡುವಾಗ ವಿನಾಯಕ ದೇವರಿಗೂ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೪] ಅರಸಿಕೆರೆಯ ಒಂದು ಶಾಸನ ಜವನೆಯ ಮಾವಂತನು ಕೋಳಿಗುಂದದಲ್ಲಿ ವಿನಾಯಕ ಪ್ರತಿಷ್ಠೆ ಮಾಡಿಸಿ ಭೂಮಿದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೫] ಹಿಂದೆ ಪ್ರಸ್ತಾಪಿತವಾದ ಒರುವಾಯಿಯ ವಿನಾಯಕ ದೇವರಿಗೆ ರಣಧವಳ ಬಸವಚಮೂಪ ಮಾಡಿದ ದಾನವನ್ನು ಇನ್ನೊಂದು ಶಾಸನ ನಿರೂಪಿಸುತ್ತದೆ.[೬]

ಇದುವರೆಗೂ ಪ್ರಸ್ತಾಪಿತವಾದ ಗಣಪತಿಯ ಪ್ರತಿಷ್ಠಾಪನೆಗಳಾಗಲೀ ಅಥವಾ ದಾನ ಕಾರ್ಯಗಳಾಗಲೀ ನಿರ್ದಿಷ್ಟವಾಗಿ ಗಾಣಪತ್ಯ ಪಂಥದವರಿಂದ ನಡೆದವು ಎಂದು ಹೇಳಲು ಬರುವಂತಿಲ್ಲ. ಆದರೆ ಈ ಪ್ರತಿಷ್ಠಾಪನೆ ಮತ್ತು ದಾನ ಕಾರ್ಯಗಳಲ್ಲಿ ಕೆಲವಾದರೂ ಗಾಣಪತ್ಯರ ಪ್ರಭಾವ, ಪ್ರೇರಣೆಯಿಂದ ಆಗಿರಬಹುದೆಂದು ಭಾವಿಸಬಹುದು. ಏಕೆಂದರೆ ವಚನಕಾರರಲ್ಲಿ ಗಾಣಪತ್ಯರ ಬಗ್ಗೆ ಉಲ್ಲೇಖಗಳು ದೊರೆಯುವುದರಿಂದ ಅವರು ಆ ಕಾಲದಲ್ಲಿ ಕ್ರಿಯಾಶೀಲರಾಗಿದ್ದರೆಂದು ಊಹಿಸಬಹುದು. ಅಲ್ಲದೆ ಶಾಸನೋಲ್ಲೇಖಗಳು ಅವರ ಅಸ್ತಿತ್ವವನ್ನು ಖಚಿತಪಡಿಸುತ್ತವೆ. 'ಗಾಣಪತ್ಯನ ಯುಕ್ತಿ (ವಿಶ್ವರಚನೆಯ ತತ್ವದ ಬಗ್ಗೆ) ಅತೀತವೇ ವಸ್ತು ಜಗತ್ತು ಮಾಯಾತಂತ್ರ' ಎಂಬುದಾಗಿತ್ತು ಎಂದು ಚನ್ನಬಸವಣ್ಣನವರು ಹೇಳಿರುವುದುಂಟು.[೭] ಅಲ್ಲದೆ

---

೧. R.G.Bhandarkar : Vaisnavism Saivisim and Minor Religious Systems. ಪು. ೧೫೨.

೨. (ರೈ) ಎಕ VIII ಸೊರಬ ೫೪೩ ಕ್ರಿ.ಶ. ೧೧೭೨.

೩. ಎಸ್‌ಐಐ IX(i) ಬಳ್ಳಾರಿ ೩೨೨ ಕ್ರಿ.ಶ. ೧೧೯೫.

೪. ಐಎನ್‌ಡಿ ನಾಂದೇಡ್ ೪೧ ಕ್ರಿ.ಶ. ೧೨೩೬.

೫. (ರೈ) ಎಕ V ಅರಸಿಕೆರೆ ೨ ಕ್ರಿ.ಶ. ೧೧೯೪.

೬. ಎಸ್‌ಐಐ IX(i) ಬಳ್ಳಾರಿ ೩೩೪ ಕ್ರಿ.ಶ. ೧೨೧೭.

೭. ಪಿ.ವಿ. ನಾರಾಯಣ : ಪೂರ್ವೋಕ್ತ, ಪು. ೪೭೨.

ಬಸವಣ್ಣನವರ ಹಲವು ವಚನಗಳಲ್ಲಿ ಬೆನಕ (ವಿನಾಯಕ)ನನ್ನು ಕುರಿತು ಹೇಳಿರುವುದುಂಟು. 'ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣ'[೧] ಎಂದು ವಚನದಲ್ಲಿ ಹೇಳಿರುವುದನ್ನು ನೋಡಿದರೆ ಸಗಣಿಯಲ್ಲಿ ಬೆನಕನನ್ನು ಮಾಡಿ ಪೂಜಿಸುವ ಪರಿಪಾಠ ಆ ಕಾಲದಿಂದಲೂ ಉಳಿದು ಬಂದಿರುವ ಸಂಪ್ರದಾಯವಾಗಿರುವುದು ಕಂಡು ಬರುತ್ತದೆ. ಬಸವಣ್ಣನವರ ವಚನಗಳಲ್ಲಿ ಬೆಣ್ಣೆಯ ಬೆನಕ, ಒಟ್ಟಿಲ ಬೆನಕ ಎನ್ನುವ ಮಾತುಗಳೂ ಬರುವುದುಂಟು.[೨] ಒಂದು ವಚನದಲ್ಲಿ 'ಚಿಕ್ಕದೊಂದು ಹೊತ್ತಗೆ ಬೆನಕನ ಕರಡಿಗೆಯಯ್ಯಾ'[೩] ಎಂದು ಬರುವುದರಿಂದ ಬೆನಕನನ್ನು ಕರಡಿಗೆಯಲ್ಲಿ ಇಟ್ಟು ಕೊಂಡೊಯ್ಯುತ್ತಿದ್ದದನ್ನು ಸೂಚಿಸುತ್ತದೆ. ಹೊಲದಲ್ಲಿ ಬೆಳೆಯಾಗದೆ ಕೆಟ್ಟರೆ, ಕೆರೆಯ ಏರಿ ಒಡೆದರೆ ವಿನಾಯಕನನ್ನು ಪೂಜಿಸಿದರೆ ರಕ್ಷಿಸುತ್ತಾನೆಂಬ ನಂಬಿಕೆ ಇದ್ದಿತೆಂಬುದನ್ನು ಬ್ರಹ್ಮಶಿವ ತನ್ನ ಕೃತಿಯಲ್ಲಿ ಸೂಚಿಸಿದ್ದಾನೆ.[೪]

ಗಣಪತಿಯ ಆರಾಧನೆ ಸಾಕಷ್ಟು ಮಟ್ಟಿಗೆ ಕರ್ನಾಟಕದಲ್ಲಿ ಇದ್ದಿತು. ಆದರೆ ವಿಶಿಷ್ಟಮತವಾಗಿ 'ಗಾಣಪತ್ಯ'ದ ಸ್ವರೂಪವನ್ನು ಅರಿಯಲು ಲಭ್ಯ ಸಾಮಗ್ರಿಯಿಂದ ಸಾಧ್ಯವಾಗುವಂತಿಲ್ಲ.

**ಕೌಳ:**

ಮಧ್ಯಕಾಲೀನ ಯುಗದಲ್ಲಿ ಪ್ರಚಲಿತವಾಗಿದ್ದ ಕೌಳರು ಕಾಪಾಲಿಕರಂತೆ ಅತಿಮಾರ್ಗಿಗಳು. ಇವರು ಶಕ್ತಿಯ ಆರಾಧಕರು. ಕೌಳ ಸಿದ್ಧಾಂತದ ಮೂಲ ಪ್ರವರ್ತಕ ಪಾಶುಪತ ಗುರುವಾದ ವಿಶ್ವರೂಪನ ಶಿಷ್ಯ ಅಲ್ಲಟ ಅಥವಾ ಭಾವರಕ್ತ. ಸುಮಾರು ಹನ್ನೆರಡನೆಯ ಶತಮಾನದಲ್ಲಿ ರಚಿತವಾದ ಜೈನ ಕೃತಿಕಾರ ಯಶಪಾಲನ 'ಮಹಾರಾಜಪರಾಜಯ' ಎಂಬ ನಾಟಕದಲ್ಲಿ ಕೌಳರ ಬಗ್ಗೆ ವಿವರಗಳು ದೊರೆಯುತ್ತವೆ. 'ಪ್ರತಿನಿತ್ಯವೂ ಮಾಂಸ ತಿಂದು ಮದ್ಯವನ್ನು ಯಥೇಚ್ಛವಾಗಿ ಕುಡಿಯಬೇಕೆಂಬ ಧರ್ಮವನ್ನು ತಾನು ಬೋಧಿಸುವುದಾಗಿ ಹೇಳುತ್ತಾ ಮುಕ್ತವಾಗಿ ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳಬೇಕೆಂದು' ಕೌಲನೊಬ್ಬ ನಾಟಕದಲ್ಲಿ ಘೋಷಿಸುತ್ತಾನೆ.[೫] ಇದರಿಂದ ಆ ಮತದ ತಾತ್ವಿಕ ವಿಚಾರಗಳು ಯಾವ ದಿಕ್ಕಿನತ್ತ ಸಾಗುತ್ತಿದ್ದವೆಂಬುದನ್ನು ಅರಿಯಬಹುದು.

ಕೌಳರಲ್ಲಿ ಎರಡು ಬಗೆ. ಪೂರ್ವ ಕೌಳರು ಮತ್ತು ಉತ್ತರ ಕೌಳರು. 'ಇಬ್ಬರೂ ತ್ರಿಪುರ ಸುಂದರಿಯ ಆರಾಧಕರೇ. ಪೂರ್ವ ಕೌಳರು ಒಂಬತ್ತು ಸ್ತ್ರೀಯೋನಿಗಳ ಚಿತ್ರದ ಮಧ್ಯೆ ಬರೆದ ಸ್ತ್ರೀಯೋನಿಯ ಚಿತ್ರವನ್ನು-ಇಷ್ಟೂ ಸೇರಿ ಶ್ರೀಚಕ್ರವೆಂದು[೬] ಕರೆಯಿಸಿಕೊಳ್ಳುತ್ತದೆ -ಪೂಜಿಸುವರು. ಚಿತ್ರವನ್ನು ಭೂರ್ಜಪತ್ರದ ಮೇಲ್ಲೋ, ರೇಷ್ಮೆ ವಸ್ತ್ರದ ಮೇಲ್ಲೋ ಚಿನ್ನದ ತಗಡಿನ ಮೇಲ್ಲೋ ಬರೆದಿರಬಹುದು. ಉತ್ತರ ಕೌಳರಾದರೊ ಸುಂದರಳಾದ ಸ್ತ್ರೀಯ ಯೋನಿಯನ್ನೇ ಆರಾಧಿಸುವರು. ಇಬ್ಬರೂ

---

೧. ಬ.ವ. ೯೩.

೨. ಅದೇ, ೪೫೦.

೩. ಅದೇ, ೭೫೦.

೪. ಬೆನಕಂ ಕಯಿ ಕಟ್ಟಡೆ ಕಾವನೆ ಕೆಱೆಯೇರಿಯಲ್ಲಿ ಕೆಱೆಯೊಡೆದಂತೆ ಕಾವನೆ ಕೆಮ್ಮನೆಱಿತಮಿಲ್ಲದ ಮನುಷ್ಯರಲ್ಲಲ್ಲಿಗೇಕೆ ನಿಜೆಪರೂ ಪೇಳಿಂ, ಸ.ಪ. ೯:೪೦.

೫. K.K. Handiqui : Yashastilaka and Indian Culture. ಪು. ೨೦೪.

೬. ಶ್ರೀ ಚಕ್ರದ ಬಗ್ಗೆ ಹೆಚ್ಚಿನ ವಿವರಗಳಿಗೆ ನೋಡಿ: S.Shanakararanarayan ಅವರ Srichakra ಎಂಬ ಗ್ರಂಥ. ಪ್ರಾಣ ಪ್ರತಿಷ್ಠೆಯು ಬಂಗಾರದ ಮೇಲೆ ಬರೆದ ಶ್ರೀಚಕ್ರಕ್ಕೆ ಜೀವಮಾನ ಪರ್ಯಂತವೂ, ಬೆಳ್ಳಿಯ ಮೇಲೆ ಬರೆದದ್ದು ೩೨ ವರ್ಷವೂ, ತಾಮ್ರದ ಮೇಲೆ ಬರೆದದ್ದು ೧೨ ವರ್ಷವೂ, ಭೂರ್ಜಪತ್ರದ ಮೇಲೆ ಬರೆದದ್ದು ೬ ವರ್ಷವೂ ಇರುತ್ತದೆಂದು ಅಭಿಪ್ರಾಯವಿದೆ. ಪು. ೯೨.

ತಮ್ಮ ಆರಾಧ್ಯ ದೇವತೆಗೆ ಮದ್ಯ, ಮತ್ಸ್ಯ, ಮಾಂಸ ಇತ್ಯಾದಿಗಳನ್ನು ಅರ್ಪಿಸಿ ತಾವೂ ಸ್ವೀಕರಿಸುತ್ತಾರೆ. ಪೂರ್ವ ಕೌಳಕ್ಕಿಂತ ಉತ್ತರ ಕೌಳವು ಹೆಚ್ಚು ಬೀಭತ್ಸವಾದುದು.'[೧]

ಕೌಳರ ವಿಷಯದಲ್ಲಿ ಕೆಲವು ವಚನಕಾರರು ಅವರ ಬೀಭತ್ಸ ಆಚರಣೆಗಳಿಗಾಗಿ ಟೀಕಿಸಿರುವುದುಂಟು. 'ಕೌಲಿ ಮರುಳಾಗಿ ಹೋದ' ಎಂಬ ಚನ್ನಬಸವಣ್ಣನವರ ವಚನ ಪ್ರಯೋಗವಿದೆ.[೨] ಕೌಳರ ಬಗ್ಗೆ ಹೆಚ್ಚು ವಿವರಗಳನ್ನು ನೀಡಿರುವವನು ಬ್ರಹ್ಮಶಿವ. ಅವನು ತನಗೆ ಸೌರ ಮತ್ತು ಕಾಳೋತ್ತರರ ಆರಾಧನೆಗಳು ಚನ್ನಾಗಿ ತಿಳಿದಿದೆ ಎಂದು ಹೇಳುವ ಪದ್ಯದಲ್ಲಿ ಬರುವ ಕಾಳೋತ್ತರ - ಕೌಳೋತ್ತರ ಇರಬೇಕೆಂದು ಸೂಚಿಸಿ ಎಂ. ಚಿದಾನಂದ ಮೂರ್ತಿಯವರು ಬ್ರಹ್ಮಶಿವನು ಬಹುಶಃ ಕಂಡದ್ದು, ಉಗ್ರವಾಗಿ ಟೀಕಿಸಿರುವುದು ಉತ್ತರ ಕೌಳರನ್ನೇ ಎಂದು ಭಾವಿಸುತ್ತಾರೆ.[೩] ಬ್ರಹ್ಮಶಿವನು ಕೌಳರನ್ನು 'ಅರ್ಪನಿತಂ ಸೇವಿಸಿಯುಂ ದರ್ಪ್ಪಾಂಧತರಾಗಿ ಬಸನಮಂ ಪಾಳಿಸಿಯುಂ ಕೂರ್ಪುವೆರಸಿರ್ಪ್ಪ ಕೌಳತ್ರೋರ್ಪರೆ ಸನ್ಮಾರ್ಗದಂದಮಂ ಜೈನರವೊಲ್' ಎಂದು ದೂಷಿಸುತ್ತಾನೆ.[೪] ಕೌಳರ ಮದ್ಯ-ಮಾಂಸ ಮೋಹವನ್ನು ಕವಿ ವಿಡಂಬಿಸಿದ್ದಾನೆ.[೫] ಕೌಳರು ಕಡ್ಡಾಯವಾಗಿ ಮಾನವ ಬಲಿಯನ್ನು ಕೊಡುತ್ತಿದ್ದರೆಂದು ಹೇಳಲು ಬರುವುದಿಲ್ಲ. ಆದರೆ ಕೌಲಾಚಾರ್ಯನ ಸೂಚನೆ ಮೇರೆಗೆ ಮಾರದತ್ತನು ಮಹಾ ಭೈರವ ದೇವಾಲಯದಲ್ಲಿ ಮಾನವ ಬಲಿಗಾಗಿ ಸಿದ್ಧತೆ ಮಾಡಿಸುವ ವಿಷಯ ಯಶಸ್ತಿಲಕದಲ್ಲಿ ಬಂದಿದೆ.[೬]

ಕೌಳರು ಕರ್ನಾಟಕದಲ್ಲಿ ಇದ್ದುದಕ್ಕೆ ಸಾಹಿತ್ಯಕ ಆಧಾರಗಳು ಇರುವುದಾದರೂ ಅವರ ಉಲ್ಲೇಖಗಳು ಯಾವುದೇ ಶಾಸನದಲ್ಲಿ ಬಂದಂತಿಲ್ಲ.

ಎಸ್. ವಿದ್ಯಾಶಂಕರ ಅವರು, ಸೋಮರಾಜನ ಉದ್ಭಟ ಕಾವ್ಯದಲ್ಲಿ ಬರುವ ಒಂದು ತಾಂತ್ರಿಕ ಆಚರಣೆಯ ವಿವರದ ಸನ್ನಿವೇಶದ ಕಡೆಗೆ ಗಮನವನ್ನು ಸೆಳೆದಿದ್ದಾರೆ. ಕಾವ್ಯ ಭಾಗದಲ್ಲಿ ಚಿದಂಗ ಮುನಿಯು ತನ್ನ ಶಿಷ್ಯ ಶುಕಮುನಿಯ ಅಂತರಂಗವನ್ನು ಒರೆಹಚ್ಚುವ ಸಂದರ್ಭದಲ್ಲಿ, ಕವಿ ಸೋಮರಾಜನು ತನ್ನ ಸಮಕಾಲೀನ ತಾಂತ್ರಿಕ ಪಂಥವೊಂದರ ಆಚರಣೆಯನ್ನು ವಿವರವಾಗಿ ವರ್ಣಿಸಿರುವನು. ಯಾವ ತಾಂತ್ರಿಕ ಮತದ ಹೆಸರೂ ಅಲ್ಲಿ ಉಕ್ತವಾಗದಿದ್ದರೂ ಶ್ರೀಚಕ್ರದ ವರ್ಣನೆ, ಅದರ ಮಧ್ಯವಿದ್ದ ಎಳೆಯ ಪ್ರಾಯದ ಕೋಮಲಾಂಗಿಯ ವರ್ಣನೆ, ಮಧುಮಾಂಸಭರಿತ ಚಿನ್ನದ ಕಳಶಗಳು ಹದಿಹರೆಯದ ಜವ್ವನೆಯರು ಮಧುಪಾನದಿಂದ ಮತ್ತರಾಗಿ ನರ್ತಿಸುವ ರೀತಿ ಮುಂತಾದವನ್ನು ವಿವರವಾಗಿ ಕವಿ ವರ್ಣಿಸಿದ್ದಾನೆ. ಕವಿ ಹೆಸರಿಸದೇ ಹೋದರೂ ಬಹುಶಃ ಅದು ಕೌಳರ ಆಚರಣೆಯನ್ನು ಹೇಳುತ್ತದೆಯೆಂದು ಸಕಾರಣವಾಗಿಯೇ ವಿದ್ಯಾಶಂಕರ ಅವರು ಊಹಿಸಿದ್ದಾರೆ.[೭]

---

೧. ಎಂ. ಚಿದಾನಂದ ಮೂರ್ತಿ : 'ಕೌಳರು -ಒಂದು ವಿವೇಚನೆ' ಸಂಶೋಧನ ತರಂಗ, ಪು. ೮೩.
೨. ಅದೇ, ಪು. ೮೨.
೩. ಅದೇ, ಪು. ೮೩-೮೪.
೪. ಸ.ಪ. ೧೪-೬೦.
೫. ಅದೇ, ೧೪-೭೭, ೧೪-೮೯.
೬. K.K. Handiqui : ಪೂರ್ವೋಕ್ತ ಪು. ೩೫೭.
೭. ಎಸ್. ವಿದ್ಯಾಶಂಕರ : 'ತಾಂತ್ರಿಕ ಪಂಥವೊಂದರ ಆಚರಣೆಗಳ ಬಗೆಗಿನ ಒಂದು ಹೊಸ ಉಲ್ಲೇಖ' ಸಾಧನೆ ೯-೩, ಪು.೮೫-೯೫.

ಕೌಳರು ಭೋಗ ವಸ್ತುಗಳ ಮಧ್ಯೆ ಇದ್ದರೂ ಅಸಾಧಾರಣ ಸಂಯಮಿಗಳಾಗಿದ್ದರೆಂದು ಕಾಣುತ್ತದೆ. ಶಾಸ್ತ್ರಜ್ಞಾನ, ಸಂಯಮ, ಶುದ್ಧ ಹೃದಯ ಉಳ್ಳವನು ಕೌಲ ಮಾರ್ಗಕ್ಕೆ ಬರಲರ್ಹನಾಗುತ್ತಾನೆ. 'ಕೌಲ ಮತದ ಮಾರ್ಗವೇನೇ ಇರಲಿ ಉದ್ದೇಶವು ಮಾತ್ರ ಮಹೋನ್ನತವಾದುದೆಂಬುದನ್ನು ನಾವು ಮರೆಯುವಂತಿಲ್ಲ'[೧] ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಟ್ಟಿದ್ದಾರೆ.

**ನೀಲಪಟ:[೨]**

ಮಧ್ಯಕಾಲೀನ ಕರ್ನಾಟಕದಲ್ಲಿ ಸ್ವಲ್ಪಮಟ್ಟಿಗೆ ಪ್ರಚಲಿತವಿದ್ದ ನೀಲಪಟ ಪಂಥ ಒಂದು ಅಜ್ಞಾತ ತಾಂತ್ರಿಕ ಮತವಾಗಿದ್ದಿತು. ಅದರ ಹೆಸರೇ ಸೂಚಿಸುವಂತೆ ಕಪ್ಪು ವಸ್ತ್ರವನ್ನು ಧರಿಸುವ ಪದ್ಧತಿಯನ್ನು ಅದು ಸೂಚಿಸುತ್ತದೆ. ಹತ್ತನೆಯ ಶತಮಾನದ ಸೋಮದೇವನ ಯಶಸ್ತಿಲಕ ಚಂಪೂವಿನಲ್ಲಿ ನೀಲಪಟನ ಉಲ್ಲೇಖ ಮೊದಲ ಬಾರಿಗೆ ಕಂಡು ಬರುತ್ತದೆ. ಹದಿಮೂರನೆಯ ಶತಮಾನದ ಆರಂಭ ಕಾಲದ ರಾಘವಾಂಕನ ಸಿದ್ಧರಾಮ ಚಾರಿತ್ರದಲ್ಲಿ ನೀಲಪಟನೆಂಬ ಮುನಿಯ ಉಲ್ಲೇಖವಿದ್ದು ಅವನನ್ನು 'ಸ್ಮರಕಳಾ ತಾಪಸಂ' ಎಂಬ ವಿಶೇಷಣದೊಂದಿಗೆ ಗುರುತಿಸಲಾಗಿದೆ. ಅವನು, ಶಿವ ಮನ್ಮಥನನ್ನು ಸುಟ್ಟು ಹಾಕಿದ ಸಂಗತಿ ಸುಳ್ಳೆಂದು ವಾದಿಸುತ್ತ, ಹರನಾಗಲಿ ಮುನಿಗಳಾಗಲಿ ಎಲ್ಲರೂ ಮನ್ಮಥನ ಹೂಬಾಣಕ್ಕೆ ಈಡಾದವರೇ ಎಂದಿದ್ದಾನೆ. ಸಿದ್ಧರಾಮನಿಗೂ ನೀಲಪಟ ಪಂಥದ ಅನುಯಾಯಿಗೂ ಚರ್ಚೆ ನಡೆದಿರುವ ಸಾಧ್ಯತೆ ಇದೆ.

ಕೆರೆಯ ಪದ್ಮರಸ ನೀಲಪಟ, ಸಾಂಖ್ಯ, ಬೌದ್ಧ, ಜೈನ ಮುಂತಾದವರನ್ನು ವಾದದಲ್ಲಿ ಸೋಲಿಸಿದನೆಂದು ಅವನ ಮಗ ಕುಮಾರ ಪದ್ಮರಸ ಸಾನಂದ ಚರಿತೆಯಲ್ಲಿ ಹೇಳಿದ್ದಾನೆ. ಪದ್ಮರಾಜ ಪುರಾಣದಲ್ಲಿ ತ್ರಿಭುವನ ತಾತನು ನೀಲಪಟ, ಕಾಳ ಮುಂತಾದವರನ್ನು ಸೋಲಿಸಿರುವುದರಿಂದ ಪದ್ಮರಸ ತನ್ನನ್ನು ಸೋಲಿಸಿದರೆ ಅವರೆಲ್ಲರನ್ನೂ ಸೋಲಿಸಿದಂತಾಗುತ್ತದೆ ಎಂದು ಹೇಳುತ್ತಾನೆ.

ಎಂ. ಚಿದಾನಂದ ಮೂರ್ತಿಯವರ ಈಚಿನ ಸಂಶೋಧನೆಯಿಂದ ನೀಲಪಟರು ಮೂಲತಃ ಬೌದ್ಧ ಧರ್ಮಕ್ಕೆ ಸೇರಿದವರೆಂದು ಹೇಳಲು ಸೂಚನೆಗಳಿರುವುದನ್ನು ತೋರಿಸಿಕೊಟ್ಟಿದ್ದಾರೆ.[೩] ವಜ್ರಯಾನದ ಸಮ್ಮಿತಿಯ ಶಾಖೆಯ ಗುರುಗಳೊಬ್ಬರು ಒಂದು ದಿನ ವೇಶ್ಯೆಯೊಬ್ಬಳ ಮನೆಗೆ ನೀಲಪಟವನ್ನು ಧರಿಸಿ ಹೋಗಿ, ಆ ರಾತ್ರಿ ಅಲ್ಲಿಯೇ ಉಳಿದರು. ಬೆಳಗ್ಗೆ ಶಿಷ್ಯರು ಕಪ್ಪು ಬಟ್ಟೆ ಧರಿಸಿದ್ದು ಏಕೆ ಎಂದಾಗ ಕಪ್ಪು ಬಟ್ಟೆಯ ಆಧ್ಯಾತ್ಮಿಕ ಮಹತ್ವವನ್ನು ವಿವರಿಸಿದರು. ಅಂದಿನಿಂದ ಶಿಷ್ಯರು ಕಪ್ಪು ವಸ್ತ್ರವನ್ನು ಧರಿಸಲು ಪ್ರಾರಂಭಿಸಿದರು. ಬಹುಶಃ ಇದು ಮುಂದೆ ಒಂದು ಪಂಥವಾಗಿ ಕಾಲಕ್ರಮೇಣ ಬೆಳೆದಿರಬಹುದು.

ಅದೇ ಲೇಖನ ಭಾಗದಲ್ಲಿ ನೀಲಪಟರು ಮೂಲತಃ ಕಾಶ್ಮೀರದಲ್ಲಿ ಪ್ರಚಲಿತವಾಗಿದ್ದರೆಂದೂ ಅಲ್ಲಿ ಬಹಿಷ್ಕೃತರಾಗಿ ದಕ್ಷಿಣ ಭಾರತದ ಕಡೆ ಬಂದಿರಬಹುದೆಂಬುದನ್ನು ತೋರಿಸಿಕೊಟ್ಟಿದ್ದಾರೆ.[೪] ಕಾಶ್ಮೀರದ ನೈಯಾಯಿಕ ಜಯಂತ ಭಟ್ಟ (ಕ್ರಿ.ಶ. ಸು.೯೦೦)ನು ಬರೆದ ಆಗಮಡಂಬರ ಎಂಬ ಸಂಸ್ಕೃತ ನಾಟಕದಲ್ಲಿ ನೀಲಾಂಬರರ ಉಲ್ಲೇಖವಿದ್ದು ಅವರು ನೀಲ ವಸ್ತ್ರ

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ ಲೇಖನ, ಪು. ೮೬.

೨. ಎಂ. ಚಿದಾನಂದ ಮೂರ್ತಿ : 'ನೀಲಪಟ : ಒಂದು ಅಜ್ಞಾತ ತಾಂತ್ರಿಕ ಮತ', ಪ್ರಕ ೫೬ ಪು. ೩-೮. ನೀಲಪಟ ಪಂಥದ ಭಾಗವನ್ನು ಎಂ. ಚಿದಾನಂದ ಮೂರ್ತಿಯವರ ಲೇಖನವನ್ನು ಆಧರಿಸಿ ಬರೆಯಲಾಗಿದೆ.

೩. ಎಂ. ಚಿದಾನಂದ ಮೂರ್ತಿ : 'ನೀಲಪಟರು ಮೂಲತಃ ಬೌದ್ಧರೆ?', ಪ್ರ.ಕ. ೫೬-೪, ಪು. ೧೧೫.

೪. ಅದೇ.

ಧರಿಸಿದ್ದು ಕೋಮಲ ಸ್ವರದಲ್ಲಿ ಹಾಡುತ್ತಿರುವುದನ್ನು ನೋಡಿದ ಯುವಕನೊಬ್ಬ ತಪಸ್ಸಿನ ಆ ರೀತಿಗೆ ಅಶ್ಚರ್ಯಪಟ್ಟು ಸ್ತ್ರೀ ಸುಖ ಪಡೆಯುವ ಸ್ಥಿತಿಯೇ ಮೋಕ್ಷವಿರಬಹುದೆಂದು ಅಂದುಕೊಳ್ಳುತ್ತಾನೆ. ನೀಲಾಂಬರರು ತನ್ನ ರಾಜ್ಯದಲ್ಲಿದ್ದರೆ ರಾಜ್ಯ ವ್ಯವಸ್ಥೆಯನ್ನು ತಲೆಕೆಳಗು ಮಾಡಿಯಾರೆಂದು ರಾಜನು ಅವರನ್ನು ತನ್ನ ರಾಜ್ಯದಿಂದ ಓಡಿಸುತ್ತಾನೆ. 'ಕಾಶ್ಮೀರದಿಂದ ಬಹಿಷ್ಕೃತವಾದ ಈ ಪಂಥದ ಮುಂದಿನ ಇತಿಹಾಸ ಅಸ್ಪಷ್ಟ. ಅಲ್ಲಿಯ ಶೈವಧರ್ಮದೊಡನೆ ನೀಲಾಂಬರ ಮತವು ಕರ್ನಾಟಕಕ್ಕೆ ಬಂದಿರಬಹುದೇ ಎಂಬ ಅನುಮಾನಕ್ಕೆ ಆಸ್ಪದವಿದೆ.'[೧]

ನೀಲಪಟರು ಬಹುಶಃ ಬೌದ್ಧ ಶಾಖೆಯೊಂದರ ಮೂಲದಿಂದ ಬೆಳೆದುಬಂದು ತಮ್ಮ ಅತಿರೇಕದ ಆಚರಣೆಗಳಿಂದ ಕಾಶ್ಮೀರ ಪ್ರದೇಶದಿಂದ ಬಹಿಷ್ಕೃತರಾಗಿ ಸುಮಾರು ೧೦-೧೧ ನೆಯ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಬಂದು ನೆಲೆಸಿದ್ದರೆಂದು ಕಾಣುತ್ತದೆ. ಇವರ ಬಗ್ಗೆ ಸಾಹಿತ್ಯ ಕೃತಿಗಳು ಉಲ್ಲೇಖಗಳನ್ನು ನೀಡಿದರೂ ಶಾಸನಗಳು ಸಂಪೂರ್ಣ ಮೌನವನ್ನು ವಹಿಸಿದಂತಿವೆ. ನೀಲಪಟ ಮತವು ಸ್ತ್ರೀ ಸುಖಕ್ಕೆ ಅತಿ ಮಹತ್ವವನ್ನು ಕೊಟ್ಟು ಸಮಕಾಲೀನ ಅನ್ಯ ಧರ್ಮಗಳ ತಿರಸ್ಕಾರಕ್ಕೆ ಒಳಗಾಗಿ ಅಜ್ಞಾತವಾಗಿ ಉಳಿದ ಒಂದು ಅಪರೂಪದ ತಾಂತ್ರಿಕ ಮತವಾಗಿದೆ.

**ಶಾಕ್ತ:**

ಹಿಂದೂ ಧರ್ಮದ ಶಕ್ತಿಯುತ ಮತ್ತು ವ್ಯಾಪಕ ಪ್ರಸಾರದ ಮತಗಳಲ್ಲಿ ಒಂದಾದ ಶಾಕ್ತ ಒಂದು ಕಾಲದಲ್ಲಿ ಈ ದೇಶದ ಬಹು ಭಾಗವನ್ನು ವ್ಯಾಪಿಸಿತ್ತು. ಈ ಮತದ ಆರಾಧ್ಯ ದೇವತೆ ದೇವಿ ಅಥವಾ ಶಕ್ತಿ. ಆರ್ಯರ ಆಗಮನ ಪೂರ್ವದಿಂದಲೂ ದೇವಿಯ ಉಪಾಸನೆ ಇದ್ದಿತೆಂದೂ, ಈಗ ಪ್ರಚಾರದಲ್ಲಿರುವ ಶಾಕ್ತಮತ ಒಂದಿಲ್ಲೊಂದು ರೂಪದಿಂದ ನಡೆಯುತ್ತ ಬಂದಿದೆ[೨] ಎಂಬ ಅಭಿಪ್ರಾಯವಿದೆ. ಕ್ರಿ.ಶ. ೬ನೆಯ ಶತಮಾನದಿಂದ ೧೦ನೆಯ ಶತಮಾನದವರೆಗೆ ಈ ಮತದ ಪ್ರಭಾವ ಅಧಿಕವಾಗಿದ್ದಿತೆಂದು ತಿಳಿದು ಬರುತ್ತದೆ. ಇದರ ಪ್ರಭಾವ ಭಾರತದ ಎಲ್ಲ ಪ್ರಮುಖ ಧರ್ಮಗಳ ಮೇಲೆ ಆಗಿದೆಯೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಮತದ ಮುಖ್ಯ ಆರಾಧ್ಯ ದೇವತೆ ಕಾಲಿ ಅಥವಾ ದುರ್ಗಾದೇವಿ ಪಾರ್ವತಿಯ ರೂಪ. ಶಾಕ್ತವನ್ನು ಶೈವದ ಒಂದು ಶಾಖೆಯೆಂದು ಕೆಲವರು ಭಾವಿಸುವರಾದರೂ ಶಾಕ್ತ ಒಂದು ಸ್ವತಂತ್ರ ಮತವಾಗಿದ್ದು ಸ್ತ್ರೀದೈವವನ್ನು ಪ್ರಧಾನ ದೈವವಾಗುಳ್ಳ ಮತ್ತು ಸ್ವಲ್ಪಮಟ್ಟಿಗೆ ಶೈವ ಸಂಬಂಧವನ್ನು ಉಳ್ಳದ್ದಾಗಿದೆ.[೩]

ಶಾಕ್ತಮತದ ಆರಾಧ್ಯ ದೈವವನ್ನು ಶಕ್ತಿ ಎಂದು ಗುರುತಿಸುತ್ತಾರೆ. ಶಿವ ಶಕ್ತಿಯುರು ಭಿನ್ನ ಶಕ್ತಿಗಳಾಗಿರದೆ ಒಂದೇ ಮೂಲದ ಭಿನ್ನ ಶಕ್ತಿಗಳಾಗಿವೆ. ಶಾಕ್ತನು ಶಕ್ತಿಯನ್ನು ಆರಾಧಿಸಿ ಅವಳ ಕರುಣೆಯಿಂದ ಅಲೌಕಿಕ ಶಕ್ತಿಗಳನ್ನು ಪಡೆಯಲು ಬಯಸುತ್ತಾನೆ.

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಶಾಕ್ತ ಪರಂಪರೆ ಬೆಳೆದು ಬಂದಿತ್ತು. ಆರರಿಂದ ಹತ್ತನೆಯ ಶತಮಾನದಲ್ಲಿ ಅದು ಬೌದ್ಧ, ಜೈನ ಮತ್ತು ವೈದಿಕ ಧರ್ಮಗಳಿಗೂ ತನ್ನ ಪ್ರಭಾವವನ್ನು ಬೀರಿದೆ. ಅದು ಒಂಬತ್ತನೆಯ ಶತಮಾನದಲ್ಲಿ ಬಲಿಷ್ಠವಾಯಿತು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[೪] ನಮ್ಮ ಅಧ್ಯಯನಾವಧಿಯ ಕಾಲದಲ್ಲಿಯೂ ಶಾಕ್ತರು ಕರ್ನಾಟಕದಲ್ಲಿ ಕೆಲವು ಮಟ್ಟಿಗೆ ಚಟುವಟಿಕೆಯಿಂದ ಇದ್ದರೆಂದು ತಿಳಿದು ಬರುತ್ತದೆ. ದಕ್ಷಿಣ ಕನ್ನಡದ ಮೂಡಬಿದಿರೆಯ ಶಾಸನವೊಂದು ಮೂರು ಜನ ಸೇರಿ ದುರ್ಗಾದೇವಿಯ ದೇಗುಲದ ಅಗ್ರಪೂಜೆಗೆ ಭೂಮಿಯನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೫] ಕುಂದಗೋಳಿನ ಶಾಸನವೊಂದು ತಳಿಯರ ಮಲ್ಲಯ್ಯ ತನ್ನ ಹೊಲದಲ್ಲಿ ಸ್ವಲ್ಪ ಭಾಗವನ್ನು ದುರ್ಗಾದೇವತೆಗೆ

---

೧. ಎಂ. ಚಿದಾನಂದಮೂರ್ತಿ ಪೂರ್ವೋಕ್ತ.

೨. ಎಸ್.ಸಿ. ನಂದೀಮಠ : ಕನ್ನಡ ನಾಡಿನ ಚರಿತ್ರೆ ಭಾಗ-೨, ಪು. ೧೧೧.

೩. Pushpendra Kumar : Sakti cult in Ancient India. ಪು. ೧.

೪. R.N.Nandi : ಪೂರ್ವೋಕ್ತ ಪು. ೧೧೪.

೫. ಎಸ್ಐಐ VII ಕಾರ್ಕಳ ೨೨೩ ಕ್ರಿ.ಶ. ೧೨೦೫.

ದಾನ ನೀಡಿದ ವಿಷಯವನ್ನು ತಿಳಿಸುತ್ತವೆ. ಅಲ್ಲದೆ ಧರ್ಮಿಷ್ಠರಾದ ಊರಿನ ಐವತ್ತೊಕ್ಕಲು ದೀಪ ಬೆಳಗಿಸಲು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೧] ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಒಂದು ಹಳ್ಳಿಯಲ್ಲಿ ಲಕ್ಷ್ಮೀನಾರಾಯಣ, ಗೋಪಾಳದೇವ, ವಿಘ್ನೇಶ್ವರ ದೇವರ ಜೊತೆಯಲ್ಲಿ ದುರ್ಗಾದೇವಿಗೂ ಪೂಜಾ ಕಾರ್ಯಗಳಿಗೆ ದಾನ ನೀಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೨] ಯಾದವ ಸಿಂಘಣನ ಸರ್ವಾಧಿಕಾರಿಗಳಾದ ಸಂಕಮ ಮತ್ತು ಲಖಣ ಪಂಡಿತರು ದೇವರುಗಳಿಗೆ ದಾನ ಮಾಡುತ್ತ ಜೊತೆಯಲ್ಲಿ ಚಂಡಿಕಾದೇವಿಗೂ ದಾನ ಮಾಡಿದ್ದಾರೆ.[೩]

ದೊಡ್ಡಗದ್ದವಳ್ಳಿ ೧೨-೧೩ ನೆಯ ಶತಮಾನದಲ್ಲಿ ಬಹು ಪ್ರಸಿದ್ಧ ಶಾಕ್ತ ಕೇಂದ್ರವಾಗಿದ್ದಂತೆ ತಿಳಿದು ಬರುತ್ತದೆ. ಹೊಯ್ಸಳ ವಿಷ್ಣುವರ್ಧನ ಕ್ರಿ.ಶ. ೧೧೧೩ರಲ್ಲಿ ಕಟ್ಟಿಸಿದ ಮಹಾಲಕ್ಷ್ಮಿ ದೇವಾಲಯ ವಿಶಿಷ್ಟವಾದುದು. ಚತುಷ್ಕೂಟ ದೇವಾಲಯವಾದ ಇದು ಲಕ್ಷ್ಮಿಯನ್ನೇ ಪ್ರಧಾನ ದೇವತೆಯಾಗಿಟ್ಟುಕೊಂಡು ಕಟ್ಟಿದ ಅಪರೂಪದ ಗುಡಿಯಾಗಿದೆ. ಕೊಲ್ಹಾಪುರದ ಗುಡಿಯನ್ನು ಬಿಟ್ಟರೆ ಇನ್ನೆಲ್ಲಿಯೂ ಅಂಥ ಗುಡಿ ಇಲ್ಲ.[೪] ದೊಡ್ಡಗದ್ದವಳ್ಳಿಯ ಮೂರು ಶಾಸನಗಳು ಅಲ್ಲಿ ನಡೆದ ವಿವಿಧ ದಾನಗಳನ್ನು ತಿಳಿಸುತ್ತವೆ. ಅಭಿನವ ಕೊಲ್ಹಾಪುರವಾದ ಗದ್ದವಳ್ಳಿಯ ಶ್ರೀ ಮಹಾಲಕ್ಷ್ಮೀದೇವಿ, ಮಹಾ ಕಾಳಿದೇವಿ, ಶ್ರೀ ಭೂತನಾಥ ದೇವರಿಗೆ ನೀಡಿದ ಭೂಮಿ ದಾನವನ್ನು ಒಂದು ಶಾಸನ ತಿಳಿಸುತ್ತದೆ.[೫] ಇದೇ ರೀತಿ ಕ್ರಿ.ಶ. ೧೨೦೦ರ[೬] ಮತ್ತು ಕ್ರಿ.ಶ ೧೨೦೯ರ[೭] ಶಾಸನಗಳು ಆ ದೇವಾಲಯಕ್ಕೆ ನೀಡಿದ ದಾನಗಳನ್ನು ತಿಳಿಸುತ್ತದೆ. ಈ ದೇವಾಲಯದ ಆವರಣದಲ್ಲಿರುವ ಬೇತಾಳ ವಿಗ್ರಹಗಳಲ್ಲಿ ಕೆಲವು ನಗ್ನವಾಗಿವೆ. ಅವುಗಳಲ್ಲಿ ಪೂರ್ವದಲ್ಲಿರುವ ಬೇತಾಳ ಬಲಗೈಯಲ್ಲಿ ಕತ್ತಿ, ಕತ್ತರಿಸಿದ ಮನುಷ್ಯನ ತಲೆಗಳನ್ನು, ಎಡಗೈಯಲ್ಲಿ ಪಾತ್ರೆಯನ್ನು ಹಿಡಿದಿದೆ. ಒಂದೊಂದು ವಿಗ್ರಹವೂ ಆರೂವರೆ ಅಡಿ ಎತ್ತರವಿದೆ. ಇಂತಹ ಬೇತಾಳ ವಿಗ್ರಹಗಳು ಮೈಸೂರು ಸಂಸ್ಥಾನದಲ್ಲಿ ಇನ್ನೆಲ್ಲಿಯೂ ಸಿಕ್ಕಿಲ್ಲ. ದೇವಾಲಯದ ನಾಲ್ಕು ಗರ್ಭಗುಡಿಗಳಲ್ಲಿ ಕಾಳೀ, ಲಿಂಗ, ಲಕ್ಷ್ಮೀ ಮತ್ತು ವಿಷ್ಣು ಇದ್ದು ಈಶಾನ್ಯದಲ್ಲಿ ಭೈರವನ ಗುಡಿ ಇದೆ. ಅಭಿನವ ಕೊಲ್ಹಾಪುರವೆಂದು ಆ ಊರನ್ನು ಕರೆದು ಮಹಾಲಕ್ಷ್ಮಿ ಪ್ರಧಾನ ದೇವತೆಯೆಂದು ಶಾಸನದಲ್ಲಿ ಹೇಳಿದ್ದರೂ ಈಗ ಕಾಳಿ ಪ್ರಮುಖವಾಗಿದೆ. ಈಶಾನ್ಯದಲ್ಲಿರುವ ಭೈರವನ ಗುಡಿಯ ದ್ವಾರಬಂಧದ ಪಕ್ಕದಲ್ಲಿ ಒಬ್ಬ ಮನುಷ್ಯನು ತನ್ನ ಹೊಟ್ಟೆಯನ್ನು ಬಗೆದು ಕರುಳನ್ನು ತೆಗೆಯುತ್ತಿರುವ, ಮತ್ತೊಂದು ಕಡೆ ಒಬ್ಬನು ಸತ್ತು ಬಿದ್ದಿರುವವನ ತಲೆಯನ್ನು ತುಳಿಯುತ್ತ ತನ್ನ ತಲೆಯನ್ನೇ ಕತ್ತಿಯಿಂದ ಕತ್ತರಿಸಿಕೊಳ್ಳುತ್ತಿರುವ ವಿಗ್ರಹಗಳಿವೆ. ಇನ್ನೂ ಅನೇಕ ವಿವರಗಳು, ದೊಡ್ಡಗದ್ದವಳ್ಳಿ ಆ ಕಾಲದಲ್ಲಿ ಪ್ರಸಿದ್ಧ ಶಾಕ್ತ ಕೇಂದ್ರವಾಗಿದ್ದಿತೆಂಬುದನ್ನು ಖಚಿತಪಡಿಸುತ್ತವೆ.[೮]

---

೧. ಎಸ್‌ಐಐ XX ಕುಂದಗೋಳ ೧೯೯ ಕ್ರಿ.ಶ. ೧೨೪೦.

೨. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

೩. ಐಎನ್‌ಡಿ ನಾಂದೇಡ್ ೪೧ ಕ್ರಿ.ಶ. ೧೨೩೬.

೪. ಎಸ್. ಶ್ರೀಕಂಠ ಶಾಸ್ತ್ರಿ : ಹೊಯ್ಸಳ ವಾಸ್ತುಶಿಲ್ಪ, ಪು. ೧೩೭.

೫. (ರೈ) ಎಕ V ಹಾಸನ ೧೪೩ ಕ್ರಿ.ಶ. ೧೧೯೭.

೬. (ರೈ) ಎಕ V ಹಾಸನ ೧೪೨ ಕ್ರಿ.ಶ. ೧೨೦೦.

೭. (ರೈ) ಎಕ V ಹಾಸನ ೧೪೪ ಕ್ರಿ.ಶ. ೧೨೦೯.

೮. ದೇವಾಲಯದ ಶಿಲ್ಪಗಳ ವಿವರಗಳನ್ನು ಶ್ರೀಕಂಠ ಶಾಸ್ತ್ರಿಗಳ ಪೂರ್ವೋಕ್ತ ಗ್ರಂಥದಿಂದ ಗ್ರಹಿಸಲಾಗಿದೆ. ಪು. ೧೭೭-೧೮೨.

ಶಾಕ್ತರು ಅಲ್ಲಲ್ಲಿ ತಮ್ಮ ಆರಾಧ್ಯ ದೈವವನ್ನು ಸ್ಥಾಪಿಸುವ, ಆರಾಧಿಸುವ ವಿಷಯಗಳು ಶಾಸನಗಳಿಂದ ತಿಳಿದು ಬರುತ್ತದೆ. ಉದಾಹರಣೆಗೆ ಭಗವತಿಯ ವಿಗ್ರಹವನ್ನು ಮಲ್ಲೈಯ್ಯರೆನ್ ಮಾಡಿಸಿದ ವಿಷಯವನ್ನು ಕೊತ್ತನೂರಿನ ಶಾಸನವೊಂದು ತಿಳಿಸುತ್ತದೆ.[೧]

**ಸಪ್ತ ಮಾತೃಕೆಯರು:**

ಪುರಾಣ ಕಾಲದಿಂದಲೂ ಸ್ತ್ರೀ ದೇವತಾರಾಧನೆ ಕಂಡು ಬರುತ್ತದೆ. ಗುಪ್ತರ ಕಾಲದ ಶಿಲಾಶಾಸನಗಳಲ್ಲಿ ಮಾತೃಕೆಯರನ್ನು ಸ್ಮರಿಸಿರುವುದು ಕಂಡು ಬರುತ್ತದೆ. ಕರ್ನಾಟಕದಲ್ಲಿ ಗಂಗರ ಕಾಲದಿಂದಲೂ ಸಪ್ತಮಾತೃಕೆಯರ ಆರಾಧನೆ ಕಂಡು ಬರುತ್ತದೆ. ಸಪ್ತಮಾತೃಕೆಯರೆಂದರೆ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ದೇವತೆಗಳ ಗುಂಪು.[೨] ಸಾಮಾನ್ಯವಾಗಿ ಇವರು ಈಶ್ವರನ ಪರಿವಾರ ದೇವತೆಗಳಾಗಿ ಬಂದರೂ ಕೆಲವು ಕಡೆ ಪ್ರತ್ಯೇಕ ದೇವಾಲಯವನ್ನು ಹೊಂದಿರುವುದುಂಟು. ಕೆಲವು ಸಾರಿ ಪ್ರತ್ಯೇಕ ಮೂರ್ತಿಗಳಾಗಿಯೂ, ಕೆಲವು ಸಾರಿ ಪಟ್ಟಿಕೆಗಳ ಸಾಲಾದ ಮೂರ್ತಿಗಳಾಗಿಯೂ ನಿರ್ಮಾಣವಾಗಿರುವುದುಂಟು. ಕೋಲಾರದಲ್ಲಿ ಮಣ್ಣಿನಿಂದ ಮಾಡಿದ ಸಪ್ತಮಾತೃಕೆಯರ ವಿಗ್ರಹಗಳು ಮತ್ತು ಶಿಲಾಮೂರ್ತಿಗಳು ಇವೆ. ಮಣ್ಣಿನಿಂದ ನಿರ್ಮಿಸಿದ ಮೂರ್ತಿಗಳು ಅಧಿಕವಾಗಿ ದೊರೆಯುವುದಿಲ್ಲ. ಚನ್ನಪಟ್ಟಣದ ಸಮೀಪದ ವಾಲೆತೋಪು, ಕೆಲಸೂರಿನ ಚಂದ್ರನಾಥ ಬಸ್ತಿ ಮೊದಲಾದ ಕಡೆ ದೊರೆಯುತ್ತವೆ.[೩] ಸಪ್ತಮಾತೃಕೆಯರಿಗೆಂದೇ ನಿರ್ಮಿಸಲಾದ ದೇವಾಲಯಗಳು ಕೋಲಾರ, ಹುನಗುಂದ, ಬಲ್ಲ, ಸಂತೇಕಲ್ಲಹಳ್ಳಿ, ಮೈಸೂರು ಜಿಲ್ಲೆಯ ಕೆಲಸೂರು ಮತ್ತು ನರಸಮಂಗಲ, ಚಿಕ್ಕಮಗಳೂರು ಜಿಲ್ಲೆಯ ಶಶಕಪುರ ಮುಂತಾದೆಡೆ ದೊರೆಯುತ್ತವೆ. ಅಲ್ಲದೆ ಉತ್ತರ ಕರ್ನಾಟಕದಲ್ಲಿ ಜಾಲಿಹಾಳ, ಸಿದ್ಧನ ಕಲ್ಲು[೪] ಮುಂತಾದೆಡೆ ಗುರುತಿಸಬಹುದಾಗಿದೆ.

ಕೋಲಾರದ ಕೋಲಾರಮ್ಮನ ದೇವಾಲಯವು ಹನ್ನೊಂದನೆಯ ಶತಮಾನದಲ್ಲಿ ತುಂಬ ಪ್ರಸಿದ್ಧ ಶಾಕ್ತ ಕೇಂದ್ರವಾಗಿದ್ದಿತು. ಹನ್ನೊಂದನೆಯ ಶತಮಾನದ ಶಾಸನವು ಆ ದೇವಾಲಯದಲ್ಲಿ ನಡೆಯುತ್ತಿದ್ದ ಪೂಜೆಯ ವಿವರಗಳನ್ನು ವಿಶೇಷವಾಗಿ ನೀಡುತ್ತದೆ. ಇಲ್ಲಿ ಕೆಲವು ವಿವರಗಳನ್ನು ಗಮನಿಸಬಹುದು. ಶಾಸನ ತಮಿಳು ಭಾಷೆಯಲ್ಲಿದೆ. ಅದು ವೀರಭದ್ರ, ಬ್ರಾಹ್ಮಿ, ಈಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಶ್ರೀ ಚಾಮುಂಡೇಶ್ವರಿ, ಗಣಪತಿ, ಮೂಲಸ್ಥಾನದ ಚಾಮುಂಡೇಶ್ವರಿ, ಯೋಗೇಶ್ವರಿ, ಕ್ಷೇತ್ರಪಾಲದೇವ, ಮಹಾ ಶಾಸ್ತಾ ಮತ್ತು ಸೂರ್ಯ ದೇವರನ್ನು ಹೆಸರಿಸಿ ಈ ದೇವತೆಗಳಿಗೆಲ್ಲ ಪೂಜಾಕಾರ್ಯಗಳು ಸಲ್ಲಬೇಕೆಂದು ತಿಳಿಸುತ್ತದೆ. 'ಯೋಗಿನಿ ಯೋಗೇಶ್ವರ ಪೂಜೆಗೆ ಎರಡು ಕಳಂ ಮತ್ತು ಬಗಿಸುವ ಪಾನೀಯ, ನಿಗದಿತ ಪ್ರಮಾಣದ ಬತ್ತ, ಒಂದು ಕುರಿ,.. ಅಂಗಾರ ಬಲಿಗೆ ಒಂದು ಕುರಿ. ಕನ್ಯೆ ಪೂಜೆಗೆ ೭ ಕನ್ಯೆಯರು ಮತ್ತು ಒಬ್ಬ ಬ್ರಹ್ಮ ಚಾರಿಯನ್ನು ನೇಮಿಸಿಕೊಳ್ಳಬೇಕು. ೧೨ ದಿನಗಳು ತಿಂಗಳ ಪೂಜೆಗಾಗಿ ಯೋಗಿನಿ ಯೋಗೇಶ್ವರ ಪೂಜೆಗೆ ೨ ಕಳಮಿನಷ್ಟು ಮತ್ತು ಬರಿಸುವ ಪಾನೀಯ ಗ್ರಹಶಾಂತಿಗಾಗಿ ಮತ್ತು ಅರ್ಚನ ಪೂಜೆಗಾಗಿ ದಿನಕ್ಕೆ ಒಂದು ಕುರಿ' ಎಂದು ಇನ್ನೂ ಅನೇಕ ಪೂಜಾ ವಿವರಗಳು ಒಂದನೆಯ ಕುಲೋತ್ತುಂಗ ಚೋಳನ ಕಾಲದ ಶಾಸನದಲ್ಲಿ ಬಂದಿವೆ.[೫]

---

೧. (ಮೈ) ಎಕ IV ಕೊಳ್ಳೇಗಾಲ ೪೯ ಕ್ರಿ.ಶ. ೧೪ ಶ.ಮಾ.

೨. ಟಿ.ವಿ. ವೆಂಕಟಾಚಲ ಶಾಸ್ತ್ರೀ : ಶ್ರೀವತ್ಸ ನಿಘಂಟು, ಪು. ೩೩೮.

೩. ದೇವರ ಕೊಂಡಾರೆಡ್ಡಿ : 'ಸಪ್ತ ಮಾತೃಕೆಯರು' ಹರಿತಿ ಸಿರಿ ಪು. ೮೭.

೪. ಅ. ಸುಂದರ : 'ಉತ್ತರ ಕರ್ನಾಟಕದಲ್ಲಿಯ ಕೆಲವು ಪ್ರಾಚೀನ ತಾಂತ್ರಿಕ ಮೂರ್ತಿಗಳು' ಅಧ್ಯಯನ ಪು. ೩೮೭-೮೮.

೫. (ರೈ) ಎಕ X ಕೋಲಾರ ೧೦೮ ಕ್ರಿ.ಶ. ೧೦೭೧.

ಕೋಲಾರಮ್ಮನ ದೇವಾಲಯ ವಿಶಿಷ್ಟ ರಚನೆಯನ್ನು ಉಳ್ಳದ್ದಾಗಿದೆ. ಅಲ್ಲದೆ ದೇವಾಲಯದ ಜಾಲಂದ್ರದಲ್ಲಿ ಕಪಾಲ ಭೈರವ ಭೈರವಿ ನರ್ತಿಸುತ್ತಿರುವ ವಿಗ್ರಹಗಳಿವೆ. ಗರ್ಭಗುಡಿಯ ಒಳಗಿರುವ ಮಣ್ಣಿನ ಸಪ್ತಮಾತೃಕಾ ವಿಗ್ರಹಗಳು ಉತ್ತರದ ಕಡೆ ಮುಖ ಮಾಡಿವೆ. ಕಲ್ಲಿನ ಮೂರ್ತಿಗಳು ಪೂರ್ವಕ್ಕೆ ಮುಖ ಮಾಡಿವೆ. ದೇವಾಲಯದ ಯಜ್ಞ ಶಾಲೆಯಲ್ಲಿರುವ ಅಗ್ನಿ ಕುಂಡಗಳು ಸ್ತ್ರೀಯೋನಿ ಆಕಾರದಲ್ಲಿ ಇವೆ. ಗರ್ಭಗುಡಿಯ ಎಡಭಾಗದ ಗೋಡೆಯ ಬಳಿ ಸುಮಾರು ನಾಲ್ಕೂವರೆ ಅಡಿಗಳಷ್ಟು ಎತ್ತರದ ಭೈರವಿ ವಿಗ್ರಹ ನಗ್ನವಾಗಿದೆ. ದೇವಾಲಯದ ಆವರಣದಲ್ಲಿ ಸುಮಾರು ಆರು ಅಡಿ ಎತ್ತರದ ಆತ್ಮಬಲಿ ಮಾಡಿಕೊಳ್ಳುತ್ತಿರುವ ಪುರುಷ ವಿಗ್ರಹವಿದೆ. ದೇವಾಲಯದ ಈ ಕೆಲವು ವಿವರಗಳು ಹಿಂದೆ ಗಮನಿಸಿದ ಶಾಸನಕ್ಕೆ ಪೂರಕವಾಗಿರುವುದನ್ನು ಗಮನಿಸಬಹುದು. ಒಂದು ಕಾಲಕ್ಕೆ ಸಪ್ತಮಾತೃಕೆಯರ ವೈಭವವಾದ ಪೂಜೆ ಅಲ್ಲಿ ನಡೆಯುತ್ತಿತ್ತು ಎಂಬುದಕ್ಕೆ ಶಾಸನ ಶಿಲ್ಪಗಳು ಸಾಕ್ಷಿಗಳಾಗಿವೆ.

ಸಪ್ತ ಮಾತೃಕೆಯರ ಆರಾಧನೆ ಕರ್ನಾಟಕದಲ್ಲಿ ಇಂದಿಗೂ ಉಳಿದು ಬಂದಿದೆ. 'ಪ್ರತ್ಯೇಕ ಸಪ್ತ ಮಾತೃಕಾ ದೇವಾಲಯಗಳಿರುವೆಡೆಯಲೆಲ್ಲಾ ಅವುಗಳಿಗೆ ಸ್ಥಳೀಯವಾಗಿ ಬೇರೆ ಹೆಸರಿರುತ್ತದೆ. ನಾವು ಬಳಕೆಗೆ ಸಪ್ತ ಮಾತೃಕೆಯರೆಂದರೂ ಸ್ಥಳೀಯರು ಕನ್ನಿಕೆಯರೆಂದೂ, ಅಮ್ಮನವರೆಂದೂ ಗೌರವ ಪೂರ್ವಕವಾಗಿ ಸಂಬೋಧಿಸುತ್ತಾರೆ.'[೧] ಎಲ್ಲ ಕಡೆ ಎಲ್ಲ ಮಾತೃಕೆಯರಿಗೂ ಪೂಜೆ ಸಲ್ಲದೆ, ಯಾವುದಾದರೂ ಒಬ್ಬ ದೇವತೆಗೆ ಪೂಜೆ ಸಲ್ಲಬಹುದು.

●●

೧. ದೇವರ ಕೊಂಡಾರೆಡ್ಡಿ : ಪೂರ್ವೋಕ್ತ ಲೇಖನ, ಪು. ೪೯.

# ೮. ಜನಪ್ರಿಯ ಆರಾಧನೆಗಳು-ಗ್ರಾಮ ದೇವತೆಗಳು

ಧರ್ಮಗಳ ಅನುಸರಣೆಯಲ್ಲಿ ಆರಾಧನೆಗೆ ಪ್ರಮುಖವಾದ ಸ್ಥಾನವಿದೆ. ಆರಂಭ ಕಾಲದಿಂದಲೂ ತನ್ನ ಸುತ್ತಮುತ್ತಲ ಪ್ರಕೃತಿಯ ಶಕ್ತಿಗಳನ್ನು ಆರಾಧಿಸಿಕೊಂಡು ಬಂದ ಮಾನವ, ನಾಗರಿಕತೆ ಬೆಳೆದ ಹಾಗೆ ತನ್ನ ಆರಾಧನಾ ವಿಧಾನದಲ್ಲಿ, ಆಚರಣೆಯ ರೀತಿಯಲ್ಲಿ ವ್ಯತ್ಯಾಸಗಳನ್ನು ಮಾಡಿಕೊಂಡು ಬಂದಿದ್ದಾನೆ. ಒಂದೊಂದು ಧರ್ಮದವರೂ ತಮ್ಮ ದೈವವನ್ನು ಮಾತ್ರ ನಂಬಬೇಕೆಂದೂ, ಆರಾಧಿಸಬೇಕೆಂದೂ ಹೇಳಿದರೂ ಜನ ತಮಗೆ ಪ್ರಿಯವಾದ ಅನ್ಯ ದೈವಗಳನ್ನು ಬಿಡದೆ ಆರಾಧಿಸಿಕೊಂಡು ಬಂದಿದ್ದಾರೆ. ಅನೇಕ ಜನಪ್ರಿಯ ದೈವಗಳು ಧರ್ಮ-ಜಾತಿ ಮತಗಳ ಗಡಿಗಳನ್ನು ದಾಟಿ ಎಲ್ಲರಿಂದ ಪೂಜೆಗೊಂಡಿವೆ. ನಮ್ಮ ಅಧ್ಯಯನಾವಧಿಯಲ್ಲಿ ಜನಪ್ರಿಯವಾಗಿದ್ದ ಕೆಲವು ಆರಾಧನೆಗಳನ್ನು ಗಮನಿಸಬಹುದು.

**ಮೈಲಾರ-ಮಾಳಚಿ:**

ಮೈಲಾರ-ಮಾಳಚಿಯರು ಮಧ್ಯಕಾಲೀನ ಕರ್ನಾಟಕದಲ್ಲಿ ಬಹು ಜನಪ್ರಿಯ ದೈವವಾಗಿದ್ದರು ಎಂಬುದಕ್ಕೆ ಅವರ ಬಗ್ಗೆ ದೊರೆಯುವ ವಿಪುಲ ಉಲ್ಲೇಖಗಳೇ ಸಾಕ್ಷಿಗಳಾಗಿವೆ. ಈ ದೈವಗಳ ಬಗ್ಗೆ ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆಯೂ ಈಗಾಗಲೇ ನಡೆದಿದೆ. ಧರ್ಮಾಮೃತ ಕಾವ್ಯದಿಂದ ಹಿಡಿದು ಹದಿನೆಂಟನೆಯ ಶತಮಾನದ ಕೊನೆಯ ಕಾಲದ ನಾರಸಿಂಹ ಕವಿಯ ಅನುಭವ ಶಿಖಾಮಣಿಯವರೆಗಿನ ಕಾವ್ಯಗಳಲ್ಲಿ ಮತ್ತು ಶಾಸನಗಳಲ್ಲಿ ಕಂಡು ಬರುವ ಮೈಲಾರ ಮತ್ತು ಮಾಳಚಿಯರ ಉಲ್ಲೇಖಗಳನ್ನು ನೀಡಿ ಚರ್ಚಿಸಿರುವ ಎಂ. ಚಿದಾನಂದ ಮೂರ್ತಿಯವರ ಲೇಖನ ಅನೇಕ ಕುತೂಹಲಕರ ಅಂಶಗಳನ್ನು ನೀಡುತ್ತದೆ.[೧] ಬ್ರಹ್ಮಶಿವನು ಭಾವಿಸುವಂತೆ ಮೈಲಾರ ಒಬ್ಬ ಕ್ಷುದ್ರ ದೇವ. ಅವನಿಗಾಗಿ ಮಾಡುವ ಪೂಜೆ ವ್ಯರ್ಥ. ಅಂಥ ಕ್ಷುದ್ರ ದೇವತೆಗಳಿಗೆ ವರ ಕೊಡುವ ಸಾಮರ್ಥ್ಯವಿಲ್ಲ. ಅಲ್ಲದೆ ಅನೇಕ ಜನಪ್ರಿಯ ಹಿಂದೂ ದೈವಗಳನ್ನು, ಹಬ್ಬ ಆಚರಣೆಗಳನ್ನು ಬ್ರಹ್ಮಶಿವ ಜೈನವೆಂದು ಹೇಳಿಕೊಂಡಂತೆ, ಛಲದಿಂದ ಶೌರ್‍ಯವನ್ನು ತೋರಿ ಕಾದಾಡಿ ಸತ್ತ ಒಬ್ಬ ಜೈನನೇ ಲೋಕದಲ್ಲಿ ಮೈಲಾರನೆಂದು ರೂಢಿಪಡೆದನು ಎಂದೂ ಅಭಿಪ್ರಾಯಪಟ್ಟಿದ್ದಾನೆ. ಆ ಕವಿಯೇ ನಿರೂಪಿಸುವಂತೆ 'ಮೈಲಾರ-ಮಾಳಚಿಯರು ಮನೆವೆಗ್ಗಡೆ ಚಟ್ಟಪನಿಂದ ನಿನ್ನೆ ತಾನಾದವರು'. 'ಈ ಹೇಳಿಕೆಯನ್ನು ನಂಬುವುದಾದರೆ ಮೈಲಾರ, ಮಾಳಚಿಯರು (ಸು.೧೧೫೦-೬೦) ಸ್ವಲ್ಪ ಮುಂಚೆ ಕಾಣಿಸಿಕೊಂಡವರು; ಕಾಣಿಸಿಕೊಂಡ ಸ್ವಲ್ಪ ಕಾಲದಲ್ಲೇ ಜನರಿಗೆ ಆಪ್ತರಾದರು, ಬಹು ಬೇಗ ಜನಪ್ರಿಯತೆಯನ್ನು ಗಳಿಸಿಕೊಂಡರು. ಅವರು ಸ್ಥಾಪಿತರಾದದ್ದು, ಮುಂದೆ ಬಂದದ್ದು ಮನೆವೆಗ್ಗಡೆ ಚಟ್ಟಪನಿಂದ'[೨]. ಈ ಚಟ್ಟಪ ಯಾರು ಮತ್ತು ಶಾಸನಗಳಲ್ಲಿ ಈತನ ಬಗ್ಗೆ ಉಲ್ಲೇಖಗಳಿರುವುದೇ ಎಂಬ ವಿಷಯದ ಬಗೆಗೆ ಎಂ. ಚಿದಾನಂದ ಮೂರ್ತಿಯವರು ಗಮನಸೆಳೆದಾಗ, ಕೆ.ವಿ. ರಮೇಶ್ ಅವರು, ಮನೆವೆಗ್ಗಡೆ ಚಟ್ಟಪನ ಉಲ್ಲೇಖವನ್ನು ರಾಯಚೂರು

---

೧. ಎಂ. ಚಿದಾನಂದ ಮೂರ್ತಿ : 'ಕನ್ನಡ ಕಾವ್ಯ, ಶಾಸನಗಳಲ್ಲಿ ಮೈಲಾರ ಮತ್ತು ಮಾಳಚಿ' ಸಂಶೋಧನ ತರಂಗ-೨, ಪು.೨೦೬-೨೩೧.

೨. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೦೯.

ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಜಾವೂರಿನ ಒಂದು ಶಾಸನದಲ್ಲಿ (ಕ್ರಿ.ಶ. ೧೦೩೮) ತೋರಿಸಿಕೊಟ್ಟಿದ್ದಾರೆ.[೧] ಮನೆವೆಗ್ಗಡೆ ಚಟ್ಟಪನ ಕಾಲದಲ್ಲಿ ಮೈಲಾರ ಮಾಳಚಿ ಪ್ರಸಿದ್ಧರಾಗಿರಬಹುದಾದರೂ ಅವರು ಶಂಕರಾಚಾರ್ಯರ ಕಾಲದಿಂದಲೂ ಅಸ್ತಿತ್ವದಲ್ಲಿದ್ದಂತೆ ತಿಳಿದುಬರುತ್ತದೆ.[೨]

ಕೆಲವು ವಚನಕಾರರು ಮತ್ತು ಮುಂದಿನ ಕೆಲವು ವೀರಶೈವ ಕವಿಗಳು ಮೈಲಾರನನ್ನು ತಿರಸ್ಕಾರದಿಂದ ಕಂಡಿದ್ದಾರೆ. ಹರಿಹರನ ಶಂಕರದಾಸಿಮಯ್ಯನ ರಗಳೆಯಲ್ಲಿ ಶಂಕರದಾಸಿಮಯ್ಯನು ಮೈಲಾರನನ್ನು ತನ್ನ ಆಳಾಗಿ ಮಾಡಿಕೊಂಡ ವಿಷಯವಿದೆ.[೩] ಮೈಲಾರನು ಶಂಕರದಾಸಿಮಯ್ಯನಿಗೆ ಕೊಡೆ ಹಿಡಿದ ಕತೆ ಬಸವಣ್ಣನವರ ವಚನವೊಂದರಲ್ಲಿ ಬರುವುದರಿಂದ ಅವರ ಕಾಲದಲ್ಲೇ ಅದು ಪ್ರಚಾರದಲ್ಲಿದ್ದಿರಬೇಕು. ಅವರ 'ಹಿಂಬೇರ ಮೈಲಿಗೆ ಮೇಳವಾಡುತ್ತಿದ್ದ' ಎಂಬ ವಚನದ ಪಾಠವನ್ನು ಪಿ.ಬಿ. ದೇಸಾಯಿಯವರು 'ಹಿಂಬೇರ ಮೈಲುಗ ಮೇಳವಾಡುತ್ತಿದ್ದ' ಎಂದು ನಿರ್ಧರಿಸಿ ಹಿಂಬೇರ ವಾಸ್ತವವಾಗಿ ಪೆಂಬೇರ ಎಂದೂ ಅದು ಸಾತಾರಾ ಜಿಲ್ಲೆಯ ಪೆಂಬರ ಗ್ರಾಮವಾಗಿರಬೇಕೆಂದು ಊಹಿಸಿದ್ದಾರೆ.[೪] ಆದರೆ ಎಂ. ಬಿ. ನೇಗಿನ ಹಾಳ ಅವರು ಹಿಂ(ಪೆಂ)ಬೇಜು(ರು) ಬೀದರ ಜಿಲ್ಲೆಯ ಪ್ರೇಮಪುರವೆಂದು ಅಭಿಪ್ರಾಯ ಪಟ್ಟಿದ್ದಾರೆ.[೫]

ಮಧ್ಯಕಾಲೀನ ಯುಗದಲ್ಲಿ ಉನ್ನತ ಧರ್ಮಗಳು ಏನೇ ತಿರಸ್ಕಾರದಿಂದ ಕಂಡರೂ ಜನಪ್ರಿಯ ದೈವವಾಗಿ ಸ್ಥಾನ ಪಡೆದಿದ್ದ ಮೈಲಾರ ದೇವನಾಗಿ ಆರಾಧಿಸಲ್ಪಡುತ್ತಿದ್ದ ಎಂಬುದನ್ನು ಶಾಸನಾಧಾರಗಳು ದೃಢಪಡಿಸುತ್ತವೆ. ಕಡೂರು ತಾಲ್ಲೂಕಿನ ಶಾಸನವೊಂದರಲ್ಲಿ ದಾನದ ಮೇರೆಗಳನ್ನು ಹೇಳುವಾಗ 'ಮೈಲಾರ ದೇವರ ಕೆಱೆಯ ಕೆಳಗೆ ಗದ್ದೆ'[೬] ಎಂಬ ಮಾತು ಬರುತ್ತದೆ. ಇದರಿಂದ ಮೈಲಾರ ದೇವರ ಹೆಸರಿನಲ್ಲಿ ಅಲ್ಲಿ ಕೆರೆಯೊಂದು ನಿರ್ಮಾಣವಾಗಿತ್ತು ಎಂದು ಭಾವಿಸಬಹುದು. ಇಂಡಿ ತಾಲ್ಲೂಕಿನ ಒಂದು ಶಾಸನದಲ್ಲಿ, 'ಭೋಗನಾಥ ರೇವಣಸಿದ್ಧ ಮಲ್ಲಿಕಾರ್ಜುನ ರಾಮೇಶ್ವರ ಬ್ರಹ್ಮೇಶ್ವರ ದೇವರ' ಜೊತೆ ಮೈಲಾರ ದೇವನೂ ಹೆಸರಿಸಲ್ಪಟ್ಟಿದ್ದಾನೆ.[೭] ತಿಪಟೂರು ತಾಲ್ಲೂಕಿನ ಒಂದು ಶಾಸನದಲ್ಲಿ ಒಬ್ಬ ಪಸಾಯಿತನನ್ನು 'ಮೈಯಿಲರ ದೇವರ ದಿವ್ಯ ಪಾದಾರಾಧಕ'ನೆಂದು ಕರೆಯಲಾಗಿದೆ.[೮] ಬಿಜ್ಜಳನ ಒಬ್ಬ ಅಧಿಕಾರಿಯ ಹೆಸರು 'ಮೈಳಾರ ದಂಡಾಧಿಪ'ನೆಂದು ಒಂದು ಶಾಸನದಲ್ಲಿ ಬಂದಿದೆ.[೯]

ಮೈಲಾರನ ಜನಪ್ರಿಯತೆಯ ವ್ಯಾಪ್ತಿ ಕೇವಲ ಕರ್ನಾಟಕ ಮಾತ್ರವಲ್ಲ ನೆರೆಯ ಮಹಾರಾಷ್ಟ್ರ ರಾಜ್ಯಕ್ಕೂ ಬಹು ಹಿಂದೆಯೇ ಹರಡಿದೆ. 'ಮೈಲಾರ ಕನ್ನಡ ನಾಡಿನ ಜನಪ್ರಿಯ ದೇವತೆಯಾಗಿದ್ದು ಅವನ ಉಗಮ ಕನ್ನಡ ನಾಡು. ಇಲ್ಲಿಂದ ಮಹಾರಾಷ್ಟ್ರಕ್ಕೆ

---

೧. ಕೆ.ವಿ. ರಮೇಶ್ : 'ಮನೆವೆಗ್ಗಡೆ ಚಟ್ಟಪಯ್ಯ' ಪ್ರಕ ೪೮-೪, ಪು. ೧೮೨-೮೫.

೨. ಹಿ.ವಿ. ನಾರಾಯಣ : ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನದಲ್ಲಿ ಪುಟ ೪೮೩ರಲ್ಲಿ ಉಲ್ಲೇಖಗೊಂಡಿದೆ. (ಶ್ರೀನಿವಾಸ ರಿತ್ತಿ : ಮೈಲಾರ ದೇವರು, ಪು. ೨೧)

೩. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೧೪-೨೧೫.

೪. ಪಿ.ಬಿ. ದೇಸಾಯಿ : 'ಹಿಂಬೇರ ಮೈಲಿಗೆ ಮೇಳವಾಡುತ್ತಿದ್ದ' ಕ.ನು. ೧೬:೯, ಪು. ೭೯.

೫. ಎಂ.ಬಿ. ನೇಗಿನ ಹಾಳ : 'ಮೈಲುಗ ಮೇಳವಾಡಿದ ಹಿಂ(ಪೆಂ)ಬೇರು ಯಾವುದು?' ಸಾಧನೆ, ೧೪:೩, ಪು. ೧೭.

೬. (ರೈ) ಎಕ VI ಕಡೂರು ೯೫ ಕ್ರಿ.ಶ. ೧೨೨೪.

೭. ಎಸ್‌ಐಐ XX ಇಂಡಿ ೩೪೩ ಕ್ರಿ.ಶ. ೧೩ ಶ.ಮಾ.

೮. (ರೈ) ಎಕ XVI ತಿಪಟೂರು ೧೫೭.?

೯. ಎಸ್‌ಐಐ XVIII ಬಿಜಾಪುರ ೧೫೬ ಕ್ರಿ.ಶ. ೧೧೫೧.

ಹೋಗಿ 'ಖಂಡೋಬ' ಎಂಬ ಹೆಸರಿನಿಂದ ಜನಪ್ರಿಯ ದೇವತೆಯಾಗಿ ಪರಿಣಮಿಸಿದ್ದಾನೆ. ಈ ಸಂಗತಿಗಳನ್ನು ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿರುವಂತಿಲ್ಲ'[೧] ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಟ್ಟಿದ್ದಾರೆ.

ಮೈಲಾರ ಪದದ ನಿಷ್ಪತ್ತಿಯೂ ಬಹು ತೊಡಕಾದುದು. ಪಿ. ಬಿ. ದೇಸಾಯಿಯವರು ಮೈಲಾರ ಎಂಬುದು ಮಲೆ ಶಬ್ದದಿಂದ ಬಂದಿತೆಂದು ಊಹಿಸುತ್ತಾರೆ. ಬಿ. ಎಸ್. ಕುಲಕರ್ಣಿಯವರು ಮಾಳಚಿ ಹೆಸರಿನ ಅನ್ವಯ ಮಾಡಿ ಮೈಲಾರ ಪದದ ನಿಷ್ಪತ್ತಿಯನ್ನು ಮಾಡಿರುವುದುಂಟು. ಅವರು ಅಭಿಪ್ರಾಯ ಪಡುವಂತೆ ಮಾಳಚಿ ಪದದಲ್ಲಿರುವ ಮಾಳ=ಎತ್ತರದ ಪ್ರದೇಶ. ಮಾಳ(ಚಿ) ಮೈಲ(ಳಲ ದೇವಿ) ಎಂದರೆ ಗುಡ್ಡ, ಪರ್ವತ, ಅರಣ್ಯ ಎಂದು ಅರ್ಥವಾಗುವುದೆಂದೂ ಮೈಲಾರನ ಹೆಂಡತಿಯೆಂಬ ಈ ದೇವತೆಯ ಹೆಸರಿನಲ್ಲಿರುವ ಈ ಪದಗಳು ಆಕೆಯ ಪತಿ ಮೈಲಾರ ಅಥವಾ ಮಲ್ಲಾರಿ ದೈವತದ ಹೆಸರಿನಲ್ಲಿರುವ ಮೈಲ, ಮಲ್ಲ ಅವುಗಳಲ್ಲಿ ಅಂತರ್ಗತವಾಗಿದೆ.[೨] ಎಂ. ಚಿದಾನಂದ ಮೂರ್ತಿಯವರು ಮೈಲಾರ ಮೂಲತಃ ಮೈಲರ ಎಂದಿರಬೇಕೆಂದೂ ಹೇಳಿ ಮೈಲ + ಅರಸ - ಮೈಲರಸ - ಮೈಲರ - ಮೈಲಾರ ಆಗಿರಬೇಕೆಂದು ಅಭಿಪ್ರಾಯ ಪಡುತ್ತಾರೆ.[೩]

**ಮಾಳಚಿ :** ಮಾಳಚಿಗೆ ಮೈಲಾರನ ಮಡದಿಯಾಗಿ, ದೇವತೆಯಾಗಿ ಸ್ಥಾನವಿದೆ. ಸಿಂದ ವಂಶದ ದೊರೆಗಳಿಗೆ ಕುಲದೇವತೆಯಾಗಿಯೂ ಪ್ರಸಿದ್ಧಳು. ಮಹಾ ಮಾಂಡಳಿಕ ಚಟ್ಟರಸನು 'ಮಾಳಚೀದೇವಿ ಲಬ್ಧವರ ಪ್ರಸಾದ'ನಾಗಿದ್ದನು. ಹಾವೇರಿ ತಾಲ್ಲೂಕಿನ ದೇವಿಹೊಸೂರಿನ ಮೂರು ಶಾಸನಗಳು ಮಾಳಚಿಯನ್ನು ಕುರಿತು ಕೆಲವು ಮಾಹಿತಿಗಳನ್ನು ನೀಡುತ್ತವೆ. ದೇವಿ ಹೊಸೂರು ಜನಮೇಜಯ ಅಗ್ರಹಾರವೆಂದು ಪ್ರಸಿದ್ಧವಾಗಿತ್ತು. ಮೊದಲ ಶಾಸನವು 'ಧರೆಯೊಳಗೆ ಯೋಗಪೀಠಂ ಪಿರಿದದಱಿಂದಮಧಿಕಮೆಂದು ಮಾಳಚಿಪೀಠಂ ಬೆರಸುದಿಯಸಿರ್ದ್ದ ದೆಯ್ವಂ ಸುರರೆಲ್ಲಂ ಪೊಗಳ್ವರೆ ಪಡುಳಿದರ ಪವಣೇನು' ಎಂದು ಸ್ಥಳವನ್ನು ಕೀರ್ತಿಸಿದ ಮೇಲೆ ಆ ಅಗ್ರಹಾರದ ಸಾವಿರ ಮಹಾಜನರನ್ನು 'ಶ್ರೀ ಮಾಳಚಿದೇವ ಲಬ್ಧವರಪ್ರಸಾದರುಮಪ್ಪ' ಎಂದು ಕೀರ್ತಿಸಿದೆ. ಅನಂತರ ಆ ದೇವಿಗೆ ರೇಚರಸನೆಂಬ ದಂಡನಾಯಕ ಹರಕೆ ಒಪ್ಪಿಸಿದ ವಿಷಯವನ್ನು ತಿಳಿಸುತ್ತದೆ.[೪] ಎರಡನೆಯ ಶಾಸನವು ಅಗ್ರಹಾರದ 'ಸಾಸಿರ್ವ್ವರು' ಭೋಗೇಶ್ವರ ದೇವರಿಗೆ ದಾನ ಮಾಡಿದ ವಿಷಯ ಹೇಳಿ, ಗಡಿಗಳನ್ನು ಹೇಳುವಾಗ 'ಮಾಳಚಾದೇವಿಯಿಂ ಬಡಗಲು' ಎಂದು ನಿರೂಪಿಸಲಾಗಿದೆ.[೫] ಇದು ಬಹುಶಃ ಮಾಳಚಾದೇವಿಯ ದೇವಾಲಯವನ್ನು ಗುರುತಿಟ್ಟುಕೊಂಡು ಒಂದು ಕಡೆಯ ಗಡಿಯನ್ನು ಗುರುತಿಸಲಾಗಿದೆ. ಮೂರನೆಯ ಶಾಸನ 'ಮಾಳಚಾದೇವಿ ವರಪ್ರಸಾದರಾದ ಮಹಾಜನರನ್ನು 'ಮಹಾಮಂಡಳೇಶ್ವರ ಕೀರ್ತಿದೇವರಸನಿಱಿದು ತುಱುವ ಕೊಂಡು ಹೋಹಲ್ಲಿ' ಅಕ್ಕಸಾಲಿಗ ದಾಸೋಜ ಹೋರಾಡಿ ಮಡಿದ ವಿಷಯವನ್ನು ತಿಳಿಸುತ್ತದೆ.'[೬] ಈ ಶಾಸನಗಳನ್ನು ಗಮನಿಸಿದರೆ ದೇವಿಹೊಸೂರು ಆ ಕಾಲದ ಪ್ರಸಿದ್ಧ ಮಾಳಚಿದೇವಿಯ ಪೀಠವಾಗಿದ್ದಿತೆಂದೂ, ಅಲ್ಲಿಯ ಮಹಾಜನರು ತಮ್ಮನ್ನು 'ಶ್ರೀ ಮಾಳಚಾದೇವಿ

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೦೭, ಬಿ.ಎಸ್. ಕುಲಕರ್ಣಿಯವರು ಮೈಲಾರ ಮೈದಾಳಿದ್ದು ಕನ್ನಡ ಜನಪದದಲ್ಲಿ -ಈ ದೈವತವನ್ನು ಮಹಾರಾಷ್ಟ್ರ ಪ್ರದೇಶ ಸ್ವೀಕರಿಸಿದ್ದು 'ಮಹಾರಾಷ್ಟ್ರ' ಎಂಬ ಸಾಮೂಹಿಕ ಅಸ್ಮಿತಭಾವ ಬರುವ ಮೊದಲು ಎಂದು ಅಭಿಪ್ರಾಯಪಡುತ್ತಾರೆ. ನೋಡಿ: 'ಮೈಲಾರ ಕರ್ನಾಟದ ದೇವರು ಮಹಾರಾಷ್ಟ್ರದ ಕುಲದೇವರು' ಎಂದರೇನು? ಜೆಕೆಯು VIII ಎಚ್, ಪು. ೧೭೨-೭೩. ಖಂಡೋಬಾ ಮೂಲತಃ : ಕರ್ನಾಟಕದ ಮೈಲಾರನೆಂಬ ಅಭಿಪ್ರಾಯ ಮರಾಠಿ ವಿದ್ವಾಂಸರಲ್ಲೂ ಇದೆ. ವಿವರವಾದ ಚರ್ಚೆಗೆ ನೋಡಿ ದಕ್ಷಿಣದ ದೇಶೀ ದೇವರು ಶ್ರೀ ಖಂಡೋಬಾ ಮರಾಠಿ ಮೂಲ ರಾಮಚಂದ್ರ ಚಿಂತಾಯಣ ಢೇರೆ ಕನ್ನಡ ಅನುವಾದ ರಾಮಕೃಷ್ಣ ಮರಾಠೆ ಪು. ೧-೫೨, ೬೯-೯೦.

೨. ಬಿ.ಎಸ್. ಕುಲಕರ್ಣಿ : 'ಮೈಲಾರ ಸಾಮ್ರಾಹಸ್ಯ ಕುರಿತು ಮಾಳಚಿಯಿಂದ ದೊರೆವ ಬೆಳಕು' ಜೆಕೆಯು X ಪು. ೧೨೩.

೩. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೨೫.

೪. ಎಸ್ಐಐ XVIII ಹಾವೇರಿ ೧೫೨ ಕ್ರಿ.ಶ. ೧೧೪೯.

೫. ಎಸ್ಐಐ XVIII ಹಾವೇರಿ ೩೪೭ ಕ್ರಿ.ಶ. ೧೧೬೧.

೬. ಎಸ್ಐಐ XVIII ಹಾವೇರಿ ೩೫೩ ಕ್ರಿ.ಶ. ೧೨ ಶ.ಮಾ.

ಲಬ್ಧವರಪ್ರಸಾದರೆಂದು' ಕರೆದುಕೊಳ್ಳುತ್ತಿದ್ದರೆಂದೂ ಮತ್ತು ಮಹಾ ಮಂಡಳೇಶ್ವರರೆಲ್ಲ ಹರಕೆ ಒಪ್ಪಿಸಲು ಬರುವುದನ್ನು ನೋಡಿದರೆ ಮಾಳಚಿದೇವಿ ಆ ಕಾಲಕ್ಕೆ ತುಂಬ ಗೌರವಾನ್ವಿತ ದೇವತೆಯಾಗಿ ಹೆಸರು ಪಡೆದಿದ್ದಳೆಂದು ಭಾವಿಸಬಹುದು.

ಮಾಳಚಿ ಪದದ ನಿಷ್ಪತ್ತಿಯನ್ನು ವಿದ್ವಾಂಸರು ಚರ್ಚಿಸಿದ್ದಾರೆ. ಮೈಲಾರ ಪದದ ನಿಷ್ಪತ್ತಿಯನ್ನು ಗಮನಿಸುವಾಗ ಮಾಳಚಿಯನ್ನು ಮಾಳ = ಬೆಟ್ಟದಿಂದ ನಿಷ್ಪತ್ತಿ ಮಾಡಿದ ಒಬ್ಬ ವಿದ್ವಾಂಸರ ಅಭಿಪ್ರಾಯವನ್ನು ತಿಳಿಯಲಾಯಿತು. ಎಂ. ಚಿದಾನಂದ ಮೂರ್ತಿಯವರು ಮಾಳ + ಚಿ ಎಂದು ಬಿಡಿಸುತ್ತಾರೆ. ಅದರಲ್ಲಿ 'ಚಿ' ಎಂಬುದು ಅಚ್ಚಿ ಪದದ ಸವೆದ ರೂಪವೆಂದಿದ್ದಾರೆ. ಅದು ಸಂಸ್ಕೃತದ ಆರ್ಯಪದ, ಪ್ರಾಕೃತದಲ್ಲಿ ಅಜ್ಜ, ಮಲಯಾಳದಲ್ಲಿ ಅಚ್ಚನ್, ಅಚ್ಚಿ ಎಂದಾಗುತ್ತದೆ. ಕನ್ನಡದಲ್ಲಿ ಅಜ್ಜ ಅಜ್ಜಿ ಎಂದಾಗುತ್ತದೆ. ಕನ್ನಡದಲ್ಲಿಯೂ ಅಚ್ಚಿ ಪದ ಕೆಲವೆಡೆ ಕಾಣಿಸಿಕೊಂಡಿದೆ. ಆದ್ದರಿಂದ ಮಾಳಚಿ ಪದವನ್ನು ಹೀಗೆ ವಿವರಿಸಿದ್ದಾರೆ: ಮಾಳ + ಅಚ್ಚಿ-ಮಾಳಚ್ಚಿ - ಮಾಳಚಿ.[೧] ಸೀತಾರಾಮ ಜಾಗೀರದಾರರು ಲಕ್ಷ್ಮೀ - ಲಚ್ಛೀ - ಲಚ್ಚಿ ಆಗುವ ರೀತಿಯಲ್ಲಿ ಮಹಾಲಕ್ಷ್ಮೀ- ಮಾಲಚ್ಛೀ- ಮಾಲಚ್ಚೀ- ಮಾಲಚೀ - ಮಾಳಚಿ ಆಗಿದೆಯೆಂದು ಹೇಳಿ, ಪಂಪ ಕವಿ ಬಳಸಿದ 'ಮಾಳಜಿ' ಪ್ರಯೋಗವನ್ನು ಉದಾಹರಿಸಿದ್ದಾರೆ.[೨] ಆದರೆ ಚಿದಾನಂದ ಮೂರ್ತಿಯವರು ಮಹಾಲಕ್ಷ್ಮಿಯ ತದ್ಭವವಾಗಿ ಮಾಳಚಿ ಆಗಿದೆ ಎಂದು ಭಾವಿಸುವುದನ್ನು ಒಪ್ಪುವುದಿಲ್ಲ. ಏಕೆಂದರೆ 'ಮಹಾಲಕ್ಷ್ಮಿಯ ತದ್ಭವ ಅದು ಆಗುವುದಾದರೆ ಮಾ + ಲಚಿ(ಚ್ಚಿ), ಮಾ + ಳಚಿ (ಚ್ಚಿ) ಎಂದು ಬಿಡಿಸಬೇಕಾಗುತ್ತದೆ. ಇದು ಸಾಧ್ಯವಿಲ್ಲವಾದ್ದರಿಂದ'[೩] ಅಂಗೀಕೃತವಾಗಿಲ್ಲ.

**ಬಾದುಬ್ಬೆ :**

ಪ್ರಾಚೀನ ಕರ್ನಾಟಕದಲ್ಲಿ ಪ್ರಸಿದ್ಧ ದೇವತೆಯಾಗಿದ್ದ ಬಾದುಬ್ಬೆಯ ಆರಾಧನೆ ಮಧ್ಯಕಾಲದಲ್ಲಿಯೂ ನಡೆಯುತ್ತಿದ್ದಿತು. ಕೆಲವು ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ಕಂಡು ಬರುವ ಈ ದೇವತೆಯ ಆರಾಧನೆ ಮತ್ತು ಬಾದುಬ್ಬೆ ಪದದ ನಿಷ್ಪತ್ತಿಯ ಬಗ್ಗೆ ವಿವಿಧ ವಿದ್ವಾಂಸರು ಚರ್ಚಿಸಿದ್ದಾರೆ. ವಡ್ಡಾರಾಧನೆ, ಶಂಕರ ದಾಸಿಮಯ್ಯನ ರಗಳೆ, ಸಿದ್ಧರಾಮ ಚಾರಿತ್ರ ಮುಂತಾದ ಕೃತಿಗಳಲ್ಲಿ ಬಾದುಬ್ಬೆಯ ವಿಷಯಗಳು ಪ್ರಸ್ತಾಪಿತವಾಗಿವೆ. ಬಾದುಬ್ಬೆಯ ಸ್ವರೂಪದ ಬಗ್ಗೆ ಬರೆಯುತ್ತಾ ಪಿ.ಬಿ. ದೇಸಾಯಿಯವರು ಅವಳು ವಸಂತಾಂಬೆ ಎಂದು ಭಾವಿಸುತ್ತಾರೆ.[೪] ಡಿ.ಎಲ್. ನರಸಿಂಹಾಚಾರ್ ಅವರು 'ಭದ್ರಾಂಬಾ' ಇರಬಹುದೆಂದು ಹೇಳಿದ್ದಾರೆ.[೫] ಎಂ. ಚಿದಾನಂದ ಮೂರ್ತಿಯವರು - 'ರೈತರು ಬಾಡುಬ್ಬೆಗೆ (ಇದರ ಸರಿಯಾದ ಪಾಠ ಬಾದುಬ್ಬೆ ಎಂದಿರಬೇಕು)' ಹರಸಿಕೊಳ್ಳುತ್ತಿದ್ದ ಸಂಪ್ರದಾಯವೊಂದನ್ನು ಹನ್ನೆರಡನೇ ಶತಮಾನದ ಬ್ರಹ್ಮಶಿವನು ಹೆಸರಿಸುತ್ತಾನೆ. ಈ ಸಸ್ಯಾಧಿದೇವತೆಯಾದ ಬಾದುಬ್ಬೆಯೂ ವನದೇವತೆ ಬನದಬ್ಬೆಯೂ(=ಬನಶಂಕರಿ) ಒಂದೇ ಆಗಿರುವಂತೆ ಕಾಣುತ್ತದೆ' ಎಂದಿದ್ದಾರೆ. ಅವರು ಬಸವಣ್ಣನವರ ಒಂದು ವಚನ ಮತ್ತು ಶಿವಮೊಗ್ಗ ಜಿಲ್ಲೆಯ ಪ್ರಚಲಿತ ಆಧಾರಗಳನ್ನು ಅನುಸರಿಸಿ ಬನದಬ್ಬೆಯೇ ಬಾದುಬ್ಬೆ ಆಗಿರಬಹುದೆಂದು ಭಾವಿಸುತ್ತಾರೆ.[೬] ಅದೇ ಲೇಖನದಲ್ಲಿ 'ಬನದಬ್ಬೆ-ಬಾದುಬ್ಬೆ ಎಂಬುದನ್ನು ಸಮರ್ಪಕವಾಗಿ ತೋರಿಸುವುದು ಅಸಾಧ್ಯವಲ್ಲವಾದರೂ ಕಷ್ಟ' ಎಂದಿದ್ದಾರೆ. ಆರ್. ಎನ್. ಗುರವ ಅವರು ಸಮಯ ಪರೀಕ್ಷೆಯಲ್ಲಿ ಬಾದುಬ್ಬೆಗೆ ಇರುವ ಬಾಡುಬ್ಬೆ ಎಂಬ ಪಾಠಾಂತರವನ್ನು ಸೂಚಿಸಿ, ಅದೇ ಮೂಲಪಾಠವಾಗಿದ್ದು

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ ಲೇಖನ, ಪು. ೨೨೬-೨೭.

೨. ಸೀತಾರಾಮ ಜಾಗೀರದಾರ : 'ಮಾಳಚಿ ಒಂದು ವಿಚಾರ' ಪ್ರಕ. ೪೯:೩, ಪು. ೧೬೩-೪.

೩. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ ಲೇಖನದ ಅನುಬಂಧ, ಪು. ೨೩೧.

೪. ಪಿ.ಬಿ. ದೇಸಾಯಿ : 'ದವನದ ಹುಣ್ಣಿವೆ' ಪ್ರಕ. ೩೨-೪, ಪು. ೮೧-೮೨.

೫. ಡಿ.ಎಲ್. ನರಸಿಂಹಾಚಾರ್ : ಶಬ್ದ ವಿಹಾರ, ಪು. ೪೮-೫೩.

೬. ಎಂ. ಚಿದಾನಂದ ಮೂರ್ತಿ : 'ಅಮ್ಮ, ಅಬ್ಬೆ, ಅಲ್ಲಮ, ಬಾದುಬ್ಬೆ' ಸಂಶೋಧನ ತರಂಗ, ಪು. ೧೩೪-೪೦.

ಬಾಡುಬ್ಬೆಯಲ್ಲಿರುವ 'ಬಾಡ' ಶಬ್ದಕ್ಕೆ ಗ್ರಾಮ ಎಂದರ್ಥ, ಅಬ್ಬೆ = ತಾಯಿ, ಬಾಡುಬ್ಬೆ- ಗ್ರಾಮದೇವತೆ. ಇದೇ ಬಾಡುಬ್ಬೆ-ಬಾದುಬ್ಬೆ ಎಂದು ಸೂಚಿಸಿ, ಬಾಡ + ಅಬ್ಬೆ = ಬಾಡಬ್ಬೆಯಾಗಬೇಕೇ ಹೊರತು ಬಾಡುಬ್ಬೆಯಾಗಲು ಕಾರಣವೇನು ಎಂಬ ಸಂದೇಹ ಉಳಿಯುವುದನ್ನು ತಿಳಿಸಿದ್ದಾರೆ.[೧]

ಬಾದುಬ್ಬೆ ಶಬ್ದದ ನಿಷ್ಪತ್ತಿಯ ತೊಡಕಿನ ಜೊತೆಯಲ್ಲಿ ಅವಳು ಗ್ರಾಮ ದೇವತೆ ಎಂದು ಅರ್ಥೈಸಲು ಅನ್ಯ ಆಧಾರಗಳ ಕೊರತೆಯೂ ಇದೆ. ಕಾವ್ಯ ಶಾಸನಗಳ ಪ್ರಯೋಗಗಳನ್ನು ಗಮನಿಸಿದರೆ ಬ್ರಹ್ಮಶಿವನ ಪ್ರಯೋಗದಲ್ಲಿರುವ ಪಾಠಾಂತರವನ್ನು ಬಿಟ್ಟರೆ ಉಳಿದಂತೆ ಬಾದುಬ್ಬೆಯೇ ಬಳಕೆಯಾಗಿರುವುದನ್ನು ಕಾಣುತ್ತೇವೆ. ಅಲ್ಲದೆ 'ಬಾದುಮಯ್ಯ' ಎಂದು ವ್ಯಕ್ತಿನಾಮವಾಗಿ ಒಂದು ಶಾಸನದಲ್ಲಿ ಬಳಕೆಯಾಗಿದೆ.[೨] ಕೆಲವು ಶಾಸನಗಳಲ್ಲಿ ಬನದ ದೇವತೆಯರು ಆರಾಧನೆಗೊಳ್ಳುತ್ತಿದ್ದುದಕ್ಕೆ ಆಧಾರಗಳಿವೆ. ಬಂದಳಿಕೆಯ ಒಂದು ಶಾಸನದಲ್ಲಿ 'ಸಾಕ್ಷಿಗೆ ಬನದಲಿ ಬಂದಳಾಗಿ ಬಂದಳಿಕೆ ದೇವಿಯ ಜಾತ್ರಿಗೆ ಬಹು...' ಎಂದು ಬರುತ್ತದೆ.[೩] ಚನ್ನರಾಯಪಟ್ಟಣ ತಾಲ್ಲೂಕಿನ ಒಂದು ಶಾಸನ 'ದಂಣಾಯಕರು ತಮ್ಮ ಕುಲದೇವತೆ ಬನದ ಚವುಡೇಶ್ವರಿಗೆ ಕೊಟ್ಟ ಕಬ್ಬಳ್ಳಿಯ'[೪] ಎಂದು ಬನದ ಚೌಡೇಶ್ವರಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.

ಬಾದಾಮಿಯ ಸಮೀಪವಿರುವ ಬನಶಂಕರಿಗೆ ವೈಶಾಖದ ಅಮಾವಾಸ್ಯೆಯ ದಿನ ನಡೆಯುವ ವಿಶೇಷ ಪೂಜೋತ್ಸವಕ್ಕೆ 'ಬಾದಾಮಿ ಅಮಾವಾಸ್ಯೆ' ಎಂದು ಹೆಸರು ಬಂದಿದೆ ಎಂಬ ಜನರ ನಂಬಿಕೆಗೂ, ವೈಶಾಖ ಅಮಾವಾಸ್ಯೆಯ ದಿನ ಬಾದುಬ್ಬೆಯ ಪೂಜೆ ಹಿಂದೆ ನಡೆಯುತ್ತಿದ್ದುದು, ಈಗಲೂ ಅಮಾವಾಸ್ಯೆಯನ್ನು 'ಬಾದಾಮಿ ಅಮಾವಾಸ್ಯೆ' ಎಂದು ಕರೆಯುತ್ತಿರುವುದು, ಆ ದಿನ ಬನಶಂಕರಿಗೆ ವಿಶೇಷ ಪೂಜೆ ನಡೆಯುವುದು -ಇವೆಲ್ಲ ಬನಶಂಕರಿ (=ಬನದಬ್ಬೆ) ಮತ್ತು ಬಾದುಬ್ಬೆ ಒಂದೇ ಎಂಬುದನ್ನು ಸೂಚಿಸುವುದನ್ನು ಎಂ. ಚಿದಾನಂದ ಮೂರ್ತಿಯವರು ಗುರುತಿಸುತ್ತಾರೆ.[೫]

ಶಂಕರ ದಾಸಿಮಯ್ಯನ ರಗಳೆಯಲ್ಲಿ ಮತ್ತು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಕಾವ್ಯಗಳಲ್ಲಿ ಬರುವ ಬಾದುಮಯ್ಯ ಎಂಬ ಹೆಸರು ದೇವತೆ ಎಂಬರ್ಥದಲ್ಲಿ ಬರುತ್ತದೆ. ಈ ಹಿನ್ನೆಲೆಯಲ್ಲಿ ಎಂ. ಚಿದಾನಂದ ಮೂರ್ತಿಯವರು ಕ್ಷೇತ್ರ ಕಾರ್ಯದ ಮೂಲಕ ಹೊನ್ನಾಳಿ ತಾಲ್ಲೂಕಿನ ಕುಳಕಟ್ಟೆ, ಚನ್ನಗಿರಿ ತಾಲ್ಲೂಕಿನ ಆನವೇರಿ ಗ್ರಾಮಗಳಲ್ಲಿರುವ ಬನಶಂಕರಿ ವಿಗ್ರಹಗಳಿಗೆ ಎದೆಯ ಮೇಲೆ ಸ್ತನಗಳೂ ಮುಖದ ಮೇಲೆ ಮೀಸೆಯೂ ಇರುವುದನ್ನು ಗುರುತಿಸಿ ಅದು ವಾಸ್ತವವಾಗಿ ಗಂಡೂ ಅಲ್ಲದ ಹೆಣ್ಣೂ ಅಲ್ಲದ- ಅಥವಾ ಗಂಡೂ ಹೌದು ಹೆಣ್ಣೂ ಹೌದು ಎಂಬಂತೆ ಕೆತ್ತಲ್ಪಟ್ಟು ರೂಪಿತವಾಗಿವೆ ಎಂದಿದ್ದಾರೆ.[೬] ಈ ವಿಲಕ್ಷಣ ಮೂರ್ತಿಗಳು ಬಾದುಮಯ್ಯ -ಬಾದುಬ್ಬೆ ಮತ್ತು 'ಬಾದುವೆಯ ಮದುವೆ' ಎಂಬ ಬಸವಣ್ಣನವರ ಉಕ್ತಿಗೆ ಏಕ ಕಾಲದಲ್ಲಿ ಉತ್ತರಿಸುತ್ತವೆ. ಒಂದು ರೀತಿಯಿಂದ ನೋಡಿದರೆ ಮೀಸೆ ಇರುವುದರಿಂದ ಪುರುಷ ದೇವತೆ ಬಾದುಮಯ್ಯ, ಸ್ತನಗಳಿರುವುದರಿಂದ ಬಾದುಬ್ಬೆ - ಈ ಎರಡೂ ಇರುವುದರಿಂದ 'ಬಾದುವೆಯ ಮದುವೆ' ಅಸಾಧ್ಯವಾದುದು. ಪ್ರಾಚೀನ ಕಾಲದಿಂದಲೂ ಆರಾಧನೆಗೊಳ್ಳುತ್ತಿದ್ದ ಬಾದುಬ್ಬೆ ಅಥವಾ ಬನಶಂಕರಿ ಕಾಡಿನ ದೇವತೆ; ಸಸ್ಯಗಳ ಅಧಿದೇವತೆ ಎಂದು ಹೇಳಬಹುದು.

೧. ಆರ್.ಎನ್. ಗುರವ : 'ಬಾದುಬ್ಬೆ' ಕ.ಭಾ. ೬-೨, ಪು. ೧೩೪.
೨. ಎಸ್‌ಐಐ XV ನವಲಗುಂದ ೬೩೫ ಕ್ರಿ.ಸ. ೧೩ ಶ.ಮಾ.
೩. (ರೈ) ಎಕ VII ಶಿಕಾರಿಪುರ ೨೪೧ ಕ್ರಿ.ಶ. ೧೨೮೬.
೪. (ರೈ) ಎಕ V ಚನ್ನರಾಯಪಟ್ಟಣ ೨೩೮ ಕ್ರಿ.ಶ. ೧೨೪೯.
೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ ಲೇಖನ ಪು. ೧೩೯.
೬. ಎಂ. ಚಿದಾನಂದ ಮೂರ್ತಿ : 'ಬಾದುಬ್ಬೆ-ಬಾದುಮಯ್ಯ-ಬನಾಶಂಕರಿ ಪೆಟ್ಟಿಗೆ-ಲಜ್ಜಾ ಗೌರಿ' ಸಾಧನೆ ೧೪-೨, ಪು. ೬-೧೫.

ಬಳರಿ:

ಈ ದೇವತೆಯ ಉಲ್ಲೇಖ ಶಾಸನಗಳಲ್ಲಿ, ಪಂಚತಂತ್ರ, ಮದನ ತಿಲಕ, ಧರ್ಮಾಮೃತ, ಸಮಯಪರೀಕ್ಷೆ ಮುಂತಾದ ಕೃತಿಗಳಲ್ಲಿ ಬರುತ್ತದೆ. ಎಂ. ಎಂ. ಕಲಬುರ್ಗಿಯವರು ಬನದ ಬಳರಿ, ಬನದ ಬಳಾರಿ ಎಂಬ ಪ್ರಯೋಗಗಳಿಂದ ಮತ್ತು ಚಿಕ್ಕರೂರಿನ ಹೊರವಲಯದಲ್ಲಿರುವ ವಿಗ್ರಹದ ಆಧಾರದಿಂದ ಬನದಲ್ಲಿ ಸ್ಥಾಪಿಸುವ ದೇವತೆ ಮತ್ತು ಈ ನಾಡಿನ ಪ್ರಾಚೀನ ಜಾನಪದ ಸ್ತ್ರೀದೇವತೆ ಎಂಬ ನಿರ್ಧಾರಕ್ಕೆ ಬಂದಿದ್ದಾರೆ.[೧] ಎಸ್. ಎಸ್. ಹಿರೇಮಠ ಅವರು ಬಂಧುವರ್ಮನ ಹರಿವಂಶಾಭ್ಯುದಯದಲ್ಲಿ ಬರುವ ಬಳಾರಿಯ ಉಲ್ಲೇಖದ ಕಡೆ ಗಮನ ಸೆಳೆದು ಕೃಷ್ಣಯಕ್ಷಿಯನ್ನು ಬಳಾರಿ ಎಂದಿರುವುದನ್ನು ಮತ್ತು ಅವಳನ್ನು 'ಗಿರಿನಿವಾಸಿನಿ' ಎಂದಿರುವುದನ್ನು ತಿಳಿಸಿದ್ದಾರೆ.[೨] ವಸುದೇವ, ಕೃಷ್ಣನನ್ನು ತೆಗೆದುಕೊಂಡು ವೃಷಭನ ಬೆನ್ನು ಹತ್ತಿ ಬಂದಾಗ ಮಹಾ ಪ್ರವಾಹ ದಾರಿಬಿಟ್ಟಿತು. 'ಆ ತೋಜಿಯಂ ಕಳಿದೊಂದು ಕೃಷ್ಣಯಕ್ಷಿಯ ನಿವಾಸಮನೆಯ್ದಿದೊಡಾ ವೃಷಭದೃಶ್ಯಮಾಯ್ತು' ಮತ್ತು ಇತ್ತ ನಂದಗೋಪನ ಹೆಂಡತಿ ಗಂಡು ಕೂಸು ಬೇಡಿ 'ಬಳಾರಿಗೆ ಪರಸಿ ಪೆಣ್ಣೂಸಂ ಪೆತ್ತಳು.' ಇದು ನನಗೆ ಬೇಡ ಎಂದು, ಆ ದೇವತೆಗೇ ಒಪ್ಪಿಸೆಂದು ಗಂಡನಿಗೆ ಹೇಳಿದಳು. ಆತ ಹೆಣ್ಣು ಮಗುವನ್ನು ದೇವಾಲಯದಲ್ಲಿಟ್ಟು ಬಂದಾಗ ವಸುದೇವ ಕೃಷ್ಣನನ್ನು ಅಲ್ಲಿಟ್ಟು ಹೆಣ್ಣು ಮಗುವನ್ನು ಒಯ್ದನು. ವಸುದೇವನು ದೇವತೆಯು ನುಡಿಯುವ ರೀತಿಯಲ್ಲಿ ನಂದಗೋಪನನ್ನು ಕರೆದು ಹೇಳಿದಾಗ, ನಂದಗೋಪ ಗಂಡುಕೂಸನ್ನು ಕಂಡು ಹೆಂಡತಿಗೆ ತಂದು ಕೊಡುತ್ತ 'ಕೃಷ್ಣಯಕ್ಷಿ ಕೊಟ್ಟೊಡೀತನಂತೆ ಕೃಷ್ಣನೆಂದು ಪೆಸರಕ್ಕೆಂದು ಪರಸಿ' ಎಂಬ ವಿವರಗಳು ಬರುತ್ತವೆ. ಈ ಕಾವ್ಯ ಭಾಗದ ಕತೆಯಿಂದ ಹಿಂದೂ ದೇವತೆಗಳನ್ನು ಜೈನರು ತಮ್ಮದಾಗಿಸಿಕೊಳ್ಳುವ ರೀತಿ ಸ್ಪಷ್ಟವಾಗುತ್ತದೆ.

ಎಂ.ಎಂ. ಕಲಬುರ್ಗಿಯವರು 'ಜೈನಧರ್ಮದ ಪ್ರಾಣವಾದ ಅಹಿಂಸೆಯನ್ನು ಪ್ರಸ್ತಾಪಿಸುವಾಗಲೆಲ್ಲ ಮಿಕ್ಕ ದೇವತೆಗಳಿಗಿಂತ ಬಳರಿಯನ್ನೇ ಹೆಚ್ಚು ಉಲ್ಲೇಖಿಸುವುದರಿಂದ ಆ ಕಾಲದಲ್ಲಿ ಎಲ್ಲ ದೇವತೆಗಳಿಗಿಂತ ಈ ದೇವತೆಗೆ ಅಧಿಕ ಪ್ರಾಣಬಲಿ ಜರುಗುತ್ತಿದ್ದಿತೆಂದು ಸ್ಪಷ್ಟವಾಗುತ್ತದೆ' ಎಂದು ಸಮಯ ಪರೀಕ್ಷೆಯ ಅನೇಕ ಪದ್ಯಗಳ ಆಧಾರದಿಂದ ನಿರ್ಧಾರಕ್ಕೆ ಬಂದಿದ್ದಾರೆ. ಚಿಕ್ಕರೂರು ಗ್ರಾಮದ ಹೊರವಲಯದ ಶಿಲಾಮಂಟಪದಲ್ಲಿರುವ ವಿಗ್ರಹ ಮತ್ತು ಕೌಜಗೇರಿಯಲ್ಲಿರುವ, ಮೇಲ್ಭಾಗ ಒಡೆದು ಹೋದ ಸ್ತ್ರೀವಿಗ್ರಹಗಳೊಂದಿಗೆ ಗೂಗೆಗಳನ್ನು ಕೆತ್ತಿರುವುದನ್ನು ಗಮನಿಸಿ ಗೂಗೆ ಲಾಂಛನದ ವಿಗ್ರಹಗಳು ಬಳರಿ ದೇವತೆಯವಾಗಿವೆಯೆಂದು ಗುರುತಿಸಿದ್ದಾರೆ.[೩]

ಬಳರಿಯ ಬಗ್ಗೆ ಬ್ರಹ್ಮಶಿವನ ಅಭಿಪ್ರಾಯ ಏಕ ರೀತಿಯಲ್ಲಿ ಇದ್ದಂತಿಲ್ಲ. 'ಭೂಮಿಯ ಮೇಲಿನ ಪ್ರಸಿದ್ಧ ದೇವತೆಗಳನ್ನು 'ಬಳರಿ' ಎಂದು ಜನ ಕರೆಯುತ್ತಿದ್ದರೂ ಇವು ಮೂಲತಃ ಜೈನ ಶಾಸನ ದೇವತೆಗಳೆಂದು ತಿಳಿಯಿರಿ' ಎಂದೂ ಹೇಳುತ್ತಾನೆ. ಮತ್ತೊಂದೆಡೆ ಎಕ್ಕಲ ಮಾರಿ, ಮೈಲಾರ, ಬಳರಿ ದೇವತೆಗಳಿಗೆ ಜಾತ್ರೆ ಮಾಡುವವನು ಜೈನನಲ್ಲ ಕಾಳ[೪] ಎಂದು ಹೇಳುತ್ತಾನೆ. ಅನೇಕ ಪದ್ಯಗಳಲ್ಲಿ ಹಿಂಸಾಚಾರಕ್ಕಾಗಿ ಬಳರಿಯನ್ನು ತಿರಸ್ಕರಿಸುತ್ತಾನೆ. ಹೀಗೆ ಬಳರಿಯನ್ನು ಒಮ್ಮೊಮ್ಮೆ ಸ್ವೀಕರಿಸುವ ಹಲವು ಸಾರಿ ನಿರಾಕರಿಸುವ ದ್ವಂದ್ವ ಭಾವನೆ ಕಂಡು ಬರುತ್ತದೆ.

---

೧. ಎಂ.ಎಂ. ಕಲಬುರ್ಗಿ : 'ಬಳರಿ ದೇವತೆ' ಸಾಧನೆ ೧೪-೪, ಪು. ೧೩೧.

೨. ಎಸ್.ಎಸ್. ಹಿರೇಮಠ : 'ಬಳರಿ' ಸಾಧನೆ ೯:೩, ಪು. ೧೪೩-೪೪.

೩. ಎಂ.ಎಂ. ಕಲಬುರ್ಗಿ : ಪೂರ್ವೋಕ್ತ ಲೇಖನ, ಪು. ೧೩೪-೩೫.

೪. ಎಕ್ಕಲ ದೇವಿಗಮಾ ಮಾ
ಲಕ್ಕನಿಗಂ ಬನದ ಬಳರಿಗಂ ಮೈಲಾರಂ
ಗಳ್ಕದೆ ಜಾತ್ರೆಯ ಮಾಳ್ಪಂ
ಮೊಕ್ಕಳಗಂ ಜೈನನಲ್ಲನೆಂತು ಕಾಳಂ ಸ.ಪ. ೪-೧೨೩.

ಬಳರಿ ಪದದ ನಿಷ್ಪತ್ತಿಯನ್ನು ಎಂ. ಎಂ. ಕಲಬುರ್ಗಿಯವರು ಭಟ್ಟಾರಿಕಾ - ಬಟರಿ - ಬಳರಿ - ಬಳಾರಿ ಎಂದು ರೂಪ ವ್ಯತ್ಯಾಸ ಪಡೆದಿರಬಹುದೆಂದೂ ಇಲ್ಲವೇ ಬಳರಿಯೇ ಸಂಸ್ಕೃತೀಕರಣಗೊಂಡು ಬಟರಿ(ಭಟ್ಟಾರಿಕಾ) ಆಗಿರಬಹುದೆಂದು ಸೂಚಿಸುತ್ತಾರೆ.[೧] ಎಂ. ಚಿದಾನಂದಮೂರ್ತಿಯವರು ಬಳರಿ ಸಂಸ್ಕೃತ ಭಟ್ಟಾರಿಕಾದಿಂದ ಬಂದಿದೆ ಎಂದು ಸೂಚಿಸುವ ಹಾಗೆ ಕಾಣುತ್ತದೆ.[೨] ಶಾಸನ ಪ್ರಯೋಗಗಳಲ್ಲಿ ಕೆಲವು ಮಹಾಪ್ರಾಣ 'ಭ' ಸಹಿತವಾಗಿ ಬಳಕೆಯಾಗಿದೆ. ಚಲ್ಯ ಗ್ರಾಮದ ಒಂದು ಶಾಸನದಲ್ಲಿ ದಾನದ ಗಡಿ ನಿರ್ದೇಶನ ಮಾಡುವಾಗ 'ಬಡಗಣ ಕೋಡಿಯ ಭಳಾರಿಯಂ' ಎಂದು ಬಳಕೆಯಾಗಿದೆ.[೩] ಹೊಳಲ್ಕೆರೆ ತಾಲ್ಲೂಕಿನ ಮುಗಳಿ ಕಟ್ಟೆ ಶಾಸನ 'ವರದಮ ನನ್ದನ ಹೊಸವೂರ ಬೋಳಗಾವುಣ್ಡ ಭಳರಿಯ ಮಾಡಿಸಿ ಪ್ರತಿಷ್ಠೆ ಮಾಡಿ' ಭೂಮಿದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೪]

ಸಮಯ ಪರೀಕ್ಷೆಯಲ್ಲಿ ಬಳರಿಯನ್ನು ಮಾಹೇಶ್ವರರು ವೈದಿಕರು ವೈಷ್ಣವರು ತಮ್ಮ ಮರಣಕ್ಕೆ ಹೆದರಿ ಅರ್ಚಿಸಿ ಕುಣಿಯುತ್ತಾರೆಂದು ಬ್ರಹ್ಮಶಿವ ಹೇಳುತ್ತಾನೆ.[೫] ಈ ಅಭಿಪ್ರಾಯವನ್ನು ನೋಡಿದರೆ ಬಳರಿ ಎಲ್ಲ ಧರ್ಮೀಯರಿಗೂ ಪ್ರಿಯಳಾಗಿ ಆರಾಧನೆಗೊಳ್ಳುತ್ತಿದ್ದಳೆಂದು ಭಾವಿಸಬಹುದು.

**ಮಾರಿಕವ್ವೆ :**

ಮಧ್ಯ ಕಾಲೀನ ಯುಗದಲ್ಲಿ ಮಾರಿಕವ್ವೆ ವಿಶೇಷ ಜನಪ್ರಿಯತೆ ಪಡೆದು ಆರಾಧನೆಗೊಳ್ಳುತ್ತಿದ್ದ ದೇವತೆಗಳಲ್ಲೊಬ್ಬಳು. ವಚನಕಾರರು, ಬ್ರಹ್ಮಶಿವ, ಹರಿಹರ ಮುಂತಾದವರ ಕೃತಿಗಳಲ್ಲಿ ಕಂಡು ಬರುವ ವಿವಿಧ ಉಲ್ಲೇಖಗಳು ಮಾರಿಯ ಬಗ್ಗೆ ಕೆಲವು ವಿವರಗಳನ್ನು ಒದಗಿಸುತ್ತವೆ. ಬಸವಣ್ಣನವರು ಮಾರಿಕವ್ವೆಯ ಬಗ್ಗೆ ನೋಂತು ಕೊರಳಲ್ಲಿ ಕಟ್ಟಿಕೊಂಡು, ಸಾಲ ಮಾಡಿಕೊಂಡು, ಅದನ್ನು ಮಾರಿಕೊಳ್ಳುವ ಒತ್ತೆಯಿಟ್ಟುಕೊಳ್ಳುವ ಪರಿಯನ್ನು ವಿಡಂಬಿಸಿದ್ದಾರೆ.[೬] ಇನ್ನೊಂದು ಕಡೆ 'ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿಯೆ'[೭] ಎಂದು ವ್ಯಂಗ್ಯ ಮಾಡಿದ್ದಾರೆ. ಅಲ್ಲಮ ಪ್ರಭುವಿನ ಒಂದು ವಚನದಲ್ಲಿ 'ಊರಕ್ಕಿ ಊರೆಣ್ಣೆ ಮಾರಿಕವ್ವೆ ತಾಯಿ ಬಾರೆ ಕುಮಾರನ ಕಾಯಿ ಎಂಬಂತೆ'[೮] ಎಂದು ಊರಿನವರ ವೆಚ್ಚದಲ್ಲಿ ಬದುಕುವ ಜೀವಿ ಯಾರನ್ನು ತಾನೆ ರಕ್ಷಿಸಲು ಸಾಧ್ಯ ಎಂಬ ಪರಿಹಾಸವಿದೆ. ಸಮಯ ಪರೀಕ್ಷೆಯಲ್ಲಿ ಮೈಲಾರ, ಕೇತ, ಕಾಟ, ಮಾರಿ, ಮಸಣಿ ದೇವತೆಗಳನ್ನು ಹೆಸರಿಸಿ, ನೀರನ್ನು ಕಡೆದು ಬೆಣ್ಣೆಯನ್ನು ಪಡೆಯಲು ಸಾಧ್ಯವೆ? ಹಾಗೆಯೇ ಆ ದೇವತೆಗಳನ್ನು ಪೂಜಿಸಿ ವರ ಪಡೆಯಲು ಸಾಧ್ಯವಿಲ್ಲ ಎಂದು ಬ್ರಹ್ಮಶಿವ ಹೇಳಿದ್ದಾನೆ.[೯] ಮಾರಿಕವ್ವೆಯನ್ನು ಕುರಿತು ಕೆಲವು ಉಲ್ಲೇಖಗಳಲ್ಲಿ 'ಮಾರಿ' ಎಂದು ಮಾತ್ರ ಬರುತ್ತದೆ. 'ಮಾರಿ' ಮತ್ತು 'ಮಾರಿಕವ್ವೆ' ಎಂಬ ಎರಡೂ ಹೆಸರುಗಳು ಒಂದೇ ದೇವತೆಯನ್ನು ಸೂಚಿಸುತ್ತವೆ. ಮಾರಿ ಎನ್ನುವುದು ಮಾರಿಕವ್ವೆಯ ಸಂಕ್ಷಿಪ್ತರೂಪವಾಗಿದೆ.

---

೧. ಎಂ.ಎಂ. ಕಲಬುರ್ಗಿ : ಪೂರ್ವೋಕ್ತ ಲೇಖನ, ಪು. ೧೩೧.
೨. ಎಂ. ಚಿದಾನಂದ ಮೂರ್ತಿ : 'ಕಗ್ಗ' ಪದದ ವ್ಯುತ್ಪತ್ತಿ ಮತ್ತು ಅರ್ಥ ವ್ಯತ್ಯಾಸ, ಸಾಧನೆ ೧೭:೩-೪, ಪು. ೨೮೨ ಅಡಿಟಿಪ್ಪಣಿ. ಅಲ್ಲೇ 'ಬಳಲಿಕವ್ವ' ಎಂಬ ಗ್ರಾಮದೇವತೆ 'ಬಳರಿ' ಎಂಬುದೇ ಆಗಿದೆ ಎಂದು ಹೇಳಿದ್ದಾರೆ.
೩. (ಮೈ) ಎಕ II ಶ್ರವಣಬೆಳಗೊಳ ೫೬೯ ಕ್ರಿ.ಶ. ೧೧೨೪.
೪. ಎಂ.ಎ.ಆರ್. ೧೯೪೭-೫೬ ಹೊಳಲ್ಕೆರೆ ೧೨ ಕ್ರಿ.ಶ. ೧೨ ಶ.ಮಾ.
೫. ಸ.ಪ., ೯-೯೨.
೬. ಬವ ೫೫೭.
೭. ಬವ ೫೫೮.
೮. ಅಪ್ರವ ೪೦೭.
೯. ನೀರಂ ಪೊಸದುಂ ಬೆಣ್ಣೆಯ
ನಾರಾನುಂ ಪಡೆದರೊಳರೆ ವರವೀಗುಮೆ ಮೈ
ಲಾರಂ ಕೇತಂ ಕಾಟಂ
ಮಾರಿಗೆ ಮಸಣಿಗೆಯೆನಿಪ್ಪ ಕೊಳೆ ದೆಯ್ವಂಗಳ್. ಸ.ಪ. ೯-೧೨೮.

ವಚನ ಸಾಹಿತ್ಯದಲ್ಲಿ ಮತ್ತು ಇತರ ಕಾವ್ಯಗಳಲ್ಲಿ ಬರುವ ಉಲ್ಲೇಖಗಳನ್ನು ಗಮನಿಸಿದರೆ ಮಾರಿಕವ್ವೆ ಒಬ್ಬ ಕ್ಷುದ್ರ ದೇವತೆಯಂತೆ ಚಿತ್ರಣಗೊಂಡಿದ್ದಾಳೆ. ಶಾಸನಗಳಲ್ಲಿಯೂ ಮಾರಿ ಒಬ್ಬ ಕ್ಷುದ್ರ ದೇವತೆಯಂತೆಯೇ ಚಿತ್ರಿತಳಾಗಿದ್ದಾಳೆ. ಚೆನ್ನರಾಯ ಪಟ್ಟಣ ತಾಲ್ಲೂಕಿನ ಒಂದು ಶಾಸನದಲ್ಲಿ ಬಮ್ಮರಸನ ಶೌರ್ಯವನ್ನು ಹೊಗಳುವಾಗ 'ತೊಡರ್ವರ ಮಾರಿ' ಎಂದು ಹೇಳಲಾಗಿದೆ.[೧] ವಿಷ್ಣುವರ್ಧನನ ಪರಾಕ್ರಮವನ್ನು ನಿರೂಪಿಸುತ್ತ ಒಂದು ಶಾಸನ 'ಮಲೆಯ ಮಹಾರಾಜನಂ ಮಹಾ ಮಾರಿಯಂತೆ ಮುರಿದಿಕ್ಕಿ ಜಗದೇವನಂ[೨] ಎಂದು ನಿರೂಪಿಸುತ್ತದೆ. ಇಂಥ ಪ್ರಯೋಗಗಳನ್ನು ನೋಡಿದರೆ 'ಮಾರಿ' ಅಸಾಧಾರಣ ಶಕ್ತಿ ಇರುವ, ನಾಶ ಮಾಡಬಲ್ಲ ಸಾಮರ್ಥ್ಯವಿರುವ ದೇವತೆಯಾಗಿ ಕಾಣುತ್ತಾಳೆ. ಆಧುನಿಕ ಕಾಲದಲ್ಲಿಯೂ ಮಾರಮ್ಮ ಒಬ್ಬ ಶಕ್ತಿಶಾಲಿ ದೇವತೆಯಾಗಿದ್ದು, ಜನಪದ ದೇವತೆಗಳಲ್ಲಿ ಒಬ್ಬಳಾಗಿ ಸಿಡುಬು ಕಾಯಿಲೆಗೆ ಅಧಿದೇವತೆಯಾಗಿದ್ದಾಳೆ. ಅವಳು ಶಾಪಾನುಗ್ರಹಗಳನ್ನು ಮಾಡಬಲ್ಲವಳೆಂಬ ನಂಬಿಕೆ ಬಲವಾಗಿ ಇದೆ.

**ಗ್ರಾಮ ದೇವತೆಗಳು:**

ಗ್ರಾಮ ದೇವತೆಗಳ ಅಧ್ಯಯನ ತುಂಬ ಕುತೂಹಲಕರವಾದುದು. ಸಾಮಾನ್ಯವಾಗಿ ಯಾವುದೇ ಊರಿನಲ್ಲಾಗಲೀ, ಹಳ್ಳಿಯಲ್ಲಾಗಲೀ ಆ ಊರಿನ ಅಥವಾ ಹಳ್ಳಿಯ ಗ್ರಾಮದೇವತೆ ಒಬ್ಬಳಿರುತ್ತಾಳೆ. ಒಂದು ಗ್ರಾಮದಲ್ಲಿ ಹಲವು ಗ್ರಾಮ್ಯದೇವತೆಗಳಿರಬಹುದಾದರೂ ಅವುಗಳಲ್ಲಿ ಒಬ್ಬ ನಿರ್ದಿಷ್ಟ ದೇವತೆ ಮಾತ್ರ ಗ್ರಾಮ ದೇವತೆಯೆಂದು ಮಾನ್ಯವಾಗಿರುತ್ತಾಳೆ.[೩] ಅನೇಕ ಹಳ್ಳಿಗಳಲ್ಲಿ ಗ್ರಾಮ ದೇವತೆಗೆ ದೊಡ್ಡ ಗುಡಿಯಾಗಲಿ ವೈಭವದ ಪೂಜೆಯಾಗಲಿ ಕಂಡು ಬರದೇ ಇರಬಹುದು. ಒಂದು ಸಣ್ಣ ಮಂಟಪವೋ ಮರದ ಕೆಳಗಿನ ಸಣ್ಣ ಜಗಲಿಯಂತಹ ರಚನೆಯೋ ಗ್ರಾಮ ದೇವತೆಯ ಆವಾಸ ಸ್ಥಾನವಾಗಬಹುದು. ಗ್ರಾಮ ದೇವತೆ ಜಾತಿ ಮತಗಳ ಗಡಿಯನ್ನು ದಾಟಿ ಎಲ್ಲರಿಂದ ಭಯ ಭಕ್ತಿಯಿಂದ ಪೂಜೆಗೊಳ್ಳುವುದನ್ನು ಕಾಣಬಹುದು. ಸಾಮಾನ್ಯವಾಗಿ ಗ್ರಾಮ ದೇವತೆಗಳೆಲ್ಲರೂ ಸ್ತ್ರೀದೇವತೆಯರಾಗಿದ್ದು ಆ ಗ್ರಾಮದ ಮಳೆ-ಬೆಳೆ, ಪ್ರಾಣಿ ಪಕ್ಷಿಗಳ ಮತ್ತು ಸಂತತಿಯ ರಕ್ಷಣೆ ಮತ್ತು ಪ್ರವರ್ಧಮಾನವನ್ನು ನೋಡಿಕೊಳ್ಳುವವರಾಗಿರುತ್ತಾರೆ.

ಗ್ರಾಮ ದೇವತೆಯ ಬಗ್ಗೆ ಗ್ರಾಮಸ್ಥರಿಗೆ ಅಚಲ ವಿಶ್ವಾಸವಿರುತ್ತದೆ. ಸುಮಾರು ೧೨೦ ವರ್ಷಗಳ ಹಿಂದೆ ಬೆಂಗಳೂರು ನಗರ ಹೊರವಲಯದ ಅಕ್ಕಿತಿಮ್ಮನ ಹಳ್ಳಿಯ ಗ್ರಾಮದೇವತೆ ಹಬ್ಬಕ್ಕೆ ಆಹ್ವಾನಿತರಾಗಿ ಹೋಗಿದ್ದಾಗ ತಾವು ಕಂಡ ಹಬ್ಬದ ವರ್ಣನೆಯನ್ನು ಮೆಕೆಂಜಿಯವರು ವಿವರವಾಗಿ ಮಾಡಿದ್ದಾರೆ. ಆ ಹಳ್ಳಿಯ ಗ್ರಾಮ ದೇವತೆ ಎಷ್ಟು ಶಕ್ತಿ ಶಾಲಿ ಎಂದರೆ ಕಾಲರಾದಿಂದ ನರಳುತ್ತಿದ್ದ ರೋಗಿ ಆ ದೇವಿಯ ಬಾಗಿಲವರೆಗೆ ಬಂದು ಪೂಜೆ ಸಲ್ಲಿಸಿದರೆ ಸಾಕು, ಅವನಿಗೆ ರೋಗ ಖಂಡಿತವಾಗಿ ನಿವಾರಣೆಯಾಗುವುದೆಂಬ ನಂಬಿಕೆ ಇದ್ದುದನ್ನು ಆ ಗ್ರಾಮದ ಪಟೇಲರು ಅವರಿಗೆ ತಿಳಿಸಿದರಂತೆ.[೪]

ಗ್ರಾಮ ದೇವತೆಗಳ ಬಳಿಗೆ ಸಂಕಷ್ಟ ನಿವಾರಣೆಗಾಗಿ ಹೋಗುವ ಸಂದರ್ಭಗಳೇ ಹೆಚ್ಚೆಂದು ಕಾಣುತ್ತದೆ. ಅದು ವೈಯಕ್ತಿಕವಾಗಿರಬಹುದು ಅಥವಾ ಇಡೀ ಗ್ರಾಮಕ್ಕೇ ಸಂಬಂಧಿಸಿದ್ದಾಗಿರಬಹುದು. ಬೆಂಗಳೂರಿನ ಅಣ್ಣಮ್ಮ ದೇವತೆಗೆ,

೧. ಶಾಪಮಂ ೨೦೯ ಕ್ರಿ.ಶ. ೧೧೭೪.

೨. (ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೧.

೩. ಈ ವಿಷಯವನ್ನು ಎಂ. ಚಿದಾನಂದ ಮೂರ್ತಿಯವರು ಗ್ರಾಮದೇವತೆಗಳ ಬಗ್ಗೆ ಚರ್ಚಿಸುವಾಗ ತಿಳಿಸಿದ್ದಾರೆ. ಮತ್ತು ಗ್ರಾಮ್ಯ ದೇವತೆಗಳನ್ನು ಗ್ರಾಮದೇವತೆಯಿಂದ ಬೇರ್ಪಡಿಸಿ ಅಭ್ಯಾಸ ಮಾಡಬೇಕಾದ ಅಗತ್ಯವನ್ನು ಹೇಳಿದ್ದಾರೆ.

೪. J. S.F.Mekenzi : 'The village Feast' ಇ.ಆ. III ಪು. ೬-೯.

ನಗರ ರಕ್ಷಕಿಯಂತೆ ಮಕ್ಕಳ ಸಂರಕ್ಷಕಿ ಎಂಬ ಖ್ಯಾತಿಯೂ ಇದೆ. ಎಳೆಯ ಮಕ್ಕಳನ್ನು ಕರೆದುಕೊಂಡು ಹೋಗಿ, ಆ ದೇವತೆಗೆ ವಿಶೇಷ ಪೂಜೆಯನ್ನು ಮಾಡುವುದನ್ನು ಇಂದಿಗೂ ಕಾಣಬಹುದು.

ಗ್ರಾಮ ದೇವತೆಗಳು ಸ್ತ್ರೀದೇವತೆಗಳಾದರೂ ಕೆಲವು ಸಾರಿ ಅವರಿಗೆ ಸಹಾಯಕ ಪುರುಷ ದೈವವಿರುವುದುಂಟು. ತಮಿಳುನಾಡಿನಲ್ಲಿ ಇವನಿಗೆ 'ಐಯೆನಾರ್' ಎನ್ನುತ್ತಾರೆ. ಇವನು ರಾತ್ರಿಯೆಲ್ಲ ಗ್ರಾಮವನ್ನು ಕಾಯಬೇಕು. ಈ ಸಹಾಯಕ ದೈವಕ್ಕೆ ಆಂಧ್ರದಲ್ಲಿ ಪೋತುರಾಜು ಎಂದು ಕರೆಯುತ್ತಾರೆ. ಆದರೆ ಈ ಪುರುಷ ದೇವತಾ ಸಹಾಯಕನಿಗೆ ಯಾವಾಗಲೂ ದ್ವಿತೀಯ ಸ್ಥಾನವಿದೆ.[೧]

**ಪೂಜಾ ವಿಧಿಗಳು:**

ಗ್ರಾಮ ದೇವತೆಯ ಪೂಜಾ ವಿಧಿಗಳು ಶಿಷ್ಟ ದೇವತೆಗಳ ಪೂಜಾ ವಿಧಿಗಳಂತೆ ಇರುವುದಿಲ್ಲ. ಬಹು ಸರಳವಾಗಿ ಮಂತ್ರ ರಹಿತವಾಗಿ ಇರುತ್ತವೆ. ಕೋಣ,[೨] ಕುರಿ, ಕೋಳಿ, ಮೇಕೆಗಳನ್ನು ಧಾರಾಳವಾಗಿ ದೇವಿಗೆ ಅರ್ಪಿಸುವುದುಂಟು. ಸಾಂಪ್ರದಾಯಿಕವೆನ್ನಬಹುದಾದ ಪೂಜೆ ಎಲ್ಲ ಕಡೆ ನಡೆಯುವುದಿಲ್ಲ. ಪೂಜಾ ಕಾರ್ಯಗಳನ್ನು ಮಾಡುವವರು ಪುರುಷರೂ ಆಗಿರಬಹುದು ಕೆಲವು ಕಡೆ ಸ್ತ್ರೀಯರೂ ಇರಬಹುದು. ಬಹಳಷ್ಟು ದೇವಾಲಯಗಳಲ್ಲಿ ಬ್ರಾಹ್ಮಣೇತರ ಪೂಜಾರಿಗಳಿರುವುದುಂಟು. ಇನ್ನು ಕೆಲವು ಕಡೆ ಪೂಜಾರಿಗಳೇ ಇರುವುದಿಲ್ಲ. ಗ್ರಾಮಸ್ಥರೇ ತಮಗೆ ಸರಿ ಕಂಡಂತೆ ಪೂಜಾಕಾರ್ಯವನ್ನು ನಡೆಸಿಕೊಂಡು ಹೋಗುವುದುಂಟು.[೩]

ಮಧ್ಯಕಾಲೀನ ಶಾಸನಗಳಲ್ಲಿ ಅನೇಕ ದೇವತೆಗಳ ಹೆಸರು ಕಂಡು ಬರುವುದಾದರೂ ನಿಶ್ಚಿತವಾಗಿ ಗ್ರಾಮ ದೇವತೆಯೆಂದು ವರ್ಗೀಕರಿಸುವುದು ಕೆಲವು ಕಡೆ ಕಠಿಣವಾಗುತ್ತದೆ. ಹಾಸನ ಜಿಲ್ಲೆಯ ಹೊನ್ನಮ್ಮನ ಹಳ್ಳಿಯ ಶಾಸನದಲ್ಲಿ (ಈಗ ಹೊನ್ನಮ್ಮನ ದೇವಸ್ಥಾನವಿದೆ) ಅಷ್ಟಾದಶಯೋಗ ಪೀಠಾಧಿದೇವತೆಯಪ್ಪ ದುದ್ದದ ಹೊಂನುಡಿಕೆ ದೇವಿಗೆ ವೀರಗಂಗ ಹೊಯ್ಸಳ ದೇವನು ಬಿಟ್ಟ ದಾನದ ವಿಷಯವಿದೆ.[೪] ಅದೇ ದೇವತೆಗೆ ಮಹಾಜನರು ದಾನ ಮಾಡಿದ ವಿಷಯವನ್ನೂ ಆ ಶಾಸನ ತಿಳಿಸುತ್ತದೆ. ಇದು ಗ್ರಾಮದೇವತೆಯನ್ನು ಸೂಚಿಸುತ್ತದೆ. ಸಂಕನೂರಿನ ಒಂದು ಶಾಸನ ಶ್ರೀಕರಣ ವಾಮನದೇವನಾಯಕ ತನಗೆ ಮಗನು ಹುಟ್ಟಲು ಸಂಕರ ದೇವಗೆ ಭೂಮಿ ದಾನವನ್ನು ನೀಡಿದ ವಿಷಯವನ್ನು ತಿಳಿಸುತ್ತದೆ.[೫] ಗೌಡಗೆರೆಯ ಶಾಸನ 'ಸಾವಾಸಿ ಸೊ...ಯ್ಯ' ಎಂಬುವನು ಕೆಲವರಿಂದ ಕ್ರಯ ಕೊಟ್ಟು ಭೂಮಿ ಪಡೆದು ಕೆರೆ ಕಟ್ಟಿಸಿ ಕೆರೆಯ ಕೆಳಗಿನ ಗದ್ದೆಯನ್ನು...ಗೌಡಗೆರೆಯ

---

೧. Henry Whitehead : The Village Gods of South India. ಪು. ೧೮.

೨. ಗ್ರಾಮ ದೇವತೆಗೆ ಕೋಣಗಳನ್ನು ಬಲಿ ಕೊಡುವುದನ್ನು, ಆರ್ಯ ಆಕ್ರಮಣಕಾರ ಶತ್ರುಗಳು ಸಿಕ್ಕಾಗ ಅವರನ್ನು ಅವಮಾನಿಸಿ ಮೆರವಣಿಗೆ ಮಾಡಿ ಕೊಲ್ಲುವ ಸಂಕೇತವೆಂದು ಪ್ರೊ. ಎಲ್ಮೊರ್ ಹೇಳುವುದನ್ನು ಹೆನ್ರಿ ವೈಟ್ ಹೆಡ್ ಅವರು ನಿರಾಕರಿಸಿ ಅದು ಯಾವ ರೀತಿಯಲ್ಲೂ ಆರ್ಯ ದ್ರಾವಿಡ ಸಂಘರ್ಷವನ್ನು ಹೇಳುವುದಿಲ್ಲ ಎಂದಿದ್ದಾರೆ. -ವಿವರಗಳಿಗೆ ನೋಡಿ: Henry white Head: ಪೂರ್ವೋಕ್ತ ಗ್ರಂಥ, ಪು. ೧೩-೧೪.

೩. ಬೆಂಗಳೂರಿನ ಅಣ್ಣಮ್ಮ ದೇವರ ಗುಡಿಯಲ್ಲಿ ಪೂಜಾಕಾರ್ಯವನ್ನು ಕೆಲವು ಸಾರಿ ಸ್ತ್ರೀಯರೂ ನಿರ್ವಹಿಸುವುದುಂಟು.

೪. (ರೈ) ಎಕ V ಹಾಸನ ೫೫ ಕ್ರಿ.ಶ. ೧೧೭೮.

೫. ಎಆರ್‌ಐಇ ೧೯೫೫-೫೬ ಯಲಬುರ್ಗಿ ೨೧೯ ಕ್ರಿ.ಶ. ೧೨೩೮.

ದೇವತೆಗೆ ದಾನ ಮಾಡಿದ್ದನ್ನು ತಿಳಿಸುತ್ತದೆ.[೧] ಈ ಕೆಲವು ಶಾಸನಗಳಲ್ಲಿ ಕಂಡು ಬರುವ ದಾನಗಳು ಗ್ರಾಮ ದೇವತೆಗೆ ನೀಡಿದ ದಾನಗಳಂತೆ ಕಂಡು ಬರುತ್ತವೆ. 'ಮೈಸೂರು ಪ್ರದೇಶದ ಅನೇಕ ದೇವತೆಗಳನ್ನು ಸ್ಥಳೀಯ ರಕ್ಷಕ ದೇವತೆಗಳೆಂದು ಭಾವಿಸಲಾಗಿತ್ತಲ್ಲದೆ, ಕ್ರಿ.ಶ. ೧೦೧೭ರ ಕೋಲಾರದ ಒಂದು ಶಾಸನದಲ್ಲಿ ಕೋಲಾರಮ್ಮನನ್ನು ಕೈವಾರ ನಾಡಿನ ರಕ್ಷಕ ದೇವತೆಯೆಂದು ಗುರುತಿಸಲಾಗಿದೆ'[೨]. ಕ್ರಿ.ಶ. ೭-೮ ನೆಯ ಶತಮಾನದಲ್ಲಿಯೇ ಮಂಗಳೂರಿನಲ್ಲಿ ಮಂಗಳದೇವಿಯ ದೇವಾಲಯವಿತ್ತು. ಅಲ್ಲದೆ ಉಡುಪಿ, ನೀಲಾವರ ಮುಂತಾದೆಡೆಗಳಲ್ಲಿ ಸ್ತ್ರೀದೇವತಾ ವಿಗ್ರಹ, ದೇವಾಲಯಗಳು ಇದ್ದುದಾಗಿ ತಿಳಿದು ಬರುತ್ತದೆ.[೩]

ಗ್ರಾಮ ದೇವತೆಗಳ ಆರಾಧನೆ ಕರ್ನಾಟಕದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದ್ದು ಅದು ನಿರಂತರವಾಗಿ ಮುಂದುವರಿದಿದೆ. ದಕ್ಷಿಣ ಭಾರತದ ಗ್ರಾಮ್ಯ ದೇವತೆಗಳ ವ್ಯಾಪಕತೆಯನ್ನು ಗುರುತಿಸುತ್ತಾ 'ಆರ್‍ಯರ ದೇವತೆಗಳು ಮೂಲತಃ ಯುದ್ಧ ಮಾಡುವ ಜನಾಂಗದವರಾದುದರಿಂದ ಅವುಗಳೆಲ್ಲ ಪುರುಷ ದೈವಗಳೆಂದೂ ದ್ರಾವಿಡ ದೇವತೆಗಳೆಲ್ಲವೂ ಪ್ರಮುಖವಾಗಿ ಸ್ತ್ರೀ ದೇವತೆಗಳಾಗಲು ಕಾರಣ ಇವರು ಪ್ರಮುಖವಾಗಿ ವ್ಯವಸಾಯ ವೃತ್ತಿಯವರಾಗಿರುವುದು ಕಾರಣವಾಗಿರಬಹುದೆಂದು'[೪] ಹೆನ್ರಿ ವೈಟ್‌ಹೆಡ್ ಅಭಿಪ್ರಾಯ ಪಡುತ್ತಾರೆ.

ಕನ್ನಡನಾಡಿನಲ್ಲಿ ಗ್ರಾಮದೇವತೆಗಳ ಜೊತೆ ಜೊತೆಯಲ್ಲಿ ಶಿವ, ವಿಷ್ಣು, ಆಂಜನೇಯ, ಗಣಪತಿ ಇನ್ನೂ ಮುಂತಾದ ದೈವಗಳ ಪೂಜೆ ಕಂಡು ಬರುವುವಾದರೂ ಆಯಾ ಹಳ್ಳಿಯವರಿಗೆ ಕಷ್ಟದಲ್ಲಿ ನೆರವಾಗುವ, ಆನಂದ ಅಭಿವೃದ್ಧಿಗಳಲ್ಲಿ ಸಹಾಯ ಮಾಡುವ ಆತ್ಮೀಯ ದೇವತೆಯಾಗಿ ಗ್ರಾಮದೇವತೆ ಕಂಡು ಬರುತ್ತಾಳೆ.

ಗ್ರಾಮ ದೇವತೆಯರ ಅಧ್ಯಯನ ವಿಶೇಷವಾಗಿ ಕ್ಷೇತ್ರ ಕಾರ್ಯದ ಹಿನ್ನೆಲೆಯಲ್ಲಿ ವ್ಯಾಪಕವಾಗಿ ಇನ್ನೂ ನಡೆಯಬೇಕಾಗಿದೆ.

ಪ್ರಾದೇಶಿಕ, ಜಾನಪದ, ಮಾನವಶಾಸ್ತ್ರ, ಭಾಷಿಕ, ಸಾಮಾಜಿಕ, ಆರ್ಥಿಕ, ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವಿಶೇಷವಾದ ಅಧ್ಯಯನವನ್ನು ನಿರೀಕ್ಷಿಸುವ ಕ್ಷೇತ್ರ ಇದಾಗಿದೆ. ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಅದನ್ನು ಅತ್ಯಂತ ಸೂಚ್ಯವಾಗಿ ಮಾತ್ರ ನಿರ್ದೇಶಿಸಲಾಗಿದೆ. ಈ ಕ್ಷೇತ್ರದಲ್ಲಿ ಈಗಾಗಲೇ ಆಗಿರುವ ಕೆಲವು ಮುಖ್ಯ ಅಧ್ಯಯನಗಳನ್ನು ಆಸಕ್ತರು ಗಮನಿಸಬಹುದಾಗಿದೆ.[೫]

---

೧. (ರೈ) ಎಕ V ಹಾಸನ ೧೫೩ ಕ್ರಿ.ಶ. ೧೧೭೩.

೨. R.N. Nandi : Religious Institutions and Cults in the Deccan ಪು. ೧೩೩.

೩. P. Gururaja Bhat : Studies in Tuluva History and Culture ಪು. ೩೦೧.

೪. Henry Whitehead : ಪೂರ್ವೋಕ್ತ, ಪು. ೧೭.

೫. ಚನ್ನಣ್ಣವಾಲೀಕಾರ : ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳು, ಬಸವರಾಜ ನೆಲ್ಲಿಸರ: ಗ್ರಾಮದೇವತೆಗಳು, ಪಾಟೀಲ ಜಿ.ಪಿ. : ಗ್ರಾಮದೇವತೆಗಳು, ಮಹಾದೇವ ಶಂಕನಪುರ; ಮಾರಿಹಬ್ಬಗಳು, ಡಿ. ಲಿಂಗಯ್ಯ: ಕರ್ನಾಟಕದ ಗ್ರಾಮದೇವತೆಗಳು, ಸಿದ್ಧಲಿಂಗಯ್ಯ : ಗ್ರಾಮದೇವತೆಗಳು, ಬೋರಲಿಂಗಯ್ಯ : ಉಜ್ಜನಿ ಚೌಡಮ್ಮ, ಎಸ್. ಲಕ್ಷ್ಮೀದೇವಿ: ಹೊಸಕೋಟೆ ತಾಲ್ಲೂಕಿನ ಗ್ರಾಮದೇವತೆಗಳು ಒಂದು ಅಧ್ಯಯನ.

# ೯. ಧಾರ್ಮಿಕ ಸಾಮರಸ್ಯ ಮತ್ತು ಸಂಘರ್ಷ

ಧರ್ಮಗಳು ಇಡೀ ನಾಡಿನ ಬದುಕಿನಲ್ಲಿ ಇತಿಹಾಸದುದ್ದಕ್ಕೂ ಬಹು ಪ್ರಮುಖ ಸ್ಥಾನವನ್ನು ವಹಿಸಿರುವುದನ್ನು ಕಾಣುತ್ತೇವೆ. ಕರ್ನಾಟಕವು ಕೆಲವು ಧರ್ಮಗಳಿಗೆ ಜನ್ಮ ಭೂಮಿಯೂ ಹಲವು ಧರ್ಮಗಳಿಗೆ ಆಶ್ರಯ ಸ್ಥಾನವೂ ಆಗಿದ್ದು ಎಲ್ಲ ಧರ್ಮಗಳ ಏಳುಬೀಳುಗಳನ್ನು ಕಂಡಿದೆ. ಇದುವರೆಗೂ ಬಿಡಿ ಬಿಡಿಯಾಗಿ ಒಂದೊಂದು ಧರ್ಮವನ್ನು ಅಭ್ಯಾಸ ಮಾಡುವಾಗ ಆಯಾ ಧರ್ಮಗಳು ಮಾಡಿಕೊಂಡ ಹೊಂದಾಣಿಕೆಗಳನ್ನು, ಎದುರಿಸಬೇಕಾಗಿ ಬಂದ ಪರಿಸ್ಥಿತಿಗಳನ್ನು ಗಮನಿಸಲಾಗಿದೆ. ಧರ್ಮವೆನ್ನುವುದು ತುಂಬ ಸಂಕೀರ್ಣ ಸ್ವರೂಪ ಮತ್ತು ರಚನೆಯುಳ್ಳದ್ದು; ಹಾಗೂ ಎಲ್ಲ ಸಾಮಾಜಿಕ ವರ್ಗದ ಭಿನ್ನ ಮನೋಧರ್ಮದ ಜನರ ಒಂದು ಧಾರ್ಮಿಕ ಸಂಘಟನೆಯಾಗಿರುತ್ತದೆ. ಅದು ಸಮನ್ವಯದ ಸಮತೂಕವನ್ನು ತಪ್ಪಿದಾಗ ಕೆಲವೊಮ್ಮೆ ಸಂಘರ್ಷದ ಹಾದಿಯನ್ನು ಹಿಡಿದಿರುವುದನ್ನು ಕಾಣುತ್ತೇವೆ.[೧]

**ಸಾಮರಸ್ಯ:**

ಪ್ರಾಚೀನ ಕಾಲದಿಂದಲೂ ಕನ್ನಡನಾಡು ಸಹಬಾಳ್ವೆಗೆ, ಸಾಮರಸ್ಯಕ್ಕೆ ಮತ್ತು ಧಾರ್ಮಿಕ ಸಹಿಷ್ಣುತೆಗೆ ಪ್ರಸಿದ್ಧವಾಗಿದೆ. ಆ ಕಾಲದ ಪ್ರಮುಖ ಧರ್ಮಗಳೆಲ್ಲವೂ ಒಂದೇ ಊರಿನಲ್ಲಿ, ಒಂದೇ ಪ್ರಾಂತ್ಯದಲ್ಲಿ ಅತ್ಯಂತ ಸಹಜವಾಗಿ ಸಾಮರಸ್ಯದಿಂದ ಇದ್ದುದಕ್ಕೆ ಶಾಸನಗಳಲ್ಲಿ ಸಾಕಷ್ಟು ಆಧಾರಗಳು ದೊರಕುತ್ತವೆ. ಇಂಡಿಯನ್ನು ವರ್ಣಿಸುವ ಪ್ರಖ್ಯಾತ ಶಾಸನ 'ಹರಿಗ್ರಿಹದಿಂ ಸುರಗೃಹದಿಂದರುಹಗೃಹದೆ ಬೌದ್ಧಾಲಯದಿಂ ಗೊರವರ ಸವಣರ ಬೌದ್ಧರ ನೆರವಿಗಳಿಂದಿಂಡಿನಾಡೆ ಸೊಗಯಿಸಿ ತೋರ್ಕುಂ'[೨] ಎಂದು ನಿರೂಪಿಸುತ್ತದೆ. ಬೆಳಗಾಂ ಜಿಲ್ಲೆಯ ಸೌಂದತ್ತಿ ಗ್ರಾಮದ ಒಂದು ಶಾಸನ 'ಹೊಱವೊಳಲೊಳ್ವಿರಾಜಿಸುವ ಚೂತವನಂ ಗಿರಿಸಂಕುಳಂ ಫಳಂದುಱುಗಿದ ನಾಳಿಕೇರವನಮೊಪ್ಪುವಶೋಕವನಂ ಶಿವಾಲಯಂ ಮಿಱುಪ ಜಿನೇಂದ್ರಗೇಹಮೆನಿಪಿಂತಿ-ವಱಿಂದವಶೇಷ ಸೌಖ್ಯದೊಳ್ನೆಱೆದು ಸುಗಂಧವರ್ತ್ತಿ ಸಲೆ...ವಿರಾಜಿಕುಂ'[೩] ಎಂದು ನಿರೂಪಿಸುತ್ತದೆ. ಪ್ರಶಾಂತ ವಾತಾವರಣದ ಹಿನ್ನೆಲೆಯಲ್ಲಿರುವ ಆ ಗ್ರಾಮ ಶೈವ-ಜೈನ ದೇವಾಲಯಗಳಿಂದ, ಫಲ ಸಮೃದ್ಧಿಯಿಂದ ಉತ್ತಮ ಸಹಬಾಳ್ವೆಗೆ ಸಂಕೇತವಾಗಿದೆ. ಆ ಕಾಲದ ಹೆಚ್ಚಿನ ಶಾಸನೋಲ್ಲೇಖಗಳಲ್ಲಿ ಚತುಸ್ಸಮಯಗಳೆಂದು ಪ್ರಖ್ಯಾತವಾಗಿದ್ದವು, ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಧರ್ಮಗಳು. ರಾಜನಿಗೆ ಇತರ ಎಲ್ಲ ಕರ್ತವ್ಯಗಳೊಂದಿಗೆ ಈ ನಾಲ್ಕು ಧರ್ಮಗಳನ್ನು ಸಂರಕ್ಷಿಸುವ ಮತ್ತು ಉದ್ಧರಿಸುವ

---

೧. ಸಿ.ಯು ಮಂಜುನಾಥ್ : ಧಾರ್ಮಿಕ ಸಂಘರ್ಷ ಮತ್ತು ಸಮನ್ವಯ (ಕರ್ನಾಟಕದ ಪೂರ್ವ ಮಧ್ಯ ಮತ್ತು ಮಧ್ಯಕಾಲೀನ ಅವಧಿಯ ಮಿತಿಯಲ್ಲಿ) ಸಂ. ಎಚ್. ಎಂ. ಮರುಳಸಿದ್ಧಯ್ಯ, ಷಣ್ಮುಖಯ್ಯ ಅಕ್ಕೂರಮಠ: ನಿಜಗುಣ ಪು. ೨೪೭-೨೫೯. ಈ ಲೇಖನದಲ್ಲಿ ಹೆಚ್ಚಿನ ಉಲ್ಲೇಖಗಳು ದೊರೆಯುತ್ತವೆ.

೨. ಎಸ್‌ಐಐ XVIII ಬಿಜಾಪುರ ೧೯೯ ಕ್ರಿ.ಶ. ೧೧೯೬.

೩. ಕಇ VI ಸೌಂದತ್ತಿ ೭೩ ಕ್ರಿ.ಶ. ೧೨೨೮; ಸವದತ್ತಿಯ ಎಲ್ಲಮ್ಮನ ಗುಡಿ ಮೂಲತಃ ಜೈನ ಮಂದಿರವಾಗಿದ್ದಿತು. ಅಲ್ಲದೆ ಆ ದೇವಾಲಯದ ಸಮೀಪದಲ್ಲಿರುವ ಒಂದು ದೇವಾಲಯ ಈಗ ನಾಥಪಂಥದವರ ಅಧೀನದಲ್ಲಿದೆ. ಅದರಲ್ಲಿ ಈಗಲೂ ಅನೇಕ ಭಗ್ನ ಜೈನ ಮೂರ್ತಿಗಳಿವೆ. ಈ ವಿಷಯವನ್ನು ತಿಳಿಸಿದವರು ಎಂ. ಚಿದಾನಂದ ಮೂರ್ತಿಯವರು.

ಹೊಣೆಯೂ ಇದ್ದಿತು. ಅನೇಕ ಶಾಸನಗಳಲ್ಲಿ ರಾಜರ ಅನೇಕ ಬಿರುದಾವಳಿಗಳೊಂದಿಗೆ 'ಚತುಸ್ಸಮಯಸಮುದ್ಧರಣ' ಎಂಬ ಬಿರುದೂ ಸೇರಿರುತ್ತದೆ. ಉದಾಹರಣೆಗೆ ಅರಸಿಕೆರೆಯ ಶಾಸನವೊಂದು ಎರಡನೆಯ ಬಲ್ಲಾಳನನ್ನು ಹಾಗೆ ಕರೆದಿರುವುದನ್ನು ಕಾಣಬಹುದು.[1] ರಾಜರು ಈ ರೀತಿಯ ಉದಾರ ಮನೋಭಾವವನ್ನು ಎಲ್ಲ ಧರ್ಮಗಳ ಬಗ್ಗೆ ಯಾವಾಗ ತೋರುತ್ತಿದ್ದರೋ, ಸಹಜವಾಗಿ ರಾಣಿಯರು, ಉನ್ನತ ಅಧಿಕಾರಿಗಳು ಮತ್ತು ಜನಸಾಮಾನ್ಯರೂ ಅದೇ ಮಾರ್ಗವನ್ನು ಅನುಸರಿಸುತ್ತಿದ್ದರು. ಹೆಗ್ಗೆರೆಯ ಶಾಸನವೊಂದು ಸಾಮಂತ ಚಟ್ಟನ ಹೆಂಡತಿ ಶಾಂತಲೆಯನ್ನು ವರ್ಣಿಸುತ್ತ 'ಗಂಭೀರ ಉದಾತ್ತ ಸದ್ಗುಣ ಸದಾಚಾರತ್ವಮೆಂಬೀ ಗುಣೋನ್ನತಿಯಂ ತಾಳ್ದಿ ಮಹೇಶ್ವರಾಗಮ ಜಿನಶ್ರೀ ಧರ್ಮ ಸದ್ವೈಷ್ಣವಾಶ್ರೀತ ಬೌದ್ಧಾಗಮಮೆಂಬ ನಾಲ್ಕು ಸಮಯ ವ್ಯಾಪಾರಮಂ ಮಾಪ್ಪ ಸಂಗತ ಚಾತುರ್ಯೆಗೆ ಕಾನ್ತೆ ಶಾನ್ತಲೆಗೆ ಪೇಳಾರುಂ ಸಮಂ ಬಪ್ಪರೇ' ಎಂದು ಹೇಳುತ್ತದೆ.[2] ಧರ್ಮಗಳನ್ನು ರಕ್ಷಿಸುವುದು ಅಗ್ರಹಾರದ ಮಹಾಜನರ, ಊರೊಡೆಯರ ಕರ್ತವ್ಯವೂ ಆಗಿದ್ದಿತು. ಲಕ್ಕುಂಡಿಯ ಒಂದು ಶಾಸನ 'ಶ್ರೀಮಲ್ಲೊಕ್ಕಿಗುಣ್ಡೆಯೂರೊಡೆಯ ಪ್ರಮುಖ ಮಹಾಜನಂ ಶ್ರೀ ಸಾಸಿರ್ವರು ಸಮಸ್ತ ಗೋಲೆ[3] ಗೋ ಬ್ರಾಹ್ಮಣಮ್ಮೊದಲಾಗಿ ಸಬಾಲ ವೃದ್ಧರ್ನೆರೆದು ಧರ್ಮ್ಮಂಗಳಂ ಸುಧರ್ಮ್ಮದಿಂ ರಕ್ಷಿತಮಾಗಿ ರಕ್ಷಿಸುತ್ತಮಿರೆ'[4] ಎಂದು ಹೇಳುತ್ತದೆ. ಧರ್ಮರಕ್ಷಣೆ ಪ್ರತಿಯೊಬ್ಬ ವ್ಯಕ್ತಿಯ ಕರ್ತವ್ಯ ಎಂದು ಇದು ಸೂಚಿಸುತ್ತದೆ.

ಧರ್ಮಗಳೂ ಪರಸ್ಪರ ಪ್ರಭಾವಕ್ಕೆ ಒಳಗಾಗುತ್ತಿದ್ದವು. ಶಿವಪುರಾಣ, ಭಾಗವತ ಪ್ರಥಮ ಸ್ಕಂಧಗಳಲ್ಲಿಯೇ ಬುದ್ಧನನ್ನು ವಿಷ್ಣುವಿನ ಒಂಭತ್ತನೆಯ ಅವತಾರವೆಂದು ಪರಿಭಾವಿಸಲಾಗಿದೆ. ಹನ್ನೆರಡನೆಯ ಶತಮಾನದ ವೈಷ್ಣವ ದೇವಾಲಯಗಳಲ್ಲಿ ಬುದ್ಧನ ವಿಗ್ರಹಗಳು ಕಂಡು ಬರುತ್ತವೆ. ಆ ಕಾಲಕ್ಕೆ ಹಿಂದೂಗಳು ಬುದ್ಧನನ್ನು ವಿಷ್ಣುವಿನ ಅವತಾರವೆಂದು ಭಾವಿಸಿ ತಮ್ಮ ದೇವತೆಗಳಲ್ಲಾಗಲೇ ಸೇರಿಸಿಕೊಂಡಿದ್ದರು.[5] ಜೈನರೂ ಅನೇಕ ಹಿಂದೂ ದೇವತೆಗಳನ್ನು, ಹಬ್ಬಗಳನ್ನು ತಮ್ಮದನ್ನಾಗಿ ಮಾಡಿಕೊಂಡದ್ದನ್ನು ಈಗಾಗಲೇ ಗಮನಿಸಲಾಗಿದೆ. ಧರ್ಮಗಳ ಪರಸ್ಪರ ಪ್ರಭಾವವನ್ನು, ಕೊಳು- ಕೊಡೆಯನ್ನು ಕುರಿತು ಇನ್ನೂ ಆಳವಾದ ಅಧ್ಯಯನ ನಡೆಯಬೇಕಾಗಿದೆ.

ಎಲ್ಲ ಧರ್ಮಗಳನ್ನು ಸಮಭಾವದಿಂದ ಕಾಣುತ್ತಿದ್ದ ಮನೋಧರ್ಮ ಆ ಕಾಲದ ಹಲವು ಶಾಸನಗಳಲ್ಲಿ ವ್ಯಕ್ತವಾಗಿದೆ. ಅರಸಿಕೆರೆಯ ಒಂದು ಶಾಸನ ದೇವಪಿಳ್ಳೈ ಎಂಬ ವೈದ್ಯನನ್ನು ಹೊಗಳುತ್ತ 'ವಿನಯ ವಿಧಾನಂ ಸಜ್ಜನ ಸೇವ್ಯಂ ಸರ್ವಸಮಯ ಸಮದರ್ಶಿಯೆನಿಪ್ಪನುಪಮ ಗುಣದಿಂ ಮೆಱೆವಂ'[6] ಎಂದು ಹೇಳುತ್ತದೆ. ಧರ್ಮಗಳ ಈ ಸಹಬಾಳ್ವೆ ಕ್ರಿ.ಶ. ೧೧೨೯ ರ ಒಂದು ಶಾಸನದಲ್ಲಿ ಸೊಗಸಾಗಿ ವ್ಯಕ್ತವಾಗಿದೆ. ಆ ಶಾಸನದಲ್ಲಿ 'ಅನ್ಯರನ್ನು (ಅಪರಿಚಿತರನ್ನು) ಆದರಿಸುತ್ತಾರೆ; ಸತ್ಯವಾಕ್ಯರತರು (ಸುಳ್ಳಾಡುವುದಿಲ್ಲ, ಒಳಗೊಂದು ಹೊರಗೊಂದು ರೀತಿ ನಡೆವವರಲ್ಲ) ವಿವೇಕ ಶಾಲಿಗಳು; ಧರ್ಮನಿಷ್ಠರು' ಎಂದು ವರ್ಣಿಸಿ ಮುಂದುವರಿದು 'ಹರಿಹರ ಕಮಲಾಸನ ವೀತರಾಗ ಬೌದ್ಧಾಲಯಗಳಿಂದ ವಸುಂಧರೆಗೆಸೆವ ಪಂಚಶರದಂತಿರೆ ಪಂಚಮಠಗಳೆಸೆವುವಾ ಪಟ್ಟಣದೊಳ್' ಎಂದು ಆ ಸ್ಥಳದ ಧರ್ಮಸಮನ್ವಯವನ್ನು ನಿರೂಪಿಸುತ್ತದೆ.[7]

---

೧. (ರೈ) ಎಕ V ಅರಸಿಕೆರೆ ೭೯ ಕ್ರಿ.ಶ. ೧೧೮೪.

೨. (ರೈ) ಎಕ XII ಚಿಕ್ಕನಾಯಕನ ಹಳ್ಳಿ ೨೧ ಕ್ರಿ.ಶ. ೧೧೬೦.

೩. ಗೋಲೆ - ಈ ಪದಕ್ಕೆ ಗೋಲಕ ಎಂಬ ಅರ್ಥ ಕೊಟ್ಟು ಹುಂಡಿ ಎಂದು ಹೇಳಿ ಪ್ರಶ್ನೆ ಚಿಹ್ನೆಯನ್ನು ಕ.ಕ. ನಿಘಂಟು III ಪು. ೨೬೫೦ ರಲ್ಲಿ ನೀಡಲಾಗಿದೆ. ಕೆಲವು ಶಾಸನಗಳಲ್ಲಿ ಬರುವ ಪ್ರಯೋಗಗಳಿಗೆ ಈ ಅರ್ಥ ಅಷ್ಟು ಸಮಂಜಸವೆನಿಸುವುದಿಲ್ಲ.

೪. ಎಸ್‌ಐಐ XV ಗದಗು ೧೧೯ ಕ್ರಿ.ಶ. ೧೧೭೩.

೫. ಎಂ. ಚಿದಾನಂದ ಮೂರ್ತಿ: ಕಶಾಸಾಂಅ ಪು. ೧೧೭.

೬. (ರೈ) ಎಕ V ಅರಸಿಕೆರೆ ೯ ಕ್ರಿ.ಶ. ೧೨೮೬.

೭. ಎಸ್.ಎಸ್. ರಾಘವಾಚಾರ್: 'ಧರ್ಮ, ಸಮಾಜ ಮತ್ತು ಸಂಸ್ಕೃತಿ: ಧರ್ಮ ಮತ್ತು ತತ್ವಜ್ಞಾನ ಕಲ್ಯಾಣ ಚಾಲುಕ್ಯರ ಕಾಲ' ಕರ್ಣಾಟಕದ ಪರಂಪರೆ I ಪು.೩೯೧.

ಕೌಟುಂಬಿಕ ನೆಲೆಯಲ್ಲಿಯೂ ಈ ಧಾರ್ಮಿಕ ಸಾಮರಸ್ಯ ಕಂಡು ಬರುತ್ತದೆ. ಭಿನ್ನ ಭಿನ್ನ ಮತ ಧರ್ಮಗಳನ್ನು ಅವಲಂಬಿಸಿದರೂ ಶಾಂತಿ ಸಮಾಧಾನಗಳಿಂದ ಒಂದೇ ಕುಟುಂಬದಲ್ಲಿ ವ್ಯಕ್ತಿಗಳು ಜೀವಿಸುತ್ತಿದ್ದ ಅನೇಕ ನಿದರ್ಶನಗಳು ದೊರೆಯುತ್ತವೆ. ವಿಷ್ಣುವರ್ಧನನ ವೈಯಕ್ತಿಕ ಧರ್ಮ ಯಾವುದೆಂಬುದನ್ನು ಹೇಳುವುದು ಕಷ್ಟವಾದರೂ ಆತನ ರಾಣಿ ಶಾಂತಲೆ ಜೈನಳು. ಆಕೆಯ ತಂದೆ ಮಾರಸಿಂಗಮಯ್ಯ ನಿಷ್ಠಾವಂತ ಶೈವ, ತಾಯಿ ಮಾಚಿಕವ್ವೆ ಜೈನಳು. ಎರಡನೆಯ ಬಲ್ಲಾಳನ ಮಂತ್ರಿ ಚಂದ್ರಮೌಳಿ ಬ್ರಾಹ್ಮಣನಾದರೂ ಅವನ ಮಡದಿ ಆಚಿಯಕ್ಕ ಜೈನಳು. ಅವಳು ಶ್ರವಣಬೆಳಗೊಳದಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದಳು. ಅವಳು ಕಟ್ಟಿಸಿದ ಬಸದಿಗೆ ಬಲ್ಲಾಳನು ಒಂದು ಹಳ್ಳಿಯನ್ನು ದಾನವಾಗಿ ನೀಡಿದ. ಆಚಿಯಕ್ಕ ರಾಜನಿಂದ ಗೊಮ್ಮಟನ ಪೂಜೆಗಾಗಿ ಇನ್ನೊಂದು ಹಳ್ಳಿಯನ್ನು ದಾನವಾಗಿ ಪಡೆದಳು.[೧] ಚಾಳುಕ್ಯರು ವಿಷ್ಣುಭಕ್ತರಾಗಿದ್ದರು. ಚಾಳುಕ್ಯ ೬ನೆಯ ವಿಕ್ರಮಾದಿತ್ಯನ ರಾಣಿ ಜಾಕಲದೇವಿ ನಿಷ್ಠಾವಂತ ಜೈನಳಾಗಿದ್ದಳು. ರಾಜನು ವೈಯಕ್ತಿಕವಾಗಿ ವಿಷ್ಣುಭಕ್ತನಾದರೂ ಅವನು ಅವಳ ಜೈನನಿಷ್ಠೆಯಿಂದ ಪ್ರಭಾವಿತನಾಗಿ ಅವಳ ಪೂಜಾಕಾರ್ಯಗಳ ಅಗತ್ಯಗಳನ್ನು ಪೂರೈಸಿದ ವಿಷಯ ತಿಳಿದುಬರುತ್ತದೆ.[೨] ಹೀಗೆ ರಾಜರು ವೈಯಕ್ತಿಕವಾಗಿ ಯಾವುದೇ ಧರ್ಮವನ್ನು ಅನುಸರಿಸುತ್ತಿರಲಿ ಅವರು ಎಲ್ಲ ಧರ್ಮಗಳನ್ನು ಸಮಾನವಾಗಿ ಕಂಡು ಪ್ರೋತ್ಸಾಹ ನೀಡುತ್ತಿದ್ದುದು ಕಂಡುಬರುತ್ತದೆ.[೩]

ಧಾರ್ಮಿಕ ಸಹಿಷ್ಣುತೆ ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಬಿ.ಆರ್. ಗೋಪಾಲ್ ಅವರು ಮುತ್ತಗಿ ಶಾಸನದ ಉದಾಹರಣೆಯನ್ನು ನೀಡುತ್ತಾರೆ. ಗೋವಿಂದರಾಜ ಎನ್ನುವವನು ರಾಮೇಶ್ವರ ದೇವಾಲಯವನ್ನು ಕಟ್ಟಿಸಿ ದಾನವನ್ನು ನೀಡುತ್ತಾನೆ. ದಾನವನ್ನು ವಹಿಸಿಕೊಡುವುದು ಯೋಗೀಶ್ವರ ಪಂಡಿತನೆಂಬ ಶೈವ ಗುರುವಿಗೆ. ಗೋವಿಂದರಾಜ ವಿಷ್ಣುಭಟ್ಟನ ಮರಿಮೊಮ್ಮಗ, ಗೋವಿಂದನ ಮೊಮ್ಮಗ ಮತ್ತು ವಿಷ್ಣುವಿನ ಮಗ. ಹೆಸರು ಧರ್ಮವನ್ನು ಸೂಚಿಸುವುದಾದರೆ ಅವರು ವೈಷ್ಣವರು. ಅಂದರೆ ಅವರು ಶೈವ ದೇವಾಲಯವನ್ನು ಕಟ್ಟಿ ಶೈವ ಗುರುವಿಗೆ ಕೊಟ್ಟಿದ್ದಾರೆ. ಅವರು ಶೈವರೇ ಆದರೆ ತಲೆಮಾರಿನಿಂದ ತಲೆಮಾರಿಗೆ ವಿಷ್ಣು-ಗೋವಿಂದ ಎಂದು ಹೆಸರಿಟ್ಟುಕೊಂಡಿರುವುದು ಕುತೂಹಲಕರವಾಗಿದೆ.[೪]

---

೧. (ರೈ) ಎಕ V ಚನ್ನರಾಯಪಟ್ಟಣ ೧೫೦ ಕ್ರಿ.ಶ. ೧೧೮೨.

೨. P. B.Desai :Basaveshwara and His Times. ಪು. ೧೧೪.

ಈ ರೀತಿಯ ಭಿನ್ನ ಧರ್ಮದ ಗಂಡ-ಹೆಂಡತಿಯರನ್ನು ಬ್ರಹ್ಮಶಿವ ಮತ್ತು ಬಸವಣ್ಣ ಅಷ್ಟಾಗಿ ಒಪ್ಪದೆ ತಿರಸ್ಕರಿಸಿದ್ದಾರೆ.

ಪೆಂಡತಿ ಮಾಹೇಶ್ವರಿ ಗಡ
ಗಂಡಂ ಜೈನಂ ಗಡವನ ಮಕ್ಕಳ್ಗಡ ಮಾ
ರ್ತ್ತಂಡಂಗೆ ಭಕ್ತರೆನಿಪಾ
ಭಂಡಂಗುತ್ತಮದ ಜೈನವೆಸರೆಂತೆಸೆಗುಂ
ಸ.ಪ. ೪-೧೨೫

ಗಂಡ ಶಿವಲಿಂಗದೇವರ ಭಕ್ತ
ಹೆಂಡತಿ ಮಾರಿಮಸಣಿಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆಮಾಂಸ
ಬ.ವ. ೧೦೪

೩. K. K.Handiqui : Yaslastilaka and Indian Culture. ಪು. ೩೫೨.

B.R. Gopal : Chalukyas of Kalyana and Kalachuris, ಪು. ೪೧೫.

೪. ಅದೇ ಪು. ೪೧೫-೧೬.

ಅನ್ಯ ಧರ್ಮಗಳ ಬಗ್ಗೆ ಉದಾರ ದೃಷ್ಟಿ ಅನೇಕ ಶಾಸನಗಳಲ್ಲಿ ವ್ಯಕ್ತವಾಗಿದೆ. ಹರಪನ ಹಳ್ಳಿ ತಾಲ್ಲೂಕಿನ ಒಂದು ಶಾಸನ ಮಹಾಪ್ರಧಾನ ಸಾವಂತ ಪಂಡಿತರ ಪುತ್ರ ಕೇಸವ ಪಂಡಿತ ಮೊಸಳೆವಾಡದಲ್ಲಿ ಜೀರ್ಣೋದ್ಧಾರವಾಗಿ ಮಾಡಿಸಿದ ಜಿನಾಲಯಕ್ಕೆ ಚತುಸ್ಸಮಯ ಸಮುದ್ಧರಣನೂ ವೈಷ್ಣವ ಕುಳತಿಳಕನೂ 'ಶ್ರೀಮತ್ತ್ರಸಂನ ಚೆಂನಕೇಸವ ದೇವರ ದಿಬ್ಯ ಶ್ರೀ ಪಾದಾರಾಧಕನುಮಪ್ಪ ಮಂನೆಯ ಭೈರವ ದೇವರಸರೂ ಗೂಡೂ ಸಮಸ್ತ ಪರಿವಾರವೂ ಸ್ಥಾನಮಾನ ಮುಖ್ಯವಾಗಿ' ಅದೇ ಜಿನಾಲಯಕ್ಕೆ ಮೂಲಸಂಘದ ವಿನಯಚಂದ್ರ ದೇವರಿಗೆ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೧] ಇಲ್ಲಿ ಭೈರವ ದೇವರಸ ವೈಯಕ್ತಿಕವಾಗಿ ವೈಷ್ಣವ ಧರ್ಮಾನುಯಾಯಿ. ಚೆನ್ನಕೇಶವ ದೇವರ ಪಾದಪದ್ಮಾರಾಧಕ, ಆದರೂ ಚತುಸ್ಸಮಯ ಸಮುದ್ಧರಣನಾಗಿದ್ದನು. ಈ ಮಾತು ಕೇವಲ ಶ್ಲೇಷೆಯಾಗಿ ಬರದೆ ತನ್ನದಲ್ಲದ ಜೈನಧರ್ಮಕ್ಕೆ ದಾನ ನೀಡುವುದರ ಮೂಲಕ ಪ್ರತ್ಯಕ್ಷವಾಗಿ ಪ್ರಕಟವಾಗಿದೆ.

ದೇವಿ ಹೊಸೂರಿನ ಒಂದು ಶಾಸನ ಅಲ್ಲಿಯ ಅಗ್ರಹಾರದ ಸಾವಿರ ಮಹಾಜನರನ್ನು 'ಚತುಃಸೀಮಾಂತರಂಗಳೊಳಾದ ಸಕಲ ಧರ್ಮಂಗಳಂ ತಂಮ್ಮ ಧರ್ಮ್ಮಮೆಂದಾರಯ್ದು....'[೨] ಎಂದು ಅವರ ಗುಣ ವಿಶೇಷವನ್ನು ಕೀರ್ತಿಸುತ್ತದೆ. ಸಿರಸಿಂಗಿಯ ಒಂದು ಶಾಸನ ಕೈಪಣ ಮತ್ತು ಚೌಡಿ ಗಾವುಂಡಿಯರ ಮಗನಾದ ಪದ್ಮ ಗೌಡನನ್ನು ಜಿನಪದಪದ್ಮನೆಂದು ಹೊಗಳುತ್ತದೆ. ಇವನು ತನ್ನ ಪಿರಿಯ್ಯಯ್ಯ ಕಪ್ಪಗೌಡಂಗೆ ಪರೋಕ್ಷವಿನಯವಾಗಿ ಗ್ರಾಮೇಶ್ವರ ದೇವರ ನಿತ್ಯಪೂಜೆ ಆಹಾರ ದಾನವಾಗಿ ತನ್ನ ಹೊಲದಲ್ಲಿ ರುದ್ರಶಕ್ತಿಯರ ಕಾಲು ತೊಳೆದು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೩] ಇಲ್ಲಿ ಜೈನ ಪದ್ಮಗೌಡ ಗ್ರಾಮೇಶ್ವರ ದೇವರಿಗಾಗಿ ಶೈವ ಮುನಿಗೆ ದಾನ ಮಾಡಿರುವುದು ವಿಶೇಷವಾಗಿದೆ. ಹಿರಿಯೂರಿನ ಶಾಸನವೊಂದು ಜೈನನೊಬ್ಬ ಶಿವಧರ್ಮಕಥನದಿಂದ ಪ್ರಭಾವಿತನಾಗಿ ಶಿವ ದೇವಾಲಯಕ್ಕೆ ದಾನ ಮಾಡಿದ ವಿಷಯವನ್ನು ಹೀಗೆ ನಿರೂಪಿಸುತ್ತದೆ. 'ಎಡೆದೊಱೆ ಮಂಡಲಿ ಸಾಯಿರದ ನಾಳ್ಪ್ರಭು ವಡ್ಡ ವ್ಯವಹಾರಿ ಜಿನೇಂದ್ರ ಪಾದಾರಾಧಕರುಮಪ್ಪ ಹೊಯ್ಸಳ ಗೊಯ್ದಿಸೆಟ್ಟಿಯ ರಾಯನಗ್ರತನೂಜ ಬಲ್ಲಗಾವುಂಡನಾ ತಂಮ ಬೊಪ್ಪಗಾವುಂಡನಿಂತೀ ಸುಪುತ್ರರ್ವೆರಸು... ಸುಖದಿಂ ಜೀವಿಸುತ್ತಿರ್ದೊಂದು ದಿವಸಂ ಶಿವಧರ್ಮ ಕಥನವಂ ಕೇಳ್ದು.... ಸುದಿನಂ ಕೂಡಲು ಶ್ರೀ ಸಿದ್ಧೇಶ್ವರರಂಗಭೋಗಕಂ ನಿವೇದ್ಯಕ್ಕಂಮಾಹಾರ ದಾನಕಂ ಜೀರ್ಣೋದ್ಧಾರಕಂ....'[೪].

ಮಹಾ ಸಾಮಂತನಾದ ಬಾಚಿದೇವ ತುಂಬ ಅಪರೂಪದ ವ್ಯಕ್ತಿಯಾಗಿ ಕಂಡುಬರುತ್ತಾನೆ. ಅವನ ವಿಷಯವನ್ನು ಕೈದಾಳ ಶಾಸನವು ತಿಳಿಸಿಕೊಡುತ್ತದೆ. ಅವನು ತನ್ನ ತಂದೆಯಾದ ಗಂಗ್ಯೆಯನ ಹೆಸರಿನಲ್ಲಿ ಪರೋಕ್ಷ ವಿನಯವಾಗಿ ಗಂಗೇಶ್ವರ ದೇವಾಲಯವನ್ನು ಪ್ರತಿಷ್ಠೆ ಮಾಡಿಸಿ ದಾನ ಮಾಡಿದ ಅನಂತರ ಕೇಶವ ದೇವರಿಗೆ ದಾನ ಮಾಡಿದ. ಅನಂತರ ಅವನು ತನ್ನ ಮುತ್ತಯ್ಯ ಸಾವಂತ ಚಲವಜೀವಂಗೆ ಪರೋಕ್ಷ ವಿನಯವಾಗಿ ಚಲವಜೀಶ್ವರ ದೇವಾಲಯ ಕಟ್ಟಿಸಿದ, ತನ್ನ ಮಗಳು ಕುಮಾರಿ ಚೆಂನವೆ ನಾಯಕಿತಿಗೆ ಪರೋಕ್ಷ ವಿನೆಯವಾಗಿ ಶ್ರೀ ರಾಮೇಶ್ವರ ದೇವರ ದೇವಾಲಯವನ್ನು ಕಟ್ಟಿಸಿದ, ಹೆಂಡತಿ ಭೀಮವೆ ನಾಯಕಿತಿಗೆ ಪರೋಕ್ಷ ವಿನೆಯವಾಗಿ ಭೀಮ ಜಿನಾಲಯವೆಂಬ ಬಸದಿಯನ್ನು ಕಟ್ಟಿಸಿ ಭೀಮಸಮುದ್ರವೆಂಬ ಕನ್ನೆಗೆಱೆಯನ್ನು ಕಟ್ಟಿಸಿದ.[೫] ಬಾಚಿದೇವ ತನ್ನ ಆತ್ಮೀಯರಿಗೆ ಪರೋಕ್ಷ ವಿನಯವನ್ನು ತೋರಿಸುವಾಗಲೂ ಶೈವ ವೈಷ್ಣವ ಜೈನ ಧರ್ಮಗಳಿಗೆ ತನ್ನ ಕಾಣಿಕೆಯನ್ನು ನೀಡಿ ಅರ್ಥವತ್ತಾಗಿ ನಡೆದುಕೊಂಡಿದ್ದಾನೆ.

---

೧. ಎಸ್‌ಐಐ IX(i) ಹರಪನಹಳ್ಳಿ ೩೮೭ ಕ್ರಿ.ಶ. ೧೨೯೭.

೨. ಎಸ್‌ಐಐXVIII ಹಾವೇರಿ ೧೫೨ ಕ್ರಿ.ಶ. ೧೧೪೯.

೩. ಕಇ I ಸೌಂದತ್ತಿ ೨೪ ಕ್ರಿ.ಶ. ೧೧೪೮.

೪. (ರೈ) ಎಕ VII ಶಿವಮೊಗ್ಗ ೪೦ ಕ್ರಿ.ಶ. ೧೧೮೦.

೫. (ರೈ)ಎಕ XII ತುಮಕೂರು ೯ ಕ್ರಿ.ಶ. ೧೧೫೧.

ಹೀಗೆ ಒಬ್ಬ ವ್ಯಕ್ತಿ ಎರಡು ಅಥವಾ ಮೂರು ಧರ್ಮಗಳಿಗೆ ದಾನ ಅಥವಾ ಬೆಂಬಲ ನೀಡುವುದನ್ನು ಕಾಣುತ್ತೇವೆ. ಜೈನ ಗುರುವೊಬ್ಬ ಕೋಲೂರು ನಾಡಿನಲ್ಲಿ ಶೈವ ದೇವಸ್ಥಾನವನ್ನು ಕಟ್ಟಿಸಿರುವುದುಂಟು.[೧] ಹೀಗೆ ಉದಾರವಾದಿಯಾದ, ಪರಧರ್ಮ ಸಹಿಷ್ಣುತೆಯು ಶಾಸನಗಳಿಂದ ಸುಂದರವಾಗಿಯೂ ಆದರ್ಶಯುತವಾಗಿ ಮೂಡಿಬರುವುದಾದರೂ ಇದಕ್ಕೆ ತದ್ವಿರುದ್ಧವೆನ್ನಬಹುದಾದ ವಿಕೃತ ಚಿತ್ರವೂ ಕೆಲವು ಶಾಸನಗಳಿಂದ ಮೂಡಿ ಬರುತ್ತದೆ ಎನ್ನುವುದು ಕುತೂಹಲಕರ ವಿಷಯವಾಗಿದೆ.

ಶೈವ-ವೈಷ್ಣವ ಧರ್ಮಗಳು ಪರಸ್ಪರ ಹೊಂದಾಣಿಕೆಯಿಂದ ಈ ನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದ್ದವು. ಜೈನಧರ್ಮದ ಪ್ರಾಬಲ್ಯದ ಕಾಲದಲ್ಲೂ ಇವು ತಮ್ಮ ಅಸ್ತಿತ್ವವನ್ನು ಪ್ರಬಲವಾಗಿಯೇ ಉಳಿಸಿಕೊಂಡು ಬಂದಂತೆ ಕಾಣುತ್ತದೆ. ಕ್ರಮೇಣ ಶೈವದ ಕಾಳಾಮುಖ ಶಾಖೆ ಕರ್ನಾಟಕದಲ್ಲಿ ಪ್ರಬಲವಾಗುತ್ತಾ ನಡೆಯಿತು. ಶ್ರೀವೈಷ್ಣವ ಧರ್ಮ ರಾಮಾನುಜಾಚಾರ್ಯರ ಆಗಮನದಿಂದ ಈ ನಾಡಿನಲ್ಲಿ ಹೆಚ್ಚು ಶಕ್ತಿಶಾಲಿಯಾಯಿತು. ರಾಜಾಶ್ರಯ, ದೇವಾಲಯ ನಿರ್ಮಾಣ, ಅಗ್ರಹಾರ ನಿರ್ಮಾಣ, ದಾನದತ್ತಿ ಸ್ವೀಕಾರಗಳಿಂದ ಅದು ಕ್ರಮೇಣ ಹೆಚ್ಚು ಹೆಚ್ಚು ಪ್ರಭಾವಶೀಲವಾಯಿತು. ಜೈನಧರ್ಮ ಆ ದಿನಗಳಲ್ಲಿ ತನ್ನ ಹಿಂದಿನ ವೈಭವದ ನೆಲೆಯನ್ನು ಕಳೆದುಕೊಳ್ಳುತ್ತಾ ಕ್ಷೀಣ ದೆಸೆಯತ್ತ ಸಾಗುತ್ತಿತ್ತು. ಶ್ರೀವೈಷ್ಣವ ಧರ್ಮ ಜೈನ ಮತ್ತು ಶೈವಧರ್ಮಗಳ ಜೊತೆ ಸ್ಪರ್ಧಿಸಿ ಉನ್ನತ ಸ್ಥಾನಮಾನಗಳನ್ನು ಪಡೆಯತೊಡಗಿತು. ಇದು ಕೆಲವು ಸಾರಿ ಪರಸ್ಪರ ಘರ್ಷಣೆಗಳಿಗೆ ದಾರಿ ಮಾಡತೊಡಗಿತು. ಕೀರ್ತಿನಾರಾಯಣ ದೇವಾಲಯದಲ್ಲಿ ಪ್ರಸಾದದ ಮೊದಲ ಸ್ವೀಕಾರದ ಅಧಿಕಾರದ ಬಗ್ಗೆ ಎದ್ದ ವಿವಾದವನ್ನು ಸ್ವತಃ ವೀರ ಬಲ್ಲಾಳನೇ ಬಂದು ನಿರ್ಧರಿಸುವ ಮಟ್ಟಕ್ಕೆ ಹೋದದ್ದನ್ನು ತಲಕಾಡಿನ ಶಾಸನ ತಿಳಿಸುತ್ತದೆ.[೨] ಮೊದಲು ಪ್ರಸಾದವನ್ನು ಯಾರು ಸ್ವೀಕರಿಸಬೇಕು ಎಂಬ ವಿವಾದ ಮೊದಲೇ ನಿರ್ಧಾರವಾಗಿದ್ದರೂ ಮತ್ತೆ ಬಲ್ಲಾಳ ರಾಜನೇ ನಿರ್ಧರಿಸುವ ಸ್ಥಿತಿ ಬಂದ ವಿಷಯವನ್ನೂ ಆ ಶಾಸನ ತಿಳಿಸುತ್ತದೆ. ಈ ವಿವಾದ ಶೈವ- ವೈಷ್ಣವರ ಮಧ್ಯೆ ಉಂಟಾದದ್ದೆಂದು ಎಸ್. ಶೆಟ್ಟರ್ ಅವರು ಭಾವಿಸುತ್ತಾರೆ.[೩]

ಇಂಥ ಭಿನ್ನಾಭಿಪ್ರಾಯಗಳು ಇದ್ದಕ್ಕಿದ್ದ ಹಾಗೆ ಮೂಡಿ ಬರದೆ, ಕ್ರಿ.ಶ. ೧೧೩೦ರ ಮರಲೆಯ ಶಾಸನದಲ್ಲಿಯೇ 'ಹರಿ-ಹರ' ಬೇರೆಯಲ್ಲ ಎಂದು ಒತ್ತಿ ಹೇಳಿರುವುದು ಕಂಡುಬರುತ್ತದೆ. ಶೈವ-ವೈಷ್ಣವರಲ್ಲಿ ಮೊದಲಿದ್ದ ಸೌಹಾರ್ದ ಮನೋಭಾವ ಮಾಯವಾಗಿ ಕ್ರಮೇಣ ವೈಷಮ್ಯ ಹಾಗೂ ಪೈಪೋಟಿ ಕಾಣಿಸಿಕೊಳ್ಳತೊಡಗಿತು. ಈ ಬಿಸಿ ಬಹುಶಃ ಅಗ್ರಹಾರಗಳ ಪ್ರಶಾಂತ ಬದುಕಿಗೂ ತಟ್ಟತೊಡಗಿದಂತೆ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ವಿಷ್ಣು ಮತ್ತು ಶಿವ ಬೇರೆಯಲ್ಲ ಎಂಬ 'ಹರಿಹರ' ಕಲ್ಪನೆಗೆ ಹೆಚ್ಚು ಪ್ರೋತ್ಸಾಹ ದೊರೆಯತೊಡಗಿತು.[೪]

---

೧. ಹಿರೇಮಲ್ಲೂರು ಈಶ್ವರನ್: ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ, ಪು. ೩೫.

೨. (ಮೈ) ಎಕ V ತಿ. ನರಸೀಪುರ ೧೬೪ ಕ್ರಿ.ಶ. ೧೧೮೦.

೩. ಎಸ್ ಶೆಟ್ಟರ್ : 'ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಸಾಮಾಜಿಕ ಜೀವನ' ಸ. ಸಾ. ಚ III ಪು. ೨೮.

೪. ಹರಿಹರ ಕಲ್ಪನೆಯನ್ನು ಬಸವಣ್ಣನವರು ತೀವ್ರವಾಗಿ ವಿರೋಧಿಸಿದ್ದಾರೆ.

'ಹರಿಹರನೊಂದೆ ಎಂದಡೆ ಸುರಿಯವೆ ಬಾಯಲ್ಲಿ ಬಾಲ ಹುಳುಗಳು' ಬ.ವ. ೫೪೨.

ಬ್ರಹ್ಮಶಿವನು ಕೂಡ ಹರಿಹರ ಕಲ್ಪನೆಯನ್ನು ಕುರಿತು ವ್ಯಂಗ್ಯವಾಡಿದ್ದಾನೆ. ನೋಡಿ: ಸ. ಪ. ೧೦-೫೪, ೫೫, ೫೭, ೫೮.

ಉದಾ:

> ವೈದಿಕರೆನೆ ದೂಷಿಸುವ
> ಮ್ಮಾರ್ದೇವನ ಪಕ್ಷದವರ್ಗಳಾ ವೈಷ್ಣವರುಂ
> ಮಾದೇವನ ದರುಶನಮಂ
> ಬಾದೆಂದೂಷಿಸುತ್ತಮಿರ್ಪ್ಪರಿದು ಮಿತ್ರತ್ವಂ ೧೦-೫೬.

ಹರಿಹರ ಕ್ಷೇತ್ರದ ಹರಿಹರ ದೈವ ಎಷ್ಟು ಪ್ರಾಚೀನವೆನ್ನುವುದಕ್ಕೆ ಖಚಿತ ಆಧಾರಗಳಿಲ್ಲದೇ ಹೋದರೂ ಕ್ರಿ.ಶ. ೧೧೪೩ರ ಶಾಸನದಲ್ಲಿ ಹರಿಹರೇಶ್ವರ ದೇವರ ಹೆಸರು ಬಳಕೆಯಾಗಿದೆ. ಹೊಯ್ಸಳ ವೀರನಾರಸಿಂಹನ ಪ್ರಧಾನಿಯಾದ ಪೋಲಾಳ್ವ ದಂಡನಾಥ ಕ್ರಿ.ಶ ೧೨೨೪ ರಲ್ಲಿ ೧೧೫ ಹೊನ್ನ ಕಳಶಗಳಿಂದ ಮೆರೆಯುವ ಹರಿಹರ ದೇವಾಲಯವನ್ನು ಕಟ್ಟಿಸಿದನು. ಕ್ರಿ.ಶ. ೧೧೮೦-೧೨೨೪ರ ಮಧ್ಯದ ಅವಧಿಯಲ್ಲಿ ಮೊದಲಿದ್ದ ದೇವಸ್ಥಾನವು ಬಿದ್ದು ಹಾಳಾಗಿ ಹೋಗಿರಬೇಕು.[1] ಪೋಲಾಳ್ವ ದಂಡನಾಥ ಅದನ್ನು ಹೊಸದಾಗಿ ನಿರ್ಮಿಸಿದ ಮೇಲೆ ಮೊದಲಿನಂತೆ ಪೂಜಾ ಕಾರ್ಯಗಳು ನಡೆಯತೊಡಗಿದವು. ಆ ಸ್ಥಳಕ್ಕೆ ಮೊದಲು ಕೂಡಲೂರು ಎಂಬ ಹೆಸರು ಇದ್ದು ಹದಿನೈದು ಹದಿನಾರನೆಯ ಶತಮಾನದ ಈಚೆಗೆ ಹರಿಹರ ಎಂಬ ಹೆಸರು ಬಳಕೆಗೆ ಬಂದಂತಿದೆ. ಪೋಲಾಳ್ವ ದಂಡನಾಥ ಶಾಸನದಲ್ಲಿ ಹರಿಹರನನ್ನು ಸಾಮರಸ್ಯದಿಂದ ವರ್ಣಿಸಿರುವುದು ಕಂಡು ಬರುತ್ತದೆ.

ಹರಿಯಿಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್
ಹರನಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್
ನರರಾ ಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾ
ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕೆ ನಮ್ಮಂ ॥
ಸಂದ ಶಿವಂಗೆ ವಿಷ್ಣುವಿನ ರೂಪಮದಾದುದು ವಿಷ್ಣುವಿಂಗೆ ಪೆಂ
ಪೊಂದಿ ನೆಗಟ್ಟ್ವೆತ್ತ ಶಿವರೂಪವಾದುದು ವೇದ ವಾಕ್ಯದಿಂ
ದೆಂದದನೆಯ್ದೆ ನಿಶ್ಚಯಿಸುವಂತಿರೆ ಕೂಡಲೂರೊಳೇಕ ಮೂರ್ತಿಯಿಂ
ನಿಂದ ಜಗನ್ನುತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ[2]

ಈ ಹರಿಹರ ಕಲ್ಪನೆ ಶೈವ-ವೈಷ್ಣವರಲ್ಲಿ ಸಾಮರಸ್ಯವನ್ನು ತರಲೋ ಎಂಬಂತೆ ಅನೇಕ ಸ್ಥಳಗಳಲ್ಲಿ ರೂಪುಗೊಂಡವು. ಅನೇಕ ಶಾಸನಗಳಲ್ಲಿ ಶಿವನ ಅಥವಾ ವಿಷ್ಣುವಿನ ಪ್ರಾರ್ಥನೆಗೆ ಬದಲೊ ಎಂಬಂತೆ 'ಶ್ರೀ ಶಂಕರನಾರಾಯಣ ನಮಃ' ಎಂದು ಪ್ರಾರಂಭವಾದವು.[3] ಬೇಲೂರಿನ ಒಂದು ಶಾಸನ ಬಾಚಲೇಶ್ವರದ ಚಂದಿಸೆಟ್ಟಿ ಮಾಡಿಸಿದ ಶ್ರೀ ಹರಿಹರ ದೇವರ್ಗೆ ದಾನ ಮಾಡಿದ ವಿಷಯ ತಿಳಿಸಿ ಆ ಊರಿನ ತೆಲ್ಲಿಗರು, ಕುರುಬ ಗೇಣಿಗರು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[4] ಹಿರೇಕೆರೂರು ತಾಲ್ಲೂಕಿನ ಶಾಸನ ಕೋಣವತ್ತಿಯ ನಾಳ್ಪ್ರಭು ಬೊಮ್ಮಿ ಸೆಟ್ಟಿ ಅವನ ಮಗ ನಾಗರಖಂಡದ ನಾಳ್ಪ್ರಭು ಬೊಮ್ಮಿ ಸೆಟ್ಟಿ ಶಂಕರ ನಾರಾಯಣ ದೇವರ ಪ್ರತಿಷ್ಠೆ ಮಾಡಿದ ವಿಷಯವನ್ನು ತಿಳಿಸುತ್ತದೆ.[5] ಶಾಸನದ ಕೊನೆಯಲ್ಲಿ ಶ್ರೀ ಶ್ರೀ ನಾರಾಯಣಾಯ ನಮಃ ಶಿವರಾಯ ಗೋವಿಂದ ನಾರಾಯಣ ಮಹಾದೇವ ಶ್ರೀ ಹರಿಹರ ಶರಣು ಶ್ರೀ ವಿಠಲ ಶರಣ ಎಂಬ ಮಾತುಗಳೂ ಬಂದಿವೆ. ಹೋಟುಗೆರೆಯ ಒಂದು ಶಾಸನ ವೆಬ್ಬೆಯ ದಣ್ಣಾಯಕನನ್ನು 'ಹರಿಹರ ದಿಬ್ಯ ಶ್ರೀ ಪಾದಾರಾಧಕ' ನೆಂದು ಹೇಳುತ್ತದೆ. ಶಾಸನದ ಕೊನೆಯಲ್ಲಿ ಲಕ್ಷ್ಮೀನರಸಿಂಹ ಶರಣು ಶ್ರೀ ಹರಿಹರ ಶರಣು ಸೋಮನಾಥ ಶರಣು ಮಹಾದೇವ ಶರಣು ಎಂದು ಬರುತ್ತದೆ.[6] ಶೈವ ವೈಷ್ಣವ ಎರಡೂ ಧರ್ಮದ ಅಂಶಗಳನ್ನು ಸಾಂಕೇತಿಕವಾಗಿ ಚಿತ್ರಿಸುವ ಅನೇಕ ಶಾಸನ ಶಿಲ್ಪಗಳೂ ದೊರೆಯುತ್ತವೆ.[7]

---

೧. ಹರಿಹರದ ದೇವಾಲಯದ ವಿಗ್ರಹ, ದೇವಸ್ಥಾನದ ನಿರ್ಮಾಣಗಳ ಬಗ್ಗೆ ನೋಡಿ.

i. ಎಚ್. ಎಂ. ಶಂಕರನಾರಾಯಣರಾವ್ : ಶ್ರೀ ಹರಿಹರ ದೇವಾಲಯ

ii. ಎಂ. ಚಿದಾನಂದ ಮೂರ್ತಿ: 'ಹರಿಹರ ಕ್ಷೇತ್ರ ಮತ್ತು ಹರಿಹರ ಕವಿಯ ಕಾಲ' ಸಂಶೋಧನ ತರಂಗ-೨, ಪು. ೧೩೦-೧೩೪.

೨. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

೩. ಎಸ್‌ಐಐ IX(i) ಕೂಡ್ಲಿಗಿ ೩೩೮ ಕ್ರಿ.ಶ. ೧೨೨೧; ಎಸ್‌ಐಐ IX (i) ಹಡಗಲಿ ೩೨೯ ಕ್ರಿ.ಶ. ೧೨೦೯.

೪. (ರೈ) ಎಕ V ಬೇಲೂರು ೭೭ ಕ್ರಿ.ಶ. ೧೧೯೮.

೫. ಕಇ IV ಹಿರೇಕೆರೂರು ೨ ಕ್ರಿ.ಶ. ೧೨೪೧.

೬. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೦ ಕ್ರಿ.ಶ. ೧೨೩೫.

೭. ವಿವರಗಳಿಗೆ ನೋಡಿ ಡಿ.ವಿ. ಪರಮಶಿವಮೂರ್ತಿ: ಕನ್ನಡ ಶಾಸನ ಶಿಲ್ಪ ಪು. ೬೬.

ಈ ಹರಿಹರ ದೈವ ಕಲ್ಪನೆಯ ಜೊತೆಯಲ್ಲೇ ಒಂದೇ ದೇವಾಲಯದಲ್ಲಿ ಶಿವನ ಮತ್ತು ವಿಷ್ಣುವಿನ ವಿಗ್ರಹ ಸ್ಥಾಪನೆಗಳು ನಡೆದವು. ಸೊರಬ ತಾಲ್ಲೂಕಿನ ಗಿಣಿವಾಲದ ತ್ರುಟಿತ ಶಾಸನವೊಂದು ನೆಣಸಿದೇವನೆಂಬುವನು ಲಿಂಗ ಪ್ರತಿಷ್ಠೆಯನ್ನು ಮಾಡಿ ದಾನ ನೀಡಿದನಂತರ, ಲಕ್ಷ್ಮೀನಾರಾಯಣ ದೇವರ ಪ್ರತಿಷ್ಠೆ ಮಾಡಿಸಿ ಅದಕ್ಕೂ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೧] ಬೆಳ್ಳೂರಿನ ಶಾಸನ ಸಿಂದೇಶ್ವರ, ಲಕ್ಷ್ಮೀನಾರಾಯಣ, ಗೋಪಾಲ ದೇವರ ಪ್ರತಿಷ್ಠೆ ಮಾಡಿ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೨] ಬೆಣ್ಣೆಕಲ್ಲಿನಲ್ಲಿ ತ್ರಿಮೂರ್ತಿಗಳ ದೇವಾಲಯವನ್ನು ಮಹಾಪ್ರಧಾನ ಅಮಿತ ದಂಡನಾಯಕ ಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ. ಅವನು ಶ್ರೀ ಪದ್ಮಲೇಶ್ವರ, ಅಮೃತೇಶ್ವರ, ಲಕ್ಷ್ಮೀನಾರಾಯಣ, ಶ್ರೀ ವಾಮೇಶ್ವರ ಮತ್ತು ಬಲ್ಲಾಳೇಶ್ವರ ದೇವಾಲಯಗಳನ್ನು ಕಟ್ಟಿಸಿ ಅವುಗಳಿಗೆ ದಾನ ನೀಡಿದ್ದಲ್ಲದೆ ಚಕ್ರವರ್ತಿ ನರಸಿಂಹನಿಂದ ದಾನಗಳನ್ನು ಮಾಡಿಸಿದನೆಂದು ಅದೇ ಶಾಸನ ನಿರೂಪಿಸುತ್ತದೆ.[೩] ಬಲ್ಲಾಳನ ಅಧಿಕಾರಿ ಮರ್ಮರಸನು ಶ್ರೀ ಸೋಮನಾಥ, ಪ್ರಸನ್ನ ಕೇಶವ ಮತ್ತು ಸೂರ್ಯದೇವರ ತ್ರೈಮೂರ್ತಿ ದೇವಾಲಯವನ್ನು ಕಟ್ಟಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ. ಮತ್ತು ಮಹಾಜನಗಳು ಹಾಗೂ ಮಾಣಿಕ್ಯ ಭಂಡಾರಿ ಸಿಂಗಮಯ್ಯನು ದಾನ ಮಾಡಿದ ವಿಷಯ ಅದರಿಂದ ತಿಳಿದುಬರುತ್ತದೆ.[೪] ಶಿವ ಮತ್ತು ವಿಷ್ಣು -ಇವರ ಈ ರೀತಿಯ ಹೊಂದಾಣಿಕೆ ಹೆಚ್ಚೂ ಕಡಮೆ ನಾಡಿನ ಎಲ್ಲ ಪ್ರದೇಶಗಳಲ್ಲಿ ಕಾಣಿಸಿಕೊಳ್ಳತೊಡಗಿದವು. ಬಮ್ಮೆಯ ನಾಯಕನೆಂಬುವವನನ್ನು ಶಾಸನವೊಂದು 'ವೈಷ್ಣವ ಶಿವಾತ್ಮಕ' ಎಂದು ಕರೆದಿದೆ.[೫]

**ಅಗ್ರಹಾರಗಳಲ್ಲಿ :**

ಅಗ್ರಹಾರಗಳಲ್ಲಿ ವೈಷ್ಣವರು ಮತ್ತು ಶೈವರು ಇಬ್ಬರೂ ನೆಲಸಿದ್ದರು. ಬಹುಶಃ ಆರಂಭ ಕಾಲದಲ್ಲಿ ಪರಸ್ಪರ ನಂಬಿಕೆ ವಿಶ್ವಾಸಗಳು ಇದ್ದವು. ಆದರೆ ಕ್ರಮೇಣ ಸ್ಪರ್ಧೆ-ವೈಮನಸ್ಸುಗಳು ಪ್ರಾರಂಭವಾದವು. ಹರಿಹರ ಕಲ್ಪನೆ ಹಾಗೂ ವಿಷ್ಣು ಮತ್ತು ಶಿವ ಮಂದಿರಗಳನ್ನು ಕಟ್ಟುವ ಕಾರ್ಯ ಅಗ್ರಹಾರಗಳಲ್ಲೂ ನಡೆಯಿತು. ಬಲ್ಲಾಳನ ಮಂತ್ರಿ ದಂಡನಾಯಕ ಮಧುಸೂದನ ಮಧುಸೂದನಪುರವನ್ನು ಮಹಾಗ್ರಹಾರವಾಗಿ ರಚಿಸಿ ಅಲ್ಲಿ ಮಲ್ಲಿಕಾರ್ಜುನ ಮತ್ತು ಶ್ರೀ ಮಧುಸೂದನ ಮತ್ತು ಅರ್ಕೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ಬೊಮ್ಮೇನಹಳ್ಳಿ ಶಾಸನ ತಿಳಿಸುತ್ತದೆ.[೬] ನೀರಗುಂದದಲ್ಲಿ ಬಲ್ಲಾಳ ಚಕ್ರವರ್ತಿಯ ದಂಡನಾಥ ಅಮಿತಯ್ಯ ಒಂದು ಅಗ್ರಹಾರವನ್ನು ನಿರ್ಮಿಸಿ ಅದರ ಮಧ್ಯೆ ಶ್ರೀ ಅಮೃತೇಶ್ವರ, ಶ್ರೀ ವಾಮೇಶ್ವರ ಮತ್ತು ಲಕ್ಷ್ಮೀನಾರಾಯಣ ದೇವರ ಪ್ರತಿಷ್ಠೆ ಮಾಡಿಸಿ ಪೂಜಾ ಕಾರ್ಯಗಳಿಗೆ ಬಲ್ಲಾಳನಿಂದ ದಾನ ಕೊಡಿಸಿದ ವಿಷಯ ತಿಳಿದು ಬರುತ್ತದೆ.[೭] ಕೆಲವು ಸಾರಿ ಅಗ್ರಹಾರಗಳಿಗೆ ಹೆಸರು ಇಡುವಾಗಲೇ ಶೈವ-ವೈಷ್ಣವ ಸಮನ್ವಯ ಸಾಧಿಸುವ ಪ್ರಯತ್ನಗಳು ನಡೆದಿವೆ. ತಂಡಗ ಎಂಬ ಊರು 'ಸಂಕರ ನಾರಾಯಣಪುರ'ವೆಂಬ ಹೆಸರಿನಲ್ಲಿ ಅಗ್ರಹಾರವಾದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೮]

---

೧. (ರೈ) ಎಕ VIII ಸೊರಬ ೪೨೬ ಕ್ರಿ.ಶ. ೧೨೪೮.

೨. (ಮೈ) ಎಕ VII ನಾಗಮಂಗಲ ಕ್ರಿ.ಶ. ೧೨೨೩/೨೪.

೩. ಎಸ್‌ಐಐ IX(i) ಕೂಡ್ಲಿಗಿ ೩೪೩ ಕ್ರಿ.ಶ. ೧೨೨೬.

೪. ಎಸ್‌ಐಐ IX (i) ಹಡಗಲಿ ೩೨೯ ಕ್ರಿ.ಶ. ೧೨೦೯.

೫. ಎಸ್‌ಐಐ XX ಸಿಂದಗಿ ೧೭೮ ಕ್ರಿ.ಶ. ೧೧೯೨.

೬. (ರೈ) ಎಕ V ಅರಸಿಕೆರೆ ೧೧೮ ಕ್ರಿ.ಶ. ೧೧೯೪.

೭. (ರೈ) ಎಕ V ಚನ್ನರಾಯಪಟ್ಟಣ ೧೯೭ ಕ್ರಿ.ಶ. ೧೨೨೩.

೮. (ರೈ) ಎಕ XII ತಿಪಟೂರು ೩೧ ಕ್ರಿ.ಶ. ೧೧೯೩.

ರಾಜರು, ಅಧಿಕಾರಿಗಳು ಮತ್ತು ಅಗ್ರಹಾರ ನಿರ್ಮಿಸಿದವರು ಶೈವ-ವೈಷ್ಣವ ಸಮನ್ವಯವನ್ನು ಸಾಧಿಸಲು ಪ್ರಯತ್ನಿಸಿದರು. ಆದರೂ ಇದು ಸ್ಪರ್ಧೆ ಮತ್ತು ವೈಷಮ್ಯವನ್ನು ಸಂಪೂರ್ಣವಾಗಿ ನಿವಾರಿಸಲು ಸಾಧ್ಯವಾಗಲಿಲ್ಲ.[೧]

**ಸಂಘರ್ಷ :**

ಧರ್ಮವು ಎಲ್ಲ ಕಾಲದಲ್ಲಿಯೂ ಮನುಷ್ಯನ ಭಾವನೆಗಳನ್ನು ಭಾವನಾತ್ಮಕವಾಗಿ ಒಗ್ಗೂಡಿಸುವ ಮತ್ತು ಪ್ರಚೋದಿಸುವ ಶಕ್ತಿಯಾಗಿದೆ. ಈ ಕಾರಣಗಳಿಂದ ಧರ್ಮವು ವ್ಯಾಪಕ ಸಂಘಟನೆಗಳಿಗೆ ಕಾರಣವಾಗಿರುವಂತೆ ಬಹು ದೊಡ್ಡ ಘರ್ಷಣೆಗಳಿಗೂ ಕಾರಣವಾಗಿರುವುದನ್ನು ಇತಿಹಾಸದಲ್ಲಿ ಕಾಣಬಹುದು.

ಕರ್ನಾಟಕ ಧಾರ್ಮಿಕ ಸಮನ್ವಯ ಭೂಮಿ ಎಂದು ಖ್ಯಾತಿ ಪಡೆದಿದ್ದರೂ ಇಲ್ಲಿ ನಡೆದಿರುವ ಹಲವು ಧಾರ್ಮಿಕ ಸಂಘರ್ಷಗಳಿಗೆ ಈ ನಾಡಿನಲ್ಲಿ ದೊರೆಯುತ್ತಿರುವ ಶಾಸನಗಳು, ಭಗ್ನ ದೇವಾಲಯಗಳು, ಶಿಲ್ಪಗಳು, ಹಾಳು ಬಿದ್ದಿರುವ ಅಗ್ರಹಾರಗಳು ಮತ್ತು ಊರುಗಳು ಸಾಕ್ಷಿಗಳಾಗಿವೆ. ಎಲ್ಲ ವಿನಾಶಗಳಿಗೆ ಧಾರ್ಮಿಕ ಸಂಘರ್ಷಣೆಯೇ ಕಾರಣವಲ್ಲ. ಅದಕ್ಕೆ ಯುದ್ಧಗಳು, ವೈಯಕ್ತಿಕ ವೈಷಮ್ಯ ಮತ್ತು ಜನರ ಅನಾದರಣೆಗಳೂ ಕಾರಣಗಳಾಗಿರುವುವಾದರೂ ಮತೀಯ ವೈಷಮ್ಯಗಳೂ ಕಾರಣ ಎನ್ನುವುದನ್ನು ಅಲ್ಲಗಳೆಯುವಂತಿಲ್ಲ.

**ಶೈವ-ಜೈನ :**

ಜೈನಧರ್ಮ ಕರ್ನಾಟಕದಲ್ಲಿ ಎಲ್ಲ ಪ್ರಮುಖ ರಾಜವಂಶಗಳ, ಅಧಿಕಾರಿಗಳ ಬೆಂಬಲವನ್ನು ಪಡೆದು ಪ್ರಬಲ ಧರ್ಮಗಳಲ್ಲಿ ಒಂದಾಗಿತ್ತು. ದಕ್ಷಿಣ ಭಾಗದ ಕರ್ನಾಟಕದಲ್ಲಿ ರಾಮಾನುಜಾಚಾರ್ಯರ ಆಗಮನದಿಂದ ಶ್ರೀವೈಷ್ಣವಧರ್ಮ ಹೊಯ್ಸಳವಂಶದ ರಾಜರ ಬೆಂಬಲದಿಂದ ಕ್ರಮವಾಗಿ ಬೆಳೆಯುತ್ತಾ ಜೈನರ ಏಕಸ್ವಾಮ್ಯ ಪ್ರಭಾವಕ್ಕೆ ಧಕ್ಕೆಯನ್ನು ತರತೊಡಗಿತು. ಅದರ ಪರಿಣಾಮಗಳನ್ನು ಕೆಲವುಮಟ್ಟಿಗೆ ಈಗಾಗಲೇ ಗಮನಿಸಲಾಗಿದೆ. ಉತ್ತರ ಕರ್ನಾಟಕದಲ್ಲಿ ಶೈವ ವೀರಶೈವಗಳ ಬೆಳವಣಿಗೆ, ಆಗಲೇ ದುರ್ಬಲಗೊಳ್ಳುತ್ತಿದ್ದ ಜೈನಧರ್ಮಕ್ಕೆ ಆಘಾತ ಕೊಡಲಾರಂಭಿಸಿತು. ಇವುಗಳಲ್ಲದೆ ಆ ಕಾಲಕ್ಕೆ ಜನಪ್ರಿಯತೆಯನ್ನು ಕಳೆದುಕೊಳ್ಳುತ್ತಿದ್ದ ಜೈನಧರ್ಮ ಆಂತರಿಕ-ಬಾಹ್ಯ ಕಾರಣಗಳಿಂದ ಪ್ರಚೋದಿತವಾಗಿ ಯಕ್ಷಿ ಆರಾಧನೆ, ತಂತ್ರ ಮಂತ್ರ ಮಾಯ ಮಾಟಗಳ ಕಡೆ ಒಲಿಯತೊಡಗಿತು. ಉತ್ತರ ಕರ್ನಾಟಕದ ಕೆಲವು ಶೈವ ಉಗ್ರವಾದಿಗಳು ಜೈನ ಧರ್ಮದ ಮೇಲೆ ನೇರವಾದ ಸಮರವನ್ನೇ ಸಾರಿದರು. ತಾಳಿಕೋಟೆ ಶಾಸನದಲ್ಲಿ ಬರುವ ಕೆಲವು ಶೈವರನ್ನು ಕುರಿತು ಹೇಳುವ ಮಾತುಗಳು ಹೀಗಿವೆ. 'ಪರಸಮಯ ಗಿರಿವಜ್ರದಂಡರುಂ ಜಿನಸಮಯ ದಹನ ದಾವಾನಳರುಂ ಮುನಿದರ್ಗೆ ಹಾಳಾಹಳರುಂ... ಅನ್ಯ ಸಮಯಿಗಳ ಬೆನ್ನ ಬಾರನೆತ್ತುವರುಂ ಸೆಣಸುವರ ನೆತ್ತರಂ ಮರುಳ್ಗಳಿಂ ಕುಡಿಸುವರುಂ ಪರಸಮಯಘರಟ್ಟರುಂ'. ಅಲ್ಲದೆ ಪರಿಯಳಿಗೆ, ಅಣಲೆವಾಡ, ಉಣಕಲ್ಲು, ಸಂಪಗಾವಿ, ಅಬ್ಬಲೂರು, ಮಾರುಡಿಗೆ, ಅಣಂಪೂರು, ಕರಹಾಡ, ಕೆಂಬಾವಿ, ಬಮ್ಮುಕೂರು ಮೊದಲಾದ ಸ್ಥಳಗಳಲ್ಲಿ 'ಬಸದಿಗಳನ್ನು ಹೊಸೆದು ಮುಕ್ಕಿ ಶಿವಲಿಂಗ ಸಿಂಹಾಸನಮಂ ಕಣ್ಗೊಳ್ಳಿಸಿದವರು'[೨]. ಈ ಶಾಸನ ಜೈನ ಧರ್ಮೀಯರ ಮೇಲೆ ಮತ್ತು ಜೈನ ಕ್ಷೇತ್ರಗಳ ಮೇಲೆ ಆಗಿರುವ ನೇರ ಆಕ್ರಮಣವನ್ನು ತಿಳಿಸುತ್ತದೆ.[೩]

---

೧. ಅಗ್ರಹಾರಗಳಲ್ಲಿ ಧಾರ್ಮಿಕ ವೈಷಮ್ಯ ಅಧಿಕವಾಗಿ ಹಾರ್ನಹಳ್ಳಿ, ಬೊಗ್ಗವಳ್ಳಿ, ಸೋಮನಾಥಪುರ ಮುಂತಾದೆಡೆ ಉಂಟಾದ ಸಂಘರ್ಷಗಳ ವಿವರಗಳಿಗೆ ನೋಡಿ, ಎಸ್. ಶೆಟ್ಟರ್: ಪೂರ್ವೋಕ್ತ , ಪುಟ. ೨೭-೨೮.

೨. ಎಸ್‌ಐಐ XV ಬಿಜಾಪುರ ೫೬ ಕ್ರಿ.ಶ. ೧೧೮೪.

೩. ಕೆ. ಅನಂತರಾಮು : ಕವಿ ಬ್ರಹ್ಮಶಿವ - ಒಂದು ಅಧ್ಯಯನ 'ಜೈನಧರ್ಮೀಯರ ವಿಷಯದಲ್ಲಿ ಅನ್ಯರು ಆ ಯುಗದಲ್ಲಿ ಸಾಕಷ್ಟು ಕಟುವಾಗಿ ನಡೆದುಕೊಂಡಿದ್ದಾರೆಂಬುದೇ ಹಲವು ವಿದ್ವಾಂಸರ ಅಭಿಮತ.' ಹೆಚ್ಚಿನ ವಿವರಗಳಿಗೆ ಗಮನಿಸಿ ಪು.೮೪-೧೦೨.

ಏಕಾಂತದ ರಾಮಯ್ಯ ಜೈನಧರ್ಮದ ಮೇಲೆ ನೇರ ಪ್ರಹಾರ ಮಾಡಿದ ವ್ಯಕ್ತಿ. ನಿಷ್ಠ ಶೈವನಾಗಿದ್ದ ಇವನ ವಿಷಯ ಅಬ್ಬಲೂರಿನ ಶಾಸನದಿಂದ ಪ್ರಸಿದ್ಧವಾಗಿದೆ.[೧] ಜೈನರು ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದಲ್ಲಿ ಜಿನ ಪಾರಮ್ಯವನ್ನು ಘೋಷಿಸಿದಾಗ ಸ್ಪರ್ಧೆಯಂತೆ ತನ್ನ ತಲೆಯನ್ನು ಕತ್ತರಿಸಿಕೊಂಡು ಮರಳಿ ಪಡೆದು ಕರಾರಿನಂತೆ ಜಿನ ಬಸದಿಗಳನ್ನು ಒಡೆದು ಲಿಂಗ ಸ್ಥಾಪನೆಯನ್ನು ಮಾಡಿದನು. ಇವನ ಬಗ್ಗೆ ಹರಿಹರ ಮತ್ತು ಶಾಂತನಿರಂಜನ ದೇಶಿಕರು ಕೃತಿ ರಚನೆಯನ್ನು ಮಾಡಿದ್ದಾರೆ. ಅಬ್ಬಲೂರಿನ ಸೋಮೇಶ್ವರ ದೇವಾಲಯದ ಬಿತ್ತಿಯ ಮೇಲೆ ಏಕಾಂತದ ರಾಮಯ್ಯನಿಗೂ ಜೈನರಿಗೂ ನಡೆದ ಘರ್ಷಣೆಯ ವಿವಿಧ ಘಟನೆಗಳು ಶಿಲ್ಪ-ಶಾಸನಗಳಲ್ಲಿ ನಿರೂಪಿತವಾಗಿವೆ.[೨] ಹೀಗೆ ಜೈನರ ಮೇಲಿನ ವಿಜಯವನ್ನು ಶಿಲ್ಪ ಶಾಸನಗಳ ಮೂಲಕ ಬಹಿರಂಗವಾಗಿ ಹಾಕಿಸಿರುವುದು ಆಶ್ಚರ್ಯ ತರುವುದರೊಂದಿಗೆ ಜೈನಧರ್ಮ ಆ ಕಾಲದಲ್ಲಿ ಅನುಭವಿಸಬೇಕಾಗಿ ಬಂದ ಶೋಚನೀಯ ಸ್ಥಿತಿಗೆ ನಿದರ್ಶನವಾಗಿದೆ. ಅಲ್ಲದೆ ಏಕಾಂತದ ರಾಮಯ್ಯನ ವಿಜಯವನ್ನು ಮೆಚ್ಚಿದ ಬಿಜ್ಜಳ ಅವನಿಗೆ ಜಯಪತ್ರವನ್ನು, ಕೆಲವು ಊರುಗಳನ್ನು ದಾನ ನೀಡಿದ. ಇದೇ ರೀತಿ ಚಾಳುಕ್ಯ ಸೋಮೇಶ್ವರ, ಕದಂಬ ಕಾಮದೇವರೂ ಮೆಚ್ಚಿ ದಾನಗಳನ್ನು ನೀಡಿದ್ದಾರೆ. ಈ ವಿಷಯಗಳೂ ಶಾಸನೋಕ್ತವಾಗಿರುವುದರಿಂದ ರಾಮಯ್ಯನ ಕಾರ್ಯಕ್ಕೆ ಪರೋಕ್ಷವಾಗಿ ರಾಜರ ಅಂಕಿತ ಬಿದ್ದಂತಾಗಿದೆ.

ಏಕಾಂತದ ರಾಮಯ್ಯನಂತೆ ಆದಯ್ಯನೆಂಬ ಶಿವಭಕ್ತನೂ ಜೈನರ ಮೇಲೆ ಸ್ಪರ್ಧೆ ಹೂಡಿ ಸೌರಾಷ್ಟ್ರದ ಸೋಮನಾಥನನ್ನು ಪುಲಿಗೆರೆಗೆ ತಂದು ಜೈನ ಬಸದಿಯಲ್ಲಿಯೇ ಪ್ರತಿಷ್ಠಾಪಿಸುತ್ತಾನೆ. ಆದರೆ ಈ ಘಟನೆ ಶಾಸನಗಳಲ್ಲಿ ಎಲ್ಲಿಯೂ ಉಲ್ಲೇಖಗೊಂಡಿಲ್ಲ. ೧೨ನೆಯ ಶತಮಾನದಿಂದ ಹಿಡಿದು ೧೮ನೆಯ ಶತಮಾನದವರೆಗಿನ ವೀರಶೈವ ಸಾಹಿತ್ಯದಲ್ಲಿ ಆದಯ್ಯನ ಕಥೆ ಹಲವಾರು ಮಾರ್ಪಾಡುಗಳೊಡನೆ ಮೈದಾಳಿದೆ.[೩] ಕವಿ ರಾಘವಾಂಕನು ತನ್ನ ಸೋಮನಾಥ ಚರಿತ್ರೆಯಲ್ಲಿ ವಿವರವಾಗಿ ಆದಯ್ಯನ ಕಥೆಯನ್ನು ನಿರೂಪಿಸಿದ್ದಾನೆ. ಇದನ್ನು ಕುರಿತು ಬರೆಯುತ್ತಾ ಬಿ. ಎಸ್. ಕುಲಕರ್ಣಿಯವರು 'ಒಡೆದು ಕಾಣುವ ಚಿತ್ರವೆಂದರೆ-ಸಮಾಜದಲ್ಲಿ ಬೇರೆ ಬೇರೆ ಮತಗಳಲ್ಲಿ ಸೌಹಾರ್ದತೆ ಇದ್ದಿಲ್ಲವೆಂಬುದು! ಸೋಮನಾಥ ಚರಿತ್ರೆಯಲ್ಲಿ ಜೈನ ಹಾಗೂ ಶೈವ ಮತಗಳಲ್ಲಿ ಸೌಹಾರ್ದತೆ ಇದ್ದಿಲ್ಲವೆಂಬುದು ಸ್ಪಷ್ಟವಾಗಿ ಒಡಮೂಡಿದೆ'[೪] ಎಂದಿದ್ದಾರೆ.

ಅಣ್ಣಿಗೇರಿಯ ಶಾಸನವೊಂದು ಗೊಗ್ಗರಸನಿಂದ ಜೈನಧರ್ಮಕ್ಕೆ ಆದ ಹಾನಿಯನ್ನು ತಿಳಿಸುತ್ತದೆ. ಅವನ ಬಗ್ಗೆ ಬರುವ ಕೆಲವು ವಿಶೇಷಣಗಳು ಅವನು ಜೈನಧರ್ಮದ ಮೇಲೆ ಮಾಡಿರಬಹುದಾದ ಆಕ್ರಮಣವನ್ನು ಸ್ಪಷ್ಟಪಡಿಸುತ್ತವೆ. 'ಜಯಿನಮ್ರಿಗಬೇಂಟಕಾಱಂ ಜಯಿನಾಗಮ ಧೂಮಕೇತು ಜಯಿನ ಕು(ಠಾ)ರಂ ಜಯಿನಫಣಿ ವಯಿನತೇಯಂ ಜಯಿನಾನ್ತಕನೆನಿಸಿ ನೆಗಳ್ದನೀ ಗೊಗ್ಗರಸಂ ಅಗ್ಗದ ಘಟಾಂತಿಕೆಯಂ ಅದು ನುಗ್ಗಾಗಿರೆಯೊಡೆದು ಕಳೆದು ಜಿನನಂತಾಗಲೆ ದುರ್ಗತಿಯೊಳಿಕ್ಕಿ ಮೆಟ್ಟಿದ ಗೊಗ್ಗರಸಾಗ್ರಣಿ' ಎಂದು ಆ ಶಾಸನದಲ್ಲಿ ಬರುತ್ತದೆ.[೫]

---

೧. ಎಇ V ಕ್ರಿ.ಶ. ೧೨೦೦.

೨. ಎಇ XXIX ಪು. ೧೪೦-೧೪೧

'ಶ್ರೀಮದ್ ಏಕಾಂತದ ರಾಮಯ್ಯಂಗೆ ಸಂಕ ಗೌಂಡನು ಓಲೆ ಕುಡುವ ಠಾವು'
'ಏಕಾನ್ತದ ರಾಮಯ್ಯಂಗಳು ಜಿನನೊಡೆದ ಲಿಂಗಪ್ರತಿಷ್ಠೆಯಂ ಮಾಡಿದ ಟಾವು' ಇತ್ಯಾದಿ.

೩. ಸಿ. ನಾಗಭೂಷಣ: ಶರಣ ಆದಯ್ಯ ಪು.೨೫. ಆದಯ್ಯನ ಜೀವನ ವಿವರಗಳಿಗೆ ಈ ಕೃತಿಯಲ್ಲಿ ಅವಲೋಕಿಸಬಹುದು.

೪. ಬಿ.ಎಸ್. ಕುಲಕರ್ಣಿ: 'ಕವಿ ರಾಘವಾಂಕನ ಸೋಮನಾಥ ಚರಿತ್ರೆಯಲ್ಲಿ ಮೂಡಿದ ಸಮಾಜ ಚಿತ್ರ'. ಜೆಕೆಯುVI ಪು. ೧೮೪.

೫. ಎಸ್‌ಐಐ XV ನವಲಗುಂದ ೫೯ ಕ್ರಿ.ಶ. ೧೧೮೪.

ದೇವರ ದಾಸಿಮಯ್ಯನಂಥ (ಕ್ರಿ.ಶ. ೧೦೪೦) ಧಾರ್ಮಿಕ ವ್ಯಕ್ತಿ ತನ್ನ ಕಾಲದ ಜೈನಯತಿಯನ್ನು ಧಾರ್ಮಿಕ ಚರ್ಚೆಯಲ್ಲಿ ಸೋಲಿಸಿದ ವಿಷಯವೂ ಅನೇಕ ವೀರಶೈವ ಕೃತಿಗಳಲ್ಲಿ ಬಂದಿದೆ. ಬಿಜ್ಜಳನ ಕಾಲದಲ್ಲಿ ವೀರಶೈವ ಧರ್ಮ ಬಸವಣ್ಣನವರ ನೇತೃತ್ವದಲ್ಲಿ ಹೆಚ್ಚು ಪ್ರಕಾಶಗೊಂಡದ್ದರಿಂದ ಮುಂದಿನ ಜೈನ ಕಾವ್ಯಗಳು ಬಿಜ್ಜಳನನ್ನು ಜೈನನೆಂದೂ ಬಸವಣ್ಣನನ್ನು ಅವನ ಪ್ರತಿಸ್ಪರ್ಧಿಯಂತೆಯೂ ಚಿತ್ರಿಸಿದವು. ಪಿ. ಬಿ. ದೇಸಾಯಿ ಅವರು ಹೇಳುವಂತೆ 'ಬಿಜ್ಜಳ ಬಸವೇಶ್ವರರ ಈ ದ್ವಂದ್ವ ಯುದ್ಧದಲ್ಲಿ ಜೈನರಿಗೆ ಯಾವೊಂದು ಬಗೆಯ ಸ್ಥಾನವೂ ಇರಲಿಲ್ಲ. ಬಿಜ್ಜಳನಾದರೋ ಪುರಾತನ ಮಾರ್ಗದ ಶಿವಭಕ್ತ, ಆತನು ಜೈನನಲ್ಲವೇ ಅಲ್ಲ. ಅಂದ ಬಳಿಕ ಪಕ್ಷಪಾತವೆಲ್ಲಿಯದು? ಈ ನವಮಾರ್ಗದ ಶಿವಭಕ್ತರು ತಮ್ಮ ಮತ ಪ್ರಸಾರದ ಆಂದೋಲನವನ್ನು ರಭಸದಿಂದ ಮುಂದೂಡಿದಾಗ ಆ ಬಿರುಗಾಳಿಯಲ್ಲಿ ಮುಂದೆ ಜೈನ ಮತೀಯರೂ ಸಿಲುಕಿ ಗಾಸಿಯಾದರು. ಆದರೆ ಆನುಷಂಗಿಕವಾಗಿ; ಏಕೆಂದರೆ ವೀರಶೈವದ ನೇರವಾದ ಇದಿರಾಳಿ ಜೈನವಲ್ಲ, ಪುರಾತನವಾದಿ.[೧]

ಶೈವರಿಂದ ಆಗುತ್ತಿದ್ದ ನೇರ ಆಘಾತವನ್ನು ತಪ್ಪಿಸಿಕೊಳ್ಳಲೋ ಎಂಬಂತೆ ಆ ಕಾಲದ ಶಕ್ತ ಕಾಳಾಮುಖ ಶೈವರೊಂದಿಗೆ ಜೈನರು ಒಂದು ರೀತಿಯ ಒಡಂಬಡಿಕೆಯನ್ನು ಮಾಡಿಕೊಂಡಿದ್ದಾರೆ. ಇದು ಅನೇಕ ಶಾಸನಗಳಲ್ಲಿ ವ್ಯಕ್ತವಾಗಿದೆ. ನೇಮಿನಾಥೇಶ್ವರ ಜಿನಾಲಯ ಹಿಂದೆ ಕೊಲ್ಲಾಪುರದ ರೂಪನಾರಾಯಣ ಬಸದಿಯ ಆಡಳಿತದಲ್ಲಿದ್ದಿತು. ಆದರೆ ಅದೇ ಊರಿನ ನಕರಗಳ ವಿನಂತಿಯಂತೆ ಕೊಲ್ಲಾಪುರದ ಘಟಿಕಾಸ್ಥಾನದ ಆಚಾರ್ಯರು ಮತ್ತು ಎಕ್ಕೋಟಿ ಅಸಂಖ್ಯಾತ ಗಣಂಗಳು ಒಂದುಗೂಡಿ ಜಿನಾಲಯವನ್ನು ಅದೇ ಊರಿನ ಕಲಿದೇವರ ದೇವಾಲಯಕ್ಕೆ ಪ್ರತಿಬದ್ಧ ಮಾಡಿದ ವಿಷಯವನ್ನು ತೇರದಾಳದ ಶಾಸನ ತಿಳಿಸುತ್ತದೆ. ಶಾಸನ ಮುಂದುವರಿದು ತೇರದಾಳದ ಗೊಂಕ ಜಿನಾಲಯ ಹೊಸ ಒಡಂಬಡಿಕೆಯಂತೆ ಅದರ ಆಚಾರ್ಯರಾಗಿದ್ದ ಪ್ರಭಾಚಂದ್ರ ಪಂಡಿತರಿಗೆ 'ಇಗ್ಗಿಳೆಯ ಜೋಗವಟ್ಟಿಗೆಯ ಸ್ಥಾನಮೆನ್ದು ಜೋಗವಟ್ಟಿಗೆಯನಿಕ್ಕಿದರು,' ಅಲ್ಲದೆ ಬಸದಿಯ ಮೇಲೆ ಶೂದ್ರಕನ, ಸಿಂಹದ, ಚಕ್ರದ ಚಿಹ್ನೆಗಳನ್ನು ಮತ್ತು ತ್ರಿಶೂಲದ ಘಂಟೆಯನ್ನು ಪಱಿಯನ್ನು ಇಟ್ಟರೆಂದು ತಿಳಿಸುತ್ತದೆ.[೨] 'ಅಂದು ನಡೆಯುತ್ತಿದ್ದ ಧಾರ್ಮಿಕ ಆಂದೋಲನದ ಚಿತ್ರವನ್ನು ಅಂಥ ದುರ್ಘಟನೆ ತೇರದಾಳದ ಬಸದಿಗೆ ಒದಗಬಾರದೆಂಬ ಉದ್ದೇಶದಿಂದ ಶೈವ ರಕ್ಷೆಯನ್ನು ಬೇಡಿದ ಸಂದರ್ಭವನ್ನು ನಿರೂಪಿಸುತ್ತದೆ'.[೩] ಈ ರೀತಿ ಬಸದಿಗಳು ಪರಿಸ್ಥಿತಿಯ ಅನಿವಾರ್ಯತೆಯಿಂದ ಶೈವ ರಕ್ಷೆಯನ್ನು ಬೇಡಿ ಅದರ ಸಂಕೇತವಾಗಿ ಜೋಗವಟ್ಟಿಗೆ ಮತ್ತು ಇನ್ನಿತರ ವಸ್ತುಗಳನ್ನು ಬಸದಿಗಳಿಗೆ ಪಡೆದ ವಿಷಯ ಅನೇಕ ಶಾಸನಗಳಲ್ಲಿ ಬಂದಿದೆ. ಇಂಥ ಬಸದಿಗಳು ಎಕ್ಕೋಟಿ ಜಿನಾಲಯಗಳೆಂದು ಕರೆಯಲ್ಪಟ್ಟಿವೆ. ಕೆಲವು ಬಸದಿಗಳನ್ನು ನಿರ್ಮಿಸುವಾಗಲೇ ಎಕ್ಕೋಟಿ ಜಿನಾಲಯಗಳೆಂದು ಕರೆದಿರುವುದುಂಟು.[೪] ಇದು ಕೇವಲ ಉತ್ತರ ಕರ್ನಾಟಕದ ಭಾಗಕ್ಕೆ ಮಾತ್ರ ಸೀಮಿತವಾಗಿರದೆ ದಕ್ಷಿಣ ಭಾಗದ ಕರ್ನಾಟಕಕ್ಕೂ ಅನ್ವಯಿಸುತ್ತದೆ, ಜೈನ ಧರ್ಮಕ್ಕೂ ಕಾಳಾಮುಖ ಶೈವಕ್ಕೂ ಆಗಿದ್ದಂತಹ ಒಡಂಬಡಿಕೆ ಬಹು ವ್ಯಾಪಕವಾಗಿರುವಂತೆ ಕಂಡುಬರುತ್ತದೆ.

ಶೈವರ ನೇರ ಆಕ್ರಮಣದಿಂದ ಅನೇಕ ಜೈನ ಬಸದಿಗಳು ಶಿವದೇವಾಲಯಗಳಾಗಿ ಪರಿವರ್ತನೆ ಹೊಂದಿದವು. ಅ. ಸುಂದರ ಅವರು ನರಗುಂದ ತಾಲ್ಲೂಕಿನ ಕೊಣ್ಣೂರಿನ ಈಗಿನ ಪರಮೇಶ್ವರ ದೇವಾಲಯ ಮೂಲತಃ ಜೈನ ಮಂದಿರವಾಗಿದ್ದಿತೆಂಬುದನ್ನು ಶಾಸನ ಮತ್ತು ಶಿಲ್ಪಗಳ ಆಧಾರದಿಂದ ತೋರಿಸಿಕೊಟ್ಟಿದ್ದಾರೆ.[೫]

---

೧. ಪಿ.ಬಿ. ದೇಸಾಯಿ: 'ಕರ್ನಾಟಕದ ಕಲಚುರಿಗಳು' ಕಸಾಪಪ. ೩೭-೧-೨ ಪು. ೯೨.

೨. ಕಇ V ಜಮಖಂಡಿ ೯೮ ಕ್ರಿ.ಶ. ೧೧೮೧.

೩. ಎಸ್ ನಾಗರಾಜು: 'ಕರ್ನಾಟಕದ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜನಜೀವನ' ಕಸಾಚ ಸಂ-IV (i) ಪು. ೧೪೩-೪೪.

೪. ಹೆಚ್ಚಿನ ವಿವರಗಳಿಗೆ ನೋಡಿ : ಸಿ.ಯು. ಮಂಜುನಾಥ್. 'ಎಕ್ಕೋಟಿ ಜಿನಾಲಯಗಳು' (ಸಂ) ಲಕ್ಷ್ಮಣ ತೆಲಗಾವಿ, ಸಂಶೋಧನ ಪು.೬೩೨-೬೩೬.

೫. ಅ. ಸುಂದರ: 'ಉತ್ತರ ಧಾರವಾಡದ ಜಿಲ್ಲೆಯ ಕ್ರಿ.ಶ. ೯-೧೦ನೇ ಶತಮಾನದ ದೇವಾಲಯಗಳು ಮತ್ತು ಹೊಯ್ಸಳ ವಾಸ್ತು ಶಿಲ್ಪ'. ಸಾಧನೆ ೧-೨ ಪು. ೧೦೬.

ನೆರೆರಾಜ್ಯಆಂಧ್ರವಲ್ಲಿಯೂ ಇಂಥ ಪರಿಸ್ಥಿತಿ ಇದ್ದುದು ತಿಳಿದು ಬರುತ್ತದೆ. ವಿವರಗಳಿಗೆ ನೋಡಿ- ಕೆ.ಆರ್.ಗಣೇಶ್ : ಆಂಧ್ರ ಪ್ರದೇಶದ ಕನ್ನಡ ಶಾಸನಗಳು -ಒಂದು ಅಧ್ಯಯನ ಪು. ೧೧೩.

ಶೈವ ಧರ್ಮದ ಈ ರೀತಿಯ ಆಕ್ರಮಣಕ್ಕೆ ಜೈನಧರ್ಮ ಹೇಗೆ ಪ್ರತಿಕ್ರಿಯೆ ವ್ಯಕ್ತಪಡಿಸಿತು ಎನ್ನುವುದು ಕುತೂಹಲದ ವಿಷಯವಾಗಿದೆ. ಅದು ಕಾಳಾಮುಖರೊಂದಿಗೆ ಮಾಡಿಕೊಂಡ ಒಡಂಬಡಿಕೆಯನ್ನು ಈಗಾಗಲೇ ಗಮನಿಸಿದ್ದೇವೆ. ಅನೇಕ ಶಾಸನಗಳು, ಜೈನ ಪಂಡಿತರು ಇತರ ಧರ್ಮಗಳ ಪಂಡಿತರನ್ನು ವಾದದಲ್ಲಿ ಸೋಲಿಸಿದ ವಿಷಯವನ್ನು ಹೇಳುತ್ತವೆ. ಶ್ರವಣಬೆಳಗೊಳದ ಒಂದು ಶಾಸನ 'ದೇವಕೀರ್ತಿ ಪಂಡಿತನು ಚಾರ್ವಾಕ, ಬೌದ್ಧ, ನೈಯಾಯಿಕ, ಕಾಪಾಲಿಕ ಮತ್ತು ವೈಶೇಷಿಕರನ್ನು ಪರಾಭವಗೊಳಿಸಿದ'ನೆಂದು ಹೇಳುತ್ತದೆ.[೧] ಜೋಡಿಬಸವನಪುರದ ಶಾಸನದಲ್ಲಿ ವಿಮಲಚಂದ್ರ ಮುನಿ ಎಂಬ ಜೈನ ಯತಿಯು ಶೈವ, ಪಾಶುಪತ, ಬೌದ್ಧ, ಕಾಪಾಲಿಕ ಮತ್ತು ಕಾಪಿಲರನ್ನು ಉದ್ದೇಶಿಸಿ ತುಂಬಾ ಜನ ಹಾದು ಹೋಗುವ ದ್ವಾರದ ಮೇಲೆ ಎಚ್ಚರಿಕೆಯನ್ನು ತೂಗು ಹಾಕಿದ್ದಂತೆ ಬರುತ್ತದೆ.[೨] 'ಅನ್ಯ ಧರ್ಮಾನುಯಾಯಿಗಳನ್ನು ವಾದದಲ್ಲಿ ಸೋಲಿಸಿ ಪಲಾಯನ ಮಾಡುವಂತೆ ಮಾಡಿದ ಜೈನ ಯತಿಗಳು ಆ ಕಾಲದ ಇತರರಿಗಿಂತ ಉತ್ಕೃಷ್ಟರೆಂದು ತೋರಿಸುವ ಈ ಕಾಲದ ಪ್ರವೃತ್ತಿ...ಜೈನರು ತಮ್ಮ ಹಿಂದಿನ ಸ್ಥಾನಮಾನವನ್ನು ಪಡೆಯಲು ಮಾಡಿದ ಪ್ರಯತ್ನಗಳಾಗಿ ಅವನ್ನು ನಾವಿಲ್ಲಿ ನೋಡಬಹುದು'[೩]. ಜೈನರು ಇತರ ಧರ್ಮಗಳ ವಿರುದ್ಧ ಪ್ರತಿಭಟಿಸಿರುವುದು ಕಂಡು ಬರುವುದಾದರೂ ಅದು ಬೌದ್ಧಿಕ ಸಂಘರ್ಷವೇ ಹೊರತು ನೇರ ಆಕ್ರಮಣವಲ್ಲ.

**ವೈಷ್ಣವ-ಜೈನ :**

ಉತ್ತರ ಕರ್ನಾಟಕದ ಭಾಗದಲ್ಲಿ ಶೈವಧರ್ಮದ ಆಕ್ರಮಣವನ್ನು ಎದುರಿಸಬೇಕಾದ ಕಾಲದಲ್ಲಿಯೇ ಹೊಯ್ಸಳ ಸಾಮ್ರಾಜ್ಯದ ಭಾಗದಲ್ಲಿ ಶ್ರೀ ವೈಷ್ಣವಧರ್ಮದ ವಿಶೇಷ ಪ್ರಸಾರದಿಂದ ಇನ್ನೊಂದು ರೀತಿಯ ಆಘಾತವನ್ನು ಎದುರಿಸುವುದು ಜೈನಧರ್ಮಕ್ಕೆ ಅನಿವಾರ್ಯವಾಯಿತು. ಈ ಪ್ರದೇಶದಲ್ಲಿ ಬಸದಿಗಳು ನಾಶವಾದಂತಹ ನೇರ ಶಾಸನೋಲ್ಲೇಖಗಳು ದೊರೆಯದೇ ಹೋದರೂ ಅನೇಕ ರೀತಿಯ ತೊಂದರೆಗಳನ್ನು ಎದುರಿಸಬೇಕಾಯಿತು ಎಂಬುದು ಸ್ಪಷ್ಟವಿದೆ. ವಿಷ್ಣು ದೇವಾಲಯಗಳ ನಿರ್ಮಾಣ, ಅಗ್ರಹಾರಗಳ ನಿರ್ಮಾಣ ಇವು ಶ್ರೀವೈಷ್ಣವರನ್ನು ಹೆಚ್ಚು ಹೆಚ್ಚು ಪ್ರಭಾವಶೀಲರನ್ನಾಗಿ ಮಾಡತೊಡಗಿದವು. ಮೊದಲೇ ದುರ್ಬಲವಾಗುತ್ತ ನಡೆದಿದ್ದ ಜೈನರು ವೈಷ್ಣವರಿಂದ ಅನೇಕ ಆಕ್ರಮಣಗಳನ್ನು ಎದುರಿಸಬೇಕಾಯಿತು. ಆಗ ಪರಸ್ಪರ ಘರ್ಷಣೆಗಳು ಅನಿವಾರ್ಯವಾದವು. ಬುಕ್ಕನ ಕಾಲದಲ್ಲಿ ಇಂಥ ಒಂದು ಘರ್ಷಣೆಯನ್ನು ಗಮನಿಸಿ ರಾಜಿ ಮಾಡಿಸುವ ಪ್ರಯತ್ನ ನಡೆದಿರುವುದು ಶ್ರವಣಬೆಳಗೊಳದ ಶಾಸನವೊಂದರಲ್ಲಿ ಬಂದಿದೆ.[೪] ಶಾಸನದ ಪಾಠವನ್ನು ಗಮನಿಸಿದರೆ ಜೈನರು ಮತ್ತು ಬಸದಿಗಳು ವೈಷ್ಣವರ ಕೃಪೆಯಲ್ಲಿರಬೇಕಾದ ಪರಿಸ್ಥಿತಿ ಉದ್ಭವವಾಗಿದ್ದಿತೆಂಬುದು ಸ್ಪಷ್ಟವಿದೆ. ಶಾಸನದಲ್ಲಿರುವಂತೆ ಜೈನರಿಗೆ ಶ್ರೀವೈಷ್ಣವರಿಂದ ಅನ್ಯಾಯವಾಗಲು ಆನೆಯಗೊಂದಿ, ಹೊಸ ಪಟ್ಟಣ, ಪೆನುಗೊಂಡೆ, ಕಲ್ಲೆಹ ಪಟ್ಟಣ ಒಳಗಾದ ಸಮಸ್ತ ಜನರು ಬುಕ್ಕರಾಯನ ಬಳಿಗೆ ಹೋಗಿ ಬಿನ್ನಹ ಮಾಡಿಕೊಂಡಾಗ ಶ್ರೀವೈಷ್ಣವರ ಕೈಯಲ್ಲಿ ಜೈನರ ಕೈ ಹಿಡಿದು ಕೊಟ್ಟು ಜೈನ ದರ್ಶನಕ್ಕೆ ಪೂರ್ವ ಮರ್ಯಾದೆಯಂತೆ ಪಂಚಮಹಾವಾದ್ಯಗಳು ಮತ್ತು ಕಳಶ ಸಲ್ಲುತ್ತವೆ ಎಂದು ಹೇಳುವ ಮಾತು ಮತ್ತು ಜೈನ ದರ್ಶನಕ್ಕೆ

---

೧. (ಮೈ) ಎಕ II ಶ್ರವಣಬೆಳಗೊಳ ೭೦ ಕ್ರಿ.ಶ. ೧೧೬೩.

೨. (ಮೈ) ಎಕ V ತಿ. ನರಸೀಪುರ ೩೮ ಕ್ರಿ.ಶ. ೧೧೮೩.

೩. ಎಕ II ಮುನ್ನುಡಿ ಪು. XlVIII- XIX

ಈ ರೀತಿ ಭಿನ್ನ ಧರ್ಮದ ಪಂಡಿತರ ಮಧ್ಯೆ ಧಾರ್ಮಿಕ ಚರ್ಚೆಗಳು ಆ ಕಾಲದಲ್ಲಿ ಸರ್ವೇ ಸಾಮಾನ್ಯವಾಗಿ ನಡೆಯುತ್ತಿದ್ದವೆಂದು ಕಾಣುತ್ತದೆ. -ವೀರಶೈವ ಕಾವ್ಯಗಳು ರಾಘವಾಂಕ, ಕೆರೆಯ ಪದ್ಮರಸ ತ್ರಿಭುವನ ತಾತನೆಂಬ ವೈಷ್ಣವ ಪಂಡಿತನೊಂದಿಗೆ ಚರ್ಚೆ ಮಾಡಿ ಗೆದ್ದ ವಿಷಯವನ್ನು ತಿಳಿಸುತ್ತವೆ. ನೋಡಿ. ಸ. ಸಾ. ಚ III - ಪು. ೩೭೬.

೪. (ಮೈ) ಎಕ II ಶ್ರವಣಬೆಳಗೊಳ ೪೭೫ ಕ್ರಿ.ಶ. ೧೩೬೮.

ಭಕ್ತರ ದೆಸೆಯಿಂದ ಹಾನಿ ವೃದ್ಧಿಯಾದರೂ ವೈಷ್ಣವ ಹಾನಿ ವೃದ್ಧಿಯಾಗಿ ಪಾಲಿಸುವರು ಎಂಬ ಮಾತು ಮತ್ತು ಎಲ್ಲಾ ರಾಜ್ಯದೊಳಗೂ ಇರುವ ಬಸದಿಗಳಿಗೆ ಶ್ರೀವೈಷ್ಣವರು ಶಾಸನವನ್ನು ನಟ್ಟು ಪಾಲಿಸಬೇಕು ಎಂದೂ ಬುಕ್ಕರಾಯನು ಆ ಸಂದರ್ಭದಲ್ಲಿ 'ವೈಷ್ಣವ ದರ್ಶನಕ್ಕೆಉ ಜೈನದರ್ಶನಕ್ಕೆಉ ಭೇದವಿಲ್ಲವೆಂದು' ಹೇಳಿದ ಮಾತು ರಾಜನ ಉದಾತ್ತ ಭಾವನೆಗೆ ದ್ಯೋತಕವಾಗಿದೆ. ರಾಜನೇನೋ ಉದಾತ್ತ ಭಾವನೆಯಿಂದ ಒಪ್ಪಂದ ಮಾಡಿಸಿದರೂ ಈ ಶಾಸನ ಸ್ಪಷ್ಟವಾಗಿ ಶ್ರೀವೈಷ್ಣವರ ಪ್ರಾಬಲ್ಯವನ್ನೂ ಜೈನರ ಕ್ಷೀಣ ಸ್ಥಿತಿಯನ್ನೂ ಎತ್ತಿ ತೋರಿಸುತ್ತದೆ.

ಜೈನರ ಮೇಲೆ ಆಘಾತಗಳು ವೈಷ್ಣವರಿಂದ ಯಾವ ರೀತಿ ನಡೆಯುತ್ತಿದ್ದಿತು ಎಂಬುದಕ್ಕೆ ಗುಂಡ್ಲುಪೇಟೆ ತಾಲ್ಲೂಕಿನ ಒಂದು ಶಾಸನ ಉದಾಹರಣೆಯಾಗಿದೆ.[೧] ಹೊಯ್ಸಳ ಬಲ್ಲಾಳನಿಂದ ಕೇತಯ ದಂಡನಾಯಕ ಗೊಮ್ಮಟ ಹಳ್ಳಿ ಮತ್ತು ಕಾಚಗಾವುಂಡನ ಮಾದೆಯ ಹಳ್ಳಿಗಳನ್ನು ಪಡೆದು ಅವುಗಳನ್ನು ರಾಘವದೇವನ ಮಗನಾದ ಶ್ರೀಕರಣ ನಾರಾಯಣ ದೇವಣ್ಣಗೆ ಅಗ್ರಹಾರಗಳಾಗಿ ಪರಿವರ್ತಿಸಲು ನೀಡಿದ. ಹಾಗೆ ಅಗ್ರಹಾರವಾಗಿ ಪರಿವರ್ತಿಸಿ ಭಿನ್ನಗೋತ್ರದ ಬ್ರಾಹ್ಮಣರಿಗೆ ನೀಡಿ ಅದಕ್ಕೆ ರಾಘವಪುರವೆಂದು ತನ್ನ ತಂದೆಯ ಹೆಸರನ್ನು ಇಟ್ಟನು. ಇಲ್ಲಿ, ಆ ಹಳ್ಳಿಗೆ ಮೊದಲಿದ್ದ ಹೆಸರಾದ ಗೊಮ್ಮಟಹಳ್ಳಿ ಜೈನ ಸಂಬಂಧವಾದ ಹೆಸರಾಗಿದೆ. ಅದು ರಾಘವಪುರವಾಗಿ ವೈಷ್ಣವ ಸಂಬಂಧದ ಹೆಸರನ್ನು ಪಡೆದು ಇಂದಿಗೂ ಆ ಹೆಸರೇ ಉಳಿದು ಬಂದಿದೆ. ಇಂಥ ಕಹಿ ಪ್ರಸಂಗಗಳನ್ನು ಜೈನರು ಆ ಕಾಲಕ್ಕೆ ದುರ್ಬಲರಾಗಿದ್ದುದರಿಂದ ನುಂಗುವ ಪ್ರಸಂಗ ಬಂದಿರಬೇಕು.

ಶೈವರ ಜೊತೆಯಾಗಲಿ, ವೈಷ್ಣವರ ಜೊತೆಯಾಗಲಿ ಜೈನರಿಗೆ ಘರ್ಷಣೆಗಳು ಬಂದಾಗ ಅಬ್ಬಲೂರನ್ನು ಬಿಟ್ಟರೆ ಮುಖಾಮುಖಿಯಾಗಿ ಇನ್ನೆಲ್ಲಿಯೂ ಎದುರಿಸಿದಂತೆ ಕಂಡು ಬರುವುದಿಲ್ಲ. ಜೈನ ಧರ್ಮಕ್ಕೆ ತನ್ನಲ್ಲಿ ಮೂಲತಃ ಆಕ್ರಮಣಶೀಲತೆಯ ಕೊರತೆ ಇದ್ದುದರಿಂದ ಉಳಿದ ಧರ್ಮಗಳೊಂದಿಗೆ ಹೋರಾಡಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳದೇ ಹೋಯಿತು. ಈ ಆಕ್ರಮಣಶೀಲತೆಯ ಕೊರತೆಯೇ ಈ ಧರ್ಮದ ಇಳಿಮುಖಕ್ಕೆ ಒಂದು ಕಾರಣವಾಗಿದೆ ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.[೨]

**ಶೈವ-ವೈಷ್ಣವ :**

ಶೈವ -ವೈಷ್ಣವ ಧರ್ಮಗಳು ಕೆಲವು ಸಂದರ್ಭಗಳಲ್ಲಿ ಸಂಘರ್ಷಕ್ಕೆ ಇಳಿದಿರುವುದು ಕಂಡು ಬರುತ್ತದೆ. ಶ್ರೀವೈಷ್ಣವ ಧರ್ಮ ಕರ್ನಾಟಕವನ್ನು ಪ್ರವೇಶಿಸುವ ಮೊದಲೂ ವೈಷ್ಣವ ಧರ್ಮ ಕರ್ನಾಟಕದಲ್ಲಿ ಪ್ರಚಾರದಲ್ಲಿದ್ದ ವಿಷಯವನ್ನು ಈಗಾಗಲೇ ಗಮನಿಸಲಾಗಿದೆ. ಶ್ರೀ ವೈಷ್ಣವಧರ್ಮ ರಾಮಾನುಜರ ಆಗಮನದೊಂದಿಗೆ ದೊಡ್ಡ ಪ್ರಮಾಣದಲ್ಲಿ ಕರ್ನಾಟಕವನ್ನು ಪ್ರವೇಶಿಸಿದ ನಂತರ ಜೈನರಿಗೆ ಸ್ಥಾನಮಾನಗಳ ವಿಷಯದಲ್ಲಿ ಇರಿಸು ಮುರಿಸು ಉಂಟಾಗಲು ಪ್ರಾರಂಭವಾದಂತೆ ಶೈವರಿಗೂ ಆಗಿರಬೇಕು. ಆರಂಭ ಕಾಲದಲ್ಲಿ ಶ್ರೀವೈಷ್ಣವರ ನಿಜವಾದ ಪ್ರಭಾವ ಶಕ್ತಿಗಳ ಕಲ್ಪನೆ ಇರದೆ ಬಹುಶಃ ಅಗ್ರಹಾರಗಳಲ್ಲಿ ಸಹಬಾಳ್ವೆ ಮಾಡಿರಬೇಕು. ದಾನ ದತ್ತಿಗಳಲ್ಲಿ ಭಾಗಗಳನ್ನು ಪಡೆಯುತ್ತ ಪರಸ್ಪರ ಗೌರವ-ವಿಶ್ವಾಸಗಳಿಂದ ಇದ್ದರು. ಆದರೆ ಕಾಲಕ್ರಮದಲ್ಲಿ ವೈಷಮ್ಯ ಹಾಗೂ ಪೈಪೋಟಿ ಅವರಲ್ಲಿ ಬೆಳೆಯಿತು. ಅಗ್ರಹಾರಗಳೇ ನಾಶಗೊಂಡು, ಧಾರ್ಮಿಕ ಸ್ಥಿತಿಯೇ ಕಲುಷಿತಗೊಂಡಂತಾಯಿತು.[೩]

---

೧. (ಮೈ) ಎಕ III ಗುಂಡ್ಲುಪೇಟೆ ೪೦ ಕ್ರಿ.ಶ. ೧೩೨೦.

೨. M. Chidananda Murthy : `The concept of War and Ahimsa in Jainism in Karnataka' -Jainism and Karnataka Culture. ಪು. ೧೨೭-೧೩೮.

೩. ಎಸ್ ಶೆಟ್ಟರ್: ಪೂರ್ವೋಕ್ತ ಪು. ೨೬.

ಸಮನ್ವಯಗಳಿಗೆ ಏನೇ ಪ್ರಯತ್ನಗಳು ನಡೆದರೂ ಅದು ಮೇಲ್ಪದರಿನಲ್ಲಿ ಮಾತ್ರ ಪರಿಣಾಮ ಬೀರಿದಂತೆ ಕಾಣುತ್ತದೆ. ಶ್ರೀವೈಷ್ಣವರು ದೇವಾಲಯಗಳ ಮೇಲೆ, ಅಗ್ರಹಾರಗಳ ಮೇಲೆ ಪ್ರಕಟಿಸುತ್ತಿದ್ದ ಬಿಗಿ ಹಿಡಿತ ಶೈವರಿಗೆ ನುಂಗಲಾರದ ತುತ್ತಾಗಿತ್ತು. ಅದು ಅಲ್ಲಲ್ಲಿ ಕೆಲವು ಕಡೆ ಘರ್ಷಣೆಯ ದಾರಿಯನ್ನು ಹಿಡಿದಿದೆ.

ತಲಕಾಡಿನ ಕೀರ್ತಿನಾರಾಯಣ ದೇವಾಲಯದಲ್ಲಿ ಪ್ರಸಾದವನ್ನು ಯಾರು ಮೊದಲು ಸ್ವೀಕರಿಸಬೇಕು ಎಂಬ ವಿಷಯದಲ್ಲಿ ತೀವ್ರ ಭಿನ್ನಾಭಿಪ್ರಾಯ ಉಂಟಾಗಿ ಸ್ವತಃ ಬಲ್ಲಾಳನೇ ಬಂದು ಪರಿಹರಿಸಬೇಕಾದ ಸ್ಥಿತಿ ಒದಗಿ ಬಂದಿತು.[೧] ಇದು ಶೈವ -ವೈಷ್ಣವರ ಮಧ್ಯೆ ಭಿನ್ನಾಭಿಪ್ರಾಯವೆಂದು ಎಸ್. ಶೆಟ್ಟರ್ ಭಾವಿಸುತ್ತಾರೆ.[೨] ವೈಷ್ಣವರು- ಶೈವರು ಪರಸ್ಪರ ದೂರ ಸರಿಯುತ್ತಿದ್ದುದನ್ನು ಶೆಟ್ಟರ್ ಅವರು ದೇವಾಲಯ ನಿರ್ಮಾಣ ಮತ್ತು ಶಿಲ್ಪಗಳಲ್ಲಿ ಗುರುತಿಸಿದ್ದಾರೆ. 'ಆರಂಭದಲ್ಲಿ ದ್ವಿಕೂಟ ತ್ರಿಕೂಟ ಚತುಷ್ಕೂಟ ಪಂಚಕೂಟ ದೇವಾಲಯಗಳಲ್ಲಿ ಶಿವ ವಿಷ್ಣು ಶಕ್ತಿ ಸೂರ್ಯನ ವಿಗ್ರಹಗಳನ್ನು ಗರ್ಭಗುಡಿಗಳಲ್ಲಿ ಪ್ರತಿಷ್ಠಾಪಿಸಿ ಈ ದೇವತೆಗಳ ಅವತಾರಗಳನ್ನು ಹೊರಗೋಡೆಗಳ ಮೇಲೆ ಕೊರೆಯುವ ಸಂಪ್ರದಾಯ ಹೆಚ್ಚು ಜನಪ್ರಿಯವಾಯಿತು. ಆದರೆ ಸೋಮನಾಥಪುರದ ದೇವಾಲಯ ನಿರ್ಮಾಣಗೊಳ್ಳುವ ಕಾಲಕ್ಕೆ ಅದು ಬತ್ತಿಹೋಯಿತು. ಭವ್ಯವಾದ ಈ ವಿಷ್ಣು ತ್ರಿಕೂಟಾಲಯದ ಹೊರಗೋಡೆಯ ನೂರಾರು ಗಜ ಸ್ಥಳದಲ್ಲಿ ಶಿವನಿಗೆ ಒಂದಿಷ್ಟೂ ಸ್ಥಾನವಿಲ್ಲ'[೩]. ಮಾನಸಿಕವಾಗಿ ಅವರು ದೂರ ಸರಿಯುತ್ತಿದ್ದುದು ಭಿನ್ನ ರೀತಿಗಳಲ್ಲಿ ವ್ಯಕ್ತವಾಗತೊಡಗಿತು.

ಅಗ್ರಹಾರಗಳಲ್ಲಿ ಸಹಬಾಳ್ವೆ ಮಾಡುತ್ತಿದ್ದ ಶೈವ-ವೈಷ್ಣವರು ದೂರವಾಗಬೇಕಾದ ಪರಿಸ್ಥಿತಿಗಳು ಬರತೊಡಗಿದವು. ಪರಸ್ಪರ ವೈಮನಸ್ಸುಗಳು ಅಗ್ರಹಾರದ ಶಾಂತ ಬದುಕಿಗೆ ಅಡ್ಡಿ ಉಂಟುಮಾಡಿರಬೇಕು. ಸೋಮನಾಥ ಪುರದ ಅಗ್ರಹಾರದಲ್ಲಿ ಸ್ವತಃ ಬಲ್ಲಾಳನೇ ವೃತ್ತಿಗಳ ಮತ್ತು ಸಿದ್ಧಾಯದ ವಿಷಯದಲ್ಲಿ ಇದ್ದ ವಿವಾದವನ್ನು ಪರಿಹರಿಸಿ ನಿರ್ಣಯದ ಪತ್ರ ಶಾಸನವನ್ನು ಮಹಾಜನರಿಗೆ ಕೊಡುತ್ತಾನೆ. ಬಹುಶಃ ಆ ಪತ್ರ ಶಾಸನದ ನಕಲೇ ಈ ಪ್ರಸ್ತುತ ಶಾಸನವಾಗಿರಬೇಕು.[೪] ಅದರಂತೆ ಒಟ್ಟು ಆ ಅಗ್ರಹಾರದಲ್ಲಿ ೧೨೯ ವೃತ್ತಿಗಳು. ಅವುಗಳಲ್ಲಿ ೭ ಊರ ವೃತ್ತಿಗಳು. ಅವು ಪಂಚಲಿಂಗದೇವರಿಗೆ ಮತ್ತು ಹೊಳೆಯ ದಡದಲ್ಲಿರುವ ನಾರಸಿಂಹೇಶ್ವರ ದೇವರಿಗೆ ಸಲ್ಲುತ್ತವೆ. ಅದನ್ನು ಶೈವ ಸ್ಥಾನವೆಂದು ಕರೆಯಲಾಗಿದೆ. ೧೪ ವೃತ್ತಿಗಳು ಊರ ಮಧ್ಯೆ ಇರುವ ಪ್ರಸನ್ನಕೇಶವ ದೇವರಿಗೆ, ಲಕ್ಷ್ಮೀನರಸಿಂಹ ದೇವರಿಗೆ ಮತ್ತು ಮಳವಳ್ಳಿಯ ಸಾರಂಗಪಾಣಿ ದೇವರಿಗೆ ಸಲ್ಲುತ್ತವೆ. ಇದನ್ನು ವೈಷ್ಣವ ಸ್ಥಾನವೆಂದು ಕರೆಯಲಾಗಿದೆ. ೭ ವೃತ್ತಿಗಳ ಸಿದ್ಧಾಯವನ್ನು ವೈಷ್ಣವ ಸ್ಥಾನದ ದೇವಾಲಯಗಳಿಗೆ ನೀಡಬೇಕು. ಈ ಆದಾಯದ ಜೊತೆಯಲ್ಲಿ ೧೪ ವೃತ್ತಿಗಳ ಆದಾಯವನ್ನು ವೈಷ್ಣವ ಸ್ಥಾನದ ದೇವತಾಪೂಜಾಕಾರ್ಯಗಳಿಗೆ ಬಳಸಬೇಕೆಂದು ವಿಧಿಸುತ್ತದೆ. ಇಲ್ಲಿ ಗಮನಾರ್ಹ ಸಂಗತಿಗಳೆಂದರೆ ಅಗ್ರಹಾರ ಅಖಂಡವಾಗಿರದೆ ಶೈವ ಸ್ಥಾನ ಮತ್ತು ವೈಷ್ಣವ ಸ್ಥಾನವೆಂದು ಪ್ರತ್ಯೇಕವಾಗಿ ಗುರುತಿಸಲ್ಪಟ್ಟಿರುವುದು ಮತ್ತು ವೃತ್ತಿಗಳ ಆದಾಯ ಯಾರಿಗೆ ಸಲ್ಲಬೇಕು ಎನ್ನುವುದನ್ನು ಬಲ್ಲಾಳನೇ ನಿರ್ಣಯಿಸಬೇಕಾಗಿ ಬಂದುದು. ಅಗ್ರಹಾರಗಳಲ್ಲಿ ಶೈವ-ವೈಷ್ಣವರ ಭಿನ್ನಾಭಿಪ್ರಾಯಗಳು ಯಾವ ಮಟ್ಟವನ್ನು ಮುಟ್ಟಿದ್ದವು ಎನ್ನುವುದಕ್ಕೆ ಇದು ಉತ್ತಮ ಉದಾಹರಣೆಯಾಗಿದೆ.

ಅನೇಕ ಅಗ್ರಹಾರಗಳಲ್ಲಿ ಭಿನ್ನ ಭಿನ್ನ ಸಮಸ್ಯೆಗಳು ಉದ್ಭವವಾದವು. ತಮಿಳುನಾಡಿನಲ್ಲಿ ತೀರಾ ವಿಕೋಪಕ್ಕೆ ಹೋದ ಶೈವ-ವೈಷ್ಣವ ವೈಷಮ್ಯ ಕ್ರಮೇಣ ಕನ್ನಡ ನಾಡಿಗೂ ಅಡಿ ಇಟ್ಟಿತು. ಪರಸ್ಪರ ಭಿನ್ನಾಭಿಪ್ರಾಯದ ಬಿರುಕು ವಿಸ್ತಾರಗೊಳ್ಳತೊಡಗಿತು.

---

೧. (ಮೈ) ಎಕ V ತಿ. ನರಸೀಪುರ ೧೬೪ ಕ್ರಿ.ಶ. ೧೧೮೦.

೨. ತಲಕಾಡಿನ ಆ ತಮಿಳು ಶಾಸನದಲ್ಲಿ ಶೈವ-ವೈಷ್ಣವವೆಂದು ಸ್ಪಷ್ಟ ನಿರ್ದೇಶವಿದ್ದಂತಿಲ್ಲ. ಅಲ್ಲದೆ ಅವರು ನಿರ್ದೇಶಿಸುವ ಶಾಸನದ ಕಾಲ ಕ್ರಿ.ಶ. ೧೩೦೦ ಆದರೆ (ಮೈ) ಶಾಸನ ಸಂಪುಟದಲ್ಲಿ (V ತಿ.ನರಸೀಪುರ ೧೬೪) ಅದರ ಕಾಲವನ್ನು ಕ್ರಿ.ಶ. ೧೧೮೦ ಎಂದು ಹೇಳಲಾಗಿದೆ.

೩. ಎಸ್. ಶೆಟ್ಟರ್: ಪೂರ್ವೋಕ್ತ ಪು.೨೮-೨೯.

೪. (ಮೈ) ಎಕ V ತಿ. ನರಸೀಪುರ ೮೯ ಕ್ರಿ.ಶ. ೧೩೦೦.

ದೇವಸ್ಥಾನಗಳ ಜಮೀನಿನ ವಿಷಯ, ನೀರಿನ ಹಂಚಿಕೆ, ಕರ್ತವ್ಯ ಲೋಪ ಇವುಗಳನ್ನು ಸರಿಪಡಿಸಬೇಕಾದ ಪರಿಸ್ಥಿತಿ ಒದಗಿತು. ಮೊದಲೇ ದುರ್ಬಲವಾಗಿದ್ದ ಸಂಬಂಧಗಳು ಇನ್ನೂ ಕೆಡತೊಡಗಿದವು. ಹಳೇಬೀಡು, ಸೋಮನಾಥಪುರ, ಶಿವಪುರ, ರಾಮನಾಥಪುರ, ಗುಡುಗೆರೆ, ಹಾರನಹಳ್ಳಿ ಇನ್ನೂ ಮುಂತಾದ ಕಡೆಗಳಲ್ಲಿ ದೇವಾಲಯದ ಜಮೀನಿನ ಮರುಹಿಂಗಡಣೆ ಮತ್ತು ವಿವಾದ ಪರಿಹಾರ ಆಗಬೇಕಾಯಿತು.[೧]

**ಅದ್ವೈತ-ದ್ವೈತ :**

ಅದ್ವೈತ ಸಿದ್ಧಾಂತದ ಪರಂಪರೆಯವರಿಗೂ ದ್ವೈತ ಸಿದ್ಧಾಂತ ಪರಂಪರೆಯ ಮಧ್ವರಿಗೂ ಅನೇಕ ವಿದ್ವತ್ ಗೋಷ್ಠಿಗಳಲ್ಲಿ ಚರ್ಚೆಗಳು ನಡೆದಂತೆ ತಿಳಿದು ಬರುತ್ತದೆ. ಅದ್ವೈತ ಸಿದ್ಧಾಂತದ ಕೇಂದ್ರಗಳಲ್ಲೊಂದಾದ ಶೃಂಗೇರಿಯು ದ್ವೈತ ಸಿದ್ಧಾಂತದ ಮೂಲ ಸ್ಥಳವಾದ ಉಡುಪಿಯಿಂದ ಕೇವಲ ನಾಲ್ವತ್ತು ಕಿಲೊಮೀಟರುಗಳ ಅಂತರದಲ್ಲಿದೆ. ಅದ್ವೈತಿಗಳು ವೈಮನಸ್ಸಿನಿಂದ ದ್ವೈತ ಸಿದ್ಧಾಂತವನ್ನು ನಿರ್ಮೂಲ ಮಾಡುವ ಉದ್ದೇಶದಿಂದ ಮಧ್ವರ ಇಡೀ ಗ್ರಂಥ ಭಂಡಾರವನ್ನು ಹೊತ್ತುಕೊಂಡು ಹೋದಾಗ ವಿಷ್ಣುಮಂಗಲದ ಜಯಸಿಂಹ ಎಂಬ ರಾಜಕುಮಾರ ಮಧ್ಯೆ ಪ್ರವೇಶಿಸಿ ಆ ಗ್ರಂಥಗಳು ಅವರಿಗೆ ಮರಳಿ ದೊರೆಯುವಂತೆ ಮಾಡಿದನು.[೨] ಈ ಘಟನೆಗೆ ಖಚಿತ ಐತಿಹಾಸಿಕ ಆಧಾರಗಳು ದೊರೆಯದೇ ಹೋದರೂ ಪರಸ್ಪರ ವೈಮನಸ್ಸು ಎಂಥ ದುರ್ಘಟನೆಗೆ ದಾರಿ ಮಾಡಿಕೊಡಬಲ್ಲದು ಎಂಬುದನ್ನು ಊಹಿಸಬಹುದು.

**ಇಸ್ಲಾಂ ಧರ್ಮ :**

ಭಾರತಕ್ಕೆ ಇಸ್ಲಾಂ ಧರ್ಮ ಯಾವಾಗ ಪ್ರವೇಶ ಮಾಡಿತು ಎಂದು ಖಚಿತವಾಗಿ ಹೇಳುವುದು ಕಠಿಣ. ಏಕೆಂದರೆ ಭಾರತಕ್ಕೂ ಪಶ್ಚಿಮ ಏಷ್ಯಾಕ್ಕೂ ಚರಿತ್ರಪೂರ್ವ ಕಾಲದಲ್ಲಿಯೇ ವಾಣಿಜ್ಯ ಸಂಬಂಧ ಬೆಳೆದಿದ್ದಿತು. ಈಜಿಪ್ಟಿನವರು, ಪಾರಸಿಕರು, ಗ್ರೀಕರು, ರೋಮನರು, ಅರಬರು ಮುಂತಾದವರು ವಾಣಿಜ್ಯ ಸಂಬಂಧದಿಂದ ಪಶ್ಚಿಮ ಸಮುದ್ರ ತೀರಗಳಿಗೆ ಬಂದು ಹೋಗುತ್ತಿದ್ದರು. ಮಲಬಾರಿನಿಂದ ಮೆಣಸು, ಏಲಕ್ಕಿ, ತೇಗ ಮುಂತಾದ ವಸ್ತುಗಳನ್ನು ಅವರು ತೆಗೆದುಕೊಂಡು ಹೋಗುತ್ತಿದ್ದರು. ಕ್ರಿ.ಶ. ೬೩೬ ರನಂತರ ಅರಬರು ಥಾಣದ ಮೇಲೆ ಆಕ್ರಮಣ ಮಾಡಿದರು. ಅನಂತರ ಒಂದಾದ ಮೇಲೊಂದರಂತೆ ಸಿಂಧ್ ಪ್ರದೇಶದ ಮೇಲೆ ಆಕ್ರಮಣಗಳು ನಡೆದು ಆ ಪ್ರಾಂತಗಳು ಅವರ ವಶವಾದವು. ಮುಂದೆ ತುರುಷ್ಕರು ಭಾರತದ ಪ್ರದೇಶಗಳ ಮೇಲೆ ದಾಳಿಗಳನ್ನು ಪ್ರಾರಂಭಿಸಿದರು (ಸು.ಕ್ರಿ.ಶ. ೯ನೆಯ ಶತಮಾನದ ಮಧ್ಯಕಾಲ). ಘಜ್ನಿ ಮಹಮದನ ಸತತ ದಾಳಿಗಳಿಂದ ಉತ್ತರ ಭಾರತದ ಅನೇಕ ಪ್ರಾಂತಗಳು ಅವನ ವಶವಾಗುವಂತಾಯಿತು. ಕ್ರಮೇಣ ದೆಹಲಿ, ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತು. ಅಲ್ಲಾವುದ್ದೀನನು ಮುಂದೆ ವಿಂಧ್ಯಪರ್ವತವನ್ನು ದಾಟಿ ದಕ್ಷಿಣಭಾರತದ ಮೇಲೆ ಆಕ್ರಮಣ ಮಾಡಿದ ಪ್ರಥಮ ಸುಲ್ತಾನನಾಗಿದ್ದಾನೆ.[೩] ದಕ್ಷಿಣಭಾರತದೊಡನೆ ಇಸ್ಲಾಮಿನ ಸಂಪರ್ಕವು ಕ್ರಿ.ಶ. ಎಂಟನೆಯ ಶತಮಾನದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಪ್ರಾರಂಭವಾದಂತಿದೆ.

---

೧. S. Settar : 'The Hoysala Temples' Srikanthika ಪು.೫೩. ನೋಡಿ ಇದೇ ವಿದ್ವಾಂಸರ, ಸ.ಸಾ.ಚ ಸಂ. III ರಲ್ಲಿರುವ ಪೂರ್ವೋಕ್ತ ಲೇಖನ ಪು. ೨೭-೨೮.

೨. Encyclopaedia of Religion and Ethics VIII ಪು. ೨೩೨-೨೩೪.

೩. ಭಾರತಕ್ಕೆ ಇಸ್ಲಾಂ ಧರ್ಮದ ಪ್ರವೇಶದ ವಿವರವಾದ ಚರ್ಚೆಗೆ ನೋಡಿ:

i. A.L.Srivastava : The Sultanate of Delhi ಪು. ೧೦-೬೬; ೧೬೪-೬೭.

ii. Eswari Prasad : A short history of the Muslim Rule in India ಪು. ೧-೩೭.

iii. ಮಹಮ್ಮದ್ ಅಬ್ಬಾಸ್ : (ಅನು. ಬಿ. ಎಂ. ಶ್ರೀ): ಇಸ್ಲಾಂ ಸಂಸ್ಕೃತಿ ಪು. ೨೪-೨೫.

ಕರ್ನಾಟಕದ ಅನೇಕ ಭಾಗಗಳು ದೆಹಲಿ ಸುಲ್ತಾನರುಗಳ ಕಾಲದಲ್ಲಿ ಮುಸಲ್ಮಾನರ ಆಕ್ರಮಣಕ್ಕೆ ಒಳಪಟ್ಟವು. ದೇವಗಿರಿಯ ಮೇಲೆ ಅಲ್ಲಾವುದ್ದೀನ್ ಆಕ್ರಮಣ ಮಾಡುವ ಮೊದಲೇ ಸೇವುಣ ರಾಜ್ಯಕ್ಕೆ ಇಸ್ಲಾಂ ಧರ್ಮ ಸೂಫಿ ಗುರುಗಳಾದ ಮುನಿನ್ ಆರಿಫ್ ಮತ್ತು ಜಲಾಲುದ್ದೀನ್ ಗಂಜ್ರವಾನ್ ಮೂಲಕ ಬಂದಿದ್ದಂತೆ ತಿಳಿದುಬರುತ್ತದೆ. ರಾಮಚಂದ್ರನನ್ನು ಕ್ರಿ.ಶ.೧೨೮೨ರ ಒಂದು ಶಾಸನ 'ರಣರಂಗಧೀರ ತುರು(ಃ)ಷ್ಕೋಪದ್ರವ ಸಮಸ್ತ ಮೇದಿನೀ ಮಹಾಸಮುದ್ಧರಣೈಕನಾಥ'[೧] ಎಂದು ಕೀರ್ತಿಸುತ್ತದೆ. ತುರುಷ್ಕರ ಆಕ್ರಮಣದಿಂದ ಸಮಸ್ತ ನಾಡನ್ನು ಉದ್ಧರಿಸಿದವನು ಎಂದು ಶಾಸನ ಹೊಗಳುತ್ತದೆ. ರಾಮಚಂದ್ರನ ಕಾಲದ ಕ್ರಿ.ಶ. ೧೨೯೮ ರ ಒಂದು ಶಾಸನ ಮಸೀದಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೨]

ಮುಸ್ಲಿಮರಿಂದ ಆದ ಅನೇಕ ಆಕ್ರಮಣಗಳ ವಿಷಯ ಹೊಯ್ಸಳ ನಾಡಿನ ಪ್ರದೇಶದ ಶಾಸನಗಳಲ್ಲಿ ಕಂಡು ಬರುತ್ತವೆ. 'ಪೊಡರ ಹಳ್ಳಿಯ ಬೇಚಗವುಡನ ಮಗ ಕೇತಗವುಡನು ತುರಕರ ಹುಯ್ಲಲಿ ಕಾದಿ ಸ್ವರ್ಗಸ್ತನಾದ' ವಿಷಯ ತಿಳಿದು ಬರುತ್ತದೆ.[೩] ಯಾದವ ರಾಮಚಂದ್ರನನ್ನು ಹೊಗಳುತ್ತಾ ಒಂದು ಶಾಸನ '....ರಾಜ್ಯಹರ ತುರುಕೋ ಪಲ್ಲವ ಮೇದಿನಿ ಸಮುದ್ಧರಣ' ಎನ್ನುತ್ತದೆ.[೪] ಮೂರನೆಯ ಬಲ್ಲಾಳನ ಕಾಲದ ಶಾಸನವೊಂದು 'ತುರುಕರು ದೋರಸಮುದ್ರಕ್ಕೆ ಯೆತ್ತಿ ಬಂದಲ್ಲಿ ದುದನಡ ಗೋವ್ಯಯ ಮಾಚಯ ನಾಯಕನಾ ಮಗ ಬಳಿಚೆಯ ನಾಯಕ' ಹೋರಾಡಿ ಮಡಿದ ವಿಷಯವನ್ನು ಹೇಳುತ್ತದೆ.[೫] 'ವೀರ ಕಪಿಲದೇವನು ರಾಜ್ಯಭಾರ ಮಾಡುವಾಗ ಕುತಬಿ ಸುರತಣಖಾನಗಳು[೬] ನೇಮಿಸಹಿತ ನಡದು ಬಂದಲ್ಲಿ ತುಳುವಲ ಎಕ್ಕಟಿ ದೇಸಿಂಗನಾಯ್ಕನ ತಂಮ ಕಾಮನಾಯ್ಕನು ರಣದಲಿ ಹೊಯ್ದಾಡಿ ಬಿದ್ದ' ವಿಷಯವನ್ನು ಶಾಸನ ಹೇಳುತ್ತದೆ.[೭] ತುರುಕರು ಗೊರವನ ಕಲ್ಲಿಗೆ ಆಕ್ರಮಣ ಮಾಡಲು ಬಂದಾಗ ಲಿಂಗದಹಳ್ಳಿಯ ಬಲಗೌಡನ ಮಗ ಮಾರಗೌಡನು ಹೋರಾಡಿದ್ದಕ್ಕೆ ಮೆಚ್ಚಿ ಕಲ್ಲಂಗಡಿಯನೂ ಅದರ ಹಳ್ಳಿಗಳನ್ನೂ ಮಾರಗೌಡನಿಗೆ ನೆತ್ತರ ಕೊಡಗಿಯಾಗಿ ಕೊಟ್ಟ ವಿಷಯವನ್ನು ಮೂರನೆಯ ಬಲ್ಲಾಳನ ಒಂದು ಶಾಸನ ತಿಳಿಸುತ್ತದೆ.[೮] ಬಿದಿರೆಯ ಶಾಸನ ಕಂಕಯ್ಯ 'ತುರುಕರ ದಳದ ಕೂಡೆ ಹೋರಾಡಿ' ಮಡಿದ ವಿಷಯವನ್ನು ತಿಳಿಸುತ್ತದೆ.[೯]

---

೧. ಎಸ್‌ಐಐIX (i) ಹರಪನಹಳ್ಳಿ ೩೮೦ ಕ್ರಿ.ಶ.೧೨೮೨.

೨. S. S.Ritti : The Sevunas. ಪು.೨೬೭-೬೮.

೩. (ಮೈ) ಎಕ II ಶ್ರವಣಬೆಳಗೊಳ ೫೫೫ ಕ್ರಿ.ಶ. ೧೨೭೩.

೪. ಎಂಎಆರ್ ೧೯೨೯ ಸೊರಬ ೬೯ ಕ್ರಿ.ಶ. ೧೨೭೬.

೫. (ರೈ) ಎಕ V ಹಾಸನ ೫೧ ಕ್ರಿ.ಶ. ೧೩೧೦.

೬. ಇವನು ಅಲ್ಲಾವುದ್ದೀನ್ ಖಿಲ್ಜಿಯ ಪುತ್ರ ಕುತ್‌ಬುದ್ದೀನ್ ಮುಬಾರಕ್ ಷಾ ಎಂದೂ, ರಾಮನಾಥ ಚರಿತೆಯಲ್ಲಿ ಉಲ್ಲೇಖಗೊಂಡಿರುವ ಕುದುಬಿಖಾನ ಇವನೇ ಎಂದು ಅಭಿಪ್ರಾಯವಿದೆ. ಶಾಸನೋಕ್ತ ನೇಮಿ, ನೇಮಿಖಾನನಾಗಿದ್ದು ಅವನನ್ನು ಇತಿಹಾಸಜ್ಞರು ಮಲ್ಲಿಕ್ ಕಾಫೂರ್ ಜೊತೆ ಸಮೀಕರಿಸಿದ್ದಾರೆ. ನೋಡಿ: ಜಿ. ವರದರಾಜರಾವ್, ಬಿ. ಆರ್. ತುಬಾಕಿ, ಸೀತಾರಾಮ ಜಾಗೀರದಾರ 'ಕಮ್ಮಟ ದುರ್ಗದ ಒಂದು ಹೊಸ ಶಾಸನ'. ಮಾಕ ೧೬, (೨, ೩, ೪) ಪು. ೧೨೯.

೭. ಮಾಕ ೧೬ (೨, ೩, ೪) ಗಂಗಾವತಿ ಕ್ರಿ.ಶ. ೧೩೧೫ ಪು. ೧೨.

೮.(ರೈ) ಎಕ V ಅರಸಿಕೆರೆ ೩೧ ಕ್ರಿ.ಶ. ೧೩೩೧.

೯. (ರೈ) ಎಕ VI ಕಡೂರು ೭೫ ಕ್ರಿ.ಶ. ೧೩೪೨.

ದೆಹಲಿಯ ಸುಲ್ತಾನರು ದಕ್ಷಿಣ ಪ್ರಾಂತಗಳ ಮೇಲೆ ಆಕ್ರಮಣ ಮಾಡಿದ್ದು ಮುಖ್ಯವಾಗಿ ಐಶ್ವರ್ಯ ಗ್ರಹಣ ದೃಷ್ಟಿಯಿಂದ.[1] ಹಾಗೆ ಬಂದವರು ಕ್ರಮೇಣ ಇಲ್ಲೇ ನೆಲೆಯೂರತೊಡಗಿದರು.

'ಕ್ರಿ.ಶ. ೧೩೪೭ರಲ್ಲಿ ಗುಲ್ಬರ್ಗವು ರಾಜಧಾನಿಯಾಗಿ ಬಹುಮನಿ ರಾಜ್ಯವು ಉದಯಿಸಿದ ನಂತರ ನಿರಂತರವಾದ ಹಾಗೂ ಪರಿಣಾಮಕಾರಿಯಾದ ರೀತಿಯಲ್ಲಿ ಇಸ್ಲಾಮ್ ಸಂಪರ್ಕವು ಕರ್ಣಾಟಕದೊಂದಿಗಾಯಿತು.'[2]

ಕಲ್ಯಾಣದ ಒಂದು ಶಾಸನ ಸುಲ್ತಾನ್ ಮಹಮ್ಮದ್ ತುಘಲಕ್‌ನ ಆಳ್ವಿಕೆಗೆ ಸಂಬಂಧಿಸಿದ್ದು, ಮಹಾರಾಷ್ಟ್ರ ಮಂಡಲವು ಅವನ ಅಧಿಕಾರಿ ಮಹಾಪ್ರಧಾನ ಮಲ್ಲಿಕ್ ಕಾಮದಿನನ ಸಂಪೂರ್ಣ ಅಧಿಕಾರದಲ್ಲಿದ್ದುದನ್ನು ತಿಳಿಸುತ್ತದೆ. ಈ ಶಾಸನವು ಕಲ್ಯಾಣದಲ್ಲಿ ಮಧುಕೇಶ್ವರ ದೇವಾಲಯವು ಬಾಹಬದಿನನ ದಂಗೆಯ ಕಾಲದಲ್ಲಿ ತುಂಬಾ ಹಾನಿಗೊಳಗಾಗಿರಲು (ಕರ್ನಾಟಕದ) ಕಲ್ಯಾಣದ ಜನರ ಪ್ರಯತ್ನದಿಂದ ಮಧುಕೇಶ್ವರ ಶಿವಲಿಂಗ ಪುನರ್‌ಪ್ರತಿಷ್ಠೆಗೊಂಡು ಪೂಜಾಕಾರ್ಯಗಳು ನಡೆಯುವಂತೆ ಏರ್ಪಾಟಾದ ವಿಷಯವನ್ನು ತಿಳಿಸುತ್ತದೆ.[3] ಮುಸ್ಲಿಂ ಅಧಿಕಾರಿಯ ಆಡಳಿತದಲ್ಲಿ ಹಿಂದೂ ಶೈವ ದೇವಾಲಯ ಜೀರ್ಣೋದ್ಧಾರವಾಗಿರುವ ಅಪರೂಪದ ಉದಾಹರಣೆಗಳಲ್ಲಿ ಇದು ಒಂದಾಗಿದೆ.

ಕಲ್ಯಾಣದ ಶಾಸನದ ಉದಾಹರಣೆಯಂತೆ ತುಳುನಾಡಿನ ಕೋಟೇಶ್ವರ ದೇವಸ್ಥಾನದಲ್ಲಿ ನಡೆದ ಒಂದು ವಿಶೇಷ ಘಟನೆ ಅದೇ ದೇವಾಲಯದ ಶಾಸನದಲ್ಲಿ ಕಂಡು ಬರುವುದನ್ನು ಕೆ. ವಿ. ರಮೇಶ್ ಅವರು ತೋರಿಸಿಕೊಟ್ಟಿದ್ದಾರೆ. ಕ್ರಿ.ಶ. ೧೫೫೦ ರಲ್ಲಿ ಆ ವರ್ಷದ ಕುಡಿಯ ಹಬ್ಬದಲ್ಲಿ ಇಡಿಯ ತುಳು ರಾಜ್ಯದಿಂದ ಜನರು ಬಂದು ಸೇರಿದ್ದಾಗ ಯಾವುದೋ ಕಾರಣಕ್ಕೆ ಜನರು ತಮ್ಮ ತಮ್ಮಲ್ಲಿ ಹೋರಾಡಿ ಬ್ರಾಹ್ಮಣರ, ಶೂದ್ರರ ಹೆಣಗಳು ಅಲ್ಲಿ ಬೀಳುವಂತಾಯಿತು. ಗೋಹತ್ಯೆಯೂ ಆಗಿ ಸುಮಾರು ಆರು ತಿಂಗಳುಗಳ ಕಾಲ ದೇವಸ್ಥಾನದ ಪೂಜೆ ಇತ್ಯಾದಿಗಳು ಸಂಪೂರ್ಣವಾಗಿ ನಿಂತು ಹೋಗಿತ್ತು. ಕ್ರಿ.ಶ. ೧೫೫೧ ರಲ್ಲಿ ಅಳಿಯ ರಾಮರಾಜ ಮತ್ತು ಅವನ ತಮ್ಮ ವೆಂಕಟಾದ್ರಿ ಇವರಿಬ್ಬರಿಗೂ 'ಧರ್ಮವಾಗಬೇಕೆಂದು' ಬಾರಕೂರ ರಾಜ್ಯದ ರಾಜ್ಯಪಾಲನು ಆ ದೇವಾಲಯದಲ್ಲಿ ನಡೆಯಬೇಕಾಗಿ ಬಂದ ಪ್ರಾಯಶ್ಚಿತ್ತ ಕರ್ಮಗಳ ವೆಚ್ಚಕ್ಕಾಗಿ ದಾನಗಳನ್ನು ಕೊಟ್ಟನು. ಇದರಲ್ಲಿ ಆಶ್ಚರ್ಯದ ವಿಷಯವೆಂದರೆ ಈ ಕಾರ್ಯಕ್ರಮ ಕೈಕೊಂಡ ರಾಜ್ಯಪಾಲ ಏಕದಳಖಾನ ಒಡೆಯನೆಂಬುವನು. ವಿಜಯನಗರ ಕಾಲದ ತುಳುನಾಡಿನಲ್ಲಿ ಅಧಿಕಾರ ನಡೆಸಿದ ರಾಜ್ಯಪಾಲರುಗಳಲ್ಲಿ ಇವನೊಬ್ಬನೆ ಇಸ್ಲಾಂ ಧರ್ಮದವನು. ಹಿಂದೂ ದೇವಾಲಯದ ಪ್ರಾಯಶ್ಚಿತ್ತ ಕಾರ್ಯಗಳು ಮುಸಲ್ಮಾನ ಅಧಿಕಾರಿಯ ಮೇಲ್ವಿಚಾರಣೆಯಲ್ಲಿ ಆದ ಅಪರೂಪದ ಘಟನೆ ಇದಾಗಿದೆ.[4]

---

೧. i. ಮೂರನೆಯ ಬಲ್ಲಾಳನಿಗೆ ಸೋಲುಂಟಾಗುವ ಸ್ಥಿತಿ ಬಂದಾಗ ಕುಮಾರ ಬಲ್ಲಾಳನನ್ನು ಮಲ್ಲಿಕ್ ಕಾಫೂರನು ಅನೇಕ ಕುದುರೆಗಳೊಂದಿಗೆ ಅಲ್ಲಾವುದ್ದೀನನೊಂದಿಗೆ ಅಂತಿಮ ಒಪ್ಪಂದಕ್ಕಾಗಿ ದೆಹಲಿಗೆ ಕಳುಹಿಸಿಕೊಟ್ಟನು. ನೋಡಿ: S.Krishna Swamy Iyengar : South India and Muhammadan invation ಪು. ೯೪.

ii. ಯಾದವ ರಾಮಚಂದ್ರನು ವೈರಿಬಲವನ್ನು ನೋಡಿ ಸಾವಿರಾರು ಕುದುರೆಗಳನ್ನು, ಐವತ್ತುಮಣ ಬಂಗಾರವನ್ನು, ಅಪಾರ ಮೊತ್ತದ ರತ್ನಗಳನ್ನು, ಐವತ್ತು ಆನೆಗಳನ್ನು ನೀಡಿದನು. V. Srinivasan : A History of Alladin Muhammad' ಜೆಬಿಯುಬಿ XVIII -೧ (New series) ಪು. ೫.

೨. ಹಿಜರ್ ಅಲಿಖಾನ್ : 'ಕರ್ಣಾಟಕದಲ್ಲಿ ಇಸ್ಲಾಂ ಧರ್ಮದ ಪಾತ್ರ' ಕರ್ಣಾಟಕದ ಪರಂಪರೆ II ಪು. ೨೭೬.

೩. ಕಇಆಪ್ರ ೭ ಕ್ರಿ.ಶ. ೧೩೨೬.

೪. ಕೆ.ವಿ. ರಮೇಶ್: ತುಳುನಾಡಿನ ಇತಿಹಾಸ. ಪು. ೧೧೪.

**ಸಮಾರೋಪ :**

ಶ್ರವಣಬೆಳಗೊಳ ಜೈನರ ಶಕ್ತಿಯುತ ಕೇಂದ್ರವೆಂದು ಹೆಸರು ಪಡೆದಿದ್ದರೂ ಅದು ಕೂಡ ಆತಂಕದ ದಿನಗಳನ್ನು ಅನುಭವಿಸಿರುವುದನ್ನು ಎಂ.ಎಂ. ಕಲಬುರ್ಗಿಯವರು ಗುರುತಿಸಿದ್ದಾರೆ.[೧] ಚಾವುಂಡರಾಯೋತ್ತರ ಯುಗದಲ್ಲಿ ಹೊಯ್ಸಳ, ವಿಜಯನಗರ ಮತ್ತು ವಿಜಯ ನಗರೋತ್ತರವೆಂಬ ಮೂರು ಘಟ್ಟಗಳಲ್ಲಿ ಬೇರೆ ಬೇರೆ ರೀತಿಯ ಅಪತ್ತುಗಳನ್ನು ಅನುಭವಿಸಿರುವುದನ್ನು ಶಾಸನ ಮತ್ತು ಕಾವ್ಯಗಳ ಆಧಾರದಿಂದ ನಿರೂಪಿಸಿದ್ದಾರೆ.

ಕರ್ನಾಟಕದ ಧಾರ್ಮಿಕ ವಿಷಯಕವಾದ ಶಾಸನಗಳನ್ನು ಗಮನಿಸಿದರೆ ಆರಂಭ ಕಾಲದಲ್ಲಿ ಹೆಚ್ಚಾಗಿ ಸಮನ್ವಯ-ಸಹಬಾಳ್ವೆಯ ಕಡೆ ಒಲಿದಿರುವುದನ್ನು ಕಾಣುತ್ತೇವೆ. ಹನ್ನೊಂದನೆಯ ಶತಮಾನದನಂತರ ಅನ್ಯಧರ್ಮಸಹಿಷ್ಣುತೆ ಮೊದಲಿನಂತೆ ಪ್ರಭಾವಶಾಲಿಯಾಗಿ ಕಾರ್ಯವನ್ನು ಮಾಡಿದಂತಿಲ್ಲ. ಇದಕ್ಕೆ ನೆರೆನಾಡುಗಳ ಪ್ರಭಾವವೂ ಕಾರಣವಾಗಿರಬಹುದು. ಮತೀಯ ಕಲಹ -ವೈಷಮ್ಯ -ಅಸಹನೆಗಳು ಹನ್ನೊಂದು ಹನ್ನೆರಡನೆಯ ಶತಮಾನದಲ್ಲಿ ಕೇವಲ ಕರ್ನಾಟಕಕ್ಕೆ ಮಾತ್ರ ವಿಶೇಷವಾದುದಲ್ಲ. ಆರ್. ಸಿ ಮಜುಂದಾರ್ ಅವರು ಹೇಳುವಂತೆ 'ಅಷ್ಟು ಹೊತ್ತಿಗೆ ಇಡೀ ಭಾರತಾದ್ಯಂತ ಸಾಮಾನ್ಯವಾಗಿ ಬೌದ್ಧಿಕ ಮತ್ತು ಸಾಂಸ್ಕೃತಿಕ ಇಳಿಮುಖ ಪ್ರಾರಂಭವಾಗಿತ್ತು. ಅವು ಹೇಗೆ ಪರಸ್ಪರ ಪ್ರಭಾವ ಬೀರಿದ್ದವು ಎಂಬುದನ್ನು ನಿರ್ಧರಿಸುವುದು ಕಠಿಣ. ಆದರೆ ಯಾವುದೇ ಕಾರಣವಾಗಿರಲಿ ಮತ್ತು ಪ್ರತಿಕ್ರಿಯೆಯಾಗಿರಲಿ ಒಟ್ಟಿನಲ್ಲಿ ಸಭ್ಯ ಆದರ್ಶಗಳ ಮತ್ತು ಲೈಂಗಿಕ ನೀತಿಯ ಅಧಃಪತನಗಳು ಧಾರ್ಮಿಕ ಆಚರಣೆಗಳ ಮೂಲಕ ಉಂಟಾಗಿದ್ದವು'[೨]. ಕರ್ನಾಟಕದಲ್ಲಿ ಉದಾರವಾದಿ ಮನೋಭಾವ, ಪರಧರ್ಮ ಸಹಿಷ್ಣುತೆ ಆರಂಭ ಕಾಲದಿಂದಲೂ ಶಕ್ತಿಯುತವಾಗಿ ಬೆಳೆದುಬಂದಿದ್ದರಿಂದ ತೀರಾ ಅತಿರೇಕದ ಧಾರ್ಮಿಕ ಘರ್ಷಣೆಗಳು ನಡೆದಂತಿಲ್ಲ. ಒಟ್ಟಿನಲ್ಲಿ ಶಾಸನಗಳಿಂದ ಬರುವ ಚಿತ್ರ, ಘರ್ಷಣೆಗಿಂತಲೂ ಸಮನ್ವಯದ ಶಾಂತಿಯುತ ಬದುಕಿನತ್ತ ಒಲಿದಿರುವುದು ಕಂಡು ಬರುತ್ತದೆ. ಮುಂದಿನ ಕಾಲದಲ್ಲಿಯೂ ಸಮನ್ವಯ ಸಿದ್ಧಾಂತ ಮುಂದುವರಿದಿರುವುದನ್ನು ಹರಿಹರನ ಕಾಲದ ಬೇಲೂರು ಶಾಸನದಲ್ಲಿ ಕಾಣಬಹುದು.

> ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
> ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ
> ಅರ್ಹಶ್ಚೇತಿ ಹ ಜೈನ ಶಾಸನಮತಿಃ ಕರ್ಮೇತಿ ಮೀಮಾಂಸಕಾಃ
> ಸೋಯಂವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ

---

೧. ಮಾರ್ಗ-೪ ಪು. ೧೧೩-೧೧೯.

೨. R.C. Majumdar : Struggle for Empire ಪು. ೪೦೦. ಮೇಲಿನ ಮಾತನ್ನು ಜಿ. ಎಸ್. ದೀಕ್ಷಿತ್ ಅವರು ಉದ್ಧರಿಸಿದ್ದಾರೆ. 'Social and Religious conditions of Karnataka before Basava.' Sri Basaveshwara - A Commemoration volume. ಪು. ೧೩೧.

# ೧೦. ಸಾಮಾಜಿಕ ವ್ಯವಸ್ಥೆ

**ಭಾ**ರತೀಯ ಸಂಸ್ಕೃತಿಯ ವಿವಿಧ ಮುಖಗಳ ಅಧ್ಯಯನ ಸಾಮಾನ್ಯವಾಗಿ ವೇದಗಳ ಅಧ್ಯಯನದಿಂದಲೇ ಆರಂಭವಾಗುತ್ತದೆ. ಸಹಜವಾಗಿ ಸಮಾಜ ರಚನೆಯ ಅಭ್ಯಾಸವೂ ಅದಕ್ಕೆ ಹೊರತಾಗಿಲ್ಲ. ಋಗ್ವೇದದಲ್ಲಿ ವರ್ಣಗಳ ಭೇದದ ಕುರುಹು ಅಷ್ಟಾಗಿ ಕಂಡುಬರುವುದಿಲ್ಲ. ನಾಲ್ಕು ವರ್ಣಗಳ ಪ್ರಾಚೀನ ಉಲ್ಲೇಖ ಋಗ್ವೇದದ ಪುರುಷಸೂಕ್ತಭಾಗದಲ್ಲಿ ಇರುವುದಾದರೂ ಅದು ಪ್ರಕ್ಷಿಪ್ತವೆಂಬ ಅಭಿಪ್ರಾಯವೂ ಇದೆ. ಅದರ ಕಾಲದ ಬಗ್ಗೆ ಭಿನ್ನಾಭಿಪ್ರಾಯವಿದ್ದು ಅಥರ್ವಣ ವೇದದ ಕೊನೆಯ ಭಾಗವೆಂಬ ಅಭಿಪ್ರಾಯವಿದೆ.[೧] ಪುರುಷಸೂಕ್ತದಲ್ಲಿ ಬ್ರಾಹ್ಮಣನು ಪುರುಷನ ಮುಖದಿಂದಲೂ ಕ್ಷತ್ರಿಯನು ಬಾಹುವಿನಿಂದಲೂ ವೈಶ್ಯನು ತೊಡೆಯಿಂದಲೂ ಶೂದ್ರನು ಪಾದಗಳಿಂದಲೂ ಹುಟ್ಟಿದನೆಂದು ಹೇಳಲಾಗಿದೆ. ಮೊದಲ ಮೂರು ವರ್ಣಗಳಲ್ಲಿ ಅಂತಹ ಬಿಗಿಯಾದ ನಿಲುವುಗಳಿರದೆ ಪರಸ್ಪರ ವೈವಾಹಿಕ ಸಂಬಂಧ ಹೊಂದುವಷ್ಟು ಸಡಿಲವಾಗಿದ್ದುದನ್ನು ಕೆಲವು 'ಜಾತಕ' ಕತೆಗಳಲ್ಲಿ ಗುರುತಿಸಲಾಗಿದೆ.[೨] ಬ್ರಾಹ್ಮಣ (ಕವಿ, ಪುರೋಹಿತ, ವಿದ್ವಾಂಸ), ಕ್ಷತ್ರಿಯ (ಆಳುವಿಕೆ, ಯುದ್ಧ, ರಕ್ಷಣೆ), ವೈಶ್ಯ (ವ್ಯವಸಾಯ, ಪಶುಸಂಗೋಪನೆ ಇತ್ಯಾದಿ), ಶೂದ್ರ (ಸೇವಾಕಾರ್ಯ) ಎಂಬಂತೆ, ಪುರುಷಸೂಕ್ತದ ಹೊತ್ತಿಗೆ ಸಮಾಜ ನಾಲ್ಕು ಗುಂಪುಗಳಾಗಿದ್ದಿತು. ಶತಪಥ ಬ್ರಾಹ್ಮಣದ ಹೊತ್ತಿಗೆ ನಾಲ್ಕು ವರ್ಣಗಳು ಖಚಿತವಾಗಿ, ಅವುಗಳಲ್ಲಿ ತರತಮಗಳು ಸೂಕ್ಷ್ಮವಾಗಿ ಗುರುತಿಸಲ್ಪಟ್ಟಿವೆ. ವರ್ಣವ್ಯವಸ್ಥೆ ಜಾತಿ ವ್ಯವಸ್ಥೆಗೆ ಕ್ರಮೇಣ ದಾರಿಮಾಡಿಕೊಟ್ಟಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.[೩]

ಪ್ರಾಚೀನ ಕರ್ನಾಟಕದ ಕಾಲದ ಹೊತ್ತಿಗೆ ವರ್ಣಪದ್ಧತಿಯ ಪರಿಪಾಲನೆ ಬಹುಮಟ್ಟಿಗೆ ಕುಸಿದು ಹೋಗಿದ್ದಿತು.[೪] ಸಾಂಪ್ರದಾಯಿಕವಾಗಿ ಗೊತ್ತು ಮಾಡಲ್ಪಟ್ಟ ವೃತ್ತಿಗಳನ್ನು ಅನುಸರಿಸುವುದು ಅಲ್ಲಲ್ಲೆ ಕಾಣಬರುವುದಾದರೂ ಬ್ರಾಹ್ಮಣರಾದಿಯಾಗಿ ಯಾರೂ ಕಡ್ಡಾಯವಾಗಿ ಸಾಂಪ್ರದಾಯಿಕವಾಗಿ ಬಂದ ವೃತ್ತಿಗಳನ್ನೇ ಅನುಸರಿಸುತ್ತಿರಲಿಲ್ಲ. ಬ್ರಾಹ್ಮಣರು ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪರಿಗ್ರಹಗಳಂತಹ ಷಟ್ಕರ್ಮ ನಿರತರಾಗಿದ್ದಂತೆ ಮಂತ್ರಿ ಸೇನಾಪತಿಗಳಾಗಿ ಆಡಳಿತವನ್ನೂ ಯುದ್ಧವನ್ನೂ ನಿರ್ವಹಿಸಿದ್ದಾರೆ. ಕೆಲವು ರಾಜ ಮನೆತನಗಳು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಂಡಿರುವುದುಂಟಾದರೂ[೫] ಅದು ವ್ಯಾಪಕವಾಗಿ ಕಂಡುಬರುವುದಿಲ್ಲ. ವೈಶ್ಯರು ವ್ಯಾಪಾರವನ್ನು ಪ್ರಧಾನ ವೃತ್ತಿಯನ್ನು ಉಳ್ಳವರಾಗಿ ಕಂಡು ಬರುವರಾದರೂ ಮಂತ್ರಿ, ಸೇನಾಪತಿಯಂತಹ ಆಡಳಿತ ಹುದ್ದೆಗಳನ್ನೂ ನಿರ್ವಹಿಸಿದ್ದಾರೆ. ಅಲ್ಲದೆ ವ್ಯವಸಾಯ, ಪಶುಪಾಲನೆ ಮಾಡುತ್ತಿದ್ದವರು

---

೧. R.S. Sharma: Sudras in Ancient India. ಪು. ೨೮.

೨. Radha Kumud Mookerji : Local Government in Ancient India ಪು. ೬೨-೬೩.

೩. P. v. Kane : History of Dharmasastra V - (ii) ಪು. ೫೮೨.

೪. ಎಂ.ಚಿದಾನಂದಮೂರ್ತಿ : ಕಶಾಸಾಂಅ, ಪು. ೪೩೨.

೫. (ರೈ) ಎಕ V ಹಾಸನ ೧೩೦ ಕ್ರಿ.ಶ. ೧೧೪೭.

ತಮ್ಮನ್ನು ವೈಶ್ಯರೆಂದು ಕರೆದುಕೊಂಡಿಲ್ಲ. ಶೂದ್ರರು ಬಹುಮಟ್ಟಿಗೆ ಕೆಳವರ್ಗದ ನಾನಾ ವೃತ್ತಿಗಳನ್ನು ಅನುಸರಿಸುತ್ತಿದ್ದುದು ಕಂಡು ಬರುವುದಾದರೂ ಎಲ್ಲ ಶೂದ್ರರನ್ನು ಖಚಿತವಾಗಿ ಗುರುತಿಸುವುದು ಕಠಿಣವೇ ಆಗಿದೆ.

**ಬ್ರಾಹ್ಮಣರು :**

ಬ್ರಾಹ್ಮಣರನ್ನು ಹೊರನಾಡುಗಳಿಂದ ಆಗಾಗ್ಗೆ ಕರ್ನಾಟಕಕ್ಕೆ ಕರೆದು ತಂದು ಕೆಲವು ಪ್ರದೇಶಗಳಲ್ಲಿ ನೆಲೆಗೊಳಿಸಿದಂತೆ ಕೆಲವು ಶಾಸನಗಳಿಂದ ತಿಳಿದು ಬರುತ್ತದೆ.[೧] ಕೆಲವು ಬ್ರಾಹ್ಮಣರು ಕರ್ನಾಟಕಕ್ಕೆ ವಲಸೆ ಬಂದ ವಿಷಯವೂ ಶಾಸನಗಳಿಂದ ತಿಳಿದು ಬರುತ್ತದೆ.[೨] ಎಲ್ಲ ಬ್ರಾಹ್ಮಣರು ಹೊರ ಪ್ರದೇಶಗಳಿಂದ ವಲಸೆ ಅಥವಾ ಆಹ್ವಾನದ ಮೇರೆಗೆ ಬಂದು ನೆಲಸಿದರೆಂದು ಹೇಳುವುದು ಕಠಿಣ.

ಬ್ರಾಹ್ಮಣರು ಆ ಕಾಲದಲ್ಲಿ ಸಾಮಾಜಿಕವಾಗಿ ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಅವರು ವಿದ್ಯಾಕ್ಷೇತ್ರದಲ್ಲಿ, ಆಡಳಿತ ಕ್ಷೇತ್ರದಲ್ಲಿ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ವಿಶೇಷ ಪ್ರಭಾವ ಉಳ್ಳವರಾಗಿದ್ದರು. ಅವರು ವಿದ್ಯಾಕ್ಷೇತ್ರದಲ್ಲಿ ಏಕಸ್ವಾಮ್ಯವನ್ನು ಹೊಂದಿದ್ದರೆಂದರೂ ತಪ್ಪಾಗಲಾರದು. ಅವರ ಅಶನವಸನಾದಿಗಳ ವ್ಯವಸ್ಥೆಯನ್ನು ರಾಜರು, ದಾನಿಗಳು ನೋಡಿಕೊಂಡು ನೂರಾರು ಅಗ್ರಹಾರಗಳಲ್ಲಿ ಅವರನ್ನು ನೆಲೆಗೊಳಿಸಿದ್ದುದರಿಂದ ಅವರು ಯಾವ ಆತಂಕವೂ ಇಲ್ಲದೆ ವಿದ್ಯಾಭ್ಯಾಸವನ್ನು ಸತತವಾಗಿ ಮುಂದುವರಿಸಲು ಸಾಧ್ಯವಾಯಿತು. ಅನೇಕ ಶಾಸನಗಳು ಅಗ್ರಹಾರಗಳ ಬ್ರಾಹ್ಮಣರನ್ನು ಕೀರ್ತಿಸಿವೆ. 'ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪತಪ ಸಮಾಧಿಶೀಲ ಗುಣಸಂಪನರುಂ ಯಜನ ಯಾಜನಯಧ್ಯಯನಧ್ಯಾಪನ ದಾನ ಪ್ರತಿಗ್ರಹ ಷಟುಕರ್ಮ್ಮ ನಿರತರುಂ ಔಪಾಸನಾಗ್ನಿಹೋತ್ರದ್ವಿಜಗುರು ದೇವತಾ ಪೂಜಾ ತತ್ಪರರುಂ ರುಗ್ಯಜು ಸಾಮ ಅಥರ್ವಣ ಚತುರ್ವೇದ ವೇದಾಂಗ ಬ್ಯಾಕರಣಸ್ಮೃತಿ ಪುರಾಣಾಗಮಾದಿ ಚತುಃಶಷ್ಟಿಕಳಾ ಪರಿಣತರುಮಪ್ಪ'[೩] ಎಂಬಂತಹ ಮಾತುಗಳು ಅನೇಕ ಶಾಸನಗಳಲ್ಲಿ ಬಂದಿವೆ. ಬ್ರಾಹ್ಮಣರು ಯಜನ[೪] (ಯಾಗ ಮಾಡುತ್ತಲೂ), ಯಾಜನ (ಯಾಗವನ್ನು ಮಾಡಿಸುತ್ತಲೂ), ಅಧ್ಯಯನ, ಅಧ್ಯಾಪನ (ಪಾಠವನ್ನು ಬೋಧಿಸುತ್ತಲೂ), ದಾನ (ದಾನವನ್ನು ಮಾಡುತ್ತಲೂ) ಮತ್ತು ಪ್ರತಿಗ್ರಹ (ದಾನವನ್ನು ಸ್ವೀಕರಿಸುತ್ತಲೂ)ವೆಂಬ ಷಟ್ಕರ್ಮನಿರತರಾಗಿರುತ್ತಿದ್ದರೆಂದು ತಿಳಿಸುತ್ತವೆ. ಅಲ್ಲದೆ ಅವರು ಚತುರ್ವೇದಗಳು, ವೇದಾಂಗಗಳು, ವ್ಯಾಕರಣ, ಪುರಾಣ, ಆಗಮ ಮತ್ತು ಅರವತ್ನಾಲ್ಕು ಕಲೆಗಳಲ್ಲಿ ಪರಿಣತರಾಗಿದ್ದರೆಂದು ನಿರೂಪಿಸಿರುವುದುಂಟು. ಅಗ್ರಹಾರಗಳಂತೆ ಬ್ರಹ್ಮಪುರಿಗಳೂ ಬ್ರಾಹ್ಮಣರ ಆವಾಸಸ್ಥಾನಗಳಾಗಿದ್ದು ವಿದ್ಯೆಯ ಚಟುವಟಿಕೆಯನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದಿರುವುದನ್ನು ಮುಂದಿನ ಒಂದು ಅಧ್ಯಾಯದಲ್ಲಿ ಚರ್ಚಿಸಲಾಗುವುದು.

ರಾಮಾನುಜಾಚಾರ್ಯರು ತಮಿಳುನಾಡಿನಿಂದ ಕರ್ನಾಟಕಕ್ಕೆ ಬಂದನಂತರ ಶ್ರೀವೈಷ್ಣವರು ಸಾಕಷ್ಟು ಸಂಖ್ಯೆಯಲ್ಲಿ ಈ ನಾಡಿಗೆ ಬಂದು ರಾಜರಿಂದ, ದಾನಿಗಳಿಂದ ಅನೇಕ ಅಗ್ರಹಾರಗಳನ್ನು ಪಡೆದು ನೆಲೆನಿಂತರು. ಅವರು ಸ್ಥೂಲವಾಗಿ ಕರ್ನಾಟಕದ ಮಂಡ್ಯ, ಮೈಸೂರು, ಕಡೂರು, ಹಾಸನ ಜಿಲ್ಲೆಗಳಲ್ಲಿ ವಿಶೇಷವಾಗಿ ವ್ಯಾಪಿಸಿದ್ದಾರೆ. ಅವರ ಅಗ್ರಹಾರಗಳು ಮತ್ತು

---

೧. (ರೈ) ಎಕ VII ಶಿಕಾರಿಪುರ ೧೮೬ ಕ್ರಿ.ಶ. ೞ. ೧೨೦೦.

೨. ಎಂ.ಚಿದಾನಂದಮೂರ್ತಿ ಪೂರ್ವೋಕ್ತ ಕಶಾಸಾಂಅ, ಪು. ೪೩೩.

೩. (ರೈ) ಎಕ VII ಶಿಕಾರಿಪುರ ೩೧೨ ಕ್ರಿ.ಶ. ೧೨೮೭.

೪. (ರೈ) ಎಕ VI ತರೀಕೆರೆ ೧೫ ಕ್ರಿ.ಶ. ೧೧೮೫. ಈ ಶಾಸನದ ಶಾಪಾಶಯದ ಭಾಗದಲ್ಲಿ ಅಶ್ವಮೇಧಾದಿ ಸಕಲಯಜ್ಞಗಳ ಮತ್ತು ಹಿರಣ್ಯಗರ್ಭ ತುಲಾಪುರುಷಾದಿ ಮಹಾವ್ರತಗಳ ಉಲ್ಲೇಖ ಬಂದಿದೆ.

ವಿಷ್ಣುಮಂದಿರಗಳು ಅವರ ಹರಡುವಿಕೆಯನ್ನು ತಿಳಿಸುತ್ತವೆ. ರಾಮಾನುಜರ ಆಗಮನದೊಂದಿಗೆ ಬೇರೆ ಬೇರೆ ಗುಂಪಿನ ಬ್ರಾಹ್ಮಣ ಕುಟುಂಬಗಳು ತಮಿಳುನಾಡಿನಿಂದ ವಲಸೆಯಾಗಿ ಬಂದು ಈ ನಾಡಿನಲ್ಲಿ ನೆಲೆನಿಂತವು.[1]

ಆಡಳಿತ ಕ್ಷೇತ್ರವಲ್ಲಿಯೂ ಬ್ರಾಹ್ಮಣರು ವಿಶೇಷ ಪ್ರಭಾವ ಉಳ್ಳವನಾಗಿದ್ದರು. ಎರಡನೆಯ ಬಲ್ಲಾಳನ ಮಹಾ ಪ್ರಧಾನನಾಗಿದ್ದ ಚಂದ್ರಮೌಳಿ 'ಬಲ್ಲಾಳ ನೃಪಾಳ ದಕ್ಷಿಣ ಭುಜಾದಂಡ' ಎಂದು ಕೀರ್ತಿ ಪಡೆದಿದ್ದನು. ಹುಟ್ಟಿನಿಂದ ಬ್ರಾಹ್ಮಣನಾಗಿದ್ದರೂ ತನ್ನ ವಿದ್ವತ್ತು ಮತ್ತು ಸಾಹಸಗಳಿಂದ ಬಲ್ಲಾಳನ ಆಪ್ತ ಮಂತ್ರಿಯಾಗಿದ್ದನು. ಶಂಭುದೇವ ಅಕ್ಕವ್ವೆಯರ ಮಗನಾದ ಇವನು ಉತ್ತಮ ವಿದ್ಯಾಸಂಸ್ಕಾರವನ್ನು ಪಡೆದವನು. 'ಇಂದ್ರನಿಗೆ ಬೃಹಸ್ಪತಿ ಇದ್ದಂತೆ' ಬಲ್ಲಾಳನಿಗೆ ಚಂದ್ರಮೌಳಿ ಇದ್ದನು. ಅವನನ್ನು ಶ್ರವಣಬೆಳಗೊಳದ ಶಾಸನ ವಿಶೇಷವಾಗಿ ಕೀರ್ತಿಸಿದೆ.[2] ಇದೇ ರೀತಿ 'ವೀರಬಲ್ಲಾಳ ದೇವ ರಾಜ್ಯಾಭ್ಯುದಯ ಕರಣಕಾರಣ'ನೆಂದೂ, 'ಶಸ್ತ್ರ ಶ್ರಮಾಚಾರ್ಯ ಭಾರದ್ವಾಜ'ನೆಂದೂ ಕೀರ್ತಿತನಾದ ಅಮೃತ ದಂಡನಾಥನು ಬಲ್ಲಾಳನಲ್ಲಿ ಮಂತ್ರಿಯಾಗಿದ್ದನು.[3] ಕಾಶ್ಯಪಗೋತ್ರದ ವಿಷ್ಣು[4] ಮುಂತಾದವರು ಹೊಯ್ಸಳ ವಂಶಕ್ಕೆ ಮಂತ್ರಿಯಂತಹ ಉನ್ನತ ಅಧಿಕಾರದಲ್ಲಿದ್ದು ಸೇವೆಯನ್ನು ಸಲ್ಲಿಸಿದ್ದಾರೆ.

ಅಗ್ರಹಾರಗಳ ತುರುರಕ್ಷಣೆಗೆ ಹೋರಾಡಿ ಮಡಿದ ವೀರರಿಗೆ ದಾನಗಳನ್ನು ಬ್ರಾಹ್ಮಣರು ನೀಡಿದ್ದಾರೆ. ನಿದರ್ಶನಕ್ಕೆ ಹಾವೇರಿ ಅಗ್ರಹಾರದ ಪರವಾಗಿ ಒಂದು ಹೋರಾಟದಲ್ಲಿ ಸೋವೆಯನಾಯಕನು ತಲೆಗೊಟ್ಟುದಕ್ಕೆ ನೆತ್ತರುಕೊಡುಗೆಯಾಗಿ ಭೂಮಿಯನ್ನು ಮಹಾಜನರು ದಾನವಾಗಿ ನೀಡಿದ ವಿಷಯ ತಿಳಿದುಬರುತ್ತದೆ.[5]

ಅಗ್ರಹಾರದ ಬ್ರಾಹ್ಮಣ ಮುಖ್ಯಸ್ಥರಾದ ಮಹಾಜನರು ಗೌರವಾನ್ವಿತ ವ್ಯಕ್ತಿಗಳಾಗಿದ್ದರು. ಅನೇಕ ದಾನದತ್ತಿಗಳಿಗೆ ಸಾಕ್ಷಿಗಳಾಗಿ ಕಾರ್ಯವನ್ನು ನಿರ್ವಹಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ ದಾನಗಳನ್ನು ಸಂರಕ್ಷಿಸುವ ವಿಶ್ವಸ್ಥ ಮಂಡಳಿಗಳ ಹಾಗೆ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ.[6] ಯಾವುದೇ ಹಳ್ಳಿ ಹಳ್ಳಿಗಳ ಮಧ್ಯೆ ಗಡಿ ವಿವಾದಗಳು ಬಂದರೆ ನ್ಯಾಯ ತೀರ್ಮಾನ ಮಾಡುವ ಹೊಣೆ ಕೆಲವು ಸಾರಿ ಇವರ ಮೇಲಿರುತ್ತಿತ್ತು. ಕೆಲ್ಲಂಗೆರೆಯ ಒಂದು ಶಾಸನದಲ್ಲಿ 'ಯಿ ಕ್ಷೇತ್ರಕ್ಕೆ ಸೀಮಾ ವಿವಾದವಾದಡೆ ಮಹಾಜನಂಗಳು ತಿದ್ದಿ ಕೊಡುವರು' ಎಂದು ಬರುತ್ತದೆ.[7] ಮಹಾಜನರು ಕೆಲವು ಅಗ್ಗಿಷ್ಟಗೆಗಳಿಗೆ ದಾನಗಳನ್ನು ಮಾಡಿದ್ದಾರೆ.[8] ಕೆಲವು ಸಂದರ್ಭಗಳಲ್ಲಿ ಅಗ್ಗಿಷ್ಟಗೆಯನ್ನು ನಡೆಸುವ ಹೊಣೆಯನ್ನು ಹೊತ್ತಿರುವುದೂ ಉಂಟು.[9]

ಬ್ರಾಹ್ಮಣರು ಕೆಲವು ಸಂದರ್ಭಗಳಲ್ಲಿ ಖಡ್ಗವನ್ನು ಹಿಡಿದು ತುರುಗಳ ರಕ್ಷಣೆಗೆ ಹೋರಾಡಿರುವರು. ಹುಳ್ಳಿಯ ಹಳ್ಳಿಯನ್ನು ಆಕ್ರಮಣ ಮಾಡಿ ತುರುಗಳನ್ನು ಶತ್ರುಗಳು ಅಪಹರಿಸಿದಾಗ ಭಾರದ್ವಾಜ ಗೋತ್ರದ ಸಂಕರುಷನ ಮಗ ನಾಗೊಡೆಯನು

---

೧. The Cultural Heritage of India II ಪು. ೯೧.

೨. (ಮೈ) ಎಕ II ಶ್ರವಣಬೆಳಗೊಳ ೫೭೧ ಕ್ರಿ.ಶ. ೧೧೮೧.

೩. (ರೈ) ಎಕ VI ತರೀಕೆರೆ ४೫ ಕ್ರಿ.ಶ. ೧೧೯೭.

೪. (ರೈ) ಎಕ V ಬೇಲೂರು ೧೭ ಕ್ರಿ.ಶ. ೧೩೩೬.

೫. ಎಸ್‌ಐಐ XVIII ಹಾವೇರಿ ೨೧೧ ಕ್ರಿ.ಶ. ೧೨೩೦.

೬. ಎಂಎಆರ್ ೧೯೩೨ ತರೀಕೆರೆ ४೭ ಕ್ರಿ.ಶ. ೧೨೨೮.

೭. (ರೈ) ಎಕ V ಅರಸಿಕೆರೆ ೧೧೩ ಕ್ರಿ.ಶ. ೧೩४೮.

೮. (ಮೈ) ಎಕ V ತಿ.ನರಸೀಪುರ ೫೩ ಕ್ರಿ.ಶ. ೧೧೩೫.

೯. ಎಇ XII ಶೋರಾಪುರ ೩೨, ಬಿ ೧ ಕ್ರಿ.ಶ. ೧೦೭೭; ಎಂಎಆರ್ ೧೯೩೦ ಸಾಗರ ೬೯ ಕ್ರಿ.ಶ. ೧೨४೩.

ಹೋರಾಡಿ ತುರುಗಳನ್ನು ಮರಳಿಸಿ ಮಡಿಯುತ್ತಾನೆ.[೧] ಬ್ರಾಹ್ಮಣರು ಕೇವಲ ವೈದಿಕ ಕರ್ಮಗಳಲ್ಲಿ ಮುಳುಗಿರದೆ, ಉಚಿತ ಸಂದರ್ಭಗಳಲ್ಲಿ ಖಡ್ಗವನ್ನು ಹಿಡಿದು ಗ್ರಾಮರಕ್ಷಣೆಗೆ ಮುಂದಾಗುತ್ತಿದ್ದುದೂ ಉಂಟು ಎನ್ನಬಹುದು.

ಸಾಮಾಜಿಕವಾಗಿ ಬ್ರಾಹ್ಮಣರಿಗೆ ಉತ್ತಮ ಸ್ಥಾನಮಾನಗಳಿದ್ದರೂ ಅವರ ಪ್ರಮುಖ ವಾಸಸ್ಥಾನಗಳಾದ ಅಗ್ರಹಾರಗಳ ಮೇಲೆ ಆಗಾಗ್ಗೆ ಆಕ್ರಮಣಗಳೂ ನಡೆದಿರುವುದುಂಟು. ಇಂಥ ಕೆಲವು ಆಕ್ರಮಣಗಳಲ್ಲಿ ಬ್ರಾಹ್ಮಣರನ್ನು ಸೆರೆಹಿಡಿದ ನಿದರ್ಶನಗಳಿವೆ. ಶ್ರೀಮದನಾದಿ ಅಗ್ರಹಾರ ಕುಪ್ಪಟೂರನ್ನು ವೀರಬಿಜ್ಜಣ ದೇವನಾಯಕ ಜಗದೇವನಾರಣನು ಅನ್ಯಾಯದಿಂದ ಆಕ್ರಮಿಸಿ 'ಬ್ರಾಹ್ಮಣರಂ ಹಿಡಿದು ಸೆಱೆಯಿಸುಯಿಸಳುವಲು' (ಸೆರೆ ಹಿಡಿದು ಕರೆದೊಯ್ಯುವ ಸಮಯದಲ್ಲಿ?) ಸಾಸಿರ್ವರ ಪ್ರಿಯಪುತ್ರನೆನಿಸಿಕೊಂಡಿದ್ದ ಮೊತ್ತಕಾಜಿ ದೂಸಮನು ಪ್ರತಿಭಟಿಸಿ ಹೋರಾಡಿ ಸೆರೆಯನ್ನು ಬಿಡಿಸಿ ಸುರಲೋಕ ಪ್ರಾಪ್ತನಾಗುತ್ತಾನೆ. ಅನಂತರ ದೂಸಮನ ಕಲಿತನಕ್ಕಾಗಿ ಅವನಿಗೆ ಗದ್ದೆಯನ್ನು ಕಾಣಿಕೆಯಾಗಿ ನೀಡುತ್ತಾರೆ.[೨] ಕುಪ್ಪಟೂರಿನ ಇನ್ನೊಂದು ಶಾಸನ 'ಮಖವನ್ನು (ಯಜ್ಞ) ಕೆಡಿಸಲು ಬಂದ ಅಸುರರಂತೆ' 'ಗವುಡಸ್ವಾಮಿ' ಸಿದ್ಧಾಯವನ್ನು ಅನ್ಯಾಯದಿಂದ ಸಂಗ್ರಹಿಸಲು ಆಕ್ರಮಣ ಮಾಡಿ ಬ್ರಾಹ್ಮಣರನ್ನು ಸೆರೆಹಿಡಿದಾಗ ಕೇತೆಯನಾಯಕನು ಸ್ತ್ರೀಯರನ್ನು ಮತ್ತು ಗೋವುಗಳನ್ನು ಬಿಡಿಸುತ್ತಾನೆ. ಆಗ ಮಹಾಜನರು 'ನೆತ್ತರುಗೊಡುಗೆ'ಯಾಗಿ ಕೇತೆಯನಾಯಕನ ಮಗ ಮಾಕೆಯನಾಯಕನಿಗೆ ಭೂಮಿ ಮತ್ತು ನಿವೇಶನವನ್ನು ಕೊಡುತ್ತಾರೆ.[೩]

ಅಗ್ರಹಾರಗಳ ರಚನೆ ವ್ಯಾಪಕವಾಗಿ ನಡೆಯಲು ತೊಡಗಿ, ಅದು ಸಹಜವಾಗಿ ಆಯಾ ಗ್ರಾಮಗಳ ಜನರಿಗೆ ಮುಖ್ಯಸ್ಥರಿಗೆ ತೊಂದರೆಯಾಗತೊಡಗಿತು. ಅಲ್ಲದೆ ಅದು ಅವರ ಮೊದಲ ಸ್ಥಾನಮಾನಗಳಿಗೆ ಚ್ಯುತಿ ತರತೊಡಗಿರಬೇಕು. ಅಗ್ರಹಾರ ರಚನೆಯಾಗಿ ರಾಜಾಜ್ಞೆ ಹೊರಟರೂ ಅದನ್ನು ತಿರಸ್ಕರಿಸಿದ ಒಂದು ವಿರಳ ಘಟನೆ ಶಾಸನ ಒಂದರಲ್ಲಿ ನಿರೂಪಿತವಾಗಿದೆ. ವೀರನರಸಿಂಹನ ಆಳ್ವಿಕೆಯ ಕಾಲದಲ್ಲಿ ಹಾಲುತೊರೆಯನ್ನು ಅಗ್ರಹಾರ ಮಾಡಿ ರಾಜಾಜ್ಞೆ ಹೊರಟಾಗ ಗಾವುಂಡುಗಳು ಒಪ್ಪಿ ಅನಂತರ ಮಹಾಜನಗಳಿಗೆ ಬಿಟ್ಟುಕೊಡಿ ಎಂದಾಗ ನಿರಾಕರಿಸಿ ಪ್ರತಿಭಟಿಸುತ್ತಾರೆ. ರಾಜನ ಕಡೆಯ ಅಧಿಕಾರಿಗಳು ದಾಳಿಮಾಡಿ ಊರೆಲ್ಲವನ್ನು ಸೂರೆ ಮಾಡಿ 'ಉಡೆಉರ್ಚಿ ಹೆಣ್ನುಸೆಱೆ ತುಱುಸೆಱೆ'ಯನ್ನು ಮಾಡಲು ಹರಿಮಾರಗೌಡನ ಮಗ ಮಾರೆಯ ಪೆರಯ ಉಗ್ರವಾಗಿ ಹೋರಾಡಿ ಮರಣಹೊಂದಿದ. ಅಂತೂ ಅಧಿಕಾರಿಗಳು ರಾಜಾಜ್ಞೆಯನ್ನು ಯಶಸ್ವಿಯಾಗಿ ಈಡೇರಿಸಿದ ಹಾಗೆ ಕಂಡುಬರುತ್ತದೆ.[೪] ಗ್ರಾಮಗಳು ಅಗ್ರಹಾರಗಳಾಗಿ ಪರಿವರ್ತಿತವಾದಾಗ ಸಹಜವಾಗಿ ಗೌಡರುಗಳು ತಮ್ಮ ಹೊಲ ತೋಟ ಭೂಮಿಗಳ ಒಡೆತನವನ್ನು ಕಳೆದುಕೊಳ್ಳುತ್ತಿದ್ದುದಲ್ಲದೆ ಅವರ ಸ್ಥಾನಮಾನಕ್ಕೂ ಸಹಜವಾಗಿ ಧಕ್ಕೆಯಾಗುತ್ತಿದ್ದಿರಬೇಕು. ಅಂಥ ಸಂದರ್ಭಗಳಲ್ಲಿ ಅತ್ಯಂತ ವಿರಳವಾಗಿ ರಾಜಾಜ್ಞೆಯನ್ನು ಪ್ರತಿಭಟಿಸುವ ಧೈರ್ಯವನ್ನು ತೋರಿರಬೇಕು.

ಮೇಲೆ ಗಮನಿಸಿದ ಕೆಲವು ವಿರಳ ನಿದರ್ಶನಗಳನ್ನು ಬಿಟ್ಟರೆ ಉಳಿದಂತೆ ಬ್ರಾಹ್ಮಣರ ಬಗ್ಗೆ ಸಮಾಜ ಗೌರವದಿಂದಲೇ ನಡೆದುಕೊಂಡಿದೆ. ನೂರಾರು ಶಾಸನಗಳು ಶಾಪಾಶಯಗಳ ಭಾಗದಲ್ಲಿ ದಾನವನ್ನು ಅಪಹರಿಸಿದರೆ ಗಂಗೆಯ ತಡಿಯಲ್ಲಿ ಬ್ರಾಹ್ಮಣರನ್ನು ಮತ್ತು ಗೋವುಗಳನ್ನು ಕೊಂದ ಪಾಪವೆಂದು ಹೇಳುವುದನ್ನು ಗಮನಿಸಿದರೆ 'ಬ್ರಹ್ಮಹತ್ಯಾದೋಷ'ವನ್ನು ಸಾಂಪ್ರದಾಯಿಕವಾಗಿಯಾದರೂ ಗಂಭೀರವಾಗಿ ಪರಿಗಣಿಸುತ್ತಿದ್ದಂತೆ ಕಂಡುಬರುತ್ತದೆ. ಬ್ರಾಹ್ಮಣರ ಸದ್ಗುಣಗಳನ್ನು ಕೆಲವು ಶಾಸನಗಳು 'ಶಿಷ್ಟಜನಾಶ್ರಯರ್', 'ಶರಣಾಗತ ವಜ್ರ ಪಂಜರ'ರೆಂದು ಕೀರ್ತಿಸಿದೆ. 'ಮುಳಿದಡೆ ಮಾರಿಗಳೇ ಪಾರ್ವರೆಂದು'

---

೧. (ಮೈ) ಎಕ VII ಮಳವಳ್ಳಿ ೩೯ ಕ್ರಿ.ಶ. ೧೧೭೭-೭೮.

೨. (ರೈ) ಎಕ VIII ಸೊರಬ ೨೫೬ ಕ್ರಿ.ಶ. ೧೨೧೮.

೩. (ರೈ) ಎಕ VIII ಸೊರಬ ೨೫೧ ಕ್ರಿ.ಶ. ೧೧೭೭.

೪. ಎಂಎಆರ್ ೧೯೩೬ ಬೇಲೂರು ೧೯ ಕ್ರಿ.ಶ. ೧೨೫೮.

(=ಕೋಪಿಸಿಕೊಂಡರೆ ಬ್ರಾಹ್ಮಣರೇ ಮಾರಿಗಳು) ಒಂದು ಶಾಸನ ಅವರ ಬಗ್ಗ ಹೇಳಿರುವುದುಂಟು.[೧] ಒಟ್ಟಿನಲ್ಲಿ ಬ್ರಾಹ್ಮಣರು ಆ ಕಾಲದಲ್ಲಿ ಸಾಮಾಜಿಕವಾಗಿ ಗೌರವಾನ್ವಿತರಾಗಿಯೂ, ಆಡಳಿತ, ವಿದ್ಯೆ ಮುಂತಾದ ರಂಗಗಳಲ್ಲಿ ಮುಂಚೂಣಿಯಲ್ಲಿದ್ದರೆಂದೂ ಸುಲಭವಾಗಿ ಭಾವಿಸಬಹುದು.

**ಕ್ಷತ್ರಿಯರು:**

ಕೆಲವು ರಾಜಮನೆತನಗಳು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಂಡಿದ್ದಾರೆ. ರಾಜರ ಕರ್ತವ್ಯಗಳಲ್ಲಿ ಚಾತುರ್ವರ್ಣ ಸಂರಕ್ಷಣೆಯೂ ಒಂದೆಂಬ ಭಾವನೆ ಆ ಕಾಲದಲ್ಲಿಯೂ ಇದ್ದಿತು. ಸೇವುಣರಾಮಚಂದ್ರನು ವರ್ಣಧರ್ಮಗಳ ರಕ್ಷಕನೆಂದು ಒಂದು ಶಾಸನದಲ್ಲಿ ವರ್ಣಿತನಾಗಿದ್ದಾನೆ.[೨] ಬಿಜ್ಜಳನ ವರ್ಣಾಶ್ರಮ ಪರವಾದ ನಿಲವೇ ಅವನನ್ನು ಹರಳಯ್ಯ-ಮಧುವಯ್ಯರನ್ನು ಕ್ರೂರವಾಗಿ ಶಿಕ್ಷಿಸುವಂತೆ ಪ್ರೇರೇಪಿಸಿತೆಂದು ಕೆಲವು ಕನ್ನಡ ಕಾವ್ಯಗಳು ನಿರೂಪಿಸಿವೆ.[೩]

ಕೆಲವು ಸ್ಮೃತಿಗಳು ಕಲಿಯುಗದಲ್ಲಿ ಶುದ್ಧ ಕ್ಷತ್ರಿಯ ವರ್ಣವೇ ಇಲ್ಲವೆಂದು ಹೇಳುವುವು.[೪] ಬೌದ್ಧ ಜೈನ ಗ್ರಂಥಗಳಲ್ಲಿ ತೀರ್ಥಂಕರರೂ ಗೌತಮಬುದ್ಧನೂ ಕ್ಷತ್ರಿಯರಾದುದರಿಂದ ಕ್ಷತ್ರಿಯರು ಅಗ್ರವರ್ಣದವರೆಂದು ಹೇಳಿರುವುದುಂಟು.[೫] ಕನ್ನಡ ಶಾಸನಗಳಲ್ಲಿ ನಿರೂಪಿತವಾದಂತೆ 'ಕ್ಷತ್ರಿಯರು ತಮ್ಮನ್ನು ತಾವು ಕ್ಷತ್ರಿಯರು ಎಂದು ಕರೆದುಕೊಳ್ಳುವಲ್ಲಿ ಉತ್ಸಾಹವನ್ನು ತೋರಿಲ್ಲ'[೬].

ಸಾಮಾನ್ಯವಾಗಿ ಕ್ಷತ್ರಿಯರು 'ದುಷ್ಟ ಶಿಕ್ಷಕರಾಗಿಯೂ ಶಿಷ್ಟರಕ್ಷಕರಾಗಿಯೂ', 'ಶರಣಾಗತ ವಜ್ರಪಂಜರರಾಗಿಯೂ' ಕಾರ್ಯನಿರ್ವಹಿಸಿದ್ದಾರೆ. ಇವರು ಶಸ್ತ್ರಾಸ್ತ್ರ ವಿದ್ಯೆಯನ್ನು ಪ್ರಮುಖವಾಗಿ ಪಡೆದವರಾಗಿರುತ್ತಿದ್ದರು. ರಾಜ ಪದವಿಗಳನ್ನು ಬಿಟ್ಟರೆ ಉಳಿದಂತೆ ಇವರು ಸೈನ್ಯ ವಿಭಾಗದಲ್ಲಿ ವಿವಿಧ ಅಧಿಕಾರಗಳಲ್ಲಿ ಇರುತ್ತಿದ್ದರು. ಸೇವುಣ ಸಿಂಘಣನ ಸೇನಾಧಿಪತಿಗಳಲ್ಲಿ ವಂಕದೇವ, ಸಾವಂತ ಠಕ್ಕುರರು ಕ್ಷತ್ರಿಯರೆಂದು ತಿಳಿದುಬರುತ್ತದೆ.[೭]

**ವೈಶ್ಯರು:**

ಇವರ ಪ್ರಧಾನ ವೃತ್ತಿ ವ್ಯಾಪಾರ. ಶಾಸನಗಳಲ್ಲಿ ಇವರನ್ನು ಸೆಟ್ಟಿ, ಶ್ರೇಷ್ಠಿ, ನಕರ (ನಗರ) ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ವರ್ತಕರಲ್ಲಿಯೂ ಅನೇಕ ಪ್ರಕಾರಗಳಿದ್ದವು; ಮುಮ್ಮುರಿದಂಡ, ಗವರೆ, ಬಣಂಜಿಗ, ಸೆಟ್ಟಿ, ಸೆಟ್ಟಿಗುತ್ತ, ನಕರ, ಇತ್ಯಾದಿ. ಅವರು ಮಾಡುವ ವ್ಯವಹಾರದ ವಸ್ತುಗಳು, ಪ್ರಮಾಣ, ವಾಸಸ್ಥಳ, ವ್ಯವಹಾರ ರೀತಿ ಮುಂತಾದವುಗಳ ಕಾರಣ ಅವರಲ್ಲಿ ಬೇರೆ ಬೇರೆ ಒಳಪಂಗಡಗಳಿದ್ದುವೆಂದು ಕಾಣುತ್ತದೆ. ಬಿ.ಆರ್. ಹಿರೇಮಠ ಅವರು ವರ್ತಕರನ್ನು ವಿನಿಮಯ ವರ್ತಕರು (ಕೇವಲ ವ್ಯಾಪಾರವೇ ವೃತ್ತಿಯಾಗಿರುವ ಶುದ್ಧ ವರ್ತಕರು) ಮತ್ತು ಉತ್ಪಾದಕ-ವಿನಿಮಯ ವರ್ತಕರು

---

೧. ಎಸ್ಐಐ IX(i) ಹಡಗಲಿ ೩೭೧ ಕ್ರಿ.ಶ. ೧೨೫೮.

೨. ಎ.ವಿ. ನರಸಿಂಹಮೂರ್ತಿ : ಕರ್ನಾಟಕದ ಸೇವುಣರ ಇತಿಹಾಸ, ಪು. ೯೧.

೩. ಸಿ.ಯು. ಮಂಜುನಾಥ್ : 'ಹರಳಯ್ಯ-ಮಧುವಯ್ಯ' ಸಿದ್ಧಗಂಗಾಶ್ರೀ, ಪು. ೭೯೬-೮೦೪.

೪. ಎಸ್. ಶ್ರೀಕಂಠಶಾಸ್ತ್ರಿ : ಭಾರತೀಯ ಸಂಸ್ಕೃತಿ, ಪು. ೧೯೭.

೫. ಅದೇ, ಪು. ೧೯೬.

೬. ಎಂ.ಚಿದಾನಂದಮೂರ್ತಿ ಪೂರ್ವೋಕ್ತ, ಪು. ೪೩೨.

೭. ಎ.ವಿ. ನರಸಿಂಹಮೂರ್ತಿ : ಪೂರ್ವೋಕ್ತ, ಪು. ೮೫.

(ಗೃಹಕೈಗಾರಿಕೆಗಳ ಮೂಲಕ ತಾವೇ ಉತ್ಪಾದಿಸಿದ ವಸ್ತುಗಳನ್ನು ಮಾರಾಟ ಮಾಡುವ ವರ್ತಕರು) ಎಂದು ವಿಭಾಗ ಮಾಡಿಕೊಂಡು ಅಧ್ಯಯನ ಮಾಡಿದ್ದಾರೆ.[೧] ಪುರುಷಸೂಕ್ತದಲ್ಲಿ ಉಕ್ತವಾದಂತೆ ವೈಶ್ಯರು ಪಶುಪಾಲನೆ ಮತ್ತು ವ್ಯವಸಾಯವನ್ನು ಮಾಡುತ್ತಿದ್ದವರು. ಕ್ರಮೇಣ ಯಾವ ಹಂತದಲ್ಲಿ ಅವರು ವ್ಯಾಪಾರವನ್ನು ಪ್ರಧಾನ ಕಸುಬಾಗಿ ರೂಢಿಸಿಕೊಂಡರು ಎಂಬುದು ಸ್ಪಷ್ಟವಾಗಿಲ್ಲ. ನಮ್ಮ ಅಧ್ಯಯನಾವಧಿಯ ಹೊತ್ತಿಗೆ ವರ್ಣವ್ಯವಸ್ಥೆ ಬಹಳವಾಗಿ ಸಡಿಲಗೊಂಡು ವರ್ಣಕ್ಕೂ ವೃತ್ತಿಗೂ ಅಂತಹ ಸಂಬಂಧ ಉಳಿದು ಬಂದಿರಲಿಲ್ಲ.

ಅನೇಕ ಸೆಟ್ಟಿಯರು ರಾಜರಲ್ಲಿ ಮಂತ್ರಿ, ಸೇನಾಪತಿ, ಸಂಧಿವಿಗ್ರಹಿ ಮುಂತಾದ ನಾನಾ ಉದ್ಯೋಗಗಳಲ್ಲಿಯೂ ನಿಯುಕ್ತರಾಗಿದ್ದರು. ಯಾದವ ಸಿಂಘಣನ ಮಂತ್ರಿಯಾದ ಬೀಚಣ ವೃತ್ತಿಯಿಂದ 'ವಡ್ಡವ್ಯವಹಾರಿ'. ಆದರೆ ತನ್ನ ಮಂತ್ರಪ್ರೌಢಿ, ಭುಜಬಲ, 'ಉದ್ಯೋಗ' ತೇಜಸ್ಫೂರ್ತಿಗಳಿಂದ ರಾಜನ ಗಮನವನ್ನು ಸೆಳೆದು ಮಂತ್ರಿಯಾದನೆಂದು ಒಂದು ಶಾಸನ ತಿಳಿಸುತ್ತದೆ.[೨] ರತ್ನಪಡಿ ವ್ಯಾಪಾರಿಯಾಗಿದ್ದ ಕುಂಜನಂಬಿಸೆಟ್ಟಿ ಹೊಯ್ಸಳರಾಜರಿಗೆ ಸಂಧಿವಿಗ್ರಹಿಯಾಗಿ ಯಶಸ್ವಿಯಾಗಿ ಕಾರ್ಯವನ್ನು ನಿರ್ವಹಿಸಿರುವುದು ಕಂಡು ಬರುತ್ತದೆ. ನಾನಾ ರತ್ನಗಳನ್ನು ಪರೀಕ್ಷಿಸುವುದು ಅವನಿಗೆ ಕುಲಸಹಜವಾಗಿ ಬಂದಿರುವುದಾದರೂ ರಾಜರ ಚಿತ್ತವೃತ್ತಿಗಳನ್ನು ಅರಿಯುವ ಕೌಶಲ ಅವನಿಗೆ ಇದ್ದಿತೆಂದು ಶಾಸನ ತಿಳಿಸುತ್ತದೆ.[೩] ಇದೇ ರೀತಿ ಸಿಂಘಣರಾಜನಲ್ಲಿ ಹೊನ್ನಿಬೊಮ್ಮಿಸೆಟ್ಟಿ ಸರ್ವಾಧಿಕಾರಿ, ಮಂತ್ರಿಶಿಖಾಮಣಿಯಾಗಿದ್ದಂತೆ ತಿಳಿದುಬರುತ್ತದೆ.[೪]

ವರ್ತಕರ ಕುಲೋತ್ಪತ್ತಿಯನ್ನು ನಿರೂಪಿಸುವ ಉದ್ದೇಶವನ್ನು ಉಳ್ಳ ಅಪರೂಪದ ಶಾಸನವೊಂದು ಇತ್ತೀಚೆಗೆ ಪ್ರಕಟವಾಗಿದೆ.[೫] ಶಿವಪಾರ್ವತಿಯರ ವಿವಾಹದ ವರ್ಣನೆಯನಂತರದ ಭಾಗ ಒಡೆದು ಹೋಗಿರುವುದರಿಂದ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಶಾಸನದ ಆರಂಭದ ಭಾಗದಲ್ಲಿ 'ನಮ್ಮದೊಂದು ಕುಲ ಹುಟ್ಟಿದ ವಿವಾಹ ಪುರಾಣಮನವಧಾರಿಸಿ ಸ್ವಾಮಿಗಳ' ಎಂದು ಹೇಳಲಾಗಿದೆ. ಸ್ವಯಂಭು ಸೆಟ್ಟಿ, ಪಸುಂಬೆ ಸೆಟ್ಟಿ, ಪಟ್ಟಣಾಧಿಪಸ್ವಾಮಿ (ಪಟ್ಟಣಸೆಟ್ಟಿ) ಮುಂತಾದವರು ನಿಮಿತ್ತವಾಗಿ ಹುಟ್ಟಿದವರೆಂಬ ಸೂಚನೆ ಇದೆ. ಆದ್ದರಿಂದ ಇವರ ಮೂಲಪುರುಷರು ಶಿವಪಾರ್ವತಿಯರ ಸಂತತಿ ಎಂಬ ಸೂಚನೆ ಇದ್ದಂತಿದೆ. ವರ್ತಕರ ಕುಲೋತ್ಪತ್ತಿಯನ್ನು ಹೇಳಹೊರಟ ಶಾಸನದ ಉತ್ತರಾರ್ಧ ಒಡೆದುಹೋಗಿರುವುದು ಬಹುದೊಡ್ಡ ನಷ್ಟವಾಗಿದೆ. ಕೆಲವು ಶಾಸನಗಳಲ್ಲಿ ವರ್ತಕರನ್ನು 'ಭಗವತೀಲಬ್ಧವರಪ್ರಸಾದ' ರೆಂದು ಕರೆದಿದೆ. ಇಲ್ಲಿ ಭಗವತಿಯೆಂದರೆ ಗೌರಿ ಅಥವಾ ಪಾರ್ವತಿ ಆಗಬಹುದು. ಅವರು 'ವಾಸುದೇವ ಖಂ(ಕಂ)ಡಳಿ, ಮೂಲಭದ್ರ ವಂಶೋದ್ಭವ'ರೆಂದೂ ಶಾಸನಗಳು ಅವರನ್ನು ವರ್ಣಿಸಿವೆ. ವಾಸುದೇವ ಖಂ(ಕಂ)ಡಳಿ, ಮೂಲಭದ್ರರು ವರ್ತಕರ ಮೂಲಪುರುಷರಾಗಿದ್ದರೆಂದು ಇಲ್ಲಿ ಧ್ವನಿತವಾಗುವುದರಿಂದ ಶಿವಗೌರಿಯರ ವಿವಾಹದ ವರ್ಣನೆಯಿರುವ ಮೇಲಿನ ಶಾಸನದ ಉತ್ತರಾರ್ಧದ ಹಾಳಾಗಿರುವ ಭಾಗದಲ್ಲಿ ಅವರ ಹುಟ್ಟಿನ ವಿಷಯಕವಾದ ಕತೆ ಇದ್ದಿರಲು ಸಾಧ್ಯ[೬] ಎಂದು ಆ ಶಾಸನದ ಬಗ್ಗೆ ಬರೆಯುತ್ತಾ ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯಪಡುತ್ತಾರೆ.

---

೧. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೭೧.

೨. ಎಸ್‌ಐಐ XVIII ಹಾವೇರಿ ೨೨೭ ಕ್ರಿ.ಶ. ೧೩ ಶಮಾ.

೩. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.

೪. ಕಇ VI ಹಿರೇಕೆರೂರು ೪೩ ಕ್ರಿ.ಶ. ೧೨೩೮.

೫. ಐಎಸ್‌ಡಿ ಸೊಲ್ಲಾಪುರ ೪೦ ಕ್ರಿ.ಶ. ಸು. ೧೨೦೦.

೬. ಎಂ. ಚಿದಾನಂದಮೂರ್ತಿ : 'ಕನ್ನಡದ ಮೊತ್ತ ಮೊದಲ 'ಷಟ್ಪದ' ಕಾವ್ಯ', ಸಾಧನೆ : ೧೮:೧-೨, ಪು. ೧೦.

**ಶೂದ್ರರು :**

ಇವರನ್ನು ಚತುರ್ಥ ವರ್ಣದವರೆಂದು ಗುರುತಿಸಲಾಗಿದೆ. ಇವರಿಗೆ ಮೊದಲ ಮೂರು ವರ್ಣದವರಂತೆ ಉಪನಯನ, ವೇದಾಧ್ಯಯನಕ್ಕೆ ಅವಕಾಶವಿಲ್ಲ. ಆಂತರಿಕ ಬಾಹ್ಯ ಹೋರಾಟಗಳಿಂದ ಬಹು ಸಂಖ್ಯೆಯ ಜನರು ಶೂದ್ರರಾದರು. ಈ ಹೋರಾಟ ಪಶುಗಳಿಗಾಗಿ, ಅನಂತರ ಭೂಮಿಯ ಒಡೆತನಕ್ಕಾಗಿ ನಡೆದು ಯಾರು ಈ ಹೋರಾಟದಲ್ಲಿ ಸೋತರೋ ಅವರನ್ನೇ ಮುಂದೆ ನಾಲ್ಕನೆಯ ವರ್ಣದವರೆಂದು ಕರೆಯಲಾಯಿತೆಂದು ಆರ್.ಎಸ್. ಶರ್ಮ[೧] ಅವರು ಭಾವಿಸುತ್ತಾರೆ. ಧರ್ಮಶಾಸ್ತ್ರಗಳು ಈ ಶೂದ್ರರನ್ನು ಸಚ್ಛೂದ್ರ, ಅಸಚ್ಛೂದ್ರರೆಂದು ವಿಭಾಗಿಸಿರುವುದುಂಟು.[೨] ಆದರೆ ಅವುಗಳ ಭೇದಕಲ್ಪನೆಯ ಅರ್ಥವಂತಿಕೆ ಸ್ಪಷ್ಟವಾಗುವುದಿಲ್ಲ. ವೇದೋತ್ತರ ಯುಗದಲ್ಲಿ ಪ್ರತಿ ವರ್ಣದಲ್ಲಿಯೂ ಅನೇಕ ಗುಂಪುಗಳು ಕಾಣಿಸಿಕೊಂಡವು. ಪತಂಜಲಿಯು 'ಅಭೀರ'ರು ಶೂದ್ರರಿಂದ ಭಿನ್ನವಾದ ಜಾತಿಯೆಂದು ಹೇಳುವುದನ್ನು ನೋಡಿದರೆ ಅಭೀರರಂತೆಯೇ ಶೂದ್ರರೂ ಒಂದು ಜಾತಿಯೆನ್ನಿಸಿಕೊಳ್ಳುತ್ತಿದ್ದರು ಎಂಬುದು ಸ್ಪಷ್ಟ. ವರ್ಣವಾಗಿದ್ದ ಶೂದ್ರವು ಜಾತಿಯಾಗಿತ್ತು ಮತ್ತು ವರ್ಣಜಾತಿಗಳು ಸಮಾನಾರ್ಥಕವಾಗಿದ್ದವು. ವರ್ಣ ಅಥವಾ ಜಾತಿಗಳಲ್ಲಿ ಮೇಲು ಕೀಳುಗಳ ಸ್ಪಷ್ಟ ಅನುಶ್ರೇಣಿ ನಿರ್ಮಾಣವಾಯ್ತು[೩] ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.

ಸಾಮಾಜಿಕವಾಗಿ ಕೆಳಸ್ತರದಲ್ಲಿದ್ದ ಶೂದ್ರ ಉಳಿದ ವರ್ಣಗಳಿಗೆ ದೊರೆಯುತ್ತಿದ್ದ ಅನೇಕ ಸೌಲಭ್ಯಗಳಿಂದ ವಂಚಿತನಾಗಿದ್ದ. ಹನ್ನೆರಡನೆಯ ಶತಮಾನದ ಹೊತ್ತಿಗೆ ವರ್ಣಗಳಿಗಿಂತಲೂ ಜಾತಿ ವ್ಯವಸ್ಥೆ ಬಹಳ ಬಲವಾಗಿ ಬೇರುಬಿಟ್ಟಿದ್ದುದು ಕಂಡುಬರುತ್ತದೆ. ಆದರೂ ಚತುರ್ಥವಂಶ, ಶೂದ್ರ ಎಂಬಂತಹ ಮಾತುಗಳು ಅಲ್ಲಲ್ಲಿ ಶಾಸನಗಳಲ್ಲಿ ಕಂಡುಬರುತ್ತವೆ.

ಸಿದ್ದಾಪುರದ ಒಂದು ಶಾಸನ ಬಮ್ಮನೆಂಬ ಮಂತ್ರಿಯ ವಂಶವನ್ನು ಹೇಳುತ್ತಾ 'ಚತುರ್ಥ ವಂಶಮಣಿದೀಪಂ ಮಲ್ಲಿಗೌಡಂಗವಾತನ ಚೇತ ಪ್ರಿಯೆ ಹಂಪಮಾಂಬಿಕೆಗಮತ್ಯಾನಂದದಿಂ ಪುಟ್ಟಿದಂ ವಿನಯಾಂಬೋನಿಧಿ ಸದುಗುಣಾಭರಣ ನಜ್ಜಂ'[೪] ಎಂದು ಹೇಳುತ್ತದೆ. ಬಹುಶಃ 'ಚತುರ್ಥವಂಶ' (ಚತುರ್ಥ) ಎಂಬ ಮಾತು ಶೂದ್ರರನ್ನು ಸೂಚಿಸುತ್ತದೆ. ಕೆಲವು ಶಾಸನಗಳು ದೇವಾಲಯದ ವಿವಿಧ ಸಿಬ್ಬಂದಿಯನ್ನು ಹೇಳುವಾಗ ಶೂದ್ರ ಪರಿವಾರ[೫] ವನ್ನು ಹೇಳುತ್ತದೆ. ಇದು ಬಹುಶಃ ದೇವಾಲಯದ ಹೊರ ಆವರಣದ ಸೇವೆಗಾಗಿ ನೇಮಿಸಿಕೊಂಡ ಪರಿವಾರದಂತೆ ಕಂಡುಬರುತ್ತದೆ. ಒಂದು ಶಾಸನ 'ಶೂದ್ರರುಂ ಕಾರುಕರುಂ ಬಿಟ್ಟಿಬೆಸನಂ ಮಾಡುವರು'[೬] ಎಂದು ಹೇಳುತ್ತದೆ. ಈ ಶಾಸನದಲ್ಲಿ ಬರುವ 'ಕಾರುಕರು' ಕೈಕೆಲಸದವರನ್ನು ಸೂಚಿಸುತ್ತದೆ. ಇವರಿಗೆ ಮತ್ತು ಶೂದ್ರರಿಗೆ ಒತ್ತಾಯದ ದುಡಿಮೆಯನ್ನು ಹೇರಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಬಿಟ್ಟಿಯಿಂದ ವಿನಾಯಿತಿ ಪಡೆಯಲು ಬಹಳಜನ ಪ್ರಯತ್ನಿಸುತ್ತಿದ್ದರು.[೭] ಕರ್ನಾಟಕದಲ್ಲಿ ಆ ಕಾಲದ ಹೊತ್ತಿಗೆ ಬೇರೆ ಬೇರೆ ಜಾತಿಗಳು ವ್ಯಾಪಕವಾಗಿ ಪ್ರಚಾರದಲ್ಲಿದ್ದುದು ತಿಳಿದು ಬರುವುದಾದರೂ 'ಶೂದ್ರ' ಸಾಮಾಜಿಕವಾಗಿ ಮೊದಲ ಮೂರು ವರ್ಣಗಳಿಂದ ಕೆಳಗಿನ ಮತ್ತು ಅಸ್ಪೃಶ್ಯರಲ್ಲದ ಅನೇಕ ಜಾತಿಗಳನ್ನು ಒಳಗೊಳ್ಳುವಂತೆ ಕಂಡುಬರುತ್ತದೆ.

---

೧. R. S. Sharma : ಪೂರ್ವೋಕ್ತ, ಪು. ೪೦-೪೧.

೨. ಎಸ್. ಶ್ರೀಕಂಠ ಶಾಸ್ತ್ರಿ : ಪೂರ್ವೋಕ್ತ, ಪು. ೨೦೦.

೩. ಎಂ. ಚಿದಾನಂದಮೂರ್ತಿ : ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಪು. ೮.

೪. (ರೈ) ಎಕ XI ಮೊಳಕಾಲ್ಮೂರು ೨೦ ಕ್ರಿ.ಶ. ೧೨೭೮(?)

೫. (ಮೈ) ಎಕ III ಗುಂಡ್ಲುಪೇಟೆ ೧೨ ಕ್ರಿ.ಶ. ೧೩೭೨.

೬. ಎಸ್‌ಐಐ XV ಗದಗು ೧೫೫ ಕ್ರಿ.ಶ. ೧೨೧೩.

೭. ಬಿಟ್ಟಿ ಎನ್ನುವುದು ಒತ್ತಾಯದ- ಪ್ರತಿಫಲವಿಲ್ಲದ ದುಡಿಮೆಯಾಗಿದ್ದು, ಇದರ ಬಗ್ಗೆ ಮುಂದೆ ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

**ಹದಿನೆಂಟು ಜಾತಿಗಳು:**

ಕರ್ನಾಟಕ ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ಹದಿನೆಂಟು ಜಾತಿಗಳ ವಿಪುಲ ಉಲ್ಲೇಖಗಳನ್ನು ಗಮನಿಸಿದರೆ ಆ ಕಾಲದಲ್ಲಿ ಹದಿನೆಂಟು ಜಾತಿಗಳನ್ನು ಸಾಮಾಜಿಕವಾಗಿ ಒಪ್ಪಿಕೊಂಡಿದ್ದರೆಂದು ಭಾವಿಸಬೇಕಾಗುತ್ತದೆ. 'ಈ ಹದಿನೆಂಟು ಜಾತಿ ಆರ್ಯರ ಚಾತುರ್ವರ್ಣ್ಯಕ್ಕಿಂತಲೂ ಪ್ರತ್ಯೇಕವಾದ ವ್ಯವಸ್ಥೆಯಾಗಿರಬೇಕು. ಬಹುಶಃ ನಾಗರಿಕ ಜೀವನ ಆರಂಭ ಆದಾಗ ಇದ್ದ ಮುಖ್ಯ ಉದ್ಯೋಗಗಳನ್ನು ಗಮನಿಸಿ ಸಮಾಜವನ್ನು ಹದಿನೆಂಟು ಜಾತಿಗಳಾಗಿ ವಿಭಜಿಸಿದ್ದಿರಬೇಕು.[೧] ಹದಿನೆಂಟು ಜಾತಿಗಳೆಂದು ಸಾಂಪ್ರದಾಯಿಕವಾಗಿ ಹೇಳಿದ್ದರೂ ಕೆಲವು ಹೆಚ್ಚಿನ ಜಾತಿಗಳೂ ಉಪಜಾತಿಗಳೂ ಇದ್ದುದು ಅಸಂಭವವಲ್ಲ. ಶಾಸನಗಳಲ್ಲಿ ಹದಿನೆಂಟು ಜಾತಿಗಳನ್ನು ಹದಿನೆಂಟು ಸಮಯಗಳೆಂದು ಕರೆದಿದೆ. ಶಾಪಾಶಯದ ಭಾಗದಲ್ಲಿ ಒಂದು ಶಾಸನ 'ಹದಿನೆಂಟು ಸಮಯಕ್ಕೆ ಹೊಱಗು'[೨] ಎಂದು ಹೇಳುತ್ತದೆ. ಹದಿನೆಂಟು ಸಮಯಗಳ ಉಲ್ಲೇಖ ಇನ್ನೂ ಕೆಲವು ಶಾಸನಗಳಲ್ಲಿ ಕಂಡು ಬರುತ್ತದೆ.'[೩] ಕೆಲವು ದಾನಗಳನ್ನು ನೀಡುವಾಗ ಬೇರೆಯವರೊಂದಿಗೆ ಸೇರಿ ಹದಿನೆಂಟು ಸಮಯವೆಂದು ಸಮಷ್ಟಿಯಾಗಿ ಭಾಗಿಗಳಾಗಿರುವುದೂ ಉಂಟು.[೪]

ಹದಿನೆಂಟು ಜಾತಿಗಳನ್ನು ಹೇಳುವುದರಲ್ಲಿ ಲಕ್ಷ್ಮೇಶ್ವರದ ಕ್ರಿ.ಶ. ೭೨೫ರ ಶಾಸನವೇ[೫] ಬಹುಶಃ ಮೊಟ್ಟಮೊದಲನೆಯದು. ಇದರಲ್ಲಿ ಬ್ರಾಹ್ಮಣ ವರ್ತಕರು ಸೇರಿಲ್ಲ. ಇಲ್ಲಿ ಜಾತಿ ಎನ್ನುವ ಮಾತಿಗೆ ಬದಲಾಗಿ ಪ್ರಕೃತಿ ಎಂಬ ಮಾತನ್ನು ಬಳಸಲಾಗಿದೆ. ಪಂಪನಿಂದಲೂ ಬ್ರಾಹ್ಮಣ ಜಾತಿ ಶ್ರೇಷ್ಠವೆಂಬ ಅಭಿಪ್ರಾಯ ವ್ಯಕ್ತವಾಗಿದೆ. ಬಸವಣ್ಣನವರ 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ'[೬] ಎಂಬ ಮಾತಿನಲ್ಲಿ ಬ್ರಾಹ್ಮಣ ಶ್ರೇಷ್ಠತ್ವದ ಒಂದು ಕೊನೆಯಾದರೆ ಅಂತ್ಯಜ (ಹೊಲೆಯ) ಕನಿಷ್ಠತ್ವದ ಒಂದು ಕೊನೆಯಾಗಿ ಸಾಮಾಜಿಕವಾಗಿ ಆ ಕಾಲದಲ್ಲಿ ಪರಿಗಣಿತವಾಗಿದ್ದುದು ಸೂಚಿತವಾಗಿದೆ.

ಸೊಡ್ಡಳ ಬಾಚರಸನು ಕೊಡುವ ಹದಿನೆಂಟು ಜಾತಿಗಳ ಪಟ್ಟಿ ಈ ರೀತಿ ಇದೆ. ಬ್ರಾಹ್ಮಣ, ಕ್ಷತ್ರಿಯ, ಬಣಜಿಗ, ಒಕ್ಕಲಿಗ, ಗೊಲ್ಲ , ಕುಂಬಾರ, ಪಂಚಾಳ, ಉಪ್ಪಾರ, ನಾಯಿಂದ, ಡೊಂಬ, ಅಗಸ, ಜೇಡ, ಕಬ್ಬಿಲ, ಹೊಲೆಯ, ಈಳಿಗ, ಸಮಗಾರ, ಮಚ್ಚಿಗ, ಶುದ್ಧಮಾದಿಗ.[೭] ಅಂಬಿಗರ ಚೌಡಯ್ಯನು ಹದಿನೆಂಟು ಕುಲಜಾತಿ ಎಂದು ಹದಿನೇಳನ್ನು ಹೇಳಿದ್ದಾನೆ. ಅದಕ್ಕೆ ಬ್ರಾಹ್ಮಣನನ್ನು ಸೇರಿಸಿದರೆ ಹದಿನೆಂಟಾಗುತ್ತದೆ. ಪಿ.ವಿ. ನಾರಾಯಣ ಅವರು ಅಭಿಪ್ರಾಯ ಪಡುವಂತೆ 'ಮುಂದೆ ಕಾಲದಿಂದ ಕಾಲಕ್ಕೆ ಹದಿನೆಂಟು ಜಾತಿಗಳ ಪಟ್ಟಿಗೆ ಸೇರುವ ಜಾತಿಗಳಲ್ಲಿ ಹಲವು ವ್ಯತ್ಯಾಸಗಳಾಗಿರುವುದನ್ನು ಕಾಣಬಹುದಾಗಿದೆ.'[೮]

ಕೆಳಹಂತದವೆಂದು ಪರಿಗಣಿತವಾದ ಅನೇಕ ಜಾತಿ ಮತ್ತು ವೃತ್ತಿಗಳು ಒಂದೇ ಎಂಬಂತೆ ಭಾವಿಸಲ್ಪಟ್ಟಿವೆ. ಶಾಸನಗಳಲ್ಲಿ ಕಂಡುಬರುವ ಅಂಥ ಕೆಲವು ವೃತ್ತಿಗಳು ಹೀಗಿವೆ-ಕಂಚುಗಾರರು,[೯] ಅಕ್ಕಸಾಲೆ,[೧೦]

---

೧. ಸೂರ್ಯನಾಥ ಕಾಮತ್ : 'ಹದಿನೆಂಟು ಜಾತಿ', ಆಸ್ವಾದ, ಪು. ೪೩೧.

೨. ಎಸ್‌ಐಐ IX(i) ಹರಪನಹಳ್ಳಿ ೩೭೮ ಕ್ರಿ.ಶ. ೧೨೭೯.

೩. ಎಸ್‌ಐಐ XVIII ಹಾವೇರಿ ೨೫೭ ಕ್ರಿ.ಶ. ೧೨೮೦.

೪. (ರೈ) ಎಕ XI ಹೊಳಲಕೆರೆ ೧೩೭ ಕ್ರಿ.ಶ. ೧೩೦೭.

೫. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೩.

೬. ಬವ. ೭೧೦.

೭. ಸ.ಪುವ ೨ ಪು. ೬೮೧.

೮. ವಚನಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೬೮.

೯. ಎಇ XII ಶೋರಾಪುರ ೩೭ಡಿ ಕ್ರಿ.ಶ. ೧೧೧೦. ಇವರು ಪಾತ್ರೆ, ತಳಿಗೆ, ಕನ್ನಡಿ ಮುಂತಾದುವನ್ನು ತಯಾರಿಸುವವರು.

೧೦. (ಮೈ) ಎಕ V ತಿ. ನರಸೀಪುರ ೮೮ ಕ್ರಿ.ಶ. ೧೨೭೬.

ಕಮ್ಮಾರ,[೧] ಬಡಗಿ,[೨] ಕುಂಬಾರ,[೩] ಬಳೆಗಾರ,[೪] ಮೇದರ,[೫] ದೀವರ,[೬] ಕುರುಬ,[೭] ತೆಲ್ಲಿಗ,[೮] ಸಾಪಿದ್[೯] ಇನ್ನೂ ಮುಂತಾದ ವೃತ್ತಿಕಾರರ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತವೆ. ಹಲವಾರು ವೃತ್ತಿಗಳನ್ನು ಅನುಸರಿಸುತ್ತಿದ್ದ ವಿವಿಧ ವೃತ್ತಿಕಾರರನ್ನು ಕುರಿತು ಪಿ.ವಿ. ನಾರಾಯಣ ಅವರು ಚರ್ಚಿಸಿದ್ದಾರೆ.[೧೦]

ವಚನಕಾರರ ಕಾಯಕತತ್ವ ನೂರಾರು ವೃತ್ತಿಕಾರರಿಗೆ ವೃತ್ತಿ ಗೌರವವನ್ನು ತಂದುಕೊಟ್ಟಿತು. ಶರಣರ ದೃಷ್ಟಿಯಲ್ಲಿ 'ವ್ಯಕ್ತಿಯ ಶ್ರೇಷ್ಠತೆ ಅಥವಾ ಹೀನತೆ ನಿರ್ಧಾರವಾಗುವುದು ಆಯಾ ವೃತ್ತಿಗಳ ಬಗ್ಗೆ ಸಮಾಜವು ಬೆಳಸಿಕೊಂಡು ಬಂದ ಕೃತಕವಾದ ಉಚ್ಚ ನೀಚವೆಂಬ ಅರ್ಥಹೀನ ಭಾವನೆಗಳ ಮೇಲಲ್ಲ. ಸತ್ಯ ಹಾಗೂ ಶುದ್ಧ ಎಂಬ ನೈತಿಕ ಮತ್ತು ಮೌಲ್ಯಗಳ ಮೇಲೆ. ಸತ್ಯ ಶುದ್ಧವಾದ ಯಾವ ಉದ್ಯೋಗವೂ ಕಾಯಕವಾಗಬಲ್ಲದು... ಆದುದರಿಂದ ವೃತ್ತಿಗಳ ವಿಭಿನ್ನತೆಯಿಂದ ಜಾತಿಯ ತಾರತಮ್ಯವನ್ನೆಣಿಸುವುದನ್ನವರು ಬಲವಾಗಿ ವಿರೋಧಿಸಿದರು.'[೧೧]

**ಅಂತ್ಯಜ:**

ಶೂದ್ರರಿಗಿಂತಲೂ ಸಮಾಜದಲ್ಲಿ ಕೆಳವರ್ಗದವರೆಂದು ಪರಿಗಣಿಸಲ್ಪಟ್ಟ ಇವರನ್ನು ಕುರಿತು ಶಾಸನಗಳಲ್ಲಿ ಉಲ್ಲೇಖಗಳು ಅತ್ಯಂತ ಕಡಿಮೆಯೆಂದೇ ಹೇಳಬಹುದು. 'ಶಾಸನಗಳಲ್ಲಿ ಅವರ ಉಲ್ಲೇಖಗಳ ಅಭಾವವೇ ಅವರ ಸಾಮಾಜಿಕ ಸ್ಥಾನಮಾನದ ಬಗ್ಗೆ ಬಹಳವನ್ನು ತಿಳಿಸುತ್ತದೆ.'[೧೨] ಎಂಬ ಎಂ. ಚಿದಾನಂದ ಮೂರ್ತಿಯವರ ಅಭಿಪ್ರಾಯ ಸತ್ಯವಾದುದು. ಒಂದೇ ಒಂದು ಶಾಸನದಲ್ಲಿ ಹೊಲೆಯನೊಬ್ಬ ದಾನಕೊಟ್ಟ ಸಂಗತಿ ಇದೆ. ಮಾದಿಗ ಜಾತಿಯ ಒಬ್ಬ ವ್ಯಕ್ತಿ-ಶ್ರೀಮಂತ ಮತ್ತು ಪುಲವಳ್ಳಿಯ (=ಹೊಲೆಯರ ಹಳ್ಳಿ) ಗೌಡ ಅರಿವರ್ಮನ ತಮ್ಮ ನಾಣೆಯ ಎಂಬಾತ ಹಲವು ಗೋವುಗಳನ್ನು ಕೊಟ್ಟಾಗ ("ಗೋಸಾಸವಿಟ್ಟು") ಅವನ್ನು ತೆಗೆದುಕೊಂಡ ತಾಳಗುಂದದ ಬ್ರಾಹ್ಮಣರು ಅವನನ್ನು ಹರಸಿದ ವಿಷಯ ಬಂದಿದೆ.[೧೩] ತುಂಬ ವಿರಳವಾಗಿ, ಯುದ್ಧಗಳಲ್ಲಿ ಹೋರಾಡಿ ಮಡಿದ ಹೊಲೆಯ ವೀರರ ಉಲ್ಲೇಖಗಳು ಬಂದಿರುವುದುಂಟು.

ನಮ್ಮ ಅಧ್ಯಯನಾವಧಿಯಲ್ಲಿ ಬರುವ ಅಸ್ಪೃಶ್ಯರ ಕೆಲವು ಉಲ್ಲೇಖಗಳನ್ನು ಗಮನಿಸಬಹುದು. ಮಿಣಜಗಿಯ ಒಂದು ಶಾಸನದಲ್ಲಿ ತ್ರೈಕೂಟ (ಮಾಚೇಶ್ವರ, ಮಲ್ಲಿಕಾರ್ಜುನ, ಮಾಧವ) ದೇವಾಲಯವನ್ನು ಮಣ್ಣೆಗೆರೆಯ ಮಹಾಪ್ರಭು ಕಟ್ಟಿಸಲು

---

೧. ಎಸ್‌ಐಐ XVIII ಹಾವೇರಿ ೨೩೯ ಕ್ರಿ.ಶ. ೧೨೫೮.

೨. (ರೈ) ಎಕ IX ಮಾಗಡಿ ೧೫ ಕ್ರಿ.ಶ. ೧೩೧೫.

೩. ಎಸ್‌ಐಐ XVIII ರಾಣೆಬೆನ್ನೂರು ೨೦೫ ಕ್ರಿ.ಶ. ೧೨೨೬.

೪. (ಮೈ) ಎಕ VII ಮಳವಳ್ಳಿ ೧೩೬ ಕ್ರಿ.ಶ. ೧೨೯೭.

೫. (ರೈ) ಎಕ V ಬೇಲೂರು ೫೦ ಕ್ರಿ.ಶ. ೧೨೨೭.

೬. ಕಇ V ಹಾನಗಲ್ಲು ೬೧ ಕ್ರಿ.ಶ. ೧೩೫೮ (ದೀವರರು-ಮೀನು ಹಿಡಿಯುವ ವೃತ್ತಿಯವರು)

೭. ಎಸ್‌ಐಐ XVIII ರಾಣೆಬೆನ್ನೂರು ೨೬೯ ಕ್ರಿ.ಶ. ೧೨೯೭.

೮. (ರೈ) ಎಕ V ಅರಸಿಕೆರೆ ೧೩೭ ಕ್ರಿ.ಶ. ೧೨೧೧(?)

೯. (ರೈ) ಎಕ VI ಮೂಡಗೆರೆ ೪ ಕ್ರಿ.ಶ. ೧೧೯೪.

೧೦. ವಚನ ವ್ಯಾಸಂಗ, ಪು. ೧೨೮-೧೪೦.

೧೧. ಬಿ.ಬಿ. ಹೆಂಡಿ : 'ಕಾಯಕ ಸಿದ್ಧಾಂತ' ಶಿವಶರಣರ ಕಾಯಕ ಸಿದ್ಧಾಂತ, ಪು. ೭.

೧೨. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೩೫.

೧೩. ಅದೇ, ಪು. ೩೪.

ಅನೇಕರು ದಾನವನ್ನು ಕೊಟ್ಟ ವಿಷಯ ಬರುತ್ತದೆ. ಅನಂತರದ ಭಾಗದಲ್ಲಿ 'ಮತ್ತಂ ಕುಱುಬಗಾವುಂಡುಗಳುಂ ಬೇಡರುಂ ಹುಲಿಯ(ಜ)ಂಗಳಿಯನಾಮಿಕರು ಮಾದೆಗರು ಸಹಿತ ಜಾತಿವರ್ಗ್ಗದಲು ಹೊಸತಿಲಲು ಬಿಟ್ಟ ಹಾಗವೊಂದು ಹೊಂಗೆ ಪತ್ತಡಕೆ ಹೇರಿಂಗಯ್ವತ್ತೆಲೆ...'[೧] ಎಂದು ಬರುತ್ತದೆ. ಈ ಶಾಸನಭಾಗದಲ್ಲಿ ಉಲ್ಲೇಖಗೊಂಡಿರುವ ಕುರುಬಗಾವುಂಡುಗಳು, ಬೇಡರು, ಹುಲಿಯಜಂಗುಳಿಯ ಅನಾಮಿಕರು (ಹೊಲೆಯಜಂಗುಳಿಯ ಅನಾಮಿಕರು ಎಂದಿರಬಹುದು, ಹೊಲೆಯಜಂಗುಳಿ = ಹೊಲೆಯರ ಗುಂಪು; ಅನಾಮಿಕರು-ಹೆಸರಿಲ್ಲದವರು ಅಥವಾ ಹೆಸರು ಹೇಳಲು ಯೋಗ್ಯರಲ್ಲದವರು ಎಂದಿರಬೇಕು; ಅದು ಅಸ್ಪೃಶ್ಯರನ್ನು ಸೂಚಿಸುವುದು). ಮಾದೆಗರು ಆ ದೇವಾಲಯಕ್ಕೆ 'ಹೊಸ್ತಿಲಹಣ'ವನ್ನು ಬಿಟ್ಟುಕೊಟ್ಟಿದ್ದಾರೆ. (ಹೊಸ್ತಿಲಹಣ ಬಹುಶಃ ಮನೆದೆರೆ, ಮನೆವಣಗಳಂತೆ ಮನೆಯ ಮೇಲೆ ಹಾಕುತ್ತಿದ್ದ ತೆರಿಗೆಯಾಗಿದೆ) ಕಡ್ಲೆವಾಡದ ಒಂದು ಶಾಸನದಲ್ಲಿ ಸ್ವಯಂಭು ಸೋಮನಾಥದೇವರ ಅಂಗಭೋಗಕ್ಕೆ ಮೂವತ್ತಾರು ಬೀಡ ಮುಮ್ಮುರಿದಂಡಗಳು ಮಹಾನಾಡಾಗಿ ಸೇರಿ ನಿರ್ಣಯಿಸಿದಂತೆ ವಿವಿಧ ವ್ಯಾಪಾರಿಗಳು ವಿವಿಧ ದಾನಗಳನ್ನು ಮಾಡಿದ್ದನ್ನು ಹೇಳಿದನಂತರ 'ಬಡಗಿ ಕಮ್ಮಾಱ ಅಕ್ಕಸಾಲೆ ಅಗಸ ಸಮ್ಮಗಾಱಿದೆಡಹೊಲೆಯರ ಕೂಡೆವೊಳಗಾಗಿ ಪುರದ ಬೀರವಣಮಂ ಬಿಟ್ಟರು'[೨] ಎಂದು ಬರುತ್ತದೆ. ವಿವಿಧ ವೃತ್ತಿಯವರೊಂದಿಗೆ ಸೇರಿ ಬೀರವಣವನ್ನು ಬಿಟ್ಟವರಲ್ಲಿ ಸಮ್ಮಗಾಱ (=ಚರ್ಮಕಾರ) ಮತ್ತು ಎಡಹೊಲೆಯ ಉಲ್ಲೇಖಗೊಂಡಿರುವುದು ಗಮನಾರ್ಹವಾಗಿದೆ.

ಕೆಲವು ಶಾಸನಗಳಲ್ಲಿ 'ಹೊಲೆಯರ ಬಾಲಪಣ'[೩] ಎಂಬ ತೆರಿಗೆಯ ಉಲ್ಲೇಖ ಬರುತ್ತದೆ. ಬಾಲಪಣ ಎನ್ನುವುದು ದನಗಳ ಮೇಲೆ ಹಾಕುತ್ತಿದ್ದ ತೆರಿಗೆಯಾಗಿದೆ. 'ಹೊಲೆಯರ ಬಾಲಪಣ' ಹೊಲೆಯರು ಸಾಕುತ್ತಿದ್ದ ದನಗಳ ಮೇಲೆ ಹಾಕುತ್ತಿದ್ದ ತೆರಿಗೆಯಾಗಿರಬಹುದು. ಶಾಸನಗಳಲ್ಲಿ ಬರುವ ಹೊಲೆಮಗ್ಗ,[೪] ಹೊಲೆದೆಱೆ[೫]ಗಳ ಅರ್ಥ ಸಂದಿಗ್ಧವಾಗಿದೆ.

ಹೊಲೆಯರು ಊರಿನ ಹೊರವಲಯದಲ್ಲಿ ವಾಸಿಸುತ್ತಿದ್ದುದು ಶಾಸನ, ಕಾವ್ಯಗಳಿಂದ ಸ್ಪಷ್ಟವಿದೆ. ಅವರು ವಾಸಿಸುತ್ತಿದ್ದ ಕೇರಿಗಳು ಹೊಲೆಗೇರಿಗಳು.[೬] ದಾನದ ಮೇರೆಗಳನ್ನು ಹೇಳುವಾಗ ಅವುಗಳ ಉಲ್ಲೇಖ ಕಂಡುಬರುತ್ತದೆ.[೭] ಅವರಿಗೆಂದೇ ಪ್ರತ್ಯೇಕವಾದ ಬಾವಿಗಳು ಇರುತ್ತಿದ್ದವು. ಒಂದು ಶಾಸನ 'ಹೊಲೆಯ ಬಾವಿಯಲ್ಲಿ' ಎಂದು ಉಲ್ಲೇಖಿಸುತ್ತದೆ.[೮] ಹೊಲೆಯರ ಬಾವಿಯೆಂದು ಸೂಚಿಸುವುದಕ್ಕಾಗಿ ಬಾವಿಯ ಮೇಲೆ ಮೂಳೆಯ ತುಂಡೊಂದನ್ನು ಕಟ್ಟಿರುತ್ತಿದ್ದ ಪದ್ಧತಿಯಿತ್ತೆಂದು ತೋರುತ್ತದೆ.[೯]

---

೧. ಎಸ್‌ಐಐ XV ಮುದ್ದೇಬಿಹಾಳ ೫೮ ಕ್ರಿ.ಶ. ೧೧೮೪.

೨. ಎಸ್‌ಐಐ XX ಸಿಂದಗಿ ೨೯೯ ಕ್ರಿ.ಶ. ೧೨ ಶಮಾ. 'ಕರ್ನಾಟಕದ ದಕ್ಷಿಣದ ತುದಿಯಲ್ಲಿನ ಹೊಲೆಯರು ಬಲಗೈ ಎಂದೂ ಮಾದಿಗರು ಎಡಗೈ ಎಂದೂ ವಿಂಗಡಣೆಗೊಳ್ಳುತ್ತಾರೆ. ಮಧ್ಯ ಮತ್ತು ಉತ್ತರ ಕರ್ನಾಟಕದಲ್ಲಿ ಹೊಲೆಯ, ಮಾದಿಗರಲ್ಲಿ ಹೊಲೆಯ ಶ್ರೇಷ್ಠ ಎಂದು ನಂಬಿಕೆ ಇದ್ದರೂ ಬಲಗೈ ಎಡಗೈ ಎಂಬ ಶಬ್ದಗಳು ಬಳಕೆಯಲ್ಲಿಲ್ಲ.' ಎಂ. ಚಿದಾನಂದ ಮೂರ್ತಿ : ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಪು. ೨೧. ಈ ಶಾಸನದಲ್ಲಿ ಇರುವಂತೆ 'ಎಡಹೊಲೆಯರ' ಎಂದು ಓದಿಕೊಂಡರೆ ಈ ವಿಭಾಗ ಯಾವುದು ಎಂಬುದು ತಿಳಿಯುವುದಿಲ್ಲ.

೩. (ರೈ) ಎಕ V ಚನ್ನರಾಯಪಟ್ಟಣ ೧೮೧ ಕ್ರಿ.ಶ. ೧೨೦೫.

೪. (ಮೈ) ಎಕ VI ಕೃ.ಪೇಟೆ ೧೦೬ ಕ್ರಿ.ಶ. ೧೧೬೫.

೫. (ಮೈ) ಎಕ VII ಮದ್ದೂರು ೭೧ ಕ್ರಿ.ಶ. ೧೨-೧೩ ಶಮಾ.

೬. ಎಸ್‌ಐಐ IX(i) ಕೂಡ್ಲಿಗಿ ೩೩೮ ಕ್ರಿ.ಶ. ೧೨೨೧.

೭. ಕಇ V ಧಾರವಾಡ ೭೦ ಕ್ರಿ.ಶ. ೧೨೨೧.

೮. (ರೈ) ಎಕ XI ಚಿತ್ರದುರ್ಗ ೧೨ ಕ್ರಿ.ಶ. ೧೨೮೬.

೯. ಪಿ.ವಿ. ನಾರಾಯಣ; ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೭೪.

ಹೊಲೆಯರು ಉತ್ತಮರ ಹತ್ತಿರ ಬರುತ್ತಿರಲಿಲ್ಲ. ಹೊಲೆಯರ ಒಡನಾಟವಾಗಲಿ ಕೆಳೆಯಾಗಲಿ ಕೇಡಿಗೆ ಕಾರಣವೆಂಬರ್ಥದ ಗಾದೆಯೇ ಹನ್ನೆರಡನೆಯ ಶತಮಾನದಲ್ಲಿತ್ತು.[೧]

ಹೊಲೆಯರು ಊರನ್ನು ಶುಚಿಗೊಳಿಸುತ್ತಿದ್ದರು. ಊರೊಳಗೆ ಇಂಥ ಯಾವುದಾದರೂ ಕಾರ್ಯಕ್ಕೆ ಬರುವಾಗ ತಾವು ಬರುವುದನ್ನು ಸದ್ದಿನ ಮೂಲಕ ಘೋಷಿಸಬೇಕಿತ್ತು. ತಮ್ಮನ್ನು ಮುಟ್ಟಿಸಿಕೊಂಡು ಜನರಿಗೆ ಮೈಲಿಗೆಯಾಗದಿರಲೆಂದು ಅವರು ಒಂದು ಕೋಲನ್ನು ಕುಟ್ಟುತ್ತ 'ಸಂಬೋಳಿ' ಎಂದು ಮತ್ತೆ ಮತ್ತೆ ಕೂಗುತ್ತಿದ್ದರು. ಆ ಕೋಲಿಗೆ 'ಸಂಬಳಿಗೋಲು' ಎಂದು ಕರೆಯುತ್ತಿದ್ದರು. ಈ ರೀತಿ ಹೊಲೆಯರು ಹಿಡಿಯುತ್ತಿದ್ದ ಕೋಲನ್ನು ಅನೇಕ ಕನ್ನಡ ಕೃತಿಗಳು ಸೂಚಿಸುತ್ತವೆ.[೨] ಈ ರೀತಿ ಕೋಲನ್ನು ಹಿಡಿದು ಶಬ್ದ ಮಾಡುತ್ತಿದ್ದುದನ್ನು ಮತ್ತು ಆ ಶಬ್ದ ಕೇಳಿ ಜನರು ದೂರ ಇರುತ್ತಿದ್ದುದನ್ನು ಫಾಹಿಯಾನ್ ತಿಳಿಸುತ್ತಾನೆ.[೩]

ಅಸ್ಪೃಶ್ಯರಿಗೆ ಪಂಚಮರೆಂಬ ಅರ್ಥ ಬಹು ಹಿಂದಿನಿಂದಲೂ ಕನ್ನಡದಲ್ಲಿ ಇದೆ. ಸಂಸ್ಕೃತದಲ್ಲಿ ಪಂಚಮಕ್ಕೆ 'ಐದನೆಯದು' ಎಂಬ ಅರ್ಥವಿದೆಯೇ ಹೊರತು ಅಸ್ಪೃಶ್ಯನೆಂಬ ಅರ್ಥವಿಲ್ಲ. 'ಪಂಚಮ' ಮಾತಿಗೆ ಐದನೆಯ ವರ್ಣ ಎಂಬರ್ಥ ಬರುವ ಸಾಧ್ಯತೆಯಿರುವುದರಿಂದ ಮತ್ತು ಹೊಲೆಯರನ್ನು ವರ್ಣದ ವ್ಯಾಪ್ತಿಯೊಳಗೆ ಪರಿಗಣಿಸಲು ಸಂಸ್ಕೃತ ವಿದ್ವಾಂಸರು ಬಯಸಲಿಲ್ಲವಾದುದರಿಂದ ಬಹುಶಃ ಪಂಚಮ ಶಬ್ದವನ್ನು ಅಲ್ಲಿ ಅಸ್ಪೃಶ್ಯ ಎಂಬರ್ಥದಲ್ಲಿ ಬಳಸಲಿಲ್ಲ. ದೇಶೀಯ ಭಾಷೆಗಳಲ್ಲಿ ಆ ಅರ್ಥ ನಿಸ್ಸಂಕೋಚವಾಗಿ ಬೆಳೆದು ಬಂದಿದೆ.[೪]

ಧಾರ್ಮಿಕ ಅಥವಾ ಸಾಮಾಜಿಕ ನಿಯಮಗಳನ್ನು ಉಲ್ಲಂಘಿಸಿದಾಗ ಆಯಾ ಧರ್ಮ-ಜಾತಿಗಳಿಂದ ಬಹಿಷ್ಕರಿಸುವ ಪದ್ಧತಿ ಬಹಳ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ. ಮಂಗಳೂರಿನ ಒಂದು ಶಾಸನ ಬಂಕೇಶ್ವರ ದೇವಾಲಯದ ಪಾದಮೂಲದವರಿಗಾಗಲಿ, ದೇವಾಲಯದ ಆಸ್ತಿಗಾಗಲಿ ಆಕ್ರಮಣ ಮಾಡಿದರೆ ವಿವಿಧ ವರ್ಣದವರಿಗೆ ವಿಧಿಸುವ ಶಿಕ್ಷೆಯನ್ನು ತಿಳಿಸುತ್ತದೆ. ಬ್ರಾಹ್ಮಣರು ಅಪರಾಧ ಮಾಡಿದರೆ ಕಣ್ಣು ಕೈ ತೆಗೆಯಬೇಕು ಮತ್ತು ನಾಲ್ಕು ಜಾತಿಗಳಿಂದ ಹೊರಗೆ ಹಾಕಬೇಕೆನ್ನುತ್ತದೆ, ಸೆಟ್ಟಿ ಮಾಡಿದರೆ ವ್ಯಾಪಾರಿವರ್ಗದಿಂದ ಹೊರಗೆ ಹಾಕಬೇಕೆನ್ನುತ್ತದೆ, ಅದೇ ರೀತಿ ಒಕ್ಕಲು ಮಾಡಿದರೆ ತಲೆ ತೆಗೆದು ಸಾವಿರ ಹೊನ್ನಿನ ದಂಡವೆಂದು ಹೇಳುತ್ತದೆ.[೫] ಈ ರೀತಿ ಜಾತಿಯಿಂದ ಹೊರ ಹಾಕುತ್ತಿದ್ದುದು ಆ ಕಾಲದ ಸಾಮಾಜಿಕ ಶಿಕ್ಷೆಯಾಗಿದ್ದಿತೆಂದು ಕಾಣುತ್ತದೆ. ಈ ಬಹಿಷ್ಕಾರ ಪದ್ಧತಿ ಆ ಕಾಲದಲ್ಲಿ ಪ್ರಚಲಿತವಿದ್ದುದಕ್ಕೆ ಆ ಕಾಲದ ಶಾಸನಗಳು ಮತ್ತು ಕನ್ನಡ ಕೃತಿಗಳು[೬] ನಿದರ್ಶನಗಳನ್ನು ಒದಗಿಸುತ್ತವೆ. ಕೆಲವು ಶಾಸನಗಳಲ್ಲಿ ಬರುವ ಶಾಪಾಶಯಗಳು ಈ ರೀತಿ ಬಹಿಷ್ಕಾರ ಹಾಕಿದ್ದನ್ನು ತಿಳಿಸುತ್ತವೆ. ದಾನವನ್ನು ಅಪಹರಿಸಿದರೆ 'ಪಂಚಾಳಕ್ಕೆ ಹೊಱಗು ಆಹಳಕ್ಕೆ[೭] ಹೊಱಗು' 'ಸಮಯಕ್ಕೆ ಊ ನಾಡಿಗೂ ಹೊಱಗು'[೮] ಎಂದು ಒಂದು ಶಾಸನದಲ್ಲಿ ಬರುತ್ತದೆ.

---

೧. ಎಂ. ಚಿದಾನದಂಮೂರ್ತಿ ಪೂರ್ವೋಕ್ತ, ಪು. ೪೪.

೨. ಜೇದಾವ ೩ : 'ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ'; ಪೂರ್ವೋಕ್ತ : ೧೧-೨೯-೩೧.

೩. R. S. Sharma: ಪೂರ್ವೋಕ್ತ ಪು. ೨೬೨.

೪. ಎಂ. ಚಿದಾನದಂಮೂರ್ತಿ ಪೂರ್ವೋಕ್ತ, ಪು. ೪೮.

೫. ತುನಾಶಾ II ಮಂಗಳೂರು ೩೬ ಕ್ರಿ.ಶ. ೧೨೦೪.

೬. ಬವ. ೭೫೨ : 'ನಮ್ಮ ಕುನ್ನಿಗೆ ಕೂಸು ಕೊಡಬೇಡ! ನಿಮ್ಮ ಸೊಣಗಂಗೆ ತಳಿಗೆಯಲಿಕ್ಕಬೇಡ'.

೭. ಪಂಚಾಳ-ಶಿಲ್ಪಿ, ಅಕ್ಕಸಾಲಿ, ಕಮ್ಮಾರ, ಬಡಗಿ ಮತ್ತು ಕಂಚುಗಾರರನ್ನು ಸೂಚಿಸುತ್ತದೆ. 'ಆಹಳ' ಶಬ್ದ ಆವಳಿಯಾಗಿದ್ದು ಗುಂಪನ್ನು ಸೂಚಿಸಬಹುದೇ?

೮. (ಮೈ) ಎಕ III ಗುಂಡ್ಲುಪೇಟೆ ೧೭ ಕ್ರಿ.ಶ. ೧೩೭೨.

ವೀರಶೈವ ಧರ್ಮ ಅನೇಕ ಸಾಮಾಜಿಕ ಅನಿಷ್ಟಗಳ ವಿರುದ್ಧ ಧ್ವನಿ ಎತ್ತಿದುದು ಪ್ರಸಿದ್ಧವಾಗಿಯೇ ಇದೆ. ಬಸವ ಪೂರ್ವದಲ್ಲಿಯೇ ಉತ್ತಮ ಕುಲದ ಶಿವಭಕ್ತ ಕೊಂಡಗುಳಿ ಕೇಶಿರಾಜ ಅಧಿಕಾರವನ್ನು ತ್ಯಾಗಮಾಡಿದನಂತರ ಬುಟ್ಟಿ ಹೆಣೆಯುವ ವಂಶವರ್ಧನನ ಹತ್ತಿರ ಹೋಗುವುದು ಗಮನಾರ್ಹವಾಗಿದೆ. ಮುಂದೆ ವಚನಕಾರರು ಹುಟ್ಟಿನಿಂದ ಬಂದ ಬ್ರಾಹ್ಮಣ ಶ್ರೇಷ್ಠತ್ವವನ್ನು ಪ್ರಶ್ನೆ ಮಾಡಿದ್ದೇ ಅಲ್ಲದೆ ಅದನ್ನು ಅಲ್ಲಗಳೆದರು. ಸಾಮಾಜಿಕವಾಗಿ ಇನ್ನೊಂದು ಕೊನೆಯಲ್ಲಿದ್ದ ಅಸ್ಪೃಶ್ಯರನ್ನು ಗೌರವದಿಂದ ಕಂಡರು. ಅಸ್ಪೃಶ್ಯರಾಗಲಿ ಅಥವಾ ಯಾವುದೇ ಕೆಳಜಾತಿಯ ವ್ಯಕ್ತಿಯಾಗಲಿ ಶಿವಭಕ್ತನಾದ ಮೇಲೆ ಎಲ್ಲರೂ ಸಮಾನರೆಂದು ಧೈರ್ಯವಾಗಿ ಹೇಳಿದರು. ಶಿವಭಕ್ತರಾದ ಹೊಲೆಯರನ್ನು ಹಿರಿಯ ಕುಲದವರೆಂದೂ 'ಹಿರಿಯ ಮಾಹೇಶ್ವರ'ರೆಂದೂ ಕರೆಯಲಾಗಿದೆ. 'ಲಿಂಗಾಯತ ಪರಿಸರದಲ್ಲಿ ಹೊಲೆಯ ಭಕ್ತರನ್ನು ಹಿರಿಯ ಭಕ್ತರೆಂದು ನಿರ್ದೇಶಿಸುವ ಇತಿಹಾಸ ವ್ಯಾಪ್ತಿ ಕ್ರಿಶ. ೧೧೫೦ ರಿಂದ ಹದಿನೆಂಟನೇ ಶತಮಾನದವರೆಗೆ ವ್ಯಾಪಿಸಿದೆ.'[೧] ವೀರಶೈವ ಆಂದೋಲನ, ಶತಮಾನಗಳಿಂದ ಬಾಯಿ ಇಲ್ಲದ ಅಸ್ಪೃಶ್ಯರಿಗೆ ಬಾಯಿಯನ್ನು ಕೊಟ್ಟಿತು. ಬಸವಣ್ಣನವರ ಸಮಕಾಲೀನರಾದ ಅನೇಕ ವಚನಕಾರರು ಆ ವರ್ಗದಿಂದ ಬಂದಿದ್ದುದು ಗಮನಾರ್ಹವಾಗಿದೆ. ಅಸ್ಪೃಶ್ಯವರ್ಗದಿಂದ ಬಂದವರು ಮಾದಾರ ಚನ್ನಯ್ಯ (ಹತ್ತು ವಚನಗಳು), ಡೋಹರ ಕಕ್ಕಯ್ಯ (ಆರು ವಚನಗಳು), ಸಂಬೋಳಿನಾಗಿದೇವ (ಒಂದು ವಚನ), ಅನಾಮಿಕನಾಚಯ್ಯ (ಒಂದು ವಚನ), ಮಾದಾರ ಧೂಳಯ್ಯ (ಒಂದುನೂರಾ ಎರಡು) ಉರಿಲಿಂಗಪೆದ್ದಿ (ಇನ್ನೂರ ತೊಂಬತ್ನಾಲ್ಕು, ಈತನು ತನ್ನ ವಚನಗಳಲ್ಲಿ ಹಲವಾರು ಕಡೆ ಸಂಸ್ಕೃತ ಉಲ್ಲೇಖಗಳನ್ನು ನೀಡಿದ್ದಾನೆ), ಕಾಳವ್ವೆ (ಉರಿಲಿಂಗಪೆದ್ದಿಯ ಮಡದಿ. ಈಕೆಯ ಹದಿಮೂರು ವಚನಗಳು ದೊರೆತಿವೆ). ಹೀಗೆ ಅಸ್ಪೃಶ್ಯರೂ ಸಾಹಿತ್ಯ ರಚನೆಯನ್ನು ಮಾಡುವಂತಾದುದು ಬಹುದೊಡ್ಡ ಸಾಧನೆಯಾಗಿದೆ. 'ವಚನಕಾರರನಂತರ ಮುಂದಿನ ಕನ್ನಡ ಕವಿಗಳು ಈ ಸಾಮಾಜಿಕ ಎಚ್ಚರವನ್ನು ಹೇಗೆ ಕಾಪಾಡಿಕೊಂಡು ಬಂದರೆಂಬುದು ಗಮನಾರ್ಹ ವಿಷಯವಾಗಿದೆ.'[೨]

**ತೊತ್ತು :**

ಬಹು ಪ್ರಾಚೀನ ಕಾಲದಿಂದಲೂ 'ದಾಸ್ಯ' ಈಜಿಪ್ಟ್, ಗ್ರೀಸ್, ರೋಂ ಮತ್ತು ಯೂರೋಪಿನ ಅನೇಕ ದೇಶಗಳಲ್ಲಿ ಪ್ರಚಲಿತವಿದ್ದ ಪದ್ಧತಿಯಾಗಿದೆ. ಭಾರತದಲ್ಲಿ ಋಗ್ವೇದದಲ್ಲಿ ದಾಸ ಎಂಬ ಪದ ದಸ್ಯು ಎಂಬ ಪದಕ್ಕೆ ಸಮಾನಾರ್ಥಕವಾಗಿ ಆರ್ಯರ ಶತ್ರುಗಳು ಎಂಬ ಅರ್ಥದಲ್ಲಿ ಬಳಕೆಯಾಗಿದೆ.[೩] ಆರ್ಯರು ತಾವು ಸೋಲಿಸಿದ ಆ ಪ್ರದೇಶದ ಮೂಲನಿವಾಸಿಗಳನ್ನು ದಾಸ್ಯಕ್ಕೆ ನೇಮಿಸಿಕೊಂಡರು. ಅವರೇ ದಾಸರೆಂದು ಕ್ರಮೇಣ ಪರಿಗಣಿತವಾಗಿರಬೇಕು. ಮನುಧರ್ಮಶಾಸ್ತ್ರದಲ್ಲಿ ಏಳು ರೀತಿಯ ದಾಸರನ್ನು ಹೆಸರಿಸಲಾಗಿದೆ. ಯುದ್ಧದಲ್ಲಿ ಸೆರೆ ಸಿಕ್ಕವರು, ಆಹಾರದ ಅಗತ್ಯಕ್ಕಾಗಿ ದಾಸರಾದವರು (ಕೊರತೆ ಅಥವಾ ಬರದ ಕಾರಣವಿರಬಹುದು), ಮನೆಯಲ್ಲಿ ಜನಿಸಿದ ವ್ಯಕ್ತಿ (ದಾಸಿಯ ಪುತ್ರ), ಕೊಂಡ ದಾಸ, ದಾನವಾಗಿ ಬಂದ ವ್ಯಕ್ತಿ (ತಂದೆ ತಾಯಿಗಳಿಂದ ಅಥವಾ ಅವನ ಸಂಬಂಧಿಕರಿಂದ ನೀಡಲ್ಪಟ್ಟವನು), ಆನುವಂಶಿಕವಾಗಿ ಬಂದ ವ್ಯಕ್ತಿಗಳು (ತಂದೆಯ ಆಸ್ತಿಯ ಭಾಗವಾಗಿ ಬಂದದ್ದು), ದಂಡವನ್ನು ಕೊಡುವ ಕಾರಣಕ್ಕಾಗಿ ದಾಸನಾದವನು.[೪] ಹೀಗೆ ಹಲವು ಸಂದರ್ಭಗಳಲ್ಲಿ ಗುಲಾಮರಾಗುತ್ತಿದ್ದರು. ಹಲವು ಸಂದರ್ಭಗಳಲ್ಲಿ ಗುಲಾಮರನ್ನು ಅದರಿಂದ ಮುಕ್ತಗೊಳಿಸಲೂ ಅವಕಾಶವಿದ್ದಿತು. ಬೌದ್ಧ ಗ್ರಂಥದಲ್ಲಿ, ಬಿಡುಗಡೆಯಾಗಲಿರುವ ಗುಲಾಮನ ತಲೆಯನ್ನು ಒಡೆಯನು ತೊಳೆದು ಬಿಡುಗಡೆ ಮಾಡುವ ಪದ್ಧತಿ ಇದ್ದಿತೆಂದು

---

೧. ಎಂ.ಚಿದಾನಂದಮೂರ್ತಿ ಪೂರ್ವೋಕ್ತ, ಪು. ೧೨೬.

೨. ವಿವರಗಳಿಗೆ ನೋಡಿ : ಅದೇ, ಪು. ೧೧೦-೧೨೫.

೩. Ateendranath Bose : 'Origin of slavery in Indo-Aryan economy' ಜೆಇಹಿ XIX-೨, ಪು. ೧೮೫-೮೬.

೪. P. V. Kane : ಪೂರ್ವೋಕ್ತ , ಸಂ II(i) ಪು. ೧೮೪.

ತಿಳಿದು ಬರುತ್ತದೆ.[೧] ಇವರನ್ನು ಬಿಡುಗಡೆ ಮಾಡುತ್ತಿದ್ದುದಕ್ಕಿಂತ ಮಾರಾಟ ಮಾಡುತ್ತಿದ್ದುದೇ ಹೆಚ್ಚೆಂದು ಕಾಣುತ್ತದೆ. ಗುಲಾಮರನ್ನು ಕನ್ನಡ ಶಾಸನಗಳು ಮತ್ತು ಕಾವ್ಯಗಳು ತೊತ್ತು ಎಂದು ಕರೆದಿವೆ. ಒಡೆಯನು ತನಗೆ ಅಗತ್ಯವಿದ್ದಷ್ಟು ಕಾಲ ತೊತ್ತನ್ನು ತನ್ನ ಬಳಿ ಇಟ್ಟುಕೊಂಡು ಅನಂತರ ಅವರನ್ನು ಮಾರಿಬಿಡುತ್ತಿದ್ದನು.

ತೊತ್ತುಗಳಿಗೆ ಯಾವುದೇ ರೀತಿಯ ಸ್ವಾತಂತ್ರ್ಯವಿರುತ್ತಿರಲಿಲ್ಲ. ತೊತ್ತಿಗೆ ತನ್ನ ಮೇಲಾಗಲಿ ತನ್ನ ವಸ್ತುಗಳ ಮೇಲಾಗಲಿ ಅಧಿಕಾರವಿರುತ್ತಿರಲಿಲ್ಲ; ಎಲ್ಲವೂ ಒಡೆಯನಿಗೆ ಸೇರಿರುತ್ತಿದ್ದವು. ತೊತ್ತುಗಳ ಮಾರಾಟ ಸಂತೆಗಳಲ್ಲಿ ನಡೆಯುತ್ತಿತ್ತು ಎಂಬುದಕ್ಕೆ ಶಾಸನಾಧಾರಗಳಿವೆ. 'ಹಿರಿಯೂರ ಒಳವಾಜು ಹೊಜವಾಜು ತೋಟ ಎಮ್ಮೆ ಪಶು ತೊತ್ತು ಕಟ್ಟಿನಭಂಡಿ ಬೆಳ್ವಂಗಡಿವಣ ಅಸಗ ಕಂಮಾರ ಬಡಗಿ ಅಗಸ್ಯಾಲಿ ಕುಂಬಾಜ ನಾವಿದ ಅಂಗಡಿ ಗಾಣ ಜಾಡಸಾಲಿ ತಿಪ್ಪೆಸುಂಕ ಹೊಜೆಗಳಂ ಬನ್ದು ಮಾಜುವ ಯಂಣೆ ತುಪ್ಪ ಉಪ್ಪು ಹೊಲೆವೊಗ್ಗವೊಳಗಾಗಿ...'[೨] ಎಂದು ಒಂದು ಶಾಸನ ಹೇಳುತ್ತದೆ. ತತ್ವಗತ್ನಪ್ರದೀಪಿಕೆಯು, ತೊತ್ತುಗಳ ಮಾರಾಟ ನಡೆಯುತ್ತಿದ್ದಿತೆಂಬುದನ್ನು ಸ್ಪಷ್ಟೋಕ್ತಿಗಳಲ್ಲಿ ಹೇಳುತ್ತದೆ.[೩] ಹರಿಶ್ಚಂದ್ರ ಕಾವ್ಯದಲ್ಲಿಯೂ ಹರಿಶ್ಚಂದ್ರ ತನ್ನ ಹೆಂಡತಿ ಮತ್ತು ಮಗನನ್ನು ಮಾರುವ ವಿಷಯವಿದೆ. ಶೃಂಗೇರಿ ಧರ್ಮಸಂಸ್ಥಾನದ ಅಧಿಕಾರ ವ್ಯಾಪ್ತಿಯೊಳಗೆ ಬರುವ ಊರುಗಳಲ್ಲಿ ಶೀಲಗೆಟ್ಟ ಹೆಂಗಸರನ್ನು ಚಾವಡಿಗೆ ಕರೆಸಿ ಮಾರುತ್ತಿದ್ದ ವಿಷಯ ಆ ಸಂಸ್ಥಾನದ ಕಡತಗಳಲ್ಲಿರುವ ಹೆಣ್ಣಿನ ಕ್ರಯಚೀಟುಗಳಿಂದ ತಿಳಿದುಬರುತ್ತದೆ[೪] (ಕ್ರಿ.ಶ. ೧೮೧೮). ಅಂದರೆ ಕರ್ನಾಟಕದಲ್ಲಿ ತೊತ್ತುಗಳ ಮಾರಾಟ ಕ್ರಿ.ಶ. ೧೯ನೆಯ ಶತಮಾನದ ಆದಿಯವರೆಗೆ ನಡೆದು ಬಂದಿರುವುದು ಕಂಡು ಬರುತ್ತದೆ. ನಂಬಿಯಣ್ಣನ ರಗಳೆಯಲ್ಲಿ ಶಿವನಿಗೆ ನಂಬಿಯಣ್ಣನು 'ಬಳಿದೊತ್ತಾ'ದ ವಿಷಯ ಬರುತ್ತದೆ. ಅಲ್ಲಿ ಬರುವ ಕರಾರುಪತ್ರ, ಅದಕ್ಕೆ ಊರಿನ ಕೆಲವು ಪ್ರಮುಖರ ಸಾಕ್ಷಿ -ಇವೆಲ್ಲವೂ ಆ ಕಾಲಕ್ಕೆ ತೊತ್ತು ಒಂದು ವ್ಯವಸ್ಥಿತವಾದ ಸಂಪ್ರದಾಯವಾಗಿ ಬೆಳೆದಿತ್ತು ಎಂಬುದಕ್ಕೆ ನಿದರ್ಶನದಂತಿದೆ.[೫] ಜೇಡರ ದಾಸಿಮಯ್ಯ, ಬಸವಣ್ಣ ಮುಂತಾದ ವಚನಕಾರರಲ್ಲಿಯೂ ತೊತ್ತುಗಳ ಉಲ್ಲೇಖ ಕಂಡು ಬರುತ್ತದೆ.[೬]

ತೊತ್ತುಗಳ ಮಾರಾಟಸಮಯದಲ್ಲಿ ತಲೆಯ ಮೇಲೆ ಹುಲ್ಲಿನ ಸಿಂಬೆಯನ್ನು ಮಾರಾಟ ವಸ್ತು ಸೂಚಕವಾಗಿ ಕಟ್ಟುತ್ತಿದ್ದಂತೆ ಎಂ. ಚಿದಾನಂದ ಮೂರ್ತಿಯವರು ಊಹಿಸುತ್ತಾರೆ.[೭] ತೊತ್ತು ಎನ್ನುವ ಪದ ಗಂಡು ಮತ್ತು ಹೆಣ್ಣು ಇಬ್ಬರನ್ನೂ ಸೂಚಿಸುತ್ತಿದ್ದಿತು. ತೊತ್ತಾಗುವಾಗ ಪುರುಷರು ತಲೆಯನ್ನು ಬೋಳಿಸಿಕೊಳ್ಳುತ್ತಿದ್ದುದಕ್ಕೆ ಬಸವಣ್ಣನವರ ವಚನವೊಂದರಲ್ಲಿ ಸೂಚನೆ ಇದೆ.[೮] ಸಕಲೇಶಪುರದ ಪ್ರದೇಶದಲ್ಲಿ ಪ್ರಚಲಿತವಾಗಿದ್ದ ಗಡ್ಡಮಂಡೆ ಪದ್ಧತಿ[೯]ಯ ಸ್ವರೂಪ ವೇಳೆವಾಳಿ ಮತ್ತು ತೊತ್ತಿನ ಕೆಲವು

---

೧. Devaraja Chanana : Slavery in Ancient India ಪು. ೮೦.

೨. (ರೈ) ಎಕ XII ಕುಣಿಗಲು ೧, ಕ್ರಿ.ಶ. ೧೧೫೭; (ರೈ) ಎಕ X ಬೌರಿಂಗ್‌ಪೇಟೆ ೭೨ ಕ್ರಿ.ಶ. ೧೪೩೦ '...ಯೆತ್ತು ತೊತ್ತು ಕುದುರೆ ಕೊಂಡಡೂ ಮಾಜಿದಡೂ'.

೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೫೬.

೪. ಎ.ಕೆ. ಶಾಸ್ತ್ರಿ : **ಶೃಂಗೇರಿ ಧರ್ಮಸಂಸ್ಥಾನ**, ಪು. ೧೮೨-೮೩.

೫. ನಂಬಿಯಣ್ಣನ ರಗಳೆ. ಸ್ಥಲ ೬-೭.

೬. ಜೇದಾವ. ೫೨ 'ಕತ್ತೆ ಬಲ್ಲುದೆ ಕತ್ತುರಿಯ ವಾಸನೆಯ
ತೊತ್ತು ಬಲ್ಲಳೆ ಗುರುಹಿರಿಯರುತ್ತಮರೆಂಬುದ'

ಬವ. ೪೬೬, ೩೫೩. ಬಸವಣ್ಣನವರು ವಚನದಲ್ಲಿ ಬಳಿದೊತ್ತು, ಬಳಗದೊತ್ತು, ವಂಶದೊತ್ತು ಎಂಬ ಪ್ರಭೇದಗಳನ್ನು ಹೇಳಿದ್ದಾರೆ.

೭. ಪೂರ್ವೋಕ್ತ, ಪು. ೩೭.

೮. ಬವ. ೩೫೬ : 'ಆನು ನಿಮ್ಮ ಶರಣರಿಗೆ
ಮಂಡೆಯ ಬೋಳಿಸಿಕೊಂಡು ಗಂಡುದೊತ್ತಾದೆನಯ್ಯಾ'

೯. ಮ. ರಾಜಶೇಖರ ನಾರ್ವೆ : 'ಗಡ್ಡ ಮಂಡೆ ಪದ್ಧತಿ' ಸಾಧನೆ ೯-೧, ಪು. ೧೫೨-೭.

ಅಂಶಗಳನ್ನು ಒಳಗೊಂಡಂತೆ ಕಂಡುಬರುತ್ತದೆ. ಊರಿನ ಗೌಡನ ಕೆಲಸಕ್ಕೆ ಮೀಸಲಾದ ಹೊಲೆಯರು ಇರುತ್ತಾರೆ. ಅವನು ಗೌಡನ ಮರಣ ಸಂಭವಿಸಿದಾಗ ಸ್ವಂತಮಗನಂತೆ ಕಾರ್ಯ ನಿರ್ವಹಿಸುತ್ತಾನೆ. ಅವನು ಗಡ್ಡಮಂಡೆಗಳನ್ನು ಪೂರ್ತಿ ಬೋಳಿಸಿಕೊಳ್ಳುತ್ತಾನೆ. ಅನಂತರ ಸ್ನಾನಮಾಡಿ ತಲೆಗೆ ಎಣ್ಣೆ ಹಚ್ಚಿಕೊಂಡು ಗೌಡರ ಮನೆಯವರು ಕೊಟ್ಟ ಹೊಸಬಟ್ಟೆಗಳನ್ನು ಧರಿಸಿ ಶವದ ಬಳಿ ಕುಳಿತಿರುತ್ತಾನೆ. ಶವದ ಬಾಯಿಗೆ ಇಟ್ಟ ತಾಂಬೂಲವನ್ನು ಅವನಿಗೆ ಕೊಟ್ಟಾಗ ಅವನು ಅದನ್ನು ಅಗಿದು ಗೌಡನ ಯಾವ ಗದ್ದೆಗೆ ಉಗಿಯುತ್ತಾನೊ ಅದು ಅವನಿಗೆ ಸೇರುತ್ತದೆ. ಹನ್ನೊಂದನೆಯ ದಿನದ ತಿಥಿಯಂದು ಅವನು ಬಂದಾಗ ಗೌಡನು ಬಳಸುತ್ತಿದ್ದ ಹಾಸಿಗೆ, ಹೊದಿಕೆ, ತಟ್ಟೆ, ಲೋಟ, ಬಟ್ಟೆಗಳನ್ನು ಅವನಿಗೆ ಕೊಡುತ್ತಾರೆ. ಇದು ಒಡೆಯನ-ಆಳಿನ ಒಂದು ವಿಶಿಷ್ಟ ಸಂಬಂಧವನ್ನು ಹೇಳುತ್ತದೆ.

ಸಾಧಾರಣವಾಗಿ ತೊತ್ತುಗಳಿಗೆ ಆಸ್ತಿಯ ಮೇಲಿನ ಅಧಿಕಾರವಿರುತ್ತಿರಲಿಲ್ಲ. ಮಾಗೇನಹಳ್ಳಿಯ ಶಾಸನವೊಂದರಲ್ಲಿ ಆಸ್ತಿಯ ಹಕ್ಕನ್ನು ಕುರಿತು ಹೇಳುವಾಗ- 'ಆ ಮುಗಳನಹಳ್ಳಿಯ ತಮ್ಮಾಡಿಯಾದಡೆ ಅಣ್ಣನೊಡವೆ ತಮ್ಮಂಗೆ ತಮ್ಮನೊಡವೆಯಣ್ಣಂಗೆ ಅಣ್ಣ ತಮ್ಮದಿರಾರೂ ಇಲ್ಲದಿದ್ದಡೆ ನೆಂಟರಿಷ್ಟರು ತೊತ್ತಿನ ಮಗಂಗೆ ಮುಖ್ಯವಾಗಿ ಸಲುಉದು ಅನ್ತಾರೂ ಇಲ್ಲದಿದ್ದಡೆ ಆ ಅಪುತ್ರಿಕ ದನಕಱ ದೇವಾಲ್ಯಕ್ಕಿಕ್ಕುವದು ತಮ್ಮಡಿ ಎಂಬ ವಾರ್ತೆ'[೧] ಎಂದು ಬರುತ್ತದೆ. ರಾಯಸೆಟ್ಟಿಪುರದ ಶಾಸನವೊಂದು ಶಿವಪುರವನ್ನು ಮಾಡಿ ವ್ರಿತ್ತಿಗಳನ್ನು ಹಂಚಿದನಂತರ '...ಯೀ ವ್ರಿತ್ತಿಯನು ವ್ರಿತ್ತಿವಂತರ ಹೆಂಣು ಮಕ್ಕಳು ಹೆಂಡಿರು ತೊತ್ತಿನ ಮಕ್ಕಳು ಭಕ್ತರಾಗಿ ಅನುಭವಿಸುವರು' ಎಂದು ನಿರೂಪಿಸುತ್ತದೆ.[೨] ಮೊದಲನೆಯ ಶಾಸನದಲ್ಲಿ ಹೇಳಿದಂತೆ, ಅಣ್ಣ ತಮ್ಮಂದಿರಂತಹ ಹತ್ತಿರದ ಸಂಬಂಧಿಕರು ಇಲ್ಲದಾಗ ಆಸ್ತಿ ತೊತ್ತಿನ ಮಗನಿಗೆ ಸಲ್ಲುವುದೆಂಬುದು ಗಮನಾರ್ಹವಾಗಿದೆ. ಎರಡನೆಯ ಶಾಸನ ವ್ರಿತ್ತಿಗಳ ಒಡೆತನ ಹೆಣ್ಣು ಮಕ್ಕಳಿಗೆ ಸಂದಿರುವುದನ್ನು ತಿಳಿಸುವುದಲ್ಲದೆ ಹೆಣ್ಣುಮಕ್ಕಳು, ಹೆಂಡಿರು, ತೊತ್ತಿನ ಮಕ್ಕಳು ಭಕ್ತರಾಗಿ ಅನುಭವಿಸುವರು ಎಂದು ಹೇಳಿರುವುದು ವಿಶೇಷವಾದ ವಿಷಯವಾಗಿದೆ. ಶಿವಪುರಗಳಲ್ಲಿ ಮಾತ್ರ ವ್ರಿತ್ತಿಗಳನ್ನು ಸ್ತ್ರೀಯರಿಗೆ ಹಂಚಿರುವುದು ಕಂಡು ಬರುತ್ತದೆ. ಬಹುಶಃ ಇದು ವೀರಶೈವ ಧರ್ಮದ ಪ್ರಭಾವದ ಹಿನ್ನೆಲೆಯಲ್ಲಿ ಗಮನಿಸಬೇಕಾದ ಸಂಗತಿಯಾಗಿದೆ. ಅದೇ ರೀತಿ ತೊತ್ತಿನಂತಹ ಕೆಳವರ್ಗದವರಿಗೆ ವಚನಕಾರರು ವಿಶೇಷ ಮಾನ್ಯತೆ ನೀಡಿದ ಹಿನ್ನೆಲೆಯಲ್ಲಿ ಗಮನಾರ್ಹವಾಗಿದೆ. ತೊತ್ತುಗಳಿಗೆ ಆಸ್ತಿಯ ಹಕ್ಕು ಇಲ್ಲವೆಂದೇ ಪ್ರಾಚೀನ ಕಾಲದಿಂದಲೂ ಇದ್ದ ನಂಬಿಕೆಯಾದರೂ ಕನ್ನಡ ಶಾಸನಗಳಿಂದ ಕೆಲವು ವಿಶಿಷ್ಟ ನಿರ್ಬಂಧಿತ ಸಂದರ್ಭಗಳಲ್ಲಿ ತೊತ್ತುಗಳಿಗೆ ಆಸ್ತಿಯ ಅಧಿಕಾರವನ್ನು ಹೊಂದುವ ಅವಕಾಶವಿದ್ದುದು ತಿಳಿದು ಬರುತ್ತದೆ.

ಶಾಸನ ಮತ್ತು ಸಾಹಿತ್ಯ ಕೃತಿಗಳ ಉಲ್ಲೇಖಗಳನ್ನು ಗಮನಿಸಿದರೆ ಆ ಕಾಲದಲ್ಲಿ ತೊತ್ತುಪದ್ಧತಿ ಸಾಕಷ್ಟು ವ್ಯಾಪಕವಾಗಿ ಪ್ರಚಲಿತವಾಗಿದ್ದುದು ಸ್ಪಷ್ಟವಿದೆ.[೩]

**ಬಡತನ:**

ಆರ್ಥಿಕ ಬಡತನ ವ್ಯಕ್ತಿಗಳ ಸಾಮಾಜಿಕ ಸ್ಥಾನಮಾನಗಳನ್ನು ಕಡಮೆ ಮಾಡುತ್ತಿದ್ದಿತು. ಆದರೂ ಜಾತಿಗಳ ಪ್ರಾಬಲ್ಯ ಆ ಕಾಲದಲ್ಲಿ ಎಷ್ಟಿದ್ದಿತೆಂದರೆ ಹೊಲೆಯರಂತಹ ಜಾತಿಯಿಂದ ಬಂದ ವ್ಯಕ್ತಿ ಶ್ರೀಮಂತನಾದರೂ ಅವನಿಗೆ ಸಾಮಾಜಿಕವಾಗಿ

---

೧. (ರೈ) ಎಕ IX ಚನ್ನಪಟ್ಟಣ ೭೩ ಕ್ರಿ.ಶ. ೧೩೧೮.

೨. ಎಂಎಆರ್ ೧೯೩೩ ಮದ್ದೂರು ೪೮ ಕ್ರಿ.ಶ. ೧೧೮೫.

ಕೆಲವು ಕಡೆ ತೊತ್ತಿನ ಮಕ್ಕಳಿಗೆ ಆಸ್ತಿಯ ಹಕ್ಕನ್ನು ಕೊಡುವುದನ್ನು ಗಮನಿಸಿದರೆ, ಬಹುಶಃ ಪುರುಷನಿಟ್ಟುಕೊಂಡ ಹೆಣ್ಣು ತೊತ್ತಿನ ಮಕ್ಕಳೆಂದು ಅರ್ಥಮಾಡಬೇಕಾಗುತ್ತದೆ.

೩. ನೋಡಿ - ಪಿ.ವಿ. ನಾರಾಯಣ ಅವರ ವಚನ ವ್ಯಾಸಂಗ ಎಂಬ ಪುಸ್ತಕದಲ್ಲಿ 'ವಚನಗಳಲ್ಲಿ ತೊತ್ತು ವಿಚಾರ' ಎಂಬ ಲೇಖನ.

ಉನ್ನತ ಸ್ಥಾನ ದೊರೆಯುತ್ತಿರಲಿಲ್ಲವೆಂದು ಕಾಣುತ್ತದೆ[೧]. ಶ್ರೀಮಂತರು, ಧರ್ಮಗುಣ ಉಳ್ಳವರು ಬಡವರಿಗಾಗಿ ದೀನ ದುರ್ಬಲರಿಗಾಗಿ ಅನೇಕ ದಾನಕಾರ್ಯಗಳನ್ನು ಕೈಗೊಳ್ಳುತ್ತಿದ್ದರು.

ಒಂದು ತ್ರುಟಿತ ಶಾಸನ 'ಬಡವರ್ಬ್ಬಾಲಕರಂಧ ವೃದ್ಧ'[೨]ರಿಗೆ ನೀಡಿದ ದಾನವನ್ನು ತಿಳಿಸುತ್ತದೆ. ಅದು ಬಡವರಿಗೆ, ಬಾಲಕರಿಗೆ, ಕುರುಡರಿಗೆ ಮತ್ತು ವಯಸ್ಸಾದವರಿಗೆ ನೀಡಿದ ದಾನವನ್ನು ಸೂಚಿಸುತ್ತದೆ. ಅನೇಕ ದಾನಿಗಳು ಬಡವರಿಗಾಗಿ ನೀಡಿರುವ ದಾನಗಳನ್ನು ಗಮನಿಸಿದರೆ ಆ ಕಾಲದಲ್ಲಿಯೂ ಬಡತನ ಸಾಕಷ್ಟು ವ್ಯಾಪಕವಾಗಿ ಇದ್ದುದು ಸ್ಪಷ್ಟವಿದೆ. ಏಚಿಸೆಟ್ಟಿಯು ಗೊಣ್ಣಯಗೆಯ್ಯ ಹತ್ತುಮತ್ತೂರಿನಲ್ಲಿ ಬಡವರಿಗೆ ಅನ್ನವನ್ನು ಹಾಕಲು 'ವಿಶಿಖಾನೀಕ'ಗಳನ್ನೂ (?) ಐದು ಮತ್ತರನ್ನೂ ಮತ್ತು ಶಂಕರದೇವತಾರ್ಚನೆಗೆ ಐದು ಮತ್ತರನ್ನು ಬಿಟ್ಟಂತೆ ಶಾಸನದಿಂದ[೩] ತಿಳಿದುಬರುತ್ತದೆ. ಚೀಯಳ ಗೌಡನನ್ನು ಶಾಸನವೊಂದು 'ಬೇಡಿದಡಂ ಕುಡುವುದೆ ಮೆಯ್ಯೆನಿಸಿರ್ಪ್ಪಂ ಬಡನಂಟರ ಕಾಮಧೇನು' ಎಂದು ಕರೆಯುತ್ತದೆ.[೪] ಏಡೆವಾರಿದೇವನೆಂಬುವವನನ್ನು, ಬಡತನವೆಂದು ಬುಧಕೋಟಿ ಬೇಡಿದರೆ ಮನಸ್ಸು ಕೆಡುವಂತೆ ಹೋಗಿ ಮತ್ತೆ ಬನ್ನಿ ಎಂದು ಓಡಾಡಿಸದೆ ಸಂತೋಷದಿಂದ ಕರೆದು ಕೊಟ್ಟು ಕೈಮುಗಿಯುವವನಾಗಿದ್ದನೆಂದು ಶಾಸನ[೫]ವೊಂದು ತಿಳಿಸುತ್ತದೆ. ಸಾವಂತ ಮುಪ್ಪನು ಆಶ್ರಿತಜನರಿಗೆ ಕಲ್ಪವೃಕ್ಷದಂತೆಯೂ ಮಾನವರಿಗೆ ಕಾಮಧೇನುವಿನಂತೆಯೂ ವಂದಿಗಳಿಗೆ ಸುರಭೂಜದಂತೆಯೂ ಇದ್ದನೆಂದು ತಿಳಿಸುತ್ತದೆ.[೬] ಆದಿಗೌಂಡನೆಂಬ ವ್ಯಕ್ತಿಯ ಗುಣಾತಿಶಯಗಳನ್ನು ಒಂದು ಶಾಸನ ಹೀಗೆ ಹೇಳುತ್ತದೆ.

ಹಸಿದರ ಮೊಗಮಂ ನೋಡಂ
ಹಸಿವಂ ನೀರಟ್ಕೆಯಿಲ್ಲ ಕಂಡೊಡೆ ತನ್ನಂ
ವಸುಮತಿಗೆನಿಪ ಮಹಾಪ್ರಭು
ವಸುಧೆಯೊಳಾರ್ ಕಾಣ್ಬರಾದಿಗೌಂಡಂಗೆಣೆಯಂ
ಹಸುಗೂಸುಗಳ್ಗೆ ಹಾಲಂ
ಹಸಿದರ್ಗ್ಗನ್ನಮುಮನಟ್ಕಜಿಂದಂ ನಿಚ್ಚಂ
ಹಸಗಾಲದೊಳಂ ಸಲಿಸುವ
ಬೆಸನದಿನಾರಾದಿಗೌಂಡನಂ ಪೋಲ್ವನ್ನರ್[೭]

ಆದಿಗೌಂಡನು ಹಸಿದವರ ಮುಖವನ್ನು ನೋಡುತ್ತಿರಲಿಲ್ಲ (ಅಂದರೆ ಹಸಿದು ಬಂದವರ ಹಸಿವನ್ನು ಮೊದಲು ನಿವಾರಿಸುತ್ತಿದ್ದ), ಹಸಿವು ಬಾಯಾರಿಕೆಗಳು ಅವನನ್ನು ಕಂಡ ತಕ್ಷಣ ನಿವಾರಣೆಯಾಗುತ್ತಿದ್ದವು. ಎಳೆಯ ಮಕ್ಕಳಿಗೆ ಹಾಲನ್ನು, ಹಸಿದವರಿಗೆ ಅನ್ನವನ್ನು ನಿತ್ಯವೂ ಬರಗಾಲದಲ್ಲಿಯೂ ದೊರಕಿಸಿಕೊಡಬಲ್ಲವನಾಗಿದ್ದನು. ಶಾಸನ ಮುಂದುವರಿದು ಅವನಿಗೆ ಕೆರೆ, ಅರವಟ್ಟಿಗೆ, ಆರವೆಗಳನ್ನು ಮಾಡಿಸುವುದಲ್ಲದೆ ಅನ್ಯ ಕಾರ್ಯಗಳೇ ಇರಲಿಲ್ಲವೆಂದು ಹೇಳುತ್ತದೆ.

---

೧. ಧರ್ಮಾಮೃತಂ : 'ಪೊಲೆಯರ್ ಧನಕ್ಕೊಡೆಯರಾಗಿಯುಂ ಮೇಲ್ಜಾತಿಯಾಗದಂತೆ' ೧೧-೧೮೬.

೨. ಎಸ್ಐಐ XV ನವಲಗುಂದ ೨೧೭ ಕ್ರಿ.ಶ. ೧೨೦೫.

೩. ಎಸ್ಐಐ XVIII ನರಗುಂದ ಪೇಟೆ. ೧೬೦ ಕ್ರಿ.ಶ. ೧೨ ಶಮಾ. ಈ ಶಾಸನದಲ್ಲಿ ಬರುವ ವಿಶಿಖಾನೀಕಕ್ಕೆ (ವಿಶಿಖಾ =ಜುಟ್ಟಿಲ್ಲದ, ಅನೀಕ=ಗುಂಪು ಎಂಬ ಅರ್ಥವಿರುವುದಾದರೂ) ಶಾಸನ ಸಂದರ್ಭದಲ್ಲಿ ಅರ್ಥವಾಗುವುದಿಲ್ಲ.

೪. ಕಇ I ಸೌಂದತ್ತಿ ೨೪ ಕ್ರಿ.ಶ. ೧೧೪೮.

೫. (ರೈ) ಎಕ VII ಚನ್ನಗಿರಿ ೩೮ ಕ್ರಿ.ಶ. ೧೧೪೯.

೬. (ರೈ) ಎಕ VII ಶಿಕಾರಿಪುರ ೧೯೮ ಕ್ರಿ.ಶ. ೧೨೫೬.

೭. (ರೈ) ಎಕ V ಬೇಲೂರು ೧೩೭ ಕ್ರಿ.ಶ. ೧೧೮೨.

ಕೆಲವು ಶ್ರೀಮಂತರು ದಾನಧರ್ಮಗಳಿಗೆ ಹಣವನ್ನು ವೆಚ್ಚಮಾಡದೆ ಅದನ್ನು ನೆಲದಡಿ ಹೂಳಿಡುತ್ತಿದ್ದರು. ಅಂಥವರನ್ನು ಶಾಸನಗಳು ಟೀಕಿಸಿರುವುದುಂಟು.[೧]

ಕೆಲವು ಶೈವ ಯತಿಗಳು ದೀನ ಅನಾಥರ ಬಗ್ಗೆ ವಿಶೇಷ ಕಾಳಜಿ ವಹಿಸುತ್ತಿದ್ದುದು ಕಂಡುಬರುತ್ತದೆ. ಕಡಲೆವಾಡದ ಹಿರಿಯ ಮಠದಾಚಾರ್ಯರಾದ ಸೋಮರಾಶಿಪಂಡಿತದೇವರನ್ನು 'ದೀನಾನಾಥ ಜಠರದಾವಕಪಾವಕ ನಿವಾರಣ ನಿಜಸಮಯ ಶರಣೈಕರಕ್ಷದಕ್ಷ...'[೨] ಎಂದು ಶಾಸನವೊಂದು ಕೀರ್ತಿಸುತ್ತದೆ. ಬಡಜನರ, ಅನಾಥರ ಜಠರದ ಅಗ್ನಿಯನ್ನು ನಿವಾರಿಸುವವರೆಂದು ಕೀರ್ತಿಸಲಾಗಿದೆ. ಇದೇ ರೀತಿ ದೀನಾನಾಥರಿಗಾಗಿ ಶೈವಯತಿಗಳು ಮಾಡಿದ ದಾನಕಾರ್ಯಗಳನ್ನು ಶಾಸನಗಳು ತಿಳಿಸುತ್ತವೆ.[೩]

**ಒತ್ತಾಯದ ದುಡಿಮೆಗಳು:**

ರಾಜರು ಅಥವಾ ಅಧಿಕಾರಿಗಳು ಅನೇಕ ಸಂದರ್ಭಗಳಲ್ಲಿ ಪ್ರತಿಫಲವನ್ನು ನೀಡದೆ ಜನರಿಂದ ದುಡಿಸಿಕೊಳ್ಳುತ್ತಿದ್ದರು. ಈ ರೀತಿ ಪ್ರಜೆಗಳಿಂದ ದುಡಿಸಿಕೊಳ್ಳುವ ಪದ್ಧತಿ ಪ್ರಾಚೀನ ಭಾರತದಾದ್ಯಂತ ಬಳಕೆಯಲ್ಲಿದ್ದಂತೆ ತಿಳಿದುಬರುತ್ತದೆ. ಸಹಜವಾಗಿ ಕರ್ನಾಟಕದಲ್ಲಿಯೂ ಈ ಪದ್ಧತಿ ಬಳಕೆಯಲ್ಲಿದ್ದಿತು. ಮನುಸ್ಮೃತಿ, ಅರ್ಥಶಾಸ್ತ್ರ, ಮಹಾಭಾರತ ಮುಂತಾದ ಕೃತಿಗಳಲ್ಲಿ ಇಂಥ ಒತ್ತಾಯದ ದುಡಿಮೆಗಳ ವಿಷಯ ( 'ವಿಷ್ಟಿ' ) ಉಲ್ಲೇಖವಾಗಿದೆ.[೪]

ಕರ್ನಾಟಕದಲ್ಲಿ ಇದು ಪ್ರಚಲಿತವಾಗಿದ್ದ ಪದ್ಧತಿಯಾಗಿದ್ದಿತು. ಅನೇಕ ಶಾಸನಗಳು ಮೂವಿಟ್ಟಿಯನ್ನು ಉಲ್ಲೇಖಿಸುತ್ತವೆ.[೫] ಮೂವಿಟ್ಟಿ ಎನ್ನುವುದು ಜನಗಳು ಮಾಡಬೇಕಾದ ಮೂರು ರೀತಿಯ ಬಿಟ್ಟಿಗಳನ್ನು ತಿಳಿಸುತ್ತದೆ. ರಾಜನು ಯುದ್ಧಕ್ಕಾಗಿ ಒಂದು ಪ್ರದೇಶದ ಮೇಲೆ ಹಾದುಹೋದರೆ ಯುದ್ಧ ಪೂರ್ವದಲ್ಲಿ ಮತ್ತು ಯುದ್ಧದಲ್ಲಿ ಮತ್ತು ಯುದ್ಧಾನಂತರ ಅನೇಕ ರೀತಿಯ ಬಿಟ್ಟಿಗಳನ್ನು ಮಾಡಿಸುತ್ತಿದ್ದನು. ಅವು ಮೂರು ರೀತಿ. ೧. 'ಶೋಧನ ಕರ್ಮ-ಮಾರ್ಗ ಮಧ್ಯದ ರಸ್ತೆಯನ್ನು ಸರಿಪಡಿಸುವುದು; ಸೇತುವೆ, ನದಿ, ಬಾವಿ ಇತ್ಯಾದಿಗಳನ್ನು ಪರೀಕ್ಷಿಸುವುದು. ೨. ವಹನಕರ್ಮ-ಆಯುಧ, ಕವಚ, ಧಾನ್ಯ ಮುಂತಾದವನ್ನು ಹೊರುವುದು. ೩. ಅಪನಯನಕರ್ಮ-ಪೆಟ್ಟು ತಿಂದು ಬಿದ್ದ ಸೈನಿಕರನ್ನು ಅವರ ಆಯುಧ ಸಮೇತ ಹೊರುವುದು'[೬]. ಇಂಥ ಬೇರೆ ಬೇರೆ ಬಿಟ್ಟಿಗಳನ್ನು ಯುದ್ಧವಿರದ ಸಮಯಗಳಲ್ಲೂ ಮಾಡಿಸುತ್ತಿದ್ದರೆಂದು ಸ್ಪಷ್ಟವಿದೆ. ಬಿಟ್ಟಿಗಳು ಜನರಿಗೆ ಬಹು ಭಯಂಕರವಾಗಿ ಕಂಡುಬರುತ್ತಿದ್ದವು. ಬಹಳಷ್ಟು ಜನರು ಬಿಟ್ಟಿಯಿಂದ ವಿನಾಯಿತಿ ಪಡೆಯಲು ಪ್ರಯತ್ನಿಸುತ್ತಿದ್ದರು. ಅನೇಕ ಶಾಸನಗಳಲ್ಲಿ 'ಬಿಟ್ಟಿ' ಎಂಬ ಉಲ್ಲೇಖವಿದೆ.[೭] ಬಿಟ್ಟಿ ದುಡಿಯುವುದು ಒಂದು ರೀತಿ ದಾಸ್ಯದ ಸಂಕೇತವೂ ಆಗಿದ್ದಿತು. ಶಾಸನಗಳನ್ನು ಗಮನಿಸಿದರೆ ಮತ್ತು ಅದು ಶಾಸನಗಳಲ್ಲಿ ಬರುವ ಆವರಣವನ್ನು ನೋಡಿದರೆ ಶ್ರಮರೂಪದ ತೆರಿಗೆಯಂತೆಯೂ ಭಾಸವಾಗುತ್ತದೆ.

---

೧. (ರೈ) ಎಕ V ಹಾಸನ ೭೬ ಕ್ರಿ.ಶ. ೧೧೬೮.

೨. ಎಸ್‌ಐಐ XX ಸಿಂದಗಿ ೧೨೭ ಕ್ರಿ.ಶ. ೧೧೮೬.

೩. ಎಸ್‌ಐಐ XVIII ಬಂಕಾಪುರ ೨೯೦ ಕ್ರಿ.ಶ. ೧೧೭೮.

೪. S. G. Ghatapanadi : 'Forced labor n Ancient and Medieval Karnataka' ಜೆಕೆಯು XII. ಪು.೧೪೬.

೫. (ರೈ) ಎಕ XI ದಾವಣಗೆರೆ ೩೨ ಕ್ರಿ.ಶ. ೧೧೭೧; (ಮೈ) ಎಕ II ಶ್ರವಣಬೆಳಗೊಳ ೬೯, ಕ್ರಿ.ಶ. ೧೨ ಶಮಾ. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

೬. ಕಶಾಸಾಂಅ, ಪು. ೨೫೬.

೭. ಎಸ್‌ಐಐ XVIII ಬಿಜಾಪುರ ೩೭೭ ಕ್ರಿ.ಶ. ೧೨೪೧; ಎಸ್‌ಐಐ XV ರೋಣ ೭೪ ಕ್ರಿ.ಶ. ೧೧೯೪.

ಕೆಲವು ಶಾಸನಗಳಲ್ಲಿ ಕಂಡುಬರುವ ಕಡ್ಡಾಯವೂ[೧] ಕೂಡ ಶ್ರಮರೂಪದ ತೆರಿಗೆಯಂತೆ ಭಾಸವಾಗುತ್ತದೆ. ಆದರೆ ಇದರ ಸ್ವರೂಪ ಶಾಸನಗಳಿಂದ ಸ್ಪಷ್ಟವಾಗುವುದಿಲ್ಲ.

ಬಿಟ್ಟಿಯಂತೆ ಒತ್ತಾಯದ ದುಡಿಮೆಗಳಲ್ಲಿ ಕೊಟ್ಟಣವೂ ಒಂದಾಗಿದ್ದಿತು. ಬತ್ತವನ್ನು ಒತ್ತಾಯಪೂರ್ವಕವಾಗಿ ಪ್ರತಿಫಲವಿಲ್ಲದೆ ಕುಟ್ಟುವ ಕಾರ್ಯವನ್ನು 'ಕೊಟ್ಟಣಹಾಕಿಸು' ಎಂದು ಕರೆಯುತ್ತಿದ್ದರು. ಇದು ಕನ್ನಡದ ಸಿದ್ಧರಾಮ ಚಾರಿತ್ರ, ಆಮುಗಿದೇವಯ್ಯಗಳ ಸಾಂಗತ್ಯ, ಬಸವ ಪುರಾಣ, ಸಾನಂದ ಚರಿತೆ, ಶಂಕರದಾಸಿಮಯ್ಯನ ಪುರಾಣ ಮುಂತಾದ ಕೃತಿಗಳಲ್ಲಿ ಉಲ್ಲೇಖಗೊಂಡಿದೆ.[೨] ಸಾರ್ವಜನಿಕವಾದ ಅಥವಾ ವೈಯಕ್ತಿಕವಾದ ಕಾರ್ಯಗಳಿಗಾಗಿ ಬಹುದೊಡ್ಡ ಪ್ರಮಾಣದ ಅಕ್ಕಿ ಅಗತ್ಯವಾದಾಗ ಬತ್ತವನ್ನು ಆ ಊರಿನ ಪ್ರತಿಯೊಬ್ಬರ ಮನೆಗಳಿಗೆ ಕಳುಹಿಸಿ ನಿರ್ದಿಷ್ಟ ದಿನಗಳೊಳಗೆ ಕುಟ್ಟಿ ಅಕ್ಕಿಯನ್ನು ಹಿಂತಿರುಗಿಸುವಂತೆ ಮಾಡಲಾಗುತ್ತಿತ್ತು. ಬಿಟ್ಟಿಯಿಂದ ವಿನಾಯಿತಿಯನ್ನು ಪಡೆಯುತ್ತಿದ್ದಂತೆ ಕೊಟ್ಟಣದಿಂದಲೂ ಕೆಲವರು ವಿನಾಯಿತಿ ಪಡೆಯಲು ಪ್ರಯತ್ನಿಸುತ್ತಿದ್ದರೆಂದು ಕಾಣುತ್ತದೆ. ಒಂದು ಶಾಸನ ಆ ರೀತಿ ಚಿಕ್ಕಪುರಕ್ಕೆ ಅಂಥ ವಿನಾಯಿತಿಯನ್ನು ಕೊಟ್ಟಂತೆ ತಿಳಿಸುತ್ತದೆ.[೩] ಕೆಲವು ಸಾರಿ ರಾಜನು ಕೊಟ್ಟಣ ಕುಟ್ಟಿಸುವ ಅಧಿಕಾರವನ್ನು ದೇವಸ್ಥಾನಗಳಿಗೆ, ಬ್ರಾಹ್ಮಣರಿಗೆ ವರ್ಗಾಯಿಸಿ ಕೊಡುತ್ತಿದ್ದುದೂ ಉಂಟು.[೪]

## ಸಮಾಜದಲ್ಲಿ ಸ್ತ್ರೀಯರಿಗಿದ್ದ ಸ್ಥಾನ

### ಕೌಟುಂಬಿಕ ನೆಲೆ:

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬಕ್ಕೆ ಪ್ರಮುಖವಾದ ಸ್ಥಾನವಿದೆ. ಅದು ಪುಟ್ಟ ಘಟಕವಾದರೂ ಸಾಮಾಜಿಕವಾಗಿ ಪ್ರಾಥಮಿಕ ಘಟಕವಾಗಿದೆ. ಮಾನವ ಸಮಾಜಜೀವಿಯಾಗಿರುವಂತೆ ಮೂಲಭೂತವಾಗಿ ಕುಟುಂಬ ಜೀವಿಯೇ ಆಗಿರುತ್ತಾನೆ. ಮಾನವನ ಎಲ್ಲ ಮೂಲಭೂತ ಅಗತ್ಯಗಳು ಸಾಮಾನ್ಯವಾಗಿ ಕೌಟುಂಬಿಕ ನೆಲೆಯಲ್ಲಿ ನೆರವೇರುತ್ತವೆ. ಹುಟ್ಟು, ಬಾಲ್ಯ, ಯೌವನ, ಪ್ರೌಢ, ವೃದ್ಧಾಪ್ಯ, ಮರಣ ಈ ಎಲ್ಲವೂ ಕೌಟುಂಬಿಕ ನೆಲೆಯಲ್ಲಿ ಸಾಗಿ ಬರುವುದನ್ನು ಕಾಣಬಹುದು.

ವ್ಯಕ್ತಿಗಳ ಸೌಖ್ಯ ಸಾಧಾರಣವಾಗಿ ಕೌಟುಂಬಿಕ ಸೌಖ್ಯದ ಮೇಲೆ ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ಪುರುಷನು ಕುಟುಂಬದ ಆಹಾರ, ವಸ್ತ್ರ ಮತ್ತು ರಕ್ಷಣೆಗಾಗಿ ದುಡಿಯುತ್ತಾನೆ. 'ಪಡೆವರ್ ಪೊಂಗಳನೆಲ್ಲರುಂ ತಮಗುಣಲ್ ಪೆಂಡಿರ್ಗೆ ಮಕ್ಕಳ್ಗೆ ಬಯಿತ್ತಿಡಲಂತಲ್ತು' ಎಂದು ಒಂದು ಶಾಸನ ಹೇಳುತ್ತದೆ.[೫] ಇನ್ನೊಂದು ಶಾಸನ ಒಬ್ಬ ವ್ಯಕ್ತಿ ಸುಖಿಯಾಗಿರಬೇಕಾದರೆ ಅರ್ಥ, ಹೆಂಡಿರು, ಪುತ್ರ, ಬಂಧುವರ್ಗ, ಗೋತ್ರ, ಸ್ವಾಮಿಯ ಸಂಪತ್ತಿ ಇರಬೇಕೆಂದು ತಿಳಿಸುತ್ತದೆ.[೬]

ಧರ್ಮ, ಆಡಳಿತ, ವಿದ್ಯಾಭ್ಯಾಸ ಮುಂತಾದ ಕ್ಷೇತ್ರಗಳಲ್ಲಿ ಪುರುಷರು ಪಡೆದಿದ್ದ ವಿವಿಧ ಸ್ಥಾನಮಾನಗಳನ್ನು ಉದ್ದಕ್ಕೂ ಈಗಾಗಲೇ ಗಮನಿಸಲಾಗಿದೆ. ಪುರುಷ ಪ್ರಧಾನ ಸಮಾಜವಾಗಿ ಕಾಣುವ ಆ ಸಮಾಜದಲ್ಲಿ ಸ್ತ್ರೀಯರಿಗಿದ್ದ ಅಲ್ಪಾವಕಾಶಗಳನ್ನು, ಆ ಅವಕಾಶಗಳಲ್ಲೇ ಅವರು ಪ್ರಕಟಿಸಿದ ಸಾಮರ್ಥ್ಯ ಪ್ರೌಢಿಮೆ ಮುಂತಾದ ಅಂಶಗಳನ್ನು ಅಲ್ಲಲ್ಲಿ ಗಮನಿಸಿದ್ದೇವೆ. ಇನ್ನು ಮುಂದೆ ಆ ಕಾಲದ ಕರ್ನಾಟಕದಲ್ಲಿ ಸ್ತ್ರೀಯರಿಗಿದ್ದ ಸ್ಥಾನಮಾನವನ್ನು ಚರ್ಚಿಸಲಾಗುವುದು.

---

೧. (ರೈ) ಎಕ IX ಕಾನಕಾನಹಳ್ಳಿ ೩೦ ಕ್ರಿ.ಶ. ೧೩೩೭; (ರೈ) ಎಕ XI ಚಿತ್ರದುರ್ಗ ೯ ಕ್ರಿ.ಶ. ೧೩೩೫.

೨. ಎಂ. ಚಿದಾನಂದ ಮೂರ್ತಿ : 'ಕೊಟ್ಟಣಹಾಕಿಸು' ಎಂದರೇನು? ಸಂಶೋಧನ ತರಂಗ-೨, ಪು. ೨೪೬-೨೫೩.

೩. (ರೈ) ಎಕ XI ಚಿತ್ರದುರ್ಗ ೯ ಕ್ರಿ.ಶ. ೧೩೩೫.

೪. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೨೫೨.

೫. (ರೈ) ಎಕ V ಹಾಸನ ೭೬ ಕ್ರಿ.ಶ. ೧೧೬೫.

೬. (ರೈ) ಎಕ VI ಕಡೂರು ೧೨೪ ಕ್ರಿ.ಶ. ೧೨೭೨(?)

ಸ್ತ್ರೀಯರ ವಿಷಯದಲ್ಲಿ ಸಮಾಜವು ತೋರ್ಪಡಿಸಿದ ಮನೋಭಾವ ಏಕರೂಪದಲ್ಲಿ ಇಲ್ಲ. ಭಾರತದ ಸಾಮಾಜಿಕ ಇತಿಹಾಸವನ್ನು ಗಮನಿಸಿದರೆ ಕಾಲಕಾಲಕ್ಕೆ ಸ್ತ್ರೀಯರ ವಿಷಯದಲ್ಲಿ ಬದಲಾಗುತ್ತಾ ಬಂದಿರುವ ಮನೋಭಾವ ಎದ್ದು ಕಾಣುತ್ತದೆ. ವೈದಿಕ ಯುಗದಲ್ಲಿ ಸ್ತ್ರೀಯರಿಗಿದ್ದ ಪ್ರಾಮುಖ್ಯ ಋಗ್ವೇದದನಂತರ ಕ್ರಮಕ್ರಮೇಣ ಇಳಿಯುತ್ತಾ ಹೋಗಿರುವುದು ಕಂಡುಬರುತ್ತದೆ. ಯಾವಾಗ ಸ್ತ್ರೀ ವಿದ್ಯಾಭ್ಯಾಸದಿಂದ, ಉಪನಯನದಿಂದ ವಂಚಿತಳಾದಳೋ ಅಂದಿನಿಂದ ಕ್ರಮೇಣ ಅವಳ ಸ್ಥಾನ ಸಾಮಾಜಿಕವಾಗಿ ಇಳಿಮುಖವಾಗತೊಡಗಿತು. ಸ್ತ್ರೀಯನ್ನು 'ಮಾತೃ ದೇವೋಭವ' ಎಂದು ಅತ್ಯಂತ ಉದಾತ್ತೀಕರಣದಿಂದ ಹೇಳಿದಂತೆ ಅವಳು ಸ್ವಾತಂತ್ರಕ್ಕೇ ಅರ್ಹಳಲ್ಲ ಎಂದೂ ಹೇಳಿರುವುದುಂಟು. ಅನೇಕ ನಿರ್ಬಂಧಗಳಲ್ಲಿ ಸ್ತ್ರೀಯರನ್ನು ಇಡಲಾಯಿತು. ಮನುಧರ್ಮಸ್ಮೃತಿಯು 'ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ರಕ್ಷಂತಿ ಸ್ಥಾವಿರೇ ಪುತ್ರಾ ನಸ್ತ್ರೀ ಸ್ವಾತಂತ್ರ್ಯ ಮರ್ಹತಿ'[೧] ಎಂದು ಹೇಳಿದೆ. ಚಿಕ್ಕ ವಯಸ್ಸಿನಲ್ಲಿ ತಂದೆಯ ರಕ್ಷಣೆಯಲ್ಲಿಯೂ ಯೌವನದಲ್ಲಿ ಗಂಡನ ರಕ್ಷಣೆಯಲ್ಲಿಯೂ ಅನಂತರದ ಕಾಲದಲ್ಲಿ ಮಕ್ಕಳ ರಕ್ಷಣೆಯಲ್ಲಿರುವ ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲವೆಂದು ಅದು ಹೇಳುತ್ತದೆ.

**ಹುಟ್ಟು:**

ಗಂಡುಮಗುವಿನ ಜನನವನ್ನು ಉತ್ಸಾಹದಿಂದ ಸ್ವಾಗತಿಸುತ್ತಿದ್ದಂತೆ ಹೆಣ್ಣು ಮಗುವಿನ ಜನನವನ್ನು ಸ್ವಾಗತಿಸುತ್ತಿದ್ದಂತೆ ಕಂಡುಬರುವುದಿಲ್ಲ. ಗಂಡುಮಗುವಿನ ಜನನಕ್ಕಾಗಿ ನಾನಾ ವ್ರತನಿಯಮಗಳನ್ನು ಅನುಸರಿಸುತ್ತಿದ್ದುದು ಕಂಡುಬರುತ್ತದೆ. ನಿದರ್ಶನವಾಗಿ ಸಾಚಿಸೆಟ್ಟಿ ಎಂಬುವನು ತನ್ನ ಭಾರ್ಯಾಸಹಿತವಾಗಿ ನಾನಾ ವ್ರತಗಳನ್ನು ಮಾಡಿ ಶ್ರೀನಾಥನನ್ನು ಅರ್ಚಿಸಿ ಕೈಹಿಸೆಟ್ಟಿಯೆಂಬ ಮಗನನ್ನು ಪಡೆದಂತೆ ಶಾಸನವೊಂದರಲ್ಲಿ ಹೇಳಲಾಗಿದೆ.[೨] ಇನ್ನೊಂದು ಶಾಸನದಲ್ಲಿ ಶಂಕರಾರ್ಯ ಎಂಬುವನು ಕೊಪ್ಪದೀಶ್ವರ ಪಾದಾಂಬುಜವನ್ನು ಅರ್ಚಿಸಿ, ಮಡದಿಯೊಂದಿಗೆ ವ್ರತ ನಿಯಮಗಳನ್ನು ಮಾಡಿ, ಆ ದೇವರ ವರಪ್ರಸಾದದಿಂದ ಕೊಪ್ಪದೇವನೆಂಬ ಮಗನನ್ನು ಪಡೆದ ವಿಷಯ ಬರುತ್ತದೆ.[೩] ಹೀಗೆ ಗಂಡು ಮಗುವಿನ ಜನನಕ್ಕೆ ಮಾಡುತ್ತಿದ್ದ ವ್ರತ ಪೂಜೆಗಳನ್ನು ಹೆಣ್ಣುಮಗುವಿಗಾಗಿ ಮಾಡಿದಂತೆ ಯಾವ ಶಾಸನವೂ ನಿರೂಪಿಸಿಲ್ಲ.

**ವಿದ್ಯಾಭ್ಯಾಸ:**

ಸ್ತ್ರೀಯರ ಸ್ಥಾನಮಾನಗಳು ಏರಿಳಿತಗಳನ್ನು ಕಂಡಿರುವಂತೆ ಅವರ ವಿದ್ಯಾಭ್ಯಾಸವೂ ಏರಿಳಿತಗಳನ್ನು ಕಂಡಿರುವುದು ಗಮನಾರ್ಹ ಸಂಗತಿಯಾಗಿದೆ. ವೈದಿಕ ಯುಗದಲ್ಲಿ ವೈದಿಕ ಮಂತ್ರಗಳನ್ನು ರಚಿಸುವಷ್ಟು ಪಂಡಿತೆಯರಾಗಿದ್ದ ಸ್ತ್ರೀಯರು ಧರ್ಮಶಾಸ್ತ್ರಗಳ ಕಾಲಕ್ಕೆ ಕ್ರಮೇಣ ತೀರಾ ಇಳಿಮುಖ ಕಂಡು ವಿದ್ಯೆಯಿಂದ ದೂರ ಇಡಲ್ಪಟ್ಟರು. ಸ್ತ್ರೀಯರು ಉಪನಯನದಿಂದ ವಂಚಿತರಾದುದು[೪] ಮತ್ತು ಸ್ತ್ರೀಯರ ಮದುವೆಯ ವಯಸ್ಸು ಹದಿನಾರರಿಂದ ಹತ್ತು ಅಥವಾ ಹನ್ನೊಂದಕ್ಕೆ ಇಳಿದದ್ದು[೫] ಅವರ ವಿದ್ಯಾಭ್ಯಾಸದ ಹಿನ್ನಡೆಗೆ ಬಹುದೊಡ್ಡ ಕಾರಣಗಳಾಗಿ ಪರಿಣಮಿಸಿದವು. ಕ್ರಿ.ಶ. ೧೨೦೦ರ ಹೊತ್ತಿಗೆ ಶ್ರೀಮಂತ ಮನೆತನದ ಹೆಣ್ಣು ಮಕ್ಕಳು ಮಾತ್ರ ಪ್ರತ್ಯೇಕ ಉಪಾಧ್ಯಾಯರನ್ನು ಇಟ್ಟುಕೊಂಡು ವಿದ್ಯಾಭ್ಯಾಸ ಮಾಡತೊಡಗಿದರು ಎಂದು ಎ.ಎಸ್. ಆಲ್ಟೇಕರ್ ಅವರು ಅಭಿಪ್ರಾಯಪಡುತ್ತಾರೆ.[೬]

---

೧. ಮನುಸ್ಮೃತಿ, ೯:೩.

೨. ಎಸ್ಐಐ XV ಬಾಗೇವಾಡಿ ೧೧೧ ಕ್ರಿ.ಶ. ೧೧೬೫.

೩. ಎಇ XII ಸುರಪುರ ೩೨ ಕ್ರಿ.ಶ. ೧೦೭೭; ಯಾವ ದೇವರಿಗೆ ವಿಶೇಷವಾಗಿ ಪೂಜಿಸಿ ಹರಕೆ ಹೊತ್ತಿರುತ್ತಾರೊ ಆ ದೇವರ ಹೆಸರನ್ನು ಮಕ್ಕಳಿಗೆ ಇಡುವ ಸಂಪ್ರದಾಯ ಕಂಡುಬರುತ್ತದೆ. ಅದು ಈಗಲೂ ಪ್ರಚಲಿತವಿದೆ.

೪. K. M. Kapadia : Marriage and Family in India ಪು. ೨೫೩.

೫. A. S. Altekar : Education in Ancient India ಪು. ೨೪೪.

೬. ಅದೇ, ಪು. ೩೫೫.

ಅತ್ಯಂತ ವಿರಳವಾದ ಸಾವಿನಿರ್ಮಡಿಯಂತಹ[೧] ವಿದ್ಯಾವಂತೆಯ (ಕ್ರಿಶ. ಸು. ೯೦೦) ನಿದರ್ಶನವನ್ನು ಬಿಟ್ಟರೆ ಉನ್ನತ ವಿದ್ಯಾಭ್ಯಾಸ ಮಾಡಿದ ಸ್ತ್ರೀಯರ ಉಲ್ಲೇಖಗಳು ಶಾಸನಗಳಲ್ಲಿ ಇಲ್ಲವೆಂದೇ ಹೇಳಬಹುದು. ಆದರೂ ರಾಣಿಯರು ಮತ್ತು ದೊಡ್ಡ ಅಧಿಕಾರಿಗಳ ಮಡದಿಯರು, ಹೆಣ್ಣು ಮಕ್ಕಳು ತಕ್ಕಮಟ್ಟಿಗೆ ವಿದ್ಯಾವಂತೆಯರಾಗಿದ್ದಂತೆ ಕಂಡು ಬರುತ್ತದೆ. ಇವರ ವಿದ್ಯಾಭ್ಯಾಸ ಅಧಿಕವಾಗಿ ನರ್ತನ, ಸಂಗೀತ, ಕಲೆಗಳಂತಹ ವಿಷಯಗಳಲ್ಲಿ ನಡೆಯುತ್ತಿದ್ದಿತೆಂದು ಭಾವಿಸಲು ಅವಕಾಶವಿದೆ.

ವಿಷ್ಣುವರ್ಧನನ ಮಡದಿ ರಾಣಿ ಶಾಂತಲೆ ಕಲೆಯಲ್ಲಿ ಉನ್ನತ ಸಾಧನೆ ಪಡೆದಿದ್ದುದು ಪ್ರಸಿದ್ಧವಾಗಿದೆ. ಕಳಚೂರ್ಯ ಸೋವಿದೇವನ ರಾಣಿ ಸೋವಲಾದೇವಿ ಕ್ರಿ.ಶ. ೧೧೭೪ ರಲ್ಲಿ ತನ್ನ ದೇಶದ ಹಾಗೂ ಇತರ ದೇಶಗಳ ಕಲಾಪರಿಣತರ ಸಭೆಯಲ್ಲಿ ನೃತ್ಯ ಪ್ರದರ್ಶಿಸಿ ಅವರನ್ನು ಅಮಿತವಾಗಿ ಸಂತೋಷಪಡಿಸಿದ ವಿಷಯ ತಿಳಿದು ಬರುತ್ತದೆ.[೨]

ವಿಷ್ಣುವರ್ಧನನ ರಾಣಿ ಬಮ್ಮಲೆಯನ್ನು ಒಂದು ಶಾಸನ ಅಶ್ವವಿದ್ಯೆಯಲ್ಲಿ ಪಾರಂಗತಳೆಂದೂ ಮತ್ತು ಅಶ್ವ ಹೃದಯವನ್ನರಿಯುವ ಜಾಣ್ಮೆ ಅವಳಿಗೆ ಸಾಧಿಸಿತ್ತು ಎಂದು ಹೇಳುತ್ತದೆ.[೩] ಸಾಮಾನ್ಯವಾಗಿ ಪುರುಷರಿಗೆ ಮೀಸಲಾದ ಈ ವಿದ್ಯೆಯಲ್ಲಿ ಅವಳು ಪರಿಣತಿ ಪಡೆದಿದ್ದ ವಿಷಯವು ವಿರಳವೂ ಮತ್ತು ಗಮನಾರ್ಹವೂ ಆಗಿದೆ.

ಪ್ರಾಚೀನ ಕರ್ನಾಟಕದ ಅನೇಕ ರಾಣಿಯರು ರಾಜ್ಯದ ವಿವಿಧ ಭಾಗಗಳ ಆಡಳಿತವನ್ನು ವಹಿಸಿಕೊಂಡು ಆಡಳಿತ ಮಾಡುತ್ತ ರಾಜನ ಆಡಳಿತದ ಹೊಣೆಯನ್ನು ಹಗುರುಗೊಳಿಸಿರುವುದು ಕರ್ನಾಟಕದ ವೈಶಿಷ್ಟ್ಯವಾಗಿದೆ. ರಾಜ್ಯದ ಹೊಣೆಯನ್ನು ಹೊತ್ತ ರಾಣಿಯರ ಆಡಳಿತದ ವಿಷಯವನ್ನು ಮುಂದಿನ ಅಧ್ಯಾಯವೊಂದರಲ್ಲಿ ಚರ್ಚಿಸಲಾಗುವುದು. ರಾಜ್ಯದ ಆಡಳಿತ ವಿಷಯಗಳಲ್ಲಿ ಸಮರ್ಥವಾಗಿ ಭಾಗವಹಿಸುವ ಸಾಮರ್ಥ್ಯ ಪ್ರಕಟಿಸಿರುವುದನ್ನು ನೋಡಿದರೆ ಅವರಿಗೆ ಅದಕ್ಕೆ ಅಗತ್ಯವಾದ ಶಿಕ್ಷಣ ಲಭ್ಯವಾಗಿದ್ದಿತೆಂದು ಗ್ರಹಿಸಬೇಕಾಗುತ್ತದೆ.

ಅನೇಕ ಅಧಿಕಾರಿಗಳ ಮಡದಿಯರು ವಿದ್ಯಾವಂತೆಯರಾಗಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ವೀರ ಚೌಂಡರಸನೆಂಬುವನ ಪತ್ನಿ ದೇಮಲದೇವಿಯನ್ನು 'ದ್ವಿತೀಯ ಲಕ್ಷ್ಮೀ ಸೂನೆ (=ಭೂಮಿ) ಅಭಿನವ ಸರಸ್ವತಿ' ಎಂದು ಶಾಸನವೊಂದು ಕರೆದಿದೆ.[೪] ಮಂಡಳೇಶ್ವರ ಮಲ್ಲಿದೇವ ಚೋಳನ ಮಡದಿ ಸೀತಾದೇವಿಯನ್ನು 'ಶ್ರವ್ಯಕಾವ್ಯ ದಿವ್ಯಗೀತ ವಾದ್ಯನ್ರಿತ್ಯಾದಿ ವಿದ್ಯಾಪ್ರವೀಣೆ' ಎಂದೂ 'ಕವಿಗಮಕಿವಾದಿವಾಗ್ಮಿ ವೈತಾಳಿಕಪಾಠಕಾದಿಜನಪರಿತುಷ್ಟೆ ಶಿಷ್ಟೇಷ್ಟಜನ ಸನ್ತುಷ್ಟೆ'[೫] ಎಂದೂ ಹೇಳುತ್ತದೆ. ಇದರಿಂದ ಅವಳು ವಿದ್ಯಾವಂತೆಯಾಗಿದ್ದಂತೆ ಅವಳು ಕವಿ, ಗಾಯಕ, ವಿದ್ಯಾವಂತರನ್ನು ಪ್ರೋತ್ಸಾಹಿಸುತ್ತಿದ್ದ ವಿಷಯ ನಿರೂಪಿತವಾಗಿದೆ.

ಅನೇಕ ಸ್ತ್ರೀಯರು ವಿದ್ಯೆಯಿಂದ ಸ್ವತಃ ವಂಚಿತರಾಗಿದ್ದರೂ ವಿದ್ಯೆಗೆ ಪ್ರೋತ್ಸಾಹ ನೀಡಿರುವುದು ಒಂದು ರೀತಿಯಲ್ಲಿ ವಿಪರ್ಯಾಸವಾಗಿದೆ. ಷಡಂಗಿಯರ ಮಗ ಪದ್ಮಣ್ಣನ ಮಗಳು ಧರ್ಮಿಯಕ್ಕ ತಾನು ಮಾಡಿಸಿದ ಎಡಗೇರಿಯ ಬಡವಾಗಿಲ ಶ್ರೀ

---

೧. (ರೈ) ಎಕ X ಬೌರಿಂಗ್ ಪೇಟೆ ೬೫ ಕ್ರಿ.ಶ. ಸು. ೯೦೦. ಸಾವಿನಿರ್ಮಡಿಯ ಶಾಸನ ಶಿಲ್ಪದಲ್ಲಿ ಅವಳು ಕೈಯಲ್ಲಿ ತಾಳೆಗರಿಯ ಕಟ್ಟನ್ನು ಹಿಡಿದಂತೆ ಕಂಡರಿಸಲಾಗಿದೆ. ಜ್ಯೋತ್ಸ್ನಾಕಾಮತ್ ಅವರ ಕರ್ನಾಟಕದ ಶಿಕ್ಷಣ ಪರಂಪರೆ ಪುಸ್ತಕದಲ್ಲಿ (೬೨ನೆಯ ಚಿತ್ರ) ಈ ಶಿಲ್ಪದ ಚಿತ್ರವನ್ನು ನೋಡಬಹುದು.

೨. ಜಿ.ಎಸ್. ದೀಕ್ಷಿತ್ : 'ಶಿಕ್ಷಣ ಮತ್ತು ವಿಜ್ಞಾನ' ಕರ್ನಾಟಕದ ಪರಂಪರೆ, ಪು. ೪೨೧.

೩. ಚನ್ನಕ್ಕ ಎಲಿಗಾರ : ಪ್ರಾಚೀನ ಕರ್ನಾಟಕದ ರಾಣಿಯರು, ಪು. ೯೨.

೪. ಎಸ್ಐಐ XV ಹುನಗುಂದ ೪೭ ಕ್ರಿ.ಶ. ೧೧೫೧.

೫. ಎಸ್ಐಐ VI ಮಡಕಸಿರ ೫೫೭ ಕ್ರಿ.ಶ. ೧೧೬೮.

ಲಕ್ಷ್ಮೀನಾರಾಯಣ ದೇವರ ಅಂಗ ರಂಗಭೋಗಗಳಿಗೆ ದಾನ ಮಾಡಿದನಂತರ ಆ ದೇವರಲ್ಲಿ ಶಾಸ್ತ್ರವ್ಯಾಖ್ಯಾನ ಮಾಡಲು, ಪುರಾಣ ಹೇಳಲು ಒಬ್ಬ ಉಪಾಧ್ಯಾಯರಿಗೆ ವ್ಯವಸ್ಥೆಮಾಡಿದ ವಿಷಯ ತಿಳಿದು ಬರುತ್ತದೆ.[೧] ಎರಂಗವೆಗ್ಗಡೆಯ ಮಡದಿ ಬಾಚಲನಾರಿ 'ಸಜ್ಜನ ಲಕ್ಷ್ಮಿಯೆಂದು ಸಾಕ್ಷರಿಕ ಜನಂಗಳತ್ತಿರ್ಯೊಳೆ ಕೀರ್ತಿಸೆ ಬಾಚಲನಾರಿಯೊಪ್ಪುವಳ್' ಎಂದು ಶಾಸನವೊಂದು ಕೀರ್ತಿಸುತ್ತದೆ.[೨] ಹುಲಗೂರಿನ ಸಂಸ್ಕೃತ ತಾಮ್ರ ಶಾಸನ[೩]ವೊಂದರಲ್ಲಿ ಕದಂಬ ರಾಜನಾದ ಮಲ್ಲಪನ ಪಟ್ಟದರಸಿ ಪದ್ಮಲದೇವಿ ರಾಣಿಯು ಐಶ್ವರ್ಯವನ್ನು ತುಚ್ಛವಾಗಿ ಕಂಡು ಹುಲ್ಲುಂಗೂರಿನಲ್ಲಿ ಬ್ರಹ್ಮಪುರಿಯನ್ನು ನಿರ್ಮಿಸಿ ೬೪ ಭಿನ್ನ ಭಿನ್ನ ಗೋತ್ರದ ವೇದ ವೇದಾರ್ಥ ತಿಳಿದ ಬ್ರಾಹ್ಮಣರು ನೆಲೆ ನಿಲ್ಲುವಂತೆ ಮಾಡಿದ ವಿಷಯ ನಿರೂಪಿತವಾಗಿದೆ.

ರಾಜಕುಮಾರಿಯರಿಗೆ, ಶ್ರೀಮಂತ ಮತ್ತು ಅಧಿಕಾರಿಗಳ ಪುತ್ರಿಯರಿಗೆ ವಿದ್ಯಾಭ್ಯಾಸಕ್ಕೆ ಸ್ವಂತವಾದ ಅನುಕೂಲವನ್ನು ಕಲ್ಪಿಸಲಾಗುತ್ತಿತ್ತೆಂದು ಕಾಣುತ್ತದೆ. ಏಕೆಂದರೆ ದೇವಾಲಯ, ಅಗ್ರಹಾರ, ಬ್ರಹ್ಮಪುರಿ, ಮಠ ಮುಂತಾದ ಯಾವುದೇ ವಿದ್ಯಾಕೇಂದ್ರಗಳಲ್ಲಿ ಸ್ತ್ರೀವಿದ್ಯಾಭ್ಯಾಸಕ್ಕೆ ಅವಕಾಶ ಕಲ್ಪಿಸಿದ ಒಂದಾದರೂ ನಿದರ್ಶನ ಕಂಡು ಬರುತ್ತಿಲ್ಲ. ಆದರೆ ಇಬ್ನಬಟೂಟ (ಕ್ರಿ.ಶ. ೧೩೩೩-೪೫) ಹೊನ್ನಾವರದಲ್ಲಿ ಹುಡುಗಿಯರಿಗಾಗಿ ಹದಿಮೂರು ಶಾಲೆಗಳು ಮತ್ತು ಹುಡುಗರಿಗಾಗಿ ಇಪ್ಪತ್ಮೂರು ಶಾಲೆಗಳು ಇದ್ದುವೆಂದು[೪] ಹೇಳುವ ಅಭಿಪ್ರಾಯವನ್ನು ಸಮಕಾಲೀನ ಶಾಸನಗಳು ಸ್ವಲ್ಪವೂ ಬೆಂಬಲಿಸುವುದಿಲ್ಲ.

ಕೆಲವು ಶಿಲ್ಪಿಗಳು ಸ್ತ್ರೀಯರು ಬರೆಯುತ್ತಿರುವಂತಹ ಭಂಗಿಗಳನ್ನು ಕೆಲವು ಸ್ಥಳಗಳಲ್ಲಿ ಮೂಡಿಸಿರುವುದುಂಟು. ಕ್ರಿ.ಶ. ೯೦೦ರ ಸಾವಿನಿರ್ಮಡಿಯ ಶಾಸನ ಶಿಲ್ಪದಲ್ಲಿ ಅವಳು ಕೈಯಲ್ಲಿ ತಾಳೆಗರಿಯ ಕಟ್ಟನ್ನು ಹಿಡಿದಂತೆ ಕಂಡರಿಸಲಾಗಿದೆ. ಬೀದರ ಜಿಲ್ಲೆಯ ಜಲಸಾಂಗವಿಯ ಚಾಲುಕ್ಯ ವಿಕ್ರಮಾದಿತ್ಯನ ಕಾಲದ ಶಿಲ್ಪಶಾಸನ ತುಂಬ ಗಮನಾರ್ಹವಾದದ್ದು.[೫] ಬೇಲೂರಿನ ಶಿಲ್ಪ ಒಂದರಲ್ಲಿ ಹೆಣ್ಣೊಬ್ಬಳು ಬರೆಯುವ ಭಂಗಿಯಲ್ಲಿದ್ದಾಳೆ ಮತ್ತು ಪಟ್ಟದ ಕಲ್ಲಿನ ಶಿಲ್ಪ ಒಂದರಲ್ಲಿ ಕುಳಿತುಕೊಂಡು ಬರೆಯುತ್ತಿರುವ ಶಿಲ್ಪವೊಂದಿದೆ.[೬]

**ವಿವಾಹ:**

ದಾಂಪತ್ಯ ಜೀವನಕ್ಕೆ ನಾಂದಿಯಾದ ಮದುವೆ, ಹೆಣ್ಣಿನ ಜೀವನದ ದೃಷ್ಟಿಯಿಂದ ತುಂಬ ಗಮನಾರ್ಹವಾದದ್ದು. ಹೆಣ್ಣು ತಾನು ಹುಟ್ಟಿ ಬೆಳೆದ ಪರಿಸರದಿಂದ ಸಂಪೂರ್ಣವಾಗಿ ಭಿನ್ನವಾದ ಪರಿಸರದಲ್ಲಿ ಆಳವಡಬೇಕಾದ ಪರಿಸ್ಥಿತಿ ಇರುವುದರಿಂದ ಅದು ಹೆಣ್ಣಿನ ದೃಷ್ಟಿಯಿಂದ ಸಂದಿಗ್ಧವಾದುದೇ ಆಗಿದೆ. ಕೌಟುಂಬಿಕ ರಚನೆಯಲ್ಲಿ, ಮದುವೆಯಾದ ಹೆಣ್ಣು ಗಂಡನ ಮನೆಗೆ ಹೋಗಿ ನೆಲಸುವ ಪದ್ಧತಿ ಸಾಮಾನ್ಯವಾಗಿ ಪ್ರಚಲಿತವಾಗಿದೆ.

ಶಾಸನಗಳ ಆಧಾರದಿಂದ ಹೆಣ್ಣುಮಕ್ಕಳ ಮದುವೆ ಎಷ್ಟನೆಯ ವಯಸ್ಸಿನಲ್ಲಿ ನಡೆಯುತ್ತಿದ್ದಿತು ಎಂದು ನಿರ್ಧರಿಸುವುದು ಸಾಧ್ಯವಿಲ್ಲ. ವೈದಿಕಯುಗದಲ್ಲಿ ಹದಿನಾರನೆಯ ವಯಸ್ಸಿಗಿಂತಲೂ ಮೊದಲು ಹೆಣ್ಣಿನ ವಿವಾಹ ನಡೆಯುತ್ತಿದ್ದಂತಿಲ್ಲ. ಆದರೆ

---

೧. ಎಸ್ಐಐ IX ಹರಪನಹಳ್ಳಿ ೨೬೭ ಕ್ರಿ.ಶ. ೧೧೬೦.

೨. (ರೈ) ಎಕ V ಹಾಸನ ೬೯ ಕ್ರಿ.ಶ. ೧೧೫೫.

೩. ಕಇ IV ಶಿಗ್ಗಾವ್ ೫೪ ಕ್ರಿ.ಶ. ೧೨೪೫.

೪. K. A. Neelakanta Shastri : Foreign Notices of South India ಪು. ೨೩೩-೩೪.

೫. P. B. Desai : 'A unique inscription' ಜೆಕೆಯು VI ಪು. ೫೭-೫೯. ಆ ಶಾಸನದ ಬರವಣಿಗೆ ಹೀಗಿದೆ- 'ಸಪ್ತದ್ವಿಪೋರೀಭೂತಂ ಭೂತಳಂ ಸ್ವೀಕರಿಷ್ಯತಿ। ಚಾಳುಕ್ಯ ವಿಕ್ರಮಾದಿತ್ಯ ಸಪ್ತಮೋ ವಿಷ್ಣುವರ್ಧನಃ॥' (ಚಾಳುಕ್ಯ ವಂಶದ ವಿಕ್ರಮಾದಿತ್ಯನು ಏಳನೆಯ ವಿಷ್ಣುವರ್ಧನನಾಗಿದ್ದಾನೆ. ತನ್ನ ಅಧೀನದಲ್ಲಿ ಏಳು ಖಂಡಗಳಿಂದ ಕೂಡಿದ ಭೂಮಂಡಲವನ್ನು ತರುತ್ತಾನೆ.)

೬. ಜ್ಯೋತ್ಸ್ನಾಕಾಮತ್ : ಕರ್ನಾಟಕದ ಶಿಕ್ಷಣ ಪರಂಪರೆ. ನೋಡಿ -ಚಿತ್ರಗಳು ೭೨, ೭೩.

ಮುಂದೆ ಯಾಜ್ಞವಲ್ಕ್ಯ ಮುಂತಾದ ಸ್ಮೃತಿಕಾರರು ಹುಡುಗಿಯು ಋತುಮತಿಯಾಗುವ ಮೊದಲೇ ವಿವಾಹವನ್ನು ಮಾಡಬೇಕೆಂದು ಹೇಳುತ್ತಾರೆ.[೧] ಬಾಲ್ಯವಿವಾಹವನ್ನು ವೈದ್ಯಗ್ರಂಥದಲ್ಲಿ ಸುಶ್ರುತನು ಸಾಕಷ್ಟು ಉಗ್ರವಾಗಿಯೇ ಪ್ರತಿಭಟಿಸಿದ್ದಾನೆ.[೨] ಮಧ್ಯಕಾಲೀನ ಯುಗದಲ್ಲಿ ಬಾಲ್ಯವಿವಾಹಗಳು ಜನಪ್ರಿಯತೆಯನ್ನು ಗಳಿಸಿಕೊಂಡವು ಎಂದು ಎ.ಎಸ್. ಅಲ್ಟೇಕರ್ ಅವರು ಅಭಿಪ್ರಾಯ ಪಡುತ್ತಾರೆ.[೩] ಒಟ್ಟಿನಲ್ಲಿ 'ಕರ್ನಾಟಕದಲ್ಲಿ ಬಾಲ್ಯ ವಿವಾಹವಿದ್ದರೂ ಅತಿರೇಕಕ್ಕೆ ಹೋಗಿರಲಿಲ್ಲ' ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[೪]

ಮದುವೆಯಾಗದ ಹೆಣ್ಣನ್ನು 'ಕೊಡಗೂಸು' ಎಂದು ಕರೆಯುತ್ತಿದ್ದರು. ಮದುವೆ ಮಾಡಿದಾಗ ಕೊಡಬೇಕಾದ ತೆರಿಗೆಯನ್ನು 'ಮದುವೆಸುಂಕ'[೫] ಎನ್ನುತ್ತಿದ್ದರು. ಕೆಲವು ಶಾಸನಗಳಲ್ಲಿ ಬರುವ 'ಹಂದರವಣ'[೬] ಮದುವೆ ಮುಂತಾದ ಸಮಾರಂಭಗಳಲ್ಲಿ ಹಾಕಿಸುತ್ತಿದ್ದ ಚಪ್ಪರಗಳಿಗಾಗಿ ಕೊಡಬೇಕಾಗಿದ್ದ ತೆರಿಗೆಯನ್ನು ಸೂಚಿಸುತ್ತದೆ. ಮದುವೆಯ ತೆರಿಗೆಯನ್ನು ಒಂದು ಶಾಸನ 'ಕೊಡಗೂಸಿನ ಮದುವೆಗೆ ಹಣ ಹಾಗ' ಎಂದು ತಿಳಿಸುತ್ತದೆ.[೭] ಕೆಲವು ಶಾಸನಗಳಲ್ಲಿ ತೆರಿಗೆಯನ್ನು ಗಂಡಿಗೆ ಮತ್ತು ಹೆಣ್ಣಿಗೆ ಪ್ರತ್ಯೇಕವಾಗಿಯೂ ವಿಧಿಸಿರುವುದುಂಟು.[೮] ಮದುವೆಯನ್ನು ಶಾಸನಗಳು 'ಕನ್ಯಾದಾನ'ವೆಂದೂ ಕರೆದಿವೆ.[೯]

ಮದುವೆಮಾಡಿ ಕೊಡುವ ಸಂದರ್ಭದಲ್ಲಿ ಅಳಿಯನಿಗೆ ಬಳುವಳಿಯಾಗಿ ಆಸ್ತಿ ಐಶ್ವರ್ಯವನ್ನು ಕೊಡುವ ಪದ್ಧತಿ ಇದ್ದಿತು. ವಿನಯಾದಿತ್ಯನ ಆಳ್ವಿಕೆಯಲ್ಲಿ ಅವನ ರಾಣಿ ಕೆಳೆಯಬ್ಬರಸಿ ತನ್ನ ತಮ್ಮನಂತೆ ಬೆಳೆಸಿದ ಮರಿಯಾನೆ ದಂಡನಾಯಕನಿಗೆ ದೇಕವ್ವೆ ದಂಡನಾಯಕಿತಿಯನ್ನು ಕನ್ಯಾದಾನವಾಗಿ ನೀಡಿ ಆನಂದಿನಾಡಿನ ಸಿಂದಗೆರೆಯ ಪ್ರಭುತ್ವವನ್ನು ನೀಡಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೧೦] ಚಾಳುಕ್ಯಚಕ್ರವರ್ತಿ ಜಗದೇಕಮಲ್ಲ ತನ್ನ ಮಗಳು ಮೈಳಲದೇವಿಯನ್ನು ಕದಂಬ ಜಯಕೇಶಿಗೆ ಕೊಟ್ಟಾಗ 'ತ್ರೈಭೋಗ್ಯಾಂತರವನಿತ್ತು ಪಲಸಿಗೆನಾಡಂ ಕರಿ ಘಟೆಯಂ ತುರಗವ್ರಜ ವರವಸ್ತು ಸಮಸ್ತ ಕಾಂಚನಾಭರಣಂಗಳ್ವೆರಸಿನ್ತು ಚಕ್ರಿ ನಚ್ಚಿನ ವರಕನ್ನೆಯನಿತ್ತು ಪರಸಿದಂ ಪದೆಪಿಂದಂ.'[೧೧] ಎಂದು ಶಾಸನ ತಿಳಿಸುತ್ತದೆ. ಚಕ್ರವರ್ತಿಯು ಅಳಿಯ ಜಯಕೇಶಿಗೆ ತ್ರೈಭೋಗ್ಯಾಂತರವಾಗಿ ಪಲಸಿಗೆ ನಾಡನ್ನು ಮತ್ತು ಅನೇಕ ಆನೆ ಕುದುರೆ ಶ್ರೇಷ್ಠ ವಸ್ತುಗಳು, ಎಲ್ಲ ಬಂಗಾರದ ಆಭರಣಗಳನ್ನು ನೀಡಿದ ವಿಷಯ ತಿಳಿಯುತ್ತದೆ. ಈ ರೀತಿ ಮದುವೆಯಲ್ಲಿ ಅಳಿಯನಿಗೆ ಬಳುವಳಿಯಾಗಿ ಕೊಡುವುದು ಸಾಮಾನ್ಯವಾಗಿದ್ದಿತೆಂದು ಕಂಡುಬರುತ್ತದೆ. ಇದು ರಾಜಮನೆತನಗಳಲ್ಲಿ ಮಾತ್ರವಲ್ಲ ಉಳಿದವರಲ್ಲಿಯೂ ಪ್ರಚಲಿತವಾಗಿರುವಂತೆ ತೋರುತ್ತದೆ.

---

೧. A. S. Altekar : The Position of Women in Hindu Civilization. ಪು. ೬೭.

೨. ಎಂ. ಚಿದಾನಂದಮೂರ್ತಿ ಕಶಾಸಾಂಅ, ಪು. ೪೧೪.

೩. A.S. Alterkar : ಪೂರ್ವೋಕ್ತ, ಪು. ೬೧.

೪. ಕಶಾಸಾಂಅ, ಪು. ೪೧೫.

೫. (ರೈ) ಎಕ V ಹಾಸನ ೧೧೯ ಕ್ರಿ.ಶ. ೧೧೭೩.

೬. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.

೭. ಎಸ್‌ಐಐ XV ಬಾಗೇವಾಡಿ ೧೬೯ ಕ್ರಿ.ಶ. ೧೨೨೩.

೮. ಎಸ್‌ಐಐ XV ಗದಗು ೨೨೦ ಕ್ರಿ.ಶ. ೧೨೦೭ 'ಮನೆಯಲು ಮದುವೆಯಾದಡೆ ಗಂಡಿಂಗೆ ಹಣ ೧ ಹೆಣಿಂಗೆ ಹಣ ೧'.

೯. (ರೈ) ಎಕ XII ಪಾವಗಡ ೫೦ ಕ್ರಿ.ಶ. ೧೨೪೮.

೧೦. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.

೧೧. ಸಾಧನೆ ೪:೧ ಕಲ್ಭಟಗಿ ಕ್ರಿ.ಶ. ೧೧೪೬, ಪು. ೭೭.

ಮಹಾನಾಡಪ್ರಭು ಕೊಯೂರ ಮಗ ರಾಮಗೌಡನು ಶ್ರೀಮನುಮಹಾಸಾಮಂತಾಧಿಪತಿ ಸೊಳಲಕಲ ಮೊಮ್ಮಯ್ಯನಾಯಕನ ಮಗ ಮಾಚಣ್ಣನಿಗೆ ತನ್ನ ಮಗಳನ್ನು ಮದುವೆಮಾಡಿ ಕೊಟ್ಟಾಗ ತನಗೆ ಕೊಡುಗೆಯಾಗಿ ಬಂದಿದ್ದ ಗುಂಡುಗಲ್ಲು ಗ್ರಾಮವನ್ನು ಅಳಿಯ ಮಾಚಣ್ಣನಿಗೆ ಕೊಡುಗೆಯಾಗಿ ವಹಿಸಿಕೊಟ್ಟ ವಿಷಯ ತಿಳಿದು ಬರುತ್ತದೆ.[೧]

ಅನುಕೂಲಸ್ಥರು ಮದುವೆಯ ಸಂದರ್ಭದಲ್ಲಿ ಈ ರೀತಿಯ ಕೊಡುಗೆಗಳನ್ನು ಕೊಟ್ಟು ಅಳಿಯನನ್ನು, ಬೀಗರನ್ನು ಸಂತೃಪ್ತಿಗೊಳಿಸುತ್ತಿದ್ದಂತೆ ಭಾವಿಸಬಹುದು. ಆರ್ಥಿಕವಾಗಿ ಅನುಕೂಲವಿಲ್ಲದವರಲ್ಲಿ ಯಾವ ರೀತಿಯಲ್ಲಿ ಇದ್ದಿತೆಂಬುದು ತಿಳಿದುಬರುವುದಿಲ್ಲ. ಸಾಮಾನ್ಯವಾಗಿ ಯಾವಾಗಲೂ ಮೇಲ್ವರ್ಗವನ್ನು ಅನುಕರಿಸುವ ಪ್ರವೃತ್ತಿ ಕೆಳವರ್ಗದ ಜನರಲ್ಲಿ ಕಂಡು ಬರುವುದರಿಂದ ಅವರೂ ಕೂಡ ಅಳಿಯನಿಗೆ ಕಾಣಿಕೆಗಳನ್ನು ಕೊಡಲು ಪ್ರಯತ್ನಿಸುತ್ತಿದ್ದರೆಂದು ಭಾವಿಸಬಹುದು. ಸಂತೋಷದಿಂದ, ಸ್ವಇಚ್ಛೆಯಿಂದ ಅಳಿಯನಿಗೆ ಕೊಡುತ್ತಿದ್ದ ಕೊಡುಗೆ ಕ್ರಮೇಣ ಒಂದು ವ್ಯವಸ್ಥೆಯಾಗಿ ವರದಕ್ಷಿಣೆಯಂಥ ಒಂದು ಅನಿಷ್ಟ ಪದ್ಧತಿಗೆ ದಾರಿಮಾಡಿಕೊಟ್ಟಿದೆ.

ಕೆಲವು ಸಂದರ್ಭಗಳಲ್ಲಿ ತಂದೆಯಾದವನು ತನ್ನ ಅನೇಕ ಮಂದಿ ಹೆಣ್ಣುಮಕ್ಕಳನ್ನು ಒಂದೇ ಹಸೆಯಲ್ಲಿ ಒಬ್ಬ ವರನಿಗೆ ಮದುವೆ ಮಾಡಿ ಕೊಡುತ್ತಿದ್ದುದುಂಟು. ಮರಿಯಾನೆ ದಂಡನಾಯಕನು ತನ್ನ ಮಡದಿ ಚಾಮವ್ವೆಯಲ್ಲಿ ಜನಿಸಿದ ಪದುಮಲದೇವಿ, ಚಾಮಲದೇವಿ ಮತ್ತು ಬೊಪ್ಪಾದೇವಿಯರನ್ನು ಬಲ್ಲಾಳ ರಾಜನಿಗೆ ಒಂದೇ ಹಸೆಯಲ್ಲಿ ವಿವಾಹ ಮಾಡಿಕೊಟ್ಟ ವಿಷಯ ಶಾಸನದಿಂದ ತಿಳಿದುಬರುತ್ತದೆ.[೨] ಇದಕ್ಕೆ ಪ್ರತಿಯಾಗಿ ಹಿಂದೆ ತನ್ನ ತಂದೆಯು ಕೊಟ್ಟಿದ್ದ ಸಿಂದಗೆರೆಯ ಪ್ರಭುತ್ವವನ್ನು ಪುನರ್ಧಾರೆಯಾಗಿ ಬಲ್ಲಾಳನು ಅವನಿಗೆ ನೀಡುತ್ತಾನೆ. ಈ ರೀತಿ ಹೆಣ್ಣುಮಕ್ಕಳನ್ನು ರಾಜನಿಗೆ ಕೊಟ್ಟು ಮದುವೆಮಾಡಿ ಪ್ರತಿಫಲವನ್ನು ಪಡೆದಿರುವುದು ಹೆಣ್ಣನ್ನು ಮಾರಿದಂತೆ. ಇದನ್ನು ಬೌಧಾಯನ ಕಟುವಾಗಿ ಟೀಕಿಸಿದ್ದಾನೆ. ಹಣವನ್ನು ಕೊಟ್ಟು ಕೊಂಡುಕೊಂಡ ಸ್ತ್ರೀಯನ್ನು ಪತ್ನಿಯೆಂದು ಕರೆಯಲಾಗುವುಲ್ಲ. ಅವಳು ದಾಸಿಯೇ ಸರಿ. ಹಣದ ಆಸೆಗಾಗಿ ಹೆಣ್ಣು ಮಕ್ಕಳನ್ನು ಮಾರುವವರು ಘೋರ ನರಕದಲ್ಲಿ ಬೀಳುತ್ತಾರೆ ಎಂದು ಅವನು ಹೇಳಿದ್ದಾನೆ.[೩]

**ಬಹುಪತ್ನೀಕತ್ವ:**

ಬಹು ಪತ್ನೀಕತ್ವ ಕರ್ನಾಟಕದಲ್ಲಿ ಬಹುವಾಗಿ ಪ್ರಚಲಿತವಿದ್ದ ವಿಷಯವಾಗಿದ್ದಿತು. ರಾಜರಂತೂ ಅಸಂಖ್ಯಾತ ಎನ್ನುವಷ್ಟು ಸ್ತ್ರೀಯರನ್ನು ಮದುವೆಯಾಗುತ್ತಿದ್ದರು. ಹೊಯ್ಸಳ ನರಸಿಂಹನಿಗೆ ೩೮೪ ಹೆಂಡತಿಯರಿದ್ದರೆಂದು ಶಾಸನವೊಂದು ತಿಳಿಸುತ್ತದೆ.[೪] ಶಾಸನೋಕ್ತ ರಾಣಿಯರೇ ಸಾಕಷ್ಟು ಸಂಖ್ಯೆಯಲ್ಲಿ ಇದ್ದುದು ಕಂಡುಬರುತ್ತದೆ.[೫]

ರಾಜನ ಪತ್ನಿಯರಲ್ಲಿ ಹಿರಿಯವಳೇ 'ಪಿರಿಯರಸಿ' ಎಂದು ಕರೆಸಿಕೊಳ್ಳುತ್ತಿದ್ದಳು. ಅವಳಿಗೂ ಉಳಿದ ರಾಣಿಯರಿಗೂ ತಿಕ್ಕಾಟಗಳು, ಘರ್ಷಣೆಗಳು ಸಹಜವಾಗಿ ಉದ್ಭವವಾಗುತ್ತಿದ್ದವು. ಹೊಯ್ಸಳ ರಾಜರು ತಮ್ಮ ರಾಣಿಯರನ್ನು ಅನೇಕ ಪ್ರಾಂತಗಳಿಗೆ ಅಧಿಕಾರಿಗಳನ್ನಾಗಿ ನೇಮಿಸುತ್ತಿದ್ದರು; ಇದು ಬಹುಶಃ ಉಂಟಾಗಬಹುದಾಗಿದ್ದ ಘರ್ಷಣೆಗಳನ್ನು ತಪ್ಪಿಸುವ ಸಲುವಾಗಿ ಮಾಡಿದ

---

೧. (ರೈ) ಎಕ XVI ತುಮಕೂರು ೧೧೬ ಕ್ರಿ.ಶ. ೧೩೩೮.

೨. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.

೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೪೧೬.

೪. (ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೧.

೫. ವಿವರಗಳಿಗೆ ನೋಡಿ - ಚನ್ನಕ್ಕ ಎಲಿಗಾರ : ಪ್ರಾಚೀನ ಕರ್ನಾಟಕದ ರಾಣಿಯರು.

ತಂತ್ರವೂ ಆಗಿರಬಹುದು. ಕೆಲವು ಶಾಸನಗಳಲ್ಲಿ ಶಾಂತಲೆಯನ್ನು 'ಉದ್ವೃತ್ತ ಸವತಿ ಗಂಧವಾರಣೆ' (ಮೀರಿ ನಡೆಯುವ ಸವತಿಯರನ್ನು ಹದ್ದಿನಲ್ಲಿಡುವವಳು) ಎಂಬ ವಿಶೇಷಣವನ್ನು ಬಳಸಿ ಕರೆಯಲಾಗಿದೆ.[೧]

ರಾಜರು ಮಾತ್ರವಲ್ಲದೆ ಅನೇಕ ಅಧಿಕಾರಿಗಳು, ಅನುಕೂಲಸ್ಥರು ಕೂಡ ಒಬ್ಬರಿಗಿಂತ ಹೆಚ್ಚು ಮಡದಿಯರನ್ನು ಪಡೆದಿರುತ್ತಿದ್ದರು; ಅದು ವಿಶೇಷ ವಿಷಯವಾಗಿರಲಿಲ್ಲ. ಬೋಕಣ ಸೇನಾಪತಿಯ ಮಂತ್ರಿ ಎರಗನಿಗೆ ಬಾಚವ್ವೆ ಮತ್ತು ಮಾಚಲದೇವಿಯರೆಂಬ ಹೆಂಡತಿಯರಿದ್ದರು.[೨] ಬಿಲ್ಲ ಹರಳಗಾವುಂಡನಿಗೆ ದೇಕಿ ಗಾವುಂಡಿ, ಸುಗ್ಗಿಗಾವುಂಡಿಯರೆಂಬ ಮಡದಿಯರಿದ್ದರು.[೩] ಅಗ್ರಹಾರ ಬಾಚಹಳ್ಳಿಯ ಶಾಸನದಲ್ಲಿ ಬರುವ ಒಂದೇ ಮನೆತನಕ್ಕೆ ಸೇರಿದ ಲೆಂಕರಲ್ಲಿ ಕೆಲವರಿಗೆ ಏಕಪತ್ನಿ, ಕೆಲವರಿಗೆ ದ್ವಿಪತ್ನಿ ಮತ್ತು ಕೆಲವರಿಗೆ ಮೂರು ಜನ ಪತ್ನಿಯರಿರುವುದು ಕಂಡುಬರುತ್ತದೆ.[೪] ನೊಣಂಬಸೆಟ್ಟಿ ಎನ್ನುವವನಿಗೆ ಸಂಬಗೌಡಿ, ಕಲಗವುಡಿ, ಕೇತಗೌಡಿ, ಭೂಮಗೌಡಿ ಎಂಬ ನಾಲ್ಕು ಜನ ಹೆಂಡತಿಯರಿದ್ದ ಬಗ್ಗೆ ತಿಳಿದುಬರುತ್ತದೆ.[೫]

ಒಂದು ಶಾಸನದಲ್ಲಿ ದಾನದ ಮೇರೆಗಳನ್ನು ಹೇಳುವಾಗ 'ಇಪ್ಪೆಂಡಿರ ವಾಸುದೇವಗೈಯ್ಯನ ತೋಟದ ಮೇರೆ'[೬] ಎಂದು ಬರುತ್ತದೆ. ಆ ಬ್ರಾಹ್ಮಣ ವಿದ್ವಾಂಸ ಬಹುಶಃ ಇಬ್ಬರು ಹೆಂಡತಿಯರನ್ನು ಪಡೆದದ್ದಕ್ಕಾಗಿಯೇ ಪ್ರಖ್ಯಾತನಾಗಿದ್ದನೆಂದೂ ಆ ಕಾರಣಕ್ಕಾಗಿ ಆ ಹೆಸರಿನಿಂದ ಕರೆಯಲ್ಪಡುತ್ತಿದ್ದನೆಂದು ಊಹಿಸಬೇಕಾಗುತ್ತದೆ.

**ದಾಂಪತ್ಯ:**

ಮದುವೆಯಾದನಂತರ ಗಂಡು ಹೆಣ್ಣು ಕೂಡಿ ಬಾಳುವುದೇ ದಾಂಪತ್ಯ. ದಾಂಪತ್ಯ ಜೀವನವನ್ನು ಕನ್ನಡ ಶಾಸನಗಳು ಎತ್ತಿ ಹಿಡಿದಿವೆ. ಗಂಡ ಹೆಂಡತಿಯ ವಿಷಯದಲ್ಲಿ ನಿಷ್ಠೆಯಿಂದ ಇರಬೇಕಾದುದನ್ನು ಹೇಳುತ್ತವೆ. ಹೆಂಡತಿಯೂ ಗಂಡನ ವಿಷಯದಲ್ಲಿ ನಿಷ್ಠೆಯಿಂದಿದ್ದು ಅವನನ್ನು ಸರ್ವವಿಷಯಗಳಲ್ಲಿಯೂ ಅನುಸರಿಸಬೇಕೆಂದು ನಿರೀಕ್ಷಿಸಲಾಗುತ್ತಿತ್ತು. ಹೊಯ್ಸಳ ನಾರಸಿಂಹನ ರಾಣಿ ಏಚಲದೇವಿಯನ್ನು ನಳನಿಗೆ ದಮಯಂತಿಯಂತೆ, ರಾಮನಿಗೆ ಸೀತೆಯಂತೆ ಇದ್ದಳೆಂದು ಶಾಸನವೊಂದು ತಿಳಿಸುತ್ತದೆ.[೭]

ಏಚಣನ ಮಡದಿಯನ್ನು ಕುರಿತು ಹೇಳುವ ಒಂದು ಶಾಸನ ಹೀಗೆ ಹೇಳುತ್ತದೆ.

> ಎಱೆಯನ ದೈವಮಾವುದದು ತನ್ನಯ ದೈವಮದಾವುದಾತನೊಳ್
> ನೆಱೆದ ಗುಣೋನ್ನತಿಕ್ಕೆಯದು ತನ್ನ ಮಿಕ್ಕ ಗುಣೋನ್ನತಿಕ್ಕೆ ಕ
> ಣ್ದೆಱೆದುದದಾವ ಧರ್ಮಮಧಿನಾಥನೊಳಂತದೆ ತನ್ನ ಧರ್ಮಮೆಂ
> ದೆಱಕದೆ ಮಂತ್ರಿ ಯೇಚಣವಲ್ಲಭೆ ಸೋವಲದೇವಿ ಭಾವಿಪಳ್॥[೮]

---

೧. ಈ ಅರ್ಥವನ್ನು ಒಪ್ಪದೆ ಟಿ.ವಿ. ವೆಂಕಟಾಚಲ ಶಾಸ್ತ್ರಿಯವರು ಅದರ ಸಾತ್ವಿಕಾರ್ಥವನ್ನು ಗ್ರಹಿಸಬೇಕೆಂದು ಪ್ರತಿಪಾದಿಸಿದ್ದಾರೆ. ಆದರೆ ಅವರ ವಾದಕ್ಕೆ ಪೋಷಕಾಂಶಗಳನ್ನು ಲೇಖನದಲ್ಲಿ ಒದಗಿಸಿಲ್ಲ. ನೋಡಿ: 'ನಾಮಾವಳಿಯಲ್ಲಿ ಗಂಧವಾರಣ ಶಬ್ದ : ಒಂದು ಟಿಪ್ಪಣಿ', ಶ್ರವಣಬೆಳಗೊಳ : ಒಂದು ಸಮೀಕ್ಷೆ, ಪು. ೧೪೭-೫೫.

೨. (ರೈ) ಎಕ V ಹಾಸನ ೬೯ ಕ್ರಿ.ಶ. ೧೧೫೬.

೩. ಎಸ್‌ಐಐ XV ಬಾಗಲಕೋಟೆ ೬೧೨ ಕ್ರಿ.ಶ. ೧೨೪೯.

೪. (ಮೈ) ಎಕ VI ಕೃಷ್ಣರಾಜಪೇಟೆ ೮೪ ಕ್ರಿ.ಶ. ೧೨೯೧.

೫. (ರೈ) ಎಕ VI ಕಡೂರು ೧೨೪ ಕ್ರಿ.ಶ. ೧೨೭೨(?)

೬. ಎಇ XIII ಗದಗು ೪ಬಿ ಕ್ರಿ.ಶ. ೧೧೭೮.

೭. (ಮೈ) ಎಕ VII ನಾಗಮಂಗಲ ೧೧೮ ಕ್ರಿ.ಶ. ೧೧೭೮.

೮. (ರೈ) ಎಕ VII ಶಿಕಾರಿಪುರ ೩೧೭ ಕ್ರಿ.ಶ. ೧೨೦೫.

ಗಂಡನ ದೈವ ಯಾವುದೋ ಅದನ್ನೇ ತನ್ನದೆಂದೂ, ಗಂಡನ ಉನ್ನತ ಗುಣಗಳನ್ನೇ ತನ್ನವೆಂದೂ ಗಂಡನು ಯಾವ ಧರ್ಮವನ್ನು ಅನುಸರಿಸುವನೋ ಅದೇ ತನ್ನ ಧರ್ಮವೆಂದು ಪ್ರೀತಿಯಿಂದ ಸೋವಲದೇವಿಯು ಅನುಸರಿಸುತ್ತಿದ್ದಳು. ಆದರೆ ಗಂಡನ ಧರ್ಮ ಮತ್ತು ದೈವದಿಂದ ಭಿನ್ನವಾದ ಧರ್ಮ ಮತ್ತು ದೈವವನ್ನು ಆರಾಧಿಸುವ ಸ್ತ್ರೀಯರೂ ಇದ್ದರು.

ಅನೇಕ ಪುರುಷರನ್ನು ಪರನಾರೀದೂರರೆಂದು ವರ್ಣಿಸಿರುವುದು ಕಂಡು ಬರುತ್ತದೆ. ನಿದರ್ಶನಕ್ಕೆ ಓರಿಯ ಹಡವಳನಾದ ಕೊಳ್ಳಿಯಮ್ಮೆಯನ ಸುಪುತ್ರನಾದ ಸಾವಂತಕಾಳಯ್ಯನನ್ನು 'ಪರನಾರೀ ದೂರ'ನೆಂದು ಶಾಸನವೊಂದು ಕೀರ್ತಿಸಿದೆ.[೧] ಸ್ತ್ರೀವ್ಯಾಮೋಹದ ಪುರುಷರೂ ಇದ್ದರು. ಶಾಸನವೊಂದು ತಮ್ಮ ಗಂಡಂದಿರನ್ನು ತಮ್ಮ ವಶದಲ್ಲಿಟ್ಟುಕೊಳ್ಳಲು ವಿವಿಧ ಕೆಟ್ಟ ಔಷಧಗಳನ್ನು ಅವರ ಮೇಲೆ ಬಳಸುವುದರಿಂದ ಅವರು ಕ್ಷಯ, ಕಾಮಾಲೆ, ಪಾಂಡು, ಗುಲ್ಮ ರೋಗಗಳಿಗೆ ತುತ್ತಾಗಿ ಕೃಶರಾಗಿ ನರಳುವರೆಂದು ತಿಳಿಸುತ್ತದೆ.

> ಪತಿ ಬಸದಕ್ಕುಮಿನ್ತು ತಮಗೆಂದು ದುರೌಷಧಮಂ ಪ್ರಯೋಗಿಪ
> ಕ್ರಿತಕೆಯರನ್ತದಱಿಂದೆ ಪುರುಷರ್ಕ್ಷಯ ಕಾಮಳೆ ಪಾಂಡು ಗುಲ್ಮದಿಂ
> ದತಿ ಕೃಶನಾಗೆ ಬಿಚ್ಚಳಿಸುತಿಪ್ಪವರೆಂತೊ ಕುಲಾಂಗನಾಜನಂ
> ಪತಿಹಿತೆಮಾಳಿಯವ್ವೆಯೆ ಕುಲಾಂಗನೆ ವಾರ್ಧಿಪರೀತಧಾತ್ರಿಯೊಳ್॥[೨]

ಇಂಥ ಅತಿರೇಕದ ನಿದರ್ಶನವನ್ನು ಬಿಟ್ಟರೆ[೩] ಉಳಿದಂತೆ ಗಂಡ ಹೆಂಡತಿಯರ ಸಂಬಂಧ ಆತ್ಮೀಯವಾಗಿದ್ದುದನ್ನೇ ಶಾಸನಗಳು ತಿಳಿಸುತ್ತವೆ. ಮದುವೆಯಾಗಿ ಬಂದ ಹೆಣ್ಣಿನ ತವರುಮನೆಯ ಹೆಸರನ್ನು ಬದಲಾಯಿಸುವ ಪದ್ಧತಿ ಈಗಲೂ ಕೆಲವು ಕುಟುಂಬಗಳಲ್ಲಿ ಇದೆ. ಹನ್ನೊಂದನೆಯ ಶತಮಾನದಲ್ಲಿಯೂ ಈ ಪದ್ಧತಿ ಬಹುಶಃ ಕೆಲವು ಮನೆತನಗಳಲ್ಲಿ ಇದ್ದಿತು. ಬಾಗಳಿಯ ಒಂದು ಶಾಸನದಲ್ಲಿ ತಂದೆತಾಯಿಗಳ ಮನೆಯಲ್ಲಿದ್ದಾಗ ಒಬ್ಬ ಹೆಣ್ಣಿಗೆ ಧರ್ಮಾಂಗನೆ ಎಂಬ ಹೆಸರಿದ್ದು ಗಂಡನ ಮನೆಯಲ್ಲಿ ನಾಗಾಂಬಿಕೆ ಎಂಬ ಹೆಸರಿನಿಂದ ಕರೆಯಲ್ಪಟ್ಟಿರುವುದು ಕಂಡುಬರುತ್ತದೆ.[೪]

**ಆಸ್ತಿಯ ಹಕ್ಕು:**

ಸಾಮಾನ್ಯವಾಗಿ ಪುರುಷರೇ ಆಸ್ತಿಯ ಹಕ್ಕನ್ನು ಉಳ್ಳವರಾಗಿದ್ದರು. ಸ್ಮೃತಿಗಳೆಲ್ಲವೂ ಬಹು ಪಾಲು ಸ್ತ್ರೀಯರಿಗೆ ಆಸ್ತಿಯ ಹಕ್ಕು ಇಲ್ಲವೆಂದೇ ಹೇಳಿವೆ. ಸಾಧಾರಣ ಸಂದರ್ಭಗಳಲ್ಲಿ ಸ್ತ್ರೀಯರಿಗೆ ಆಸ್ತಿಯ ಮೇಲೆ ಹಕ್ಕು ಇರುವಂತೆ ಕಾಣುವುದಿಲ್ಲವಾದರೂ ಕೆಲವು ವಿಶೇಷ ಸಂದರ್ಭಗಳಲ್ಲಿ ಆಸ್ತಿಯ ಹಕ್ಕು ಇರುವುದು ಕಂಡುಬರುತ್ತದೆ. ಅಂತಹ ಕೆಲವು ನಿದರ್ಶನಗಳನ್ನು ಗಮನಿಸಬಹುದು. ಮಣಿಗುಂದಗೆಯ ಜೋಯಿಸ ಬೊಮ್ಮನ ಮಕ್ಕಳಾದ ಆಚಯ್ಯ ತಿಪ್ಪಯ್ಯ ಒಂದು ಜಮೀನನ್ನು ಕ್ರಯವಾಗಿ ಕೊಳ್ಳುತ್ತಾರೆ. ತಿಪ್ಪಯ್ಯ ಮಾಡಿದ ಸಾಲಕ್ಕಾಗಿ ಅವನ ಹೆಂಡತಿ ತಿಪ್ಪವ್ವೆ ತಮ್ಮ ಭಾವ ಆಚಯ್ಯನಿಗೆ ತನ್ನ ಗಂಡನ ಭಾಗದ ಅಂಶವನ್ನು ಕೊಟ್ಟ ವಿಷಯ ಶಾಸನವೊಂದರಲ್ಲಿ ನಿರೂಪಿತವಾಗಿದೆ. ತನ್ನ ಗಂಡನ ಭಾಗದ ಭೂಮಿಯನ್ನು ಋಣಪರಿಹಾರಾರ್ಥವಾಗಿ ಕೊಡಬೇಕಾದರೆ ಅವಳಿಗೆ ಆ ಭೂಮಿಯ ಮೇಲೆ ಒಡೆತನವಿದ್ದುದು ಸ್ಪಷ್ಟ.[೫]

---

೧. (ಮೈ) ಎಕ VI ಕೃ.ಪೇಟೆ ೪೩ ಕ್ರಿ.ಶ. ೧೨ ಶಮಾ.

೨. ಎಸ್‌ಐಐ XX ಪರಸಗಡ ೨೪೮ ಕ್ರಿ.ಶ. ೧೨೨೮.

೩. ಧರ್ಮಾಮೃತದಲ್ಲಿ- ಗದ್ದೆಗೆ ಊಟವನ್ನು ತರಲಿಲ್ಲವೆಂದು ಹೆಂಡತಿಯನ್ನು ಸಾಯುವಂತೆ ಹೊಡೆಯುವ ವಿಷಯವಿದೆ. ೧೪ನೆಯ ಆಶ್ವಾಸ ಗದ್ಯ, ಪು. ೨೪೨.

೪. G.S. Gai ' Karnataka Epigraphy' Karnataka Darshana,' ಪು. ೬೩.

೫. ಧಾತಾಶಾ ೫೧ ಕ್ರಿ.ಶ. ೧೨೧೧.

ಸೋಮನಾಥಪುರದ ಶ್ರೀಕಾರ್ಯಕ್ಕಾಗಿ ಕೊಟ್ಟಂತಹ ಭೂಮಿಯನ್ನು 'ಅಥಂಮ್ಮದೇವರ ಮಗಳು ಕಾಳಲದೇವಿ ಶ್ರೀ ಕಾರ್ಯವನ್ನು ನಡೆಸಿ ತಾನಾಭೂಮಿಯನ್ನು ಅನುಭವಿಸುವಳು' ಎಂದು ಶಾಸನ[೧] ಒಂದರಲ್ಲಿ ಬಂದಿದೆ. ವೀರನರಸಿಂಹಪುರವಾದ ಅರಕೆರೆಯ ಪ್ರಾಭಾಕರದ ಪಂಡಿತ ಕುಮಾಂಡೂರಾಚನ ಹೆಂಡತಿ ಐಯಿದ್ಯಕೆ ಆ ಊರಿನ ತನ್ನ ವೃತ್ತಿಯೊಳಗೆ ಪಾದವೃತ್ತಿಯನ್ನು ಕೇಶವದೇವರಿಗೆ ತಿರಿನಾಮದ ಕಾಣಿಕೆಯಾಗಿ ಕೊಡುತ್ತಾಳೆ.[೨]

ಅನೇಕ ಸಂದರ್ಭಗಳಲ್ಲಿ ಸ್ತ್ರೀಯರು ದಾನಗಳನ್ನು ಕೊಟ್ಟಿರುವುದು ಕಂಡು ಬರುತ್ತದೆ. ಬಸರೂರಿನ ಒಂದು ಶಾಸನ ರಾಜಪ್ಪಸೆಟ್ಟಿಯರ ಮಗಳು (ಗಂಡನ ಹೆಸರು ನಷ್ಟವಾಗಿದೆ) ಚಂಡಬ್ಬೆ ನಖರೇಶ್ವರದೇವರಿಗೆ ದಾನವನ್ನು ನೀಡಿರುವುದನ್ನು ತಿಳಿಸುತ್ತದೆ.[೩]

ಕೆಲವು ಶಿವಪುರಗಳಲ್ಲಿ ಶೈವ, ವೀರಶೈವ ಧರ್ಮಕ್ಕೆ ಸೇರಿದ ಸ್ತ್ರೀಯರೂ ಪುರುಷರಂತೆ 'ವೃತ್ತಿ'ಗಳನ್ನು ಪಡೆದಿದ್ದಾರೆ.[೪] ಅಗ್ರಹಾರಗಳಲ್ಲಿ ಪುರುಷರಿಗೆ ಮಾತ್ರ 'ವೃತ್ತಿ'ಗಳನ್ನು ನೀಡಿರುವುದು ಕಂಡುಬರುತ್ತದೆ. ಶಿವಪುರಗಳಲ್ಲಿ ಸ್ತ್ರೀಯರಿಗೆ 'ವೃತ್ತಿ'ಗಳನ್ನು ನೀಡಿರುವುದನ್ನು ಗಮನಿಸಿದರೆ, ವೀರಶೈವಧರ್ಮ ಸ್ತ್ರೀಯರ ವಿಷಯದಲ್ಲಿ ತೋರಿದ ಉದಾರ ನೀತಿ ಇದಕ್ಕೆ ಪ್ರೇರಣೆ ನೀಡಿರಬಹುದೆಂದು ಕಾಣುತ್ತದೆ.

ಶಾಸನಗಳನ್ನು ಗಮನಿಸಿದರೆ ಕೆಲವು ವಿಶೇಷ ಸಂದರ್ಭಗಳಲ್ಲಿ (ಗಂಡ ಮರಣ ಹೊಂದಿದ್ದು ಮಕ್ಕಳು ಚಿಕ್ಕವರಿದ್ದಾಗ, ಗಂಡು ಸಂತಾನವಿಲ್ಲದೆ ಹೆಣ್ಣಿಗೆ ಆಸ್ತಿಪಕ್ಕು ದೊರೆತಿರಬಹುದು) ಹೆಣ್ಣಿಗೆ ಆಸ್ತಿಯ ಹಕ್ಕು ದೊರೆತಿರುವುದು ಸ್ಪಷ್ಟವಿದೆ. ಮಕ್ಕಳು ಪ್ರೌಢರಾದ ಮೇಲೆ ಆಸ್ತಿಯ ಹಕ್ಕು ಬಹುಶಃ ತಾಯಿಯಿಂದ ಗಂಡುಮಕ್ಕಳಿಗೆ ದೊರೆಯುತ್ತಿದ್ದಿತು. ಗಂಡುಮಕ್ಕಳಿಲ್ಲದ ಕುಟುಂಬದಲ್ಲಿ ಹೆಣ್ಣು ಮದುವೆಯಾದನಂತರ ಆಸ್ತಿಯ ಒಡೆತನ ಅಳಿಯ ಹಾಗೂ ಮಗಳಿಗೆ ಸೇರುತ್ತಿದ್ದಿತು.[೫]

ಅಳಿಯ ಸಂತಾನವೆಂಬ ದಕ್ಷಿಣ ಕನ್ನಡಕ್ಕೇ ವಿಶಿಷ್ಟವಾದ ಆಸ್ತಿಪಕ್ಕು ಪ್ರಚಾರದಲ್ಲಿದ್ದಿತು. ಇದು ಭೂತಾಳ ಪಾಂಡ್ಯನಿಂದ ಜಾರಿಗೆ ಬಂದಿತೆಂಬ (ಕ್ರಿ.ಶ. ೭೭) ನಂಬಿಕೆ ಇದೆ. ಭೂತಾಳ ಪಾಂಡ್ಯನ ಕಟ್ಟು ಕಟ್ಟಳೆಗಳೆಂಬ ಒಂದು ಚಿಕ್ಕ ಪುಸ್ತಿಕೆ ಇದಕ್ಕೆ ಆಧಾರವಾಗಿದೆ.[೬] ಅಳಿಯ ಸಂತಾನದ ಪದ್ಧತಿಯಂತೆ ಆಸ್ತಿಯ ಒಡೆತನ ತಂದೆಯಿಂದ ಮಗನಿಗೆ ಬರದೆ ಸಹೋದರಿಯ

---

೧. (ರೈ) ಎಕ XII ತಿಪಟೂರು ೨೮ ಕ್ರಿ.ಶ. ೧೨೫೯.

೨. (ಮೈ) ಎಕ VI ಶ್ರೀರಂಗಪಟ್ಟಣ ೯೮ ಕ್ರಿ.ಶ. ೧೨೫೪.

೩. ತುನಾಶಾ I ಕುಂದಾಪುರ ೩೫ ಕ್ರಿ.ಶ. ೧೧೭೬. ಸ್ತ್ರೀಯರು ಮಾಡಿದ ದಾನಗಳಿಗೆ ಅನೇಕ ನಿದರ್ಶನಗಳಿವೆ. ಎಸ್‌ಐಐ IX(i) ಹರಪನಹಳ್ಳಿ ೩೪೬ ಕ್ರಿ.ಶ. ೧೨೭೬, ಎಸ್‌ಐಐ XV ನವಲಗುಂದ ೫೮೭ ಕ್ರಿ.ಶ. ೧೨ ಶಮಾ.

೪. (ರೈ) ಎಕ XVI ಗುಬ್ಬಿ ೭೬ ಕ್ರಿ.ಶ. ೧೨೫೨; (ಮೈ) ಎಕ VII ಮಂಡ್ಯ ೩೪ ಕ್ರಿ.ಶ. ೧೨೫೧.

೫. (ರೈ) ಎಕ IX ನೆಲಮಂಗಲ ೧೨ ಕ್ರಿ.ಶ. ೧೩೩೦; ಆಸ್ತಿಯ ಹಕ್ಕನ್ನು ಹೇಳುತ್ತ 'ಆರು ಸತ್ತಡಮ್... ಮಕ್ಕಳಿಲ್ಲದಿದ್ದಡೆ ಅಂಣ ತಂಮದಿರಿಗೆ ಸಲುವುದು ತಂಮ ಅಂಣ ತಂಮಂದಿರು ಇಲ್ಲದಿದ್ದಡೆ ಅಳಿಯ ಮ(ಗ)ಳಿಗೆ ಸಲುವುದು...' ಎಂದಿದೆ.

೬. ದೇವ ಪಾಂಡ್ಯನೆನ್ನುವವನು ಹೊಸದಾಗಿ ಸಿದ್ಧಪಡಿಸಿದ ಹಡಗಿನಲ್ಲಿ ವ್ಯಾಪಾರಕ್ಕೆ ಹೊರಡುವುದರಲ್ಲಿದ್ದಾಗ ಕುಣ್ಡೋದರನು (ರಾಕ್ಷಸರ ರಾಜ) ಮಾನವ ಬಲಿಯನ್ನು ಕೇಳುತ್ತಾನೆ. ಆಗ ರಾಜನು ತನ್ನ ಮಡದಿಯನ್ನು ತಮ್ಮ ಮಕ್ಕಳಲ್ಲಿ ಒಬ್ಬನನ್ನು ಬಲಿಕೊಡಲು ಕೇಳುತ್ತಾನೆ. ಆದರೆ ಅವಳು ನಿರಾಕರಿಸಿದಳು. ಆಗ ಅವನ ಸಹೋದರಿ ಸತ್ಯವತಿ ತನ್ನ ಮಗ ಜಯಪಾಂಡ್ಯನನ್ನು ಅದಕ್ಕಾಗಿ ನೀಡುತ್ತಾಳೆ. ಕುಣ್ಡೋದರನು ಆ ಹುಡುಗನ ವಿಶೇಷ ಗುಣಗಳನ್ನು ಅರಿತು ಅವನನ್ನು ಬಲಿತೆಗೆದುಕೊಳ್ಳದೆ ಹಡಗನ್ನು ಹೋಗಲು ಬಿಡುತ್ತಾನೆ. ಆ ಮಗುವನ್ನು ತನ್ನ ತಂದೆಯ ರಾಜ್ಯ ಜಯಂತಿಕಾಕ್ಕೆ ಕರೆದೊಯ್ದು ಭೂತಾಳ ಪಾಂಡ್ಯನೆಂದು ಹೆಸರಿಡುತ್ತಾನೆ. ಈ ಮಧ್ಯೆ ಹಡಗುಗಳು ಹೇರಳ ದ್ರವ್ಯವನ್ನು ತಂದವು. ಆಗ ಕುಣ್ಡೋದರ ಮತ್ತೊಮ್ಮೆ ಕಾಣಿಸಿಕೊಂಡು ನರಬಲಿಯನ್ನು ಕೇಳಿದಾಗ ದೇವಪಾಂಡ್ಯನ ಮಡದಿ ತಿರಸ್ಕರಿಸಿ ಸಾರ್ವಜನಿಕವಾಗಿ ತನಗೆ ಆ ಹಡಗಿನ ಐಶ್ವರ್ಯ ಬೇಡವೆಂದಳು. ಆಗ ದೇವಪಾಂಡ್ಯನ ಐಶ್ವರ್ಯ ಮತ್ತು ಆಸ್ತಿಯೆಲ್ಲವೂ ಭೂತಾಳ ಪಾಂಡ್ಯನಿಗೆ ಸೇರುವುದೆಂದೂ ಅವನ ಮಕ್ಕಳಿಗೆ ಹಕ್ಕಿಲ್ಲವೆಂದೂ ತೀರ್ಮಾನವಾಗುವುದು. ಭೂತಾಳಪಾಂಡ್ಯನು ತನಗೆ ರಾಜ್ಯ ಐಶ್ವರ್ಯ ದೊರೆತಂತೆ ತನ್ನ ಪ್ರಜೆಗಳೂ ಅನುಸರಿಸುವಂತೆ ಹೇಳಿದ. ಅದೇ ಅಳಿಯ ಸಂತಾನ ಪದ್ಧತಿಯಾಗಿ ಮುಂದುವರಿಯಿತು. ಭೂತಾಳಪಾಂಡ್ಯ ೭೫ ವರ್ಷ ಆಳಿದ. ಅವನ ಅಳಿಯ ವಿದ್ಯುದ್ಯುಮ್ನ ೮೧ ವರ್ಷ ಆಳಿದ, ವಿವರಗಳಿಗೆ ನೋಡಿ : P. Gururaja Bhat : Studies in Tuluva History and Culture. ಪು. ೨೫೭-೫೮ ಮತ್ತು ಅನುಬಂಧ XVII ರಿಂದ XXII.

ಮಗನಿಗೆ ಹೋಗುತ್ತದೆ. ನಮ್ಮ ಅಧ್ಯಯನಾವಧಿಯ ಆ ಪ್ರದೇಶದ ಅನೇಕ ಶಾಸನಗಳಲ್ಲಿ ಅಳಿಯನಿಗೆ ಕೊಟ್ಟಿರುವ ಪ್ರಾಮುಖ್ಯವನ್ನು ಗಮನಿಸಬಹುದು. ಕುಜನಾದೇವ ಅವನ ಮಗ ನಾರೆಣಾಇನಾದೇವ ಮತ್ತು ಅಳಿಯ ವಸುದೇವರು ಕೂಡಿ ದಾನಮಾಡಿದ ವಿಷಯ ನಿರೂಪಿತವಾಗಿದೆ.[೧] ವೀರಕುಲಶೇಖರನು ತನ್ನ ಅಳಿಯ ವೀರಬಂಕಿದೇವರಸನಿಗೆ ಮುಗರುನಾಡಿನ ರಾಜ್ಯಭಾರವನ್ನು ಬಿಟ್ಟುಕೊಟ್ಟ ವಿಷಯ ನಿರೂಪಿತವಾಗಿದೆ. ಅನಂತರ ಕುಲಶೇಖರ ಮತ್ತು ಅಳಿಯ ಬಂಕಿದೇವರು ಸೇರಿ ಅನೇಕ ದಾನಗಳನ್ನು ಬಂಕೇಶ್ವರ ದೇವರಿಗೆ ನೀಡಿದ ವಿಷಯ ಬರುತ್ತದೆ.[೨] ಕೆ.ವಿ. ರಮೇಶ್ ಅವರು, ಪ್ರಾಚೀನ ಆಳುಪರು ಈ ರೀತಿ ಅಳಿಯ ಸಂತಾನವನ್ನು ಅನುಸರಿಸುತ್ತಿರಲಿಲ್ಲವೆಂದೂ ವಿಜಯನಗರದ ಸಾಮ್ರಾಜ್ಯ ದಕ್ಷಿಣ ಕನ್ನಡದ ಮೇಲೆ ಪ್ರಭುತ್ವ ಪಡೆದ ಮೇಲೆ ಪ್ರಾದೇಶಿಕ ಅಧಿಕಾರಿಗಳು (ಹೆಚ್ಚು ಅಧಿಕಾರಿಗಳು ಜೈನರು)ಈ ಅಳಿಯ ಸಂತಾನವನ್ನು ಅನುಸರಿಸಿದ್ದಾರೆಂದು ಅಭಿಪ್ರಾಯಪಡುತ್ತಾರೆ. ಅಳಿಯಸಂತಾನದ ವ್ಯಾಪಕತೆ ಹದಿನಾಲ್ಕನೆಯ ಶತಮಾನದನಂತರ ಹೆಚ್ಚು ಬಳಕೆಯಲ್ಲಿದ್ದಂತಿದೆ. ನೆರೆನಾಡಾದ ಕೇರಳದಲ್ಲಿ ಈ ರೀತಿ ವ್ಯವಸ್ಥೆ ಇದ್ದುದರಿಂದ ಅದರ ಪ್ರಭಾವದಿಂದ ಅಲ್ಲಿಗೆ ಬಂದಿರುವ ಸಾಧ್ಯತೆಯೂ ಇದೆಯೆಂದು ಭಾವಿಸುತ್ತಾರೆ.[೩]

**ಆಡಳಿತ:**

ಕರ್ನಾಟಕದ ಈ ಮಹಿಳೆಯರು ಆಡಳಿತ ಕ್ಷೇತ್ರದಲ್ಲಿ ಅಸಾಧಾರಣವೆನ್ನಬಹುದಾದ ಸಾಧನೆಯನ್ನು ಮಾಡಿದ್ದಾರೆ. ಅನೇಕ ರಾಣಿಯರು ಅನೇಕ ಪ್ರಾಂತಗಳ ಆಡಳಿತ ನಿರ್ವಹಣೆಯನ್ನು ಸಮರ್ಥವಾಗಿ ಮಾಡಿದ್ದಾರೆ. (ಮುಂದಿನ ಒಂದು ಅಧ್ಯಾಯದಲ್ಲಿ ಈ ವಿಷಯವನ್ನು ವಿವರವಾಗಿ ಚರ್ಚಿಸಲಾಗುವುದು) ರಾಣಿಯರು ಒಳ್ಳೆಯ ವಿದ್ಯಾಸಂಪನ್ನೆಯರಾಗಿದ್ದರು. ಚಾಳುಕ್ಯ ತೈಲನ ರಾಣಿಯನ್ನು 'ಅಭಿನವ ಸರಸ್ವತಿ' ಎಂದು ಒಂದು ಶಾಸನ ಕರೆದಿದೆ.[೪] ಎರಡನೆಯ ಬಲ್ಲಾಳನ ರಾಣಿ ಚೋಳಮಹಾದೇವಿ ಕೆಂಬಾಳನ್ನು ಆಳುತ್ತಿದ್ದುದಾಗಿ ತಿಳಿದು ಬರುತ್ತದೆ.[೫] ಇನ್ನೊಬ್ಬ ರಾಣಿ ಪದ್ಮಲದೇವಿ ಪೊಸವಡಂಗಿಲೆಯನ್ನು ಸುಧರ್ಮದಿಂಧ ರಕ್ಷಿಸುತ್ತಿದ್ದ ವಿಷಯ ತಿಳಿದುಬರುತ್ತದೆ.[೬] ಇನ್ನೊಬ್ಬ ರಾಣಿ ಉಮಾದೇವಿ ಮಗರೆ ಮೂನೂರರ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದಳು.[೭] ಬಲ್ಲಾಳನ ರಾಣಿ ಬಮ್ಮಲೆಯನ್ನು ಒಂದು ಶಾಸನ 'ಮಹಾಮಂಡಲೇಶ್ವರಿ'[೮] ಎಂದು ಕರೆದಿದೆ. ಕಾಕತೀಯವಂಶದ ರುದ್ರಮದೇವಿ ರಾಜ್ಯಭಾರ ಮಾಡುತ್ತ ಅನೇಕ ಯುದ್ಧಗಳಲ್ಲಿ ಜಯಗಳಿಸಿದ ವಿಷಯವನ್ನು ಬೀದರಿನ ಒಂದು ಶಾಸನ ತಿಳಿಸುತ್ತದೆ.[೯]

ರಾಣಿಯರು ಕೇವಲ ಆಲಂಕಾರಿಕ ಆಡಳಿತಗಾರರಾಗಿರಲಿಲ್ಲ. ಧೈರ್ಯವಾಗಿ ಉತ್ತಮ ಕಾರ್ಯ ಕ್ರಮಗಳನ್ನು ಹಾಕಿಕೊಂಡು ಅವುಗಳನ್ನು ಸಮರ್ಥವಾಗಿ ಪೂರೈಸಿದ್ದಾರೆ. ಎರಡನೆಯ ಬಲ್ಲಾಳನ ರಾಣಿ ಉಮಾದೇವಿ-ಅಣಿಗನಹಳ್ಳಿಯ ಮತ್ತು ಕಿತ್ತನಕೆರೆಯ

---

೧. ತುನಾಶಾ I ಮೂಡಬಿದಿರೆ ೩೮ ಕ್ರಿ.ಶ. ೧೨೦೫.

೨. ತುನಾಶಾ I ಮಂಗಳೂರು ೩೬ ಕ್ರಿ.ಶ. ೧೨೦೪.

೩. K.V. Ramesh : History of South Canara ಪು. ೨೭೯-೮೦.

೪. ಎಸ್‌ಐಐ XV ಹುನಗುಂದ ೪೭ ಕ್ರಿ.ಶ. ೧೧೫೧.

೫. (ರೈ) ಎಕ V ಚನ್ನರಾಯಪಟ್ಟಣ ೨೦೫ ಕ್ರಿ.ಶ. ೧೨೦೦.

೬. ಎಸ್‌ಐಐ IX(i) ಹಡಗಲಿ ೩೩೦ ಕ್ರಿ.ಶ. ೧೨೧೨.

೭. (ರೈ) ಎಕ V ಅರಸಿಕೆರೆ ೪೦ ಕ್ರಿ.ಶ. ೧೨೦೯.

೮. (ರೈ) ಎಕ XII ತಿಪಟೂರು ೩೫ ಕ್ರಿ.ಶ. ೧೧೭೩.

೯. Select Epigraphs of AndhraPradesh Bidar ೨೧ ಕ್ರಿ.ಶ. ೧೩ ಶಮಾ.

ಪ್ರಿತ್ತಿಯ ಆದಾಯದ ಸಮಸ್ಯೆ ಬಂದು ಆ ಕೇರಿಯ ಮಹಾಜನಗಳು ಸಿದ್ಧಾಯದ ನಷ್ಟ ತೆರಲಾರದೆ ಹೋದಾಗ ಎಂಟು [illegible] ರಿಯಾಯಿತಿಯನ್ನು ನೀಡಿ ಪುನರ್ಧಾರೆಯಾಗಿ ಮಾಡಿಕೊಟ್ಟ ವಿಷಯ ತಿಳಿದು ಬರುತ್ತದೆ.[೧]

ಅಭಿನವ ಕೇತಲ ದೇವಿ ತನ್ನ ಆಳ್ವಿಕೆಗೆ ಒಳಪಟ್ಟ ಕುಂದವಾಡದಲ್ಲಿ ಬುಧವಾರ ಸಂತೆಯನ್ನು ಏರ್ಪಡಿಸಲು ಸಲಹೆಕೊಟ್ಟು ಅದು ಈಡೇರುವಂತೆ ನೋಡಿಕೊಂಡಳು.[೨]

ಬಲ್ಲಾಳನ ರಾಣಿಯರಲ್ಲಿ ಉಮಾದೇವಿ ಆಡಳಿತಗಾರಳಾಗಿ ತುಂಬ ಪ್ರಸಿದ್ಧಳು. ಇವಳು ಮಗರೆ ಮೂಸೂರನ್ನು ಆಳುತ್ತಿದ್ದಳು. ಇವಳ ನೇತೃತ್ವದಲ್ಲಿ ಕನಿಷ್ಠ ಮೂರುಬಾರಿ ಬೆಳಗುತ್ತಿಯ ಮೇಲೆ ಆಕ್ರಮಣ ಮಾಡಿರುವುದು ತಿಳಿದು ಬರುತ್ತದೆ. ಅವಳ ಆಕ್ರಮಣದ ರೀತಿಯನ್ನು ಶಾಸನಗಳು 'ತೊಟ್ಟೆನಲುಮ್ಮಾ ಬಾಯಿಯ ಕಟ್ಟಾಳ್ಗಳ್ ಕುದುರೆವೆರಸು ತುರುಗೊಳ್'[೩] ಎಂದೂ ಮತ್ತು 'ದಾಳಿಯನೊಮ್ಮೆಯೆ ಕವಿತಂದಡೆ'[೪] ಎಂಬಂತೆ ವರ್ಣಿಸುತ್ತವೆ. ಈ ವರ್ಣನೆಗಳು ಅವಳ ಕ್ಷಾತ್ರಗುಣಗಳನ್ನು ಸ್ಪಷ್ಟಪಡಿಸುತ್ತವೆ.

ಚೋಳಮಹಾದೇವಿ ಕೆಂಬಾಳನ್ನು ಆಳುವಾಗ ಒಂದು ಸಾರಿ 'ದುಷ್ಟಕಷ್ಟ'ರ ಮಾತನ್ನು ಕೇಳಿ ಬೇವೂರನ್ನು ಮುತ್ತಲು ತನ್ನ ಸೈನ್ಯಕ್ಕೆ ಆಜ್ಞೆಕೊಡುತ್ತಾಳೆ. ಆಗ ಸೈನ್ಯ ಮುತ್ತಿ ತುರುಸೆರೆ ಹಿಡಿದು ಹೊರಟಾಗ ಬೇವೂರಿನ ಕೇತಮಲ್ಲ ಪ್ರತಿಭಟಿಸಿ ತನ್ನ ಊರಿನ ತುರುಗಳನ್ನು ಮರಳಿಸಿ ಹೋರಾಡಿ ಮಡಿದನು. ಅನಂತರ ಚೋಳಮಹಾದೇವಿ ತನ್ನ ತಪ್ಪನ್ನು ಅರಿತು 'ಯೆಮ್ಮ ಮಕ್ಕಳ ನಾವು ನೋಯಿಸಿದೆವು' ಎಂದು ಒಪ್ಪಿಕೊಂಡು ಕೇತಮಲ್ಲನ ಮಗ ನಾರಸಿಂಹನಾಯಕನನ್ನು ಸಮಾಧಾನಿಸಿ ಭೂಮಿದಾನವನ್ನು ನೀಡುತ್ತಾಳೆ. ಹೇಳುಗರ ಮಾತನ್ನು ಅನುಸರಿಸಿ ಆಕ್ರಮಣಮಾಡಿಸಿದರೂ ನಿಜಸ್ಥಿತಿ ತಿಳಿದನಂತರ ತಪ್ಪನ್ನು ಒಪ್ಪಿಕೊಂಡು ಪ್ರಾಣನಷ್ಟಕ್ಕೆ ಪರಿಹಾರ ನೀಡಿದ ವಿರಳ ನಿದರ್ಶನ ಇದಾಗಿದೆ.[೫]

ತುಳುನಾಡಿನ ರಾಣಿಯರೂ ರಾಜ್ಯಾಡಳಿತದಲ್ಲಿ ನೇರವಾಗಿ ಭಾಗಿಗಳಾಗಿರುವುದುಂಟು. ಕ್ರಿ.ಶ. ೧೨೭೫ರಲ್ಲಿ ವೀರಪಾಂಡ್ಯದೇವನು ಮರಣ ಹೊಂದಿದಾಗ ಅವನ ಮಗನಾದ ದೇವರಸನು ಪ್ರಾಪ್ತ ವಯಸ್ಸಿಗೆ ಆಗ ಇನ್ನೂ ಬಾರದಿದ್ದ ಕಾರಣ ಪಟ್ಟದ ರಾಣಿ ಬಲ್ಲಮಹಾದೇವಿ ಸಿಂಹಾಸನವನ್ನು ಏರಿ ಕ್ರಿ.ಶ. ೧೨೭೫ ರಿಂದ ೧೨೯೨ ರವರೆಗೆ ಆಡಳಿತ ನಡೆಸಿದಳು.[೬] ಇದೇ ರೀತಿ ಎರಡನೆಯ ಬಿಲ್ಲಮನ ರಾಣಿ ಲಚ್ಚಿಯವ್ವ ತನ್ನ ಮೊಮ್ಮಗ ಚಿಕ್ಕವನಿರುವಾಗ ರಾಜ್ಯದ ರಾಜ್ಯಭಾರವನ್ನು ನಿರ್ವಹಿಸಿದಂತೆ ತಿಳಿದು ಬರುತ್ತದೆ.[೭]

ಕರ್ನಾಟಕದ ರಾಣಿಯರು ಆಡಳಿತಗಾರರಾಗಿ, ದಾನಿಗಳಾಗಿ, ವಿದ್ಯಾಪ್ರೋತ್ಸಾಹಕರಾಗಿ, ಆಕ್ರಮಣದ ನೇತೃತ್ವ ವಹಿಸಿದ ಧೀರೆಯರಾಗಿ, ಕಲಾಪ್ರವೀಣರಾಗಿ ವೈವಿಧ್ಯಮಯ ವ್ಯಕ್ತಿತ್ವ ಪಡೆದಿದ್ದರು. ಆಡಳಿತ ಕ್ಷೇತ್ರದಲ್ಲಿ ರಾಣಿಯರು ಪ್ರಕಟಪಡಿಸಿದ ಸಾಮರ್ಥ್ಯ ಬಹುಶಃ ಭಾರತದ ಇನ್ನಾವುದೇ ಭಾಗದಲ್ಲಿ ಇಷ್ಟು ವ್ಯಾಪ್ತಿಯಲ್ಲಿ ಇಷ್ಟು ಸಂಖ್ಯೆಯಲ್ಲಿ ಇಲ್ಲವೆಂದೇ ಹೇಳಬಹುದು. ಇದು ಕನ್ನಡನಾಡಿನ ಆಡಳಿತ ಇತಿಹಾಸದ ಬಹು ಗಮನಾರ್ಹ ಅಂಶಗಳಲ್ಲಿ ಒಂದಾಗಿದೆ.

---

೧. (ರೈ) ಎಕ V ಬೇಲೂರು ೧೮೨ ಸು. ೧೨೩೫.

೨. (ರೈ) ಎಕ XI ದಾವಣಗೆರೆ ೧೦೫ ಕ್ರಿ.ಶ. ೧೨೪೦.

೩. (ರೈ) ಎಕ VII ಹೊನ್ನಾಳಿ ೩೭ ಕ್ರಿ.ಶ. ೧೧೯೬.

೪. (ರೈ) ಎಕ VII ಹೊನ್ನಾಳಿ ೩೮ ಕ್ರಿ.ಶ. ೧೧೯೬.

೫. (ರೈ) ಎಕ V ಚನ್ನರಾಯಪಟ್ಟಣ ೨೦೫ ಕ್ರಿ.ಶ. ೧೨೦೦.

೬. ಕೆ.ವಿ. ರಮೇಶ್ : ತುಳುನಾಡಿನ ಇತಿಹಾಸ, ಪು. ೫೮.

೭. Srinivasa Ritti : The Sevunas ಪು. ೨೫೨.

ಜಿ. ಎಚ್. ಖಾರೆಯವರು ಬೆಳಕಿಗೆ ತಂದ ಕೆಲವು ನಾಣ್ಯಗಳ ಮೇಲೆ 'ಶ್ರೀಲಕುಮಾ' ಎಂದು ಕನ್ನಡ ಲಿಪಿಯಲ್ಲಿದೆ. ಈ ನಾಣ್ಯಗಳು ಧಾರವಾಡದ ಪ್ರಾಂತವನ್ನು ಆಳುತ್ತಿದ್ದ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿಯವಾಗಿರಬಹುದೆಂದು ಭಾವಿಸಲಾಗಿದೆ. ಭಾರತದ ನಾಣ್ಯ ಇತಿಹಾಸದಲ್ಲಿಯೇ ಇದು ಅಪರೂಪದ ಉದಾಹರಣೆಯಾಗಿದ್ದು ರಾಣಿಯೊಬ್ಬಳು ಟಂಕಿಸಿದ ಅಪರೂಪದ ನಾಣ್ಯಗಳಾಗಿವೆ.[೧]

ರಾಣಿಯಂತಹ ಅಧಿಕಾರದ ಹುದ್ದೆಗಳಲ್ಲಿ ಇಲ್ಲದ ಅನೇಕ ಸ್ತ್ರೀಯರು ದಾನ ಧರ್ಮಕಾರ್ಯಗಳಲ್ಲಿ ಮೆರೆದಿದ್ದಾರೆ. ಅಂಥವರಲ್ಲಿ ವೆಣ್ಣೆಲೆ ಸೆಟ್ಟಿಕವ್ವೆ ಗಮನಾರ್ಹ ಸ್ತ್ರೀಯಾಗಿದ್ದಾಳೆ. ವೀರಬಣಂಜು ಧರ್ಮವನ್ನು ಪ್ರಕಟಿಸಿದ ಅವಳು ಅದ್ಭುತ ವ್ಯಕ್ತಿತ್ವವನ್ನು ಪಡೆದವಳು. ಹೆಂಗಸರು ಯಾವಾಗಲೂ ಕೆರಸಿ, ಕಾವಲಿ, ತಂಬುಗೆ, ಹುಟ್ಟು, ಸಟ್ಟುಗ ಇತ್ಯಾದಿಗಳ ಬಗ್ಗೆ ಗಮನ ಹರಿಸಿದರೆ ವೆಣ್ಣೆಲೆಸೆಟ್ಟಿಕವ್ವೆ ದೇವಾಲಯವನ್ನು ಕಟ್ಟಿಸಿ ಶಿವನನ್ನು ಪ್ರತಿಷ್ಠೆ ಮಾಡಿಸಿದಳು. ಅಲ್ಲದೆ ದುಷ್ಟರ ಸಾಮರ್ಥ್ಯವನ್ನು ನಿವಾರಿಸಿ ಕಳ್ಳರ ಕೊಳ್ಳಿಯ ಬಾಧೆಯನ್ನು ನಿವಾರಿಸಿ, ಭೀತರನ್ನು ರಕ್ಷಿಸಿ ನಿರ್ಮಳ ಕೀರ್ತಿಯನ್ನು ಪಡೆದಳು. ಅವಳು ತನ್ನ ಅಸಾಧಾರಣ ಸಾಮರ್ಥ್ಯದಿಂದ 'ಪೃಥ್ವಿಸೆಟ್ಟಿ' ಎಂಬ ಬಿರುದನ್ನು ಪಡೆದಳು.[೨]

ಸ್ತ್ರೀಯರು ಮುಖ್ಯ ಸಾಕ್ಷಿಗಳಾಗಿ ಯಾವುದೇ ಪ್ರಾಚೀನ ದಾಖಲೆಗಳಲ್ಲಿ ಕಾಣುವುದಿಲ್ಲ. ಆದರೆ ಕ್ರಯಪತ್ರದ ಶಾಸನವೊಂದಕ್ಕೆ ಸಾಕ್ಷಿಯಾಗಿ ಸ್ತ್ರೀಯೊಬ್ಬಳು ಇರುವುದು ಗಮನಾರ್ಹವಾಗಿದೆ. ಗೊಲೆಹನಾಯಕನ ತಂಗಿ ಸಿರಿಯಾದೇವಿಯಕ್ಕ ಎಂಬುವವಳ ಹೆಸರು ಸಾಕ್ಷಿಗಳಲ್ಲಿ ಒಂದಾಗಿ ಕಂಡುಬರುತ್ತದೆ.[೩] ಸ್ತ್ರೀಯರನ್ನು ಸಾಕ್ಷಿಗಳಾಗಿ ಪರಿಗಣಿಸಬಾರದು ಎಂದು ನಂಬಿದ್ದ ಕಾಲದಲ್ಲಿ ಈ ವಿರಳ ಉದಾಹರಣೆ ವಿಶೇಷವಾದುದಾಗಿದೆ.

**ಧರ್ಮಗಳು:**

ಜೈನಧರ್ಮ ಸ್ತ್ರೀಜನ್ಮದಲ್ಲಿ ಮುಕ್ತಿ ಇಲ್ಲವೆಂದೇ ಹೇಳುತ್ತಿದ್ದಿತು. ಜೈನಧರ್ಮದ ಯಾಪನೀಯ ಶಾಖೆ ಸ್ತ್ರೀಗೆ ಮೋಕ್ಷವಿದೆ ಎಂದು ಸಾರಿತು. ಕ್ರಮೇಣ ದಿಗಂಬರ ಶಾಖೆಯೂ ಸ್ತ್ರೀಯರ ವಿಷಯದಲ್ಲಿ ರಿಯಾಯಿತಿಯಿಂದ ನಡೆದುಕೊಂಡಿತು. ಜೈನ ಸನ್ಯಾಸಿನಿಯರನ್ನು ಕಂತಿ ಮತ್ತು ಅಜ್ಜಿಯರೆಂದು ಕರೆಯುತ್ತಿದ್ದರು. ಅವರಿಗೆ ಕೇಶವಿಚ್ಛೇದನವನ್ನು ವಿಧಿಸಲಾಗಿದ್ದಿತು, ಆದರೆ ನಗ್ನತೆಯನ್ನು ವಿಧಿಸಿರಲಿಲ್ಲ. ಸನ್ಯಾಸಿನಿಯರಲ್ಲಿ 'ಭಟ್ಟಾರಕಿ' ಎಂಬ ವರ್ಗವೂ ಇದ್ದಿತು. ಇದು ಬಹುಶಃ ಜೈನಸ್ತ್ರೀಗುರುವನ್ನು ಸೂಚಿಸುತ್ತದೆ. ಕರಿಂಗಾಲದ ಶಾಸನವೊಂದು 'ಶ್ರೀಮತು ಪಣ್ಡಿಕರೆಂಬ ಭೂಮಿಯ ಭಟ್ಟಾರಕಿಗೆ ಬಿಟ್ಟರು' ಎಂದು ತಿಳಿಸುತ್ತದೆ.[೪] ಕೇಮಣ ರೇಚಣ ಜೀರ್ಣೋದ್ಧಾರ ಮಾಡಿಸಿದ ಬಸದಿ- 'ಚಂದ್ರನಾಥ ಸ್ವಾಮಿಗಳ ಅಷ್ಟವಿಧಾರ್ಚನೆಗೆ ರಿಷಿಯಜ್ಜಿಯರಾಹಾರ ದಾನಕ್ಕೆ' ದಾನ ನೀಡಿ ಬಸದಿಯ ಆಚಾರ್ಯ ಬಾಹುಬಲಿದೇವರ ಶಿಷ್ಯೆ ರಾಜಮತಿಕಂತಿಯರ ಕಾಲನ್ನು ತೊಳೆದು ಉಗುರು ಮೂನೂರ್ವರು ದಾನ ಮಾಡಿದ ವಿಷಯ ತಿಳಿದು ಬರುತ್ತದೆ.[೫]

ಹೀಗೆ ಅನೇಕ ಜೈನ ಸನ್ಯಾಸಿನಿಯರು ದಾನ ದತ್ತಿಗಳನ್ನು ಪಡೆದಿರುವುದುಂಟು. ಆದರೂ ಅಜ್ಜಿಯರಿಗೆ ಸನ್ಯಾಸಿಗಳಿಗಿದ್ದಷ್ಟು ಸ್ವಾತಂತ್ರ್ಯ ಇದ್ದಂತಿಲ್ಲ. ಅವರಿಗೆ, ಸನ್ಯಾಸ ಸ್ವೀಕರಿಸಲು ಬಂದವರಿಗೆ ಅದನ್ನು ನೀಡುವ ಸ್ವಾತಂತ್ರ್ಯ ಇದ್ದಂತಿಲ್ಲ.[೬]

---

೧. A. V.Narasimha Murthy : Coins of Karnataka ಪು. ೮೮-೮೯.

೨. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೩. (ರೈ) ಎಕ V ಹಾಸನ ೧೫೧ ಕ್ರಿ.ಶ. ೧೧೫೧.

೪. ಎಸ್‌ಐಐ IX(i) ಮಂಗಳೂರು ೩೯೯ ಕ್ರಿ.ಶ. ೧೨ ಶಮಾ.

೫. ಧಾತಾಶಾ ೪೫ ಕ್ರಿ.ಶ. ೧೨ ಶಮಾ.

೬. Rambhushan Prasad Singh : Jainism in Early Medieval Karnataka, ಪು. ೧೨೮.

ಜೈನಧರ್ಮದ ಸ್ತ್ರೀ ಅನುಯಾಯಿಗಳನ್ನು ಶ್ರಾವಕಿಯರೆಂದು ಕರೆಯುತ್ತಿದ್ದರು. ಅನೇಕ ರಾಣಿಯರು, ಅಧಿಕಾರಿಗಳ ಪತ್ನಿಯರು, ಸಾಮಾನ್ಯ ಸ್ತ್ರೀಯರು ಜೈನಧರ್ಮಕ್ಕೆ ಬೆಂಬಲವಾಗಿ ನಿಂತಿದ್ದಾರೆ. ಮಂತ್ರಿ ಚಂದ್ರಮೌಳಿಯ ಪತ್ನಿ ಆಚಿಯಕ್ಕ ಶ್ರವಣಬೆಳಗೊಳದಲ್ಲಿ ಕಟ್ಟಿಸಿದ ಬಸದಿ ಗಮನಾರ್ಹವಾದದ್ದು. ಜೈನ ಧರ್ಮ ಅನೇಕ ಸ್ತ್ರೀಯರಿಂದ ದಾನದತ್ತಿಗಳನ್ನು ಪಡೆಯಿತು. ಅನೇಕ ಸ್ತ್ರೀಯರು ಜೈನ ಧಾರ್ಮಿಕ ವಿಧಿಯಿಂದ ಮರಣವನ್ನು ಪಡೆದಿರುವುದು ಕಂಡು ಬರುತ್ತದೆ.[೧] ಈ ರೀತಿ ಧಾರ್ಮಿಕ ವಿಧಿಯಿಂದ ಮರಣಹೊಂದಿದ ಸ್ತ್ರೀಯರ ನಿಷಿದಿ ಶಾಸನಗಳು ಕರ್ನಾಟಕದ ಹಲವಾರು ಸ್ಥಳಗಳಲ್ಲಿ ದೊರೆಯುತ್ತವೆ.

ಜೈನ ಧರ್ಮದಲ್ಲಿ ನೋಂಪಿಗಳಿಗೆ ವಿಶೇಷ ಸ್ಥಾನವಿದೆ. ಅನೇಕ ಸ್ತ್ರೀಯರು ವಿವಿಧ ನೋಂಪಿಗಳನ್ನು ನೆರವೇರಿಸುತ್ತಿದ್ದರು. ನೋಂಪಿಗಳು ಸ್ತ್ರೀಯರ ವಿಶೇಷ ಗಮನವನ್ನು ಸೆಳೆದಿದ್ದಂತೆ ಕಂಡುಬರುತ್ತದೆ. ಹತ್ತನೆಯ ಶತಮಾನದಲ್ಲಿ ಅತ್ತಿಮಬ್ಬೆ ಜೈನಧರ್ಮಕ್ಕೆ ನೀಡಿದ ಅಸಾಧಾರಣ ಬೆಂಬಲ ಮುಂದಿನ ಶತಮಾನದ ಸ್ತ್ರೀಯರಿಗೂ ಆದರ್ಶವಾಗಿದ್ದಿತು; ಅವಳ ಸ್ಮರಣೆ, ಅವಳೊಂದಿಗೆ ಹೋಲಿಕೆ ಮಾಡಿಕೊಳ್ಳುವುದು ಕಂಡುಬರುತ್ತದೆ. ಮಹದೇವ ಮಂತ್ರಿಯ ಮಡದಿ ಲೋಕಲದೇವಿಯನ್ನು 'ಜಿನದೇವತೆ ಜೈನಧರ್ಮದುಂನತಿಕೆಯೊಳತ್ತಿಮಬ್ಬೆ' ಎಂದು ಶಾಸನವೊಂದು ಕರೆದಿದೆ.[೨]

ಶೈವ ಧರ್ಮದಲ್ಲಿ ಸನ್ಯಾಸಿನಿಯರ ಸಂಖ್ಯೆ ವಿರಳವಾಗಿದ್ದಿತೆಂದು ಕಾಣುತ್ತದೆ. ಶೈವ ಯತಿಗಳ ತಪಸ್ಸು ಜ್ಞಾನ ಮುಂತಾದವುಗಳ ವಿವರಗಳು ವಿಪುಲವಾಗಿ ದೊರೆಯುವುದನ್ನು ಗಮನಿಸಿದ್ದೇವೆ. ವಿರಳ ಸಂಖ್ಯೆಯಲ್ಲಾದರೂ ಶೈವ ಸನ್ಯಾಸಿನಿಯರ ಕೆಲವು ವಿವರಗಳು ಶಾಸನಗಳಿಂದ ತಿಳಿದುಬರುತ್ತದೆ. ಇಂಗಳಗಿಯ ಶಾಸನದಲ್ಲಿ 'ಶ್ರೀಮೂಲಸ್ಥಾನದೇವರ ಪಾದಾರಾಧಕಿಯಪ್ಪ ಕ್ಷೇತ್ರದಲ್ಲಿ ಸನ್ಯಾಸಿ ಮಹಾನುಭಾವೆ ಬಲ್ಲವ್ವೆಗಳ ಪಾದವನ್ನು ತೊಳೆದು ಧಾರಾಪೂರ್ವಕವಾಗಿ ಶ್ರೀ ಸಿದ್ಧರಾಮ ದೇವರಿಗೆ ಕೇದಾರದೇವರಿಗೆ ನಾಗೇಶ್ವರ ದೇವರಿಗೆ' ಹೀಗೆ ಸಕಲ ದೇವರಿಗೆ ಶ್ರೀ ಗುಡ್ಡವ್ವೆ ಮುಖ್ಯವಾಗಿ ಗಣಮಠಕ್ಕೆ ಕೊಟ್ಟ ವೃತ್ತಿಯ ವಿಷಯ ಬರುತ್ತದೆ.[೩] ಹೊಂಬಳದ ಶಾಸನದಲ್ಲಿ ಕೆಂಗಣಬ್ಬೆಯೆಂಬುವಳ ಪಾದವನ್ನು ಭಕ್ತಿಯಿಂದ ಅರ್ಚಿಸುತ್ತ ವಾಮಶಕ್ತಿಗಳ ಮಗ ನರಗುಂದದ ಬೆಟ್ಟದಲ್ಲಿ ತಪಸ್ಸನ್ನು ಆಚರಿಸುತ್ತಿದ್ದ ವಿಷಯ ತಿಳಿದು ಬರುತ್ತದೆ.[೪] ಕುಂಜನಂಬಿಸೆಟ್ಟಿ ಮಡಿಯಲು ಅವನ ತಂದೆ ಕಂಡನಂಬಿಸೆಟ್ಟಿ ಹೊಸವೂರಿನಲ್ಲಿ ತನ್ನ ಮಗನ ಹೆಸರಲ್ಲಿ ಶಿವಾಲಯವನ್ನು ಕಟ್ಟಿಸುತ್ತಾನೆ. ದೋರಸಮುದ್ರದ ರಾಜಗುರು ರುದ್ರಶಕ್ತಿದೇವರು ನೂರಿಪ್ಪತ್ತು ಸ್ಥಾನಿಕರು, ಕಂಪಣಾಚಾರ್ಯರು ಮುಖ್ಯವಾದ ಮಹಾಗಣಗಳ ಸಮಕ್ಷದಲ್ಲಿ ಗಾವುಂಡರು ಕಂಡನಂಬಿ ಸೆಟ್ಟಿಯ ಮಗಳು ಚಂದವ್ವೆಗೆ ಸಮಸ್ತ ದತ್ತಿಯನ್ನು ಮಠದೆರೆಯನ್ನು ಬಿಟ್ಟು ಅವಳಿಗೆ 'ವಿಭೂತಿಪಟ್ಟ'ವನ್ನು ಕಟ್ಟಿ 'ಗಣ ಕುಮಾರಿ' ತನವನ್ನು ಧಾರೆಯೆರೆದು ಕೊಟ್ಟುದಾಗಿ ಶಾಸನವೊಂದು ತಿಳಿಸುತ್ತದೆ.[೫] ಈ ರೀತಿ 'ಗಣ ಕುಮಾರಿ' ಮಾಡುವುದು ಶೈವಧರ್ಮದ ಒಂದು ವಿಶಿಷ್ಟ ಧಾರ್ಮಿಕ ಅಧಿಕಾರವನ್ನು ನೀಡುವ ಸೂಚನೆಯಂತೆ ಕಾಣುತ್ತದೆ.

ಪರಿಯಳಿಗೆ ವೈಜಕವ್ವೆ, ಗುಡ್ಡವ್ವೆಯಂಥವರು ಉಗ್ರವಾಗಿಯೇ ಶೈವ ಪರವಾದ ಹೋರಾಟವನ್ನು ಮಾಡಿದಂತೆ ಕಂಡು ಬರುತ್ತದೆ.

ವೀರಶೈವ ಧರ್ಮ ಸ್ತ್ರೀಯರಿಗೆ ಕೊಟ್ಟಷ್ಟು ಪ್ರೋತ್ಸಾಹ, ಬೆಂಬಲ ಮತ್ತು ಸ್ವಾತಂತ್ರವನ್ನು ಇತರ ಯಾವುದೇ ಧರ್ಮ ಕೊಟ್ಟಿಲ್ಲ. ಅಕ್ಕಮಹಾದೇವಿ ವೀರಶೈವ ಧರ್ಮದ ಸ್ವಾತಂತ್ರ್ಯ, ಭಕ್ತಿಗಳಿಗೆ ಪ್ರತೀಕದಂತೆ ಇದ್ದಾಳೆ. ಅವಳು ಕೌಶಿಕನನ್ನು ತ್ಯಜಿಸಿ ಆಧ್ಯಾತ್ಮಿಕ ಅನ್ವೇಷಣೆಯಲ್ಲಿ ಮಲ್ಲಿಕಾರ್ಜುನನನ್ನು ಅರಸಿಕೊಂಡು ಹೊರಟದ್ದು ಆ ಕಾಲದ ಹೆಣ್ಣಿಗಿದ್ದ ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ

---

೧. (ಮೈ) ಎಕ II ಶ್ರವಣಬೆಳಗೊಳ ೫೩೯ ಕ್ರಿ.ಶ. ೧೨೧೪; ಕಇ V ಹಾನಗಲ್ಲು ೧೦೮ ಕ್ರಿ.ಶ. ೧೨೬೨.

೨. (ರೈ) ಎಕ VIII ಸೊರಬ ೧೪೦ ಕ್ರಿ.ಶ. ೧೧೯೮.

೩. ಸಾಧನೆ ೯:೪ ಚಿತಾಪುರ (ತಾ) ಕ್ರಿ.ಶ. ೧೨೦೯.

೪. ಕಪಟರಾಳ ಕೃಷ್ಣರಾವ್; ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು. ೧೦೬.

೫. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.

ತುಂಬಾ ಧೀರೋದಾತ್ತವಾದುದಾಗಿದೆ. ಗಂಡನ ಮನೆಯನ್ನು, ತಂದೆತಾಯಿಗಳ ಆಶ್ರಯವನ್ನು ತೊರೆದು ಹೊರಟ ಅವಳ ವ್ಯಕ್ತಿತ್ವ, ಅವಳನ್ನು ಸ್ವಾಗತಿಸಿ ಕಲ್ಯಾಣದ ಧಾರ್ಮಿಕ ಕ್ಷೇತ್ರದಲ್ಲಿ ಅವಳಿಗೆ ಮೌಲಿಕ ಸ್ಥಾನ ಕೊಟ್ಟದ್ದು, ಇವು ವೀರಶೈವ ಧರ್ಮ ಸ್ತ್ರೀಯರ ವಿಷಯದಲ್ಲಿ ತಳೆದ ಉದಾರ ಧೋರಣೆ ಮತ್ತು ದಿಟ್ಟ ನಿಲವುಗಳಿಗೆ ಸಾಕ್ಷಿಯಾಗಿದೆ. ಸಮಾಜದ ಕೆಳವರ್ಗದ ಸ್ತ್ರೀಯರಲ್ಲಿ ಅನೇಕರು ಮುಕ್ತವಾಗಿ ಧಾರ್ಮಿಕ ಕ್ಷೇತ್ರವನ್ನು ಪ್ರವೇಶಿಸುವಂತಾಯಿತು; ಧರ್ಮದ ವಿಷಯದಲ್ಲಿ ಧೈರ್ಯವಾಗಿ ಮಾತನಾಡಲು ಅವಕಾಶವಾಯಿತು. ನಿದರ್ಶನಕ್ಕೆ ಇಷ್ಟಲಿಂಗ ಕೆಳಗೆ ಬಿದ್ದರೆ, ಒಡೆದು ಹೋದರೆ ಆತ್ಮ ಹತ್ಯೆ ಮಾಡಿಕೊಳ್ಳಬೇಕೆಂಬ ಅಭಿಪ್ರಾಯ ಬಸವಪೂರ್ವದಲ್ಲಿ ಪ್ರಚಲಿತವಾಗಿದ್ದಿತು. ಆದರೆ ಬಸವಣ್ಣನವರ ಸಮಕಾಲೀನರಲ್ಲಿ ಬಹುಮಟ್ಟಿಗೆ ಪ್ರಾಣತ್ಯಾಗದ ಅಗತ್ಯವಿಲ್ಲವೆಂಬ ಅಭಿಪ್ರಾಯವೇ ಪ್ರಬಲವಾಗಿರುವುದು ಕಂಡುಬರುವುದಾದರೂ ಅಮುಗೆರಾಯಮ್ಮನೆಂಬ ವಚನಕಾರ್ತಿ ಇಷ್ಟಲಿಂಗ ಭಿನ್ನವಾದಾಗ ಪ್ರಾಣತ್ಯಾಗ ಮಾಡಬೇಕೆಂದೇ ವಾದಿಸಿದ್ದಾಳೆ.[೧] ಹೀಗೆ ಧರ್ಮದ ಆಚರಣೆಗಳ ವಿಷಯದಲ್ಲಿ ಭಿನ್ನ ಧ್ವನಿಯನ್ನು ಒಬ್ಬ ಸ್ತ್ರೀ ಎತ್ತಲು ಸಾಧ್ಯವಾಗಿರುವುದು ಬಹುದೊಡ್ಡ ಸಾಧನೆಯೇ ಆಗಿದೆ.

ಲಿಂಗಭೇದವಿಲ್ಲದೆ ನಡೆಯುವ ಲಿಂಗಧಾರಣೆ ಪುರುಷನಿಗೂ ಮಹಿಳೆಗೂ ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಸರಿಸಮನಾಗಿ ಭಾಗವಹಿಸುವುದಕ್ಕೆ ದಾರಿ ಮಾಡಿಕೊಟ್ಟ ವಿಷಯವನ್ನು ಹಿರೇಮಲ್ಲೂರ ಈಶ್ವರನ್ ಅವರು ಗುರುತಿಸುತ್ತಾರೆ.[೨]

ಆ ಕಾಲದ ಒಂದು ವಿಶೇಷವೆಂದರೆ ಕೌಟುಂಬಿಕ ನೆಲೆಯಲ್ಲಿ ಇದ್ದ ಧಾರ್ಮಿಕ ಸ್ವಾತಂತ್ರ್ಯ. ವಿಷ್ಣುವರ್ಧನನು ಶ್ರೀವೈಷ್ಣವಧರ್ಮದ ಕಡೆಗೆ ತನ್ನ ಒಲವನ್ನು ತೋರಿಸಿದರೂ ಅವನ ರಾಣಿ ಶಾಂತಲೆ ಜೈನ ಧರ್ಮಾವಲಂಬಿಯಾಗಿದ್ದುದು ಪ್ರಸಿದ್ಧವಾಗಿಯೇ ಇದೆ. ಭಿನ್ನ ಧರ್ಮಾವಲಂಬಿಗಳಾದ ಪತಿ ಪತ್ನಿಯರು ಒಂದು ಕುಟುಂಬವಾಗಿ ಬದುಕುತ್ತಿದ್ದುದು ಆ ಕಾಲದಲ್ಲಿ ಅಷ್ಟೇನೂ ಅಸಹಜವಾಗಿ ಕಂಡುಬರುವುದಿಲ್ಲ. ಹೊಯ್ಸಳ ರಾಜನ ಮಂತ್ರಿ ಚಂದ್ರಮೌಳಿ ಬ್ರಾಹ್ಮಣನಾಗಿದ್ದನು. ಅವನ ಮಡದಿ ಆಚಲದೇವಿ ಜೈನ ಧರ್ಮಾವಲಂಬಿಯಾಗಿದ್ದಳು. ಅವಳು ಶ್ರವಣಬೆಳಗೊಳದಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿ ದಾನಗಳನ್ನು ನೀಡಿದಳು. ಭಾಳಚಂದ್ರಮುನಿಗಳ ಶಿಷ್ಯೆಯಾದ ಅವಳು ವೀರಬಲ್ಲಾಳನಿಂದ ಆ ಬಸದಿಯ ಪೂಜಾಕಾರ್ಯಗಳಿಗೆ ಬಮ್ಮೆಯನ ಹಳ್ಳಿಯನ್ನು ಬಿಡಿಸಿದ ವಿಷಯವೂ ನಿರೂಪಿತವಾಗಿದೆ.[೩] ಹರಿಹರನ ಆದಯ್ಯನ ರಗಳೆ ಮತ್ತು ರಾಘವಾಂಕನ ಸೋಮನಾಥ ಚಾರಿತ್ರದಲ್ಲಿ (ಶೈವ) ಆದಯ್ಯ ಮತ್ತು (ಜೈನ) ಪದ್ಮಾವತಿಯೆಂಬ ಭಿನ್ನ ಧರ್ಮದವರ ದಾಂಪತ್ಯವನ್ನು ಚಿತ್ರಿಸಿರುವುದುಂಟು. ಇಂಥ ಭಿನ್ನ ಧರ್ಮದ ದಾಂಪತ್ಯಗಳನ್ನು ಬ್ರಹ್ಮಶಿವ[೪] ಮತ್ತು ಬಸವಣ್ಣನವರು[೫] ಟೀಕಿಸಿದ್ದಾರೆ. ಆದರೂ ಭಿನ್ನ ಧರ್ಮದ ವ್ಯಕ್ತಿಗಳ ಸಹಬಾಳ್ವೆ ಆ ಕಾಲದಲ್ಲಿ ಪ್ರಚಲಿತವಾಗಿದ್ದುದನ್ನು ಗುರುತಿಸಬಹುದಾಗಿದೆ.

---

೧. ಶಿಶವ ೪೨ ಪು. ೪೨೬.

೨. ಹಿರೇಮಲ್ಲೂರ್ ಈಶ್ವರನ್ ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ, ಪು. ೧೫.

೩. (ರೈ) ಎಕ V ಚನ್ನರಾಯಪಟ್ಟಣ ೧೫೦ ಕ್ರಿ.ಶ. ೧೧೮೨.

೪. ಪೆಂಡತಿ ಮಾಹೇಶ್ವರಿ ಗಡ
ಗಂಡಂ ಜೈನಂ ಗಡವನ ಮಕ್ಕಳ್ಗಡ ಮಾ
ರ್ತಂಡಂಗೆ ಭಕ್ತರೆನಿಪಾ
ಭಂಡಂಗುತ್ತಮದ ಜೈನವೆಸರೆಂತೆಸೆಗುಂ ಸ.ಪ. ೪-೧೨೫.

೫. ಗಂಡ ಶಿವಲಿಂಗ ದೇವರ ಭಕ್ತ
ಹೆಂಡತಿ ಮಾರಿ ಮಸಣಿಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆ ಮಾಂಸ
ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊಱಗೆ ತೊಳೆದಂತೆ
ಕೂಡಲಸಂಗಮದೇವಾ ಬವ ೧೦೪, ಪು. ೪೯-೫೦.

## ಸಾಹಿತ್ಯ:

ಕನ್ನಡ ಸಾಹಿತ್ಯದಲ್ಲಿ ಕ್ರಿಶ. ೧೧೫೦ರ ಮೊದಲು ಯಾವ ಸ್ತ್ರೀಯೂ ಸಾಹಿತ್ಯ ರಚನೆಗೆ ಕೈಹಾಕಿದಂತಿಲ್ಲ. ಕಂತಿ ಎಂಬ ಕವಯಿತ್ರಿ ನಾಗಚಂದ್ರನ (ಹನ್ನೆರಡನೆಯ ಶತಮಾನದ ಆರಂಭ) ಸಮಕಾಲೀನಳೆಂದೂ ಅವನಿಗೆ ಮತ್ತು ಅವಳಿಗೆ ಕಾವ್ಯ ಸ್ಪರ್ಧೆ ಏರ್ಪಟ್ಟಿತ್ತೆಂದು ಮುಂದಿನ ಕೆಲವು ಕೃತಿಗಳು ಹೇಳುವುವಾದರೂ ಅದು ಕೇವಲ ಕಲ್ಪನೆಯ ಕತೆ ಎಂದು ಭಾಸವಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಸಾಹಿತ್ಯ ರಚನೆ ಸ್ತ್ರೀಯರಿಂದ ಪ್ರಾರಂಭವಾದದ್ದು ವಚನಕಾರ್ತಿಯರಿಂದಲೇ ಎಂದು ಹೇಳಬಹುದು. ವೀರಶೈವ ಧರ್ಮ ಸ್ತ್ರೀಯರಿಗೆ ಕೊಟ್ಟ ಬೆಂಬಲ, ಸ್ವಾತಂತ್ರ ಮತ್ತು ಪ್ರೋತ್ಸಾಹದಿಂದ ಸ್ತ್ರೀಯರು ಸಾಹಿತ್ಯ ರಚನೆಗೆ ತೊಡಗಿದರು. ಮೂವತ್ತ್ಮೂರು ಜನ ಸ್ತ್ರೀಯರು[೧] ವಚನಗಳನ್ನು ರಚಿಸಿರುವುದು ದಾಖಲೆಯಾಗಿದೆ. ಅಕ್ಕಮಹಾದೇವಿ ಕಾವ್ಯದೃಷ್ಟಿಯಿಂದ ಅನೇಕ ಶ್ರೇಷ್ಠ ವಚನಗಳನ್ನು ರಚಿಸಿದ್ದಾಳೆ; ಸಾಮಾಜಿಕವಾಗಿ ಕೆಳಸ್ತರದಿಂದ ಬಂದ ಅನೇಕ ವಚನಕಾರ್ತಿಯರು ತಮ್ಮ ವಚನಗಳಲ್ಲಿ ಸಂಸ್ಕೃತ ಶ್ಲೋಕಗಳನ್ನು ಉಲ್ಲೇಖಿಸಿದ್ದಾರೆ. ಹರಿಜನಜಾತಿಯ ಉರಿಲಿಂಗ ಪೆದ್ದಿಯ ಹೆಂಡತಿಯಾದ ಕಾಳವ್ವೆ, ಅಮುಗೆ ರಾಯಮ್ಮನಂತಹ ಸ್ತ್ರೀಯರು ಸಂಸ್ಕೃತ ಶ್ಲೋಕಗಳನ್ನು, ಚಿತ್ಪಿಂಡಾಗಮಗಳನ್ನು ಉಲ್ಲೇಖಿಸುವುದು ಅವರಿಗೆ ಸಂಸ್ಕೃತ ಸಾಹಿತ್ಯದಲ್ಲಿ ಪ್ರವೇಶವಿದ್ದುದಕ್ಕೆ ಸಾಕ್ಷಿಯಾಗಿದೆ. ಆ ಕಾಲದಲ್ಲಿ ಈ ನಾಡಿನಲ್ಲಿ ಸ್ತ್ರೀಯರಿಗಿದ್ದ ಸ್ಥಾನಮಾನ ಮತ್ತು ವಿದ್ಯಾಭ್ಯಾಸಕ್ಕೆ ಇದ್ದ ಮಿತ ಅವಕಾಶವನ್ನು ಗಮನಿಸಿದರೆ ವಚನಕಾರ್ತಿಯರು ವಚನಗಳನ್ನು ರಚಿಸಿದ್ದು ಬಹುದೊಡ್ಡ ಸಾಮಾಜಿಕ, ಸಾಹಿತ್ಯಕ, ಸಾಂಸ್ಕೃತಿಕ ಜಾಗೃತಿಯಾಗಿ ಕಂಡುಬರುತ್ತದೆ.

## ವಿಧವೆಯರು:

ವಿಧವೆಯರ ಬದುಕು ತುಂಬ ಶೋಚನೀಯವಾಗಿದ್ದಿತೆಂದು ಹೇಳಬಹುದು. ಆ ಕಾಲದಲ್ಲಿ ಯುದ್ಧಗಳು ಆಗಾಗ್ಗೆ ನಡೆಯುತ್ತಿದ್ದುದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಸ್ತ್ರೀಯರು ವಿಧವೆಯರಾಗುತ್ತಿದ್ದರು. ಕೆಲವರು ಸಹಗಮನವನ್ನು ಮಾಡುತ್ತಿದ್ದರು; ಉಳಿದವರು ಉದ್ದಕ್ಕೂ ಕಠಿಣವಾದ ಶುದ್ಧವಾದ ಜೀವನವನ್ನು ಪಾಲಿಸಿಕೊಂಡು ಬರಬೇಕಾಗಿದ್ದಿತು. ಆದರೆ ಯಾವುದೇ ಶಾಸನಗಳಲ್ಲಿ ಮರುಮದುವೆ, ನಿಯೋಗಗಳಂತಹ ವಿಷಯಗಳು ನಿರೂಪಿತವಾಗಿಲ್ಲ. ಕಾವ್ಯಗಳೂ ಈ ವಿಷಯದಲ್ಲಿ ಮೌನವಾಗಿರುವಂತಿವೆ. ಇದನ್ನು ನೋಡಿದರೆ ವಿಧವೆಯರಾದ ಸ್ತ್ರೀಯರಿಗೆ ಸಹಗಮನ ಅಥವಾ ಕಠಿಣವಾದ ಪರಿಶುದ್ಧ ಜೀವನ ಈ ಎರಡೇ ಮಾರ್ಗಗಳು ತೆರದಿದ್ದುವೆಂದು ಕಾಣುತ್ತದೆ. ಎ.ಎಸ್. ಆಲ್ಟೇಕರ್[೨] ಅವರು 'ಸಮಾಜದ ಮೇಲ್ವರ್ಗದಲ್ಲಿ ಕ್ರಿ.ಶ. ಸು. ೧೧೦೦ರ ಹೊತ್ತಿಗೆ ವಿಧವೆಯರ ಮರುಮದುವೆ ಸಂಪೂರ್ಣವಾಗಿ ಮರೆಯಾಯಿತು; ಬಾಲವಿಧವೆಯ ಮರುಮದುವೆಯೂ ಅಸಾಧ್ಯವಾಯಿತು. ಆದರೆ ಕೆಳಸ್ತರದ ಸಮಾಜದಲ್ಲಿ ವಿಧವೆಯರ ಮರುಮದುವೆಗಳು ಮುಂದುವರೆದುವು. ಕಳೆದ ಶತಮಾನದಲ್ಲಿ ಕೆಳಸ್ತರದ ಕೆಲವರು ಮಾತ್ರ ಗೌರವ ಸಂಪಾದನೆಗಾಗಿ ವಿಧವೆಯ ಮರುಮದುವೆಯನ್ನು ವಿರೋಧಿಸಿದ್ದಾರೆ' ಎಂದು ಅಭಿಪ್ರಾಯ ಪಡುತ್ತಾರೆ.

## ವೇಶ್ಯೆಯರು:

ವೇಶ್ಯಾಪದ್ಧತಿ ಜಗತ್ತಿನಾದ್ಯಂತ ಬಹು ಪ್ರಾಚೀನಕಾಲದಿಂದಲೂ ನಡೆದು ಬಂದಿರುವ ಅನಿಷ್ಟಪದ್ಧತಿಗಳಲ್ಲಿ ಒಂದಾಗಿದೆ. ದೇವದಾಸಿ ಮತ್ತು ವೇಶ್ಯೆಯರಲ್ಲಿ ವ್ಯತ್ಯಾಸವಿರುವುದನ್ನು ಗುರುತಿಸಬೇಕು. 'ದೇವದಾಸಿಯರೆಲ್ಲರೂ ವೇಶ್ಯೆಯರೇ ಆಗಿದ್ದರೂ ವೇಶ್ಯೆಯರೆಲ್ಲರೂ ದೇವದಾಸಿಯರಲ್ಲ. ದೇವಸ್ಥಾನದ ದತ್ತಿಗಳಲ್ಲಿ ಸೂಳೆ ಎಂಬ ಮಾತು ಬಂದರೆ ಅದು ದೇವದಾಸಿಯನ್ನು ಸೂಚಿಸುತ್ತದೆ. ಬೇರೆಯ ಕಡೆ ಬಂದಾಗ ಅದು ವೇಶ್ಯೆಯನ್ನು ಸೂಚಿಸುತ್ತದೆ.'[೩]

---

೧. (ಸಂ) ಆರ್.ಸಿ. ಹಿರೇಮಠ : ಶಿವಶರಣೆಯರ ವಚನಗಳು (ಸಮಗ್ರ ಸಂಪುಟ) ಈ ಸಂಪುಟದಲ್ಲಿ ೩೨ ಜನ ವಚನಕಾರ್ತಿಯರಿದ್ದಾರೆ. ಕರ್ನಾಟಕ ಸರ್ಕಾರದ ಸಮಗ್ರ ಸಂಪುಟದಲ್ಲಿ ೩೩ ವಚನಕಾರ್ತಿಯರ ೧೧೦೪ ವಚನಗಳನ್ನು ಪ್ರಕಟಿಸಲಾಗಿದೆ.

೨. A. S. Altekar : The Position of Women in Hindu Civilization ಪು. ೧೫೬.

೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೧೮೫.

ಸೂಳೆಯರು ಪ್ರತ್ಯೇಕ ಕೇರಿಗಳಲ್ಲಿ ವಾಸಿಸುತ್ತಿದ್ದರು. (ಸಾಮಾನ್ಯವಾಗಿ ಆಯಾ ವೃತ್ತಿಯವರು ಅವರವರ ಕೇರಿಗಳಲ್ಲಿ ವಾಸಿಸುತ್ತಿದ್ದುದು ಆ ಕಾಲದ ಪದ್ಧತಿಯಾಗಿದ್ದಿತು). ಅವರು ವಾಸಿಸುತ್ತಿದ್ದ ಕೇರಿಗಳನ್ನು 'ಸೂಳೆಗೇರಿ'[೧] ಎಂದು ಶಾಸನಗಳು ಕರೆದಿವೆ. ಕೆಲವು ಶಾಸನಗಳಲ್ಲಿ ಸೂಳೆಯರ ಮೇಲೆ ವಿಧಿಸುತ್ತಿದ್ದ ತೆರಿಗೆಯನ್ನು 'ಸೂಳೆದೆಜಿ'[೨] ಎಂದು ಕರೆಯಲಾಗಿದೆ. ವೇಶ್ಯೆಯರು ತಮ್ಮ ಬಳಿ ಇಟ್ಟುಕೊಳ್ಳುತ್ತಿದ್ದ ಕನ್ನಡಿಗಳ ಕಾರಣ ಅವರಿಗೆ 'ಕನ್ನಡಿವಣ'ವೆಂಬ ತೆರಿಗೆಯನ್ನು ಹಾಕುತ್ತಿದ್ದರೆಂದು ಭಾವಿಸಿರುವುದುಂಟು. ಆದರೆ ಇದು ಕನ್ನಡಿಕಾಯಕ (ಕ್ಷೌರದ ಕಾಯಕ)ದವರ ಮೇಲೆ ಹಾಕುತ್ತಿದ್ದ ತೆರಿಗೆಯಾಗಿರುವ ಸಾಧ್ಯತೆಯೂ ಇದೆ.[೩]

ಶಾಸನಗಳನ್ನು ಗಮನಿಸಿದರೆ ವೇಶ್ಯೆಯರಿಗೆ ಈಗಿರುವಂತೆ ಆ ಕಾಲದಲ್ಲಿ ಸಾಮಾಜಿಕವಾಗಿ ನಿಕೃಷ್ಟ ಸ್ಥಾನವಿದ್ದಂತಿಲ್ಲ. ಶಾಸನಗಳಲ್ಲಿ ಎಲ್ಲಿಯೂ ಅವರ ಬಗ್ಗೆ ಅವಹೇಳನಕರ ಮಾತುಗಳು ಬಂದಿಲ್ಲ. ವೇಶ್ಯೆಯರೊಡನೆ ಸಂಪರ್ಕವಿಟ್ಟುಕೊಳ್ಳುವುದು ಅವಮಾನಕರವೆಂದು ಆಗಿನ ಸಮಾಜ ಭಾವಿಸಿದಂತಿಲ್ಲ. ಸಾವಂತಬೊಪ್ಪ ಎಂಬ ವೀರನನ್ನು ವರ್ಣಿಸುವಾಗ 'ಮಾರಂ ವಾರವಿಲಾಸಿನೀಜನವ ತಂನಾಕಾರದಿಂ ಸೋಲಿಸಲು'[೪] ಎಂದು ಹೊಗಳಿರುವುದುಂಟು. ಮನ್ಮಥನಂತಹ ಸುಂದರನಾದ ಅವನು ವೇಶ್ಯೆಯರನ್ನು ತನ್ನ ಸೌಂದರ್ಯದಿಂದ ಸೋಲಿಸುತ್ತಿದ್ದನೆಂದು ಹೇಳುತ್ತದೆ.

ವೇಶ್ಯೆಯರು ದೇವಾಲಯ ಮುಂತಾದ ಸಾರ್ವಜನಿಕ ಉಪಯುಕ್ತ ಕಾರ್ಯಗಳಿಗೆ ದಾನಗಳನ್ನು ನೀಡುತ್ತಿದ್ದರು. ನಿದರ್ಶನಕ್ಕೆ ಸಿರಿವೊಳಲಿನ (ಈಗಿನ ಶಿರೋಳ) ನಾಗೇಶ್ವರ ದೇವಾಲಯಕ್ಕೆ ವಿವಿಧ ಜನರು ದಾನಕೊಟ್ಟ ವಿಷಯವನ್ನು ಹೇಳುವಾಗ ಸೂಳೆಯರು ಹಾಗವನ್ನು ಕೊಟ್ಟ ವಿಷಯ ನಿರೂಪಿತವಾಗಿದೆ.[೫] ಹೂಲಿಯ ಒಂದು ಶಾಸನ ಭಾಗದಲ್ಲಿ 'ಕಾಮೋದ್ದಾಮಗಜಂಗಳಂತಿರೆಸವಾ ವಾರಾಂಗನಾನೀಕದಿಂ'[೬] ಎಂದು ಬರುತ್ತದೆ. ಕಾಮೋನ್ಮತ್ತ ಆನೆಗಳಂತೆ ವೇಶ್ಯೆಯರು ಆ ಊರಿನಲ್ಲಿ ಶೋಭಿಸುತ್ತಿದ್ದರೆಂದು ತಿಳಿಸುತ್ತದೆ.

ವೇಶ್ಯೆಯರನ್ನು ಭೋಗಿಸಲು ಕೊಡುತ್ತಿದ್ದ ಹಣ ಅಥವಾ ವಸ್ತುವನ್ನು 'ಒತ್ತೆ' ಎಂದು ಕರೆಯಲಾಗುತ್ತಿದ್ದಿತು. ವಿಟಪುರುಷನಿಂದ ಹಣವನ್ನು ಮುಂಗಡ ಪಡೆಯುವುದನ್ನು 'ಒತ್ತೆಗೊಳ್ಳು' ಎಂದು ಕರೆಯಲಾಗುತ್ತಿತ್ತು. ಒತ್ತೆಯನ್ನು ಪಡೆದು ಒಬ್ಬನೊಡನೆ ನಿಯಮಿತ ಕಾಲ ಜೊತೆಗಿರಲು ಒಪ್ಪಿಕೊಂಡ ಮೇಲೆ ಆ ವೇಳೆಯಲ್ಲಿ ವೇಶ್ಯೆಯು ಬೇರೆಯವನೊಡನೆ ಇರಬಾರದೆಂಬ ನಿಯಮವಿತ್ತು.[೭] ಒತ್ತೆಯಾದ ವೇಶ್ಯೆ ಅದರ ಸಂಕೇತವಾಗಿ ತನ್ನ ಮುಂಗುರುಳನ್ನು, ಬೆರಳೊಂದನ್ನು ಕತ್ತರಿಸಿಕೊಡುವ ಪದ್ಧತಿ ಇದ್ದಿತು. ಇಂಥ ಒಂದು ಪದ್ಧತಿಯನ್ನು ಯುದ್ಧರಂಗದಲ್ಲಿ ಹೇಡಿಗಳನ್ನು ಕುರಿತು ಹೋಲಿಸಲಾಗಿದೆ. ಮಾಚರಸನ ಶೌರ್ಯವನ್ನು ಹೀಗೆ ಹೇಳಲಾಗಿದೆ.

---

೧. (ರೈ) ಎಕ XI ದಾವಣಗೆರೆ ೫ ಕ್ರಿ.ಶ. ೧೧೬೬.

೨. (ರೈ) ಎಕ XI ದಾವಣಗೆರೆ ೧೩೩ ಕ್ರಿ.ಶ. ೧೦೭೧.

೩. ಈ ಸೂಚನೆಯನ್ನು ಎಂ. ಚಿದಾನಂದ ಮೂರ್ತಿಯವರು ನೀಡಿದ್ದಾರೆ.

೪. (ರೈ) ಎಕ VII ಶಿವಮೊಗ್ಗ ೪೪ ಕ್ರಿ.ಶ. ೧೨೦೩.

೫. ಬಿ.ಆರ್. ಹಿರೇಮಠ : 'ಕಳಚುರಿ ಬಿಜ್ಜಳನ ಶಿರೋಳ ಶಾಸನ' ಸಾಧನೆ ೧೪-೪ ಮುಧೋಳ ಕ್ರಿ.ಶ. ೧೧೩೪. ಪು. ೩೧-೩೪.

೬. ಎಇ XVIII ಹೂಲಿ ಕ್ರಿ.ಶ. ೧೧೬೨.

೭. ಪಿ.ವಿ. ನಾರಾಯಣ : ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೦೦.

ಗಂಡುಳಿದು ಸಿತಗರೆಲ್ಲಂ
ಪೆಂಡಿರವೋಲ್ ಕುರುಳ ಬೆರಳ ಹುರುಳಂ ಕೊಟ್ಟುಂ
ಕಂಡುಂ ನಡೆವರ್ ಸಿತಗರ
ಗಂಡಂ ಶ್ರೀಮಾಚಿ ಜಡಿವನಸಿಯನೆನುತ್ತಂ॥[೧]

ಶೌರ್ಯವನ್ನು ಕಳೆದುಕೊಂಡ ಹೇಡಿಗಳು ಹೆಂಗಸರ (ವೇಶ್ಯೆಯರ) ಹಾಗೆ ತಮ್ಮ ತಲೆಯ ಮುಂಗೂದಲನ್ನು, ಬೆರಳನ್ನು ಕೊಟ್ಟು ಮಾಚಿದೇವನ ಖಡ್ಗಾಘಾತಕ್ಕೆ ಹೆದರಿ ನಡೆಯುವರು ಎಂದು ಹೇಳಲಾಗಿದೆ. ಬಸವಣ್ಣನವರ ವಚನವೊಂದರಲ್ಲಿ ಬರುವ 'ಕುರುಳು, ಬೆರಳು, ಮುಂಬಲ್ಲ ಕೊಳ್ಳಾ; ನಿಜುಯನಿಕ್ಕಿ ದಾಂಟಿದಡೆ ಅಂತೆನ್ನನಂಬಾ'[೨] ಎಂಬ ಮಾತನ್ನು ಗಮನಿಸಿದರೆ ಇದು ವೇಶ್ಯೆ ಒತ್ತೆಯಾದಾಗ ಕೊಡುತ್ತಿದ್ದ ದೇಹದ ಭಾಗಗಳೆಂದು ಭಾವಿಸಲು ಅವಕಾಶವಿದೆ. ಈ ರೀತಿ ವೇಶ್ಯೆಯಾದವಳು ಒತ್ತೆಯ ಸಂಕೇತವಾಗಿ ತನ್ನ ಕುರುಳನ್ನು, ಬೆರಳನ್ನು, ಮೊಲೆಯ ತೊಟ್ಟನ್ನು ಕತ್ತರಿಸಿಕೊಡುತ್ತಿದ್ದುದು ಸಾಮಾನ್ಯ ಪದ್ಧತಿಯಾಗಿದ್ದಂತೆ ಕಂಡು ಬರುತ್ತದೆ.[೩] ಲೀಲಾವತಿ, ಕಂಠೀರವನರಸರಾಜೇಂದ್ರ ವಿಜಯ ಮುಂತಾದ ಕಾವ್ಯಗಳಲ್ಲಿ ವೇಶ್ಯೆಯರು ತಾವು ಒತ್ತೆಯಾಗಿದ್ದು ಕೂಡ ಕತ್ತರಿಸಿದ ಮುಂಗುರುಳನ್ನು, ಬೆರಳನ್ನು, ಮೊಲೆಯ ತೊಟ್ಟನ್ನು ಮುಚ್ಚಿಕೊಂಡು ಅನ್ಯ ವಿಟರೊಂದಿಗೆ ಕದ್ದು ಬೆರೆಯುತ್ತಿದ್ದರೆಂಬ ವರ್ಣನೆ ವೇಶ್ಯೆಯರು ಪರಸ್ಪರ ದೂಷಿಸುವಾಗ ಕಂಡುಬರುತ್ತದೆ. (ಈಚಿನ ಕೃತಿಯಾದ ಕಂಠೀರವ ನರಸರಾಜೇಂದ್ರ ವಿಜಯದಲ್ಲಿ ಮುದಿಸೂಳೆಯರ ಶೋಚನೀಯವಾದ ಸ್ಥಿತಿಗಳನ್ನು ವರ್ಣಿಸಲಾಗಿದೆ.)

ವೇಶ್ಯೆಯರ ಸಹವಾಸವನ್ನು ವಚನಕಾರರು ಸಂಪೂರ್ಣವಾಗಿ ತಿರಸ್ಕರಿಸಿ ಅದನ್ನು ಹೀನಾಯವಾಗಿ ಕಂಡರು. ಆದರೆ ಸುಖೀಜಂಗಮ ವೇಷದಲ್ಲಿ ಶಿವನು ಬಸವಣ್ಣನನ್ನು ಪರೀಕ್ಷಿಸಲು ಬಂದಾಗ ಕಲ್ಯಾಣದಲ್ಲಿ ಪಣ್ಯಾಂಗನೆಯರು (ವೇಶ್ಯೆಯರು) ಯಾರೂ ದೊರೆಯದಿರಲು ಬಸವಣ್ಣನು ತನ್ನ ಹೆಂಡತಿ ಮಾಯಿದೇವಿಯನ್ನೇ ಬಂದ ಜಂಗಮನಿಗೆ ಅರ್ಪಿಸಿದಾಗ 'ಜಂಗಮ ದೇವರು ಸಂಗಮದೇವರಾದ' ಪವಾಡವನ್ನು ಹರಿಹರನು ತನ್ನ ಬಸವರಾಜದೇವರ ರಗಳೆಯಲ್ಲಿ ನಿರೂಪಿಸಿದ್ದಾನೆ.[೪] ಇಲ್ಲಿ ಜಂಗಮನ ಬಯಕೆಯನ್ನು ತೀರಿಸಬೇಕೆಂಬ ನಿಷ್ಠೆ ಬಸವನನ್ನು ಕಲ್ಯಾಣದಲ್ಲಿ ವೇಶ್ಯೆಯರನ್ನು ಹುಡುಕಿಸುವಂತೆ ಮಾಡುತ್ತದೆಯೇ ಹೊರತು ವಚನಕಾರರು ವೇಶ್ಯಾಸಹವಾಸವನ್ನು ಸಮ್ಮತಿಸಿದ್ದನ್ನು ಸೂಚಿಸುವುದಿಲ್ಲ.

ವೇಶ್ಯೆಯರ ಸಹವಾಸವನ್ನು ಮಾಡುವುದು ಒಂದು ವರ್ಗದ ವೈಭವದ ಸಂಕೇತವಾಗಿದ್ದಿರಬಹುದು. ಕೆಲವು ಶಾಸನಗಳು ವೇಶ್ಯೆಯರ ಹಾವಭಾವವನ್ನು ಟೀಕಿಸಿರುವುದುಂಟು. ನಿದರ್ಶನಕ್ಕೆ 'ಸೂಳೆಯಂತೆ ಪೂಜಿಪುಚ್ಚಂದೊಟ್ಟು ಮುಯ್ಯಾಂಪವೆ' ಎಂದು ಒಂದು ಶಾಸನದಲ್ಲಿ ಬರುತ್ತದೆ.[೫]

---

೧. (ರೈ) ಎಕ VII ಶಿಕಾರಿಪುರ ೨೩೬ ಕ್ರಿ.ಶ. ೧೧೬೪.

೨. ಬವ. ೪೯೯.

೩. ಇದೆ ಕಡಿದಿತ್ತ ಕಾಲ್ಬೆರಳ ಕಪ್ಪಡಮುಂ ಬಿಡದೀಗಳಿಂತೆ ತೀ
ವಿದೆಯಿಚೆದೇಜೆನೊಳ್ ಬಸಿವ ನೆತ್ತರುಮೆನ್ನುರದೊಳ್ ಕಲೆಗಟ್ಟಿಯಿನ್ನುಮಿ
ಕ್ಕಿದ ಪೆಸರಕ್ಕರಂ ಮುಳಿಸುವೇಟ್ಟುದೆ ಬೇಟ್ಟಿಕೊಡೆ ಬೇಡದೇನನೀ
ವುದೊ ಪೊಸಲಂಚಮಂ ಹರಣಮಂ ಪಿಡಿಯಿಂ ಪೆಱತೇನನಿತ್ತಪೆಂ. ಲೀಲಾವತಿ ೨-೬೪.
ಕಂಠೀರವ ನರಸರಾಜ ವಿಜಯಂ. ೬-೧೮೦,೧೮೩.

೪. ಬಸದೇರ ೧೨ನೆಯ ಸ್ಥಲ ಪು. ೬೨-೬೩.

೫. ಎಸ್‌ಐಐ XV ನವಲುಗುಂದ ೨೧೬ ಕ್ರಿ.ಶ. ೧೨೦೨.

## ಅನೈತಿಕ ಸಂಬಂಧ:

ಆದರ್ಶ ದಾಂಪತ್ಯ ಚಿತ್ರವನ್ನು ಅನೇಕ ಶಾಸನಗಳು ಕೊಡುವುದಾದರೂ ಪುರುಷ ಮತ್ತು ಸ್ತ್ರೀ ತಪ್ಪಿ ನಡೆಯುವ ಚಿತ್ರಗಳು ಶಾಸನಗಳಲ್ಲಿ ತುಂಬ ವಿರಳವಾಗಿ ಬಂದಿವೆ. ಆದರ್ಶವಾದ ನಡವಳಿಕೆಯನ್ನು ಹೇಳುತ್ತಲೇ ಹೋಲಿಕೆಗಾಗಿ ಹೀನ ನಡತೆಯ ವರ್ಣನೆಗಳು ಅಲ್ಲಲ್ಲೆ ಕಾಣಿಸಿಕೊಂಡಿವೆ. ವೇಶ್ಯಾಸಂಗ ಹೀನವಾದುದಾದರೂ ಪರಸ್ತ್ರೀಯನ್ನು ಕಾಮುಕತನದಿಂದ ಬಯಸುವುದು ಇನ್ನೂ ಹೀನಾಯವಾದ ನಡವಳಿಕೆಯಾಗಿದ್ದಿತು. ಆದರೂ ಅಂಥ ಹೀನ ನಡವಳಿಕೆಗಳು ಇದ್ದುದನ್ನು ಶಾಸನಗಳಿಂದ ಗುರುತಿಸಬಹುದು. ಸಮಕಾಲೀನ ಕಾವ್ಯಗಳಲ್ಲೂ ಇಂಥ ಹೀನ, ವಿವಾಹಬಾಹಿರ ಸಂಬಂಧಗಳು ಚಿತ್ರಣಗೊಂಡಿವೆ.[೧]

ಎಕ್ಕಲ ಭೂಪನ ಶುಚಿತ್ವವನ್ನು ವರ್ಣಿಸುವಾಗ ಒಂದು ಶಾಸನ 'ಪರಕಾಮಿನಿಯರ್ಕಳನೆಮ್ಮ ತಂಗಿಯೆಂಮಕ್ಕನೆನುತ್ತೆ ನಂಬೆ ಮೊಱೆ ಗೊಂಡೊಡಗೂಡುವ ಸಾಧುಗಳ್ಗರೇತಕ್ಕುವಯೋಗ್ಯ...'[೨] ಎಂದು ಹೇಳುತ್ತದೆ. ಪರಸ್ತ್ರೀಯರನ್ನು ತನ್ನ ತಂಗಿ, ಅಕ್ಕ ಎಂದು ಹೇಳುತ್ತ ಮರೆಯಲ್ಲಿ ಅವರನ್ನು ಕೂಡುವ ಸಾಧುಗಳ್ಗರನ್ನು ತಿರಸ್ಕರಿಸಲಾಗಿದೆ.

ವಿಭು ಕೇಶಿರಾಜನ ಮಡದಿ ಮಾಳಲದೇವಿಯ ಗುಣಾತಿಶಯಗಳನ್ನು ವಿವರವಾಗಿ ನಿರೂಪಿಸುವ ಶಾಸನವೊಂದ[೩]ರಲ್ಲಿ ಆ ಕಾಲದ ದುಷ್ಟಹೆಣ್ಣಿನ ವಿವರವಾದ ಚಿತ್ರವನ್ನು ಅವಳೊಂದಿಗೆ ಹೋಲಿಸುತ್ತಾ ಕೊಡಲಾಗಿದೆ. ಜಾರ ಹೆಣ್ಣು ಗೃಹಕೃತ್ಯದ ನಾನಾ ಕಾರಣಗಳ ನೆಪವನ್ನು ಹೇಳುತ್ತಾ ಮನೆಯಿಂದ ಹೊರಹೋಗಿ ಪರಪುರುಷರೊಂದಿಗೆ ಕೂಡುವ ವಿಷಯವನ್ನು ನಿರೂಪಿಸುತ್ತದೆ.

> ಅಸವನೆಗಂಗಳಕ್ಕೆ ತಲವಾಗಿಲಿಗಚ್ಚನೆ ನೋಡಲಿಜೆಲಿಂ
> ಗೊಸಗೆಗೆ ನೋಂಪಿಗಂಗಡಿಗೆ ಬಾಡಿನ ಸನ್ತೆಗೆ ಬಾಯಿನಕ್ಕೆ ಪೋ
> ಪೆಸರದೆ ಪಾಂಬರೊಳ್ ನೆರೆವರಂ ಕುಲನಾರಿಯರೆಂಬುದೇ ವಿಚಾ
> ರಿಸೆ ಪತಿಭಕ್ತಿವೆತ್ತೆಸೆವ ಮಾಳಲದೇವಿಯನಲ್ಲದನ್ಯರಂ॥

ಅಗಸನ ಮನೆಗೆ, ಅಂಗಳಕ್ಕೆ, ತಲೆಬಾಗಿಲಿಗೆ, ಪೂಜೆನೋಡಲು, ಈಜ಼ಲಿಗೆ[೪] (=ಹೆರಿಗೆಯ ಮನೆ), ಉತ್ಸವಕ್ಕೆ, ವ್ರತಕ್ಕೆ, ಅಂಗಡಿಗೆ, ಕಾಯಿಪಲ್ಯದ ಸಂತೆಗೆ, ಬಾಗಿನಕ್ಕೆ-ಎಂಬಂತಹ ಯಾವುದಾದರೂ ಕೆಲಸದ ನೆಪವನ್ನು ಹೇಳಿಕೊಳ್ಳುತ್ತ ಮನೆಬಿಟ್ಟು ಹೋಗಿ ವಿಟರ ಜೊತೆ ಸೇರುತ್ತಾರೆ. ಈ ರೀತಿ ನಾನಾ ಕಾರಣಗಳನ್ನು ಹೇಳುತ್ತಾ ಪರಪುರುಷರಲ್ಲಿ ಸೇರುವ ಸ್ತ್ರೀಯರನ್ನು ಕುರಿತು ಸೂಕ್ತಿ ಸುಧಾರ್ಣವದಲ್ಲಿ ಒಂದು ಪದ್ಯವಿದೆ.[೫]

---

೧. ಜನ್ನನ ಯಶೋಧರ ಚರಿತೆಯಲ್ಲಿ ಬರುವ ಅಮೃತಮತಿ- ಮಾವುತನ ಪ್ರಸಂಗ ಮತ್ತು ಅದೇ ಕವಿಯ ಅನಂತನಾಥ ಪುರಾಣದ ಚಂಡಶಾಸನ - ಸುನಂದೆಯರ ಪ್ರಸಂಗಗಳು ಗಮನಾರ್ಹವಾದವು.

೨. (ರೈ) ಎಕ VIII ಸೊರಬ ೧೪೦ ಕ್ರಿ.ಶ. ೧೧೯೮.

೩. ಎಸ್ಐಐ XX ಪರಸಗಡ ೨೪೮ ಕ್ರಿ.ಶ. ೧೨೨೮.

೪. 'ಈಜ಼ಲಿ'ನ ಅರ್ಥವಿವರಣೆಗೆ ನೋಡಿ- ಡಿ.ಎಲ್. ನರಸಿಂಹಾಚಾರ್ : 'ಈಜೆಲ್ ಎಂಬರೇನು?' ಪೀಠಿಕೆಗಳು ಲೇಖನಗಳು, ಪು. ೬೧೫-೬೨೦.

೫. ಕಱು ತಡೆದತ್ತು ಕಂಚನುಣಲೂಮನೆಯೂಕೆಗಳುಯ್ದರಕ್ಕಮಿಂ
ದೆಱೆಯಪನಾಱೆದಪ್ಪನಸಗಂ ಮಡಿದಾರನೆ ಕೂಸನೇತಕೆಂ
ದಱೆಯೆನದೊಂದು ಸೋಂಕಿದುದು ಪಾಡುವರಲ್ಲಿ ಬೆದಂಡೆ ತೊತ್ತನೆ
ತ್ತಱಿಸುವೆನೆಂದು ಪೋಪ ನೆವಮಂ ಸಮಕಟ್ಟುವರಲ್ಲಿ ಪಾಣ್ಬೆಯರ್. ೮-೧೩೪
(ಕರು ಬರುವುದು ತಡವಾಯಿತು, ಊಟದ ತಳಿಗೆಯನ್ನು ಮಧ್ಯದ ಮನೆಯವಳು ಒಯ್ದಿದ್ದಾಳೆ, ಅಲ್ಲಿ ಎರೆಯಪ್ಪ ಕುಣಿಯುತ್ತಿದ್ದಾನೆ, ಅಗಸ ಮಡಿ ತರಲಿಲ್ಲ, ಮಗುವಿಗೆ ಏಕೋ ಏನೋ ಗ್ರಹ ತಟ್ಟಿದೆ, ಅಲ್ಲಿ ಬೆದಂಡ ಹಾಡುತ್ತಾರೆ, ತೊತ್ತು ಎಲ್ಲಿಗೋ ಹೋದಳು ಅವಳನ್ನು ಹುಡುಕಬೇಕೆಂಬ ನೆಪಗಳನ್ನು ಹೇಳುತ್ತಾ ಮನೆಯಿಂದ ಹೊರಗೆ ಜಾರೆಯರು ಹೋಗುತ್ತಾರೆ.)

ಸಾಧಾರಣವಾಗಿ ಎಲ್ಲ ಕಾಲದಲ್ಲಿಯೂ ಎಲ್ಲ ದೇಶಗಳಲ್ಲಿಯೂ ಸ್ತ್ರೀಯರ ನೈತಿಕ ವಿಷಯದಲ್ಲಿ ಅಧಿಕ ಮತ್ತು ಬಿಗಿಯಾದ ಕಟ್ಟುಪಾಡುಗಳನ್ನು ಹಾಕಿರುವುದು ಕಂಡುಬರುತ್ತದೆ. ಓಂದೂ ಸಮಾಜವೂ ಇದಕ್ಕೆ ಹೊರತಾಗಿ ಇಲ್ಲ. ಪುರುಷ ನಡತೆ ತಪ್ಪಿದಾಗ ಅದನ್ನು ಅಪರಾಧವೆಂದು ಅಷ್ಟಾಗಿ ಭಾವಿಸಿದಂತಿಲ್ಲ. ಆಪಸ್ತಂಬ ಗೃಹ್ಯಸೂತ್ರದಲ್ಲಿ ಗಂಡನು ತಪ್ಪಿ ನಡೆದರೆ ಕತ್ತೆಚರ್ಮವನ್ನು ತಿರುಗಾಮುರುಗಾ ಹೊತ್ತು ಆರುತಿಂಗಳು ಭಿಕ್ಷೆಬೇಡಬೇಕೆಂದು ಹೇಳಲಾಗಿದೆ. ಆದರೆ ವಾಸ್ತವವಾಗಿ ಇದು ನಡೆದಿರಲಿಕ್ಕಿಲ್ಲ.[೧] ಆದರೆ ಹೆಣ್ಣು ತಪ್ಪಿ ನಡೆದಾಗ ಅವಳ ಜೊತೆ ತಪ್ಪಿ ನಡೆದವನು ಕೀಳುವ್ಯಕ್ತಿಯಾದರೆ ಮನೆಯಿಂದ ಹೊರದೂಡಬೇಕೆಂದೂ, ತಪ್ಪಿ ನಡೆದ ವ್ಯಕ್ತಿ ಮೇಲ್ವರ್ಗದವನಾಗಿದ್ದರೆ ಅವಳನ್ನು ಪ್ರತ್ಯೇಕವಾಗಿಟ್ಟು ಧಾರ್ಮಿಕ ವಿಧಿಗಳಿಂದ ದೂರವಿಡಬೇಕೆಂದು ಹೇಳಲಾಗುತ್ತಿದ್ದಿತು. ಆದರೆ ಹನ್ನೊಂದನೆಯ ಶತಮಾನದನಂತರ ಹೆಣ್ಣಿನ ತಪ್ಪುನಡತೆಯನ್ನು ಹೆಚ್ಚು ಉಗ್ರವಾಗಿ ಪರಿಗಣಿಸಲಾಗುತ್ತಿತ್ತೆಂದು ಎ. ಎಸ್. ಆಲ್ಟೇಕರ್ ಅಭಿಪ್ರಾಯ ಪಡುತ್ತಾರೆ.[೨]

ಗಂಡಾಗಲಿ ಹೆಣ್ಣಾಗಲಿ ನಡತೆ ತಪ್ಪಿದಾಗ ದಂಡವನ್ನು ಹಾಕುತ್ತಿದ್ದರು. ಒಂದು ಶಾಸನದ ಭಾಗದ ಅರ್ಥ ಸ್ಪಷ್ಟವಾಗುವುದಿಲ್ಲವಾದರೂ ಅದು ಕೆಲವು ಅಪರಾಧಗಳಿಗೆ ದಂಡವನ್ನು ವಿಧಿಸುವ ಹಾಗೆ ಕಂಡು ಬರುತ್ತದೆ. 'ಅಷ್ಟದಿಕ್ಕಿಗೆ ಒಳಗಾದ ಭೂಮಿಯನ್ನು ಕಾಣಿಕೆ ಸೇಸೆ ಸಿದ್ಧಾಯ ಅಭ್ಯಾಗತಿ ತಪ್ಪು ತವುಡಿ ಕದ್ದ ಕಳವು ಆಡಿದ ಹಾದರ ಯಿಟ್ಟಬಸಜು ಕಂಡ ನಿಧಾನ ಅಯಿಮಾಲತಿಕಂಗೋ...' ಎಂದು ಆ ಶಾಸನದಲ್ಲಿ ಬರುತ್ತದೆ.[೩] ವಿವಿಧ ವಿಶೇಷ ತೆರಿಗೆಗಳ ಜೊತೆಯಲ್ಲಿ ಅನೈತಿಕ ನಡತೆಗೂ ದಂಡ ವಿಧಿಸಿರುವುದು ಸ್ಪಷ್ಟವಿದೆ.

**ಕೆಲವು ವೃತ್ತಿಗಳು:**

ಪ್ರಾಚೀನ ಕಾಲದಲ್ಲಿ ಸ್ತ್ರೀಯರ ಸಾರ್ವಜನಿಕ ಜೀವನ ಬಹುಮಟ್ಟಿಗೆ ಅಧಿಕ ನಿರ್ಬಂಧಕ್ಕೆ ಒಳಪಟ್ಟಂತಿದೆ. ಸ್ತ್ರೀಯರನ್ನು ವಿಶೇಷವಾಗಿ ಕೆಲವು ರಾಣಿಯರನ್ನು ಆಡಳಿತಗಾರರನ್ನಾಗಿ ನೋಡುತ್ತೇವೆ. ಕೆಲವು ಸ್ತ್ರೀಯರು ದೇವಾಲಯಗಳಲ್ಲಿ ಪಾತ್ರದವರಾಗಿ ಸೇವೆ ಸಲ್ಲಿಸುತ್ತಿದ್ದರು, ವೇಶ್ಯಾ ವೃತ್ತಿಯಲ್ಲಿ ತೊಡಗಿದ ಸ್ತ್ರೀಯರಿದ್ದರು. ಆದರೆ ಸಂಪಾದನೆ ಎಂದು ಹೇಳಬಹುದಾದ ವೃತ್ತಿಗಳಲ್ಲಿ ಹೆಚ್ಚಿನ ಸ್ತ್ರೀಯರು ನೇರವಾಗಿ ಭಾಗವಹಿಸುತ್ತಿದ್ದಂತಿಲ್ಲ. ಸ್ತ್ರೀಯರು ಅಧಿಕವಾಗಿ ಗೃಹಕೃತ್ಯಗಳನ್ನು ನೋಡಿಕೊಳ್ಳುತ್ತಿದ್ದರೆಂದು ಭಾಸವಾಗುತ್ತದೆ. ಶಾಸನಗಳಲ್ಲಿ ಸ್ತ್ರೀಯರ ಇತರ ವೃತ್ತಿಗಳ ವಿಷಯ ಅಷ್ಟಾಗಿ ನಿರೂಪಿತವಾಗಿಲ್ಲದಿದ್ದರೂ ಕೆಲವೇ ಕೆಲವು ವೃತ್ತಿಗಳು ಕಂಡು ಬರುತ್ತವೆ. ಸಂತೆಗಳಲ್ಲಿ ಎಣ್ಣೆಯನ್ನು ಕೊಂಡು ಮಾರುವ ಕುಂಚಡಿಗಿತ್ತಿಯರ ಉಲ್ಲೇಖ ಒಂದು ಶಾಸನದಲ್ಲಿ ಬಂದಿದೆ.[೪] ವ್ಯಾಪಾರಕ್ಷೇತ್ರ ಬಹುಮಟ್ಟಿಗೆ ಪುರುಷರ ಕ್ಷೇತ್ರದಂತೆ ಕಂಡು ಬರುವುದರಿಂದ ಇದು ವಿಶೇಷವಾಗಿ ವಿರಳ ಉದಾಹರಣೆಯಾಗಿದೆ. ಒಂದು ಶಾಸನದಲ್ಲಿ ಛತ್ರಗಳಲ್ಲಿ 'ಅಟ್ಟಿಕ್ಕುವ' ಬ್ರಾಹ್ಮಣತಿಯರ ಉಲ್ಲೇಖ ಬಂದಿದೆ.[೫] ಬ್ರಾಹ್ಮಣ ವರ್ಗ ಉನ್ನತ ಸ್ಥಿತಿಯಲ್ಲಿದ್ದ ದಿನಗಳಲ್ಲಿ ಬ್ರಾಹ್ಮಣ ಸ್ತ್ರೀಯರು ಈ ರೀತಿಯ ವೃತ್ತಿಗೆ ತೊಡಗಿರುವುದು ಕುತೂಹಲಕರವಾಗಿದೆ. ಕೆಲವು ದೇವಾಲಯಗಳಲ್ಲಿದ್ದ 'ರಾಜಾಂಗಳವನ್ನು ಬೋಹರಿಸುವ ದಾಸಿ'[೬]ಯರ (ಬೋಹರಿಸು = ಗುಡಿಸು) ಉಲ್ಲೇಖ

---

೧. A.S. Altekar : ಪೂರ್ವೋಕ್ತ, ಪು. ೩೧೨.

೨. ಅದೇ, ಪು. ೩೧೩.

೩. (ರೈ) ಎಕ VI ಚಿಕ್ಕಮಗಳೂರು ೬೭ ಕ್ರಿ.ಶ. ೧೨೮೧.

೪. ಎಸ್‌ಐಐ XVIII ಬಿಜಾಪುರ ೨೬೦ ಕ್ರಿ.ಶ. ೧೨೮೩.

೫. ಕಇ II ಅಥಣಿ ೨೧ ಕ್ರಿ.ಶ. ೧೧೪೭.

೬. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.

ಶಾಸನಗಳಲ್ಲಿ ಬಂದಿದೆ. ಅರಮನೆಗಳಲ್ಲಿ, ಅಂತಃಪುರಗಳಲ್ಲಿ ವಿವಿಧ ಸೇವಾ ಹಂತಗಳಲ್ಲಿದ್ದ ಮಾಲೆಗಾರ್ತಿಯರು, ಘಟ್ಟಿವಾಳ್ತಿಯರು, ಪಡಿಯರತಿಯರು ಮುಂತಾದ ಸೇವಾನಿರತ ಸ್ತ್ರೀಯರ ಉಲ್ಲೇಖಗಳು ಕೆಲವು ಕೃತಿಗಳಲ್ಲಿ ಬರುತ್ತದೆ.

ಅನೇಕ ಸ್ತ್ರೀಯರು ತಮ್ಮ ತಮ್ಮ ವೃತ್ತಿನಿರತರಾದ ಗಂಡಂದಿರಿಗೆ ಸಹಾಯವನ್ನು ಮಾಡುತ್ತಿದ್ದಿರಬೇಕು. ಶಿವಶರಣರ ಕಾಯಕ ತತ್ವ ಶ್ರಮದುಡಿಮೆಗೆ ಒಂದು ಗೌರವವನ್ನು, ಮಾನ್ಯತೆಯನ್ನು ತಂದುಕೊಟ್ಟಿತು. ಕದಿರು ತೆಗೆಯುವ (ನೂಲು ತೆಗೆಯುವುದು) ವೃತ್ತಿಯ ರಮ್ಮೆವ್ವೆ, ಕಾಳವ್ವೆಯರು, ಕೊಟ್ಟಣಕಾಯಕದ ಸೋಮಮ್ಮ, ಕನ್ನಡಿ ಕಾಯಕದ (ಕ್ಷೌರಿಕ ಜಾತಿ) ರೇಮಮ್ಮ ಮುಂತಾದವರು ನಾನಾ ವೃತ್ತಿಗಳನ್ನು ಕೈಗೊಂಡಿದ್ದರು.

ಸ್ತ್ರೀಯರ ವೃತ್ತಿಗಳಲ್ಲಿ ಕೆಲವನ್ನು ಗಮನಿಸಿದರೆ ದೇವದಾಸಿ, ವೇಶ್ಯೆಯಂಥ ವೃತ್ತಿಗಳು ದೇವಸ್ಥಾನಕ್ಕೆ ಶ್ರೀಮಂತರು ನೀಡುವ ದಾನದ ಕಾರಣದಿಂದ ಅಥವಾ ಸಾಮಾಜಿಕ ಕಾರಣಗಳಿಂದ ಉಂಟಾದಂಥವು. ರಾಣಿಯರು ಮತ್ತು ಹಿರಿಯ ಅಧಿಕಾರಿಗಳ ಮಡದಿಯರು ತಮಗೆ ದೊರೆತ ಉನ್ನತ ಅವಕಾಶಗಳನ್ನು ಬಳಸಿಕೊಂಡು ಆಡಳಿತಗಾರರಾಗಿ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಸಾರ್ವಜನಿಕ ವೃತ್ತಿಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀಯರ ಸಂಖ್ಯೆಯ ಕೊರತೆಯನ್ನು ಗಮನಿಸಿದರೆ ಅವರಿಗೆ ಅಂಥ ವೃತ್ತಿಗಳ ಅವಕಾಶಗಳೇ ಕಡಮೆ ಇದ್ದುವೆಂದು ಭಾವಿಸಬೇಕಾಗುತ್ತದೆ. ಸ್ತ್ರೀಯರು ಬಹುಮಟ್ಟಿಗೆ ಗೃಹಕೃತ್ಯಗಳಲ್ಲಿ ತೊಡಗಿರುತ್ತಿದ್ದರು. ಇದನ್ನು ಶಾಸನವೊಂದು[೧] ಸ್ಪಷ್ಟವಾಗಿ ಬೆಂಬಲಿಸುತ್ತದೆ. 'ಮಡದಿಯರಾವಗಂ ಕೆರಸಿ ಕಾವಲಿ ತಂಬುಗೆ ಪುಟ್ಟು ಸಟ್ಟುಗಂ ಕೊಡನೊರಲಕ್ಕಿಯೆಂಬಿವನೆ ಚಿಂತಿಸಿ ಕೋಟಲೆಗೊಂಬರು' ಎಂಬ ಮಾತು ಆ ಕಾಲದಲ್ಲಿ ಸಾಮಾನ್ಯವಾಗಿ ಸ್ತ್ರೀಯರಿಗಿದ್ದ ಸ್ಥಿತಿಗತಿಗಳನ್ನು ಸೂಚಿಸುತ್ತದೆ. ತೀರಾ ಇತ್ತೀಚಿನ ಕಾಲದವರೆಗೂ ಸ್ತ್ರೀಯರು ಹೊರಗೆ ಹೋಗಿ ದುಡಿದು ಸಂಪಾದಿಸುತ್ತಿದ್ದುದನ್ನು ಅಗೌರವದಿಂದಲೇ ಕಾಣುತ್ತಿದ್ದುದುಂಟು.

**ಕೆಲವು ಸಾರ್ವಜನಿಕ ಕಾರ್ಯಗಳು:**

ಊರಿನ ಮೇಲೆ ಶತ್ರುಗಳು ಆಕ್ರಮಣ ಮಾಡಿದಾಗ ಇಡೀ ನಾಡೇ ಒಂದಾಗಿ ಹೋರಾಡುತ್ತಿದ್ದಿತು. ಊರಿನ ಮೇಲೆ ಶತ್ರುಗಳು ಆಕ್ರಮಣ ಮಾಡಿದಾಗ ತುರುಗೋಳಿನಲ್ಲಿ, ಪೆಣ್ಬುಯ್ಯಲಿನಲ್ಲಿ, ಊರಳಿವಿನಲ್ಲಿ ಆ ಊರಿನ ವೀರರು ಪ್ರಾಣದ ಹಂಗನ್ನು ತೊರೆದು ಹೋರಾಡುತ್ತಿದ್ದುದನ್ನು ಕಾಣುತ್ತೇವೆ. ತನ್ನ ಊರಿನವರ ರಕ್ಷಣೆಗೆ ಧಾವಿಸಿಬರುವುದು ಪರಮ ಕರ್ತವ್ಯವೆಂದು ಭಾವಿಸುತ್ತಿದ್ದರು. ಇಲ್ಲಿ ವೈಯಕ್ತಿಕ, ಸಾರ್ವಜನಿಕ ಎಂಬ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ. ಇದೇ ರೀತಿಯಲ್ಲಿ ಕಳ್ಳರು,[೨] ಬೇಡರು[೩] ಊರುಗಳ ಮೇಲೆ ದಾಳಿ ಮಾಡಿದಾಗಲೂ ವೀರರು ರಕ್ಷಣೆಗೆ ಧಾವಿಸುತ್ತಿದ್ದರು. ಇಂಥಲ್ಲೆಲ್ಲ ಕನ್ನಡ ಜನತೆಯ ತ್ಯಾಗ ಅಭಿಮಾನ ಶೌರ್ಯಗಳು ಉತ್ಕರ್ಷ ಸ್ಥಿತಿಯಲ್ಲಿ ಪ್ರಕಟಗೊಂಡು ವ್ಯಕ್ತಿ ವೈಯಕ್ತಿಕವಾಗಿ ಒಳ್ಳೆಯವನು ಸಾರ್ವಜನಿಕವಾಗಿಯೂ ಒಳ್ಳೆಯವನು ಎಂಬುದನ್ನು ಸಿದ್ಧಪಡಿಸಿವೆ.

ವ್ಯಕ್ತಿ ತಾನು ಸಂಪಾದಿಸಿದ ಹಣವನ್ನು ಕುಟುಂಬ ನಿರ್ವಹಣೆಗೆ ಮಾತ್ರ ಬಳಸದೆ ಧರ್ಮಕಾರ್ಯಗಳಿಗೂ ಬಳಸಬೇಕೆಂಬುದು ಕರ್ನಾಟಕದಲ್ಲಿ ಬಹುವಾಗಿ ನಂಬಿದ್ದ ಮೌಲ್ಯವಾಗಿತ್ತು. ಹೀಗಾಗಿ ಸಜ್ಜನರು ತಾವು ಸಂಪಾದಿಸಿದ ಹಣವನ್ನು ದೇವಾಲಯ ನಿರ್ಮಾಣ, ಅಗ್ರಹಾರ, ಬ್ರಹ್ಮಪುರಿ, ಕೆರೆ, ಆರಾಮ, ಬಾವಿ, ಅರವಟ್ಟಿಗೆ, ಛತ್ರ ಮುಂತಾದ ಸಾರ್ವಜನಿಕವಾಗಿ ಉಪಯುಕ್ತವಾದ ಕಾರ್ಯಗಳಲ್ಲಿ ತೊಡಗಿಸುತ್ತಿದ್ದುದು ವಿಶೇಷವಾಗಿ ಕಂಡು ಬರುತ್ತದೆ. ದಾನಿಗಳ

---

೧. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೨. (ರೈ) ಎಕ VIII ಸೊರಬ ೩೦೨ ಕ್ರಿ.ಶ. ೧೨೭೦; (ರೈ) ಎಕ VI ಚಿಕ್ಕಮಗಳೂರು ೧೫೮ ಕ್ರಿ.ಶ. ೧೧೯೫.

೩. (ರೈ) ಎಕ IX ದಾವಣಗೆರೆ ೩೮ ಕ್ರಿ.ಶ. ೧೩೦೦(?); (ರೈ) ಎಕ VI ತರೀಕೆರೆ ೮೪ ಕ್ರಿ.ಶ. ೧೨೩೯.

ಉಪಾಧಿಗಳಿಂದ ದೇವಾಲಯ, ಅಗ್ರಹಾರ, ಬ್ರಹ್ಮಪುರಿಗಳು ಬೆಳೆದು ಧರ್ಮ, ವಿದ್ಯಾಭ್ಯಾಸ, ಕಲೆಗಳ ಪ್ರಸಾರಕ್ಕೆ ಕಾರಣವಾದವು ಎಂಬುದು ಆಯಾ ಅಧ್ಯಾಯಗಳಲ್ಲಿ ಚರ್ಚೆಯಾಗಿದೆ. ಈ ಭಾಗದಲ್ಲಿ ಕೆರೆ, ಬಾವಿ, ಆರಾಮ, ಅರವಟ್ಟಿಗೆ ಮುಂತಾದ ಕೆಲವು ಸಾರ್ವಜನಿಕ ಕಾರ್ಯಗಳನ್ನು ಗಮನಿಸಲಾಗಿದೆ.

**ಕೆರೆಗಳ ನಿರ್ಮಾಣ:**

ದೇವಾಲಯ ನಿರ್ಮಾಣ ಹೇಗೆ ಪುಣ್ಯಕಾರ್ಯವೆಂಬ ನಂಬಿಕೆ ಇದ್ದಿತೋ ಹಾಗೆಯೇ ಕೆರೆಯ ನಿರ್ಮಾಣವೂ ಪುಣ್ಯಕಾರ್ಯವೆಂಬ ನಂಬಿಕೆ ಇದ್ದಿತು. ಮಾನವರಿಗೆ, ಪಶುಪಕ್ಷಿಗಳಿಗೆ, ಸಸ್ಯಗಳಿಗೆ-ಹೀಗೆ ಸಕಲ ಜೀವರಾಶಿಗಳಿಗೂ ಅತ್ಯುಪಯುಕ್ತವಾದ ಕೆರೆಯ ನಿರ್ಮಾಣಕ್ಕೆ ಪ್ರಾಚೀನ ಕಾಲದಲ್ಲಿ ಆದ್ಯತೆಯನ್ನು ನೀಡಲಾಗಿದೆ. ನೂರಾರು ಶಾಸನಗಳು ಕೆರೆಯ ನಿರ್ಮಾಣದ ವಿಷಯವನ್ನು ಮತ್ತು ಅದಕ್ಕೆ ಸಂಬಂಧಿಸಿದ ದಾನಗಳನ್ನು ನಿರೂಪಿಸುತ್ತವೆ.

ಕೆರೆಗಳನ್ನು ಕಟ್ಟಿಸುತ್ತಿದ್ದವರು ತಮ್ಮ ಹೆಸರನ್ನು ಕೆರೆಗಳಿಗೆ ಇಡುತ್ತಿದ್ದುದು ಸಹಜವಾದ ಒಂದು ಪದ್ಧತಿಯಾಗಿದ್ದಿತು. ನಾರಸಿಂಹನ ಆಳ್ವಿಕೆಯಲ್ಲಿ ಚಟ್ಟನು ಚಟ್ಟಸಮುದ್ರವನ್ನು ಕಟ್ಟಿಸಿದುದು ತಿಳಿದು ಬರುತ್ತದೆ.[೧] ಮಾಚಿರಾಜನ ಮಡದಿ ಶಾಂತಲೆ ಕೋಳತೂರಲ್ಲಿ 'ಶಾಂತಿ ಸಮುದ್ರ ಮಹಾ ತಟಾಕ'ವನ್ನು ಕಟ್ಟಿಸಿದಳು.[೨] ತಂತ್ರಪಾಳ ನಾಮಣನು ನಾಗಸಮುದ್ರವೆಂಬ ಕನ್ನೆಗೆರೆಯನ್ನು ಕಟ್ಟಿಸಿದ ವಿಷಯ ತಿಳಿದು ಬರುತ್ತದೆ.[೩] ಹೊಯ್ಸಳ ನರಸಿಂಹ ಬಲ್ಲಾಳನಲ್ಲಿ ಮಂತ್ರಿಯಾಗಿದ್ದ ಪದ್ಮರಸ ಬೇಲೂರಿನಲ್ಲಿ ಕೆರೆಯನ್ನು ವಿಸ್ಮಯಕರ ರೀತಿಯಲ್ಲಿ ಕಟ್ಟಿಸಿ 'ಕೆರೆಯ ಪದ್ಮರಸ'ನೆಂದೇ ಹೆಸರಾದನು. ಸಾಮಾನ್ಯವಾಗಿ ಕೆರೆಕಟ್ಟಿಸಿ ತಮ್ಮ ಹೆಸರನ್ನು ಅವುಗಳಿಗೆ ಇಡುತ್ತಿದ್ದರೆ ಇಲ್ಲಿ ವ್ಯಕ್ತಿಯ ಹೆಸರಿಗೆ 'ಕೆರೆ' ವಿಶೇಷಣ ರೂಪದಲ್ಲಿ ಸೇರಿದೆ. ಇವನು ಕನ್ನಡದಲ್ಲಿ ಕೆಲವು ಕೃತಿಗಳನ್ನು ರಚಿಸಿದ್ದಾನೆ.[೪]

ಅನೇಕ ಸಾರಿ ಅಗಲಿದ ಆತ್ಮೀಯರ ಪರೋಕ್ಷ ವಿನಯಕ್ಕೆ ವೀರಗಲ್ಲನ್ನು, ದೇವಾಲಯವನ್ನು ನಿರ್ಮಿಸುತ್ತಿದ್ದಂತೆ ಕೆರೆಗಳನ್ನು ಕಟ್ಟಿಸುವ ಪದ್ಧತಿಯೂ ಇದ್ದಿತು. ಸಾಮಂತ ಗೂಳಿ ಬಾಚಿದೇವ ತನ್ನ ಆತ್ಮೀಯರನ್ನು ಕಳೆದುಕೊಂಡರೂ ಆತ್ಮಸ್ಥೈರ್ಯ ಕಳೆದುಕೊಳ್ಳದೆ ತನ್ನೆಲ್ಲ ಸತ್ವವನ್ನು ಧರ್ಮಕಾರ್ಯಗಳಲ್ಲಿ ವಿನಿಯೋಗಿಸಿದ್ದು ವಿರಳ ನಿದರ್ಶನವಾಗಿದೆ. ತಂದೆ ಸಾಮಂತ ಗಂಗಯ್ಯನ ಪರೋಕ್ಷವಿನಯವಾಗಿ ಶ್ರೀಗಂಗೇಶ್ವರ ದೇವಾಲಯವನ್ನು ಪ್ರತಿಷ್ಠೆಮಾಡಿಸಿದ, ಕೇಶವ ದೇವರಿಗೆ ದಾನ ನೀಡಿದ. ತನ್ನ ಮುತ್ತಯ್ಯ ಸಾವಂತ ಚಲವರಿಪಂಗೆ ಪರೋಕ್ಷವಿನಯವಾಗಿ ಕಿತ್ತಗಳಿಯಲ್ಲಿ ಚಲವರೇಶ್ವರ ದೇವಾಲಯ ಕಟ್ಟಿಸಿದ. ಅವನ ಮಗಳು ಚನ್ನವ್ವೆನಾಯಕಿತಿಗೆ ಪರೋಕ್ಷವಿನಯವಾಗಿ ಶ್ರೀರಾಮೇಶ್ವರ ದೇವಾಲಯವನ್ನು ಕಟ್ಟಿಸಿದ; ಹೆಂಡತಿ ಭೀಮವ್ವೆ ನಾಯಕಿತಿಗೆ ಪರೋಕ್ಷವಿನಯವಾಗಿ ಭೀಮಜಿನಾಲಯವನ್ನು ಮತ್ತು ಭೀಮಸಮುದ್ರವೆಂಬ ಕೆರೆಯನ್ನು ಕಟ್ಟಿಸಿದನು.[೫]

ಕೆರೆಯ ನಿರ್ಮಾಣ ಸರಳವಾದ ಕಾರ್ಯವೇನಾಗಿರಲಿಲ್ಲ. ಕೆರೆಯ ನಿರ್ಮಾಣಕ್ಕೆ ಸರಿಯಾದ ನಿವೇಶನದ ಆಯ್ಕೆಯಾಗಬೇಕಿತ್ತು, ಅನಂತರ ಅದನ್ನು ಸೂಕ್ತ ಬೆಲೆಯನ್ನಿತ್ತು ಕೊಳ್ಳಬೇಕಿತ್ತು. ಅನಂತರ ಅಪಾರ ದ್ರವ್ಯದ ವಿನಿಯೋಗದಿಂದ ನಿರ್ಮಾಣ ಮಾಡಿಸಬೇಕಾಗಿತ್ತು. ಮಾಚಯ ದಣ್ಣಾಯಕರು ತಮ್ಮ ತಾಯಿ ಮಾಯಕ್ಕನವರ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಲು ತತ್ಕಾಲೋಚಿತವಾದ ಕ್ರಯವನ್ನು ಕೊಟ್ಟು ಮಹಾಜನರಿಂದ ಭೂಮಿ ಪಡೆದು ಮೂರು ನಾಲ್ಕು ಸಾವಿರ ಹೊನ್ನುಗಳನ್ನು ವ್ಯಯಿಸಿ ಕೆರೆಯನ್ನು ಕಟ್ಟಿಸಿದ ವಿಷಯ ತಿಳಿದು ಬರುತ್ತದೆ.[೬] ವಿಶೇಷವೆಂದರೆ ಅದೇ ಮಾಚಯ ದಣ್ಣಾಯಕರ ತಾಯಿ ಅಕ್ಕೈಮಾಸವರು (ಮಾಯಕ್ಕನವರು) ತಮ್ಮ ಮಗ ಮಾಚಯ ದಣ್ಣಾಯಕರ ಹೆಸರಿನಲ್ಲಿ ಬೇಡರ ಹಳ್ಳಿಯ ವೃತ್ತಿವಂತ ಮಹಾಜನರಿಂದ ತತ್ಕಾಲೋಚಿತ ಕ್ರಯಕೊಟ್ಟು ಭೂಮಿ ಪಡೆದು ೩೫೦೦ ಹೊನ್ನುಗಳನ್ನು ವೆಚ್ಚಮಾಡಿ ಮಾಚಸಮುದ್ರವನ್ನು

---

೧. (ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೦.

೨. (ರೈ) ಎಕ V ಚನ್ನರಾಯಪಟ್ಟಣ ೧೬೧ ಕ್ರಿ.ಶ. ೧೧೮೧.

೩. (ರೈ) ಎಕ XII ಪಾವಗಡ ೪೩ ಕ್ರಿ.ಶ. ೧೧೫೦.

೪. ಎಫ್.ಟಿ. ಹಳ್ಳಿಕೇರಿ : ಕೆರೆಯ ಪದ್ಮರಸ ಮತ್ತು ಆತನ ವಂಶಜರು ಪು. ೫೩.

೫. (ರೈ) ಎಕ XII ತುಮಕೂರು ೯ ಕ್ರಿ.ಶ. ೧೧೫೧.

೬. (ರೈ) ಎಕ V ಹಾಸನ ೧೮೨ ಕ್ರಿ.ಶ. ೧೩೧೪.

ಕಟ್ಟಿಸುತ್ತಾಳೆ. ಆಗ ಆ ಊರಿನ ಮಹಾಜನರು ಒಂದಾಗಿ ಸಮಸ್ತ ಪ್ರಜೆಗಾವುಂಡುಗಳನ್ನು ಮುಂದಿಟ್ಟುಕೊಂಡು ಆ ಕೆರೆಯ ಕೆಳಗೆ ಕೆರೆಗೊಡಗೆಯಾಗಿ ಭೂಮಿಯನ್ನು ದಾನವಾಗಿ ಬಿಟ್ಟ ವಿಷಯ ತಿಳಿದು ಬರುತ್ತದೆ.[೧] ಕೆರೆಯ ನಿವೇಶನಕ್ಕೆ ಮತ್ತು ಕೆರೆಯನ್ನು ಕಟ್ಟಿಸಲು ಅಪಾರಮೊತ್ತದ ಹಣ ಅಗತ್ಯವಾಗುತ್ತಿತ್ತು. ಬಲ್ಲಾಳ ಸರ್ವಾಧಿಕಾರಿ ವೀರಯ್ಯದಂಡನಾಯಕ ನಾಲ್ಕು ಕೆರೆಗಳನ್ನು ಕಟ್ಟಿಸಿದ್ದಾನೆ. ಅವನು ವೀರಬಲ್ಲಾಳ ರಾಜ್ಯಾಭ್ಯುದಯಾರ್ಥವಾಗಿ ತಾನೆ ಕುವಿಟ್ಟು ಕಾಡುಕಡಿದು ಮಾಡಿದ ವೀರಬಲ್ಲಾಳ ಪುರದಲ್ಲಿ ರುದ್ರಸಮುದ್ರ, ಗಂಗಾಸಮುದ್ರ, ಅಚ್ಯುತಸಮುದ್ರ, ವೀರಸಮುದ್ರವೆಂಬ ನಾಲ್ಕು ಕೆರೆಗಳನ್ನು ಕಟ್ಟಿಸಿದ ವಿಷಯ ತಿಳಿದುಬರುತ್ತದೆ.[೨] ಕೆರೆಯನ್ನು ಕಟ್ಟಿಸುವುದು ದೊಡ್ಡ ಅಧಿಕಾರಿಗಳಿಗೆ, ಶ್ರೀಮಂತರಿಗೆ ಸಾಧ್ಯವಾಗಬಲ್ಲಂತಹ ಕಾರ್ಯವಾಗಿತ್ತಾದರೂ ಯತಿಗಳು,[೩] ಮಾವುತರು,[೪] ಕುರುಬರು[೫] ಕೂಡ ಕೆರೆಗಳ ನಿರ್ಮಾಣವನ್ನು ಮಾಡಿಸಿರುವುದು ಕಂಡು ಬರುತ್ತದೆ.

ಕೆರೆಗಳ ನಿರ್ಮಾಣದಷ್ಟೇ ಮುಖ್ಯವಾದದ್ದು ಅವುಗಳನ್ನು ಸಂರಕ್ಷಿಸುವ ಜವಾಬ್ದಾರಿ. ಕೆರೆಯ ಕಟ್ಟೆಗಳು ಒಡೆದು ಹೋಗುತ್ತಿದ್ದವು, ತೂಬು ಹಾಳಾಗುತ್ತಿದ್ದವು, ಕೆರೆಗೆ ಮರಳು, ಹೂಳು ತುಂಬಿಕೊಳ್ಳುತ್ತಿತ್ತು. ಆದ್ದರಿಂದ ಕೆರೆಯ ಸಂರಕ್ಷಣೆಗೆ ವ್ಯವಸ್ಥೆಯನ್ನು ಮಾಡುತ್ತಿದ್ದರು. ದುಂಡೇನಹಳ್ಳಿಯ ಒಂದು ಶಾಸನ ಆ ಊರಿನ ಹಿರಿಯ ಕೆರೆಯ ತೂಬಿಗಾಗಿ (ಬಹುಶಃ ಸಂರಕ್ಷಿಸಲು) ದಾನವನ್ನು ಬಿಟ್ಟ ವಿಷಯವನ್ನು ತಿಳಿಸುತ್ತದೆ.[೬] ಕಂಚಿಕಲ್ಲಿನ ಶಾಸನವೊಂದು 'ರವಿಮಾಚಯಗೌಡನ ಮೊಮ್ಮಗ ನೊಣಬಯ್ಯ ಹಿರಿಯ ಕೆರೆಗೆ ತೂಬನ್ನು ಇಕ್ಕಿದ'ನೆಂದು ತಿಳಿಸುತ್ತದೆ.[೭]

ಕೆರೆಗಳ ಸಂರಕ್ಷಣೆಗಾಗಿ 'ಕೆರೆಗೊಡಗೆ'[೮]ಗಳನ್ನು ನೀಡುತ್ತಿದ್ದರು. ಈ ರೀತಿ ಕೆರೆಗಳಿಗಾಗಿ ಬಿಡುತ್ತಿದ್ದ ಜಮೀನನ್ನು 'ಬಿತ್ತುವಟ್ಟ'[೯]ವೆಂದು ಕರೆಯುತ್ತಿದ್ದರು. ಆ ಜಮೀನಿನ ಉತ್ಪನ್ನವನ್ನು ಕೆರೆಯ ಸಂರಕ್ಷಣೆಗೆ ಮತ್ತು ದುರಸ್ತಿಗೆ ಬಳಸಬೇಕೆಂಬುದು ಅದರ ಉದ್ದೇಶವಿದ್ದಂತಿದೆ. ಬಿತ್ತುವಟ್ಟವನ್ನು ಕೆರೆಗೆ ವಿನಿಯೋಗಿಸಬೇಕೆಂದೂ ಹಾಗಲ್ಲದೆ ಯಾರಾದರೂ ಆಸೆಪಟ್ಟರೆ ಅವನಿಗೆ ನರಕಪ್ರಾಪ್ತಿಯಾಗುತ್ತದೆಂದು ಒಂದು ಶಾಸನ ತಿಳಿಸುತ್ತದೆ.[೧೦]

ಅರಸಿಕೆರೆ ತಾಲ್ಲೂಕಿನ ಕ್ರಿ.ಶ. ೧೩೬೭ರ ಒಂದು ಶಾಸನದಲ್ಲಿ ಕೆರೆಯ ಹೂಳನ್ನು ತೆಗೆಯಲು ಒಂದು ಕೋಣದ ಗಾಡಿಯನ್ನು ಗೊತ್ತು ಮಾಡಿದ್ದರೆಂದೂ, ಆ ಗಾಡಿಯವನಿಗೆ ಜಮೀನುಗಳ ಹಿಡುವಳಿದಾರರು ಕ್ಲುಪ್ತವಾಗಿ ವರಮಾನವನ್ನು ಸಲ್ಲಿಸುತ್ತಿದ್ದರೆಂದೂ ತಿಳಿದು ಬರುತ್ತದೆ.[೧೧]

---

೧. (ರೈ) ಎಕ V ಹಾಸನ ೧೬೪ ಕ್ರಿ.ಶ. ೧೩೧೪.

೨. (ರೈ) ಎಕ V ಬೇಲೂರು ೧೭೫ ಕ್ರಿ.ಶ. ೧೧೮೬.

೩. (ರೈ) ಎಕ V ಚನ್ನರಾಯಪಟ್ಟಣ ೨೧೦ ಕ್ರಿ.ಶ. ೧೧೬೫.

೪. (ರೈ) ಎಕ V ಅರಸಿಕೆರೆ ೧೫೦ ಕ್ರಿ.ಶ. ೧೧೯೫.

೫. (ರೈ) ಎಕ XI ಚಿತ್ರದುರ್ಗ ೧೨ ಕ್ರಿ.ಶ. ೧೨೮೬.

೬. (ಮೈ) ಎಕ VII ಮದ್ದೂರು ೩೯ ಕ್ರಿ.ಶ. ೧೩ ಶಮಾ.

೭. (ರೈ) ಎಕ VI ಕಡೂರು ೧೧೪ ಕ್ರಿ.ಶ. ೧೨೫೨(?).

೮. (ಮೈ) ಎಕ VII ನಾಗಮಂಗಲ ೮೧ ಕ್ರಿ.ಶ. ೧೨೨೩; ಎಸ್‌ಐಐ IX(i) ಹರಪನಹಳ್ಳಿ ೨೮೧ ಕ್ರಿ.ಶ. ೧೧೮೮.

೯. (ಮೈ) ಎಕ VII ನಾಗಲಮಂಗಲ ೮೩ ಕ್ರಿ.ಶ. ೧೨೬೯; (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

೧೦. ಎಂಎಆರ್ ೧೯೪೦ ಚನ್ನರಾಯಪಟ್ಟಣ ೯ ಕ್ರಿ.ಶ. ೧೧೮೦. 'ಆ ಬಿತ್ತುವಟ್ಟನಂ ಕೆಱೆಗೆಯಿಕ್ಕುವರು ಯಿಕ್ಕದೆ ಯಾವನೊಬ್ಬನಳಿಪಿದಡೆ ನರಕದಲು ಬೀಳುವನು.'

೧೧. ಎಚ್.ಸಿ. ಕಪಿನೀಪತಿಭಟ್ಟ : 'ಪ್ರಾಚೀನ ಭಾರತದಲ್ಲಿ ನೀರಾವರಿ' ಉಪಾಯನ ಪು. ೩೫.

ಕೆಲವು ಶಾಸನಗಳಲ್ಲಿ ದಾನಗಳನ್ನು ಅಪಹರಿಸಿದವರಿಗೆ ಹೇಳುವ ಶಾಪಾಶಯಗಳಲ್ಲಿ 'ಇದಾನುಪೇಕ್ಷಿಸಿದಾತಂ ಕೆಱೆಯನೊಡೆದ ಪಾತಕನಕ್ಕುಂ'[೧] ಎಂದು ಹೇಳುವುದುಂಟು. ಬ್ರಾಹ್ಮಣರನ್ನು, ಗೋವುಗಳನ್ನು ಗಂಗಾತಡಿಯಲ್ಲಿ ಕೊಂದ ಪಾಪವೆಂದು ಶಾಪಾಶಯಗಳು ಹೇಳುವ ಹಿನ್ನೆಲೆಯಲ್ಲಿ 'ಕೆರೆ ಒಡೆದ ಪಾಪ'ವೆಂದು ಹೇಳುವುದು ಗಮನಾರ್ಹವಾಗುತ್ತದೆ. ಕೆರೆಗೆ ಒಂದು ಊರಿನ ಸಾರ್ವಜನಿಕ ಬದುಕಿನಲ್ಲಿದ್ದ ಸ್ಥಾನವೂ ಅದರಿಂದ ಸ್ಪಷ್ಟವಾಗುತ್ತದೆ.

**ಬಾವಿ ತೋಡಿಸುವಿಕೆ:**

ಬಾವಿಗಳನ್ನು ತೋಡಿಸುವುದು ಪುಣ್ಯಕಾರ್ಯವೆಂಬ ನಂಬಿಕೆ ಇದ್ದಿತು. ಮಾದಿಯಣ್ಣನೆಂಬುವನು ನೆಲವನ್ನು ಪಡೆದು ಅನಂತರ ಬಾವಿಯನ್ನು ತೋಡಿಸಿದ ವಿಷಯ ತಿಳಿದು ಬರುತ್ತದೆ.[೨] ಮಾದಿಹಳ್ಳಿಯ ಶಾಸನದಿಂದ ಮುದ್ದಗೌಡ ಜಕ್ಕ ಗೌಂಡಿಯರ ಮಗ ಬೊಮ್ಮಯ್ಯ ಒಂದು ಬಾವಿಯನ್ನು ಮಾಡಿಸಿದ ವಿಷಯ ತಿಳಿದು ಬರುತ್ತದೆ.[೩] ಪೆರಿಯಾಳು ಸೆಟ್ಟಿ ಹೆಂಜೆಱ ಪಟ್ಟಣದಲ್ಲಿ ಅಗೆದ ಬಾವಿಯ ಅಗಳನ್ನು ತೆಗೆಸಿ ಅನಂತರ ದೇವಾಲಯಕ್ಕೆ ದಾನಕಾರ್ಯ ನಿರ್ವಹಿಸಿದ್ದನ್ನು ತಿಳಿಸುತ್ತದೆ.[೪] ಶಿರಾ ತಾಲ್ಲೂಕಿನ ಒಂದು ಶಾಸನದಲ್ಲಿ ಅತ್ತಿಯ ಮರದ ಬಾವಿಯ ಉಲ್ಲೇಖ ಬರುತ್ತದೆ.[೫] ಇದು ಬಹುಶಃ ಅತ್ತಿಯ ಮರದ ಹತ್ತಿರವಿದ್ದ ಬಾವಿಯನ್ನು ಸೂಚಿಸುತ್ತದೆ.

**ಆರಾಮಗಳು:**

ಅನೇಕ ಶಾಸನಗಳು ಮತ್ತು ಕಾವ್ಯಗಳು ಊರುಗಳ ಹೊರವಲಯದಲ್ಲಿ ಉದ್ಯಾನವನಗಳಿದ್ದುದನ್ನು ವರ್ಣಿಸುತ್ತವೆ. ಅದನ್ನು ಗಮನಿಸಿದರೆ ಅವುಗಳನ್ನು ಉದ್ದೇಶಪೂರ್ವಕವಾಗಿಯೇ ಬೆಳೆಸುತ್ತಿದ್ದರೆಂದು ಭಾವಿಸಬೇಕಾಗುತ್ತದೆ. ದಾನಿಗಳು ಕೆರೆ, ಛತ್ರ ಮುಂತಾದುವುಗಳ ಜೊತೆ ಆರವೆಗಳನ್ನೂ ನಿರ್ಮಿಸುತ್ತಿದ್ದ ವಿಷಯ ಅನೇಕ ಶಾಸನಗಳಲ್ಲಿ ನಿರೂಪಣೆಗೊಂಡಿದೆ. ಕಲಿದೇವ ಸೆಟ್ಟಿ 'ಮಾಡಿದ ಧರ್ಮಂ'ಗಳನ್ನು ಒಂದು ಶಾಸನ ಹೀಗೆ ಹೇಳುತ್ತದೆ.

> ಕಟ್ಟಿಸಿದ ಕೆಱೆ ಮನೋಮುದ
> ದಿಟ್ಟಾರವೆ ಪಸಿಯಲೀಯದಿಕ್ಕುವ ಸತ್ರ
> ಬಿಟ್ಟ ಬೆಳಗೆಯ್ಗಳೆಱೆವಱ
> ವಟ್ಟಿಗೆ ಕಲಿದೇವ ಸೆಟ್ಟಿ ಮಾಡಿದ ಧರ್ಮಂ॥[೬]

ಕಲಿದೇವಸೆಟ್ಟಿಯು ಕಟ್ಟಿಸಿದ ಕೆರೆಗಳು, ನಿರ್ಮಿಸಿದ ಉದ್ಯಾನವನಗಳು, ಹಸಿದುಕೊಂಡು ಇರಲು ಬಿಡದೆ ಆಹಾರ ಪದಾರ್ಥಗಳನ್ನು ಕೊಡುವ ಛತ್ರಗಳು, ಚೆನ್ನಾಗಿ ಬೆಳೆಯುವ ಜಮೀನುಗಳು, ನೀರನ್ನು ಎರೆಯುವ ಅರವಟ್ಟಿಗೆಗಳೇ ಆತನು ಮಾಡಿದ ಧರ್ಮಗಳಾಗಿವೆ. ಇಂಥ ಕಡೆ 'ಧರ್ಮ' ಎಂಬ ಪದ ದೈವಕ್ಕೆ ಸಂಬಂಧಪಟ್ಟದ್ದು ಅಥವಾ ಮತೀಯ ವಿಷಯಕ್ಕೆ ಸಂಬಂಧಿಸಿದುದು ಎಂಬ ಅರ್ಥಗಳನ್ನು ನೀಡದೆ ಸಾರ್ವಜನಿಕರಿಗೆ ಉಪಯುಕ್ತವಾದ ಕಾರ್ಯ, ಒಂದು ರೀತಿಯ ಸೇವೆ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಈಗಲೂ 'ಧರ್ಮ' ಎನ್ನುವುದು ಕೆಲವು ಸಂದರ್ಭಗಳಲ್ಲಿ ಅದೇ ಅರ್ಥದಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು.

---

೧. ಎಇ XX ಗದಗು ೬ ಕ್ರಿ.ಶ. ೧೦೧೨.

೨. ಎಸ್‌ಐಐ XX ಕುಂದಗೋಳ ೨೯೩ ಕ್ರಿ.ಶ. ೧೧೯೧.

೩. (ರೈ) ಎಕ XVI ತಿಪಟೂರು ೩೯ ಕ್ರಿ.ಶ. ೧೨೯೧.

೪. ಎಸ್‌ಐಐ IX(i) ಮಡಕಸಿರ ೨೬೮ ಕ್ರಿ.ಶ. ೧೧೬೨.

೫. (ರೈ) ಎಕ XII ಶಿರಾ ೩೨ ಕ್ರಿ.ಶ. ೧೨೭೮.

೬. ಎಸ್‌ಐಐ IX(i) ಬಳ್ಳಾರಿ ೨೯೬ ಕ್ರಿ.ಶ. ೧೧೭೬.

ಫಲ ವೃಕ್ಷಗಳನ್ನು ನೋಂಪಿಯ ಅಂಗವಾಗಿ ನೆಡುವ ವಿಷಯವನ್ನು ತಿಳಿಸುವ ಹಿರೇಬೇವಿನೂರಿನ ಶಾಸನ ತುಂಬ ಗಮನಾರ್ಹವಾದದ್ದು. ಮೂವತ್ತಾರು ಹಳ್ಳಿಗಳ ಒಡೆಯನಾದ ಬೊಪ್ಪಣಯ್ಯ ಎಂಬುವವನ ಮಡದಿ ಸಿರಿದೇವಿ. ಅವಳು ವ್ರತಸಾರಸಮುಚ್ಚಯದಲ್ಲಿ, ಸ್ಮೃತಿಯಲ್ಲಿ ಹೇಳಿದ ವ್ರತಗಳೆಲ್ಲವನ್ನೂ ಮಾಡಿ ಮುಗಿಸಿದಳು. ಆದರೆ 'ಕ್ಷಿತಿರುಹ ನೋಂಪಿ'ಯನ್ನು ಮಾಡಿರಲಿಲ್ಲ. ಅದರ ಅಂಗವಾಗಿ ಮಾವು, ನೇರಿಲೆ, ಈಳೆ, ಹಲಸು, ಖರ್ಜೂರ, ತೆಂಗು ಮುಂತಾದ ಫಲವೃಕ್ಷಗಳನ್ನು ಮತ್ತು ಅನೇಕ ವನಸ್ಪತಿಗಳನ್ನು ಬೆಳೆಸುತ್ತಾಳೆ. ಬೊಪ್ಪಣನೂ ಆ ಊರಿನಲ್ಲಿ ಬಸದಿಯೊಂದನ್ನು ಮಾಡಿಸುತ್ತಾನೆ. ಅದರ ನೆರಳಿನಲ್ಲಿ ಸಂತೆ ಸೇರುತ್ತಿದ್ದಿತು; ಆ ಸಂತೆಯ ತೋಪಿನ ಮರಗಳನ್ನು ರಕ್ಷಿಸಲು ವ್ಯವಸ್ಥೆಯನ್ನೂ ಮಾಡಲಾಗಿದೆ.[೧]

ಪ್ರಾಚೀನರಿಗೆ ಸಸ್ಯಗಳನ್ನು ಕುರಿತ ವಿಶೇಷ ಜ್ಞಾನವಿದ್ದಿತು. 'ಲೋಕೋಪಕಾರ'ದಲ್ಲಿ 'ವೃಕ್ಷಾಯುರ್ವೇದಂ' ಎಂಬ ಆರನೆಯ ಅಧ್ಯಾಯದಲ್ಲಿ ಸಸ್ಯಗಳಿಗೆ ಸಂಬಂಧಿಸಿದ ಬಹು ಮಹತ್ವದ ಸಂಗತಿಗಳನ್ನು ತಿಳಿಸಲಾಗಿದೆ. ಮರಗಳಿಗೆ ಬರುವ ರೋಗಗಳು, ಮರಗಳನ್ನು ಕಿತ್ತು ನೆಡುವ ವಿಧಾನ, ವಿವಿಧ ಫಲವೃಕ್ಷಗಳಿಂದ ಅಧಿಕ ಫಲಗಳನ್ನು ಪಡೆಯಲು ಅನುಸರಿಸಬೇಕಾದ ವಿಧಾನ ಮುಂತಾದ ವಿವಿಧ ವಿಷಯಗಳನ್ನು ನಿರೂಪಿಸಲಾಗಿದೆ.[೨]

ತೋಪುಗಳನ್ನು ನಾಶಪಡಿಸುವುದಂತೂ ಕಾಶಿ, ಹಸು, ಕೆರೆಗಳನ್ನು ನಾಶಪಡಿಸಿದ ಪಾಪಕ್ಕೆ ಸಮಾನವಾದುದು ಎಂದು ಶಾಸನಗಳಲ್ಲಿ ಹೇಳಿದೆ.[೩] ತಮಿಳುನಾಡಿನಲ್ಲಿ 'ತೋಟವಾರಿಯಂ' ಎಂಬ ಸಂಪುಟವಿತ್ತು. ಇದು ಊರಿನ ಮಹಾಜನ ಪ್ರತಿನಿಧಿಗಳನ್ನು, ಸರ್ಕಾರದ ಪ್ರತಿನಿಧಿಗಳನ್ನು ಒಳಗೊಂಡಿತ್ತು.[೪] ಅದು ತೋಟದ ಮೇಲ್ವಿಚಾರಣೆಯನ್ನು, ಸಂರಕ್ಷಣೆಯನ್ನು ನೋಡಿಕೊಳ್ಳುತ್ತಿತ್ತು. ಕರ್ನಾಟಕದಲ್ಲಿ ಅಂಥ ಪ್ರತ್ಯೇಕ ವ್ಯವಸ್ಥೆ ಇದ್ದಂತಿಲ್ಲ.

**ಅರವಟ್ಟಿಗೆ:**

ಊರಿಂದೂರಿಗೆ ಪ್ರಯಾಣಿಸುವ ಪ್ರವಾಸಿಗರ ಬಾಯಾರಿಕೆಯನ್ನು ಹೋಗಲಾಡಿಸಲು ದಾರಿಗಳ ಪಕ್ಕದಲ್ಲಿ ಅರವಟ್ಟಿಗೆಗಳನ್ನು ನಿರ್ಮಿಸುತ್ತಿದ್ದರು. ಇದೂ ಕೂಡ ಒಂದು ಧರ್ಮಕಾರ್ಯವಾಗಿದೆ. ಬರುವ ಪ್ರವಾಸಿಗರಿಗೆ ನೀರನ್ನು ಎರೆಯಲು ಬಾಲಕ ಬಾಲಕಿಯರನ್ನು ನಿಯೋಜಿಸುತ್ತಿದ್ದುದು ಕಂಡು ಬರುತ್ತದೆ. ಅರವಟ್ಟಿಗೆಗಳಲ್ಲಿ ಕುಡಿಯುವ ನೀರನ್ನು ಎರೆಯುವ ಬೆಡಗಿಯರ ಉಲ್ಲೇಖ ಸೂಕ್ತಿಸುಧಾರ್ಣವದಲ್ಲಿ ಬಂದಿದೆ.[೫]

---

೧. ಎಸ್‌ಐಐ XX ಇಂಡಿ ೧೭೫ ಕ್ರಿ.ಶ. ೧೧೯೦.

೨. ಲೋಕೋಪಕಾರಂ. ನಿದರ್ಶನಕ್ಕೆ- ತೆಂಗಿನ ಅಧಿಕ ಫಲಕ್ಕೆ ಈ ವೈದ್ಯವನ್ನು ಹೇಳಲಾಗಿದೆ.

ತಿಲಮಗಸೆ ವಿಳಂಗಂ ಸಿಂ
ಧುಲವಣಮವನೆರಡು ಜೇನಘೃತ ಮದ್ಯಮುಮಂ
ಕಲಸಿ ನಿಶಾಮುಖದೊಳ್ ಮೂ
ಲಲೇಪನಂಗೆಯ್ಯೆ ತೆಂಗು ಬಹುಫಲಮಕ್ಕುಂ॥ ೬-೩೨

೩. ಎಂ. ಚಿದಾನಂದ ಮೂರ್ತಿ : 'ಪ್ರಾಚೀನ ಕರ್ನಾಟಕದಲ್ಲಿ ವೃಕ್ಷಾರೋಪಣ', ಸಾಧನೆ ೬:೪, ಪು. ೪೪.

೪. ಬಿ.ಜಿ.ಎಲ್. ಸ್ವಾಮಿ : ಶಾಸನಗಳಲ್ಲಿ ಗಿಡಮರಗಳು, ಪು. ೩೫.

೫. ಅಱವಟ್ಟಿಗೆಯೊಳ್ ಕುಡಿನೀ
ರೆಱೆವ ಬೆಡಂಗಿಯರ ಭಾವಮಂ ಭೋಂಕನೆ ಕ
ಣ್ದೆಱೆದಡರೆ ನೋಡಿ ಪೀರುವ
ತೆಱದಿಂದಂ ಸೊಗಸೆ ತಂಪುಮಂ ತೃಷೆಯುಮಂ॥ ೪-೮೪

ಈ ರೀತಿಯ ವರ್ಣನೆಗಳು ಹಳಗನ್ನಡ ಕೃತಿಗಳಲ್ಲಿ ವಿಪುಲವಾಗಿ ಬಂದಿವೆ.

ಅಸ್ವಾಲಿನ ಶಾಸನವೊಂದು ಸೋಮೆಯ ಸಾವಂತ ಮತ್ತು ಅವನ ತಮ್ಮ ಬೊಪ್ಪರಾಯ ಸಾವಂತರು 'ಪುಣ್ಯಾರ್ಥಕಾರಣ ತಿನೆಗನೂರದಾರಿಯಲು ಸಮಸ್ತಜೀವಕ್ಕೆ ಆಶ್ರಯವಾಗಿಯಜವಟಗೆಯ ಪ್ರತಿಷ್ಠೆಮಾಡಿ ತಂಗಕುಲಬ್ರಹ್ಮಪುರಿ ವಿಠರಸಂಗೆ... ಹೊಲದಲು ಮತ್ತರು ಮೂಜುವಂ'[1] ಎಂದು ಹೇಳುತ್ತದೆ. ಇಲ್ಲಿ ಪುಣ್ಯಾರ್ಥವಾಗಿ ಅರವಟ್ಟಿಗೆಯನ್ನು ನಿರ್ಮಿಸಿರುವುದು ಮತ್ತು ಸಮಸ್ತ ಜೀವಕ್ಕೆ ಆಶ್ರಯವಾಗಿ ಎಂಬ ಮಾತು ಗಮನಾರ್ಹ. ಬಹುಶಃ ನೀರಿನ ವ್ಯವಸ್ಥೆ ಮಾನವರಿಗೆ ಮತ್ತು ಪ್ರಾಣಿ ಪಕ್ಷಿಗಳಿಗೆ ಇದ್ದಿತೆಂದು ಭಾವಿಸಬಹುದು. ಅರವಟ್ಟಿಗೆಯ ವ್ಯವಸ್ಥೆಯನ್ನು ನೋಡಿಕೊಳ್ಳಲು ವಿಠರಸನಿಗೆ ಮೂರು ಮತ್ತರು ಭೂಮಿಯನ್ನು ಕೊಡಲಾಗಿದೆ. ವೀರಬಿಜ್ಜದೇವ ವಿಕ್ಕರಸರು ಎರಡು ಮತ್ತರನ್ನು ಅರವಟ್ಟಿಗೆಗಾಗಿ ದಾನಮಾಡಿದ ವಿಷಯ ತಿಳಿದು ಬರುತ್ತದೆ.[2]

ಅರವಟ್ಟಿಗೆಗಳು ದಾರಿಯಪಕ್ಕದಲ್ಲಿ ಮಾತ್ರ ಸ್ಥಾಪನೆಯಾಗುತ್ತಿರಲಿಲ್ಲ. ಸಾರ್ವಜನಿಕ ಸ್ಥಳಗಳಾದ ಸಂತೆಗಳಲ್ಲಿಯೂ ಸ್ಥಾಪನೆಗೊಳ್ಳುತ್ತಿದ್ದವು. ಸಂತೆಯಲ್ಲಿ ಅರವಟ್ಟಿಗೆ ಇದ್ದುದನ್ನು ಒಂದು ಶಾಸನ ನಿರೂಪಿಸುತ್ತದೆ.[3] ರಾಘವಭಳಿಸಾಸರು ಅರವಟ್ಟಿಗೆಗೆ ಮತ್ತು ಧರ್ಮೆತಕ್ಕಾಗಿ (ನೀರನ್ನು ಎತ್ತುವ ಯಂತ್ರ) ದಾನ ನೀಡಿದ ವಿಷಯ ತಿಳಿದು ಬರುತ್ತದೆ.[4] ಬಹುಶಃ ಈ ಅರವಟ್ಟಿಗೆ ಬಾವಿಯ ಪಕ್ಕದಲ್ಲಿದ್ದಿತೆಂದು ಊಹಿಸಬಹುದು.

**ಸತ್ರಗಳು:**

ಅರವಟ್ಟಿಗೆಗಳು ಪ್ರವಾಸಿಗರ ಬಾಯಾರಿಕೆಯನ್ನು ಹೋಗಲಾಡಿಸಿದರೆ ಸತ್ರಗಳು ವಿಶ್ರಾಂತಿ ತಾಣಗಳಾಗಿ, ತಾತ್ಕಾಲಿಕ ವಸತಿ ವ್ಯವಸ್ಥೆ ನೀಡಿ ಪ್ರವಾಸಿಗರ ಹಸಿವನ್ನು ನಿವಾರಿಸುತ್ತಿದ್ದವು. ಸತ್ರಗಳಲ್ಲಿ ಕೆಲವು ಕಡೆ ವಿದ್ಯಾರ್ಥಿಗಳ ವಸತಿ ಮತ್ತು ಭೋಜನ ವ್ಯವಸ್ಥೆಯನ್ನು ಮಾಡಿ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿರುವುದುಂಟು. ಕೆಲವು ಶೈವ ಸ್ಥಾನಪತಿಗಳನ್ನು ಮತ್ತು ದಾನಿಗಳನ್ನು 'ದೀನರ ಅನಾಥರ ಜಠರಾಗ್ನಿಯನ್ನು ನಿವಾರಿಸಿದವರು' ಎಂದು ಶಾಸನಗಳು ಹೊಗಳಿವೆ. ಅನೇಕ ಧರ್ಮಕಾರ್ಯಗಳಲ್ಲಿ ಸತ್ರ ನಿರ್ಮಾಣವೂ ಒಂದಾಗಿದ್ದಿತು.

ಅಮೃತದಂಡಾಧಿಪನು ಕೆರೆ, ಸತ್ರ, ಅಗ್ರಹಾರ, ಅರವಟ್ಟಿಗೆಗಳನ್ನು ನಿರ್ಮಿಸಿದನೆಂದು ಒಂದು ಶಾಸನ ಹೇಳುತ್ತದೆ.[5] ಕೆಲವು ಸತ್ರಗಳಲ್ಲಿ ನಿರ್ದಿಷ್ಟ ಸಂಖ್ಯೆಯ ಬ್ರಾಹ್ಮಣರ ಭೋಜನಕ್ಕೆ ವ್ಯವಸ್ಥೆ ಮಾಡಿರುವುದು ಕಂಡುಬರುತ್ತದೆ. ಈ ರೀತಿ ನಿರ್ದಿಷ್ಟ ವರ್ಣದವರಿಗಾಗಿ ಭೋಜನ ವ್ಯವಸ್ಥೆಯನ್ನು ಮಾಡಿರುವುದನ್ನು ನೋಡಿದರೆ ಇಂಥ ಸತ್ರಗಳೂ ಇದ್ದುವೆಂದೂ, ಯಾವ ನಿರ್ದಿಷ್ಟ ವರ್ಣದವರಿಗೆಂದು ಹೇಳದ ಸತ್ರಗಳು ಉಳಿದವರಿಗೆ ಆಹಾರ ಮತ್ತು ವಸತಿ ವ್ಯವಸ್ಥೆಯನ್ನು ಮಾಡುತ್ತಿದ್ದವೆಂದು ಭಾವಿಸಬೇಕಾಗುತ್ತದೆ.

ಒಂದು ಶಾಸನ ನಾನಾಗೋತ್ರದ ಎಂಟು ಬ್ರಾಹ್ಮಣರ ಭೋಜನಕ್ಕೆ ಸತ್ರವಾಗಿ ದಾನವನ್ನು ಬಿಟ್ಟು ಆ ಧರ್ಮವನ್ನು ಮಹಾಜನರು ನೋಡಿಕೊಳ್ಳಬೇಕೆಂದೂ ಮತ್ತು ಅಡುಗೆಮಾಡುವ ವ್ಯಕ್ತಿಯೂ ಸೇರಿ ಒಂಬತ್ತು ಜನಕ್ಕೆ ನಿತ್ಯಪಡಿಯಾಗಿ ನೀಡುವ ಧಾನ್ಯ ಮುಂತಾದ ವಸ್ತುಗಳ ವಿವರವನ್ನು ನಿರೂಪಿಸುತ್ತದೆ.[6]

---

೧. ಎಸ್‌ಐಐ XV ಬಾದಾಮಿ ೫೭೯ ಕ್ರಿ.ಶ. ೧೨ ಶಮಾ.
೨. ಎಇ XIX ರೋಣ ೩೮೬ ಕ್ರಿ.ಶ. ೧೧೭೯.
೩. ಎಸ್‌ಐಐ IX(i) ಹರಪನಹಳ್ಳಿ ೩೭೯ ಕ್ರಿ.ಶ. ೧೨೮೦.
೪. ಎಸ್‌ಐಐ XV ಬೀಳ್ಗಿ ೫೪೨ ಕ್ರಿ.ಶ. ೧೧೪೯-೫೦.
೫. (ರೈ) ಎಕ VI ಕಡೂರು ೩೬ ಕ್ರಿ.ಶ. ೧೨೦೩.
೬. (ರೈ) ಎಕ V ಚನ್ನರಾಯಪಟ್ಟಣ ೨೩೬ ಕ್ರಿ.ಶ. ೧೨೫೩.

ಕೆಲವು ಸತ್ರಗಳು ದೇವಾಲಯಕ್ಕೆ ಹೊಂದಿಕೊಂಡಂತೆ ಇರುತ್ತಿದ್ದವು. ಬಸರಾಳಿನ ಶಾಸನ ದೇವಲಸತ್ರದಲ್ಲಿ ಊಟಮಾಡುವ ಹತ್ತುಜನರಿಗೆ ಅಕ್ಕಿ ಕೊ 'ಬ' ಡಜಿ ಲೆಕ್ಕದೆ... ಮೆಳಸು ಬೇಳೆ ಎಣ್ಣೆ, ತೊಗರಿಬೇಳೆ... ಸತ್ರದಲ್ಲಿ ಅಡುಗೆಮಾಡುವ ಬಾಣಸಿಗ ಎಲ್ಲರಿಗೂ ದಾನ ನೀಡಿರುವುದನ್ನು ತಿಳಿಸುತ್ತದೆ.[೧] ಸತ್ರದಲ್ಲಿ ಅಡುಗೆ ಮಾಡಲು ಪುರುಷರಂತೆ ಸ್ತ್ರೀಯರನ್ನೂ ನೇಮಿಸಿಕೊಳ್ಳುತ್ತಿದ್ದರು. ಒಂದು ಶಾಸನದಲ್ಲಿ 'ಸತ್ರಕ್ಕಟ್ಟಿಕ್ಕುವ ಬ್ರಾಹ್ಮಣತಿಯುಡುವ ಸೀರೆಗೆ' ಇಷ್ಟು ಹಣವೆಂದು ನಿಯೋಜಿಸಿರುವುದು ಕಂಡುಬರುತ್ತದೆ.[೨] ದೇವಾಲಯ ಮಠಗಳಿಗೆ ಹೊಂದಿದಂತೆ ಇರುತ್ತಿದ್ದ ಸತ್ರಗಳಲ್ಲಿ ವಿದ್ಯಾರ್ಥಿಗಳಿಗೆ ಭೋಜನ ವ್ಯವಸ್ಥೆಯನ್ನು ಕಲ್ಪಿಸುತ್ತಿದ್ದುದು ಕಂಡು ಬರುತ್ತದೆ.

**ಅಗ್ಗಿಷ್ಟಗೆ:**

ನಿತ್ಯೋಪಯೋಗಿಯಾದ ಬೆಂಕಿಯನ್ನು ಆರದ ಹಾಗೆ ಸಂರಕ್ಷಿಸಲು ಒಂದು ವ್ಯವಸ್ಥೆ ಆ ಕಾಲದಲ್ಲಿ ಇದ್ದಿರಬೇಕು. ಇದು ಬಹುಶಃ ಒಂದೊಂದು ಗ್ರಾಮವೂ ಮಾಡಿಕೊಳ್ಳಬೇಕಾಗಿದ್ದ ಸಾಮೂಹಿಕ ಪ್ರಯತ್ನವೇ ಆಗಿದ್ದಿತು. ಅಗ್ಗಿಷ್ಟಗೆಗಳ[೩] ರಕ್ಷಣೆಗಾಗಿ ಅನೇಕ ದಾನಗಳನ್ನು ನೀಡಿರುವುದು ಕಂಡುಬರುತ್ತದೆ. ಇದು ಅಗ್ಗಿಷ್ಟಗೆ, ಅಗ್ನಿಷ್ಠಗೆ, ಅಗ್ನಿಷ್ಟಗೆ, ಅಗ್ನಿಷ್ಠಿ ಮುಂತಾದ ರೂಪಗಳಲ್ಲಿ ದೊರೆಯುತ್ತದೆ. ಇವುಗಳಿಗೆ ಮೂಲ ಸಂಸ್ಕೃತದ ಅಗ್ನಿಷ್ಠಕ.

ಅಗ್ಗಿಷ್ಟಗೆಗಳನ್ನು ನಿರ್ಮಿಸುವುದು ಧರ್ಮಕಾರ್ಯವೆಂಬ ನಂಬಿಕೆ ಇದ್ದಿತು. ದಾಮೋದರಭಟ್ಟರು ಹರಳ ಬಯಲ ಗದ್ದೆಯಲ್ಲಿ ಹನ್ನೆರಡು ಕಂಬವನ್ನು ಪಡೆದು ಅಗ್ನಿಷ್ಠಗೆ ಧರ್ಮಕ್ಕಾಗಿ ಬಿಟ್ಟ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೪] ದಂಡನಾಯಕನೊಬ್ಬನ ಮಗಳಾದ ಮುದ್ದಲದೇವಿಯಕ್ಕ ಆರುಗದ್ಯಾಣಗಳನ್ನು ಕೊಟ್ಟು ಅದರಿಂದ ಬರುವ ಬಡ್ಡಿಯಲ್ಲಿ ಶಿವಪುರದ ಮಹಾಜನರು ಅಗ್ನಿಷ್ಠಗೆಯನ್ನು ನಡೆಸಬೇಕೆಂದು ಹೇಳಿರುವುದಾಗಿ ಒಂದು ಶಾಸನ ತಿಳಿಸುತ್ತದೆ.[೫]

ಧರ್ಮಕಾರ್ಯನಿಮಿತ್ತವಾಗಿ ಹೆಗ್ಗಡೆ ದಾಸಿರಾಜನು ಹೂಲಿಯ ಮಹಾಜನರ ಪಾದಗಳನ್ನು ದ್ರವ್ಯ ಪೂರ್ವಕ ಆರಾಧಿಸಿ ನಾಗಾವಿಯ ದೇವಾಲಯದ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಅಲ್ಲಿಯ ಧರ್ಮೋತಕ್ಕೆ ಅಗ್ನಿಷ್ಟಗೆಯ ಆರೈಕೆಗಾಗಿ ಭೂಮಿದಾನವನ್ನು ಮಾಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೬] ಒಂದು ಶಾಸನದಲ್ಲಿ ಅಗ್ನಿಷ್ಠಿಗೆಯ ಮಠದ ಉಲ್ಲೇಖ ಕಂಡು ಬರುತ್ತದೆ.[೭] ಅಲ್ಲಿ ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳಲು ನಿಯೋಜಿಸಲಾಗಿದೆ.

ಅಗ್ಗಿಷ್ಟಗೆಗಳಿಗೆ ನೀಡಿರುವ ಹೆಚ್ಚಿನ ದಾನಗಳೆಲ್ಲವೂ ಅಗ್ರಹಾರಗಳಲ್ಲಿ, ಮಠಗಳಲ್ಲಿ ವ್ಯವಸ್ಥೆಗೊಳಿಸಿರುವಂತೆ ಕಂಡು ಬರುತ್ತವೆ. ಬಹುಶಃ ಯಜ್ಞೋಪಯೋಗಿಯಾಗಲೆಂದು ನೀಡಿರುವ ಸಾಧ್ಯತೆ ಇದೆ. ಕೆಲವು ಕಡೆ ಅಗ್ಗಿಷ್ಟಗೆಗಳ ಸಂರಕ್ಷಣೆ ಅಗ್ರಹಾರದ ಮಹಾಜನರ ಜವಾಬ್ದಾರಿಯಲ್ಲಿ ಇರುವುದು ಕಂಡುಬರುತ್ತದೆ.

---

೧. (ಮೈ) ಎಕ VII ಮಂಡ್ಯ ೩೦ ಕ್ರಿ.ಶ. ೧೨೩೭.

೨. ಕಇ II ಅಥಣಿ ೨೧ ಕ್ರಿ.ಶ. ೧೧೪೭.

೩. ಕೆಂಡವನ್ನು ಕಾಯಿಸುವ, ಮುಖ್ಯವಾಗಿ ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಒಲೆ. ಕ.ಕ. ನಿಘಂಟು. ಸಂ. I ಪು.

೪. ಎಂಎಆರ್ ೧೯೩೦ ಸಾಗರ ೬೯ ಕ್ರಿ.ಶ. ೧೨೪೩.

೫. ಎಇ XII ಶೋರಾಪುರ ೩೨ ಕ್ರಿ.ಶ. ೧೦೭೭.

೬. ಎಇ XVIII ಪರಸಗಡ ೨೨ಎಂ ಕ್ರಿ.ಶ. ೧೧೬೨.

೭. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

# ೧೧. ಆರ್ಥಿಕ ವ್ಯವಸ್ಥೆ

**ಕ**ರ್ನಾಟಕದ ಪ್ರಾಚೀನ ಆರ್ಥಿಕ ವ್ಯವಸ್ಥೆಯನ್ನು ಶಾಸನಗಳಿಂದ ತಿಳಿಯ ಹೊರಟರೆ ಅವುಗಳಿಂದ ವಿಪುಲ ಸಾಮಗ್ರಿ ದೊರೆಯುತ್ತದೆ. ಸಾವಿರಾರು ಶಾಸನಗಳಲ್ಲಿ ಕಂಡುಬರುವ ವಿವರಗಳಿಂದ ಆ ಕಾಲದ ಆರ್ಥಿಕ ವ್ಯವಸ್ಥೆಯನ್ನು ಕಟ್ಟಿಕೊಡಲು ಇಲ್ಲಿ ಪ್ರಯತ್ನಿಸಲಾಗಿದೆ. ಶಾಸನೋಕ್ತ ವೃತ್ತಿಗಳು, ತೆರಿಗೆಗಳು, ಅಳತೆ ತೂಕಗಳು, ವರ್ತಕ ಶ್ರೇಣಿಗಳು, ನಾಣ್ಯಗಳು, ಅಧಿಕಾರ ವರ್ಗ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಹಾಗೆ ದೊರೆಯುವ ವಿವರಗಳು ಅತ್ಯಂತ ವೈವಿಧ್ಯಮಯವಾಗಿದ್ದು ಅವನ್ನು ಒಂದು ವ್ಯವಸ್ಥೆಗೆ ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ವ್ಯವಸಾಯ:**

ಪ್ರಾಚೀನ ಕರ್ನಾಟಕದಲ್ಲಿ ವ್ಯವಸಾಯ ಅತಿ ಪ್ರಮುಖವಾದ ವೃತ್ತಿಗಳಲ್ಲಿ ಒಂದಾಗಿತ್ತು. ದೇವಸ್ಥಾನಗಳಿಗೆ, ಅಧಿಕಾರಿಗಳಿಗೆ, ಮಠಗಳಿಗೆ, ವೀರರಿಗೆ ನೀಡಿರುವ ದಾನಗಳಲ್ಲೆಲ್ಲಾ ಭೂಮಿದಾನವೇ ಎದ್ದು ಕಾಣುತ್ತದೆ. 'ಭೂಮಿದಾನಕ್ಕೆ ಸಮನಾದುದಿಲ್ಲ; ಭೂಮಿಗೆ ಸಮನಾದ ಐಶ್ವರ್ಯವಿಲ್ಲ'[1]ವೆಂದು ಶಿಕಾರಿಪುರ ತಾಲ್ಲೂಕಿನ ಶಾಸನವೊಂದು ಹೇಳುತ್ತದೆ. ಭೂಮಿಯನ್ನು 'ಭೂಮಿತಾಯಿ' ಎಂದು ಕರೆಯುವ ರೂಢಿ ಈ ಕಾಲದಲ್ಲಿಯೂ ಉಳಿದುಬಂದಿದೆ. ಜೀವಕೋಟಿಗೆ ಆಹಾರವನ್ನು ಒದಗಿಸುವ ಭೂಮಿಯ ಬಗ್ಗೆ ಬಹು ಪೂಜ್ಯವಾದ ಭಾವನೆ ಎಲ್ಲ ಕಾಲದಲ್ಲಿಯೂ ಇದೆ.

ಶಾಸನಗಳಲ್ಲಿ ಅನೇಕ ರೀತಿಯ ಜಮೀನುಗಳ ವಿಷಯ ಪ್ರಸ್ತಾಪಿತವಾಗಿದೆ. ಸಾಮಾನ್ಯವಾಗಿ ಜಮೀನುಗಳನ್ನು ದೇವಮಾತೃಕ ಮತ್ತು, ನದೀಮಾತೃಕವೆಂದು ಎರಡು ವಿಭಾಗಗಳಾಗಿ ವಿಂಗಡಿಸಿರುವುದು ಕಂಡುಬರುತ್ತದೆ. ಮಳೆಯ ನೀರನ್ನು ಆಶ್ರಯಿಸಿ ಬೆಳೆಯುವ ಜಮೀನುಗಳನ್ನು ದೇವಮಾತೃಕಗಳೆಂದು, ನದಿ, ಕೆರೆ ಮುಂತಾದವುಗಳನ್ನು ಆಶ್ರಯಿಸಿ ಬೆಳೆಯುವ ಜಮೀನುಗಳನ್ನು ನದೀಮಾತೃಕಗಳೆಂದು ಗುರುತಿಸುತ್ತಾರೆ. ಈ ವಿಭಜನೆಯನ್ನೇ ಕನ್ನಡ ಶಾಸನಗಳಲ್ಲಿ ಬೆದ್ದಲೆ ಮತ್ತು ಗದ್ದೆಗಳೆಂದು ಕರೆದಿರುವುದು[2] ಎಂದು ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಪಡುತ್ತಾರೆ. ಆ ಕಾಲದ ಶಾಸನಗಳು ದೇವಮಾತೃಕವನ್ನು 'ಕಾಡಾರಂಭ'ವೆಂದೂ ನದೀಮಾತೃಕವನ್ನು 'ನೀರಾರಂಭ'ವೆಂದೂ ಗುರುತಿಸಿವೆ.[3]

---

೧. (ರೈ) ಎಕ VII ಶಿಕಾರಿಪುರ ೧೮೫ ಕ್ರಿ.ಶ. ೧೧೫೮. 'ನಾಸ್ತಿ ಭೂಮಿ ಸಮೋ ದಾನಮ್ ನಾಸ್ತಿ ಭೂಮಿ ಸಮೇ ನಿಧಿಃ'

೨. ಎಂ . ಚಿದಾನಂದಮೂರ್ತಿ : ಕಶಾಸಾಂಅ, ಪು. ೩೬೪. ಚಿತ್ರದುರ್ಗ ಜಿಲ್ಲೆಯಲ್ಲಿ ಇವುಗಳನ್ನು ಕ್ರಮವಾಗಿ ಖುಷ್ಕಿ ಮತ್ತು ತರಿ ಜಮೀನುಗಳೆಂದು ಕರೆಯುವ ರೂಢಿ ಇದೆ. ಮನುಷ್ಯ ಪ್ರಯತ್ನದಿಂದ ನಿರ್ಮಾಣವಾದ ಜಮೀನು ತರಿ ಮತ್ತು ಬಾಗಾಯ್ತು (ತೆಂಗು, ಅಡಕೆ, ಬಾಳೆ, ಎಲೆ, ಮಾವು ಮುಂತಾದುವನ್ನು ಬೆಳೆಯುವ ತೋಟಗಳು)ಎಂ.ಜಿ. ಈಶ್ವರಪ್ಪ: ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ. ಪು. ೨೧೫-೨೪೪.

೩. ಎಂ.ಎ.ಆರ್. ೧೯೩೩ ತಿ. ನರಸೀಪುರ ೬೬ ಕ್ರಿ.ಶ. ೧೫೯೮.

## ಭೂಮಿಯ ವಿಧಗಳು:

ಜಮೀನುಗಳನ್ನು ಅವುಗಳ ಬಣ್ಣ ಮತ್ತು ಸ್ವರೂಪಗಳ ಮೇಲೆ ವಿಧವಿಧವಾಗಿ ಗುರುತಿಸಿರುವುದುಂಟು. ಹಾಳಕೆಯಿ,[೧] ಎರೆಯ ಕಯ್ಯಿ,[೨] ಕಿಸುನೆಲ,[೩] ಕಿಸುಕಾಡು,[೪] ಕರಿಯ ಕೆಯಿ,[೫] ಕೆಂಗಾಡು,[೬] ಹರಳಕೆಯಿ[೭] ಎಂದು ಶಾಸನಗಳು ಕರೆದಿವೆ. ಧಾರವಾಡ ತಾಲ್ಲೂಕಿನ ಒಂದು ಶಾಸನದಲ್ಲಿ 'ತಂಮ ಕೆಯ್ಯೊಳಗೆ ಮೂಡಣ ತೆಂಕಣ ಗೋಟಿನೊಳು ಒಂದು ಮತ್ತರು 'ಹಕ್ಕಲಂ[೮] ಬಿಟ್ಟರು' ಎಂದು ಬರುತ್ತದೆ. ಬಾರಕೂರು ತಾಲ್ಲೂಕಿನ ಶಾಸನವೊಂದು 'ಮೆಕ್ಕೆಭೂಮಿ'[೯] ಎಂದು ಹೆಸರಿಸಿದೆ. ಇವುಗಳಲ್ಲದೆ ದಕ್ಷಿಣ ಕನ್ನಡ ಪ್ರದೇಶದಲ್ಲಿ ಕಂಡುಬರುವ ಕೆಲವು ಭೂಮಿಗಳೂ ಇವೆ.[೧೦] ಶಾಸನಗಳು ಅನೇಕ ರೀತಿಯ ಗದ್ದೆಗಳನ್ನು ಹೆಸರಿಸುತ್ತವೆ; ಬೆದೆಗದ್ದೆ,[೧೧] ಎರೆಯಗದ್ದೆ,[೧೨] ಮಂಣಗದ್ದೆ,[೧೩] ತೆವರ ಗದ್ದೆ,[೧೪] (ತೆವರು=ಎತ್ತರ, ಎತ್ತರವಾದ ಪ್ರದೇಶದಲ್ಲಿರುವ ಗದ್ದೆ), ಮಣಲು ಗಟ್ಟಿ[೧೫] ಇತ್ಯಾದಿ. ಒಂದು ಶಾಸನ 'ನೀರ್ಮಣ್ಣು'[೧೬] ಎಂದು ಹೆಸರಿಸುತ್ತದೆ. ಇದು ಗದ್ದೆಯನ್ನು ಸೂಚಿಸುತ್ತದೆ. ತುಳುನಾಡಿನಲ್ಲಿ ಕಂಡುಬರುವ ಸುಮಾರು ಇಪ್ಪತ್ತಕ್ಕೂ ಹೆಚ್ಚು ಗದ್ದೆಗಳನ್ನು ಪಿ. ಗುರುರಾಜಭಟ್ಟ ಅವರು ಹೆಸರಿಸುತ್ತಾರೆ.[೧೭] ಕೆಲವು ಶಾಸನಗಳಲ್ಲಿ 'ತಕ್ಕಿಲು'[೧೮] ಎಂದು ಭೂಮಿಯನ್ನು ಹೆಸರಿಸಲಾಗಿದೆ. ಅದು ವ್ಯವಸಾಯ

---

೧. ಎಸ್‌ಐಐ XVIII ರಾಣೆಬೆನ್ನೂರು ೧೮೦ ಕ್ರಿ.ಶ. ೧೧೬೮.

೨. (ರೈ) ಎಕ VI ಕಡೂರು ೧೩೪ ಕ್ರಿ.ಶ. ೧೨೦೭.

೩. ಎಸ್‌ಐಐ IX(i) ಆದೋನಿ ೩೬೭ ಕ್ರಿ.ಶ. ೧೨೨೯.

೪. ಎಸ್‌ಐಐ IX(i) ಬಳ್ಳಾರಿ ೨೯೭ ಕ್ರಿ.ಶ. ೧೧೭೭.

೫. ಕಇ I ಸೌಂದತ್ತಿ ೨೪ ಕ್ರಿ.ಶ. ೧೧೪೮.

೬. ಎಸ್‌ಐಐ XVIII ಹಾವೇರಿ ೨೪೦ ಕ್ರಿ.ಶ. ೧೨೫೯.

೭. (ರೈ) ಎಕ XVI ಚಿಕ್ಕನಾಯಕನಹಳ್ಳಿ ೫೮ ಕ್ರಿ.ಶ. ೧೨೬೦.

೮. ಕಇ V ಧಾರವಾಡ ೭೦ ಕ್ರಿ.ಶ. ೧೨೨೧.

ಬೆಳೆಯನ್ನು ಕತ್ತರಿಸಿಕೊಂಡನಂತರ ಅಲ್ಲಲ್ಲೆ ಉಳಿದ ಮತ್ತು ಬಿದ್ದ ತೆನೆ - ಕಾಳುಗಳುಳ್ಳ ಜಮೀನು ಎಂಬ ಅರ್ಥದಲ್ಲಿ ಹಕ್ಕಲು ಪದ ಬಳಕೆಯಾಗುತ್ತಿದೆ. (ಈ ವಿಷಯವನ್ನು ತಿಳಿಸಿದವರು ನನ್ನ ಅಧ್ಯಾಪಕರಾದ ಜಿ. ಬಸವನಗೌಡ ಅವರು)

ಹೊಲಗದ್ದೆಗಳಲ್ಲಿ ಬಿದ್ದ ಧಾನ್ಯಗಳನ್ನು ಆಯುವುದು ಎಂಬ ಅರ್ಥವನ್ನು ಕಿಟ್ಟೆಲ್ ಕೋಶದಲ್ಲಿ ಹಕ್ಕಲು ಪದಕ್ಕೆ ಕೊಡಲಾಗಿದೆ. ಮೇಲಿನ ಶಾಸನದಲ್ಲಿ ಹಕ್ಕಲು ಬಹುಶಃ ಚೆನ್ನಾಗಿ ಬೆಳೆಯಾಗಬಲ್ಲ ಜಮೀನನ್ನು ಸೂಚಿಸುತ್ತದೆ.

೯. ಎಸ್‌ಐಐ VII ಬಾರಕೂರು ೩೭೬ ಕ್ರಿ.ಶ. ೧೧೫೫.

೧೦. K. V. Ramesh : A History of South Canara ಬೆದಕಾರು, ಬೆದೆಗಣಗಿಲು, ಕಳಭೂಮಿ, ಪು. ೨೭೬.

೧೧. (ಮೈ) ಎಕ V ಮೈಸೂರು ೨೧೪ ಕ್ರಿ.ಶ. ೧೧೮೮.

೧೨. (ರೈ) ಎಕ VI ಕಡೂರು ೫೭ ಕ್ರಿ.ಶ. ೧೩೪೦.

೧೩. ಎಸ್‌ಐಐ XVIII ಹಾವೇರಿ ೧೭೯ ಕ್ರಿ.ಶ. ೧೧೬೭.

೧೪. ಎಸ್‌ಐಐ IX(i) ಕಲ್ಯಾಣದುರ್ಗ ೨೭೩ ಗ್ರಿ.ಶ. ೧೧೭೯.

೧೫. (ರೈ) ಎಕ V ಚನ್ನರಾಯಪಟ್ಟಣ ೨೨೮ ಕ್ರಿ.ಶ. ೧೧೫೪.

೧೬. (ಮೈ) ಎಕ VII ಮಂಡ್ಯ ೮೩ ಕ್ರಿ.ಶ. ೧೧೭೮.

೧೭. P.Gururaja Bhat : Studies in Tuluva History and Culture ಪು. ೨೦೧-೨.

೧೮. ಎಸ್‌ಐಐ IX(i) ಬಳ್ಳಾರಿ ೨೯೭ ಕ್ರಿ.ಶ. ೧೧೭೭.

ಯೋಗ್ಯವಾದ ಭೂಮಿಯನ್ನು ಸೂಚಿಸುತ್ತದೆ. ಆದರೆ ಇದು ಬೆದ್ದಲೊ ನೀರಾವರಿಯೋ ಸ್ಪಷ್ಟವಾಗುವುದಿಲ್ಲ. ಶಾಸನಗಳಲ್ಲಿ ತೆಂಗಿನ, ಅಡಕೆಯ, ಮಾವಿನ ತೋಟಗಳು,[೧] ಆರವೆಗಳ[೨] ವಿಷಯಗಳೂ ಪ್ರಸ್ತಾಪಿತವಾಗಿವೆ. ಅನೇಕ ಶಾಸನಗಳಲ್ಲಿ ಕೆರೆಯ ಪಕ್ಕದ, ಕೆಳಗಿನ ಭೂಮಿಗಳ ಪ್ರಸ್ತಾಪ ಬಂದಿರುವುದನ್ನು ಕಾಣಬಹುದಾಗಿದೆ.[೩] ಕೆರೆಯ ಸಮೀಪದ ಭೂಮಿಗೆ ನೀರಿನ ಸರಬರಾಜು ದೊರೆಯುವುದರಿಂದ ಅದು ಉತ್ಕೃಷ್ಟವಾದದ್ದು ಎಂಬ ಭಾವನೆ ಸಹಜವಾಗಿ ಇದ್ದಿರಬೇಕು.

**ನೀರಾವರಿ ವ್ಯವಸ್ಥೆ:**

ನೀರಿನ ಸರಬರಾಜು ಹೊಲಗದ್ದೆಗಳಿಗೆ ಅಧಿಕವಾಗಿ ಕೆರೆಗಳ ಮೂಲಕ ಆಗುತ್ತಿತ್ತು. ಕೆರೆಗಳ ನಿರ್ಮಾಣ ದೇವಸ್ಥಾನಗಳ ನಿರ್ಮಾಣದಂತೆ ಬಹು ಪುಣ್ಯಕಾರ್ಯವೆಂದು ತಿಳಿದಿದ್ದರು. ಅನೇಕ ಶಾಸನಗಳಲ್ಲಿ ಅವೆರಡನ್ನೂ ಜೋಡಿಯಾಗಿ ಹೇಳಿರುವುದುಂಟು. ತ್ರುಟಿತವಾಗಿರುವ ಒಂದು ಶಾಸನದಲ್ಲಿ '...ಆಲದ ಹಳಿಯಲು ಕಟ್ಟಿದ ಕೆಜೆ ಎತ್ತಿಸಿದ ದೇವಾಲ್ಯ ಮಲ್ಲೇಸ್ವರ ದೇವರ ಪ್ರತಿಷ್ಠೆಯಂ ಗೆಯಿಸಿ...' ಎಂದು ಬರುತ್ತದೆ.[೪] ನಾಕರಸನೆಂಬುವನು ತಾನು ಪಡೆದ ಒಡವೆಯನ್ನು ದೇಗುಲ ನಿರ್ಮಾಣ ಮತ್ತು ಕೆರೆಗಳ ನಿರ್ಮಾಣದಲ್ಲಿ ವ್ಯಯಿಸಬೇಕೆಂದು ನಿರ್ಧರಿಸಿ ಕಾರ್ಯತತ್ಪರನಾದ ವಿಷಯವನ್ನು ತಿಳಿಸುತ್ತದೆ.[೫] ವೀರಬಲ್ಲಾಳನ ಪ್ರಧಾನ ಸರ್ವಾಧಿಕಾರಿ ವೀರಯ್ಯ ದಂಡನಾಯಕ ರಾಜನ ಅಭ್ಯುದಯಕ್ಕಾಗಿ ಕಾಡನ್ನು ಕಡಿಸಿ ವೀರಬಲ್ಲಾಳಪುರದಲ್ಲಿ ರುದ್ರ ಸಮುದ್ರ, ಗಂಗಾ ಸಮುದ್ರ, ಅಚ್ಯುತ ಸಮುದ್ರ ಮತ್ತು ವೀರಸಮುದ್ರಗಳೆಂಬ ನಾಲ್ಕು ಕೆರೆಗಳನ್ನು ಕಟ್ಟಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೬] ಕೆರೆಯನ್ನು ಸಮಾಜದ ಎಲ್ಲ ವರ್ಗದವರು ಕಟ್ಟಿಸಿದ್ದಕ್ಕೆ ಉದಾಹರಣೆಗಳಿವೆ. ಯತಿಗಳು,[೭] ಮಾವುತರು,[೮] ಕುರುಬರು[೯] ಹೀಗೆ ಕೆರೆಯ ನಿರ್ಮಾಣ ಸಮಾಜದ ನಾನಾ ವರ್ಗದವರಿಂದ ನಿರ್ಮಾಣವಾಗಿವೆ. ಕೆರೆಗಳ ನಿರ್ಮಾಣ ಹೊಯ್ಸಳರ ಕಾಲದಲ್ಲಿ ವ್ಯಾಪಕವಾಗಿ ನಡೆಯಿತು. ಜಿ.ಆರ್. ಕುಪ್ಪುಸ್ವಾಮಿಯವರು ಅಭಿಪ್ರಾಯಪಡುವಂತೆ ಹಾಸನ ಜಿಲ್ಲೆಯಲ್ಲಿಯೇ ಪ್ರತಿಶತ ೪೯ರಷ್ಟು ಕೆರೆಗಳು ನಿರ್ಮಾಣವಾದರೆ, ಉಳಿದ ಜಿಲ್ಲೆಗಳಲ್ಲಿ ಪ್ರತಿಶತ ೫೧ರಷ್ಟು ಕೆರೆಗಳು ನಿರ್ಮಾಣವಾದವು. ಒಟ್ಟು ನಿರ್ಮಾಣವಾದ ಕೆರೆಗಳಲ್ಲಿ ಪ್ರತಿಶತ ೫೫ರಷ್ಟು ಕೆರೆಗಳು ಎರಡನೆಯ ಬಲ್ಲಾಳನ ಕಾಲದಲ್ಲಿಯೇ ನಿರ್ಮಾಣವಾದವು.[೧೦]

ಕೆರೆಯ ನಿರ್ಮಾಣಕ್ಕೆ ಗಮನವನ್ನು ಕೊಟ್ಟ ಹಾಗೆ ಅವುಗಳ ಸಂರಕ್ಷಣೆಯ ಕಡೆಗೂ ಗಮನವನ್ನು ಕೊಡುತ್ತಿದ್ದರು. ಹರಿಹರಪುರದ ಕಟ್ಟೆ, ಕಾಲುವೆಗಳನ್ನು ಸಂರಕ್ಷಿಸಲು ದಾನ ನೀಡಿದ ವಿಷಯ ತಿಳಿದುಬರುತ್ತದೆ.[೧೧] ಅರಸಿಕೆರೆ ತಾಲ್ಲೂಕಿನ

---

೧. (ರೈ) ಎಕ V ಚನ್ನರಾಯಪಟ್ಟಣ ೨೨೮ ಕ್ರಿ.ಶ. ೧೧೫೪.

೨. ಎಸ್ಐಐ XVIII ರಾಣೆಬೆನ್ನೂರು ೧೯೩ ಕ್ರಿ.ಶ. ೧೧೮೭-೮೮.

೩. (ರೈ) ಎಕ VIII ಸೊರಬ ೩೨೫ ಕ್ರಿ.ಶ. ೧೧೭೮; (ರೈ) ಎಕ XII ಚಿಕ್ಕನಾಯಕನಹಳ್ಳಿ ೨೦ ಕ್ರಿ.ಶ. ೧೧೮೮.

೪. (ಮೈ) ಎಕ VII ಮಂಡ್ಯ ೮೩ ಕ್ರಿ.ಶ. ೧೧೭೮.

೫. (ರೈ) ಎಕ V ಹಾಸನ ೭೬ ಕ್ರಿ.ಶ. ೧೧೬೮.

೬. (ರೈ) ಎಕ V ಬೇಲೂರು ೧೭೫ ಕ್ರಿ.ಶ. ೧೧೮೬.

೭. (ರೈ) ಎಕ V ಚನ್ನರಾಯಪಟ್ಟಣ ೨೧೦ ಕ್ರಿ.ಶ. ೧೧೬೫.

೮. (ರೈ) ಎಕ V ಅರಸಿಕೆರೆ ೧೫೦ ಕ್ರಿ.ಶ. ೧೧೯೫.

೯. (ರೈ) ಎಕ XI ಚಿತ್ರದುರ್ಗ ೧೨ ಕ್ರಿ.ಶ. ೧೨೮೬.

೧೦. G. R. Kuppuswamy : 'Irrigation System in Karnataka (Hoysala Peroid), A statistical analysis' ಜೆಕೆಯು XIX, ಪು. ೩೮-೪೧.

೧೧. (ಮೈ) ಎಕ VI ಕೃ.ಪೇಟೆ ೧೧ ಕ್ರಿ.ಶ. ೧೩೧೦.

ಕ್ರಿ.ಶ. ೧೩೬೭ರ ಒಂದು ಶಾಸನದಲ್ಲಿ ಕೆರೆಯ ಹೂಳುಮಣ್ಣನ್ನು ತೆಗೆಯಲು ಒಂದು ಕೋಣದ ಗಾಡಿಯನ್ನು ಗೊತ್ತು ಮಾಡಿದ್ದರೆಂದೂ, ಆ ಗಾಡಿಯವನಿಗೆ ಜಮೀನುಗಳ ಹಿಡುವಳಿದಾರರು ಕ್ಲುಪ್ತವಾಗಿ ವರಮಾನವನ್ನು ಸಲ್ಲಿಸುತ್ತಿದ್ದರೆಂದೂ ತಿಳಿದುಬರುತ್ತದೆ.[೧] ಕೆರೆಗಳ ಸಂರಕ್ಷಣೆಗಾಗಿ 'ಕೆರೆಗೊಡಗೆ'ಗಳನ್ನು ನೀಡುತ್ತಿದ್ದ ವಿಷಯ ತಿಳಿದುಬರುತ್ತದೆ.[೨] ಈ ರೀತಿಯಲ್ಲಿ ಕೆರೆಗಳಿಗಾಗಿ ಬಿಡುತ್ತಿದ್ದ ಜಮೀನನ್ನು 'ಬಿತ್ತುವಟ್ಟ'ವೆಂದು ಕರೆಯುತ್ತಿದ್ದರು. ಆ ಜಮೀನಿನ ಉತ್ಪನ್ನವನ್ನು ಕೆರೆಯ ಸಂರಕ್ಷಣೆಗೆ ಮತ್ತು ದುರಸ್ಥಿಗೆ ಬಳಸಬೇಕೆಂಬ ಉದ್ದೇಶ ಅದರಲ್ಲಿದ್ದಂತಿದೆ. ಬಿತ್ತುವಟ್ಟದ ಉತ್ಪನ್ನವನ್ನು ಕೆರೆಗೆ ಮಾತ್ರ ಬಳಸಬೇಕು ಅದನ್ನು ಆಸೆಪಟ್ಟರೆ ಅವರಿಗೆ ನರಕ ಪ್ರಾಪ್ತಿಯಾಗುವುದೆಂದು ಒಂದು ಶಾಸನ ಎಚ್ಚರಿಸುತ್ತದೆ.[೩]

ಕೆರೆಯಿಂದ ನದಿಗಳಿಂದ ಕಾಲುವೆಗಳನ್ನು ತೋಡಿ ನೀರನ್ನು ಹೊಲಗದ್ದೆ, ತೋಟಗಳಿಗೆ ಹಾಯಿಸಿಕೊಳ್ಳುತ್ತಿದ್ದರು. ತೋಟಕ್ಕೆ ನೀರನ್ನು ಹಾಯಿಸಿಕೊಳ್ಳುವ ಹೆಗ್ಗಾಲುವೆಯ ಪ್ರಸ್ತಾಪ ಬರುತ್ತದೆ.[೪] ಕೆಲವು ಶಾಸನಗಳಲ್ಲಿ 'ಮಡವಾಯ್' ಎನ್ನುವುದರ ಪ್ರಸ್ತಾಪ ಬರುತ್ತದೆ. ಮಡವಾಯ್ ಎನ್ನುವುದು, ಕೆರೆಯ ಹೆಗ್ಗಾಲುವೆಯಲ್ಲಿ ಹರಿಯುವ ನೀರನ್ನು ತೋಟದ ಮಡಿಗಳಿಗಾಗಲಿ, ಗದ್ದೆಗಳಿಗಾಗಲಿ, ಪೂರೈಸುವುದಕ್ಕೋಸ್ಕರ ಆ ಕಾಲುವೆಯಿಂದ ತೆಗೆದ ಶಾಖೆ, ಸಣ್ಣ ಕಾಲುವೆ.[೫]

ಕೆರೆ-ಬಾವಿಗಳಿಂದ ನೀರನ್ನು ಮೇಲೆತ್ತಿ ಹೊಲಗದ್ದೆಗಳಿಗೆ ಹಾಯಿಸಿಕೊಳ್ಳಲು ರಾಟಣವನ್ನು ಉಪಯೋಗಿಸುತ್ತಿದ್ದರು. ಆ ವಿಷಯ ಒಂದು ಶಾಸನದಲ್ಲಿ ಉಕ್ತವಾಗಿದೆ.[೬] ಅದೇ ಶಾಸನವು ಕಾಕತೀಯ ಬೇತರಸನು ತನ್ನ ತಂದೆ ಮಹಾಮಂಡಳೇಶ್ವರ ಪೋಲರಸದೇವ ವರುಣ ಪ್ರತಿಷ್ಠಾ ಕಾಲದಲ್ಲಿ ಶಾಸನ ಕಂಬ ನಿಲ್ಲಿಸಿದ ವಿಷಯವನ್ನು ತಿಳಿಸುತ್ತದೆ. ನೀರನ್ನು ಏತದ ಮೂಲಕ ಹಾಯಿಸಿಕೊಳ್ಳುವ ವ್ಯವಸ್ಥೆ ಇದ್ದಿತು. ಕೆಲವು ಸಾರಿ ಸಾರ್ವಜನಿಕ ಉಪಯೋಗಕ್ಕಾಗಿ 'ಧರ್ಮೇತ'ದ ವ್ಯವಸ್ಥೆಗಾಗಿ ದಾನವನ್ನು ನೀಡಿದ ವಿಷಯವೂ ತಿಳಿದುಬರುತ್ತದೆ.[೭] ಏತದ ವಿಷಯ ಅನೇಕ ವಚನಗಳಲ್ಲಿಯೂ ಬಂದಿದೆ.[೮] ಈ ಕಾಲದಲ್ಲಿಯೂ ಏತದ ಮೂಲಕ ನೀರನ್ನು ಹೊಲಗದ್ದೆಗಳಿಗೆ ಹಾಯಿಸಿಕೊಳ್ಳುವ ವ್ಯವಸ್ಥೆ ಕಂಡುಬರುತ್ತದೆ.

---

೧. ಎಚ್.ಸಿ. ಕಪಿನೀಪತಿಭಟ್ಟ : 'ಪ್ರಾಚೀನ ಭಾರತದಲ್ಲಿ ನೀರಾವರಿ', ಉಪಾಯನ, ಪು. ೩೫.

೨. (ಮೈ) ಎಕ VII ನಾಗಮಂಗಲ ೮೧ ಕ್ರಿ.ಶ. ೧೨೨೩-೪; ಎಸ್ಐಐ IX(i) ಹರಪನಹಳ್ಳಿ ೨೮೧ ಕ್ರಿ.ಶ. ೧೧೮೮.

೩. ಎಂ.ಎ.ಆರ್. ೧೯೪೦ ಚನ್ನರಾಯಪಟ್ಟಣ ೯ ಕ್ರಿ.ಶ. ೧೧೮೦. ಬಿ.ಆರ್. ಗೋಪಾಲ್ ಅವರು ಬಿತ್ತುವಟ್ಟವನ್ನು ವಿವರಿಸುತ್ತ ಕೆರೆಗೊಡಗೆ ಎಂಬುದು ಕೆರೆಯನ್ನು ಕಟ್ಟಿಸಿದವರಿಗೆ, ಅದರ ಕಟ್ಟೆ ಕಾಲುವೆಗಳನ್ನು ರಕ್ಷಿಸುತ್ತಿದ್ದವರಿಗೆ ಹಿಂದಿನ ಕಾಲದಲ್ಲಿ ನೀಡಲಾಗುತ್ತಿದ್ದ ಭೂಮಿದಾನ, ಇದಕ್ಕೆ ಬಿತ್ತುವಟ್ಟ ಎಂಬ ಹೆಸರೂ ಇದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಮೇಲೆ ಉದಾಹರಿಸಿದ ಶಾಸನದಿಂದ ಕೆರೆಯ ಸಂರಕ್ಷಣೆಯ ಉದ್ದೇಶದಿಂದ ಅದರ ವೆಚ್ಚವನ್ನು ಭರಿಸಲು ನೀಡಿದ ಭೂಮಿಯೆಂಬ ಅರ್ಥ ಬರುತ್ತದೆ. ನೋಡಿ: ಬಿ.ಆರ್. ಗೋಪಾಲ್ : 'ಪ್ರಾಚೀನ ಕರ್ನಾಟಕದಲ್ಲಿ ನಗರ ಯೋಜನೆ ಮತ್ತು ನೀರಾವರಿ', ಮಾ.ಕ. ೯-೩, ಪು. ೭೮-೭೯.

೪. ಎಸ್ಐಐ IX(i) ಕಲ್ಯಾಣದುರ್ಗ ೨೭೩ ಕ್ರಿ.ಶ. ೧೧೭೯.

೫. ಆರ್.ಎನ್. ಗುರವ : 'ತಂಬೂರ ಶಾಸನಗಳು', ಸಾಧನೆ ೪-೧, ಪು. ೭೪.

೬. ಕಇಆಪ್ರ. ವಾರಂಗಲ್ ೧೯ ಕ್ರಿ.ಶ. ೧೦೭೬-೧೧೨೬.

೭. ಎಇ XVIII ಪರಸಗಡ ೨೨ಎಂ. ಕ್ರಿ.ಶ. ೧೧೬೨.

೮. 'ಯಾತದ ತುದಿಯಲ್ಲಿ ಕಟ್ಟಿದ ಮಡಕೆಯಂತೆ
ಆದ ನೀತಿವಂತರು ಮೆಟ್ಟಿದಡೆ ಪಾತಾಳದ ಉದಕವ ತಂದು
ಪಾತಿಗೆ ಹರಿಹಿದ ತೆಱದಂತೆ...' ಸ.ಪು.ವ. ೩೦೫

'ಏತದ ತುದಿಯಲ್ಲಿ ತೂತು ಮಡಕೆಯ ಕಟ್ಟಿದಲ್ಲಿ ಭಾವಿಯ ಘಾತಕ್ಕೆ ಸರಿ', ಶಿಶವ. ೯೮.

ಬಾವಿಗಳನ್ನು ತೋಡಿಸುವುದು ಪುಣ್ಯಕಾರ್ಯಗಳಲ್ಲಿ ಒಂದೆಂದು ಭಾವಿಸಲಾಗಿತ್ತು. ಮಾದಿಯಣ್ಣನೆಂಬುವನು ಶಿವಗೃಹವನ್ನು ಮಾಡಿಸಿ ಅನಂತರ ನೆಲವನ್ನು ಪಡೆದು ಬಾವಿಯನ್ನು ತೋಡಿಸಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೧] ಶಿರಾ ತಾಲ್ಲೂಕಿನ ಶಾಸನವೊಂದರಲ್ಲಿ ಅತ್ತಿಯ ಮರದ ಬಾವಿಯ ಪ್ರಸ್ತಾಪ ಬರುತ್ತದೆ.[೨] ಪೆರಿಯಾಳುಸೆಟ್ಟಿ ಹೆಂಜೆಜ ಪಟ್ಟಣದಲ್ಲಿ ಅಗೆದ ಬಾವಿಯ ಅಗಳನ್ನು ತೆಗೆಸಿ ಅನಂತರ ದೇವಾಲಯಕ್ಕೆ ದಾನ ಕಾರ್ಯವನ್ನು ಮಾಡಿಸಿದ ವಿಷಯ ತಿಳಿದುಬರುತ್ತದೆ.[೩]

ಡಿ.ಎಲ್. ನರಸಿಂಹಾಚಾರ್ ಅವರು ಶಾಸನಗಳಲ್ಲಿ ಪ್ರಯೋಗವಾಗಿರುವ 'ಗುಯ್ಯಲು'[೪] ಒಂದು ರೀತಿಯ ಜಲಾಶಯವೆಂದೂ ಕುಕ್ಕೆ ಮತ್ತು ಗೂಡೆಗಳಲ್ಲಿ ತುಂಬಿ ನೀರು ಹಾಯಿಸಲು ಅನುಕೂಲವಾಗುವ ನೀರಿನ ಪರಿವು ಎಂದು ಅರ್ಥೈಸಿದ್ದಾರೆ. ಚಿತ್ರದುರ್ಗ, ತುಮಕೂರು ಮುಂತಾದ ಕೆಲವು ಪ್ರದೇಶಗಳಲ್ಲಿ ಈಗ ಬಳಕೆಯಲ್ಲಿರುವ 'ತಲಪರಿಗೆ' ರೀತಿಯ ನೀರು ಹಾಯಿಸುವಿಕೆಗೆ ಬಹುಶಃ ಹಿಂದೆ ಇದ್ದ ಹೆಸರಿರಬೇಕೆಂದು ಅವರು ಅಭಿಪ್ರಾಯಪಟ್ಟಿದ್ದಾರೆ.[೫]

**ಬೆಳೆಗಳು:**

ಈಚಿನ ಕೆಲವು ಹೊಸ ತಳಿಗಳನ್ನು ಬಿಟ್ಟರೆ ಉಳಿದಂತೆ ಬೆಳೆಗಳಲ್ಲಿ ಅಂತಹ ದೊಡ್ಡ ವ್ಯತ್ಯಾಸವೇನೂ ಆದಂತಿಲ್ಲ. ಈಗಿನಂತೆ ವೈವಿಧ್ಯಮಯವಾದ ಬೆಳೆಗಳನ್ನು ಬೆಳೆಯುತ್ತಿದ್ದರು.[೬] ಬತ್ತ, ಕಬ್ಬುಗಳನ್ನು ವಿಶೇಷವಾಗಿ ಬೆಳೆಯುತ್ತಿದ್ದರು. ಸಾಮಾನ್ಯವಾದ ಬತ್ತವನ್ನಲ್ಲದೆ 'ಸುಗಂಧ ಶಾಲಿ'[೭] ಎಂದೂ 'ಗಂಧ ಶಾಲಿ'[೮] ಎಂದೂ ಶಾಸನಗಳಲ್ಲಿ ಕರೆಯಲಾಗಿರುವ ವಿಶಿಷ್ಟ ಬಗೆಯ ಬತ್ತವನ್ನು ಬೆಳೆಯುತ್ತಿದ್ದರು. ಇವಲ್ಲದೆ ರಾಗಿ,[೯] ಜೋಳ,[೧೦] ಗೋಧಿ[೧೧] ಮುಂತಾದ ಬೆಳೆಗಳನ್ನು, ಮಾವು, ನೇರಳೆ, ಈಳೆ, ಹಲಸು, ಖರ್ಜೂರ, ತೆಂಗು ಮುಂತಾದವನ್ನು ಬೆಳೆಯುತ್ತಿದ್ದರು.[೧೨] ಬಾಳೆ ಜನಪ್ರಿಯ ಬೆಳೆಯಾಗಿದ್ದಿತು.[೧೩] ಅಡಕೆಯನ್ನೂ ವ್ಯಾಪಕವಾಗಿ ಬೆಳೆಯುತ್ತಿದ್ದರು.

ಉದ್ಯಾನವನಗಳ ಅಭಿವೃದ್ಧಿಯ ವಿಷಯವೂ ಸಾಕಷ್ಟು ಶಾಸನಗಳಲ್ಲಿ ಕಂಡುಬರುತ್ತದೆ. ಅನೇಕ ಶಾಸನಗಳಲ್ಲಿ 'ಆರವೆ'ಗಳನ್ನು ಮಾಡಿಸಿದ ವಿಷಯ ಕಂಡುಬರುತ್ತದೆ. ದೇವಾಲಯಗಳಿಗೆ ಹೊಂದಿಕೊಂಡ ಹಾಗೆ ಹೂತೋಟಗಳನ್ನು ಬೆಳೆಸುತ್ತಿದ್ದರು.

---

೧. ಎಸ್‌ಐಐ XX ಕುಂದಗೋಳ ೨೯೩ ಕ್ರಿ.ಶ. ೧೧೯೧.

೨. (ರೈ) ಎಕ XII ಶಿರಾ ೧೧ ಕ್ರಿ.ಶ. ೧೨೫೬.

೩. ಎಸ್‌ಐಐ IX(i) ಮಡಕಸಿರ ೨೬೮ ಕ್ರಿ.ಶ. ೧೧೬೨.

೪. (ರೈ) ಎಕ XII ಶಿರಾ ೩೨ ಕ್ರಿ.ಶ. ೧೨೭೮.

೫. ಡಿ.ಎಲ್. ನರಸಿಂಹಾಚಾರ್ : ಪೀಠಿಕೆಗಳು ಲೇಖನಗಳು, ಪು. ೯೦೧-೯೦೬.

೬. ಬಿ.ಜಿ.ಎಲ್. ಸ್ವಾಮಿ : ಶಾಸನಗಳಲ್ಲಿ ಗಿಡಮರಗಳು ಪು. ೧೧-೫೫.

೭. (ರೈ) ಎಕ V ಅರಸಿಕೆರೆ ೪೦ ಕ್ರಿ.ಶ. ೧೨೪೦; (ರೈ) ಎಕ V ಅರಸಿಕೆರೆ ೪೮ ಕ್ರಿ.ಶ. ೧೧೮೯.

೮. ಎಇ XIX ರೋಣ ೨೨೬, ಕ್ರಿ.ಶ. ೧೧೭೯; (ರೈ) ಎಕ V ಚನ್ನರಾಯಪಟ್ಟಣ ೧೯೭ ಕ್ರಿ.ಶ. ೧೨೨೩.

೯. ೧೦ನೆಯ ಶತಮಾನದ ಮೊದಲು ರಾಗಿ ಬೆಳೆ ಶಾಸನ- ಸಾಹಿತ್ಯ ಕೃತಿಗಳಲ್ಲಿ ಕಂಡುಬರುವುದಿಲ್ಲವೆಂದು ಬಿ.ಜಿ.ಎಲ್. ಸ್ವಾಮಿಯವರು ತಿಳಿಸುತ್ತಾರೆ. ನೋಡಿ ಅವರ ಪೂರ್ವೋಕ್ತ ಗ್ರಂಥ, ಪು. ೧೫.

೧೦. ಎಸ್‌ಐಐ XV ಮುದ್ದೇಬಿಹಾಳ ೩೮ ಕ್ರಿ.ಶ. ೧೧೪೮.

೧೧. ಐಎಸ್‌ಡಿ ಮೊಹ್ಯೊ ೨೦ ಕ್ರಿ.ಶ. ೧೧ ಶ.ಮಾ.

೧೨. ಎಸ್‌ಐಐ XX ಇಂಡಿ ೧೭೫ ಕ್ರಿ.ಶ. ೧೧೯೦.

೧೩. (ರೈ) ಎಕ V ಬೇಲೂರು ೮೯ ಕ್ರಿ.ಶ. ೧೨೮೦.

ತೋಟಗಳನ್ನು ಕೆಲವು ಸಾರಿ ಗುತ್ತಿಗೆಯ ಮೂಲಕ ಬೆಳೆಯಲು ನೀಡಲಾಗುತ್ತಿತ್ತು. 'ದೇವರ ತೋಂಟದ ಅರಣೆ ಗುತ್ತಿನ ಬೀಜಣ್ಣನು ತನ್ನ ಮಕ್ಕಳುದಪ್ಪದೆ ದೇವರಿಗೆ ದಿವಸವಳವಿಕ್ಕುವ ಹೂವಿನ ಸರ ೧೨ ಒಪ್ಪಿಡಿಯರಳು' ಮುಂತಾದವನ್ನು ನೀಡಬೇಕೆಂದು ಶಾಸನ ತಿಳಿಸುತ್ತದೆ.[೧] ದೇವಾಲಯಗಳು ನಿಶ್ಚಿತ ಧನವನ್ನು ನೀಡಿ ಮಾಲೆಗಾರರನ್ನು ನೇಮಿಸಿಕೊಳ್ಳುತ್ತಿದ್ದವು.[೨] ಅದೇ ರೀತಿ ತೋಟಗಳ ರಕ್ಷಣೆಗಾಗಿ ತೋಟಿಗರನ್ನು ನೇಮಿಸಿಕೊಳ್ಳುತ್ತಿದ್ದವು.[೩]

**ಕೈಗಾರಿಕೆಗಳು : ಕೆಲವು ವೃತ್ತಿಗಳು:**

ವ್ಯವಸಾಯ, ತೋಟಗಾರಿಕೆಯಲ್ಲದೆ ಜನರು ವಿವಿಧ ವೃತ್ತಿಯನ್ನು ಅನುಸರಿಸುತ್ತಿದ್ದರು. ಉತ್ಪನ್ನ ಮೂಲದ ವೃತ್ತಿಗಳಲ್ಲಿ ಕೆಲವನ್ನು ಗಮನಿಸಬಹುದು. ನೇಯ್ಗೆ ಆ ಕಾಲದ ಬಹುದೊಡ್ಡ ಕೈಗಾರಿಕೆಗಳಲ್ಲಿ ಒಂದಾಗಿತ್ತು. ಅನೇಕ ಶಾಸನಗಳಲ್ಲಿ 'ಸೀರೆ'ಗಳ ಪ್ರಸ್ತಾಪ ಬರುತ್ತದೆ.[೪] ಬಹುಶಃ ಇದು ಹತ್ತಿಯ ಬಟ್ಟೆಯನ್ನು ಸೂಚಿಸುತ್ತದೆ. ಅನೇಕ ಶಾಸನಗಳಲ್ಲಿ ಪಟ್ಟೆ, ಪಟ್ಟಾವಳಿಗಳ ಉಲ್ಲೇಖಗಳು ಬರುತ್ತವೆ. ಅವು ಬೆಲೆಬಾಳುವ ರೇಶ್ಮೆ ವಸ್ತ್ರವಾಗಿದ್ದು ಶ್ರೀಮಂತರಿಗೆ ಮತ್ತು ದೇವರಿಗೆ ನೀಡುವ ವಸ್ತ್ರಗಳಾಗಿವೆ.[೫] ರೇಶ್ಮೆ ಬಟ್ಟೆಗಳನ್ನು ನೇಯುವವರಿಗೆ ಪಟ್ಟೆಗಾರರೆಂದು ಕರೆಯುತ್ತಿದ್ದರು; ಶಾಸನಗಳಲ್ಲಿ ಬರುವ 'ಪಠ್ಠಾವಳಿ' (=ಪಟ್ಟಾವಳಿ) ಅವರು ನೇಯ್ದ ವಸ್ತ್ರಗಳನ್ನು ಸೂಚಿಸುತ್ತದೆ.[೬] ಅನೇಕ ಕಾವ್ಯಗಳೂ ಆ ವಸ್ತ್ರವನ್ನು ಉಲ್ಲೇಖಿಸುತ್ತವೆ.

ಬಟ್ಟೆಯನ್ನು ನೇಯಲು ಮಗ್ಗಗಳನ್ನು ಬಳಸುತ್ತಿದ್ದರು. ಒಂದು ಶಾಸನದಲ್ಲಿ ತೊರೆಮಗ್ಗ, ಹೊಲೆಮಗ್ಗಗಳನ್ನು ಧಾರಾಪೂರ್ವಕವಾಗಿ ಮಾಡಿ ಬಸದಿಗೆ ದತ್ತಿ ಬಿಟ್ಟ ವಿಷಯ ಬರುತ್ತದೆ.[೭] ಮಗ್ಗಗಳಿಗೆ ಹಾಕುತ್ತಿದ್ದ ತೆರಿಗೆಯ ವಿಷಯವೂ ಶಾಸನಗಳಲ್ಲಿ ಬಂದಿದೆ.[೮] ನೇಯ್ಗೆ ವೃತ್ತಿಯವರನ್ನು ಜೇಡ ಅಥವಾ ಜಾಡ ಎಂದೂ ಗುರುತಿಸಲಾಗುತ್ತಿತ್ತು. ಜೇಡರ ದಾಸಿಮಯ್ಯ ವೃತ್ತಿಯಿಂದ ನೇಯ್ಗೆಯವನಾದ ಪ್ರಖ್ಯಾತ ವಚನಕಾರನಾಗಿದ್ದಾನೆ.[೯] 'ಜಾಡ ಗೊತ್ತಳಿ'ಗಳೆಂಬ ಅವರ ವೃತ್ತಿ ಶ್ರೇಣಿಗಳೂ ಪ್ರಚಲಿತವಾಗಿದ್ದವು.[೧೦] ನೇಯ್ಗೆ ವೃತ್ತಿಯವರನ್ನು ಸಾಲಿಗರು ಎಂದು ಗುರುತಿಸಲಾಗಿದೆ.

ಎಣ್ಣೆ ತೆಗೆಯುವುದು ಬಹುದೊಡ್ಡ ಕೈಗಾರಿಕೆಗಳಲ್ಲಿ ಒಂದಾಗಿತ್ತು. ತೈಲಿಗರು ಎಣ್ಣೆಯ ಬೀಜಗಳನ್ನು ಗಾಣಕ್ಕೆ ಹಾಕಿ ಎಣ್ಣೆಯನ್ನು ತೆಗೆಯುತ್ತಿದ್ದರು. ಈ ಕೈಗಾರಿಕೆ ಬಹು ವ್ಯಾಪಕವಾಗಿ ಹರಡಿರುವುದು ವಿಪುಲವಾದ ಶಾಸನಗಳ ಉಲ್ಲೇಖಗಳಿಂದ

---

೧. ಎಸ್ಐಐ XV ಬಾಗೇವಾಡಿ ೯೯ ಕ್ರಿ.ಶ. ೧೧೫೯.

೨. (ರೈ) ಎಕ V ಚನ್ನರಾಯಪಟ್ಟಣ ೨೩೮ ಕ್ರಿ.ಶ. ೧೨೪೯.

೩. ಅದೇ.

೪. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬; ಕಇ II ಅಥಣಿ ೨೧ ಕ್ರಿ.ಶ. ೧೧೪೭.

೫. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೬. ಕಇ V ಖಾನಾಪುರ ೩೩ ಕ್ರಿ.ಶ. ೧೧೭೬.

೭. (ಮೈ) ಎಕ VI ಕೃ.ಪೇಟೆ ೧೦೬ ಕ್ರಿ.ಶ. ೧೧೬೫.

೮. (ಮೈ) ಎಕ III ಗುಂಡ್ಲುಪೇಟೆ ೧೩೬ ಕ್ರಿ.ಶ. ೧೫೧೩; (ಮೈ) ಎಕ VI ಪಾಂಡವಪುರ ೨೨೦ ಕ್ರಿ.ಶ. ೧೪ ಶ.ಮಾ.

೯. ಜೇಡರ ದಾಸಿಮಯ್ಯನ ಒಂದು ವಚನದಲ್ಲಿ ನೇಯ್ಗೆಗೆ ಸಂಬಂಧಿಸಿದ ಕೆಲವು ಪಾರಿಭಾಷಿಕ ಪದಗಳು ಬಳಕೆಯಾಗಿವೆ:
'ಉಂಕೆಯ ನಿಗುಚಿ ಸಲಿಗೆಯ ಸಮಗೊಳಿಸಿ
ಸಮಗಾಲನಿಕ್ಕಿ ಅಣಿಯೇಳ ಮೆಟ್ಟಿದೆ
ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು
ಈ ಸೀರೆಯ ನೆಯ್ವವ ನಾನೋ ನೀನೋ ರಾಮನಾಥ' ಜೇ.ದಾ.ವ. ೨.

೧೦. ಎಂ.ಎಂ. ಕಲಬುರ್ಗಿ : ಶಾಶಿಶ, ಪು. ೩೫.

ಸ್ಪಷ್ಟವಿದೆ. ಮೂರು ರೀತಿಯ ಗಾಣಗಳು ಶಾಸನಗಳಲ್ಲಿ ಉಲ್ಲೇಖಿತವಾಗಿವೆ; ಎತ್ತುಗಾಣ,[೧] ಕೈಗಾಣ[೨] ಮತ್ತು ಮೆಟ್ಟುಗಾಣ.[೩] ಗಾಣಗಳಲ್ಲಿ ಕೆಲವನ್ನು ಕಲ್ಲಿನಿಂದಲೂ, ಕೆಲವನ್ನು ಮರದಿಂದಲೂ ನಿರ್ಮಿಸಿರುತ್ತಿದ್ದರು. ಕಲ್ಲುಗಾಣದ ಉಲ್ಲೇಖ ಶಾಸನಗಳಲ್ಲಿ ಬಂದಿದೆ.[೪] ತೆಲ್ಲಿಗರನ್ನು ಗಾಣಿಗರೆಂದೂ ಕರೆಯುತ್ತಿದ್ದರು. ಅವರ ಶ್ರೇಣಿಗಳನ್ನು ಗಾಣಿಗರೊಕ್ಕಲು,[೫] ತೆಲಿಗಕೊತ್ತಳಿ,[೬] ತೆಲ್ಲಿಗ ಅಯ್ವತ್ತೊಕ್ಕಲು[೭] ಎಂದು ಗುರುತಿಸಿರುವುದುಂಟು. ಬೇಲೂರು ತಾಲ್ಲೂಕಿನ ಒಂದು ಶಾಸನದಲ್ಲಿ 'ಹಿರಿಯ ತೆಲ್ಲಿಗಗೇರಿ', 'ಕಿಱಿಯ ತೆಲ್ಲಿಗೇರಿ'ಗಳೆಂಬ ಉಲ್ಲೇಖಗಳು ಬರುತ್ತವೆ. ಆ ಕೇರಿಗಳು ಆಯಾ ವರ್ಗದ ತೆಲ್ಲಿಗರು ವಾಸಿಸುವ ಅಥವಾ ಮಾರುವ ಕೇರಿಗಳನ್ನು ಸೂಚಿಸುತ್ತವೆ. ಗಾಣಗಳ ಮೇಲೆ ಹಾಕುತ್ತಿದ್ದ ತೆರಿಗೆಗಳನ್ನು 'ಗಾಣದೆರೆ'[೮] ಎಂದು ಶಾಸನಗಳಲ್ಲಿ ಕರೆಯಲಾಗಿದೆ. ಗಾಣಿಗರು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಅನೇಕ ಧರ್ಮಕಾರ್ಯಗಳನ್ನು ಮಾಡಿರುವುದುಂಟು.

ಬೆಲ್ಲ, ಸಕ್ಕರೆಗಳನ್ನು ಮಾರಾಟ ಮಾಡುತ್ತಿದ್ದ ವಿಷಯ ಶಾಸನಗಳಲ್ಲಿ ಕಂಡುಬರುತ್ತವೆ. ಅವುಗಳ ತಯಾರಿಕೆಯನ್ನು ಕುರಿತ ಹೆಚ್ಚಿನ ವಿವರಗಳು ಶಾಸನಗಳಿಂದ ದೊರೆಯುವುದಿಲ್ಲ. ಅವು ಮಾರಾಟದ ವಸ್ತುಗಳಾಗಿ ಕಂಡುಬರುತ್ತವೆ.[೯] ಕಬ್ಬಿನ ರಸವನ್ನು ಗಾಣದಲ್ಲಿ ಹಿಂಡಿ ಅನಂತರ ಸಕ್ಕರೆ ಬೆಲ್ಲಗಳನ್ನು ತಯಾರಿಸುತ್ತಿದ್ದಿರಬೇಕು.

ಶಾಸನಗಳಲ್ಲಿ ಕಂಚುಗಾರರು,[೧೦] ಅಕ್ಕಸಾಲೆ,[೧೧] ಕಮ್ಮಾರ,[೧೨] ಬಡಗಿ,[೧೩] ಕುಂಬಾರ,[೧೪] ಬಳೆಗಾರ,[೧೫] ಮೇದರ,[೧೬] ದೀವರ[೧೭] ಇನ್ನೂ ಮುಂತಾದ ವೃತ್ತಿಕಾರರ ಪ್ರಸ್ತಾಪ ಕಂಡುಬರುತ್ತವೆ. ವಚನಕಾರರ ಕಾಯಕತತ್ವದ ಪ್ರತಿಪಾದನೆಯಿಂದ

---

೧. (ರೈ) ಎಕ VI ಕಡೂರು ೩೬ ಕ್ರಿ.ಶ. ೧೨೦೩.

೨. (ರೈ) ಎಕ XII ತಿಪಟೂರು ೬೬ ಕ್ರಿ.ಶ. ೧೧೬೩; (ರೈ) ಎಕ V ಅರಸಿಕೆರೆ ೮೮ ಕ್ರಿ.ಶ. ೧೧೮೪.

೩. ಈ ಗಾಣವು ತುಳಿತದ ಮೂಲಕ ಕಾರ್ಯ ನಿರ್ವಹಿಸುವ ಗಾಣವೆಂದು ಅದರ ಹೆಸರಿನಿಂದ ಊಹಿಸಬಹುದಾಗಿದೆ. 'ಗಾಣಂ ಮೆಟ್ಟುವರಲ್ಲಿ...' ಎಂದು ಶಾಸನೋಕ್ತವಾಗಿದೆ. ಎಇ XX ರೋಣ ೧೨ಎ ಕ್ರಿ.ಶ. ೧೧೬೭.

೪. (ಮೈ) ಎಕ IV ಚಾಮರಾಜನಗರ ೧೦೫ ಕ್ರಿ.ಶ. ೧೨ ಶ.ಮಾ.

೫. ಎಸ್‌ಐಐ XV ರೋಣ ೧೩೯ ಕ್ರಿ.ಶ. ೧೧೮೩.

೬. (ಮೈ) ಎಕ VI ಪಾಂಡವಪುರ ೩೫ ಕ್ರಿ.ಶ. ೧೧೯೩.

೭. (ರೈ) ಎಕ VII ಶಿಕಾರಿಪುರ ೨೩೬ ಕ್ರಿ.ಶ. ೧೧೭೪.

೮. (ರೈ) ಎಕ V ಬೇಲೂರು ೧೮೮ ಕ್ರಿ.ಶ. ೧೧೯೧.

೯. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬; ಎಸ್‌ಐಐ XX ಸಿಂದಗಿ ೨೯೯ ಕ್ರಿ.ಶ. ೧೨ ಶ.ಮಾ.

೧೦. ಎಇ XII ಶೋರಾಪುರ ೩೭ಡಿ. ಕ್ರಿ.ಶ. ೧೧೧೦. ಇವರದೇ ಆದ ಶ್ರೇಣಿಗಳು ಇದ್ದವು. ಕಂಚುಗಾರರು ತಳಿಗೆ, ಕನ್ನಡಿ, ಸಿಪ್ಪು, ಸಟ್ಟುಗ ಇತ್ಯಾದಿಗಳನ್ನು ಮಾಡುತ್ತಿದ್ದರೆಂದು ನಯಸೇನ ಹೇಳುತ್ತಾನೆ. ಧರ್ಮಾಮೃತ ೨-೨೬. ಕಂಚುಗಾರರು ತಯಾರಿಸಿದ ಪಾತ್ರೆಗಳನ್ನು ಭಂಡಸಾಲೆಯವರು ಮಾರುತ್ತಿದ್ದರೆಂದು ಕಾಣುತ್ತದೆ. ಮೇರೆಯನ್ನು ಹೇಳುವಾಗ 'ಭಂಡಸಾಲೆಯವರ ಮೇರೆ' ಎಂದು ಒಂದು ಶಾಸನ ಹೇಳುತ್ತದೆ. (ಎಸ್‌ಐಐ XV ಮುಂಡರಗಿ ೫೭೨ ಕ್ರಿ.ಶ. ೧೨ ಶ.ಮಾ.) ಆ ಕಾಲದಲ್ಲಿ ಗಾಜಿನ ಕನ್ನಡಿಗಳು ಬಳಕೆಯಲ್ಲಿರಲಿಲ್ಲ; ಕಂಚನ್ನು ಹೆಚ್ಚು ಹೊಳಪು ಕೊಟ್ಟು ಕನ್ನಡಿಯಂತೆ ಬಳಸುತ್ತಿದ್ದರು.

೧೧. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೧೨. ಎಇ XII ಶೋರಾಪುರ ೩೭ಡಿ ಕ್ರಿ.ಶ. ೧೧೧೦.

೧೩. (ರೈ) ಎಕ IX ಮಾಗಡಿ ೧೫ ಕ್ರಿ.ಶ. ೧೩೧೫.

೧೪. ಎಸ್‌ಐಐ XVIII ರಾಣೆಬೆನ್ನೂರು ೨೦೫ ಕ್ರಿ.ಶ. ೧೨೨೬.

೧೫. (ಮೈ) ಎಕ VII ಮಳವಳ್ಳಿ ೧೩೬ ಕ್ರಿ.ಶ. ೧೨೯೭; ಬೆಳಗಾಂ ತಾಲ್ಲೂಕಿನ ಸಂಸ್ಕೃತ ಶಾಸನವೊಂದರಲ್ಲಿ ಸೇನಹಳ್ಳಿ ಕಲ್ಲುಕುಂದರಗೆ ಮತ್ತು ನಿಟ್ಟೂರುಗಳನ್ನು 'ಬಳೆಗಾರ ಸ್ಥಳ' ಎಂದು ಪ್ರಸ್ತಾಪಿಸಲಾಗಿದೆ; ಕಇ II ಬೆಳಗಾಂ ೪೦ ಕ್ರಿ.ಶ. ೧೨೬೧.

೧೬. (ರೈ) ಎಕ V ಬೇಲೂರು ೫೦ ಕ್ರಿ.ಶ. ೧೨೨೭.

೧೭. ಮೀನು ಹಿಡಿಯುವ ವೃತ್ತಿಯವರಾದ ಇವರ ವಿಷಯ ಶಾಸನಗಳಲ್ಲಿ ಅಷ್ಟಾಗಿ ಬರುವುದಿಲ್ಲ. ಒಂದು ಶಾಸನ ದೀವರ ಲೋಕೈಕ ನಾಯಕನ ಮಗ ತುರು ರಕ್ಷಣೆಗಾಗಿ ಹೋರಾಡಿ ಮಡಿದ ವಿಷಯವನ್ನು ತಿಳಿಸುತ್ತದೆ. ಕಇ V ಹಾನಗಲ್ಲು ೬೧ ಕ್ರಿ.ಶ. ೧೩೫೮.

ಅದುವರೆಗೂ ಕೀಳು ಎಂಬ ಭಾವನೆಗೆ ಒಳಗಾಗಿದ್ದ ಅನೇಕ ವೃತ್ತಿಗಳು ಸಾಮಾಜಿಕವಾಗಿ ಘನತೆಯನ್ನು ಆ ಕಾಲದಲ್ಲಿ ಪಡೆದಂತೆ ಕಂಡುಬರುತ್ತದೆ. ನೂರಾರು ವೃತ್ತಿಗಳನ್ನು ಅನುಸರಿಸುತ್ತಿದ್ದ ವಿವಿಧ ವೃತ್ತಿಕಾರರ ಚರ್ಚೆಯನ್ನು ಪಿ.ವಿ. ನಾರಾಯಣ ಅವರು ಮಾಡಿದ್ದಾರೆ.[೧] ವೃತ್ತಿಕಾರರ ಬಗ್ಗೆ ಹೆಚ್ಚಿನ ವಿವರಗಳನ್ನು ಶಾಸನಗಳು ಒದಗಿಸುವಂತೆ ಕಾಣುವುದಿಲ್ಲ.

**ಗಣಿಗಳು:**

ಪ್ರಾಚೀನ ಶಾಸನಗಳಲ್ಲಿ ಅಕ್ಕಸಾಲಿಗಳು, ಕಂಚುಗಾರರು ಮತ್ತು ಕಮ್ಮಾರರ ಉಲ್ಲೇಖಗಳನ್ನು ಗಮನಿಸಿದ್ದೇವೆ. ಇವರಿಗೆ ದೊರೆಯುತ್ತಿದ್ದ ಲೋಹಗಳನ್ನು ಹೇಗೆ ತೆಗೆಯುತ್ತಿದ್ದರು ಎನ್ನುವುದು ಮತ್ತು ಆ ಗಣಿ ಕೈಗಾರಿಕೆಗೆ ಸಂಬಂಧಿಸಿದ ವಿವರಗಳು ಶಾಸನಗಳಿಂದ ಅಷ್ಟಾಗಿ ನಮಗೆ ದೊರೆಯುವುದಿಲ್ಲ. ಕೋಲಾರ ಜಿಲ್ಲೆಯ ಹುನಗುಂದ, ಬಿಜಾಪುರ ಜಿಲ್ಲೆಯ ಹುನಗುಂದಗಳಲ್ಲಿ ಚಿನ್ನದ ಗಣಿಗಳಿದ್ದುವೆಂಬುದು ಸಾಂದರ್ಭಿಕ ಸಾಕ್ಷ್ಯಗಳಿಂದ ಸಿದ್ಧವಾಗುತ್ತದೆ. 'ಕರ್ನಾಟಕದಲ್ಲಿ ಪುರಾತನಕಾಲದ ಅನೇಕ ಚಿನ್ನದ ಗಣಿಗಳಿದ್ದು ಈ ಶ್ರೇಷ್ಠವಾದ ಲೋಹದ ಉತ್ಪಾದನೆಯನ್ನು ನವೀಕರಿಸಲು ಮಾರ್ಗದರ್ಶನವಾಗಿದೆ.'[೨]

ಕರ್ನಾಟಕದಲ್ಲಿ ವಜ್ರ ಮತ್ತು ಹರಳುಗಳ ವ್ಯಾಪಾರ ಸಾಕಷ್ಟು ನಡೆಯುತ್ತಿದ್ದಿತೆಂದು ಶಾಸನಗಳಿಂದ ತಿಳಿದುಬರುತ್ತದೆ. ಶ್ರವಣಬೆಳಗೊಳದ ಅನೇಕ ಶಾಸನಗಳಲ್ಲಿ ಮಾಣಿಕ್ಯ ನಗರಗಳ ವಿಷಯ ಬರುತ್ತದೆ.[೩] ಬಾರಕೂರಿನ ಸಮೀಪದ ಮಣಿಗರ ಕೇರಿಯ ಸ್ಥಳದಲ್ಲಿ ದೊರೆತಿರುವ ಶಾಸನವೊಂದರಲ್ಲಿ 'ಮಣಿಗಾಜಿ ಕೇರಿಯ ಸೋಮನಾಥ ದೇವರಿಗೆ ನೀಡಿದ ದಾನ'ದ ವಿಷಯವಿದೆ. ಅಲ್ಲದೆ ಆ ಶಾಸನ ಮಣಿಗಾರರು ವಾಸ ಮಾಡುತ್ತಿದ್ದ ಬೀದಿಯನ್ನು ಸೂಚಿಸುತ್ತದೆ.[೪] ಬೇಲೂರು, ಹಳೆಯಬೀಡು ಮತ್ತು ವಿಷ್ಣುಸಮುದ್ರದ ಮಣಿಗಾರರು ವ್ಯಾಪಕವಾಗಿ ವ್ಯಾಪಾರ ಮಾಡುತ್ತಿದ್ದುದು ತಿಳಿದುಬರುತ್ತದೆ.[೫] ವಜ್ರದ ಗಣಿಗಳು ಬಳ್ಳಾರಿ ಜಿಲ್ಲೆಯಲ್ಲಿ ಇದ್ದುದನ್ನು ಮಾರ್ಕೊಪೋಲೊ, ಇಬ್ನಬಟೂಟ ಮುಂತಾದ ವಿದೇಶೀಯರು ಖಚಿತಪಡಿಸಿದ್ದಾರೆ.[೬] ಮಾರ್ಕೊಪೋಲೊ ದಕ್ಷಿಣ ಭಾರತದಲ್ಲಿ ವಜ್ರಗಳನ್ನು ಸಂಗ್ರಹಿಸುತ್ತಿದ್ದ ಸ್ವಾರಸ್ಯಕರ ವಿಧಾನವನ್ನು ತಿಳಿಯಪಡಿಸಿದ್ದಾನೆ.[೭] ರತ್ನಗಳನ್ನು ಪದಕಗಳಿಗೆ ಜೋಡಿಸುವ, ಮಣಿಗಳನ್ನು ರಂಧ್ರ ಮಾಡಿ ಪೋಣಿಸುವಂತಹ ವಿಷಯಗಳು ವಚನ ಸಾಹಿತ್ಯದಲ್ಲಿ ಉಲ್ಲೇಖಗೊಂಡಿವೆ.[೮]

**ಮಾಪನಗಳು : ಅಳತೆ ಮತ್ತು ತೂಕ:**

ಪ್ರಾಚೀನ ಕರ್ನಾಟಕದ ಅಳತೆ ಮತ್ತು ತೂಕಗಳು ಭಿನ್ನವಾಗಿದ್ದವು. ಸಾಮಾನ್ಯವಾಗಿ ತೂಕ-ಅಳತೆಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿರುವುದನ್ನು ಕಾಣಬಹುದು. ಒಂದು ಹೊಲದಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ ಅದರ ಅಳತೆಯನ್ನು ಗಣಿಸುತ್ತಿದ್ದರು. ಕೆಲವು ಸಾರಿ ಅಳತೆಯ ಕೋಲುಗಳನ್ನು ಬಳಸಿ ಹೊಲಗದ್ದೆಗಳನ್ನು ಅಳೆಯುತ್ತಿದ್ದುದುಂಟು.

---

೧. ಪಿ.ವಿ. ನಾರಾಯಣ : ವಚನ ವ್ಯಾಸಂಗ, ಪು. ೧೨೮-೧೪೦.

೨. ಎಂ. ಸದಾಶಿವಯ್ಯ : 'ಆರ್ಥಿಕ ಭೂ ವಿಜ್ಞಾನ', ಕರ್ನಾಟಕದ ಪರಂಪರೆ-I, ಪು. ೩೧.

೩. (ಮೈ) ಎಕ II ಶ್ರವಣಬೆಳಗೊಳ ೪೭೯ ಕ್ರಿ.ಶ. ೧೨೯೬; ೩೪೩ ಕ್ರಿ.ಶ. ೧೩ ಶ.ಮಾ.; ೩೪೭ ಕ್ರಿ.ಶ. ೧೩ ಶ.ಮಾ.

೪. ಎಸ್ಐಐ VII ಬಾರಕೂರು ೩೫೪ ಕ್ರಿ.ಶ. ೧೩೧೫.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೩೭೪.

೬. A. S. Altekar : Rastrakutas and their Times ಪು. ೩೫೬.

೭. ಎಚ್.ಎಲ್. ನಾಗೇಗೌಡ : ಪ್ರವಾಸಿ ಕಂಡ ಇಂಡಿಯಾ-II, ಪು. ೩೩-೩೪.

೮. ಪಿ.ವಿ. ನಾರಾಯಣ : ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೬೪-೬೫.

ಈ ಅಳತೆಯ ಕೋಲುಗಳು ಏಕಪ್ರಮಾಣದಲ್ಲಿದ್ದಂತೆ ಕಂಡುಬರುವುದಿಲ್ಲ. ಊರಿಂದ ಊರಿಗೆ, ಪ್ರದೇಶದಿಂದ ಪ್ರದೇಶಕ್ಕೆ ಬೇರೆಯಾಗಿರುವುದನ್ನು ಕಾಣಬಹುದು. ಅಳತೆಯ ಕೋಲುಗಳು ನಿರ್ದಿಷ್ಟ ಅಳತೆಯ ಮೇಲೆ, ಊರಿನ ಹೆಸರಿನ ಮೇಲೆ, ವ್ಯಕ್ತಿಗಳ ಹೆಸರಿನ ಮೇಲೆ, ಅಧಿಕಾರಿಗಳ ಹೆಸರಿನ ಮೇಲೆ, ಒಂದು ವರ್ಣದ ಹೆಸರಿನ ಮೇಲೆ- ಹೀಗೆ ವೈವಿಧ್ಯಮಯವಾಗಿ ಬಳಕೆಯಾಗಿರುವುದು ಕಂಡುಬರುತ್ತವೆ.

ಕೆಲವು ಶಾಸನಗಳಲ್ಲಿ ಅಣ್ಣಿಗೆರೆಯ ಕೋಲು,[೧] ಕೋಗಳಿಯ ಗಡಿಂಬ,[೨] ಹೊಂಬೊಳಲ ಕೋಲು,[೩] ಉಂಬರವಾಣಿಯ ತಿಜೆಗೆಯ ಹಿರಿಯ ಕೋಲು,[೪] ಗುತ್ತೊಳಲ ಗಡಿಂಬ,[೫] ಒಡ್ಡಿ ಹಟ್ಟಿಯ ಗಡಿಂಬದ ಕೋಲು,[೬] ಬಡಗಲಾ ಕೋಲು[೭] ಅಳತೆಗೆ ಬಳಕೆಯಾಗಿರುವುದು ಕಂಡುಬರುತ್ತದೆ. ವ್ಯಕ್ತಿಗಳ ಹೆಸರಿನ ಮೇಲಿದ್ದ ಕೆಲವು ಕೋಲುಗಳು ಹೀಗಿವೆ: ಬಾಚ ಒಡೆಯರ ಕೋಲು,[೮] ದ್ರೋಹರ ಮಲ್ಲನ ಕೋಲು,[೯] ಕೊಂಡಿಜೇವನ ಗಡಿಂಬ,[೧೦] ಬೆಂಕೊಳ್ವನ ಕೋಲು[೧೧]. ಕೆಲವು ಶಾಸನಗಳಲ್ಲಿ ದೇವರ ಹೆಸರಿನ ಕೋಲುಗಳು ಬಳಕೆಯಲ್ಲಿದ್ದವು. ಅವು ಹೀಗಿವೆ: ಮಾಣಿಕೇಶ್ವರದ ಕೋಲು,[೧೨] ಕನ್ನೇಶ್ವರದ ಕೋಲು.[೧೩] ಇನ್ನೊಂದು ಶಾಸನದಲ್ಲಿ ಪುಣ್ಯಕ್ಷೇತ್ರದ ಮತ್ತು ವ್ಯಕ್ತಿಯ ಬಿರುದಿನಂತಿರುವ ಕೋಲಿನ ಹೆಸರು ಬಳಕೆಯಾಗಿದೆ. 'ಎಳರಾವೆಯ ತೀರ್ಥದ ಗಡಿಂಬದ ಒರಂಟಮಲ್ಲನ ಗಳೆ'[೧೪] . ಕೆಲವು ಶಾಸನಗಳಲ್ಲಿ 'ಪಾರ್ವನ ಕೋಲಿ'ನ[೧೫] ಪ್ರಸ್ತಾಪ ಬಂದಿದೆ. ಇದೇ ರೀತಿ 'ಗೌಡುವಾನ್ಯದ ಕೋಲಿ'ನ[೧೬] ಪ್ರಸ್ತಾಪ ಕೆಲವು ಶಾಸನಗಳಲ್ಲಿ ಬಂದಿದೆ.

ಕೆಲವು ಕೋಲುಗಳನ್ನು ಹೇಳುವಾಗ ನಿರ್ದಿಷ್ಟ ಗೇಣುಗಳ ಅಳತೆಯನ್ನು ಹೇಳುವುದುಂಟು. ನಾಲ್ವತ್ತನಾಲ್ಗೇಣ ಘಳೆ,[೧೭]ಹದಿನೆಂಟು ಗೇಣ ಕೋಲು,[೧೮] ಅಯ್ವತ್ತು ಗೇಣ ಗಡಿಂಬ,[೧೯] ಮೂವತ್ತೆರಡು ಗೇಣ ಕೋಲು,[೨೦] ಅಯ್ವತ್ತ ಎರಡು

---

೧. ಎಸ್‌ಐಐ XV ಗದಗು ೫೪; ?.
೨. ಎಸ್‌ಐಐ IX(i) ಹರಪನಹಳ್ಳಿ ೩೩೨ ಕ್ರಿ.ಶ. ೧೨೧೩.
೩. ಎಸ್‌ಐಐ XV ಗದಗು ೭೩ ಕ್ರಿ.ಶ. ೧೧೮೯.
೪. ಕಇ II ಜತ್ ೨೬ ಕ್ರಿ.ಶ. ೧೧೭೪.
೫. ಎಸ್‌ಐಐ IX(i) ಹರಪನಹಳ್ಳಿ ೩೨೫ ಕ್ರಿ.ಶ. ೧೨೦೫.
೬. ಎಸ್‌ಐಐ IX(i) ಬಳ್ಳಾರಿ ೨೯೭ ಕ್ರಿ.ಶ. ೧೧೭೭.
೭. ಕಇ V ಜಮಖಂಡಿ ೯೯ ೨೧೯ ಕ್ರಿ.ಶ. ೧೧೮೭.
೮. ಎಸ್‌ಐಐ ಜಮಖಂಡಿ ೨೧೯ ಕ್ರಿ.ಶ. ೧೨೬೯
೯. ಎಸ್‌ಐಐ IX(i) ಹಿಂದೂಪುರ ೩೧೮ ಕ್ರಿ.ಶ. ೧೧೭೮.
೧೦. ಎಸ್‌ಐಐ XVIII ಬಿಜಾಪುರ ೩೮೧ ಕ್ರಿ.ಶ. ೧೨೭೮.
೧೧. ಎಸ್‌ಐಐ XVIII ಬಿಜಾಪುರ ೨೦೦ ಕ್ರಿ.ಶ. ೧೨೦೦.
(೯–೧೧) ಈ ಮೂರು ಉಲ್ಲೇಖಗಳು ವ್ಯಕ್ತಿಯ ಬಿರುದಿನಂತಿವೆ.
೧೨. ಎಸ್‌ಐಐ XVIII ಬಿಜಾಪುರ ೧೮೫ ಕ್ರಿ.ಶ. ೧೧೭೩; ಎಸ್‌ಐಐ XX ಬಿಜಾಪುರ ೧೨೯ ಕ್ರಿ.ಶ. ೧೧೬೭.
೧೩. ಕಇ V ಸಾಂಗ್ಲಿ ೩೪ ಕ್ರಿ.ಶ. ೧೧ ಶ.ಮಾ.
೧೪. ಎಇ XII ಶೋರಾಪುರ ೩೨ಜಿ. ಕ್ರಿ.ಶ. ೧೧೭೯.
೧೫. ಕಇ II ಅಥಣಿ ೩೮ ಕ್ರಿ.ಶ. ೧೨೩೫; ಐಎಸ್‌ಡಿ.ಉ.ಸೊಲ್ಲಾಪುರ ೯ ಕ್ರಿ.ಶ. ೧೧೩೫. ಈ ಶಾಸನದಲ್ಲಿ 'ಹಾರುವ ಕೋಲು' ಎಂದು ಕರೆಯಲಾಗಿದೆ.
೧೬. ಎಸ್‌ಐಐ XX ಪರಸಗಡ ೨೪೮ ಕ್ರಿ.ಶ. ೧೨೨೮.
೧೭. ಎಸ್‌ಐಐ IX(i) ಹರಪನಹಳ್ಳಿ ೨೯೦ ಕ್ರಿ.ಶ. ೧೨ ಶ.ಮಾ.
೧೮. ಎಸ್‌ಐಐ XX ಇಂಡಿ ೧೪೭; ?. (ಮೈ) ಎಕ V ಕೃ. ಪುರ. ೩೩ ಕ್ರಿ.ಶ. ೧೧-೧೨ ಶ.ಮಾ.
೧೯. (ಮೈ) ಎಕ VII ನಾಗಮಂಗಲ ೧೨೯ ಕ್ರಿ.ಶ. ೧೨ ಶ.ಮಾ.
೨೦. ಎಸ್‌ಐಐ XV ಮುದ್ದೇಬಿಹಾಳ ೧೭೧ ಕ್ರಿ.ಶ. ೧೨೨೫.

ಗೇಣ ಘಳೆ,[೧] ಮೂವತ್ತಮೂರು ಗೇಣು ಗಡಿಂಬ,[೨] ಇಪ್ಪತ್ತೇಳ ಗೇಣ ಘಳೆ,[೩] ಮೂವತ್ತಾರು ಗೇಣ ಘಳೆ[೪] -ಹೀಗೆ ಹದಿನೆಂಟು ಗೇಣಿನಿಂದ ಹಿಡಿದು ಐವತ್ತೆರಡು ಗೇಣಿನವರೆಗೆ ವಿವಿಧ ಪ್ರಮಾಣದ ಅಳತೆಯ ಕೋಲುಗಳು ಪ್ರಚಲಿತವಾಗಿದ್ದವು.

ಇನ್ನು ಕೆಲವು ಶಾಸನಗಳಲ್ಲಿ ನಿರ್ದಿಷ್ಟ ಪ್ರಮಾಣದ ಬಾಚಿವಿಡಿಯ ಪ್ರಮಾಣವನ್ನು ಹೇಳಲಾಗಿದೆ. ಮೂವತ್ತಮೂಱು ಗೇಣುಂ ಬಾರ್ಚಿವಿಡಿ ಗಡಿಂಬದ ಘಳೆ,[೫] ನಾಲ್ವತ್ತಾಱು ಗೇಣುಂ ಬಾಚಿವಿಡಿಯ ಘಳೆ,[೬] ಮೂವತ್ತೊಂಬತ್ತು ಗೇಣು ಬಾಚಿವಿಡಿಯ ಘಳೆ[೭] ಎಂದು ಬರುತ್ತದೆ. ಈ ಶಾಸನಗಳಲ್ಲಿ ಬರುವ ಬಾಚಿವಿಡಿ ಎಂಬ ಪ್ರಯೋಗ ಬಡಗಿಗಳು ಮರಗೆಲಸ ಮಾಡಲು ಬಳಸುವ ಸಾಧನದ ಹಿಡಿಯ ಉದ್ದವನ್ನು ಸೂಚಿಸುವ ಹಾಗೆ ಕಾಣುತ್ತದೆ. ಬಹುಶಃ ಗ್ರಾಮಗಳಲ್ಲಿ ಸುಲಭವಾಗಿ ದೊರೆಯುವ ಅಳತೆಯ ಪ್ರಮಾಣವನ್ನು  ಬಳಸುವ ಪದ್ಧತಿ ಇದ್ದಿರಬೇಕು. ಒಂದು ಶಾಸನ 'ಹನ್ನೊಂದು ಮಾರ ಘಳೆ'[೮] ಎಂದು ಹೇಳುತ್ತದೆ. ಇನ್ನು ಕೆಲವು ಶಾಸನಗಳಲ್ಲಿ ನಿರ್ದಿಷ್ಟ ಮೆಟ್ಟಿನ ಗಳೆಯ ವಿಷಯ ಬರುತ್ತದೆ. ಮೂವತ್ತೆರಡು ಮೆಟ್ಟಿನ ಗಳೆಯ[೯] ವಿಷಯ ಕೆಲವು ಶಾಸನಗಳಲ್ಲಿ ಬರುತ್ತದೆ. ಅದೇ ರೀತಿ ನಾಲ್ವತ್ತೆರಡು ಮೆಟ್ಟಿನ ಗಳೆ,[೧೦] ನಾಲ್ವತ್ತು ನಾಲ್ಕು ಮೆಟ್ಟಿನ ಗಳೆ,[೧೧] ನಾಲ್ವತ್ತೆಂಟು ಮೆಟ್ಟಿನ ಗಳೆ[೧೨]ಯ ವಿಷಯಗಳು ಬರುತ್ತವೆ. ಈ ಶಾಸನಗಳಲ್ಲಿ ಬರುವ ಮೆಟ್ಟಿನ ಅಳತೆ ಎನ್ನುವುದು ಪಾದದ ಅಳತೆಯನ್ನು ಸೂಚಿಸುವ ಅಳತೆಯಿಂದ ನಿರ್ದಿಷ್ಟವಾಗಿ ಗುರುತು ಮಾಡಿದ ಕೋಲಿರಬಹುದೆಂದು ಭಾವಿಸಬಹುದು.

ಇವುಗಳಲ್ಲದೆ ಗಂಗನ ಗಳೆ,[೧೩] ಭರಣದ ಕೋಲು,[೧೪] ಭೇರುಂಡನ ಗಳೆ,[೧೫] ಮರಗುಂಡಿಯ ಘಳೆ[೧೬] ಎಂಬುವೂ ಬರುವುದುಂಟು. ಕೆಲವು ಶಾಸನಗಳಲ್ಲಿ ಇದುವರೆಗೂ ಉದಾಹರಿಸಿದ ಕೋಲುಗಳಿಂದ ಭಿನ್ನವಾಗಿ 'ಮರಿಯಾದೆ ಅಳತೆಯ ಘಳೆ',[೧೭] ಮಾನ್ಯಗೋಲು,[೧೮] ಪಿರಿಯ ಗಳೆ,[೧೯] ಘಳೆ[೨೦] ಎಂದೂ ಶಾಸನಗಳು ಹೇಳುವುದುಂಟು. ಸೇವುಣರ ಶಾಸನಗಳಲ್ಲಿ

---

೧. ಧಾತಾಶಾ ೭೨ ಕ್ರಿ.ಶ. ೧೨೪೮.
೨. ಎಸ್‌ಐಐ XV ನವಲಗುಂದ ೯೬ ಕ್ರಿ.ಶ. ೧೧೫೭.
೩. ಎಸ್‌ಐಐ XV ಹುನಗುಂದ ೧೫೬ ಕ್ರಿ.ಶ. ೧೨೦೭.
೪. ಎಸ್‌ಐಐ XV ಗದಗು ೪೦; ?.
೫. ಎಸ್‌ಐಐ XV ನವಲಗುಂದ ೧೨೨ ಕ್ರಿ.ಶ. ೧೧೭೩.
೬. (ರೈ) ಎಕ V ಹಾಸನ ೬೬ ಕ್ರಿ.ಶ. ೧೧೭೦ (?).
೭. ಎಸ್‌ಐಐ XV ಹುನಗುಂದ ೧೬೪ ಕ್ರಿ.ಶ. ೧೨೨೦.
೮. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.
೯. (ರೈ) ಎಕ V ಚನ್ನರಾಯಪಟ್ಟಣ ೨೩೬ ಕ್ರಿ.ಶ. ೧೨೫೩; (ಮೈ) ಎಕ VII ನಾಗಮಂಗಲ ೮೨ ಕ್ರಿ.ಶ. ೧೨೬೯.
೧೦. (ರೈ) ಎಕ V ಚನ್ನರಾಯಪಟ್ಟಣ ೨೯೯ ಕ್ರಿ.ಶ. ೧೨೭೬.
೧೧. (ರೈ) ಎಕ VI ಕಡೂರು ೬೬ ಕ್ರಿ.ಶ. ೧೧೭೨; (ರೈ) ಎಕ VI ಕಡೂರು ೬೪ ಕ್ರಿ.ಶ. ೧೨೨೫(?)
೧೨. (ರೈ) ಎಕ V ಬೇಲೂರು ೧೫೧ ಕ್ರಿ.ಶ. ೧೨೨೭.
೧೩. (ರೈ) ಎಕ VI ತರೀಕೆರೆ ೩೬ ಕ್ರಿ.ಶ. ೧೧೭೮(?); (ರೈ) ಎಕ VI ತರೀಕೆರೆ ೪೫ ಕ್ರಿ.ಶ. ೧೧೯೨.
೧೪. ಎಸ್‌ಐಐ XV ಬಾಗೇವಾಡಿ ೧೧೩ ಕ್ರಿ.ಶ. ೧೧೭೦.
೧೫. (ರೈ) ಎಕ VIII ಸೊರಬ ೧೪೦ ಕ್ರಿ.ಶ. ೧೧೯೮.
೧೬. (ರೈ) ಎಕ VIII ಸೊರಬ ೨೮೬ ಕ್ರಿ.ಶ. ೧೧೬೮.
೧೭. (ರೈ) ಎಕ VI ತರೀಕೆರೆ ೮೩ ಕ್ರಿ.ಶ. ೧೧೭೩.
೧೮. ಐಎನ್‌ಡಿ ಮೊಹ್ರೊ ೧೫ ಕ್ರಿ.ಶ. ೧೧೬೪.
೧೯. ಆರ್.ಎನ್. ಗುರವ 'ತಂಬೂರ ಶಾಸನಗಳು' ಸಾಧನೆ ೩-೩ ಕಲ್ಬುರಗಿ ಕ್ರಿ.ಶ. ೧೧೨೫. ಪು. ೯೦-೧೦೬.
೨೦. ಐಎನ್‌ಡಿ ದೇಗ್ನೂರು ೩೫ ಕ್ರಿ.ಶ. ೧೧೪೯.

ಕಚ್ಚರಿಕೋಲ್, ತಿಗುಳ ಕೋಲ್‌ಗಳು ಅಳತೆಗೆ ಬಳಕೆಯಾಗಿದೆ.[೧] ಮತ್ತು ಅವರ ಶಾಸನಗಳಲ್ಲಿ ದಾನ ಚಿಂತಾಮಣಿಯ ಗಳೆ[೨] ಎಂಬುದು ಉಲ್ಲೇಖಗೊಂಡಿದೆ. ಅವಳ ಪತಿ ನಾಗದೇವನ ಹೆಸರಿನಲ್ಲಿ 'ಬಿಜಂಟರ ಮಲ್ಲನ ಘಳೆಯೊಳ್' ಎಂಬ ಪ್ರಯೋಗ ಬಂದಿದೆ. 'ದಾನಚಿಂತಾಮಣಿ' ಅತ್ತಿಮಬ್ಬೆಯ ಪತಿ 'ಬಿಜಂಟರ ಮಲ್ಲ ನಾಗದೇವ'- ಇಬ್ಬರ ವಿಶೇಷಣಗಳ ಹೆಸರಿನಲ್ಲಿ ಅಳತೆಯ ಕೋಲುಗಳು ಬಳಕೆಯಲ್ಲಿದ್ದುದು ವಿಶೇಷವಾಗಿದೆ.[೩]

ಇದುವರೆಗೂ ಗಮನಿಸಿದ ವಿವಿಧ ಅಳತೆಯ ಕೋಲುಗಳಿಂದ ಅವುಗಳ ವೈವಿಧ್ಯದ ಚಿತ್ರ ಮೂಡಲು ಸಾಧ್ಯವಿದೆ. ಅಳತೆಯ ಕೋಲುಗಳ ಈ ಭಿನ್ನ ಪ್ರಮಾಣ ನೆರೆ ರಾಜ್ಯವಾದ ಆಂಧ್ರಪ್ರದೇಶದಲ್ಲೂ ಇದ್ದುದು ತಿಳಿದುಬರುತ್ತದೆ.[೪] ಈ ರೀತಿಯ ಭಿನ್ನ ಅಳತೆಗಳನ್ನು ತಪ್ಪಿಸಲು ಚೋಳರ ಕಾಲದಲ್ಲಿ 'ಮಾಳಿಗೈಕ್ಕೋಲ್' (=ಅರಮನೆಯ ಕೋಲು) ಎಂಬ ಕೋಲು ಬಳಕೆಯಲ್ಲಿದ್ದಿತು. ವಿಜಯನಗರ ಕಾಲದಲ್ಲಿಯೂ ಅದನ್ನು ಒಂದು ಏಕರೂಪತೆಗೆ ತರಲು ಕೋಲುಗಳು ಇಪ್ಪತ್ತು ಅಡಿಗಳಿರಬೇಕೆಂದು ನಿರ್ಧರಿಸಲಾಯಿತು. ಆದರೂ ಪ್ರಾದೇಶಿಕ ಭಿನ್ನತೆಯನ್ನು ತಪ್ಪಿಸಲು ಸಾಧ್ಯವಾಗಲಿಲ್ಲ.[೫] ಸಂಗಮ್ ಕಾಲದಲ್ಲಿ ವಿಜಯವನ್ನು ಪಡೆದ ಅರಸರು ಪರಾಜಿತರಾದ ಅರಸರ ರಾಜಛತ್ರಗಳ ಕೋಲುಗಳನ್ನು ಕತ್ತರಿಸಿ ಅಳತೆಗೋಲುಗಳನ್ನು ಮಾಡುತ್ತಿದ್ದ ಪದ್ಧತಿಯ ಪ್ರಸ್ತಾಪ ಶಿಲಪ್ಪದಿಕಾರಮ್‌ನಲ್ಲಿದೆ. ಇದು ಸಂಗಮ್ ಯುಗದ ಅರಸರು ಪರಾಜಿತ ಅರಸನ ಮೇಲೆ ಹೇರುತ್ತಿದ್ದ ಅಪಮಾನಗಳಲ್ಲಿ ಒಂದು ಎಂಬ ಅಭಿಪ್ರಾಯವೂ ಇದೆ.[೬]

ಅಳತೆಗೋಲುಗಳ ಸಹಾಯದಿಂದ ಮತ್ತರು, ಕಮ್ಮ(ಕಂಬ)ಗಳೆಂದು ಅಳೆಯುತ್ತಿದ್ದುದು ಕಂಡುಬರುತ್ತದೆ. ಒಂದು ಮತ್ತರಿಗೆ ೯೦೦ ಕಂಬಗಳು.[೭] ಮತ್ತರು ಮತ್ತು ಕಂಬಗಳ ಪ್ರಮಾಣದಲ್ಲಿ ಜಮೀನುಗಳನ್ನು ಅಳತೆ ಮಾಡುವುದು ಆ ಕಾಲದಲ್ಲಿ ವಿಶೇಷವಾಗಿ ಬಳಕೆಯಲ್ಲಿದ್ದಿತು. ಆದರೆ ಅವುಗಳ ಪ್ರಮಾಣವನ್ನು ಆಧುನಿಕ ಮಾಪನಕ್ಕೆ ಹೊಂದಿಸುವುದು ಕಠಿಣವಾಗಿದೆ.

ಕೆಲವು ಸಂಸ್ಕೃತ ಶಾಸನಗಳಲ್ಲಿ ನಿವರ್ತನವೆಂಬ ಮಾಪನದ ಹೆಸರನ್ನು ಬಳಸಿರುವುದುಂಟು.[೮] ಸಾಮಾನ್ಯವಾಗಿ ಸಂಸ್ಕೃತ ಶಾಸನಗಳಲ್ಲಿ ನಿವರ್ತನವೆಂದು ಬಳಕೆಯಾಗುತ್ತದೆ. ಅದೇ ಕನ್ನಡ ಶಾಸನಗಳಲ್ಲಿ ಮತ್ತರು ಎಂದು ಬಳಕೆಯಾದಂತಿದೆ.[೯] ಬೆದ್ದಲು ಗದ್ದೆ ಮತ್ತು ತೋಟಗಳನ್ನು ಅಳೆಯಲು ಇದನ್ನು ಬಳಸುತ್ತಿದ್ದರು.

---

೧. ಎ.ವಿ. ನರಸಿಂಹಮೂರ್ತಿ : ಕರ್ನಾಟಕದ ಸೇವುಣರ ಇತಿಹಾಸ, ಪು. ೮೮.

೨. Srinivasa Ritti : The sevunas ಪು. ೩೨.

೩. ಹಂ. ಪ. ನಾಗರಾಜಯ್ಯ: 'ದಂಪತಿಗಳ ಹೆಸರಿನಲ್ಲಿ ಅಳತೆಗೋಲು'- ಚಂದ್ರಕೊಡೆ. ಪು. ೨೧, ೨೩.

೪. Y. Gopal Reddy : 'Taxation under the Kakatiyas' ಕ್ಯುಜೆಎಂಸ್ LXIX ೩-೪ ಪು. ೧೧೬. ಅಲ್ಲಿ ರೆಂಡುಚೇನಲಕೋಲ, ೨೦ ಚೇನುಲ ಕೋಲ, ಮುಪ್ಪೈಅಡುಗುಲಕೋಲ, ಮುಪ್ಪೈರೆಂಡು ಚೇನುಲಕೋಲ ಇತ್ಯಾದಿ ಬಳಕೆಯಲ್ಲಿದ್ದವು.

೫. T.V. Mahalingam : South Indian Polity. ಪು. ೧೬೪.

೬. ಎನ್. ಸುಬ್ರಮಣಿಯನ್ : ಸಂಗಮ್ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆ, ಪು. ೮೭.

೭. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೩೯೩.

೮. ಟಿ.ವಿ. ಮಹಾಲಿಂಗಂ ಅವರು ಅಭಿಪ್ರಾಯಪಡುವಂತೆ ನಿವರ್ತನವೆಂದರೆ ಒಬ್ಬ ಮನುಷ್ಯ ನಿರ್ದಿಷ್ಟ ಕಾಲಾವಧಿಯಲ್ಲಿ ಒಂದು ಸ್ಥಳದಿಂದ ಹೊರಟು ಹಿಂದಿರುಗುವಷ್ಟು ಭೂಮಿಯನ್ನು ಸೂಚಿಸುತ್ತದೆ. ಲಿಯೋಟಾಲ್‌ಸ್ಟಾಯ್ ಅವರ How Much Land Does A Man Require ಕಥೆಯಲ್ಲಿ ಒಂದು ದಿನ ಪ್ರಯಾಣದಲ್ಲಿ ಒಬ್ಬ ವ್ಯಕ್ತಿ ನಡೆದು ಬರುವಷ್ಟು ದೂರವನ್ನು ಸಾಂಕೇತಿಕವಾಗಿ ಸೂಚಿಸಲಾಗಿದೆ. ವಿವರಗಳಿಗೆ ನೋಡಬಹುದು The worlds greatest short stories p. ೩೧೮-೩೩೧. ಇದು ಆರಂಭ ಕಾಲದಲ್ಲಿದ್ದು ಕ್ರಮೇಣ ಒಂದು ನಿರ್ದಿಷ್ಟ ಪ್ರಮಾಣದ ಭೂಮಿಯನ್ನು ಸೂಚಿಸತೊಡಗಿತು. Srinivasa Ritti : ಪೂರ್ವೋಕ್ತ ಪು. ೧೫೦.

೯. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೩೯೪.

ಮನೆಗಳನ್ನು, ನಿವೇಶನಗಳನ್ನು, ಬಣವೆಗಳನ್ನು ಅಳೆಯಲು ಸಾಮಾನ್ಯವಾಗಿ 'ಕಯಿ' (ಕೆಯ್=ಹಸ್ತ)ಯನ್ನು ಮಾಪನವಾಗಿ ಬಳಸುತ್ತಿದ್ದರು. ಶಾಸನವೊಂದರಲ್ಲಿ 'ಅಱುಗೆಯ್ಯಗಲ ಹಂನಿಕ್ಕಯ್ಯ ನೀಳ ನಿವೇಶನ'ವನ್ನು ದಾನವಾಗಿ ಬಿಟ್ಟ ವಿಷಯವಿದೆ.[೧] ಅದೇ ರೀತಿ 'ಹದಿನಾಱು ಕಯ್ಯಗಲ ಯಿಪ್ಪತ್ತು ಕಯ್ಯ ನೀಳದ ಬಣವೆಯ ನಿವೇಶನ ೧೮' ವಿಷಯ ಶಾಸನವೊಂದರಲ್ಲಿ ಬಂದಿದೆ.[೨] ಬಣವೆಗಳನ್ನು ಶಾಸನಗಳು ಕಳವೆಂದೂ ಕರೆದಿವೆ.[೩] ಅದೇ ಶಾಸನ ಬಣವೆಯ ಜೊತೆಯಲ್ಲಿ ಕೋಠಾರಕ್ಕೆ ಕೂಡ ನಿವೇಶನವನ್ನು ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ. ರಿತ್ತಿಯವರು ಅಭಿಪ್ರಾಯಪಡುವಂತೆ ನಿವೇಶನಗಳನ್ನು ಅಳೆಯುವ ಕೈಯಳತೆ ಒಂದು ನಿರ್ದಿಷ್ಟ ಮಾಪಕವಾಗಿದ್ದು ಅದು ಮನುಷ್ಯರ ಕೈ ಉದ್ದವನ್ನು ಸೂಚಿಸುತ್ತದೆ. ಒಬ್ಬರಿಂದ ಒಬ್ಬರಿಗೆ ವ್ಯತ್ಯಾಸವಾದರೂ ಅಂತಹ ದೊಡ್ಡ ವ್ಯತ್ಯಾಸವಾಗುವುದಿಲ್ಲ.[೪] ಬಹುಶಃ ಇದನ್ನು ಸಾಮಾನ್ಯ ಪ್ರಮಾಣಕ್ಕೆ ತರಲು 'ರಾಜ ಹಸ್ತ'[೫]ವೆಂಬ ನಿರ್ದಿಷ್ಟಮಾನವನ್ನು ತರಲು ಪ್ರಯತ್ನಿಸಿರಬೇಕು.

ಕೆಲವು ಶಾಸನಗಳಲ್ಲಿ ಭೂಮಿಯನ್ನು ಕುರಿತು ಹೇಳುವಾಗ ನಿರ್ದಿಷ್ಟ ಪ್ರಮಾಣದ ಮಣ್ಣು ಎಂದು ಹೇಳುವುದುಂಟು. ಹಾಗೆ ಮಣ್ಣು ಎಂದು ಹೇಳಿದಾಗ ಅದು ಬೆದ್ದಲೆ, ಗದ್ದೆ, ತೋಟವನ್ನು ಸೂಚಿಸಬಹುದು.[೬] ಕೆಲವು ಸಾರಿ ಮಣ್ಣು ಪದದ ಮುಂದೆ ಬೆದ್ದಲೆ ಅಥವಾ ತೋಟ ಎಂಬ ವಿವರ ಬರುತ್ತದೆ.

ಧಾನ್ಯ ಮತ್ತು ದ್ರವ ಪದಾರ್ಥಗಳನ್ನು ಅಳತೆ ಮಾಡಲು ಕೊಳಗ, ಬಳ್ಳ, ಮಾನ, ಸೊಲ್ಲಗೆ, ಸೊಂಟಿಗೆ ಮುಂತಾದುವನ್ನು ಬಳಸುತ್ತಿದ್ದರು. ಕೊಳಗ ವಿಶೇಷವಾಗಿ ಶಾಸನಗಳಲ್ಲಿ ಅಳತೆಯ ಪ್ರಮಾಣವಾಗಿ ಬಳಕೆಯಾಗಿದೆ. ಇದು ನಿರ್ದಿಷ್ಟ ಪ್ರಮಾಣದ, ಕಂಠವಿರುವ, ಪಾತ್ರೆಯನ್ನು ಸೂಚಿಸುತ್ತದೆ. ಭೂಮಿಯ ಅಳತೆಯನ್ನು ಕೊಳಗಗಳ ಲೆಕ್ಕದಲ್ಲಿ ಸೂಚಿಸಿದೆ. 'ಬೆದ್ದಲೆ ಕೊಳಗ ೧'[೭] ಎಂದರೆ ಒಂದು ಕೊಳಗ ಧಾನ್ಯವನ್ನು ಬಿತ್ತುವಷ್ಟು ಜಮೀನು ಎಂದು ಭಾವಿಸಬೇಕಾಗುತ್ತದೆ. ಹೇಗೆ ವಿವಿಧ ಪ್ರಮಾಣದ ಅಳತೆಯ ಕೋಲುಗಳಿದ್ದವೋ ಹಾಗೆಯೇ ಹಲವು ರೀತಿಯ ಕೊಳಗಗಳೂ ಇದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಕೊಳಗಗಳಲ್ಲಿ ದೇವಗೊಳಗ[೮] ಮತ್ತು ಧರ್ಮಗೊಳಗಗಳು ಹೆಚ್ಚು ಪ್ರಚಾರದಲ್ಲಿದ್ದವು. ಒಂದು ಶಾಸನದಲ್ಲಿ ಆ ಎರಡೂ ಕೊಳಗಗಳು ಒಟ್ಟಿಗೇ ಉಲ್ಲೇಖ ಹೊಂದಿವೆ.[೯] ಕೆಲವು ಶಾಸನಗಳಲ್ಲಿ ಜಕ್ಕಿಗೊಳಗ, ಧರ್ಮಗೊಳಗಗಳು ಬಳಕೆಯಲ್ಲಿದ್ದ ಉಲ್ಲೇಖಗಳಿವೆ.[೧೦] ಇವುಗಳಲ್ಲದೆ ಗುಂಮೇಶ್ವರದ ಕೊಳಗ[೧೧] ಮತ್ತು ವೀರಗಂಗನ ಕೊಳಗಗಳು[೧೨] ಶಾಸನಗಳಲ್ಲಿ ಉಲ್ಲೇಖಗೊಂಡಿವೆ.

---

೧. ಕಇ II ಅಥಣಿ ೩೭ ಕ್ರಿ.ಶ. ೧೨೩೫.

೨. ಎಸ್‌ಐಐ XX ಸಿಂದಗಿ ೧೮೯ ಕ್ರಿ.ಶ. ೧೧೪೮.

೩. (ರೈ) ಎಕ VI ಕಡೂರು ೬೯ ಕ್ರಿ.ಶ. ೧೧೬೦; ಕೋಠಾರ- ಕಣಜವನ್ನು ಸೂಚಿಸುತ್ತದೆ. ಇದು ಕೇಶಿರಾಜನ ಅಭಿಪ್ರಾಯದಂತೆ ಕೋಷ್ಠಾಗಾರ > ಕೊಟ್ಟಾರ. ಕಳ, ಕಣ ಸಮಾನಾರ್ಥಕ ಶಬ್ದಗಳಾಗಿದ್ದು ಧಾನ್ಯವನ್ನು ತೆನೆಗಳಿಂದ ಪ್ರತ್ಯೇಕಿಸುವ ಪ್ರದೇಶವನ್ನು ಸೂಚಿಸುತ್ತದೆ. ಕಣ ಮಾಡು ಎಂದಾಗ ಕ್ರಿಯಾರ್ಥದಲ್ಲಿ (ಧಾನ್ಯವನ್ನು ಪ್ರತ್ಯೇಕಿಸುವು) ಬಳಕೆಯಾಗುತ್ತದೆ.

೪. Srinivasa Ritti : ಪೂರ್ವೋಕ್ತ ಪು. ೨೩೩.

೫. ಎಸ್‌ಐಐ XV ಧಾರವಾಡ ೨೩೦ ಕ್ರಿ.ಶ. ೧೧೬೩.

೬. (ಮೈ) ಎಕ V ಕೃಷ್ಣರಾಜನಗರ ೩೩ ಕ್ರಿ.ಶ. ೧೧-೧೨ ಶ.ಮಾ.

೭. (ಮೈ) ಎಕ IV ಹುಣಸೂರು ೧೫ ಕ್ರಿ.ಶ. ೧೧೬೬.

೮. ಎಸ್‌ಐಐ XVIII ರಾಣೆಬೆನ್ನೂರು ೩೦೨ ಕ್ರಿ.ಶ. ೧೧೮೭; (ರೈ) ಎಕ VIII ಸೊರಬ ೨೪೭ ಕ್ರಿ.ಶ. ೧೨೮೮.

೯. ಎಸ್‌ಐಐ IX(i) ಕೂಡ್ಲಿಗಿ ೨೬೪ ಕ್ರಿ.ಶ. ೧೧೫೪.

೧೦. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೩೯೪-೫.

೧೧. (ರೈ) ಎಕ V ಬೇಲೂರು ೧೨೬ ಕ್ರಿ.ಶ. ೧೨೫೫.

೧೨. (ರೈ) ಎಕ V ಬೇಲೂರು ೨೫ ಕ್ರಿ.ಶ. ೧೧೭೩.

ಅಳತೆಗಳಲ್ಲಿ ವೀಸ,[೧] ಅರೆವೀಸ,[೨] ಸಟ್ಟುಗ,[೩] ಖಂಡುಗ,[೪] ಸೊಲಗೆ,[೫] ಮಾನ,[೬] ಬಳ್ಳ,[೭] ಸೊಂಟಿಗೆ,[೮] ಸೊಳಸಿಗೆ,[೯] ಅಡ್ಡನ,[೧೦] ಗಿದ್ದ(ನ),[೧೧] ಪಳಿಗೆ,[೧೨] ದಳ,[೧೩] ಹಾನೆ,[೧೪] ಸಡೆಗಳು[೧೫] ಬಳಕೆಯಾಗುತ್ತಿದ್ದವು. ಬಹುಶಃ ದ್ರವರೂಪದ ಪದಾರ್ಥಗಳನ್ನು ಇವೇ ಮಾನಗಳಿಂದ ಅಳೆಯುತ್ತಿದ್ದರು. ದ್ರವರೂಪದ ಪದಾರ್ಥಗಳನ್ನು ಅಳೆಯುವಾಗ ಸೊಂಟಿಗೆ ವಿಶೇಷವಾಗಿ ಬಳಕೆಯಾಗಿದೆ. ರಾಜಾದಿತ್ಯನು ಕೊಡುವ ಅಳತೆಗಳ ವಿವರ ಹೀಗಿದೆ.

| | | |
|---|---|---|
| ೪ ಗಿದ್ದ | = | ೧ ಸೊಲ್ಲಗೆ |
| ೪ ಸೊಲ್ಲಗೆ | = | ೧ ಮಾನ |
| ೪ ಮಾನ | = | ೧ ಬಳ್ಳ |
| ೪ ಬಳ್ಳ | = | ೧ ಕೊಳಗ |
| ೨೦ ಕೊಳಗ | = | ೧ ಖಂಡುಗ[೧೬] |

ಶಾಸನಗಳ ಪ್ರಯೋಗವನ್ನು ಮತ್ತು ರಾಜಾದಿತ್ಯನು ಕೊಡುವ ವಿವರವನ್ನು ಗ್ರಹಿಸಿ ಖಂಡುಗ ದೊಡ್ಡ ಮಾನವೆಂದು, ದಳ ಸಣ್ಣ ಮಾನವೆಂದು ಭಾವಿಸಬಹುದು.

**ತೂಕ:**

ಪದಾರ್ಥಗಳನ್ನು ಅಳೆಯುವ ಪದ್ಧತಿ ಇದ್ದಂತೆ ತೂಗುವ ಪದ್ಧತಿಯೂ ಇದ್ದಿತು. ತಕ್ಕಡಿಯನ್ನು ಶಾಸನವೊಂದರಲ್ಲಿ ತ್ರಾಸು[೧೭] ಎಂದು ಕರೆದಿದೆ. ತೂಕದಲ್ಲಿ ಭಾರ,[೧೮] ತೊಲೆ,[೧೯] ಬಿಸಿಗೆ,[೨೦] ಮಳವೆ,[೨೧] ಇವುಗಳಲ್ಲದೆ ಪಲ, ಕೊಡುಗೆ, ಬೆಲ್ಲಳಿಗೆ

---

೧. ಎಸ್‌ಐಐ IX(i) ಅದೋನಿ ೨೯೪ ಕ್ರಿ.ಶ. ೧೧೬೪.
೨. ಎಸ್‌ಐಐ XX ಜಮಖಂಡಿ ೧೩೫ ಕ್ರಿ.ಶ. ೧೧೫೭.
೩. ಎಸ್‌ಐಐ IX(i) ಅದೋನಿ ೨೯೪ ಕ್ರಿ.ಶ. ೧೧೬೪.
೪. (ರೈ) ಎಕ IX ಚನ್ನಪಟ್ಟಣ ೧೬೯ ಕ್ರಿ.ಶ. ೧೪೧೬.
೫. (ಮೈ) ಎಕ V ಮೈಸೂರು ೧೮೮ ಕ್ರಿ.ಶ. ೧೧೯೧.
೬. ಎಂ.ಎ.ಆರ್. ೧೯೩೨ ತರೀಕೆರೆ ೪೭ ಕ್ರಿ.ಶ. ೧೨೨೮.
೭. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.
೮. (ರೈ) ಎಕ VI ಕಡೂರು ೯೬ ಕ್ರಿ.ಶ. ೧೧೪೧.
೯. ಐಎಸ್‌ಡಿ ದ. ಕೊಲ್ಲಾಪುರ ೧೭ ಕ್ರಿ.ಶ. ೧೧೬೬. 'ಅರ್ಧ ಸೊಳಸಿಗೆ' ಉಕ್ತವಾಗಿದೆ.
೧೦. ಎಸ್‌ಐಐ IX(i) ಕೂಡ್ಲಿಗಿ ೨೬೪ ಕ್ರಿ.ಶ. ೧೧೫೪.
೧೧. ಕಇಅಪ್ರ ಮೆಹಬೂಬ್‌ನಗರ ೬೩ ಕ್ರಿ.ಶ. ೧೨೩೫.
೧೨. ಎಸ್‌ಐಐ IX(i) ಬಳ್ಳಾರಿ ೨೯೭ ಕ್ರಿ.ಶ. ೧೧೧೭.
೧೩. ಎಸ್‌ಐಐ XV ಗದಗು ೪೩ ಕ್ರಿ.ಶ. ೧೨ ಶ.ಮಾ.
೧೪. (ರೈ) ಎಕ VI ತರೀಕೆರೆ ೪೫ ಕ್ರಿ.ಶ. ೧೧೯೬.
೧೫. ಬಿ.ಆರ್. ಹಿರೇಮಠ : ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೨೮.
೧೬. ವ್ಯವಹಾರ ಗಣಿತ : ೧-೨೬.
೧೭. ಆರ್. ನರಸಿಂಹಾಚಾರ್ಯ : ಶಾಸನ ಪದ್ಯಮಂಜರಿ. ೧೧೧೦, ಪು. ೧೭೪ ಕ್ರಿ.ಶ. ೧೧೭೨.
೧೮. ಎಂ.ಎ.ಆರ್. ೧೯೩೩ ಕಡೂರು ೩ ಕ್ರಿ.ಶ. ೧೧೬೦.
೧೯. ಎಕ II ಶ್ರವಣಬೆಳಗೊಳ ೩೪೩ ಕ್ರಿ.ಶ. ೧೨ ಶ.ಮಾ.
೨೦. ಎಕ II ಶ್ರವಣಬೆಳಗೊಳ ೪೮೧ ಕ್ರಿ.ಶ. ೧೧೫೯.
೨೧. ಎಂ.ಎ.ಆರ್. ೧೯೩೩ ಕಡೂರು ೩ ಕ್ರಿ.ಶ. ೧೧೬೦.

ತೂಕ ವಿಶೇಷಗಳೆಂದು ಬಿ.ಆರ್. ಹಿರೇಮಠ ಅವರು ಗುರುತಿಸಿದ್ದಾರೆ.[೧] ವಚನಕಾರರಲ್ಲಿ ಗುಂಜಿ, ಮಾಸಿ, ಜವೆ ಎಂಬ ತೂಕದ ಹೆಸರುಗಳು ಬಳಕೆಯಾಗಿವೆ.[೨] ರಾಜಾದಿತ್ಯನು ಕೊಡುವ ಕೆಲವು ತೂಕಗಳು ಶಾಸನೋಕ್ತ ತೂಕಗಳಿಗೆ ಹೊಂದಿಕೆಯಾಗುವುದನ್ನು ಕಾಣಬಹುದು. ರಾಜಾದಿತ್ಯನು ಹೇಳುವ ಪದ್ಯದಿಂದ ತೂಕದ ಈ ಕೋಷ್ಟಕವನ್ನು ಗುರುತಿಸಬಹುದು.

| | | |
|---|---|---|
| ೪ ಸುವರ್ಣ | = | ೧ ಕರ್ಷ |
| ೪ ಕರ್ಷ | = | ಒಂದು ಪಲ |
| ೨೦ ಪಲ | = | ಒಂದು ಬೀಸಗೆ |
| ೫ ಬೀಸಗೆ | = | ಒಂದು ತೊಲೆ |
| ೨೦ ತೊಲೆ | = | ಒಂದು ಭಾರ[೩] |

**ಹೇರು-ಎಣಿಕೆ:**

ಕೆಲವು ಪದಾರ್ಥಗಳು ಹೇರಿನ ಲೆಕ್ಕದಲ್ಲಿ ಗಣಿಸಲ್ಪಡುತ್ತಿದ್ದವು. ಅಡಕೆ, ಮೆಣಸು, ಅರಿಸಿನ, ಎಲೆ ಇವು ಹೇರಿನ ಲೆಕ್ಕದಲ್ಲಿರುವುದು ಶಾಸನವೊಂದರಲ್ಲಿ ಉಕ್ತವಾಗಿದೆ.[೪] ಕೆಲವು ಸಾರಿ ಎಲೆಗಳು ಹೊರೆಯ ಲೆಕ್ಕದಲ್ಲಿ ಗಣಿಸಲ್ಪಡುತ್ತಿದ್ದವು. ಎಲೆಗಳಿಗೆ ತೆರಿಗೆ ಹಾಕುತ್ತಿದ್ದಾಗ ಅವನ್ನು ಎಣಿಕೆ ರೂಪದಲ್ಲಿ ಕೊಡುತ್ತಿದ್ದರು. ಎಲೆ ಹೇರಿಗೆ ೧೦೦ ಹೊರೆಗೆ ೫೦ ಎಂದು ಬರುತ್ತದೆ.[೫] ಇದೇ ರೀತಿ ಅಡಕೆಯನ್ನು ಎಣಿಕೆಯಲ್ಲಿ ತೆಗೆದುಕೊಳ್ಳುತ್ತಿದ್ದರು.[೬] ಒಂದು ಹೆಡಗೆ (ನಿರ್ದಿಷ್ಟ ಪ್ರಮಾಣದ ಒಂದು ಬುಟ್ಟಿ) ತರಕಾರಿಗೆ ಒಂದು ಹಿಡಿ ತರಕಾರಿ ತೆರಿಗೆ ಹಾಕಿರುವುದುಂಟು.[೭] ಅಡಕೆಗೆ ಎತ್ತಿನ ಹೊರೆಯ ಲೆಕ್ಕದಲ್ಲಿ ತೆರಿಗೆ ಹಾಕುತ್ತಿದ್ದರು.[೮] ಅಡಕೆಯನ್ನು ಸಾಗಿಸುವಾಗ ಹಸುಬೆಗಳಿಗೆ ತುಂಬಿ ಸಾಗಿಸುತ್ತಿದ್ದರು. ಆದ್ದರಿಂದ ಹಸುಬೆಯ ಚೀಲದ ಲೆಕ್ಕದಲ್ಲಿಯೂ ತೆರಿಗೆಗೆ ಒಳಪಡಿಸಿರುವುದುಂಟು.[೯] ಕೆಲವು ಪದಾರ್ಥಗಳನ್ನು ಸೂಡಿಯ ಲೆಕ್ಕದಲ್ಲಿ ತೆರಿಗೆಗೆ ಒಳಪಡಿಸುತ್ತಿದ್ದರು. ಶಾಸನವೊಂದರಲ್ಲಿ 'ಭತ್ತಕೆ ಸೂಡಿಗೆ ಭತ' ಎಂದು ಬರುತ್ತದೆ.[೧೦] ಕೆಲವು ಶಾಸನಗಳು ತಲೆಹೊರೆಯ ಲೆಕ್ಕದಲ್ಲಿ ತೆರಿಗೆ ಹಾಕುತ್ತಿದ್ದುದನ್ನು ತಿಳಿಸುತ್ತದೆ.[೧೧] ಕೆಲವು ಶಾಸನಗಳಲ್ಲಿ ಭತ್ತದ ಹೇರಿಗೆ ಮೂಲೆವತ್ತು[೧೨] ಎಂದು ಹೇಳಲಾಗಿದೆ. ಆದರೆ 'ಮೂಲೆ'ಯ ಪ್ರಮಾಣ ಸ್ಪಷ್ಟವಾಗುವುದಿಲ್ಲ.

---

೧. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೧೩೦.

೨. ಪಿ.ವಿ. ನಾರಾಯಣ : ಪೂರ್ವೋಕ್ತ, ಪು. ೧೮೫.

೩. ವ್ಯವಹಾರ ಗಣಿತ : ೧-೨೬. ನಾಲ್ಕುಂ ಸುವರ್ಣಂ ಕರ್ಷಂ ನಾಲ್ಕು ಕರ್ಷಂ ಪಲಮಾ ದಶದ್ವಯ ಪಲದಿಂ ನಿಲ್ಕುಂ ಬೀಸಗೆ ಬೀಸಗೆ ಪಂಚಕದೊಳ್ ತೊಲೆಯಿಪ್ಪತ್ತು ತೊಲೆಗಳಕ್ಕುಂ ಭಾರ.

೪. (ಮೈ) ಎಕ II ಶ್ರವಣಬೆಳಗೊಳ ೪೪೪ ಕ್ರಿ.ಶ. ೧೧೮೧.

೫. ಎಸ್ಐಐ IX(i) ಬಳ್ಳಾರಿ ೩೨೨ ಕ್ರಿ.ಶ. ೧೧೯೫.

೬. (ರೈ) ಎಕ XII ಪಾವಗಡ ೫೨ ಕ್ರಿ.ಶ. ೧೨೩೨.

೭. ಎಸ್ಐಐ XX ಇಂಡಿ ೧೮೩ ಕ್ರಿ.ಶ. ೧೧೯೭. ಹೆಡಿಗೆ ಮತ್ತು ಮೊರ ಅನಧಿಕೃತ ಅಳತೆಗಳಾಗಿರಬೇಕೆಂದು ಪಿ.ವಿ. ನಾರಾಯಣ ಅಭಿಪ್ರಾಯಪಡುತ್ತಾರೆ. ಆದರ ಹೆಡಿಗೆ ಅಧಿಕೃತ ಅಳತೆಯಾಗಿ ಬಳಕೆಯಾಗಿರಬೇಕು. ಏಕೆಂದರೆ ಹೆಡಿಗಗೆ ತೆರಿಗೆ ವಸೂಲು ಮಾಡುತ್ತಿದ್ದರು.

೮. (ರೈ) ಎಕ X ಕೋಲಾರ ೧೩೯ ಕ್ರಿ.ಶ. ೧೨೮೭.

೯. (ರೈ) ಎಕ VII ಹೊನ್ನಾಳಿ ೧೦೮ ಕ್ರಿ.ಶ. ೧೨೦೩.

೧೦. (ರೈ) ಎಕ VII ಹೊನ್ನಾಳಿ ೧೦೮ ಕ್ರಿ.ಶ. ೧೨೦೩.

೧೧. (ರೈ) ಎಕ VII ಶಿವಮೊಗ್ಗ ೮೮ ಕ್ರಿ.ಶ. ೧೨೦೩.

೧೨. (ರೈ) ಎಕ VII ಹೊನ್ನಾಳಿ ೭೩ ಕ್ರಿ.ಶ. ೧೧೮೦.

ಆ ಕಾಲದಲ್ಲಿಯೂ ತೂಕ ಮತ್ತು ಅಳತೆಗಳಲ್ಲಿ ವಂಚನೆ ಮಾಡುವ ಪ್ರವೃತ್ತಿ ಜನರಲ್ಲಿ ಇದ್ದಿತು. ಧರ್ಮಾಮೃತದಲ್ಲಿ ಬರುವ 'ನಮ್ಮ ಸೆಟ್ಟಿಯ ಮಾತೊಳ್ಳಿದವು ಬಳ್ಳಂ ಕಿಜಿದೆಂಬಂತೆ'[೧] ಎಂಬ ಮಾತು ಇದಕ್ಕೆ ಸಾಕ್ಷಿಯಾಗಿದೆ. ಬ್ರಹ್ಮಶಿವನು 'ಕೊಳ್ಳುವಾಗ ದೊಡ್ಡ ಕೋಲುಗಳನ್ನು, ಕೊಳಗವನ್ನು ಬಳಸಿದಂತೆ ಬೇರೆಯವರಿಗೆ ಕೊಡುವಾಗಲೂ ಅದೇ ಮಾನವನ್ನು ಬಳಸಿ ಅಳೆದು ಕೊಡಬೇಕೇ ಹೊರತು ಚಿಕ್ಕ ಮಾನವನ್ನು ಬಳಸಿ ವ್ಯಾಪಾರ ಮಾಡುವುದು ಸರಿಯಲ್ಲ'ವೆಂದು ಅಭಿಪ್ರಾಯ ಪಡುತ್ತಾನೆ.[೨] ಅಲ್ಲದೆ ಆಹಾರ ಪದಾರ್ಥಗಳ, ಲೋಹಗಳ ಕಲಬೆರಕೆ ನಡೆಯುತ್ತಿದ್ದುದನ್ನು ಇನ್ನೊಂದು ಪದ್ಯದಲ್ಲಿ ನಿರೂಪಿಸಿದ್ದಾನೆ.[೩]

ಈ ರೀತಿಯ ತೂಕ ಅಳತೆಗಳ ಏರುಪೇರನ್ನು ನಿವಾರಿಸಲು 'ಪಂತವಾಧ್ಯಕ್ಷ' ಎಂಬ ಅಧಿಕಾರಿ ಇದ್ದ ಹಾಗೆ ಕಾಣುತ್ತದೆ. ಕೌಟಿಲ್ಯನು ಹೇಳುವ ಅಧಿಕಾರಿ ಬಹುಶಃ ಇವನೇ ಆಗಿರಬೇಕು.[೪] ಕನ್ನಡ ಶಾಸನಗಳಲ್ಲಿ ಇಂಥ ಅಧಿಕಾರಿಯ ಸೂಚನೆ ಕಂಡುಬರುವುದಿಲ್ಲ.

**ವ್ಯಾಪಾರ:**

ವ್ಯಾಪಾರ ವೃತ್ತಿಯನ್ನು ಉತ್ಪಾದಕ, ವಿನಿಮಯ ಮತ್ತು ಉತ್ಪಾದಕ ವಿನಿಮಯ ಮತ್ತು ಇತರ ಎಂದು ವಿಭಾಗಿಸಿ ಈಗಾಗಲೇ ಅಧ್ಯಯನ ಮಾಡಲಾಗಿದೆ.[೫] ವಿನಿಮಯ ಮತ್ತು ಉತ್ಪಾದಕ ವಿನಿಮಯ ಈ ಎರಡೂ ಕಾರ್ಯಕ್ಷೇತ್ರಗಳನ್ನು ನಿರ್ವಹಿಸಿದ ವರ್ತಕ ಶ್ರೇಣಿಯ ಕೆಲವು ವಿವರಗಳನ್ನು ಮುಂದೆ ಗಮನಿಸಲಾಗಿದೆ.

ಪ್ರಾಚೀನ ವರ್ತಕ ಸಮೂಹವನ್ನು ಗಮನಿಸಿದರೆ ಅವರನ್ನು ಜೈನ, ಶೈವ, ವೈಷ್ಣವ ಮತ್ತು ಇತರರು ಎಂದು ವಿಭಾಗಿಸಲು ಅವಕಾಶವಿದೆ. ಕೆಲವು ವರ್ತಕರನ್ನು ಶಾಸನಗಳಿಂದ ಅವರು ನಿರ್ದಿಷ್ಟವಾಗಿ ಯಾವ ಧರ್ಮಕ್ಕೆ ಸೇರಿದವರೆಂದು ಗುರುತಿಸಬಹುದು. ಆದರೆ ಕೆಲವರನ್ನು ಅವರು ಯಾವ ಧರ್ಮಕ್ಕೆ ಸೇರಿದವರೆಂದು ಗುರುತಿಸಲು ಸಾಧ್ಯವಿಲ್ಲ. ಅಂಥವರನ್ನು ಇತರರು ಎಂಬ ಗುಂಪಿನಲ್ಲಿ ಅಳವಡಿಸಬಹುದು. ಮಧ್ಯಕಾಲೀನ ಯುಗದಲ್ಲಿ ತಮ್ಮ ವಾಣಿಜ್ಯ ವ್ಯವಹಾರದಿಂದ, ಸಂಘಟನೆಯಿಂದ ಮತ್ತು ಧರ್ಮಕಾರ್ಯಗಳಿಂದ ಪ್ರಭಾವಶಾಲಿಗಳಾಗಿ ಕಾರ್ಯನಿರ್ವಹಿಸಿದ ವರ್ತಕ ಸಮಾಜದ ಅಧ್ಯಯನ ಕುತೂಹಲಕರವಾದುದು. ಹಲವಾರು ವರ್ತಕರು ಕೇವಲ ತಮ್ಮ ವೃತ್ತಿಯನ್ನಷ್ಟೇ ಮಾಡದೆ ಆಡಳಿತದ ಹಿರಿಯ ಹೊಣೆಗಳನ್ನು ಹೊತ್ತಿದ್ದಾರೆ. ಕುಂಜನಂಬಿಸೆಟ್ಟಿಯು ನಾನಾ ರತ್ನಗಳ ಪರೀಕ್ಷೆಯನ್ನು ಬಲ್ಲ ವ್ಯಾಪಾರಿಯಾಗಿದ್ದುದಲ್ಲದೆ ಅವನು ಹೊಯ್ಸಳರ ಸಂಧಿವಿಗ್ರಹಿಯೂ ಆಗಿದ್ದುದು ತಿಳಿದುಬರುತ್ತದೆ.[೬]

ವ್ಯವಹಾರದ ವ್ಯಾಪ್ತಿ ಮತ್ತು ಮಾರುವ ವಸ್ತುಗಳಿಗೆ ಅನುಗುಣವಾಗಿ ವರ್ತಕರು ಹಲವಾರು ಗುಂಪುಗಳಾಗಿ ವರ್ಗೀಕರಣ ವಾಗಿದ್ದರು. ಅವರಲ್ಲಿ ಮುಮ್ಮುರಿದಂಡ, ಗವಜಿ, ಸೆಟ್ಟಿಗುತ್ತ, ಗಾತ್ರಿಗ, ತೆಲ್ಲಿಗ, ನಾನಾದೇಶಿ, ಉಭಯ ನಾನಾದೇಶಿ

---

೧. ಧರ್ಮಾಮೃತಂ, ಪು. ೨೯೭.

೨. ಸಪ ೫-೪೭.

೩. ತುಪ್ಪದೊಳಗಣ್ಣೆಯಂ ಲೇ
ಸಪ್ಪಾ ಹೊನ್ನೊಳಗೆ ಬೆಳ್ಳಿಯಂ ಧನದಳುಪಿಂ।
ದುಪ್ಪಿಲ್ಲದೆ ಮಣ್ಣನೆಂತುಂ
ತಪ್ಪಿಲ್ಲದೆ ನಡಸುವನೆಂಬನಾಗಳ್ ಬೆರಸಲ್ ಸಪ. ೫-೪೬

೪. Shyamsunder Nigam : Economic Organisations in Ancient India ಪು. ೭೫.

೫. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೭-೯.

೬. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೪.

ಮುಂತಾದ ವಿಭಾಗಗಳಿದ್ದವು. ಇವರು ವೈಯಕ್ತಿಕ ಮಟ್ಟದಲ್ಲಿಯೂ ಸಂಘಟಿತ ಮಟ್ಟದಲ್ಲಿಯೂ ವ್ಯಾಪಾರವನ್ನು ನಿರ್ವಹಿಸಿರುವುದು ಕಂಡುಬರುತ್ತದೆ. ವಿಸ್ತಾರವಾದ ಈ ವ್ಯಾಪಾರಿ ವೃತ್ತಿಯವರು ತಮ್ಮ ವೃತ್ತಿಯನ್ನು ಸಮರ್ಪಕವಾಗಿ ನಿರ್ವಹಿಸಲು ಸುಸಂಘಟಿತರಾಗಿ ಹಲವಾರು ಶ್ರೇಣಿಗಳನ್ನು ರಚಿಸಿಕೊಂಡಿದ್ದರು. ಕೆಲವು ಶ್ರೇಣಿಗಳಂತೂ ಅತ್ಯಂತ ವ್ಯವಸ್ಥಿತವಾಗಿ ಸಂಘಟನೆಗೊಂಡಿದ್ದು ಯಶಸ್ವಿಯಾಗಿ ವ್ಯವಹಾರದ ಜೊತೆಯಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ಭಾಗಿಗಳಾಗಿದ್ದವು. ಐಯ್ಯಾವೊಳೆ ಐನೂರ್ವರು, ತೆಲ್ಲಿಗರೈವತ್ತೊಕ್ಕಲು, ಉಗುರ ಮೂನೂರ್ವರು, ಎಂಟು ಹಿಟ್ಟು, ಮಾಲೆಗಾರ ನಾಲ್ವತ್ತೊಕ್ಕಲು, ತೋಟಿಗರೈನೂರ್ವರು, ಅರುವತ್ತೊಕ್ಕಲು, ಜೇಡಗೊತ್ತಳಿ, ಹಂಜಮಾನ ಮುಂತಾದ ಶ್ರೇಣಿಗಳು ಆ ಕಾಲದಲ್ಲಿ ಚಟುವಟಿಕೆಯಿಂದ ಕೂಡಿದ್ದವು. ಈ ಕೆಲವು ಶ್ರೇಣಿಗಳ ಚಟುವಟಿಕೆಯ ವಿವರಗಳನ್ನು ಗಮನಿಸಬಹುದು.

**ಐಯ್ಯಾವಳೆ ಐನೂರ್ವರು:**

ದಕ್ಷಿಣ ಭಾರತದ ಪ್ರಸಿದ್ಧ ವರ್ತಕ ಶ್ರೇಣಿಯಲ್ಲಿ ಐಯ್ಯಾವಳೆ ಐನೂರ್ವರು ಅತ್ಯಂತ ಪ್ರಮುಖವಾದುದು. ಈ ಸಂಘದ ಮೂಲ, ವ್ಯಾಪ್ತಿ, ಅಸ್ತಿತ್ವ ಮುಂತಾದ ವಿಷಯಗಳಲ್ಲಿ ವಿದ್ವಾಂಸರು ಸಾಕಷ್ಟು ಚರ್ಚೆ ನಡೆಸಿದ್ದಾರೆ.[೧] ಆ ಕಾಲದ ಶ್ರೇಣಿಗಳ ರಚನೆಯನ್ನು ಗಮನಿಸಿದರೆ ಪೂರ್ವಪದ ವೃತ್ತಿವಾಚಿಯಾಗಿಯೂ ಉತ್ತರಪದ ಸಂಖ್ಯಾವಾಚಿಯಾಗಿಯೂ ಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಎಂಟು ಹಿಟ್ಟು, ಅರುವತ್ತೊಕ್ಕಲು ಇಂಥವುಗಳಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಐಯ್ಯಾವಳೆ ಐನೂರ್ವರ ಶ್ರೇಣಿಯಲ್ಲಿ ಪೂರ್ವಪದ ಸ್ಥಳವಾಚಕ ನಾಮಪದವಾಗಿದೆ. ಈ ಸಂಘ ವ್ಯಾಪಕ ಪ್ರಸಾರದಲ್ಲಿದ್ದಂತೆ ಕಂಡುಬಂದರೂ ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಪಡುವಂತೆ 'ಈ ಐನೂರ್ವರು ಎಂಬುವರು ವರ್ತಕರ ಪ್ರಾಚೀನ ವಂಶಸ್ಥರೇ ಹೊರತು ಶಾಸನಗಳು ರಚಿತವಾದ ಸಮಯದಲ್ಲಿ ಬಾಳುತ್ತಿದ್ದವರಲ್ಲ. ಏಕೆಂದರೆ ಎಲ್ಲಾ ಶಾಸನಗಳಲ್ಲಿಯೂ ಐನೂರ್ವರ ಪ್ರಶಸ್ತಿ ಬಂದರೂ ಎಷ್ಟೋ ಊರುಗಳಲ್ಲಿ ನಿಜವಾಗಿ ಇದ್ದ ವರ್ತಕರ ಸಂಖ್ಯೆ ಬೇರೆ ಬೇರೆಯಾಗಿರುತ್ತಿತ್ತು.'[೨] ಐಯ್ಯಾವಳೆ ಐನೂರ್ವರ ಪ್ರಾಚೀನ ಉಲ್ಲೇಖ ಕ್ರಿ.ಶ. ೮೦೦ರ ಐಹೊಳೆಯ ಶಾಸನವೆಂಬ ಫ್ಲೀಟರ ಅಭಿಪ್ರಾಯ ಒಪ್ಪಿತವಾಗದೆ ಅದು ಐಹೊಳೆಯ ಅಗ್ರಹಾರದ ಬ್ರಾಹ್ಮಣರಿಗೆ ಅನ್ವಯವಾಗುವುದೆಂದೂ ಆದುದರಿಂದ ಅಗ್ರಹಾರದ ಬ್ರಾಹ್ಮಣರೇ ಬೇರೆ ಐನೂರ್ವರ ವರ್ತಕ ಶ್ರೇಣಿಯೇ ಬೇರೆ ಎಂದು ಈಚೆಗೆ ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಈಗಿನ ಮಟ್ಟಿಗೆ ಕ್ರಿ.ಶ. ೯೯೧ರ ಬಾಗಳಿ ಶಾಸನ ಆ ಸಂಘದ ಪ್ರಾಚೀನ ಉಲ್ಲೇಖವನ್ನು ಮತ್ತು ಕ್ರಿ.ಶ. ೧೩೯೮ರ ಸಿಂಗನಲ್ಲೂರ ಶಾಸನ ಕೊನೆಯ ಉಲ್ಲೇಖವನ್ನು ನೀಡುವುದೆಂಬ ಅಭಿಪ್ರಾಯವಿದೆ.[೩]

---

೧. B. A. Saletore : Karnataka's Trans Oceanic Contacts ಪು. ೨೫ ಅ.ಟಿ. ೭೫.

P.B. Desai : Jainism in South India and Some Jaina Epigraphs. ಪು. ३೧೮.

K. A. Neelakanta Shastri : A History of South India ಪು. ३३೧.

T.V. Mahalingam : South Indian Polity ಪು. ३೯೯-೪೦೦.

ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ३೮೨-३೮೬.

ಎ.ಎಂ. ಅಣ್ಣಿಗೇರಿ : ಐಹೊಳೆ ಸಂಸ್ಕೃತಿ ಮತ್ತು ಕಲೆ, ಪು. ೯-೧೦.

ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೭३-೯೮.

B. R. Hiremutt : 'Iyyavale Ainoorvaru A re-analysis' ಕ್ಯುಜೆಎಂಎಸ್ LXXIX, ಪು. ೨೮३-೮೮.

೨. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ३೮३.

३. S. Gururajachar : Some Aspects of Economic and Social life in Karnataka ಪು.೧೨೦.

ಆವರನ್ನು ಕುರಿತು ಹೇಳುವ ಶಾಸನಗಳಲ್ಲಿ 'ಭಗವತೀದೇವಿ ಲಬ್ಧವರಪ್ರಸಾದ',[೧] 'ಅಯ್ಯಾವೊಳೆಯ ಪುರಪರಮೇಶ್ವರಿ ಮಕ್ಕಳು'[೨] ಎಂದು ಬರುವುದರಿಂದ, ಅವರು ಶಕ್ತಿ ಆರಾಧಕರಿರಬಹುದೆಂಬ ಅನುಮಾನ ಬರುವುದಾದರೂ ಉಲ್ಲೇಖಗಳಲ್ಲಿ ಏಕರೂಪತೆ ಇಲ್ಲ. ಕೆಲವು ಶಾಸನಗಳಲ್ಲಿ ಹರಿಹರ ಬ್ರಹ್ಮರನ್ನು ಆರಾಧಿಸುವರೆಂದು ಇದ್ದರೆ,[೩] ಹರಪಾದ ಭೃಂಗರೆಂದು ಕುರುಗೋಡಿನ ಶಾಸನ ಹೇಳುತ್ತದೆ.[೪] ವೀರನಾರಾಯಣನ ಪೂಜಾರಾಧಕರೆಂದು[೫] ಒಂದು ಶಾಸನ ಹೇಳಿದರೆ, ಜಿನಪೂಜಾ ಪುರಸ್ಸರರೆಂದು ಇನ್ನೊಂದು ಶಾಸನ ಹೇಳುತ್ತದೆ.[೬] ಆದುದರಿಂದ ಅವರ ಧರ್ಮವನ್ನು ನಿರ್ಧರಿಸುವುದು ಕಠಿಣ. ಅಯ್ಯಾವಳೆಯ ಐನೂರ್ವರು ಮೂಲದಲ್ಲಿ ಯಾವ ಧರ್ಮಕ್ಕೆ ಸೇರಿದ್ದರೆಂದು ಹೇಳಲಾಗದಿದ್ದರೂ ಕ್ರಮೇಣ ಅವರ ಆ ಹೆಸರಿನಲ್ಲಿ ಬೇರೆ ಬೇರೆ ಊರುಗಳಲ್ಲಿ ಸಂಘವನ್ನು ರಚಿಸಿಕೊಂಡವರೂ, ಭಿನ್ನ ಭಿನ್ನ ಧರ್ಮಾನುಸಾರಿಗಳಾಗಿದ್ದರೆಂದು ಭಾವಿಸಬೇಕಾಗುತ್ತದೆ.

ಅಯ್ಯಾವಳೆಯ ಐನೂರ್ವರಿಗೆ ಸಂಬಂಧಿಸಿದ ಶಾಸನಗಳಲ್ಲಿ ಎದ್ದುಕಾಣುವ ಮುಖ್ಯ ಅಂಶಗಳಲ್ಲಿ ಅವರ ಪ್ರಶಸ್ತಿಗಳೂ ಸೇರಿವೆ. ಶಾಸನಗಳ ಆರಂಭದಲ್ಲಿ ಅಥವಾ ಮಧ್ಯಭಾಗದಲ್ಲಿ ಕಂಡುಬರುವ ಆವರ ಪ್ರಶಸ್ತಿಗಳು ವಿಶೇಷ ವಿವರಗಳಿಂದ ಕೂಡಿರುತ್ತವೆ.[೭] ಅವುಗಳಲ್ಲಿ ಗುಡ್ಡಧ್ವಜ, ಗರುಡಧ್ವಜ ಮತ್ತು ಚಕ್ರಧ್ವಜರೆಂದು ಆವರನ್ನು ಗುರುತಿಸಲಾಗಿದೆ.[೮] ಇವುಗಳ ಖಚಿತ ಅರ್ಥವ್ಯಾಪ್ತಿಯನ್ನು ಇನ್ನೂ ಗುರುತಿಸಬೇಕಾಗಿದೆ. ಅವರು ತಮ್ಮದೇ ಆದ ಧ್ವಜ ಲಾಂಛನಗಳನ್ನು ಒಳಗೊಂಡು ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಹೀಗೆ ಅವರ ಶಾಸನಗಳಿಂದ ಅನ್ಯವಿವರಗಳು ದೊರೆಯುವುವಾದರೂ ಅವರ ಸಂಘದ ರಚನೆಯ ವಿಷಯ, ಕಾರ್ಯವಿಧಾನ, ವರ್ತಕರ ಪರಸ್ಪರ ಸಂಬಂಧ, ನಿಯಂತ್ರಣ ಮುಂತಾದ ವಿಷಯಗಳು ಅಷ್ಟಾಗಿ ತಿಳಿದುಬರುವುದಿಲ್ಲ.[೯]

**ತೆಲ್ಲಿಗರೈವತ್ತೊಕ್ಕಲು:**

ಇವರನ್ನು ಕುರಿತ ಶಾಸನಗಳನ್ನು ಗಮನಿಸಿದರೆ, ಕರ್ನಾಟಕದಲ್ಲಿ ಎಣ್ಣೆಯ ಉತ್ಪಾದನೆ ಅತ್ಯಂತ ವ್ಯಾಪಕವಾಗಿ ನಡೆಯುತ್ತಿದ್ದುದು ಮನದಟ್ಟಾಗುತ್ತದೆ. ಇವರು ಎಣ್ಣೆಯ ಉತ್ಪಾದನೆ ಮತ್ತು ವಿತರಣೆಯನ್ನು ತಮ್ಮ ಹಿಡಿತದಲ್ಲಿಟ್ಟು ಕೊಂಡಿದ್ದರು. ಇವರು ರಚಿಸಿಕೊಂಡಿದ್ದ ಸಂಘವನ್ನು ತೆಲ್ಲಿಗರ ಕೊತ್ತಳಿ,[೧೦] ಗಾಣಿಗರೊಕ್ಕಲು,[೧೧] ತೆಲಿಗ ಕೊತ್ತಳಿ,[೧೨] ತೆಲ್ಲಿಗರ ಅಯ್ವತ್ತೊಕ್ಕಲು[೧೩] ಎಂದು ಕರೆಯಲಾಗಿದೆ. ಇವರು ಗಾಣಗಳಲ್ಲಿ ಎಣ್ಣೆಯನ್ನು ತೆಗೆದು ಅದನ್ನು ಮಾರಾಟ ಮಾಡುತ್ತಿದ್ದರು.

---

೧. ಎಇ XIX ಮಿರಜ್, ಪು. ೩೫-೩೯ ಕ್ರಿ.ಶ. ೧೧೪೨.

೨. (ರೈ) ಎಕ X ಕೋಲಾರ ೧೭೦ ಕ್ರಿ.ಶ. ೧೧೮೦?.

೩. (ರೈ) ಎಕ VIII ಸೊರಬ ೨೬೮ ಕ್ರಿ.ಶ. ೧೨೪೫.

೪. ಎಸ್‌ಐಐ IX(i) ಬಳ್ಳಾರಿ ೨೯೭ ಕ್ರಿ.ಶ. ೧೧೭೧.

೫. ಎಇ XIX ಗೋಕಾಕ, ಪು. ೧೯-೨೬ ಕ್ರಿ.ಶ. ೧೨೪೬.

೬. ಎಸ್‌ಐಐ XV ಹುನಗುಂದ ೧೬೪ ಕ್ರಿ.ಶ. ೧೨೨೦.

೭. ಎಇ V ಬಿಜಾಪುರ ೩ ಕ್ರಿ.ಶ. ೧೧೬೧. ವಿವರಗಳಿಗೆ ನೋಡಿ: ಬಿ.ಆರ್. ಹಿರೇಮಠರ ಪೂರ್ವೋಕ್ತ ಕೃತಿ, ಪು. ೮೭-೯೧.

೮. ಅದೇ, ಪು. ೮೪.

೯. ವರ್ತಕ ವರ್ಗದ ಕುಲೋತ್ಪತ್ತಿಯನ್ನು ನಿರೂಪಿಸುವ ಉದ್ದೇಶವನ್ನು ಉಳ್ಳ ಅಪರೂಪದ ಶಾಸನವೊಂದು ಇತ್ತೀಚೆಗೆ ಪ್ರಕಟವಾಗಿದೆ. ಶಿವ-ಪಾರ್ವತಿಯರ ವಿವಾಹದ ವಿವರಗಳನಂತರ ಶಾಸನ ಸಂಪೂರ್ಣವಾಗಿ ಒಡೆದು ಹೋಗಿರುವುದರಿಂದ ವರ್ತಕ ವರ್ಗದ ಕುಲೋತ್ಪತ್ತಿ ವಿವರಗಳು ದೊರೆಯುವುದಿಲ್ಲ. ನೋಡಿ: ಎಂ. ಚಿದಾನಂದ ಮೂರ್ತಿ : 'ಕನ್ನಡದ ಮೊತ್ತಮೊದಲ 'ಷಟ್ಪದಿ' ಕಾವ್ಯ' ಸಾಧನೆ ೧೮.೧-೨, ಪು. ೮-೨೯.

೧೦. ಎಸ್‌ಐಐ XV ಬಾಗೇವಾಡಿ ೧೨೯ ಕ್ರಿ.ಶ. ೧೧೭೬.

೧೧. ಎಸ್‌ಐಐ XV ರೋಣ ೧೩೯ ಕ್ರಿ.ಶ. ೧೧೮೩.

೧೨. (ಮೈ) ಎಕ VI ಪಾಂಡವಪುರ ೩೫ ಕ್ರಿ.ಶ. ೧೧೯೩.

೧೩. (ರೈ) ಎಕ VII ಶಿಕಾರಿಪುರ ೨೩೬ ಕ್ರಿ.ಶ. ೧೧೭೪.

ಅನೇಕ ದೇವಾಲಯಗಳಿಗೆ ದಾನ ನೀಡುವಾಗ ಗಾಣಗಳನ್ನು ದಾನ ನೀಡುತ್ತಿದ್ದು, ಅದರಿಂದ ತೆಗೆದ ಎಣ್ಣೆಯನ್ನು ನಂದಾದೀವಿಗೆಗೆ ಉಪಯೋಗಿಸಬೇಕೆಂಬುದು ಉದ್ದೇಶವಾಗಿರುತ್ತದೆ. ಆ ಕಾಲದಲ್ಲಿ ದೇವಾಲಯದ ಆವರಣದಲ್ಲಿ ಗಾಣವನ್ನು ಹಾಕಿಸುವುದು ಪುಣ್ಯಕಾರ್ಯವೆಂದು ನಂಬಲಾಗಿತ್ತು.[೧] ಕ್ರಿ.ಶ. ೩ನೆಯ ಶತಮಾನದಲ್ಲಿಯೇ ಎಣ್ಣೆಯವರ ಸಂಘ ಅಸ್ತಿತ್ವದಲ್ಲಿದ್ದುದು ನಾಸಿಕದ ಶಾಸನದಿಂದ ತಿಳಿದುಬರುತ್ತದೆ. ಅದೇ ಶಾಸನ, ದಾನಿಗಳು ಆ ಸಂಘಕ್ಕೆ ಹಣವನ್ನು ನೀಡಿ ಅದನ್ನು ರೋಗಿಗಳಿಗೆ, ಸನ್ಯಾಸಿಗಳಿಗೆ ಉಳಿದುಕೊಳ್ಳುವ ವ್ಯವಸ್ಥೆಗಾಗಿ ವ್ಯಯ ಮಾಡಬೇಕೆಂದು ತಿಳಿಸುತ್ತದೆ.[೨] ಅಷ್ಟು ಪೂರ್ವಕಾಲದಿಂದಲೇ ಆ ಸಂಘವು ಧಾರ್ಮಿಕ, ಸಾಮಾಜಿಕ ಕಾರ್ಯವನ್ನು ನಿರ್ವಹಿಸುತ್ತಿದ್ದುದು ಕಂಡುಬರುತ್ತದೆ. ತೆಲ್ಲಿಗರಲ್ಲಿ ಎರಡು ವಿಭಾಗಗಳಿದ್ದು ಅವರ ವ್ಯವಹಾರ, ಸ್ಥಿತಿಗತಿಗಳ ಆಧಾರದ ಮೇಲೆ ಹಿರಿಯ ತೆಲ್ಲಿಗಗೇರಿ ಮತ್ತು ಕಿಱೆಯ ತೆಲ್ಲಿಗ ಕೇರಿಯಲ್ಲಿ ವಾಸಿಸುತ್ತಿದ್ದರೆಂದು ಭಾವಿಸಬಹುದು.[೩] ತೆಲ್ಲಿಗರು, ಎಲ್ಲ ಧರ್ಮದ ದೇವಾಲಯಗಳ ನಂದಾದೀಪಕ್ಕೆ ಎಣ್ಣೆಯನ್ನು ನೀಡುತ್ತಿದ್ದುದರಿಂದ ಅವರನ್ನು ಕುರಿತು ಬೆಣಚಮಟ್ಟಿಯ ಶಾಸನ ಹೀಗೆ ಹೇಳಿದೆ.

> ಎಲ್ಲಾ ಧರ್ಮಗಳುಮಂ
> ತೆಲ್ಲಿಗರಾರಯ್ವರವರಪೊಲು ಮತ್ತೋರ್ವರು
> ಬಲ್ಲರೆ ಪುಣ್ಯಮನಾರ್ಜಿಪ
> ರೆಲ್ಲಾ ನಾಡೊಳಗೆ ಅವರ ಧರ್ಮಮೆ ಧರ್ಮಂ[೪]

ಹೀಗೆ ತೆಲ್ಲಿಗರು ಮಾಡುತ್ತಿದ್ದ ಕಾರ್ಯ ವ್ಯಾವಹಾರಿಕವಾಗಿ ವೃತ್ತಿಯಾದರೂ ಅವರ ಸಾಮಾಜಿಕ ಉಪಕಾರ ದೊಡ್ಡದೇ ಆಗಿದೆ.

**ವೀಳೆಯದೆಲೆಗೆ ಸಂಬಂಧಿಸಿದ ಸಂಘಗಳು:**

ಕರ್ನಾಟಕ ಪ್ರಾಚೀನ ಕಾಲದಿಂದಲೂ ಎಲೆಯ ಬೆಳೆಗೆ ಪ್ರಸಿದ್ಧವಾಗಿದ್ದಿತು. ವ್ಯಾಪಕವಾಗಿ ಬೆಳೆದಿದ್ದ ವೀಳೆಯದೆಲೆಯ ಉದ್ಯಮದಲ್ಲಿ ಮೂರು ಸಂಘಗಳು ಕಾರ್ಯವನ್ನು ನಿರ್ವಹಿಸಿವೆ. ಎಲೆಗಳನ್ನು ಬೆಳೆಯುವವರು ಎಲೆಯ ಬೊಜಂಗರೈನೂಱ ನಾಲ್ವರು,[೫] ಬೊಜಂಗರ ಕೊತ್ತಳಿ[೬] ಎಂಬ ಹೆಸರುಗಳಿಂದ ಗುರುತಿಸಲ್ಪಟ್ಟಿದ್ದಾರೆ. ಉಗುರ ಮೂನೂರ್ವರು ಎಲೆಗಳನ್ನು ಕೊಯ್ಯುವವರು. 'ಹೆಬ್ಬೆರಳಿನ ಉಗುರನ್ನು ಬೆಳೆಯಿಸಿ ಅದರಿಂದ ಬಳ್ಳಿಗಳಲ್ಲಿಯ ಎಲೆಗಳನ್ನು ಕೊಯ್ಯುವುದರಿಂದ ಅವರ ಸಂಘಕ್ಕೆ ಉಗುರ ಮೂನೂರ್ವರು ಎಂದು ಹೆಸರು ಬಂದಿದೆ'[೭] ಎಂದು ಆರ್.ಎನ್. ಗುರವ ಅಭಿಪ್ರಾಯಪಡುತ್ತಾರೆ. ಆದರೆ ಅವರು ಉಗುರಿನ ಭಾಗಕ್ಕೆ ಹರಿತವಾದ ಲೋಹದ ಸಾಧನವನ್ನು (ಉಳಿ) ಹಾಕಿಕೊಳ್ಳುತ್ತಿದ್ದರೆಂದು ಭಾವಿಸಬಹುದು. ಇವರನ್ನು ಶಾಸನಗಳು ಉಗುರಬೆಡಂಗರ್, ಉಳಿಯ ಮೂನೂರ್ವರು ಎಂದು ಕರೆದಿವೆ. ಉಗುರ ಮೂನೂರ್ವರ ಸಂಘದಲ್ಲಿ ಸೇರ್ಪಡೆಯಾಗದೆ ಹೊರಗಿನಿಂದ ಗ್ರಾಮಕ್ಕೆ ಬಂದು ಎಲೆಗಳನ್ನು ಕೊಯ್ಯುವ ಉದ್ಯೋಗ ಮಾಡುವ ಆಳುಗಳಿಗೆ

---

೧. (ಮೈ) ಎಕ V ತಿ.ನರಸೀಪುರ ೩೨೨ ಕ್ರಿ.ಶ. ೧೧೭೯.

೨. Jaiprakash : 'The Guilds of Oil Millers in Ancient India' Svastisri, ಪು. ೩೦೭.

೩. (ರೈ) ಎಕ V ಬೇಲೂರು ೧೮೮ ಕ್ರಿ.ಶ. ೧೧೯೧.

೪. ಎಇ XX ಬಾಗಲಕೋಟೆ ೧೧೨ ಕ್ರಿ.ಶ. ೧೧೬೭.

೫. ಎಸ್‌ಐಐ XVII ಹಿರೇಕೆರೂರು ೧೭೧ ಕ್ರಿ.ಶ. ೧೧೪೫.

೬. ಎಸ್‌ಐಐ XVII ಹಿರೇಕೆರೂರು ೧೭೧ ಕ್ರಿ.ಶ. ೧೧೪೫.

೭. ಆರ್.ಎನ್. ಗುರವ : 'ಉಗುರ ಮೂನೂರ್ವರು', ಕಭಾ ೯:೩, ಪು. ೩೫-೩೬.

ಕೊಯ್ಲಾಳುಗಳೆಂದು ಪೆಸರು ಎಂದು, ಉಗುರ ಮೂನೂರ್ವರಿಗೂ ಕೊಯ್ಲಾಳುಗಳಿಗೂ ವ್ಯತ್ಯಾಸವನ್ನು ಗುರವ ಅವರು ಗುರುತಿಸುತ್ತಾರೆ.[೧] ಕೊಯ್ಲಾಳುಗಳನ್ನು ಅರಸಿಕೆರೆಯ ಶಾಸನ ವಿಶೇಷವಾಗಿ ಹೊಗಳುತ್ತದೆ.[೨] ಎಲೆಗಳನ್ನು ಮಾರಾಟ ಮಾಡುವವರು ತಂಬುಲಿಗ ಸಾಸಿರ್ವರು.[೩] ಈ ಸಂಘಗಳ ಬಗ್ಗೆ ಹೆಚ್ಚಿನ ವಿಷಯಗಳು ಶಾಸನಗಳಿಂದ ತಿಳಿದು ಬರುವುದಿಲ್ಲ.

**ಸಾಲೆಸಾಸಿರ್ವರು:**

ಇವರನ್ನು ಶಾಸನಗಳು ಜೇಡರ ಗೊತ್ತಳಿ,[೪] ಎಂದೂ ಕರೆದಿದೆ. ರೇಶ್ಮೆ ಬಟ್ಟೆಗಳನ್ನು ನೇಯುವವರನ್ನು ಪಟ್ಟೆಗಾರರೆಂದು ಕರೆಯಲಾಗುತ್ತದೆ. ಶಾಸನವೊಂದರಲ್ಲಿ 'ಪಟ್ಟಗಾಜಿ ಕುಳಭೂಷಣ ಬರಗರಿಯ ಸೋಮಗೌಂಡನ' ಉಲ್ಲೇಖ ಬರುತ್ತದೆ.[೫] ಸಾಲೆ ಸಾಸಿರ್ವರು ಮಗ್ಗಗಳಲ್ಲಿ ಬಟ್ಟೆಗಳನ್ನು ನೇಯ್ದು ಸಂತೆ ಅಥವಾ ಪಟ್ಟಣಗಳಲ್ಲಿ ಮಾರುವ ವೃತ್ತಿಯವರು. ಮಗ್ಗಗಳಿಗೆ ಹಾಕುತ್ತಿದ್ದ ತೆರಿಗೆಯನ್ನು ಮಗ್ಗ ಸುಂಕ ಅಥವಾ ಮಗ್ಗದೆರೆಯೆಂದು ಶಾಸನಗಳಲ್ಲಿ ಕರೆದಿದೆ.

**ಎಂಟು ಹಿಟ್ಟು:**

ಅನೇಕ ಶಾಸನಗಳಲ್ಲಿ ಕಂಡುಬರುವ 'ಎಂಟು ಹಿಟ್ಟು' ಎಂಬ ಸಂಘ ಸಮಕಾಲೀನ ಸಮಾಜದಲ್ಲಿ ಗಮನಾರ್ಹ ಸ್ಥಾನವನ್ನು ಗಳಿಸಿಕೊಂಡದ್ದು ಕಂಡುಬರುತ್ತದೆ. ಅನೇಕ ದಾನ ಶಾಸನಗಳಲ್ಲಿ ಸಾಕ್ಷಿ ಸಾಕ್ಷಿಗಳಂತೆ ಕಂಡುಬರುವ ಇವರು ಭೂಮಿಯನ್ನು ಸರ್ವಮಾನ್ಯವಾಗಿಯೂ ಪಡೆದಿದ್ದಾರೆ. ನಾಗಾವಿಯ ಮಹಾಬಳೇಶ್ವರದೇವರ ಸೇವೆಗಾಗಿ ಧರ್ಮರಾಶಿ ಪಂಡಿತ ಬೋದೆರಸನಿಂದ ಕೊಂಡು ಸ್ಥಾನಾಚಾರ್ಯ ಸೋಮೇಶ್ವರ ದೇವರಿಗೆ ಕೊಡುವ ಸಂದರ್ಭದಲ್ಲಿ ಎಂಟು ಹಿಟ್ಟು ಮತ್ತು ಅರವತ್ತೊಕ್ಕಲು ಶಾಶ್ವತವಾಗಿ ಆ ದಾನವನ್ನು ಪಾಲಿಸುವರು ಎಂದು ಒಂದು ಶಾಸನ ಹೇಳುತ್ತದೆ.[೬] ಇದು ಊರಿನ ನಿರ್ದಿಷ್ಟ ಎಂಟು ವೃತ್ತಿಕಾರರು ಮಾಡಿಕೊಂಡ ಸಂಘವಾಗಿರುತ್ತದೆ. ಏಕೆಂದರೆ ಕೆಲವು ಶಾಸನಗಳಲ್ಲಿ ಹಿಟ್ಟಿನ ಅಕ್ಕಸಾಲೆ, ಹಿಟ್ಟುಕಾರ ಬಡಗಿ, ಹಿಟ್ಟಿನ ಕಮ್ಮಾರ ಎಂದು ಬರುವುದರಿಂದ ಈ ಕೆಲವು ಕುಶಲಕರ್ಮಿಗಳ ಸಂಘವೆಂದು ಭಾವಿಸಬಹುದು. 'ಕರ್ನಾಟಕದಲ್ಲಿ ಊರಿನ ಬಡಗಿ, ಕಮ್ಮಾರ ಮುಂತಾದ ವೃತ್ತಿವಂತರಿಗೆ 'ಆಯ' ಎಂದು ವರ್ಷಕ್ಕೆ ನಿಗದಿತ ಧಾನ್ಯವನ್ನು ಕೊಡುವ ಪದ್ಧತಿ ಇಂದಿಗೂ ಇದೆ. ಬಹುಶಃ ಆ ಕಾಲದಲ್ಲಿಯೂ ಈ ರೀತಿ ಕೂಲಿಯ ರೂಪದಲ್ಲಿ ಸಂಪಾದಿಸಿದ ಧಾನ್ಯವು ಕುಶಲ ಕೆಲಸಗಾರರ ಜೀವನಾಧಾರವಾದುದರಿಂದ ಧಾನ್ಯರೂಪದಲ್ಲಿ ಕೂಲಿಯನ್ನು ಸಂಪಾದಿಸುತ್ತಿದ್ದ ಕೆಲಸಗಾರರನ್ನು

---

೧. ಪೂರ್ವೋಕ್ತ ಲೇಖನ.

೨. ಸ್ಥಿರರೇ ಮೇರುಗೆ ಸಂನಿಭಗುರ್ಣಿಗಳೇ ಧರ್ಮಾತ್ಮಜಪ್ರಖ್ಯರೀ
ವರೆ ಮಿತ್ರಾತ್ಮಜ ಪಾಟಿಗಳ್ ಕಲಿಗಳೇ ದೇವೇಂದ್ರಪುತ್ರಂಗವ
ದೊರ್ರೆಗಳ್ ಶೌಚಿಗಳೇ ನದೀಜನೆ ಸಮಂ ಗುಣ್ಪುಳ್ಳರೇ ಸಾಗರಂ
ನಿರುತಂ ಪಾಸಟಿಯೆಂದೊಡೇವೊಗಳ್ವುದೋ ಕೊಯ್ಲಾಳ್ಗಳೊಂದಂದಮಂ।
(ರೈ) ಎಕ V ಅರಸಿಕೆರೆ ೭೯ ಕ್ರಿ.ಶ. ೧೧೮೩.

೩. ಎಸ್‌ಐಐ XV ಹುನಗುಂದ ೧೬೪ ಕ್ರಿ.ಶ. ೧೨೨೦.

೪. ಎಂ.ಎಂ. ಕಲಬುರ್ಗಿ : ಶಾಶಿಶ, ಪು. ೩೫.

೫. ಕಇ V ಹುಬ್ಬಳ್ಳಿ ೧೦೨ ಕ್ರಿ.ಶ. ೧೨ ಶ.ಮಾ.

೬. ಎಸ್‌ಐಐ XV ಗದಗು ೨೨೧ ಕ್ರಿ.ಶ. ೧೨೧೧.

'ಪಿಟ್ಟುಕಾಜಿ'ರೆಂದು ಕರೆದಿರಬಹುದೆಂದು ತೋರುತ್ತದೆ[೧] ಎಂದು ಎಸ್.ಜಿ. ಘಟಪಣದಿ ಅಭಿಪ್ರಾಯಪಡುತ್ತಾರೆ. ಸಂಸ್ಕೃತ ಶಾಸನಗಳಲ್ಲಿ 'ಅಷ್ಟಪಿಷ್ಟ'ವೆಂದು ಇದೇ ಅರ್ಥದಲ್ಲಿ ಬಳಕೆಯಾದಂತಿದೆ. ಜಿ.ಎಸ್. ದೀಕ್ಷಿತ್ ಅವರು ಕೆಲವು ಶಾಸನಗಳಲ್ಲಿ ಪಿಟ್ಟುಕಾರರೆಂದು ಬಳಕೆಯಾಗುವ ಇದು ವೃತ್ತಿ ಹೊಂದಿರುವ ಅಥವಾ ವತನದಾರನೆಂದು ಅರ್ಥವಾಗಬಹುದು ಎಂದು ಅಭಿಪ್ರಾಯಪಟ್ಟಿದ್ದಾರೆ.[೨] ಆರ್. ರಾಮರಾವ್ ಅವರು ಪಿಟ್ಟು ಎನ್ನುವುದು ಒಂದು ಜೀವಿಕೆ ಅಥವಾ ಕಸುಬು ಎಂದು ಸ್ಪಷ್ಟವಾಗುತ್ತದೆ ಎಂದಿದ್ದಾರೆ.[೩] ಬಡಗಿ, ಕಮ್ಮಾರ, ಅಕ್ಕಸಾಲಿಗ, ತಳವಾರ ಹಾಗೂ ಸೇನಬೋವರಿಗೆ ಸಂಬಂಧಿಸಿದಂತೆ ಪಿಟ್ಟು ಪದ ಬಳಕೆಯಾಗಿದೆ ಎಂಬ ಅಭಿಪ್ರಾಯವಿದೆ.[೪] ಆದರೆ ಉಳಿದ ವೃತ್ತಿಗಳು ಯಾವುವು ಎಂಬುದು ಸ್ಪಷ್ಟವಾಗುವುದಿಲ್ಲ.[೫] ಕೆಲವು ಶಾಸನಗಳಲ್ಲಿ 'ಹನ್ನೆರಡು ಪಿಟ್ಟು'ಗಳೆಂದು ಪ್ರಯೋಗವಾಗಿ ಅವರೂ ಸಾಕ್ಷಿಗಳಂತೆ, ಸಂರಕ್ಷಕರಂತೆ, ದಾನಿಗಳಂತೆ ಕಂಡುಬರುತ್ತಾರೆ.[೬] ಬಹುಶಃ ಗ್ರಾಮಗಳ ಅಗತ್ಯಕ್ಕೆ ತಕ್ಕಂತೆ ಈ ಸಂಖ್ಯೆ ಅಧಿಕವಾಗಿರಬಹುದು. ಅಲ್ಲಮನ ವಚನ ಒಂದರಲ್ಲಿ 'ಎಂಟು ಪಿಟ್ಟು' ಪದ ಪ್ರಯೋಗವಾಗಿದೆ.[೭] ಧಾನ್ಯ ಅಥವಾ ಹಿಟ್ಟಿನ ರೂಪದಲ್ಲಿ ದುಡಿಮೆಯ ಪ್ರತಿಫಲವನ್ನು ಪಡೆಯುತ್ತಿದ್ದ ಕುಶಲ ಕೆಲಸಗಾರರ ಗುಂಪನ್ನು ಎಂಟುಪಿಟ್ಟು ಸೂಚಿಸುವಂತೆ ಕಂಡುಬರುತ್ತದೆ.

### ಮಾಲೆಗಾರ ನಾಲ್ವತ್ತೊಕ್ಕಲು:

ತೋಟಗಳಲ್ಲಿ ಹೂವುಗಳನ್ನು ಬೆಳೆದು ಜನರಿಗೆ ಮತ್ತು ದೇವಾಲಯಗಳಿಗೆ ಸರಬರಾಜು ಮಾಡುವವರನ್ನು ಮಾಲೆಗಾರರೆಂದು, ಅವರು ಕಟ್ಟಿಕೊಂಡ ಸಂಘವನ್ನು ಮಾಲೆಗಾರ ನಾಲ್ವತ್ತೊಕ್ಕಲು ಎಂದು ಶಾಸನಗಳು ಕರೆದಿವೆ. ಆರಂಭದಲ್ಲಿ ನಿಯತ ಸಂಖ್ಯೆಯಲ್ಲಿದ್ದ (ನಾಲ್ವತ್ತು) ಸಂಖ್ಯೆ ಕ್ರಮೇಣ ಬೇರೆ ಬೇರೆಯಾಗಿದೆ. ದೇವಾಲಯಗಳಿಗೆ ಹೊಂದಿಕೊಂಡಂತೆ ಅಥವಾ ಸಮೀಪದಲ್ಲಿ ಹೂವಿನ ತೋಟಗಳು ಇರುತ್ತಿದ್ದವು. ನಿಯತವಾಗಿ ದೇವಾಲಯಕ್ಕೆ ಹೂವನ್ನು ನೀಡಲು ಹೂತೋಟಗಳ ದಾನವನ್ನು ಆ ಕಾಲದ ಶಾಸನಗಳಲ್ಲಿ ಕಾಣಬಹುದು. 'ಹೂತೋಟದ ಮಾಲೆಗಾಜಿಗೆ ಕಂಬ ೨೦' ಎಂದು ಒಂದು ಶಾಸನದಲ್ಲಿ ಬರುತ್ತದೆ.[೮] 'ಮಾಲಗಾಜಿರು ಹೆಡಿಗೆಗೆ ನಾಲ್ಕು ಕಾಯಿ ಒಂದು ಹಿಡಿಬಾಡು' ತೆರಿಗೆಯಾಗಿ ನೀಡಬೇಕು ಎಂದು ಒಂದು ಶಾಸನದಲ್ಲಿ ಬರುತ್ತದೆ.[೯] ಆ ಕಾಲದ ಶಾಸನಗಳನ್ನು ಗಮನಿಸಿದರೆ ಮಾಲೆಗಾರರು ಹೂವಿನೊಂದಿಗೆ ತರಕಾರಿಗಳನ್ನೂ ಬೆಳೆದು ಮಾರುತ್ತಿದ್ದುದು ಕಂಡುಬರುತ್ತದೆ.

### ತೋಟಿಗರೈನೂರ್ವರು:

ಇದು ತೋಟದಲ್ಲಿ ಹಣ್ಣು ತರಕಾರಿಗಳನ್ನು ಮುಖ್ಯವಾಗಿ ಬೆಳೆಯುವ ಮತ್ತು ಸಂತೆ ಮುಂತಾದೆಡೆ ಮಾರುವ ವೃತ್ತಿಯವರ ಸಂಘವನ್ನು ಸೂಚಿಸುತ್ತದೆ. 'ಮತ್ತಮಯ್ನೂರ್ವರು ಬಾಡುಕಾಯ ಮಾಱುವ ಜಲ್ಲೆಗೆರಡು ಸೂಡು ಪೇಱಿಂಗೆ

---

೧. ಎಸ್.ಜಿ. ಘಟಪಣದಿ : 'ಎಂಟು ಪಿಟ್ಟು' ಕಭಾ ೨-೨, ಪು. ೬೭-೭೭.

೨. G. S. Dixit ; Local Self Government in Medieval Karnataka ಪು. ೬೦.

೩. ಆರ್. ರಾಮರಾವ್ : 'ಶಾಸನಗಳ ಪರಿಭಾಷೆ', ಸಂಭಾವನೆ, ಪು. ೨೧೨.

೪. ಎಸ್.ಜಿ. ಘಟಪಣದಿ : ಪೂರ್ವೋಕ್ತ, ಪು. ೬೭-೭೭.

೫. ಡಾ.ಆರ್.ಎನ್. ಗುರವ ಅವರು 'ಗೌಡ ಶಾನುಭೋಗ ತಳವಾರ ಊರಿನ ಗ್ರಾಮಾಧಿಕಾರಿಗಳು ಮತ್ತು ಪಂಚಕಾರುಕದ ಬಡಗಿ, ಕಮ್ಮಾರ, ಅಕ್ಕಸಾಲಿಗ, ಮಡಿವಳ ಹಾಗೂ ಕಂಚುಗಾರ ಇವರ ಪ್ರಮುಖರು ಐವರು ಸೇರಿ ಎಂಟು ಜನರ ಸಮಿತಿ ಎಂದು ಭಾವಿಸಬೇಕು' ಎಂದಿದ್ದಾರೆ , 'ಅರುವತ್ತೊಕ್ಕಲು' ಕಭಾ ೮:೩ ಪು. ೭೭-೮೪.

೬. ಎಆರ್ಐಇ ೧೯೪೫-೪೬ ಕ್ರಿ.ಶ. ೧೨೪೫, ಪು. ೩೬.

೭. ಅಪ್ರವ-೩೯೮.

೮. (ರೈ) ಎಕ VII ಶಿಕಾರಿಪುರ ೧೮೫ ಕ್ರಿ.ಶ. ೧೧೫೭.

೯. ಎಸ್ಐಐ XX ಇಂಡಿ ೧೮೩ ಕ್ರಿ.ಶ. ೧೧೯೭.

ನಾಲ್ಕು ಕಾಯಂ ಕೊಟ್ಟರು'[1] ಎಂದು ಅವರು ಕೊಡಬೇಕಾದ್ದ ಸಂತೆಯಾಯವನ್ನು ಒಂದು ಶಾಸನ ಸೂಚಿಸುತ್ತದೆ. ಈ ವೃತ್ತಿಯವರು ಸಂಘ ರಚಿಸಿಕೊಂಡು ಆ ಕಾಲದಲ್ಲಿ ಕ್ರಿಯಾಶೀಲರಾಗಿದ್ದರು. ಮುನವಳ್ಳಿಯ ತೋಂಟಿಗರನ್ನು ವಿಶೇಷವಾಗಿ ಹೊಗಳಿರುವುದನ್ನು ಒಂದು ಶಾಸನದಲ್ಲಿ ಕಾಣಬಹುದು.

ತ್ಯಾಗದ ಪಂಪಿನ ನೆಲೆರ
ತ್ನಾಗರ ಮುನಿಪುರದ ತೋಂಟಿಗರ್ಪ್ಪೆಸರ್ವಡೆದ
ಬ್ಭೋಗದ ನಂನಿಯ ಛಲದು
ದ್ಯೋಗದ ಕಲಿತನದ ಬಲುಪಿನಾರ್ಪಿಂ ಕೂರ್ಪಿಂ[2]

**ಅರುವತ್ತೊಕ್ಕಲು:**

ಅನೇಕ ಶಾಸನಗಳಲ್ಲಿ ಉಲ್ಲೇಖಗೊಳ್ಳುವ ಅರುವತ್ತೊಕ್ಕಲು ಗ್ರಾಮಗಳಲ್ಲಿ ಒಕ್ಕಲುತನ ಮಾಡುವ ರೈತರ ಸಂಘವನ್ನು ಸೂಚಿಸುತ್ತದೆ. ಒಕ್ಕಲು ಸಾಮಾನ್ಯವಾಗಿ ರೈತರಿಗೆ ಮಾತ್ರ ಬಳಕೆಯಾಗುವುದಿಲ್ಲ. ಏಕೆಂದರೆ ಅಂಗಡಿಯೊಕ್ಕಲು, ಕಲ್ಕುಟಿಗರೊಕ್ಕಲು ಎಂದೂ ಬಳಕೆಯಾಗಿರುವುದರಿಂದ ಅದು ಅಲ್ಲಿ ವಾಸವಾಗಿರುವುದನ್ನು ಅಥವಾ ಕೌಟುಂಬಿಕ ನೆಲೆಯನ್ನು ಸೂಚಿಸುತ್ತದೆ. ಅರುವತ್ತೊಕ್ಕಲು ಕೇವಲ ಕೌಟುಂಬಿಕ ನೆಲೆಗಳಿಗಷ್ಟೆ ಬಳಕೆಯಾಗಿಲ್ಲ. ಎಷ್ಟೋ ರಾಜರ ಆಜ್ಞೆಗಳು ಅವರನ್ನು ಕುರಿತು ಸಂಬೋಧಿತವಾಗಿವೆ. ಅಲ್ಲದೆ ದಾನಕ್ಕಾಗಿ ಭೂಮಿಯನ್ನು ಪಡೆಯುವಾಗ ಈ ಸಂಘದ ಅನುಮತಿಯನ್ನು ಪಡೆಯುವುದು ಕಂಡುಬರುವುದರಿಂದ ಉಳಿದ ಸ್ಥಳೀಯ ಸಂಘಗಳಂತೆ ಇದೂ ಒಂದು ಸಂಘವಾಗಿದ್ದಿತೆಂದು ಭಾವಿಸಬೇಕಾಗುತ್ತದೆ.[3] ಈ ಸಂಘಕ್ಕೆ ಪ್ರಮುಖರು ಇರುತ್ತಿದ್ದರು. ಧಾರವಾಡ ತಾಲ್ಲೂಕಿನ ಸಿದ್ಧಾಪುರದ ಶಾಸನದಲ್ಲಿ 'ನಾಲುವರು ಪ್ರಭುಮುಖ್ಯ ಅಱುವತ್ತೊಕ್ಕಲುಂ' ಎಂದು ಬರುತ್ತದೆ.[4] ಅನೇಕ ಅನ್ಯ ಸಂಘಗಳ ಜೊತೆ ಸೇರಿ ದಾನ ಧರ್ಮಕಾರ್ಯಗಳಲ್ಲಿ ಅವರು ಭಾಗವಹಿಸುವುದನ್ನು ಕಾಣುತ್ತೇವೆ.[5]

ಪ್ರಸ್ತುತ ಅಧ್ಯಯನಾವಧಿಯ ಕಾಲದಲ್ಲಿ ಸಂಘಗಳ ರಚನೆ ಮತ್ತು ವ್ಯಾಪಕತೆ ವಿಶೇಷವಾಗಿ ಕಂಡುಬರುತ್ತದೆ. ವರ್ತಕ ಮತ್ತು ಇತರ ಸಂಘಗಳು ಸಾಮ್ರಾಜ್ಯಗಳಿಗಿಂತಲೂ ಶಾಶ್ವತ ಸ್ವರೂಪದವುಗಳಂತೆ ಕಂಡುಬರುತ್ತವೆ. ಈಗಾಗಲೇ ಗಮನಿಸಿದವುಗಳಲ್ಲದೆ ಜಗತಿಕೊತ್ತಳಿ,[6] ಕಲ್ಕುಟಿಗ ಗೊಟ್ಟಳಿ,[7] ಕಂಚುಗಾರ ಗೊಟ್ಟಳಿ,[8] ಹಂಜಮಾನ ಮುಂತಾದವು ಕಂಡುಬರುತ್ತವೆ.

ಜಗತಿಯ ಕೊತ್ತಳಿಯನ್ನು ಅರಸಿಕೆರೆಯ ಎರಡು ಶಾಸನಗಳು ತಿಳಿಯಪಡಿಸುತ್ತವೆ.

ಸರಣೆನೆ ಕಾವ ಸಜ್ಜನರ್ಗೆ ಸನುಮುದದಿಂ ಕರೆದೀವ ಯುದ್ಧಮೆಂ
ದಿರೆ ನಿಜಶೌರ್ಯ್ಯದಿಂ ಗೆಲುವ ಮಾರ್ಮ್ಮಲೆವಂದಿರನೆಯ್ದಿ ಕೊಲುವ ಭಾ
ಸುರತರಕೀರ್ತಿಮೂರ್ತ್ತಿಯುತರೀಸ್ವರಭಕ್ತರೆನುತ್ತ ಧಾತ್ರಿಯೊಳು
ಕರಮೆಸೆದಿರ್ದ್ದುದೀ ಜಗತಿಯಂ ಸಲೆ ಮೆಚ್ಚದರಾರ್ಧರಿತ್ರಿಯೊಳು॥

---

೧. ಕಇ VI ಸೌಂದತ್ತಿ ೭೩ ಕ್ರಿ.ಶ. ೧೨೨೮.

೨. ಕಇ I ಸೌಂದತ್ತಿ ೩೦ ಕ್ರಿ.ಶ. ೧೨೨೨.

೩. G. S. Dixit : Vokkalu- 'A Corporate body of Medieval Karnataka' ಜೆಕೆಯು IV, ಪು. ೫೮.

೪. ಎಇ XIX ಧಾರವಾಡ ಕ್ರಿ.ಶ. ೧೧೭೯.

೫. ಹೆಚ್ಚಿನ ಉದಾಹರಣೆಗಳಿಗೆ ನೋಡಿ: ಆರ್.ಎಸ್. ಗುರವ : 'ಅರುವತ್ತೊಕ್ಕಲು', ಕಭಾ ೮:೩, ಪು. ೭೭-೮೪.

೬. (ರೈ) ಎಕ V ಅರಸಿಕೆರೆ ೪೮ ಕ್ರಿ.ಶ. ೧೧೮೯.

೭. ಎಇ XII ಶೋರಾಪುರ ೩೭ಡಿ ಕ್ರಿ.ಶ. ೧೧೧೦.

೮. ಅದೇ.

ಅವರು ಕೆರೆ ಕಟ್ಟಿಸುವ, ದೇವಗೃಹಗಳನ್ನು ನಿರ್ಮಿಸುವ ಸಮಾಜೋಪಯೋಗಿ ಕಾರ್ಯಗಳಲ್ಲಿ ತೊಡಗಿದ್ದರೆಂದು ಶಾಸನದಿಂದ ತಿಳಿದುಬರುತ್ತದೆ. ಕಳಿಕಟ್ಟೆಯಲ್ಲಿ ಜಗತೇಶ್ವರ ದೇವಾಲಯವನ್ನು ಮಾಡಿಸಿದರು.[೧] ಹೊಯ್ಸಳ ಬಲ್ಲಾಳದೇವನ ಆಜ್ಞೆಯಂತೆ 'ಏಳೂವರೆಲಕ್ಕೆಯ ಜಗತಿಕೊತ್ತಳಿ'ಗಳು ಮಾರಬೋವ ಬಿಟ್ಟಬೋವ ಮತ್ತು ಕಳಿಕಟ್ಟೆಯ ಸಮಸ್ತ ಜಗತಿಗಳು ಅಲ್ಲದೆ ಅಱುವತ್ತು ಮಾನಸ ಎಕ್ಕಟಿಗರು[೨] ಸೇರಿ ದಾನ ಮಾಡಿದ ವಿಷಯವನ್ನು ಶಾಸನ ತಿಳಿಸುತ್ತದೆ. ಇದೇ ಕಳಿಕಟ್ಟೆಯ ಕ್ರಿ.ಶ. ೧೨೦೯ರ ಶಾಸನ ಊರಿನ ಪ್ರಜೆ ಗಾವುಂಡುಗಳ ಜೊತೆ ಜಗತಿಕೊತ್ತಳಿ ಮತ್ತು ಜೇಡಗೊತ್ತಳಿ ಸೇರಿ ಕೆರೆಯನ್ನು ಕಟ್ಟಿಸಿ ದಾನಗಳನ್ನು ಮಾಡಿದ ವಿಷಯವನ್ನು ತಿಳಿಸುತ್ತದೆ.[೩]

**ಹಂಜಮಾನ**: ಪಶ್ಚಿಮ ಕರಾವಳಿಯ ಉದ್ದಕ್ಕೂ ಅಲ್ಲಲ್ಲಿ ನೆಲೆಸಿದ್ದ ಅರೇಬಿಕ್ ಅಥವಾ ಪರ್ಶಿಯಾ ದೇಶದ ವ್ಯಾಪಾರಿ ಸಂಘವನ್ನು ಇದು ನಿರ್ದೇಶಿಸುವುದೆಂದು ಅನೇಕ ವಿದ್ವಾಂಸರು ಭಾವಿಸಿದ್ದಾರೆ.[೪] ಡಿ.ಸಿ. ಸರ್ಕಾರ್ ಅವರು ಬಸರೂರಿನ ಶಾಸನದ ಆಧಾರದ ಮೇಲೆ (ಕ್ರಿ.ಶ. ೧೪೦೬) ಅದರ ಪದಸ್ವರೂಪ ಅಂಜವಣಮ್ ಇರಬೇಕೆಂದೂ ಅದು ಐದು ವೃತ್ತಿಕಾರರನ್ನು ಹೇಳುವುದೆಂದು ಭಾವಿಸಿದರು. ಅವರು ಹೇಳುವಂತೆ ತಮಿಳಿನ ಪಂಚನಂವರು ಅಥವಾ ಪಂಚತ್ತಾರ್ ಎನ್ನುವುದು ತಮಿಳು ಶಾಸನಗಳಲ್ಲಿ ಬರುತ್ತದೆ.[೫] ಶಿಲಾಹಾರದ ಥಾಣದ ಕ್ರಿ.ಶ. ೧೦೧೮ರ ಶಾಸನದಲ್ಲಿ ಹನ್ಯಮಾನ ನಗರವೆಂದೂ ಇನ್ನೊಂದು ಶಿಲಾಹಾರದ ಕ್ರಿ.ಶ. ೧೦೩೬ರ ಭಂಡೂಪದ ಶಾಸನದಲ್ಲಿಯೂ ಈ ಪದ ಬರುತ್ತದೆ. ಕ್ರಿ.ಶ. ೧೦೯೪ರ ಶಾಸನದಲ್ಲಿ ಬೇರೆ ಬೇರೆ ದಾನಗಳಿಗೆ ಇವರು ಸಮ್ಮತಿ ಸೂಚಿಸಿರುವುದನ್ನು ಕಾಣಬಹುದು. ಹೊನ್ನಾವರ, ಬಸರೂರು, ಮಂಗಳೂರು -ಈ ಊರಿನ ಶಾಸನಗಳಲ್ಲಿಯೂ ಉಲ್ಲೇಖ ಪಡೆದಿದ್ದಾರೆ. ಕೈಕಿಣಿಯ ವೀರಗಲ್ಲು (ಕ್ರಿ.ಶ. ೧೪೨೭) ಹಂಜಮಾನವನ್ನು ಉಲ್ಲೇಖಿಸಿ ಅವರ ನಾಯಕ ಉಮ್ಮರ ಮಾರಕ್ಕಲ ಎನ್ನುತ್ತದೆ. ಪಲಿ ಮರ್ಯಾದೆ ಎಂದು ಬಸರೂರಿನ ಶಾಸನವೊಂದು ಹೇಳುತ್ತದೆ. ತುಳು, ಮಲೆಯಾಳಂಗಳಲ್ಲಿ ಪಲಿ ಎಂದರೆ 'ಮಸೀದಿ' ಎಂದು ಅರ್ಥ. ಈ ಕೆಲವು ಆಧಾರಗಳ ಮೇಲೆ ಮತ್ತು ಕ್ರಿ.ಶ. ೧೪೧೯ರ ಮಂಗಳೂರಿನ ಶಾಸನವೊಂದರಲ್ಲಿ ಜಮಾತುಪಲಿ ಎಂದು ಇರುವುದನ್ನು ಆಧರಿಸಿ ಹಂಜಮಾನ ಮುಸ್ಲಿಮ್ ವ್ಯಾಪಾರಿಗಳ ಸಂಘವಾಗಿದ್ದು ಅದು ಕೂಡ ಸ್ಥಳೀಯ ಬೇರೆ ಬೇರೆ ಸಂಸ್ಥೆಗಳಂತೆ ಉಲ್ಲಾಳ, ಮಂಗಳೂರು ಮುಂತಾದೆಡೆ ಕಾರ್ಯ ನಿರ್ವಹಿಸಿದೆ ಎಂದು ಸೂರ್ಯನಾಥ ಕಾಮತರು ತಿಳಿಸುತ್ತಾರೆ.[೬] ಹಂಜಮಾನದವರು ಹನ್ನೊಂದನೆಯ ಶತಮಾನದ ಶಾಸನಗಳಲ್ಲಿ ಕಾಣಿಸಿಕೊಂಡರೂ ಪ್ರಮುಖವಾಗಿ ಕಾರ್ಯಪ್ರವೃತ್ತರಾದುದು ೧೪ ಮತ್ತು ೧೫ನೆಯ ಶತಮಾನದಲ್ಲಿ ಎಂದು ಭಾವಿಸಬಹುದು.

**ವಿವಿಧ ವರ್ತಕರು:**

ಸುಸಂಘಟಿತರಾಗಿ ವ್ಯಾಪಾರ ಕಾರ್ಯವನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದ ವರ್ತಕರು ತಾವು ನಿರ್ವಹಿಸುತ್ತಿದ್ದ ವ್ಯಾಪಾರದ ವ್ಯಾಪ್ತಿ ಮತ್ತು ಪದಾರ್ಥಗಳಿಗೆ ಅನುಗುಣವಾಗಿ ಬೇರೆ ಬೇರೆ ಶ್ರೇಣಿಯಲ್ಲಿ ನಿಲ್ಲುತ್ತಾರೆ. ಅಂತಹ ವ್ಯಾಪಾರಿಗಳ ಕೆಲವು ವಿಧಗಳನ್ನು ಮುಂದೆ ಗುರುತಿಸಲಾಗಿದೆ. ದೇಶವಿದೇಶಗಳಿಗೆಲ್ಲಾ ವ್ಯಾಪಾರದ ವಹಿವಾಟನ್ನು ವ್ಯಾಪಿಸಿದ್ದ ಆ ಪ್ರಪಂಚ ಬಹು ವಿಸ್ತಾರವಾದುದು.

---

೧. (ರೈ) ಎಕ V ಅರಸಿಕೆರೆ ೪೮ ಕ್ರಿ.ಶ. ೧೧೮೯.

೨. ಇವರು ಒಂದು ಸೈನಿಕ ಪಡೆ ಇರಬೇಕು. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೯೬.

೩. (ರೈ) ಎಕ V ಅರಸಿಕೆರೆ ೪೦ ಕ್ರಿ.ಶ. ೧೨೦೯.

೪. K. V. Ramesh : A History of South Canara ಪು. ೨೫೪.
P.Gururaja Bhat : Studies in Tuluva History and Culture ಪು. ೨೧೮.

೫. ಎಆರ್ಎಸ್ಐಇ ೪೦೬ ೧೯೨೭-೨೮, ಪು. ೬೨.

೬. Suryanatha Kamath : 'Hanjamana'. The Journal of the Institute of Indian studies ಪು. ೫೯-೬೧.

### ವಡ್ಡ ವ್ಯವಹಾರಿ – ಮಹಾ ವಡ್ಡ ವ್ಯವಹಾರಿ:

ತಮ್ಮ ವರ್ತಕ ವ್ಯವಹಾರದ ವ್ಯಾಪ್ತಿಯಿಂದ ಪ್ರಾಚೀನ ಕಾಲದ ವ್ಯವಹಾರ ಜಗತ್ತಿನ ಬಹು ಪ್ರಮುಖ ಸ್ಥಾನವನ್ನು ವಡ್ಡ ವ್ಯವಹಾರಿಗಳು ಹೊಂದಿದ್ದರು. ವಡ್ಡ ಪದವು ವೃದ್ಧ ಪದರೂಪದಿಂದ ಬಂದಿದ್ದು, ಹಿರಿಯ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಕೆಲವು ಶಾಸನಗಳಲ್ಲಿ ಮಹಾವಡ್ಡ ವ್ಯವಹಾರಿಗಳೆಂದೂ ಇವರನ್ನು ಗುರುತಿಸಿದೆ.[೧] ವಡ್ಡ ವ್ಯವಹಾರಿಗಳಿಗೂ ಮಹಾ ವಡ್ಡವ್ಯವಹಾರಿಗಳಿಗೂ ಇದ್ದಿರಬಹುದಾದ ವ್ಯತ್ಯಾಸವನ್ನು ಶಾಸನ ಸಾಮಗ್ರಿಯಿಂದ ಪ್ರತ್ಯೇಕಿಸಲು ಸಾಧ್ಯವಿದ್ದಂತಿಲ್ಲ. ಮಹಾ ಎನ್ನುವುದು ಒಂದು ವಿಶೇಷಣವಾಗಿ ಅಥವಾ ಗೌರವವಾಚಿಯಾಗಿ ಬಳಕೆಯಾಗಿರಬಹುದು. ಕೆಲವು ಹೆಸರುಗಳ ಹಿಂದೆ 'ಸಾಳ್ವಿಘು ವಡ್ಡ ವ್ಯವಹಾರಿ' ಹೊಯ್ಸಳಗೊಯ್ಪು ಸೆಟ್ಟಿ[೨] ಎಂಬಂತಹ ವಿಶೇಷಣಗಳು ಬರುವುದನ್ನು ನೋಡಿದರೆ ಅವರು ದೊಡ್ಡ ಜವಾಬ್ದಾರಿಯುತ ಅಧಿಕಾರವನ್ನೂ ನಿರ್ವಹಿಸುತ್ತಿದ್ದರೆಂದು ಭಾವಿಸಬಹುದು. ಅವರು ವ್ಯವಹಾರ ಮತ್ತು ಅಧಿಕಾರ ಎರಡನ್ನೂ ನಿರ್ವಹಿಸುತ್ತಿದ್ದರೆಂಬುದಕ್ಕೆ ಶಾಸನಗಳಲ್ಲಿ ಆಧಾರಗಳು ದೊರೆಯುತ್ತವೆ.[೩]

### ಮುಮ್ಮುರಿದಂಡ:

ಪ್ರಾಚೀನ ಕರ್ನಾಟಕದ ಪ್ರಮುಖ ವರ್ತಕರ ಪಂಗಡಗಳಲ್ಲಿ ಇದು ಒಂದು. ಮುಮ್ಮುರಿ ಶಬ್ದಕ್ಕೆ ಕೇಶಿರಾಜನು ಕಾಯಿಸಿದ ಮರಳು ಎಂದು ಅರ್ಥಕೊಡುತ್ತಾನೆ.[೪] ಆದರೆ ಈ ವರ್ತಕರನ್ನು ವಿವರಿಸಲು ಅದು ಅನುಕೂಲಕರವಾಗಿಲ್ಲ. ಬಿ.ಆರ್. ಹಿರೇಮಠ ಅವರು ಈ ಪದಕ್ಕೆ ಮೂರು ಮುರಿಗೆ ದಂಡ = ಕೋಲು ಎಂದು ವಿವರಿಸಿ, ಈ ವರ್ತಕರ ಪೂರ್ವಜರಲ್ಲಿ ಯಾರೋ ಒಬ್ಬರು ಇಂಥ ದಂಡ (ಕೋಲನ್ನು) ಉಪಯೋಗಿಸಿರಬೇಕು ಇಲ್ಲವೆ ಗೌರವ ಚಿಹ್ನೆಯಾಗಿ, ಈ ಸಮಾಜ ಸ್ವೀಕರಿಸಿರಬೇಕು ಎಂದು ಹೇಳಿ ಇದಕ್ಕೆ ಪೋಷಕವಾಗಿ ಅಯ್ಯಾವಳೆ ಐನೂರ್ವರನ್ನು ಶಾಸನಗಳು 'ಭಲ್ಲುಂಕಿ ದಂಡ ಹಸ್ತರ್' ಎಂದು ಕರೆದಿರುವುದನ್ನು ನೆನಪಿಸುತ್ತಾರೆ.[೫] ಕುರುಗೋಡಿನ ಶಾಸನ ಮುಮ್ಮುರಿದಂಡಗಳನ್ನು ರಗಳೆಯ ಛಂದಸ್ಸಿನಲ್ಲಿ ಕೀರ್ತಿಸಿರುವುದು ಕಂಡುಬರುತ್ತದೆ.

> ಸ್ವಸ್ತಿ ಗವಜೀಶಪದಪದ್ಮ ಷಟ್ಚರಣರುಂ
> ವಿಸ್ತೀರ್ಣ ವಸ್ತು ಗುಣ ವಿನಿಹಿತಾ ಚರಣರುಂ
> ಪಂಚ ಶತ ವೀರಶಾಸನ ಗುಣೋದ್ಧರಣರುಂ
> ಸಂಚಿತ ಸಮಸ್ತ ಧರ್ಮೈಕ ನಿಸ್ತರಣರುಂ
> ಬ್ಯವಹಾರ ನಯವಿನಯ ವಿಜ್ಞಾನ ವಿದ್ಯರುಂ
> ನವರತ್ನವಾಹನ ಪರೀಕ್ಷಾನವದ್ಯರುಂ
> ಶರಣೆಂದು ಕಂಡವರಂ ಕರುಣದಿಂ ಕಾವರುಂ
> ಬಿರುದಿಂಗೆ ಬೀಗುವರ ಹರಣವಂ ಸೋವರುಂ[೬]

---

೧. (ರೈ) ಎಕ V ಬೇಲೂರು ೮೯ ಕ್ರಿ.ಶ. ೧೨೮೦.

೨. (ರೈ) ಎಕ VII ಶಿವಮೊಗ್ಗ ೪೦ ಕ್ರಿ.ಶ. ೧೧೭೨.

೩. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೫೧.

೪. ಈ ಅರ್ಥದ ಸಹಾಯದಿಂದ ಮುಮ್ಮುರಿ ದಂಡವನ್ನು ಹೇಗೆ ವಿವರಿಸುವುದೋ ಗೊತ್ತಿಲ್ಲ ಎಂದು ಚಿದಾನಂದಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ. ಪೂರ್ವೋಕ್ತ, ಪು. ३೮೦.

೫. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೪೨.

೬. ಎಸ್ಐಐ IX(i) ಬಳ್ಳಾರಿ ೨೯೬ ಕ್ರಿ.ಶ. ೧೧೭೬.

ಈ ಶಾಸನ ಮುಮ್ಮುರಿದಂಡಗಳ ಪರೋಪಕಾರ, ಪ್ರಾವೀಣ್ಯ, ಪರಾಕ್ರಮ ಮುಂತಾದ ಸದ್ಗುಣಗಳನ್ನು ತಿಳಿಸುತ್ತದೆ. ಇದೇ ಶಾಸನ ಮುಂದೆ ಹಾವಿನಹಾಳ ಕಲ್ಲಿಸೆಟ್ಟಿಯ ಗುಣೋನ್ನತಿಯನ್ನು ನಿರೂಪಿಸುತ್ತದೆ. ಮುಮ್ಮುರಿದಂಡದವರು ನಾಡಿನ ಅನೇಕ ಪ್ರದೇಶಗಳಲ್ಲಿ ತಮ್ಮ ವ್ಯವಹಾರ ಪ್ರಪಂಚವನ್ನು ಹರಡಿಕೊಂಡಿದ್ದರೆಂದು ತಿಳಿದುಬರುತ್ತದೆ.

**ಸೆಟ್ಟಿಗುತ್ತ:**

ಪ್ರಾಚೀನ ಕರ್ನಾಟಕದ ವರ್ತಕ ಪಂಗಡಗಳಲ್ಲಿ ಇದು ಒಂದಾಗಿದೆ. ಸೆಟ್ಟಿಗುತ್ತ ಪದದ ನಿಷ್ಪತ್ತಿ ತೊಡಕಿನದಾಗಿದೆ. ಚಿದಾನಂದಮೂರ್ತಿಯವರು ಸೆಟ್ಟಿ ಎಂಬುದು ಸಂಸ್ಕೃತದ ಶ್ರೇಷ್ಠಿಯ ತದ್ಭವವಾಗಿರುವುದನ್ನು ಹೇಳಿ, ಉತ್ತರ ಪದ ಕುತ್ತ = ಗುಂಪು ಎಂಬುದಾಗಿರಬಹುದೆಂದು (ಅಥವಾ ಸಂಸ್ಕೃತದ ಗುಪ್ತ? ಎಂದು) ಸೂಚಿಸುತ್ತಾರೆ.[1] ಚನ್ನಕ್ಕ ಎಲಿಗಾರ ಅವರು ಸೆಟ್ಟಿಗಳ ಕುತ್ತ...ವೇ ಸೆಟ್ಟಿಗುತ್ತವಿರಬಹುದೆಂದು ಊಹಿಸಿದ್ದಾರೆ.[2] ಡಾ. ಬಿ.ಆರ್. ಹಿರೇಮಠ ಅವರು ಉತ್ತರ ಪದವನ್ನು ಗುತ್ತ ಕನ್ನಡ ನಾಮಪದವೆಂದು ಹೇಳಿ ಉನ್ನತವಾದ, ಶ್ರೇಷ್ಠವಾದ ಎಂಬ ಅರ್ಥ ಗ್ರಹಿಸಿ ಸೆಟ್ಟಿಗುತ್ತ ಎಂದರೆ ಹಿರಿಯ ವರ್ತಕ ಅಥವಾ ವರ್ತಕರಲ್ಲಿ ಉನ್ನತ ಶ್ರೇಣಿಯವನೆಂದು ಅರ್ಥೈಸುತ್ತಾರೆ.[3] ಊಹಾತ್ಮಕವಾದ್ದರಿಂದ ಈ ಅರ್ಥವನ್ನೂ ಒಪ್ಪುವಂತಿಲ್ಲ. ಅವರ ವ್ಯಾಪಾರ ಸ್ವರೂಪವನ್ನು ತಿಳಿಯಲು ಶಾಸನಗಳಿಂದ ಹೆಚ್ಚಿನ ಮಾಹಿತಿ ಕಂಡುಬರುತ್ತಿಲ್ಲ. ಬೇತೂರಿನ ಶಾಸನವೊಂದು ಸೆಟ್ಟಿಗುತ್ತರನ್ನು ಕುರಿತು ಹೇಳುತ್ತ-

> ಕೊಂಡೆಯರಂ ದುರ್ಜನರಂ
> ಗಂಡಿಗರಂ ತೆಗೆದು ತೆಗೆದು ಸಿಕ್ಷಿಪರಂ ತಾಂ
> ಮಂಡಳದ ಸೆಟ್ಟಿಗುತ್ತ
> ರ್ಮಂಡಿವಿಕ್ರಮಿಗಳೆಸೆವರವನೀತಳದೊಳ್[4]

ಎನ್ನುತ್ತದೆ. ಇದು ಅವರ ಸ್ವಭಾವವನ್ನು ಕುರಿತು ಹೇಳುತ್ತದೆ. ಸೆಟ್ಟಿಗುತ್ತರನ್ನು ಕೆಲವು ಶಾಸನಗಳು ತಳದ[5] ಎಂಬ ವಿಶೇಷಣಗಳಿಂದ ಹೇಳುವುದರಿಂದ ಅವರು ಸ್ಥಳೀಯರೆಂದು ಭಾವಿಸಲು ಅವಕಾಶವಿದೆ.

**ನಕರ:**

ಅವರು ಒಂದು ಊರಿನಲ್ಲಿ ಅಥವಾ ಪಟ್ಟಣದಲ್ಲಿ ನೆಲೆ ನಿಂತು ವ್ಯಾಪಾರ ಮಾಡುತ್ತಿದ್ದ ವರ್ಗ. ಅವರನ್ನು ಕುರಿತು ದೊರೆಯುವ 'ಪಟ್ಟಣದ ನಖರರು'[6] ಎಂಬಂತಹ ಉಲ್ಲೇಖಗಳಿಂದ ಅದು ಖಚಿತವಾಗುತ್ತದೆ. ಅವರು ವ್ಯವಹರಿಸುವ ವಸ್ತುಗಳ ಮೇಲೆ ಅವರನ್ನು ಮಾಣಿಕ್ಯನಕರ,[7] ಗಂಧವಣದಂಗಡಿಯ ನಕರ[8] ಎಂದು ಮುಂತಾಗಿ ಗುರುತಿಸಿರುವುದುಂಟು.

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೩೮೦.

೨. ಚನ್ನಕ್ಕ ಎಲಿಗಾರ : 'ಅಯ್ಯಾವೊಳೆ ಐನೂರ್ವರು' ಕಭಾ ೬:೩, ಪು. ೧೧೮.

೩. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೩೦.

೪. (ರೈ) ಎಕ XI ದಾವಣಗೆರೆ ೧೩ ಕ್ರಿ.ಶ. ೧೨೭೧.

೫. ಎಸ್ಐಐ XV ನವಲಗುಂದ ೪೯ ಕ್ರಿ.ಶ. ೧೧೫೪.

೬. ಎಸ್ಐಐ IX(i) ಕುರುಗೋಡು ೧೯೭ ಕ್ರಿ.ಶ. ೧೧೭೭. ಈಗಲೂ ನಗರ್ತರು ಮತ್ತು ನಗರ್ತಪೇಟೆಯನ್ನು ಬೆಂಗಳೂರಿನಲ್ಲಿ ಗುರುತಿಸಬಹುದು.

೭. (ಮೈ) ಎಕ II ಶ್ರವಣಬೆಳಗೊಳ ೪೭೯ ಕ್ರಿ.ಶ. ೧೨೯೬; ಅದೇ ೩೪೩ ಕ್ರಿ.ಶ. ೧೩ ಶ.ಮಾ.

೮. ಎಸ್ಐಐ XV ಗದಗು ೧೩೫ ಕ್ರಿ.ಶ. ೧೧೭೯.

ನಕರರು ಉನ್ನತ ವರ್ಗದ ಸಂಪ್ರದಾಯದವರಾಗಿ ನಡೆದುಕೊಂಡಿದ್ದರೂ ಒಂದಿಬ್ಬರು ಶ್ರವಣಬೆಳಗೊಳದ ಕೆಲವು ಸ್ಥಾನಾಚಾರ್ಯರಿಗೆ ದುರ್ಬುದ್ಧಿ ಬೋಧಿಸಿ ಅಪವಿತ್ರ ಕಾರ್ಯಗಳಲ್ಲಿ ತೊಡಗಿಸಿದ್ದರಿಂದ ಅವರಿಗೆ ಸ್ಥಾನಾಚಾರ್ಯರ ಹಾಗೂ ಅರಮನೆಯನ್ನು ಪ್ರವೇಶಿಸದಂತೆ ಪ್ರತಿಬಂಧನ ಮಾಡಲಾಗಿದೆ.[೧] ಇದು ನಕರ ಸಮೂಹಕ್ಕೆ ಇದ್ದ ದೋಷದ ಬೊಟ್ಟಿನಂತಿದೆ.

**ಬಣಂಜಿಗರು:**

ಈ ವರ್ಗದ ವರ್ತಕರನ್ನು ಸೂಚಿಸುವ ಸಮೀಪದ ಪದಗಳಾದ ತಳದ ಬಣಂಜಿಗರು,[೨] ಬೀರವಣಿಗ[೩] ಎಂಬಂತಹ ಪದಗಳು ಶಾಸನಗಳಲ್ಲಿ ಬಳಕೆಯಾಗಿವೆ. ವೀರವಣಿಗ ಎನ್ನುವುದರ ಮೂಲರೂಪ ವೀರವಣಿಕ. ಬಹುಶಃ ವೀರ ಸ್ವಭಾವದ ಇವರು ಬಣಜಿಗರಲ್ಲೇ ಒಂದು ಪಂಗಡವಿರಬಹುದು. ಬಣಂಜಿಗರು ಊರಿಂದ ಊರಿಗೆ ಸರಕುಗಳನ್ನು ತೆಗೆದುಕೊಂಡು ಹೋಗಿ ಮಾರುತ್ತಿದ್ದ ವೃತ್ತಿಯವರು. ಸ್ಥಳದಿಂದ ಸ್ಥಳಕ್ಕೆ ಪ್ರಯಾಣಿಸುತ್ತಿದ್ದ ಇವರು, ಕಳ್ಳರ ಹಾವಳಿಯಿಂದ ರಕ್ಷಿಸಿಕೊಳ್ಳಲು ರಕ್ಷಣಾ ಪಡೆಯನ್ನು ನೇಮಿಸಿಕೊಂಡಿದ್ದರೇ ಎಂಬ ಪ್ರಶ್ನೆ ಎದುರಾಗುತ್ತದೆ. ರಕ್ಷಣೆಗಾಗಿ ಬಿಲ್ಲ ಮೂನೂರ್ವರನ್ನು ನೇಮಿಸಿಕೊಳ್ಳುತ್ತಿದ್ದರೆಂದು ಬಿ.ಆರ್. ಹಿರೇಮಠ ಅವರು ಅಭಿಪ್ರಾಯಪಡುತ್ತಾರೆ.[೪] ನಯಸೇನನ ಧರ್ಮಾಮೃತದಲ್ಲಿ ವಸುಭೂತಿಯು ವ್ಯಾಪಾರಿಯ ಜೊತೆ ಪ್ರಯಾಣಿಸುವಾಗ ನಂದ್ಯಾವಲಿಯೆಂಬ ಕಾಡಿನ ಮಧ್ಯೆ ಬೀಡು ಬಿಟ್ಟಿದ್ದಾಗ ಬೇಡರ ಆಕ್ರಮಣವಾದಾಗ ಸೆಟ್ಟಿ ತನ್ನ ಪಡೆಯೊಡನೆ ಹೋರಾಡಿದ ಸನ್ನಿವೇಶ ಬರುತ್ತದೆ.[೫] ದೊಡ್ಡ ದೊಡ್ಡ ವ್ಯಾಪಾರಿಗಳು ಅಗತ್ಯಕ್ಕೆ ತಕ್ಕ ರಕ್ಷಣಾ ಸೇನೆಯನ್ನು ನೇಮಿಸಿಕೊಂಡಿದ್ದರು. ಆದರೆ ಸಣ್ಣ ಪುಟ್ಟ ವ್ಯಾಪಾರಿಗಳಿಗೆ ಆಗಾಗ ಕಳ್ಳಕಾಕರಿಂದ ತೊಂದರೆಯಾಗುತ್ತಿತ್ತೆಂದು ತೋರುತ್ತದೆ. ತಮ್ಮ ಪ್ರವಾಸ ಕಾಲದಲ್ಲಿ ತಮಗೆ ಅನೇಕ ರೀತಿಯಲ್ಲಿ ನೆರವಿಗೆ ಬರುವ ನಂಬಿಕಸ್ಥರಾದ ವೀರರನ್ನು ನಿಯಮಿಸಿಕೊಳ್ಳುತ್ತಿದ್ದರೆಂದು ಹೇಳಬಹುದು.[೬]

**ಗವರೆ:**

ಎತ್ತು, ಕತ್ತೆ ಮುಂತಾದ ಪ್ರಾಣಿಗಳ ಮೇಲೆ ಗವಜಿ[೭](=ಬುಟ್ಟಿ)ಗಳಲ್ಲಿ ಸರಕುಗಳನ್ನು ಹೇರಿಕೊಂಡು ಊರಿಂದೂರಿಗೆ ಪ್ರಯಾಣಿಸುತ್ತಿದ್ದ ವರ್ತಕರಿವರು. ಬಿ.ಆರ್. ಹಿರೇಮಠ ಅವರು 'ವೀಳ್ಯದೆಲೆ ಹೇರಿಕೊಂಡು ಊರಿಂದೂರಿಗೆ ಅಲೆಯುತ್ತ ವ್ಯಾಪಾರ ಮಾಡುವ ವರ್ತಕ ಪ್ರಕಾರವಿದು'[೮]ಎಂದು ಅಭಿಪ್ರಾಯಪಡುತ್ತಾರೆ. ಆದರೆ ಒಂದು ಶಾಸನ ಗವಜಿಯರ, ಗಾತ್ರಿಗರ, ಬೀರರ, ಬೀರವಣಿಗರ ಜೊತೆ ತಂಬುಲಿಗರನ್ನೂ ಹೆಸರಿಸುತ್ತದೆ.[೯] ಆದ್ದರಿಂದ ಗವರೆಗಳು ಕೇವಲ ಎಲೆಯ ವ್ಯಾಪಾರವನ್ನು ಮಾತ್ರ ಮಾಡುತ್ತಿದ್ದರು ಎಂದು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ.

---

೧. (ಮೈ) ಎಕ II ಶ್ರವಣಬೆಳಗೊಳ ೪೫೫ ಕ್ರಿ.ಶ. ೧೩ ಶ.ಮಾ.

೨. ಎಸ್‌ಐಐ XX ಸಿಂದಗಿ ೧೧೧ ಕ್ರಿ.ಶ. ೧೧೪೦.

೩. (ರೈ) ಎಕ VIII ಸೊರಬ ೨೬೮ ಕ್ರಿ.ಶ. ೧೨೪೫.

೪. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೧೬೪. 'ಬಿಲ್ಲಮೂನೂರ್ವರು ಶಾಶ್ವತ ವರ್ತಕ ಪಡೆಯಲ್ಲ, ತಾತ್ಕಾಲಿಕವಾಗಿ ರಕ್ಷಣಾ ಪಡೆಯಾಗಿ ಕಾರ್ಯ ನಿರ್ವಹಿಸುತ್ತಿದ್ದರು' ಎನ್ನುತ್ತಾರೆ.

೫. ಧರ್ಮಾಮೃತಂ ೧-೨೦೬, ೨೦೭, ೨೦೯, ಪು. ೪೩.

೬. ಆರ್. ಶೇಷಶಾಸ್ತ್ರಿ : ಕರ್ನಾಟಕದ ವೀರಗಲ್ಲುಗಳು, ಪು. ೧೧೮.

೭. 'ಗವರೇಶ್ವರ' ಎಂಬ ಅಂಕಿತ ಬಳಸಿರುವ ಮೇದರ ಕೇತಯ್ಯ ಎಂಬ ಬುಟ್ಟಿ ಹೆಣೆಯುವ ಕಾಯಕದ ವಚನಕಾರನಿದ್ದಾನೆ.

೮. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೫೯.

೯. ಎಸ್‌ಐಐ IX(i) ಬಳ್ಳಾರಿ ೧೪೮ ಕ್ರಿ.ಶ. ೧೦೯೯.

**ಗಾತ್ರಿಗ:**

ಗಾತ್ರಿಗ ಎನ್ನುವುದು ಹೆಗಲ ಮೇಲೆ ಅಥವಾ ತಲೆಯ ಮೇಲೆ ವಸ್ತುಗಳನ್ನು ಹೊತ್ತು ಮಾರುವವನನ್ನು ಸೂಚಿಸುವಂತೆ ಕಾಣುತ್ತದೆ (ಸಂ.ಗಾತ್ರ=ದೇಹ)[೧] ಎಂದು ಚಿದಾನಂದಮೂರ್ತಿಯವರು ತಿಳಿಸಿದ್ದಾರೆ. ಬಿ.ಆರ್. ಹಿರೇಮಠ ಅವರು (ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ನಿಘಂಟನ್ನು ಆಧರಿಸಿ) ಒಂದು ಸಾವಿರ ವೀಳ್ಯದೆಲೆಗಳ ಕಟ್ಟುಳ್ಳುದು ಗಾತ್ರ; ಇಂಥ ಕಟ್ಟುಗಳನ್ನು ಹೊತ್ತು ಇಲ್ಲವೇ ಪ್ರಾಣಿಗಳ ಮೇಲೆ ಹೇರಿಕೊಂಡು ವ್ಯಾಪಾರ ಮಾಡುವವರು ಗಾತ್ರಿಗರು ಎಂದು ಅರ್ಥೈಸಿದ್ದಾರೆ.[೨] ಒಂದು ಶಾಸನ ಗಾತ್ರ ಮತ್ತು ಅರ್ಧಗಾತ್ರದ ವಿವರಣೆಯನ್ನು ಸ್ಪಷ್ಟವಾಗಿ ನೀಡುತ್ತದೆ. 'ಕೊಟ್ಟ ಸಾಸನಮೆ... ಡೆಲೆಯ ಗಾತ್ರಕ್ಕೆ ಸಾಸಿರೆಲೆಯರ್ದ್ದ ಗಾತ್ರಕ್ಕಯ್ನೂಱೆಲೆ'[೩] ಎಂದು ಗಾತ್ರಕ್ಕೆ ಸಾವಿರ ಎಲೆಗಳೆಂದು, ಅರ್ಧಗಾತ್ರಕ್ಕೆ ಐದುನೂರು ಎಲೆಗಳೆಂದು ಸ್ಪಷ್ಟವಾಗಿ ಹೇಳುತ್ತದೆ. ಆದ್ದರಿಂದ ಎಲೆಯ ಗಾತ್ರಗಳನ್ನು ತಂದು ಮಾರುವ ವರ್ತಕರನ್ನು ಗಾತ್ರಿಗ ಪದ ಸೂಚಿಸುತ್ತದೆ.

ಕನ್ನಡ ನಾಡಿನಲ್ಲಿ ಇದುವರೆಗೂ ಗಮನಿಸಿದ ವರ್ತಕರಲ್ಲದೆ ಇನ್ನೂ ಅನೇಕ ಬಗೆಯ ವರ್ತಕರು ಇದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಸೆಟ್ಟಿಕಾರರು,[೪] ಹಲರು, ಎಳಮೆ, ಸಾಲಿಕೆ ಬಲ್ಲಾಳು, ನಾನಾದೇಶಿ, ಉಭಯ ನಾನಾದೇಶಿ ಮುಂತಾದ ವರ್ತಕರು ಕಂಡುಬರುತ್ತಾರೆ. ಒಟ್ಟಾಗಿ ನೋಡಿದರೆ ಇಡೀ ವ್ಯಾಪಾರ ಪ್ರಪಂಚ ಪುರುಷ ಪ್ರಧಾನವಾಗಿರುವುದು ಕಂಡುಬರುತ್ತದೆ. 'ಬಣಂಜು ಸಮಯವನ್ನು ಮೆರೆದ ವೆಣ್ಣಲೆ ಸೆಟ್ಟಿಕವ್ವೆ'ಯಂತಹ ಕೆಲವು ಉದಾಹರಣೆಗಳನ್ನು ಬಿಟ್ಟರೆ ಸ್ತ್ರೀಯರ ಪ್ರಾತಿನಿಧ್ಯ ಅತ್ಯಲ್ಪವೆಂದೇ ಹೇಳಬಹುದು. ಹೆಂಗಸರು ಯಾವಾಗಲೂ ಕೆರಸಿ, ಕಾವಲಿ, ತಂಬುಗೆ, ಹುಟ್ಟು, ಸಟ್ಟುಗ ಇತ್ಯಾದಿಗಳ ಬಗ್ಗೆ ಗಮನಹರಿಸಿ ಕೋಟಲೆಗೊಂಡರೆ ವೆಣ್ಣಲೆ ಸೆಟ್ಟಿಕವ್ವೆ ದೇವಾಲಯವನ್ನು ಕಟ್ಟಿಸಿ ಶಿವನನ್ನು ಪ್ರತಿಷ್ಠೆಗೊಳಿಸಿದಳೆಂದು ಶಾಸನ ಹೇಳುತ್ತದೆ. ಅವಳು ಮೆರೆದ ವೀರಬಣಂಜುಧರ್ಮ ಶಾಸನದಲ್ಲಿ ಹೀಗೆ ವ್ಯಕ್ತವಾಗಿದೆ.

ಖಳರಳವಂ ಕಳಲ್ಚಿ ನೆಱೆ ಕಳ್ಳರ ಕೊಳ್ಳಿಯ ಬಾಧೆಯಂ ಬಿಗ
ಳ್ದಳಱೆ ತೆರಳ್ಚಿ ತೂಳ್ದಿ ನೆರೆ ಮನ್ನೆಯರಂನ(ನೆ) ಯವಂ ನಿರಾಕುಳಂ
ಕಳೆದು ಬಣಂಜು ಧರ್ಮ್ಮವನೆ ಪಾಳಿಸಿ ಭೀತರನೆಯ್ದೆ ಕಾದು ನಿ
ರ್ಮ್ಮಳತರ ಕೀರ್ತ್ತಿಯಂ ಪಡೆದಳಾರ್ಪ್ಪಡಿ ವೆಂಣ್ನಲ ಸೆಟ್ಟಿಕವ್ವೆಯೊಳ್

ಧರೆಗೆಸೆವೀ ಬಣಂಜು ಸಮೆಯ ಪ್ರತಿಪಾಳನವರ್ತ್ತಿಯಿಂದೆ ದು
ರ್ಧರತರಮಪ್ಪ ಚಂಡಿಕೆಯ ವೆಂಣ್ನಲೆ ನಾರಿಯೆನಿಪ್ಪ ನಾಮಮಂ
ಧರಿಯ್ಸಿ ಕೋಣವತ್ತಿರಗಧಿಪೋತ್ತಮೆಯಾಗಿಯೆ ವೈರಿ ಸಂ
ಹರಣಮನೆಯ್ದೆ ಮಾಡಿದಳೆನುತ್ತಮೆ ಬಂಣ್ನಿಸುಗುಂ ಜಗಜ್ಜನಂ[೫]

'ಪೃಥ್ವಿಸೆಟ್ಟಿ'ಯೆಂದು ಕೀರ್ತಿವಂತಳಾದ ಅವಳ ವ್ಯಕ್ತಿತ್ವ ಅಸಾಧಾರಣವಾದುದಾಗಿದೆ.

ಬಿಜಾಪುರದ ಒಂದು ಶಾಸನದಲ್ಲಿ ಸಂತೆಯಲ್ಲಿ ಎಣ್ಣೆಯನ್ನು ಮಾರುವ ಕುಂಚಡಿಗಿತ್ತಿಯರ ವಿಷಯ ಉಕ್ತವಾಗಿದೆ.[೬] ಇಂಥ ಕೆಲವೇ ಕೆಲವು ಉದಾಹರಣೆಗಳು ಮಾತ್ರ ದೊರೆಯುತ್ತವೆ.

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೩೮೦.

೨. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೬೧.

೩. ಸೌ ಇಇ XI-ii; ೧೪೮; ೧೦೯೯.

೪. ಪಿ. ಗುರುರಾಜ ಭಟ್ ಅವರು ತುಳುನಾಡಿನ ವ್ಯಾಪಾರ ಸೆಟ್ಟಿಕಾರರ ಕೈಯಲ್ಲಿದ್ದುದನ್ನು ಗುರುತಿಸಿದ್ದಾರೆ. ನೋಡಿ, ಪೂರ್ವೋಕ್ತ ಗ್ರಂಥ, ಪು. ೨೬೧-೬೨.

೫. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೬. ಎಸ್ಐಐ XVIII ಬಿಜಾಪುರ ೨೬೦ ಕ್ರಿ.ಶ. ೧೨೮೩.

**ವ್ಯಾಪಾರದ ಸ್ಥಳಗಳು:**

ಪ್ರಾಚೀನ ಕರ್ನಾಟಕದಲ್ಲಿ ವ್ಯಾಪಾರದ ಸ್ಥಳಗಳನ್ನು ಸಂತೆ, ಅಂಗಡಿ, ಪೇಟೆ, ಪಟ್ಟಣ ಎಂದು ಮುಖ್ಯವಾಗಿ ಗುರುತಿಸ ಬಹುದು.

**ಸಂತೆ:**

ಪ್ರಾಚೀನ ಕರ್ನಾಟಕದಲ್ಲಿ ಸಂತೆಗಳು ಬಹುಮುಖ್ಯ ವ್ಯಾಪಾರ ಕೇಂದ್ರಗಳಾಗಿ ಕಾರ್ಯನಿರ್ವಹಿಸಿರುವುದನ್ನು ಕಾಣುತ್ತೇವೆ. ಸಂತೆ ಈಗಿನಂತೆಯೇ ಒಂದು ಗೊತ್ತಾದ ಸ್ಥಳದಲ್ಲಿ, ಗೊತ್ತಾದ ದಿನ ಸೇರುತ್ತಿತ್ತು. ಮಾರುವವರು, ಕೊಳ್ಳುವವರು ಬಂದು ಅಲ್ಲಿ ಸೇರುತ್ತಿದ್ದರು. ದಾವಣಗೆರೆ ತಾಲ್ಲೂಕಿನ ಕುಂದವಾಡದಲ್ಲಿ ಬುಧವಾರ ಸಂತೆ ಸೇರುತ್ತಿತ್ತು.[೧] ನಂಜನಗೂಡು ತಾಲ್ಲೂಕಿನ ಉಪ್ಪಿನ ಹಳ್ಳಿಯಲ್ಲಿ ಮಂಗಳವಾರ ಸಂತೆ ನಡೆಯುತ್ತಿತ್ತು.[೨] ಸಂತೆಯಲ್ಲಿ ಕೆಲವು ಕಟ್ಟಿದ ಅಂಗಡಿಗಳಿರುತ್ತಿದ್ದವು. ಉಳಿದಂತೆ ಈಗಿನ ಹಾಗೆ ಬಯಲಿನಲ್ಲಿ ವಸ್ತುಗಳನ್ನು ಹರಡಿಕೊಂಡು ಮಾರುತ್ತಿದ್ದರು.

ಸಂತೆಗೆ ಬರುವ ವಸ್ತುಗಳ ಮೇಲೆ ಸುಂಕ ಹಾಕುತ್ತಿದ್ದರು. ಅದನ್ನು ಸಂತೆಯ-ಆಯ ಅಥವಾ ಸಂತೆಯ ಸುಂಕವೆಂದು ಕರೆಯುತ್ತಿದ್ದರು. ಕೊಂಡ ವಸ್ತುಗಳಿಗೆ,[೩] ಮಾರಿದ ವಸ್ತುಗಳಿಗೆ[೪] ಸುಂಕವನ್ನು ಹಾಕುತ್ತಿದ್ದರು. ಸಂತೆಯಲ್ಲಿ ಅರವಟ್ಟಿಗೆ ವ್ಯವಸ್ಥೆ ಇರುತ್ತಿತ್ತೆಂಬುದು ಒಂದು ಶಾಸನದಿಂದ ತಿಳಿದುಬರುತ್ತದೆ.[೫]

**ಅಂಗಡಿ:**

ಅಂಗಡಿಗಳು ಪೇಟೆ ಮತ್ತು ಪಟ್ಟಣಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಸಂತೆಗಳು ವಾರದಲ್ಲಿ ಒಂದು ದಿನ ಕಾರ್ಯನಿರ್ವಹಿಸಿದರೆ ಅಂಗಡಿಗಳು ನಿತ್ಯವೂ ಕಾರ್ಯ ನಿರ್ವಹಿಸುತ್ತಿದ್ದವು. ಅಂಗಡಿಗಳು ಸಾಲು ಸಾಲಾಗಿ ಇರುತ್ತಿದ್ದವು. ದೇವಸ್ಥಾನಗಳ ಸುತ್ತಮುತ್ತಿನ ಸ್ಥಳ ವ್ಯಾಪಾರ ಕೇಂದ್ರವೂ ಆಗಿರುತ್ತಿತ್ತು. ಶ್ರವಣಬೆಳಗೊಳದ ಒಂದು ಶಾಸನದಲ್ಲಿ ಅದಕ್ಕೆ ಸೂಚನೆ ಇದೆ; 'ಬಸದಿ ಮುಂದಣ ಅಂಗಡಿ ಇಪ್ಪತ್ತು'[೬] ಎಂದು ಅದರಲ್ಲಿ ಉಲ್ಲೇಖವಾಗಿದೆ. ಅಂಗಡಿಗಳಿಗೆ ವಿವಿಧ ಹೆಸರುಗಳನ್ನು ಕೊಡುತ್ತಿದ್ದರು ಎಂಬುದು ಅಮೃತಾಪುರದ ಶಾಸನದಿಂದ ಸ್ಪಷ್ಟವಾಗುತ್ತದೆ. ಅದರಲ್ಲಿ ಕೇತಲ ದೇವಿಯರಂಗಡಿ, ಬೊಮ್ಮಲ ದೇವಿಯರಂಗಡಿ, ಚಂದ್ರಮೌಳಿಯಣ್ಣನಂಗಡಿ, ಬೊಪ್ಪದೇವನ ಬಸದಿಯಂಗಡಿ, ಗುಂಮೇಶ್ವರದಂಗಡಿಯ ಪ್ರಸ್ತಾಪವಿದೆ.[೭] ಅಂಗಡಿಗಳ ಮೇಲೆ ತೆರಿಗೆಯನ್ನು ಹಾಕುತ್ತಿದ್ದರು.[೮] ಅದನ್ನು 'ಅಂಗಡಿ ಸುಂಕ'[೯] ಎಂದು ಶಾಸನಗಳಲ್ಲಿ ಕರೆಯಲಾಗಿದೆ. ಅಂಗಡಿಗಳನ್ನು ಕಟ್ಟಿಸಿ ದಾನ ಕೊಡುತ್ತಿದ್ದುದೂ ಉಂಟು. ಕೂಚಿರಾಜನು ಪಾರ್ಶ್ವನಾಥದೇವರಿಗಾಗಿ

---

೧. (ರೈ) ಎಕ XI ದಾವಣಗೆರೆ ೧೦೫ ಕ್ರಿ.ಶ. ೧೨೧೮.

೨. ಎಂಎಆರ್ ೧೯೩೬ ನಂಜನಗೂಡು ೪೭ ಕ್ರಿ.ಶ. ೧೨೭೮.

೩. ಎಸ್‌ಐಐ XX ಬಿಜಾಪುರ ೧೬೫ ಕ್ರಿ.ಶ. ೧೧೭೬.

೪. ಎಇ XV ಜತ್ ಪು. ೩೧೭-೩೨೬ ಕ್ರಿ.ಶ. ೧೧೭೨.

೫. ಎಸ್‌ಐಐ IX(i) ಹರಪನಹಳ್ಳಿ ೩೭೯ ಕ್ರಿ.ಶ. ೧೨೮೦.

೬. (ಮೈ) ಎಕ II ಶ್ರವಣಬೆಳಗೊಳ ೪೪೪ ಕ್ರಿ.ಶ. ೧೧೮೧.

೭. (ರೈ) ಎಕ VI ತರೀಕೆರೆ ೪೫ ಕ್ರಿ.ಶ. ೧೧೯೬.

೮. (ರೈ) ಎಕ XII ಕುಣಿಗಲು ೧ ಕ್ರಿ.ಶ. ೧೧೫೭.

೯. (ರೈ) ಎಕ V ಅರಕಲಗೂಡು ೫೪ ಕ್ರಿ.ಶ. ೧೨೭೫.

ಶ್ರೀ ಪದ್ಮಸೇನ ಭಟಾರಕದೇವರ ಪಾದ ತೊಳೆದು ಅಂಗಡಿ, ಅಡಕೆ ತೋಟ ಮತ್ತು ಗಾಣವನ್ನು ಧಾರೆಯೆರೆದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೧]

**ಪೇಟೆ:**

ವ್ಯಾಪಾರ ಕೇಂದ್ರಗಳಾಗಿ ಪೇಟೆಗಳು ಪ್ರಸಿದ್ಧವಾಗಿದ್ದವು. ಇವುಗಳಲ್ಲಿ ಹೊರಪೇಟೆ (ವಾರಕ್ಕೊಂದು ದಿನ ನಡೆಯುವ ಸಂತೆ), ಉಳಿದ ದಿನಗಳಲ್ಲಿ ಒಳಪೇಟೆಯಲ್ಲಿ ವ್ಯಾಪಾರ ನಡೆಯುತ್ತಿತ್ತು.[೨] ರಾಜರು, ಅಧಿಕಾರಿಗಳು ಅನೇಕ ರಿಯಾಯಿತಿಗಳನ್ನು ನೀಡಿ, ಪೇಟೆಗಳಿಗೆ ವರ್ತಕರು ಆಕರ್ಷಿತರಾಗಿ ನೆಲೆ ನಿಲ್ಲುವಂತೆ ಮಾಡುತ್ತಿದ್ದರು.

**ಪಟ್ಟಣ:**

ಸಂತೆ ಕೂಡಿಸುವುದರ ಮೂಲಕ ಒಂದು ಗ್ರಾಮ ಪಟ್ಟಣವಾಗಿ ಮಾರ್ಪಡುತ್ತಿತ್ತು. ಸಂತೆಯನ್ನು ಒಂದು ಗ್ರಾಮದಲ್ಲಿ ಪ್ರಾರಂಭಿಸುವಾಗ 'ನಂನಿಕಂಭವಂ ಪ್ರತಿಷ್ಠಿಸಿ ಸಂಥೆಯಂ ಮಾಡಿಸಿ' ಎಂದು ಶಾಸನದಲ್ಲಿ ಬರುವುದರಿಂದ ಇಂಥ ಸಂಪ್ರದಾಯ ಇದ್ದಂತೆ ಭಾಸವಾಗುತ್ತದೆ.[೩] 'ನಂನಿಕಂಭ' (=ಸತ್ಯದ ಕಂಬ)ವನ್ನು ಸಂತೆಯಲ್ಲಿ ಸ್ಥಾಪಿಸುವಾಗ ಅಲ್ಲಿ ಸತ್ಯನಿಷ್ಠವಾದ ವ್ಯಾಪಾರ ನಡೆಯಲಿ ಎಂಬ ಆಶಯವಿರಬೇಕು. ಸಂತೆಗಳ ಸ್ಥಾಪನೆ ಪಟ್ಟಣಗಳ ಬೆಳವಣಿಗೆಗೆ ಕಾರಣವಾಯಿತು.[೪] ವರ್ತಕರು ಒಂದು ಕಡೆ ನೆಲೆ ನಿಲ್ಲುವಂತೆ ಮಾಡಲು ಪಟ್ಟಣಗಳನ್ನು ಕಟ್ಟುತ್ತಿದ್ದರು. ರಾಜರು, ಅಧಿಕಾರಿಗಳು ಪಟ್ಟಣ ಕಟ್ಟಿಸಿಕೊಡಲು ಮುಂದಾಗುತ್ತಿದ್ದರು. ವಿಶೇಷ ರಿಯಾಯಿತಿಯನ್ನು ಪ್ರಕಟಿಸಿ ವರ್ತಕರನ್ನು ಪಟ್ಟಣಗಳಿಗೆ ಆಕರ್ಷಿಸುತ್ತಿದ್ದರು. ಮೇಗೂರಿನಲ್ಲಿ ಸಂತೆ ಕೂಡಿಸಿ, ಪಟ್ಟಣ ಮಾಡಿದಾಗ 'ಆ ಪಟ್ಟಣಕ್ಕೆ ಹೊಸದಾಗಿ ಬಹ ವೊಕ್ಕಲಿಗೆ ಎರಡು ವರ್ಷ ಮನೆದೆಜು ಮಾನ್ಯ' ಎಂದು ಹೇಳಿ ಇನ್ನೂ ಕೆಲವು ತೆರಿಗೆಗಳನ್ನು ಬಿಟ್ಟುಕೊಡಲಾಗಿದೆ.[೫]

ಕರ್ನಾಟಕದಲ್ಲಿ ಸಂತೆ, ಅಂಗಡಿ, ಪಟ್ಟಣ ಪದಗಳನ್ನು ಒಳಗೊಂಡು ನೂರಾರು ಸ್ಥಳನಾಮಗಳಿವೆ. ಇವುಗಳನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಅವಕಾಶವಿದೆ.

**ವ್ಯಾಪಾರದ ಸರಕು:**

ಕನ್ನಡ ಶಾಸನಗಳಲ್ಲಿ ವ್ಯಕ್ತವಾಗುವ ವಿವಿಧ ಸರಕುಗಳು ಮತ್ತು ಅವುಗಳ ಮಾರಾಟ ಕುತೂಹಲಕರವಾಗಿದೆ. ತೊಗರಿ ಬೇಳೆ, ಬತ್ತ, ಜೋಳ, ಅಡಕೆ, ಎಳ್ಳು, ಗೋದುವೆ, ಬೇಳೆ, ಬೆಲ್ಲ, ನೆಲವತ್ತಿ ಅಡಕೆ,[೬] ಗೊಬ್ಬರ, ಎಣ್ಣೆ, ತುಪ್ಪ, ಬಾಳೆಹಣ್ಣು, ಬಾಡುಕಾಯಿ (ತರಕಾರಿಯಾಗಿ ಉಪಯೋಗಿಸುವ ಕಾಯಿಗಳು), ಎಮ್ಮೆ, ಎತ್ತು, ಪಶು-ತೊತ್ತು, ಆನೆ,

---

೧. (ರೈ) ಎಕ XI ದಾವಣಗೆರೆ ೧೩ ಕ್ರಿ.ಶ. ೧೨೭೧.

೨. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೧೧೭.

೩. (ರೈ) ಎಕ XI ದಾವಣಗೆರೆ ೧೦೫ ಕ್ರಿ.ಶ. ೧೨೧೮.

೪. ಎ.ವಿ. ವೆಂಕಟರತ್ನಂ : ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಪು. ೧೨೩.

೫. (ಮೈ) ಎಕ V ತಿ.ನರಸೀಪುರ ೨೬೧ ಕ್ರಿ.ಶ. ೧೨೭೭.

೬. ನೆಲವತ್ತಿ ಅಡಿಕೆ ವಡ್ಡಾರಾಧನೆಯಲ್ಲಿಯೇ ಉಕ್ತವಾಗಿದೆ. ಮುಂದಿನ ಕಾಲದಲ್ಲಿಯೂ ಅನೇಕ ಕಾವ್ಯ ಶಾಸನಗಳಲ್ಲಿ ಕಂಡುಬರುವ ಈ ಅಡಕೆ ಕರ್ನಾಟಕದಲ್ಲಿ ಜನಪ್ರಿಯವಾಗಿದ್ದಿತು. ಡಿ.ಎಲ್. ನರಸಿಂಹಾಚಾರ್ ಅವರು ನೆಲವತ್ತಿ ಶಿವಮೊಗ್ಗ ಜಿಲ್ಲೆಯ ಪಟ್ಟದ ಕೆರೆಯ ಸಮೀಪದಲ್ಲಿ ಇದ್ದಿರಬಹುದಾದ ಊರೆಂದು ಊಹಿಸಿದ್ದರು. (ಪೀಠಿಕೆಗಳು ಲೇಖನಗಳು, ಪು. ೯೨೧-೯೨೫). ಎಂ. ಚಿದಾನಂದಮೂರ್ತಿಯವರು ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಈಗಿನ ನ್ಯಾಮತಿಯೇ ಆಗಿನ ನೆಲವತ್ತಿ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. 'ಅಡಕೆಗೆ ಪ್ರಸಿದ್ಧವಾಗಿದ್ದ ನೆಲವತ್ತಿ ಗ್ರಾಮ ಯಾವುದು?' ಸಾಧನೆ ೧೦:೨ ಪು. ೩೨-೩೭ ಮತ್ತು ಸಾಧನೆ ೧೧-೨ ಪು.೧೫೦-೧೫೧.

ತುರಗ, ಕತ್ತೆ, ಮೆಣಸು, ಸಾಸಿವೆ, ಜೀರಿಗೆ, ಅರಿಸಿನ, ಅಲ್ಲ (ಶುಂಠಿ), ಅಜವಾನ, ಇಂಗು, ಓಮ, ಮೆಂತ್ಯ, ಸಬ್ಬಸಗೆ, ಕೊತ್ತುಂಬರಿ, ಉಳ್ಳಿ, ಉಪ್ಪು, ಎಲೆ, ಕರ್ಪೂರ, ಪಚ್ಚಕರ್ಪೂರ, ಪಟ್ಟಾವಳಿ, ಮುತ್ತುಮಾಣಿಕ್ಯ, ಪಳಿ (ಬಟ್ಟೆ), ಭೂಸ, ಏಲಕ್ಕಿ, ಬತ್ತಿಅರಳೆ, ಸೀರೆ, ಕಬ್ಬು, ತೆಂಗು, ಬಾಳೆಲೆ, ಓಲೆ, ಮಿಳಿ, ಗಡಿಗೆ, ಕಂಬಳಿ, ಹಂಜಿನೂಲು, ಬಳೆಕಟ್ಟು, ಕಬ್ಬಿಣ -ಹೀಗೆ ವೈವಿಧ್ಯಮಯ ವಸ್ತುಗಳ ವ್ಯಾಪಾರ ನಡೆಯುತ್ತಿತ್ತು.

**ಸರಕು ಸಾಗಾಣಿಕೆ:**

ಸರಕುಗಳನ್ನು ಗ್ರಾಮ ಪಟ್ಟಣಗಳಲ್ಲಿರುವ ವರ್ತಕರು ಪಾದಮಾರ್ಗ, ಜಲಮಾರ್ಗಗಳ ಮೂಲಕ ಸಾಗಿಸುತ್ತಿದ್ದರು. ಸಾಗಾಣಿಕೆಗೆ ಕೋಣ, ಕತ್ತೆ, ಎತ್ತು[೧] ಮತ್ತು ಕುದುರೆಗಳನ್ನು ಬಳಸುತ್ತಿದ್ದರು. ಕೆಲವು ಶಾಸನಗಳಿಂದ ದೇವರೆತ್ತಿನ ಮೇಲೆ ಸರಕು ಸಾಗಿಸಿದ ವಿಷಯ ತಿಳಿದುಬರುತ್ತದೆ.[೨] ಅನೇಕ ಶಾಸನಗಳು ಬಂಡಿಗಳ ಮೂಲಕ ಸರಕುಗಳ ಸಾಗಾಣಿಕೆ ಆಗುತ್ತಿತ್ತೆಂದು ತಿಳಿಸುತ್ತವೆ. ಮೂಟೆ, ಹೆಡಿಗೆ, ಕೊಡ ಮುಂತಾದುವನ್ನು ಹೊತ್ತುಕೊಂಡು ಸಾಗಿಸುತ್ತಿದ್ದರು. ಶಾಸನಗಳಲ್ಲಿ ಹೆದ್ದಾರಿ,[೩] ಹಿರಿಯ ಹೆದ್ದಾರಿ,[೪] ಭಂಡಿದಾರಿ,[೫] ಓಣಿಯ ದಾರಿ,[೬] ರಾಜಬೀದಿ,[೭] ಸಂಣದಾರಿ,[೮] ಕಾಲ್ವಟ್ಟೆ,[೯] ಚಿಕ್ಕಡ್ಡದಾರಿ,[೧೦] ಕಾಲುದಾರಿ,[೧೧] ವೋಣಿ[೧೨] -ಹೀಗೆ ಅನೇಕ ಮಾರ್ಗಗಳ ಹೆಸರುಗಳು ಬರುತ್ತವೆ. ಇವುಗಳ ಮೂಲಕ ಸರಕುಗಳು ಸಾಗುತ್ತಿದ್ದವು. ಮಧ್ಯೆ ನದಿ-ಹಳ್ಳಗಳು ಬಂದರೆ ತೆಪ್ಪವನ್ನು ಬಳಸುತ್ತಿದ್ದರು. ತೆಪ್ಪಗಳಿಗೆ ಸುಂಕವನ್ನು ಹಾಕುತ್ತಿದ್ದುದು ಕಂಡುಬರುತ್ತದೆ.[೧೩] ನದಿಗಳನ್ನು ದಾಟುವ ಮಾರ್ಗವನ್ನು ಕಡಹು[೧೪] ಎಂದು ಕರೆಯುತ್ತಿದ್ದರು.

ಕರ್ನಾಟಕದ ಒಳನಾಡಿನ ವ್ಯಾಪಾರೋದ್ಯಮ ವ್ಯಾಪಕವಾಗಿ ಬೆಳೆದಿದ್ದುದು ಸ್ಪಷ್ಟವೇ ಇದೆ. ಆದರೆ ಹೊರನಾಡಿನ ವ್ಯಾಪಾರ ಎಷ್ಟು ವ್ಯಾಪಕವಾಗಿ ನಡೆಯುತ್ತಿತ್ತು ಎಂದು ಖಚಿತವಾಗಿ ಶಾಸನಗಳಿಂದಲೇ ತಿಳಿಯುವುದು ಕಷ್ಟ. ತುಂಬ ಪ್ರಾಚೀನ ಕಾಲದಿಂದಲೂ ಕನ್ನಡನಾಡು ಹೊರನಾಡುಗಳ ಜೊತೆ ವಾಣಿಜ್ಯ ಸಂಬಂಧವನ್ನು ಇಟ್ಟುಕೊಂಡಿದ್ದ ವಿಷಯವನ್ನು ಬಿ.ಎ. ಸಾಲೆತೊರೆಯವರು ಸಾಧಾರವಾಗಿ ತೋರಿಸಿಕೊಟ್ಟಿದ್ದಾರೆ.[೧೫] ಅನೇಕ ವ್ಯಾಪಾರಿಗಳು ಹಡಗಿನಲ್ಲಿ ಹೋಗಿ ವ್ಯಾಪಾರ

---

೧. (ರೈ) ಎಕ IX ದೊಡ್ಡಬಳ್ಳಾಪುರ ೩೧ ಕ್ರಿ.ಶ. ೧೨೭೬.
೨. ಎಸ್‌ಐಐ IX(i) ಹರಪನಹಳ್ಳಿ ೩೯೧ ಕ್ರಿ.ಶ. ೧೧೮೧.
೩. (ಮೈ) ಎಕ II ಶ್ರವಣಬೆಳಗೊಳ ೫೭೧ ಕ್ರಿ.ಶ. ೧೧೮೧.
೪. (ಮೈ) ಎಕ II ಶ್ರವಣಬೆಳಗೊಳ ೫೭೧ ಕ್ರಿ.ಶ. ೧೧೮೧.
೫. (ರೈ) ಎಕ VI ಕಡೂರು ೧೫೭ ಕ್ರಿ.ಶ. ೧೧೯೧.
೬. (ರೈ) ಎಕ V ಚನ್ನರಾಯಪಟ್ಟಣ ೧೫೦ ಕ್ರಿ.ಶ. ೧೧೮೨.
೭. ಕಇ V ಹಾನಗಲ್ಲು ೫೩ ಕ್ರಿ.ಶ. ೧೧೨೦-೨೧.
೮. (ರೈ) ಎಕ V ಹಾಸನ ೬೧ ಕ್ರಿ.ಶ. ೧೨೮೧.
೯. ಎಸ್‌ಐಐ IX(i) ಸಂಡೂರು ೩೨೬ ಕ್ರಿ.ಶ. ೧೨೦೬.
೧೦. ಎಸ್‌ಐಐ IX(i) ಬಳ್ಳಾರಿ ೩೩೪ ಕ್ರಿ.ಶ. ೧೨೧೭.
೧೧. ಎಸ್‌ಐಐ XVIII ಬಿಜಾಪುರ ೨೭೧ ಕ್ರಿ.ಶ. ೧೩೦೪.
೧೨. (ರೈ) ಎಕ V ಅರಸಿಕೆರೆ ೧೦೬ ಕ್ರಿ.ಶ. ೧೨೦೭.
೧೩. (ರೈ) ಎಕ V ಬೇಲೂರು ೧೭೧ ಕ್ರಿ.ಶ. ೧೧೬೦.
೧೪. (ರೈ) ಎಕ VI ಕಡೂರು ೧೫೭ ಕ್ರಿ.ಶ. ೧೧೯೧.
೧೫. B. A. Saletore : Karnatakas Trans Oceanic Contacts ಪು. ೨೪-೩೧.

ಮಾಡಿ ಬರುತ್ತಿದ್ದರು. ಚಟ್ಟಸೆಟ್ಟಿ ಎನ್ನುವವನು ಶ್ರೇಷ್ಠ ಆನೆ, ಕುದುರೆ ಮತ್ತು ಮುತ್ತುಗಳನ್ನು 'ಬಹಿತ್ರದೆ' ತಂದು ಮಾರುತ್ತಿದ್ದನೆಂದು ಒಂದು ಶಾಸನ ತಿಳಿಸುತ್ತದೆ.[೧] ಹಟ್ಟಣದ ಒಂದು ಶಾಸನದಲ್ಲಿ 'ಬಹಿತ್ರದ ನಾರಣವೆರ್ಗ್ಗಡೆಯ' ಪ್ರಸ್ತಾಪ ಬರುತ್ತದೆ.[೨] ಮಂಗಳೂರು ಮತ್ತು ಹೊನ್ನಾವರ ರೇವುಗಳು ಕ್ರಿ.ಶ. ೧೫ನೆಯ ಶತಮಾನದವರೆಗೂ ಚೀನಾದೊಡನೆ ವಾಣಿಜ್ಯ ಸಂಪರ್ಕ ಹೊಂದಿದ್ದವೆಂದು ತಿಳಿದುಬರುತ್ತದೆ.[೩] ಅಲ್ಲದೆ ಜಾವಾ, ಮಲಯ ದ್ವೀಪಗಳೊಂದಿಗೂ ವಾಣಿಜ್ಯ ಸಂಬಂಧ ಹೊಂದಿದ್ದುದು ತಿಳಿದುಬರುತ್ತದೆ.[೪] ಹಡಗುಗಳಲ್ಲಿ ವ್ಯಾಪಾರಿಗಳು ಸರಕುಗಳನ್ನು ಹೇರಿಕೊಂಡು ಹೋಗಿ ವ್ಯಾಪಾರ ಮಾಡುತ್ತಿದ್ದುದಕ್ಕೆ ವಚನ ಸಾಹಿತ್ಯದಲ್ಲಿಯೂ ಆಧಾರಗಳಿವೆ.[೫] ನಾನಾದೇಶಿ[೬] ಮತ್ತು ಉಭಯ ನಾನಾದೇಶಿಗಳು[೭] ಹೊರನಾಡಿನ ಜೊತೆ ವ್ಯಾಪಾರವನ್ನು ಮಾಡುತ್ತಿದ್ದರೆಂದು ಊಹಿಸಬಹುದು. ಒಳನಾಡಿನ ವ್ಯಾಪಾರ ತುಂಬ ವ್ಯಾಪಕವಾಗಿ ಹರಡಿರುವುದು ಕಂಡುಬರುತ್ತದೆ. ಕರ್ನಾಟಕದ ವರ್ತಕರು ಒಳನಾಡಿನ ವಾಣಿಜ್ಯದ ಬಗ್ಗೆ ಹೆಚ್ಚು ಗಮನ ನೀಡಿರುವಂತೆ ಕಾಣುತ್ತದೆ.[೮]

**ಪಟ್ಟಣ ಸ್ವಾಮಿ:**

ಪಟ್ಟಣ ಸ್ವಾಮಿ ಒಂದು ಹುದ್ದೆ ಅಥವಾ ಸ್ಥಾನ. ಯಾವುದೇ ಗ್ರಾಮದಲ್ಲಿ ಸಂತೆ ಪ್ರಾರಂಭವಾದರೆ ಅದು ಪಟ್ಟಣವಾಗಿ ಮಾರ್ಪಡುತ್ತಿತ್ತು. ಪಟ್ಟಣ ಸ್ವಾಮಿಯ ಸ್ಥಾನವನ್ನು ಸಾಮಾನ್ಯವಾಗಿ ರಾಜನೋ ಅಥವಾ ಆ ಪ್ರದೇಶದ ಹಿರಿಯ ಅಧಿಕಾರಿಯೋ ಕೊಡುತ್ತಿದ್ದರೆಂದು ಭಾವಿಸಲು ಅವಕಾಶವಿದೆ. ಒಂದು ಪಟ್ಟಣದ ವರ್ತಕ ಸಂಘದ ಮುಖ್ಯಸ್ಥನನ್ನು ಪಟ್ಟಣ ಸ್ವಾಮಿ ಎಂಬುದಾಗಿ ಕರೆಯುತ್ತಿದ್ದರೆಂದು ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಪಡುತ್ತಾರೆ.[೯] ಆದರೆ ಬಿ.ಆರ್. ಹಿರೇಮಠ ಅವರು 'ಪಟ್ಟಣಸ್ವಾಮಿತನ ಕೊಡುವುದೆಂದರೆ ಸಂತೆ ಮಾಡಿಸುವ, ಪಟ್ಟಣ ಕಟ್ಟಿಸುವ ಅಧಿಕಾರ ನೀಡುವುದೆಂದರ್ಥ'[೧೦] ಎಂದು ಭಾವಿಸುತ್ತಾರೆ. ಆದರೆ ಸಂತೆಯ ನಿರ್ಮಾಣ, ಸಂಯೋಜನೆ ಇವು ಪಟ್ಟಣ ಸ್ವಾಮಿಯಿಂದಲೇ ಆಗುತ್ತಿತ್ತು ಎಂದೂ ಹೇಳಲು ಬರುವಂತಿಲ್ಲ. ಏಕೆಂದರೆ ಮಾಯಿದೇವನು ಧರ್ಮಸಂತೆ ಮಾಡಲು ಮನಸ್ಸು ಮಾಡಿದಾಗ ಅವನು 'ಮೂವತ್ತಾಱುಂ ಬೀಡಂ ಗಾವುಂಡರ್ಸೆಟ್ಟಿಗುತ್ತ ಮುಂಮುರಿದಂಡಂ ಶ್ರೀವೀರ ಬೀರವಣಿಗಂ ಭಾವಿಸಲಾ ಗವಱೆ ಗಾತ್ರಿಗರ್ಸ್ಸುಂಕಿಗರಂ ನೆರಪಿಯವರೆಲ್ಲರ್ರಂ ಕುಳ್ಳಿರಿಸಿ ಕೇಳ್ದ ಧರ್ಮಸಂತೆಯೆನಿಸಿಯೆ ಮಾಯ್ದೇವರಸಂ ಮಾಡಿದ ಧರ್ಮಂ ಧರೆಯೊಳಗಿದು ಧರ್ಮಸಂತೆಯಾಚಂದ್ರಾರ್ಕ್ಕಂ'[೧೧] ಎಂದು ವ್ಯವಸ್ಥೆಗೊಳಿಸುತ್ತಾನೆ. ಈ ಸಂತೆಯ ರಚನೆಯನ್ನು ಮಾಯಿದೇವನ ಆಜ್ಞೆಯಂತೆ ಬೊಪ್ಪನಾಯಕ ನಿರ್ಮಿಸುತ್ತಾನೆ. ಈ ಸಂತೆಯಲ್ಲಿ ಯಾವುದೇ ಸುಂಕವನ್ನು ತೆಗೆದುಕೊಳ್ಳಬಾರದೆಂದು ಉಗ್ರವಾಗಿ ತಿಳಿಯಪಡಿಸಲಾಗಿದೆ. ಇಲ್ಲಿ ಮಾಯಿದೇವನ ಆಜ್ಞೆಯ ಮೇರೆಗೆ ಬೊಪ್ಪನಾಯಕ ಸಂತೆಯನ್ನು ನಿರ್ಮಿಸುತ್ತಾನೆ. ಆದರೆ

---

೧. (ರೈ) ಎಕ V ಅರಸಿಕೆರೆ ೨೨ ಕ್ರಿ.ಶ. ೧೧೮೮.

೨. (ಮೈ) ಎಕ VII ನಾಗಮಂಗಲ ೧೧೮ ಕ್ರಿ.ಶ. ೧೧೭೮.

೩. A. Appadorai : Economic Conditions of Southern India II, ಪು. ೫೬೬.

೪. ಎಸ್. ಗುರುರಾಜಾಚಾರ್ : 'ಮಧ್ಯಕಾಲೀನ ಕರ್ನಾಟಕದ ವಿದೇಶಿ ವ್ಯಾಪಾರ', ಮಾ.ಕ. ४೧, ಪು. ೧೦೩-೧೦೫.

೫. ಶಿಶವ ಪು. ೯೫-೨೨೬; ಧರ್ಮಾಮೃತದಲ್ಲಿ 'ಭೃತ್ರಕಾಱಿರಿಂ ದ್ವೀಪಂಗಳಂ ಜೋಯಿಸರಿಂ ಗ್ರಹಣಮನಱೆವಂತೆ' ಎಂಬ ಮಾತು ಬರುತ್ತದೆ ಪು. ೪೨೮.

೬. ಎಸ್‌ಐಐ XX ಇಂಡಿ ೧೭೫ ಕ್ರಿ.ಶ. ೧೧೯೦.

೭. ಎಸ್‌ಐಐ IX(i) ಆಲೂರು ೩೮೪ ಕ್ರಿ.ಶ. ೧೨೮೭.

೮. S. Gururajachar : Some Aspects of Economic and Social life in Karnataka ಪು.೧೨೮.

೯. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೩೮೪.

೧೦. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೧೩೪.

೧೧. ಎಸ್‌ಐಐ XX ಇಂಡಿ ೧೭೫ ಕ್ರಿ.ಶ. ೧೧೯೦.

ಅವನು ಪಟ್ಟಣ ಸ್ವಾಮಿಯಲ್ಲ. ಪಟ್ಟಣ ಸ್ವಾಮಿಯ ನೇಮಕ, ಕರ್ತವ್ಯ, ಅಧಿಕಾರ ಮುಂತಾದವುಗಳ ವಿಷಯದಲ್ಲಿ ಇನ್ನೂ ಹೆಚ್ಚಿನ ಅಭ್ಯಾಸ ನಡೆಯಬೇಕಿದೆ. ಪಟ್ಟಣ ಸ್ವಾಮಿಯ ಹುದ್ದೆಗೆ ಸಂಭಾವನೆಯೂ ಇರುತ್ತಿತ್ತು ಎಂಬುದು ಶಾಸನಗಳಿಂದ ಸ್ಪಷ್ಟವಿದೆ. ಅವನಿಗೆ ಹೊಲ, ಗದ್ದೆ, ವಾಹನವನ್ನು ಮತ್ತು ಕೆಲವು ತೆರಿಗೆ ವಿನಾಯಿತಿಯನ್ನು ಕೊಟ್ಟಿರುವುದು ಶಾಸನಗಳಿಂದ ತಿಳಿದುಬರುತ್ತದೆ.[೧]

ಪಟ್ಟಣ ಸ್ವಾಮಿ ಪಟ್ಟಣಕ್ಕೆ ಒಬ್ಬನೇ ಇರುತ್ತಿದ್ದ. ಆದರೆ ಪಟ್ಟಣ ವಿಶಾಲವಾಗಿದ್ದರೆ ಅದರ ಅಗತ್ಯಕ್ಕನುಗುಣವಾಗಿ ಹೆಚ್ಚು ಜನ ಪಟ್ಟಣ ಸ್ವಾಮಿಗಳಿರುತ್ತಿದ್ದರು. ಕೆಲವು ಸಾರಿ ಇಬ್ಬರು[೨] ಅಥವಾ ಮೂವರೂ ಇದ್ದುದುಂಟು.[೩]

ಶಾಸನಗಳಲ್ಲಿ ಮಂಡಲಸ್ವಾಮಿ[೪]ಯ ಉಲ್ಲೇಖಗಳು ಬರುತ್ತವೆ. ಪಟ್ಟಣ ಸ್ವಾಮಿ ಪಟ್ಟಣದ ಮುಖ್ಯಸ್ಥನಿದ್ದಂತೆ ಮಂಡಲಸ್ವಾಮಿ ಒಂದು ಮಂಡಲದ (ಒಂದು ಭೂವಿಭಾಗ) ಮುಖ್ಯಸ್ಥನಾಗಿರುತ್ತಿದ್ದ. ದೊರೆತಿರುವ ಶಾಸನಗಳಿಂದ ಮಂಡಲಸ್ವಾಮಿಯ ಬಗ್ಗೆ ಹೆಚ್ಚು ವಿಷಯಗಳನ್ನು ಹೇಳಲು ಸಾಧ್ಯವಿದ್ದಂತಿಲ್ಲ.

**ವಜ್ರ ಬೈಸಣಿಗೆ :**

ವರ್ತಕ ಸಂಘಗಳು, ವರ್ತಕ ಪ್ರತಿನಿಧಿಗಳು ಯಾವುದಾದರೂ ದಾನ ನೀಡಬೇಕಾದ ಸಂದರ್ಭಗಳಲ್ಲಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಸೇರಿ ಒಮ್ಮತದ ಅಭಿಪ್ರಾಯಕ್ಕೆ ಬರುತ್ತಿದ್ದರು. ಹೀಗೆ ಸಭೆ ಸೇರುವ ಸಂದರ್ಭಗಳಲ್ಲಿ 'ವಜ್ರಬೈಸಣಿಗೆ'[೫] ಎಂಬ ಪದ ವಿಶೇಷವಾಗಿ ಬಳಕೆಯಾಗಿದೆ. ಈ ಪದದ ಅರ್ಥವಿವರಣೆಗೆ ವಿವಿಧ ವಿದ್ವಾಂಸರು ಪ್ರಯತ್ನಿಸಿದ್ದಾರೆ. ಬಿ.ಎಲ್. ರೈಸ್,[೬] ಬಿ.ಎ. ಸಾಲೆತೊರೆಯವರು[೭] ಅದು ಒಂದು ಸಮಾರಂಭವೆಂಬಂತೆ ಭಾವಿಸಿದ್ದಾರೆ. ಆರ್. ರಾಮರಾವ್[೮] ಅವರು ಅದನ್ನು ಆಸನ ವಿಶೇಷವೆಂದು, ಪಿ.ಬಿ. ದೇಸಾಯಿ[೯] ಅವರು ಕುಳಿತುಕೊಳ್ಳುವ ಭಂಗಿಯೆಂದು ಈಚೆಗೆ ಬಿ.ಆರ್. ಹಿರೇಮಠ[೧೦] ಅವರು ಅದು ವಜ್ರಗಳನ್ನು ಮೆಟ್ಟಿಸಿದ ಒಂದು ರೀತಿಯ ಸಾಮೂಹಿಕ ಆಸನವೆಂದು ಅಭಿಪ್ರಾಯಪಟ್ಟಿದ್ದಾರೆ. ವಿದ್ವಾಂಸರು ಚರ್ಚಿಸಿದ ಅಂಶಗಳನ್ನು ಬಿಡಿಯಾಗಿ ಚರ್ಚಿಸಲು ಇಲ್ಲಿ ಸಾಧ್ಯವಿಲ್ಲ. ವಿವಿಧ ಶಾಸನ ಪ್ರಯೋಗಗಳಲ್ಲಿ ಏಕರೂಪತೆ ಇಲ್ಲ. ಉದಾಹರಣೆಗೆ ಹೊಸಹೊಳಲಿನ ಶಾಸನದಲ್ಲಿ 'ಸ್ವಸ್ತಿ ಸಮಸ್ತ ಪ್ರಸಸ್ತಿಸಹಿತಂ ನಂದಿನಾಥ ವೀರಭದ್ರ ದೇವರು ಮುಖ್ಯವಾದ ಪ್ರಿಥುವಿಯ ಮಹಾಗಣಂಗಳು ಹೊಇಸಣ ನಾಡು ಕೊಂಗನಾಡು ಮುಖ್ಯವಾದ ಹದಿನೆಂಟು ಸೀಮೆಯೊಳಗೆ ಹೊಸಬಳಲ ಬಡಗಣ ಹೆಬಾಗಿಲ ಆಲದ ಮರದೆಲೆ(ಸಿಂಹಾಸನ) ಸಿಂಹಾಸನ ವಜ್ರಬಇಸಣಿಗೆಯನಿಕ್ಕಿ ಮಾಡಿದಡೀ...'[೧೧] ಎಂದಿದೆ. ಇಲ್ಲಿ ಬರುವ ಆಲದ ಮರದೆಲೆ, ಸಿಂಹಾಸನ, ವಜ್ರಬಇಸಣಿಗೆಯಂತಹ ಮಾತುಗಳಿಗೆ ಖಚಿತ ಅರ್ಥ ಹೇಳುವುದು ತೊಡಕಿನದಾಗಿದೆ. ಈ ಪದದ ನಿಷ್ಪತ್ತಿಯ ವಿಷಯವೂ ತುಂಬ ತೊಡಕಿನದಾಗಿ ಕಂಡುಬರುತ್ತದೆ. ಪ್ರಯೋಗಗಳನ್ನು ನೋಡಿದರೆ ಆಸನಭಂಗಿ ಎಂದಾಗಲಿ ಆಸನ ವಿಶೇಷವೆಂದಾಗಲೀ ಸ್ವೀಕರಿಸಲು ಪೂರ್ಣವಾಗಿ ಮನಸ್ಸಾಗುವುದಿಲ್ಲ. ಅದು ವರ್ತಕ ಪ್ರತಿನಿಧಿಗಳ ಸಭೆ ಸಮಾವೇಶಗೊಳ್ಳುವ ಆವರಣವನ್ನು ಸೂಚಿಸುವ ಸಾಧ್ಯತೆ ಇದೆ. 'ವಜ್ರಬೈಸಣಿಗೆ' ಸದ್ಯಕ್ಕೆ ವಿದ್ವಾಂಸರ ಮುಂದೆ ಪ್ರಶ್ನೆಯ ಸ್ಥಿತಿಯಲ್ಲೇ ಇದೆ.

---

೧. (ಮೈ) ಎಕ IV ಯಳಂದೂರು ೬೨ ಕ್ರಿ.ಶ. ೧೩೨೮.
೨. (ರೈ) ಎಕ VII ಶಿಕಾರಿಪುರ ೧೧೯ ಕ್ರಿ.ಶ. ೧೧೮೧.
೩. ಬಿ.ಆರ್. ಹಿರೇಮಠ : ಪೂರ್ವೋಕ್ತ, ಪು. ೧೩೪.
೪. ಎಂಎಆರ್ ೧೯೩೬, ನಂಜನಗೂಡು ೪೭ ಕ್ರಿ.ಶ. ೧೨೭೮.
೫. (ರೈ) ಎಕ XI ದಾವಣಗೆರೆ ೫೯ ಕ್ರಿ.ಶ. ೧೨೮೦.
೬. B. L. Rice : Mysore and Coorg from inscriptions ಪು. ೧೮೧-೮೨.
೭. B. A. Saletore : ಪೂರ್ವೋಕ್ತ ಪು. ೨೬-೨೭.
೮. ಆರ್. ರಾಮರಾವ್ : ಪೂರ್ವೋಕ್ತ, ಪು. ೨೧೨.
೯. P.B. Desai : 'Vajra- Baisanige : Derivation and interpretation' Srikanthika. ಪು. ೮೯-೯೧.
೧೦. ಬಿ.ಆರ್. ಹಿರೇಮಠ : 'ಬೈಸಣಿಗೆ : ನಿಷ್ಪತ್ತಿ ಹಾಗೂ ಅರ್ಥವಿವೇಚನೆ', ಕಸಾಪಪ ೬೯-೧, ಪು. ೬೩-೬೭.
೧೧. (ಮೈ) ಎಕ VI ಕೃ.ಪೇಟೆ ೮. ಕ್ರಿ.ಶ. ೧೩೦೬. ಈ ಶಾಸನಪಾಠವನ್ನು ನೋಡಿದರೆ 'ವಜ್ರಬೈಸಣಿಗೆ' ಕೇವಲ ವರ್ತಕರ ಸಂಬಂಧವಲ್ಲಿ ಮಾತ್ರ ಬಳಕೆಯಾಗದೆ ಉಳಿದಂತೆಯೂ ಬಳಕೆಯಾಗುವಂತೆ ಕಂಡುಬರುತ್ತದೆ.

## ಸಾರ್ವಜನಿಕ ಆಯವ್ಯಯ

**ಆದಾಯ : ತೆರಿಗೆಗಳು:**

ರಾಜನಿಗೆ ಬರುತ್ತಿದ್ದ ರಾಜ್ಯಾದಾಯವು ಅನೇಕ ಮೂಲಗಳಿಂದ ಬರುತ್ತಿತ್ತು. ರಾಜ್ಯಾದಾಯದ ಅಧಿಕ ಮೊತ್ತ ತೆರಿಗೆಗಳ ಮೂಲಕ ಬರುತ್ತಿತ್ತು. ತೆರಿಗೆಗಳು-ಭೂತೆರಿಗೆ, ಆಸ್ತಿತೆರಿಗೆ, ವೃತ್ತಿತೆರಿಗೆ, ವ್ಯಾಪಾರದ ಸುಂಕಗಳು, ಉತ್ಪನ್ನಗಳ ಮೇಲೆ ಹಾಕುತ್ತಿದ್ದ ತೆರಿಗೆಗಳು, ಸಾಮಾಜಿಕ ತೆರಿಗೆಗಳು. ಇವುಗಳಲ್ಲದೆ ಕಾಣಿಕೆಗಳು, ದಂಡಗಳು ಹೀಗೆ ನಾನಾ ರೀತಿಯ ತೆರಿಗೆ, ಸುಂಕಗಳ ಮೂಲಕ ರಾಜ್ಯಾದಾಯ ಸೇರುತ್ತಿತ್ತು. ಇವುಗಳಲ್ಲದೆ ಅಪುತ್ರಕ ಆಸ್ತಿಗಳು, ಕೆಲವು ಸಾರಿ ರಾಜನು ಮುಟ್ಟುಗೋಲು ಹಾಕಿಕೊಳ್ಳುತ್ತಿದ್ದ ಪ್ರಜೆಗಳ ಆಸ್ತಿ ಐಶ್ವರ್ಯ ಮತ್ತು ಶತ್ರುರಾಜರನ್ನು ಆಕ್ರಮಿಸಿ ಸೋಲಿಸಿ ಸೂರೆ ಮಾಡುತ್ತಿದ್ದ ವಸ್ತು ವಾಹನ ಐಶ್ವರ್ಯಗಳು ಇವುಗಳೊಂದಿಗೆ ರಾಜನ ವೈಯಕ್ತಿಕ ಆಸ್ತಿಯಿಂದ ಬರುತ್ತಿದ್ದ ಉತ್ಪನ್ನಗಳು□- ಹೀಗೆ ರಾಜನಿಗೆ ಅನೇಕ ಮಾರ್ಗಗಳಲ್ಲಿ ಆದಾಯವಿರುತ್ತಿತ್ತು.

ರಾಜ್ಯಾದಾಯದ ಪ್ರಮುಖ ಭಾಗ ಪ್ರಜೆಗಳಿಂದ ಸಂಗ್ರಹಿಸುತ್ತಿದ್ದ ತೆರಿಗೆಗಳ ಮೂಲಕವೇ ಬರುತ್ತಿತ್ತು. ಪ್ರಜೆಗಳು ರಾಜನಿಗೆ ತೆರಿಗೆಗಳನ್ನು ನೀಡಬೇಕೆಂದು ಪ್ರಾಚೀನ ಸ್ಮೃತಿ, ಸಂಹಿತೆಗಳು ಹೇಳುತ್ತವೆ. ಭೂಮಿಯ ಉತ್ಪನ್ನದ ಮತ್ತು ಇತರ ಯಾವುದೇ ಆದಾಯದ ಆರನೆಯ ಒಂದು ಭಾಗದ ಉತ್ಪನ್ನ ತೆರಿಗೆಯ ರೂಪದಲ್ಲಿ ಸಂದಾಯವಾಗಬೇಕೆಂದು ಸಂಗಮ್ ಕಾಲದ ಸಾಹಿತ್ಯದಲ್ಲಿ ನಿರೂಪಿತವಾಗಿದೆ.[೧] ಹೀಗೆ ಸಂದಾಯವಾಗುತ್ತಿದ್ದ ತೆರಿಗೆಗಳ ವಿಷಯ ಸರಳವಾಗಿದ್ದಂತಿಲ್ಲ. ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ತೆರಿಗೆಗಳು ಭಿನ್ನವಾಗಿದ್ದವು. ಏಕರೂಪತೆಯಂತೂ ಇರಲೇ ಇಲ್ಲವೆನ್ನಬಹುದು. ಕರ್ನಾಟಕದ ಸಹಸ್ರಾರು ಶಾಸನಗಳಲ್ಲಿ ಕಂಡುಬರುವ ನೂರಾರು ತೆರಿಗೆಗಳಿಗೆ, ಸುಂಕಗಳಿಗೆ, ರಾಜ್ಯಾದಾಯದ ಆಕರಗಳಿಗೆ ಸಂಬಂಧಿಸಿದ ಪದಗಳಿಗೆ ಅರ್ಥ ಹೇಳುವುದು ಅತ್ಯಂತ ಜಟಿಲ ಸಮಸ್ಯೆಯಾಗಿದೆ. ಹಲವಾರು ಪದಗಳ ಸ್ವರೂಪ ಮತ್ತು ಅರ್ಥ ತುಂಬಾ ಸಂದಿಗ್ಧವಾಗಿದೆ. ಇದು ಕೇವಲ ಕರ್ನಾಟಕದ ಪ್ರಾಚೀನ ತೆರಿಗೆಗಳಿಗೆ ಸಂಬಂಧಿಸಿದ ಸಮಸ್ಯೆ ಮಾತ್ರ ಅಲ್ಲ. ಪ್ರಾಚೀನ ದಕ್ಷಿಣ ಭಾರತದ ತೆರಿಗೆಯ ಸ್ವರೂಪದಲ್ಲಿ ಕಾಲದಿಂದ ಕಾಲಕ್ಕೆ ಕೊಟ್ಟ ತೆರಿಗೆಯ ರಿಯಾಯಿತಿಗಳು, ಹಾಕಿದ ಹೊಸ ತೆರಿಗೆಗಳು ಅದನ್ನು ಜಟಿಲಗೊಳಿಸಿವೆ.[೨] ರಾಜ್ಯದ ಖರ್ಚು, ವೆಚ್ಚ, ಅಭಿವೃದ್ಧಿ ಕಾರ್ಯಕ್ರಮಗಳು, ಯುದ್ಧಗಳು ಹೆಚ್ಚಿದಂತೆ ತೆರಿಗೆಗಳು ಅಧಿಕವಾಗುವುದು ಅನಿವಾರ್ಯವಾಯಿತು. ಹಳೆಯ ತೆರಿಗೆಗಳ ಜೊತೆ ಹೊಸ ತೆರಿಗೆಗಳು ಬಂದವು; ಹೊಸ ಹೆಸರುಗಳು ಬಂದವು. ಗಂಗರಿಗೂ ಪ್ರಾಚೀನ ಕಾಲದಿಂದ ಬಂದ ತೆರಿಗೆ ವ್ಯವಸ್ಥೆ ಹೊಯ್ಸಳರ ಕಾಲದಲ್ಲಿ ತುಂಬ ಜಟಿಲವಾಯಿತೆಂಬ ಅಭಿಪ್ರಾಯವೂ ಇದೆ.[೩]

ಶಾಸನಗಳಲ್ಲಿ ಕಂಡುಬರುವ ಅಸಂಖ್ಯಾತ ತೆರಿಗೆಗಳನ್ನು ಬಿಡಿಬಿಡಿಯಾಗಿ ಚರ್ಚಿಸುವುದು ಸದ್ಯದ ಮಟ್ಟಿಗೆ ಸಾಧ್ಯವಿಲ್ಲವಾದುದರಿಂದ ಅವುಗಳಲ್ಲಿ ಕೆಲವನ್ನು ಮಾತ್ರ ಚರ್ಚಿಸಿ ಉಳಿದಂತೆ ಅವುಗಳನ್ನು ಒಂದು ಕ್ರಮದಲ್ಲಿ ಕೊಡುವ ಪ್ರಯತ್ನವನ್ನು ಮಾಡಲಾಗಿದೆ.

**ಅಂಗಡಿಯ ಸುಂಕ:**[೪] ಅಂಗಡಿಗಳ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಅಂಬಿಗದೆಱೆ:**[೫] ದೋಣಿ, ಹರಿಗೋಲು ಮುಂತಾದ ನಾವೆಗಳನ್ನು ನಡೆಸುವವರ ಮೇಲೆ ವಿಧಿಸುತ್ತಿದ್ದ ತೆರಿಗೆ.

---

೧. ಎನ್. ಸುಬ್ರಮಣಿಯನ್ : ಪೂರ್ವೋಕ್ತ, ಪು. ೨೪೩.

೨. K. N. Shastri : Culture and History of 'the Tamils ಪು. ೬೧.

೩. J. D.M. Derrett : The Hoysalas : ಪು. ೧೯೪-೯೫.

೪. (ರೈ) ಎಕ V ಅರಕಲಗೂಡು ೫೪ ಕ್ರಿ.ಶ. ೧೨೭೫.

೫. (ರೈ) ಎಕ VII ಹೊನ್ನಾಳಿ ೮ ಕ್ರಿ.ಶ. ೧೨೨೮.

**ಅಕ್ಕಸಾಲಿಯಾಯ:**[೧] ಚಿನ್ನ ಬೆಳ್ಳಿ ಮುಂತಾದ ಕೆಲಸ ಮಾಡುವವರ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಅಗಸದೆಱೆ:**[೨] ಮಡಿವಾಳನ ವೃತ್ತಿಯ ಮೇಲೆ ಹಾಕುತ್ತಿದ್ದ ತೆರಿಗೆ.

**ಅಚ್ಚಾಡತೆ:**[೩] (?)

**ಅಡಕೆಲೆ ಸುಂಕ:**[೪] ಅಡಕೆ ಮತ್ತು ವೀಳೆಯದೆಲೆಗೆ ಒಟ್ಟಾಗಿ ವಿಧಿಸುತ್ತಿದ್ದ ಸುಂಕ; ಇವುಗಳಿಗೆ ಬೇರೆಯಾಗಿಯೂ ತೆರಿಗೆ ಹಾಕುತ್ತಿದ್ದರು.

**ಅಡದವಣ:**[೫] (?)

**ಅಡುಗಬ್ಬಿನ ಭಂಡಿ:**[೬] (?) (ಅಡುಗಬ್ಬು = ಸೌದೆ, ಉರುವಲು)

**ಅಡುಗಬ್ಬು ಹಗೆದಱೆ:**[೭] (?)

**ಅಭ್ಯಾಗತೆ:**[೮] ಒಂದು ಪ್ರದೇಶದ ನಿರ್ದಿಷ್ಟ ಗಡಿಯ ಹೊರಗಿನಿಂದ ಬರುವ ವಸ್ತುಗಳ ಮೇಲಿನ ಸುಂಕ.

**ಅರಸಾಯ:**[೯] ರಾಜನಿಗೆ ಸಲ್ಲುವ ಭಾಗ; ಅರಸನ ಭಾಗಕ್ಕೆ ಹೋಗುವ ಆಯ.

**ಅರುವಣ:**[೧೦] (?) ಈ ತೆರಿಗೆಯ ಬಗ್ಗೆ ವಿದ್ವಾಂಸರಲ್ಲಿ ಬಹಳ ಚರ್ಚೆ ಆಗಿದೆ. ಡಿ.ಸಿ. ಸರ್ಕಾರ್ ಅವರು 'ಮಾನ್ಯ ಭೂಮಿಗಳ ಮೇಲೆ ಹಾಕಲಾಗುತ್ತಿದ್ದ ಆರುಪಣಗಳ ತೆರಿಗೆ' ಎನ್ನುತ್ತಾರೆ.[೧೧] ಶ್ರೀನಿವಾಸ ರಿತ್ತಿ,[೧೨] ಎಸ್.ಜಿ. ಘಟಪಣದಿ[೧೩] ಮುಂತಾದವರು ವ್ಯವಸಾಯ ಯೋಗ್ಯ ಭೂಮಿಯ ಮೇಲೆ ಹಾಕಲಾಗುತ್ತಿದ್ದ ತೆರಿಗೆ ಎಂದು ಭಾವಿಸುತ್ತಾರೆ. ಎಂ. ಚಿದಾನಂದಮೂರ್ತಿಯವರು- 'ದತ್ತಿಯ ಭೂಮಿಗಳ ತೆರಿಗೆಯನ್ನು ಅರ್ಧದಷ್ಟಕ್ಕೆ ಇಳಿಸಿ ಅಥವಾ ಇನ್ನೂ ಇಳಿಸಿ ಹೆಸರಿಗೆ ಮಾತ್ರ ಸ್ವಲ್ಪ ತೆರಿಗೆಯನ್ನು ತೆಗೆದುಕೊಳ್ಳುತ್ತಿದ್ದರು. ಇದೇ 'ಅರುವಣ'ವೆಂದು ಕಾಣುತ್ತದೆ (ಅರ, ಅರೆ, ಅರಮೆ=ಅರ್ಧ, ಸ್ವಲ್ಪ)'[೧೪] ಎಂದಿದ್ದಾರೆ. ಬಾರ್ನೆಟ್ ಅವರು ಅರುವಣವು 'ಮಾನ್ಯ ಭೂಮಿಗಳ ಮೇಲೆ ತೆರಿಗೆ' ಎಂದು ಅರ್ಥೈಸುತ್ತಾರೆ.[೧೫]

---

೧. ಎಸ್‌ಐಐ XVIII ರಾಣೆಬೆನ್ನೂರು ೧೮೩ ಕ್ರಿ.ಶ. ೧೧೭೨.
೨. ಎಸ್‌ಐಐ XVIII ರಾಣೆಬೆನ್ನೂರು ೧೮೩ ಕ್ರಿ.ಶ. ೧೧೭೨.
೩. (ರೈ) ಎಕ XI ಚಿತ್ರದುರ್ಗ ೩೨ ಕ್ರಿ.ಶ. ೧೨೮೬.
೪. (ರೈ) ಎಕ XI ದಾವಣಗೆರೆ ೧೨೯ ಕ್ರಿ.ಶ. ೧೨೩೬.
೫. ಎಸ್‌ಐಐ XVIII ಬಿಜಾಪುರ ೨೬೦ ಕ್ರಿ.ಶ. ೧೨೮೩.
೬. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧; ?.
೭. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.
೮. (ಮೈ) ಎಕ VI ಕೃ.ಪೇಟೆ ೯೦ ಕ್ರಿ.ಶ. ೧೨೯೯.
೯. ಎಸ್‌ಐಐ IX(i) ಕುಂದಾಪುರ ೩೯೭ ಕ್ರಿ.ಶ. ೧೨ ಶ.ಮಾ.
೧೦. ಇಅ XIX ಪು. ೨೪೭ ಕ್ರಿ.ಶ. ೧೨೮೦.
೧೧. D. C. Sarkar : Indian Epigraphical glossary ಪು. ೨೯.
೧೨. Srinivasa Ritti : ಪೂರ್ವೋಕ್ತ ಪು. ೨೩೩.
೧೩. S.G. Ghatapanadi : Taxation in Ancient Infia and Medieval Karnataka ಪು. ೬೭-೬೮.
೧೪. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ೩೯೭.
೧೫. ಅದೇ, (ಉದಾಹೃತ).

**ಅಸಂಬಳ :**[೧] ಇದನ್ನು ಅಸಂಬರ ರೂಪದಲ್ಲೂ ಕಾಣಬಹುದು. ಮೆಣಸು, ಕೊತ್ತುಂಬರಿ, ಜೀರಿಗೆ, ಸಾಸಿವೆ ಮತ್ತು ಮೆಂತ್ಯ ಎಂಬ ಐದು ಸಂಬಾರದ ಪದಾರ್ಥಗಳು;[೨] ಇವುಗಳ ಮೇಲೆ ವಿಧಿಸುತ್ತಿದ್ದ ತೆರಿಗೆ ಎಂದು ಹೇಳಬಹುದು.

**ಅಳಿವಣ:**[೩] (?)

**ಆಗಂತುಕ:**[೪] ಅನಿರೀಕ್ಷಿತವಾಗಿ ಬಂದ ಸುಂಕದ ರೂಪದ ಆದಾಯ.[೫]

**ಆಗಮಿಕ:**[೬] (?)

**ಆಡದೆಱೆ:**[೭]
**ಆಡುವಣ:**[೮] } ಆಡುಗಳ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಆಣೆ:**[೯] (?)

**ಆನವ್ಯಸೇಸೆ:**[೧೦] (?)

**ಆನೆದೆಱೆ:**[೧೧] ರಾಜ್ಯದ ಆನೆಗಳ ರಕ್ಷಣೆಗಾಗಿ ವಿಧಿಸುತ್ತಿದ್ದ ತೆರಿಗೆ.

**ಆಲೆದೆಱೆ:**[೧೨] ಆಲೆಮನೆಗಳ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಆಱುವಣ:**[೧೩] ಇದು ಅರುವಣದ ಮತ್ತೊಂದು ರೂಪವಿರಬಹುದೇ? ಡಿ.ಸಿ. ಸರ್ಕಾರ್ ಅವರು ಹೇಳುವ ಹಾಗೆ ಆರುಪಣಗಳ ತೆರಿಗೆಯೆ?

**ಉದುವಲುದೆಱೆ:**[೧೪] ಸೌದೆ (ಉರುವಲು)ಯ ಮೇಲೆ ವಿಧಿಸುತ್ತಿದ್ದ ತೆರಿಗೆ?

---

೧. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧; ?.
೨. ಕ.ಕ. ನಿಘಂಟು I, ಪು. ೩೬೪.
೩. (ಮೈ) ಎಕ XII ಸಿರಾ ೨೩ ಕ್ರಿ.ಶ. ೧೧೬೭.
೪. (ರೈ) ಎಕ V ಹಾಸನ ೧೧೯ ಕ್ರಿ.ಶ. ೧೧೭೩.
೫. ಕ.ಕ. ನಿಘಂಟು I, ಪು. ೫೭೧.
೬. ಎಂಎಆರ್ ೧೯೪೫ ಮಳವಳ್ಳಿ ೧೭; ?.
೭. (ಮೈ) ಎಕ VI ಪಾಂಡವಪುರ ೨೨೦ ಕ್ರಿ.ಶ. ೧೪ ಶ.ಮಾ.
೮. (ಮೈ) ಎಕ IV ಚಾಮರಾಜನಗರ ೨೯೫ ಕ್ರಿ.ಶ. ೧೩೩೭.
೯. ಕಇ V ಹಾನಗಲ್ಲು ೪೨ ಕ್ರಿ.ಶ. ೧೨೩೯.
೧೦. (ಮೈ) ಎಕ VI ಕೃ.ಪೇಟೆ ೩೯ ಕ್ರಿ.ಶ. ೧೨೩೬.
೧೧. ಎಸ್ಐಐ XVIII ಹಾವೇರಿ ೨೨೭ ಕ್ರಿ.ಶ. ೧೩ ಶ.ಮಾ.
೧೨. (ಮೈ) ಎಕ VII ನಾಗಮಂಗಲ ೭೩ ಕ್ರಿ.ಶ. ೧೨೮೪.
೧೩. (ಮೈ) ಎಕ V ತಿ.ನರಸೀಪುರ ೨೩೮ ಕ್ರಿ.ಶ. ೧೨೯೦.
೧೪. (ಮೈ) ಎಕ IV ಹುಣಸೂರು ೨೪ ಕ್ರಿ.ಶ. ೧೧೬೨.

ಉಪ್ಪಿಲಿಕದೆಜು:[೧] ಉಪ್ಪಾರರ ಮೇಲೆ ವಿಧಿಸುತ್ತಿದ್ದ ತೆರಿಗೆ.

ಉಳುವರಿ:[೨] (?)

ಎತ್ತಿನ:[೩] (?) ಇದು ಎತ್ತಿಲು ರೂಪದಲ್ಲೂ ದೊರೆಯುತ್ತದೆ (ಕ.ಕ. ನಿಘಂಟು-I, ಪು. ೧೦೭೩) ಎತ್ತಿಲುಪೊತ್ತರ ಎಂದೇ ಹೆಚ್ಚಿನ ಶಾಸನಗಳಲ್ಲಿ ಬಳಕೆಯಾಗಿದೆ.

ಎತ್ತಿನ ಸುಂಕ:[೪] ಎತ್ತುಗಳ ಹೇರಿನ ಮೇಲೆ ಹಾಕುತ್ತಿದ್ದ ಸುಂಕವಿರಬಹುದೆಂದು ಡಾ. ಎಂ. ಚಿದಾನಂದ ಮೂರ್ತಿಯವರು ಸೂಚಿಸುತ್ತಾರೆ.

ಎಲೆ ಆಯ:[೫] ವೀಳೆಯದೆಲೆಗಳ ಮೇಲೆ ವಿಧಿಸುತ್ತಿದ್ದ ಸುಂಕ.

ಒಕ್ಕಲಲ್ಲಿಕ್ಕೆದೆರೆ:[೬] (?)

ಒಕ್ಕಲುದೆಜು:[೭] (?)

ಕಟಕ ಸೇಸೆ:[೮] ಸೈನ್ಯದ ಖರ್ಚುವೆಚ್ಚಗಳಿಗಾಗಿ ಸಂಗ್ರಹಿಸುತ್ತಿದ್ದ ತೆರಿಗೆ.

ಕಟ್ಟುಂಬಣ:[೯] ಜಮೀನಿನ ಮೇಲೆ ವಿಧಿಸುತ್ತಿದ್ದ ಒಂದು ರೀತಿಯ ತೆರಿಗೆ ಎಂದು ಕಾಣುತ್ತದೆ. ಏಕೆಂದರೆ ಶಾಸನದಲ್ಲಿ ಅಲಿವುಳಿಯ ಭೂಮಿಗೆ ಕಟ್ಟುಂಬಣ ಗದ್ಯಾಣ ೬ ಪಣ ೫ ಸಿದ್ಧಾಯ ಎಂದು ಬರುತ್ತದೆ.

ಕಟ್ಟುಗ:[೧೦] (?)

ಕಟ್ಟುಗೂಳು:[೧೧] (?)

ಕಡ್ಡಾಯ:[೧೨] (ಬಿಟ್ಟಿಯಂತಹ) ಒಂದು ಒತ್ತಾಯದ ಪರಿಶ್ರಮದ ರೂಪದ ತೆರಿಗೆ.

---

೧. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧; ?.
೨. (ಮೈ) ಎಕ V ಮೈಸೂರು ೨೧೨ ಕ್ರಿ.ಶ. ೧೩ ಶ.ಮಾ.
೩. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧; ?
೪. (ರೈ) ಎಕ VII ಶಿಕಾರಿಪುರ ೧೪೬ ಕ್ರಿ.ಶ. ೧೧೬೦.
೫. (ರೈ) ಎಕ VIII ಸೊರಬ ೫೦ ಕ್ರಿ.ಶ. ೧೧೫೪.
೬. ಬಿ.ಆರ್. ಹಿರೇಮಠ : 'ಕಳಚೂರಿ ಬಿಜ್ಜಳನ ಶಿರೋಳ ಶಾಸನ' ಸಾಧನೆ ೧೪-೪ ಕ್ರಿ.ಶ. ೧೧೩೪. ಪು. ೩೧-೩೪.
೭. ಎಸ್‌ಐಐ XX ಹಾನಗಲ್ಲು ೧೯೬ ಕ್ರಿ.ಶ. ೧೨೨೪. ಇದು ಕೆಲವು ಸಾರಿ ಹತ್ತೆತ್ತಿನ ಒಕ್ಕಲುದೆಜು ಎಂದೂ ಬರುವುದರಿಂದ ರೈತನ ಕಮತದ ಸಾಮರ್ಥ್ಯದ ಮೇಲೆ ಹಾಕಲಾಗುತ್ತಿದ್ದ ತೆರಿಗೆ ಇರಬೇಕು. (ರೈ) ಎಕ VII; ಹೊನ್ನಾಳಿ ೨೫ ಕ್ರಿ.ಶ. ೧೨೦೮.
೮. (ಮೈ) ಎಕ VI ಕೃ.ಪೇಟೆ ೯೦ ಕ್ರಿ.ಶ. ೧೨೯೯.
೯. (ರೈ) ಎಕ V ಬೇಲೂರು ೧೪೦ ಕ್ರಿ.ಶ. ೧೨೦೦.
೧೦. (ಮೈ) ಎಕ VII ಪಾಂಡವಪುರ ೨೨೦ ಕ್ರಿ.ಶ. ೧೪ ಶ.ಮಾ.
೧೧. (ರೈ) ಎಕ XI ಚಿತ್ರದುರ್ಗ ೬ ಕ್ರಿ.ಶ. ೧೩೩೮.
೧೨. (ರೈ) ಎಕ IX ಕಾನಕಾನಹಳ್ಳಿ ೩೦ ಕ್ರಿ.ಶ. ೧೩೩೭.

**ಕಪ್ಪಡದ ಸುಂಕ:**[೧] ಬಟ್ಟೆಗಳ ಮೇಲೆ ವಿಧಿಸುತ್ತಿದ್ದ ಸುಂಕ.

**ಕಪ್ಪಿಲದೆಱೆ:**[೨] (?). 'ಕಪಿಲೆಯ ಪಾವಂತಿಗೆ' ಎಂಬ ರೂಪ ಒಂದು ಶಾಸನದಲ್ಲಿ ದೊರೆಯುತ್ತದೆ. ಕಪಿಲೆ ಬಾವಿಯ ಮೆಟ್ಟಲುಗಳ ಮೇಲೆ ಹಾಕಿದ ತೆರಿಗೆ (?) (ಕ.ಕ. ನಿಘಂಟು II ಪು. ೧೪೯೯)- ಇದು ಕಪ್ಪಿಲೆದೆಱೆ ರೂಪದಲ್ಲಿಯೂ ದೊರೆಯುತ್ತದೆ. (ಎಂ.ಎ.ಆರ್. ೧೯೩೪, ೨೭ ಕ್ರಿ.ಶ. ೧೪೩೦)

**ಕಬ್ಬಿಲದೆಱೆ:**[೩] } **ಕಬ್ಬಿಲವಡಿಕೆ:**[೪] } ಮೀನುಗಾರರ ಮೇಲೆ ವಿಧಿಸುತ್ತಿದ್ದ ತೆರಿಗೆಗಳು.

**ಕಬ್ಬುನದ ಸುಂಕ:**[೫] ಕಬ್ಬಿಣದ ಮೇಲಿನ ಸುಂಕ.

**ಕಲುಕು:**[೬] ಇದು ಕಳುಕು ರೂಪದಲ್ಲಿಯೂ ದೊರೆಯುತ್ತದೆ. ಕೆರೆಯ ತೂಬಿನ ದುರಸ್ತಿಗಾಗಿ ಹಾಕುವ ತೆರಿಗೆ. (ತಮಿಳು. ಕಲಿಙ್ಕು = ಕೆರೆಯ ತೂಬು)

**ಕಳೆ ಮದ್ದಳೆಯ ಪಣ:**[೭] ಕಳೆ (ಕಟೆ = ಬಿದಿರಿನ ವಾದ್ಯ) ಮತ್ತು ಮದ್ದಳೆ ನುಡಿಸುತ್ತಿದ್ದವರ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಕಾಣಿಕೆ:**[೮] ಅರಸ ಅಥವಾ ಅಧಿಕಾರಿ ಒಂದು ಪ್ರದೇಶಕ್ಕೆ ಬಂದಾಗ ಸ್ಥಳೀಯರು ಕೊಡುವ ಕಾಣಿಕೆರೂಪದ ತೆರಿಗೆ.

**ಕಾರುಕ:**[೯] ಇದು ಕಾರುಕದೆಱೆ[೧೦] ಎಂದೂ ದೊರೆಯುತ್ತದೆ. ಕೈಕೆಲಸಗಾರರ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಕಾರುಣ್ಯ:**[೧೧] (?)

**ಕಾವಲದೆಱೆ:**[೧೨] ಗ್ರಾಮ ರಕ್ಷಣೆಗಾಗಿ ನೀಡುತ್ತಿದ್ದ ತೆರಿಗೆ.

**ಕಾವಲಿದೆಱೆ:**[೧೩] ಉಪ್ಪಿನ ಮಾಳದ ಮೇಲೆ ವಿಧಿಸುವ ತೆರಿಗೆ.

**ಕಿಱುಕುಳ:**[೧೪] ಸಣ್ಣ ಪ್ರಮಾಣದ ತೆರಿಗೆ. (?)

---

೧. ಎಸ್ಐಐ XV ಹುನಗುಂದ ೨೪೨ ಕ್ರಿ.ಶ. ೧೧೮೬-೮೭.
೨. (ಮೈ) ಎಕ VII ಪಾಂಡವಪುರ. ೨೨೦ ಕ್ರಿ.ಶ. ೧೪ ಶ.ಮಾ.
೩. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.
೪. (ಮೈ) ಎಕ VII ನಾಗಮಂಗಲ ೭೩ ಕ್ರಿ.ಶ. ೧೨೮೪.
೫. (ರೈ) ಎಕ XII ಗುಬ್ಬಿ ೪೫ ಕ್ರಿ.ಶ. ೧೨೩೩.
೬. (ಮೈ) ಎಕ VI ಕೃ.ಪೇಟೆ. ೩೯ ಕ್ರಿ.ಶ. ೧೨೩೬.
೭. ಎಇ XX ಗದಗು ೬ ಕ್ರಿ.ಶ. ೧೦೧೨.
೮. (ರೈ) ಎಕ XII ಮಧುಗಿರಿ ೩ ಕ್ರಿ.ಶ. ೧೩೧೩.
೯. (ಮೈ) ಎಕ VII ಪಾಂಡವಪುರ. ೨೨೦ ಕ್ರಿ.ಶ. ೧೪ ಶ.ಮಾ.
೧೦. ಕಇ IV ಹಿರೇಕೆರೂರು ೧೩ ಕ್ರಿ.ಶ. ೧೧೬೫.
೧೧. (ರೈ) ಎಕ V ಹಾಸನ ೮೪ ಕ್ರಿ.ಶ. ೧೨೩೦.
೧೨. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.
೧೩. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.
೧೪. (ರೈ) ಎಕ XI ಚಿತ್ರದುರ್ಗ ೬ ಕ್ರಿ.ಶ. ೧೩೩೮.

**ಕುಂಬಾರದೆಱೆ:**[೧] ಕುಂಬಾರರಿಗೆ ವಿಧಿಸುತ್ತಿದ್ದ ತೆರಿಗೆ.

**ಕುದುರೆಯ ಸುಂಕ:**[೨] ಕುದುರೆಗಳ ಮಾರಾಟದ ಮೇಲಿನ ಸುಂಕ.

**ಕುದುರೆ ಸೇಸೆ:**[೩] ರಾಜನ ಕುದುರೆಗಳ ಸಂರಕ್ಷಣೆಗಾಗಿ ವಿಧಿತ್ತಿಸುದ್ದ ತೆರಿಗೆ.

**ಕುಮಾರಗಾಣಿಕೆ:**[೪] ರಾಜಕುಮಾರನಿಗೆ ಸಲ್ಲಿಸುತ್ತಿದ್ದ ಕಾಣಿಕೆ.

**ಕುಮಾರ ಮಾಲಿಕೆ:**[೫] (?)

**ಕುರುವಣಿಗೆ:**[೬] (?)

**ಕುಳ:**[೭] (?)

**ಕುಳಿಯ ಸುಂಕ:**[೮] ಅಡಕೆ, ತೆಂಗುಗಳನ್ನು ನೆಡುವ ಕುಳಿಗಳ ಮೇಲೆ ವಿಧಿಸುತ್ತಿದ್ದ ಸುಂಕ. 'ಗುಳಿಯ ಸುಂಕ'[೯]ವೂ ಇದೇ ಇರಬೇಕು.

**ಕೆರೆಯ ಬಟ್ಟೆ ಸುಂಕ:**[೧೦] ಕೆರೆಯ ಏರಿಯ ರಸ್ತೆಯ ಮೇಲೆ ಚಲಿಸುವ ವಾಹನಗಳ ಮೇಲೆ ಹಾಕುತ್ತಿದ್ದ ಸುಂಕ.

**ಕೊಟ್ಟಗೆಗೆಱೆ:**[೧೧] (ಕೊಟ್ಟಗೆ = ಹೊರೆ ಹೊರುವ ಎತ್ತು; ಹೇರೆತ್ತು) ಹೇರೆತ್ತಿನ ಹೊರೆಯ ಮೇಲಿನ ತೆರಿಗೆ ಇರಬಹುದೆ?

**ಕೊಡಗಿದೆಱೆ:**[೧೨] ಉಂಬಳಿಯ ಮೇಲೆ ಹಾಕುವ ಕಂದಾಯ.

**ಕೊಡತಿವಣ:**[೧೩] ಕೊಡತಿ (= ಮರದ ಸುತ್ತಿಗೆ) ಬಳಸಿ ಕೆಲಸ ಮಾಡುವವರ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಕೊಡರೆವಣ:**[೧೪] (?)

**ಕೊನೆದೆಱೆ:**[೧೫] (ಅಡಕೆ,ಬಾಳೆ) ಗೊನೆಗಳ ಮೇಲೆ ವಿಧಿಸುತ್ತಿದ್ದ ತೆರಿಗೆ.

---

೧. (ಮೈ) ಎಕ IV ಹುಣಸೂರು ೨೪ ಕ್ರಿ.ಶ. ೧೧೬೨.
೨. ಎಸ್‌ಐಐ XV ಬಾಗೇವಾಡಿ ೧೦೪ ಕ್ರಿ.ಶ. ೧೧೬೫.
೩. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧; ?
೪. (ರೈ) ಎಕ V ಹಾಸನ ೮೪ ಕ್ರಿ.ಶ. ೧೨೩೦.
೫. (ಮೈ) ಎಕ VI ಕೃ.ಪೇಟೆ ೩೯ ಕ್ರಿ.ಶ. ೧೨೩೬.
೬. ಎಇ XXI ಹುಕ್ಕೇರಿ ೨ ಕ್ರಿ.ಶ. ೧೨೬೦.
೭. (ಮೈ) ಎಕ VI ಕೃ.ಪೇಟೆ ೯೫ ಕ್ರಿ.ಶ. ೧೩೧೨.
೮. ಸಾಧನೆ ೬-೧. ಕ್ರಿ.ಶ. ೧೧೫೬, ಪು. ೮೭-೮೯.
೯. (ರೈ) ಎಕ XII ಗುಬ್ಬಿ ೪೫ ಕ್ರಿ.ಶ. ೧೨೩೩.
೧೦. ಸಾಧನೆ ೬-೧ ಕ್ರಿ.ಶ. ೧೧೫೬, ಪು. ೮೭-೮೯.
೧೧. (ರೈ) ಎಕ V ಹಾಸನ ೧೩೯ ಕ್ರಿ.ಶ. ೧೨೦೦?.
೧೨. (ಮೈ) ಎಕ VI ಕೃ.ಪೇಟೆ ೮೬ ಕ್ರಿ.ಶ. ೧೧೭೯.
೧೩. (ರೈ) ಎಕ V ಹಾಸನ ೮೪ ಕ್ರಿ.ಶ. ೧೨೩೦.
೧೪. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.
೧೫. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.

**ಕೋಟೆಯ ಹಡಿಕೆ:**[೧] ಕೋಟೆಯ ಸಂರಕ್ಷಣೆಯ ಉದ್ದೇಶಕ್ಕೆ ಸಂಗ್ರಹಿಸುತ್ತಿದ್ದ ತೆರಿಗೆ (ಹದಿಕೆ=ತೆರಿಗೆ).

**ಖಾಣ:**[೨] ಮೇವಿನ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಖಾಣದು ಪೊತ್ತರ:**[೩] (?) (ಹೊತ್ತರ = ತೆರಿಗೆ)

**ಖಾಣ ನಿಬನ್ಧ:**[೪] ಮೇವಿನ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಗಾಣದ ವೊಕ್ಕಲುದೆಱೆ:**[೫] ಗಾಣಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದವರ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಗಾಣದೆಱೆ:**[೬] ಗಾಣಗಳ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಗ್ರಾಮದೆರೆ:**[೭] ಗ್ರಾಮದವರು ಕೊಡುವ ತೆರಿಗೆ; ಒಟ್ಟು ಗ್ರಾಮದ ತೆರಿಗೆ. ಕೆ.ವಿ. ರಮೇಶ್ ಅವರು ಹೇಳುವ ಆಳುಪೇಂದ್ರನ ಕಾಲದ ಶಾಸನಗಳಲ್ಲಿ ಬರುವ ಸಮುದಾಯ ಅಥವಾ ಸಮುದಾಯ ಗದ್ಯಾಣ ಇದೇ ಸ್ವರೂಪದ್ದಿರಬೇಕು.[೮]

**ಚಿನ್ನ ಬಣ್ಣಿ:**[೯] ಶಾಸನದಲ್ಲಿ ಚಿನ್ನ ಬಣ್ಣಿ ಸಮಸ್ತ ಸುಂಕವೆಂದು ಬರುತ್ತದೆ. ಚಿನ್ನದ ಮೇಲೆ ವಿಧಿಸುತ್ತಿದ್ದ ಸುಂಕವಿರಬಹುದೆ? (ಬಣ್ಣಿಗೆ = ತೆರಿಗೆ)

**ಚೋಳಕಾರುಣ್ಯಬಿಟ್ಟಿಭಂಡಿ:**[೧೦] ಇದು ಬಲ್ಲಾಳನು ಚೋಳರಾಜನ ಸಹಾಯಕ್ಕಾಗಿ ನರಸಿಂಹನನ್ನು ಕಳುಹಿಸಿಕೊಡಬೇಕಾದಾಗ ಆ ವೆಚ್ಚವನ್ನು ಬಹುಶಃ ತುಂಬಿಕೊಡಲು ಹಾಕಿದ ವಿಶೇಷ ತೆರಿಗೆಯಾಗಿರುವಂತಿದೆ. ಇದರಲ್ಲಿ ಬಿಟ್ಟಿ ಮತ್ತು ಭಂಡಿ ಎರಡು ಪದಗಳಿವೆ. ಬಿಟ್ಟಿ-ಪ್ರತಿಫಲವಿಲ್ಲದ, ರಾಜನು ಮಾಡಿಸುತ್ತಿದ್ದ ಕಾರ್ಯ. ಭಂಡಿಗೆ ಈ ಸಂದರ್ಭದಲ್ಲಿ ಏನು ಅರ್ಥವೋ ತಿಳಿಯದು. ಬಹುಶಃ ಬಿಟ್ಟಿ ಕೆಲಸದಲ್ಲಿ ಬಂಡಿಯನ್ನೂ ಬಿಟ್ಟಿಯಾಗಿ ತೊಡಗಿಸುವ ಒತ್ತಾಯದ ಕೆಲಸವಿರಬಹುದು. ಈ ತೆರಿಗೆಯನ್ನು ೧೨೧೭-೧೮ರಲ್ಲಿ ಹಾಕಲಾಯಿತೆಂದು ಡೆರೆಟ್ ಅವರು ಅಭಿಪ್ರಾಯ ಪಡುತ್ತಾರೆ.[೧೧] ಅದು ಕ್ರಿ.ಶ. ೧೨೯೧ರ ಶಾಸನದಲ್ಲೂ[೧೨] ಮುಂದುವರೆದಿರುವುದನ್ನು ಕಾಣಬಹುದು.

---

೧. (ರೈ) ಎಕ V ಹಾಸನ ೧೩೯ ಕ್ರಿ.ಶ. ೧೨೦೦?.
೨. (ರೈ) ಎಕ V ಹಾಸನ ೮೪ ಕ್ರಿ.ಶ. ೧೨೩೦.
೩. (ರೈ) ಎಕ V ಹಾಸನ ೮೪ ಕ್ರಿ.ಶ. ೧೨೩೦.
೪. (ರೈ) ಎಕ V ಬೇಲೂರು ೭೪ ಕ್ರಿ.ಶ. ೧೨೬೧.
೫. ಕಇ IV ಹಿರೇಕೆರೂರು ೧೪ ಕ್ರಿ.ಶ. ೧೧೭೨.
೬. (ರೈ) ಎಕ VIII ಸೊರಬ ೫೧೦ ಕ್ರಿ.ಶ. ೧೧೫೪.
೭. (ರೈ) ಎಕ VI ಕಡೂರು ೬ ಕ್ರಿ.ಶ. ೧೧೬೯ (?)
೮. ತುಳುನಾಡಿನ ಇತಿಹಾಸ, ಪು. ೭೫.
೯. (ಮೈ) ಎಕ VI ಪಾಂಡವಪುರ ೮೦ ಕ್ರಿ.ಶ. ೧೧೭೭.
೧೦. (ರೈ) ಎಕ V ಬೇಲೂರು ೭೪ ಕ್ರಿ.ಶ. ೧೨೬೧.
೧೧. , J. D. M. Derrett : ಪೂರ್ವೋಕ್ತ ಪು. ೧೦೯.
೧೨. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.

**ಜೆಟ್ಟದೆರೆ:**[೧] ಜಟ್ಟಿಗಳಿಗೆ ವಿಧಿಸುತ್ತಿದ್ದ ತೆರಿಗೆ.

**ಜೆಡೆದೆರೆ:**[೨] (?). ಇದು ಶಿಖಿಯ ಗಂಟಿನ ತೆರಿಗ ಎಂದು ಡೆರೆಟ್ ಭಾವಿಸುತ್ತಾರೆ.[೩] ಆದರೆ ಅರ್ಥದ ಸಂದಿಗ್ಧತೆ ಇದೆ.

**ಠಾಣೋಗ ಮಂನೆಯದ ಸುಂಕ:**[೪] ಸರಕಿನ ರೂಪದಲ್ಲಿ ಪಡೆಯುವ ಸುಂಕ(?).

**ಡೊಂಕೆವಣ:**[೫] ಶಾಸನದಲ್ಲಿ ಗಾಣದ ಡೊಂಕೆವಣ ಎಂದು ಬರುವುದರಿಂದ (ಡೊಂಕೆ=ಕೊಕ್ಕೆ) ಗಾಣದಲ್ಲಿ ಬಳಸಲಾಗುತ್ತಿದ್ದ ಕೊಕ್ಕೆಯ ಮೇಲೆ ಹಾಕಲಾಗುತ್ತಿದ್ದ ತೆರಿಗೆ ಇರಬಹುದೆ?

**ತಪೋಧನರ ಹದಿಕೆ:**[೬] ತಪೋಧನರ (=ತಪಸ್ವಿ) ಮೇಲೆ ಹಾಕುತ್ತಿದ್ದ ತೆರಿಗೆ ಅಥವಾ ತಪೋಧನರಿಗಾಗಿ ಕಲ್ಪಿಸುವ ಸೌಕರ್ಯದ ವೆಚ್ಚಕ್ಕಾಗಿ ಸಂಗ್ರಹಿಸುವ ತೆರಿಗೆ ಇರಬೇಕು. ಎರಡನೆಯ ಊಹೆಯ ಸಾಧ್ಯತೆ ಹೆಚ್ಚಾಗಿದೆ.

**ತಪ್ಪು:**[೭] ವ್ಯಕ್ತಿ ಮಾಡಿದ ಅಪರಾಧಕ್ಕಾಗಿ ಹಾಕಲಾಗುತ್ತಿದ್ದ ದಂಡವಿರಬೇಕು.

**ತಲೆವಣ:**[೮] ತಲೆ ಎಣಿಕೆಯ ಲೆಕ್ಕದಲ್ಲಿ ಹಾಕಲಾಗುತ್ತಿದ್ದ ತೆರಿಗೆ(?).

**ತವುಡಿ:**[೯] ಇದು ಸಾಮಾನ್ಯವಾಗಿ 'ತಪ್ಪಿ'ನ ಜೊತ ತಪ್ಪುತವುಡಿ ಎಂದು ಬರುತ್ತದೆ. ಒಂದು ರೀತಿಯ ದಂಡ.

**ತಳಸಾರಿ:**[೧೦] ಸ್ಥಳದ ತೆರಿಗೆ. 'ತಳಸುಂಕ' ಇದೂ ಒಂದೆ ಇರಬಹುದೆ?

**ತಳಾರಗಾಣಿಕೆ:**[೧೧] ಊರಿನ ತಳವಾರನಿಗೆ ಕೊಡುತ್ತಿದ್ದ ಕಾಣಿಕೆ.

**ತಳಾರಿಕೆಯ ಸುಂಕ:**[೧೨] ಶಾಸನದಲ್ಲಿ 'ಪುರನಗರಗಳ ಸಂನಿಧಿಯೊಳ್ಪಟ್ಟಣದ ತಳಾರಿಕೆಯ ಸುಂಕದೊಳಗೆ' ಎನ್ನುವುದರಿಂದ ಪುರ, ನಗರಗಳ ಕಾವಲಿನ ವ್ಯವಸ್ಥೆಗಾಗಿ ಸಂಗ್ರಹಿಸುತ್ತಿದ್ದ ತೆರಿಗೆಯಾಗಿದೆ.

**ತಿಪ್ಪೆ ಸುಂಕ:**[೧೩] ಊರ ತಿಪ್ಪೆಯನ್ನು ಗೊಬ್ಬರವಾಗಿ ಉಪಯೋಗಿಸಿ ಅದಕ್ಕಾಗಿ ಕೊಡಬೇಕಾದ ಶುಲ್ಕ.[೧೪]

---

೧. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.
೨. (ರೈ) ಎಕ V ಹಾಸನ ೧೩೯ ಕ್ರಿ.ಶ. ೧೨೦೦; (ರೈ) ಎಕ V ಅರಸಿಕೆರೆ ೧೧೭ ಕ್ರಿ.ಶ. ೧೧೬೧.
೩. J. D. M. Derrett: ಪೂರ್ವೋಕ್ತ ಪು. ೧೯೭-೨೦೩.
೪. ಎಸ್‌ಐಐ XVIII ರಾಣೆಬೆನ್ನೂರು ೧೮೩ ಕ್ರಿ.ಶ. ೧೧೭೨.
೫. ಕಇ IV ಹಿರೇಕೆರೂರು ೧೩ ಕ್ರಿ.ಶ. ೧೧೬೫.
೬. (ರೈ) ಎಕ VII ಚನ್ನಗಿರಿ ೬೪ ಕ್ರಿ.ಶ. ೧೨೧೪.
೭. (ರೈ) ಎಕ XI ಹಿರಿಯೂರು ೧೬ ಕ್ರಿ.ಶ. ೧೨೦೫.
೮. (ರೈ) ಎಕ XI ದಾವಣಗೆರೆ ೮೭ ಕ್ರಿ.ಶ. ೧೨೬೪.
೯. (ರೈ) ಎಕ XI ಹಿರಿಯೂರು ೬೪ ಕ್ರಿ.ಶ. ೧೨೦೫.
೧೦. ಸಾಧನೆ ೬-೧ ಕ್ರಿ.ಶ. ೧೧೫೬ ಪು. ೮೭-೮೮.
೧೧. ಎಸ್‌ಐಐ XVIII ಬಿಜಾಪುರ ೧೯೮ ಕ್ರಿ.ಶ. ೧೧೯೬.
೧೨. (ರೈ) ಎಕ VII ಶಿಕಾರಿಪುರ ೧೪೬ ಕ್ರಿ.ಶ. ೧೧೬೦.
೧೩. (ರೈ) ಎಕ V ಅರಸಿಕೆರೆ ೧೪೧ ಕ್ರಿ.ಶ. ೧೧೫೯.
೧೪. (ಮೈ) ಎಕ II ಪೀಠಿಕೆ, ಪು. LXvii.

**ತೆಪ್ಪ ಸುಂಕ:**[೧] ಹರಿಗೋಲು ಅಥವಾ ನಾವೆಯ ಮೇಲೆ ವಿಧಿಸುತ್ತಿದ್ದ ಸುಂಕ.

**ತೊಡರು:**[೨] (?)

**ತೊತ್ತುದೆಜೆ:**[೩] ಗುಲಾಮರನ್ನು ಮಧ್ಯಕಾಲೀನ ಕರ್ನಾಟಕದಲ್ಲಿ ಮಾರುತ್ತಿದ್ದರು. ಆ ಮಾರಾಟದ ಮೇಲೆ ವಿಧಿಸುತ್ತಿದ್ದ ತೆರಿಗೆ.

**ತೊದರು:**[೪] (?)

**ತೋಂಟದ ಬಟ್ಟೆ ಸುಂಕ:**[೫] ತೋಟದ ದಾರಿಯನ್ನು ಉಪಯೋಗಿಸಿದ್ದಕ್ಕಾಗಿ ಕೊಡಬೇಕಾದ ತೆರಿಗೆ (?).

**ತೋಂಟದ ಸುಂಕ:**[೬] ತೋಟಗಳಿಗೆ ವಿಧಿಸುತ್ತಿದ್ದ ಸುಂಕ.

**ತೋಂಟದಾಯ**[೭] ತೋಟದ ಉತ್ಪತ್ತಿಯ ಮೇಲಿನ ತೆರಿಗೆ.

**ದಂಡ ದೋಷ:**[೮] ತಪ್ಪಿತಸ್ಥರಿಗೆ ವಿಧಿಸುತ್ತಿದ್ದ ಜುಲ್ಮಾನೆ.

**ದಂಡಿನ ಅಭ್ಯಾಗತೆ:**[೯] ಗ್ರಾಮ, ಊರು ಅಥವಾ ಪಟ್ಟಣಕ್ಕೆ ರಾಜನೊಂದಿಗೆ ಬಂದ ಸೈನ್ಯದ ವೆಚ್ಚವನ್ನು ಭರಿಸಲು ಸ್ಥಳೀಯರು ನೀಡಬೇಕಾದ ಅನಿರೀಕ್ಷಿತ ಕಾಣಿಕೆ.

**ದಂಡಿನ ಕಾಣಿಕೆ:**[೧೦] ರಾಜ್ಯದ ಸೈನ್ಯದ ವೆಚ್ಚ ಭರಿಸಲು ಬಹುಶಃ ವಿಶೇಷ ಸಂದರ್ಭಗಳಲ್ಲಿ ಹಾಕುತ್ತಿದ್ದ ತೆರಿಗೆ.

**ದನಬಳ:**[೧೧] ದನಗಳ ಮೇಲೆ ವಿಧಿಸುತ್ತಿದ್ದ ತೆರಿಗೆ ಇರಬಹುದೆ?

**ದರ್ಶನ:**[೧೨] ರಾಜ ಅಥವಾ ಹಿರಿಯ ಅಧಿಕಾರಿಗಳು ಬಂದಾಗ ನೀಡಬೇಕಾದ ಕಾಣಿಕೆ.

**ದವಸಾಯ:**[೧೩] ಧಾನ್ಯದ ರೂಪದಲ್ಲಿ ಸಂಗ್ರಹಿಸುವ ತೆರಿಗೆ.

---

೧. (ರೈ) ಎಕ V ಬೇಲೂರು ೧೭೧ ಕ್ರಿ.ಶ. ೧೧೬೦.

೨. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.

೩. (ಮೈ) ಎಕ IV ಹುಣಸೂರು ೨೪ ಕ್ರಿ.ಶ. ೧೧೬೨.

೪. (ರೈ) ಎಕ V ಹಾಸನ ೮೪ ಕ್ರಿ.ಶ. ೧೨೩೦.

೫. ಸಾಧನೆ ೩-೩ ಕ್ರಿ.ಶ. ೧೧೫೯. ಪು. ೧೦೫-೬.

೬. ಎಸ್‌ಐಐ XVIII ಬಂಕಾಪುರ ೨೯೧ ಕ್ರಿ.ಶ. ೧೨ ಶ.ಮಾ.

೭. ಎಸ್‌ಐಐ XV ಗದಗು ೫೧ ಕ್ರಿ.ಶ. ೧೧೫೫.

೮. ಎಸ್‌ಐಐ XV ಹುಬ್ಬಳ್ಳಿ ೧೮೭ ಕ್ರಿ.ಶ. ೧೨೪೮.

೯. (ಮೈ) ಎಕ VII ನಾಗಮಂಗಲ ೭೩ ಕ್ರಿ.ಶ. ೧೨೮೪.

೧೦. (ಮೈ) ಎಕ I ಸೋಮವಾರಪೇಟೆ ೫೦ ಕ್ರಿ.ಶ. ೧೩ ಶ.ಮಾ.

೧೧. ಎಇ XVI ಬಂಕಾಪುರ ೨೫ ಕ್ರಿ.ಶ. ೧೨೫೫.

೧೨. (ರೈ) ಎಕ VIII ಸೊರಬ ೧೭೯ ಕ್ರಿ.ಶ. ೧೧೮೯.

೧೩. ಎಸ್‌ಐಐ IX(i) ಹಡಗಲಿ ೩೪೧ ಕ್ರಿ.ಶ. ೧೨೨೬.

**ದಸವಂದ:**[೧] ಇದು ಸಂಸ್ಕೃತದ ದಶಬಂಧ ಶಬ್ದದಿಂದ ರೂಪಿತವಾಗಿದೆ. ಇದಕ್ಕೆ ವಿವಿಧ ವಿದ್ವಾಂಸರು ವಿವಿಧ ವಿವರಣೆಗಳನ್ನು ನೀಡಿದ್ದಾರೆ. ನೀರಾವರಿಗಾಗಿ ಬಾವಿ ಕೆರೆಗಳನ್ನು ಸಂರಕ್ಷಿಸಲು ಸಂಗ್ರಹಿಸುವ ಆದಾಯದ ೧/೧೦ ಭಾಗದ ಆದಾಯ; ಒಟ್ಟು ಆದಾಯದ ೧/೧೦ ಭಾಗವನ್ನು ಕೆರೆಯನ್ನು ದುರಸ್ತಿ ಮಾಡುವ ವ್ಯಕ್ತಿಗೆ ಸಲ್ಲಿಸಬೇಕಾದದ್ದು; ೧/೧೦ ಭಾಗದ ಆದಾಯ ತೆರಿಗೆ ಮುಂತಾದ ವಿವರಣೆಗಳಿವೆ.[೨] ದಸವಂದ ಪತ್ತೊಂದಿಯ ರೂಪಕ್ಕೆ ಸಮಾನವಾದುದಾಗಿ ಬಳಕೆಯಾಗಿದೆಯಲ್ಲದೆ ೧/೧೦ ಭಾಗ ಎನ್ನುವ ಅರ್ಥವನ್ನೇ ಕೊಡುತ್ತದೆ.[೩]

**ದಳ:**[೪] (?)

**ದಾಯಸುಂಕ:**[೫] (?) ದಾಯದವರ್ಗಳ ತೆಱೆ ಎಂದು ಒಂದು ಶಾಸನದಲ್ಲಿದೆ.[೬]

**ನಲ್ಲಾವು ನಲ್ಲೆತ್ತು:**[೭] (?) ನಲ್ಲೆಮ್ಮೆ[೮] ದೊರೆಯುತ್ತದೆ. ಮತ್ತು ನಲ್ಲೆಮ್ಮೆಯ ಹದಿಕೆ ಎನ್ನುವ ಪ್ರಯೋಗ ಎನ್ನುವ ರೂಪ ದೊರೆಯುತ್ತದೆ. -ಸೌಇಇ. IX-i; ೩೪೯; ೧೨೮೫. ಒಳ್ಳೆಯ ಹಸುಗಳು, ಎತ್ತುಗಳು ಮೇಲೆ ಹಾಕುತ್ತಿದ್ದ ತೆರಿಗೆ ಎಂದು ಕ. ಕ. ನಿಘಂಟು (IV ಪು. ೪೨೯೯, ೪೪೦೦) ಸೂಚಿಸಿರುವುದು ವಿಚಾರಾರ್ಹ.

**ನಾಡದೆಱೆ:**[೯] (?)

**ನಾಡವಟ್ಟ:**[೧೦] (?)

**ನಾಡ ಸಮಯದ ಹದಿಕೆ:**[೧೧] (?)

**ನಾಡ ಹೆಗ್ಗಡೆ ಕಾಣಿಕೆ:**[೧೨] ನಾಡಿನ ಒಡೆಯನಿಗೆ ನೀಡುತ್ತಿದ್ದ ಕಾಣಿಕೆ.

**ನಾಡು ಕಟ್ಟು:**[೧೩] (?)

**ನಾವಿದದೆಱೆ:**[೧೪] ಕ್ಷೌರಿಕರ ಮೇಲೆ ವಿಧಿಸುತ್ತಿದ್ದ ತೆರಿಗೆ.

---

೧. ಎಸ್ಐಐ XV ಗದಗು ೫೧ ಕ್ರಿ.ಶ. ೧೧೫೫.

೨. B. R. Gopal : The Chalukyas of Kalyana and the Kalachuris ಪು. ೪೦೧.

೩. S. G. Ghatapanadi : ಪೂರ್ವೋಕ್ತ ಪು. ೭೪.

೪. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧ ?.

೫. (ರೈ) ಎಕ VIII ಸೊರಬ ೧೭೯ ಕ್ರಿ.ಶ. ೧೧೮೯.

೬. (ರೈ) ಎಕ V ಹಾಸನ ೮೪ ಕ್ರಿ.ಶ. ೧೨೩೦.

೭. (ರೈ) ಎಕ VI ತರೀಕೆರೆ ೨೦ ಕ್ರಿ.ಶ. ೧೧೮೫.

೮. ಎಸ್ಐಐ IX(i) ಹರಪನಹಳ್ಳಿ ೩೪೯ ಕ್ರಿ.ಶ. ೧೨೮೨.

೯. (ಮೈ) ಎಕ VII ಮಳವಳ್ಳಿ ೧೪೪ ಕ್ರಿ.ಶ. ೧೩೧೮.

೧೦. (ಮೈ) ಎಕ VII ಮದ್ದೂರು ೬೫ ಕ್ರಿ.ಶ. ೧೨೭೮.

೧೧. (ರೈ) ಎಕ VII ಚನ್ನಗಿರಿ ೬೪ ಕ್ರಿ.ಶ. ೧೨೧೪.

೧೨. (ರೈ) ಎಕ V ಹಾಸನ ೧೩೯ ಕ್ರಿ.ಶ. ೧೨೦೦.

೧೩. (ಮೈ) ಎಕ VII ಮದ್ದೂರು ೧ ಕ್ರಿ.ಶ. ೧೨೭೮.

೧೪. (ಮೈ) ಎಕ IV ಹುಣಸೂರು ೨೪ ಕ್ರಿ.ಶ. ೧೧೬೨.

| | |
|---|---|
| ನೂಲ ಹದಿಕೆ:[೧] ನೂಲು:[೨] | ರಾಟೆಯಿಂದ ತೆಗೆದ ದಾರದ ನೂಲಿನ ಮೇಲೆ ವಿಧಿಸುತ್ತಿದ್ದ ತೆರಿಗೆ. |
| **ನೆಲದೆಱೆ:**[೩] | ಶವವನ್ನು ಸುಡುವ ಜಾಗಕ್ಕೆ ಕೊಡಬೇಕಾದ ತೆರಿಗೆ (ಕ.ಕ. ನಿಘಂಟು V, ಪು. ೪೯೩೧) |
| **ನ್ಯಾಸದೆಱೆ:**[೪] | ನ್ಯಾಸವಾಗಿಟ್ಟುಕೊಂಡದ್ದಕ್ಕಾಗಿ ಹಾಕುತ್ತಿದ್ದ ತೆರಿಗೆ. |
| **ಪಂಚಕರುಕದೆಱೆ:**[೫] | ಬಡಗಿ, ಅಕ್ಕಸಾಲೆ, ಕಮ್ಮಾರ, ಕಲ್ಲುಕುಟಿಗ ಹಾಗೂ ಕಂಚುಗಾರ ಅಥವಾ ಬಡಗಿ, ನೆಯ್ಗೆಕಾರ, ಕ್ಷೌರಿಕ, ಅಗಸ ಹಾಗೂ ಚಮ್ಮಾರರ ಮೇಲೆ ಹಾಕುತ್ತಿದ್ದ ತೆರಿಗೆ. |
| **ಪಂನಾಯ:**[೬] | (?) ವಿದ್ವಾಂಸರಲ್ಲಿ ವಿಶೇಷವಾಗಿ ಚರ್ಚೆಯಾಗಿದೆ. ವರ್ತಕ ವರ್ಗದಿಂದ ಸಂಗ್ರಹಿಸುತ್ತಿದ್ದ ಒಂದು ರೀತಿಯ ಸುಂಕ,[೭] ಕೆಲವು ನಿಬಂಧನೆಗೆ ಒಳಪಟ್ಟ ಭೂಮಿ,[೮] ಎಲೆಗಳ ಮೇಲೆ ಹಾಕುತ್ತಿದ್ದ ತೆರಿಗೆ,[೯] ದಾನವಾಗಿ ಬಂದ ಭೂಮಿಯ ಆದಾಯ[೧೦] ಮುಂತಾದ ವಿವರಣೆಗಳಿವೆ. ಶಾಸನಗಳಲ್ಲಿ ತೋಂಟದ ಪನ್ನಾಯ,[೧೧] ಗುಳಿಯ ಪನ್ನಾಯ,[೧೨] ಊರ ಪನ್ನಾಯ[೧೩] ಎಂದು ಬರುವುದರಿಂದ ಎಲೆಗಳ ಮೇಲೆ ಹಾಕುತ್ತಿದ್ದ ತೆರಿಗೆ, ದಾನವಾಗಿ ಬಂದ ಭೂಮಿಯ ಆದಾಯ, ವರ್ತಕರಿಂದ ಸಂಗ್ರಹಿಸುತ್ತಿದ್ದ ಸುಂಕ ಮುಂತಾದ ವಿವರಣೆಗಳೂ ಸಂದಿಗ್ಧವಾಗಿ ನಿಲ್ಲುತ್ತವೆ. |
| **ಪಟ್ಟಬದ್ಧ:**[೧೪] | ರಾಜರ ಪಟ್ಟಾಭಿಷೇಕದ ಸಂದರ್ಭದಲ್ಲಿ ವಿಧಿಸುತ್ತಿದ್ದ ವಿಶೇಷ ತೆರಿಗೆ. |
| **ಪಸಾರದೆಱೆ:**[೧೫] | ಸಂತೆಗಳಲ್ಲಿ ವಸ್ತುಗಳನ್ನು ಹರಡಿಕೊಂಡದ್ದಕ್ಕೆ ಅಥವಾ ಬಯಲಂಗಡಿಗಳಿಗೆ ಹಾಕುತ್ತಿದ್ದ ತೆರಿಗೆ. |
| **ಪಾರಿಖಾಯ:**[೧೬] | (?) |

---

೧. (ರೈ) ಎಕ VI ತರೀಕೆರೆ ೨೦ ಕ್ರಿ.ಶ. ೧೧೮೭.
೨. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧; ?.
೩. ಎಸ್ಐಐ XVIII ಹಾವೇರಿ ೧೬೬ ಕ್ರಿ.ಶ. ೧೧ ಶ.ಮಾ.
೪. ಎಸ್ಐಐ XX ಸಿಂದಗಿ ೩೦೦ ಕ್ರಿ.ಶ. ೧೨ ಶ.ಮಾ.
೫. ಎಸ್ಐಐ IX(i) ಹರಪನಹಳ್ಳಿ ೩೨೪ ಕ್ರಿ.ಶ. ೧೧೯೭-೯೮.
೬. ಎಸ್ಐಐ XV ಹುನಗುಂದ ೨೪೨ ಕ್ರಿ.ಶ. ೧೧೮೬-೮೭.
೭. S. Gururajachar : ಪೂರ್ವೋಕ್ತ ಉದಾಹೃತ, ಪು.೧೪೪.
೮. L.D. Barnet : ಎಇ XV ಪು. ೩೩೬.
೯. G. R. Kuppuswamy : Economic Conditions of Karnataka ಪು. ೧೫೪.
೧೦. S. Gururajachar : ಪೂರ್ವೋಕ್ತ, ಪು. ೧೪೪.
೧೧. ಎಸ್ಐಐ XV ಮುಂಡರಗಿ ಪೇಟ ೫೭ ಕ್ರಿ.ಶ. ೧೧೮೪.
೧೨. (ಮೈ) ಎಕ VI ಪಾಂಡವಪುರ ೭೯ ಕ್ರಿ.ಶ. ೧೧೭೫.
೧೩. ಎಸ್ಐಐ XV ಹುನಗುಂದ ೨೪೨ ಕ್ರಿ.ಶ. ೧೧೮೬-೮೭.
೧೪. (ರೈ) ಎಕ XI ಹಿರಿಯೂರು ೮೭ ಕ್ರಿ.ಶ. ೧೩೧೩.
೧೫. ಎಸ್ಐಐ XVIII ಬಿಜಾಪುರ ೩೭೭ ಕ್ರಿ.ಶ. ೧೨೪೧.
೧೬. ಎಸ್ಐಐ XX ಸಿಂದಗಿ ೧೫೮ ಕ್ರಿ.ಶ. ೧೧೭೬.

| | |
|---|---|
| **ಪುತ್ರೋತ್ಸಾಹ:**[೧] | ರಾಜನಿಗೆ ಪುತ್ರ ಜನಿಸಿದಾಗ ವಿಧಿಸುತ್ತಿದ್ದ ವಿಶೇಷ ತೆರಿಗೆ. |
| **ಪುರದ ಹದಿಕೆ:**[೨] | ನಗರ ಅಥವಾ ದಾನವಾಗಿ ಕೊಟ್ಟ ಗ್ರಾಮಕ್ಕೆ ವಿಧಿಸುತ್ತಿದ್ದ ತೆರಿಗೆ. |
| **ಪುರಾಣದೆರೆ:**[೩] | ಪುರಾಣದ ಅಭ್ಯಾಸಕ್ಕಾಗಿ ಕೊಟ್ಟ ಭೂಮಿಯ ಮೇಲಿನ ತೆರಿಗೆ. |
| **ಪ್ರಭಾಕರದೆರೆ:**[೪] | ಪೂರ್ವ ಮೀಮಾಂಸೆಯ ಓದಿಗಾಗಿ ಕೊಟ್ಟ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ. |
| **ಬಟೆ(ತ)ಯ:**[೫] | (?) |
| **ಬಣ್ಣಿಗೆ:**[೬] | (?) |
| **ಬಣ್ಣಿಗೆದೆಜು:**[೭] | ಬಣ್ಣಿಗೆ, ಬಣ್ಣಿಗೆದೆಜು ಒಂದೇ ಇರಬಹುದು. ಊರು ಮತ್ತು ತೋಟದ ಮೇಲೆ ಈ ತೆರಿಗೆ ಹಾಕುತ್ತಿದ್ದುದಕ್ಕೆ ಸೂಚನೆಗಳಿವೆ. |
| **ಬಳಿ:**[೮] | (?) ತಪ್ಪ ತೌಡಿವೊಳಗಾದ ಸಮಸ್ತ ಬಳಿಸಹಿತ ಎಂದು ಒಂದು ಶಾಸನ ಪ್ರಯೋಗ ದೊರಕುತ್ತದೆ. (ಎಕ XVI ,ಚಿಕ್ಕನಾಯಕನಹಳ್ಳಿ. ೯೮; ಕ್ರಿ.ಶ. ೧೩೧೮.) |
| **ಬಾಲ ಪಣ:**[೯] | ಕೆಲವರು ಬಾಲಕರ ಮೇಲಿನ ತೆರಿಗೆಯೆಂದು ಅರ್ಥೈಸಿದ್ದಾರೆ. ಎಂ. ಚಿದಾನಂದ ಮೂರ್ತಿಯವರು[೧೦] 'ಇದು ಬಹುಶಃ ಎತ್ತುಗಳ ಮೇಲೆ ಹಾಕುತ್ತಿದ್ದ ತೆರಿಗೆ' ಎಂದಿದ್ದಾರೆ. ಈ ಅಭಿಪ್ರಾಯಕ್ಕೆ ಪೋಷಕವಾಗಿ ಇಂದಿಗೂ ಪಾಂಡವಪುರ ತಾಲ್ಲೂಕಿನ ಚಿನಕುರಳಿ ಗ್ರಾಮದಲ್ಲಿ 'ಬಾಲದ್ದಣ'ದ ಹೆಸರಿನಲ್ಲಿ ತೆರಿಗೆ ಸಂಗ್ರಹಿಸಲಾಗುತ್ತಿದೆ. ದನಕರುಗಳನ್ನು ಕೊಂಡವರಿಂದ ಸ್ವೀಕರಿಸುವ ಎರಡು ರೂಪಾಯಿಗಳು. ಹರಾಜಿನ ಗುತ್ತಿಗೆಯನ್ನು ಇಂತಿಷ್ಟು ಎಂದು ಕೂಗಿ ಅದನ್ನು ಧಾರ್ಮಿಕ ಕಾರ್ಯಗಳಿಗೆ ಬಳಸಲಾಗುತ್ತದೆ.[೧೧] |
| **ಬಾಸಿಗದೆಜು:**[೧೨] | ಮದುವೆ ಸಮಯದಲ್ಲಿ ವಧೂವರರಿಗೆ ಕಟ್ಟುವ ಬಾಸಿಂಗದ ಮೇಲೆ ಹಾಕುತ್ತಿದ್ದ ತೆರಿಗೆ ಇರಬೇಕು. ಆದರೆ ಮದುವೆಯ ಮೇಲೆ ಹಾಕುತ್ತಿದ್ದ ತೆರಿಗೆಯೂ ಒಂದಿದೆ. ಇವೆರಡೂ ಬೇರೆಯೋ ಒಂದೆಯೋ ಗೊತ್ತಾಗುವುದಿಲ್ಲ. |

---

೧. (ರೈ) ಎಕ XI ಹಿರಿಯೂರು ೮೭ ಕ್ರಿ.ಶ. ೧೩೧೩.

೨. (ಮೈ) ಎಕ V ಮೈಸೂರು ೧೧೯ ಕ್ರಿ.ಶ. ೧೩ ಶ.ಮಾ.

೩. ಎಸ್ಐಐ XX ಸಿಂದಗಿ ३೦೦ ಕ್ರಿ.ಶ. ೧೨ ಶ.ಮಾ.

೪. ಎಸ್ಐಐ XX ಸಿಂದಗಿ ३೦೦ ಕ್ರಿ.ಶ. ೧೨ ಶ.ಮಾ.

೫. ಎಇ XXI ಹುಕ್ಕೇರಿ ೨ ಕ್ರಿ.ಶ. ೧೨೬೦.

೬. ಎಸ್ಐಐ XVIII ಬಿಜಾಪುರ ೧೯೮ ಕ್ರಿ.ಶ. ೧೧೯೬.

೭. ಎಸ್ಐಐ XV ಗದಗು ೧೩೨ ಕ್ರಿ.ಶ. ೧೧೭೮.

೮. (ಮೈ) ಎಕ VI ಕೃ.ಪೇಟೆ. ೯೫ ಕ್ರಿ.ಶ. ೧೩೧೨.

೯. (ರೈ) ಎಕ V ಚನ್ನರಾಯಪಟ್ಟಣ ೧೮೧ ಕ್ರಿ.ಶ. ೧೨೦೫.

೧೦. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೪೦೧.

೧೧. ವಿವರಗಳಿಗೆ ನೋಡಿ: ಸಿ. ಮಹದೇವ : 'ಕನ್ನಡ ಶಾಸನಗಳಲ್ಲಿ ಬಾಲವಣ', ಕ.ಸಾ.ಪ.ಪ. ೭೧-೭೨, (೧-೨) ಪು. ೬೦-೬೪.

೧೨. (ಮೈ) ಎಕ VI ಕೃ.ಪೇಟೆ ೮೬ ಕ್ರಿ.ಶ. ೧೧೭೯.

**ಬಾಳಿಕೆ ಸೇಸೆ:**[೧] (?)

**ಬಿಟ್ಟಿ:**[೨] ಒತ್ತಾಯವಾಗಿ ತೆಗೆದುಕೊಳ್ಳುತ್ತಿದ್ದ ಪ್ರತಿಫಲರಹಿತ ದೈಹಿಕ ಶ್ರಮದ ದುಡಿಮೆ ರೂಪದ ತೆರಿಗೆ. ಉದಾಹೃತ ಶಾಸನದಲ್ಲಿ 'ಕಡಾಯ ಬಿಟ್ಟಿ' ಎಂದು ಬರುವುದರಿಂದ ಇದು ಮಾಡಲೇಬೇಕಾದದ್ದು ಎನ್ನುವುದನ್ನು ಸೂಚಿಸುತ್ತದೆ.

**ಬಿನುಗುದೆರೆ:**[೩] (?)

**ಬಿಲುಕೊಡೆ:**[೪] ಇದು ಎರಡು ಸುಂಕಗಳನ್ನು ಸೂಚಿಸುತ್ತದೆ. ಪ್ರಾಣಿಗಳ ಮೇಲೆ ಹೇರಿಕೊಂಡು ಬರುತ್ತಿದ್ದ ಸಾಮಾನುಗಳ ಮೇಲೆ ಹಾಕುತ್ತಿದ್ದ ಸುಂಕಗಳೆಂದು ಊಹಿಸಲು ಅವಕಾಶವಿದೆ.[೫]

**ಬಿಲುವಡಿಕೆ:**[೬] (?)

**ಬಿಲ್ಲ ಹಡಿಕೆ:**[೭] (?)

**ಬೀರವಣ:**[೮] ಗ್ರಾಮದ ಸಂರಕ್ಷಣೆಗಾಗಿ ಇಲ್ಲವೆ ಸಂಚಾರಿ ವರ್ತಕರ ಸಂರಕ್ಷಣೆಗಾಗಿ ಇರುವ ವೀರರ ಜೀವಿತಕ್ಕಾಗಿ ಸಂಗ್ರಹಿಸಲಾಗುವ ಸುಂಕ.[೯] ಇದು ಬಹುಶಃ ವೀರರಾದವರಿಗೆ ನಿಯತಕಾಲಿಕವಾಗಿ ಮನ್ನಣೆಯ ರೂಪದಲ್ಲಿ ಸಲ್ಲುತ್ತಿದ್ದ ಹಣವೆಂದು ತೋರುತ್ತದೆ[೧೦] ಎಂಬ ಅಭಿಪ್ರಾಯವೂ ಇದೆ.

**ಬೆಸಗೆ:**[೧೧] (?)

**ಬೆಡುಗೆ:**[೧೨] (?)

**ಬೆಳ್ಳಾಯ:**[೧೩] (?)

**ಬೋಗಾರದೆಱೆ:**[೧೪] ಲೋಹಕಾರರ ಮೇಲೆ ಹಾಕುತ್ತಿದ್ದ ತೆರಿಗೆ (ಸಂ.ವ್ಯೋಕಾರ=ಕಂಚುಗಾರ).

---

೧. (ರೈ) ಎಕ VI ಚಿಕ್ಕಮಗಳೂರು ೧೦೫ ಕ್ರಿ.ಶ. ೧೩೪೩.

೨. ಎಸ್‌ಐಐ XVIII ಬಿಜಾಪುರ ೩೭೭ ಕ್ರಿ.ಶ. ೧೨೪೧.

೩. (ಮೈ) ಎಕ VI ಕೃ.ಪೇಟೆ ೮೬ ಕ್ರಿ.ಶ. ೧೧೭೯.

೪. ಎಸ್‌ಐಐ XX ಹಾನಗಲ್ಲು ೧೯೬ ಕ್ರಿ.ಶ. ೧೨೨೪.

೫. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೪೦೧.

೬. ಎಸ್‌ಐಐ IX(i) ಹರಪನಹಳ್ಳಿ ೩೫೦ ಕ್ರಿ.ಸ. ೧೨೮೨.

೭. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧;?.

೮. ಎಸ್‌ಐಐ XV ರೋಣ ೨೩೭ ಕ್ರಿ.ಶ. ೧೧೬೫.

೯. ಆರ್.ಎನ್. ಗುರವ : 'ತಂಬೂರ ಶಾಸನಗಳು', ಸಾಧನೆ ೬-೧, ಪು. ೮೫.

೧೦. ಆರ್. ಶೇಷಶಾಸ್ತ್ರಿ : ಪೂರ್ವೋಕ್ತ, ಪು. ೨೦೭.

೧೧. (ರೈ) ಎಕ V ಬೇಲೂರು ೯೨ ಕ್ರಿ.ಶ. ೧೨೭೦.

೧೨. (ಮೈ) ಎಕ IV ಚಾಮರಾಜನಗರ ೪ ಕ್ರಿ.ಶ. ೧೨೮೧.

೧೩. ಎಸ್‌ಐಐ XVIII ಬಿಜಾಪುರ ೧೯೮ ಕ್ರಿ.ಶ. ೧೧೯೬.

೧೪. (ಮೈ) ಎಕ III ಗುಂಡ್ಲುಪೇಟೆ ೧೩೬ ಕ್ರಿ.ಶ. ೧೫೧೩.

**ಭಂಡಿ ಕಳುಕು:**[೧] (?)

**ಭಂಡಿದೇಜಿ:**[೨] ಬಂಡಿಗಳ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಮಂಡೆ ಗದ್ಯಾಣ:**[೩]
**ಮಂಡೆದೇಜಿ:**[೪] } ಎರಡೂ ಒಂದೇ ಇರಬಹುದು. ಪ್ರತಿಯೊಬ್ಬ ವ್ಯಕ್ತಿಯ ಮೇಲೂ ಹಾಕುತ್ತಿದ್ದ ತೆರಿಗೆ. 'ತಲೆವಣ' ಇದ್ದದ್ದನ್ನು ಈಗಾಗಲೇ ಗಮನಿಸಲಾಗಿದೆ.

**ಮಗ್ಗಕಾಣಿಕೆ:**[೫]
**ಮಗ್ಗದೇಜಿ:**[೬]
**ಮಗ್ಗ ಸುಂಕ:**[೭] } ಮಗ್ಗಗಳ ಮೇಲೆ ಹಾಕುತ್ತಿದ್ದ ತೆರಿಗೆ.

**ಮಠದೇಜಿ :**[೮] ಮಠಗಳ ಮೇಲೆ ಹಾಕುತ್ತಿದ್ದ ತೆರಿಗೆ.

**ಮತ್ತನೆಯವಣ:**[೯] (?)

**ಮದುವೆ ಸುಂಕ:**[೧೦] ಮದುವೆಗಾಗಿ ಸಲ್ಲಿಸಬೇಕಾದ ತೆರಿಗೆ.

**ಮನೆವಣ:**[೧೧]
**ಮನೆ ಸುಂಕ:**[೧೨] } ಮನೆಯ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಮನ್ನೆಯ:**[೧೩]
**ಮನ್ನೆಯವಣ:**[೧೪] } ಉಂಬಳಿಯಾಗಿ ನೀಡಿದ ಭೂಮಿಯ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಮಯಿದೇಜಿ:**[೧೫] (?)

---

೧. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.
೨. (ಮೈ) ಎಕ IV ಹುಣಸೂರು ೨೪ ಕ್ರಿ.ಶ. ೧೧೬೨.
೩. (ಮೈ) ಎಕ IV ಚಾಮರಾಜನಗರ ೪ ಕ್ರಿ.ಶ. ೧೨೮೧.
೪. ಎಸ್ಐಐ XVIII ಹಾವೇರಿ ೨೨೭ ಕ್ರಿ.ಶ. ೧೩ ಶ.ಮಾ.
೫. (ಮೈ) ಎಕ IV ಚಾಮರಾಜನಗರ ೨೯೫ ಕ್ರಿ.ಶ. ೧೩೩೭.
೬. (ಮೈ) ಎಕ VII ನಾಗಮಂಗಲ ೧೮೪ ಕ್ರಿ.ಶ. ೧೧೭೩.
೭. (ರೈ) ಎಕ XII ಮಧುಗಿರಿ ೩ ಕ್ರಿ.ಶ. ೧೩೧೩.
೮. (ರೈ) ಎಕ VI ಕಡೂರು ೧೨೫ ಕ್ರಿ.ಶ. ೧೨೭೨.
೯. (ರೈ) ಎಕ VIII ಸೊರಬ ೧೭೯ ಕ್ರಿ.ಶ. ೧೧೮೯.
೧೦. (ರೈ) ಎಕ V ಹಾಸನ ೧೧೯ ಕ್ರಿ.ಶ. ೧೧೭೩.
೧೧. (ಮೈ) ಎಕ IV ಚಾಮರಾಜನಗರ ೩ ಕ್ರಿ.ಶ. ೧೨೮೧.
೧೨. (ಮೈ) ಎಕ VII ನಾಗಮಂಗಲ ೧೮೪ ಕ್ರಿ.ಶ. ೧೧೭೩.
೧೩. (ಮೈ) ಎಕ VI ಕೃ.ಪೇಟೆ ೯೦ ಕ್ರಿ.ಶ. ೧೨೯೯.
೧೪. ಎಸ್ಐಐ XV ಬಾಗೇವಾಡಿ ೧೧೬ ಕ್ರಿ.ಶ. ೧೧೭೭.
೧೫. ಎಸ್ಐಐ XVIII ಹಾವೇರಿ ೨೧೪ ಕ್ರಿ.ಶ. ೧೨೩೩.

| | |
|---|---|
| **ಮಯಿನೆಱೆ[೧]ಯೆವುಡಗೆ:** | ಇದು ತೆರಿಗೆಯ ಹೆಸರಲ್ಲದೇ ಹೋದರೂ ಹೆಣ್ಣುಮಕ್ಕಳು ಮೈನೆರೆದಾಗ ಹಾಕುತ್ತಿದ್ದ ತೆರಿಗೆಯನ್ನು ಸೂಚಿಸುತ್ತದೆ. |
| **ಮಳಬ್ರಯ:[೨]** | (?) |
| **ಮಱಿವ:[೩]** | (?) |
| **ಮಱಿಪನ್ನಾಯ:[೪]** | (?) |
| **ಮಿಳಿ:[೫]** | ಹಗ್ಗದ ಮಾರಾಟದ ಮೇಲೆ ಹಾಕುತ್ತಿದ್ದ ಸುಂಕ. |
| **ಮುಕುಡಿ:[೬]** | (?) |
| **ಮೂಲಿಗದೆಱೆ:[೭]** | ಸ್ಥಳೀಕರ ಮೇಲೆ ಹಾಕುತ್ತಿದ್ದ ತೆರಿಗೆ. |
| **ಮೂಲೆ ಸುಂಕ:[೮]** | ಗಂಟು ಮೂಟೆಗಳ ಮೇಲೆ ಹಾಕುತ್ತಿದ್ದ ಸುಂಕ[೯]ವಿರಬಹುದು. |
| **ಮೇಟಿ:[೧೦]** | ಬಿ.ಆರ್. ಗೋಪಾಲ್[೧೧] ಚರ್ಚಿಸಿರುವ ಮೇಳಿವಣ ಇದನ್ನೇ ಸೂಚಿಸಬಹುದು. ಮೇಳಿವಣ ನೇಗಿಲುಗಳ ಮೇಲೆ ಹಾಕಲಾಗುತ್ತಿದ್ದ ತೆರಿಗೆಯೆಂದು ಅವರು ಭಾವಿಸುತ್ತಾರೆ. |
| **ಮೇದದೆಱೆ:[೧೨]** | ಬುಟ್ಟಿ ಹೆಣೆಯುವವರ ಮೇಲೆ ಹಾಕಲಾಗುತ್ತಿದ್ದ ತೆರಿಗೆ. |
| **ಮೊತ್ತಕಾಱದೆಱೆ:[೧೩]** | ವೀಳೆಯದೆಲೆಗಳನ್ನು ಸಂಗ್ರಹ ಮಾಡುವವರ ಮೇಲೆ ಹಾಕಲಾಗುತ್ತಿದ್ದ ತೆರಿಗೆ. |
| **ರಥವಣ:[೧೪]** | ರಥಗಳ ಮೇಲೆ ಹಾಕಲಾಗುತ್ತಿದ್ದ ತೆರಿಗೆ(?). ಆ ಕಾಲದಲ್ಲಿ ಯುದ್ಧಗಳಲ್ಲಂತೂ ರಥಗಳನ್ನು ಬಳಸುತ್ತಿರಲಿಲ್ಲ. ಬಹುಶಃ ರಥದಲ್ಲಿ ಸಾಗಿಸುತ್ತಿದ್ದ ವಸ್ತುಗಳಿಗೆ ತೆರಿಗೆ ಹಾಕುತ್ತಿದ್ದಿರಬಹುದೆ? |

---

೧. (ರೈ) ಎಕ XII ಪಾವಗಡ ೫೦ ಕ್ರಿ.ಶ. ೧೨೪೮.
೨. (ಮೈ) ಎಕ VI ಕೃ.ಪೇಟೆ ೯೫ ಕ್ರಿ.ಶ. ೧೩೧೨.
೩. ಎಸ್‌ಐಐ XX ಸಿಂದಗಿ ೧೫೮ ಕ್ರಿ.ಶ. ೧೧೭೬.
೪. (ಮೈ) ಎಕ II ಶ್ರವಣಬೆಳಗೊಳ ೪೮೧ ಕ್ರಿ.ಶ. ೧೧೫೧.
೫. (ರೈ) ಎಕ XVI ಚಿಕ್ಕನಾಯಕನಹಳ್ಳಿ ೭೧;?.
೬. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.
೭. ಎಸ್‌ಐಐ IX(i) ಹರಪನಹಳ್ಳಿ ೩೨೪ ಕ್ರಿ.ಶ. ೧೧೯೭-೯೮.
೮. (ರೈ) ಎಕ VIII ಸೊರಬ ೫೧೦ ಕ್ರಿ.ಶ. ೧೧೫೪.
೯. Srinivasa Ritti: ಪೂರ್ವೋಕ್ತ ಪು. ೨೩೭.೧೩.
೧೦. ಸಾಧನೆ ೧೪-೪ ಕ್ರಿ.ಶ. ೧೧೩೪. ಪು. ೩೩-೩೪.
೧೧. B.R. Gopal: ಪೂರ್ವೋಕ್ತ ಪು. ೪೦೧.
೧೨. (ಮೈ) ಎಕ IV ಹುಣಸೂರು ೨೪ ಕ್ರಿ.ಶ. ೧೧೬೨.
೧೩. ಎಸ್‌ಐಐ XVIII ಹಾವೇರಿ ೨೯೬ ಕ್ರಿ.ಶ. ೧೧೮೮.
೧೪. ಎಸ್‌ಐಐ IX(i) ಹೊಸಪೇಟೆ ೩೩೫ ಕ್ರಿ.ಶ. ೧೨೧೮.

| | |
|---|---|
| **ರುಗ್ವೇದದರೆ:**[೧] | ಋಗ್ವೇದದ ಅಭ್ಯಾಸಕ್ಕಾಗಿ ಕೊಟ್ಟ ಭೂಮಿಯ ಮೇಲಿನ ತೆರಿಗೆ. |
| **ಲಿಂಗದೆಱೆ:**[೨] | ಇದಕ್ಕೆ ಹೆಚ್ಚಿನ ಉದಾಹರಣೆಗಳು ದೊರೆಯುವಂತೆ ಕಾಣುವುದಿಲ್ಲ. ಇದು ವೀರಶೈವರಿಗೆ ವಿಧಿಸುತ್ತಿದ್ದ ತೆರಿಗೆ. ಏಕೆಂದರೆ ಕನಕಗೊಂಡನಹಳ್ಳಿಯ ಕ್ರಿ.ಶ. ೧೫೫೦ರ ಶಾಸನವೊಂದರಲ್ಲಿ[೩] 'ಕನಗೊಂಡನಹಳಿ ಗ್ರಾಮದಲಿ ಲಿಂಗ(ಧಾ)ರಿಗಳು ಕೊಡುವಂಥ ಲಿಂಗದೆರಿಗೆಯನು ಸಮರ್ಪಣೆ ಮಾಡಿ' ಎಂದು ಬರುತ್ತದೆ. |
| **ವಂಠದೆಱೆ:**[೪] | (ಸಂ) ವಂಠ (ಬ್ರಹ್ಮಚಾರಿ, ಸೇವಕ, ಪರಿಚಾರಕ) ಇವರಿಗೆ ವಿಧಿಸುತ್ತಿದ್ದ ತೆರಿಗೆ ಇರಬಹುದು. |
| **ವಡ್ಡರಾವುಳ:**[೫] | ಈ ತೆರಿಗೆಯ ಸ್ವರೂಪದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಕೆ.ವಿ. ರಮೇಶ್[೬] ಅವರು ವಡ್ಡರಾವುಳವನ್ನು ವೃದ್ಧಕುಲದಿಂದ ನಿಷ್ಪತ್ತಿ ಮಾಡಿ ರಾಜವಂಶದ ಸಿಂಹಾಸನಸ್ಥರಲ್ಲದ ಹಿರಿಯರ ಮತ್ತು ಹಿರಿಯ ಅಧಿಕಾರಿಗಳ ಜೀವನಾಂಶವಾಗಿ ವಸೂಲು ಮಾಡಲಾಗುತ್ತಿದ್ದ ತೆರಿಗೆಯೆಂದು ಭಾವಿಸುತ್ತಾರೆ. ಆದರೆ ಘಟಪಣದಿಯವರು[೭] ಅಂಥ ರೀತಿಯ ತೆರಿಗೆಯ ಇರುವಿಕೆಯನ್ನು ಒಪ್ಪಿಲ್ಲ. ಅದು ವ್ಯಾಪಾರ ಸಾಮಗ್ರಿಗಳ ಮೇಲಿನ ತೆರಿಗೆ ಎಂದು ಕೆಲವು ವಿದ್ವಾಂಸರು ಭಾವಿಸುತ್ತಾರೆ.[೮] |
| **ವಳಾರದ ಬಂಡಿ:**[೯] | (?) |
| **ವಿಜಯ ವೀರವಣ:**[೧೦] | (?) |
| **ವೀರ ಸೇಸೆ:**[೧೧] | (?) |
| **ವೊಡ್ಡದೆಱೆ:**[೧೨] | ಇದರ ರೂಪ ಒಡ್ಡದೆಱೆ. ಒಡ್ಡರಿಗೆ ವಿಧಿಸುವ ತೆರಿಗೆ ಇರಬೇಕು. |
| **ವೊಸಗೆ:**[೧೩] | ಇದರ ರೂಪ ಒಸಗೆ. ಮದುವೆಯ ಮೇಲಿನ ತೆರಿಗೆ. |

---

೧. ಎಸ್‌ಐಐ XX ಸಿಂದಗಿ ೩೦೦ ಕ್ರಿ.ಶ. ೧೨ ಶ.ಮಾ.
೨. (ರೈ) ಎಕ V ಚನ್ನಗಿರಿ ೬೪ ಕ್ರಿ.ಶ. ೧೨೧೪.
೩. ಎಸ್‌ಐಐ IX(ii) ಧರ್ಮಾವರಂ ೬೩೮ ಕ್ರಿ.ಶ. ೧೫೫೦.
೪. (ರೈ) ಎಕ VI ಕಡೂರು ೧೨ ಕ್ರಿ.ಶ. ೧೨೩೫.
೫. ಟಿಇ ೪೦ ಕ್ರಿ.ಶ. ೧೧೨೯.
೬. ಕೆ.ವಿ. ರಮೇಶ್ : 'ವಡ್ಡರಾವುಳ ಮತ್ತು ಬಿಲ್ಕೊಡೆ' ಸಾಧನೆ ೧-೩, ಪು. ೧೮೯-೯೫.
೭. S. G. Ghatapanadi : ಪೂರ್ವೋಕ್ತ ಪು. ೧೨೨.
೮. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೪೦೨.
G.R. Kuppuswamy: ಪೂರ್ವೋಕ್ತ, ಪು. ೧೫೪.
೯. (ಮೈ) ಎಕ VII ನಾಗಮಂಗಲ ೭೩ ಕ್ರಿ.ಶ. ೧೨೮೪.
೧೦. (ರೈ) ಎಕ V ಹಾಸನ ೮೪ ಕ್ರಿ.ಶ. ೧೨೩೦.
೧೧. (ಮೈ) ಎಕ I ಸೋಮವಾರಪೇಟೆ ೮೦ ಕ್ರಿ.ಶ. ೧೨೯೬.
೧೨. (ಮೈ) ಎಕ IV ಹುಣಸೂರು ೨೪ ಕ್ರಿ.ಶ. ೧೧೬೨.
೧೩. (ಮೈ) ಎಕ V ತಿ.ನರಸೀಪುರ ೨೩೮ ಕ್ರಿ.ಶ. ೧೨೯೦.

**ಸಂತೆಯ ಪನಾಯ:**[೧] ಸಂತೆಯಲ್ಲಿ ಎಲೆಗಳ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಸಂತೆಬೀಯ:**[೨]
**ಸಂತೆಯಾಯ:**[೩] } ಸಂತೆಯಲ್ಲಿ ವಿಧಿಸುತ್ತಿದ್ದ ತೆರಿಗೆ.

**ಸಂಬಳ:**[೪] (?)

**ಸಟ್ಟುಗಾಯ:**[೫] ಅಡುಗೆಯವರ ಮೇಲೆ ವಿಧಿಸುತ್ತಿದ್ದ ತೆರಿಗೆ ಇರಬೇಕು. (ಸಟ್ಟುಗ=ಸೌಟು)

**ಸಾದದೆಱೆ:**[೬] (?)

**ಸಾರಿಗೆ:**[೭]
**ಸಾರಿಗೆಯ ಸುಂಕ:**[೮] } ಸರಕು ಸಾಗಾಣಿಕೆಯ ವಾಹನಗಳ ಮೇಲೆ ವಿಧಿಸುತ್ತಿದ್ದ ಸುಂಕ.

**ಸಾಲಿಗದೆರೆ:**[೯] ನೇಕಾರರಿಗೆ ವಿಧಿಸುತ್ತಿದ್ದ ತೆರಿಗೆ.

**ಸಾವಿಗೆಯ ಸುಂಕ:**[೧೦] (?)

**ಸಿದ್ಧಾಯ:**[೧೧] ಇದನ್ನು ಕುರಿತು ಅನೇಕ ವಿದ್ವಾಂಸರು ಚರ್ಚಿಸಿದ್ದಾರೆ. ಡಿ.ಸಿ. ಸರ್ಕಾರ್[೧೨] ಅವರು ಉಳುಮೆ ಯಾಗುತ್ತಿರುವ ಭೂಮಿಯ ತೆರಿಗೆ ಎಂದು ಭಾವಿಸುತ್ತಾರೆ. ಆದರೆ ಸಾಮಾನ್ಯವಾಗಿ ಭೂಮಿಗೆ ವಿಧಿಸುವ ತೆರಿಗೆಯಾದರೂ ಮನೆಯ ಮೇಲೂ ತೆರಿಗೆ ವಿಧಿಸುತ್ತಿದ್ದುದನ್ನು ಎಂ. ಚಿದಾನಂದ ಮೂರ್ತಿಯವರು[೧೩] ತೋರಿಸಿದ್ದಾರೆ. ಭೂಮಿ ಮನೆ ಅಂಗಡಿ, ಕೆಲವು ಸಾರಿ ಇಡೀ ಗ್ರಾಮದಿಂದ ಸರ್ಕಾರಕ್ಕೆ ಬರಬೇಕಾದ ಒಟ್ಟು ಆದಾಯ ಎಂದು ಎಸ್. ಗುರುರಾಜಾಚಾರ್[೧೪] ಭಾವಿಸುತ್ತಾರೆ. ಬಿ.ಆರ್. ಗೋಪಾಲ್[೧೫] ಅವರು ಸಿದ್ಧಾಯವು ನಿಗದಿತ ಆದಾಯವೆಂದೂ ಅದನ್ನು

---

೧. ಎಸ್ಐಐ XX ಇಂಡಿ ೧೬೪ ಕ್ರಿ.ಶ. ೧೧೭೬.
೨. ಐಕೆಡಿ ದ. ಕೊಲ್ಲಾಪುರ ೩೩ ಕ್ರಿ.ಶ. ೧೨-೧೩ ಶ.ಮಾ.
೩. ಎಸ್ಐಐ XV ಗದಗು ೧೨೫ ಕ್ರಿ.ಶ. ೧೧೭೪.
೪. (ಮೈ) ಎಕ V ಮೈಸೂರು ೨೧೨ ಕ್ರಿ.ಶ. ೧೩ ಶ.ಮಾ.
೫. ಎಸ್ಐಐ XV ಬಾಗೇವಾಡಿ ೫೪೫ ಕ್ರಿ.ಶ. ೧೧೬೫.
೬. (ಮೈ) ಎಕ IV ಹುಣಸೂರು ೨೪ ಕ್ರಿ.ಶ. ೧೧೬೨.
೭. (ರೈ) ಎಕ XI ಹಿರಿಯೂರು ೩೭ ಕ್ರಿ.ಶ. ೧೨೪೭.
೮. (ರೈ) ಎಕ V ಚನ್ನರಾಯಪಟ್ಟಣ ೨೨೧ ಕ್ರಿ.ಶ. ೧೨೫೦.
೯. ಎಸ್ಐಐ XV ಬಾಗೇವಾಡಿ ೧೨೯ ಕ್ರಿ.ಶ. ೧೧೭೬.
೧೦. (ರೈ) ಎಕ V ಚನ್ನರಾಯಣಪಟ್ಟಣ ೨೨೧ ಕ್ರಿ.ಶ. ೧೨೫೦.
೧೧. (ಮೈ) ಎಕ V ತಿ.ನರಸೀಪುರ ೧೨೬ ಕ್ರಿ.ಶ. ೧೩೦೯.
೧೨. Indian Epigraphical glossory. ಪು. ೩೧೦-೧೧.
೧೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೪೦೨.
೧೪. ಎಸ್. ಗುರುರಾಜಾಚಾರ್ : 'ಸಿದ್ಧಾಯ ಮತ್ತು ಅರುವಣ' ಸಾಧನೆ ೧-೨, ಪು. ೨೦೦-೨೦೫.
೧೫. B. R. Gopal : ಪೂರ್ವೋಕ್ತ, ಪು. ೪೦೦-೪೦೧.

ಸ್ಥಿರಾಸ್ತಿಗಳಾದ ಭೂಮಿ, ಮನೆ ಮತ್ತು ಅಂಗಡಿಗಳ ಮೇಲೆ ಹಾಕುವಂತಹುದು ಎಂದು ಭಾವಿಸುತ್ತಾರೆ. ಸೂಕ್ತಿ ಸುಧಾರ್ಣವವು[೧] ರಾಜನು ಭೂಮಿಯಲ್ಲಿ ತನ್ನ ಆಜ್ಞೆ ಹೆಚ್ಚಬೇಕೆಂದರೆ ಅದನ್ನು ನಿಷ್ಕಂಟಕ ಮಾಡಿ 'ಪತ್ರ ಸ್ಥಿತಿ'ಯಿಂದ ಸಿದ್ಧಾಯವನ್ನು ಪಡೆಯಬೇಕೆಂದು ಹೇಳುತ್ತದೆ. ಕ್ರಿ.ಶ. ೧೩೦೦ರ ಶಾಸನವೊಂದು 'ನಿಯತಕರವಹ ಸಿದ್ಧಾಯವನು'[೨] ಎಂದು ಹೇಳುವುದರಿಂದ ಸಿದ್ಧಾಯ ನಿಯತವಾಗಿ ರಾಜ್ಯಾದಾಯಕ್ಕೆ ಸೇರುತ್ತಿದ್ದ ಆದಾಯವೆಂದು ಭಾವಿಸಲು ಅವಕಾಶವಿದೆ.

**ಸೂಳೆದೆಱೆ:**[೩] ಸೂಳೆಯರಿಗೆ ವಿಧಿಸುತ್ತಿದ್ದ ತೆರಿಗೆ.

**ಸೆಟ್ಟಿದೆಱೆ:**[೪] ವ್ಯಾಪಾರ ವಹಿವಾಟಿನ ಮೇಲೆ ವಿಧಿಸುತ್ತಿದ್ದ ತೆರಿಗೆ.

**ಸೇಸೆ:**[೫] (?) ಇದು ರಾಜ, ಆನೆ, ಕುದುರೆ ಮುಂತಾದ ಪದಗಳ ಮುಂದೆಯೂ ಬರುತ್ತದೆ.

**ಸೊಂಮುತೆಱೆ:**[೬] (?) ದೇವಾಲ್ಯದ ಸೊಂಮುತೆಱೆ ಎಂದು ಬರುವುದರಿಂದ ದೇವಾಲಯಕ್ಕೆ ಸಂಬಂಧಿಸಿದಂತೆ ಹಾಕುತ್ತಿದ್ದ ತೆರಿಗೆಯೆಂದು ಭಾವಿಸಬಹುದು. (ಸೊಮ್ಮು = ಆಸ್ತಿ).

**ಸೊಡರ ಗದ್ಯಾಣ:**[೭] (ಸೊಡರು=ದೀವಿಗೆ) =ದೀವಿಗೆ ಮೇಲೆ ಹಾಕುತ್ತಿದ್ದ ತೆರಿಗೆ.

**ಹಂದರವಣ:**[೮] ಮದುವೆ ಮುಂತಾದ ಸಮಾರಂಭಗಳಲ್ಲಿ ಚಪ್ಪರ ಹಾಕಿದಾಗ ಕೊಡಬೇಕಾದ ತೆರಿಗೆ.

**ಹಡರಕಿಱುಕು:**[೯] (?)

**ಹಡಿಯದೆ(ಱೆ):**[೧೦] ಗ್ರಾಮದ ಅಗಸ, ನಾಯಿಂದ ಮೊದಲಾದವರಿಗೆ ಗ್ರಾಮಸ್ಥರು ಕೊಡುವ (ಧಾನ್ಯ ರೂಪದ) ನಿಗದಿತ ಪಡಿ.

---

೧. ಸೂಕ್ತಿ ಸುಧಾರ್ಣವಂ ೧೬-೧೩.
೨. (ಮೈ) ಎಕ V ತಿ.ನರಸೀಪುರ ೮೯ ಕ್ರಿ.ಶ. ೧೩೦೦.
೩. (ರೈ) ಎಕ XI ದಾವಣಗೆರೆ ೧೩೩ ಕ್ರಿ.ಶ. ೧೦೭೧.
೪. ಎಸ್ಐಐ XV ಬಾಗೇವಾಡಿ ೧೨೯ ಕ್ರಿ.ಶ. ೧೧೭೬.
೫. (ಮೈ) ಎಕ VI ಕೃ.ಪೇಟೆ ೯೫ ಕ್ರಿ.ಶ. ೧೩೧೨.
೬. (ರೈ) ಎಕ V ಬೇಲೂರು ೧೭೧ ಕ್ರಿ.ಶ. ೧೧೬೧.
೭. (ಮೈ) ಎಕ VI ಕೃ.ಪೇಟೆ ೩೯ ಕ್ರಿ.ಶ. ೧೨೩೬.
೮. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.
೯. (ಮೈ) ಎಕ VI ಪಾಂಡವಪುರ ೩೧ ಕ್ರಿ.ಶ. ೧೨-೧೩ ಶ.ಮಾ.
೧೦. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.

**ಹತ್ತಿಸುಂಕ:**[೧] ಹತ್ತಿಯ ಮಾರಾಟದ ಮೇಲೆ ವಿಧಿಸುತ್ತಿದ್ದ ಸುಂಕ.

**ಹದಿಕೆ:**[೨] (?) ಇದು ಪುರದ ಹದಿಕೆ ಎಂದೂ ಕೆಲವು ಶಾಸನಗಳಲ್ಲಿ ಬರುತ್ತದೆ.

**ಹಲೆದೆಱೆ:**[೩] (ಸಂ.ಹಲಾ = ಭೂಮಿ, ನೇಗಿಲು) ಭೂಮಿ ಅಥವಾ ವ್ಯವಸಾಯದ ತೆರಿಗೆ ಇರಬಹುದು.

**ಹಿಟ್ಟುದೆಱೆ:**[೪] ಶಾಸನದಲ್ಲಿ ಎಂಟು ಹಿಟ್ಟು ಎಂದು ವೃತ್ತಿ ಸೂಚಕವಾಗಿ ಬರುತ್ತದೆ. ಹಿಟ್ಟಿನ ವಿವರಣೆ ಹಿಂದೆ ಬಂದಿದೆ. ವೃತ್ತಿಕಾರರಿಗೆ ಸಂದಾಯವಾಗುತ್ತಿದ್ದ ಧಾನ್ಯಗಳ ಮೇಲಿನ ತೆರಿಗೆ ಇರಬೇಕು.

**ಹಿಟ್ಟುಮೂಲಿಗರರುವಣ:**[೫] (?)

**ಹುಡುವ ತೆಱೆ:**[೬] (?)

**ಹೊಂಬಳಿ:**[೭] (?)

**ಹೆಜ್ಜುಂಕ:**[೮] ಹಿಂದಿನ ಶಾಸನಗಳಲ್ಲಿ ಪೆರ್ಜುಂಕ ರೂಪದಲ್ಲಿ ದೊರೆಯುತ್ತದೆ. ವಸ್ತುಗಳಿಗೆ ಸಗಟಾಗಿ ವಿಧಿಸುವ ಸುಂಕವೆಂದು ಬಿ.ಎಲ್.ರೈಸ್[೯] ಅವರು ಅಭಿಪ್ರಾಯಪಡುತ್ತಾರೆ. ಎ.ವಿ. ನರಸಿಂಹಮೂರ್ತಿಯವರು[೧೦] ಅದನ್ನು ಅನುಮೋದಿಸಿದ್ದಾರೆ. ಎಂ. ಚಿದಾನಂದಮೂರ್ತಿಯವರು[೧೧] ಅದು ಹೇರಿನ ಮೇಲೆ ಹಾಕುತ್ತಿದ್ದ ಸುಂಕವೆಂದು ಊಹಿಸಲು ಅವಕಾಶವಿದೆ ಎಂದು ಭಾವಿಸುತ್ತಾರೆ.

**ಹೇಱೆನ ಹಾಗ:**[೧೨] ಹೇರಿನ ಮೇಲೆ ಹಾಕುವ ಸುಂಕ.

**ಹೊಗಿಪ್ಪಣ:**[೧೩] (?)

**ಹೊಗೆದೆಱೆ:**[೧೪] (?)

---

೧. (ರೈ) ಎಕ IV ಕೊಳ್ಳೇಗಾಲ ೭ ಕ್ರಿ.ಶ. ೧೫೧೨.
೨. ಎಂಎಆರ್ ೧೯೪೫ ಹಾರೋಹಳ್ಳಿ ೧೮ ಕ್ರಿ.ಶ. ೧೩-೧೪ ಶ.ಮಾ.
೩. ಎಸ್‌ಐಐ XX ಸಿಂದಗಿ ೧೨೭ ಕ್ರಿ.ಶ. ೧೧೮೬.
೪. ಎಸ್‌ಐಐ XX ಸಿಂದಗಿ ೧೨೭ ಕ್ರಿ.ಶ. ೧೧೮೬.
೫. ಎಸ್‌ಐಐ XX ಸಿಂದಗಿ ೧೫೧ ಕ್ರಿ.ಶ. ೧೧೬೮.
೬. (ರೈ) ಎಕ VIII ಸೊರಬ ೫೧೪ ಕ್ರಿ.ಶ. ೧೧೯೭.
೭. (ಮೈ) ಎಕ VI ಕೃ.ಪೇಟೆ ೯೫ ಕ್ರಿ.ಶ. ೧೩೧೨.
೮. ಎಸ್‌ಐಐ XV ರೋಣ ೨೩೭ ಕ್ರಿ.ಶ. ೧೧೬೫.
೯. B. L. Rice: ಪೂರ್ವೋಕ್ತ, ಪು. ೧೭೫.
೧೦. ಕರ್ನಾಟಕದ ಸೇವುಣರ ಇತಿಹಾಸ, ಪು. ೮೮.
೧೧. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೪೦೦.
೧೨. ಎಸ್‌ಐಐ XV ಗದಗು ೨೪೦ ಕ್ರಿ.ಶ. ೧೧೭೩.
೧೩. (ಮೈ) ಎಕ V ತಿ.ನರಸೀಪುರ ೨೩೮ ಕ್ರಿ.ಶ. ೧೨೯೦.
೧೪. ಬಿ.ಆರ್. ಹಿರೇಮಠ : 'ಕಳಚುರಿ ಬಿಜ್ಜಳನ ಶಿರೋಳ ಶಾಸನ' ಸಾಧನೆ ೧೪-೪ ಪು. ೩೩-೩೪ ಕ್ರಿ.ಶ. ೧೧೩೪.

**ಹೊದಿಕೆ:**[೧] (?)

**ಹೊಬಳಿ:**[೨] (?)

**ಹೊರಸೆ:**[೩]

**ಹೊಲೆದೆಱಿ:**[೪] (?) ಶಾಸನ ಒಂದರಲ್ಲಿ ಬರುವ 'ಹೊಲೆ' ಎನ್ನುವುದು ಹೊಲೆದೆಱಿ ಇರಬಹುದೇ ಎಂಬ ಸಂದೇಹವನ್ನು ಎಂ. ಚಿದಾನಂದಮೂರ್ತಿಯವರು ವ್ಯಕ್ತಪಡಿಸಿದ್ದಾರೆ.[೫]

**ಹೊಲೆಯರ ಬಾಲಪಣ:**[೬] ಬಾಲಪಣ- ದನಗಳ ಮೇಲೆ ಹಾಕುವ ತೆರಿಗೆ ಎಂದು ಖಚಿತವಾಗಿದೆ. ಆದರೆ ಹೊಲೆಯರ ಬಾಲಪಣದ ಅರ್ಥ ಅಸ್ಪಷ್ಟವಾಗಿದೆ. ಬಾಲಪಣದ ಅರ್ಥದ ಮೇಲೆ ಹೊಲೆಯರ ದನಗಳಿಗೆ ಹಾಕುತ್ತಿದ್ದ ತೆರಿಗೆ ಎಂದಾಗುತ್ತದೆ. ಆದರೆ ಇದು ಆಧಾರಗಳನ್ನು ಬಯಸುತ್ತದೆ.

**ಹೊಲೆ ಸುಂಕ:**[೭] (?) ಹೊಲೆದೆಱಿ, ಹೊಲೆ ಸುಂಕ ಒಂದೇ ಇರಬಹುದು.

**ಹೊಳೆಯ ಸುಂಕ:**[೮] ಹೊಳೆಯನ್ನು ಉಪಯೋಗಿಸಿದ್ದಕ್ಕೆ ಕೊಡಬೇಕಾದ ಸುಂಕವಿರಬಹುದೆ?

**ಹೊಸತಿಲುವಣ:**[೯] ಇದು ಮನೆಸುಂಕ, ಮನೆವಣ ಇವುಗಳಂತೆ ಮನೆಯ ಮೇಲಿನ ತೆರಿಗೆ ಇರಬೇಕು.

**ಹೊಱವಾಱೊಳವಾರು:**[೧೦] ಇದು ಹೊರವಾರು ಮತ್ತು ಒಳವಾರು ಎಂಬ ಎರಡು ತೆರಿಗೆಗಳನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ಇವು ಜೊತೆಯಾಗಿ ಬಳಕೆಯಾಗುತ್ತದೆ. 'ಒಳವಾಱು ಹೊಱವಾಱುಗಳು ಊರೊಳಗಿನವರ ವ್ಯಾಪಾರ ಮತ್ತು ಹೊರಗಿನಿಂದ ಬಂದವರ ವ್ಯಾಪಾರಗಳ (ಒಳ+ಮಾಱು, ಹೊಱ+ಮಾಱು) ಮೇಲೆ ಹಾಕುತ್ತಿದ್ದ ತೆರಿಗೆಗಳು'[೧೧] ಎಂದು ಎಂ. ಚಿದಾನಂದಮೂರ್ತಿಯವರು ಅರ್ಥೈಸಿದ್ದಾರೆ.

ಇದುವರೆಗೂ ಗಮನಿಸಿದ ತೆರಿಗೆಗಳಲ್ಲದೆ ಇನ್ನೂ ಅನೇಕ ವಿಧವಾದ ತೆರಿಗೆಗಳಿದ್ದವು. ಎ.ವಿ. ನರಸಿಂಹಮೂರ್ತಿಯವರು[೧೨] ಕಟ್ಟಾಳಿ, ಶ್ರೋತ್ರ (ಸರ್ಕಾರದ ಭೂಮಿಯನ್ನು ಉಳುವ ರೈತರಿಂದ ವಸೂಲ್ಮಾಡಲಾಗುತ್ತಿದ್ದ ತೆರಿಗೆ) ಕೋಣನ

---

೧. (ಮೈ) ಎಕ V ತಿ.ನರಸೀಪುರ ೮೯ ಕ್ರಿ.ಶ. ೧೩೦೦.
೨. (ಮೈ) ಎಕ V ತಿ.ನರಸೀಪುರ ೨೩೮ ಕ್ರಿ.ಶ. ೧೨೯೦.
೩. (ಮೈ) ಎಕ V ತಿ.ನರಸೀಪುರ ೮೯ ಕ್ರಿ.ಶ. ೧೩೦೦.
೪. (ಮೈ) ಎಕ VII ಮದ್ದೂರು ೭೧ ಕ್ರಿ.ಶ. ೧೨-೧೩ ಶ.ಮಾ.
೫. ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪು. ೩೬ ಅ.ಟಿ. ೭.
೬. (ರೈ) ಎಕ V ಚನ್ನರಾಯಪಟ್ಟಣ ೧೮೧ ಕ್ರಿ.ಶ. ೧೨೦೫.
೭. (ಮೈ) ಎಕ VII ಪಾಂಡವಪುರ ೮೧ ಕ್ರಿ.ಶ. ೧೨೨೩.
೮. (ಮೈ) ಎಕ VII ಪಾಂಡವಪುರ ೫೬ ಕ್ರಿ.ಶ. ೧೩ ಶ.ಮಾ.
೯. ಎಸ್ಐಐ XV ಹುನಗುಂದ ೧೦೮ ಕ್ರಿ.ಶ. ೧೧೬೭.
೧೦. (ಮೈ) ಎಕ VII ನಾಗಮಂಗಲ ೧೮೪ ಕ್ರಿ.ಶ. ೧೧೭೩.
೧೧. ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪು. ೩೬ ಅ.ಟಿ. ೭.
೧೨. ಎ.ವಿ ನರಸಿಂಹಮೂರ್ತಿ : ಪೂರ್ವೋಕ್ತ, ಪು. ೮೮-೮೯.

ಮೆಯಿದೊರೆ, ಸಾಡ, ದಾನ ಮುಂತಾದ ಕೆಲವು ತೆರಿಗೆಗಳನ್ನು ಹೇಳುತ್ತಾರೆ. ಪಿ. ಗುರುರಾಜಭಟ್ಟರು[೧] ಬೆಡುಂಗುಳ ಎಂಬ ತೆರಿಗೆಯನ್ನು ಹೇಳುತ್ತಾರೆ. ಎಸ್.ಎಚ್. ರಿತ್ತಿಯವರು[೨] ವಸತಿದಂಡ ಮತ್ತು ಪ್ರಯಾಣ ದಂಡಗಳನ್ನು ಹೆಸರಿಸುತ್ತಾರೆ.

ಒಟ್ಟಾಗಿ ತೆರಿಗೆಗಳನ್ನು ಗಮನಿಸಿದರೆ ಅವುಗಳ ಬಾಹುಳ್ಯ ಮತ್ತು ವೈವಿಧ್ಯ ಆ ಕಾಲದ ತೆರಿಗೆಗಳ ಸ್ವರೂಪವನ್ನು ಮತ್ತು ಸಂಕೀರ್ಣತೆಯನ್ನು ತೋರಿಸುತ್ತವೆ. ಬಹಳಷ್ಟು ತೆರಿಗೆಗಳು ಅರ್ಥವಾಗದಷ್ಟು ಕ್ಲಿಷ್ಟವಾಗಿವೆ. ಇನ್ನು ಕೆಲವು ತೆರಿಗೆಗಳ ಅರ್ಥ ಸಂದಿಗ್ಧವಾಗಿದೆ. ಗಮನಿಸಿದ ತೆರಿಗೆಗಳಲ್ಲಿ ಸುಂಕಗಳೂ (tolls) ಸೇರಿವೆ. ಇಲ್ಲಿ ತೆರಿಗೆಗಳ ವೈವಿಧ್ಯ ಸ್ವರೂಪದ ಒಂದು ಸ್ಥೂಲ ಚಿತ್ರವನ್ನು ಮಾತ್ರ ನೀಡಲು ಸಾಧ್ಯವಾಗಿದೆ.

**ತೆರಿಗೆಗಳು, ಅಧಿಕಾರಿಗಳು:**

ತೆರಿಗೆಗಳ ಬಾಹುಳ್ಯ ಮತ್ತು ವೈವಿಧ್ಯವನ್ನು ಅನುಸರಿಸಿ ಆ ಎಲ್ಲ ತೆರಿಗೆಗಳನ್ನು ಸಂಗ್ರಹಿಸಲು ಅಗತ್ಯವಾದ ಅಧಿಕಾರಿಗಳ ಮತ್ತು ವ್ಯವಸ್ಥಾಪಕ ಸಿಬ್ಬಂದಿಯ ವ್ಯವಸ್ಥೆ ಸಾಕಷ್ಟು ವ್ಯಾಪಕವಾಗಿಯೇ ಕಾರ್ಯವನ್ನು ನಿರ್ವಹಿಸುತ್ತಿದ್ದಿರಬೇಕು. ತೆರಿಗೆಗಳ ಸಂಗ್ರಹ ಮತ್ತು ಲೆಕ್ಕಪತ್ರಗಳ ವ್ಯವಸ್ಥೆ ಹೇಗೆ ನಡೆಯುತ್ತಿತ್ತು ಎಂಬುದರ ಬಗ್ಗೆ ಖಚಿತ ವಿವರಗಳು ಶಾಸನಗಳಿಂದ ದೊರೆಯುವುದಿಲ್ಲ. ನಾಡಿನ ದೊಡ್ಡ ದೊಡ್ಡ ಪ್ರದೇಶಗಳಿಗೆ ಸುಂಕವೆಗ್ಗಡೆಗಳು ನೇಮಕವಾಗಿರುತ್ತಿದ್ದರು. ಶಿವರದ ಶಾಸನ ಸುಂಕವೆಗ್ಗಡೆ ಮಂಚಯ್ಯನ ವಿಷಯವನ್ನು ತಿಳಿಸುತ್ತದೆ.[೩] ಇಂಥ ಹಿರಿಯ ಅಧಿಕಾರಿಗಳ ಅಧೀನದಲ್ಲಿ ಬೇರೆ ಬೇರೆ ಅಧಿಕಾರಿಗಳು ನೇಮಕಗೊಂಡು ತೆರಿಗೆಗಳನ್ನು ಸಂಗ್ರಹಿಸುತ್ತಿದ್ದಿರಬೇಕು. ಕೆಲವು ಅಧಿಕಾರಿಗಳು ಯಾವುದಾದರೂ ಒಂದು ಪ್ರದೇಶದ ಒಂದು ತೆರಿಗೆಯನ್ನು ನೋಡಿಕೊಳ್ಳುತ್ತಿದ್ದರು; ಇಲ್ಲವೇ ಹಲವು ತೆರಿಗೆಗಳ ಅಧಿಕಾರವನ್ನು ನೋಡಿಕೊಳ್ಳುತ್ತಿದ್ದುದುಂಟು. ಚಿಟ್ಟೂರಿನ ಒಂದು ಶಾಸನ ಹೆರ್ಜುಂಕದ ಹೆಗ್ಗಡೆ ಸಾವಾಸಿ ಸಿಂಗಯ್ಯ ಬಸವಯ್ಯರನ್ನು ಹೆಸರಿಸುತ್ತದೆ.[೪] ಸಾವಾಸಿ ಮಾಯಿದೇವರಸರು ಹೆಜ್ಜುಂಕ ಮತ್ತು ವಡ್ಡರಾವುಳಗಳನ್ನು ಅನುಭವಿಸುತ್ತಿದ್ದುದನ್ನು ಒಂದು ಶಾಸನ ಹೇಳುತ್ತದೆ.[೫] ಕೆಲವು ಸಾರಿ ಅಧಿಕಾರಿಗಳು ಮೂರು ತೆರಿಗೆಗಳನ್ನು ನೋಡಿಕೊಳ್ಳುತ್ತಿದ್ದುದೂ ಉಂಟು. ಉದಾಹರಣೆಗೆ ಸುಂಕದಧಿಷ್ಠಾಯಕ ಕಲ್ಲಿಮಯ್ಯ ದಂಡನಾಯಕ ಕೋಗಳಿಯಯ್ನೂರು ಕಡಂಬಳಿಗೆ ಸಾವಿರದ ಹೆಜ್ಜುಂಕ ವಡ್ಡರಾವುಳ ಪನ್ನಾಯದ ಸುಂಕದಧಿಕಾರದಲ್ಲಿದ್ದರೆಂದು ತಿಳಿದು ಬರುತ್ತದೆ.[೬]

ಹಲವು ಅಧಿಕಾರಿಗಳು ಸ್ಥಳೀಯ ಅಗತ್ಯಗಳಿಗನುಗುಣವಾಗಿ ತಮ್ಮ ಆದಾಯದ ಸ್ವಲ್ಪ ಭಾಗವನ್ನು ಧರ್ಮಕಾರ್ಯಗಳಿಗೆ ವಿನಿಯೋಗಿಸಿರುವುದನ್ನು ನೂರಾರು ಶಾಸನಗಳಲ್ಲಿ ಕಾಣುತ್ತೇವೆ. ಕೆಲವು ಸಾರಿ ಅಧಿಕಾರಿಗಳು ಹಿರಿಯ ಅಧಿಕಾರಿಗಳ 'ಬೆಸದಿಂದ' ಸುಂಕವನ್ನು ಧರ್ಮಕಾರ್ಯಗಳಿಗೆ ಬಿಟ್ಟಿರುವುದುಂಟು. ಉದಾಹರಣೆಗೆ ಹಿರಿಯ ದಂಡನಾಯಕ ಲಕುಮಯ್ಯಗಳ ಬೆಸದಿಂದ ಹೆಗ್ಗಡೆ ತಿಕಯ್ಯನು ಕುರುಬೂರಿನ ಹೆಗ್ಗೇಶ್ವರ ದೇವರ ನಂದಾದೀವಿಗೆಗೆ ಗಾಣದ ಸುಂಕವನ್ನು ಬಿಟ್ಟ ವಿಷಯ ಒಂದು ಶಾಸನದಲ್ಲಿ ಬಂದಿದೆ.[೭] ಕೆಲವು ಸಾರಿ ಯಾವ ಹಿರಿಯ ಅಧಿಕಾರಿಯ ಆದೇಶವೂ ಇಲ್ಲದೆ, ಸ್ವಂತ ಇಚ್ಛೆಯಿಂದಲೂ

---

೧. P. Gururaja Bhat : ಪೂರ್ವೋಕ್ತ ಪು. ೨೧೪.

೨. Srinivasa Ritti : ಪೂರ್ವೋಕ್ತ ಪು. ೨೩೭.

೩. (ರೈ) ಎಕ XII ತಿಪಟೂರು ೬೬ ಕ್ರಿ.ಶ. ೧೧೬೩.

೪. (ರೈ) ಎಕ VIII ಸೊರಬ ೫೧೫ ಕ್ರಿ.ಶ. ೧೧೯೭.

೫. ಎಸ್‌ಐಐ XVIII ಹಾವೇರಿ ೧೫೭ ಕ್ರಿ.ಶ. ೧೧೫೨.

೬. ಎಸ್‌ಐಐ IX(i) ಹರಪನಹಳ್ಳಿ ೨೯೩ ಕ್ರಿ.ಶ. ೧೧೬೨.

೭. (ಮೈ) ಎಕ V ತಿ.ನರಸೀಪುರ ೨೮೭ ಕ್ರಿ.ಶ. ೧೩೦೩.

ದಾನ ಮಾಡಿರುವುದುಂಟು. ಸುಂಕದ ಮಲ್ಲಿಭಾವ ದಂಣ್ನಾಯಕ ಎರಡು ಅಂಗಡಿಗಳನ್ನು ಮತ್ತು ಎರಡು ಗಾಣಗಳ ಸುಂಕವನ್ನು ರಾಮೇಶ್ವರ ದೇವರಿಗೆ ಬಿಟ್ಟ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೧]

ಸಾಮಾನ್ಯವಾಗಿ ಸುಂಕದ ಅಧಿಕಾರಿಗಳಿಗೆ ಪ್ರತ್ಯೇಕವಾದ ವೇತನವಿರುತ್ತಿರಲಿಲ್ಲವೆಂದು ಕಾಣುತ್ತದೆ. ಅವರು ಸಂಗ್ರಹಿಸುತ್ತಿದ್ದ ತೆರಿಗೆ-ಸುಂಕಗಳಲ್ಲಿ ಒಂದು ನಿರ್ದಿಷ್ಟ ಭಾಗ ಅವರಿಗೆ ವೇತನವಾಗಿ ಸಲ್ಲುತ್ತಿತ್ತೆಂದು ಭಾವಿಸಬಹುದು. ಒಟ್ಟು ಸಂಗ್ರಹಿಸಿದ ಸುಂಕದಲ್ಲಿ ಎಷ್ಟು ಭಾಗವು ಅವರಿಗೆ ಸಲ್ಲುತ್ತಿತ್ತು ಎಂಬುದು ತಿಳಿಯದು. ಈ ಅಧಿಕಾರಿಗಳು ಧರ್ಮಕಾರ್ಯಗಳಿಗೆ ಸುಂಕ-ತೆರಿಗೆಗಳನ್ನು ಬಿಟ್ಟುಕೊಡುತ್ತಿದ್ದರು. 'ಅವರು ಬಿಟ್ಟುಕೊಟ್ಟ ಭಾಗವು ಅವರ ವೇತನದ ಒಂದು ಭಾಗವೆನ್ನುವುದು ಮಾತ್ರ ಸ್ಪಷ್ಟ' ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.[೨] ಕೆಲವು ಸಾರಿಯಾದರೂ ಅಧಿಕಾರಿಗಳು ರಾಜ್ಯಾದಾಯದ ಭಾಗವನ್ನು ದೇವರಿಗೆ ದಾನವಾಗಿ ನೀಡಿರುವಂತೆ ಕಂಡುಬರುತ್ತದೆ. ಸಿರಿಪಯ್ಯನೆಂಬ ಅಧಿಕಾರಿ ಲೋಕಿಕೆರೆಯ ಕಲಿದೇವರ ನಂದಾದೀವಿಗೆಗೆ 'ಅಡಕೆ ಸುಂಕದೊಳಗೆ ವರ್ಶನಿಬಂಧಿಯಾಗಿಯಾಚಂದ್ರಾರ್ಕ್ಕ ತಾರಂಬರಂ ಧಾರಾಪೂರ್ವ್ವಕಂ ಮಾಡಿಕೊಟ್ಟ ಗದ್ಯಾಣವೊಂದು ಹಣವೆರಡು ಯಾವನಧಿಕಾರಿಯಾಗಿ ಬಂದರೂ ಒಪ್ಪಿಕೊಡುವರೆಂದೂ ಮುಮ್ಮುರಿದಂಡಗಳು ಸುಂಕದಧಿಕಾರಿಯಿಂದ' ಅಷ್ಟು ಹಣವನ್ನು ತೆಗೆದುಕೊಂಡು ಕೊಡಬೇಕೆಂದು ಒಂದು ಶಾಸನ ಹೇಳುತ್ತದೆ.[೩] ಅಧಿಕಾರಿಗಳು ತಮ್ಮ ವೇತನವ ಒಂದು ಭಾಗವನ್ನು ಬಿಟ್ಟುಕೊಟ್ಟದ್ದಕ್ಕೆ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ರಾಮನಾಥದೇವರ ಪೂಜಾ ಕಾರ್ಯಗಳಿಗೆ 'ಗವುಡು ಸುಂಕ'ದಲ್ಲಿ ಸ್ವಲ್ಪ ಭಾಗವನ್ನು ಬಿಟ್ಟಿರುವುದುಂಟು.[೪] ನೊಣಂಬವಾಡಿಯ ಸುಂಕಾಧಿಪತ್ಯದಲ್ಲಿದ್ದ ಕಲ್ಲಿಮಯ್ಯನು ನಿರಗುಂದದ ಭೀಮೇಶ್ವರ ದೇವರಿಗೆ ಕೆಲವು ದಾನಗಳನ್ನು ಮಾಡುತ್ತಾನೆ. ಹಾಗೆ ಮಾಡುವ ಮುನ್ನ ಅವನು ಯೋಚಿಸಿದ್ದು ಹೀಗೆ- 'ಒಡಲುಂ ಧನಮುಂ ಭಾವಿಸೆ ಕೆಡಲಿರ್ದುವು ಕಿಡದ ಕಸವರ ಧಮ್ಮ್ರಮದೆ ಪಡೆವೆಂ ಬೆಚ್ಚರಮೆಂದೆಡೆವುಡುಗದೆ ತದ್ಧಮ್ಮ್ರಕಾರ್ಯ್ಯತತ್ಪರನಾಗಿ'[೫] ಎಂದು ಶಾಸನದಲ್ಲಿ ಬರುತ್ತದೆ.

ತೆರಿಗೆಗಳನ್ನು ಉಳಿಸುವ ಸಲುವಾಗಿ ತೆರಿಗೆಗಳ್ಳತನ ಅಲ್ಲಲ್ಲಿ ನಡೆಯುತ್ತಿದ್ದಂತೆ ಕಾಣುತ್ತದೆ.[೬] ಕೆಲವು ಕಡೆ ತೆರಿಗೆಗಳಿಗೆ ವಿರೋಧಗಳೂ ವ್ಯಕ್ತವಾಗಿವೆ. ತೆರಿಗೆಗಳನ್ನು ಪ್ರತಿಭಟಿಸಿ ಹೋರಾಡಿ ಮಡಿದ ಉದಾಹರಣೆಗಳೂ ಇವೆ. ಕೆಲವು ಸಾರಿ ರಾಜರೇ ನೇರವಾಗಿ ತೆರಿಗೆಯನ್ನು ರದ್ದು ಮಾಡಿರುವುದುಂಟು. ಸೇವುಣ ರಾಮಚಂದ್ರನ ಕಾಲದ ಶಾಸನವೊಂದು ವಸತಿ ದಂಡ ಮತ್ತು ಪ್ರಯಾಣ ದಂಡಗಳನ್ನು ಒಂದು ಅಗ್ರಹಾರದವರು ಪಾವತಿ ಮಾಡಬೇಕಾಗಿಲ್ಲವೆಂದು ತಿಳಿಸುತ್ತದೆ.[೭]

---

೧. ಕಇ IV ಹಿರೇಕೆರೂರು ೧೫ ಕ್ರಿ.ಶ. ೧೧೪೯.

೨. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೪೦೪.

೩. ಎಂಎಆರ್ ೧೯೩೯ ದಾವಣಗೆರೆ ೨೬ ಕ್ರಿ.ಶ. ೧೨೨೯.

೪. (ರೈ) VIII ಸೊರಬ ೫೧೫ ಕ್ರಿ.ಶ. ೧೧೯೭.

೫. ಎಸ್ಐಐ IX(i) ಹರಪನಹಳ್ಳಿ ೨೯೩ ಕ್ರಿ.ಶ. ೧೧೬೨.

೬. ಹಜೆದ ಗೋಣಿಯಲೊಬ್ಬ ಕಳವೆಯ ತುಂಬಿದ<br>ಇರುಳೆಲ್ಲಾ ನಡೆದನಾ ಸುಂಕಕಂಜಿ<br>ಕಳವೆ ಎಲ್ಲಾ ಹೋಗಿ ಬರಿ ಗೋಣಿ ಉಳಿಯಿತ್ತು ಜೇ.ದಾ.ವ.೧೧೪.

೭. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೪೦೫.

ತಮಗೆ ವಿಧಿಸಿದ ತೆರಿಗೆಯನ್ನು ಕಡಮೆ ಮಾಡಿಕೊಳ್ಳುವಂತೆ ಜನರು ಬೇಡುತ್ತಿದ್ದುದಕ್ಕೆ ಸೂಚನೆಗಳಿವೆ. ಶ್ರವಣಬೆಳಗೊಳದ ಒಂದು ಶಾಸನದಲ್ಲಿ ಮನೆದೆರೆಗೆ ಸಂಬಂಧಿಸಿದಂತೆ ಅಕ್ಷರ ಸಂವತ್ಸರದಿಂದ ಆರಂಭಿಸಿ ಪ್ರತಿಯೊಂದು ಮನೆಗೆ ಒಂದು ಹಣದಂತೆ ಮನೆದೆರೆ ಕೊಡಬೇಕೆಂದೂ ಆರಂಭದಲ್ಲಿ ಒಟ್ಟಿಗೆ ಎಂಟು ಹಣವನ್ನು ಈ ತೆರಿಗೆಗೆ ಕೊಡಬೇಕೆಂದು ನಿರ್ಣಯಿಸಿದಂತಿದೆ. ತೆರಿಗೆದಾರರು ಅದನ್ನು ಆಚಾರ್ಯರಿಗೆ ಸಲ್ಲಿಸಿದರೆ ಅವರು ಗಾಣದ ಮೇಲಿನ ತೆರಿಗೆ, ಮಳಬ್ರಯ ಹಾಗೂ ಇನ್ನಿತರ ತೆರಿಗೆಗಳನ್ನು ಕೊಡಬೇಕಾಗಿಲ್ಲವೆಂದೂ ತಿಳಿಸುತ್ತದೆ. ಕೆಲವು ನಖರರು ಕೌಟಿಲ್ಯ ಬುದ್ಧಿಯಿಂದ ಹಾಗ ಬೇಳೆಯನ್ನು ಕಡಮೆ ಮಾಡಿಕೊಳ್ಳಿ ಎಂದು ಬೇಡಿಕೊಳ್ಳಕೂಡದು, ಯಾವುದೇ ರೀತಿಯಲ್ಲಿ ಒತ್ತಾಯ ತರಕೂಡದು ಎಂಬಂತೆ ನಿರೂಪಿಸುತ್ತದೆ.[೧] ಅಂದರೆ ನಿಗದಿಯಾದ ತೆರಿಗೆಯನ್ನು ಕಡಮೆ ಮಾಡಿಕೊಳ್ಳಲು ಬೇರೆ ಬೇರೆಯ ಒತ್ತಡ, ಪ್ರಯತ್ನಗಳು ನಡೆಯುತ್ತಿದ್ದವು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಕೆಲವು ಸಾರಿ ತೆರಿಗೆ ಅನ್ಯಾಯವಾಗಿಯೂ ಸಂಗ್ರಹವಾಗುತ್ತಿದಿರಬೇಕು. ಶ್ರವಣಬೆಳಗೊಳದ ಒಂದು ಶಾಸನದಲ್ಲಿ ಸಂಭುದೇವನು ಶ್ರೀ ದೇವರ ವಲ್ಲಭದೇವರಿಗೆ ಸೇರಿದ್ದ ಹಾಡುವರ ಹಳ್ಳಿಯಲ್ಲಿ ಅನ್ಯಾಯವಾಗಿ ಮಳಬ್ರಯವನ್ನು ತೆಗೆದುಕೊಂಡಿದ್ದ ಐದು ಗದ್ಯಾಣಗಳನ್ನು ಅದೇ ದೇವರಿಗೆ ದಾನವಾಗಿ ಬಿಟ್ಟ ವಿಷಯ ಬರುತ್ತದೆ.[೨]

ತೆರಿಗೆಗಳ ಭಾರ ಅತಿಯಾಗಿ ಜನರು ಕೆಲವು ಸಾರಿ ಊರುಗಳನ್ನು ಬಿಟ್ಟಿರುವ, ಪ್ರತಿಭಟಿಸುವ ಕೆಲವೇ ಕೆಲವು ಉದಾಹರಣೆಗಳು ದೊರೆಯಬಹುದಾದರೂ ಒಟ್ಟಾರೆಯಾಗಿ ತೆರಿಗೆಗಳ ಬಗ್ಗೆ ದಕ್ಷಿಣ ಭಾರತದಲ್ಲಿ ಸಹನಶೀಲತೆಯೇ ಕಂಡುಬರುತ್ತದೆ.

**ಖರ್ಚು:**

ರಾಜ್ಯಾದಾಯವಾಗಿ ಬಂದ ಹಣ ರಾಜನ ಅಧೀನದಲ್ಲಿದ್ದರೂ ಬಹುಶಃ ಅದರ ಬಹುಪಾಲು ರಾಜ್ಯದ ಖರ್ಚಿಗೆ ಹೋಗುತ್ತಿತ್ತು. ಶಾಸನಗಳು ರಾಜ್ಯಾದಾಯದ ವಿವಿಧ ಮೂಲಗಳನ್ನು ತಿಳಿಸಿದ ಹಾಗೆ ವ್ಯಯದ ಮಾರ್ಗಗಳನ್ನು ನೇರವಾಗಿ ಸೂಚಿಸುವುದಿಲ್ಲ. ರಾಜ್ಯದ ರಕ್ಷಣೆ, ಸೈನ್ಯದ ಸಂರಕ್ಷಣೆ, ಕೆರೆಕಟ್ಟೆಗಳ ನಿರ್ಮಾಣ, ಧರ್ಮಕಾರ್ಯಗಳು, ಕವಿ, ಕಲಾವಿದ ಪಂಡಿತರಿಗೆ ಪ್ರೋತ್ಸಾಹ ಮುಂತಾದ ನಾನಾ ಅಭಿವೃದ್ಧಿ ಕಾರ್ಯಗಳಿಗೆ ಸಾಕಷ್ಟು ಹಣ ವ್ಯಯವಾಗುತ್ತಿತ್ತು. ಅಲ್ಲದೆ ರಾಜರ ಪರಿವಾರಗಳ ಖರ್ಚು ವೆಚ್ಚವೂ ಸಾಕಷ್ಟು ದೊಡ್ಡ ಮೊತ್ತದಲ್ಲಿಯೇ ನಡೆಯುತ್ತಿತ್ತೆಂದು ಊಹಿಸಲು ಅವಕಾಶವಿದೆ.

**ನಾಣ್ಯ ಪದ್ಧತಿ:**

ಪ್ರಾಚೀನ ಕರ್ನಾಟಕದ ಶಾಸನಗಳನ್ನು ಗಮನಿಸಿದರೆ ವ್ಯವಹಾರ, ಕೊಡುಗೆ, ದಾನಗಳು ನಗದು ರೂಪದಲ್ಲಿಯೂ ನಡೆದಿರುವುದನ್ನು ಕಾಣುತ್ತೇವೆ. ನಾಣ್ಯ ರೂಪವಲ್ಲದೆ 'ನಿಮಾನ' (barter) ರೂಪವು ಬಳಕೆಯಲ್ಲಿದ್ದಿರಬೇಕು ಎಂಬ ಅಭಿಪ್ರಾಯವೂ ಇದೆ.[೩] ಅಧಿಕಾರಿಗಳು ಸಂಗ್ರಹಿಸುತ್ತಿದ್ದ ತೆರಿಗೆಗಳು, ಸುಂಕಗಳು ಅನೇಕ ಸಾರಿ ಹಣದ ರೂಪದಲ್ಲಿದ್ದಂತೆ

---

೧. (ಮೈ) ಎಕ II ಶ್ರವಣಬೆಳಗೊಳ ೪೫೫ ಕ್ರಿ.ಶ. ೧೩ ಶ.ಮಾ.

೨. (ಮೈ) ಎಕ II ಶ್ರವಣಬೆಳಗೊಳ ೪೭೯ ಕ್ರಿ.ಶ. ೧೨೯೬.

೩. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ,, ಪು. ೩೮೯.

ಶ್ರವಣಬೆಳಗೊಳದ ಶಾಸನ ಒಂದರಲ್ಲಿ ಗೊಮ್ಮಟದೇವರ ಪಾರ್ಶ್ವದೇವರ ಹೂವಿನ ಸೇವೆಗಾಗಿ ಹಣದ ಬದಲಾಗಿ ಹವಳವನ್ನು ಕೊಟ್ಟಂತೆ ತಿಳಿಸುತ್ತದೆ. ಇದು ನಿಮಾನ ಪದ್ಧತಿಯನ್ನು ಸೂಚಿಸುತ್ತದೆ. (ಮೈ) ಎಕ II ೩೪೩ ಕ್ರಿ.ಶ. ೧೨ ಶ.ಮಾ.

ವಸ್ತುರೂಪದಲ್ಲಿಯೂ ಇದ್ದುದು ಕಂಡುಬರುತ್ತದೆ. ಅಧಿಕಾರಿಗಳಿಗೆ ವೇತನ, ಬಹಳ ಸಾರಿ ನಿರ್ದಿಷ್ಟ ಭೂಮಿಯನ್ನು ನೀಡಿ ಅದರ ಉತ್ಪನ್ನವನ್ನು ಪಡೆಯುವುದೇ ಆಗಿರುತ್ತಿತ್ತು. ಇಲ್ಲವೇ ಸಂಗ್ರಹಿಸಿದ ತೆರಿಗೆಯ ಒಂದು ಗೊತ್ತಾದ ಭಾಗ ಅಧಿಕಾರಿಗೆ ವೇತನವಾಗಿ ಪರಿಗಣಿತವಾಗುತ್ತಿದ್ದಿತು.

ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು ಕಮ್ಮಟ[೧]ಗಳೆಂದು ಕರೆಯುತ್ತಿದ್ದರು. ಬಸವಣ್ಣನವರ ವಚನ ಒಂದರಲ್ಲಿ ಕಮ್ಮಟದ ಪ್ರಸ್ತಾಪ ಬಂದಿದೆ.[೨] ಕಮ್ಮಟದ ಒಡೆಯನಾದ ಮಲ್ಲದಂಡಾಧಿಪನನ್ನು ಕೀರ್ತಿಸುವ ಒಂದು ಶಾಸನ, ನಾಣ್ಯ ತಯಾರಿಕೆಯಲ್ಲಿ ನಡೆಯುವ ವಿವಿಧ ಪ್ರಕ್ರಿಯೆಯನ್ನು ಶ್ಲೇಷೆಯಿಂದ ತಿಳಿಸುತ್ತದೆ.

> ಕಡಿವಂ ಮಾಱಾಂತರಂ ಬೇಗದೆ ಕರಗಿಸುವಂ ಶತ್ರುಸೈನ್ಯಂಗಳಂ ಸಂ
> ಗಡಕೆಲ್ಲಂ ಧೈರ್ಯ ವರ್ಣಕ್ರಮಮನೆಸೆಯೆ ತಾಂ ತೋಱುವಂ ಕೀರ್ತಿಯಚ್ಚಂ
> ಕಡುಚೆಲ್ವಪ್ಪಂತಿರಚ್ಚೊತ್ತುವನಖಿಳದಿಶಾದಂತಿ ದಂತಗಳೊಳ್ ನೋ
> ಟ್ಪೊಡೆ ಸಂತಂ ಕಮ್ಮಟಕ್ಕಂತೊಡೆಯನೆನಿಸುವಂ ಮಲ್ಲದಂಡಾಧಿನಾಥಂ[೩]

ಇಲ್ಲಿ ಲೋಹವನ್ನು ಕಡಿವ, ಕರಗಿಸುವ, ಅಚ್ಚಿನಿಂದ ಅಚ್ಚೊತ್ತುವ ಕ್ರಿಯೆಯನ್ನು ಮಾರ್ಮಿಕವಾಗಿ ನಿರೂಪಿಸಲಾಗಿದೆ. ಶಾಸನಗಳಲ್ಲಿ ಕಮ್ಮಟದಲು ಆಣಿಕಾರ[೪] (=ಚಿನ್ನದ ಪರೀಕ್ಷಕರು), ಕಮ್ಮಾಟದಕ್ಕಸಾಲಿಗಳು,[೫] ಅಚ್ಚಿನ ಕೇಣಿ[೬] ಮುಂತಾದ ಪದಗಳು ಬರುತ್ತವೆ. ಕಮ್ಮಟದ ಅಧಿಕಾರವನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಗಳು ಕೆಲವು ಸಾರಿ ಅನ್ಯ ಅಧಿಕಾರವನ್ನೂ ಹೊಂದಿರುತ್ತಿದ್ದರು. ಕೆಲವು ಸಾರಿ ತಾವು ಮಾಡಿದ ಉನ್ನತ ಕಾರ್ಯಕ್ಕೆ ಪ್ರತಿಫಲವಾಗಿ ಕಮ್ಮಟದ ಅಧಿಕಾರವನ್ನು ಶಾಶ್ವತವಾಗಿ ಪಡೆದದ್ದುಂಟು. ಚಟಯನಾಯಕ ತನ್ನ ಮಡದಿ ಸಹಿತ ಒಡೆಯನಿಗೆ ಕೊಟ್ಟ ಭಾಷೆಯಂತೆ ತಲೆಗೊಟ್ಟಾಗ ಅದಕ್ಕೆ ಮೆಚ್ಚಿ ಬೆಳಗಲಿಯ ಕಮ್ಮಟವನ್ನು ಮಕ್ಕಳು ಮಕ್ಕಳು ತಪ್ಪದೆ ಕೊಟ್ಟರು[೭] ಎಂದು ಒಂದು ಶಾಸನದಲ್ಲಿ ನಿರೂಪಿತವಾಗಿದೆ. ಏಚಿಶೆಟ್ಟಿಯನ್ನು ರಾಜನು ಅಚ್ಚಿನ ಕಾರ್ಯಕ್ಕೆ ನೇಮಿಸಿದ. ಮುಂದೆ ಅವನಿಗೆ 'ಹೇಮಕುಪ್ಪಟಿ' (=ಬಂಗಾರದ ನಾಣ್ಯಗಳನ್ನು ಟಂಕಿಸುವವನು) ಎಂದೇ ಹೆಸರಾಯಿತಂತೆ.[೮] ಅನೇಕ ಕಮ್ಮಟದ ಅಧಿಕಾರಿಗಳು ದಾನ ಕಾರ್ಯಗಳನ್ನೂ ನಿರ್ವಹಿಸಿದರು. ಸರ್ವಾಧಿಕಾರಿ ಕಮ್ಮಟದ ಮಲ್ಲಯ್ಯ ಮಾಡಿದ ದಾನ ಕಾರ್ಯವನ್ನು ಒಂದು ಶಾಸನ ತಿಳಿಸುತ್ತದೆ.[೯]

ಆ ಕಾಲದಲ್ಲಿ ಲಕ್ಕುಂಡಿ, ಸೂಂಡಿ, ದೋರಸಮುದ್ರ, ಬೆಳುಗುಲಿ, ಅರಸಿಕೆರೆ[೧೦] ಮುಂತಾದ ಕಡೆಗಳಲ್ಲಿ ಕಮ್ಮಟಗಳು ಇದ್ದಂತೆ ತಿಳಿದುಬರುತ್ತದೆ. ನಾಣ್ಯಗಳಲ್ಲಿ ಪ್ರಸಿದ್ಧವಾಗಿದ್ದವು ಗದ್ಯಾಣಗಳು. ಗದ್ಯಾಣವನ್ನು ಶಾಸನಗಳಲ್ಲಿ ಕೆಲವು ಕಡೆ 'ಗ'

---

೧. ಎಸ್‌ಐಐ IX(i) ಆದೋನಿ ೨೯೫ ಕ್ರಿ.ಶ. ೧೧೭೨.

೨. ಬ.ವ. ೧೫೫ 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ.'

೩. ಶಾ.ಪ.ಮಂ. ಪ. ೧೪೮೩, ಪು. ೨೪೪.

೪. ಎಸ್‌ಐಐ XV ಗದಗು ೬೨ ಕ್ರಿ.ಶ. ೧೧೮೪.

೫. ಎಸ್‌ಐಐ IX(i) ಆದೋನಿ ೨೯೫ ಕ್ರಿ.ಶ. ೧೧೭೨.

೬. ಎಸ್‌ಐಐ XV ಗದಗು ೬೬ ಕ್ರಿ.ಶ. ೧೧೮೫.

೭. ಎಸ್‌ಐಐ XVIII ರಾಣೆಬೆನ್ನೂರು ೨೬೨ ಕ್ರಿ.ಶ. ೧೨೮೪.

೮. ಎಸ್‌ಐಐ XVIII ನರಗುಂದ ಪೇಟೆ ೧೬೦ ಕ್ರಿ.ಶ. ೧೨ ಶ.ಮಾ.

೯. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೧೦. ಅರಸಿಕೆರೆಯ ಶಾಸನವೊಂದರಲ್ಲಿ ಬರುವ ಕೋನೆಕಾರದ ಪಾಠ ಕೇನೆಕಾರವಾಗಿದ್ದರೆ ಅರಸಿಕೆರೆಯಲ್ಲಿ ಖಂಡಿತವಾಗಿ ಕಮ್ಮಟ ಇದ್ದಿರಬೇಕೆಂದು ಎಸ್. ಶೆಟ್ಟರ್ ಅವರು ಅಭಿಪ್ರಾಯಪಡುತ್ತಾರೆ. ನೋಡಿ: ಅವರ ಲೇಖನ 'Arasikere under the Hoysalas', ಜೆಕೆಯು VII, ಪು. ೧೫೪-೫೫.

ಎಂಬ ಸಂಕ್ಷೇಪದಿಂದಲೂ ಸೂಚಿಸಿರುವುದುಂಟು. ಗದ್ಯಾಣದ ತೂಕ ೯೬ ಗ್ರೈನ್ಸ್ ಎಂದೂ ೬೩ ಗ್ರೈನ್ಸ್ ಎಂದೂ ಅಭಿಪ್ರಾಯ ಭೇದವಿದೆ. ಚಾಳುಕ್ಯರ ಗದ್ಯಾಣಗಳು ೫೮ ಗ್ರೈನ್ಸ್ ತೂಕವೂ ಹೊಯ್ಸಳರ ಗದ್ಯಾಣಗಳು ೬೩ ಗ್ರೈನ್ಸ್ ತೂಕವೂ ಇದ್ದುವು.[೧] ಗದ್ಯಾಣಗಳು ಸಾಮಾನ್ಯವಾಗಿ ಬಂಗಾರದಿಂದ ತಯಾರಾಗುತ್ತಿದ್ದವು ಎಂದು ವಿದ್ವಾಂಸರು ಭಾವಿಸುತ್ತಾರೆ.[೨] ಗದ್ಯಾಣಗಳಲ್ಲಿ ಹಲವು ಪ್ರಕಾರಗಳು ಇದ್ದುವು. ಕೊಂಡಗುಳಿ ಶಾಸನದಲ್ಲಿ ವರ್ತಕ ಲೊಕ್ಕಿಗದ್ಯಾಣ, ಕಟಕ ಗದ್ಯಾಣ ಮತ್ತು ಕಟಕಪ್ರಿಯ ಗದ್ಯಾಣಗಳೆಂಬ ಗದ್ಯಾಣ ವಿಶೇಷಗಳು ಉಲ್ಲೇಖಗೊಂಡಿವೆ.[೩] ಆ ಶಾಸನ ಸಂಪುಟವನ್ನು ಸಂಪಾದಿಸಿರುವ ಕೆ.ವಿ. ರಮೇಶ್ ಅವರು, ವರ್ತಕ ಗದ್ಯಾಣ ಮತ್ತು ಕಟಕ ಗದ್ಯಾಣ ಲೊಕ್ಕಿಗುಂಡಿಯಲ್ಲಿ ಟಂಕವಾದದ್ದನ್ನು ಸೂಚಿಸುತ್ತವೆ ಮತ್ತು ಕಟಕ ಪ್ರಿಯ ಗದ್ಯಾಣ ಬಂಗಾರದ ಅಧಿಕಾಂಶದ ಇರುವಿಕೆಯನ್ನು ಸೂಚಿಸುವುದೆಂದು ಭಾವಿಸುತ್ತಾರೆ.[೪] ಈ ಗದ್ಯಾಣ ಪ್ರಕಾರಗಳಲ್ಲದೆ ಶಾಸನಗಳಿಂದ ವರಾಹಗದ್ಯಾಣ,[೫] ಪ್ರಿಯಶ್ರಾಹೆ ಗದ್ಯಾಣ,[೬] ದವಣ ಗದ್ಯಾಣ,[೭] ಕೊಮಾರ ಗದ್ಯಾಣ,[೮] ಲೊಕ್ಕಿ ಗದ್ಯಾಣ,[೯] ಹೆಬ್ಬಾಳ ಗದ್ಯಾಣ[೧೦]ಗಳೂ ಬಳಕೆಯಲ್ಲಿದ್ದುದು ತಿಳಿದುಬರುತ್ತದೆ. ಕೆಲವು ಶಾಸನಗಳಲ್ಲಿ ಸಮುದಾಯ ಗದ್ಯಾಣ[೧೧]ವೆಂದು ಉಲ್ಲೇಖಗಳುಂಟು. ಆದರೆ ಅದರ ಅರ್ಥ ಸ್ಪಷ್ಟವಾಗುವುದಿಲ್ಲ. ಶಾಸನಗಳಲ್ಲಿ 'ಪಂಚ ಪುಷ್ಪಾಣೆ'[೧೨] ಮತ್ತು 'ಪಕ್ಷೀಸ್ವರ ಹೊಂನು'[೧೩] ಎಂಬ ನಾಣ್ಯಗಳ ಉಲ್ಲೇಖಗಳು ಬರುತ್ತವೆ. ಆದರೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಶಾಸನಗಳಲ್ಲಿ ಸಾಮಾನ್ಯವಾಗಿ ಗದ್ಯಾಣಗಳನ್ನು ಹೊನ್ನುಗಳೆಂದು ಕರೆದಿದ್ದಾರೆ. ಇವುಗಳಲ್ಲದೆ ಶಾಸನಗಳಲ್ಲಿ ಪಾಂಡ್ಯ ಗದ್ಯಾಣ,[೧೪] ಮಂಗಲೂರ ಗದ್ಯಾಣ[೧೫]ಗಳೂ ಉಲ್ಲೇಖಗೊಂಡಿವೆ. ಬಾರಕೂರ ಗದ್ಯಾಣವೂ[೧೬] ದೊರೆಯುವುದುಂಟು. ಈಚೆಗೆ ದೊರೆತ ಎರಡು

---

೧. A. V. Narasimha Murthy : Coins of Karnataka ಪು. ೯೬-೯೭.

೨. ಈ ಅಭಿಪ್ರಾಯವನ್ನು ಕೆ.ವಿ. ರಮೇಶ್ ಅವರು ಒಪ್ಪುವುದಿಲ್ಲ. ಅವರು ಕೊಡುವ ಕಾರಣ□- ಆಳುಪರ ಶಾಸನಗಳಲ್ಲಿ 'ಹೊನ್ನ ಗದ್ಯಾಣ'ವೆಂದು ಬರುವುವರಿಂದ ಗದ್ಯಾಣ ಶಬ್ದವು ಬಂಗಾರದ ನಾಣ್ಯಗಳಿಗೆ ಅನ್ವಯವಾಗುವುದಾದರೆ ಹೊನ್ನ ಗದ್ಯಾಣವೆಂದು ಕರೆಯುವ ಅಗತ್ಯವಿದ್ದಿರಲಿಲ್ಲ. ನೋಡಿ: ತುಳುನಾಡಿನ ಇತಿಹಾಸ, ಪು. ೭೪.

೩. ಎಇ XXXVII ಸಿಂದಗಿ ೩೪ ಕ್ರಿ.ಶ. ೧೧೩೨.

೪. ಎಇ XXXVII ಪು. ೧೯೦-೯೧.

೫. (ರೈ) ಎಕ XI ದಾವಣಗೆರೆ ೪೯ ಕ್ರಿ.ಶ. ೧೨೮೦(?); (ಮೈ) ಎಕ VII ಮಳವಳ್ಳಿ ೧೦೫ ಕ್ರಿ.ಶ. ೧೩೩೭. ಇದು ದೊಡ್ಡ ಆಕಾರದ ನಾಣ್ಯವಾಗಿದ್ದು ೬೩ ಗ್ರೈನ್ಸ್ ತೂಕವಿದ್ದು ೦.೫೫ ಸುತ್ತಳತೆಯುಳ್ಳ ವೃತ್ತಾಕಾರದಲ್ಲಿದೆ. S. Nagaraju : 'The Currency System and Coins of the Hoysalas'-The Hoysala Dynsaty. ಪು. ೧೭೪.

೬. ಕಇ V ಧಾರವಾಡ ೬೮ ಕ್ರಿ.ಶ. ೧೨೧೫-೧೭.

೭. (ಮೈ) ಎಕ II ಶ್ರವಣಬೆಳಗೊಳ ೪೫೯ ಕ್ರಿ.ಶ. ೧೨೮೮.

೮. ಎಂಎಆರ್ ೧೯೩೩ ಚಾಮರಾಜನಗರ ೪೪ ಕ್ರಿ.ಶ. ೧೩ ಶ.ಮಾ.

೯. ಎಸ್‌ಐಐ XX ಸಿಂದಗಿ ೩೨೦ ಕ್ರಿ.ಶ. ೧೨-೧೩ ಶ.ಮಾ.

೧೦. (ರೈ) ಎಕ V ಬೇಲೂರು ೧೭೫ ಕ್ರಿ.ಶ. ೧೧೮೬.

೧೧. ತುನಾಶಾ I ಕುಂದಾಪುರ ೪೩ ಕ್ರಿ.ಶ. ೧೨೬೨; ಅದೇ ಸಂಪುಟ. ಕುಂದಾಪುರ ೪೨ ಕ್ರಿ.ಶ. ೧೨೬೧.

೧೨. ಎಇ IV ಬಿಜಾಪುರ ೬ ಕ್ರಿ.ಶ. ೧೧-೧೨ ಶ.ಮಾ.

೧೩. ಎಂಎಆರ್ ೧೯೪೦ ಬೇಲೂರು ೨೪ ಕ್ರಿ.ಶ. ೧೩ ಶ.ಮಾ. (?)

೧೪. ತುನಾಶಾ I ಕುಂದಾಪುರ ೩೪ ಕ್ರಿ.ಶ. ೧೧೫೪.

೧೫. ತುನಾಶಾ I ಕಾರ್ಕಳ ೩೮ ಕ್ರಿ.ಶ. ೧೨೦೫.

೧೬. ಆಳುಪರ ನಾಣ್ಯಗಳು ಮಂಗಳೂರು ಮತ್ತು ಬಾರಕೂರಿನಲ್ಲಿದ್ದು ಬಾರಕೂರ ಗದ್ಯಾಣಗಳೂ ದೊರೆತಿವೆ. P. Gururaja Bhat : ಪೂರ್ವೋಕ್ತ ಗ್ರಂಥ, ಪು. ೨೦೬-೨೦೭.

ಮೀನುಗಳ ಲಾಂಛನದ ಬಂಗಾರದ ನಾಣ್ಯಗಳ ಮೇಲೆ ಪಾಂಡ್ಯ ಧನಂಜಯ ಎಂದಿದೆ. ಧನಂಜಯ ಎಂಬುದು ಮಧ್ಯಯುಗೀನ ಆಳುಪರ ಬಿರುದು ಆಗಿರುವುದರಿಂದ ಅವು ಆಳುಪರ ನಾಣ್ಯಗಳೇ ಆಗಿವೆಯೆಂದು ಕೆ.ವಿ. ರಮೇಶ್ ಅಭಿಪ್ರಾಯಪಟ್ಟಿದ್ದಾರೆ.[೧] ಹೊಯ್ಸಳರ ಕಾಲದ ನಾಣ್ಯಗಳನ್ನೇ ಮುಂದಿನ ವಿಜಯನಗರ ಸಾಮ್ರಾಜ್ಯದವರು ಅನುಸರಿಸಿದಂತಿದೆ.[೨] ಸಾಮಾನ್ಯವಾಗಿ ಸ್ಥಳದ ಹೆಸರಿನೊಂದಿಗೆ ಗದ್ಯಾಣ ಎಂಬ ಉಕ್ತಿ ಬಂದರೆ ಅದು ಆ ಸ್ಥಳದಲ್ಲಿ ಕಮ್ಮಟಗೊಂಡ ಗದ್ಯಾಣವೆಂದು ಭಾವಿಸಬೇಕಾಗುತ್ತದೆ. ಶಾಸನಗಳಲ್ಲಿ ಪುರದ ದ್ರಮ್ಮ,[೩] ಕರಿಯ ದ್ರಮ್ಮ,[೪] ನಿಷ್ಕಾ[೫] ಎನ್ನುವುದು ಉಕ್ತವಾಗಿವೆ.

ಎಷ್ಟೋ ಪ್ರಸಿದ್ಧ ರಾಜರ ನಾಣ್ಯಗಳು ಉಳಿದುಬಂದಿಲ್ಲ. ಆರನೆಯ ಚಾಳುಕ್ಯ ವಿಕ್ರಮಾದಿತ್ಯನು ಆ ವಂಶದ ಶ್ರೇಷ್ಠ ರಾಜನಾದರೂ ಅವನ ನಾಣ್ಯಗಳು ಯಾವುವೂ ಉಳಿದುಬಂದಂತಿಲ್ಲ. ಜಿ.ಎಚ್. ಖಾರೆಯವರು ಬೆಳಕಿಗೆ ತಂದ ಕೆಲವು ನಾಣ್ಯಗಳ ಮೇಲೆ 'ಶ್ರೀಲಕುಮಾ' ಎಂದು ಕನ್ನಡ ಲಿಪಿಯಲ್ಲಿದೆ. ಈ ನಾಣ್ಯಗಳು ಧಾರವಾಡ ಪ್ರಾಂತವನ್ನು ಆಳುತ್ತಿದ್ದ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿಯವಾಗಿರಬಹುದೆಂದು ಭಾವಿಸಲಾಗಿದೆ. ಭಾರತದ ನಾಣ್ಯ ಶಾಸ್ತ್ರ ಇತಿಹಾಸದಲ್ಲಿಯೇ ಇದು ಅಪರೂಪದ ಉದಾಹರಣೆಯಾಗಿದ್ದು ರಾಣಿಯೊಬ್ಬಳು ಟಂಕಿಸಿದ ಅಪರೂಪದ ನಾಣ್ಯಗಳಾಗಿವೆ.[೬]

ಶಾಸನಗಳಲ್ಲಿ ಪಣ[೭] (ಹಣ[೮]), ಹಾಗ,[೯] ಕಾಣೆ,[೧೦] ವೀಸ,[೧೧] ಬೇಳೆ,[೧೨] ತಾರ[೧೩] ಎಂಬ ನಾಣ್ಯಗಳ ಪ್ರಸ್ತಾಪ ಬರುತ್ತದೆ. ಶಾಸನಗಳಿಂದ ಅವುಗಳ ಪರಸ್ಪರ ಸಂಬಂಧವನ್ನು ಎ.ವಿ. ನರಸಿಂಹಮೂರ್ತಿಯವರು ಹೀಗೆ ಗುರುತಿಸಿದ್ದಾರೆ.

| | | |
|---|---|---|
| ೧ ಗದ್ಯಾಣ | = | ೧೦ ಪಣ |
| ೧ ಪಣ | = | ೪ ಹಾಗ |
| ೧ ಪಣ | = | ೪ ಕಾಗಿನಿ |

---

೧. ಕೆ.ವಿ. ರಮೇಶ್ : ತುಳುನಾಡಿನ ಇತಿಹಾಸ, ಪು. ೭೪.

೨. ಎಸ್. ನಾಗರಾಜು : ಪೂರ್ವೋಕ್ತ, ಪು. ೧೭೭-೭೮.

೩. ಕಇಆಪ್ರ ಮೇಡಕ್ ೬ ಕ್ರಿ.ಶ. ೧೧೫೧-೬೩.

೪. ಐಎನ್‌ಡಿ ಮುಖೇಡ್ ೩೮ ಕ್ರಿ.ಶ. ೧೨ ಶ.ಮಾ.
'ಹಾದರಕ್ಕೆ ಹೋದರೆ ಕಳ್ಳದಮ್ಮವಾಯಿತ್ತು'- ಬ.ವ. ೧೧೧.

೫. (ರೈ) ಎಕ V ಚನ್ನರಾಯಪಟ್ಟಣ ೧೭೨ ಕ್ರಿ.ಶ. ೧೨೦೯. ನಿಷ್ಕಾ ಪ್ರಾಚೀನ ರೋಮನ್ ನಾಣ್ಯವಾಗಿದ್ದು ವೇದಗಳಲ್ಲಿ ಉಕ್ತವಾಗಿದೆ. ಲೋಹದ ತುಂಡು ಅಥವಾ ಕಂಠಾಭರಣವಾಗಿದ್ದಿತು. (ನಿಕ್ಷ) ಬುದ್ಧನ ಜಾತಕ ಕಥೆಗಳಲ್ಲಿ 'ನಿಕ್ಕ' ಎನ್ನಲಾಗಿದೆ. ಸಂಗಂ ಸಾಹಿತ್ಯದಲ್ಲಿ ಲೋಹದ ತುಂಡನ್ನು ಅಥವಾ ಆಭರಣವನ್ನು ನಾಣ್ಯದ ಪರ್ಯಾಯವಾಗಿ ಬಳಸಲಾಗಿದೆ. ಕ್ರಮೇಣ ಆಭರಣ ಲೋಹದ ತುಂಡನ್ನು ಚೌಕಾಕಾರವಾಗಿ ಮತ್ತು ವೃತ್ತಾಕಾರವಾದ ನಾಣ್ಯವಾಗಿ ಬಳಸತೊಡಗಿದರು. (ಅಂತರ್ಜಾಲ ಮಾಹಿತಿ)

೬. A.V. Narasimha Murthy : ಪೂರ್ವೋಕ್ತ, ಪು. ೮೮-೮೯.

೭. ಎಂಎಆರ್ ೧೯೪೦ ಬೇಲೂರು ೧೯ ಕ್ರಿ.ಶ. ೧೨-೧೩ ಶ.ಮಾ.

೮. ಎಸ್‌ಐಐ XVIII ಹಾವೇರಿ ೨೦೯ ಕ್ರಿ.ಶ. ೧೨೨೮.

೯. ಕಇಆಪ್ರ ಮೇಡಕ್ ೪ ಕ್ರಿ.ಶ. ೧೧೫೨.

೧೦. (ರೈ) ಎಕ XII ಚಿಕ್ಕಮಗಳೂರು ೧೩ ಕ್ರಿ.ಶ. ೧೧೮೧.

೧೧. (ರೈ) ಎಕ XV ಬೇಲೂರು ೨೫೨ ಕ್ರಿ.ಶ. ೧೨೯೮.

೧೨. ಎಸ್‌ಐಐ XV ಗದಗು ೨೧೮ ಕ್ರಿ.ಶ. ೧೨೦೫.

೧೩. ಎಸ್‌ಐಐ IX(i) ೩೪೪ ಕ್ರಿ.ಶ. ೧೩೩೨.

೧ ಹಾಗ = ೪ ರಿಂದ ೫ ವೀಸ

೧ ಹಾಗ = ೨ ಬೇಳೆ[೧]

**ಹಣ-ಬಡ್ಡಿ :**

ಹಣವನ್ನು ಬಡ್ಡಿಗೆ ಕೊಡುವ ರೂಢಿ ಆ ಕಾಲದಲ್ಲಿಯೂ ಇದ್ದಿತು. ದೇವಾಲಯಗಳಲ್ಲಿ ತಮ್ಮ ಇಷ್ಟದ ಪೂಜೆಗೆ ಅಥವಾ ಪೂಜಾವ್ಯವಸ್ಥೆಗೆ ಹಣವನ್ನು ಅಕ್ಷಯ ಭಂಡಾರವಾಗಿಟ್ಟು ಅದರ ಬಡ್ಡಿಯಲ್ಲಿ ನಡೆಯುವಂತೆ ವ್ಯವಸ್ಥೆ ಮಾಡುವ ನೂರಾರು ಶಾಸನಗಳ ಉಲ್ಲೇಖಗಳು ದೊರೆಯುತ್ತವೆ. ಬಡ್ಡಿಯನ್ನು ಶಾಸನಗಳು ವೃದ್ಧಿಯೆಂದೂ ಕರೆದಿವೆ. ಲಖಂಣ್ಣನೆಂಬುವನು ಒಂದು ಗದ್ಯಾಣವನ್ನು ಲಕ್ಷ್ಮೀನಾರಾಯಣ ದೇಗುಲಕ್ಕೆ ನೀಡಿ, ಅದರ ಬಡ್ಡಿಯಲ್ಲಿ ದೇವರಿಗೆ ಸಂಜೆಯ ದೀಪವನ್ನು ಶಾಶ್ವತವಾಗಿ ಬೆಳಗುವಂತೆ ಮಾಡಿದನೆಂದು ಒಂದು ಶಾಸನ ತಿಳಿಸುತ್ತದೆ.[೨] ಬಡ್ಡಿಯನ್ನು ವರ್ಷದ ಲೆಕ್ಕದಲ್ಲಿಯೂ ತಿಂಗಳ ಲೆಕ್ಕದಲ್ಲಿಯೂ ನೀಡುತ್ತಿದ್ದುದು ಕಂಡುಬರುತ್ತದೆ. ಅಲ್ಲಾಳದೇವ ಎನ್ನುವವನು ಕೆರೆಸಂತೆಯ ಕೆರೆ ಧರ್ಮಕ್ಕಾಗಿ ೨೦೦ ಗದ್ಯಾಣಗಳನ್ನು ನೀಡಿ ಅದರ ಬೆಳೆ ಬಡ್ಡಿಯಲ್ಲಿ ವರ್ಷಕ್ಕೆ ಮೂವತ್ತು ಗದ್ಯಾಣಗಳನ್ನು ಆ ಕೆರೆಯ ತೂಬಿನ ಕಾಲುವೆಯ ವೆಚ್ಚಕ್ಕೆ ಬಳಸಬೇಕೆಂದು ಸೂಚಿಸಿದನೆಂದು ಒಂದು ಶಾಸನ ಹೇಳುತ್ತದೆ.[೩] ಬೇಲೂರಿನ ಶಾಸನವೊಂದರಲ್ಲಿ ಗದ್ಯಾಣ ಒಂದಕ್ಕೆ ಒಂದು ತಿಂಗಳಿಗೆ ಒಂದು ಹಾಗದಂತೆ ಬಡ್ಡಿಯನ್ನು ಲೆಕ್ಕ ಹಾಕಿರುವುದುಂಟು.[೪] ಅನೇಕ ದೇವಾಲಯಗಳಿಗೆ ಹೀಗೆ ದಾನವಾಗಿ ದೊರೆಯುತ್ತಿದ್ದ ಹಣವನ್ನು ಅವರು ಯಾವ ರೀತಿ ಲಾಭದಾಯಕವಾಗಿ ವಿನಿಯೋಗಿಸುತ್ತಿದ್ದರು ಎನ್ನುವುದು ಖಚಿತವಾಗಿ ತಿಳಿದುಬರುವುದಿಲ್ಲ. ಬಹುಶಃ ಲಾಭದಾಯಕ ಬಡ್ಡಿಗೆ ಅದನ್ನು ಸಾಲವಾಗಿ ಕೊಡುತ್ತಿದ್ದರು.

ಸಾಲವನ್ನು ಕೊಡುವಾಗ ವಸ್ತುವನ್ನು ಒತ್ತೆ ಇಟ್ಟುಕೊಳ್ಳುವ ಪದ್ಧತಿ ಇದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ರುದ್ರಭಟ್ಟನೆಂಬ ಕವಿ ಒಮ್ಮೆ ಹಣದ ಕೊರತೆಯಿಂದ ಸಾಲ ಮಾಡಬೇಕಾದಾಗ, ಒತ್ತೆ ಇಡಲು ತನ್ನ ಹೆಸರಿನ ಉತ್ತರಭಾಗದ (ಭಟ್ಟ) ಒಂದು ಅಕ್ಷರವನ್ನೇ ಒತ್ತೆಯಾಗಿಟ್ಟು ಸಾವಿರ ಹೊನ್ನುಗಳನ್ನು ಸಾಲವಾಗಿ ಪಡೆಯುತ್ತಾನೆ. ಸಾಲವನ್ನು ತೀರಿಸುವವರೆಗೆ ಅವನನ್ನು ಜನ ರುದ್ರಟ ಎಂದು ಗುರುತಿಸುತ್ತಿದ್ದರು.[೫] ಈ ರೀತಿ ಹೆಸರಿನ ಒಂದಕ್ಷರವನ್ನು ಒತ್ತೆ ಇಡುವ ರೀತಿ ಅತಿ ವಿಲಕ್ಷಣವಾದುದಾಗಿದೆ. ಹೊಯ್ಸಳರ ಕಾಲದ ಒಂದು ಶಾಸನದಲ್ಲಿ ಸೋಮೇಗೌಡನೆನ್ನುವವನು ದೀಕ್ಷಿತ ನಾಗಣ್ಣ ಎನ್ನುವವನಿಂದ ಸಾಲ ಪಡೆಯುವಾಗ ತನ್ನ ಭೂಮಿಯನ್ನು ಆಧಾರವಾಗಿಟ್ಟು ಪಡೆದಿರುವುದು ಕಂಡುಬರುತ್ತದೆ.[೬] ಮಾರಿಕವ್ವೆಯ ಭಕ್ತರು ಆ ದೇವತೆಯನ್ನು (ಪದಕ ಅಥವಾ ಸಣ್ಣ ವಿಗ್ರಹವಿರಬಹುದು) ಕೊರಳಲ್ಲಿ ಕಟ್ಟಿಕೊಂಡಿದ್ದು ಸಾಲವನ್ನು ಮಾಡುವಾಗ ಅದನ್ನೇ ಒತ್ತೆ ಇಡುತ್ತಿದ್ದಂತೆ ಬಸವಣ್ಣನವರ ವಚನ ಒಂದರಲ್ಲಿ ಸೂಚನೆ ಇದೆ.[೭] ಬಡ್ಡಿಯ ಆಸೆಗಾಗಿ ಶಿವಭಕ್ತರು ಸಾಲ ನೀಡುವುದನ್ನು ವಚನಕಾರರು ವಿರೋಧಿಸುತ್ತಾರೆ.[೮]

---

೧. A.V. Narasimha Murthy : ಪೂರ್ವೋಕ್ತ, ಪು. ೮೦.
೨. (ರೈ) ಎಕ VI ಕಡೂರು ೫೮ ಕ್ರಿ.ಶ. ೧೨೫೭.
೩. (ರೈ) ಎಕ VI ಕಡೂರು ೯೨ ಕ್ರಿ.ಶ. ೧೨೫೯ (?)
೪. (ರೈ) ಎಕ XV ಬೇಲೂರು ೧೫೯; (?)
೫: ಎಸ್‌ಐಐ XX ಪರಸಗಡ ೨೪೮; ಕ್ರಿ.ಶ. ೧೨೨೮.
೬. ಎಂಎಆರ್ ೧೯೨೪; ೨೯ ಪು. ३೮.
೭. ಬ.ವ. ೫೫೭- 'ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು; ಸಾಲಬಟ್ಟಡೆ ಮಾಱಿಕೊಂಬರಯ್ಯಾ'.
೮. ಪಿ.ವಿ. ನಾರಾಯಣ : ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೮೦.

**ಭೂಮಿ ಮತ್ತು ಆಸ್ತಿಯ ಒಡೆತನ :**

ಇಡೀ ಸಾಮ್ರಾಜ್ಯದ ಭೂಮಿ ಮತ್ತು ಐಶ್ವರ್ಯ ರಾಜನ ಒಡೆತನಕ್ಕೆ ಒಳಪಟ್ಟಿದ್ದು ಎಂಬ ಸಾಮಾನ್ಯ ಅಭಿಪ್ರಾಯವಿದ್ದರೂ ವೈಯಕ್ತಿಕ ಆಸ್ತಿಯನ್ನು ಹೊಂದುವ ಹಕ್ಕು ಆ ಕಾಲದ ಪ್ರಜೆಗಳಿಗೆ ಇದ್ದಿತು. ಪ್ರಜೆಗಳ ಭೂಮಾಲಿಕತ್ವದ ವಿಷಯದಲ್ಲಿ ವಿದ್ವಾಂಸರಲ್ಲಿ ಸ್ವಲ್ಪ ಭಿನ್ನಾಭಿಪ್ರಾಯಗಳಿದ್ದರೂ ಶಾಸನಗಳನ್ನು ಗಮನಿಸಿದರೆ ಪ್ರಜೆಗಳಿಗೆ ಭೂಮಾಲಿಕತ್ವದ ಹಕ್ಕು ಇದ್ದಿತು ಎನ್ನುವುದು ಸ್ಪಷ್ಟವಾಗುತ್ತದೆ. ಮೇಲೆ ಗಮನಿಸಿದ ಶಾಸನದಲ್ಲಿ, ಸಾಲ ಪಡೆಯುವಾಗ ಒಬ್ಬ ವ್ಯಕ್ತಿಗೆ ಜಮೀನನ್ನು ಒತ್ತೆ ಇಡಲು ಅವಕಾಶವಿದ್ದಿತು ಎನ್ನುವುದಾದರೆ, ಅದು ಅವನ ಮಾಲಿಕತ್ವವನ್ನು ಸಾಬೀತುಪಡಿಸುತ್ತದೆ. ಕ್ರಿ.ಶ. ೧೧೮೨ರ ಒಂದು ಶಾಸನದಲ್ಲಿ ಗಂಧಿಗ ಬಲ್ಲಿಸೆಟ್ಟಿ ಸಿದ್ಧೇಶ್ವರ ದೇವರ ಭೂಮಿಯನ್ನು ಒತ್ತೆ ಪಡೆದಿರುತ್ತಾನೆ. ಆದರೆ ಮುಂದೆ ಅದನ್ನು ಯಾರೂ ಒತ್ತೆ ಹಿಡಿಯಬಾರದೆಂದು ಶಾಸನ ತಿಳಿಸುತ್ತದೆ.[೧] ವೈಯಕ್ತಿಕ ಆಸ್ತಿಯ ಒಡೆತನವಿದ್ದಂತೆ ಸಾಮೂಹಿಕ ಒಡೆತನವೂ ಇದ್ದಿತು; ಇಡೀ ಹಳ್ಳಿಯನ್ನು ವೃತ್ತಿಗಳಾಗಿ ವಿಭಾಗಿಸಿ ಕೊಡುತ್ತಿದ್ದ ಅಗ್ರಹಾರಗಳ ವ್ಯವಸ್ಥೆ ಇದನ್ನು ಸೂಚಿಸುತ್ತದೆ. ಭೂಮಿಯನ್ನು ಮಾರುವಾಗಲೇ ಆಗಲಿ, ರಾಜನ ಗುತ್ತಿಗೆಯಾಗಿ ಕೊಡುವಾಗಲೇ ಆಗಲಿ, ರಾಜನ ಅಥವಾ ಅವನ ಪ್ರತಿನಿಧಿಗಳ ಅನುಮತಿಯನ್ನು ತೆಗೆದುಕೊಳ್ಳುವುದು ಕಂಡುಬರುವುದಿಲ್ಲ. ಅಗ್ರಹಾರಗಳಂತೆ ಶಿವಪುರಗಳು ನಿರ್ಮಾಣವಾಗತೊಡಗಿದಾಗ ಅವುಗಳಲ್ಲಿ ಸ್ತ್ರೀಯರಿಗೂ ವೃತ್ತಿಗಳು ದೊರಕತೊಡಗಿದವು. ರಾಯಸೆಟ್ಟಿಪುರದ ಶಾಸನದಲ್ಲಿ, ವೃತ್ತಿಗಳನ್ನು ಮಾಡಿ ಹಂಚುವಾಗ ಮಾರಿಸೆಟ್ಟಿಯ ಮಗಳು ಚಂಗಣವೆ ಮಾದವ್ವೆಗೆ ವೃತ್ತಿ ೧ ಎಂದು ಬರುತ್ತದೆ.[೨] ಹೀಗೆ ವೈಯಕ್ತಿಕವಾಗಿ ಜಮೀನನ್ನು, ನಿವೇಶನವನ್ನು ಆ ಕಾಲದ ಪ್ರಜೆಗಳು ಹೊಂದಿರುತ್ತಿದ್ದುದಲ್ಲದೆ ಅವುಗಳ ಮೇಲೆ ಅವರ ಸಂಪೂರ್ಣ ಸ್ವಾಮ್ಯವೂ ಇದ್ದಿತು ಎಂದು ಹೇಳಬಹುದು.

**ಸಮಾರೋಪ:**

ಇದುವರೆಗೂ ಆ ಕಾಲದ ಆರ್ಥಿಕ ಸ್ಥಿತಿಗತಿಗಳನ್ನು ಗಮನಿಸಿದಾಗ ಎದ್ದು ಕಾಣುವ ಕೆಲವು ಅಂಶಗಳೆಂದರೆ- ಒಳನಾಡಿನ ವಾಣಿಜ್ಯಜೀವನ ಸಾಕಷ್ಟು ಸಮೃದ್ಧವಾಗಿ ನಡೆಯುತ್ತಿದ್ದುದು ಕಂಡುಬರುತ್ತದೆ. ದಾನ ಧರ್ಮಕಾರ್ಯಗಳು ಅವ್ಯಾಹತವಾಗಿ ನಡೆದು ಬಂದಿವೆ. ಹಣದ 'ಬಿಗಿ' ಜನರ ಅನುಭವಕ್ಕೆ ಅಷ್ಟಾಗಿ ಬರುವ ಹಾಗೆ ಕಾಣುವುದಿಲ್ಲ. ತೆರಿಗೆಗಳನ್ನು ಗಮನಿಸಿದರೆ ಅವುಗಳ ಸಂಖ್ಯಾಬಾಹುಳ್ಯವೇ ಆಶ್ಚರ್ಯವನ್ನು ತರುವಂತಿದೆ. ಮೈನೆರೆಯುವಿಕೆಯಂತಹ ತೀರಾ ವೈಯಕ್ತಿಕ ವಿಷಯಗಳೂ ತೆರಿಗೆಗೆ ಒಳಪಡುವುದು ಅತಿಯಾಯಿತೇನೊ ಎಂದು ಭಾಸವಾಗುತ್ತದೆ. ಇಷ್ಟೊಂದು ತೆರಿಗೆಗಳನ್ನು ಪಾವತಿ ಮಾಡಿಯೂ ಧರ್ಮ ಕಾರ್ಯಗಳು, ಕೆರೆ ಕಟ್ಟೆಗಳ ನಿರ್ಮಾಣ, ದಾನ ಕಾರ್ಯಗಳು ನಡೆದಿರುವುದನ್ನು ನೋಡಿದರೆ ಬದುಕು ಕೊರತೆಗಳಿಂದ ಕೂಡಿರಲಿಲ್ಲ ಎಂದು ಭಾವಿಸಲು ಅವಕಾಶವಿದೆ. ಆ ಕಾಲದಲ್ಲಿ ಯುದ್ಧಗಳೂ ಸಾಕಷ್ಟು ನಡೆಯುತ್ತಿದ್ದವು. ಆರ್ಥಿಕವಾಗಿ ತೀರಾ ಕಡುಬಡವರ ವಿಷಯವನ್ನು ಶಾಸನಗಳಿಂದ ಹೆಚ್ಚಾಗಿ ನಿರೀಕ್ಷಿಸುವಂತಿಲ್ಲ. ಒಟ್ಟಾಗಿ ಆ ಕಾಲದ ಬದುಕು ಸುಖವಾಗಿದ್ದಿತೆ ಅಥವಾ ಕಷ್ಟಕರವಾಗಿದ್ದಿತೆ ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಉತ್ತರ ಹೇಳುವುದು ಸುಲಭವಲ್ಲ. ಕಾಲದ ದೃಷ್ಟಿಯಿಂದ,

---

೧. ಐಎಸ್‌ಡಿ ಉ ಸೊಲ್ಲಾಪುರ ೨೨ ಕ್ರಿ.ಶ. ೧೧೮೨.

೨. ಎಂಎಆರ್ ೧೯೩೩ ಮದ್ದೂರು ೪೮ ಕ್ರಿ.ಶ. ೧೨೫೧.

ಆ ಕಾಲದ ಬದುಕಿನಿಂದ ಇಷ್ಟು ದೂರ ನಿಂತು ಉತ್ತರಿಸುವುದು ಕಠಿಣವೇ. ಅಲ್ಲದೆ ಸುಖದ ಪರಿಕಲ್ಪನೆ ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ಭಿನ್ನವಾಗಿರುವಂಥದು. ಆ ಕಾಲದ ಮೂಲಕವೂ ಜನರ ಬದುಕು ಹಾದು ಬಂದಿದೆ. ಹೀಗಿರುವಾಗ ಆಧುನಿಕ ಮಾನದಂಡಗಳಿಂದ, ಮೌಲ್ಯಗಳಿಂದ ಆ ಕಾಲದ ಬದುಕನ್ನು ತೂಗಿ ನೋಡುವುದು ಸರಿಯೇ-ಸಾಧುವೇ ಎನ್ನುವ ಪ್ರಶ್ನೆಯೂ ಎದುರಾಗುವುದು.

ಪ್ರಾಚೀನ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಲು ವಿಪುಲ ಸಾಮಗ್ರಿ ಶಾಸನಗಳಿಂದ ದೊರೆಯುತ್ತದೆ. ಅರ್ಥಶಾಸ್ತ್ರದಲ್ಲಿ ಪರಿಣತರು ವಿಶೇಷವಾಗಿ ಅಧ್ಯಯನ ಮಾಡಲು ಸಮೃದ್ಧ ವಿವರಗಳನ್ನು, ಮಾಹಿತಿಗಳನ್ನು ಶಾಸನಗಳು ಒದಗಿಸುತ್ತವೆ ಎಂದು ಇಲ್ಲಿ ಸೂಚಿಸಬಯಸುತ್ತೇನೆ. ಆ ವಿಷಯದ ಪರಿಣತ ವಿದ್ವಾಂಸರು ಸಮೃದ್ಧವಾಗಿ ದೊರೆಯುವ ಸಾಮಗ್ರಿಯನ್ನು ಬಳಸಿಕೊಂಡು ಅಧ್ಯಯನ ನಡೆಸಿದರೆ ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯ ಚಿತ್ರ ಇನ್ನೂ ಖಚಿತವಾಗಿ ತಿಳಿದುಬರಲು ಅವಕಾಶವಾಗುತ್ತದೆ.

# ೧೨. ಆಡಳಿತ ವ್ಯವಸ್ಥೆ

**ಪ್ರಾ**ಚೀನ ಕಾಲದ ಆಡಳಿತ ವ್ಯವಸ್ಥೆಯ ರಚನೆಯನ್ನು ಗಮನಿಸಿದರೆ, ಅದನ್ನು ಪ್ರಮುಖವಾಗಿ ಎರಡು ವಿಭಾಗಗಳಲ್ಲಿ ಅಳವಡಿಸಬಹುದು. ಅವನ್ನು ಕೇಂದ್ರಾಡಳಿತ ವ್ಯವಸ್ಥೆ ಮತ್ತು ಸ್ಥಳೀಯ ಆಡಳಿತ ವ್ಯವಸ್ಥೆಗಳೆಂದು ಹೆಸರಿಸಬಹುದು. ಇಡೀ ರಾಜ್ಯ ವ್ಯವಸ್ಥೆಗೇ ಕೇಂದ್ರವಾದ ರಾಜನು ಸಹಜವಾಗಿ ಕೇಂದ್ರಾಡಳಿತಕ್ಕೂ ಕೇಂದ್ರಬಿಂದುವಾಗಿದ್ದನು. ರಾಜನು ತನ್ನ ಮಂತ್ರಿಗಳ, ಸಾಮಂತರ, ಅಧಿಕಾರಿಗಳ ಮೂಲಕ ರಾಜ್ಯಾಡಳಿತವನ್ನು ನಿರ್ವಹಿಸುತ್ತಿದ್ದನು. ಇನ್ನು ಗ್ರಾಮ, ಊರು, ಪಟ್ಟಣಗಳು ಸ್ವತಂತ್ರ ಸಣ್ಣ ಸಣ್ಣ ಘಟಕಗಳಂತೆ ಕಾರ್ಯನಿರ್ವಹಿಸಿರುವುದು ಕಂಡುಬಂದರೂ ಆಂತರಿಕ ರಚನೆಯಲ್ಲಿ ರಾಜನ ಕಡೆಗೇ ಮುಖ ಮಾಡಿದಂತೆ ಕಂಡುಬರುತ್ತದೆ.

ಇಡೀ ಆಡಳಿತ ವ್ಯವಸ್ಥೆಗೆ ಕೇಂದ್ರಬಿಂದುವಾದ ರಾಜನ ಪ್ರಾಮುಖ್ಯದ ವಿಷಯದಲ್ಲಿ ಪ್ರಾಚೀನ ಕೃತಿಗಳೆಲ್ಲವೂ ಬಹುಮಟ್ಟಿಗೆ ಏಕಾಭಿಪ್ರಾಯವನ್ನು ಹೊಂದಿವೆ. ರಾಜನ ಅನುಪಸ್ಥಿತಿಯಲ್ಲಿ ರಾಜ್ಯ 'ಮಾತ್ಸ್ಯನ್ಯಾಯ'ಕ್ಕೆ ಒಳಗಾಗುವುದೆಂದೂ, ಅದರಿಂದ ರಾಜ್ಯವನ್ನು, ಪ್ರಜೆಗಳನ್ನು ರಕ್ಷಿಸಲು ರಾಜನು ಅತ್ಯಗತ್ಯವೆಂದು ಅರ್ಥಶಾಸ್ತ್ರ ಮತ್ತು ಜಾತಕ ಕಥೆಗಳು ತಿಳಿಸುತ್ತವೆ. ಸುಗಮವಾದ ರಾಜ್ಯಾಡಳಿತಕ್ಕೆ ರಾಜನ ಇರುವಿಕೆ ಅಗತ್ಯವಾದುದು. ಇಂಥ ಪ್ರಮುಖವಾದ ರಾಜನ ಸ್ಥಾನ ಆನುವಂಶಿಕವಾದುದಾಗಲಿ, ಜೀವನ ಪರ್ಯಂತವಾಗಲಿ ಆಗಿರಲಿಲ್ಲ. ಅನಿಶ್ಚಿತವಾಗಿದ್ದ ಅಧಿಕಾರ ಕ್ರಮೇಣ ಆನುವಂಶಿಕ ರಾಜತ್ವವಾಗಿ ಮಾರ್ಪಟ್ಟಿತೆಂಬ ಅಭಿಪ್ರಾಯವಿದೆ.[೧] ಆದರೆ ಕನ್ನಡನಾಡಿನ ರಾಜಮನೆತನಗಳನ್ನು ಗಮನಿಸಿದರೆ ಅದು ಆನುವಂಶಿಕವಾಗಿಯೇ ಮುಂದುವರೆದಿರುವುದು ಕಂಡುಬರುತ್ತದೆ.

**ಸಪ್ತಾಂಗಗಳು:**

ರಾಜ್ಯಾಡಳಿತದ ಅಂಗಗಳನ್ನು ಸಪ್ತಾಂಗಗಳೆಂದು ಪ್ರಾಚೀನ ಕಾಲದಿಂದಲೂ ಶಾಸ್ತ್ರಗ್ರಂಥಗಳು ಗುರುತಿಸಿವೆ. ಅರ್ಥಶಾಸ್ತ್ರದಲ್ಲಿ ಸ್ವಾಮಿ, ಅಮಾತ್ಯ, ಜನಪದ, ದುರ್ಗ, ಕೋಶ, ದಂಡ ಮತ್ತು ಮಿತ್ರನೆಂದು ಹೇಳಲಾಗಿದೆ.[೨] ಕನ್ನಡ ಶಾಸನಗಳೂ ಕೂಡ ಅವನ್ನು 'ಸಪ್ತಾಂಗ'ಗಳೆಂದು ಕರೆದಿವೆ.[೩] ಒಂದು ಶಾಸನ ಅವನ್ನು ಹೆಸರಿಸಿರುವುದುಂಟು: 'ಸ್ವಾಮ್ಯಮಾತ್ಯ ಸುಹೃತ್ಕೋಶ ದೇಬ ದುರ್ಗ್ಗ ಬಲಮೆಂಬ ಸಪ್ತಾಂಗ ಸಂಪತಿಯೊಳದ್ವಿತೀಯನೆ(ನಿ)ಸಿಯುಂ'[೪]. ಕನ್ನಡ ಕೃತಿಗಳಲ್ಲಿ ಕೆಲವು ಇವೇ ಸಪ್ತಾಂಗಗಳನ್ನು

---

೧. R. ShamaShastri : Evolution of indian Polity ಪು. ೧೦.

೨. ಟಿ.ವಿ. ವೆಂಕಟಾಚಲಶಾಸ್ತ್ರೀ : ಶ್ರೀವತ್ಸ ನಿಘಂಟು, ಪು. ೧೦.

೩. (ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೦.

೪. ಎಸ್‌ಐಐ XVIII ಹಾವೇರಿ ೨೪೨ ಕ್ರಿ.ಶ. ೧೩ ಶಮಾ.

ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಹೇಳಿರುವುದುಂಟು.[೧] ಸಪ್ತಾಂಗಗಳನ್ನು ಬಿಡಿಬಿಡಿಯಾಗಿ ನೋಡಿದಾಗ ಅಷ್ಟು ಮಹತ್ವದವಾಗಿ ಕಾಣದೇ ಹೋದರೂ ಅವೆಲ್ಲವೂ ರಾಜ್ಯಕ್ಕೆ ಅತ್ಯವಶ್ಯಕವಾದವು. ಅವುಗಳಲ್ಲಿ ಕೆಲವಂತೂ - ಉದಾಹರಣೆಗೆ ರಾಜ, ಅಮಾತ್ಯ ಹೆಚ್ಚು ಪ್ರಮುಖವಾಗಿದ್ದವು.[೨] ಒಟ್ಟಾಗಿ ರಾಜ್ಯಾಂಗಗಳು ಒಂದರ ಬೆಂಬಲದಿಂದ ಇನ್ನೊಂದು ಬಲ ಪಡೆದಿರುವುದು ಸ್ಪಷ್ಟವಿದೆ.

ರಾಜ:

ಪ್ರಾಚೀನ ಭಾರತದಲ್ಲಿ ರಾಜರು ಮೂಲತಃ ದೈವಾಂಶಸಂಭೂತರೆಂಬ ಅಭಿಪ್ರಾಯವಿದ್ದಿತು; ಕರ್ನಾಟಕದ ರಾಜರೂ ಈ ಅಭಿಪ್ರಾಯಕ್ಕೆ ಹೊರತೇನೂ ಆಗಿರಲಿಲ್ಲ. ಕದಂಬ, ಗಂಗ, ಚಾಳುಕ್ಯ, ಸಿಂದ ಮುಂತಾದ ರಾಜವಂಶಗಳು ತ್ರಿಮೂರ್ತಿಗಳಲ್ಲಿ ಒಬ್ಬನ ಮೂಲವನ್ನೋ ಅಥವಾ ಪೌರಾಣಿಕ ಮೂಲವನ್ನೋ ಹೇಳಿಕೊಳ್ಳುವುದುಂಟು. ಹೊಯ್ಸಳ ವಂಶದ ಶಕ್ತಿಶಾಲಿ ದೊರೆಗಳಲ್ಲೊಬ್ಬನಾದ ವಿಷ್ಣುವರ್ಧನನನ್ನು ವಿಷ್ಣುವಿನ ಅವತಾರಗಳ ಹಿನ್ನೆಲೆಯಲ್ಲಿ ಒಂದು ಶಾಸನ ಹೇಳುತ್ತದೆ.

ಪದದೊಳ್ ಕೂರ್ಮಸ್ವರೂಪಂ ನಯನಯುಗದೊಳ್ ಮತ್ಸ್ಯರೂಪಂ ಘನಗ್ರೀ
ವದೊಳಾದಿ ಕ್ರೋಡರೂಪಂ ನಡುವಿನೊಳೆ ನೃಸಿಂಹಮಾತ್ಮ ಪ್ರಭಾವಾ
ಸ್ಪದದೊಳ್ ರಾಮತ್ರಯತ್ವಂ ಮತಿವಿಕಸನದೊಳ್ ಬುದ್ಧರೂಪಾಗಿ ಗುಜ್ಜಾಗದ
ಕಲಿತ್ವಕ್ಕೆ ಮೆಯ್ದಾರದ ಹರಿಯೆನಿಪಂ ವಿಷ್ಣುಜಿಷ್ಣು ಕ್ಷಿತೀಶಂ॥[೩]

ರಾಜನು ಭಗವಂತನ ಅವತಾರವೆಂದು ಪರಿಭಾವಿತವಾಗಿದ್ದುದರಿಂದ ಇಡೀ ರಾಜ್ಯ ರಾಜನಲ್ಲಿ ಉನ್ನತ ಆದರ್ಶವನ್ನು, ಅತಿಮಾನವ ಶಕ್ತಿಯನ್ನು ನಿರೀಕ್ಷಿಸುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ. ರಾಜಪದವಿಗೆ ಪರಿಪೂರ್ಣ ಅರ್ಹನನ್ನಾಗಿ ಮಾಡಲು ಬಾಲ್ಯದಿಂದಲೇ ಅತ್ಯುತ್ತಮವಾದ ಎಲ್ಲ ಶಿಕ್ಷಣವನ್ನು ರಾಜಕುಮಾರರಿಗೆ ನೀಡಲಾಗುತ್ತಿತ್ತು. ರಾಜಕುಮಾರರ ಶಿಕ್ಷಣಕ್ಕೆ ಸಂಬಂಧಿಸಿದ ಹಾಗೆ ಖಚಿತ ಚಿತ್ರವನ್ನು ಶಾಸನಗಳು ಕೊಡುವುದಿಲ್ಲವಾದರೂ ರಾಜನ ವಿಶೇಷಣಗಳಿಂದಲೂ ಕೆಲವು ಪ್ರಾಸಂಗಿಕ ಉಲ್ಲೇಖಗಳಿಂದಲೂ ರಾಜರಿಗೆ ದೊರೆಯುತ್ತಿದ್ದ ವಿದ್ಯಾಭ್ಯಾಸವನ್ನು ಗ್ರಹಿಸಬೇಕಾಗಿದೆ. ರಾಜಕುಮಾರರಿಗೆ ಶಸ್ತ್ರ ಶಾಸ್ತ್ರಗಳೆರಡರಲ್ಲೂ ಪ್ರಾವೀಣ್ಯವನ್ನು ಕೊಡಲು ಪ್ರಯತ್ನಿಸಲಾಗುತ್ತಿತ್ತು. ಕಲ್ಯಾಣಿ ಚಾಳುಕ್ಯರ ಸಾಮಂತ ರಾಜನಾದ ವೀರಪಾಂಡ್ಯನು ಶಸ್ತ್ರ ಶಾಸ್ತ್ರಗಳಲ್ಲಿ ಪರಿಣತನಾಗಿದ್ದನು.

ತುರಗಾರೋಹಣವಿದ್ದೆಗೋಜನೆನಿಪಂ ರೇವನ್ತದೇವಂಗೆ ಸ
ದ್ಗುರುವೆನ್ದು ಭೃಗುವಿಂಗೆ ಶಸ್ತ ಕಳೆಯೊಳು ಶಾಸ್ತ್ರಾಗಮ ಜ್ಞಾನದೊಳು
ಪಿರಿಯಂ ಪದ್ಮಭವಂಗೆ ದುಷ್ಟಗಜ ಶಿಕ್ಷಾಚಾರ್ಯನಿಂದ್ರಂಗೆನಲು
ದೊರೆಯಾರ್ಬ್ಭೂಪತಿ ವೀರಪಾಂಡ್ಯ ನಿನಗೀ ವಿಶ್ವಂಭರಾಚಕ್ರದೊಳು॥[೪]

ಅಶ್ವವಿದ್ಯೆಯಲ್ಲಿ ರೇವಂತನಿಗೂ, ಶಸ್ತ್ರ ವಿದ್ಯೆಯಲ್ಲಿ ಭೃಗುವಿಗೂ, ಶಾಸ್ತ್ರಾಗಮ ಜ್ಞಾನದಲ್ಲಿ ಬ್ರಹ್ಮನಿಗೂ, ಗಜಶಾಸ್ತ್ರದಲ್ಲಿ ಇಂದ್ರನಿಗೂ ಗುರುವಾಗಬಲ್ಲಂತಹ ವಿದ್ಯೆ ಪಡೆದಿದ್ದನೆಂದು ತಿಳಿಸುತ್ತದೆ. ಹೊಯ್ಸಳ ನರಸಿಂಹನು ಈಶ್ವರದೇವನೆಂಬುವನಿಂದ ಅಕ್ಷರ

---

೧. ಅರಸಂ ಪೆರ್ಗಡೆ ಜನಪದ
ವರಿದೆನಿಸುವ ಕೋಟೆ ಕೋಶಮಾರಯ್ಯೆ ಬಲಂ
ದೊರೆವೆತ್ತ ಮಿತ್ರನೆಂದಿಂ
ತು ರಾಜ್ಯಮಕ್ಕುಂ ವಿಚಾರಿಸಲ್ ಸಪ್ತಾಂಗಂ. ಸೂಕ್ತಿ ಸುಧಾರ್ಣವಂ ೧೬-೧೭.

೨. A.S. Altekar : State and Government in Ancient India ಪು. ೪೫.

೩. (ರೈ) ಎಕ V ಹಾಸನ ೫೩ ಕ್ರಿ.ಶ. ೧೧೭೦.

೪. ಎಸ್‌ಐಐ IX(i) ಹರಪನಹಳ್ಳಿ ೨೬೭ ಕ್ರಿ.ಶ. ೧೧೬೦.

ಮತ್ತು ಲೆಕ್ಕವನ್ನು ಕ್ರಮವಾಗಿ ಕಲಿತನೆಂದು ಒಂದು ಶಾಸನ ತಿಳಿಸುತ್ತದೆ.[೧] ಬಹುಶಃ ಇದು ಪ್ರಾರಂಭಿಕ ಶಿಕ್ಷಣವನ್ನು ಹೇಳುತ್ತದೆ. ಬಮ್ಮ ಭೂಪಾಲನನ್ನು ನಯಶಾಸ್ತ್ರ (=ನೀತಿಶಾಸ್ತ್ರ) ವಿಶಾರದನೆಂದು ಒಂದು ಶಾಸನ ಹೇಳುತ್ತದೆ.[೨] ಹೊಯ್ಸಳ ನರಸಿಂಹನನ್ನು ಒಂದು ಶಾಸನ 'ಲೋಕ ಸಂಸ್ತುತ್ಯವಾಣೀಶ್ರೀಯಂ ವಕ್ತ್ರಾಬ್ಜದೊಳ್ ವಾಗ್ವರನೆನೆ ಮೆಱೆದಂ' ಎಂದು ಕೀರ್ತಿಸುತ್ತದೆ.[೩] ವಿಷ್ಣುವರ್ಧನನನ್ನು ಕುರಿತು ಅವನು ಖಡ್ಗ ವಿದ್ಯೆಯಲ್ಲಿ ಅಸಾಧಾರಣನಾಗಿದ್ದನೆಂದು ಕೆಲವು ಶಾಸನಗಳು ತಿಳಿಸುತ್ತವೆ.[೪] ನರಸಿಂಹನನ್ನು 'ಸಾಹಿತ್ಯ ಸರ್ವಜ್ಞ'ನೆಂದು ಒಂದು ಶಾಸನ ಕರೆದಿದೆ.[೫] ಇಂಥ ಉಲ್ಲೇಖಗಳಿಂದ ರಾಜಕುಮಾರರಿಗೆ ಶಸ್ತ್ರ ಶಾಸ್ತ್ರ ಸಾಹಿತ್ಯ ಮುಂತಾದ ವಿದ್ಯೆಗಳಲ್ಲಿ ಪ್ರೌಢ ಶಿಕ್ಷಣ ದೊರೆಯುತ್ತಿತ್ತು ಎಂದು ಭಾವಿಸಬಹುದು.

ರಾಜಮನೆತನಗಳ ಆಡಳಿತ ಆನುವಂಶಿಕವಾಗಿ ನಡೆದುಕೊಂಡು ಬಂದಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ರಾಜನ ಹಿರಿಯ ಮಗನಿಗೆ ಸಿಂಹಾಸನದ ಅಧಿಕಾರ ದೊರೆಯುತ್ತಿತ್ತು. ಮನುವಿನ ಅಭಿಪ್ರಾಯದಲ್ಲಿ 'ಮೊದಲ ಮಗನು ಜನಾಂಗದ ಮುಂದುವರಿಕೆಯ ಅಗತ್ಯವಾಗಿದ್ದಾನೆ. ಅವನೇ ಕರ್ತವ್ಯದ ಮಗು. ಆದ್ದರಿಂದ ಅವನಿಗೇ ಎಲ್ಲ ಆಸ್ತಿ ದೊರೆಯಬೇಕು. ಅನಂತರದ ಮಕ್ಕಳೇನಿದ್ದರೂ ಬಯಕೆಯಿಂದ ಹುಟ್ಟಿದವರು.'[೬] ಸಿಂಹಾಸನದ ಅಧಿಕಾರವನ್ನು ಮೊದಲನೆಯ ಮಗನಿಗೆ ನೀಡುವುದು ಪದ್ಧತಿ. ಹೊಯ್ಸಳ ಎರೆಯಂಗನ ಹಿರಿಯ ಮಗ ಬಲ್ಲಾಳ ಸುಮಾರು ಎಂಟು ವರ್ಷ ರಾಜ್ಯಭಾರ ಮಾಡಿದ ನಂತರ ಅವನ ತಮ್ಮ ವಿಷ್ಣುವರ್ಧನ ರಾಜ್ಯಭಾರ ಮಾಡಿರುವುದನ್ನು ಕಾಣುತ್ತೇವೆ.[೭]

ರಾಜನಾಗಬೇಕಾದವನು ತುಂಬ ಚಿಕ್ಕವಯಸ್ಸಿನವನಾಗಿದ್ದರೆ ಅಂಥ ಸಮಯದಲ್ಲಿ ಮಂತ್ರಿಗಳು ರಾಜಪ್ರತಿನಿಧಿಗಳಂತೆ ರಾಜ್ಯವನ್ನು ಆಳುತ್ತಿದ್ದರೆಂದು ಕಾಣುತ್ತದೆ. ಏಕೆಂದರೆ ವಿಷ್ಣುವರ್ಧನ ಮರಣ ಹೊಂದಿದಾಗ ಅವನ ಮಗ ನರಸಿಂಹನಿಗೆ ಕೇವಲ ೮ ವರ್ಷ; ಆ ವಯಸ್ಸಿನಲ್ಲಿ ಅವನು ಪಟ್ಟಕ್ಕೆ ಬಂದುದರಿಂದ ಅವನ ಪರವಾಗಿ ಮಂತ್ರಿಗಳು ರಾಜ್ಯಭಾರದ ಹೊಣೆಯನ್ನು ಹೊತ್ತಿದ್ದಾರೆ.[೮] ಸಾಮಾನ್ಯವಾಗಿ ರಾಜನು ತನ್ನ ಸಹೋದರರನ್ನು, ಹಿರಿಯ ಮಗನಲ್ಲದ ಉಳಿದ ಪುತ್ರರನ್ನು ಅಧಿಕಾರಿಗಳನ್ನಾಗಿ ವಿವಿಧ ಪ್ರಾಂತಗಳಿಗೆ ಅವರ ಯೋಗ್ಯತಾನುಸಾರವಾಗಿ ನೇಮಿಸುತ್ತಿದ್ದನು. ಹಿರಿಯ ಮಗ ಯುವರಾಜನಾಗಿ ಯಾವುದಾದರೂ ಒಂದು ಪ್ರಾಂತದ ಅಧಿಕಾರ ವಹಿಸಿಕೊಂಡಿದ್ದು ರಾಜ್ಯಾಡಳಿತದ ಅನುಭವವನ್ನು ಗಳಿಸಿಕೊಳ್ಳುತ್ತಿದ್ದನು. ಕೆಲವು ಸಾರಿ ಹಿರಿಯ ಮಗನೇ ತಂದೆಯ ವಿರುದ್ಧ ತಿರುಗಿ ಬಿದ್ದಿರುವುದೂ ಉಂಟು. ಎರಡನೆಯ ಬಲ್ಲಾಳನು ತನ್ನ ತಂದೆ ನರಸಿಂಹನ ವಿರುದ್ಧ ದಂಗೆಯೆದ್ದ ವಿಷಯ ಶಾಸನೋಕ್ತವಾಗಿದೆ. 'ಕುಮಾರ ಬಲ್ಲಾಳ ದೇವನು ತಮ್ಮಯ್ಯಂಗೆ ತಪ್ಪಿ ಬಂದು ತಳಿಗೆ ನಾಡಂ'- ಈ ಸಂಬಂಧದಲ್ಲಿ ನಡೆದ ಹೋರಾಟದಲ್ಲಿ ಹೋರಾಡಿ ಮಡಿದ ಗೋವಗೌಡನಿಗೆ ಅವನ ಮಗ ಸತ್ತಿಗೌಡ ವೀರಗಲ್ಲನ್ನು ನೆಡಿಸಿದ ವಿಷಯ ನಿರೂಪಿತವಾಗಿದೆ.[೯]

---

೧. (ರೈ) ಎಕ V ಚನ್ನರಾಯಪಟ್ಟಣ ೨೦೩ ಕ್ರಿ.ಶ. ೧೨೨೩.

೨. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೩. (ರೈ) ಎಕ XII ತುಮಕೂರು ೩೮ ಕ್ರಿ.ಶ. ೧೧೬೦.

೪. (ರೈ) ಎಕ V ನಾಗಮಂಗಲ ೧೨೭ ಕ್ರಿ.ಶ. ೧೧೪೫.

೫. (ರೈ) ಎಕ V ಚನ್ನರಾಯಪಟ್ಟಣ ೨೬೯ ಕ್ರಿ.ಶ. ೧೨೭೬.

೬. Kewal Motwani : Manudharma Sastra ಪು. ೧೨೦.

೭. ಬಿ.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ : 'ದೋರಸಮುದ್ರದ ಹೊಯ್ಸಳರು', ಕರ್ನಾಟಕದ ಪರಂಪರೆ I ಪು. ೧೬೯.

೮. J. D.M. Derrett : The Hoysalas, ಪು. ೬೮-೬೯.

೯. ಎಂಎಆರ್ ೧೯೩೨ ಚಿಕ್ಕಮಗಳೂರು ೩೪ ಕ್ರಿ.ಶ. ೧೧೭೩.

ಸಾಮಾನ್ಯವಾಗಿ ಹಿರಿಯ ರಾಜಕುಮಾರ ಯುವರಾಜನೆಂದು ನೇಮಕ ಹೊಂದುತ್ತಿದ್ದ. ಅವನು ಭಾವಿರಾಜನೆಂದು ಪರಿಭಾವಿತನಾಗಿ ಅದರ ಸಂಕೇತವಾಗಿ ಒಂದು ಕಂಠಹಾರವನ್ನು ಧರಿಸುತ್ತಿದ್ದ; ಚಾಳುಕ್ಯ ಎರಡನೆಯ ಸೋಮೇಶ್ವರ ಸಿಂಹಾಸನಾರೋಹಣದ ಸಂದರ್ಭದಲ್ಲಿ ಅದನ್ನು ತೆಗೆದ ಹಾಗೆ ತಿಳಿದುಬರುತ್ತದೆ.[೧] ಯುವರಾಜನು ರಾಜನಾಗಿ ಸಿಂಹಾಸನವನ್ನು ಏರಲು ಕೊನೆಯ ಪಕ್ಷ ಇಪ್ಪತ್ನಾಲ್ಕು ವರ್ಷಗಳಾಗಿರಬೇಕೆಂದು ಕಾಣುತ್ತದೆ. ಸಿಂಹಾಸನಾರೋಹಣವನ್ನು 'ಪಟ್ಟಬಂಧ', 'ಪಟ್ಟಬಂಧನೋತ್ಸಾಪ' ಮುಂತಾದ ಹೆಸರುಗಳಿಂದ ಶಾಸನಗಳು ಕರೆದಿವೆ. ಆ ಸಂದರ್ಭಗಳಲ್ಲಿ ದೇವಾಲಯಗಳಲ್ಲಿ ವಿಶೇಷ ಪೂಜೆಯನ್ನು ಮತ್ತು ದಾನಕಾರ್ಯಗಳನ್ನು ಕೈಗೊಳ್ಳಲಾಗುತ್ತಿತ್ತು.[೨] ರಾಜ್ಯಾಭಿಷೇಕ ತುಂಬ ವೈಭವದಿಂದ ನಡೆಯುತ್ತಿದ್ದಿತು; ಅದು ಇಡೀ ರಾಜ್ಯದ ಉತ್ಸವದಂತೆ ಆಚರಿಸಲ್ಪಡುತ್ತಿತ್ತು.[೩] ಯುವರಾಜನಾಗಿದ್ದಾಗಲೇ ರಾಜ್ಯಾಡಳಿತದ ಪ್ರತ್ಯಕ್ಷ ಅನುಭವ ದೊರಕಲೆಂದು ಕೆಲವು ಪ್ರದೇಶಗಳನ್ನು ಆಳಲು ನೇಮಿಸುತ್ತಿದ್ದುದುಂಟು. ಇಂಥ ಆಳ್ವಿಕೆಗಳನ್ನು 'ಕುಮಾರ ವೃತ್ತಿ'[೪] ಎಂದು ಕರೆಯುತ್ತಿದ್ದರು. ಎರಡನೆಯ ಬಲ್ಲಾಳನ ಪಟ್ಟಾಭಿಷೇಕ ಕ್ರಿ.ಶ. ೧೧೭೩ರಲ್ಲಿ ಆದರೂ ಕ್ರಿ.ಶ. ೧೧೬೫ರಲ್ಲೇ ಅವನು ಕೆಲವು ಪ್ರದೇಶಗಳನ್ನು ಆಳುತ್ತಿದ್ದ ವಿಷಯ ಶಾಸನೋಕ್ತವಾಗಿದೆ.[೫]

ರಾಜ್ಯದ ರಾಜಧಾನಿಗಳನ್ನು ಶಾಸನಗಳು 'ನೆಲೆವೀಡು' ಎಂದು ಸಾಮಾನ್ಯವಾಗಿ ಕರೆದಿವೆ. ಕೆಲವು ಶಾಸನಗಳಲ್ಲಿ 'ಸ್ಕಂಧವಾರ'[೬] ಗಳೆಂದು ಕರೆದಿರುವುದುಂಟು. ಹೊಯ್ಸಳರ ದೋರಸಮುದ್ರ ಪ್ರಸಿದ್ಧ ರಾಜಧಾನಿಯಾಗಿದ್ದಿತು. ಅದನ್ನು ಶಾಸನಗಳು 'ನೆಲೆವೀಡು' ಎಂದು ಕರೆದಿವೆ.[೭] ದೋರಸಮುದ್ರವನ್ನು ಕೆಲವು ಶಾಸನಗಳು 'ವಿಜಯಸಮುದ್ರ' ಎಂದೂ ಕರೆದಿವೆ.[೮] ರಾಜಧಾನಿಗಳ ವಿಷಯದಲ್ಲಿ ವಿದ್ವಾಂಸರು ಸ್ವಲ್ಪ ಚರ್ಚೆ ನಡೆಸಿದ್ದಾರೆ. ಪಿ.ಬಿ. ದೇಸಾಯಿಯವರು ಒಂದು ಲೇಖನದಲ್ಲಿ[೯] ಕಳಚುರಿ ವಂಶದ ರಾಜರು ಮಂಗಳಿವೇಡ, ಕಲ್ಯಾಣ, ಮೊದೆಗನೂರು ಮತ್ತು ಸಲೆಹಳ್ಳಿಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ಆಳಿದರೆಂದು ಅಭಿಪ್ರಾಯಪಟ್ಟಿದ್ದಾರೆ. ಬಿ.ಆರ್. ಗೋಪಾಲ್ ಅವರು, ಚಾಳುಕ್ಯ ಜಯಸಿಂಹನು ಮೊದಲು ಮಾನ್ಯಖೇಟದಿಂದ ಅನಂತರ ಏತಗಿರಿ, ಪೊಟ್ಟಲಕೆರೆ, ಕೊಲ್ಲಿಪಾಕೆಗಳಿಗೆ ರಾಜಧಾನಿಗಳನ್ನು ಬದಲಾಯಿಸಿದನೆಂದು ತಿಳಿಸಿದ್ದಾರೆ.[೧೦] ಎಂ.ಎಂ. ಕಲಬುರ್ಗಿಯವರು 'ನೆಲೆಬೀಡು' ಎಂದು ಶಾಸನಗಳಲ್ಲಿ ಬಂದಾಗಲೆಲ್ಲ ಅದನ್ನು ರಾಜಧಾನಿಗಳೆಂದು ಭಾವಿಸಬಾರದೆಂದು ತಿಳಿಸುತ್ತಾರೆ. ಚಾಳುಕ್ಯ ವಿಕ್ರಮಾದಿತ್ಯನ ಕೆಲವು ಶಾಸನಗಳನ್ನು ಉದಾಹರಿಸಿ ಮೂರು ನಾಲ್ಕು ವರ್ಷಗಳಲ್ಲಿ ರಾಜಧಾನಿಗಳನ್ನು ಅವನು ಬದಲಾಯಿಸುತ್ತಾ ಹೋಗಿರುವುದು ಅಸಂಭಾವ್ಯವಾದುದರಿಂದ ಪ್ರಖ್ಯಾತ ರಾಜಧಾನಿಗಳನ್ನು ಬಿಟ್ಟರೆ ಉಳಿದಂತೆ

---

೧. B. R. Gopal : The Chalukyas of Kalyana and the Kalachuris. ಪು. ३೮೯.

೨. (ರೈ) ಎಕ V ಬೇಲೂರು ೧೧೮ ಕ್ರಿ.ಶ. ೧೧೭೩.

೩. ಡೆರೆಟ್ ಅವರು ಅಭಿಪ್ರಾಯಪಡುವಂತೆ ಬಲ್ಲಾಳನ ರಾಜ್ಯಾಭಿಷೇಕ ಎಷ್ಟು ವೈಭವೋಪೇತವಾಗಿತ್ತೆಂದರೆ ರಾಜ್ಯದ ಭಂಡಾರ ಖಾಲಿಯಾಗುವ ಪರಿಸ್ಥಿತಿ ಬಂದಿತ್ತು. ಪೂರ್ವೋಕ್ತ ಗ್ರಂಥ ಪು. ೭೮-೭೯.

೪. ಎಸ್‌ಐಐ XVIII ಹಾವೇರಿ ೨೩೧ ಕ್ರಿ.ಶ. ೧೨೪೮. ಗುತ್ತ ವಂಶದ ವಿಕ್ರಮಾದಿತ್ಯ ಹೆಬ್ಬಳ್ಳಿಯನ್ನು ಕುಮಾರ ವೃತ್ತಿಯಾಗಿ ಆಳುತ್ತಿದ್ದಂತೆ ತಿಳಿದುಬರುತ್ತದೆ.

೫. (ರೈ) ಎಕ V ಚನ್ನರಾಯಪಟ್ಟಣ ೨೧೦ ಕ್ರಿ.ಶ. ೧೧೬೫.

೬. ಕಬಾ ೬:೩ ಗೋಕಾಕ (ತಾ) ಕ್ರಿ.ಶ. ೧೨೦೪, ಪು. ४೬-೫೪.

೭. ಎಸ್‌ಐಐ IX(i) ಹಿಂದೂಪುರ ३೫೯ ಕ್ರಿ.ಶ. ೧३೪೦; (ಮೈ) ಎಕ VII ಮಂಡ್ಯ ೬೦ ಕ್ರಿ.ಶ. ೧३೧೬.

೮. (ರೈ) ಎಕ V ಹಾಸನ ೧೪೯ ಕ್ರಿ.ಶ. ೧೨೦೦(?).

೯. ಪಿ.ಬಿ. ದೇಸಾಯಿ : 'ಕರ್ನಾಟಕದ ಕಲಚುರಿಗಳು', ಕಸಾಪಪ ३೭-೧, ಪು. ೧೧೪.

೧೦. ಬಿ.ಆರ್. ಗೋಪಾಲ್ : 'ಕರ್ನಾಟಕದ ರಾಜಕೀಯ ಚರಿತ್ರೆ', ಕಸಾಚ III, ಪು. ೧೨೧.

'ನೆಲೆಬೀಡು' ಎಂದು ಬಂದಾಗ ಅದು ಚಕ್ರವರ್ತಿಯು ಯಾವ ಊರಿನಲ್ಲಿ ಇದ್ದನೆಂಬುದನ್ನು (Camp) ಮಾತ್ರ ಸೂಚಿಸುತ್ತವೆ ಎಂದು ಅಭಿಪ್ರಾಯಪಡುತ್ತಾರೆ.[೧] ಕಲಬುರ್ಗಿಯವರ ಈ ಅಭಿಪ್ರಾಯವನ್ನು ಒಪ್ಪಬಹುದು. ಏಕೆಂದರೆ ಎರಡನೆಯ ಬಲ್ಲಾಳನ ಕೆಲವು ಶಾಸನಗಳನ್ನು ಗಮನಿಸಿದರೆ 'ಬಾಳ್ಗುಳಿ ನೆಲೆವೀಡಿನೊಳು',[೨] 'ಬಡಗ ನೊಣಂಬವಾಡಿಯಲು ನೆಲೆವೀಡಾಗಿ',[೩] 'ಎರಂಬರಗೆಯ ನೆಲೆಬೀಡಿನೊಳು'[೪] ಮತ್ತು 'ಹುಲಿಗೆಱೆಯ ನೆಲೆಬೀಡಿನೊಳು'[೫] ಎಂಬ ಮಾತುಗಳು ಬಲ್ಲಾಳನ ಪ್ರವಾಸ ಕಾಲದ ತಂಗುದಾಣಗಳನ್ನು ಹೇಳುತ್ತವೆ. ಹಲವು ಸಾರಿ ಯುದ್ಧದ ಕಾರಣದಿಂದ ಪ್ರವಾಸ ಕೈಗೊಂಡುದೂ ಆಗಿರಬಹುದು. ಪಿ.ಬಿ. ದೇಸಾಯಿಯವರು ಕೆಲವು ಶಾಸನಗಳಲ್ಲಿ ಬರುವ 'ಉಪ್ಪಯಣವೀಡು' ಎಂಬುದನ್ನು 'ಅಪ್ಪಯಣ' ಎಂಬ ಶಾಸನ ಪ್ರಯೋಗಗಳ ಜೊತೆ ಹೋಲಿಸಿ ಅದನ್ನು ಸಂಸ್ಕೃತ ಅಪ್ರಯಾಣದಿಂದ ನಿಷ್ಪತ್ತಿ ಮಾಡಿ ಅದನ್ನು ರಾಜನು ಪ್ರಯಾಣದಲ್ಲಿ ಉಳಿದುಕೊಂಡ ಸ್ಥಾನವೆಂದು ಭಾವಿಸುತ್ತಾರೆ. ಉಪ್ಪಯಣದ ಮೂಲ ಉದ್- ಪ್ರಯಾಣದ ತಡೆಯನ್ನು ಸೂಚಿಸುವುದೆಂದು ಅವರು ತಿಳಿಸುತ್ತಾರೆ.[೬] ಬಲ್ಲಾಳನು ಸಿಲುಗೋಡಿನಲ್ಲಿ 'ಹೊಱಬೀಡು' ಎನ್ನುವುದು ಬಿಟ್ಟಿದ್ದಾಗ ಒಂದು ಗಡಿ ವಿವಾದವನ್ನು ಪರಿಹರಿಸಿದ ವಿಷಯ ಶಾಸನವೊಂದರಲ್ಲಿ ಬರುತ್ತದೆ.[೭] 'ಹೊಱಬೀಡು' ಎನ್ನುವುದು ರಾಜನು ಸಿಲುಗೋಡಿನ ಹೊರವಲಯದಲ್ಲಿ ತಾತ್ಕಾಲಿಕವಾಗಿ ಬಿಟ್ಟಿದ್ದ ಬೀಡನ್ನು ಸೂಚಿಸುತ್ತದೆ.

ರಾಜಸಭೆಗಳ ಸಮಗ್ರ ಚಿತ್ರ, ಕಾವ್ಯಗಳಂತೆ ಶಾಸನಗಳಲ್ಲಿ ವಿವರವಾಗಿ ದೊರೆಯುವುದಿಲ್ಲ.[೮] ಮಂಗಳೂರಿನ ಶಾಸನವೊಂದರಲ್ಲಿ ಆಳುಪೇಂದ್ರನ ಸಭೆಯ ಒಂದು ಚಿತ್ರ ಸ್ವಲ್ಪಮಟ್ಟಿಗೆ ದೊರೆಯುತ್ತದೆ. ವೀರ ಕುಲಶೇಖರನು ರಾಜ್ಯವಾಳುತ್ತಿದ್ದಾಗ ರಕ್ತಾಕ್ಷಿ ಸಂವತ್ಸರದ ಮೇಷ ಮಾಸ ೧೩ನೆಯ ಆದಿವಾರದಂದು ಮಂಗಳೂರಿನ ಹಿರಿಯ ಅರಮನೆಯ 'ಭುವನಾಶ್ರಯ'ವೆಂಬ ಮೊಗಸಾಲೆಯಲ್ಲಿ ಸಮಸ್ತ ಪ್ರಧಾನರು ಎರಡು ಕೋಲಬಳಿ ಕೂಡಿ ಒಡ್ಡೋಲಗ ಸೇರಿದಾಗ ಅವನ ಅಳಿಯ ವೀರಬಂಕಿ ದೇವರಸನಿಗೆ ಮುಗರುವಾಡಿನ ರಾಜ್ಯಭಾರವನ್ನು ವಹಿಸಿಕೊಟ್ಟನು. ಆ ಸಂದರ್ಭದಲ್ಲಿ ರಾಜ ಕುಲಶೇಖರ ಮತ್ತು ಅಳಿಯ ವೀರಬಂಕಿದೇವರಸನು ಸೇರಿ ಬಂಕೇಶ್ವರ ದೇವರಿಗೆ ದಾನಗಳನ್ನು ಮಾಡಿ ದೇವಾಲಯಕ್ಕೆ ಸಂಬಂಧಿಸಿದ ಹಾಗೆ ಕೆಲವು ಕಟ್ಟುಪಾಡುಗಳನ್ನು ವಿಧಿಸಿದ ವಿಷಯ ನಿರೂಪಿತವಾಗಿದೆ.[೯] ರಾಜನು ರಾಜ್ಯದ ಭಾಗ ಒಂದನ್ನು ವಹಿಸಿಕೊಡುವಾಗ, ದಾನದತ್ತಿಗಳನ್ನು ನೀಡುವಾಗ ಒಡ್ಡೋಲಗದಲ್ಲಿ ಪ್ರಧಾನಿಗಳ, ಕೋಲಬಳಿ[೧೦]ಗಳ ಸಮಕ್ಷದಲ್ಲಿ ಔಪಚಾರಿಕವಾಗಿ ಚರ್ಚಿಸಿ

---

೧. ಎಂ.ಎಂ. ಕಲಬುರ್ಗಿ : 'ರಾಜಧಾನಿ- ಒಂದು ಸ್ಪಷ್ಟನೆ'. ಸಾಧನೆ ೧೦-೧, ಪು. ೩೨-೩೫.

೨. ಎಸ್ಐಐ IX(i) ಹರಪನಹಳ್ಳಿ ೩೧೯ ಕ್ರಿ.ಶ. ೧೧೯೩.

೩. (ರೈ) ಎಕ VI ಮೂಡಗೆರೆ ೪ ಕ್ರಿ.ಶ. ೧೧೯೪.

೪. (ರೈ) ಎಕ V ಅರಸಿಕೆರೆ ೧೦೪ ಕ್ರಿ.ಶ. ೧೧೯೬.

೫. (ರೈ) ಎಕ V ಅರಸಿಕೆರೆ ೧೦೩ ಕ್ರಿ.ಶ. ೧೧೯೯.

೬. P. B.Desai : The capitals of later Chalukyas ಜೆಕೆಯು II-೨, ಪು. ೪೯.

೭. (ರೈ) ಎಕ VII ಚನ್ನಗಿರಿ ೭೨ ಕ್ರಿ.ಶ. ೧೨೨೦.

೮. ಮಧ್ಯಕಾಲೀನ ಕಾವ್ಯಗಳಲ್ಲಿ ಮೂಡಿಬಂದಿರುವ ರಾಜಸಭೆಯ ವಿವರವಾದ ಚಿತ್ರಣಕ್ಕೆ ನೋಡಿ ಕೆ. ಶ್ರೀಕಂಠಯ್ಯ : ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಪು. ೭೩-೭೮.

೯. ತುನಾಶಾ I ಮಂಗಳೂರು ೩೬ ಕ್ರಿ.ಶ. ೧೨೦೪.

೧೦. ಕೋಲಬಳಿ- (= ಸೈನ್ಯದ ಪ್ರಭೇದ. ಕ.ಕ. ನಿಘಂಟು II ಪು.) ಶಾಸನಗಳಿಂದ ಅದನ್ನು ಸೈನ್ಯದ ಪ್ರಾತಿನಿಧಿಕ ಸಂಸ್ಥೆಯೆಂದು ಭಾವಿಸಬಹುದು.

ಪ್ರಕಟಿಸುತ್ತಿದ್ದನೆಂದು ಭಾವಿಸಬಹುದು. ರಾಜಸಭೆಗಳಲ್ಲಿ ಚಮೂಪತಿಗಳ ಮಾತಿಗೆ ಅವಕಾಶವಿರುತ್ತಿತ್ತು.[೧] ಪ್ರಮುಖ ರಾಜವಂಶಗಳ ರಾಜಸಭೆಗಳು ಹೇಗಿರುತ್ತಿದ್ದವು ಎಂಬ ಚಿತ್ರ ಶಾಸನಗಳಿಂದ ಅಷ್ಟಾಗಿ ತಿಳಿದುಬರುವುದಿಲ್ಲ. ಬಹುಶಃ ಸಾರ್ವಜನಿಕ ಹಿತಾಸಕ್ತಿಯ, ಧಾರ್ಮಿಕ ವಿಷಯಗಳು ಒಡ್ಡೋಲಗದ ಔಪಚಾರಿಕ ಸಭೆಗಳಲ್ಲಿ ನಿರ್ಣಯವಾಗುತ್ತಿದ್ದವು. ತುಂಬ ಸೂಕ್ಷ್ಮ ಮತ್ತು ರಹಸ್ಯ ವಿಷಯಗಳು ರಾಜನು ಆಪ್ತಮಂತ್ರಿಗಳೊಂದಿಗೆ ನಡೆಸುತ್ತಿದ್ದ ಮಂತ್ರಾಲೋಚನಾಸಭೆಗಳಲ್ಲಿ ಚರ್ಚೆಯಾಗುತ್ತಿದ್ದವೆಂದು ಕಾಣುತ್ತದೆ.

**ರಾಜನ ಕರ್ತವ್ಯಗಳು:**

ಇಡೀ ರಾಜ್ಯದ ಜವಾಬ್ದಾರಿ ರಾಜನ ಮೇಲಿರುತ್ತಿದ್ದುದರಿಂದ ಅವನ ಕರ್ತವ್ಯಗಳು ಬಹುಮುಖವಾಗಿರುತ್ತಿದ್ದವು. ಅವುಗಳಲ್ಲಿ ಪ್ರಮುಖವಾಗಿ ದುಷ್ಟ ಶಿಕ್ಷೆ, ಶಿಷ್ಟ ರಕ್ಷಣೆ, ಸ್ವರಕ್ಷಣೆ ಮತ್ತು ಧರ್ಮಕ್ಕೆ ಸಂಬಂಧಿಸಿದ ದಾನಗಳನ್ನು ನೀಡುವುದೇ ಚತುರ್ವಿಧ ರಾಜನೀತಿಗಳೆಂದು ಶಾಸನ ಒಂದರಲ್ಲಿ ನಿರೂಪಿತವಾಗಿದೆ.[೨] ಅನೇಕ ರಾಜರನ್ನು 'ಶರಣಾಗತ ವಜ್ರ ಪಂಜರನೆಂದೂ, ಸ್ವಾಮಿದ್ರೋಹಿಗಳ ಗಂಡನೆಂದೂ' ಶಾಸನಗಳು ಹೊಗಳಿವೆ.[೩] ಸೂಕ್ತಿಸುಧಾರ್ಣವವು ರಾಜನ ಕರ್ತವ್ಯಗಳನ್ನು ಹೀಗೆಂದು ಹೇಳುತ್ತದೆ :

> ಬಡವರ ಪುಯ್ಯಲಂ ಪ್ರಜೆಯ ಬಿನ್ನಹಮಂ ವಿವಿಧ ಪ್ರಸಂಗದೊಳ್
> ತೊಡರ್ದಿರೆ ಪೂಣ್ಕೆಯಾ ಚರರ ಮಾತುಗಳಂ ಸುಕವೀಂದ್ರರಾದಮು
> ಗ್ಗಡಿಸುವ ಪುಣ್ಯಪಾಠಕರ ಗಾಣರ ವಿಪ್ರರ ವಾಗ್ವಿಳಾಸಮಂ
> ನಡೆವ ಮಹಾನಿಯೋಗಿಗಳ ಲೆಕ್ಕಮನಾ(ಲಿ)ಸದಂ ನೃಪೇಂದ್ರನೇ॥[೪]

ರಾಜನಾದವನು ಬಡವರ ಹುಯ್ಯಲನ್ನು, ಪ್ರಜೆಗಳ ಪ್ರಾರ್ಥನೆಯನ್ನು, ಗೂಢಚಾರರ ಮಾತುಗಳನ್ನು, ಸುಕವಿಗಳ ಸ್ತುತಿಪಾಠಕರ ಗಾಯಕರ ಬ್ರಾಹ್ಮಣರ ಮಾತುಗಳನ್ನು, ನಿಯೋಗಿಗಳು ಒಪ್ಪಿಸುವ ಲೆಕ್ಕವನ್ನು ವಿವಿಧ ಪ್ರಸಂಗಗಳಲ್ಲಿ ತೊಡಗಿದ್ದರೂ ಆಲಿಸಬೇಕು.

ರಾಜರು ಅನೇಕ ದಾನಗಳನ್ನು ಸ್ವತಃ ಮಾಡುತ್ತಿದ್ದರು. ಅಲ್ಲದೆ ರಾಣಿಯರು, ಮಂತ್ರಿಗಳು, ಅಧಿಕಾರಿಗಳು ದಾನಗಳನ್ನು ನೀಡಿದಾಗ ಪ್ರೋತ್ಸಾಹಿಸುತ್ತಿದ್ದರು. ಸಾವಿರಾರು ದಾನಶಾಸನಗಳು ಈ ವಿಷಯವನ್ನು ನಿರೂಪಿಸುತ್ತವೆ. ಕ್ರಿ.ಶ. ೧೨೧೦ರ ಒಂದು ಶಾಸನ ವಿಷ್ಣುವರ್ಧನನ ದಾನ ಕಾರ್ಯವನ್ನು ಹೊಗಳುತ್ತಾ 'ಎನಿತು ಕೆಱೆಯೆನಿತು ದೇಗುಲಮೆನಿತೆಸೆದಪುವಗ್ರಹಾರಮಿ ಜಗದೊಳವಂತರೆ. ವಿಷ್ಣು ನೃಪಾಳ ವಿನೂತ ವಿತರಣದಿನೆಸೆದುವೆಂಬುದು ಲೋಕಂ'[೫] ಎಂದು ಹೇಳುತ್ತದೆ. ರಾಜನು ಪ್ರಜೆಗಳಲ್ಲಿ ನೆಮ್ಮದಿ ಶಾಂತಿಗಳು ನೆಲಸಿರುವಂತೆ ರಾಜ್ಯಭಾರ ಮಾಡಬೇಕಿತ್ತು. ಅವನು ಎಲ್ಲ ಧರ್ಮಗಳ ರಕ್ಷಣೆಯನ್ನು

---

೧. (ರೈ) ಎಕ V ಚನ್ನರಾಯಪಟ್ಟಣ ೨೪೩ ಕ್ರಿ.ಶ. ೧೨೦೯.
   ನಿಖಿಳ ಚಮೂಪರ ನುಡಿಜಳ
   ಲಿಖಿತಂ ಕೇಶವ ಚಮೂವರಂ ಚತುರಚತು
   ರ್ಮುಖನಾಡಿದ ನುಡಿಯೆ ಶಿಲಾ
   ಲಿಖಿತಂ ಬಲ್ಲಾಳ ಭೂಮಿಪಾಳನ ಸಭೆಯೊಳ್॥

೨. ಎಂ. ಚಿದಾನಂದಮೂರ್ತಿ : ಕಶಾಸಾಂಅ, ಪು. ೩೨೬.

೩. (ಮೈ) ಎಕ IV ಚಾಮರಾಜನಗರ ೭೯೫ ಕ್ರಿ.ಶ. ೧೩೩೭.

೪. ಸೂಕ್ತಿಸುಧಾರ್ಣವಂ ೧೬-೯.

೫. (ರೈ) ಎಕ V ಚನ್ನರಾಯಪಟ್ಟಣ ೨೪೩ ಕ್ರಿ.ಶ. ೧೨೧೦.

ಮಾಡಬೇಕಿತ್ತು. ಬಲ್ಲಾಳನನ್ನು ಒಂದು ಶಾಸನ ಚತುಸ್ಸಮಯ ಸಮುದ್ಧರಣನೆಂದು ಕರೆದಿದೆ.[೧] ಸೇವುಣ ರಾಮಚಂದ್ರನು 'ವರ್ಣ ಧರ್ಮಗಳ ರಕ್ಷಕ' ಎಂದು ಶಾಸನವೊಂದರಲ್ಲಿ ವರ್ಣಿತನಾಗಿದ್ದಾನೆ.[೨] ಬಿಜ್ಜಳನ ವರ್ಣವ್ಯವಸ್ಥೆಯ ಪರವಾದ ನಿಲುವೇ ಅವನನ್ನು ಹರಳಯ್ಯ- ಮಧುವಯ್ಯರನ್ನು ಕ್ರೂರವಾಗಿ ಶಿಕ್ಷಿಸುವಂತೆ ಪ್ರೇರೇಪಿಸಿ ಶಿವಶರಣರ ಕಲ್ಯಾಣದ ಸಂಘಟನೆ ಚದುರಲು ಕಾರಣವಾಗಿರಬೇಕೆಂದು ವಿದ್ವಾಂಸರು ಭಾವಿಸುತ್ತಾರೆ.[೩] ರಾಜನು ವೈಯಕ್ತಿಕವಾಗಿ ಯಾವುದೇ ಧರ್ಮಕ್ಕೆ ಸೇರಿರಲಿ, ಅವನ ಒಲವು ಯಾವುದೇ ಧರ್ಮದ ಬಗ್ಗೆಯೇ ಇರಲಿ ಅವನು ಎಲ್ಲ ಧರ್ಮಗಳ ಬಗ್ಗೆಯೂ ಸಮಾನ ದೃಷ್ಟಿಯಿಂದ ನೋಡಬೇಕು ಎಂದು ನಿರೀಕ್ಷಿಸಲಾಗುತ್ತಿತ್ತು.

ರಾಜನು ರಾಜ್ಯದ ಭಾಗಗಳ ಜವಾಬ್ದಾರಿಯನ್ನು ಸಾಮಂತರಿಗೆ, ಅಧಿಕಾರಿಗಳಿಗೆ ವಹಿಸಿ ನಿಶ್ಚಿಂತೆಯಿಂದ ಇರಲು ಸಾಧ್ಯವಿರಲಿಲ್ಲ. ಪ್ರಜೆಗಳ ಸುಖ-ದುಃಖಗಳನ್ನು, ಸಮಸ್ಯೆಗಳನ್ನು ತಿಳಿಯಲು ಮತ್ತು ಸಾಮಂತರ ಅಧಿಕಾರಿಗಳ ಆಡಳಿತದ ವೈಖರಿಯನ್ನು ಅರಿಯಲು ರಾಜ್ಯದಲ್ಲಿ ಆಗಾಗ್ಗೆ ಪ್ರವಾಸ ಮಾಡುತ್ತಿರಬೇಕಿತ್ತು. ಈ ರೀತಿ ರಾಜರು ಪ್ರವಾಸ ಮಾಡುತ್ತಿದ್ದರೆಂಬುದಕ್ಕೆ ಶಾಸನಗಳು ಸಾಕಷ್ಟು ಪುಷ್ಟಿಯನ್ನು ಕೊಡುತ್ತವೆ. ಹೊಯ್ಸಳ ಬಲ್ಲಾಳನ ರಾಜಧಾನಿ ದೋರಸಮುದ್ರವಾದರೂ ಅವನು ಕ್ರಿ.ಶ. ೧೧೯೨ರಲ್ಲಿ ಹೊಸೂರು,[೪] ಕ್ರಿ.ಶ. ೧೧೯೩ರಲ್ಲಿ ಬಾಳ್ಗುಳಿ,[೫] ಕ್ರಿ.ಶ. ೧೧೯೪ರಲ್ಲಿ ಬಡಗ ನೊಣಂಬವಾಡಿ,[೬] ಕ್ರಿ.ಶ. ೧೧೯೬ರಲ್ಲಿ ಎರಂಬರಗೆಯಲ್ಲಿಯೂ,[೭] ಕ್ರಿ.ಶ. ೧೧೯೯ರಲ್ಲಿ ಹುಲಿಗೆಜೆಯಲ್ಲಿಯೂ[೮] ಇದ್ದುದು ಶಾಸನಗಳಿಂದ ಸ್ಪಷ್ಟವಿದೆ.

ರಾಜನು ಪ್ರವಾಸ ಮಾಡುವಾಗ ಒಮ್ಮೆ ಹೊಸೂರಿನಲ್ಲಿ ಬೀಡು ಬಿಟ್ಟಿದ್ದಾಗ ಆ ಊರಿನ ಕೆಲವರ ತೋಟಗಳಿಗೆ ನಷ್ಟವಾಯಿತೆಂದು ಕಾಣುತ್ತದೆ. ಆಗ ಆ ಊರಿನ ಕೆಲವು ಅಧಿಕಾರಿಗಳು ಮತ್ತು ಪ್ರಮುಖರು ತಮ್ಮವರಿಗಾದ ನಷ್ಟದ ಬಗ್ಗೆ ದೂರು ತೆಗೆದುಕೊಂಡು ಹೋದಾಗ ಅಡಕೆ ತೋಟದ ಮತ್ತು ಎಲೆಗಳ ಮೇಲಿನ ಕೆಲವು ಸುಂಕಗಳನ್ನು ಶಾಶ್ವತವಾಗಿ ತೆಗೆದುಹಾಕಿ ನಷ್ಟವನ್ನು ತುಂಬಿಕೊಟ್ಟಿರುವುದುಂಟು.[೯] ಪ್ರಜೆಗಳಿಗೆ ತನ್ನಿಂದಲಾಗಲಿ ತನ್ನ ಪರಿವಾರದವರ ಕಡೆಯವರಿಂದಾಗಲೀ ತೊಂದರೆಯಾದಾಗ ಅದನ್ನು ಪರಿಹರಿಸಿ ಕೊಡುವ, ನಷ್ಟವನ್ನು ತುಂಬಿ ಕೊಡುವ ಮನೋಭಾವ ರಾಜರಿಗಿದ್ದುದು ಇದರಿಂದ ಸ್ಪಷ್ಟವಾಗುತ್ತದೆ.

ಎಷ್ಟೋ ಸಾರಿ ರಾಜರು ಪ್ರವಾಸಕಾಲದಲ್ಲಿದ್ದಾಗ ವಿವಾದಗಳನ್ನು ಪರಿಹರಿಸಿ ನ್ಯಾಯ ನಿರ್ಣಯಗಳನ್ನು ಕೊಡುತ್ತಿದ್ದರು. ಅಂತಹ ಒಂದು ವಿಶೇಷ ಸಂದರ್ಭವನ್ನು ಶಾಸನವೊಂದು ನಿರೂಪಿಸುತ್ತದೆ. ಎರಡನೆಯ ಬಲ್ಲಾಳನು ಸಿಲುಗೋಡಿನಲ್ಲಿ 'ಹೊಜಬೀಡು' ಬಿಟ್ಟಿದ್ದಾಗ ಅನೇಕ ಊರುಗಳ ಗೌಡುಗಳು ಒಟ್ಟಾಗಿ ನೊಣಂಬವಾಡಿ ಮತ್ತು ಗಂಗವಾಡಿಯ ಗಡಿವಿವಾದವನ್ನು ರಾಜನಿಗೆ ತಿಳಿಸಲು ರಾಜನು ತನ್ನ ಪಂಚ ಪ್ರಧಾನರೊಂದಿಗೆ ಆ ಗಡಿ ವಿವಾದವನ್ನು ಹೀಗೆ ಪರಿಹರಿಸಿದನು. ಗಂಗವಾಡಿಗೆ

---

೧. (ರೈ) ಎಕ V ಅರಸಿಕೆರೆ ೭೯ ಕ್ರಿ.ಶ. ೧೧೮೪.

೨. ಎ.ವಿ. ನರಸಿಂಹಮೂರ್ತಿ : ಕರ್ನಾಟಕದ ಸೇವುಣರ ಇತಿಹಾಸ, ಪು. ೯೧.

೩. ಸಿ.ಯು. ಮಂಜುನಾಥ್ : 'ಹರಳಯ್ಯ-ಮಧುವಯ್ಯ' ಸಿದ್ಧಗಂಗಾಶ್ರೀ, ಪು. ೭೯೬-೮೦೪.

೪. ಎಸ್‌ಐಐ XV ಗದಗು ೨೦೭ ಕ್ರಿ.ಶ. ೧೧೯೨.

೫. ಎಸ್‌ಐಐ IX(i) ಹರಪನಹಳ್ಳಿ ೩೧೯ ಕ್ರಿ.ಶ. ೧೧೯೩.

೬. (ರೈ) ಎಕ VI ಮೂಡಗೆರೆ ೪ ಕ್ರಿ.ಶ. ೧೧೯೪.

೭. (ರೈ) ಎಕ V ಅರಸಿಕೆರೆ ೧೦೪ ಕ್ರಿ.ಶ. ೧೧೯೬.

೮. (ರೈ) ಎಕ V ಅರಸಿಕೆರೆ ೧೦೩ ಕ್ರಿ.ಶ. ೧೧೯೯.

೯. ಎಸ್‌ಐಐ XV ಗದಗು ೨೦೭ ಕ್ರಿ.ಶ. ೧೧೯೨.

ಗಡಿ ಗುಳಿಯ ಕಲ್ಲು, ಹಾಡಂಗಿಯ ಬೆಟ್ಟ, ಹಕಿಯದೊಣೆ, ತಳಿಯಕಟ್ಟವೆಂದೂ ಈ ವಿಭಾಗ ಬಿದರಹಳ್ಳಿಯ ಹೊಲಸೀಮೆಯನ್ನು ಹಾದು ಹೋಗುವುದೆಂದು ನಿರ್ಣಯಿಸಿದನು.[೧] ಈ ಶಾಸನದಿಂದ ರಾಜರು ಪ್ರಜೆಗಳಿಗೆ ದೂರವಾಗಿರಲಿಲ್ಲ ಮತ್ತು ಗೌಡುಗಳು ತಾವು ಪರಿಹರಿಸಲಾಗದ ಇಂಥ ವಿವಾದಗಳನ್ನು ರಾಜನ ಬಳಿಯೇ ತೆಗೆದುಕೊಂಡು ಹೋಗಿ ನೇರವಾಗಿ ಪರಿಹರಿಸಿಕೊಳ್ಳುತ್ತಿದ್ದರು ಎಂದು ಭಾವಿಸಬಹುದು. ಹೀಗೆ ರಾಜನು ಪ್ರವಾಸ ಮಾಡುತ್ತಿದ್ದುದರಿಂದ ರಾಜ್ಯದ ಸ್ಥಿತಿಗತಿ, ಜನರ ಕಷ್ಟ ನಷ್ಟ ಮತ್ತು ಸಮಸ್ಯೆಗಳ ನೇರ ಪರಿಚಯವಾಗುತ್ತಿತ್ತು. ಜನ ಸಂಪರ್ಕಕ್ಕೆ ಅದು ನೇರ ಮತ್ತು ಅತ್ಯುತ್ತಮ ಮಾರ್ಗವಾಗಿತ್ತು.

ರಾಜರು ಪ್ರವಾಸ ಕಾಲದಲ್ಲಿ ಪ್ರಜೆಗಳ ಕುಂದುಕೊರತೆಗಳನ್ನು ವಿಚಾರಿಸಿದಂತೆ, ವಿವಾದಗಳನ್ನು ಪರಿಹರಿಸಿದಂತೆ ಎಷ್ಟೋ ಸಾರಿ ಪ್ರಜೆಗಳು ರಾಜಧಾನಿಗೆ ಹೋಗಿ ರಾಜನನ್ನು ಕಂಡು ತಮ್ಮ ಸಮಸ್ಯೆಯನ್ನು ಹೇಳಿಕೊಳ್ಳುತ್ತಿದ್ದರು. ಉದಾಹರಣೆಗೆ ಜೈನರು ಅಬ್ಬಲೂರಿನಲ್ಲಿ ಏಕಾಂತದ ರಾಮಯ್ಯನಿಂದ ತಮ್ಮ ಬಸದಿಗಳಿಗೆ ಆದ ಹಾನಿಯನ್ನು ಬಿಜ್ಜಳನ ಬಳಿಗೆ ಹೋಗಿ ಹೇಳಿಕೊಳ್ಳಲು ಅವನು ಸ್ವತಃ ಏಕಾಂತದ ರಾಮಯ್ಯನ ಬಳಿಗೆ ಬಂದು ವಿಚಾರಿಸಿ ನ್ಯಾಯ ನಿರ್ಣಯ ನೀಡಿದನು. ಅಲ್ಲದೆ ಏಕಾಂತದ ರಾಮಯ್ಯನಿಗೆ 'ಎಲ್ಲರರಿಯೆ ಜಯಪತ್ರ'ವನ್ನು ಕೊಟ್ಟ ವಿಷಯ ಶಾಸನೋಕ್ತವಾಗಿದೆ.[೨] ಇದೇ ರೀತಿಯಲ್ಲಿ, ಶ್ರೀವೈಷ್ಣವರಿಂದ ತಮಗೆ ಮತ್ತು ಜಿನಾಲಯಗಳಿಗೆ ಆಗುತ್ತಿದ್ದ ಹಾನಿಯ ವಿಷಯವನ್ನು ತಿಳಿಸಲು ಬುಕ್ಕರಾಯನ ಬಳಿಗೆ ಅನೇಕ ಸ್ಥಳಗಳ ಜೈನ ಪ್ರಮುಖರು ದೂರನ್ನು ತೆಗೆದುಕೊಂಡು ಹೋಗಿರುವುದನ್ನು ಶ್ರವಣಬೆಳಗೊಳದ ಶಾಸನದಲ್ಲಿ ಕಾಣಬಹುದು.[೩] ರಾಜರು ತಮ್ಮ ಬಳಿಗೆ ಯಾವುದೇ ದೂರುಗಳು ಬಂದಾಗ ಸರಿಯಾಗಿ ವಿಚಾರಿಸಿ ಸೂಕ್ತವಾಗಿ ಕಂಡ ತೀರ್ಮಾನಗಳನ್ನು ಕೊಟ್ಟಿರುವುದು ಕಂಡುಬರುತ್ತದೆ.

ಸಾಮಾನ್ಯವಾಗಿ ರಾಜರು ಒಬ್ಬರೇ ಆಡಳಿತ ಸೂತ್ರವನ್ನು ಹಿಡಿದಿರುತ್ತಿದ್ದರು. ವಿರಳವಾಗಿ ಜೋಡಿಯಾಗಿಯೂ ಆಡಳಿತ ನಿರ್ವಹಿಸಿದ ಉದಾಹರಣೆಗಳು ಕಂಡುಬರುತ್ತವೆ. ಸಿಂಧವಂಶದ ವೀರಬಿಜ್ಜಣ ಮತ್ತು ವೀರವಿಕ್ರಮ ಸಹೋದರರು ಜೋಡಿಯಾಗಿ ಆಳಿದಂತೆ ಶಾಸನಗಳು ತಿಳಿಸುತ್ತವೆ. ಎರಂಬರಗೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಆ ಸಹೋದರರು ಜೋಡಿಯಾಗಿ ದಾನ ಮಾಡಿರುವುದು ಶಾಸನಗಳಲ್ಲಿ ನಿರೂಪಿತವಾಗಿದೆ.[೪] ತುಳುನಾಡಿನ ವೀರ ಪಾಂಡ್ಯ ಆಳುಪೇಂದ್ರನು ಹಿರಿಯ ರಾಣಿ ಪಟ್ಟದೇವಿಯೊಂದಿಗೆ 'ಬಾರಹಕನ್ಯಾಪುರ' (ಬಾರಕೂರು) ವನ್ನು ರಾಜಧಾನಿಯಾಗಿ ಮಾಡಿಕೊಂಡು ಕ್ರಿ.ಶ. ೧೨೬೧-೬೨ರಲ್ಲಿ ಆಳುತ್ತಿದ್ದುದು ಕಂಡುಬರುತ್ತದೆ.[೫] ಈ ರೀತಿಯಲ್ಲಿ ಜೋಡಿಯಾಗಿ ಆಡಳಿತ ಮಾಡಿರುವುದು ಅತಿ ವಿರಳವೆಂದೇ ಹೇಳಬಹುದು.

ರಾಜರು ಉತ್ಸಾಹದಿಂದ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರು. ದುಷ್ಟನಿಗ್ರಹಕ್ಕಾಗಿ, ರಾಜ್ಯದ ಗಡಿಗಳನ್ನು ವಿಸ್ತರಿಸುವುದಕ್ಕಾಗಿ, ಶಿಷ್ಟರಕ್ಷಣೆಗಾಗಿ ಯುದ್ಧಗಳನ್ನು ಮಾಡಬೇಕಾಗುತ್ತಿತ್ತು. ಇವು ಅವರ ಕರ್ತವ್ಯಗಳು ಎಂದು ಭಾವಿಸಿದ್ದರು. ಅನೇಕ ರಾಜರು ತಾವೇ ಸೈನ್ಯದ ಮುಂದಾಳತ್ವ ವಹಿಸುತ್ತಿದ್ದರು. ಭಿಲ್ಲಮ ಹೊಯ್ಸಳರ ಮೇಲೂ, ಜೈತುಗಿ ಕಾಕತೀಯರ ಮೇಲೂ, ಸಿಂಘಣ ಗೂರ್ಜರರ ಮೇಲೂ ಹೀಗೆ ನೇತೃತ್ವ ವಹಿಸಿ ಯುದ್ಧ ಮಾಡಿದ್ದಾರೆ.[೬] ಇದೇ ರೀತಿ ಸೇವುಣರ ಮೇಲಿನ ಅನೇಕ ಯುದ್ಧಗಳಲ್ಲಿ

---

೧. (ರೈ) ಎಕ VII ಚನ್ನಗಿರಿ ೭೨ ಕ್ರಿ.ಶ. ೧೨೨೦.

೨. ಎಇ V ಕ್ರಿ.ಶ. ೧೨೦೦.

೩. (ಮೈ) ಎಕ II ಶ್ರವಣಬೆಳಗೊಳ ೪೭೫ ಕ್ರಿ.ಶ. ೧೩೬೮.

೪. ಎಇ XX ರೋಣ ೧೨ಬಿ ಕ್ರಿ.ಶ. ೧೧೮೭.

೫. T. V.Mahalingam : South Indian Polity ಪು. ೩೭.

೬. ಎ.ವಿ. ನರಸಿಂಹಮೂರ್ತಿ : ಪೂರ್ವೋಕ್ತ, ಪು. ೭೮-೭೯.

ಎರಡನೆಯ ಬಲ್ಲಾಳನು ನೇತೃತ್ವ ವಹಿಸಿ ಯುದ್ಧ ಮಾಡಿದ ವಿಷಯವನ್ನು ಶಾಸನಗಳು ಉಲ್ಲೇಖಿಸುತ್ತವೆ.[೧] ಬಲ್ಲಾಳನಿಗೆ 'ಶನಿವಾರ ಸಿದ್ಧಿ' ಎಂಬ ಬಿರುದು ಬರಲು ಕಾರಣ 'ಸನಿವಾರದನ್ದೆ ಪಾಂಡ್ಯಾವನಿಪನ ಸಪ್ತಾಂಗಮೆಯ್ದೆ ಸಿದ್ಧಿಸಿದುದಱಂ ಸನಿವಾರಸಿದ್ಧಿವೆಸರಂ ಜನಪತಿ ಬಲ್ಲಾಳದೇವನೆಸೆದಿರೆ ತಳೆದಂ'[೨] ಎಂದು ಒಂದು ಶಾಸನ ಹೇಳುತ್ತದೆ.

ರಾಜರಿಗೆ ರಾಜ್ಯಾಡಳಿತದ ಮೇಲೆ ಸಂಪೂರ್ಣ ಅಧಿಕಾರವಿರುತ್ತಿತ್ತು. ಮಂತ್ರಿಗಳ ಅಭಿಪ್ರಾಯಗಳನ್ನು ಕೇಳಿದರೂ ಅಂತಿಮ ನಿರ್ಧಾರ ರಾಜನದೇ ಆಗಿರುತ್ತಿತ್ತು. ರಾಜರಿಗೆ ಅಪಾರವಾದ ಪರಿವಾರವಿರುತ್ತಿದ್ದಿತು. ಹೊಯ್ಸಳ ನರಸಿಂಹನಿಗೆ ೩೮೪ ರಾಣಿಯರಿದ್ದರೆಂದು ಒಂದು ಶಾಸನ ತಿಳಿಸುತ್ತದೆ.[೩] ಚಕ್ರವರ್ತಿಗಳಿಗೆ ಆಡಳಿತ ವಿಷಯದಲ್ಲಿ ಹೇಗೆ ಸ್ವಾತಂತ್ರ್ಯವಿದ್ದಿತೋ ಹಾಗೆಯೇ ಸಾಮಂತ ರಾಜರಿಗೂ ಆಡಳಿತದ ವಿಷಯದಲ್ಲಿ ಸ್ವಾತಂತ್ರ್ಯವಿದ್ದಿತು. ಸಾಮಂತರಿಗೂ ಸಾಕಷ್ಟು ದೊಡ್ಡ ಪರಿವಾರ ಇರುತ್ತಿತ್ತು. ರಾಜರಿಗೆ ಇರುತ್ತಿದ್ದಂತೆ ಸಾಮಂತರಿಗೂ ತಮ್ಮದೇ ಆದ ಲಾಂಛನ, ಧ್ವಜ, ವಾದ್ಯಗಳು ಇರುತ್ತಿದ್ದವು. ಅವುಗಳಲ್ಲಿ ಕೆಲವನ್ನು ಗಮನಿಸಬಹುದು.

| ರಾಜವಂಶ | ಲಾಂಛನ | ಧ್ವಜ | ವಾದ್ಯ |
|---|---|---|---|
| ಚಾಳುಕ್ಯ[೪] | - | ಸುವರ್ಣವೃಷಭ | ಡಮರುಗತೂರ್ಯ |
| ಹೊಯ್ಸಳ[೫] | ಹುಲಿ ಶಾರ್ದೂಲ(?) | - | - |
| ಕಳಚೂರ್ಯ[೬] | - | ಸುವರ್ಣವೃಷಭ | ಡಮರುಗತೂರ್ಯ |
| ಸೇವುಣ[೭] | - | ಸುವರ್ಣಗರುಡ | - |
| ಗೋವೆಯ ಕದಂಬ[೮] | ಸಿಂಹ | ವಾನರ | ಪೆರ್ಮಟ್ಟಿತೂರ್ಯ |
| ಹಾನಗಲ್ಲಿನ ಕದಂಬ[೯] | ಸಿಂಹ | ವಾನರ | ಪೆರ್ಮಟ್ಟಿತೂರ್ಯ |

---

೧. (ರೈ) ಎಕ V ಅರಸಿಕೆರೆ ೨೧೬ ಕ್ರಿ.ಶ. ೧೨೦೦.
(ರೈ) ಎಕ VII ಸೊರಬ ೧೪೦ ಕ್ರಿ.ಶ. ೧೧೯೮.

೨. (ರೈ) ಎಕ V ಬೇಲೂರು ೧೩೭ ಕ್ರಿ.ಶ. ೧೧೮೩. ಹುಲ್ಷ್ ಅವರು 'One who is successful (even) on (un-lucky day like) Saturday ಎಂದು ಭಾವಿಸಿದ್ದಾರೆ. ಎಇ III ಪು. ೨೬೯. ಶನಿವಾರವು ಸಂಪ್ರದಾಯದ ಪ್ರಕಾರ ಅಶುಭ ದಿವಸವೆಂದೂ ಆ ದಿನ ಯಾವ ಶುಭ ಕೆಲಸವನ್ನೂ ಮಾಡಬಾರದೆಂದೂ ಮಾಡಿದರೂ ಅದು ಶ್ರೇಯಸ್ಕರವಲ್ಲವೆಂಬ ನಂಬಿಕೆ ಇರುವುದನ್ನು ಪ್ರೊ. ರಾಚಪ್ಪನವರು ಹೇಳಿ, ಅಂತಹ ಅಶುಭವೆಂದೆಣಿಸಿದ ದಿವಸದಲ್ಲಿಯೂ ಶುಭ ಸಾಧಿಸಿದವನು ಎಂಬ ಕಾರಣಕ್ಕೆ ಈ ಬಿರುದು ಬಂದಿರಬೇಕು ಎಂದು ಭಾವಿಸುತ್ತಾರೆ. 'ಶನಿವಾರ ಸಿದ್ಧಿ' ಕಭಾ. ೨-೨, ಪು. ೬೮.

೩. (ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೧.

೪. ಎಸ್ಐಐ IX(i) ಆದೋನಿ ೨೯೫ ಕ್ರಿ.ಶ. ೧೧೭೨.

೫. ಹೊಯ್ಸಳ ವಂಶದ ಲಾಂಛನ, ಧ್ವಜ ಮುಂತಾದವು ಯಾವುದು ಎನ್ನುವುದು ಉಕ್ತವಾದಂತಿಲ್ಲ. ಒಂದು ಶಾಸನದಲ್ಲಿ 'ಭೂಪರ್ಗಾದು ದುದಂದಿಂದೆಸೆದುದು ಸೆಳೆಯಿಂ ಲೋಲ ಶಾರ್ದೂಲ ಚಿಹ್ನಂ' ಎಂದು ಬರುತ್ತದೆ. ಶಾಪಮಂ ೧೭೫೨. ಇನ್ನೊಂದು ಶಾಸನದಲ್ಲಿ 'ಶಾರ್ದೂಲ ಪತಾಕಾ' ಎನ್ನಲಾಗಿದೆ. (ಮೈ) ಎಕ VII ನಾಗಮಂಗಲ ೮೦ ಕ್ರಿ.ಶ. ೧೧೯೯. ಹೊಯ್ಸಳರ ಲಾಂಛನದ ಚರ್ಚೆಗೆ ನೋಡಿ ಎಂ.ಜಿ. ಮಂಜುನಾಥ್ 'ಹೊಯ್ಸಳರ ರಾಜ ಲಾಂಛನ ಯಾವುದು? : ಪುನರ್ ಪರಿಶೀಲನೆ' ಇದರ ಪು. ೧೮೯-೧೯೧. ಅವರು ಹುಲಿಯೇ ಹೊಯ್ಸಳರ ಲಾಂಛನವೆಂದು ಪ್ರತಿಪಾದಿಸಿದ್ದಾರೆ.

೬. (ರೈ) ಎಕ VII ಶಿಕಾರಿಪುರ ೧೦೪ ಕ್ರಿ.ಶ. ೧೧೫೬.

೭. (ರೈ) ಎಕ XI ದಾವಣಗೆರೆ ೧೭೨ ಕ್ರಿ.ಶ. ೧೨೬೬.

೮. ಕಇ V ಖಾನಾಪುರ ೬೪ ಕ್ರಿ.ಶ. ೧೧೭೩.

೯. ಕಇ IV ಹಿರೇಕೆರೂರು ೪೮ ಕ್ರಿ.ಶ. ೧೨೪೭.

| ಶಾಂತರ[೧] | ಸಿಂಹ | ವಾನರ | - |
|---|---|---|---|
| ರಟ್ಟ[೨] | ಸಿಂಧೂರ | ಶಶಿವಿಶದ ಸುವರ್ಣಗರುಡ | - |
| ಗುತ್ತ[೩] | ವಟಕಲ್ಪವೃಕ್ಷ | ವಿಜಯ | - |
| ಸಿಂಧ[೪] | ವ್ಯಾಘ್ರ | ನೀ(ರ)ಳ | ಮಲ್ಲಳಿತೂರ್ಯ |

ರಾಜನ ಆಳ್ವಿಕೆ ಸ್ವತಂತ್ರದಿಂದ ಕೂಡಿರುತ್ತಿತ್ತು. ಸಾಮಾನ್ಯವಾಗಿ ಮಂತ್ರಿಗಳ ಆಯ್ಕೆಯನ್ನು ರಾಜನೇ ಮಾಡುತ್ತಿದ್ದನು. ಕೆಲವು ಸಾರಿ ತಂದೆಯ ಕಾಲದಿಂದಲೂ ಇದ್ದ ಮಂತ್ರಿಗಳು ಮುಂದುವರಿದುಕೊಂಡು ಬರುತ್ತಿದ್ದರು. ತನ್ನ ಇಷ್ಟದಂತೆ ಮಂತ್ರಿಗಳನ್ನು ಆಯ್ಕೆ ಮಾಡುವ ಮತ್ತು ಮಂತ್ರಿಪದವಿಯಿಂದ ತೆಗೆಯುವ ಅಧಿಕಾರವಿತ್ತು.[೫] ರಾಜನು ಕವಿಗಳಿಗೆ ಕಲಾವಿದರಿಗೆ ಆಶ್ರಯವನ್ನು ಕೊಡುತ್ತಿದ್ದನು. ಪ್ರಾಚೀನ ಸಾಹಿತ್ಯ ಬಹುಮಟ್ಟಿಗೆ ರಾಜಾಶ್ರಯದಿಂದಲೇ ಬೆಳೆದುಬಂದಿರುವುದು. ಜನ್ನನು ಬಲ್ಲಾಳನಿಂದ ತಾನು 'ಕವಿಚಕ್ರವರ್ತಿ' ಬಿರುದನ್ನು ಪಡೆದದ್ದಾಗಿ ಹೇಳಿದ್ದಾನೆ.[೬] ವಚನಕಾರರು ಮತ್ತು ಕೆಲವು ವೀರಶೈವ ಕವಿಗಳನ್ನು ಬಿಟ್ಟರೆ ಪ್ರಾಚೀನ ಕನ್ನಡ ಕವಿಗಳೆಲ್ಲರೂ ಬಹುಮಟ್ಟಿಗೆ ರಾಜಾಶ್ರಯ ಪಡೆದು ಕಾವ್ಯ ರಚಿಸಿರುವುದು ಕಂಡುಬರುತ್ತದೆ.[೭]

**ರಾಣಿಯರು:**

ಕರ್ನಾಟಕದ ರಾಣಿಯರಲ್ಲಿ ಅನೇಕರು ವಿಶಿಷ್ಟ ವ್ಯಕ್ತಿತ್ವವನ್ನು ಬೆಳೆಸಿಕೊಂಡವರು. ಕೇವಲ ರಾಜನ ನೆರಳಿನಂತೆ ಮಾತ್ರವಿರದೆ ರಾಜನಿಗೆ ಆಡಳಿತಾತ್ಮಕ ವಿಷಯಗಳಲ್ಲಿ ಸಲಹೆಯನ್ನು ಕೊಡಬಲ್ಲವರಾಗಿದ್ದರು. ಅಷ್ಟೇ ಅಲ್ಲದೆ ಅನೇಕ ಪ್ರದೇಶಗಳಲ್ಲಿ ನೇರವಾಗಿ ಆಡಳಿತವನ್ನೂ ಮಾಡಿದವರು. ನೇರ ಆಡಳಿತವನ್ನು ನಿರ್ವಹಿಸಲು ಸಮರ್ಥರಾದ ರಾಣಿಯರು ರಾಜನ ಆಡಳಿತದ ಜವಾಬ್ದಾರಿಯನ್ನು ಕೆಲಮಟ್ಟಿಗೆ ಹಗುರ ಮಾಡುತ್ತಿದ್ದರು. ಅನೇಕ ರಾಣಿಯರಿಗಿರುವ ವಿಶೇಷಣಗಳನ್ನು ನೋಡಿದರೆ ಅವರು ಜವಾಬ್ದಾರಿ ನಿರ್ವಹಿಸಬಲ್ಲಂತಹ ವಿದ್ಯಾಭ್ಯಾಸವನ್ನು ಪಡೆದಿದ್ದರೆಂದು ತಿಳಿಯಬಹುದು. ಚಾಳುಕ್ಯ ತೈಲನ ಪಟ್ಟದರಾಣಿಯನ್ನು 'ಅಭಿನವ ಸರಸ್ವತಿ'[೮] ಎಂದು ಒಂದು ಶಾಸನ ಕರೆದಿದೆ. ಎರಡನೆಯ ಬಲ್ಲಾಳನ ರಾಣಿ ಬಮ್ಮಲದೇವಿಯನ್ನು ಒಂದು ಶಾಸನ 'ವಿವೇಕ ಬೃಹಸ್ಪತಿ, ಪ್ರತ್ಯುನ್ನತ ವಾಚಸ್ಪತಿ, ಗೀತವಾದ್ಯ ನೃತ್ಯ ಸೂತ್ರಧಾರೆ ಸಕಲವಂದಿಜನಚಿಂತಾಮಣಿ' ಎಂದು ಮುಂತಾಗಿ ಅವಳ ಕಲಾನೈಪುಣ್ಯವನ್ನು, ವಿದ್ಯಾ ಪ್ರೌಢಿಮೆಯನ್ನು ಮತ್ತು ದಾನಗುಣವನ್ನು ಕೀರ್ತಿಸಿದೆ.[೯] ಎರಡನೆಯ ಬಲ್ಲಾಳನ ಇನ್ನೊಬ್ಬ ರಾಣಿ ಮಧುಕಲಾಂಬಿಕೆಯನ್ನು ಕೆಂಕೆರೆ ಶಾಸನ 'ಸಂಗೀತ ಚೂಡಾಮಣಿ, ಜಂಗಮ ಸರಸ್ವತಿ' ಎಂದು ಕೀರ್ತಿಸುತ್ತದೆ.[೧೦]

---

೧. ಎಂಎಆರ್ ೧೯೩೧ ನಗರ ೭೯ ಕ್ರಿ.ಶ. ೧೧೯೧.

೨. ಕಇ VI ಧಾರವಾಡ ೭೩ ಕ್ರಿ.ಶ. ೧೨೨೮.

೩. ಕಇ VI ಧಾರವಾಡ ೭೪ ಕ್ರಿ.ಶ. ೧೧೮೮.

೪. ಕಇ IV ಹಿರೇಕೆರೂರು ೩೮ ಕ್ರಿ.ಶ. ೧೧೮೭.

೫. J.D.M. Derrett : ಪೂರ್ವೋಕ್ತ ಪು. ೧೯೧.

೬. ಯ.ಚ. ೧-೨೧.

೭. ರಂ.ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ನೋಡಿ ಕವಿ-ಕಾವ್ಯ-ಆಶ್ರಯದಾತರ ಪಟ್ಟಿ, ಪು. ೭೯-೮೦; ೧೪೪-೪೭.

೮. ಎಸ್‌ಐಐ XV ಹುನಗುಂದ ೪೭ ಕ್ರಿ.ಶ. ೧೧೫೧.

೯. (ರೈ) ಎಕ V ಚನ್ನರಾಯಪಟ್ಟಣ ೨೫೪ ಕ್ರಿ.ಶ. ೧೧೮೪.

೧೦. (ರೈ) ಎಕ VI ಕಡೂರು ೪೭ ಕ್ರಿ.ಶ. ೧೧೯೫.

ರಾಜಕುಮಾರಿಯರು ಕುಶಲ ಕಲೆಗಳಲ್ಲಿ ಪ್ರವೀಣರಾಗಿದ್ದರೆನ್ನಲು ಉತ್ತಮ ನಿದರ್ಶನವೆಂದರೆ ಕಳಚೂರ್ಯ ಸೋವಿದೇವನ ರಾಣಿ ಸೋವಲಾದೇವಿ ಕ್ರಿ.ಶ. ೧೧೭೪ರಲ್ಲಿ ತನ್ನ ದೇಶದ ಹಾಗೂ ಇತರ ದೇಶದ ಕಲಾಪರಿಣತರ ಸಭೆಯಲ್ಲಿ ನೃತ್ಯಮಾಡಿ ಅವರನ್ನು ಸಂತೋಷಪಡಿಸಿದ ಸಂಗತಿ.[೧]

ರಾಜರಿಗೆ ಅನೇಕ ರಾಣಿಯರು ಇರುತ್ತಿದ್ದರು. ರಾಣಿಯರು ಒಟ್ಟಿಗೆ ಇದ್ದರೆ ಅನಗತ್ಯವಾಗಿ ಸವತಿಮತ್ಸರ ಮತ್ತು ಸ್ಪರ್ಧೆ ಏರ್ಪಡುವುದೆಂಬ ಕಾರಣದಿಂದಲೋ ಅಥವಾ ತನ್ನ ನಂಬಿಕೆಯವರೇ ಕೆಲವು ಪ್ರದೇಶಗಳನ್ನು ಆಳಿದರೆ ಆ ಪ್ರದೇಶಗಳ ಆಳ್ವಿಕೆಯ ಬಗ್ಗೆ ಸಂಶಯಕ್ಕೆ ಅವಕಾಶವೇ ಇರುವುದಿಲ್ಲ ಎಂಬ ಕಾರಣದಿಂದಲೋ ಒಟ್ಟಿನಲ್ಲಿ ಅನೇಕ ರಾಣಿಯರನ್ನು ಬೇರೆ ಬೇರೆ ಪ್ರದೇಶಗಳ ಆಳ್ವಿಕೆಗೆ ನೇಮಿಸುತ್ತಿದ್ದುದು ಕಂಡುಬರುತ್ತದೆ. ಎರಡನೆಯ ಬಲ್ಲಾಳನ ರಾಣಿ ಚೋಳಮಹಾದೇವಿ ಕೆಂಬಾಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ.[೨] ಇನ್ನೊಬ್ಬ ರಾಣಿ ಪದ್ಮಲದೇವಿ ಪೊಸವಡಂಗಿಲೆಯನ್ನು ಸುಧರ್ಮದಿಂದ ರಕ್ಷಿಸುತ್ತಿದ್ದ ವಿಷಯವನ್ನು ಒಂದು ಶಾಸನ ನಿರೂಪಿಸುತ್ತದೆ.[೩] ಇದೇ ರೀತಿ ಇನ್ನೊಬ್ಬ ರಾಣಿ ಉಮಾದೇವಿ ಮಗರೆ ಮೂನೂರರ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದಳೆಂದು ತಿಳಿದುಬರುತ್ತದೆ.[೪] ಬಲ್ಲಾಳನ ರಾಣಿ ಬಮ್ಮಲೆಯನ್ನು ಒಂದು ಶಾಸನ 'ಮಹಾ ಮಂಡಲೇಶ್ವರಿ' ಎಂದು ಕರೆದಿದೆ.[೫]

ರಾಣಿಯರು ಕೇವಲ ಆಲಂಕಾರಿಕ ಆಡಳಿತಗಾರರಾಗಿರಲಿಲ್ಲ. ಅನೇಕ ಉತ್ತಮ ಕಾರ್ಯಕ್ರಮಗಳನ್ನು ನೆರವೇರಿಸಿರುವುದು ಕಂಡುಬರುತ್ತದೆ. ಅಭಿನವ ಕೇತಲದೇವಿ ತನ್ನ ಆಳ್ವಿಕೆಗೆ ಒಳಪಟ್ಟ ಕುಂದವಾಡದಲ್ಲಿ ಬುಧವಾರ ಸಂತೆಯನ್ನು ಏರ್ಪಾಟು ಮಾಡಿದ ವಿಷಯ ಶಾಸನವೊಂದರಿಂದ ತಿಳಿದುಬರುತ್ತದೆ.[೬] ಕೇತಲದೇವಿಯು ಸೋವಗವುಡ, ಹಳ್ಳಗವುಡ, ಮುಟ್ಟಿಸೆಟ್ಟಿ ಮುಂತಾದವರಿಗೆ ಸಂತೆಯ ಬಗ್ಗೆ ಸಲಹೆ ಕೊಟ್ಟಾಗ ಅಯ್ಯಾವಳೆ ಐನೂರ್ವರು, ಉಚ್ಚಂಗಿ ಸಮಸ್ತ ಆವಳಿ ಇನ್ನೂ ಮುಂತಾದವರು ಸೇರಿ ಸಂತೆಯನ್ನು ವ್ಯವಸ್ಥೆ ಮಾಡಿದರು.

ಬಲ್ಲಾಳನ ರಾಣಿಯರಲ್ಲಿ ರಾಜ್ಯಾಡಳಿತ ಕೈಗೊಂಡ ಚೋಳಮಹಾದೇವಿ ತುಂಬ ಪ್ರಸಿದ್ಧಳು. ಇವಳು ಕೆಂಬಾಳನ್ನು ಆಳುತ್ತಿದ್ದಳು. ಒಂದು ಸಾರಿ ದುಷ್ಪಕಷ್ಟರ ಮಾತನ್ನು ಕೇಳಿ ಬೇವೂರನ್ನು ಮುತ್ತಲು ತನ್ನ ಸೈನ್ಯಕ್ಕೆ ಆಜ್ಞೆ ಕೊಟ್ಟಳು. ಅದರಂತೆ ಮುತ್ತಿ ತುರುಗಳನ್ನು ಸೆರೆ ಹಿಡಿದುಕೊಂಡು ಹೊರಟಾಗ ಬೇವೂರಿನ ಕೇತಮಲ್ಲ ಪ್ರತಿಭಟಿಸಿ ತನ್ನ ಊರಿನ ತುರುಗಳನ್ನು ಮರಳಿಸಿ ಹೋರಾಡಿ ಮಡಿದನು. ಅನಂತರ ಚೋಳಮಹಾದೇವಿಗೆ ತನ್ನ ತಪ್ಪಿನ ಅರಿವಾಗಿ ತಮ್ಮ ಭಂಡಾರಿ ರಾಯಣ್ಣನಾಚಣ್ಣ ಹೆಗ್ಗಡೆಗಳನ್ನು ಕರೆದು 'ಯೆಮ್ಮ ಮಕ್ಕಳ ನಾವು ನೋಯಿಸಿದೆವು ನೀವು ಹೋಗಿಯೆ ಶ್ರೀವಚನದಲಭಯವಂ ಕೊಟ್ಟು ಕೆಂಬಾಳೂರಜುವತ್ತೊಕ್ಕಲು ಮುಂತಾಗಿ ಕೇತಮಲ್ಲ ನಾಯಕನ ಮಗ ನಾರಸಿಂಹ ನಾಯಕನಂ ಕರೆದು ಸಂತವಿತ್ತುಡೆ ಕೊಟ್ಟು ಕೊಡಗಿಯ ಬೀಡ ಹೇಳಿದಪ್ಪಯ್ಸಿಡೆ...' ಭೂಮಿದಾನವನ್ನು ಕೊಟ್ಟ ವಿಷಯ ತಿಳಿದುಬರುತ್ತದೆ.[೭] ಈ ಸಂದರ್ಭ ಬಹು ಗಮನಾರ್ಹವಾದದ್ದು. ಅಧಿಕಾರಿಯಾಗಿ ಮಾಡಿದ ತಪ್ಪನ್ನು ಒಪ್ಪಿಕೊಳ್ಳುವುದಲ್ಲದೆ ಪ್ರಜೆಗಳ ಬಗ್ಗೆ ಪುತ್ರವಾತ್ಸಲ್ಯವನ್ನು

---

೧. ಜಿ.ಎಸ್. ದೀಕ್ಷಿತ್ : 'ಶಿಕ್ಷಣ ಮತ್ತು ವಿಜ್ಞಾನ', ಕರ್ನಾಟಕದ ಪರಂಪರೆ, I ಪು. ೪೨೧.

೨. (ರೈ) ಎಕ V ಚನ್ನರಾಯಪಟ್ಟಣ ೨೦೫ ಕ್ರಿ.ಶ. ೧೨೦೦.

೩. ಎಸ್‌ಐಐ IX(i) ಹಡಗಲಿ ೩೩೦ ಕ್ರಿ.ಶ. ೧೨೧೨.

೪. (ರೈ) ಎಕ V ಅರಸಿಕೆರೆ ೪೦ ಕ್ರಿ.ಶ. ೧೨೦೯.

೫. (ರೈ) ಎಕ XII ತಿಪಟೂರು ೩೫ ಕ್ರಿ.ಶ. ೧೧೭೩.

೬. (ರೈ) ಎಕ XI ದಾವಣಗೆರೆ ೧೦೫ ಕ್ರಿ.ಶ. ೧೨೪೦.

೭. (ರೈ) ಎಕ V ಚನ್ನರಾಯಪಟ್ಟಣ ೨೦೫ ಕ್ರಿ.ಶ. ೧೨೦೦.

ತೋರಿಸುವುದು ವಿಶೇಷವಾದ ನಡವಳಿಕೆಯಾಗಿದೆ. 'ಎಮ್ಮ ಮಕ್ಕಳ ನಾವು ನೋಯಿಸಿದೆವು' ಎಂಬ ಮಾತು ಗಮನಾರ್ಹ. ಇದು ಆಡಳಿತದಲ್ಲಿ ಕಂಡುಬರುವ ಮಾನವೀಯ ಸ್ಪರ್ಶವನ್ನು ತೋರಿಸುತ್ತದೆ.

ಬಲ್ಲಾಳನ ರಾಣಿ ಉಮಾದೇವಿ ಆಡಳಿತಗಾರಳಾಗಿ ಗಮನಾರ್ಹಳು. ಇವಳು ಮಗರೆ ಮೂನೂರರ ರಾಜ್ಯಭಾರ ಮಾಡುತ್ತಿದ್ದಳೆಂದು ತಿಳಿದುಬರುತ್ತದೆ. ಅರಸಿಕೆರೆಯ ರಾಜ್ಯಾಧ್ಯಕ್ಷದ ಹೆಗ್ಗಡೆ ಕೇಶವಯ್ಯನ ಮಗಳಾದ ಇವಳು ಅಪರೂಪದ ವ್ಯಕ್ತಿತ್ವ ಪಡೆದವಳು. ಕಣಿಕಟ್ಟೆಯ ಶಾಸನ ಇವಳನ್ನು ಹೀಗೆ ವರ್ಣಿಸಿದೆ :

> ಬಲ್ಲಾಳನ ಬಲಭುಜದೊಳು
> ಬಲ್ಲಿದಳಾ ವೀರಲಕ್ಷ್ಮಿ ನೆಲಸುವ ತೆಱದಿಂ
> ಬಲ್ಲಾಳನ ವಾಮಾಂಗದ
> ವಲ್ಲಭೆ ಉಮಾದೇವಿ ಯಿೂ ಧಾತ್ರಿಯೊಳು ಪೆಸರುವಡೆದಳು।[೧]

ಈ ರಾಣಿಯ ನೇತೃತ್ವದಲ್ಲಿ ಕನಿಷ್ಠ ಮೂರುಬಾರಿ ಬೆಳಗುತ್ತಿಯ ಮೇಲೆ ಆಕ್ರಮಣ ಮಾಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಒಂದು ಆಕ್ರಮಣದಲ್ಲಿ ಉಮಾಬಾಯಿ 'ದಾಳಿಯನೊಮ್ಮೆಯೆ ಕವಿತಂದಡೆ'[೨] ಎಂಬ ಮಾತು ಬರುತ್ತದೆ. 'ತೊಟ್ಟನಲುಮ್ಮಾ ಬಾಯಿಯ ಕಟ್ಟಾಳ್ಗಳ್ ಕುದುರೆವೆರಸು ತುರುಗೊಳೆ' ಎಂಬ ಮಾತು ಅವಳ ಕ್ಷಿಪ್ರಗತಿಯ ಆಕ್ರಮಣದ ರೀತಿಯನ್ನು ವರ್ಣಿಸುತ್ತದೆ.[೩] ಅವಳು ಕ್ಷಾತ್ರಗುಣವನ್ನು ಮೆರೆದಿರುವುದು ಗಮನಾರ್ಹವಾಗಿದೆ.

ಎರಡನೆಯ ನರಸಿಂಹನ ರಾಣಿ ಉಮಾದೇವಿಯು ಅಣಿಗನಹಳ್ಳಿ ಮತ್ತು ಕಿತ್ತನಕೆರೆಯ 'ವ್ರಿತ್ತಿ'ಯ ಆದಾಯದ ಸಮಸ್ಯೆಯನ್ನು ಬಗೆಹರಿಸಿದ್ದಾಳೆ. ಆ ಕೇರಿಯ ಮಹಾಜನಗಳು ಸಿದ್ಧಾಯದ ನಷ್ಟ ತೆರಲಾರದೆ ಹೋದಾಗ ಎಂಟು ವರ್ಷಗಳ ರಿಯಾಯಿತಿಯನ್ನು ನೀಡಿ ಪುನರ್ಧಾರೆಯಾಗಿ ಮಾಡಿಕೊಟ್ಟ ವಿಷಯವನ್ನು ಶಾಸನ ತಿಳಿಸುತ್ತದೆ.[೪] ಪುಷ್ಪಗಿರಿ ಬೆಟ್ಟದ ಸಿದ್ಧಾಯಕ್ಕೆ ಸಂಬಂಧಿಸಿದ ತೊಡಕನ್ನು ಅವಳು ಪರಿಹರಿಸಿರುವುದನ್ನು ನೋಡಿದರೆ ಆ ಪ್ರದೇಶ ಅವಳ ಆಡಳಿತಕ್ಕೆ ಒಳಪಟ್ಟಿದ್ದಿತೆಂದು ಭಾವಿಸಬೇಕಾಗುತ್ತದೆ.

ತುಳುನಾಡಿನ ರಾಣಿಯರೂ ರಾಜ್ಯಾಡಳಿತದಲ್ಲಿ ನೇರವಾಗಿ ಭಾಗಿಗಳಾಗಿರುವುದುಂಟು. ಕ್ರಿ.ಶ. ೧೨೭೫ರಲ್ಲಿ ವೀರಪಾಂಡ್ಯದೇವರು ತೀರಿಕೊಂಡಾಗ ಅವನ ಮಗನಾದ ದೇವರಸನು ಪ್ರಾಪ್ತವಯಸ್ಸಿಗೆ ಆಗಿನ್ನೂ ಬಾರದಿದ್ದ ಕಾರಣ ಅವನ ಪಟ್ಟದ ರಾಣಿ ಬಲ್ಲಮಹಾದೇವಿ ಸಿಂಹಾಸನವನ್ನು ಏರಿ ಕ್ರಿ.ಶ. ೧೨೭೫ ರಿಂದ ೧೨೯೨ ರವರೆಗೆ ಆಡಳಿತ ನಡೆಸಿದಳು.[೫] ಪಾಂಡ್ಯ ಮಹಾದೇವಿ ಪನ್ನಿರ್ಪಳ್ಳಿ (ಉಡುಪಿ ತಾಲ್ಲೂಕು) ಎಂಬ ಗ್ರಾಮದ ಆಡಳಿತ ಸೂತ್ರವನ್ನು ವಹಿಸಿದ್ದಳೆಂದು ಕ್ರಿ.ಶ. ೧೧೫೫ಕ್ಕೆ ಸೇರಿದ ಕೋಟೆಗೇರಿ ಶಾಸನ ಮತ್ತು ಕದ್ರಿಯ ತ್ರುಟಿತ ಶಾಸನಗಳಿಂದ ತಿಳಿದುಬರುತ್ತದೆ.[೬]

ಎರಡನೆಯ ಬಿಲ್ಲಮನ ರಾಣಿ ಲಚ್ಚಿಯವ್ವ ರಾಣಿ ತನ್ನ ಮೊಮ್ಮಗ ಚಿಕ್ಕವನಿರುವಾಗ ರಾಜ್ಯದ ಭಾರವನ್ನು ನಿರ್ವಹಿಸಿದಂತೆ ತಿಳಿದುಬರುತ್ತದೆ.[೭] ಯಾದವ ಸಿಂಘಣನ ರಾಣಿ ಪದ್ಮಲದೇವಿ ತನ್ನ ದೊರೆ ಸಿಂಘಣನಿಂದ ಭೂಮಿಯನ್ನು ಪಡೆದು ಪ್ರಸನ್ನ

---

೧. (ರೈ) ಎಕ V ಅರಸಿಕೆರೆ ೪೦ ಕ್ರಿ.ಶ. ೧೨೦೯.

೨. (ರೈ) ಎಕ VII ಹೊನ್ನಾಳಿ ೩೮ ಕ್ರಿ.ಶ. ೧೧೯೬.

೩. (ರೈ) ಎಕ VII ಹೊನ್ನಾಳಿ ೩೭ ಕ್ರಿ.ಶ. ೧೧೯೬.

೪. (ರೈ) ಎಕ V ಬೇಲೂರು ೧೮೨ ಕ್ರಿ.ಶ. ೧೨೨೭(?)

೫. ಕೆ.ವಿ. ರಮೇಶ್ : ತುಳುನಾಡಿನ ಇತಿಹಾಸ, ಪು. ೫೮.

೬. K. V. Ramesh : History of South Canara ಪು. ೪೯.

೭. Srinivasa Ritti : The Sevunas ಪು. ೨೫೨.

ಕೇಶವ, ನಾರಾಯಣ, ಮಾಧವ ದೇವಾಲಯಗಳನ್ನು ಕಟ್ಟಿಸಿ, ಹುಲ್ಲುಗೂರಿನಲ್ಲಿ ಬ್ರಹ್ಮಪುರಿಯನ್ನು ನಿರ್ಮಿಸಿದ ವಿಷಯವು ತಿಳಿಯುತ್ತದೆ.[೧] ಇದು ಪದ್ಮಲದೇವಿಯ ದಾನಗುಣ ಮತ್ತು ವಿದ್ಯೆಯನ್ನು ಪ್ರೋತ್ಸಾಹಿಸುವ ಗುಣವನ್ನು ಸ್ಪಷ್ಟಪಡಿಸುತ್ತದೆ. ಕ್ರಿ.ಶ. ೧೧೪೮ರ ಒಂದು ಶಾಸನದಿಂದ ಚಾಳುಕ್ಯ ಎರಡನೆಯ ಜಗದೇಕಮಲ್ಲನ ರಾಣಿ ಶ್ರೀಮನು ಮಹಾಪ್ರಭುವಿಣಿ ಲಕ್ಷ್ಮಾದೇವಿಯು ಭೂಮಿದಾನವನ್ನು ಮಾಡಿದ ವಿಷಯ ತಿಳಿಯುತ್ತದೆ.[೨] ಆ ರಾಣಿಯನ್ನು 'ಮಹಾ ಪ್ರಭುವಿಣಿ' ಎಂದು ಕರೆದಿರುವುದು ಅವಳು ಒಂದು ಪ್ರದೇಶದ ಪ್ರಭುತ್ವವನ್ನು ಹೊಂದಿದ್ದಳೆಂಬುದನ್ನು ಸೂಚಿಸುತ್ತದೆ. ಸಿಂಧವಂಶದ ಚೌಂಡರಸನ ರಾಣಿ ದೇವಲದೇವಿಯನ್ನು ಒಂದು ಶಾಸನ 'ಅಭಿನವ ಸರಸ್ವತಿ' ಎಂದು ಕರೆದಿದೆ. ಅಲ್ಲದೆ ಅವಳು ತನ್ನ ಗಂಡನಿಂದ ಭೂಮಿಯನ್ನು ಪಡೆದು ಎರಂಬರಗೆಯಲ್ಲಿ ಜೈನ ಯತಿಗಳಿಗೆ ಅದನ್ನು ದಾನವಾಗಿ ನೀಡಿದ ವಿಷಯವನ್ನು ತಿಳಿಸುತ್ತದೆ.[೩] ತಾಳಿಕೋಟೆಯ ಒಂದು ಶಾಸನ ಯಾದವನ 'ಮಹಾಮಾಂಡಳಿಕ ಮಗರ ಮುರಾರಿ ಜಯಿತ ಪಾಳದೇವನಾಯಕ ಮಾಣಿಕಾದೇವಿಯರುಂ ಹಗರಟ್ಟಗೆ ನಾಡಹುಡಿಸ ಬಂದಲಿ' ತಾಳಿಕೋಟೆಯ ಸೋಮನಾಥ ದೇವರಿಗೆ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೪] ಈ ಶಾಸನದಲ್ಲಿ ಬರುವ 'ಹುಡಿಸಬಂದಲಿ' ಬಹುಶಃ ಆಕ್ರಮಣದ ಉದ್ದೇಶದಿಂದ ಬಂದಾಗ ಎಂಬ ಅರ್ಥವನ್ನು ಕೊಡುವಂತೆ ಕಾಣುತ್ತದೆ. ಹಾಗೆ ಅರ್ಥವಾಗುವುದಾದರೆ ಮಹಾಮಾಂಡಲಿಕನೊಂದಿಗೆ ಮಾಣಿಕಾದೇವಿಯೂ ಆಕ್ರಮಣಕ್ಕೆ ಬಂದಿದ್ದಳೆಂದು ಭಾವಿಸಬೇಕಾಗುತ್ತದೆ. ಆ ಕಾಲದಲ್ಲಿ ರಾಜರು ಯುದ್ಧಗಳಿಗೆ ಹೋಗುವಾಗ ರಾಣಿಯರನ್ನು ಕರೆದುಕೊಂಡು ಹೋಗುತ್ತಿದ್ದುದಕ್ಕೆ ಶಾಸನಗಳಲ್ಲಿ ಸೂಚನೆಗಳು ಇವೆ.

ಕರ್ನಾಟಕದ ರಾಣಿಯರು ಆಡಳಿತಗಾರರಾಗಿ, ದಾನಿಗಳಾಗಿ, ವಿದ್ಯಾ ಪ್ರೋತ್ಸಾಹಕರಾಗಿ, ಆಕ್ರಮಣದ ನೇತೃತ್ವ ವಹಿಸಿದ ಧೀರರಾಗಿ, ಸಾಹಿತ್ಯ- ಕಲಾಪ್ರವೀಣರಾಗಿ ಬಹುಮುಖ ವ್ಯಕ್ತಿತ್ವವನ್ನು ಪಡೆದಿದ್ದರೆಂಬುದು ಹಲವಾರು ನಿದರ್ಶನಗಳಿಂದ ಖಚಿತವಾಗುತ್ತದೆ.[೫] ರಾಜರು ತಮಗೆ ವಹಿಸಿದ ಪ್ರದೇಶಗಳ ಆಡಳಿತದ ಜವಾಬ್ದಾರಿಯನ್ನು ರಾಣಿಯರು ಸಮರ್ಥವಾಗಿ ನಿರ್ವಹಿಸಿದ್ದಾರೆ. 'ಕೆಲವು ಶಾಸನಗಳು ಸ್ತ್ರೀ ಆಡಳಿತಗಾರ್ತಿಯರ ಬಗ್ಗೆ ಉತ್ಪ್ರೇಕ್ಷಿತ ಚಿತ್ರ ಕೊಡಬಹುದಾದರೂ ಉತ್ಪ್ರೇಕ್ಷೆಯ ಭಾಗಗಳನ್ನು ತೆಗೆದರೆ ವಾಸ್ತವ ಚಿತ್ರ ಮೂಡಿಬರುವುದೆಂದು' ಎಂ.ಬಿ. ಪದ್ಮ ಅವರು ಅಭಿಪ್ರಾಯಪಡುತ್ತಾರೆ.[೬] ಆಡಳಿತದಲ್ಲಿ ಅಷ್ಟೊಂದು ಸಾಮರ್ಥ್ಯ ಹೊಂದಿದ್ದ ರಾಣಿಯರು ತಮ್ಮ ರಾಜರಿಗೆ ಆಡಳಿತ ನಿರ್ವಹಣೆಯ ವಿಷಯದಲ್ಲಿ ಆಪ್ತ ಸಲಹೆಗಾರರಾಗಿ ಸಹಾಯ ಮಾಡಿರುವ ಸಾಧ್ಯತೆ ಅಧಿಕವಾಗಿ ಇದೆ. ಬಹುಶಃ ಕರ್ನಾಟಕದ ರಾಣಿಯರನ್ನು ಬಿಟ್ಟರೆ ಭಾರತದಲ್ಲಿ ಇನ್ನೆಲ್ಲಿಯೂ ಇಷ್ಟೊಂದು ಸಂಖ್ಯೆಯಲ್ಲಿ ರಾಣಿಯರು ಆಡಳಿತ ನಿರ್ವಹಿಸಿದ ನಿದರ್ಶನಗಳು ಇದ್ದಂತಿಲ್ಲ. ಇದು ಕನ್ನಡ ನಾಡಿನ ಆಡಳಿತ ಇತಿಹಾಸದ ಗಮನಾರ್ಹ ಅಂಶಗಳಲ್ಲಿ ಒಂದಾಗಿದೆ.

**ಮಂತ್ರಿಗಳು:**

ರಾಜ್ಯಾಡಳಿತದ ಪ್ರಮುಖ ಅಂಗಗಳಲ್ಲಿ ಒಂದಾದ ಮಂತ್ರಿ ಸ್ಥಾನಕ್ಕೆ ಹಲವಾರು ದೃಷ್ಟಿಗಳಿಂದ ಪ್ರಾಮುಖ್ಯವಿದೆ. ಮಂತ್ರಿಗಳನ್ನು ಅಮಾತ್ಯ, ಸಚಿವ ಎಂಬ ಹೆಸರುಗಳಿಂದ ಕರೆಯಲಾಗಿದೆ. ಮಂತ್ರಿಗಳ ಸಂಖ್ಯೆ, ಅರ್ಹತೆ, ಅವರಿಗೊಡ್ಡುವ

---

೧. ಕಇ. IV ಶಿಗ್ಗಾವ್ ೫೪ ಕ್ರಿ.ಶ. ೧೨೪೫.

೨. ಎಸ್‌ಐಐ XV ಬಾಗಲಕೋಟೆ ೩೯ ಕ್ರಿ.ಶ. ೧೧೪೮.

೩. ಎಸ್‌ಐಐ XV ಹುನಗುಂದ ೪೭ ಕ್ರಿ.ಶ. ೧೧೫೧.

೪. ಎಸ್‌ಐಐ XV ಮುದ್ದೇಬಿಹಾಳ ೧೭೧ ಕ್ರಿ.ಶ. ೧೨೨೫

೫. ಚನ್ನಕ್ಕ ಎಲಿಗಾರ : ಪ್ರಾಚೀನ ಕರ್ನಾಟಕದ ರಾಣಿಯರು -ಈ ಗ್ರಂಥದಲ್ಲಿ ಕರ್ನಾಟಕದ ಪ್ರಮುಖ ರಾಜವಂಶದ ರಾಣಿಯರ ಚಿತ್ರವನ್ನು ಶಾಸನಗಳ ಆಧಾರಗಳಿಂದ ಅಧಿಕೃತವಾಗಿ ನೀಡಿದ್ದಾರೆ.

೬. M.B. Padma : 'The Position of Women in Medieval Karnataka' ,ಕ್ಯುಜೆಎಂಎಸ್ LXIII ೧-೪, ಪು. ೩೬.

ಪರೀಕ್ಷೆ ಮುಂತಾದ ವಿಷಯಗಳ ಬಗ್ಗೆ ಪ್ರಾಚೀನ ಗ್ರಂಥಗಳು ವಿವರವಾಗಿಯೇ ಚರ್ಚಿಸಿರುವುದು ಕಂಡುಬರುತ್ತದೆ. ಕೆಲವರು ವಂಶಕ್ಕೆ, ಪ್ರಾಮಾಣಿಕತೆಗೆ, ವಿಶ್ವಾಸಿಗಳಿಗೆ, ಮೇಧಾವಿಗಳಿಗೆ, ವಿವೇಕಿಗಳಿಗೆ, ಗುಣವಂತರಿಗೆ ಹೀಗೆ ಒಂದೊಂದು ವಿಶೇಷಗಳಿಗೆ ಮಾನ್ಯತೆ ಕೊಡಬೇಕೆಂದು ಹೇಳಿದ್ದಾರೆ. ಸಾಮಾನ್ಯವಾಗಿ ರಾಜರು ಮಂತ್ರಿಗಳ ಆಯ್ಕೆಯ ವಿಷಯದಲ್ಲಿ ತುಂಬ ಎಚ್ಚರಿಕೆ ವಹಿಸುತ್ತಿದ್ದರು. ಮಾನಸೋಲ್ಲಾಸವು ಮಂತ್ರಿಗಳ ಗುಣದೋಷಗಳನ್ನು ವಿವರವಾಗಿ ಚರ್ಚಿಸುತ್ತದೆ. 'ಸ್ಥಳೀಯತೆ, ಉತ್ತಮ ವಂಶ, ದೂರದೃಷ್ಟಿ, ಬುದ್ಧಿವಂತಿಕೆ, ಉತ್ತಮ ಸ್ಮರಣಶಕ್ತಿ, ಸದಾ ಎಚ್ಚರ, ಧೈರ್ಯ, ವಿವೇಕ, ಉತ್ಸಾಹ, ಗೌರವ, ಕಾರ್ಯಸಾಮರ್ಥ್ಯ, ಪರಿಶುದ್ಧ ಮನಸ್ಸು ಮತ್ತು ಕ್ರಿಯೆಗಳು, ರಾಜನ ಬಗ್ಗೆ ಅಚಲನಿಷ್ಠೆ, ಉನ್ನತ ಚಾರಿತ್ರ, ಶಕ್ತಿ, ಆರೋಗ್ಯ, ಉನ್ನತ ಆಲೋಚನೆ ಈ ಗುಣವಿಶೇಷಗಳಿಗೆ ಗಮನ ಕೊಡಬೇಕು. ಅಲ್ಲದೆ ಆತನಿಗೆ ಉದ್ಧಟತನವಿರಬಾರದು, ಅಸ್ಥಿರ ಗುಣವಿರಬಾರದು, ವಿಶ್ವಾಸಪರ ಗುಣವಿರಬೇಕು, ರಾಜನಿಂದ ನಿಂದಿಸಲ್ಪಟ್ಟರೂ ದ್ವೇಷಕ್ಕೆ ಎರಗದ ಗುಣವುಳ್ಳವನಾಗಿರಬೇಕು.'[೧] ಕನ್ನಡ ಶಾಸನಗಳನ್ನು ಗಮನಿಸಿದರೆ ಮಂತ್ರಿಗಳಲ್ಲಿ ಮೇಲಿನ ಅನೇಕ ಗುಣಗಳನ್ನು ಗುರುತಿಸಬಹುದು.

ಚಂದ್ರಮೌಳಿಯೆಂಬ ಎರಡನೆಯ ಬಲ್ಲಾಳನ ಮಂತ್ರಿಯನ್ನು 'ಬಲ್ಲಾಳ ನೃಪಾಳ ದಕ್ಷಿಣ ಭುಜಾದಂಡ'ನೆಂದು ಕೀರ್ತಿಸಿರುವುದುಂಟು. ಅವನು ಪರಾಕ್ರಮಿಯಾಗಿದ್ದಂತೆ ಉತ್ತಮ ವಿದ್ಯಾಸಂಸ್ಕಾರ ಪಡೆದು ವಿದ್ವಜ್ಜನರಿಂದ ಕೀರ್ತಿತನಾಗಿದ್ದನು.

ಭರತಾಗಮ ತರ್ಕವ್ಯಾ
ಕರಣೋಪನಿಷತ್ಪುರಾಣ ನಾಟಕ ಕಾವ್ಯೋ
ತ್ಕರ ವಿದ್ವಜ್ಜನನುತನೆನಿಪ
ಸ್ಥಿರ ಪುಣ್ಯಂ ಚಂದ್ರಮೌಳಿ ಮಂತ್ರಿ ಲಲಾಮಂ॥[೨]

ಹೊಯ್ಸಳ ನರಸಿಂಹನ ಮಹಾ ಪ್ರಧಾನನಾಗಿದ್ದ ಪೋಲಾಳ್ವ ದಂಡನಾಥ ಹರಿಹರದ ದೇವಾಲಯವನ್ನು ಪುನರ್ನಿರ್ಮಿಸಿ ಇತಿಹಾಸದಲ್ಲಿ ಖ್ಯಾತನಾಗಿದ್ದಾನೆ. ಅವನನ್ನು 'ಚಕ್ರವರ್ತಿಯ ಕಾಯ್ಪಿನಂತೆ, ಕಯ್ದುಗೆ ಕೂರ್ಪಿನಂತೆ, ಮಂತ್ರಕ್ಕೆ ಶಕ್ತಿಯಂತೆ, ರಾಜ್ಯಕ್ಕೆ ವಜ್ರಸಂನಾಹದಂತೆ' ಇದ್ದನೆಂದು ಶಾಸನವೊಂದು ಕೀರ್ತಿಸುತ್ತದೆ.[೩] ಶಾಸನ ಮುಂದುವರಿದು ಸಂಗೀತ ಸಾರನೆಂದೂ, ವಿದ್ವಜ್ಜನರಿಗೆ ಆಧಾರನೆಂದೂ ಕಾವ್ಯಕರ್ತಾರನೆಂದೂ ಕವಿಜನಾಭರಣನೆಂದೂ ಕೀರ್ತಿಸುತ್ತದೆ. ಅವನ ಗುಣವಿಶೇಷಗಳನ್ನು ಅದೇ ಶಾಸನ ಹೀಗೆ ನಿರೂಪಿಸುತ್ತದೆ.

ಬಗೆಗೇನುಂ ಕವಲಿಲ್ಲ ವಾಕ್ಯವೆರಡಿಲ್ಲೌದಾರ್ಯ್ಯದೊಳ್ ಮಾಂದ್ಯಮಿ
ಲ್ಲ ಗುಣ ಪ್ರೀತಿಯೊಳಾತ್ಮ ಪಕ್ಷ ಪರಪಕ್ಷಾಸಂಗಮಿಲ್ಲಾಳ್ದನು
ಜ್ಜುಗದೊಳ್ ಲಾಭದ ಲೋಭಮಿಲ್ಲ ಸಿರಿಯೊಳ್ ಸೊಕ್ಕಿಲ್ಲ ಪೋಲಾಳ್ವನಂ
ಪೊಗಳ್ದಿಂದನ್ಯರನ್ನಂಣ್ಣ ಪೇಳ್ ಪೊಗಳ್ವುದೇ ಹಾಲುಂಡ ಮೇಲುಣ್ಬುದೇ॥

ಸಮರಕ್ಕಾಯುಧಮೀವ ಕೆಯ್ ವಿತರಣಕ್ಕಾಲೋಚನಕ್ಕಾಪ್ತಮಂ
ತ್ರಿ ಮಿಗಿಲ್ಗಣ್ ಪರದುರ್ಗ ವರ್ಗ ವಿಜಯಕ್ಕಾಸ್ಥಾನರಂಗಕ್ಕೆ ರ
ತ್ನಮಯಾಕಲ್ಪಮೆನಿಪ್ಪಿನಂ ನೆಗಟ್ದ ಬಲ್ಲಾಳಂಗಮಾ ನಾರಸಿಂ
ಹಮಹೀಶಂಗಮಮಾತ್ಯನಾದನಧಿಕಂ ಪೋಲಾಳ್ವದಂಡಾಧಿಪಂ॥

ಮನಸ್ಸಿನಲ್ಲಿ ಭಿನ್ನತೆ ಇಲ್ಲದ, ನುಡಿ ಭೇದವಿಲ್ಲದ, ಉದಾರತೆಯಲ್ಲಿ ನಿಧಾನವಿಲ್ಲದ, ಗುಣಗಳನ್ನು ಮೆಚ್ಚುವುದರಲ್ಲಿ ಸ್ವಪಕ್ಷ ಮತ್ತು ಶತ್ರುಪಕ್ಷವೆಂಬ ಭಿನ್ನತೆ ಇಲ್ಲದ, ರಾಜಕಾರ್ಯದಲ್ಲಿ ಲಾಭ ಲೋಭವಿಲ್ಲದ, ಐಶ್ವರ್ಯವಿದ್ದೂ ಗರ್ವವಿಲ್ಲದವನಾಗಿದ್ದನು.

---

೧. ಮಾನಸೋಲ್ಲಾಸ II ೫೫-೫೯.

೨. (ಮೈ) ಎಕ II ಶ್ರವಣಬೆಳಗೊಳ ೫೭೧ ಕ್ರಿ.ಶ. ೧೧೮೧.

೩. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

ಅಲ್ಲದೆ ಯುದ್ಧವೆಂದರೆ ಆಯುಧ ನೀಡುವ ಕೈ, ವಿತರಣೆ ಮತ್ತು ಆಪ್ತಾಲೋಚನೆ ಮಾಡಬಲ್ಲವನೆಂದೂ ಶತ್ರುಗಳ ಕೋಟೆಯನ್ನು ವಶಪಡಿಸಿಕೊಳ್ಳಬಲ್ಲವನೂ ಆಗಿದ್ದನೆಂದು ಅದು ತಿಳಿಸುತ್ತದೆ.

ಯಾದವ ಸಿಂಘಣನ ಮಂತ್ರಿಯಾದ ಬೀಚಣನನ್ನು ಒಂದು ಶಾಸನ ವಿಶೇಷವಾಗಿ ಕೀರ್ತಿಸುತ್ತದೆ. ಅವನ ವಂಶದ ಹಿರಿಯರು ಘಟಿಕಾಸ್ಥಾನಾಚಾರ್ಯನಾದ ಚಿಕ್ಕಮನ ಪರಂಪರೆಯವರು. ಆ ವಂಶದಲ್ಲಿ ಚಿಕ್ಕದೇವ ಮತ್ತು ಚಿಕ್ಕವ್ವೆಯರಿಗೆ ಮಲ್ಲಿಕಾರ್ಜುನ, ಬೀಚಣ ಮತ್ತು ಸಿಂಗ ಎನ್ನುವ ಮೂವರು ಮಕ್ಕಳು. ಬೀಚನು ವೃತ್ತಿಯಿಂದ ವಡ್ಡ ವ್ಯವಹಾರವನ್ನು ಮಾಡಿ ರಾಜಶ್ರೇಷ್ಠಿಯಾಗಿದ್ದನು. ಆದರೆ ವ್ಯವಹಾರಕುಶಲಿ ಮಾತ್ರನಾಗದೆ ತನ್ನ ಸಾಮರ್ಥ್ಯದಿಂದ ರಾಜನ ಗಮನವನ್ನು ತನ್ನೆಡೆ ಸೆಳೆದು ಮಂತ್ರಿ ಸ್ಥಾನವನ್ನು ಪಡೆದನು.

> ಜನನಾಥಂ ಸಿಂಘಣನು ಬೀಚನ ಸುಚರಿತಂ ಬೀಚನೈಶ್ವರ್ಯವಂ ಬೀ
> ಚನ ಮಂತ್ರಪ್ರೌಢಿಯಂ ಬೀಚನ ಭುಜಬಳಮಂ ಬೀಚನುದ್ಯೋಗಮಂ ಬೀ
> ಚನ ತೇಜಸ್ಸೂರ್ತಿಯಂ ಕಂಡೆನಗೆ ಶಚಿವನಾಗಲ್ಕೆ ತಕ್ಕಾತನಿಯೋ
> ಬ್ಬನೆನುತಂ ಸೆಟ್ಟಿ ಬೀಚಂಗೊಸೆದಖಿಳ ನಿಯೋಗಂಗಳ ಮೆಚ್ಚಿ ಕೊಟ್ಟಂ॥[೧]

ಸಿಂಘಣನು ಬೀಚನ ನಡವಳಿಕೆ, ಐಶ್ವರ್ಯ, ಮಂತ್ರ ಪ್ರೌಢಿಮೆ, ಭುಜಬಲ, ಉದ್ಯೋಗ ಮತ್ತು ತೇಜಸ್ಸೂರ್ತಿಗಳನ್ನು ನೋಡಿ ಅವನು ತನಗೆ ಸಚಿವನಾಗಲು ಸಮರ್ಥನೆಂದು ನಿರ್ಧರಿಸಿ ಆ ಸ್ಥಾನವನ್ನು ನೀಡಿದನು. ಬೀಚನು ತನ್ನ ಆಯ್ಕೆಯನ್ನು ಯಶಸ್ವಿಯಾಗಿ ಸಮರ್ಥಿಸಿಕೊಂಡಂತಿದೆ. ರಾಜ ಮತ್ತು ಬೀಚನ ಮಧ್ಯೆ ಸ್ವಾಮಿ ಭೃತ್ಯ ಎಂಬ ಅಂತರವೇ ಇರಲಿಲ್ಲವೆಂದು, ಐಶ್ವರ್ಯ ಭೋಗಗಳಲ್ಲಿಯೂ ಭೇದವಿಲ್ಲದಂತಹ ಅನ್ಯೋನ್ಯತೆ ಅವರಲ್ಲಿದ್ದಿತು ಎಂದು ಅದೇ ಶಾಸನ ನಿರೂಪಿಸುತ್ತದೆ. ಈ ಶಾಸನ ರಾಜನು ಮಂತ್ರಿಗಳ ಆಯ್ಕೆಯಲ್ಲಿ ನಿರೀಕ್ಷಿಸುತ್ತಿದ್ದ ಕೆಲವು ಅಂಶಗಳನ್ನು ಪ್ರಕಟಿಸುತ್ತದೆ; ಅಲ್ಲದೆ ಅರ್ಹತೆಯ ಆಧಾರದ ಮೇಲೆ ಭಿನ್ನ ವೃತ್ತಿಯವರೂ ಸಚಿವ ಪದವಿಗೆ ಆಯ್ಕೆಯಾಗುತ್ತಿದ್ದರೆಂಬುದನ್ನೂ ಸಮರ್ಥಿಸುತ್ತದೆ.

ಮಂತ್ರಿಯ ಪದವಿ ವಂಶಪಾರಂಪರ್ಯವಾಗಿ ಮುಂದುವರಿಯುವ ಪದ್ಧತಿಯೂ ಇದ್ದಿತು. ಇದಕ್ಕೆ ಉತ್ತಮ ನಿದರ್ಶನವೆಂದರೆ ಕೇಶಿರಾಜ ಚಮೂಪತಿಯದು. ಇವನ ವಂಶದ ವಿವರವನ್ನು ಒಂದು ಶಾಸನ ವಿಸ್ತಾರವಾಗಿ ನೀಡುತ್ತದೆ.[೨] ವೀರಬಲ್ಲಾಳನ ಮಂತ್ರಿಯಾಗಿದ್ದ ಕೇಶಿರಾಜನು ಮಾಳ್ವರಿಗೆ, ಚೋಳರಿಗೆ, ವರಾಳ ಅಧಿಕಾರಿಗಳಿಗೆ ಭಯಂಕರನಾಗಿದ್ದ. ಹೊಯ್ಸಳ ವಂಶದೊಂದಿಗೇ ಇವರ ವಂಶವೂ ಬೆಳೆದುಬಂದಿತೆಂದು ಶಾಸನ ಹೇಳುತ್ತದೆ. ವಿನಯಾದಿತ್ಯನ ಆಪ್ತನಾಗಿ ರಾಮದಂಡನಾಯಕನಿದ್ದನು; ಎರೆಯಂಗನ ಪ್ರಿಯಮಂತ್ರಿಯಾಗಿ ಶ್ರೀಧರ ದಂಡನಾಥನಿದ್ದನು. ಶ್ರೀಧರನ ಮಕ್ಕಳಾದ ವಿಭು ಮಲ್ಲಿದೇವ ದಂಡನಾಥ, ಸಚಿವೋತ್ತಮ ದಾಮರಾಜ ಮತ್ತು ಮುಖ್ಯ ಸೇನಾಪತಿಯಾಗಿ ಕೇಶವರಾಜ ಹೀಗೆ ಮೂವರೂ ವಿಷ್ಣುವರ್ಧನನ ರಾಜ್ಯಾಭ್ಯುದಯಕ್ಕೆ ಕಾರಣರಾಗಿದ್ದರು. ಮಲ್ಲಿದೇವ ದಂಡನಾಥನಿಗೆ ಮೂವರು ಮಕ್ಕಳಿದ್ದರು; ಅಮಾತ್ಯ ಮಾಧವ, ಮಂತ್ರಿ ಬೆಟ್ಟರಸ, ದಾಮದಂಡಾಧೀಶರು ನರಸಿಂಹನಿಗೆ ರಾಜ್ಯಾಭ್ಯುದಯಕ್ಕೆ ಮತ್ತು ಶತ್ರುನಾಶಕ್ಕೆ ಸಹಾಯ ಮಾಡಿದರು. ಬೆಟ್ಟರಸನಿಗೆ ಹರಿಹರದೇವ, ಮಾಧವ ಚಮೂಪ, ಆಚಣ ದಂಡನಾಥ, ದೇವರಸ, ಕೇಶವ ಚಮೂಪ, ಮಲ್ಲಪ ಮತ್ತು ಮಾರಮಯ್ಯ ಹುಟ್ಟಿದರು. ಇವರೆಲ್ಲರೂ (ಪ್ರಸ್ತುತ ಶಾಸನದ ಕೇಶಿರಾಜ ಚಮೂಪನೂ ಸೇರಿ) ಬಲ್ಲಾಳನ ರಾಜ್ಯದಲ್ಲಿ ವಿವಿಧ ಹುದ್ದೆಗಳಲ್ಲಿದ್ದರು. ಕೇಶಿರಾಜ ಚಮೂಪನಿಗೆ ಬಲ್ಲಾಳ ದಂಡೇಶ, ಮಾಧವ ಮಂತ್ರಿ, ಬೆಟ್ಟ ಸೇನಾಪತಿ ಎಂಬ ಮಕ್ಕಳಿದ್ದರು. ಹೀಗೆ ತಲೆಮಾರಿನಿಂದ ತಲೆಮಾರಿಗೆ ಹೊಯ್ಸಳ ರಾಜವಂಶದ ಸೇವೆ ಸಲ್ಲಿಸಿದ ಈ ಮನೆತನದ ವಂಶವೃಕ್ಷ ಗಮನಾರ್ಹವಾಗಿದೆ.

---

೧. ಎಸ್‌ಐಐ XVIII ಹಾವೇರಿ ೨೨೭ ಕ್ರಿ.ಶ. ೧೩ ಶಮಾ.

೨. (ರೈ) ಎಕ V ಚನ್ನರಾಯಪಟ್ಟಣ ೨೪೪ ಕ್ರಿ.ಶ. ೧೨೧೦.

ಅಡ್ಡಾಯುಧದ ಹರಿಹರನು ನರಸಿಂಹನಲ್ಲಿ ದಂಡನಾಥಾಗ್ರಗಣ್ಯನಾಗಿದ್ದನು. ಇವನ ವಂಶದ ಹಿರಿಯರೂ ಅಮಾತ್ಯರಾಗಿದ್ದುದು ಕಂಡುಬರುತ್ತದೆ. ಚಿಕ್ಕ ಹಡೆವಳ್ಳನು ವಿಷ್ಣುವರ್ಧನನಿಂದ 'ವಾಹನ ದಂಡಿಗೆ ಪೊದಳ್ದಡಪ ಪಿಂಛಾತಪತ್ರಾನ್ವಿತಾಸನಮಂ'[೧] ಪಡೆದನು. ಅವನ ಮಗ ಮಲ್ಲೆಯ ನಾಯಕ. ಅವನ ಮಕ್ಕಳು ಸಿಂಗೆಯ ನಾಯಕ, ಮಾರೆಯ ನಾಯಕ ಮತ್ತು ಹರಿಹರ. ಇವರಲ್ಲಿ ಹರಿಹರ ನರಸಿಂಹನಲ್ಲಿ ದಂಡನಾಥಾಗ್ರಗಣ್ಯನಾಗಿದ್ದು ಸಹೋದರರೊಂದಿಗೆ ತಂದೆಯ ಹೆಸರಿನಲ್ಲಿ ಮಲ್ಲಿಕಾರ್ಜುನ ದೇವಾಲಯವನ್ನು ಬಸರಾಳಿನಲ್ಲಿ ಕಟ್ಟಿಸಿದನು. ಇವನು ಸೇವುಣರ ಮೇಲಿನ ಯುದ್ಧದಲ್ಲಿ ಭಾಗವಹಿಸಿ ಜಯಶೀಲನಾಗಿದ್ದನು.[೨]

ಕೆಲವು ಅಮಾತ್ಯರು ತಂದೆ ಮಕ್ಕಳಿಬ್ಬರಿಗೂ ಅಮಾತ್ಯರಾಗಿ ಸೇವೆ ಸಲ್ಲಿಸಿದ್ದಾರೆ. ನರಸಿಂಹನಿಗೆ ಅಮಾತ್ಯನಾಗಿದ್ದ ಪೋಲಾಳ್ವ ದಂಡನಾಥನು 'ನೆಗಳ್ದ ಬಲ್ಲಾಳಂಗಮಾ ನಾರಸಿಂಹ ಮಹೀಶಂಗಮಮಾತ್ಯನಾದನಧಿಕಂ ಪೋಲಾಳ್ವ ದಂಡಾಧಿಪಂ' ಎಂದು ಅವನು ಇಬ್ಬರಿಗೂ ಅಮಾತ್ಯನಾಗಿದ್ದುದು ನಿರೂಪಿತವಾಗಿದೆ.[೩]

ಕೆಲವು ಸಾರಿ ರಾಜರ ತುಂಬ ಪರಿಚಿತ ಆಪ್ತವಲಯದಿಂದ ಮಂತ್ರಿಗಳ ಆಯ್ಕೆಯಾಗುತ್ತಿತ್ತು. ಎರಡನೆಯ ಬಲ್ಲಾಳನಿಗೆ ಚಮೂಪನಾಗಿದ್ದ ಕುವರಲಕ್ಷ್ಮ ಅಂತಹ ಆಪ್ತವಲಯದಿಂದ ಬಂದವನು. ಅವನ ಅದ್ಭುತ ವ್ಯಕ್ತಿತ್ವ, ತ್ಯಾಗ, ಧೈರ್ಯ, ಪರಾಕ್ರಮಗಳು ಇತಿಹಾಸದಲ್ಲಿ ಎದ್ದು ಕಾಣುತ್ತವೆ.

> ಅರಮನೆ ತೊಟ್ಟಿಲೆನೆ ನೆಗಳ್ದಾ
> ದರಮದು ಬಾಯ್ವೆಣ್ಣೆ ದಾದಿಯರ್ತ್ತಂನಂತಃ
> ಪುರಮನೆ ಬಲ್ಲಾಳ ನೃಪಂ
> ಪೊರೆದ ಮಗಂ ಕುವರಲಕ್ಷ್ಮದಂಡಾಧೀಶಂ॥

ಅರಮನೆಯೇ ತೊಟ್ಟಿಲೆಂಬಂತೆ ಬಾಲ್ಯದಿಂದ ಅರಮನೆಯ ಒಡನಾಟದಲ್ಲಿ ಬೆಳೆದ ಲಕ್ಷ್ಮ, ಬಲ್ಲಾಳನು ಸಾಕಿದ ಮಗನಾಗಿದ್ದನು. ಅವನ ಮತ್ತು ಚಕ್ರವರ್ತಿಗಳ ಮಧ್ಯೆ ಆಳರಸರೆಂಬ ಭೇದವೂ ಇರಲಿಲ್ಲ. ಅವನ ಶೌರ್ಯ ಪರಾಕ್ರಮ ತ್ಯಾಗಗಳು ಅದ್ಭುತವಾಗಿ ವರ್ಣಿತವಾಗಿವೆ. ಬಲ್ಲಾಳ ದೊರೆಯ ಮರಣಾನಂತರ ಅವನು ತನ್ನ ಮಡದಿ ಮತ್ತು ಸಾವಿರ ವೀರಯೋಧರೊಂದಿಗೆ ಪ್ರಾಣಾರ್ಪಣೆ ಮಾಡಿದ ವಿಷಯವನ್ನು ಶಾಸನ ವಿವರವಾಗಿ ವರ್ಣಿಸಿದೆ.[೪] ಕುವರಲಕ್ಷ್ಮನಂತೆ 'ವೀರ ಶಾಸನಮಂ ಮುಂನಾರುಂ ನಿಜೆಸಿದರಿಲ್ಲ' ಎಂದು ಶಾಸನದಲ್ಲಿ ಉದ್ಗಾರವಿದೆ.

ಮಂತ್ರಿಗಳು ತುಂಬಾ ಸಮರ್ಥರಾಗಿರುತ್ತಿದ್ದರು. ಆದ್ದರಿಂದ ರಾಜ್ಯಾಡಳಿತದ ಜವಾಬ್ದಾರಿಯನ್ನು ಅವರು ನಿರ್ವಹಿಸುತ್ತಿದ್ದುದರಿಂದ ರಾಜನ ಆಡಳಿತದ ಭಾರ ಅಷ್ಟು ಮಟ್ಟಿಗೆ ಕಡಮೆಯಾಗುತ್ತಿತ್ತು. ರಾಜ್ಯ ವಿಸ್ತರಣೆ, ದಾನಧರ್ಮ ಕಾರ್ಯ, ನ್ಯಾಯ ತೀರ್ಮಾನ, ಸಮಸ್ಯೆಗಳಿಗೆ ಸೂಕ್ತ ಸಲಹೆ ಮುಂತಾದ ವಿಷಯಗಳಲ್ಲಿ ರಾಜನಿಗೆ ಬೆಂಬಲವಾಗಿ ನಿಲ್ಲುತ್ತಿದ್ದರು. ವೀರಬಲ್ಲಾಳನ ಮಂತ್ರಿ ಅಮೃತದಂಡನಾಥನನ್ನು 'ವೀರಬಲ್ಲಾಳದೇವ ರಾಜ್ಯಾಭ್ಯುದಯಕರಣ ಕಾರಣ'ನೆಂದು ಕರೆಯಲಾಗಿದೆ.[೫] ಅದೇ

---

೧. ರಾಜನು ಅಮಾತ್ಯ ಪದವಿಯನ್ನು ನೀಡುವಾಗ ವಾಹನ, ಪಲ್ಲಕ್ಕಿ, ಅಲಂಕಾರಿತ ಅಡಪ, ನವಿಲುಗರಿಯಿಂದ ಕೂಡಿದ ಆಸನಗಳನ್ನು ಕೊಡುವುದು ಆ ಕಾಲದ ಸಂಪ್ರದಾಯವಾಗಿದ್ದಿರಬೇಕು.

೨. (ಮೈ) ಎಕ VII ಮಂಡ್ಯ ೨೯ ಕ್ರಿ.ಶ. ೧೨೩೪.

೩. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

೪. (ರೈ) ಎಕ V ಬೇಲೂರು ೧೧೨ ಕ್ರಿ.ಶ. ೧೨೨೦.

೫. (ರೈ) ಎಕ VI ತರೀಕೆರೆ ೪೫ ಕ್ರಿ.ಶ. ೧೧೯೭.

ಶಾಸನ ಮುಂದುವರಿದು 'ಸಂಧಿವಿಗ್ರಯಾಸನ ಶುಶ್ರೇಯದ್ವೈದೀಭಾವ ಭಾವಿತ ಪ್ರಯೋಗ ನಿಪುಣ ಮಂತ್ರಿಮಂಡಲ ನಿತ್ಯಾವಳೋಕ ರತ್ನ ದರ್ಪಣಂ' ಎಂದೂ 'ಶಸ್ತ್ರಶಾಸ್ತ್ರಮಾಚಾರ್ಯ್ಯ ಭಾರದ್ವಾಜ'ನೆಂದೂ ಕರೆದಿದೆ. ಅವನು ಅಮೃತೇಶ್ವರ ದೇವಾಲಯವನ್ನು ಕಟ್ಟಿಸಿ ಹುಣಸೆಕಟ್ಟೆಯನ್ನು ಅಗ್ರಹಾರವಾಗಿ ಪರಿವರ್ತಿಸಿ ಕೊಟ್ಟು ಅನೇಕ ದಾನಗಳನ್ನು ಮಾಡಿದನು.

ಕೆಲವು ಸಾರಿ ಮಂತ್ರಿಗಳು, ತಮಗೆ ಸರಿ ಹೊಂದದಿದ್ದಾಗ ಅಥವಾ ರಾಜಮನೆತನಗಳು ಸಂಪೂರ್ಣ ಅವನತಿ ಹೊಂದಿದಾಗ ಅನ್ಯ ರಾಜಾಶ್ರಯವನ್ನು ಹುಡುಕಿಕೊಂಡು ಹೋಗುತ್ತಿದ್ದ ಉದಾಹರಣೆಗಳಿವೆ. ಕಳಚೂರ್ಯರಲ್ಲಿ ಮಂತ್ರಿಯಾಗಿದ್ದ ರಾಚಿಮಯ್ಯ ಹೊಯ್ಸಳ ಬಲ್ಲಾಳನಲ್ಲಿ ಪ್ರಸಿದ್ಧ ಸೇನಾಪತಿಯಾಗಿ ಹೆಸರು ಪಡೆದಿದ್ದನ್ನು ಕಾಣುತ್ತೇವೆ. ಬಿಜ್ಜಳನ ಸಂಪತ್ತು ಮತ್ತು ಅಭಿವೃದ್ಧಿಗೆ ಕಾರಣನಾಗಿದ್ದ ಅವನು ಮಹಾದಂಡನಾಯಕನಾಗಿ ಬಲ್ಲಾಳನಲ್ಲಿಯೂ ಸೇವೆ ಸಲ್ಲಿಸಿದ. ಅವನು 'ವಸುಧೈಕ ಬಾಂಧವ'ನೆಂದು ಹೆಸರು ಪಡೆದಿದ್ದನು. ಅವನು ಅರಸಿಕೆರೆಯಲ್ಲಿ ಕಟ್ಟಿಸಿದ ಸಹಸ್ರಕೂಟ ಚೈತ್ಯಾಲಯ ಅವನ ಭಕ್ತಿ ಮತ್ತು ಕಲಾಭಿರುಚಿಗೆ ಸಾಕ್ಷಿಯಾಗಿದೆ.[೧]

ಮಂತ್ರಿಗಳಾದನಂತರ ಕೆಲವರಾದರೂ ಗರ್ವದಿಂದ ಬೀಗುತ್ತಿದ್ದರೆಂದು ಕಾಣುತ್ತದೆ. ಬೋಕಿಮಯ್ಯನೆಂಬ ಮಹಾಪ್ರಧಾನನ ವಂಶದ ಹಿರಿಯರಾದ ಚಿಣ್ಣ ಹೆಗ್ಗಡೆ ಉನ್ನತ ಪದವಿಯಲ್ಲಿದ್ದರೂ 'ಮಂತ್ರಿತ್ವದುನ್ನತಿಯಿಂ ಬಿಜ್ಜನೆ ಬೀಗಿಕೊಂಡಿರದೆ ದೀನಾನಾಥರಂ ಶಿಷ್ಟರಂ ನುತಬಂಧುಪ್ರಿಯವರ್ಗ್ಗಂ ತಣಿಪೆ ಧಾತ್ರೀಚಕ್ರದೊಳು ತಾನೆ ಸಂಸ್ತುತನಾದಂ' ಎಂದು ಹೊಗಳಲಾಗಿದೆ.[೨]

ಅಮಾತ್ಯರಂತಹ ಅಧಿಕಾರಿಗಳು ಕೆಲವು ಸಾರಿ ಪಕ್ಷಗಳನ್ನು ಬದಲಾಯಿಸುತ್ತಿದ್ದುದು ಕಂಡುಬರುತ್ತದೆ. ಉದಾಹರಣೆಗೆ ಬಿಜ್ಜಳನೊಂದಿಗೆ ಕಳಚೂರ್ಯ ರಾಜ್ಯದ ಕೆಲವು ಭಾಗಗಳನ್ನು ಆಳಿದ್ದ ಮೈಳುಗಿದೇವ ಬಿಜ್ಜಳನ ಅನಂತರ ಸಿಂಹಾಸನವೇರಲು ಪ್ರಯತ್ನಿಸಿದಂತೆ ಕಂಡುಬರುತ್ತದೆ. ಆರಂಭದಲ್ಲಿ ಕೇಶವ ದಂಡನಾಥನಂಥವರು ಅವನನ್ನು ಬೆಂಬಲಿಸಿದರು. ಆದರೆ ಅನಂತರ ಅವನು ತನ್ನ ನಿಷ್ಠೆಯನ್ನು ಸೋವಿದೇವನ (ಬಿಜ್ಜಳನ ಮಗ) ಕಡೆಗೆ ಬದಲಾಯಿಸಿ ಇವನನ್ನು ಬೆಂಬಲಿಸಿದ ವಿಷಯ ಶಾಸನದಲ್ಲಿ ನಿರೂಪಿತವಾಗಿದೆ. 'ಮೈಳುಗಿದೇವನೀಗಳಪರಾಧದೆ ಗೊಂಡನಶೇಷರಾಜ್ಯಮಂ ಲೋಲತೆಯಿಂದವೀತನ ಸಮೀಪದೊಳಿಂ ನಿರಲಾಗದೆಂದು ತಾಂ ಹೇಳದೆ ಸೋಮಭೂಪತಿಯಲ್ಲಿಗೆ ಬಂದಡೆ ರಾಜ್ಯವಾಯ್ತು ಸಲ್ಲೀಲೆಯೊಳೆಂದಡಚ್ಚರಿ ಸಮುನ್ನತಿ ಕೇಶವದಂಡನಾಥನ' ಎಂಬ ಮಾತುಗಳಿಂದ ಆ ವಿಷಯ ಸ್ಪಷ್ಟವಾಗಿದೆ.[೩]

ರಾಜರು ಮಂತ್ರಿಗಳನ್ನು ಆಯ್ಕೆ ಮಾಡುವಾಗ ಚೆನ್ನಾಗಿ ಪರೀಕ್ಷಿಸಿಯೇ ನೇಮಕ ಮಾಡಿಕೊಳ್ಳುತ್ತಿದ್ದರು. ಮಂತ್ರಿ ಪದವಿ ನೀಡಿದ ಮೇಲೆಯೂ ಅವರನ್ನು ಪರೀಕ್ಷೆಗೆ ಒಳಪಡಿಸುತ್ತಿದ್ದರು. ಯಾರು ಇಂಥ ಪರೀಕ್ಷೆಯನ್ನು ಗೆಲ್ಲುವುದಿಲ್ಲವೋ ಅಂಥವರನ್ನು ದೂರವಿಡಬೇಕೆಂದು ಅರ್ಥಶಾಸ್ತ್ರ ಹೇಳಿದೆ.[೪] ಅರ್ಥಶಾಸ್ತ್ರವು ಹೇಳುವ ಈ ಪರೀಕ್ಷೆಗಳನ್ನು 'ಚತುರುಪಧಾ'[೫] ಎಂದು ಕರೆಯಲಾಗುತ್ತದೆ. ಕರ್ನಾಟಕದ ಅನೇಕ ಅಮಾತ್ಯರು ಈ ಪರೀಕ್ಷೆಗಳನ್ನು ಗೆದ್ದಿದ್ದರು. ಇಂಥ ಪರೀಕ್ಷೆಗಳಲ್ಲಿ ಗೆದ್ದವರನ್ನು 'ಚತುರುಪಧಾವಿಶುದ್ಧಮತಿ' ಎಂದು ಕರೆಯುತ್ತಿದ್ದರು. ಒಂದು ಶಾಸನ ಬಿಜ್ಜಳನ ಅಮಾತ್ಯನಾಗಿದ್ದ ಕಸಪಯ್ಯನನ್ನು

---

೧. (ರೈ) ಎಕ V ಅರಸಿಕೆರೆ ೭೭ ಕ್ರಿ.ಶ. ೧೨೨೦.

೨. (ರೈ) ಎಕ V ಹಾಸನ ೬೯ ಕ್ರಿ.ಶ. ೧೧೫೫.

೩. ಎಸ್ಐಐ XV ಬಾಗೇವಾಡಿ ೧೧೫ ಕ್ರಿ.ಶ. ೧೧೭೦.

೪. ಅರ್ಥಶಾಸ್ತ್ರ ೬:೧೦, ಪು. ೨೧.

೫. ಚತುರುಪಧಾ= ಧರ್ಮ, ಅರ್ಥ, ಕಾಮ ಮತ್ತು ಭಯ. ಈ ನಾಲ್ಕು ವಿಷಯಗಳಲ್ಲಿ ಪರೀಕ್ಷೆಯನ್ನು ಮಾಡಬೇಕು ಎಂದು ಅರ್ಥಶಾಸ್ತ್ರ ವಿಧಿಸುತ್ತದೆ. ಇವುಗಳ ವಿವರಗಳಿಗೆ ನೋಡಿ: ಅರ್ಥಶಾಸ್ತ್ರ ೬:೧೦, ಪು. ೧೯-೨೨.

'ಚತುರುಪಧಾವಿಶುದ್ಧಮತಿ' ಎಂದು ಕರೆದಿದೆ.[೧] ಅಮಾತ್ಯರು ರಾಜರಿಗೆ ಎಷ್ಟು ನಿಷ್ಠರಾಗಿರುತ್ತಿದ್ದರೆಂದರೆ ಕುವರಲಕ್ಷ್ಮನಂತಹ ದಂಡಾಧೀಶರು ಪ್ರಾಣಾರ್ಪಣೆ ಮಾಡುವಂತಹ ಪ್ರತಿಜ್ಞಾರೂಢರಾಗಿದ್ದರು.

**ಸಚಿವರ ಸಂಖ್ಯೆ:**

ರಾಜರು ತಮ್ಮ ಮಂತ್ರಿಮಂಡಲದಲ್ಲಿ ಎಷ್ಟು ಜನ ಸಚಿವರನ್ನು ಇಟ್ಟುಕೊಳ್ಳುತ್ತಿದ್ದರು ಎಂಬುದನ್ನು ಕುರಿತು ವಿದ್ವಾಂಸರು ಸ್ವಲ್ಪ ಮಟ್ಟಿಗೆ ಚರ್ಚೆ ಮಾಡಿದ್ದಾರೆ. ನೀತಿ ಗ್ರಂಥಗಳು, ಸ್ಮೃತಿ ಗ್ರಂಥಗಳು ಎಂಟರಿಂದ ಇಪ್ಪತ್ತರವರೆಗೆ ಸಂಖ್ಯೆಯನ್ನು ಹೇಳಿವೆ. ಆದರೆ ಶಾಸನಗಳಿಂದ ಮಂತ್ರಿಗಳ ಸಂಖ್ಯೆಯನ್ನು ನಿರ್ದಿಷ್ಟವಾಗಿ ಹೇಳುವುದು ಕಠಿಣ. ಬಲ್ಲಾಳನ ಶಾಸನ ಒಂದರಲ್ಲಿ ಬಲ್ಲಾಳನು ಪ್ರವಾಸ ಕಾಲದಲ್ಲಿ ಹೊರಬೀಡು ಬಿಟ್ಟಿದ್ದಾಗ ಪಂಚ ಪ್ರಧಾನರೊಂದಿಗೆ ಒಂದು ಸೀಮಾ ವಿವಾದವನ್ನು ಪರಿಹರಿಸಿದಂತೆ ತಿಳಿದುಬರುತ್ತದೆ.[೨] ಈ ಶಾಸನದ ಆಧಾರದಿಂದ ಬಲ್ಲಾಳನು ತನ್ನ ಪಂಚ ಪ್ರಧಾನರೊಂದಿಗೆ ಪ್ರವಾಸ ಮಾಡುತ್ತಿದ್ದನೆಂದು ಭಾವಿಸಬೇಕಾಗುತ್ತದೆ. ಕೆ.ವಿ. ರಮೇಶ್ ಅವರು, ಕ್ರಿ.ಶ. ೧೨೮೮ರ ಕಚ್ಚೂರಿನ ಶಾಸನದಲ್ಲಿ ಬರುವ ಬಲ್ಲ ಮಹಾದೇವಿಯ ಪಂಚಪ್ರಧಾನರ ಉಲ್ಲೇಖದ ಕಡೆ ಗಮನ ಸೆಳೆದು ಅದು ಐದು ಪ್ರಧಾನರನ್ನು ಹೇಳುವುದೋ ಅಥವಾ ಅದು ಸಾಂಪ್ರದಾಯಿಕ ಶಬ್ದ ಬಳಕೆಯೋ ಎನ್ನುವುದನ್ನು ನಿರ್ಧರಿಸಲು ಇರುವ ಆಧಾರಗಳು ಸಾಲದಾಗಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ.[೩] ಸೇವುಣರು ಸಾಮಂತರಾಗಿದ್ದಾಗ ಏಳು ಮಂತ್ರಿಗಳಿದ್ದರೆಂದೂ ಕಾಲಕ್ರಮದಲ್ಲಿ ರಾಜ್ಯವು ವಿಸ್ತಾರವಾದಂತೆ ಮಂತ್ರಿಗಳ ಸಂಖ್ಯೆಯೂ ಹೆಚ್ಚಿತೆಂದು ಎ.ವಿ. ನರಸಿಂಹಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.[೪] ಹೊಯ್ಸಳರ ಕಾಲದಲ್ಲಿ ಪಂಚ ಪ್ರಧಾನರ ಮಂಡಳಿ ಇದ್ದಿತೆಂದು ಎಂ.ವಿ. ಕೃಷ್ಣರಾವ್ ಅವರು ಅಭಿಪ್ರಾಯಪಡುತ್ತಾರೆ. ಅವರು ಸಂಧಿವಿಗ್ರಹಿ, ಶ್ರೀಕರಣಾಧಿಕಾರಿ, ಹಿರಿಯ ಭಂಡಾರಿ, ಸೇನಾಪತಿ ಮತ್ತು ಮಹಾಪಸಾಯತರು ಪಂಚಪ್ರಧಾನರಲ್ಲಿ ಸೇರ್ಪಡೆಗೊಳ್ಳುತ್ತಾರೆ ಎಂದಿದ್ದಾರೆ.[೫] ಎಂ. ಚಿದಾನಂದಮೂರ್ತಿಯವರು ರಾಜರು ಮೂವರು, ಐವರು ಅಥವಾ ಏಳು ಜನರಿರುವ ಮಂತ್ರಿಮಂಡಲವನ್ನು ರಚಿಸಿಕೊಳ್ಳುತ್ತಿದ್ದರೆಂದು ಭಾವಿಸಬಹುದು ಎಂದಿದ್ದಾರೆ.[೬]

ಮಂತ್ರಿಮಂಡಲದ ಮುಖ್ಯನನ್ನು ಮಹಾಪ್ರಧಾನ ಎನ್ನುತ್ತಿದ್ದರು ಎಂದು ಖಚಿತವಾಗಿ ಹೇಳಲು ಬರುವಂತಿಲ್ಲ. ಅದೇ ರೀತಿ ಮಂತ್ರಿಮಂಡಲದ ಸದಸ್ಯರಿಗೆ ವಹಿಸುತ್ತಿದ್ದ ಖಾತೆಗಳ ವಿಷಯವನ್ನು ಶಾಸನಾಧಾರಗಳಿಂದ ನಿರ್ಧರಿಸುವುದು ಕಠಿಣ. ಏಕೆಂದರೆ ಒಬ್ಬ ಮಂತ್ರಿಗೆ ಕೆಲವು ಸಾರಿ ನಾಲ್ಕೈದು ಅಧಿಕಾರದ ವಿಶೇಷಣಗಳು ಕಂಡುಬರುವುದುಂಟು. ಉದಾಹರಣೆಗೆ ಬಲ್ಲಾಳನ ಮಂತ್ರಿ ಅಚ್ಯುತಮಯ್ಯನನ್ನು ಮಹಾಪ್ರಧಾನ, ಸರ್ವಾಧಿಕಾರಿ, ಸೇನಾಧಿಪತಿ, ಮಹಾಪಸಾಯ್ತ, ದಂಡನಾಯಕ ಎಂಬ ವಿಶೇಷಣಗಳಿಂದ ನಿರ್ದೇಶಿಸಲಾಗಿದೆ.[೭] ಕಳಚೂರ್ಯ ಆಹವಮಲ್ಲನ ಮಂತ್ರಿ ವಾಸುದೇವನಾಯಕನ ಅಧಿಕಾರದ ವಿಶೇಷಣಗಳು ಹೀಗಿವೆ. ಮಹಾಪ್ರಧಾನಂ, ಸರ್ಬ್ಬಾಧಿಕಾರಿ, ಶ್ರೀಕರಣಂ, ಸೇನಾಧಿಪತಿ, ಬಾಹತ್ತರ ನಿಯೋಗಾಧಿಪತಿ,

---

೧. (ರೈ) ಎಕ XI ದಾವಣಗೆರೆ ೪೨ ಕ್ರಿ.ಶ. ಸು. ೧೧೬೨.

೨. (ರೈ) ಎಕ VII ಚನ್ನಗಿರಿ ೭೨ ಕ್ರಿ.ಶ. ೧೨೨೦.

೩. ಕೆ.ವಿ. ರಮೇಶ್ : ಪೂರ್ವೋಕ್ತ, ಪು. ೬೭.

೪. ಎ.ವಿ. ನರಸಿಂಹಮೂರ್ತಿ : ಪೂರ್ವೋಕ್ತ, ಪು. ೭೯.

೫. M. V. KrishnaRao : 'Public Administration Under Hoysalas' Karnataka Darshana, ಪು. ೫೫.

೬. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೩೩೦.

೭. (ಮೈ) ಎಕ VI ಪಾಂಡವಪುರ ೭೪ ಕ್ರಿ.ಶ. ೧೧೮೯.

ಲಾಳ ಕಟಿಯಕಾಜಿರಾಧಿಷ್ಠಾಯಕಂ, ಮಹಾಪ್ರಚಂಡ ದಂಡನಾಯಕಂ.[೧] ಇಂಥ ಕಡೆ ಈ ವಿಶೇಷಣಗಳನ್ನು ಹೇಗೆ ಅರ್ಥೈಸಬೇಕೆನ್ನುವುದು ಸಮಸ್ಯೆಯಾಗುತ್ತದೆ. ಈ ಅಧಿಕಾರ ವಿಶೇಷಣಗಳಲ್ಲಿ ಕೆಲವಾದರೂ ಆ ಅಧಿಕಾರಿಗಳು ಆ ಒಂದೆ ಹೊಂದಿದ್ದ ಅಧಿಕಾರ ಸೂಚಕಗಳಾಗಿರುವ ಸಾಧ್ಯತೆ ಇದೆ.

ಮಂತ್ರಿಮಂಡಲದ ಮುಖ್ಯನು ಪ್ರಧಾನನೆಂದು ಬಹುಶಃ ಕರೆಯಲ್ಪಡುತ್ತಿದ್ದನು. ಶುಕ್ರನೀತಿ ಅವನನ್ನು ಸಮದರ್ಶಿ ಎಂದು ಕರೆದಿದೆ.[೨] ಶಾಸನಗಳಲ್ಲಿ ಬರುವ ಮಹಾಮಾತ್ಯ ಮತ್ತು ಮಹಾಪ್ರಧಾನ ಸಮಾನಾರ್ಥಕಗಳೆಂದು ಭಾವಿಸಬಹುದು. ಪ್ರಧಾನರನ್ನು ಶಾಸನಗಳಲ್ಲಿ ದಂಡನಾಯಕರೆಂದು ಮಹಾದಂಡನಾಯಕರೆಂದು ಕರೆದಿದೆ. ಕೆಲವು ನಾಗರಿಕ ಅಧಿಕಾರಗಳನ್ನು ನೋಡಿಕೊಳ್ಳುತ್ತಿದ್ದವರನ್ನೂ ದಂಡನಾಯಕ ಎಂದು ಕರೆದಿರುವುದುಂಟು. ಆದ್ದರಿಂದ ದಂಡನಾಯಕ ಎನ್ನುವುದು ಎಲ್ಲ ಸಾರಿ ಸೈನ್ಯದ ಉನ್ನತ ಅಧಿಕಾರವನ್ನು ಮಾತ್ರ ಹೇಳುವುದಿಲ್ಲ. ಪ್ರತಿಯೊಬ್ಬ ಅಧಿಕಾರಿಯೂ ಸೈನ್ಯದ ಸೇವೆಯನ್ನು ಮಾಡಬೇಕಾಗಿದ್ದುದರಿಂದ ಹಾಗೆ ಅನೇಕ ಅಧಿಕಾರಿಗಳ ವಿಶೇಷಣಗಳಂತೆ ದಂಡನಾಯಕ ಪದ ಬಳಕೆಯಾಗಿದೆಯೆಂದು ಬಿ.ಆರ್. ಗೋಪಾಲ್ ಹೇಳುತ್ತಾರೆ.[೩] ಟಿ.ವಿ. ಮಹಾಲಿಂಗಂ ಅವರು, ಪ್ರಾಚೀನ ಕಾಲದಲ್ಲಿ ಸೈನ್ಯದ ಅಧಿಕಾರಿಗಳಿಗೂ ನಾಗರಿಕ ಅಧಿಕಾರಿಗಳಿಗೂ ಅಷ್ಟೇನೂ ವ್ಯತ್ಯಾಸವಿರಲಿಲ್ಲವೆಂದು ಭಾವಿಸುತ್ತಾರೆ.[೪] ಜಿ.ಎಸ್. ದೀಕ್ಷಿತ್ ಅವರು, ದಂಡನಾಯಕ ಚಿಕ್ಕ ಅಥವಾ ದೊಡ್ಡ ಪ್ರಾದೇಶಿಕ ವಿಭಾಗಗಳನ್ನು ಆಳುವ ಅಧಿಕಾರಿಗಳು ಹೊಂದುತ್ತಿದ್ದ ವಿಶೇಷಣವೆಂದು ತಿಳಿಸುತ್ತಾರೆ.[೫] ಶಾಸನಗಳಲ್ಲಿ ಅಧಿಕಾರಿಗಳಿಗೆ ಹಲವು ಅಧಿಕಾರ ವಿಶೇಷಣಗಳಿರುವುದರಿಂದ ಖಚಿತವಾಗಿ ಹೇಳುವುದು ಅಸಾಧ್ಯವಾಗಿದೆ.

ಮಂತ್ರಿಮಂಡಲದಲ್ಲಿ ಸಂಧಿವಿಗ್ರಹಿ ಪ್ರಮುಖ ವ್ಯಕ್ತಿಗಳಲ್ಲೊಬ್ಬ. ಶುಕ್ರನೀತಿಯಲ್ಲಿ ಇವನನ್ನು 'ಮಂತ್ರಿ' ಎಂದು ಕರೆಯಲಾಗಿದೆ.[೬] ಸಂಧಿವಿಗ್ರಹಿಗಳ ಮೇಲಧಿಕಾರಿಗಳಾಗಿ ಮಹಾಸಂಧಿವಿಗ್ರಹಿಗಳಿರುತ್ತಿದ್ದರು. ಸಂಧಿವಿಗ್ರಹಿಗಳು ಬಹುಮಟ್ಟಿಗೆ ಆಧುನಿಕ ಕಾಲದ ವಿದೇಶಾಂಗ ಮಂತ್ರಿಗಳಿದ್ದಂತೆ ಎಂದು ಬಹುತೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೭] ಕುಂಜಸೆಟ್ಟಿ ತನ್ನ ಶೌರ್ಯ ಪರಾಕ್ರಮಗಳಿಂದಾಗಿ ಬಲ್ಲಾಳನಿಂದ ಸುಭಟಪಟ್ಟ ಕಟ್ಟಿಸಿಕೊಂಡಿದ್ದನು. ಅವನ ಅಳಿಯ ಕೊಂಡನಂಬಿ ಅನೇಕ ದಾನಧರ್ಮ ಕಾರ್ಯಗಳನ್ನು ಮಾಡಿದವನು. ಇವನ ಸಹೋದರ ಕುಂಜನಂಬಿ ತುಂಬ ಮಹತ್ವದ ವ್ಯಕ್ತಿಯಾಗಿದ್ದನು. ಅವನು ಹೊಯ್ಸಳ ರಾಜರಿಗೆ ಸಂಧಿವಿಗ್ರಹಿಯಾಗಿ ಸಮರ್ಥವಾದ ಕಾರ್ಯನಿರ್ವಹಣೆ ಮಾಡಿದ್ದಾನೆ.

> ನಾನಾರತ್ನಪರೀಕ್ಷೆಯೆಂಬುದದು ತನ್ನೊಂದಂಗಮಂತಿರ್ಕೆ ಧಾ
> ತ್ರೀನಾಥರ್ಕಳ ಚಿತ್ತವೃತ್ತಿಗಳನಿಚ್ಛಾಮಾತ್ರದಿಂ ಬಲ್ಲನೆಂ
> ಬಿ ನಿಸ್ತಾರದ ಕುಂಜನಂಬಿ ನೆಗೞ್ದಂ ಮಂತ್ರಾಂಗಸಾಮರ್ಥ್ಯವಿ
> ದ್ಯಾನೈಪುಣ್ಯನುದಾರಮೇರು ಮಲೆಯಾಳಶ್ರೀಕುಳೋದ್ಧಾರಕಂ

---

೧. ಎಸ್‌ಐಐ XVIII ರಾಣೆಬೆನ್ನೂರು ೧೯೨ ಕ್ರಿ.ಶ. ೧೧೮೩.

೨. A.S. Altekar : ಪೂರ್ವೋಕ್ತ ಪು. ೧೭೦.

೩. B.R. Gopal : ಪೂರ್ವೋಕ್ತ ಪು. ೩೯೫.

೪. T. V. Mahalingam: ಪೂರ್ವೋಕ್ತ ಪು. ೧೨೦.

೫. G. S. Dixit : Local Self Government in Medieval Karnataka ಪು. ೩೮.

೬. A. S. Altekar : ಪೂರ್ವೋಕ್ತ ಪು. ೧೭೧.

೭. ಎ.ವಿ. ನರಸಿಂಹಮೂರ್ತಿ : ಕರ್ನಾಟಕದ ಸೇವುಣರ ಇತಿಹಾಸ, ಪು. ೮೦.
B.R. Gopal : ಪೂರ್ವೋಕ್ತ ಪು. ೩೯೩-೯೪.
ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೩೩೨-೩೩.

ತೆಂಕಲ್ ಹೊಯ್ಸಳ ಬಡಗಲ್ ತಾಂ ಬಲ್ಲಹಂ ಮೆಚ್ಚಿ ತ
ನ್ನಂ ಕೊಂಡಾಡುವಿನಂ ಸಮಂತುಭಯರಾಯರ್ಗ್ಗೆ ಸಂಧಾನಮಂ
ಮುಂ ಕೈವತ್ತಿಸಿ ಸಂಧಿವಿಗ್ರಹದ ಮೆಯ್ಯಿಂ ಸತ್ಯವಾಕ್ಯಂ ದಯಾ
ಳಂಕಾರಂ ಸಲೆ ಕುಂಜನಂಬಿ ಮೆಱೆದಿರ್ಪಂ ಮಂತ್ರವಿದ್ಯಾಧರಂ॥[೧]

ಬಹುಶಃ ರತ್ನಪಡಿ ವ್ಯಾಪಾರಿಗಳ ವಂಶಕ್ಕೆ ಸೇರಿದ ಕುಂಜನಂಬಿಗೆ ರತ್ನಪರೀಕ್ಷೆಯಲ್ಲಿ ಹೇಗೆ ಸಹಜ ಪರಿಣತಿಯೋ ಹಾಗೆಯೇ ರಾಜರ ಮನಃಸ್ಥಿತಿಯನ್ನು ಅರಿಯುವ ಸಾಮರ್ಥ್ಯವೂ ಇದ್ದಿತು. ಅವನಿಗೆ ಮಂತ್ರಾಂಗ ವಿದ್ಯೆಯಲ್ಲಿಯೂ ಸಾಮರ್ಥ್ಯವು ಇದ್ದಿತು. ದಕ್ಷಿಣದ ಹೊಯ್ಸಳ ಚಕ್ರವರ್ತಿ, ಉತ್ತರದ ಬಲ್ಲಹ-ವಲ್ಲಭ (ಸೇವುಣ ?) ರಾಜರನ್ನೂ ತಿಳಿದವನಾಗಿದ್ದನು. ಇಬ್ಬರಿಗೂ ಸಂಧಾನವನ್ನು ಸಮರ್ಥವಾಗಿ ನಿರ್ವಹಿಸಿ ಸತ್ಯವಾಕ್ಯನೆಂದು, ದಯಾಳಂಕಾರನೆಂದು ಖ್ಯಾತನಾದವನು. ಇವನು ಇನ್ನೂ ಅನೇಕ ದೇಶದ ರಾಜರೊಂದಿಗೂ ಸಂಧಿವಿಗ್ರಹ ಕಾರ್ಯವನ್ನು ನಿರ್ವಹಿಸಿದಂತೆ ತಿಳಿದುಬರುತ್ತದೆ.

ಸಂಧಿವಿಗ್ರಹಿಯ ಇನ್ನೊಂದು ಮುಖ್ಯ ಕಾರ್ಯ ಶಾಸನಗಳ, ದಾನಪತ್ರಗಳ ಪಾಠವನ್ನು ಸಿದ್ಧಪಡಿಸುವುದೂ ಆಗಿತ್ತು. ಅನೇಕ ಶಾಸನಗಳ ಕೊನೆಯಲ್ಲಿ ಸಂಧಿವಿಗ್ರಹಿಗಳು ಬರೆದ ಶಾಸನ ಎಂಬ ಮಾತುಗಳು ಬರುತ್ತದೆ. ಸಂಧಿವಿಗ್ರಹಿ ಕೇಶಿರಾಜನನ್ನು ಒಂದು ಶಾಸನ ಹೀಗೆ ಕೀರ್ತಿಸುತ್ತದೆ.

ಬರೆದುದು ಕೀರ್ತಿ ದಿಗ್ವಳಯಭಿತ್ತಿಯನೋವದೆ ಬಾರಿಸಿತ್ತು ಭಾ
ಸುರ ರುಚಿಯಿಂದೆ ಚಂದ್ರಮನ ಚಂದ್ರಿಕೆಯಂ ಸಲೆ ಮುದ್ರಿಸಿತ್ತು ಸಾ
ಗರಪರಿವೇಷ್ಟಿತಾವನಿಯನೆಂದೊಡದೇವೊಗಟ್ದಪ್ಪೆ ಸಂದ ಸಾ
ಕ್ಷರನಿಧಿ ಸಂಧಿವಿಗ್ರಹಿಲಲಾಮನಗ್ಗದ ಕೇಶಿರಾಜನಂ॥[೨]

ಸಂಧಿವಿಗ್ರಹಿ ಕೇಶಿರಾಜನ ಕೀರ್ತಿ ದಿಗ್ವಳಯ ಭಿತ್ತಿಯನ್ನು ವ್ಯಾಪಿಸಿತ್ತು. ತನ್ನ ಕಾಂತಿಯಿಂದ ಚಂದ್ರನ ಕಾಂತಿಯನ್ನು ಆವರಿಸಿತ್ತು. ಸಾಗರದಿಂದ ಸುತ್ತುವರಿಯಲ್ಪಟ್ಟ ಭೂಮಿಯನ್ನೆಲ್ಲ ವ್ಯಾಪಿಸಿದ ಅವನ ಮಹಿಮೆಯನ್ನು ಹೇಗೆ ಕೀರ್ತಿಸಲಿ ಎಂಬ ಉದ್ಗಾರವಿದೆ.

ಸಂಧಿವಿಗ್ರಹಿಯು ರಾಜ್ಯದ ಪ್ರತಿನಿಧಿಯಂತೆ ಅನೇಕ ಸಾರಿ ವ್ಯವಹರಿಸುತ್ತಿದ್ದನು. ಪರರಾಷ್ಟ್ರಗಳಿಂದ ಬಂದ ದೂತರನ್ನು ಸ್ವಾಗತಿಸಿ ರಾಜನ ಬಳಿಗೆ ಕರೆದೊಯ್ಯುವ, ಪರರಾಷ್ಟ್ರಗಳಿಗೆ ಕಳುಹಿಸುವ ಪತ್ರಗಳನ್ನು ಸಿದ್ಧಪಡಿಸುವ ಕಾರ್ಯವನ್ನು ಮಾಡುತ್ತಿದ್ದನು.[೩] ಕೆಲವು ಶಾಸನಗಳಲ್ಲಿ ಹೇರಿಲಾಳ ಕನ್ನಡ ಸಂಧಿವಿಗ್ರಹಿ ಎಂಬ ಮಾತು ಬರುತ್ತದೆ.[೪] ಇದರಲ್ಲಿ ಹಿರಿಯ ಎಂಬುದರ ರೂಪಾಂತರ ಹೇರಿ ಆಗಿರಬಹುದೆಂದು, ಲಾಳ ಅಥವಾ ಲಾಟವು ಈಗಿನ ಗುಜರಾತನ್ನು ಸೂಚಿಸುತ್ತದೆ ಎಂದು, ಈ ಹೆಸರಿನ ಸಂಧಿವಿಗ್ರಹಿಗಳು ಬಹುಶಃ ಲಾಟ ಮತ್ತು ಕರ್ಣಾಟಕ ದೇಶಗಳ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರೆಂದು ಎಂ. ಚಿದಾನಂದಮೂರ್ತಿಯವರು ಭಾವಿಸುತ್ತಾರೆ.[೫]

**ಸಾಮಂತ ರಾಜರು:**

ಚಕ್ರವರ್ತಿಯ ಅಥವಾ ಅಧಿರಾಜನ ಅಧೀನದಲ್ಲಿದ್ದು ಸಣ್ಣಪುಟ್ಟ ರಾಜ್ಯಗಳನ್ನು ಆಳುತ್ತಿದ್ದ ರಾಜರೇ ಸಾಮಂತರು. ತಾವು ಆಳುವ ಪ್ರದೇಶ ಅಥವಾ ರಾಜ್ಯಕ್ಕೆ ಅವರು ಅಧಿಪತಿಗಳಾಗಿರುತ್ತಿದ್ದರು. ಅಧಿರಾಜನಿಗೆ ಮಂತ್ರಿಮಂಡಲ, ಪರಿವಾರ ಮುಂತಾದವುಗಳು ಇದ್ದಂತೆ ಅವೆಲ್ಲವೂ ಇವರಿಗೂ (ಸಹಜವಾಗಿ ಕಡಮೆ ಪ್ರಮಾಣದಲ್ಲಿ) ಇರುತ್ತಿದ್ದವು. ಅಧಿರಾಜನಿಗೆ ನಿಗದಿತ ಕಪ್ಪಕಾಣಿಕೆಗಳನ್ನು ಸಲ್ಲಿಸಿದರೆ ಉಳಿದಂತೆ ಇವರು ಸಂಪೂರ್ಣವಾಗಿ ಸ್ವತಂತ್ರರಾಗಿದ್ದರು. ಸಾಮಾನ್ಯವಾಗಿ ಇವರು

---

೧. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.
೨. (ರೈ) ಎಕ V ಅರಸಿಕೆರೆ ೧೨೭ ಕ್ರಿ.ಶ. ೧೧೮೫.
೩. K. K. Handiqui : Yashastilaka and Indian culture ಪು. ೧೦೭.
೪. ಎಸ್‌ಐಐ XV ರೋಣ ೧೩೮ ಕ್ರಿ.ಶ. ೧೧೮೦.
೫. ಎಂ. ಚಿದಾನಂದಮೂರ್ತಿ: ಪೂರ್ವೋಕ್ತ ಪು. ೩೩೩.

ಮೊದಲಿನಿಂದಲೂ ಒಂದು ರಾಜ್ಯವನ್ನು ವಂಶಪಾರಂಪರ್ಯವಾಗಿ ಆಳುತ್ತ ಬಂದಿರುತ್ತಿದ್ದರು. ಈ ಸಾಮಂತರ ಮೇಲೆ ರಾಜನು ನೇಮಿಸಿದ ಮಾಂಡಳಿಕರಿರುತ್ತಿದ್ದರು; ಇವರು ಯಾವುದೇ ಸಾಮಂತರು ಚಕ್ರವರ್ತಿಯ ವಿರುದ್ಧ ಪಿತೂರಿಗಳನ್ನು ಮಾಡದಂತೆ ಎಚ್ಚರ ವಹಿಸುತ್ತಿದ್ದರೆಂದು ಕಾಣುತ್ತದೆ. ಸಾಮಂತ ರಾಜರಿಗೂ ತಮ್ಮದೇ ಆದ ಧ್ವಜ, ಲಾಂಛನಗಳು ಇರುತ್ತಿದ್ದವು.[೧]

ಯುದ್ಧ ಸಮಯಗಳಲ್ಲಿ ಇವರು ಚಕ್ರವರ್ತಿಗೆ ಬೆಂಬಲವಾಗಿ ನಿಲ್ಲುತ್ತಿದ್ದರು. ಇವರು ತಮ್ಮ ಪ್ರದೇಶಗಳಲ್ಲಿ ಸಂಚಾರ ಮಾಡುತ್ತ ಪ್ರಜೆಗಳ ಕಷ್ಟಸುಖ ವಿಚಾರಿಸುತ್ತಿದ್ದರು. ಸಾಮಂತರು ಸಾಮಾನ್ಯವಾಗಿ ಚಕ್ರವರ್ತಿಗೆ ಯಾವಾಗಲೂ ನಿಷ್ಠರಾಗಿರುತ್ತಿರಲಿಲ್ಲ. ತಮ್ಮ ಸ್ವಾರ್ಥಕ್ಕೆ ಮತ್ತು ರಾಜಕೀಯ ಪರಿಸ್ಥಿತಿಗಳನ್ನು ಅನುಸರಿಸಿ ಪಕ್ಷಗಳನ್ನು ಬದಲಾಯಿಸುತ್ತಿದ್ದರು.[೨] ಅವಕಾಶಗಳು ಲಭಿಸಿದಾಗ ಚಕ್ರವರ್ತಿಗಳಿಂದ ಸ್ವತಂತ್ರರಾಗಲು ಪ್ರಯತ್ನಿಸುತ್ತಿದ್ದರು.[೩] ಆದರೆ ಕೆಲವರು ತುಂಬ ನಿಷ್ಠಾವಂತರಾಗಿರುತ್ತಿದ್ದರು. ಅಂಥವರನ್ನು ಚಕ್ರವರ್ತಿ ಕಟ್ಟಿಕೊಂಡ ನೆಚ್ಚಿನ ಅಲಗುಗಳೆಂದು ಶಾಸನಗಳಲ್ಲಿ ವರ್ಣಿಸಿರುವುದುಂಟು.[೪]

ಹೊಯ್ಸಳರಿಗೆ ಯಾವಾಗಲೂ ಕಿರುಕುಳ ಕೊಡುತ್ತಿದ್ದ ಚೆಂಗಾಳ್ವರಾಗಲಿ, ಕೊಂಗಾಳ್ವರಾಗಲಿ, ಹುಂಚದ ಸಾಂತರರಾಗಲಿ ಅನೇಕ ಸಾರಿ ಸ್ವತಂತ್ರರಾಗಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಇದೇ ರೀತಿ ಸೇವುಣರ ಸಾಮಂತರಾಗಿದ್ದ ಸೌಂದತ್ತಿಯ ರಟ್ಟರು, ಗುತ್ತರು, ತರ್ದವಾಡಿಯ ಶಿಲಾಹಾರರು ಮುಂತಾದವರನ್ನು ಗಮನಿಸಬಹುದು.

**ಪುರೋಹಿತ:**

ಪ್ರಾಚೀನ ಕರ್ನಾಟಕದಲ್ಲಿ ಪುರೋಹಿತರಿಗೆ ರಾಜ್ಯಾಡಳಿತದ ವಿಷಯದಲ್ಲಿ ಪ್ರಮುಖವಾದ ಸ್ಥಾನವಿದ್ದಿತು. ರಾಜಸಭೆಗಳಲ್ಲಿ ಅವರು ಭಾಗವಹಿಸುತ್ತಿದ್ದು ರಾಜ್ಯದ ಮುಖ್ಯ ವಿಷಯಗಳ ನಿರ್ಣಯಗಳಲ್ಲಿ ಮತ್ತು ಚರ್ಚೆಗಳಲ್ಲಿ ಭಾಗಿಯಾಗಿರುತ್ತಿದ್ದರು. ಅನ್ಯ ಪುರೋಹಿತರೊಡನೆ ಬೇರ್ಪಡಿಸಿ ಗುರುತಿಸಲು ಇವರನ್ನು ರಾಜಪುರೋಹಿತರೆಂದು ಗುರುತಿಸುತ್ತಿದ್ದರು. ಎ.ಎಸ್. ಅಳತೇಕರ್ ಅವರು, ವೇದದ ಉಚ್ಛ್ರಾಯ ಕಾಲದಲ್ಲಿ ಪುರೋಹಿತರಿಗೆ ಉನ್ನತ ಪ್ರಭಾವವಿದ್ದು ಕ್ರಮೇಣ ಉಪನಿಷತ್ತುಗಳ, ಜೈನ, ಬೌದ್ಧಧರ್ಮಗಳ ಬೆಳವಣಿಗೆಗಳೊಂದಿಗೆ ಅವರ ಪ್ರಭಾವವು ಕಡಮೆಯಾಗಿದೆ ಎಂದು ಭಾವಿಸುತ್ತಾರೆ.[೫] ಟಿ.ವಿ. ಮಹಾಲಿಂಗಂ ಅವರು, ಪ್ರಾಚೀನ ಭಾರತದಲ್ಲಿ ಮಂತ್ರಿಮಂಡಲದ ಸದಸ್ಯನಾಗಿ ಮುಖ್ಯ ಸ್ಥಾನ ಪಡೆದಿದ್ದು ಆಡಳಿತದಲ್ಲಿ ಪ್ರಮುಖ ಸ್ಥಾನ ವಹಿಸಿದ್ದ ಪುರೋಹಿತ ಕ್ರಮೇಣ ಮಧ್ಯಕಾಲೀನ ಯುಗದಲ್ಲಿ ಕೇವಲ ಧಾರ್ಮಿಕ ಗುರುವಿನ ಅಥವಾ ರಾಜನ ಉಪದೇಶಕನಾಗಿ ಮಾತ್ರ ಸ್ಥಾನ ಪಡೆದು ದೈನಂದಿನ ಆಡಳಿತದಿಂದ ದೂರ ಉಳಿದನೆಂದು ಅಭಿಪ್ರಾಯ ಪಡುತ್ತಾರೆ.[೬]

ಆದರೆ ಪುರೋಹಿತನು ರಾಜನ ಸಭೆಗಳಲ್ಲಿ ಪ್ರಧಾನರ ಮತ್ತು ಇತರ ಕೆಲವು ಅಧಿಕಾರಿಗಳೊಂದಿಗೆ ಇರುವುದು

---

೧. ಕಇ IV ಹಿರೇಕೆರೂರು ೩೮ ಕ್ರಿ.ಶ. ೧೧೮೭; ಕಇ IV ಹಿರೇಕೆರೂರು ೪೮ ಕ್ರಿ.ಶ. ೧೨೪೭.

೨. A. V. Narasimha Murthy : 'Some Important Hoysala Feudatories', The Hoysala Dynasty ಪು. ೭೧.

೩. ಕ್ರಿ.ಶ. ೧೦೪೮-೪೯ ರಲ್ಲಿ ಚಾಳುಕ್ಯರಿಗೆ ಅಧೀನರಾಗಿದ್ದ ಸೌಂದತ್ತಿಯ ರಟ್ಟರು (ಕಇ V ಸೌಂದತ್ತಿ ೫೧ ಕ್ರಿ.ಶ. ೧೦೪೮-೪೯) ಮುಂದೆ ಸೇವುಣರಿಗೆ ಕೆಲವು ಕಾಲ ಸಾಮಂತರಾಗಿದ್ದರು. ಅನಂತರ ರಾಜಗುರು ಅಮಾತ್ಯ ಮುನಿಚಂದ್ರನ ಬೆಂಬಲದಿಂದ ಅವರು ಸ್ವತಂತ್ರವಾಗಿ ಆಳ್ವಿಕೆ ಮಾಡಿರುವುದು ಅವರು ಸ್ವತಂತ್ರವಾಗಿ ಹಾಕಿಸಿದ ಶಾಸನಗಳಿಂದ ತಿಳಿದುಬರುತ್ತದೆ. (ಕಇ VI ಧಾರವಾಡ ೭೩ ಕ್ರಿ.ಶ. ೧೨೨೮).

೪. (ರೈ) ಎಕ XI ದಾವಣಗೆರೆ ೪೧ ಕ್ರಿ.ಶ. ೧೧೪೮.

೫. A. S.Altekar : ಪೂರ್ವೋಕ್ತ ಪು. ೧೬೯.

೬. T.V. Mahalingam : ಪೂರ್ವೋಕ್ತ ಪು. ೧೨೫-೨೬.

ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[೧] ಆದರೂ ಇವರ ಆಡಳಿತಾತ್ಮ ಕ ಚಟುವಟಿಕೆಗಳ ಬಗ್ಗೆ ಶಾಸನಗಳಿಂದ ಅಧಿಕ ವಿಷಯಗಳು ತಿಳಿದು ಬರುವುದಿಲ್ಲ. ರಾಜ್ಯದ ದೊಡ್ಡ ಧಾರ್ಮಿಕ ಕಾರ್ಯಗಳಲ್ಲಿ, ಪಟ್ಟಾಭಿಷೇಕದಂತಹ ದೊಡ್ಡ ಉತ್ಸವಗಳಲ್ಲಿ ಪುರೋಹಿತರಿಗೆ ವಿಶೇಷ ಕಾರ್ಯವಿರುತ್ತಿದ್ದಿತೆಂದು ಊಹಿಸಬಹುದು.

ಚಾಳುಕ್ಯ ಶಾಸನಗಳಲ್ಲಿ ಕಂಡುಬರುವ ಧರ್ಮಾಧ್ಯಕ್ಷ[೨] ರಾಜ್ಯದ ನ್ಯಾಯ ನಿರ್ಣಯ ಸಂದರ್ಭಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದನು ಮತ್ತು ನ್ಯಾಯ ನಿರ್ಣಯ ಸಂದರ್ಭಗಳಲ್ಲಿ ರಾಜನಿಗೆ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದನು. ಬಹುಶಃ ಇವನು ಪುರೋಹಿತನೊಂದಿಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತಿದ್ದಿರಬೇಕು.

ಅನೇಕ ಶಾಸನಗಳಲ್ಲಿ 'ರಾಜಗುರು'ಗಳ ಉಲ್ಲೇಖ ಬರುತ್ತದೆ. ಅನೇಕ ದಾನಗಳಿಗೆ ಸಾಕ್ಷಿಗಳಾಗಿಯೂ ಮತ್ತು ಕೆಲವು ಕಡೆಗಳಲ್ಲಿ ದಾನವನ್ನು ಸ್ವೀಕರಿಸುವವರಾಗಿಯೂ ಇವರು ಕಂಡುಬರುತ್ತಾರೆ. ರಾಜನು ಕೆಲವು ಉನ್ನತ ಧಾರ್ಮಿಕ ವ್ಯಕ್ತಿಗಳನ್ನು ವಿಶೇಷವಾಗಿ ಗುರುಗಳೆಂದು ಪರಿಭಾವಿಸುತ್ತಿದ್ದನು. ಅಂಥ ಗುರುಗಳು ರಾಜಗುರುಗಳೆಂದು ಪರಿಗಣಿತರಾಗುತ್ತಿದ್ದರು. ರಾಜಗುರುಗಳಲ್ಲಿ ಬಾಳಚಂದ್ರ,[೩] ಗುಮ್ಮಟದೇವ,[೪] ವಾಮಶಕ್ತಿ,[೫] ಶಿವದೇವ[೬] ಮುಂತಾದವರು ಪ್ರಖ್ಯಾತರಾಗಿದ್ದಾರೆ. ರಾಜಗುರುಗಳು ರಾಜರಿಗೆ ನೈತಿಕ ಬೆಂಬಲದ ಸಂಕೇತವಾಗಿದ್ದಂತೆ ಶಾಸನಗಳನ್ನು ಗಮನಿಸಿದರೆ ಭಾಸವಾಗುತ್ತದೆ. ಅನೇಕ ರಾಜಗುರುಗಳು ಸ್ವತಃ ದಾನಗಳನ್ನೂ ಮಾಡಿರುವುದು ಕಂಡುಬರುತ್ತದೆ.[೭]

**ಇತರ ಕೆಲವು ಅಧಿಕಾರಿಗಳು:**

ಮಂತ್ರಿಗಳು ಕೆಲವು ಪ್ರಾಂತ್ಯಗಳ ಅಧಿಕಾರವನ್ನೂ ನೋಡಿಕೊಳ್ಳುತ್ತಿದ್ದರು. ಶಾಸನಗಳಲ್ಲಿ ವಿಶೇಷವಾಗಿ ಕಂಡುಬರುವ ಕೆಲವು ಅಧಿಕಾರಿಗಳನ್ನು ಇನ್ನು ಮುಂದೆ ಗಮನಿಸಬಹುದು.

**ಮಂಡಲೇಶ್ವರರು:**

ಮಂಡಲ ಒಂದು ನಿರ್ದಿಷ್ಟ ವಿಸ್ತಾರದ ಪ್ರಾಂತ್ಯವನ್ನು ಸೂಚಿಸುತ್ತದೆ. ಅದು ಸ್ಥೂಲವಾಗಿ ಸುಮಾರು ಒಂದು ಜಿಲ್ಲೆಯಷ್ಟು ಪ್ರದೇಶವನ್ನು ಒಳಗೊಳ್ಳುತ್ತಿತ್ತೆಂದು ಕಾಣುತ್ತದೆ. ಸಾಮಾನ್ಯವಾಗಿ ರಾಜನು ಈ ಹುದ್ದೆಗಳಿಗೆ ನೇಮಕ ಮಾಡುತ್ತಿದ್ದನು; ಈ ಹುದ್ದೆಗೆ ರಾಜನ ರಕ್ತಸಂಬಂಧಿಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದಂತೆ ಕಾಣುತ್ತದೆ. ಉಳಿದಂತೆ ಆಯ್ಕೆಯಲ್ಲಿ ಅರ್ಹತೆ ಪರಿಗಣನೆಯಾಗುತ್ತಿದ್ದಿತು. ಸಾಮಾನ್ಯವಾಗಿ ಮಂಡಲೇಶ್ವರರು 'ದಂಡನಾಯಕ'ನೆಂಬ ಅಧಿಕಾರ ವಿಶೇಷಣದಿಂದ ಕರೆಯಲ್ಪಡುತ್ತಿದ್ದರು. ಜಿ.ಎಸ್. ದೀಕ್ಷಿತ್ ಅವರು ಅಭಿಪ್ರಾಯಪಡುವಂತೆ ಅವರು ನಾಗರಿಕ ಮತ್ತು ಸೈನಿಕ ಹೀಗೆ ಎರಡು

---

೧. ತುನಾಶಾ I ಕುಂದಾಪುರ ೪೨ ಕ್ರಿ.ಶ. ೧೨೬೧.

೨. ಎಇ XV ರೋಣ ೬೯ ಕ್ರಿ.ಶ. ೧೦೫೪.

೩. (ಮೈ) ಎಕ II ಶ್ರವಣಬೆಳಗೊಳ ೪೫೬ ಕ್ರಿ.ಶ. ೧೨೮೨.

೪. (ಮೈ) ಎಕ VI ಕೃಷ್ಣರಾಜಪೇಟೆ ೧೦೮ ಕ್ರಿ.ಶ. ೧೩೩೪.

೫. (ರೈ) ಎಕ VII ಶಿಕಾರಿಪುರ ೧೦೪ ಕ್ರಿ.ಶ. ೧೧೫೬.

೬. ಎಸ್‌ಐಐ XVIII ರಾಣೆಬೆನ್ನೂರು ೨೪೭ ಕ್ರಿ.ಶ. ೧೨೬೫.

೭. ಎಸ್‌ಐಐ IX (i) ಹರಪನಹಳ್ಳಿ ೨೭೧ ಕ್ರಿ.ಶ. ೧೧೭೩-೭೪.
(ರೈ) ಎಕ VI ಕಡೂರು ೮೮ ಕ್ರಿ.ಶ. ೧೨೨೩(?).

ವಿಭಾಗಗಳನ್ನೂ ನೋಡಿಕೊಳ್ಳುತ್ತಿದ್ದರು.[೧] ಮಂಡಲೇಶ್ವರರ ಮೇಲಧಿಕಾರಿಗಳಾಗಿ ಮಹಾಮಂಡಲೇಶ್ವರರು ಇರುತ್ತಿದ್ದರು. ಮಹಾಮಂಡಲೇಶ್ವರರಿಗೂ ಮಹಾ ಸಾಮಂತರಿಗೂ ಯಾವ ವಿಧವಾದ ವ್ಯತ್ಯಾಸವಿಲ್ಲವೆಂದು ಟಿ.ವಿ. ಮಹಾಲಿಂಗಂ ಅಭಿಪ್ರಾಯಪಟ್ಟಿದ್ದಾರೆ.[೨] ರನ್ನ ಒಂದು ಪದ್ಯದಲ್ಲಿ - ಸಾಮಂತನನಂತರದ ಹಂತ ಮಂಡಲೇಶ್ವರನದೆಂದು ಅನಂತರದ ಹಂತ ಚಕ್ರವರ್ತಿಯದೆಂದು ಸೂಚ್ಯವಾಗಿ ತಾನು ಹಂತ ಹಂತವಾಗಿ ಬೆಳೆದು ಬಂದ ಕ್ರಮವನ್ನು ಹೇಳಿದ್ದಾನೆ.[೩]

ಹೊಯ್ಸಳರೂ ಹಂತ ಹಂತವಾಗಿ ಬೆಳೆದಿರುವುದು ಕಂಡುಬರುತ್ತದೆ. ಮೊದಲನೆಯ ಬಲ್ಲಾಳನ ಕ್ರಿ.ಶ. ೧೧೦೩ರ ಶಾಸನದಂತೆ ಅವನು ಮಹಾ ಸಾಮಂತನಾಗಿದ್ದನು. ಕ್ರಿ.ಶ. ೧೧೩೭ರಲ್ಲಿ ಗಂಗವಾಡಿ, ನೊಳಂಬವಾಡಿ ಮತ್ತು ಬನವಾಸಿಗಳನ್ನು ಆಳುತ್ತಿದ್ದ ವಿಷ್ಣುವರ್ಧನ ಮಹಾಮಂಡಲೇಶ್ವರನಾಗಿದ್ದನು.[೪] ಮುಂದೆ ಎರಡನೆಯ ಬಲ್ಲಾಳ ಚಕ್ರವರ್ತಿಯಾಗಿರುವುದನ್ನು ಕಾಣುತ್ತೇವೆ. ಮುತ್ತಗಿಯ ಶಾಸನ ಒಂದರಲ್ಲಿ ಹೀಗೆ ಬರುತ್ತದೆ.

> ಕಳಚುರಿ ವಂಶದಾದಿ ನೃಪರೆಲ್ಲರುತ್ತಮ ಚಕ್ರವರ್ತಿಗ
> ಳ್ಬಳಿಕಂ ಕೆಲರ್ಸ್ವಬಾಹು ಬಲವಿಲ್ಲದೆ ಮಂಡಳಿಕರ್ಕ್ಕಳಾದರಾಂ
> ಬಳಯುತನಾದೆನಿಂನೆನಗೆ ಮಂಡಳಿಕತ್ವಮಯುಕ್ತವೆಂದು ದೋರ್ಬ್ಬಲ
> ದೊಳೀ ಚಕ್ರವರ್ತಿ ಸಕಳೋರ್ಬ್ಬಿಗವಾದನಜೇಯಂ ಬಿಜ್ಜಳಂ॥[೫]

ಕಳಚೂರ್ಯ ವಂಶಜರು ಆರಂಭದಲ್ಲಿ ಚಕ್ರವರ್ತಿಗಳಾಗಿದ್ದರೆಂದೂ ಬಳಿಕ ಕೆಲವರು ಸ್ವಬಾಹುಬಲವಿಲ್ಲದೆ ಮಂಡಳಿಕರಾದರೆಂದೂ ಬಲಯುತನಾದ ತಾನು ಮಂಡಳಿಕನಾಗಿರುವುದು ಸರಿಯಲ್ಲವೆಂದು ಸಾಮರ್ಥ್ಯದಿಂದ ಚಕ್ರವರ್ತಿಯಾದೆನೆಂದು ಬಿಜ್ಜಳನು ಹೇಳಿಕೊಂಡಿದ್ದಾನೆ. ಮಂಡಳೇಶ್ವರರು ಸಾಮಂತರ ಮೇಲಿನ ಅಧಿಕಾರಿಗಳಾಗಿದ್ದು ರಾಜರಿಂದ ನೇಮಕವಾಗಿರುತ್ತಿದ್ದರು. ಹಾಗೆಯೇ ರಾಜರು ತಮಗಿಷ್ಟ ಬಂದಂತೆ ಅವರನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ವರ್ಗ ಮಾಡುತ್ತಿದ್ದರು.[೬] ಮಂಡಲೇಶ್ವರರು ತಮ್ಮ ಅಧೀನದ ಪ್ರದೇಶದಲ್ಲಿ ಸಂಗ್ರಹಿಸಿದ ಆದಾಯದ ಒಂದು ಭಾಗವನ್ನು ಚಕ್ರವರ್ತಿಗೆ ಸಲ್ಲಿಸುತ್ತಿದ್ದರು.

**ಸರ್ವಾಧಿಕಾರಿ:**

ಅನೇಕ ಹಿರಿಯ ಅಧಿಕಾರಿಗಳ ವಿಶೇಷಣಗಳಲ್ಲಿ ಒಂದಾಗಿ ಕಂಡುಬರುವ ಸರ್ವಾಧಿಕಾರಿಯ ನಿಶ್ಚಿತ ಕಾರ್ಯಸ್ವರೂಪ ಶಾಸನಗಳಿಂದ ತಿಳಿದುಬರುವುದಿಲ್ಲ. ಅದು ಪ್ರಧಾನನಿಗೆ ಸಮನಾದ ಅಧಿಕಾರ ವ್ಯಾಪ್ತಿಯುಳ್ಳ ಒಂದು ಹುದ್ದೆಯಂತೆ ಕಂಡುಬರುತ್ತದೆ. ಅನೇಕ ಶಾಸನಗಳಲ್ಲಿ ಬೇರೆ ಬೇರೆ ಮಂತ್ರಿಗಳ ವಿವಿಧ ವಿಶೇಷಣಗಳಲ್ಲಿ ಅದೂ ಒಂದಾಗಿ ಬಂದಿದೆ ಬಲುಪಯ್ಯ ಎಂಬುವವನನ್ನು 'ಮಹಾಪ್ರಧಾನ ಸೇನಾಧಿಪತಿ ಸರ್ವಾಧಿಕಾರಿ ಹಿರಿಯವೆಗ್ಗಡೆ' ಎಂದು ಕರೆಯಲಾಗಿದೆ.[೭] ಕೆಲವು ಶಾಸನಗಳಲ್ಲಿ 'ಸರ್ವಾಧಿಕಾರಿ'

---

೧. G. S. Dixit : ಪೂರ್ವೋಕ್ತ. ಪು. ೧೭.

೨. T. V. Mahalingam : ಪೂರ್ವೋಕ್ತ ಪು. ೧೮.

೩. ಮೊದಲೊಳ್ ಸಾಮಂತರಿನಿನಿ।
ಸುದಿತೋದಿತನಾಗಿ ಮಂಡಲೇಶ್ವರನಿಂದ।
ಭ್ಯುದಯಪರನೆನಿಸಿ ಚಕ್ರಿಯಿ
ನುದಯ ಪರಂಪರೆಯನೆಯ್ದಿದಂ ಕವಿರತ್ನಂ॥ ಗದಾಯುದ್ಧ ೧:೧೦.

೪. ಎಸ್.ಸಿ. ನಂದೀಮಠ : 'ಕಲ್ಯಾಣದ ಚಾಳುಕ್ಯರು' ಕರ್ನಾಟಕದ ಪರಂಪರೆ I, ಪು. ೩೩೫- ೩೩೮.

೫. ಎಸ್ಐಐ XV ಬಾಗೇವಾಡಿ ೧೧೫ ಕ್ರಿ.ಶ. ೧೧೭೦.

೬. K. V.Ramesh : A History of South Canara. ಪು. ೨೫೯.

೭. (ರೈ) ಎಕ XII ಕುಣಿಗಲು ೧ ಕ್ರಿ.ಶ. ೧೧೫೭.

ಎಂಬ ಒಂದೇ ಅಧಿಕಾರ ಸೂಚಕ ಪದ ಬಳಕೆಯಾಗಿರುವುದುಂಟು.[೧] ಎ.ಎಸ್. ಆಲ್ತೇಕರರು ಎಲ್ಲ ಶಾಖೆಗಳ ಮೇಲ್ವಿಚಾರಣೆಯ ಅಧಿಕಾರವನ್ನು ಹೊಂದಿದವನು ಸರ್ವಾಧಿಕಾರಿ ಎಂದು ಭಾವಿಸುತ್ತಾರೆ.[೨]

**ಮಹಾ ಪಸಾಯತ:**

ಮಹಾ ಪಸಾಯತ ಎಂಬ ಅಧಿಕಾರಿಯ ಉಲ್ಲೇಖ ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ನಿರ್ದಿಷ್ಟ ಅಧಿಕಾರವನ್ನು ಸೂಚಿಸುವ ಈ ಪದದ ನಿಷ್ಪತ್ತಿ ಸಂದಿಗ್ಧವಾಗಿರುವಂತಿದೆ. ಮಹಾ + ಪಸಾಯತ = (ಸಂ. ಪ್ರಸಾದಿ ?) ಈ ಪದ ಆಯ್ತ ಎಂಬ ಪ್ರತ್ಯಯದಿಂದ ಕೊನೆಗೊಳ್ಳುವ ಶಬ್ದರೂಪ ಸಾಮ್ಯದಿಂದ ಬಂದಿರಬಹುದೆಂದು ಕನ್ನಡ ಕನ್ನಡ ನಿಘಂಟಿನಲ್ಲಿ ತಿಳಿಸಲಾಗಿದೆ.[೩] ಮಹಾ ಪಸಾಯತರು ದಾನಗಳಿಗೆ ಸಾಕ್ಷಿಗಳಾಗಿರುವುದು ಕಂಡುಬರುತ್ತದೆ.[೪] ಇವರು ರಾಜರ ಉಡುಪುಗಳ ಮೇಲ್ವಿಚಾರಣೆ ಮತ್ತು ವ್ಯವಸ್ಥೆ ನೋಡಿಕೊಳ್ಳುತ್ತಿದ್ದಂತೆ ಕಾಣುತ್ತದೆ. ಶಾಸನಗಳನ್ನು ಗಮನಿಸಿದರೆ ಇದು ಮಂತ್ರಿಗಳ ಸಮಾನ ಸ್ಥಾನದಂತೆ ಕಂಡುಬರುತ್ತದೆ.

**ಬಾಹತ್ತರ ನಿಯೋಗಾಧಿಪತಿ:**

ಅನೇಕ ಶಾಸನಗಳಲ್ಲಿ ಬಾಹತ್ತರ ನಿಯೋಗಾಧಿಪತಿಗಳ ಉಲ್ಲೇಖ ಕಂಡುಬರುತ್ತದೆ. ಬಾಹತ್ತರವೆಂದರೆ ಎಪ್ಪತ್ತೆರಡು ಎಂದು ಅರ್ಥವಿದೆ. ಇದಕ್ಕೆ ಅನ್ವಯಿಸಿ ಅರ್ಥೈಸಿದರೆ ಎಪ್ಪತ್ತೆರಡು ನಿಯೋಗ ಅಥವಾ ಶಾಖೆಗಳನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಗಳನ್ನು ಅದು ಸೂಚಿಸುತ್ತದೆ ಎಂದು ಭಾವಿಸಬೇಕಾಗುತ್ತದೆ. ಆದರೆ ಕನ್ನಡ ಶಾಸನಗಳಲ್ಲಿ ಒಟ್ಟಾಗಿ ಅಷ್ಟು ಶಾಖೆಗಳ ಉಲ್ಲೇಖವಿಲ್ಲ. ಕೋಶಗಳಲ್ಲಿ ಆ ಎಪ್ಪತ್ತೆರಡು 'ನಿಯೋಗಿ'ಗಳ ಪಟ್ಟಿ ದೊರೆಯುತ್ತದೆ.[೫] ಹೆಚ್ಚಿನ ವಿದ್ವಾಂಸರು ಬಾಹತ್ತರಕ್ಕೆ

---

೧. (ರೈ) ಎಕ VII ಶಿಕಾರಿಪುರ ೯೬ ಕ್ರಿ.ಶ. ೧೧೭೯.

೨. A. S.Altekar : Rastrakutas and their times ಪು. ೩೭೧.

೩. ಕನ್ನಡ ಕನ್ನಡ ನಿಘಂಟು V, ಪು. ೫೪೩೩.

೪. ಎಸ್ಐಐ XX ಇಂಡಿ ೧೫೪ ಕ್ರಿ.ಶ. ೧೧೭೦.

೫. ಇಗ್ಲಾ ಆಪ್ರ ಪು. XLIV-XLVII : ೧) ಗುರು, ೨) ಮಹಾ ಪ್ರಧಾನ, ೩) ಸಾಮಂತ, ೪) ಸೇನಾಪತಿ, ೫) ದ್ವಾರಪಾಲಕ, ೬) ಅವಸಾರಿಕ, ೭) ಘಟಿಕಾ ನಿರ್ಧಾರಕ (ಸಮಯವನ್ನು ಸೂಚಿಸುವವನು), ೮) ಗಣಕ, ೯) ಲೇಖಕ, ೧೦) ಪೌರಾಣಿಕ, ೧೧) ಪುರೋಹಿತ, ೧೨) ಜ್ಯೋತಿಷ್ಕ, ೧೩) ಕಾವ್ಯಜ್ಞ, ೧೪) ವಿದ್ವಜ್ಜನ, ೧೫) ದೇವತಾರ್ಚಕ, ೧೬) ಮಾಲ್ಯಾಕಾರಕ, ೧೭) ಪರಿಮಳಕಾರಕ, ೧೮) ಗೋಷ್ಠಾಧಿಕಾರ (ಗೋಶಾಲೆಯ ಮೇಲ್ವಿಚಾರಕ), ೧೯) ಗಜಾಧಿಕಾರ, ೨೦) ಅಶ್ವಾಧಿಕಾರ, ೨೧) ಭಾಣ್ಡಾಧಿಕಾರ, ೨೨) ಧಾನ್ಯಾಧಿಕಾರ, ೨೩) ಅಂಗರಕ್ಷಕ, ೨೪) ಸೂತ(ಸಾರಥಿ), ೨೫) ಸೂದ (ಅಡುಗೆಯವನು), ೨೬) ಬೇತಾಳ (ಮಾಂತ್ರಿಕ), ೨೭) ಮಲ್ಲ(ಕುಸ್ತಿಪಟು), ೨೮) ತಾಂಬೂಲಿಕ (ತಾಂಬೂಲ ಸಿದ್ಧಮಾಡುವವನು), ೨೯) ತಾಳವೃಂತಕ (ಗಾಳಿ ಬೀಸುವವನು), ೩೦) ನರವಾಹಕ (ರಾಜ, ರಾಣಿ ಮುಂತಾದವರು ಕುಳಿತ ಪಲ್ಲಕ್ಕಿ ಹೊರುವವರು), ೩೧) ಛಾತ್ರಿಕ (ಕೊಡೆ ಹಿಡಿಯುವವನು), ೩೨) ಚಾಮರಿಕ (ಚಾಮರ ಬೀಸುವವನು), ೩೩) ಕಲಚಿಕ (ಕಹಳೆ ಊದುವವನು), ೩೪) ಕರಸಾರಿಕ (ಪಾರಿವಾಳ ಹಿಡಿದವನು), ೩೫) ಕರದೀಪಿಕಾಕಾರ (ದೀಪ ಅಥವಾ ಪಂಜು ಹಿಡಿದವನು), ೩೬) ಪಾದುಕಾದಾರ (ಪಾದರಕ್ಷೆಗಳನ್ನು ಹಿಡಿರುವವನು), ೩೭) ನರ್ತಕ, ೩೮) ಗಾಯಕ, ೩೯) ವೈಣಿಕ, ೪೦) ಶಕುನಿಕ (ಕಾಡು ಹಕ್ಕಿ ಹಿಡಿಯುವವನು), ೪೧) ಮಾಗಧ (ಹೊಗಳುಭಟ್ಟ), ೪೨) ವೈತಾಳಿಕ (ರಾಜನನ್ನು ಬೆಳಗ್ಗೆ ಗಾಯನದ ಮೂಲಕ ಏಳಿಸುವವನು), ೪೩) ಪರಿಹಾಸಕ (ಹಾಸ್ಯಗಾರ), ೪೪) ಕಂಚುಕ (ಮನೆಯ ಆಡಳಿತದ ಮೇಲ್ವಿಚಾರಕ), ೪೫) ಕ್ಷೌರಿಕ, ೪೬) ರಜಕ, ೪೭) ಸೌಚಿಕ (ಬಟ್ಟೆ ಹೊಲಿಯುವವನು), ೫೦) ಪುರಪಾಲಕ (ಪುರದ ಅಧ್ಯಕ್ಷ), ೫೧) ವನಪಾಲಕ (ಉದ್ಯಾನವನದ ಮೇಲ್ವಿಚಾರಕ), ೫೨) ನರವೈದ್ಯ, ೫೩) ಗಜವೈದ್ಯ,

*(ಮುಂದುವರೆದಿದೆ...)*

ಎಪ್ಪತ್ತೆರಡು ಎಂಬ ವಾಚ್ಯಾರ್ಥವಿದ್ದರೂ ಅದು ಹೆಚ್ಚಿನ, ಬಹಳ ಎಂಬ ಅರ್ಥವನ್ನು ಸೂಚಿಸುವುದೆಂದು ಭಾವಿಸುತ್ತಾರೆ.[೧] ಬಾಹತ್ತರ ನಿಯೋಗಾಧಿಪತಿಗಳ ಉಲ್ಲೇಖ ಹೊಯ್ಸಳ,[೨] ಸೇವುಣ,[೩] ಕಲ್ಯಾಣಿ[೪] ಚಾಳುಕ್ಯರ ಶಾಸನಗಳಲ್ಲಿ ಕಂಡುಬರುತ್ತದೆ. ಬಾಹತ್ತರ ನಿಯೋಗವು ದೇವಾಲಯಗಳಲ್ಲೂ ಇದ್ದಂತೆ ತಿಳಿದುಬರುತ್ತದೆ.[೫] ಹೇರಳ ಘಟ್ಟದ ಒಂದು ಶಾಸನದಲ್ಲಿ ಚಿಕನೊಣಬೆ ನಾಯ್ಕನು ಚಳುಕಿಯ ವ್ರಿತಿಯನಪ್ರತಿಮನಾಗಿ ಆಳುತ್ತಿದ್ದಾಗ 'ತಂಮ ಮನೆಯ ಬಾಹತರ ನಿಯೋಗಾಧಿಪತಿ' ಎಂಬ ಮಾತು ಬರುತ್ತದೆ.[೬] ಇದರಿಂದ ಕೆಲವು ಅಧಿಕಾರಿಗಳ ವಿವಿಧ ಸೇವೆಗಳನ್ನು ನೋಡಿಕೊಳ್ಳುವ ಅಧಿಕಾರ ಅದಾಗಿರಬಹುದೆಂದು ಭಾವಿಸಬಹುದು. ಇವರನ್ನು ಕೆಲವು ಶಾಸನಗಳಲ್ಲಿ ನಿಯೋಗಿ[೭]ಗಳೆಂದು ಕರೆಯಲಾಗಿದೆ.

### ಭಂಡಾರಿ:

ಭಂಡಾರಿಯ ಹುದ್ದೆ ಬಹು ಜವಾಬ್ದಾರಿಯುತ ಅಧಿಕಾರಗಳಲ್ಲಿ ಒಂದಾಗಿದ್ದಿತು. ಬಸವಣ್ಣನವರು ಬಿಜ್ಜಳನಲ್ಲಿ ಭಂಡಾರಿಯಾಗಿದ್ದುದು ಪ್ರಸಿದ್ಧವಾಗಿದೆ. ಅವರು ಭಂಡಾರದ ಮುಖ್ಯಸ್ಥರಾಗಿದ್ದರು. ಅವರ ಹೆಸರಿನ ಜೊತೆ 'ದಂಡನಾಥ', 'ಮಂತ್ರಿ'ಯಂಥ ಅಧಿಕಾರ ಸೂಚಕ ಪದಗಳ ಬಳಕೆಯಾಗಿದೆ. ಸೈನ್ಯದ ವರಿಷ್ಠ ಅಧಿಕಾರಿಯಲ್ಲದವರಿಗೂ ಆ ರೀತಿಯ ಪದಗಳನ್ನು ಬಳಸುವುದು ಪದ್ಧತಿಯಾಗಿತ್ತು. ಅಲ್ಲದೆ ನಾಗರಿಕ ಅಧಿಕಾರಿಯೂ ಸೈನ್ಯ ಶಿಕ್ಷಣವನ್ನು ಪಡೆದಿರುತ್ತಿದ್ದನು. ತಕ್ಕ ಸಂದರ್ಭಗಳಲ್ಲಿ ರಾಜನಿಗೆ ಸಂಪೂರ್ಣವಾಗಿ ರಾಜ್ಯದ ಸುರಕ್ಷೆಯ ಬಗ್ಗೆ ಸಲಹೆ ಕೊಡಲು ಅದು ಅಗತ್ಯವೂ ಆಗಿದ್ದಿತು ಎಂದು ಪಿ.ಬಿ. ದೇಸಾಯಿ ಅವರು ಭಾವಿಸುತ್ತಾರೆ.[೮] ಕೆಲವು ಶಾಸನಗಳಲ್ಲಿ 'ಹಿರಿಯ ಮಾಣಿಕ್ಯ ಭಂಡಾರಿ'[೯] ಎಂಬ ಉಲ್ಲೇಖ ಬಂದಿದೆ. ಬಹುಮೌಲ್ಯದ ಮಾಣಿಕ್ಯದಂತಹ ವಸ್ತುಗಳ ಭಂಡಾರವನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಯನ್ನು ಇದು ಸೂಚಿಸುವಂತೆ ಕಾಣುತ್ತದೆ. ಹೊಯ್ಸಳ ನರಸಿಂಹನ ಪ್ರಧಾನರಲ್ಲೊಬ್ಬನಾಗಿದ್ದ ಭಂಡಾರಿ ಹುಳ್ಳ ಬಹು ಪ್ರಸಿದ್ಧ ವ್ಯಕ್ತಿ. ಅವನು ಶ್ರವಣಬೆಳಗೊಳದಲ್ಲಿ ಚತುರ್ವಿಂಶತಿ ಬಸದಿಯನ್ನು ಕಟ್ಟಿಸಿದ್ದಲ್ಲದೆ ಇನ್ನೂ

---

*(ಹಿಂದಿನ ಪುಟದಿಂದ)*

೫೪) ಅಶ್ವವೈದ್ಯ, ೫೫) ಪಶುವೈದ್ಯ, ೫೬) ಭೇರಿವಾದಕ, ೫೭) ಮುರಜವಾದಕ, ೫೮) ರೌಮಕ (ಉಪ್ಪು ತಯಾರಿಕೆಯ ಮೇಲ್ವಿಚಾರಕ), ೫೯) ಶಿಲಾಚ್ಛೇದಃ (ಶಿಲೆಯನ್ನು ಕತ್ತರಿಸುವವನು), ೬೦) ಕಾಂಸ್ಯಕಾರಕ (ಕಂಚುಗಾರ), ೬೧) ಕುಂಭಕಾರಕ (ಮಡಕೆ ಮಾಡುವವನು), ೬೨) ಚಿತ್ರಕಾರಕ, ೬೩) ವ್ಯವಹಾರಿಕ, ೬೪) ಮೃಗಯಾತ್ರಿಕ (ಬೇಟೆಗಾರ), ೬೫) ಪಕ್ಷಿಘೋಷಕ (ಪಕ್ಷಿಧಾಮವನ್ನು ನೋಡಿಕೊಳ್ಳುವವನು), ೬೬) ಫಣಿಹಾರಿ (ಪಡಿಹಾರಿ), ೬೭) ರಾಯಭಾರಕ (ರಾಯಭಾರಿ), ೬೮) ಉಗ್ರಾಣಾಧಿಕಾರಿ ೬೯) ವೇಶ್ಯಾಜನ, ೭೦) ಬಂಟು (ಕಾಲಾಳು), ೭೧) ಸ್ವರ್ಣಕಾರ (ಅಕ್ಕಸಾಲಿ), ೭೨) ಕಠಾರಿಕ (ಖಡ್ಗಧಾರಿ).

೧. J.D. M. Derrett : ಪೂರ್ವೋಕ್ತ ಪು. ೧೯೧.
   K. V.Ramesh : ಪೂರ್ವೋಕ್ತ, ಪು. ೨೪೮.
   ಎ.ವಿ. ನರಸಿಂಹಮೂರ್ತಿ : ಕರ್ನಾಟಕದ ಸೇವುಣರ ಇತಿಹಾಸ, ಪು. ೮೧.

೨. (ಮೈ) ಎಕ V ತಿ. ನರಸೀಪುರ ೯೧ ಕ್ರಿ.ಶ. ೧೨೮೧.

೩. ಎಇ XV ಬಾಗೇವಾಡಿ ೩ಬಿ ಕ್ರಿ.ಶ. ೧೧೮೯.

೪. ಕಇ V ಕೊಲ್ಲಾಪುರ ೨೫ ಕ್ರಿ.ಶ. ೧೧೩೯.

೫. K. A. Neelakanta Shastri : A History of South India ಪು. ೩೦೪.

೬. (ರೈ) ಎಕ VI ಕಡೂರು ೧೨೪ ಕ್ರಿ.ಶ. ೧೨೭೨(?)

೭. ಕಇ II ಅಕ್ಕಲಕೋಟೆ ೪೧ಎ ಕ್ರಿ.ಶ. ೧೨೫೫(?)

೮. P.B.Desai : Basaveshwara and His Times ಪು. ೧೮೦-೮೧.

೯. (ರೈ) ಎಕ VI ಕಡೂರು ೧೪೮ ಕ್ರಿ.ಶ. ೧೨೦೨.

ಅನೇಕ ದಾನಗಳನ್ನು ಮಾಡಿದ್ದಾನೆ.[೧] ಶಾಸನಗಳಲ್ಲಿ ಬರುವ ಹಿರಿಯ ಮಾಣಿಕ್ಯ ಭಂಡಾರದಧ್ಯಕ್ಷ.[೨] ಭಂಡಾರಿಯ ಕೈಕೆಳಗಿನ ಮೇಲ್ವಿಚಾರಕ ಅಧಿಕಾರಿಯನ್ನು ಸೂಚಿಸುವ ಹಾಗೆ ಕಾಣುತ್ತದೆ. ಅನೇಕ ಶಾಸನಗಳಲ್ಲಿ ಭಂಡಾರಿಗಳ ಉಲ್ಲೇಖ ಮತ್ತು ದಾನ ಕಾರ್ಯಗಳು ನಿರೂಪಣೆಗೊಂಡಿವೆ.[೩]

**ಪರಮವಿಶ್ವಾಸಿ:**

ಕೆಲವು ಅಧಿಕಾರಿಗಳ ವಿಶೇಷಣಗಳಲ್ಲಿ 'ಪರಮವಿಶ್ವಾಸಿ' ಎಂದು ಬರುತ್ತದೆ. ಉದಾಹರಣೆಗೆ 'ಶ್ರೀಮನ್ಮ ಹಾಪಸಾಯ್ತಂ ಪರಮವಿಶ್ವಾಸಿ ಹಿರಿಯಕಾಟಯ್ಯ'ನ ಉಲ್ಲೇಖ ಒಂದು ಶಾಸನದಲ್ಲಿ ಬರುತ್ತದೆ.[೪] ಯಾವುದಾದರೂ ಸಂದರ್ಭದಲ್ಲಿ ಆ ಅಧಿಕಾರಿ ತನ್ನ ವಿಶೇಷ ನಿಷ್ಠೆಯನ್ನು ಪ್ರಕಟಪಡಿಸಿ ರಾಜನ ನಂಬಿಕೆ, ವಿಶ್ವಾಸಗಳನ್ನು ಸ್ಥಿರಪಡಿಸಿಕೊಂಡನಂತರ ನೀಡಿದ ವಿಶೇಷಣ ಅದಾಗಿರುವ ಸಾಧ್ಯತೆ ಇದೆ. ಇವರು ರಾಜನ ಆಪ್ತಾಲೋಚಕರಾಗಿದ್ದರು.

**ಮನ್ನೆಯ:**

ರಾಜರು ನೀಡಿದ ಮಾನ್ಯದ ಭೂಪ್ರದೇಶದ ಅಧಿಕಾರವನ್ನು ಅನುಭವಿಸುತ್ತ ರಾಜನ ಬಗ್ಗೆ ತುಂಬ ನಿಷ್ಠಾವಂತರಾಗಿರುತ್ತಿದ್ದರು. ಎಡವರಿದೇವ ಎಂಬ ಮನ್ನೆಯನನ್ನು ಒಂದು ಶಾಸನ ಹೀಗೆ ಕೀರ್ತಿಸಿದೆ.

ನುಡಿದಡೆ ರಾಮಬಾಣಂ
ತೊಡರ್ದಡೆ ಭೀಮನಾರ್ತು ಕುಡುವೊಡೆ ಕರ್ಣಂ
ಪಡಿಯೆನಿಸಿ ನೆಗಟ್ದಿ ನಮ್ಮೀ
ಯೆಡವರಿದೇವಂಗೆ ಕುಚಿತ ಮನ್ನೆಯರ್ ದೊರೆಯೆ॥[೫].

ಎಡವರಿದೇವನ ಮಾತು ರಾಮಬಾಣದಂತೆ, ಹೋರಾಟದಲ್ಲಿ ಭೀಮನಂತೆ, ದಾನದಲ್ಲಿ ಕರ್ಣನಂತೆ. ಆ ಮೂರು ಜನಕ್ಕೆ ಪ್ರತಿಯಂತಿರುವ ಅವನಿಗೆ ಕುತ್ಸಿತ ಮನ್ನೆಯರು ಸಮವೆ ಎಂದು ಪ್ರಶ್ನಿಸಿಲಾಗಿದೆ. ಬಿಜ್ಜಳನು ಚಕ್ರವರ್ತಿಯಾದನಂತರ ಮನ್ನೆಯರಿಗೆ ಉಬ್ಬಸವನ್ನು ಉಂಟುಮಾಡಿದನೆಂದು, ಮಂಡಳೇಶ್ವರರಿಗೆ ಬೇರಿನಲ್ಲಿ ಬಿಸಿನೀರನ್ನು ಹೊಯ್ದನೆಂದು, ರಾಜರ ವಂಶಗಳನ್ನೇ ನಿರ್ಮೂಲ ಮಾಡಿದನೆಂದು ಒಂದು ಶಾಸನ ಹೇಳುತ್ತದೆ.[೬]

**ರಾಯಭಾರಿ:**

ದೇಶ-ವಿದೇಶಗಳ ರಾಜರು ರಾಯಭಾರಿಗಳನ್ನು ಕಳುಹಿಸುವ ಪದ್ಧತಿ ಬಹು ಪ್ರಾಚೀನ ಕಾಲದಿಂದಲೂ ನಡೆದು ಬರುತ್ತಿದೆ. ಎರಡನೆಯ ಬಲ್ಲಾಳನ ಕಾಲದ ಶಾಸನವೊಂದು ಸಿಂಹಳ, ಲಾಳ, ಗೌಳದ ರಾಯಭಾರಿಗಳು ಹೊಯ್ಸಳ ನಾರಸಿಂಹನ ಆಸ್ಥಾನದಲ್ಲಿದ್ದರೆಂದು ತಿಳಿಸುತ್ತದೆ.[೭] ರಾಯಭಾರಿಗಳಿಗಿದ್ದ ಸ್ಥಾನಮಾನಗಳ ಬಗ್ಗೆ ಮತ್ತು ಅವರ ಕರ್ತವ್ಯಗಳ ಬಗ್ಗೆ ಶಾಸನಗಳಿಂದ ಹೆಚ್ಚು ವಿಷಯ ತಿಳಿದುಬರುವಂತಿಲ್ಲ. ರಾಯಭಾರಿಗಳು ಉಭಯ ರಾಜ್ಯಗಳ ಸೌಹಾರ್ದ ಸಂಬಂಧಕ್ಕೆ ಮತ್ತು ಪರಸ್ಪರ ಸಹಕಾರಕ್ಕೆ ಸಹಾಯವನ್ನು ಮಾಡುತ್ತಿದ್ದರೆಂದು ಊಹಿಸಬಹುದು.

---

೧. (ಮೈ) ಎಕ II ಶ್ರವಣಬೆಳಗೊಳ ೪೭೬-೪೭೭ ಕ್ರಿ.ಶ. ೧೧೫೯.
೨. (ರೈ) ಎಕ V ಅರಸಿಕೆರೆ ೧೨೩ ಕ್ರಿ.ಶ. ೧೨೩೭.
೩. (ಮೈ) ಎಕ II ಶ್ರವಣಬೆಳಗೊಳ ೫೬೪?; (ರೈ) ಎಕ V ಅರಸಿಕೆರೆ ೮೮ ಕ್ರಿ.ಶ. ೧೧೮೪.
೪. (ರೈ) ಎಕ V ಅರಸಿಕೆರೆ ೧೫೦ ಕ್ರಿ.ಶ. ೧೧೯೫.
೫. (ರೈ) ಎಕ VII ಚನ್ನಗಿರಿ ೩೮ ಕ್ರಿ.ಶ. ೧೧೪೯.
೬. (ರೈ) ಎಕ XI ದಾವಣಗೆರೆ ೪೨ ಕ್ರಿ.ಶ. ೧೧೬೨.
೭. (ರೈ) ಎಕ VII ಚನ್ನಗಿರಿ ೭೨ ಕ್ರಿ.ಶ. ೧೨೨೦.

**ಪಟ್ಟಸಾಹಣಿ, ಕರಿತುರಗ ಸಾಹಣಿ ಇತ್ಯಾದಿ:**

ಸಾಹಣಿ ಉತ್ತರ ಪದವಾಗುಳ್ಳ ಕೆಲವು ಅಧಿಕಾರ ಸೂಚಕ ಹುದ್ದೆಗಳು ಆ ಕಾಲದಲ್ಲಿ ಇದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಕೆ.ವಿ. ರಮೇಶ್ ಅವರು ಸಾಹಣಿ ಪದವನ್ನು ಸಂಸ್ಕೃತದ 'ಸಾಧನಿಕ' ಪದದಿಂದ ನಿಷ್ಪತ್ತಿ ಮಾಡುತ್ತಾರೆ. ಕ್ರಿ.ಶ. ೧೦೫೮ರ ಒಂದು ಶಾಸನದ ಆಧಾರದಿಂದ ಅವರು ಯುದ್ಧ ಕುದುರೆಗಳನ್ನು ಅಭಿವೃದ್ಧಿಪಡಿಸುವ ಅಧಿಕಾರಿಯೆಂದು ಭಾವಿಸುತ್ತಾರೆ.[೧] ತೆಲುಗು ಶಾಸನಗಳಲ್ಲಿ ಬರುವ ಸಾಹಣಿಗೆ ಅಶ್ವದಳದ ನಾಯಕ ಎಂಬ ಅರ್ಥವನ್ನು ಕೊಡಲಾಗಿದೆ.[೨] ಪೇಯಿಯ ಎಂಬ ಸೇನಾಪತಿಯನ್ನು ಘೋಡೆಯರಾಯ, ಪಟ್ಟ ಸಾಹಣಾಧೀಶ ಎಂಬ ವಿಶೇಷಣಗಳಿಂದ ಮುತ್ತಗಿಯ ಶಾಸನ ಹೆಸರಿಸುತ್ತದೆ.[೩] ಸೇವುಣಬಿಲ್ಲಮನ ಉನ್ನತ ಅಧಿಕಾರಿಗಳಲ್ಲೊಬ್ಬನಾದ ಪೇಯಿಯ ಕುರಿತಾದ ವಿಶೇಷಣಗಳ ಬಗ್ಗೆ ಬರೆಯುತ್ತಾ ಶಾಸನ ಸಂಪಾದಕರಾದ ಎಲ್.ಡಿ. ಬಾರ್ನೆಟ್ ಅವರು ಅದು ಕುದುರೆಗಳ ಮೇಲಿನ ಅಧಿಕಾರಿಯನ್ನು ಸೂಚಿಸುವುದೆಂದು ಭಾವಿಸಿದ್ದಾರೆ.[೪] ಕೆಲವು ಶಾಸನಗಳಲ್ಲಿ 'ಕರಿ ತುರಗ ಸಾಹಣಿ' ಎಂಬ ಅಧಿಕಾರ ವಿಶೇಷಣ ಬರುತ್ತದೆ. ಬನವಸೆ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದ ರೇಚರಸನನ್ನು ಅನೇಕ ವಿಶೇಷಣಗಳ ಜೊತೆ 'ಕರಿ ತುರಗ ಪಟ್ಟ ಸಾಹಣಿ' ಎಂದೂ ಕರೆಯಲಾಗಿದೆ.[೫] ಇದೇ ರೀತಿ 'ಕರಿತುರಗ ಸಾಹಣಿ ಬಮ್ಮರ್ಣಯ್ಯ' ಎಂಬುವವನನ್ನು ಶಾಸನವೊಂದು ಹೆಸರಿಸುತ್ತದೆ.[೬] ಬಿ.ಆರ್. ಗೋಪಾಲ್ ಅವರು, ಆನೆ ಮತ್ತು ಕುದುರೆಗಳಿಗೆ ಶಿಕ್ಷಣ ಕೊಡುವ ಸೈನ್ಯ ಶಿಕ್ಷಣದ ಅಧಿಕಾರಿಯನ್ನು ಕರಿತುರಗ ಪಟ್ಟ ಸಾಹಣಿ ವಿಶೇಷಣ ಸೂಚಿಸುವುದೆಂದು ಭಾವಿಸುತ್ತಾರೆ.[೭]

ಪಾಂಡ್ಯರ ಶಾಸನಗಳಲ್ಲಿ ಆನೆಗಳಿಗೆ ಶಿಕ್ಷಣವನ್ನು ನೀಡುವ ಜವಾಬ್ದಾರಿಯನ್ನು ವಹಿಸಿಕೊಂಡ ಅಧಿಕಾರಿಯನ್ನು 'ಮಾತಂಗಾಧ್ಯಕ್ಷ' ಎಂದು ಕರೆಯುತ್ತಿದ್ದರು.[೮] ಕನ್ನಡ ಶಾಸನಗಳಲ್ಲಿ ಇದಕ್ಕೆ ಸಂವಾದಿಯಾಗಿ ಕುದುರೆಗಳಿಗೆ ಸಂಬಂಧಿಸಿದಂತೆ 'ಅಶ್ವಾಧ್ಯಕ್ಷದ ಹೆಗಡೆ' ಎಂಬ ಪದ ಬಳಕೆಯಾಗುವುದನ್ನು ಕಾಣುತ್ತೇವೆ.[೯]

ಮದ್ದೂರಿನ ಶಾಸನವೊಂದರಲ್ಲಿ 'ಶ್ರೀರಂಗದಣ್ಣಾಯಕರ ಪಟ್ಟ ಸಾಹಣಿ ಮಂಡಲ ಸಾಹಣಿ ಮಾಡಿಸಿದ ಭಾರವಡ್ಡಿಗೆ'[೧೦] ಎಂಬಲ್ಲಿ ಬರುವ 'ಮಂಡಲ ಸಾಹಣಿ' ಅಧಿಕಾರ ಸೂಚಕ ಪದವಾಗಿರುವಂತಿದೆ. ಶಾಸನದ ಇಂಗ್ಲಿಷ್ ಅನುವಾದದಲ್ಲಿ ಕುದುರೆಗಳ ಉಸ್ತುವಾರಿ ಮತ್ತು ಶಿಕ್ಷಣ ನೀಡುವವನು ಎಂದು ಹೇಳಲಾಗಿದೆ. ಕೆ.ವಿ. ರಮೇಶ್ ಅವರು ಹೊಯ್ಸಳ ಮತ್ತು ವಿಜಯನಗರ ಕಾಲದ ತುಳುನಾಡಿನ ಶಾಸನಗಳಲ್ಲಿ ಸಾಹಣಿ ಕೇವಲ ಕುಲನಾಮವಾಗಿ ಬಳಕೆಯಾಗಿದೆ ಎಂದಿದ್ದಾರೆ.[೧೧] ಕರಿ ತುರಗ ಪಟ್ಟ ಸಾಹಣಿಗಳ ಕೆಳಗೆ ಕುದುರೆಗಳನ್ನು ಮತ್ತು ಆನೆಗಳನ್ನು ನೋಡಿಕೊಳ್ಳುವವರು ಇರುತ್ತಿದ್ದರು. ಅನೇಕ ಶಾಸನಗಳಲ್ಲಿ

---

೧. K.V. Ramesh : ಪೂರ್ವೋಕ್ತ ಪು. ೨೫೧.
೨. ಇಗ್ಲಾಲಿಪ್ರ, ಪು. ೩೧೧.
೩. ಎಇ XV ಬಾಗೇವಾಡಿ ೩೬ ಕ್ರಿ.ಶ. ೧೧೮೯.
೪. ಎಇ XV; ಪು. ೬೮.
೫. ಎಸ್‌ಐಐ XVIII ಹಾವೇರಿ ೧೫೨ ಕ್ರಿ.ಶ. ೧೧೪೯.
೬. ಕಇ IV ಬ್ಯಾಡಗಿ ೧೧ ಕ್ರಿ.ಶ. ೧೨ ಶಮಾ.
೭. B. R.Gopal : ಪೂರ್ವೋಕ್ತ ಪು. ೩೯೫.
೮. K.Neelakanta Shastri : Culture and History of Tamils ಪು. ೧೨೫.
೯. (ಮೈ) ಎಕ I ಮಡಿಕೇರಿ ೭ ಕ್ರಿ.ಶ. ೧೨ ಶಮಾ; (ಮೈ) ಎಕ II ಶ್ರವಣಬೆಳಗೊಳ ೫೭೨ ಕ್ರಿ.ಶ. ೧೨ ಶಮಾ.
೧೦. (ಮೈ) ಎಕ IV ಯಳಂದೂರು ೫೬ ಕ್ರಿ.ಶ. ೧೨೪೩, ಭಾರವಡ್ಡಿಗೆ- ದ್ವಾರಪಟ್ಟಿಕಾ(=ಬಾಗಿಲವಾಡ).
೧೧. ತುಳುನಾಡಿನ ಇತಿಹಾಸ, ಪು. ೬೮-೬೯.

ಮಾವುತರ ಉಲ್ಲೇಖಗಳು ಬರುತ್ತವೆ. ರಾಜರ ಪಟ್ಟದಾನೆಗಳನ್ನು ಮತ್ತು ಗಜಸೈನ್ಯದ ಭಾಗವಾದ ಆನೆಗಳನ್ನು ನೋಡಿಕೊಳ್ಳುತ್ತಿದ್ದವರು ಮಾವುತರು. ಮಾವಂತರಲ್ಲಿ ಕೆಲವರು 'ಪರಮ ವಿಶ್ವಾಸಿ'ಗಳೂ ಆಗಿರುತ್ತಿದ್ದರು. ಅತ್ಯಂತ ಬಲಿಷ್ಠ ಪ್ರಾಣಿಯಾದ ಆನೆಯನ್ನು ಪಳಗಿಸಿ ಅದನ್ನು ನಿಯಂತ್ರಿಸುವ ಕಾರ್ಯವನ್ನು ಅವರು ಮಾಡಬೇಕಿತ್ತು. ಬಲ್ಲಾಳನ ಪರಮವಿಶ್ವಾಸಿ ಹಿರಿಯ ಕಾಟಯ್ಯ ಮಾವಂತ, ಆತನ ತಮ್ಮ ಸೋಮೆಯ ಮಾವಂತ, ಅವರ ಅಳಿಯ ಗುಮ್ಮೆಯ ಮಾವಂತ, ಸೋಮೆಯ ಮಾವಂತರು ಸೇರಿ ಮುದವಡಿಯಲ್ಲಿ ಊರ ಕೆರೆಯನ್ನು ಕಟ್ಟಿಸಿ ಕೆಲವು ದಾನಗಳನ್ನೂ ಮಾಡಿರುವುದುಂಟು.[೧] ಇದೇ ರೀತಿ ಬಲ್ಲಾಳನ ಇನ್ನೊಬ್ಬ ಮಾವಂತ ಹೆಮ್ಮೆಯ ಮಾವಂತ, ಜಹುನೆಯ ಮಾವಂತ, ಕೇತೆಯ ಮಾವಂತ, ದುಗ್ಗೆಯ ಮಾವಂತ, ಬೂಚೆಯ ಮಾವಂತ, ಜವನೆಯ ಮಾವಂತ, ಕೇತೆಯ ಮಾವಂತ ಕೋಳಿಗುಂದದಲ್ಲಿ ಕೇತೇಶ್ವರ ದೇವಾಲಯ ಕಟ್ಟಿಸಿದ ವಿಷಯ ತಿಳಿದುಬರುತ್ತದೆ.[೨]

**ಕಮ್ಮಟದ ಅಧಿಕಾರಿ:**

ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು ಕಮ್ಮಟಗಳೆಂದು ಕರೆಯುತ್ತಿದ್ದರು.[೩] ಕಮ್ಮಟದ ಅಧಿಕಾರಿಯನ್ನು ಕಮ್ಮಟದ ಒಡೆಯನೆಂದು ಕರೆಯುತ್ತಿದ್ದರು. ಸಾಮಾನ್ಯವಾಗಿ ಕಮ್ಮಟದ ಅಧಿಕಾರಿಗಳಿಗೆ ಇತರ ಕೆಲವು ವರಿಷ್ಠ ಅಧಿಕಾರ ಸೂಚಕ ವಿಶೇಷಣಗಳು ಇರುವುದುಂಟು; ಅಂದರೆ ಇತರ ಕೆಲವು ಅಧಿಕಾರದ ಜೊತೆ ಕೆಲವರಿಗೆ ಕಮ್ಮಟದ ಮೇಲಿನ ಅಧಿಕಾರವೂ ಇರುತ್ತಿತ್ತು. ಕುಂಬೇನಹಳ್ಳಿಯ ಒಂದು ಶಾಸನದಲ್ಲಿ ಶ್ರೀಮನ್ಮಹಾಪ್ರಧಾನಂ ಸರ್ವ್ವಾಧಿಕಾರಿ ತಂತ್ರಾಧಿಷ್ಠಾಯಕಂ ಕಮ್ಮಟದ ಮಾಚಯ್ಯನ ಉಲ್ಲೇಖ ಬರುತ್ತದೆ.[೪] ಶಾಸನಗಳಲ್ಲಿ ಆಣಿಕಾರ (=ಚಿನ್ನದ ಪರೀಕ್ಷಕ), ಕಮ್ಮಾಟದಕ್ಕಸಾಲಿಗಳಂತಹ ಕಮ್ಮಟದ ಸಹಾಯಕರು ಇರುವುದು ಉಲ್ಲೇಖಗೊಂಡಿದೆ. ಏಚಿಶೆಟ್ಟಿ ಎಂಬುವವನನ್ನು ರಾಜನು ಅಚ್ಚಿನ ಕಾರ್ಯಕ್ಕೆ ನೇಮಿಸಿದನು; ಮುಂದೆ ಅವನಿಗೆ 'ಹೇಮ ಕುಪ್ಪಟಿ' (ಕುಮ್ಮುಟಿ - ಕಬ್ಬಿಣದ ಒಲೆ) =ಬಂಗಾರದ ನಾಣ್ಯಗಳನ್ನು ಟಂಕಿಸುವವನು ಎಂದೇ ಹೆಸರಾಯಿತು.[೫] ಅನೇಕ ಕಮ್ಮಟದ ಅಧಿಕಾರಿಗಳು ದಾನಧರ್ಮಗಳನ್ನು ಮಾಡಿರುತ್ತಾರೆ.[೬]

'ಜಲಗಿನ ಅಧಿಕಾರಿ'[೭] ಸೋವರಸನ ಉಲ್ಲೇಖ ಶಾಸನವೊಂದರಲ್ಲಿ ಬರುತ್ತದೆ. ಈತನು, ನದಿಯ ಮರಳು ಮೊದಲಾದವುಗಳಲ್ಲಿ ಬೆರೆತ ಚಿನ್ನದ ಕಣಗಳನ್ನು ಶೋಧಿಸಿ ತೆಗೆಯುವ ಜನರ ಮೇಲಿನ ಅಧಿಕಾರಿ.

ಅನೇಕ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಹಡವಳ (=ಪಡೆವಳ) ಸೈನ್ಯದ ಒಂದು ತುಕಡಿಯ ಮುಖ್ಯಸ್ಥ. ಹಡವಳರು ದಂಡನಾಯಕ ಅಥವಾ ಸೇನಾಧಿಪತಿಯ ಅಧೀನದಲ್ಲಿ ಇರುತ್ತಿದ್ದರು. ಇವರು ಅನೇಕ ಯುದ್ಧಗಳಲ್ಲಿ ಹೋರಾಡಿರುವ ವಿಷಯ ಶಾಸನಗಳಲ್ಲಿ ನಿರೂಪಣೆಗೊಂಡಿದೆ.[೧೦]

---

೧. (ರೈ) ಎಕ V ಅರಸಿಕೆರೆ ೧೫೦ ಕ್ರಿ.ಶ. ೧೧೯೫.
೨. (ರೈ) ಎಕ V ಅರಸಿಕೆರೆ ೪ ಕ್ರಿ.ಶ. ೧೧೯೭(?)
೩. ಎಸ್ಐಐ IX(i) ಆದೋನಿ ೨೯೫ ಕ್ರಿ.ಶ. ೧೧೭೨.
೪. (ಮೈ) ಎಕ II ಶ್ರವಣಬೆಳಗೊಳ ೫೭೨ ಕ್ರಿ.ಶ. ೧೨ ಶಮಾ.
೫. ಎಸ್ಐಐ XV ಗದಗು ೬೨ ಕ್ರಿ.ಶ. ೧೧೯೪.
೬. ಎಸ್ಐಐ IX(i) ಆದೋನಿ ೨೯೫ ಕ್ರಿ.ಶ. ೧೧೭೨.
೭. ಎಸ್ಐಐ XVIII ನರಗುಂದಪೇಟೆ ೧೬೦ ಕ್ರಿ.ಶ. ೧೨ ಶಮಾ.
೮. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.
೯. (ರೈ) ಎಕ VII ಶಿಕಾರಿಪುರ ೧೬೪ ಕ್ರಿ.ಶ. ೧೧೪೯.
೧೦. (ಮೈ) ಎಕ VI ಕೃಷ್ಣರಾಜಪೇಟೆ ೪೩ ಕ್ರಿ.ಶ. ೧೨ ಶಮಾ; (ರೈ) ಎಕ VII ಶಿವಮೊಗ್ಗ ೫ ಕ್ರಿ.ಶ. ೧೨೧೮; (ರೈ) ಎಕ VIII ಸೊರಬ ೪೧೬ ಕ್ರಿ.ಶ. ೧೧೫೯.

**ರಾಜ್ಯಾಧ್ಯಕ್ಷ:**

ರಾಜ್ಯಾಧ್ಯಕ್ಷದ ಹೆಗ್ಗಡೆಯ ಕರ್ತವ್ಯ ರಾಜನ ವೈಯಕ್ತಿಕವಾದ ದಾನ, ದೇವಾಲಯದ ವಿಶೇಷ ಪೂಜೆ ಮುಂತಾದವುಗಳನ್ನು ನಿರ್ವಹಿಸುವುದಾಗಿದ್ದಿತು. ಇದರ ಜೊತೆಗೆ ರಾಜನು ನಡೆಸಬೇಕಾದ ಸಭೆಗಳು ಮತ್ತು ಸಂದರ್ಶಿಸಬೇಕಾದ ಸ್ಥಳಗಳು ಮುಂತಾದವುಗಳ ಬಗ್ಗೆ ಪೂರ್ವಭಾವಿಯಾಗಿ ರಾಜನಿಗೆ ತಿಳಿಸುವುದಾಗಿದ್ದಿತು. ಇವನನ್ನು ರಾಜನ ಆಪ್ತ ಕಾರ್ಯದರ್ಶಿ ಇದ್ದ ಹಾಗೆ ಎಂದು ಭಾವಿಸಬಹುದು. ತುಂಬಾ ತ್ರುಟಿತವಾದ ಶಾಸನ ಒಂದರಲ್ಲಿ 'ಬಲ್ಲಾಳ ದೇವನ ಬೆಸದಿಂ ರಾಜ್ಯಾಧ್ಯಕ್ಷದ ಹೆಗ್ಗಡೆ ರೇವಣ್ಣ ಹೆಗಡೆ ಕೇತಮಲ್ಲಂಗಳು ಅರಸಿಯಕೆಱೆಯ ಮಹಾಜನಂಗಳು ಸಮಸ್ತ ಪ್ರಜೆಗಾಉಂಡುರ್ಸ್ವಹಿತ...' ಒಂದು ದಾನ ಕಾರ್ಯ ನಡೆಸಿದ ವಿಷಯ ನಿರೂಪಿತವಾಗಿದೆ.[೧] ಇದು ಬಲ್ಲಾಳನಿಗೆ ಪಟ್ಟಾಭಿಷೇಕವಾದಾಗ ನಡೆದ ದಾನವಾಗಿದೆ. ರಾಜನಿಗೆ ಸಂಬಂಧಿಸಿದ ದಾನ ದತ್ತಿಗಳು ರಾಜ್ಯಾಧ್ಯಕ್ಷನ ಮುಖಾಂತರ ಅಥವಾ ಅವನ ಸಮಕ್ಷದಲ್ಲಿ ನಡೆಯುತ್ತಿದ್ದವು.

**ರಾಜ ಶ್ರೇಷ್ಠಿ:**

ರಾಜ ಶ್ರೇಷ್ಠಿಗಳು ರಾಜನ ವೈಯಕ್ತಿಕ ಮತ್ತು ಆಪ್ತ ಪರಿವಾರದ ಅಗತ್ಯ ಅಮೂಲ್ಯ ವಸ್ತುಗಳನ್ನು ಪೂರೈಸುತ್ತಿದ್ದ ವ್ಯಾಪಾರಿಗಳಾಗಿದ್ದರು. ಅವರು ದೇಶ-ವಿದೇಶಗಳಿಗೆ ಹೋದಾಗ ಅಲ್ಲಿ ದೊರೆತ ಅಪರೂಪದ, ಅಮೂಲ್ಯ ವಸ್ತುಗಳನ್ನು ತಂದು ರಾಜನಿಗೆ ನೀಡುತ್ತಿದ್ದರು. ಮುತ್ತಗೆಯ ಶಾಸನದಲ್ಲಿ ರಾಜಶ್ರೇಷ್ಠಿ ಸೋವಿಸೆಟ್ಟಿ ಎಂಬ ವ್ಯಾಪಾರಿ ಪಟ್ಟ ಸಾಹಣಿ ಬ್ರಹ್ಮದೇವನಲ್ಲಿಯೂ ಮತ್ತು ಉರ್ವೀಪತಿ (ಕಲ್ಯಾಣ ಚಾಳುಕ್ಯ ಜಗದೇಕಮಲ್ಲನಿಗೂ) ಸರ್ವರತ್ನ ಸಂವೃದ್ಧಿಗಾಗಿ ಸತತವಾಗಿ ವ್ಯಾಪಾರ ಮಾಡುತ್ತಿದ್ದನೆಂದು ನಿರೂಪಿತವಾಗಿದೆ.[೨] ಹೊಯ್ಸಳ ಬಲ್ಲಾಳನ ಮಹಾ ವಡ್ಡವ್ಯವಹಾರಿಯಾಗಿದ್ದ ಕಮ್ಮಟದ ಮಲ್ಲಿಯೋಗಪ್ಪ ರಾಜಶ್ರೇಷ್ಠಿಯಾಗಿದ್ದನು.[೩] ಅನೇಕ ರಾಯಶ್ರೇಷ್ಠಿಗಳು ರಾಜರಲ್ಲಿ ಉನ್ನತ ಅಧಿಕಾರಿಗಳಾಗಿಯೂ ಸೇವೆ ಸಲ್ಲಿಸುತ್ತಿದ್ದುದುಂಟು. ಯಾದವ ಸಿಂಘಣನಲ್ಲಿ ಹೊನ್ನಿಬೊಮ್ಮಿಸೆಟ್ಟಿ ಸರ್ವಾಧಿಕಾರಿ, ಮಂತ್ರಿ ಶಿಖಾಮಣಿಯಾಗಿದ್ದು ಅವನು ರಾಯಶ್ರೇಷ್ಠಿಯೂ ಆಗಿದ್ದನು.[೪] ಎಲ್ಲ ವ್ಯಾಪಾರಿಗಳೂ ರಾಯಶ್ರೇಷ್ಠಿಗಳಾಗುತ್ತಿರಲಿಲ್ಲ. ರಾಜ ಯಾರನ್ನು ರಾಯಶ್ರೇಷ್ಠಿಯೆಂದು ಗುರುತಿಸಿ ಆ ಪದವಿ(?)ಯನ್ನು ನೀಡುತ್ತಿದ್ದನೊ ಅವರು ಮಾತ್ರ ರಾಯಶ್ರೇಷ್ಠಿಯರೆಂದು ಪರಿಗಣಿತರಾಗುತ್ತಿದ್ದರು.

**ಮನೆಯ ಪ್ರಧಾನ:**

ರಾಜನ ಅಥವಾ ಪ್ರಧಾನನಂತಹ ಉನ್ನತ ಅಧಿಕಾರಿಗಳ ಮನೆಯ ರಕ್ಷಣಾ ಕಾರ್ಯವನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿ. ಇವನ ಸಹಾಯಕ್ಕಾಗಿ ಅನೇಕ ಭಟರು ಇರುತ್ತಿದ್ದರು. ಹೊಯ್ಸಳ ಬಲ್ಲಾಳ ದೇವರ ಮನೆಯ ಪ್ರಧಾನ ಬೀರೆಯ ದಂಣಾಯಕರ ಬಲುಮನುಷ್ಯ ಚಿಣ್ಣೆಯ ನಾಯಕ... ಹೋರಾಡಿ ಮಡಿದ ವಿಷಯವನ್ನು ಒಂದು ಶಾಸನ ಹೇಳುತ್ತದೆ.[೫] ಬೀರೆಯ ನಾಂಯಕ

---

೧. (ರೈ) ಎಕ V ಅರಸಿಕೆರೆ ೭೧ ಕ್ರಿ.ಶ. ೧೧೭೩.

೨. ಇನಾಕ ಅಂಡ್ ಕೊ. ಬಾಗೇವಾಡಿ ೯ ಕ್ರಿ.ಶ. ೧೧೪೭.

೩. (ರೈ) ಎಕ XI ಚಿತ್ರದುರ್ಗ ೨೯ ಕ್ರಿ.ಶ. ೧೨೧೪(?)

೪. ಕಇ VI ಹಿರೇಕೆರೂರು ೪೩ ಕ್ರಿ.ಶ. ೧೨೩೮.

೫. ಎಂಎಆರ್ ೧೯೪೩ ಬೇಲೂರು ೮ ಕ್ರಿ.ಶ. ೧೨೯೩.

ಮೂರನೆಯ ನರಸಿಂಹನಿಗೂ ಮನೆಯ ಪ್ರಧಾನನಾಗಿ ಸೇವೆ ಸಲ್ಲಿಸಿದಂತೆ ಕಂಡುಬರುತ್ತದೆ.[೧] ಮನೆಯ ಪ್ರಧಾನಿಯ ಅಧಿಕಾರವನ್ನೇ ಕೆಲವು ಶಾಸನಗಳಲ್ಲಿ 'ಮನೆ ಅಧಿಕಾರಿ' ಎಂದು ಕರೆದಿರುವುದು ಕಂಡುಬರುತ್ತದೆ.[೨]

**ಮನೆವೆಗ್ಗಡೆ:**

ರಾಜರ ಅಥವಾ ಅಧಿಕಾರಿಗಳ, ಶ್ರೀಮಂತರ ಗೃಹಕೃತ್ಯಗಳನ್ನು ನಿರ್ವಹಿಸುತ್ತಿದ್ದ ಕಿರಿಯ ಅಧಿಕಾರಿ. ಈತನು ಮನೆಯ ಅಗತ್ಯ ವಸ್ತುಗಳ ತರಿಸುವಿಕೆ, ಪೀಠೋಪಕರಣಗಳ ಸುವ್ಯವಸ್ಥೆ ಮುಂತಾದುವನ್ನು ನೋಡಿಕೊಳ್ಳುತ್ತಿದ್ದನೆಂದು ಭಾವಿಸಬಹುದು. ಹಿರಿಯ ಮನೆವೆಗ್ಗಡೆ ಚಂದ್ರಮೌಳಿಯಣ್ಣನು ಬಲ್ಲಾಳನಿಗೆ ಪ್ರಾರ್ಥಿಸಿಕೊಂಡು ಸಿದ್ಧಾಯದಲ್ಲಿ ಸ್ವಲ್ಪ ಕಡಮೆ ಮಾಡಿಸಿದ ವಿಷಯ ಶಾಸನವೊಂದರಲ್ಲಿ ನಿರೂಪಿತವಾಗಿದೆ.[೩] ಮನೆವೆಗ್ಗಡೆ ಎಂಬ ಪದವಿಯ ಹೆಸರು ಅಂತಃಪುರಾಧ್ಯಕ್ಷ ಅಥವಾ ಗೃಹಮಹತ್ತರ ಎಂಬರ್ಥದಲ್ಲಿ ಬರುತ್ತದೆಂದು ಎಂ. ಚಿದಾನಂದ ಮೂರ್ತಿಯವರು ತಿಳಿಸಿದ್ದಾರೆ.[೪] ಸಾಮಂತರ ಗೃಹಕೃತ್ಯಗಳನ್ನು ನೋಡಿಕೊಳ್ಳುವುದಕ್ಕೂ ಇಂಥ ಅಧಿಕಾರಿಗಳಿರುತ್ತಿದ್ದರೆಂದು ಬಿ.ಆರ್. ಗೋಪಾಲ್ ಅವರು ತಿಳಿಸುತ್ತಾರೆ.[೫]

**ಅಂತಃಪುರಾಧ್ಯಕ್ಷ:**

ರಾಜರಿಗೆ ಅನೇಕ ರಾಣಿಯರಿರುತ್ತಿದ್ದರು. ಬೇಲೂರಿನ ಒಂದು ಶಾಸನ ಹೊಯ್ಸಳ ನರಸಿಂಹನಿಗೆ ೩೮೪ ರಾಣಿಯರಿದ್ದರೆಂದು ತಿಳಿಸುತ್ತದೆ.[೬] ರಾಜರಿಗೆ ಸುಮಾರು ೫೦೦ರಷ್ಟು ರಾಣಿಯರಿದ್ದರೆಂದು ವಿದೇಶಿ ಪ್ರವಾಸಿಗರೂ ಅಭಿಪ್ರಾಯಪಟ್ಟಿದ್ದಾರೆ.[೭] ಇಷ್ಟೊಂದು ದೊಡ್ಡ ಅಂತಃಪುರಗಳ ನಿರ್ವಹಣೆ ಬಹುದೊಡ್ಡ ಕಾರ್ಯವೇ ಆಗಿದ್ದಿತು. ಅಂತಃಪುರಾಧ್ಯಕ್ಷ ಅಂತಃಪುರಕ್ಕೆ ಸಂಬಂಧಿಸಿದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿ. ಬಿಜ್ಜಳನ ಆಳ್ವಿಕೆಯ ಶಾಸನವೊಂದರಲ್ಲಿ ಅಂತಃಪುರಾಧ್ಯಕ್ಷ ರಾಮಯ್ಯ ದಂಡನಾಯಕನ ಉಲ್ಲೇಖ ಬರುತ್ತದೆ.[೮]

ಅಂತಃಪುರವೆಗ್ಗಡೆಯ ಉಲ್ಲೇಖ ಕೆಲವು ಶಾಸನಗಳಲ್ಲಿ ಕಂಡುಬರುತ್ತದೆ. ಈ ಅಧಿಕಾರಿ ಅಂತಃಪುರಾಧ್ಯಕ್ಷನ ಅಧೀನದಲ್ಲಿದ್ದು ಮನೆವೆಗ್ಗಡೆಗೆ ಸಮಾನನಾಗಿರುವಂತಿದೆ. ಅಂತಃಪುರವೆಗ್ಗಡೆಯ ಕರ್ತವ್ಯ ಅಂತಃಪುರದ ಒಳಾಡಳಿತಕ್ಕೆ ಸಂಬಂಧಿಸಿದ ಮೇಲ್ವಿಚಾರಣೆಯಾಗಿತ್ತು[೯]. ಅಂತಃಪುರದ ಹೆಗ್ಗಡೆಗೆ ಕೆಲವು ಅನ್ಯ ಕರ್ತವ್ಯಗಳೂ ಇರುತ್ತಿದ್ದವು.

**ತಂತ್ರಪಾಲ, ತಂತ್ರದ ಹೆಗ್ಗಡೆ:**

ತಂತ್ರ ಪದಕ್ಕೆ ಅನೇಕ ಅರ್ಥಗಳಿರುವುದಾದರೂ ಈ ಅಧಿಕಾರಗಳಿಗೆ ಸಂಬಂಧಿಸಿದ ಹಾಗೆ ಉಪಾಯ, ಹಂಚಿಕೆ ಎನ್ನುವುದು ಹೆಚ್ಚು ಹತ್ತಿರವಾಗಿರುವಂತಿದೆ. ಸ್ವರಾಜ್ಯದ ಮತ್ತು ಪರರಾಜ್ಯದ ರಹಸ್ಯ ಚಟುವಟಿಕೆಗಳ ಮೇಲೆ ಸದಾ ಕಣ್ಣಿಟ್ಟು

---

೧. (ರೈ) ಎಕ V ಅರಸಿಕೆರೆ ೮,೯,೧೦ ಕ್ರಿ.ಶ. ೧೨,೧೩ ಶಮಾ.

೨. ಎಸ್‌ಐಐ XX ಹಾನಗಲ್ಲು ೩೩೦ ಕ್ರಿ.ಶ. ೧೨೭೮; ಎಸ್‌ಐಐ XVIII ರಾಣೆಬೆನ್ನೂರು ೩೯೮ ಕ್ರಿ.ಶ. ೧೩ ಶಮಾ.

೩. (ರೈ) ಎಕ V ಅರಸಿಕೆರೆ ೧೨೭ ಕ್ರಿ.ಶ. ೧೧೮೫.

೪. ಎಂ. ಚಿದಾನಂದಮೂರ್ತಿ : ಸಂಶೋಧನ ತರಂಗ, ೨ ಪು. ೨೦೯.

೫. B. R. Gopal : ಪೂರ್ವೋಕ್ತ ಪು. ೩೯೪.

೬. (ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೧.

೭. ಪ್ರವಾಸಿ ಕಂಡ ಇಂಡಿಯಾ-೨, ಪು. ೨೬ ಮಾರ್ಕೊಪೋಲೋ ಕ್ರಿ.ಶ. ೧೨೯೩.

೮. ಎಸ್‌ಐಐ XX ಸಿಂದಗಿ ೧೪೦ ಕ್ರಿ.ಶ. ೧೧೬೪.

೯. (ರೈ) ಎಕ VII ಶಿಕಾರಿಪುರ ೧೪೪ ಕ್ರಿ.ಶ. ೧೧೮೧.

ರಹಸ್ಯ ಮಾಹಿತಿಗಳನ್ನು ಚಾರರಂತಹ ಕೆಳಗಿನ ಅಧಿಕಾರಿಗಳಿಂದ ಸಂಗ್ರಹಿಸುತ್ತಿದ್ದರೆಂದು ಭಾವಿಸಬಹುದು. ಒಂದನೆಯ ನರಸಿಂಹನ ತಂತ್ರದ ಹೆಗ್ಗಡೆಯಾಗಿದ್ದ ಗೋವಿಂದನೆಂಬುವವನನ್ನು ಶಾಸನವೊಂದು ಹೀಗೆ ಕೀರ್ತಿಸುತ್ತದೆ.[೧] 'ತಂತ್ರದ ಹೆಗ್ಗಡೆ ಮತ್ತಂ ತಂತ್ರಾಳೋಚನನೆನಿಪಂ ತನ್ನಮನಿತು ಮನೋರ್ವ್ವನೆ ಜಂತ್ರದ ಕೀಲಂತೆ ನಿಂದು ನಿಲಿಪಲು ನೆಱೆದಂ' ತಂತ್ರದ ಹೆಗ್ಗಡೆಯಾದ ಅವನು ಸದಾ ತಂತ್ರಾಲೋಚನೆಯಲ್ಲಿ ತೊಡಗಿರುವವನೆಂದೂ ಯಂತ್ರದ ಕೀಲಿನಂತೆ ಒಂಟಿಯಾಗಿ ಕಾರ್ಯ ನಿರ್ವಹಿಸಬಲ್ಲನೆಂದು ಹೇಳುತ್ತದೆ. ತಂತ್ರಪಾಳ್[೨] (=ಸಂ. ತಂತ್ರಪಾಲ) ನೆಂಬ ಅಧಿಕಾರಿಯ ಉಲ್ಲೇಖ ಕೆಲವು ಶಾಸನಗಳಲ್ಲಿ ಬರುತ್ತದೆ. ತಂತ್ರಪಾಲ ಪದವನ್ನು ಶಾಸನ ಸಂಪಾದಕರು 'ಕಾರ್ಯದರ್ಶಿ ಅಥವಾ ರಹಸ್ಯಗಳ ಪಾಲಕ'ನೆಂದು ಅನುವಾದಿಸಿರುವುದನ್ನು ಎಂ. ಚಿದಾನಂದ ಮೂರ್ತಿಯವರು[೩] ಅಷ್ಟಾಗಿ ಒಪ್ಪಿದಂತೆ ಕಾಣುವುದಿಲ್ಲ. ತಂತ್ರಪಾಳರ ಮೇಲೆ ತಂತ್ರಪಾಳರಧಿಷ್ಠಾಯಕನಿರುತ್ತಿದ್ದನು. ತಂತ್ರಪಾಲ, ತಂತ್ರದ ಹೆಗ್ಗಡೆ ಮತ್ತು ತಂತ್ರಪಾಳರಧಿಷ್ಠಾಯಕರ ಕರ್ತವ್ಯಗಳ ನಿರ್ದಿಷ್ಟ ಕಾರ್ಯವ್ಯಾಪ್ತಿ ಶಾಸನಗಳಿಂದ ತಿಳಿದುಬರುವಂತಿಲ್ಲ.

**ಸೆಜ್ಜೆವಳ:**

ರಾಜನ ಹಿರಿಯ ಅಧಿಕಾರಿಗಳ ಮಲಗುವ ಕೋಣೆಯ ರಕ್ಷಣೆಯ ಜವಾಬ್ದಾರಿ ಹೊತ್ತ ಅಧಿಕಾರಿ. ಸೆಜ್ಜೆ (ಸಂ. ಶಯ್ಯೆ) ಪದಕ್ಕೆ 'ವಳ' (ವ್ಯಕ್ತಿ ಸೂಚಕ) ಪದ ಸೇರಿದೆ. ಹೆಮ್ಮಾಡಿದೇವರಸನಿಗೆ ಇದ್ದ ಹಲವಾರು ವಿಶೇಷಣಗಳಲ್ಲಿ 'ಸೆಜೆವಳ ಕುವರ ನಾರಾಯಣ'ನೂ ಒಂದಾಗಿದೆ.[೪] ಅಂತಃಪುರಗಳಲ್ಲಿ ಮಲಗುವ ಕೋಣೆಗಳ ರಕ್ಷಣೆಗೆ 'ಸೆಜ್ಜವಳ್ತಿ'ಯರು ಇರುತ್ತಿದ್ದರು[೫].

**ಚತ್ರಾಧಿಕಾರಿ:**

ದೇವಾಲಯಗಳಿಗೆ ಹೊಂದಿಕೊಂಡಂತೆ ಮಠಗಳು ಇರುತ್ತಿದ್ದಂತೆ ಚತ್ರಗಳೂ (ಸಂ. ಸತ್ರ) ಇರುತ್ತಿದ್ದವು. ವಿದ್ಯಾರ್ಥಿಗಳಿಗೆ, ಯತಿಗಳಿಗೆ, ಪ್ರವಾಸಿಗರಿಗೆ ಇವುಗಳಿಂದ ಉಪಯೋಗವಾಗುತ್ತಿದ್ದಿತು. ಅನೇಕ ಶಾಸನಗಳಲ್ಲಿ ಚತ್ರಗಳನ್ನು ನಡೆಸಲು ದಾನಗಳನ್ನು ನೀಡಿರುವುದು ಕಂಡುಬರುತ್ತದೆ.[೬] ಚತ್ರದ ವ್ಯವಸ್ಥೆಯನ್ನು ನೋಡಿಕೊಳ್ಳಲು ಚತ್ರಾಧಿಕಾರಿ ಇರುತ್ತಿದ್ದನು. ಸುರಿಗೆಯ ನಾಗಿದೇವಣ್ಣನ ವಿಶೇಷಣಗಳಲ್ಲಿ ಚತ್ರಾಧಿಕಾರಿಯೂ ಒಂದಾಗಿದೆ.[೭]

**ಸುಂಕದ ಅಧಿಕಾರಿಗಳು:**

ತೆರಿಗೆಗಳ ಸಂಗ್ರಹಣೆ ಮತ್ತು ಅದರ ಲೆಕ್ಕಪತ್ರಗಳ ಸಂರಕ್ಷಣೆ ಬಹುದೊಡ್ಡ ಕಾರ್ಯವ್ಯಾಪ್ತಿಯನ್ನುಳ್ಳ ಆಡಳಿತ ವಿಭಾಗವಾಗಿದೆ. ತೆರಿಗೆಗಳ ಬಾಹುಳ್ಯ, ಹಾಕುತ್ತಿದ್ದ ಹೊಸ ತೆರಿಗೆಗಳು, ಕೊಡುತ್ತಿದ್ದ ರಿಯಾಯಿತಿಗಳು ತೆರಿಗೆಯ ಇಡೀ ರಚನೆ ತುಂಬ ಸಂಕೀರ್ಣವಾಗಲು ಕಾರಣವಾಗಿದೆ. ತೆರಿಗೆಗಳ ಬಗ್ಗೆ ಚರ್ಚೆಯನ್ನು ಈಗಾಗಲೇ ಸ್ವಲ್ಪ ವಿವರವಾಗಿ ಹಿಂದಿನ ಅಧ್ಯಾಯದಲ್ಲಿ ಮಾಡಲಾಗಿದೆ. ನಾಡಿನ ದೊಡ್ಡ ದೊಡ್ಡ ಪ್ರದೇಶಗಳಿಗೆ ಸುಂಕವೆಗ್ಗಡೆಗಳು ನೇಮಕವಾಗಿರುತ್ತಿದ್ದರು. ಇವರ ಅಧೀನದಲ್ಲಿ

---

೧. (ರೈ) ಎಕ V ಹಾಸನ ೭೨ ಕ್ರಿ.ಶ. ೧೧೬೧.

೨. ಎಸ್ಐಐ XVIII ಹಾವೇರಿ ೧೬೪ ಕ್ರಿ.ಶ. ೧೨ ಶಮಾ.

೩. ಎಂ. ಚಿದಾನಂದಮೂರ್ತಿ, ಕಶಾಸಾಂಅ, ಪು. ೨೫೪.

೪. (ರೈ) ಎಕ XI ದಾವಣಗೆರೆ ೧೬೩ ಕ್ರಿ.ಶ. ೧೨೬೫.

೫. ಶಮದ ೨೦೮ ಪ್ರಯೋಗ.

೬. (ಮೈ) ಎಕ VII ನಾಗಮಂಗಲ ೭೪ ಕ್ರಿ.ಶ. ೧೨೭೧.

೭. (ಮೈ) ಎಕ VI ಪಾಂಡವಪುರ ೧೨೪ ಕ್ರಿ.ಶ. ೧೨ ಶಮಾ.

ಅನೇಕ ಸುಂಕಾಧಿಕಾರಿಗಳಿರುತ್ತಿದ್ದರು. ಪಾಂಡ್ಯನಾಡ ಸುಂಕಾಧಿಕಾರಿ ಸಿರಿಪಣ್ಣ ಮಯ್ಯಾರದೇವ ದಿವಕರದೇವ ಮಲ್ಲಯ ಹೆಗ್ಗಡೆಗಳು[೧] ಎಂಬ ಉಲ್ಲೇಖ ಪಾಂಡ್ಯನಾಡಿನ ಸುಂಕ ಸಂಗ್ರಹಣಾ ಈ ಅಧಿಕಾರಿಗಳ ಕರ್ತವ್ಯವಾಗಿತ್ತು ಎಂಬುದನ್ನು ಸೂಚಿಸುತ್ತದೆ. ಸುಂಕದ ಹೆಗ್ಗಡೆಗಳು ಸಾಮಾನ್ಯವಾಗಿ ಆ ಪ್ರದೇಶವನ್ನಾಳುವ ಮಹಾಮಂಡಲೇಶ್ವರನ ಅಥವಾ ಮಹಾ ಪ್ರಧಾನನ ಅಧೀನದಲ್ಲಿ ಇರುತ್ತಿದ್ದರು. ಹೆಜ್ಜುಂಕ ಮತ್ತು ಬೀರವಣದ ಹೆಗ್ಗಡೆ ಈಸ್ವರಯ್ಯ ಮಹಾಮಂಡಲೇಶ್ವರ ವೀರ ಚವುಂಡರಸನ ಅಧೀನದಲ್ಲಿದ್ದುದು ತಿಳಿದುಬರುತ್ತದೆ.[೨] ಸುಂಕಾಧಿಕಾರಿ ಗೋಪರಸ ದೂಸೆಯ ಮಂಚಯ್ಯದೇವ ಕರದೇವ ಸಿರಿಪಯ್ಯನಳಿಯ ಮಲ್ಲಯ್ಯರು ಪೋಲಾಳ್ವ ದಣ್ಣಾಯಕರ ಅಧೀನದಲ್ಲಿದ್ದರು.[೩] ಅಧಿಕಾರಿಗಳು ಯಾವುದಾದರೂ ಒಂದು ಪ್ರದೇಶದ ಒಂದು ತೆರಿಗೆಯನ್ನು ಸಂಗ್ರಹಿಸುತ್ತಿದ್ದರು ಇಲ್ಲವೇ ಹಲವು ತೆರಿಗೆಗಳನ್ನು ಸಂಗ್ರಹಿಸುತ್ತಿದ್ದರು.[೪]

**ಕರಣ:**

ಲೆಕ್ಕದ ಅಧಿಕಾರಿ; ಕರಣಿಕ. ಸುಂಕದ ಅಧಿಕಾರಿಗಳ ಅಧೀನದಲ್ಲಿ ಕರಣಗಳು,[೫] ಸೇನಬೋವ,[೬] ಕುಳಕರಣಿ[೭] ಇರುತ್ತಿದ್ದರು. ಕರಣರನ್ನು ಕೆಲವು ಶಾಸನಗಳಲ್ಲಿ ಅವರ ಗುಣ ವಿಶೇಷಗಳಿಗಾಗಿ ಕೀರ್ತಿಸಲಾಗಿದೆ. ಎರಡನೆಯ ನಾರಸಿಂಹನಲ್ಲಿ ಶ್ರೀಕರಣಾಗ್ರಣಿಯಾಗಿದ್ದ ವಿಶ್ವನಾಥನನ್ನು ಎರಡೂ ಕೈಗಳಲ್ಲಿಯೂ ಸುಂದರವಾಗಿ ಬರೆಯಬಲ್ಲವನೆಂದೂ ಶತಾವಧಾನಗಳನ್ನು ಮಾಡಬಲ್ಲನೆಂದೂ ಶಾಸನವೊಂದು ಹೇಳುತ್ತದೆ.[೮]

ಬಳ್ಳಿಗಾವೆಯ ಒಂದು ಶಾಸನ ರಾಜ್ಯಾಧಿಕಾರದ ಅನುಕ್ರಮಣಿಕೆಯನ್ನು ಈ ರೀತಿಯಾಗಿ ನೀಡುತ್ತದೆ. ಕಳಚೂರ್ಯ ವಂಶದ ಬಿಜ್ಜಳನ ಪಾದಪದ್ಮೋಪಜೀವಿ ಕಸಪಯ್ಯ. ಅವನ ಅನುಮತಿಯ ಮೇರೆಗೆ ಬನವಸೆ ನಾಡನ್ನು ಬಮ್ಮರಸನು ಆಳುತ್ತಿದ್ದ. ಅವನ- ಅಧಿಕಾರ ಲಕ್ಷ್ಮಿಯ ಅಬ್ಯಭಿಚಾರದಲ್ಲಿಗಧ್ಯಕ್ಷಮಂ ರಾಜಾಧ್ಯಕ್ಷಮುಮೆನಿಸಿ ಶ್ರೀಧರನಾಯಕಂ ಆಚಣನಾಯಕಂ ಚಟ್ಟಮಯ್ಯನಾಯಕಂ ಮಲ್ಲಿಯಣನಾಯಕಂ ತಿಕ್ಕನಾಯಕನೆಂದಿಂತಯ್ವರ್ಕರಣಂಗಳಾ ಬಿಜ್ಜಲದೇವ ಮಹೀಪಾಳನಯ್ದುಂ ಕರಣಂಗಳಂತೆ ರಂಜಿಸುತ್ತಮಿರ್ಪ್ಪರವರ ಗುಣಾತಿಶಯವೆನ್ತೆಂದಡೆ

> ಪರಹಿತ ಕಾರ್ಯ್ಯರಬ್ಧಿಸಮಧೈರ್ಯ್ಯರಬಾಧಿತಮಂತ್ರವೀರ್ಯ್ಯರು
> ದ್ಧುರತರ ಸಿಂಹ ಶೌರ್ಯ್ಯರುಪಧಾಚತುರಾರ್ಯ್ಯರವಾರ್ಯ್ಯಕಾರ್ಯ್ಯರು
> ತ್ಸ್ಫುರಿತ ಯಶೋನದತ್ತ್ರಬಳ ತೂರ್ಯ್ಯರುಪಾರ್ಜಿತ ಪುಣ್ಯವರ್ಯ್ಯರೀ
> ಶ್ವರಪದಭಕ್ತಿಧುರ್ಯ್ಯರೆನಿಪರ್ ಕರಣಂಗಳಿದೇಂ ಮಹಾತ್ಮರೋ॥[೯]

ಶಾಸನ ಪದ್ಯದಲ್ಲಿ ವಿಶೇಷವಾಗಿ ಕೀರ್ತಿತರಾಗಿರುವ ಕರಣರು ಬಿಜ್ಜಳನ ಐದು ಕರಣಗಳಂತಿದ್ದರೆಂಬುದು ಗಮನಾರ್ಹವಾಗಿದೆ. ಇಲ್ಲಿ ಕರಣರು ಬಮ್ಮರಸನ ಆಡಳಿತವನ್ನು ಬಿಜ್ಜಳನ ಪರವಾಗಿ ನಿರೀಕ್ಷಿಸುವ ಕರ್ತವ್ಯನಿರತರೂ ಆಗಿದ್ದರೆಂಬ ಸೂಚನೆ ಇದೆ.

**ಸೇನಬೋವ:** ಶಾನುಭೋಗ ಅಥವಾ ಸೇನಬೋವನು ಗ್ರಾಮದ ಲೆಕ್ಕಪತ್ರವನ್ನು ಇಡುವವನಾಗಿದ್ದನು.[೧೦] ಅನೇಕ ಶಾಸನಗಳ ಕೊನೆಯಲ್ಲಿ ಅವು ಸೇನಬೋವನಿಂದ ರಚಿತವಾದವು ಎಂಬ ಮಾತುಗಳನ್ನು ಕಾಣಬಹುದು. 'ಸೇನಬೋವನ

---

೧. ಎಸ್‌ಐಐ IX(i) ಹಡಗಲಿ ೩೪೨ ಕ್ರಿ.ಶ. ೧೨೨೬.
೨. ಎಸ್‌ಐಐ XV ರೋಣ ೨೩೭ ಕ್ರಿ.ಶ. ೧೧೬೫.
೩. ಎಂಎಆರ್ ೧೯೩೯ ದಾವಣಗೆರೆ ೨೬ ಕ್ರಿ.ಶ. ೧೨೨೯.
೪. (ರೈ) ಎಕ VIII ಸೊರಬ ೫೧೫ ಕ್ರಿ.ಶ. ೧೧೯೭; ಎಸ್‌ಐಐ IX(i) ಹರಪನಹಳ್ಳಿ ೨೯೩ ಕ್ರಿ.ಶ. ೧೧೬೨.
೫. ಎಸ್‌ಐಐ XX ಹಾನಗಲ್ಲು ೧೪೨ ಕ್ರಿ.ಶ. ೧೧೬೫.
೬. ಸೇನಬೋವ ಮತ್ತು ಕರಣ ಒಂದೇ ಎಂದು ಡಾ. ಬಿ.ಆರ್. ಗೋಪಾಲ್ ಅವರು ಭಾವಿಸುತ್ತಾರೆ. ಪೂರ್ವೋಕ್ತ ಗ್ರಂಥ, ಪು. ೩೯೪.
೭. (ರೈ) ಎಕ VII ಶಿಕಾರಿಪುರ ೧೫೮ ಕ್ರಿ.ಶ. ೧೧೮೧.
೮. (ರೈ) ಎಕ V ಚನ್ನರಾಯಪಟ್ಟಣ ೨೦೩ ಕ್ರಿ.ಶ. ೧೨೨೩.
೯. (ರೈ) ಎಕ VII ಶಿಕಾರಿಪುರ ೧೦೨ ಕ್ರಿ.ಶ. ೧೨೨೩.
೧೦. K.V. Ramesh : ಪೂರ್ವೋಕ್ತ ಪು. ೨೫೦.

ಹುದ್ದೆ ವಂಶಪಾರಂಪರ್ಯವಾಗಿದ್ದುರಿಂದ ಕುಲಕರಣಿ ಎಂದರೆ ವಂಶಪಾರಂಪರ್ಯ ಕರಣಿಕನೆಂದು ಹೇಳಬಹುದು' ಎಂದು ಜಿ.ಎಸ್. ದೀಕ್ಷಿತ್ ಅವರು ಅಭಿಪ್ರಾಯಪಟ್ಟಿದ್ದಾರೆ.[೧] ಗಣಕ ಪದವು ಲೆಕ್ಕವನ್ನು ತಿಳಿದವನು ಎಂಬ .ಅರ್ಥದಲ್ಲಿ ಪ್ರಯೋಗವಾದರೂ ಅವರು ಕೂಡ ಸೇನಬೋವರಂತೆ ಕಾಗದ ಪತ್ರಗಳನ್ನು ತಯಾರಿಸುತ್ತಿದ್ದರೆಂಬುದಕ್ಕೆ ಹರಿಹರ ಕವಿಯ ನಂಬಿಯಣ್ಣನ ರಗಳೆಯಲ್ಲಿ ಸೂಚನೆ ಇದೆ.[೨] ಶಾಸನಗಳಲ್ಲಿ ಕಂಡುಬರುವ 'ಕಡಿತವೆರ್ಗಡೆ' (ಕಡಿತ = ಲೆಕ್ಕಪತ್ರಗಳನ್ನು ಬರೆಯಲು ಬಟ್ಟೆಯಿಂದ ತಯಾರಿಸಿದ ಕಪ್ಪು ಬಣ್ಣದ ಪಟ್ಟಿ) ಅಧಿಕೃತ ಲೆಕ್ಕಪತ್ರಗಳನ್ನು ಸುರಕ್ಷಿತವಾಗಿ ಸಂಗ್ರಹಿಸಿ ಇಡುವ ಅಧಿಕಾರಿಯಾಗಿದ್ದನು.[೩]

**ಇತರ ಕೆಲವು ಸಿಬ್ಬಂದಿ: ವಂದಿ, ಕೋಲುಕಾರ ಇತ್ಯಾದಿ.**

ರಾಜರನ್ನು, ಸಾಮಂತರನ್ನು, ಹಿರಿಯ ಅಧಿಕಾರಿಗಳನ್ನು ಹೊಗಳಲು 'ವಂದಿ'ಗಳು ಇರುತ್ತಿದ್ದರು. ಇವರು ಮೆಚ್ಚುಗೆಯಾಗುವಂತೆ ಹೊಗಳಿ ಬಹುಮಾನವನ್ನೊ ಅಥವಾ ಹಣವನ್ನೋ ಪಡೆಯುತ್ತಿದ್ದರು. 'ಇದು ತಾಂ ಸಂದುದು ವಂದಿ ಬಂದು ಮನೆಯೊಳ್ ಕೈವಾರಮಂ ಮಾಡಿ ಬೇಡದ ಮುನ್ನೀವುದು'[೪] ಎಂದು ಒಂದು ಶಾಸನದಲ್ಲಿ ಬರುತ್ತದೆ. ಹಡಪದವರ ಉಲ್ಲೇಖ ಕೆಲವು ಶಾಸನಗಳಲ್ಲಿ ಬಂದಿದೆ. ಇವರು ರಾಜರಿಗೆ ಅಗತ್ಯ ಸಮಯಗಳಲ್ಲಿ ಎಲೆ ಅಡಿಕೆಗಳನ್ನು ಸಿದ್ಧ ಮಾಡಿಕೊಡುವ ಉದ್ಯೋಗಿಗಳಾಗಿದ್ದರು. ಎಲೆ ಅಡಿಕೆ ಸುಣ್ಣ ಮುಂತಾದ ಪದಾರ್ಥಗಳನ್ನು ಚೀಲದಲ್ಲಿಟ್ಟು (ಹಡಪ) ಕೊಂಡು ರಾಜನ ಆ ಅಗತ್ಯವನ್ನು ಪೂರೈಸಿಕೊಡುವವರು ಹಡಪಿಗರು. ಹಡಪದ ಸಾಯಣ್ಣನ ಉಲ್ಲೇಖ ಒಂದು ಶಾಸನದಲ್ಲಿ ಬಂದಿದೆ.[೫] ರಾಜರ ಮತ್ತು ಹಿರಿಯ ಅಧಿಕಾರಿಗಳ ಮನೆಯ ಬಾಗಿಲನ್ನು ಕಾಯುವವರು ಪಡಿಹಾಱರು. ಈ ಪದ ಸಂಸ್ಕೃತದ ಪ್ರತೀಹಾರ ಹದದಿಂದ ನಿಷ್ಪನ್ನವಾಗಿದ್ದು ರಾಜರ ಹಿರಿಯ ಅಧಿಕಾರಿಗಳ ಗೃಹ ರಕ್ಷಣೆಯ ಕರ್ತವ್ಯವನ್ನು ತಿಳಿಸುತ್ತದೆ. ಮಹಾಮಂಡಲೇಶ್ವರ ಹಲ್ಲವರಸನ ಪಡಿಹಾಱ ನಾಗದೇವನಾಯ್ಯನ (ನಾಯಕನ?) ಉಲ್ಲೇಖ ಒಂದು ಶಾಸನದಲ್ಲಿ ಬರುತ್ತದೆ.[೬] ಅನೇಕ ಶಾಸನಗಳಲ್ಲಿ ಸೂಱಾಯ್ತರ ಉಲ್ಲೇಖ ಬರುತ್ತದೆ. (ಅದು ಸೂಳಾಯ್ತು, ಸೂಳಾಯಿತ[೭] ಎಂಬ ರೂಪಗಳಲ್ಲಿಯೂ ದೊರೆಯುತ್ತದೆ) ಸರದಿಯ ಪ್ರಕಾರ ಕೂಗುವವನು, ಕಾವಲುಗಾರ, ಪಹರೆಯವನು ಎಂಬ ಅರ್ಥಗಳು ಇದಕ್ಕಿವೆ. ಈ ಮೂರೂ ಕಾರ್ಯಗಳನ್ನು ಅವನು ಮಾಡುತ್ತಿದ್ದಿರಬೇಕು. ಸೂಳಾಯಿತರ ಮೇಲೆ ಸೂಳಾಯ್ತರಧಿಷ್ಠಾಯಕರು ಇರುತ್ತಿದ್ದರು. 'ಶ್ರೀಮನ್ಮಹಾಪಸಾಯಿತಂ ಸೂಳಾಯ್ತರಧಿಷ್ಠಾಯಕಂ ಮಣ್ಣಳಿಕಂ ಕಾಟಿಯಣಂ' ಎಂಬ ಉಲ್ಲೇಖ ಒಂದು ಶಾಸನದಲ್ಲಿ ಬಂದಿದೆ.[೮] ಅಂತಃಪುರ ಮುಂತಾದೆಡೆ 'ಸೂಱಾಯ್ತೆ'[೯]ಯರನ್ನು ನೇಮಿಸಿಕೊಳ್ಳುತ್ತಿದ್ದರು. ಅನೇಕ ಶಾಸನಗಳಲ್ಲಿ ಕೋಲುಕಾರರ[೧೦]

---

೧. G.S. Dixit : ಪೂರ್ವೋಕ್ತ ಪು. ೬೬.

೨. ನಂಬಿಯಣ್ಣನ ರಗಳೆ, ೭ನೆಯ ಸ್ಥಲ, ಪು. ೫೦.

೩. ಎಸ್ಐಐ XVIII ಹಾವೇರಿ ೧೫೨ ಕ್ರಿ.ಶ. ೧೧೪೯.

೪. (ರೈ) ಎಕ V ಚನ್ನರಾಯಪಟ್ಟಣ ೧೯೭ ಕ್ರಿ.ಶ. ೧೨೨೩.

೫. (ಮೈ) ಎಕ VI ಕೃಷ್ಣರಾಜಪೇಟೆ ೧೦೦ ಕ್ರಿ.ಶ. ೧೩೦೩.

೬. ಕಇಆಪ್ರ ಅಲಂಪೂರು ೨೮ ಕ್ರಿ.ಶ. ೧೧೫೧.

೭. (ರೈ) ಎಕ V ಬೇಲೂರು ೯ ಕ್ರಿ.ಶ. ೧೨೮೭; (ರೈ) ಎಕ XVI ಚಿಕ್ಕನಾಯಕನಹಳ್ಳಿ ೬೯ ಕ್ರಿ.ಶ. ೧೧೭೭.

೮. ಕಇ II ಅಕ್ಕಲುಕೋಟೆ ೧೨ ಕ್ರಿ.ಶ. ೧೧೧೪.

೯. ಪಂಪಭಾರತ ೧-೮೫ ವಚನ.

೧೦. (ರೈ) ಎಕ XV ಬೇಲೂರು ೨೫೨ ಕ್ರಿ.ಶ. ೧೨೯೮.

ಉಲ್ಲೇಖ ಬರುತ್ತದೆ. ಇವರು ಕೈಯಲ್ಲಿ ಕೋಲನ್ನು ಹಿಡಿದಿರುತ್ತಿದ್ದುದರಿಂದ ಆ ಹೆಸರು ಅವರಿಗೆ ಬಂದಂತಿದೆ. ತೆರಿಗೆ ಮೊದಲಾದುವನ್ನು ವಸೂಲು ಮಾಡುವವನು; ಸೇವಕ; ಊಳಿಗದವನು ಎಂಬ ಅರ್ಥಗಳನ್ನು ನಿಘಂಟುಗಳಲ್ಲಿ ಕೊಡಲಾಗಿದೆ. ಈ ಕರ್ತವ್ಯಗಳೊಂದಿಗೆ ಕೋಲುಕಾರರು ಒಬ್ಬರಿಂದ ಒಬ್ಬರಿಗೆ ಸುದ್ದಿಯನ್ನು ಮುಟ್ಟಿಸುತ್ತಿದ್ದ ಕಾರ್ಯವನ್ನು ಮಾಡುತ್ತಿದ್ದರು. ಈಗಲೂ ಕರ್ನಾಟಕದ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಕೋಲುಕಾರಿಕೆ ಜೀವಂತವಾಗಿರುವುದು ಕಂಡುಬರುತ್ತದೆ.[೧]

ಹನ್ನೊಂದನೆಯ ಶತಮಾನದಿಂದ ಮುಂದಿನ ಶಾಸನಗಳಲ್ಲಿ ಸಾಮಂತರನ್ನು, ಅಧಿಕಾರಿಗಳನ್ನು ಮತ್ತು ವೀರರನ್ನು ವರ್ಣಿಸುವಾಗ 'ತುರಂಗಾರೂಢರೇವಂತ', 'ಹಯರೂಢಾ ರೇವಂತ', 'ಅತಿ ವಿಶಮ ಹಯಾರೂಢ ಪ್ರೌಢರೇಖಾರೇವಂತ' ಎಂಬಂತಹ ವಿಶೇಷಣಗಳಿಂದ ವರ್ಣಿಸಿರುವುದು ವಿಶೇಷವಾಗಿ ಕಂಡುಬರುತ್ತದೆ. ರೇವಂತ ಸೂರ್ಯ ಮತ್ತು ಸಂಜ್ಞಾರ ಮಗ, ಗುಹ್ಯಕಾಧಿಪತಿ, ಅಶ್ವಾರೋಹಿಯಾದ ಇವನು ಉಪದೇವತೆ. ರಾಜಮಹಾರಾಜರು ರಣರಂಗಕ್ಕೆ ಹೋಗುವ ಮೊದಲು ಸೂರ್ಯಾರಾಧನೆಯನ್ನೂ ಮತ್ತು ರೇವಂತಾರಾಧನೆಯನ್ನೂ ಮಾಡುತ್ತಾರೆ ಎಂದು ತಿಳಿದುಬರುತ್ತದೆ.[೨] ಅಶ್ವವಿದ್ಯೆಗೆ ರೇವಂತನನ್ನು ಆದರ್ಶವಾಗಿಟ್ಟುಕೊಂಡಿದ್ದರು. ಒಂದು ಶಾಸನ ಕಲ್ಯಾಣಿ ಚಾಳುಕ್ಯರ ಸಾಮಂತನಾದ ವೀರಪಾಂಡ್ಯನನ್ನು 'ತುರಗಾರೋಹಣ ವಿದ್ದೆಗೋಜನೆನಿಪಂ ರೇವನ್ತದೇವಂ ಸದ್ಗುರುವೆನ್ದುಂ'[೩] ಎಂದು ಹೇಳುತ್ತದೆ. ತುರಗಾರೋಹಣ ವಿದ್ಯೆಗೆ ಗುರುವಾದ ರೇವಂತನಿಗೇ ವೀರಪಾಂಡ್ಯ ಗುರುವೆಂದು ಕೀರ್ತಿಸಲಾಗಿದೆ. ಶ್ರವಣಬೆಳಗೊಳದ ಶಾಸನ ಒಂದರಲ್ಲಿ ಬಲ್ಲಾಳನ ಮಂತ್ರಿ ಚಂದ್ರಮೌಳಿಯ ಮಗನಾದ ಸೋಮನನ್ನು 'ತುರಂಗಾರೂಢ ರೇವನ್ತ'[೪] ಎಂಬ ವಿಶೇಷಣವನ್ನು ಬಳಸಿ ಕೀರ್ತಿಸಿದೆ. ಕಲ್ಯಾಣಿ ಚಾಳುಕ್ಯರ, ಹೊಯ್ಸಳರ ಮತ್ತು ಸೇವುಣರ ಶಾಸನಗಳಲ್ಲಿ ರೇವಂತನಿಗೆ ಸಂಬಂಧಿಸಿದ ವಿಶೇಷಣಗಳು ಹೆಚ್ಚು ಬಳಕೆಯಾಗಿವೆ.

**ಪಂಚಾಮಹಾಶಬ್ದ :**

ರಾಜ ಮರ್ಯಾದೆಯನ್ನು ಸೂಚಿಸಲು ಬಾರಿಸುವ ಪಂಚಮಹಾ ಶಬ್ದದ ಬಗ್ಗೆ ವಿದ್ವಾಂಸರಾದ ಸರ್ ವಾಲ್ಟರ್ ಇಲಿಯಟ್, ಕೆ.ಬಿ. ಪಾಠಕ್, ವಿ. ರಾಘವನ್ ಮುಂತಾದವರು ಹಿಂದೆಯೇ ಚರ್ಚಿಸಿದ್ದಾರೆ. ವಿ. ರಾಘವನ್ ಅವರು, ಪಂಚಮಹಾಶಬ್ದವೆಂದರೆ ಬರಿಯ ಐದು ವಾದ್ಯಗಳೇ ಆಗಬೇಕಿಲ್ಲ; ನಾಲ್ಕು ವಾದ್ಯಗಳು, ಒಂದು ಮಾನುಷ ಧ್ವನಿಯೂ ಆಗಬಹುದೆಂದು ಹೇಳಿದ್ದಾರೆ.[೫]

---

೧. ಕೋಲುಕಾರರನ್ನು ಗ್ರಾಮದ ಹಿರಿಯರು ನೇಮಕ ಮಾಡುತ್ತಾರೆ. ಅವನು ಆ ಗ್ರಾಮದವನೇ ಆಗಿರುತ್ತಾನೆ. ಗ್ರಾಮದ ವಿಸ್ತಾರ ಮತ್ತು ಜನಸಂಖ್ಯೆಗಳ ಮೇಲೆ ಅವರ ಸಂಖ್ಯೆ ಹೆಚ್ಚಾಗಲೂಬಹುದು. ಅಯ್ಕೆಗೊಂಡ ಕೋಲುಕಾರ, ಕುಲದವರು ತಿಳಿಸಲು ಹೇಳಿದ ಸುದ್ದಿಯನ್ನು ಮನೆಮನೆಗೆ ಹೋಗಿ ತಿಳಿಸಬೇಕು. ನೇಮಿಸಿದ ಕೆಲಸವನ್ನು ಸರಿಯಾಗಿ ಮಾಡದಿದ್ದರೆ ಎಚ್ಚರಿಕೆ ಕೊಡುವ, ದಂಡ ಹಾಕುವ, ಕೆಲಸದಿಂದ ತೆಗೆಯುವ ಹಕ್ಕು ಗ್ರಾಮದ ಹಿರಿಯರಿಗಿರುತ್ತದೆ. ಕೋಲುಕಾರನಿಗೆ ಇಚ್ಛಾ ನಿವೃತ್ತಿಯೂ ಇದೆ. ಸಾಮಾನ್ಯವಾಗಿ ದವಸ ಧಾನ್ಯ ನಿಗದಿತ ಪ್ರಮಾಣದಲ್ಲಿ ಪ್ರತಿಫಲ ರೂಪದಲ್ಲಿ ದೊರೆಯುತ್ತದೆ. ಕೆಲವು ಗ್ರಾಮಗಳಲ್ಲಿ ಹಣದ ರೂಪದಲ್ಲಿಯೂ ಪ್ರತಿಫಲವುಂಟು. ಕೋಲುಕಾರರನ್ನು 'ಚಿಕ್ಕ ಯಜಮಾನ'ನೆಂದು ಆತ್ಮೀಯತೆಯಿಂದ ಕರೆಯುವುದುಂಟು. ಏಕೆಂದರೆ ದೊಡ್ಡ ಯಜಮಾನರು (ಗ್ರಾಮದ ಹಿರಿಯರು) ಕೊಡುವ ಸುದ್ದಿಯನ್ನು ಮುಟ್ಟಿಸುವವನು ಚಿಕ್ಕ ಯಜಮಾನ. ಹಬ್ಬ-ಹರಿದಿನಗಳಲ್ಲಿ ಗ್ರಾಮಸ್ಥರು ಕೊಡಬೇಕಾದ ವಂತಿಗೆ, ವಹಿಸಿದ ಜವಾಬ್ದಾರಿ, ಹಾಕಲಾಗುವ ದಂಡ ಮುಂತಾದುವನ್ನು ಮನೆಮನೆಗೆ ಹೋಗಿ ತಲುಪಿಸುವ ಜವಾಬ್ದಾರಿ ಅವನಿಗೆ ಸೇರಿದ್ದು. ನೋಡಿ ಎಂ.ಟಿ. ಮಹದೇವ್ : 'ಕಾಲದ ಜಾಡಲ್ಲಿ ಕೋಲುಕಾರ' ಕರ್ನಾಟಕ ದರ್ಶನ ವಿಭಾಗ, ಪ್ರಜಾವಾಣಿ ದಿನಪತ್ರಿಕೆ, ೩೧ ೧.೩.೧೯೯೦, ಪು. ೮.

೨. ರೇವಂತದ ವಿವರವಾದ ಚರ್ಚೆಗೆ ನೋಡಿ: B.N. Sharma: Iconography of Revanta. ಎಚ್.ಆರ್. ರಘುನಾಥ ಭಟ್ಟರ 'ಶಾಸನಗಳಲ್ಲಿ ರೇವಂತ' ಎಂಬ ಲೇಖನ, ಕರ್ನಾಟಕ ಶಾಸನ ಕಲೆ, ಪು. ೭೪-೮೧.

೩. ಎಸ್‌ಐಐ IX(i) ಹರಪನಹಳ್ಳಿ ೨೬೭ ಕ್ರಿ.ಶ. ೧೧೬೦.

೪. (ಮೈ) ಎಕ II ಶ್ರವಣಬೆಳಗೊಳ ೪೪೪ ಕ್ರಿ.ಶ. ೧೧೮೧.

ಕನ್ನಡದ ಶಾಸನಗಳಲ್ಲಿ[2] ಮತ್ತು ವಚನಗಳಲ್ಲಿ[3] ಈ ಶಬ್ದ ವಿಫುಲವಾಗಿ ಬಳಕೆಯಾಗಿದೆ. ಪಂಚಮಹಾಶಬ್ದ ಮರ್ಯಾದೆಯನ್ನು ರಾಜರು ತಮ್ಮ ಸಾಮಂತರಿಗೆ, ಅಧಿಕಾರಿಗಳಿಗೆ, ದೇವಾಲಯಗಳಿಗೆ ದಯಪಾಲಿಸುತ್ತಿದ್ದರು. ಎಲ್ಲರಿಗೆ ಈ ಮರ್ಯಾದೆ ಸಲ್ಲುವಂತಿರಲಿಲ್ಲ. ಎಂ. ಚಿದಾನಂದ ಮೂರ್ತಿಯವರು ಕರ್ನಾಟಕದ ಗೋಕರ್ಣ, ಮೂಡಬಿದಿರೆ, ಉಡುಪಿ ಮುಂತಾದೆಡೆ ಮತ್ತು ಕೇರಳದ ಕೆಲವು ದೇವಾಲಯಗಳಲ್ಲಿ ಪಂಚವಾದ್ಯ ಇಂದಿಗೂ ಉಳಿದು ಬಂದಿರುವುದನ್ನು ಹೇಳಿದ್ದಾರೆ. ಅಲ್ಲದೆ ಹೆಸರು ಪಂಚವಾದ್ಯವೆಂದಿದ್ದರೂ ವಾದ್ಯಗಳ ಸಂಖ್ಯೆ ಎಂಟು ಹತ್ತು ಇರುವುದುಂಟು; ವಾದ್ಯಗಳೂ ಬೇರೆ ಬೇರೆ ಆಗಿರುವುದೂ ಇದೆ[4] ಎಂದು ಅಭಿಪ್ರಾಯಪಟ್ಟದ್ದಾರೆ.

**ಕೇಂದ್ರದ ಆಡಳಿತ :**

ಕೇಂದ್ರದ ನೇರ ಆಡಳಿತ ರಾಜಧಾನಿಯ ಸುತ್ತಮುತ್ತಲಿನ ಪ್ರದೇಶವನ್ನು ಒಳಗೊಳ್ಳುತ್ತಿತ್ತು. ರಾಜನೇ ಆ ಪ್ರದೇಶವನ್ನು ನೇರವಾಗಿ ಆಳುತ್ತಿದ್ದ. ಉಳಿದಂತೆ ರಾಜ್ಯದ ವಿಸ್ತಾರ ಪ್ರದೇಶವನ್ನು ಆಡಳಿತದ ಸೌಕರ್ಯ ದೃಷ್ಟಿಯಿಂದ ಮಂಡಲ, ನಾಡು, ಊರುಗಳೆಂದು ವಿಂಗಡಿಸಿರುವುದು ಕಂಡುಬರುತ್ತದೆ. ಒಬ್ಬ ಅಧಿರಾಜನ ಅಧೀನದಲ್ಲಿ ವಿಸ್ತಾರವಾದ ಭೂಪ್ರದೇಶವಿರುತ್ತಿತ್ತು. ಆ ವಿಸ್ತಾರ ಭೂಪ್ರದೇಶ ಅನೇಕ ಮಂಡಲಗಳಾಗಿಯೂ, ಅವು ಅನೇಕ ನಾಡುಗಳಾಗಿಯೂ ನಾಡಿನಲ್ಲಿ ಅನೇಕ ಪಟ್ಟಣಗಳು, ಊರುಗಳು, ಅಗ್ರಹಾರಗಳು ಮತ್ತು ಗ್ರಾಮಗಳು ಇರುತ್ತಿದ್ದವು. ಕೇಂದ್ರದ ರಾಜನ ಆಡಳಿತವನ್ನು ಬಿಟ್ಟರೆ ಉಳಿದ ವಿಭಾಗಗಳು ಸ್ವತಂತ್ರವೋ ಎಂಬಂತೆ ಆಡಳಿತವನ್ನು ನಡೆಸಿಕೊಳ್ಳುತ್ತಿದ್ದವು.

**ಮಂಡಲದ ಆಡಳಿತ:**

ಮಂಡಲದ[5] ಆಡಳಿತ ರಾಜನಿಂದ ನೇಮಕವಾಗುತ್ತಿದ್ದ ಮಂಡಲೇಶ್ವರನಿಂದ ನಡೆಯುತ್ತಿದ್ದಿತು. ಇಂಥ ಕೆಲವು ಮಂಡಲೇಶ್ವರರ ಆಡಳಿತದ ಮೇಲ್ವಿಚಾರಣೆಯನ್ನು ಗಮನಿಸಲು ಮಹಾಮಂಡಲೇಶ್ವರರು ಇರುತ್ತಿದ್ದರು. ಮಂಡಲೇಶ್ವರರು ತಮ್ಮ ಅಧೀನಕ್ಕೆ ಒಳಪಟ್ಟ ಪ್ರದೇಶಕ್ಕೆ ಸ್ವತಂತ್ರ ರಾಜರಂತೆಯೇ ಇದ್ದು, ಅದರ ಉದ್ದಗಲಕ್ಕೆ ಪ್ರವಾಸ ಮಾಡುತ್ತ ಪ್ರಜೆಗಳ ಕಷ್ಟ ಸುಖಗಳನ್ನು ಗಮನಿಸುತ್ತಾ ದಾನ ಧರ್ಮ ಕಾರ್ಯಗಳನ್ನು ನಿರ್ವಹಿಸುತ್ತ ಆಡಳಿತ ಮಾಡುತ್ತಿದ್ದರು. ಸ್ಥಳೀಯವಾಗಿ ಅಧಿರಾಜನಿಗಿದ್ದಷ್ಟೇ ಮಾನ್ಯತೆ ಮತ್ತು ಜವಾಬ್ದಾರಿಗಳು ಮಂಡಲೇಶ್ವರನಿಗೂ ಇರುತ್ತಿದ್ದವು.

ಮಳವಳ್ಳಿ ತಾಲ್ಲೂಕಿನ ಒಂದು ಶಾಸನ ಮಹಾಮಂಡಲೇಶ್ವರ ಕೊಯಳರಸ ನಾಗರದ ಮೊಲೆಗೋಡ ಬಿಬ್ಬೆಯ ನಾಯಕನ ಮಕ್ಕಳು ಅಂಕ... ಸಮಸ್ತ ಪ್ರಜೆ ನಾಯಕರಿಗೆ ಮೊಲೆಗೋಡನ್ನು ಪಟ್ಟಣ ಮಾಡಲು ಕೊಟ್ಟ ಆಜ್ಞೆಯನ್ನು ತಿಳಿಸುತ್ತದೆ. ಅಲ್ಲದೆ ಅದನ್ನು ಪಟ್ಟಣ ಮಾಡಿ ಕೆಲವು ನಿಯಮಗಳನ್ನು ಆಜ್ಞಾರೂಪವಾಗಿ ಹೊರಡಿಸಿರುವುದು ಕಂಡುಬರುತ್ತದೆ.[6] ಶಾಸನ ಹೆಚ್ಚು ತ್ರುಟಿತವಾಗಿರುವುದರಿಂದ ಆ ನಿಯಮಗಳು ಸ್ಪಷ್ಟವಾಗುವುದಿಲ್ಲ. ಮಂಡಲೇಶ್ವರರಿಗೆ ಹೀಗೆ ಸ್ವತಂತ್ರವಾಗಿ ಆಜ್ಞೆಯನ್ನು ಹೊರಡಿಸುವ ಅಧಿಕಾರವೂ ಇದ್ದಿತು. ಮಂಡಲೇಶ್ವರರಿಗೆ ಸ್ವತಂತ್ರವಾದ ಧ್ವಜ ಲಾಂಛನಗಳು ಇದ್ದವು.[7] ಅಧಿರಾಜನು ನೇಮಿಸಿದ ಮೇಲಧಿಕಾರಿಯನ್ನು ಒಪ್ಪಿಕೊಳ್ಳದೆ ತಮ್ಮ ಅಸಮ್ಮತಿಯನ್ನು ವ್ಯಕ್ತಗೊಳಿಸುತ್ತಿದ್ದುದೂ ಉಂಟು. ಸೇವುಣ

೧. ಕಶಾಸಾಂಲಿ ಪು. ೩೩೮ ಉದಾಹರಿತವಾಗಿದೆ. ವಿ. ರಾಘವನ್ 'Pancha Maha Sabda' (Indian Linguistics-Turner jubilee volume I ೧೯೫೮ ಪು. ೩೦೮-೯).

೨. ಕಇ IV ಹಿರೇಕೆರೂರು ೩೮ ಕ್ರಿ.ಶ. ೧೧೮೭; ಕಇ V ಗದಗು ೭೨ ಕ್ರಿ.ಶ. ೧೨ ಶಮಾ.

೩. ಬವ ೫೯೫, ೬೩೧.

೪. ಎಂ. ಚಿದಾನಂದಮೂರ್ತಿ : 'ಪಂಚವಾದ್ಯ -ಒಂದು ಟಿಪ್ಪಣಿ' ಎಂಬ ಲೇಖನ. ಸಂಶೋಧನ ತರಂಗ, ಪು. ೨೪೬-೪೭.

೫. ಆಡಳಿತ ವಿಭಾಗಗಳ ಹೆಸರುಗಳನ್ನು ಎಲ್ಲ ಕಡೆಯೂ ಕಟ್ಟುನಿಟ್ಟಾಗಿ ಪಾರಿಭಾಷಿಕವಾಗಿ ಬಳಸಿದಂತಿಲ್ಲ ವಿವರಗಳಿಗೆ ನೋಡಿ ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು (ಸಂ) ಎಂ.ಎಂ. ಕಲಬುರ್ಗಿ ಪು. VII.

೬. (ಮೈ) ಎಕ VII ಮಳವಳ್ಳಿ ೧೮ ಕ್ರಿ.ಶ. ೧೩೩೧-೩೨.

೭. ಚಾಳುಕ್ಯ ತ್ರಿಭುವನಮಲ್ಲನ ಮಂಡಲೇಶ್ವರನಾದ ತೈಲಪನನ್ನು ಕುರಿತ ಶಾಸನ- ಪೆರ್ಮಟ್ಟಿತೂರ್ಯ್ಯ ನಿರ್ಘೋಷಣಂ ಶಾಖಾಚರೇಂದ್ರಧ್ವಜವಿರಾಜಮಾನೂನಮಾನೋತ್ತುಂಗ ಸಿಂಹಲಾಂಚನದಿ...ಎಇ IV ಹಿರೇಕೆರೂರು ೪೮ ಕ್ರಿ.ಶ. ೧೨೪೭.

ಸಿಂಘಣನು ಲಕ್ಷ್ಮಿಪಾಳನೆಂಬ ಮಹಾಮಂಡಲೇಶ್ವರನನ್ನು ನೇಮಿಸಿದಾಗ 'ನಾಳ್ಪ್ರಭು ಹಡವಳ ಚವುಡಯ್ಯ ಕಾಳಯ್ಯ... ತುಡಥಿಯಲ್ಲಿದ್ದು' ಸಿದ್ಧಾಯವನ್ನು ಕೊಡುತ್ತಿದ್ದು ಮಹಾಮಂಡಲೇಶ್ವರನನ್ನು ಹೋಗಿ ನೋಡದಿದ್ದಾಗ 'ಅದೇ ಮುನಿಸಾಗಿ' ಆ ಇಡುಗೋಡನ್ನು ಬಂದು ಮುತ್ತಿ ಅಧಿಕಾರಿಗಳನ್ನು ಶಿಕ್ಷಿಸುವಾಗ ಚನ್ನಯ್ಯ ಎಂಬುವನು ಮರಣ ಹೊಂದಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೧] ಅಧಿರಾಜನ ನೇಮಕಕ್ಕೆ ನಾಳ್ಪ್ರಭುಗಳು ಶೀತಲ ಸಮರ ಆರಂಭಿಸಿದಾಗ ಮಂಡಲೇಶ್ವರ ನೇರವಾದ ಆಕ್ರಮಣ ಮಾಡಿ ಪ್ರತೀಕಾರ ಕೈಗೊಂಡು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡಿರುವುದು ಕಂಡುಬರುತ್ತದೆ.

ಮಂಡಲೇಶ್ವರನು ತನ್ನ ಅಧೀನ ಪ್ರದೇಶದಲ್ಲಿ ಯಾವುದೇ ಸಾಮಂತ ಸ್ವತಂತ್ರನಾಗಲು ಪ್ರಯತ್ನಿಸದಿರುವಂತೆ ಮತ್ತು ವಿಧೇಯನಾಗಿರುವಂತೆ ನೋಡಿಕೊಳ್ಳುತ್ತಿದ್ದನು ಮಂಡಲೇಶ್ವರನು ತನ್ನ ಅಧೀನ ಪ್ರದೇಶದ ಆದಾಯದಲ್ಲಿ ನಿರ್ದಿಷ್ಟ ಭಾಗವನ್ನು ಅಧಿರಾಜನಿಗೆ ಸಲ್ಲಿಸುತ್ತಿದ್ದನು.

**ನಾಡಿನ ಆಡಳಿತ:**

ನಾಡು ಒಂದು ನಿರ್ದಿಷ್ಟ ವಿಸ್ತೀರ್ಣದ ಪ್ರದೇಶವಾಗಿ ಮತ್ತು ಸ್ಥಳೀಯ ಆಡಳಿತದ ಘಟಕವಾಗಿ ಬಳಕೆಯಾಗಿದೆ. ಈ ಕಾಲದಲ್ಲಿಯೂ ನಾಡು ಉತ್ತರ ಪದವಾಗಿ ಕನ್ನಡ ನಾಡು, ತಮಿಳುನಾಡು ಎಂದು ಪ್ರಯೋಗವಾಗುತ್ತಿದೆ. ಆದರೆ 'ನಾಡು' ಆ ಕಾಲದಲ್ಲಿ ಅಷ್ಟು ವಿಸ್ತಾರ ಪ್ರಾಂತವಾಗಿರಲಿಲ್ಲ. ಆದ್ದರಿಂದ ನಾಡು ಆಗಾಗ ಸಭೆ ಸೇರಿ ಆಡಳಿತವನ್ನು ನಿರ್ವಹಿಸುತ್ತಿದ್ದವು. ನಾಡು ಎನ್ನುವುದು ಕೇಂದ್ರ ಮತ್ತು ಸ್ಥಳೀಯ ಘಟಕಗಳ ನಡುವೆ ಕೊಂಡಿಯಾಗಿ ಕಾರ್ಯ ನಿರ್ವಹಿಸುತ್ತಿತ್ತು ಎಂದು ಜಿ.ಎಸ್. ದೀಕ್ಷಿತ್ ಅವರು ಹೇಳಿದ್ದಾರೆ ಮತ್ತು ಅದು ಸ್ಥಳೀಯ ಘಟಕಗಳ ಅಗತ್ಯಗಳನ್ನು ಕೇಂದ್ರಕ್ಕೆ ಪ್ರತಿನಿಧಿಸುತ್ತಿದ್ದುದಲ್ಲದೆ ಕೇಂದ್ರದಿಂದ ಸ್ಥಳೀಯ ಜನರಿಗೆ ಅನುಕೂಲವಾಗುವಂತೆ ನಿರ್ದೇಶನಗಳು ಬರುವಂತೆ ನೋಡಿಕೊಳ್ಳುತ್ತಿದ್ದವು ಎಂದು ಅಭಿಪ್ರಾಯಪಟ್ಟಿದ್ದಾರೆ.[೨] ನಾಡಿನ ಮುಖ್ಯಸ್ಥ ನಾಳ್ಪ್ರಭು[೩] ಎಂದು ಕರೆಸಿಕೊಳ್ಳುತ್ತಿದ್ದನು. ಮಹಾ ನಾಳ್ಪ್ರಭು ಧರ್ಮಗವುಡನನ್ನು ಒಂದು ಶಾಸನ 'ಸತ್ಯರಾಧೇಯ ಮಱಿವೊಕ್ಕರ ಕಾವ ತೊಡರ್ವ್ವರ ಗಾಳ ಬೆಳ್ಳಿಯರ ಕುಲತಿಲಕ'[೪] ಎಂದು ಕೀರ್ತಿಸುತ್ತದೆ. ಸೊರಬ ತಾಲ್ಲೂಕಿನ ಒಂದು ಶಾಸನ ನಾಳ್ಪ್ರಭು ಲೋಕಗೌಂಡ ಎಂಬುವವನನ್ನು ಬಹುವಾಗಿ ಕೀರ್ತಿಸುತ್ತದೆ.

ಆತನ ಮಾತೆ ಮಾತು ಧರೆಗಾತನ ಪೂಣ್ಕೆಯೆ ಮಿಕ್ಕ ಪೂಣ್ಕೆ ಸಂ
ದಾತನ ಬಂಟೆ ಬಂಟು ನೆಗಱ್ದಾತನ ಬುದ್ಧಿಯೆ ಶುದ್ಧ ಬುದ್ಧಿ ಮಿ
ಕ್ಕಾತನ ಸಾಹಸಂ ನೆಱಿಯೆ ಸಾಹಸಮೆಂದಭಿವರ್ಣಿಕುಂ ಧರಿ
ತ್ರೀತಳಮಾಗಳುಂ ತೆವರತೆಪ್ಪದ ನಾಳ್ಪ್ರಭು ಲೋಕಗೌಂಡನಂ॥[೫]

---

೧. (ರೈ) ಎಕ VIII ಸೊರಬ ೪೨೫ ಕ್ರಿ.ಶ. ೧೨೪೨.
೨ G. S. Dixit : ಪೂರ್ವೋಕ್ತ ಪು. ೪೮.
೩. ಎಸ್ಐಐ XVIII ಹಾವೇರಿ ೨೫೨ ಕ್ರಿ.ಶ. ೧೨೬೮-೬೯.
೪. (ಮೈ) ಎಕ VI ಕೃ.ಪೇಟೆ ೬೯ ಕ್ರಿ.ಶ. ೧೨೪೨.
೫. (ರೈ) ಎಕ VIII ಸೊರಬ ೩೪೫ ಕ್ರಿ.ಶ. ೧೧೭೦; ಈ ಶಾಸನದ ಸಾಲುಗಳು, ಬಸವರಾಜದೇವರ ರಗಳೆಯ ಕೆಲವು ಸಾಲುಗಳನ್ನು ನೆನಪಿಗೆ ತರುತ್ತವೆ. ಹೋಲಿಸಿ:
ಬಸವನ ಮಾತೆ ಮಾತು ಬಸವಣ್ಣನ ಭಕ್ತಿಯ ಓಜೆಯೋಜೆ ಕೇಳ್
ಬಸವನ ರೀತಿ ರೀತಿ ಬಸವಣ್ಣನ ಕಿಂಕರ ವೃತ್ತಿ ವೃತ್ತಿ ಮೇಣ್
ಬಸವನ ಬಟ್ಟೆ ಬಟ್ಟೆ ಬಸವಣ್ಣನ ಬಿಂಕದ ಭಾಷೆ ಭಾಷೆ ಹೋ
ಬಸವನ ನಿಷ್ಠೆ ನಿಷ್ಠೆ ಬಸವಣ್ಣನ ನೇಮವೆ ನೇಮವುರ್ವಿಯೊಳ್॥
ಈ ರೀತಿಯ ರಚನೆಯ ಇನ್ನೂ ಎರಡು ಪದ್ಯಗಳಿವೆ. ಬಸವರಾಜದೇವರ ರಗಳೆ ಸ್ಥಲ ೮, ಪು. ೩೪-೩೫.

ತೆವರತಪ್ಪದ ನಾಳ್ಪ್ರಭು ಲೋಕಗೌಂಡನ ಮಾತು, ಪ್ರತಿಜ್ಞೆ, ಶೌರ್ಯ, ಬುದ್ಧಿ, ಸಾಹಸ ಇವುಗಳನ್ನು ಭೂಮಂಡಲವು ಯಾವಾಗಲೂ ಕೀರ್ತಿಸುವುದೆಂದು ಹೇಳುತ್ತದೆ. ನಾಡನ್ನು ಒಳಗೊಂಡಂತೆ 'ಮಹಾನಾಡು' ಎಂಬ ವಿಸ್ತಾರ ಪ್ರದೇಶದ ಕಾರ್ಯ ನಿರ್ವಹಿಸಿರುವ ಸಂಸ್ಥೆಯೊಂದು ಅಸ್ತಿತ್ವದಲ್ಲಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಮಹಾನಾಡು ಮುಖ್ಯವಾಗಿ ಉಚ್ಚ ವ್ಯಾಪಾರಿ ಸಂಸ್ಥೆಗಳು ಇತರ ಅನೇಕ ಸ್ಥಳೀಯ ಸಂಸ್ಥೆಗಳೊಂದಿಗೆ ಸೇರಿ ನಡೆಸುವ ಸಭೆಯ ಹಾಗೆ ಕಂಡುಬರುತ್ತದೆ. ಜಿ.ಎಸ್. ದೀಕ್ಷಿತ್ ಅವರು 'ಮಹಾ ನಾಡಿ'ನ ಬಗ್ಗೆ ಬರೆದ ಲೇಖನದಲ್ಲಿ ಅದರ ಸ್ವರೂಪ, ಕಾರ್ಯವ್ಯಾಪ್ತಿ ಮತ್ತು ಸಭೆಗಳನ್ನು ಕುರಿತು ಚರ್ಚಿಸಿದ್ದಾರೆ.[೧] ಮಹಾನಾಡು ಹಿರಿಸಿಂಗಿಯಲ್ಲಿ ಕ್ರಿ.ಶ. ೧೧೮೬ರಲ್ಲಿ ಮತ್ತು ಬೆಳಗಾಮಿನಲ್ಲಿ ಕ್ರಿ.ಶ. ೧೨೦೪ರಲ್ಲಿ ನಡೆಸಿದ ಸಭೆಗಳು ಗಮನಾರ್ಹವಾದವು. ದೇವೀಹೊಸೂರಿನಲ್ಲಿ ಮಹಾನಾಡು ಸಭೆ ಸೇರಿದ ಬಗ್ಗೆ ಶಾಸನವೊಂದು ತಿಳಿಸುತ್ತದೆ.[೨] ಆ ಶಾಸನದ ಕೆಲವು ಭಾಗ ತ್ರುಟಿತವಾಗಿವೆ. ಅದು ಕೋಣವತ್ತಿಯ ಕಲ್ಕೆರೆಯ... ದೇವಂಗೇರಿಯ ಬಳ್ಳಿಗಾವೆಯ ಸಹಿತವಹ ಮಹಾನಾಡು ನೆರೆದು ದೇವಿಯ ಹಬ್ಬದಲ್ಲಿ ದೇವಿಗೆ ಅನೇಕ ದಾನಗಳನ್ನು ಬಿಟ್ಟ ವಿಷಯವನ್ನು ತಿಳಿಸುತ್ತದೆ.

ಮಹಾನಾಡು ನಡೆಸುತ್ತಿದ್ದ ಚಟುವಟಿಕೆಗಳ ಬಗ್ಗೆ ಜಿ.ಎಸ್. ದೀಕ್ಷಿತ್ ಅವರ ಅಭಿಪ್ರಾಯವನ್ನು ಹೀಗೆ ಸಂಗ್ರಹಿಸಬಹುದು. ಅದು ಜಿಲ್ಲಾಮಟ್ಟದ ವ್ಯಾಪ್ತಿಯುಳ್ಳ ಸಭೆಯಾಗಿದ್ದು ಅದರ ಸಭೆಗಳಲ್ಲಿ, ವ್ಯಾಪಾರಿ ಸಂಘಗಳ ಜೊತೆಯಲ್ಲಿ ಊರಿನ, ಉಪವಿಭಾಗಗಳ ಸ್ಥಳೀಯ ಸಂಸ್ಥೆಗಳು ಮತ್ತು ಸರ್ಕಾರದ ಸ್ಥಳೀಯ ಅಧಿಕಾರಿಗಳು ಇರುತ್ತಿದ್ದರು. ನಾಗರಿಕ ಸೌಲಭ್ಯಗಳ ಅಭಿವೃದ್ಧಿಗೆ ತಮ್ಮ ಕಾಣಿಕೆಯನ್ನು ಅವು ಸಲ್ಲಿಸಿವೆ.[೩]

ನಾಳ್ಪ್ರಭು ಅನೇಕ ಸಂದರ್ಭಗಳಲ್ಲಿ ವಿವಾದಗಳನ್ನು ತೀರ್ಮಾನಿಸಲು ಸಹಾಯ ಮಾಡಿರುವುದು ಕಂಡುಬರುತ್ತದೆ. ನಿದರ್ಶನಕ್ಕೆ ತನ್ವತಿಯ ಮಲೆಗಾವುಂಡ ಮತ್ತು ಕೆಲವರು ತತ್ಕಾಲದ ಬೆಲೆಗೆ ಸ್ವಲ್ಪ ಭೂಮಿಯನ್ನು ದಾನಕ್ಕಾಗಿ ಮಾರಿದರು. ಆದರೆ ರೇವಣ್ಣ ಮತ್ತು ಅವನ ಸಹೋದರರು ತಮಗೂ ಅದರಲ್ಲಿ ಪಾಲು ಬರಬೇಕೆಂದು ವಾದ ಹೂಡಿದರು. ಆಗ ನಾಳ್ಪ್ರಭು ತ್ರಿಭುವನಮಲ್ಲ ಪೃಥ್ವಿಸೆಟ್ಟಿ ಮತ್ತು ಕೆಲವು ಮುಖ್ಯರು ತನ್ವತಿಯ ಗಾವುಂಡರು ಸೇರಿ ಆ ದಾನವನ್ನು ಎಲ್ಲರಿಗೂ ಸಮಾಧಾನವಾಗುವಂತೆ ವಿಭಾಗ ಮಾಡಿರುವುದು ತಿಳಿದುಬರುತ್ತದೆ.[೪] ನಾಳ್ಪ್ರಭುವಿನ ಅಧೀನದಲ್ಲಿ ನಾಡಗಾವುಂಡ ಮತ್ತು ನಾಡ ಹೆಗ್ಗಡೆಯರು ಇರುತ್ತಿದ್ದರು. ಅವರು ತೆರಿಗೆ ಸಂಗ್ರಹಣೆ, ನ್ಯಾಯ ತೀರ್ಮಾನ, ವ್ಯವಸಾಯದ ಅಭಿವೃದ್ಧಿಯಂತಹ ವಿಷಯಗಳನ್ನು ನೋಡಿಕೊಳ್ಳುತ್ತಿದ್ದರು. ಇವರ ಅಧಿಕಾರಗಳು ಬಹುಮಟ್ಟಿಗೆ ಅನುವಂಶಿಕವಾಗಿ ಮುಂದುವರಿದಂತೆ ಕಂಡುಬರುತ್ತದೆ. ನಾಡು ಪದಕ್ಕೆ ಸಮಾನಾರ್ಥಕವಾಗಿ ವಿಷಯ ಪದ ಪ್ರಯೋಗವಾಗಿರುವಂತಿದೆ.[೫]

**ಪಟ್ಟಣಗಳ ಆಡಳಿತ:**

ಪ್ರಾಚೀನ ಕರ್ನಾಟಕದಲ್ಲಿ ರಾಜಧಾನಿಗಳನ್ನು ರಾಜಧಾನಿ ಪಟ್ಟಣ, ಸ್ಕಂಧಾವಾರ,[೬] ನೆಲೆಬೀಡು ಎಂದು ಕರೆದಿರುತ್ತಾರೆ. ಕೆಲವು ಸಾರಿ ನೆಲೆಬೀಡು ಎನ್ನುವುದನ್ನು ರಾಜರು ಪ್ರವಾಸ ಕಾಲದಲ್ಲಿ ಉಳಿದುಕೊಂಡ ಸ್ಥಳಕ್ಕೂ ಅನ್ವಯಿಸಿ ಹೇಳಲಾಗಿದೆ. ರಾಜಧಾನಿಗಳು ರಾಜನ ನೇರವಾದ ಆಡಳಿತಕ್ಕೆ ಒಳಪಟ್ಟಿರುತ್ತಿದ್ದವು. ಉಳಿದಂತೆ ಅನೇಕ ಪಟ್ಟಣಗಳಿರುತ್ತಿದ್ದವು; ಅಲ್ಲದೆ

---

೧. G.S. Dixit : 'Mahanadu ' Srikanthika, ಪು. ೯೨-೯೬.

೨. ಎಸ್‌ಐಐ XVIII ಹಾವೇರಿ ೧೫೨ ಕ್ರಿ.ಶ. ೧೧೪೯.

೩. G. S. Dixit : Local Self Government in Medieval Karnataka ಪು. ೨೯-೩೦.

೪. (ರೈ) ಎಕ VIII ಸೊರಬ ೨೩೭ ಕ್ರಿ.ಶ. ೧೨೨೧.

೫. G. S. Dixit : ಪೂರ್ವೋಕ್ತ ಪು. ೨೩.

೬. ಕಭಾ ೬:೩, ಗೋಕಾಕ ಕ್ರಿ.ಶ. ೧೨೦೪, ಪು. ೪೬-೫೪.

ಪ್ರವೇಶಗಳ ಅಗತ್ಯವನ್ನು ಅನುಸರಿಸಿ ಪಟ್ಟಣಗಳ ನಿರ್ಮಾಣ ಆಗುತ್ತಿತ್ತು. ಸಾಮಾನ್ಯವಾಗಿ ಒಂದು ಗ್ರಾಮದಲ್ಲಿ ಸಂತೆ ಏರ್ಪಡುವುದರ ಮೂಲಕ ಅದು ಪಟ್ಟಣವಾಗಿ ಮಾರ್ಪಡುತ್ತಿತ್ತು. ಈ ಮಾರ್ಪಾಟಿನ ಹಂತದಲ್ಲಿ ರಾಜ್ಯದ ಖಜಾನೆಗೆ ತಾತ್ಕಾಲಿಕ ನಷ್ಟವಾಗುತ್ತಿತ್ತು.[೧]

ಆದರೆ ಕ್ರಮೇಣ ಅಧಿಕ ತೆರಿಗೆ ಸುಂಕಗಳ ಮೂಲಕ ರಾಜ್ಯಾದಾಯ ಅಧಿಕವಾಗುತ್ತಿದ್ದಿತು. ಆ ಕಾಲದಲ್ಲಿ ಅಣ್ಣಿಗೇರಿ,[೨] ಅರಸಿಕೆರೆ,[೩] ಬಳ್ಳಿಗಾವೆ,[೪] ನೀರಗುಂದ[೫] ಮುಂತಾದವು ಪ್ರಸಿದ್ಧ ವ್ಯಾಪಾರ ಕೇಂದ್ರಗಳಾಗಿದ್ದವು. ಇವುಗಳಲ್ಲದೆ ನೂರಾರು ಶಾಸನಗಳಲ್ಲಿ ಪಟ್ಟಣಗಳು ಉಲ್ಲೇಖಗೊಂಡಿದೆ. ಪಟ್ಟಣಗಳು ಬಹುಮಟ್ಟಿಗೆ ವ್ಯಾಪಾರ ಕೇಂದ್ರಗಳು, ಏಕೆಂದರೆ ಒಂದು ಗ್ರಾಮ ಪಟ್ಟಣವಾಗುತ್ತಿದ್ದುದೇ ಸಂತೆ ಏರ್ಪಡುವುದರ ಮೂಲಕ.

ಪ್ರಾಚೀನ ಕಾಲದ ಪಟ್ಟಣಗಳ ವಿಸ್ತಾರ ಮತ್ತು ರಚನೆಯ ಬಗ್ಗೆ ನಮಗೆ ಹೆಚ್ಚು ವಿಷಯಗಳು ತಿಳಿದುಬರುವುದಿಲ್ಲ. ಪಟ್ಟಣಗಳಿಗೆ ಪ್ರಾಕಾರಗಳು[೬] (ಕೋಟೆಗಳು) ಇರುತ್ತಿದ್ದವು. ಜಯಗೊಂಡಪುರದ ವರ್ಣನೆ ಒಂದು ಶಾಸನದಲ್ಲಿ[೭] ಹೀಗೆ ಬಂದಿದೆ.

ತುಱುಗಿದ ನಂದನಂ ಪರಿವ ಕಾಲ್ವೆ ಕಡಲ್ಗಿವೆ ತೋಡೆನಿಪ್ಪ ಪೆ
ರ್ಗ್ಗಿಱಿ ಬಳಸಿರ್ದ ಪೆರ್ವಳಸು ಸಂದಣಿವೆತ್ತ ಜನಂ ವಿಳಾಸದಿಂ
ಮೆಱೆವಮರಾಲಯಂ ಬಹುಗೃಹಂಗಳ ಗುಣ್ಪೆವಜೆಂದೆ ಚೆಲ್ವು ಕ
ಣ್ದೆಱೆದವೊಲು ಜಗಕ್ಕೆ ಜಯಂಗೊಂಡಪುರಂ ನಿಸದಂ ವಿರಾಜಿಕುಂ॥

ಪಟ್ಟಣಗಳು ವಿಸ್ತಾರವಾಗಿರುತ್ತಿದ್ದುದರಿಂದ ಅವನ್ನು ಬೇರೆ ಬೇರೆ ಕೇರಿಗಳಾಗಿ ವಿಭಾಗ ಮಾಡುತ್ತಿದ್ದರು. ಬಾರಕೂರಿನಲ್ಲಿ ಮೂಱುಕೇರಿ, ಚೌಳಿಯಕೇರಿ, ಮಣಿಗರಕೇರಿ, ಹತ್ತು ಕೇರಿ, ಕೋಟಕೇರಿ ಮತ್ತು ಪಡುವ ಕೇರಿ ಎಂಬುವನ್ನು ಕಾಣಬಹುದು.[೮] ಪಟ್ಟಣಗಳು ನಿರ್ಮಾಣವಾದನಂತರ ಅವುಗಳೆಡೆ ಜನರನ್ನು ಆಕರ್ಷಿಸಲು ಹೊಸದಾಗಿ ಅಲ್ಲಿಗೆ ಬಂದು ನೆಲಸುವ ಒಕ್ಕಲಿಗೆ ಎರಡು ವರ್ಷ ಮನೆದೆಱೆ ಮತ್ತು ಇನ್ನೂ ಕೆಲವು ತೆರಿಗೆಗಳ ರಿಯಾಯಿತಿ ಕೊಡುವುದನ್ನು ಒಂದು ಶಾಸನ ತಿಳಿಸುತ್ತದೆ.[೯] ಪಟ್ಟಣಗಳ .ಆಡಳಿತದಲ್ಲಿ ವರ್ತಕರು, ನಖರಗಳು ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು. ಕೆಲವು ಪಟ್ಟಣಗಳನ್ನು ಬಣಂಜುವಟ್ಟಣಗಳೆಂದು ಕರೆಯುತ್ತಿದ್ದರು. ಅವು ವ್ಯಾಪಾರ ಕೇಂದ್ರಗಳಾಗಿ ಪ್ರಖ್ಯಾತವಾಗಿದ್ದವು. ನಿದರ್ಶನಕ್ಕೆ ಕೋಣವತ್ತಿಯನ್ನು ವೀರಬಣಂಜುವಟ್ಟಣ ಎಂದು ಶಾಸನವೊಂದು ಕರೆದಿದೆ.[೧೦] ಪಟ್ಟಣ ಅಥವಾ ನಗರಗಳು ಮಧ್ಯಕಾಲೀನ ಆರ್ಥಿಕ ಸ್ಥಿತಿಗತಿಯ ಮೇಲೆ, ವಾಣಿಜ್ಯಾಭಿವೃದ್ಧಿಯ ಮೇಲೆ ನಿರ್ಣಾಯಕ ಪ್ರಭಾವ ಬೀರಿರುವುದುಂಟು.[೧೧]

---

೧. J. D.M. Derrett : ಪೂರ್ವೋಕ್ತ, ಪು. ೧೮೭.
೨. ಎಸ್‌ಐಐ XX ಹಾನಗಲ್ಲು ೨೨೮ ಕ್ರಿ.ಶ. ೧೨೦೭.
೩. (ರೈ) ಎಕ V ಅರಸಿಕೆರೆ ೭೭ ಕ್ರಿ.ಶ. ೧೨೨೦.
೪. (ರೈ) ಎಕ VII ಶಿಕಾರಿಪುರ ೯೨ ಕ್ರಿ.ಶ. ೧೧೬೮.
೫. (ರೈ) ಎಕ XI ಹೊಳಲಕೆರೆ ೧೨೧ ಕ್ರಿ.ಶ. ೧೨೪೦.
೬. ಎಸ್‌ಐಐ XVIII ಹಾವೇರಿ ೩೦೧ ಕ್ರಿ.ಶ. ೧೨೩೩.
೭. (ರೈ) ಎಕ V ಅರಸಿಕೆರೆ ೩೮ ಕ್ರಿ.ಶ. ೧೧೭೧.
೮. ಬಾರಕೂರಿನ ಬೇರೆ ಬೇರೆ ಶಾಸನಗಳಲ್ಲಿ ಆ ಕೇರಿಗಳ ಉಲ್ಲೇಖ ಬಂದಿರುವುದನ್ನು ಕೆ.ವಿ. ರಮೇಶ್ ಅವರು ನೀಡಿದ್ದಾರೆ. ಪೂರ್ವೋಕ್ತ ಗ್ರಂಥ ಪು. ೨೬೨.
೯. (ಮೈ) ಎಕ V ತಿ. ನರಸೀಪುರ ೨೬೧ ಕ್ರಿ.ಶ. ೧೨೭೭.
೧೦. ಕಇ IV ಹಿರೇಕೆರೂರು ೨ ಕ್ರಿ.ಶ. ೧೨೪೧.
೧೧. G. R. Kuppuswamy : Economic conditions in Karnataka ಪು. ೯೬.

**ಪಟ್ಟಣಸ್ವಾಮಿ:**

ಪಟ್ಟಣಗಳ ಆಡಳಿತದ ನೇತೃತ್ವವನ್ನು ಪಟ್ಟಣಸ್ವಾಮಿ ವಹಿಸುತ್ತಿದ್ದನು. ಹೀಗಾಗಿ ಪಟ್ಟಣಗಳ ಆಡಳಿತ ಮುಖ್ಯವಾಗಿ ವರ್ತಕರ ಕೈಯಲ್ಲಿದ್ದಿತೆಂದು ಹೇಳಬಹುದು. ಪಟ್ಟಣಸ್ವಾಮಿಯ ನೇಮಕವನ್ನು ರಾಜ, ಸಾಮಂತ ಅಥವಾ ಆ ಪ್ರದೇಶದ ಹಿರಿಯ ಅಧಿಕಾರಿ ಮಾಡುತ್ತಿದ್ದನು. ಪಟ್ಟಣಸ್ವಾಮಿ ಅನೇಕ ವೇಳೆ ಪಟ್ಟಣದ ಸ್ಥಾಪಕನಾಗಿದ್ದನು ಎಂದು ಎ.ವಿ. ವೆಂಕಟರತ್ನಂ ಅವರು ಅಭಿಪ್ರಾಯಪಡುತ್ತಾರೆ.[೧] ಪಟ್ಟಣಸ್ವಾಮಿಯ ಹುದ್ದೆಗೆ ಸಂಭಾವನೆಯೂ ಇರುತ್ತಿತ್ತು ಎಂಬುದು ಶಾಸನಗಳಿಂದ ಸ್ಪಷ್ಟವಿದೆ.[೨] ಪಟ್ಟಣಸ್ವಾಮಿಯ ಹುದ್ದೆ ವಂಶಪಾರಂಪರ್ಯವಾಗಿ ಮುಂದುವರಿದಂತೆ ಕಂಡುಬರುತ್ತದೆ.[೩]

ಪಟ್ಟಣಸ್ವಾಮಿ ಪಟ್ಟಣಕ್ಕೆ ಸಾಮಾನ್ಯವಾಗಿ ಒಬ್ಬನೇ ಇರುತ್ತಿದ್ದನು. ಆದರೆ ಪಟ್ಟಣ ವಿಶಾಲವಾಗಿದ್ದರೆ ಅದರ ಅಗತ್ಯಕ್ಕೆ ಅನುಗುಣವಾಗಿ ಹೆಚ್ಚು ಜನ ಪಟ್ಟಣಸ್ವಾಮಿಗಳಿರುತ್ತಿದ್ದರು. ಕೆಲವು ಸಾರಿ ಇಬ್ಬರು[೪] ಅಥವಾ ಮೂವರೂ[೫] ಇರುತ್ತಿದ್ದರು. ಪಟ್ಟಣಸ್ವಾಮಿಗಳು ನಿರ್ವಹಿಸುತ್ತಿದ್ದ ಮುಖ್ಯ ಕರ್ತವ್ಯಗಳೆಂದರೆ ಪಟ್ಟಣದ ಪೌರಸಭೆಗಳನ್ನು ನಡೆಸುವುದು, ಸಂತೆಯ ಉಸ್ತುವಾರಿ ನಡೆಸುವುದು, ಸುಂಕಗಳನ್ನು ವಸೂಲು ಮಾಡುವುದು. ಪಟ್ಟಣದಲ್ಲಿ ಯಾವುದೇ ದಾನಗಳು ನಡೆದಾಗ ಪಟ್ಟಣಸ್ವಾಮಿಯ ಹಾಜರಾತಿ ಅದಕ್ಕೆ ಅಧಿಕೃತತೆಯನ್ನು ತರುತ್ತಿತ್ತು. ಪಟ್ಟಣದ ಎಲ್ಲ ಸಭೆಗಳು, ದಾನಗಳು ಪಟ್ಟಣಸ್ವಾಮಿಯ ಸಮಕ್ಷದಲ್ಲಿ ನಡೆಯುತ್ತಿದ್ದವು. ಪಟ್ಟಣಸ್ವಾಮಿಯ ಆಡಳಿತಕ್ಕೆ ಬೆಂಬಲವಾಗಿ ನಗರ ಮುಂತಾದ ವರ್ತಕ ಸಂಘಗಳು ಇರುತ್ತಿದ್ದವು. ಹಳ್ಳಿಗಳು ಪಟ್ಟಣಗಳಾಗಿ ಬೆಳೆದಾಗ ಹಳ್ಳಿಗಳ ಮುಖ್ಯಸ್ಥರಾಗಿದ್ದ ಗೌಡುಗಳ ಪ್ರಾಮುಖ್ಯ ಕಡಮೆಯೇನೂ ಆಗುತ್ತಿರಲಿಲ್ಲ. ಗೊಂಕದೇವನು ಗೊಂಕಜಿನಾಲಯ ಕಟ್ಟಿಸಿ ದಾನ ಕೊಡುವಾಗ ಹನ್ನೆರಡು ಗಾವುಂಡುಗಳನ್ನೂ ಆ ಊರಿನ ನಖರಗಳನ್ನೂ ಬರಮಾಡಿಕೊಂಡನೆಂದು ಶಾಸನ ಹೇಳುತ್ತದೆ.[೬] ಪಟ್ಟಣದ ಸಾಂಸ್ಕೃತಿಕ ಜೀವನದಲ್ಲಿ ನಖರರಿಗಿದ್ದ ಪ್ರಮುಖ ಸ್ಥಾನದ ಜೊತೆಯಲ್ಲಿ ಹಿಂದೆ ಪ್ರಮುಖರಾಗಿದ್ದ ಗಾವುಂಡುಗಳಿಗೂ ಸ್ಥಾನವಿದ್ದುದು ಕಂಡುಬರುತ್ತದೆ. ಗ್ರಾಮೀಣ ಸಂಸ್ಕೃತಿ ಪಟ್ಟಣ ಅಥವಾ ನಗರ ಸಂಸ್ಕೃತಿಯಾಗಿ ಪರಿವರ್ತನೆಗೊಳ್ಳುತ್ತಿರುವ ಒಂದು ಸಂಕ್ರಮಣ ಸ್ಥಿತಿಯನ್ನು ಇಲ್ಲಿ ಗುರುತಿಸಬಹುದು.

**ಅಗ್ರಹಾರಗಳ ಆಡಳಿತ:**

ಅಗ್ರಹಾರಗಳು ಬ್ರಾಹ್ಮಣರಿಗೆ ದತ್ತಿಯಾಗಿ ನೀಡಲ್ಪಟ್ಟ ಊರುಗಳು. ಈ ಊರುಗಳ ಆದಾಯ ಪೂರ್ಣವಾಗಿ ಅವರಿಗೇ ಸಲ್ಲುತ್ತಿತ್ತು. ಅವರು ಒಂದು ರೀತಿಯಲ್ಲಿ ಅಗ್ರಹಾರದ ಪ್ರಭುಗಳಾಗಿದ್ದರು. ಅಗ್ರಹಾರದ ಬ್ರಾಹ್ಮಣರನ್ನು ಅವರ ಗುಣಗಳಿಗಾಗಿ, ವಿದ್ವತ್ತಿಗಾಗಿ, ಧೈರ್ಯ, ಸಾಹಸ ಮತ್ತು ದಾನ ಗುಣಗಳಿಗಾಗಿ ಶಾಸನಗಳು ಹೊಗಳಿವೆ. ಅಗ್ರಹಾರಗಳ ಬ್ರಾಹ್ಮಣ ಕುಟುಂಬಗಳ ಮುಖ್ಯಸ್ಥರನ್ನು ಮಹಾಜನರೆಂದು ಕರೆಯುತ್ತಿದ್ದರೆಂದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯವಾಗಿದೆ.

**ಮಹಾಜನರು:**

ಮಹಾಜನರು ಒಂದು ಸಂಸ್ಥೆಯಾಗಿ ಹಲವಾರು ಉಪಯುಕ್ತ ಕಾರ್ಯಗಳನ್ನು ನಿರ್ವಹಿಸಿರುವುದು ಕಂಡುಬರುತ್ತದೆ. ಮಹಾಜನರು ಅನೇಕ ದಾನದತ್ತಿಗಳ ಸಂರಕ್ಷಕರಾಗಿ ಕಾರ್ಯವನ್ನು ನಿರ್ವಹಿಸಿದ್ದಾರೆ. ಕೆಲವು ಸಾರಿ ಸ್ಥಳೀಯ ಅಧಿಕಾರಿಗಳೊಂದಿಗೆ,

---

೧. ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಪು. ೧೨೯.

೨. (ಮೈ) ಎಕ IV ಯಳಂದೂರು ೬೨ ಕ್ರಿ.ಶ. ೧೩೨೮.

೩. A. Appadorai : Economic Conditions in Southern India I ಪು.೩೮೬.

೪. (ರೈ) ಎಕ VII ಶಿಕಾರಿಪುರ ೧೧೯ ಕ್ರಿ.ಶ. ೧೧೮೧.

೫. ಬಿ.ಆರ್. ಹಿರೇಮಠ : ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೩೪.

೬. ಕಇ I ಸೌಂದತ್ತಿ ೨೫ ಕ್ರಿ.ಶ. ೧೧೮೬.

ಸ್ಥಾನಪತಿಗಳೊಂದಿಗೆ ಸೇರಿ ದಾನದತ್ತಿಗಳನ್ನು ನಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ಹೊತ್ತಿರುತ್ತಿದ್ದರು. ಹಾವೇರಿಯ ನಖರಂಗಳು ಸಿದ್ಧನಾಥದೇವರ ವಿನಾಯಕದೇವರ ಉಪಹಾರಕ್ಕೆ ಕೊಟ್ಟ ಗದ್ಯಾಣ ನಾಲ್ಕರ ವೃದ್ಧಿ ತಿಂಗಳಿಗೆ ಹಣವೊಂದರಲ್ಲಿ ನಡೆಸಿಕೊಂಡು ಹೋಗಬೇಕೆಂದು ಜ್ಞಾನರಾಸಿದೇವರಿಗೆ ಮತ್ತು ಮಹಾಜನಗಳಿಗೆ ಒಪ್ಪಿಸಿರುವುದು ಕಂಡುಬರುತ್ತದೆ.[೧] ಈ ರೀತಿಯ ಜವಾಬ್ದಾರಿಗಳನ್ನು ಹೊತ್ತಿರುವುದು ಇನ್ನೂ ಹಲವು ಶಾಸನಗಳಲ್ಲಿ ಕಂಡುಬರುತ್ತದೆ.[೨]

ರಾಜರು ಕೆಲವು ಸಾರಿ ಮಹಾಜನರನ್ನು ಉದ್ದೇಶಿಸಿ ಕೆಲವು ಪ್ರಕಟಣೆಗಳನ್ನು ಹೊರಡಿಸುತ್ತಿದ್ದರು. ಮದ್ದೂರಿನ ಒಂದು ತಮಿಳು ಶಾಸನದಲ್ಲಿ ಪಾಂಡ್ಯ ತ್ರಿಭುವನ ಚಕ್ರವರ್ತಿ ಕೋಣೆರಿನ್ಮೈಕೊಂಡನ್ ಪ್ರಕಟಿಸಿದಂತೆ ಮರುದೂರಿನಲ್ಲಿ (ಈಗಿನ ಮದ್ದೂರು) ಒಂದು ಕೆರೆಯನ್ನು ಮತ್ತು ಒಂದು ಕಾಲುವೆಯನ್ನು ನಿರ್ಮಿಸುವುದಾಗಿ ಹೇಳಲಾಗಿದೆ.[೩]

ಮಹಾಜನರು ತಮ್ಮ ಅಗ್ರಹಾರಕ್ಕೆ ಕಳ್ಳರು ನುಗ್ಗಿದಾಗ ಅಥವಾ ಇನ್ನಿತರ ಸಂಕಷ್ಟಗಳು ಬಂದಾಗ ಧೈರ್ಯವಾಗಿ ಹೋರಾಡಿದವರಿಗೆ ಗೌರವ ತೋರಿಸಿರುವುದುಂಟು. ಅಗ್ರಹಾರದಿಂದ ಅಗ್ರಹಾರಕ್ಕೆ ಮಹಾಜನರ ಸಂಖ್ಯೆ ಏಕರೂಪವಾಗಿಲ್ಲ. ಮೂವತ್ತರಿಂದ[೪] ಮೂವತ್ತೆರಡು ಸಾವಿರದವರೆಗೆ[೫] ಆ ಸಂಖ್ಯೆ ಇರುವುದನ್ನು ಕಾಣುತ್ತೇವೆ.

ಅಗ್ರಹಾರದ ಸಂಪೂರ್ಣ ಒಡೆತನ ಮಹಾಜನರಿಗೆ ಸೇರಿದ್ದ ಕಾರಣ, ಅಗ್ರಹಾರಕ್ಕೆ ಸಂಬಂಧಿಸಿದ ಯಾವುದೇ ಭೂವ್ಯವಹಾರ ಮಾಡಬೇಕಾದರೆ ಮಹಾಜನರ ಅಪ್ಪಣೆಯನ್ನು ಪಡೆಯಲೇಬೇಕಾಗಿತ್ತು. ಕ್ರಿ.ಶ. ೧೧೮೭ರ ಒಂದು ಶಾಸನ, ಕಲ್ಕೆರೆಯ ಮುನ್ನೂರು ಮಹಾಜನರಲ್ಲೊಬ್ಬನಾದ ರೇಚಿಭಟ್ಟ ಭೂಮಿಯನ್ನು ಮಹಾಜನರ ಅಪ್ಪಣೆ ಪಡೆದುಕೊಂಡು ಅನಂತರ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೬] ಅಗ್ರಹಾರದ ಭೂಮಿ ಬ್ರಾಹ್ಮಣೇತರರಿಗೆ ಮಾರಾಟವಾಗದ ಹಾಗೆ ನೋಡಿಕೊಳ್ಳುತ್ತಿದ್ದರು. ಯಾವುದೇ ವೃತ್ತಿವಂತರು ಆಸ್ತಿಯಲ್ಲಿ ಯಾವ ಭಾಗವನ್ನೂ ಶೂದ್ರರಿಗೆ ಮಾರುವ ಹಾಗಿರಲಿಲ್ಲ; ಹಾಗೆ ಮಾಡಿದ್ದೇ ಆದರೆ ಅವನನ್ನು ಬ್ರಾಹ್ಮಣ ಸಮಾಜದಿಂದ ಹೊರಗೆ ಹಾಕುತ್ತಿದ್ದರು.[೭]

ಗ್ರಾಮಸಂಸ್ಥೆಗಳಿಂದ ಗ್ರಾಮದ ಆಡಳಿತ ಹೇಗೆ ನಡೆಯುತ್ತಿದ್ದಿತೊ ಹಾಗೆ[೮] ಅಗ್ರಹಾರದ ಆಡಳಿತ ಸಂಪೂರ್ಣವಾಗಿ ಮಹಾಜನರಿಂದ ನಡೆಯುತ್ತಿದ್ದಿತು; ಮಹಾಜನರು ಆಡಳಿತದ ವಿವಿಧ ಘಟ್ಟದಲ್ಲಿ ಆಗಾಗ್ಗೆ ಸಭೆ ಸೇರಬೇಕಾಗುತ್ತಿತ್ತು. ಮಹಾಜನರು ಊರಿನ ಮಂಟಪದಲ್ಲೊ,[೯] ಬ್ರಾಹ್ಮಣ ಶಾಲೆಯಲ್ಲೊ,[೧೦] ದೇವಾಲಯಗಳಲ್ಲೊ ಸಭೆಗಳನ್ನು ನಡೆಸುತ್ತಿದ್ದರು. ಸಭೆಗಳು ಮಹಾಜನರ ಮುಖ್ಯಸ್ಥ, ಊರೊಡೆಯನ ಸಮಕ್ಷದಲ್ಲಿ ನಡೆಯುತ್ತಿದ್ದವು. ಅನೇಕ ಶಾಸನಗಳಲ್ಲಿ ಸಭೆ ನಡೆದು 'ತಮ್ಮೊಳೇಕಮತ್ಯವಾಗಿ', 'ಅಶೇಷಮಹಾಜನಂಗಳು ಕೂಡಿ', 'ತಮ್ಮೊಳೇಕಸ್ಥರಾಗಿ' ಎಂಬಂತಹ ಮಾತುಗಳು ಬರುವುದರಿಂದ

---

೧. ಎಸ್‌ಐಐ XVIII ಹಾವೇರಿ ೨೦೯ ಕ್ರಿ.ಶ. ೧೨೨೮.

೨. ಎಸ್‌ಐಐ XVIII ಹಾವೇರಿ ೨೭೦ ಕ್ರಿ.ಶ. ೧೨೯೮.

೩. (ಮೈ) ಎಕ VII ಮದ್ದೂರು ೯ ಕ್ರಿ.ಶ. ೧೩ ಶಮಾ.

೪. (ಮೈ) ಎಕ III ಗುಂಡ್ಲುಪೇಟೆ ೪೦ ಕ್ರಿ.ಶ. ೧೩೨೦.

೫. (ರೈ) ಎಕ VII ಶಿಕಾರಿಪುರ ೧೮೫; ಕ್ರಿ.ಶ. ೧೦೫೮.

೬. S. Gururajachar : ಪೂರ್ವೋಕ್ತ, ಪು.೨೫.

೭. G.S. Dixit : ಪೂರ್ವೋಕ್ತ, ಪು. ೧೨೮.

೮. R.C. Majumdar : Corporate life inAncient India, ಪು. ೧೫೬.

೯. ನಂ.ರ : ಸ್ಥಲ ೯, ಪು. ೪೭.

೧೦. ಎಸ್‌ಐಐ XI(ii) ಬಾಗೇವಾಡಿ ೧೬೨ ಕ್ರಿ.ಶ. ೧೧೧೨.

ಅವರು ಒಮ್ಮತದ ಅಭಿಪ್ರಾಯಕ್ಕೆ ಬಂದು ಅನಂತರ ಕಾರ್ಯಪ್ರವೃತ್ತರಾಗುತ್ತಿದ್ದರೆಂದು ಭಾವಿಸಲು ಅವಕಾಶವಿದೆ. ಊರೊಡೆಯನ ಆಯ್ಕೆ ಯಾವ ರೀತಿಯಲ್ಲಿ ಆಗುತ್ತಿತ್ತು ಎಂಬುದಕ್ಕೆ ಶಾಸನಗಳಿಂದ ಖಚಿತ ಮಾಹಿತಿ ದೊರೆಯುವುದಿಲ್ಲ. ಊರೊಡೆಯನ ಬಗ್ಗೆ ಅಸೂಯೆ, ಅನಗತ್ಯ ಸ್ಪರ್ಧೆಯಂತಹ ಭಾವನೆಗಳು ಬರಬಹುದೆಂಬ ಕಾರಣದಿಂದಲೋ ಏನೊ ಊರೊಡೆತನವನ್ನು ಕೆಲವು ಕಡೆ ಸರದಿಯ ಮೇಲೆ ನಿರ್ವಹಿಸುತ್ತಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಅಂಥ ವ್ಯವಸ್ಥೆಯನ್ನು 'ಮಾಸವೆಗ್ಗಡೆ' ಎಂಬ ಹೆಸರಿನಿಂದ ಕರೆಯುತ್ತಿದ್ದರು. ಈ ವ್ಯವಸ್ಥೆ ದಕ್ಷಿಣ ಭಾಗದ ಹೊಯ್ಸಳ ರಾಜ್ಯದಲ್ಲಿ ಅಧಿಕವಾಗಿ ಕಂಡುಬರುತ್ತದೆ. ಬೆಳ್ಳೂರಿನ ಶಾಸನವೊಂದರಲ್ಲಿ 'ಆ ಬೆಳ್ಳೂರಲ್ಲಿ ಆ ಪೆರುಮಾಳೆ ದೇವದಂಣ್ಣಾಯಕರು ತಂಮ ಮನೆಯಲ್ಲಿ ಯಿಕ್ಕಿಸುವ ಛತ್ರಕ್ಕೆ ನಿತ್ಯ ಪ್ರವಾಸಿಗ ಬ್ರಾಹ್ಮಣರು ಹಂನೆರಡುವೂರ ಮಾಸವೆಗ್ಗಡೆ'[೧] ಎಂದು ಬರುತ್ತದೆ. ಹರಿಹರಪುರದ ಶಾಸನವೊಂದರಲ್ಲಿ 'ಗಣಪತಿ ಕ್ರಮಿತರ ಮಕ್ಕಳು ಭೂಪತಿ ಕ್ರಮಿತರ ಮಾಸವೆಗ್ಗಡೆತನದಲಿ...'[೨] ಎಂದು ಬರುತ್ತದೆ. ಈ ಮಾಸವೆಗ್ಗಡೆಯ ಕ್ರಮ ಹದಿಮೂರನೆಯ ಶತಮಾನಕ್ಕಿಂತ ಮೊದಲಿನ ಶಾಸನಗಳಲ್ಲಿ ಇಲ್ಲ. ಸಾಮಾನ್ಯವಾಗಿ ಊರೊಡೆಯರಿಗೆ ಸಹಾಯಕರಾಗಿ ಸೇನಬೋವರು ಕಾರ್ಯನಿರ್ವಹಿಸುತ್ತಿದ್ದರು.

ಅಧಿಕಾರಿಗಳಾಗಲಿ, ದಾನಿಗಳಾಗಲಿ ಅಗ್ರಹಾರ ನಿರ್ಮಿಸುವಾಗ ರಾಜನ ಅಂಗೀಕಾರವನ್ನು ಪಡೆಯಬೇಕಿತ್ತು. ಸಾಮಾನ್ಯವಾಗಿ ಅಗ್ರಹಾರ ನಿರ್ಮಾಣ ಎಲ್ಲಿಯೂ ಸಮಸ್ಯೆಯನ್ನು ನಿರ್ಮಿಸಿಲ್ಲ. ಅಪವಾದವೆಂಬಂತೆ ಹಾಲ್ತೊರೆಯ ಶಾಸನ[೩] ಅಂಥ ಒಂದು ಸಮಸ್ಯೆಯನ್ನು ನಿರೂಪಿಸುತ್ತದೆ. ವೀರನರಸಿಂಹನ ಆಳ್ವಿಕೆಯ ಕಾಲದಲ್ಲಿ ಹಾಲುತೊಱೆಯನ್ನು ಅಗ್ರಹಾರ ಮಾಡಿ ರಾಜಾಜ್ಞೆ ಹೊರಟಾಗ ಗಾವುಂಡುಗಳು ಒಪ್ಪಿ ಅನಂತರ ಮಹಾಜನಗಳಿಗೆ ಬಿಟ್ಟು ಕೊಡಿ ಎಂದಾಗ ಒಪ್ಪದೆ ಪ್ರತಿಭಟಿಸಿದಾಗ ರಾಜನ ಕಡೆಯ ಅಧಿಕಾರಿಗಳು ದಾಳಿ ಮಾಡಿ ಊರೆಲ್ಲವನ್ನು ಸೂರೆಮಾಡಿ 'ಉಡೆ ಉರ್ಚ್ಚಿ ಹೆಣ್ಣುಸೆಱೆ ತುಱು ಸೆಱೆ'ಯನ್ನು ಮಾಡಲು ಹರಿಮಾರಗೌಡನ ಮಗ ಮಾರೆಯ ಪೆರಯ ಉಗ್ರವಾಗಿ ಹೋರಾಡಿ ಮರಣ ಹೊಂದಿದನು. ಅನಂತರ ಮಹಾಜನಗಳು ಆ ನಾಡ ಮಹಾಪ್ರಜೆಗೌಡುಗಳು ಸೇರಿ ಆ ಗೌಂಡುಗಳಿಗೆ ಭೂಮಿಯನ್ನು ದಾನ ಮಾಡಿದ ಹಾಗೆ ಕಂಡುಬರುತ್ತದೆ. ಗ್ರಾಮಗಳನ್ನು ಅಗ್ರಹಾರಗಳಾಗಿ ಪರಿವರ್ತಿಸಿದಾಗ ಊರ ಗವುಡುಗಳು ತಮ್ಮ ಹೊಲ, ತೋಟ, ಭೂಮಿ ತಮ್ಮ ಒಡೆತನದಿಂದ ಹೋಗುತ್ತವೆ ಎಂಬ ಕಾರಣದೊಂದಿಗೆ ಹಿಂದಿನ ತಮ್ಮ ಸ್ಥಾನಮಾನಗಳಿಗೆ ಚ್ಯುತಿ ಬರುತ್ತದೆಂಬ ಕಾರಣವೂ ಸೇರಿ ರಾಜಾಜ್ಞೆಯನ್ನೇ ಪ್ರತಿಭಟಿಸುವ ಧೈರ್ಯ ತೋರಿಸಿರಬೇಕು. ಆದರೆ ಪರಿಣಾಮವಂತೂ ದುರಂತವೇ ಆಗಿರುವುದನ್ನು ಕಾಣುತ್ತೇವೆ.

ಅಗ್ರಹಾರದ ಮಹಾಜನರ ಅನೇಕ ಕರ್ತವ್ಯಗಳಲ್ಲಿ ನ್ಯಾಯಪಾಲನೆಯೂ ಒಂದಾಗಿತ್ತು. ಅಗ್ರಹಾರದ ಪ್ರಜೆಗಳಿಗೆ ಯಾವ ತೊಡಕು ಬಂದರೂ ಮಹಾಜನಗಳು ನ್ಯಾಯವನ್ನು ಕಾಣಿಸಿ ಕೊಡುವರೆಂದು ತುರುವೇಕೆರೆಯ ಒಂದು ಶಾಸನ ಹೇಳುತ್ತದೆ.[೪] ಅರಸಿಕೆರೆ ತಾಲ್ಲೂಕಿನ ಒಂದು ಶಾಸನದಲ್ಲಿ 'ಯಿೊ ಕ್ಷೇತ್ರಕ್ಕೆ ಸೀಮಾವಿವಾದವಾದಡೆ ಮಹಾಜನಂಗಳು ತಿದ್ದಿಕೊಡುವರು' ಎಂದು ಹೇಳಲಾಗಿದೆ.[೫] ಗಡಿಗಳಿಗೆ ಸಂಬಂಧಿಸಿದ ವಿವಾದಗಳು ಬಂದರೆ ಮಹಾಜನಗಳು ವಿವಾದವನ್ನು ಪರಿಹರಿಸಿ ಕೊಡಬೇಕಾಗುತ್ತಿತ್ತು. ಹೀಗೆ ಸ್ಥಳೀಯ ಗಡಿವಿವಾದಗಳನ್ನು ಮತ್ತು ಬೇರೆ ವಿವಾದಗಳನ್ನು ಪರಿಹರಿಸುವ ನ್ಯಾಯಾಲಯಗಳಾಗಿ

---

೧. (ಮೈ) ಎಕ VII ನಾಗಮಂಗಲ ೭೪ ಕ್ರಿ.ಶ. ೧೨೭೧.

೨. (ಮೈ) ಎಕ VI ಕೃಷ್ಣರಾಜಪೇಟೆ ೧೦ ಕ್ರಿ.ಶ. ೧೩೧೪.

೩. ಎಂಎಆರ್ ೧೯೩೬ ಬೇಲೂರು ೧೯ ಕ್ರಿ.ಶ. ೧೨೩೦.

೪. (ರೈ) ಎಕ XII ತಿಪಟೂರು ೨ ಕ್ರಿ.ಶ. ೧೨೬೩.

೫. (ರೈ) ಎಕ V ಅರಸಿಕೆರೆ ೧೧೩ ಕ್ರಿ.ಶ. ೧೩೪೪.

ಅವರು ಕಾರ್ಯವನ್ನು ನಿರ್ವಹಿಸಬೇಕಾಗಿತ್ತು. ನ್ಯಾಯಪಾಲನೆಯ ನಿಯಮಗಳನ್ನಾಗಲಿ ಅಥವಾ ಯಾವುದೇ ಅಗ್ರಹಾರದ ನಿಯಮಗಳನ್ನಾಗಲಿ ರೂಢಿಗೆ ತರಲು ಮಹಾಜನರಿಗೆ ಕಷ್ಟವಾಗುತ್ತಿರಲಿಲ್ಲ. ಏಕೆಂದರೆ ನಿಯಮಗಳನ್ನು ರಚಿಸಲಾಗಲಿ ಅಥವಾ ನಿಯಮಗಳನ್ನು ಜಾರಿಗೆ ತರಲಾಗಲಿ ರಾಜ್ಯಾಡಳಿತದ ಬೆಂಬಲ, ಸಹಕಾರ ಸದಾ ಇರುತ್ತಿತ್ತು.

ಮಹಾಜನರು ಅಗ್ರಹಾರಗಳಲ್ಲಿ ಕೆರೆ ಕಟ್ಟೆ ಬಾವಿಗಳ ನಿರ್ಮಾಣ, ಸಂರಕ್ಷಣೆಯನ್ನು ನೋಡಿಕೊಳ್ಳುತ್ತಿದ್ದರು. ಅಗ್ರಹಾರದ ಪ್ರತಿ ಗೃಹಸ್ಥರು ಮಾಳಿಗೆ ಮಾಡಿಸಲು 'ಗುಂಡೋತ್ತರಕ್ಕೆ(?) ಕಲ್ಲಹೊಡ್ಡಿವಡಂ ಬಾವಿಬಚ್ಚಲುಗಳ ಕಟ್ಟಿಸಲುಂ ಕಟ್ಟೆ ಕೆರೆಗಳಿಗೆ ಕೆರೆಗಳಿಗೆ ಕಲ್ಲಹೊಡ್ಡಿವಡಂ ಎಂಮ ತತ್ತಿನ ಹೊಲದೊಳಗಣ ಕಲ್ಲ ಹೊಡಲೀಯೆವೆಂದೆನಲಾಗದು' ಎಂದು ಒಂದು ಶಾಸನ ತಿಳಿಸುತ್ತದೆ.[1] ಊರಿನ ನಾಗರಿಕ ಸೌಲಭ್ಯಗಳಾದ ಮಹಡಿ ಕಟ್ಟಿಸಲು, ಕೊಳಗಳಿಗೆ, ಬಾವಿ, ಕೆರೆಕಟ್ಟೆ, ಬಚ್ಚಲು ನಿರ್ಮಿಸಲು ಹೊಲಗಳಲ್ಲಿರುವ ಬಂಡೆಗಳನ್ನು ಒಡೆಯಲು ಇಲ್ಲವೆನ್ನಬಾರದೆಂದು ಶಾಸನ ವಿಧಿಸುತ್ತದೆ. ಇಲ್ಲಿ ಹೇಳಿರುವ ವಿಷಯಗಳೆಲ್ಲ ಸಾರ್ವಜನಿಕ ನಾಗರಿಕ ಸೌಲಭ್ಯಗಳಾಗಿವೆ. ಆದ್ದರಿಂದ ಅಗ್ರಹಾರದ ಸಾರ್ವಜನಿಕ ವಿಷಯಗಳಿಗೆ ಸಂಬಂಧಿಸಿದಂತೆ ಕಟ್ಟುಪಾಡುಗಳನ್ನು ಹಾಕುವ ಅಧಿಕಾರವೂ ಮಹಾಜನರಿಗೆ ಇದ್ದಿತು ಎಂಬುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ.

ಮಹಾಜನರಿಗೆ ಹಂಚದ ಅಥವಾ ಹಂಚಿಕೊಂಡ ವೃತ್ತಿಗಳು ಅಷ್ಟಾಗಿ ಸರಿಬರದಿದ್ದರೆ ಅನುಕೂಲಕ್ಕೆ ತಕ್ಕಂತೆ ಅದನ್ನು ಬದಲಾಯಿಸಿಕೊಳ್ಳುವ ಹಕ್ಕು ಅವರಿಗೆ ಇದ್ದಿತು. ಎಲ್ಲ ಮಹಾಜನರು ಸಭೆ ಸೇರಿ ಅಂಥ ನಿರ್ಣಯಗಳನ್ನು ಕೈಗೊಳ್ಳುತ್ತಿದ್ದರು. ಸೋಮನಾಥಪುರದ ಶಾಸನವೊಂದರಲ್ಲಿ ಅಗ್ರಹಾರದ ಶೈವಸ್ಥಾನ ಮತ್ತು ವೈಷ್ಣವ ಸ್ಥಾನಗಳ ವೃತ್ತಿಗಳನ್ನು ಮಹಾಜನರು ಮರುಹೊಂದಾಣಿಕೆ ಮಾಡಿಕೊಂಡಿರುವುದು ಕಂಡುಬರುತ್ತದೆ.[2] ಮಹಾಜನರಿಗೆ ಅಗ್ರಹಾರದ ಭೂಮಿಯನ್ನು ವಿಕ್ರಯಿಸುವ ಹಕ್ಕು ಇದ್ದಿತು. ದೇವರಾಳು ಸೋಮನು ಬೆನತೂರಿನ ಅರವತ್ನಾಲ್ಕು ಮಹಾಜನರಿಂದ ಹಣಕೊಟ್ಟು ಭೂಮಿಯನ್ನು ಪಡೆದು ಕೆರೆ ನಿರ್ಮಿಸಲು ದಾನವಾಗಿ ನೀಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[3]

ಅಗ್ರಹಾರದ ಮಹಾಜನರು ಆ ಊರಿನ ಸಮಸ್ತ ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದರು. ದೇವಾಲಯ ನಿರ್ಮಾಣ, ವಿದ್ಯಾಭ್ಯಾಸದ ಚಟುವಟಿಕೆಗಳು, ಕೆರೆ, ಬಾವಿ, ಕಟ್ಟೆಗಳಂತಹ ಸಾರ್ವಜನಿಕ ಸೌಲಭ್ಯಗಳ ಅಭಿವೃದ್ಧಿಗೆ ಪ್ರೋತ್ಸಾಹ, ಅಗ್ರಹಾರದ ರಕ್ಷಣೆಗಾಗಿ ಹೋರಾಡಿದವರಿಗೆ ಗೌರವ ಸಲ್ಲಿಕೆ, ನ್ಯಾಯ ತೀರ್ಮಾನ, ದಾನದತ್ತಿಗಳ ಸಂರಕ್ಷಣೆ ಮತ್ತು ನಿರ್ವಹಣೆ ಮತ್ತು ಅವುಗಳಿಗೆ ಸಾಕ್ಷಿ- ಹೀಗೆ ಮಹಾಜನರು ಅಗ್ರಹಾರಗಳಿಗೆ ಯಜಮಾನರಾಗಿದ್ದಂತೆ ಆ ಕಾಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಅತ್ಯಂತ ಪ್ರಮುಖ ಸ್ಥಾನವನ್ನು ವಹಿಸಿರುವುದು ಕಂಡುಬರುತ್ತದೆ.

**ಹಳ್ಳಿಗಳ ಆಡಳಿತ:**

ಪಟ್ಟಣಗಳಿಗೆ ಹೋಲಿಸಿದರೆ ಹಳ್ಳಿಗಳ ಸಂಖ್ಯೆ ತುಂಬ ಹೆಚ್ಚೆಂದು ಮೇಲ್ನೋಟಕ್ಕೇ ಹೇಳಬಹುದು. ಪ್ರಾಚೀನ ಕರ್ನಾಟಕ ಮಾತ್ರವಲ್ಲ ಪ್ರಾಚೀನ ಭಾರತವೆಂದರೆ ಹಳ್ಳಿಗಳ ದೇಶವೇ ಆಗಿದೆ. ಸಾಮಾನ್ಯ ಸೂತ್ರ ಸಂಪ್ರದಾಯ ರೂಢಿಗಳಿಂದ ಬದ್ಧವಾದ ಗ್ರಾಮೀಣ ಬದುಕು ತನ್ನದೇ ಆದ ರೀತಿಯಲ್ಲಿ ಪ್ರವಹಿಸಿರುವುದನ್ನು ಕಾಣಬಹುದು. ಹಳ್ಳಿಗಳು ತಮ್ಮ ಪಾಲಿನ ತೆರಿಗೆಯನ್ನು ಕೇಂದ್ರಾಡಳಿತಕ್ಕೆ ಸಲ್ಲಿಸಿಬಿಟ್ಟರೆ ಉಳಿದಂತೆ ಸ್ವತಂತ್ರ ಘಟಕಗಳಂತೆ ವ್ಯವಹರಿಸುತ್ತಿದ್ದವು. ಹಳ್ಳಿಯ ಗಾವುಂಡುಗಳು ತಮಗೆ ತಾವೇ ಪರಿಹರಿಸಿಕೊಳ್ಳಲಾಗದ ವಿವಾದಗಳಿದ್ದರೆ, ಶತ್ರುಗಳ ಆಕ್ರಮಣ ಕಾಲದಲ್ಲಿ, ಕ್ಷಾಮ ಡಾಮರಗಳು ಬಂದಾಗ ಕೇಂದ್ರದ ಪ್ರವೇಶವಾಗುತ್ತಿದ್ದಿತು.

---

೧. (ರೈ) ಎಕ XII ತಿಪಟೂರು ೨ ಕ್ರಿ.ಶ. ೧೨೬೩.

೨. (ಮೈ) ಎಕ V ತಿ. ನರಸೀಪುರ ೮೯ ಕ್ರಿ.ಶ. ೧೩೦೦.

೩. ಎಸ್‌ಐಐ XV ಗದಗು ೧೬೧ ಕ್ರಿ.ಶ. ೧೨೧೪.

ಹಳ್ಳಿಗಳಿಗೆ ಈಗಿನಂತೆಯೇ ಗಡಿಗಳನ್ನು ಗುರುತು ಮಾಡುತ್ತಿದ್ದರು. ಸಾಮಾನ್ಯವಾಗಿ ಊರ ಸುತ್ತಮುತ್ತಲಿನ ದಿಬ್ಬ, ಹಳ್ಳ, ಮರ, ಕೆರೆ, ನೆಟ್ಟಕಲ್ಲುಗಳು, ಗುಡ್ಡ ಬೆಟ್ಟ ಮುಂತಾದುವನ್ನು ಗುರುತು ಹೇಳಿ ನಿರ್ದೇಶನ ಮಾಡುತ್ತಿದ್ದರು. ದೇಗಾವೆಯ ಅಗ್ರಹಾರದ ಗಡಿಗಳನ್ನು ಹೇಳುವ ಉದ್ದೇಶದಿಂದಲೇ ರಚಿತವಾದ ಶಾಸನವನ್ನು ಎಂ. ಚಿದಾನಂದಮೂರ್ತಿಯವರು ಗಮನಕ್ಕೆ ತಂದಿದ್ದಾರೆ.[೧] ದಾನಿಗಳು ಯಾವುದೇ ದಾನವನ್ನು ಕೊಟ್ಟಾಗ ದಾನಭೂಮಿಯ ಮೇರೆಗಳನ್ನು ಸಂದಿಗ್ಧತೆಗೆ ಅವಕಾಶವಿಲ್ಲದಂತೆ ಕೊಡುತ್ತಿದ್ದರು. ಈ ಭಾಗಗಳು ಶಾಸನದ ಒಂದು ಅವಿಭಾಜ್ಯ ಅಂಗಗಳೇ ಆಗಿರುವುದನ್ನು ಕಾಣುತ್ತೇವೆ. ಅರ್ಜುನವಾಡದ ಶಾಸನದಲ್ಲಿ ಬರುವ ಕವಿಳಾಸಪುರದ ಅಭಿಜ್ಞೆಯನ್ನು ಮಾಡಲು ಆ ಮೊದಲು ಕೆಲವು ಪ್ರಯತ್ನಗಳು ನಡೆದಿದ್ದರೂ ಎಂ.ಎಂ. ಕಲಬುರ್ಗಿಯವರ ಸೂಚನೆಯನ್ನು ಅನುಸರಿಸಿ ಮುತಾಲಿಕ ಅವರು ಕವಿಳಾಸಪುರವನ್ನು ನಕ್ಷೆಯ ಸಮೇತ ತೋರಿಸಿದ್ದಾರೆ.[೨] ದಾನದ ಮೇರೆಗಳನ್ನು ಹೇಳಿದ ಏಳುನೂರು ವರ್ಷಗಳ ಮೇಲೂ ಮೇರೆಗಳನ್ನು ಗುರುತಿಸುವಷ್ಟು ವಿವರಗಳನ್ನು ಕೊಡುವುದನ್ನು ನೋಡಿದರೆ ಎಷ್ಟು ಸೂಕ್ಷ್ಮವಾಗಿ, ಚಿತ್ರವತ್ತಾಗಿ ವಿವರಗಳನ್ನು ಕೊಡುತ್ತಿದ್ದರು ಎಂಬುದನ್ನು ಗ್ರಹಿಸಬಹುದು.

ಹಳ್ಳಿಗಳಿಗೆ ಸಾಮಾನ್ಯವಾಗಿ ಹೆಬ್ಬಾಗಿಲುಗಳು ಇರುತ್ತಿದ್ದವು. ಇವುಗಳನ್ನು ಕೆಲವು ಗ್ರಾಮಗಳಲ್ಲಿ ಈಗಲೂ 'ಅಗಸೆ ಬಾಗಿಲು'[೩] ಎಂದು ಕರೆಯುತ್ತಾರೆ. ಕುಪ್ಪಗುಡ್ಡೆ ಅಗ್ರಹಾರಕ್ಕೆ ಸೇರಿದ ಕೊರಕೋಡು ಹಳ್ಳಿಯ ತುರುಗಳನ್ನು ಕಳ್ಳರು ಅಪಹರಿಸಿದಾಗ ಬಾವಗವುಂಡನ ಮಕ್ಕಳಾದ ದೇವಗಾವುಂಡ ಮತ್ತು ಮಲ್ಲಿಗಾವುಂಡ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಊರಿನ ಹೆಬ್ಬಾಗಿಲಿನಲ್ಲಿ ಅಡ್ಡಗಟ್ಟಿ ಗುಹೆಯ ಬಾಗಿಲಿನಲ್ಲಿ ಸಿಂಹ ನಿಂತಂತೆ ಹೋರಾಡಿದ ವಿಷಯ ಶಾಸನ ಒಂದರಲ್ಲಿ ಬಂದಿದೆ.[೪] ಊರಿನ ಸುತ್ತ ಕಲ್ಲಿನ ಅಥವಾ ಮಣ್ಣಿನ ಕೋಟೆಗಳು ಇರುತ್ತಿದ್ದವು. ಊರಿನ ಅಂಚಿಗೆ ಅಂಟಿಕೊಂಡಂತೆ ಹೊಲಗೇರಿ[೫] ಇರುತ್ತಿದ್ದಿತು. ಈಗಲೂ ಹೊಲಗೇರಿಗಳು ಊರಿನ ಅಂಚಿಗೆ ಅಂಟಿಕೊಂಡಂತೆ ಇರುವುದನ್ನು ಕಾಣಬಹುದು. ವಿವಿಧ ವೃತ್ತಿಯವರು ಅವರವರ ಕೇರಿಗಳಲ್ಲಿ ವಾಸಿಸುತ್ತಿದ್ದುದು ಕಂಡುಬರುತ್ತದೆ.

ಶಾಸನಗಳನ್ನು ಗಮನಿಸಿದರೆ ಪ್ರದೇಶಗಳನ್ನು ಹೇಳುವಾಗ ಗಂಗವಾಡಿ ತೊಂಬತ್ತಾರು ಸಾವಿರ, ಬನವಾಸಿ ಪನ್ನಿಛ್ಛಾಸಿರ, ಮಗರೆ ಮುನ್ನೂರು, ರಟ್ಟಪಾಡಿ ಸಪ್ತಾರ್ಧಲಕ್ಷ ಎಂಬಂತಹ ಮಾತುಗಳು ಬರುತ್ತವೆ. ಈ ಸ್ಥಳನಾಮಗಳ ಮುಂದಿರುವ ಸಂಖ್ಯೆ ಏನನ್ನು ಸೂಚಿಸುತ್ತದೆ ಎಂಬ ವಿಷಯದಲ್ಲಿ ವಿದ್ವಾಂಸರು ಸಾಕಷ್ಟು ಚರ್ಚೆ ನಡೆಸಿದ್ದಾರೆ. ರೈಸ್ ಅವರು ಆಯಾ ಪ್ರದೇಶಗಳಲ್ಲಿ ಸಂಗ್ರಹವಾಗುತ್ತಿದ್ದ ತೆರಿಗೆಯ ಬಂಗಾರದ ನಾಣ್ಯಗಳೆಂದೂ,[೬] ಫ್ಲೀಟ್ ಅವರು ಕಡಮೆ ಸಂಖ್ಯೆಯು ಗ್ರಾಮಗಳನ್ನು ಸೂಚಿಸುವುದಾದರೂ ದೊಡ್ಡ ಸಂಖ್ಯೆಗಳು ಸಾಂಪ್ರದಾಯಿಕವೆಂದೂ ಭಾವಿಸಿದರು. ಡೆರೆಟ್ ಅವರು ಗಂಗವಾಡಿ ತೊಂಬತ್ತಾರು ಸಾವಿರದ ಬಗ್ಗೆ ಬರೆಯುತ್ತಾ ಅದು ತೀರಾ ಪ್ರಾಚೀನ ಕಾಲದಲ್ಲಿ ಜನರ ವಾಸಸ್ಥಳಗಳ ಬಗ್ಗೆ ಮಾಡಿದ ಒಂದು ಗಣತಿ ಎಂದು

---

೧. ಕಶಾಸಾಂಅ, ಪು. ೩೫೪-೫೫.

೨. ಮುತಾಲಿಕ : 'ಅರ್ಜುನವಾಡ ಶಾಸನದ ಕವಿಳಾಸಪುರ' ಕಭಾ ೨-೧ ಪು. ೧೨೦-೨೬.

೩. 'ಅಗಸೆಬಾಗಿಲು' ಎಂಬುದು ಉತ್ತರ ಕರ್ನಾಟಕದ ಕೆಲವು ವ್ಯಕ್ತಿಗಳ ಕುಲನಾಮವಾಗಿಯೂ ಬಳಕೆಯಾಗುತ್ತಿದೆ. ಆ ಕುಲನಾಮವಿರುವ ಆ ವ್ಯಕ್ತಿಗಳ ವಂಶಜರು ಒಂದು ಕಾಲದಲ್ಲಿ ಅಗಸೆಬಾಗಿಲ ಬಳಿ ಮನೆ ಇದ್ದವರಾಗಿರಬೇಕು.

೪. (ರೈ) ಎಕ VIII ಸೊರಬ ೧೭೫ ಕ್ರಿ.ಶ. ೧೧೫೬.

೫. ಕಇ I ಧಾರವಾಡ ೭೦ ಕ್ರಿ.ಶ. ೧೨೨೧.

೬. B. L. Rice : Mysore and Coorg from Inscriptions ಪು. ೧೭೪. ಆ ಪ್ರದೇಶದ ಆದಾಯವನ್ನು ಸೂಚಿಸುವುದೆಂದು ಎಸ್. ಶ್ರೀಕಂಠಶಾಸ್ತ್ರಿ ಅವರು ಭಾವಿಸುತ್ತಾರೆ. Sources of Karnataka History -I, ಪು. XXV.

ಭಾವಿಸುತ್ತಾರೆ.[1] ಜಿ.ಎಸ್. ದೀಕ್ಷಿತ್ ಅವರು ಈ ವಿಷಯವನ್ನು ವಿವರವಾಗಿ ಚರ್ಚಿಸಿ ಕಡಮೆ ಸಂಖ್ಯೆಗಳು ಅಂದರೆ ಒಂದು ಸಾವಿರದವರೆಗಿನ ಸಂಖ್ಯೆ ಗ್ರಾಮಗಳ ಸಂಖ್ಯೆಯನ್ನು ಸೂಚಿಸಬಹುದಾದರೂ ಮುಂದಿನ ಅಧಿಕ ಸಂಖ್ಯೆಗಳು ಏನನ್ನು ಸೂಚಿಸುತ್ತವೆ ಎನ್ನುವುದನ್ನು ನಿಶ್ಚಿತವಾಗಿ ಹೇಳುವುದು ಕಠಿಣವೆಂದು ಭಾವಿಸುತ್ತಾರೆ.[2] ಶ್ರೀನಿವಾಸ ರಿತ್ತಿಯವರು ಆ ವಿಷಯವನ್ನು ಚರ್ಚಿಸಿದ್ದಾರೆ.[3] ಅವರು 'ಬೆಳ್ವಲ ಮೂನೂಜಿರ' ಬಗ್ಗೆ ಒಂದು ಲೇಖನ ಬರೆದು ಆ ಪ್ರದೇಶದ ಇನ್ನೂರ ನಲ್ವತ್ನಾಲ್ಕು ಹಳ್ಳಿಗಳನ್ನು ಗುರುತಿಸಿ ಸ್ಥಳನಾಮಗಳ ಮುಂದಿರುವ ಸಂಖ್ಯೆ ಗ್ರಾಮಗಳ ಸಂಖ್ಯೆಯನ್ನು ಸೂಚಿಸುವುದೆಂದು ತಿಳಿಸಿದ್ದಾರೆ.[4] ಕೆ.ಜಿ. ಕೃಷ್ಣನ್ ಅವರು 'ರಟ್ಟಪಾಡಿ ಸಪ್ತಾರ್ಧ ಲಕ್ಷ' ಇಡೀ ಚಾಳುಕ್ಯ ಸಾಮ್ರಾಜ್ಯವನ್ನು ಒಳಗೊಂಡಿದ್ದು ಅದು ಈಗ ಸಾಮಾನ್ಯವಾಗಿ ತಿಳಿದಿರುವ ದಖನ್ನಿನ ಪ್ರದೇಶವನ್ನು ಹೇಳುತ್ತದೆ ಎಂದು ಹೇಳಿದ್ದಾರೆ.[5] ಒಟ್ಟಿನಲ್ಲಿ ಸ್ಥಳನಾಮಗಳ ಮುಂದಿರುವ ಸಂಖ್ಯೆ ಆ ಪ್ರದೇಶ ಒಳಗೊಂಡ ಗ್ರಾಮಗಳ ಸಂಖ್ಯೆಯನ್ನು ಹೇಳುತ್ತದೆ ಎಂದು ಬಹುತೇಕ ವಿದ್ವಾಂಸರು ಒಪ್ಪಿದಂತಿದೆ.

ಪ್ರಾಚೀನ ಕರ್ನಾಟಕದ ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ ಧರ್ಮವನ್ನು ಅನುಸರಿಸಿ ದೇವಸ್ಥಾನಗಳು ಪ್ರಮುಖ ಪಾತ್ರವನ್ನು ವಹಿಸುತ್ತಿದ್ದವು. ಹಳ್ಳಿಗಳಾಗಲಿ ಅಥವಾ ನಗರಗಳಾಗಲಿ ಬೆಳೆಯಲು ದೇವಾಲಯಗಳು ಪ್ರಮುಖ ಪಾತ್ರವನ್ನು ವಹಿಸಿವೆ. ಒಂದು ದೇವಾಲಯ ನಿರ್ಮಾಣಗೊಂಡಿತೆಂದರೆ ಅದನ್ನು ಅನುಸರಿಸಿ ಬಹುದೊಡ್ಡ ಸಿಬ್ಬಂದಿ ಅದರ ಆಶ್ರಯವನ್ನು ಪಡೆಯುತ್ತಿತ್ತು. ಅವರ ಮತ್ತು ದೇವಸ್ಥಾನದ ಅಗತ್ಯಗಳಿಗಾಗಿ ಅಂಗಡಿಗಳು, ಬರುವ ಪ್ರವಾಸಿಗರಿಗಾಗಿ ಛತ್ರ- ಹೀಗೆ ಬಹುಬೇಗ ಊರುಗಳು ಬೆಳೆದು ಬಿಡುತ್ತಿದ್ದವು.

**ಗಾವುಂಡ:**

ಗ್ರಾಮಗಳ ಮುಖ್ಯಸ್ಥರನ್ನು ಗಾವುಂಡ,[6] ಗೌಡ, ಗಾಮುಂಡ, ಊರೊಡೆಯ, ಊರ ಪ್ರಭು, ಗ್ರಾಮಣಿ ಎಂಬಂತಹ ಹೆಸರುಗಳಿಂದ ಶಾಸನಗಳು ಕರೆದಿವೆ. ಇಡೀ ಗ್ರಾಮದ ಸಭೆಯನ್ನು ಊರು ಎಂದು ಕರೆಯಲಾಗುತ್ತಿತ್ತು. ಗ್ರಾಮದ ಮುಖ್ಯಸ್ಥನ ಆಯ್ಕೆ ಯಾವ ರೀತಿಯಲ್ಲಿ ಆಗುತ್ತಿತ್ತು ಎಂಬ ವಿಷಯದಲ್ಲಿ ಶಾಸನಗಳು ನೇರವಾಗಿ ಏನನ್ನೂ ಹೇಳುವ ಹಾಗೆ ಕಾಣುವುದಿಲ್ಲ. ರಾಜನಿಂದಾಗಲೀ ಅಥವಾ ಅಧಿಕಾರಿಗಳಿಂದಾಗಲೀ ಗಾವುಂಡನ ನೇಮಕವಾದಂತಿಲ್ಲ. ಗ್ರಾಮಸಭೆಗಳಿಗೆ ಚುನಾವಣೆಗಳು ಇರಲಿಲ್ಲ. ಆದರೆ ಪ್ರತಿನಿಧಿತ್ವವಿದ್ದಿತು[7] ಎಂದು ಎ.ವಿ. ವೆಂಕಟರತ್ನಂ ಅಭಿಪ್ರಾಯ ಪಡುತ್ತಾರೆ. ಊರ ಸಭೆ ಗಾವುಂಡನ ನೇತೃತ್ವದಲ್ಲಿ ಸಭೆ ಸೇರಿ ಆ ಗ್ರಾಮಕ್ಕೆ ಸಂಬಂಧಿಸಿದ ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸುತ್ತಿತ್ತು. ಅದು ಸಭೆಯಲ್ಲಿ ಒಮ್ಮತದಿಂದ ನಿರ್ಣಯಗಳನ್ನು ತೆಗೆದುಕೊಳ್ಳುತ್ತಿತ್ತು. ಶಾಸನಗಳಲ್ಲಿ ಅದನ್ನು 'ನೆರೆದು, ಅನುಮತದಿಂದ, ಒಡಂಬಟ್ಟು, ಏಕಸ್ಥರಾಗಿ' ಎಂಬ ಮಾತುಗಳಿಂದ ಹೇಳುವುದುಂಟು. ದಾಸನೂರಿನ ಒಂದು ಶಾಸನ 'ದಾಸನೂರ ಕಾಂಣಾದರ ರಾಮ

---

೧. J.D.M. Derrett : ಪೂರ್ವೋಕ್ತ 'Inhabited places according to a survey of unknown antiquity', ಪು.೧೨.

೨. G.S.Dixit : ಪೂರ್ವೋಕ್ತ ಪು. ೨೭-೨೮.

೩. Srinivasa Ritti : The Sevunas ಪು. ೩೨೮.

೪. ಶ್ರೀನಿವಾಸ ರಿತ್ತಿ : 'ಬೆಳ್ವೊಲ ಮೂನೂಱು' ಕಭಾ ೧-೧, ಪು. ೮-೮೬.

೫. K. G. Krishnan : 'Rattapadi Seven and a half lack,' Studies in Indian History and culture ಪು. ೨೭೦-೨೭೩.

೬. ಈ ಶಬ್ದದ ನಿಷ್ಪತ್ತಿಯನ್ನು ಎಂ. ಚಿದಾನಂದ ಮೂರ್ತಿಯವರು ಹೀಗೆ ಹೇಳಿದ್ದಾರೆ : ಸಂ. ಗ್ರಾಮಕೂಟ > ಪ್ರಾ. ಗಾಮಉಡ, ಗಾಮಉಡ > ಕನ್ನಡ. ಗಾಮುಂಡ. ಇದೇ ಕ್ರಮೇಣ ಗಾವುಂಡ, ಗೌಂಡ, ಗೌಡ ಎಂದಾಗಿದೆ. ವಿದ್ವಾಂಸರು ಬಹುಮಟ್ಟಿಗೆ ಈ ನಿಷ್ಪತ್ತಿಯನ್ನು ಒಪ್ಪಿದಂತಿದೆ. ಪೂರ್ವೋಕ್ತ ಗ್ರಂಥ, ಅಡಿಟಿಪ್ಪಣಿ ಪು. ೩೫೭.

೭. A. V.Venkataratnam : 'Village Autonomy under the Hoysalas' The Hoysala Dynasty ಪು. ೧೩೯-೪೦.

ಗೌಂಡನ ಮಗ ಹೆಗ್ಗಡೆ ಕಾರೆ ಗೌಂಡನ ಮಂಚಿ ಗೌಂಡ ಪತ್ತುರ್ವ್ವ ಗೌಂಡ ಮಲುಹದೇವಸಿಗೆಲುಂಡನ... ನಾಚಾರಿ ಪೆರುಮಾಳ ತಂಬಿ... ಇಂತೀ ಸಮಸ್ತ ಪ್ರಜೆಯು ಒಡಂಬಟ್ಟು ವಿಶ್ವನಾಥ ದೇವರಿಗೆ ಒಂದು ದೀವಿಗೆ ಉಪಾರಕ್ಕೆ'ದಾನ ಬಿಟ್ಟ ವಿಷಯ ತಿಳಿಸುತ್ತದೆ.[೧]

ಗಾವುಂಡುಗಳು ಊರಿನ ಯಾವುದೇ ಧರ್ಮಕಾರ್ಯಗಳಿಗೆ ಮುಂದೆ ನಿಲ್ಲುತ್ತಿದ್ದರು. ಅವರು ಸ್ವತಂತ್ರವಾಗಿಯೋ ಅಥವಾ ಇತರ ಸ್ಥಳೀಯ ಸಂಸ್ಥೆಗಳ[೨] ಜೊತೆ ಸೇರಿಯೋ ಅಥವಾ ಬೇರೆ ಅಧಿಕಾರಿಗಳ ಜೊತೆ ಸೇರಿಯೋ ಅನೇಕ ಧರ್ಮ ಕಾರ್ಯಗಳಲ್ಲಿ ಭಾಗಿಗಳಾಗಿದ್ದಾರೆ. ಮೈದೂರಿನ ಶಾಸನದಲ್ಲಿ ಮಹಾ ಮಂಡಲೇಶ್ವರ ಕುಮಾರ ವೀರ ವಿಕ್ರಮಾದಿತ್ಯ ದೇವನು ಸುಸಂಗ ದಂಡನಾಯಕರು ಅಲ್ಲದೆ ಸಮಸ್ತ ಪರಿವಾರ ಗುಡಿಗೇರಿಯ ಕಾಮಗಾವುಂಡ ಅಜುವತ್ತೊಕ್ಕಲು ಮುಖ್ಯವಾಗಿ ಕಲಿದೇವರಿಗೆ ಭೂಮಿದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೩] ಗ್ರಾಮದಲ್ಲಿ ಯಾವುದೇ ಪ್ರಮುಖ ಕಾರ್ಯ ನಡೆದರೂ ಗಾವುಂಡುಗಳ ಸಮಕ್ಷದಲ್ಲಿ ನಡೆಯುತ್ತಿತ್ತು; ಆಗ ಆ ಕಾರ್ಯಕ್ಕೆ ಅಧಿಕೃತತೆ ಬರುತ್ತಿತ್ತು. ಅಲ್ಲದೆ ಅದು ಪರೋಕ್ಷವಾಗಿ ಊರಿನ ಒಪ್ಪಿಗೆ ಪಡೆದಂತಾಗುತ್ತಿತ್ತು. ದಾನವಾಗಿ ಪಡೆದ ಭೂಮಿಯನ್ನು ಮಚಜೀಯ ಮತ್ತು ಮಲ್ಲಜೀಯರು ಹಂಚಿಕೊಂಡು ಅನುಭವಿಸುತ್ತಿದ್ದರು. ಮಲ್ಲಜೀಯನು ತನ್ನ ಭಾಗವನ್ನು ಕಜೀಯನಿಗೆ ನಾಗಗೌಡ ನಾಕಿಗೌಡನೊಳಗಾದ ಸಮಸ್ತ ಪ್ರಜೆಗಉಡ (ಗೌಡ)ರ ಮುಂದೆ ದಾನವಾಗಿ ಕೊಟ್ಟ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೪] ಹೊಯ್ಸಳ ನರಸಿಂಹನು ಸೋಮನಾಥಪುರದ ಪ್ರಸನ್ನ ಕೇಶವ ಗೋಪಾಲ ಜನಾರ್ದನ ಲಕ್ಷ್ಮೀನರಸಿಂಹ ರಂಗನಾಥ ದೇವರಿಗಾಗಿ ದಾನಗಳನ್ನು ನೀಡಿ ಕೆಲವು ತೆರಿಗೆಗಳ ರಿಯಾಯಿತಿಯನ್ನು ನೀಡಿದ ವಿಷಯ ತಿಳಿಸಿದ ನಂತರ 'ಯಿಂತಪ್ಪುದಕ್ಕೆ ಹದಿನಾಲ್ಕು ನಾಡ ಸಮಸ್ತ ಮಹಾಪ್ರಭು ಗೌಡುಗಳೊಪ್ಪ ಸ್ವಹಸ್ತದೊಪ್ಪ ಯಿಂತಪ್ಪುದಕ್ಕೆ ಆದಿನಾಡು ಗೌಡ ಒಪ್ಪ'[೫] ಎಂದು ಶಾಸನದ ಅಂತ್ಯದಲ್ಲಿ ಹೇಳಲಾಗಿದೆ.

ಊರಿನ ಯಾವುದೇ ವ್ಯಕ್ತಿ ಶೌರ್ಯ ತೋರಿ ಹೋರಾಡಿ ಮಡಿದರೆ ಅವನ ಶೌರ್ಯವನ್ನು ಗೌರವಿಸಿ ಮೃತನ ಕುಟುಂಬಕ್ಕೆ ಭೂಮಿಯನ್ನು ದಾನವಾಗಿ ಕೊಡುವುದರ ಮೂಲಕ ಶೌರ್ಯವನ್ನು ಮೆಚ್ಚುವುದರೊಂದಿಗೆ, ಮೃತನ ಕುಟುಂಬದವರು ನಿರ್ಗತಿಕರಾಗದ ಹಾಗೆ ನೋಡಿಕೊಂಡು, ದೊಡ್ಡ ಸಾಮಾಜಿಕ ಜವಾಬ್ದಾರಿಯನ್ನು ಗವುಂಡುಗಳು ನಿರ್ವಹಿಸುತ್ತಿದ್ದರು. ತಿದಿವಳ್ಳಿಯ ಗವುಂಡುಗಳೊಡನೆ ಸಂಕಾಚಾರಿಯ ಮಗನಾದ ಕವಿಲೆಚಾರಿ ಕಿಜೆಯ ಕಲುಕಣಿಯ ಬವರಕೆ ಹೋಗಿ ಕಾದಿ ಸತ್ತಾಗ ಸಮಸ್ತ ಪ್ರಭು ಗಾವುಂಡುಗಳು ಬಿದಿರವಳ್ಳಿಯ ಪುರದಲ್ಲಿ ಎಂಟು ಕೊಳಗ ಗದ್ದೆಯನ್ನು ಕೊಟ್ಟಿರುವುದನ್ನು ಶಾಸನವೊಂದು ತಿಳಿಸುತ್ತದೆ.[೬] ಬೆಣ್ಣವೂರು ಮತ್ತು ಮಲವೂರಿಗೆ ಸೀಮಾ ಸಂಬಂಧ ಕಲಹವಾದಾಗ ಜಕ್ಕ ಮತ್ತು ಚವುಡ ಸತ್ತರು. ಬೊಪ್ಪಗೌಡ ಮುಖ್ಯವಾಗಿ ಬೆಣ್ಣೆವೂರಿನ ಹನ್ನೆರಡು ಜನ ಗಾವುಂಡುಗಳು ಮೆಚ್ಚಿ ಭೂಮಿದಾನವನ್ನು ಮಾಡಿದ ವಿಷಯ ಇನ್ನೊಂದು ಶಾಸನದಲ್ಲಿ ಬರುತ್ತದೆ.[೭]

---

೧. (ಮೈ) ಎಕ III ನಂಜನಗೂಡು ೨೯೦ ಕ್ರಿ.ಶ. ೧೨೭೮.

೨. ಅಜುವತ್ತೊಕ್ಕಲು, ಹಲರು, ಹದಿನೆಂಟು ಜಾತಿ, ಎಂಟು ಹಿಟ್ಟು, ಮುಂತಾದ ಗ್ರಾಮದ ಸಂಸ್ಥೆಗಳು ಇದ್ದವು. ಕೆಲವನ್ನು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

೩. ಎಸ್ಐಐ XVIII ರಾಣೆಬೆನ್ನೂರು ೧೯೦ ಕ್ರಿ.ಶ. ೧೧೮೨.

೪. (ರೈ) ಎಕ V ಅರಸಿಕೆರೆ ೧೦೪ ಕ್ರಿ.ಶ. ೧೧೯೬.

೫. (ಮೈ) ಎಕ V ಮೈಸೂರು ೧೧೯ ಕ್ರಿ.ಶ. ೧೩ ಶಮಾ.

೬. ಎಂಎಆರ್ ೧೯೩೩ ಟಿ. ನರಸೀಪುರ ೬೩ ಕ್ರಿ.ಶ. ೧೩ ಶಮಾ.

೭. ಎಸ್ಐಐ XVIII ರಾಣೆಬೆನ್ನೂರು ೨೧೦ ಕ್ರಿ.ಶ. ೧೨೨೮.

ಪ್ರಾಚೀನ ಕಾಲದಲ್ಲಿ ಗ್ರಾಮ- ಗ್ರಾಮಗಳ ಮಧ್ಯೆ ಸೀಮಾ ವಿವಾದದ ವಿಷಯಗಳಲ್ಲಿ ಹೋರಾಟಗಳು ನಡೆಯುತ್ತಿದ್ದವು. ಕೆಲವು ಸಾರಿ ಅಕ್ಕ ಪಕ್ಕದ ಹಳ್ಳಿಗಳ ಗಾವುಂಡುಗಳು ಸೇರಿ ವಿವಾದವನ್ನು ಪರಿಹರಿಸುತ್ತಿದ್ದುದುಂಟು. ಇಂಥ ಕಡೆ ಗಾವುಂಡುಗಳು ಸ್ಥಳೀಯ ನ್ಯಾಯ ತೀರ್ಮಾನಗಳನ್ನು ಮಾಡುವುದು ಕಂಡುಬರುತ್ತದೆ. ಇಂದವರದವರು ಉಪ್ಪವಳ್ಳಿಯವರೊಡನೆ ಹೊಲಮೇರೆಗಾಗಿ ಕಾದಾಟ ಮಾಡುವಾಗ ಚಂಡಗಾವುಂಡ ಮತ್ತು ಇತರರು ಸಾಯುತ್ತಾರೆ. ಆಗ 'ಡೊಂಬತ್ತು ನಾಡೂರ ಕಣಗಿಲೆ ದೇಕಣ ಹೆಗಡೆಯವರು' ಎರಡು ಪಕ್ಷದಲ್ಲಿ ಯಾರೂ ಸಾಯಬಾರದೆಂದು ಎರಡೂ ಊರಿನ ಹಿರಿಯರನ್ನು ಕರೆಸಿ ಆ ಎರಡೂ ಊರುಗಳ ಗಡಿಗಳನ್ನು ಹೊಸದಾಗಿ ಗುರುತು ಮಾಡಿ, ಹೋರಾಟದಲ್ಲಿ ಮಡಿದ ಉಪ್ಪರವಳ್ಳಿಯವರಿಗೆ ನಷ್ಟ ತುಂಬಿಕೊಡಲು ಇಂದವರದವರು ಹೊನ್ನು ಕೊಡುವಂತೆ[೧] ಮಾಡುತ್ತಾರೆ. ಹೀಗೆ ವಿವಾದಗಳು ಉಂಟಾದಾಗ ಅಕ್ಕಪಕ್ಕದ ಗ್ರಾಮದವರು ಮಧ್ಯೆ ಪ್ರವೇಶಿಸಿ ನ್ಯಾಯ ತೀರ್ಮಾನ ಮಾಡಿ ಶಾಂತಿ ನೆಲೆಸುವಂತೆ ಮಾಡುತ್ತಿದ್ದರು.

ಎಲ್ಲ ಸಾರಿಯೂ ಇಂಥ ವಿವಾದಗಳನ್ನು ಗೌಡುಗಳೇ ಪರಿಹರಿಸಲು ಸಾಧ್ಯವಾಗುತ್ತಿರಲಿಲ್ಲ. ಗೌಡುಗಳು ತಮ್ಮ ಕೈಮೀರಿದ ವಿವಾದಗಳನ್ನು ಮೇಲಿನ ಅಧಿಕಾರಿಗಳ ಗಮನಕ್ಕೆ ಅಥವಾ ರಾಜನ ಗಮನಕ್ಕೆ ತರುತ್ತಿದ್ದರು. ಹೊಯ್ಸಳ ನರಸಿಂಹನು ಸಿಲಗೋಡಿನಲ್ಲಿ ಹೊಜಬೀಡು ಬಿಟ್ಟಿದ್ದಾಗ ಅನೇಕ ಊರುಗಳ ಗೌಡುಗಳು ಒಟ್ಟಾಗಿ ನೊಣಂಬವಾಡಿ ಮತ್ತು ಗಂಗವಾಡಿಯ ಗಡಿವಿವಾದದ ವಿಷಯವನ್ನು ರಾಜನಿಗೆ ತಿಳಿಸಲು ರಾಜನು ತನ್ನ ಪಂಚಪ್ರಧಾನರೊಂದಿಗಿದ್ದು ಆ ಗಡಿವಿವಾದವನ್ನು ಪರಿಹರಿಸಿ ನಿರ್ಣಯ ಕೊಟ್ಟದ್ದನ್ನು ಒಂದು ಶಾಸನ ನಿರೂಪಿಸುತ್ತದೆ.[೨]

ಗ್ರಾಮಗಳ ಆಡಳಿತದಲ್ಲಿ ಗಾವುಂಡನಿಗೆ ಆಪ್ತಕಾರ್ಯದರ್ಶಿಯಂತೆ ಸೇನಬೋವನಿರುತ್ತಿದ್ದನು. ಬರವಣಿಗೆಯಲ್ಲಿ ಆತ ಪಳಗಿದವನಾಗಿರುತ್ತಿದ್ದ. ಅನೇಕ ಶಾಸನಗಳ ಕೊನೆಯಲ್ಲಿ ಶಾಸನವನ್ನು ಬರೆದಾತ ಸೇನಬೋವನೆಂಬ ಮಾತು ಕಂಡುಬರುತ್ತದೆ. ನಿದರ್ಶನಕ್ಕೆ- ಚಿಕ್ಕಮಗಳೂರು ತಾಲ್ಲೂಕಿನ ಒಂದು ವೀರಗಲ್ಲಿನ ಪಾಠವನ್ನು ಬರೆದವನು ಸೇನಬೋವ ಮಾಯಣ್ಣನೆಂದು ಶಾಸನದ ಕೊನೆಯಲ್ಲಿ ಹೇಳಲಾಗಿದೆ.[೩]

ಪಾಂಡ್ಯದೇವ ಆಳುಪೇಂದ್ರನು ಅರಮನೆಯಲ್ಲಿ ಸಭೆ ಕರೆದು ಅನೇಕ ಅಧಿಕಾರಿಗಳ ಸಮ್ಮುಖದಲ್ಲಿ ಕುಂದಾಪುರ ಗ್ರಾಮಕ್ಕೆ ವರ್ಷಕ್ಕೆ ನೂರನಲ್ವತ್ತು ಸಮುದಾಯ ಗದ್ಯಾಣಗಳನ್ನು ನಿಗದಿಪಡಿಸಿ 'ಯಿದಕ್ಕೆ ಯರಸು ಪ್ರಧಾನರು ಯಧಿಕಾರಿ ಗ್ರಾಮಣಿಗಳು ಆರೊಬ್ಬರುಂ ಯಿಲ್ಲೆಂದರಾದಡೆ ಗಂಗೆ ವಾರಣಾಸಿಯ ತಡಿಯಲು...'[೪] ಎಂದು ನಿರೂಪಿಸುತ್ತದೆ. ತುಳುನಾಡಿನ ಪ್ರದೇಶಗಳಲ್ಲಿ ಗಾವುಂಡುಗಳನ್ನು ಗ್ರಾಮಣಿ (ಸಂ.ಗ್ರಾಮಣೀ) ಎಂದು ಕರೆಯುತ್ತಿದ್ದಂತೆ ಕಂಡುಬರುತ್ತದೆ. ಕೆಲವು ಶಾಸನಗಳಲ್ಲಿ ಚವುಗಾವೆ[೫] (ಚೌಗಾವೆ) ದಾನಗಳಿಗೆ ಸಾಕ್ಷಿಯಾಗಿ ಕಾಣಿಸಿಕೊಳ್ಳುವುದುಂಟು. ಇದು ನಾಲ್ಕು ಗ್ರಾಮಗಳ ಒಕ್ಕೂಟವೆಂದು ಭಾವಿಸಬಹುದು.

ಗಾವುಂಡನಿಗೆ ಗ್ರಾಮಕಾರ್ಯವನ್ನು ನಿರ್ವಹಿಸುವುದಕ್ಕಾಗಿ ಪ್ರತಿಫಲ ಇರುತ್ತಿತ್ತು. ಚಂದ್ರಗೌಡನೆನ್ನುವನು ಹಿಂದಣ ತನ್ನ ಗೌಡಿಕೆಯ ಬಾಳೆಯ ತೋಟವನ್ನು ಯಿಪ್ಪತ್ತೈದು ಕಂ...ತತು ಕಾಲೋಚಿತ ಕ್ರಯದ್ರಬ್ಯ ಗದ್ಯಾಣಂ ಮೂಜಿರ ಮರಿಯಾದೆಯ ಲಾ ಕಂಬ ಇಪ್ಪತ್ತೈದಕಂ ಗದ್ಯಾಣಂ ಎಪ್ಪತ್ತೈದನು ಚೌಂಡ ಗೌಂಡನಿಗೆ ಕೊಟ್ಟನು. ಆ ತೋಟವನ್ನು ಕೊಂಡ ಚವುಡೇಗೌಡ ಗೌಡು

---

೧. ಎಂಎಆರ್ ೧೯೩೨ ಚಿಕ್ಕಮಗಳೂರು ೧೨ ಕ್ರಿ.ಶ. ೧೧೯೦.

೨. (ರೈ) ಎಕ VII ಚನ್ನಗಿರಿ ೭೨ ಕ್ರಿ.ಶ. ೧೨೨೦.

೩. ಎಂಎಆರ್ ೧೯೩೨ ಚಿಕ್ಕಮಗಳೂರು ೨೩ ಕ್ರಿ.ಶ. ೧೩೧೩.

೪. ತುಸಾಶಾ I ಕುಂದಾಪುರ ೪೩ ಕ್ರಿ.ಶ. ೧೨೬೨.

೫. (ರೈ) ಎಕ XI ದಾವಣಗೆರೆ ೧೬೩ ಕ್ರಿ.ಶ. ೧೨೬೫.

ಮರಿಯಾದ ಏನು ಬಂದರೂ ತೆರಬೇಕೆಂದು ಶಾಸನವೊಂದು ನಿರೂಪಿಸುತ್ತದೆ.[೧] ಇದರಿಂದ ಗೌಡಿಕೆ ಮಾಡಿದ್ದಕ್ಕಾಗಿ ಪ್ರತಿಫಲವಿರುತ್ತಿದ್ದಿತೆಂದೂ, ಯಾವುದೇ ಕಾರಣಕ್ಕೆ ಗೌಡಿಕೆ ಬಿಟ್ಟನಂತರ ಆ ಆಸ್ತಿಯನ್ನು ವಿಕ್ರಯ ಮಾಡುವ ಅಧಿಕಾರ ಗೌಡನಿಗೆ ಇರುತ್ತಿತ್ತು ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ. ಸಾಮಾನ್ಯವಾಗಿ ಗಾವುಂಡ ಪದವಿ ಆನುವಂಶೀಯವಾಗಿ ನಡೆದು ಬರುತ್ತಿತ್ತೆಂದು ತಿಳಿಯಬಹುದು.

**ನ್ಯಾಯ ಪರಿಪಾಲನೆ:**

ಕೇಂದ್ರದ ಆಡಳಿತವಾಗಲಿ ಸ್ಥಳೀಯ ಆಡಳಿತಗಳಾಗಲಿ ದುಷ್ಟನಿಗ್ರಹ ಶಿಷ್ಟ ರಕ್ಷಣೆಯನ್ನು ಮುಖ್ಯ ಗುರಿಯಾಗಿ ಇಟ್ಟುಕೊಂಡಿದ್ದವು. ಪ್ರಾಚೀನ ಕಾಲದಿಂದಲೂ ದಂಡನೀತಿ ನ್ಯಾಯ ಪರಿಪಾಲನೆಯಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದಿದೆ. ಸಣ್ಣ ಪುಟ್ಟ ವಿವಾದಗಳಾದರೆ ಊರಿನ ಹಿರಿಯರು, ಗಾವುಂಡರು, ನಾಳ್ಪ್ರಭುಗಳು, ಅಧಿಕಾರಿಗಳು ಸೇರಿ ಪರಿಹರಿಸುತ್ತಿದ್ದರು. ಅಪರಾಧಗಳಿಗೆ ಶಿಕ್ಷೆಗಳನ್ನೂ ವಿಧಿಸುತ್ತಿದ್ದರು. ಯಾವ ವಿವಾದಗಳನ್ನು ಸ್ಥಳೀಯ ಅಧಿಕಾರಿಗಳು ತೀರ್ಮಾನಿಸಲು ಸಾಧ್ಯವಾಗುತ್ತಿರಲಿಲ್ಲವೋ ಅಂಥವನ್ನು ರಾಜನೇ ನಿರ್ಣಯಿಸುತ್ತಿದ್ದನು. ರಾಜನು ಅಂಥ ಸಮಯದಲ್ಲಿ 'ಧರ್ಮಾಧಿಕರಣ' ದವರನ್ನು ತನ್ನ ಸಹಾಯಕ್ಕೆ ಇಟ್ಟುಕೊಳ್ಳುತ್ತಿದ್ದನೆಂಬುದಕ್ಕೆ ಹರಿಶ್ಚಂದ್ರ ಕಾವ್ಯದಲ್ಲಿ ಸೂಚನೆ ಇದೆ.[೨]

ಶಾಸನಗಳ ಕೊನೆಯ ಭಾಗದಲ್ಲಿ ದಾನವನ್ನು ಅಪಹರಿಸಿದರೆ ಆಗುವ ಅನಾಹುತಗಳನ್ನು ಹೇಳುವ ವಾಕ್ಯಗಳು ಇರುತ್ತವೆ. ಇವನ್ನು ಶಾಪಾಶಯಗಳೆಂದು ಕರೆಯಲಾಗುತ್ತದೆ. ಅದೇ ರೀತಿ ದಾನವನ್ನು ರಕ್ಷಿಸಿದರೆ ದೊರೆಯುವ ಪುಣ್ಯವನ್ನು ಹೇಳುವ ಮಾತುಗಳನ್ನು ಪುಣ್ಯಾಶಯಗಳೆಂದು ಕರೆಯಲಾಗುತ್ತದೆ. ಶಾಸನಗಳಲ್ಲಿ, ಕೊಟ್ಟ ದಾನಗಳನ್ನು ಅಪಹರಿಸದ ಹಾಗೆ ತಡೆಯಲು ನಾನಾ ಪರಿಕಲ್ಪನೆಗಳನ್ನು ಬಳಸಿ ಪ್ರಯತ್ನಿಸಿರುವುದುಂಟು.[೩] ಆದರೆ ಶಾಸನಗಳಲ್ಲಿ ಕಂಡುಬರುವ ತೀವ್ರ ಸ್ವರೂಪದ ಶಾಪಾಶಯಗಳನ್ನು ನೋಡಿದರೆ ಅಪರಾಧ ಪ್ರಮಾಣ ಬೆಳೆದ ಹಾಗೆ ಕಂಡುಬರುತ್ತದೆ. ವಿಜಯನಗರದ ಶಾಸನಗಳ ಕಾಲದ ಹೊತ್ತಿಗೆ ತೀರಾ ಅಶ್ಲೀಲವೆನ್ನಬಹುದಾದ ಶಾಪಾಶಯಗಳು ಕಾಣಿಸಿಕೊಂಡಿವೆ. ಒಟ್ಟಿನಲ್ಲಿ ಧಾರ್ಮಿಕವಾದ ಅಥವಾ ಇನ್ನಾವುದೇ ಒತ್ತಡದಿಂದ ಜನರನ್ನು ಅಪರಾಧದಿಂದ ದೂರವಿಡಲು ಸಾಧ್ಯವಾದಂತಿಲ್ಲ. ಆದ್ದರಿಂದ ಅಪರಾಧಕ್ಕೆ ಯೋಗ್ಯ ಶಿಕ್ಷೆ ಅನಿವಾರ್ಯವಾಗುತ್ತಿತ್ತು.

ಸ್ಥಳೀಯ ಸಂಸ್ಥೆಗಳಾಗಲಿ, ರಾಜ್ಯಾಡಳಿತವಾಗಲಿ ನ್ಯಾಯ ತೀರ್ಮಾನ ಮಾಡುವ ಮೊದಲು ಎರಡೂ ಪಕ್ಷಗಳನ್ನು ಸರಿಯಾಗಿ ವಿಚಾರಣೆಗೆ ಒಳಪಡಿಸಿ ಅನಂತರ ನ್ಯಾಯ ತೀರ್ಮಾನ ಕೈಗೊಳ್ಳುತ್ತಿದ್ದವು. ರಾಜನು ಪ್ರಜೆಗಳಿಗೆ ಮಾರ್ಗಸೂಚಿಗಳಂತೆ ಆಜ್ಞೆಗಳನ್ನು ಹೊರಡಿಸುತ್ತಿದ್ದನು. ಯಾವ ಅಪರಾಧಕ್ಕೆ ಎಷ್ಟು ಶಿಕ್ಷೆ, ಎಷ್ಟು ದಂಡ ಎಂಬುದನ್ನು ಮಾತ್ರ ರಾಜ ಮೊದಲೇ ನಿರ್ಧರಿಸಿರುತ್ತಿದ್ದನು. ಅಪರಾಧ ನಿರ್ಣಯವನ್ನು ಸ್ಥಳೀಯರೇ ಮಾಡುತ್ತಿದ್ದರೆಂದು ಕಾಣುತ್ತದೆ.[೪]

ಕಲ್ಯಾಣಿ ಸೋಮೇಶ್ವರನ ರಾಣಿ ಅಕ್ಕಾದೇವಿ ಸಾಮ್ರಾಜ್ಯದ ಕೆಲವು ಭಾಗಗಳನ್ನು ಆಳ್ವಿಕೆ ಮಾಡುತ್ತಿದ್ದಳು. ಆಗ ಚೋಳಿಕರ ಪ್ರಘಟ್ಟಕದಿಂದ ಎಂಟು ಜನ ವರ್ತಕರಿಗೂ ಮತ್ತು ಎಂಬತ್ತು ಒಕ್ಕಲಿಗೂ (ಬಹುಶಃ ದಾಳಿಯಿಂದ) ನಷ್ಟವಾದಾಗ ರಾಣಿಯು

---

೧. (ರೈ) ಎಕ V ಅರಸಿಕೆರೆ ೨೦ ಕ್ರಿ.ಶ. ೧೨೭೬.

೨. ಹ.ಕಾ. : ೧೩:೭.

೩. ವಿವರಗಳಿಗೆ ನೋಡಿ : ಎಂ. ಚಿದಾನಂದ ಮೂರ್ತಿ ಮತ್ತು ಸಿ.ಯು. ಮಂಜುನಾಥ್ 'ಶಾಸನಗಳಲ್ಲಿ ಕಂಡುಬರುವ ಕನ್ನಡ ಫಲಶ್ರುತಿಗಳು -ಒಂದು ಅಭ್ಯಾಸ' ಅಧ್ಯಯನ, ಪು. ೩೫೦-೩೫೮

೪. ಎಂ. ಚಿದಾನಂದಮೂರ್ತಿ : ಕಶಾಸಾಂಅ, ಪು. ೩೪೩.

ತನ್ನ ಸಮಸ್ತ ಪ್ರಧಾನರಾದ ಮನೆವೆಗ್ಗಡೆ ಕಾಳಿದಾಸಯ್ಯ, ತಂತ್ರಪಾಳ ಮಲ್ಲಯ್ಯ, ತಂತ್ರಪಾಲ ಚಿಟ್ಟಮಯ್ಯ, ಪ್ರಧಾನ ಪೆಮ್ಮಣ್ಣ, ಅಳಿಯ ಚಂದಿಮಯ್ಯ, ಅಡಪದ ಚಾವುಂಡರಾಯ, ತಂತ್ರದ ಸೇನಬೋವ ದಾಸಿಮಯ್ಯ, ಸಾಮಂತ ಪ್ರಧಾನರು, ನಾಡಹೆಗ್ಗಡೆ ನಾಗದೇವಯ್ಯ, ಪ್ರಮುಖ ಕರಣರು ಇದ್ದು ಅವರಿಗೆ ನ್ಯಾಯವಾಗಿ ಸಲ್ಲಬೇಕಾದ ಅಂಗಡಿ ಹೊಲ ಮನೆಗಳನ್ನು ಕೊಡಿಸಿ ಇಡೀ ಕಿಸುಗಾಡು ಎಪ್ಪತ್ತಕ್ಕೆ ಅನೇಕ ಸುಂಕಗಳನ್ನು ಬಿಟ್ಟು ಕೊಡಬೇಕೆಂದೂ, ಪಟ್ಟಣದಲ್ಲಿ ಏನಾದರೂ ಅನ್ಯಾಯ ನಡೆದರೆ ತಳವಾರನನ್ನು ಹೊಣೆ ಮಾಡಿ ಅನಂತರ ಕೆಲವು ದಂಡದ ನಿಯಮಗಳನ್ನು ಶಾಸನದಲ್ಲಿ[೧] ಹೇಳಲಾಗಿದೆ. 'ತಂದೆಯ ದೋಷಂ ಮಗನನೆಯ್ದದು ಮಗನ ದೋಷಂ ತಂದೆಯನೆಯ್ದದು ಕಳ್ಳಂ ಬಂದಿಕಾಱಂ ಮಂಚಲ್ವಿಡಿವವಂ ಪಗೆವಂ ಪೊಲ್ಲ ಮಾನಸನಿಂತಿವರನಂಗಡಿಯ ತಡಿಕೆಯ ಕೀಳಿಲ ಕೆಳಗಿಱಿದೊಡೆ ದಂಡಂ ದೋಷಂ ಇಲ್ಲ। ಇರಿದವಂಗೆ ದಂಡಂ ಪೊಂಗದ್ಯಾಣಂ ಆಱು... ಮಿಕ್ಕಾತಂಗೆ ದಂಡಂ ಪಣವೊಂದು ಪೊಯ್ದವಂಗೆ ದಂಡಂ ಪಣವೆರಡು...' ಈ ಶಾಸನ ಕೆಲವು ವಿಶೇಷ ಸಂಗತಿಗಳನ್ನು ಹೇಳುತ್ತದೆ. ಅಕ್ಕಾದೇವಿಯು ಅನೇಕ ಅಧಿಕಾರಿಗಳ ಸಮ್ಮುಖದಲ್ಲಿ ಈ ಆಜ್ಞೆಯನ್ನು ಹೊರಡಿಸಿದ್ದಾಳೆ. ಬಹುಶಃ ಅಧಿಕಾರಿಗಳೊಂದಿಗೆ ಚರ್ಚಿಸಿದನಂತರ ದಂಡದ ಪ್ರಮಾಣವನ್ನು ನಿಗದಿಗೊಳಿಸಿರಬೇಕು. ತಂದೆ ಮಾಡಿದ ದೋಷ ಮಗನನ್ನು ತಲುಪದು. ಹಾಗೆಯೇ ಮಗ ಮಾಡಿದ ದೋಷ ತಂದೆಯನ್ನು ತಲುಪದು. ಅಂದರೆ ಅವರವರ ದೋಷಗಳಿಗೆ ಅವರವರೇ ಜವಾಬ್ದಾರರು ಎಂದಿರಬೇಕು. ಕಳ್ಳನನ್ನಾಗಲಿ, ಬಂದಿಕಾರನನ್ನಾಗಲಿ (-ಸುಲಿಗೆ ಮಾಡುವವನು), ಮಂಚಲ್ವಿಡಿವವನನ್ನಾಗಲಿ[೨] (ಮಂಚಲ್=ಮೋಸ, ವಂಚನೆ), ಹಗೆಯನ್ನಾಗಲಿ, ಕೆಟ್ಟ ಮನುಷ್ಯನನ್ನಾಗಲಿ ಅಂಗಡಿಯ ತಡಿಕೆಯ ಕೆಳಗೆ ಇರಿದರೆ ದಂಡದೋಷಗಳಿಲ್ಲ. ಅನ್ಯರನ್ನು ಇರಿದರೆ, ಹೊಡೆದರೆ ಅದಕ್ಕೆ ತಕ್ಕ ದಂಡವನ್ನು ಕೊಡಬೇಕಾಗುವುದೆಂದು ಹೇಳುತ್ತದೆ.

ಮಂಗಳೂರಿನ ಆಳುಪೇಂದ್ರನ ಒಂದು ಶಾಸನ ನ್ಯಾಯಪಾಲನೆಯ ಬಗ್ಗೆ, ದೇವಾಲಯದ ಆಡಳಿತದ ಬಗ್ಗೆ ಕೆಲವು ಮುಖ್ಯ ವಿಷಯಗಳನ್ನು ತಿಳಿಸುತ್ತದೆ. ದೇವಾಲಯದ ಸಿಬ್ಬಂದಿಯ ಮೇಲೆ ಆಕ್ರಮಣ ಮಾಡಿದರೆ, ಆಸ್ತಿ ಅಪಹರಣಕ್ಕೆ ಪ್ರಯತ್ನಿಸಿದರೆ ಅದಕ್ಕೆ ತಕ್ಕ ಶಿಕ್ಷೆಯನ್ನು ಹೇಳುವುದರೊಂದಿಗೆ ದೇವಾಲಯದ ವಿವಿಧ ಸಿಬ್ಬಂದಿ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸದೆ ಹೋದರೆ ವಿಧಿಸಬೇಕಾದ ದಂಡಗಳನ್ನು ತಿಳಿಸುತ್ತದೆ. ಶಾಸನದ ಕೆಲವು ಪದಗಳಿಗೆ ವಿವರಣೆ ನೀಡುವುದು ಕ್ಲಿಷ್ಟಕರವಾಗಿರುವುದಾದರೂ ಆ ಕಾಲದ ನ್ಯಾಯ ಪರಿಪಾಲನೆಯ ವಿಷಯದಲ್ಲಿ ಗಮನಾರ್ಹ ಅಂಶಗಳನ್ನು ಈ ಶಾಸನ ತಿಳಿಸುತ್ತದೆ. ಆದ್ದರಿಂದ ಶಾಸನದ ಪೂರ್ಣಪಾಠವನ್ನು ಗಮನಿಸಬಹುದು :

> ಶ್ರೀ ಸ್ವಸ್ತಿ। ಶ್ರೀಮತು ಪಾಂಡ್ಯ ಚಕ್ರವರ್ತಿರಾಯ ಗಜಾಂಕುಸ ಶ್ರೀವೀರ ಕುಲಶೇಖರ ದೇವಾಳ್ಪೇಂದ್ರ ದೇವರಸರು ವಿಜಯರಾಜ್ಯಂಗೆಯುತ್ತಮಿರ್ದ್ದು ರಕ್ತಾಕ್ಷಿ ಸಂವತ್ಸರದ ಮೇಷಮಾಸ ೧೩ನೆಯ ಆದಿವಾರದಂದು ಮಂಗಲಾಪುರದ ಹಿರಿಯರ ಮನೆಯ ಭುವನಾಶ್ರಯದ ಮೊಗಸಾಲೆಯಲು ಸಮಸ್ತ ಪ್ರಧಾನರುಂ ಯೆರಡು ಕೋಲ ಬಳಿಯುಂವೆರಸು ವೊಡ್ಡೋಲಗಂ ಗೊಟ್ಟಿರ್ದ್ದಾ ಪ್ರಸ್ತಾವದಲು ಅಳಿಯ ವೀರ ಬಂ(ಕಿ)ದೇವರಸರ್ಗ್ಗೆ ಮುಗರುನಾಡಿನ ರಾಜ್ಯವಂ ಬಿಡುವಲ್ಲಿ ಮಾವ ಕುಲಶೇಖರ ದೇವರ್‍ಸರುಂ ಅಳಿಯ ಬಂಕಿದೇವರ್‍ಸರುಂ ಬಂಕೇಶ್ವರ ದೇವರಿಗೆ ಶಿಲಾಶಾಸನಂ ಗೆ(ಯ್ದು) ಕೊಟ್ಟ ಕ್ರಮವೆಂತೆಂದಡೆ। ಯಿೂ ದೇವರ ದೇವಸ್ವದ ಕುಡಿತಱಿಯೊಳಗೆ ಯಿೂ ಸ್ಥಾನದ ಪಾದಮೂಲದವರ ಮೇಲೆ ಯಿಳಿದೆತ್ತ

---

೧. ಎಇ XV ರೋಣ ೬ಡಿ ಕ್ರಿ.ಶ. ೧೦೫೦, ಪು. ೭೮-೭೯.

೨. ಎಂ. ಚಿದಾನಂದ ಮೂರ್ತಿಯವರು 'ಬಂದಿಕಾಱಂ ಮಂಚಲ್ವಿಡಿವಂ' ಅನ್ನು ಬಂದಿಕಾಱಮ್ + ಅಂಚಲ್ವಿಡಿವಂ ಎಂದು ಬಿಡಿಸಿಕೊಳ್ಳಬೇಕೆಂದು ಸೂಚಿಸಿದ್ದಾರೆ. 'ಅಂಚಲ್' ಎಂದರೆ ತಮಿಳು, ಮಲೆಯಾಳಗಳಲ್ಲಿ ಪ್ರಯಾಣದ ಸಮಯದಲ್ಲಿ ತಂಗುವ ನಿಲ್ದಾಣ 'relay' ಎಂದು ಅರ್ಥ. ಕನ್ನಡದ ಅಂಚೆ (Post) ಇದರ ಜ್ಞಾತಿ ಪದ. ತಮಿಳಿನಲ್ಲಿ ಅಂಚಲ್ ಎಂದರೆ (the post) ಎಂದೇ ಅರ್ಥ. ಅಂಚಲ್‌ವಿಡಿವವನು ಎಂದರೆ ರಾಜಾಜ್ಞೆಗಳನ್ನು ಅಪಹರಿಸುವವನು ಎಂದು ಅರ್ಥ ಮಾಡಬಹುದೆ? ಎಂದಿದ್ದಾರೆ. ಕಶಾಸಾಂಅ ಪು. ೩೪೪ ಅಡಿಟಿಪ್ಪಣಿ. ಆದರೆ ಮಂಚಲ್ = ಮೋಸ, ವಂಚನೆ ಎಂಬ ಅರ್ಥದಲ್ಲಿ ಕೆಲವು ಕಾವ್ಯಗಳಲ್ಲಿ ಆ ಪದ ಪ್ರಯೋಗವಾಗಿದೆ.

ಕಳವಡೆ ಬೆಟ್ಟುಂದ. ೨. ವಡೆ ಹಣ ಕೂಡಿ ಎಳೆಗೊಳು ಕಡಿಹೊಡೆ ಎಂದಿವರ ನಾಲ್ಕು ಜಾತಿಯೊಳು ಬ್ರಾಹ್ಮಣ ಮಾಡಿವಡೆ ಕಂಣು ಕೈ ಜಾತಿ ಸರ್ವಸ್ವ ನಾಲ್ಕು ಜಾತಿಯಿಂ ಪೂಜಿಗು। ಸೆಟ್ಟಿ ಮಾಡಿದಡೆ ಸರ್ವಸ್ವ ಬಳಂಜದಿಂ ಪೂಜಿಗು। ವೊಕ್ಕಲು ಮಕ್ಕಳು ಮಾಡಿದಡೆವೊಂದು ತಲೆ ಸಾಯಿರ ಹೊಂನು। ಯಿ ಸ್ಥಾನದೊಳಗೆ ಅರೆ ಕಿತ್ತಡೆ ಐವತ್ತು ನೆರೆ ಕಿತ್ತಡೆ ನೂರೊಂದು ದಂಡ ಕೊಂ(ದಡೆ) ಕೊಲಿಸಿ ಕೊಂಡವ ಹಗೆಗಳ ಏಳು ದಿನಯಿದ್ದು ಹೋಹ ಮರಿಯದೆ। ಯಿ ಸ್ಥಾನವ ತಂತ್ರಿ ಸಂಕ್ರಾಂತಿಗಳು ತಪ್ಪದೆ ಅಯನವ ಅವಭೃತ್ತು ಸ್ನಾನದ ಮುಟ್ಟ ತಾನು ಮಾಡುವ ಕ್ರಮಂಗಳ ಮಾಡದಡೆ ಹಸ್ತುವರೆ ದಂಡ। ಆಸ್ರಂಣ ಕಾಲ ಕಾಲಂಗಳಲ್ಲು ತಾ ಮಾಡುವ ಕ್ರಮಂಗಳ ಮಾಡದಡೆವೊಂದು ಧಾರೆ ಕೀಳ್ಶಾಂತಿ ಕಾಲ ಕಾಲದಲು ತಾನು ಮಾಡುವ ಕ್ರಮಂಗಳ ಮಾಡದಡೆ ವೊಬ್ಬ(ಗೆ) ಅರೆ ದಂಡ। ಪಾದಮೂಲದವರು ನಿವೇದ್ಯಕ್ಕೆ ಯಿಕ್ಕುವ ಅಕ್ಕಿ ಹೊತ್ತು ತಪ್ಪಿದಡೆ ಕುಂದಿದಡೆ ದಿನದಿನ ನಡವ ಕಥಾಮಾಲೆ(ಯ) ಯಿಷ್ಟನೂ ದಿನಾಂಖ ನೋಡಿ ಹೇಳದಿದ್ದಡೆ ಅ(ಧ್ಯ)ಕ್ಷ ಅಯಿದುವರ ದಂಡ। ಯಿವ ನಿತ್ಯದ ಸೇನಬ ಬರೆಯದಡೆ ಹತ್ತುವರೆ ದಂಡ। ಯಿವ ಸಿಕ್ಷಿಸಿ ನಂದಾದೀಪಿಗೆಗೆ ಎಂಣೆಯ ಸಲಿಸದಡೆ ಅಧಿಕಾರಿ ಹತ್ತೂವರೆ ದಂಡ। ಕುಂ... ಸಲಿಸದಿರ್ದಡೆ ಸಂ(ಖ) ಮೊದಲಾಗಿವುಳ ಏಳು ಮುಟ್ಟಿನ ಪದಾ(ರ್ಥ)ಗಳು ತ್ರಿಕಾಲದ ಶ್ರೀವಲಿಯಿಂ ಮುಟ್ಟಿನ ನಿರ್ಮಾಲ್ಯ... ಬಂದು ವೋಲಗಿಸದಿದ್ದಡೆ ಯಥಾಕ್ರಮದಲು ಅದವು ನಡೆಯದಿದ್ದಡೆ ಯಿವೆಲ್ಲಕೆ ಅಂದಂದಿನ ಗ್ರಾಸಕ್ಕೆ ಯಿಂಮಡಿ ದಂಡ।

## ಹಿಂಬದಿ

ಆ ಮಾಸ... ದತ್ತಮಂಗಲದ ಅತಿಕಾರಿಗಳು ಅಯನಕ್ಕೆ ನಡಸುವ ಮರಿಯಾದೆಯ (ನಡ) ಯಿಸಿ ಮಾಡದಿರ್ದಡೆ (ನೂ)ರೊಂದು(ದ)ಂಡ ಹೊಂನು। ಸಿವರಾತ್ರಿಯ ಎಂಣೆ ಅಯನದಲ್ಲು ಹರಿಬ(ತ್ರ)ರ(ಬಿ)ಯ (ಆ)ರಾ(ಧ)ನ ದಿನದಲು ಬ್ರಾಹ್ಮಣರಿಗೆ ಅಕ್ಕಿಯಿದನೂ ಅಂಗಡಿಯ ಅಧಿಕಾರಿ ನಡಯಿಸದಿದ್ದಡೆ ಹತ್ತುವರೆ ದಂಡ। ಮಾಡಕ್ಕೆ(ಕು)ಳಯಿನಾಡಲು ಯಿರದಲು ಬೆಳಿಯಂತೂರಲು ಯಿವರಿಂದ ಭಳವಳಿಯ ಕೊಂಡು ಬಂದು ನೆರುವುದು। ಅಮಸೆ ನಾಲ್ಕು ಅಗ್ರವ ನಡಯಿಸದಿದ್ದಡೆ ಹತ್ತುವರೆ ದಂಡ। ನಂದಾದೀಪಿಗೆ ನಂದದೆ ನೋಡದಿರ್ದಡೆ ಆಸ್ರಂಣನೊಂಬು(ದಾ)ರೆ ದಂಡ। ದೇವಾಲ್ಯದಲು ಅರಮನೆ ಕಟ್ಟುವ ಮರಿಯಾದೆಯಿಲ್ಲ। ಕೂತಾಡುವ ಬಾಕೆನೆಂಗೆಯವರು ತಾವು ಎಂದೂ ಬಹ ಮರಿಯಾದೆಯಲು ಬಾರದಿದ್ದಡೆ ಅಯಿದುವರ ದಂಡ। ಯಿಂತಿವೆಲ್ಲವಂ ಪಿಟಾರಿಸಿ ರಕ್ಷಿಸದಿದ್ದಡೆ ಅರಸಿಂಗೆ ಗಂಗೆ ರಾಮೇಸ್ವರದಲು ಸಾಸಿರ ಕವಿಲೆ ಸಾಸಿರ ಬ್ರಾಹ್ಮಣರ ಕೊಂದ ಪಾಪ। ಯಿಂತೀ ಧರ್ಮ್ಮವಂ ಸಿಲಾಸಾಸನಂಗೆಯಿದು ಕೊಟ್ಟ ಮಾವ ಕುಲಶೇಖರ ದೇವರ್ಗೆ ಅಳಿಯಂದಿರು ಬಂಕಿದೇವರು ಬಂಮ ದೇವರು ಕುಲಸೇಖರ ದೇವರ್ಗ್ಗೆ ಮಂಗಳ ಮಹಾಶ್ರೀಶ್ರೀ॥[೧]

ಈ ಶಾಸನದಲ್ಲಿ ವೀರ ಕುಲಶೇಖರನು ಮುಗರು ನಾಡನ್ನು ಅಳಿಯ ಬಂಕಿದೇವರಸನಿಗೆ ವಹಿಸಿಕೊಡುವಾಗ ಅವರಿಬ್ಬರೂ ಸೇರಿ ಬಂಕೇಶ್ವರ ದೇವರಿಗೆ ದಾನಗಳನ್ನು ಕೊಟ್ಟ ಸಂದರ್ಭದಲ್ಲಿ ಕೆಲವು ಅಪರಾಧಗಳಿಗೆ ಶಿಕ್ಷೆಗಳನ್ನು ಹೇಳಲಾಗಿದೆ. ಶಾಸನದ ಕೆಲವು ಭಾಗಗಳಿಗೆ ಅರ್ಥ ಹೇಳುವುದು ಕ್ಲಿಷ್ಟಕರವಾದುದಾಗಿದೆ. ಆದ್ದರಿಂದ ಸ್ಥೂಲವಾಗಿ ಈ ಶಾಸನದ ಆಶಯವನ್ನು ಹೀಗೆ ಗ್ರಹಿಸಬಹುದು.[೨] ಬಂಕೇಶ್ವರ ದೇವಾಲಯದ ಪಾದಮೂಲದವರಿಗಾಗಲಿ ದೇವಾಲಯದ ಆಸ್ತಿಗಾಗಲಿ ಆಕ್ರಮಣ ಮಾಡಿ ಕಡಿಹೊಡೆ ಎಂದು ಬ್ರಾಹ್ಮಣ ನಡೆದುಕೊಂಡರೆ ಕಣ್ಣು, ಕೈ ತೆಗೆಯಬೇಕು ಮತ್ತು ನಾಲ್ಕು ಜಾತಿಗಳಿಂದ ಹೊರಗೆ

೧. ತುನಾಶಾ I ಮಂಗಳೂರು ೩೬ ಕ್ರಿ.ಶ. ೧೨೦೪.

೨. ಈ ಶಾಸನವನ್ನು ಅರ್ಥೈಸುವ ಮೊದಲು ಅದರಲ್ಲಿರುವ ಸಮಸ್ಯೆಗಳನ್ನು ಬಿಡಿ ಬಿಡಿಯಾಗಿ ಚರ್ಚಿಸಿದ ಸೂರ್ಯನಾಥ ಕಾಮತರಿಗೆ ಋಣಿಯಾಗಿದ್ದೇನೆ.

ಹಾಕಬೇಕೆಂದೂ, ಸೆಟ್ಟಿ ಆ ತಪ್ಪನ್ನು ಮಾಡಿದರೆ ವ್ಯಾಪಾರಿ ವರ್ಗದಿಂದ ಹೊರಹಾಕಬೇಕೆಂದೂ, ಒಕ್ಕಲು ಮಕ್ಕಳು ಮಾಡಿದರೆ ತಲೆ[1] ತೆಗೆದು ಸಾವಿರ ಹೊನ್ನಿನ ದಂಡವೆಂದು ತಿಳಿಸುವಂತೆ ಕಾಣುತ್ತದೆ. ಆ ಸ್ಥಾನದ ಆಸ್ತಿಯಲ್ಲಿ ಸ್ವಲ್ಪ ಕಿತ್ತುಕೊಂಡರೆ ಐವತ್ತು, ಹೆಚ್ಚಾಗಿ ಕಿತ್ತುಕೊಂಡರೆ ನೂರೊಂದು ದಂಡವೆಂದೂ, ಕೊಲೆ ಮಾಡಿದವನಿಗೆ ಕೊಲೆ ಮಾಡಿದ ಏಳು ದಿನಗಳಲ್ಲಿ ಶಿಕ್ಷೆ ಆಗಬೇಕೆಂದು ತಿಳಿಸುವ ಹಾಗೆ ಕಾಣುತ್ತದೆ. ಶಾಸನದ ಮುಂದಿನ ಭಾಗದಲ್ಲಿ ದೇವಾಲಯದ ವಿವಿಧ ಸೇವೆಗಳನ್ನು ಸರಿಯಾಗಿ ನಿರ್ವಹಿಸದೇ ಹೋದರೆ ವಿಧಿಸಲಾಗುವ ವಿವಿಧ ಪ್ರಮಾಣದ ದಂಡಗಳನ್ನು ಹೇಳಿದೆ.

ಈ ಶಾಸನದಲ್ಲಿ ಅಪರಾಧಕ್ಕಾಗಿ ಶಿಕ್ಷೆ ಹೇಳುವಾಗ ಮೂರು ವರ್ಣಗಳವರು ಮಾಡಿದ ಅಪರಾಧಕ್ಕೆ ಶಿಕ್ಷೆ ಹೇಳಿದರೂ ಕ್ಷತ್ರಿಯನ ಉಲ್ಲೇಖವನ್ನೇ ಮಾಡಿಲ್ಲದಿರುವುದು ಗಮನಾರ್ಹವಾಗಿದೆ.

ಶಾಸನಗಳಲ್ಲಿ ಅನೇಕ ಅಪರಾಧಗಳನ್ನು, ದೋಷಗಳನ್ನು ಮಾಡಿದ್ದಕ್ಕಾಗಿ ಹಾಕಲಾಗುತ್ತಿದ್ದ ದಂಡಗಳ ವಿಷಯ ಬರುತ್ತದೆ. ವ್ಯಕ್ತಿ ಮಾಡಿದ ಅಪರಾಧಕ್ಕಾಗಿ ವಿಧಿಸಲಾಗುತ್ತಿದ್ದ ದಂಡಗಳಲ್ಲಿ 'ತಪ್ಪು ತವುಡಿ'[2] 'ದಂಡ ದೋಷ'[3] ಎಂಬುವು ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ. ಕ್ರಿ.ಶ. ೧೧೩೧ರ ಸೊರಬ ತಾಲ್ಲೂಕಿನ ಶಾಸನವೊಂದರಲ್ಲಿ ಮಗನನ್ನು ಕೊಂದ ಅಪರಾಧಕ್ಕಾಗಿ ಐವತ್ತು ಗದ್ಯಾಣ ದಂಡವನ್ನು ವಿಧಿಸಿರುವುದು ಕಂಡುಬರುತ್ತದೆ.[4]

ನ್ಯಾಯತೀರ್ಮಾನವನ್ನು ಸಾಮಾನ್ಯವಾಗಿ ಸ್ಥಳೀಯ ಸಂಸ್ಥೆಗಳು, ಅಧಿಕಾರಿಗಳು ಮಾಡುತ್ತಿದ್ದರು. ಕೆಲವೇ ಕೆಲವು ದೂರುಗಳು ಮಾತ್ರ ರಾಜನವರೆಗೆ ಹೋಗುತ್ತಿದ್ದವು. ಅಬ್ಬಲೂರಿನ [5] ಶಾಸನದಲ್ಲಿ ಬಿಜ್ಜಳನ ಬಳಿಗೆ ಜೈನರು ದೂರನ್ನು ತೆಗೆದುಕೊಂಡು ಹೋಗುವ ಪ್ರಸಂಗವಿದೆ. ಜೈನರೊಂದಿಗೆ ಉಂಟಾದ ಭಿನ್ನಾಭಿಪ್ರಾಯದಿಂದ ಏಕಾಂತದ ರಾಮಯ್ಯನು ಪಣತೊಟ್ಟು ಶಿರಪವಾಡವನ್ನು ತೋರಿಸಿ ಓಲೆಯಂತೆ ಬಸದಿಗಳನ್ನು ನಾಶಪಡಿಸುತ್ತಾನೆ. ಜೈನರೆಲ್ಲರೂ ತಮಗಾದ ಹಾನಿಯನ್ನು ಬಿಜ್ಜಳನ ಬಳಿ ಹೋಗಿ ಹೇಳಿಕೊಳ್ಳುತ್ತಾರೆ. ಆಗ ಕೋಪದಿಂದ ಬಿಜ್ಜಳನು ಆ ಅನ್ಯಾಯವನ್ನು ಏಕೆ ಮಾಡಿದನೆಂದು ರಾಮಯ್ಯನನ್ನು ಕೇಳಲು ಅವನು ಜೈನರೇ ಬರೆದು ಕೊಟ್ಟ ಓಲೆಯನ್ನು ತೋರಿಸುತ್ತಾನೆ. ಅನಂತರ ಜೈನರನ್ನು ಕಳುಹಿಸಿ ರಾಮಯ್ಯನಿಗೆ ಜಯಪತ್ರವನ್ನು ಕೊಟ್ಟ ವಿಷಯವನ್ನು ಶಾಸನ ನಿರೂಪಿಸುತ್ತದೆ. ಇದರಿಂದ ರಾಜನು ನ್ಯಾಯ ತೀರ್ಮಾನ ಮಾಡುವ ಮೊದಲು ಎರಡೂ ಪಕ್ಷದವರನ್ನು ಕೇಳುತ್ತಿದ್ದುದಲ್ಲದೆ ಆಧಾರ ಸಾಕ್ಷಿಗಳಿದ್ದರೆ ಅವನ್ನು ಪರೀಕ್ಷಿಸುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ. ಗೆದ್ದವರಿಗೆ ಜಯಪತ್ರವನ್ನು ಕೊಡುವ ಪದ್ಧತಿಯೂ ಇದ್ದುದು ಇದಲ್ಲದೆ ಇನ್ನೂ ಕೆಲವು ಶಾಸನಗಳಿಂದ ಖಚಿತವಾಗಿದೆ.

ರಾಜನ ಬಳಿಗೆ ನ್ಯಾಯ ತೀರ್ಮಾನಕ್ಕೆ ಹೋದ ಪ್ರಸಿದ್ಧ ವಿಷಯವನ್ನು ಶ್ರವಣಬೆಳಗೊಳದ ಒಂದು ಶಾಸನ[6] ನಿರೂಪಿಸುತ್ತದೆ. ಜೈನರಿಗೆ ಶ್ರೀವೈಷ್ಣವರಿಂದ ಅನ್ಯಾಯವಾಗಲು ಆನೆಯಗೊಂದಿ, ಹೊಸಪಟ್ಟಣ, ಪೆನುಗೊಂಡೆ, ಕಲ್ಲೆಹ ಪಟ್ಟಣ ಒಳಗಾದ ಸಮಸ್ತ ಜೈನರು ಬುಕ್ಕರಾಯನ ಬಳಿಗೆ ಹೋಗಿ ತಮಗಾಗುತ್ತಿರುವ ಅನ್ಯಾಯವನ್ನು ಬಿನ್ನಹ ಮಾಡಿಕೊಳ್ಳುತ್ತಾರೆ. ಆಗ ಬುಕ್ಕರಾಯನು ಹದಿನೆಂಟು ನಾಡಿನ ಶ್ರೀವೈಷ್ಣವ ಪ್ರಮುಖರನ್ನು ಕರೆಯಿಸಿ ವೈಷ್ಣವ ಧರ್ಮಕ್ಕೂ ಜೈನಧರ್ಮಕ್ಕೂ ಭೇದವಿಲ್ಲವೆಂದು ಹೇಳಿ ವೈಷ್ಣವರ ಕೈಯಲ್ಲಿ ಜೈನರ ಕೈ ಇಟ್ಟು ಜೈನಧರ್ಮಕ್ಕೆ ಹಿಂದಿನಂತೆ ಪಂಚ ಮಹಾವಾದ್ಯಗಳು ಮತ್ತು ಕಳಶ ಸಲ್ಲುವುವೆಂದು

---

೧. ದೊಡ್ಡ ಅಪರಾಧಗಳಿಗೆ ತಲೆಯನ್ನು ಕತ್ತರಿಸುವ ಶಿಕ್ಷೆ ಇತ್ತೆಂದು ಕಾಣುತ್ತದೆ. ಬಸವಣ್ಣನವರ ಅನೇಕ ವಚನಗಳಲ್ಲಿ ತಲೆದಂಡದ ಉಲ್ಲೇಖ ಬರುವುದುಂಟು. ಬ.ವ. ೪೫೨, ೬೯೩, ೭೦೯, ೭೮೫.

೨. (ರೈ) ಎಕ XI ಹಿರಿಯೂರು ೧೬, ಕ್ರಿ.ಶ. ೧೨೦೫, ೬೪ ಕ್ರಿ.ಶ. ೧೨೦೫.

೩. ಎಸ್‌ಐಐ XV ಹುಬ್ಬಳ್ಳಿ ೧೮೭ ಕ್ರಿ.ಶ. ೧೨೪೮.

೪. S. Gururajachar : ಪೂರ್ವೋಕ್ತ, ಪು. ೧೬೬.

೫. ಎಇ V. ಪು. ೨೪೫-೨೫೨, ಕ್ರಿ.ಶ. ೧೨೦೦.

೬. (ಮೈ) ಎಕ II ಶ್ರವಣಬೆಳಗೊಳ ೪೭೫ ಕ್ರಿ.ಶ. ೧೩೬೮.

ಹೇಳುತ್ತಾನೆ. ಮತ್ತು ಜೈನ ದರ್ಶನವನ್ನು ರಕ್ಷಿಸುವ ಮಾತನ್ನು ವೈಷ್ಣವರಿಂದ ಪಡೆದು ಅವರನ್ನು ಕಳುಹಿಸಿಕೊಡುವ ವಿವರಗಳು ಶಾಸನದಲ್ಲಿ ನಿರೂಪಿತವಾಗಿವೆ.

**ದಿವ್ಯಗಳು:**

ಅಪರಾಧಗಳನ್ನು ನಿರ್ಣಯಿಸಿ ನ್ಯಾಯ ತೀರ್ಮಾನ ಮಾಡುವ ಪ್ರಾಚೀನ ವಿಧಾನಗಳಲ್ಲಿ ದಿವ್ಯವೂ ಒಂದಾಗಿತ್ತು.[1] ಅಪರಾಧ ನಿರ್ಧಾರ ಯಾವುದೇ ಮನುಷ್ಯ ಸಾಕ್ಷಿಯ ಅಭಾವದಲ್ಲಿ ದೈವವನ್ನು ಆಧರಿಸಿ ನಡೆಯುತ್ತಿತ್ತು. ಆದ್ದರಿಂದ ಅದನ್ನು ದಿವ್ಯವೆಂದು ಕರೆಯುತ್ತಿದ್ದರು. ಅನೇಕ ದೇಶಗಳಲ್ಲಿ ಈ ರೀತಿಯ ನ್ಯಾಯ ನಿರ್ಣಯ ಪದ್ಧತಿ ರೂಢಿಯಲ್ಲಿದ್ದಿತು. ಪಿ.ವಿ. ಕಾಣೆಯವರು ದಿವ್ಯವನ್ನು ನಡೆಸುವ ವಿಧಾನ, ಕ್ರಮ ಮುಂತಾದುವನ್ನು ವಿವರವಾಗಿ ನಿರೂಪಿಸಿದ್ದಾರೆ.[2] ಪ್ರಾಚೀನ ಕನ್ನಡ ಕೃತಿಗಳಲ್ಲಿ ದಿವ್ಯಗಳ ವಿಷಯ ಹಲವು ಕಡೆ ಉಲ್ಲೇಖಿಗೊಂಡಿದೆ.[3] ಶಾಸನ ಒಂದರಿಂದ 'ಸಪ್ತ ದಿವ್ಯ'ಗಳು ತಾಳಗುಂದದ ಪ್ರಣವೇಶ್ವರ ದೇವಾಲಯದಲ್ಲಿ ನಡೆಯುತ್ತಿದ್ದುದು ತಿಳಿದುಬರುತ್ತದೆ.[4] ಸ್ಕಾಂದಪುರಾಣದ ಮಾಹೇಶ್ವರ ಖಂಡದಲ್ಲಿ ಅಷ್ಟವಿಧ ದಿವ್ಯಗಳನ್ನು ಸವಿಸ್ತಾರವಾಗಿ ವರ್ಣಿಸಿರುವುದು ಕಂಡುಬರುತ್ತದೆ. ಅವು ಅನುಕ್ರಮವಾಗಿ ಶಪಥ, ಕೋಶ, ಘಟಿಕಾ, ವಿಷ, ಅಗ್ನಿ, ತಪ್ತಮಾಷಕ, ಫಾಲ ಮತ್ತು ತಂಡುಲ. ಅಲ್ಲಿಯೇ ಯಾವ ಯಾವ ಸಂದರ್ಭದಲ್ಲಿ ಯಾರ ಮೇಲೆ ನಡೆಸಬೇಕು, ಯಾರ ಮೇಲೆ ನಡೆಸಬಾರದು ಎಂದು ಮುಂತಾದ ವಿವರಗಳನ್ನೂ ನೀಡಲಾಗಿದೆ.[5]

ಕರ್ನಾಟಕದಲ್ಲಿ ದಿವ್ಯಗಳನ್ನು ಸ್ಮೃತಿಗಳಲ್ಲಿ ಹೇಳಿದಂತೆಯೇ ನಡೆಸುತ್ತಿದ್ದರೆಂದು ಹೇಳುವುದು ಕಠಿಣವೇ. ಅನುಕೂಲಕ್ಕೆ ತಕ್ಕಂತೆ ಅಲ್ಪ ಸ್ವಲ್ಪ ಮಾರ್ಪಾಟುಗಳನ್ನು ಮಾಡಿಕೊಂಡಿರಬೇಕು.

ಸೀಮಾ ವಿವಾದವೊಂದು ದಿವ್ಯದ ಮೂಲಕ ಪರಿಹಾರವಾದ ವಿಷಯವನ್ನು ಶಾಸನವೊಂದು[6] ನಿರೂಪಿಸುತ್ತದೆ. ಮುರಡಿ ಪುರದವರಿಗೂ ಗರುಡನಹಳ್ಳಿಯವರಿಗೂ ಸೀಮಾ ಸಂಬಂಧದ ವಿವಾದ ಉಂಟಾಗಲು ಬಲಾತ್ಕಾರದಿಂದ ಕಲ್ಲನ್ನು ನಟ್ಟರೆಂದು ಮುರಡಿಪುರದವರು ಮುಂದಿಗೆಯ[7]ನ್ನಿಕ್ಕಲು ಕನ್ನಯ್ಯ ಎಂಬುವವನು ಆ ನಟ್ಟ ಕಲ್ಲನ್ನು ಮುರಿಯದಿರಿ ಎಂದು ಆ ಹೊಲ ತನ್ನದೆಂದು ವಾದಿಸಿ ಅದನ್ನು ಪ್ರಮಾಣಿಸಲು ದೋರಸಮುದ್ರದ ಹೊಯ್ಸಳೇಶ್ವರನ ಸನ್ನಿಧಿಯಲ್ಲಿ ದಿವ್ಯ ಹಿಡಿದು

---

೧. ಎಲ್ಲ ಸಾರಿಯೂ ದಿವ್ಯಗಳು ನ್ಯಾಯ ನಿರ್ಣಯಕ್ಕಾಗಿ ಮಾತ್ರ ನಡೆಯುತ್ತಿರಲಿಲ್ಲ. ಸಿದ್ಧರಾಮನು ಸೊನ್ನಲಿಗೆಯ ಮಹತ್ವವನ್ನು ಪ್ರತಿಷ್ಠಿಸಲು ಕಾಯಿಸಿದ ಗುಂಡನ್ನು ಕೈಯಲ್ಲಿ ಹಿಡಿದು ದಿವ್ಯವನ್ನು ತೋರಿಸಿದ ವಿಷಯವನ್ನು ಕವಿ ರಾಘವಾಂಕನು ಸಿದ್ಧರಾಮ ಚಾರಿತ್ರದಲ್ಲಿ ನಿರೂಪಿಸಿದ್ದಾನೆ. ೭-೧೯-೨೦.

೨. P. V. Kane : History of Dharmasastra II, ಪು. ೩೬೧-೭೮.

೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೧೯೭.

೪. (ರೈ) ಎಕ VII ಶಿಕಾರಿಪುರ ೧೮೫ ಕ್ರಿ.ಶ. ೧೧೫೮.

೫. ಜಿ.ಎಂ. ಉಮಾಪತಿ ಶಾಸ್ತ್ರಿ : 'ದಿವ್ಯ ಪದದ ನಿರ್ವಚನ', ಪ್ರಕ. ೫೦-೩, ಪು. ೨೧೯-೨೪೦.

೬. (ಮೈ) ಎಕ VII ಮಂಡ್ಯ ೨೫ ಕ್ರಿ.ಶ. ೧೨೭೫.

೭. ಮುಂಡಿಗೆ, ಮುಡಿಗೆ ಎಂಬ ರೂಪಗಳಲ್ಲಿ ದೊರೆಯುವ ಈ ಪದಕ್ಕೆ ಟೊಪ್ಪಿಗೆ ಅಥವಾ ತಲೆಯ ಮೇಲಿನ ಉಡುಪು ಎಂಬ ಮೂಲಾರ್ಥವಿದೆ. 'ಇಬ್ಬರ ಮಧ್ಯೆ ವಾದವೊಂದು ಎದ್ದಾಗ ಅವರಲ್ಲಿ ಒಬ್ಬನು ತನ್ನ ತಲೆಯ ಮೇಲಿನ ಉಡುಪನ್ನು ತೆಗೆದು ಎಸೆದರೆ ಅದು ಸವಾಲಿನ ಸೂಚಕವಾಗಿದ್ದಿತು. ಇನ್ನೊಬ್ಬನು ಅದನ್ನು ಎತ್ತಿಕೊಂಡರೆ ಆ ಸವಾಲನ್ನು ಅಂಗೀಕರಿಸಿದಂತಾಗುತ್ತಿದ್ದಿತು. (ಈ ಶಾಸನದಲ್ಲಿ ಮುರಡಿಪುರದವರು ಮುಂದಿಗೆ ಹಾಕಿದಾಗ ಗರುಡನ ಹಳ್ಳಿಯ ಕನ್ನಯ್ಯ ಅದನ್ನು ಎತ್ತಿಕೊಳ್ಳುತ್ತಾನೆ). ಮುಂದಿಗೆಯ ವಿವರಗಳಿಗೆ ನೋಡಿ: ಎಂ. ಚಿದಾನಂದಮೂರ್ತಿ : 'ಪ್ರಾಚೀನ ಕರ್ನಾಟಕದಲ್ಲಿ 'ದಿವ್ಯ' ಮತ್ತು ಮುಂಡಿಗೆ' -ಸಂಶೋಧನ ತರಂಗ, ಪು. ೧೦೧-೧೦೪.

ಗೆದ್ದ ವಿಷಯವನ್ನು ತಿಳಿಸುತ್ತದೆ. ದಿವ್ಯವನ್ನು ಹಿಡಿಯುವ ಮೊದಲು 'ಸಿರಃ ಪತ್ರವ ಬರಸಿ' ಎಂಬ ಉಲ್ಲೇಖ ಶಾಸನದಲ್ಲಿ ಬರುತ್ತವೆ. ದಿವ್ಯವು ಹೊಯ್ಸಳ ನಾರಸಿಂಹನ ಸಮಕ್ಷದಲ್ಲಿ ನಡೆಯಿತು. ಅಲ್ಲದೆ ಗೆದ್ದ ಕನ್ನಯ್ಯನಿಗೆ ರಾಜನು ಭೂಮಿದಾನವನ್ನು ಕೊಟ್ಟಂತೆ ತಿಳಿದುಬರುತ್ತದೆ.

ಹನ್ನೆರಡನೆಯ ಶತಮಾನದ ಒಂದು ಶಾಸನದಲ್ಲಿ[೧] ಕಲೇಶ್ವರ ದೇವರ ಆಚಾರ್ಯ ಶಿವಶಕ್ತಿಗೂ ಮೂಲಸ್ಥಾನ ದೇವರ ಆಚಾರ್ಯ ಕಲ್ಯಾಣಶಕ್ತಿಗೂ, ಒಂದು ಹೊಲದ ಒಡೆತನದ ವಿಷಯದಲ್ಲಿ ವಿವಾದ ಉಂಟಾಗಿ ಮಹಾಪ್ರಧಾನ ಈಶ್ವರ ದಂಡನಾಯಕನ ಗಮನಕ್ಕೆ ಬಂದು, ಕಲ್ಯಾಣಶಕ್ತಿ ತಾನು ಶಿರಸ್ಥಾಯಿಯಾಗಿ ತನ್ನ ಒಡೆತನವನ್ನು ಸ್ಥಿರಪಡಿಸುವುದಾಗಿ ಹೇಳಿದಾಗ ದೇಗಾವೆ ಅಗ್ರಹಾರದಲ್ಲಿ ಮಲ್ಲಿಕಾರ್ಜುನ ದೇವರ ಮುಂದೆ ಶಿವಶಕ್ತಿ ಪಾಳದಿವ್ಯ ಹಿಡಿದು ಗೆಲ್ಲುತ್ತಾನೆ, ಶಿರಸ್ಥಾಯಿಯಾಗಿದ್ದ ಕಲ್ಯಾಣಶಕ್ತಿ ಸೋಲುತ್ತಾನೆ. ಗೆದ್ದ ಶಿವಶಕ್ತಿಯು ಜಯಪತ್ರವನ್ನು ಪಡೆಯುತ್ತಾನೆ ಎಂಬ ವಿಷಯ ನಿರೂಪಿತವಾಗಿದೆ.

ಎಲೆವಾಳದ ಒಂದು ಶಾಸನ, ಕಾಳಗೌಡ ಮತ್ತು ಕೆಜಿಯಮ ಸೆಟ್ಟಿಯರ ಮಧ್ಯೆ ಭೂಮಿಗೆ ಸಂಬಂಧಿಸಿದ ವಿವಾದ ಉಂಟಾದಾಗ ಬಂದಣಿಕೆ ಗ್ರಾಮದ ಕಲಿದೇವರ ದೇವಸ್ಥಾನದಲ್ಲಿ ಮಹಾಜನರು, ಪಂಚಮಠಗಳು, ನಾಡಪ್ರಭು, ಅನೇಕ ಜನ ಗೌಡುಗಳು, ನಖರ, ಮುಮ್ಮುರಿದಂಡಗಳ ಸಮ್ಮುಖದಲ್ಲಿ ದಿವ್ಯ ನಡೆದು ಕಾಳಗವುಡ ದಿವ್ಯವನ್ನು ಗೆದ್ದು ಜಯಪತ್ರ ಪಡೆಯುತ್ತಾನೆ.[೨] ಎಂದು ತಿಳಿಸುತ್ತದೆ.

ದಿವ್ಯಗಳ ಮೂಲಕ ನ್ಯಾಯನಿರ್ಣಯವಾದುದು ಕಡಮೆ ಎಂದೇ ಹೇಳಬಹುದು. ವಿವಾದಗಳು ತೀವ್ರಸ್ವರೂಪದವಾಗಿದ್ದು, ಬಗೆಹರಿಯದ ಅನಿವಾರ್ಯ ಸ್ಥಿತಿ ಮುಟ್ಟಿದಾಗ ಮಾತ್ರ ದಿವ್ಯವನ್ನು ಮಾಡುತ್ತಿದ್ದರು. ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಿದ್ದ ಈ ನ್ಯಾಯ ನಿರ್ಣಯ ವಿಧಾನ ಹದಿನೇಳನೆಯ ಶತಮಾನದಲ್ಲಿಯೂ ನಡೆದಿರುವುದಕ್ಕೆ ಶಾಸನದ ಉಲ್ಲೇಖವಿದೆ.[೩]

ಕೆಲವು ವಿವಾದಗಳು ಸಂಸ್ಥೆಗಳ, ಅಧಿಕಾರಿಗಳ, ರಾಜರ, ದಿವ್ಯದ ಸಹಾಯವೂ ಇಲ್ಲದೆ ಪರಿಹಾರವಾಗುತ್ತಿದ್ದವೆಂದು ಕಾಣುತ್ತದೆ. ಜಪಾನಿನಲ್ಲಿ ಪ್ರಚಲಿತವಾಗಿದ್ದ 'ಹರಕಿರಿ'[೪]ಯನ್ನು ಹೋಲುವ ಮಾರ್ಗದಲ್ಲಿ ವೀರಮಲಯ್ಯ ಶಿವಪುರವನ್ನು ಮರಳಿ ಪಡೆದ ವಿಷಯವನ್ನು ರಾಯಸೆಟ್ಟಿಪುರದ ಶಾಸನವೊಂದು ತಿಳಿಸುತ್ತದೆ. ಈ ಶಾಸನದಲ್ಲಿ ಎರಡು ದಿನಾಂಕಗಳಿವೆ. ಮೊದಲ ದಿನಾಂಕದಲ್ಲಿ (ಶಕ ೧೧೦೭ ವಿಶ್ವಾವಸು ಚೈತ್ರ ಶು ಮಂಗಳವಾರ, ಕ್ರಿ.ಶ. ೧೧೮೫) ಹೊಯ್ಸಳ ವೀರಬಲ್ಲಾಳ ಆಳುತ್ತಿರುವಾಗ ಮಲ್ಲೆಯನಾಯಕ ಮತ್ತು ಸೋಮೆಯನಾಯಕರು ಕೆಜಿಗೋಡೆನಾಡಿನಲ್ಲಿದ್ದ ಸ್ವಗ್ರಾಮವಾದ ಬಿದಿರ ಕೋಟೆಯನ್ನು ಸಿವಪುರವಾಗಿ ಭಕ್ತರಿಗೆ ಧಾರಾಪೂರ್ವಕವಾಗಿ ಮಾಡಿಕೊಟ್ಟರು. ಆದರೆ ಮುಂದೆ ಹೊಯ್ಸಳ ಸೋಮೇಶ್ವರನು ಕಣ್ಣಾನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿರುವಾಗ (ಶಕ ೧೧೭೩ ಸಾಧಾರಣ ಚೈತ್ರ ಸು ೫ ಮಂಗಳವಾರ, ಕ್ರಿ.ಶ. ೧೨೫೧) ಮಾದೆಯನಾಯಕನು 'ಬಲುಹಿಂದೆ' ಸಿವಪುರವನ್ನು ಬಿಡದಿರಲು ವೀರಮಲಯ್ಯ 'ಕುತ್ತಿಕೊಂಡು ನಾಲ್ಕು

---

೧. ಅದೇ, ಪು. ೯೫-೯೬.

೨. (ರೈ) ಎಕ VIII ಸೊರಬ ೩೮೭ ಕ್ರಿ.ಶ. ೧೨೪೧.

೩. (ಮೈ) ಎಕ IV ಯಳಂದೂರು ೨ ಕ್ರಿ.ಶ. ೧೭ ಶಮಾ.

೪. ಹರಕಿರಿ- ಜಪಾನಿನಲ್ಲಿ ಹಿಂದೆ ಪ್ರಚಲಿತವಿದ್ದ ಆತ್ಮಹತ್ಯೆಯ ಒಂದು ವಿಧಾನ. ಕೆಲವು ತೀವ್ರ ಸಂದಿಗ್ಧ ಸ್ಥಿತಿಗಳಲ್ಲಿ (ಶತ್ರುಗಳ ಕೈಗೆ ಸಿಕ್ಕು ಅಪಮಾನಿತನಾದಾಗ, ಸತ್ಯವನ್ನು ಪ್ರಕಟಿಸಲು ಇನ್ನು ಯಾವ ಮಾರ್ಗವೂ ಇಲ್ಲದಾದಾಗ ಇತ್ಯಾದಿ) ವ್ಯಕ್ತಿಯು ಕತ್ತಿಯಿಂದ ತನ್ನ ಹೊಟ್ಟೆಯನ್ನು ಸೀಳಿಕೊಂಡು ಕರುಳನ್ನು ಹೊರಕ್ಕೆ ತೆಗೆಯುತ್ತಿದ್ದನು. ಅವನ ಆ ತೀವ್ರ ಸಂಕಟ ನೋಡಲಾರದೆ ಹತ್ತಿರದಲ್ಲಿದ್ದವರು ಅವನ ತಲೆಯನ್ನು ಕತ್ತರಿಸಿಬಿಡುತ್ತಿದ್ದರು. ಇದು ಆತ್ಮಹತ್ಯೆಯ ಒಂದು ಭಯಂಕರ ಪ್ರಕಾರವಾಗಿತ್ತು. Encyclopaedia of Religion and Ethics IV, ಪು. ೨೮೬.

ಸೀಮೆಯ ಕಲ್ಲ ಕಂಡು' ಮಾದೆಯನಾಯಕನಿಂದ ಶಿವಪುರವನ್ನು ಪಡೆದು ಸೋಮನಾಥಪುರವಾಗಿ ಮಾಡಿದನು.[1] ಮಲಯ್ಯ ನಾಯಕನು ಅದು ಶಿವಪುರವೆಂದು ಸ್ಥಿರಪಡಿಸಲು ತನ್ನನ್ನು ಇರಿದುಕೊಂಡು ಆ ಶಿವಪುರದ ನಾಲ್ಕು ಗಡಿಗಳವರೆಗೆ ಓಡಾಡಿದಂತೆ ಶಾಸನದಿಂದ ತಿಳಿಯಬಹುದು. ಅವನು ಮರಣ ಹೊಂದಿರುವಂತೆ ಶಾಸನದಲ್ಲಿ ಸ್ಪಷ್ಟ ಸೂಚನೆ ಇಲ್ಲ. ಜಪಾನಿನಲ್ಲಿ ನಡೆಯುತ್ತಿದ್ದ 'ಹರಕಿರಿ'ಯ ರೀತಿಯಲ್ಲಿ ಸ್ವಹಿಂಸೆಯನ್ನು ಮಾಡಿಕೊಂಡು ಶಿವಪುರದ ಮೇಲೆ ತನ್ನ ಸ್ವಾಮ್ಯವನ್ನು ಪ್ರಕಟಪಡಿಸಿದ ಅಪರೂಪದ ಉದಾಹರಣೆ ಇದಾಗಿದೆ.

**ಕೆಲವು ಘರ್ಷಣೆಗಳು:**

ರಾಜ್ಯದ ಆಡಳಿತ ಎಲ್ಲ ಸಾರಿ ಸುಲಲಿತವಾಗಿ ನಡೆಯುತ್ತಿರಲಿಲ್ಲ. ತಂದೆ ಮಕ್ಕಳ ಮಧ್ಯೆ, ಸಹೋದರರ ಮಧ್ಯೆ, ದಾಯಾದಿಗಳ ಮಧ್ಯೆ ಅಧಿಕಾರಕ್ಕಾಗಿ ಕಲಹಗಳು ನಡೆದಿರುವುದು ಕರ್ನಾಟಕದ ರಾಜಮನೆತನಗಳನ್ನು ಬಲ್ಲವರಿಗೆ ಹೊಸದೇನಲ್ಲ. ಹಾಗೆಯೇ ಅಧಿಕಾರಿಗಳ ಮಧ್ಯೆ ಅವಿಧೇಯತೆಯೋ, ಭಿನ್ನಾಭಿಪ್ರಾಯವೋ ಅಂತೂ ಒಡಕು ಮೂಡಿ ಘರ್ಷಣೆಗಳಿಗೆ ದಾರಿ ಮಾಡಿಕೊಟ್ಟಿರುವುದುಂಟು. ಅಂಥ ಒಂದೆರಡು ಘರ್ಷಣೆಗಳನ್ನು ಗಮನಿಸಬಹುದು.

ಕೆಲವು ಸಾರಿ ನಾಡಿನ ಪ್ರಭುಗಳು ಇಷ್ಟಪಡದ ಅಧಿಕಾರಿಯನ್ನು ಕೇಂದ್ರಾಡಳಿತ ನಾಡಿನ ಮೇಲೆ ಹೇರಿದಾಗ ಪ್ರತಿಭಟನೆ ನಡೆದು ರಕ್ತಪಾತದಲ್ಲಿ ಪರ್ಯಾವಸಾನ ಆಗುತ್ತಿದ್ದಿತು. ಐರವಳ್ಳಿಯ ಶಾಸನ ಆ ದೃಷ್ಟಿಯಿಂದ ಕೆಲವು ಪ್ರಮುಖ ವಿಷಯಗಳನ್ನು ತಿಳಿಸುತ್ತದೆ. ಎರಡನೆಯ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಅವನ ದಂಡನಾಯಕನಾದ ಕುಮಾರಲಕ್ಷ್ಮನು ಲಕಯ್ಯ ಎಂಬುವವನನ್ನು ಹನ್ನೊಂದು ನಾಡಿನ ಅಧಿಪತಿಯಾಗಿ ನೇಮಿಸಿದ. ಆದರೆ ಆ ಹನ್ನೊಂದು ನಾಡಿನವರು ಅವನನ್ನು ಅಧಿಕಾರಿಯಾಗಿ ಒಪ್ಪಿಕೊಳ್ಳದೆ ತಿರಸ್ಕರಿಸಿದರು. ಆದರೆ ಲಕಯ್ಯನು ಬಿಡದೆ ಅಧಿಕಾರಕ್ಕಾಗಿ ಅರವಳ್ಳಿಯನ್ನು ಆಕ್ರಮಣ ಮಾಡಿ ತುರುಗಳನ್ನು ಸೆರೆಹಿಡಿದು ಬಲ್ಲಗವುಂಡನನ್ನು ಕೊಂದು ನೂರು ಹೊನ್ನುಗಳನ್ನು ದಂಡವಾಗಿ ಸ್ವೀಕರಿಸಿ ಅನಂತರ ಗವುಂಡನ ಕುಟುಂಬಕ್ಕೆ ದಾನವನ್ನು ಮಾಡಿದ ಹಾಗೆ ಶಾಸನದ ಕೊನೆಯಲ್ಲಿ ಸೂಚನೆ ಇದೆ.[2] ಈ ಶಾಸನದಲ್ಲಿ ಎರಡು ವಿಷಯಗಳು ಗಮನಾರ್ಹವಾದವು. ಮೊದಲನೆಯದಾಗಿ ಕೇಂದ್ರವು, ಅಧಿಕಾರಿಯನ್ನು ನಾಡುಗಳ ಮೇಲೆ ಹೇರಿದಾಗ ಅಲ್ಲಿಯವರು ಅದು ತಮಗೆ ಒಪ್ಪಿಗೆಯಾಗದಿದ್ದರೆ ಒಂದಾಗಿ ವಿರೋಧಿಸುತ್ತಿದ್ದರು. ಎರಡನೆಯದಾಗಿ ಅಧಿಕಾರಿಗಳು ತಮ್ಮ ಅಧೀನರು ತಮಗೆ ವಿಧೇಯರಾಗಿ ನಡೆದುಕೊಳ್ಳದಿದ್ದಾಗ ಬಲಾತ್ಕಾರವಾಗಿಯಾದರೂ ಸರಿ, ಸಾವು-ನೋವುಗಳಾದರೂ ಸರಿ ತಮ್ಮ ಅಧಿಕಾರವನ್ನು ಸ್ಥಾಪಿಸುತ್ತಿದ್ದರು. ಮೂರನೆಯದಾಗಿ ಘರ್ಷಣೆ ಮುಗಿದು ತಮ್ಮಿಂದ ಆದ ನಷ್ಟಕ್ಕೆ ಪರಿಹಾರವನ್ನು ಆ ಕುಟುಂಬಕ್ಕೆ ಕೊಡುವುದರ ಮೂಲಕ ಜನರ ಮನಸ್ಸನ್ನು ಗೆಲ್ಲುತ್ತಿದ್ದ ಮಾನವೀಯ ನೆಲೆಯನ್ನೂ ಈ ಶಾಸನದಲ್ಲಿ ಕಾಣಬಹುದಾಗಿದೆ.

ಕೆಲವು ಬಾರಿ ರಾಜನು, ಅಧೀನ ಅಧಿಕಾರಿಗಳು ವಿಧೇಯರಾಗಿ ನಡೆದುಕೊಳ್ಳದಿದ್ದಾಗ, ತಪ್ಪಿ ನಡೆದುಕೊಂಡಾಗ ಸಹಿಸುತ್ತಿರಲಿಲ್ಲ; ಬಹು ತೀವ್ರತರವಾಗಿ ಅಂಥ ಘಟನೆಗಳಿಗೆ ಪ್ರತಿಕ್ರಿಯೆ ತೋರಿಸುತ್ತಿದ್ದನು. ಹೊಯ್ಸಳ ನರಸಿಂಹನು ವೀರ ಚಿಕ್ಕಕೇತೆಯ ದಣ್ಣಾಯಕರ ಮೇಲೆ ಮುನಿದು (ಮುನಿಸಿಗೆ ಕಾರಣ ಶಾಸನದಲ್ಲಿ ಸ್ಪಷ್ಟವಿಲ್ಲ) ಅವನನ್ನು ಬಂಧಿಸಿ ಅವನ ಭಂಡಾರಿಯಾದ ಮೆಯಿದೇವನನ್ನು ಅಧಿಕಾರದಿಂದ ವಜಾ ಮಾಡಿದನು. ಈ ಹೋರಾಟದಲ್ಲಿ ವೇಲೆಯದೇವ ಅಂಕೆಯ ದಣ್ಣಾಯಕನನ್ನು ಆಕ್ರಮಣ ಮಾಡಿ ಮರಣ ಹೊಂದಿದ. ಅವನ ತಮ್ಮ ವೀರಗಲ್ಲನ್ನು ನಿಲ್ಲಿಸಿದ.[3] ಈ ಶಾಸನದಲ್ಲಿ ರಾಜನ ಮುನಿಸಿಗೆ ಕಾರಣ ತಿಳಿಯದೇ ಹೋದರೂ ಆ ಚಿಕ್ಕಕೇತಯ ದಣ್ಣಾಯಕ ಅವಿಧೇಯನಾಗಿಯೋ ಅಥವಾ ಗುರುತರ

---

೧. (ಮೈ) ಎಕ VII ಮಂಡ್ಯ ೩೪ ಕ್ರಿ.ಶ. ೧೧೮೫, ೧೨೫೧.

೨. ಎಂಎಆರ್ ೧೯೩೯ ಬೇಲೂರು ೩೫ ಕ್ರಿ.ಶ. ೧೨೦೫.

೩. (ರೈ) ಎಕ V ಬೇಲೂರು ೧೬೬ ಕ್ರಿ.ಶ. ೧೨೭೯.

ಅಪರಾಧವನ್ನೊ ಮಾಡಿರಬೇಕೆಂದು ಭಾಸವಾಗುತ್ತದೆ. ಇಂಥ ಕಡೆ ರಾಜನೇ ನೇರವಾಗಿ ಆಕ್ರಮಣ ಮಾಡಿ ಅಧಿಕಾರಿಯನ್ನು ಬಂಧಿಸುವ, ಅಧಿಕಾರದಿಂದ ವಜಾ ಮಾಡುವ ತೀವ್ರ ಕ್ರಮ ಕೈಗೊಂಡಿರುವುದನ್ನು ಕಾಣಬಹುದು.

ಯಾದವ ಸಿಂಹಣನ ಆಳ್ವಿಕೆಯಲ್ಲಿ ಠಕ್ಕುರನೊಬ್ಬನು ಉಂಬಳಿಯನ್ನು ಸಲ್ಲಿಸದೆ 'ಬಲಿದು' ಕೊಂಡಿದ್ದನು. ಆಗ ನಾಳ್ಪ್ರಭು ಕಾಮೆಯ ಹಡವಳನು ತುಡುನಿಧಿಯಿಂದ ಆಕ್ರಮಣ ಮಾಡಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೧] ಯಾದವ ಸಿಂಹಣನ ಮಹಾಮಂಡಲೇಶ್ವರ ಲಕ್ಷ್ಮೀಪಾಳ ದೇವನಿಗೆ ಶ್ರೀ ನಾಳ್ಪ್ರಭು ಹಡವಳ ಚವುಡಯ್ಯ ಕಾಳಯ್ಯ ಇವರು 'ಸಿದ್ಧಾಯ ತೆರುತ ಹೋಗಿ ಕಾಣಲಿಲ್ಲದಿರ್ದ್ದಡೆ ಅದೇ ಮುನಿಸಾಗಿ' ಆ ಊರಿನ ಮೇಲೆ ಆಕ್ರಮಣ ಮಾಡಿದಾಗ ಕೆಲವು ಸಾವು-ನೋವುಗಳಾದ ವಿಷಯ ತಿಳಿದುಬರುತ್ತದೆ.[೨] ಅಧಿಕಾರಿಗಳು ತಮ್ಮ ಅಧೀನರು ಅವಿನಯ ತೋರಿಸಿದರೆ ಅದನ್ನು ಆಕ್ರಮಣದ ಮೂಲಕ ದಮನಮಾಡಿ ತಮ್ಮ ಪ್ರಭುತ್ವವನ್ನು ತೋರಿಸಿರುವುದು ಕಂಡುಬರುತ್ತದೆ.

---

೧. (ರೈ) ಎಕ VIII ಸೊರಬ ೨೧೭ ಕ್ರಿ.ಶ. ೧೨೪೩.

೨. (ರೈ) ಎಕ VIII ಸೊರಬ ೪೨೫ ಕ್ರಿ.ಶ. ೧೨೪೨.

# ೧೩. ವಿದ್ಯಾಭ್ಯಾಸ

ಪ್ರಾಚೀನ ಭಾರತದಲ್ಲಿ ವಿದ್ಯಾಭ್ಯಾಸಕ್ಕೆ ಬಹು ಪ್ರಮುಖವಾದ ಸ್ಥಾನವನ್ನು ನೀಡಲಾಗಿತ್ತು. ವಿದ್ಯೆಯ ಬಗ್ಗೆ ಅತ್ಯಂತ ಪೂಜ್ಯ ಭಾವನೆಯನ್ನು ಬಹು ಹಿಂದಿನಿಂದಲೂ ಇಟ್ಟುಕೊಂಡು ಬರಲಾಗಿದೆ. ಪ್ರಾಚೀನ ವಿದ್ಯಾಭ್ಯಾಸ ಪದ್ಧತಿ ಬಹುಮಟ್ಟಿಗೆ ಧಾರ್ಮಿಕ ಮೂಲದ್ದಾದ್ದರಿಂದ ಅದು ಆರಂಭ ಕಾಲದಿಂದಲೂ ಧರ್ಮಗಳ ಆಸರೆಯಲ್ಲಿಯೇ ಬೆಳೆದು ಬಂದಿತು. ವಿದ್ಯೆಯ ಬಗ್ಗೆ ಅತ್ಯಂತ ಗೌರವದ ಭಾವನೆ ಇದ್ದು, ವಿದ್ಯೆ ಇಲ್ಲದ ಮಾನವ ಪಶುವಿಗೆ ಸಮಾನ ಎಂಬ ನಂಬಿಕೆ ಬಲವಾಗಿತ್ತು.[೧] ವಿದ್ಯಾಭ್ಯಾಸದ ಆರಂಭದ ಹೆಜ್ಜೆಗಳ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ನಮಗಿಲ್ಲದೇ ಹೋದರೂ ಕ್ರಿ.ಶ. ಸು. ೫೦೦ರ ಹೊತ್ತಿಗೆ ಬೌದ್ಧವಿಹಾರಗಳಲ್ಲಿ ವಿದ್ಯಾಭ್ಯಾಸದ ಚಟುವಟಿಕೆಗಳು ದಿನನಿತ್ಯದ ಚಟುವಟಿಕೆಗಳಾಗಿದ್ದವು. ಮುಂದೆ, ಹತ್ತನೆಯ ಶತಮಾನದ ಹೊತ್ತಿಗೆ ಹಿಂದೂ ದೇವಾಲಯಗಳು ಪ್ರೌಢ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ಹೊತ್ತಿರುವುದು ಕಂಡುಬರುವುದಾದರೂ ಅದಕ್ಕೂ ಮೊದಲು ದೇವಾಲಯಗಳಲ್ಲಿ ವಿದ್ಯಾಭ್ಯಾಸ ಆರಂಭವಾಗಿರುವ ಸಾಧ್ಯತೆ ಇದೆ. ಆದರೆ ಖಚಿತ ದಾಖಲೆಗಳು ಕಂಡು ಬರುವುದಿಲ್ಲವೆಂದು ಎ.ಎಸ್. ಆಲ್ಟೇಕರ್ ಅವರು ಅಭಿಪ್ರಾಯ ಪಡುತ್ತಾರೆ.[೨] ಕನ್ನಡ ಶಾಸನಗಳನ್ನು ಅನುಲಕ್ಷಿಸಿ ಸುಮಾರು ೯ನೆಯ ಶತಮಾನದನಂತರ ದೇವಾಲಯಗಳಲ್ಲಿ ವಿದ್ಯಾಭ್ಯಾಸ ನಡೆಯುತ್ತಿದ್ದುದನ್ನು ಎಂ. ಚಿದಾನಂದ ಮೂರ್ತಿಯವರು ಗುರುತಿಸಿದ್ದಾರೆ.[೩]

ಪ್ರಾಚೀನ ಕರ್ನಾಟಕದಲ್ಲಿ ವೈದಿಕ ಯುಗದ ರೀತಿಯ ಗುರುಕುಲ ಪದ್ಧತಿಯ ವಿದ್ಯಾಭ್ಯಾಸ ಇದ್ದುದಕ್ಕೆ ಶಾಸನಾಧಾರಗಳು ಇಲ್ಲ. ವಡ್ಡಾರಾಧನೆಯಲ್ಲಿ (ಕ್ರಿ.ಶ. ೧೦ನೆಯ ಶ.ಮಾ.) ಗುರುವಿನ ಮನೆಯಲ್ಲಿ ವಿದ್ಯಾಭ್ಯಾಸ ನಡೆಯುತ್ತಿದ್ದುದನ್ನು ಮತ್ತು ವಿದ್ಯಾರ್ಥಿಗಳು ಭಿಕ್ಷೆ ಬೇಡಿ ತಂದು ಜೀವಿಸುವುದನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಆದರೆ ಈ ವಿಷಯ ಶಾಸನಗಳಿಂದ ಬೆಂಬಲಗೊಳ್ಳುವುದಿಲ್ಲ. ಅಗ್ರಹಾರ, ಬ್ರಹ್ಮಪುರಿ, ಮಠ ದೇವಾಲಯಗಳಿಗೆ, ಛತ್ರಗಳಿಗೆ ನೀಡಿರುವ ದಾನ ದತ್ತಿಗಳಲ್ಲಿ ವಿದ್ಯಾಭ್ಯಾಸಕ್ಕೆ ಸಾಕಷ್ಟು ಭಾಗ ದೊರಕಿರುವುದು ಗಮನಾರ್ಹವಾಗಿದೆ. 'ಹತ್ತು ಹನ್ನೊಂದನೆಯ ಶತಮಾನಗಳಲ್ಲಂತೂ ವಿದ್ಯಾರ್ಥಿಗಳು ಭಿಕ್ಷೆಯನ್ನು ಮಾಡಿಕೊಂಡಿರಲಿಲ್ಲ'[೪] ಎಂದು ಎ.ಎಸ್. ಆಳತೇಕರ್ ಅಭಿಪ್ರಾಯಪಡುವುದನ್ನು ಚಿದಾನಂದ ಮೂರ್ತಿಯವರು ಒಪ್ಪದೆ ಅದು ಪ್ರಾಚೀನ ಅಗ್ರಹಾರಗಳಲ್ಲಿ ಇದ್ದಿರಬೇಕೆಂದು ಅಭಿಪ್ರಾಯ ಪಡುತ್ತಾರೆ.[೫] ತೀರಾ ಇತ್ತೀಚಿನವರೆಗೂ ಅನೇಕ ಊರುಗಳಲ್ಲಿ 'ವಾರಾನ್ನದ' ಅಥವಾ 'ವಾರದ ಮನೆಯ' ಪದ್ಧತಿಯನ್ನು ಮಾಡಿಕೊಂಡು ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು

---

೧. 'ವಿದ್ಯಾವಿಹೀನಃ ಪಶುಭಿಃ ಸಮಾನಃ'.

೨. A.S. Altekar Education in Ancient India, ಪು. ೨೮೩.

೩. ಎಂ. ಚಿದಾನಂದಮೂರ್ತಿ ಕಶಾಸಾಂಅ, ಪು. ೨೦೭.

೪. A.S. Altekar ಪೂರ್ವೋಕ್ತ ಪು. ೨೬೭.

೫. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೦೮.

ಮಾಡುತ್ತಿದ್ದರು. ಇದು ನೇರವಾದ ಭಿಕ್ಷಾಪದ್ಧತಿಯಲ್ಲದೇ ಹೋದರೂ ಅದರ ಒಂದು ಪರಿಷ್ಕೃತ ರೂಪವೆಂದು ಭಾವಿಸಬಹುದು. ಆದ್ದರಿಂದ ವಿದ್ಯಾರ್ಥಿಗಳು ವಿದ್ಯಾಭ್ಯಾಸದ ಅವಧಿಯಲ್ಲಿ ಭಿಕ್ಷಾಪದ್ಧತಿಯನ್ನು ಆ ಕಾಲದಲ್ಲಿ ಅನುಸರಿಸು ತ್ತಿದ್ದರೆಂಬುದನ್ನು ಶಾಸನಗಳು ಬೆಂಬಲಿಸದೇ ಹೋದರೂ ಅದು ಇದ್ದುದನ್ನು ನಿರಾಕರಿಸುವುದು ಕಠಿಣವಾಗಿದೆ.

ರಾಜರು, ಅಧಿಕಾರಿಗಳು ಮತ್ತು ಶ್ರೀಮಂತರು ದಾನದತ್ತಿಗಳ ಮೂಲಕ ಪಂಡಿತರಿಗೆ, ವಿದ್ವಾಂಸರಿಗೆ ಆಶ್ರಯವನ್ನು ನೀಡಿರುವುದನ್ನು ನೋಡಿದರೆ ವಿದ್ಯೆಗೆ ವಿಶೇಷ ಮಾನ್ಯತೆ ದೊರೆತಿರುವುದು ಸ್ಪಷ್ಟವಿದೆ. ಕೊಟ್ಟ ದಾನ ದತ್ತಿಗಳನ್ನು ಉಪಯೋಗಿಸಿಕೊಂಡು ಆ ಕಾಲದ ಜನರು ವಿದ್ಯಾರ್ಜನೆ ಮಾಡುತ್ತಿದ್ದರು. ಆ ಕಾಲದಲ್ಲಿ ವಿದ್ಯಾವಂತರನ್ನು ಸರಸ್ವತೀಗಣ, ಅಕ್ಕರಿಗ, ಸಾಕ್ಷರಾಗ್ರೇಸರ[೧] ಮತ್ತು 'ವಿದ್ಯಾವನ್ತ'[೨] ಎಂಬ ಮಾತುಗಳಿಂದ ಗುರುತಿಸಲಾಗಿದೆ.

ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದ ವಿಷಯವನ್ನು ಅಧ್ಯಯನ ಮಾಡಲು ಹೊರಟರೆ ಅದು ಪ್ರಮುಖವಾಗಿ ನಾಲ್ಕು ವಿಭಾಗಗಳಲ್ಲಿ ಅಳವಡುವುದನ್ನು ಕಾಣಬಹುದು. ೧) ಅಗ್ರಹಾರಗಳು ೨) ಬ್ರಹ್ಮಪುರಿಗಳು ೩) ದೇವಸ್ಥಾನ ಮತ್ತು ಮಠಗಳು ೪) ಘಟಿಕಾಸ್ಥಾನಗಳು.

**ಅಗ್ರಹಾರ:**

ಅಗ್ರಹಾರಗಳು ವಿದ್ಯಾಭ್ಯಾಸದ ಪ್ರಮುಖ ಕೇಂದ್ರಗಳಾಗಿದ್ದವು. ಅಗ್ರಹಾರದ ಮೂಲರೂಪ ಅಗ್ರಾಹಾರವೆಂದೂ, ಅದು ಅಗ್ರ + ಆಹಾರ ಎಂಬ ಎರಡು ಪದಗಳಿಗೆ ಆಗಿರುವ ಸಮಾಸಪದವೆಂದೂ, ಅಗ್ರಕ್ಕೆ ಶ್ರೇಷ್ಠ (=ಬ್ರಾಹ್ಮಣ) ಆಹಾರಕ್ಕೆ ಪ್ರದೇಶ, ವಿಷಯ, ಜನಪದ, ಪ್ರಾಂತ ಎಂಬ ಅರ್ಥವನ್ನು ಹೇಳಿ, ಅಗ್ರಾಹಾರ ಪದದಲ್ಲಿರುವ 'ಹಾರ'ವು ಆಹಾರದ ಸವೆದ ರೂಪವೆಂದು ಸೂಚಿಸಿ, ಅಗ್ರಾಹಾರವೆಂದರೆ ಶ್ರೇಷ್ಠರಿಗೆ ಕೊಟ್ಟ ಊರು ಎಂದು ಡಿ.ಎಲ್. ನರಸಿಂಹಾಚಾರ್ ಅವರು ತಿಳಿಸುತ್ತಾರೆ.[೩] ಎಂ.ಎಂ. ಕಲಬುರ್ಗಿಯವರು [ಅಗ್ರ (=ಶ್ರೇಷ್ಠ) + ಆಹಾರ (=ಸ್ಥಳ)] ಎಂಬ ಅರ್ಥದ ಅಗ್ರಾಹಾರ ಪದದಿಂದ ಅಗ್ರಹಾರ ರೂಪ ತಾಳಿದೆ ಎಂದು ತಿಳಿಸಿದ್ದಾರೆ.[೪] ಲೀಲಾ ಶಾಂತಕುಮಾರಿಯವರೂ ಅದೇ ಅಭಿಪ್ರಾಯವನ್ನು ಉಳ್ಳವರಾಗಿದ್ದಾರೆ.[೫] ಎಂ. ಚಿದಾನಂದಮೂರ್ತಿಯವರು ಅಗ್ರಹಾರ ಎಂಬ ರೂಪ ಶಾಸನಗಳಲ್ಲಿ ಅಧಿಕವಾಗಿ ಕಂಡುಬರುವುದನ್ನು ಸೂಚಿಸಿ 'ಅಗ್ರಹಾರ'ವನ್ನು ಅಗ್ರ + ಹಾರ ಎಂದು ಬಿಡಿಸಿ ಅಗ್ರ = ಶ್ರೇಷ್ಠ ಬ್ರಾಹ್ಮಣರಿಗೆ, 'ಹಾರ'ವನ್ನು 'ಹೃ' ಧಾತುವಿನಿಂದ (=to carry, to take, to donate) ನಿಷ್ಪತ್ತಿ ಮಾಡಿ ಬ್ರಾಹ್ಮಣರಿಗೆ ನೀಡಿದ ದಾನವೆಂದು ಅರ್ಥೈಸಿದ್ದಾರೆ.[೬] ಅಗ್ರಹಾರಗಳನ್ನು ಹಿಂದಿನ ಕೆಲವು ಶಾಸನಗಳು ಶ್ರೋತ್ರಿಯ ಗ್ರಾಮ[೭]ವೆಂದೂ ಕರೆದಿವೆ. ತಮಿಳುನಾಡಿನ ಅಗ್ರಹಾರಗಳನ್ನು ಅಲ್ಲಿ ಮಂಗಲಗಳೆಂದು ಕರೆಯುವ ರೀತಿಯಲ್ಲಿ ಹೊಯ್ಸಳರ ಕಾಲದ ಅನೇಕ ಅಗ್ರಹಾರಗಳನ್ನು ಚತುರ್ವೇದಿ ಮಂಗಲ[೮]ಗಳೆಂದು ಕರೆಯಲಾಗಿದೆ. ಅಗ್ರಹಾರಗಳು ಕರ್ನಾಟಕದ ಉದ್ದಗಲಕ್ಕೂ ಹರಡಿದ್ದವು.

---

೧. ಎಸ್ಐಐ V ಬೆಳಗಾಂ ೮೫೦ ಕ್ರಿ.ಶ. ೧೧೪೫.

೨. ಎಸ್ಐಐ XV ನವಲಗುಂದ ೨೧೩ ಕ್ರಿ.ಶ. ೧೧೯೭.

೩. ಡಿ.ಎಲ್. ನರಸಿಂಹಾಚಾರ್ : ಪೀಠಿಕೆಗಳು ಲೇಖನಗಳು, ಪು. ೮೬೪-೬೮.

೪. ಎಂ.ಎಂ. ಕಲಬುರ್ಗಿ : ಶಾಸನ ವ್ಯಾಸಂಗ, ಸಂ. ೨, ಪು. ೩೮-೪೦.

೫. Leela Shantakumari : Agraharas of Ancient Karnataka ಪು. ೨೦.

೬. M. Chidananda Murhty : 'Names of villages donated to Brahmins' ಕ್ಯುಜೆಎಂಎಸ್ LXX-೪, ಪು. ೨೧೪-೨೨೦.

೭. ಶ್ರೋತ್ರಿಯೂರುಗಳಲ್ಲಿ ಒಂದು ಸೊತ್ತಿಯೂರು ಆಗಿ ಸುತ್ತೂರು ಆಗಿದೆ (ನಂಜನಗೂಡು ತಾಲ್ಲೂಕು) ಈ ಸೂಚನೆ ನೀಡಿದವರು ಎಂ. ಚಿದಾನಂದ ಮೂರ್ತಿಯವರು.

೮. ಬಣ್ಣಿಯೂರು ಮುಂದೆ ಜನನಾಥ ಚತುರ್ವೇದಿ ಮಂಗಲವೆಂದು ಬದಲಾಗಿದೆ-(ಮೈ) ಎಕ V ತಿ.ನರಸೀಪುರ ೬೭ ಕ್ರಿ.ಶ. ೧೧೩೫; ಬ್ರಹ್ಮಪುರ ಎಂಬ ಊರು ಚತುರ್ಮುಖ ನಾರಾಯಣ ಚತುರ್ವೇದಿ ಮಂಗಲವೆಂದಾಗಿದೆ.

ಒಂದು ಊರನ್ನು ಅಥವಾ ಕೆಲವು ಗ್ರಾಮಗಳನ್ನು[೧] ಸೇರಿಸಿ ಒಬ್ಬ ರಾಜನೋ, ಅಧಿಕಾರಿಯೋ ಅಥವಾ ದಾನಿಯೋ ಅಗ್ರಹಾರವಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ನೀಡುತ್ತಿದ್ದನು. ಅನೇಕ ಸಂದರ್ಭಗಳಲ್ಲಿ ಊರಿನ ಅಥವಾ ಗ್ರಾಮಗಳ ಹೆಸರು ಬದಲಾವಣೆ ಹೊಂದುತ್ತಿದ್ದವು.[೨] ಕೆಲವು ಅಗ್ರಹಾರಗಳು ಯಾರಿಂದ ಸ್ಥಾಪಿತವಾದವು ಎಂಬುದು ಕಾಲಾನಂತರದಲ್ಲಿ ಜನರ ಸ್ಮರಣೆಯಿಂದ ಮರೆತು ಹೋದಾಗ ಅಂಥವನ್ನು ಶ್ರೀಮದನಾದಿ ಅಗ್ರಹಾರವೆಂದು[೩] ಕರೆಯುತ್ತಿದ್ದರು. ಕೆಲವು ಸಾರಿ ಅಗ್ರಹಾರಗಳ ಪ್ರಾಚೀನತ್ವವನ್ನು ಅಥವಾ ಉನ್ನತಿಯನ್ನು ಸ್ಥಾಪಿಸಲೋ ಎಂಬಂತೆ ಕೆಲವು ಅಗ್ರಹಾರಗಳಿಗೆ ಜನಮೇಜಯ ದತ್ತಿ ಅಗ್ರಹಾರವೆಂದೂ,[೪] ಹರಿಶ್ಚಂದ್ರ ದತ್ತಿಯ ಮಹಾಗ್ರಹಾರವೆಂದೋ[೫] ಪೌರಾಣಿಕ ವ್ಯಕ್ತಿಗಳ ಹೆಸರನ್ನು ಇಟ್ಟು ಹೇಳುವ ಪದ್ಧತಿಯೂ ಇದ್ದಿತು. ಅಗ್ರಹಾರಗಳನ್ನು ಸ್ಥಾಪಿಸುವಾಗ ಬ್ರಾಹ್ಮಣರಿಗೆ ಅನೇಕ ತತ್ತು, ವೃತ್ತಿಗಳಾಗಿ[೬] ವಿಭಾಗ ಮಾಡಿಕೊಡುತ್ತಿದ್ದುದುಂಟು. ಅವರ ಆದಾಯದಿಂದ ಆ ಬ್ರಾಹ್ಮಣರು ಜೀವನ ನಡೆಸುತ್ತಿದ್ದರು. ಹೀಗೆ ಅಗ್ರಹಾರವನ್ನು ನಿರ್ಮಿಸಿ ಕೊಡುವುದು ಪುಣ್ಯಕಾರ್ಯವೆಂಬುದು ಸಾಧಾರಣವಾದ ನಂಬಿಕೆಯಾಗಿತ್ತು.

ಅಗ್ರಹಾರವನ್ನು ದಾನವಾಗಿ ಪಡೆದ ಬ್ರಾಹ್ಮಣರೇ ಮಹಾಜನಗಳು; ಅವರೇ ಅಗ್ರಹಾರಗಳ ಒಡೆಯರು. ಅಗ್ರಹಾರಗಳ ಮಹಾಜನರನ್ನು ಹೊಗಳುವಾಗ 'ಸ್ವಸ್ತಿಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನಜಪತಪ ಸಮಾಧಿಸೀಲ ಗುಣಸಂಪಂನರುಂ ಯಜನ ಯಾಜನಯಧ್ಯಯನಯಧ್ಯಾಪನ ಪ್ರತಿಗ್ರಹ ಶಟುಕಮ್ಮ೯ನಿರತರುಂ ಔಪಸನಾಅಗ್ನಿಹೋತ್ರ ದ್ವಿಜಗುರು ದೇವತಾ ಪೂಜಾತತ್ಪರರುಂ ರುಗ್ಯಜುಸಾಮ ಅಥರ್ವಣ ಚತುರ್ವೇದ ವೇದಾಂಗ ಶಟುಕಂ ಬ್ಯಾಕರಣ ಸ್ಮೃತಿ ಪುರಾಣಾಗಮಾದಿ ಚತುಃಶಷ್ಟಿಕಳಾಪರಿಣತರಪ್ಪ...'[೭] ಎಂಬಂತಹ ಮಾತುಗಳು ಮತ್ತೆ ಮತ್ತೆ ಬರುತ್ತವೆ. ಈ ಮಾತುಗಳು ಮಹಾಜನರು ಅನುಸರಿಸಬೇಕೆಂದು ನಿರೀಕ್ಷಿಸಲಾಗುತ್ತಿದ್ದ ಕರ್ತವ್ಯಗಳೆಂದು ಭಾವಿಸಬಹುದು. ಅಗ್ರಹಾರಗಳಲ್ಲಿ ಬ್ರಾಹ್ಮಣರಲ್ಲದೆ ಇತರರು ಕೂಡ ಇರುತ್ತಿದ್ದರು. ಆದರೆ ಆಡಳಿತದ ಹೊಣೆ ಸಂಪೂರ್ಣವಾಗಿ ಮಹಾಜನರಿಗೇ ಸೇರಿರುತ್ತಿತ್ತು. ಮಹಾಜನರ ಸಂಖ್ಯೆ ಅಗ್ರಹಾರದಿಂದ ಅಗ್ರಹಾರಕ್ಕೆ ಏಕರೂಪವಾಗಿ ಇರುತ್ತಿರಲಿಲ್ಲ. ಅಗ್ರಹಾರವನ್ನು ನಿರ್ಮಿಸಿದ ದಾನಿಯ ಇಚ್ಛೆಯ ಮೇಲೆ ಆ ಸಂಖ್ಯೆ ನಿರ್ಧಾರವಾಗುತ್ತಿತ್ತೆಂದು ಹೇಳಬಹುದು. ಉದಾಹರಣೆಗೆ ಮಹಾಜನರ ಸಂಖ್ಯೆ ಮೂವತ್ತು,[೮] ಎಂಬತ್ತಾರು,[೯] ನೂರಾನಾಲ್ಕು,[೧೦] ನೂರಿಪ್ಪತ್ತು,[೧೧] ಮುನ್ನೂರು,[೧೨] ಒಂದು ಸಾವಿರ,[೧೩] ಮೂವತ್ತೆರಡು ಸಾವಿರ[೧೪] ಹೀಗೆ ಕಂಡುಬರುತ್ತವೆ.

---

೧. ಗೊಮ್ಮಟಹಳ್ಳಿ ಮತ್ತು ಮಾದೆಯನಹಳ್ಳಿಗಳನ್ನು ನಾರಾಯಣ ದೇವಣ್ಣನೆಂಬ ಅಧಿಕಾರಿ ತನ್ನ ತಂದೆಯ ಹೆಸರಲ್ಲಿ ರಾಘವಪುರವಾಗಿ ಮಾಡಿದ ವಿಷಯ ತಿಳಿದುಬರುತ್ತದೆ. (ಮೈ) ಎಕ III ಗುಂಡ್ಲುಪೇಟೆ ೪೦ ಕ್ರಿ.ಶ. ೧೩೨೦.

೨. ಉದಾಹರಣೆಗೆ ಬಾಣೂರು ಸರ್ವಜ್ಞ ಲಕ್ಷ್ಮೀಪುರವಾಗಿರುವುದನ್ನು ಕಾಣುತ್ತೇವೆ. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.

೩. (ಮೈ) ಎಕ VI ಪಾಂಡವಪುರ ೭೯ ಕ್ರಿ.ಶ. ೧೧೭೫.

೪. ಎಸ್‌ಐಐ XVIII ಹಾವೇರಿ ೩೫೩ ಕ್ರಿ.ಶ. ೧೧೬೫.

೫. ಎಸ್‌ಐಐ IX(i) ಹರಪನಹಳ್ಳಿ ೩೩೧ ಕ್ರಿ.ಶ. ೧೨೧೨.

೬. ತತ್ತು ಎಂದರೆ ಪಾಲು ಅಥವಾ ಭಾಗವೆಂದು ಅರ್ಥ. ವೃತ್ತಿಗೂ ಈ ಅವರಣದಲ್ಲಿ ಅದೇ ಅರ್ಥವಿದೆ. ಶಾಸನಗಳಲ್ಲಿ ತತ್ತು ಪದಕ್ಕಿಂತ ವೃತ್ತಿ-ವೃತ್ತಿವಂತ ಎಂಬ ಪದಗಳೇ ಅಧಿಕವಾಗಿ ಬಳಕೆಯಾಗಿವೆ. (ಮೈ) ಎಕ V ತಿ.ನರಸೀಪುರ ೯೦ ಕ್ರಿ.ಶ. ೧೩೨೬. ತತ್ತು ಮತ್ತು ವೃತ್ತಿ ಈ ಪದಗಳ ನಿರ್ದಿಷ್ಟ ಅರ್ಥಭೇದವನ್ನು ಗುರುತಿಸುವುದು ಅಗತ್ಯವಿದೆ.

೭. (ರೈ) ಎಕ VII ಶಿಕಾರಿಪುರ ೩೧೨ ಕ್ರಿ.ಶ. ೧೨೮೭.

೮. (ರೈ) ಎಕ III ಗುಂಡ್ಲುಪೇಟೆ ೪೦ ಕ್ರಿ.ಶ. ೧೩೨೦.

೯. (ರೈ) ಎಕ V ಅರಸಿಕೆರೆ ೭೪ ಕ್ರಿ.ಶ. ೧೨೬೧.

೧೦. ಎಇ XIX ರೋಣ ೩೮ಬಿ. ಕ್ರಿ.ಶ. ೧೧೭೯.

೧೧. (ರೈ) ಎಕ V ಅರಸಿಕೆರೆ ೬೮ ಕ್ರಿ.ಶ. ೧೨೨೪.

೧೨. (ರೈ) ಎಕ VI ತರೀಕೆರೆ ೫೫ ಕ್ರಿ.ಶ. ೧೨೩೭.

೧೩. ಕಸಾಪಪ ೨೮-೧ ಹಾನಗಲ್ಲು ಕ್ರಿ.ಶ. ೧೨೩೮.

೧೪. (ರೈ) ಎಕ VII ಶಿಕಾರಿಪುರ ೧೮೫ ಕ್ರಿ.ಶ. ೧೧೫೮.

ಮಹಾಜನರ ಸಂಖ್ಯೆ ಒಂದು ಸ್ಥಳದಲ್ಲಿ ಸಾಮಾನ್ಯವಾಗಿ ಏಕರೂಪವಾಗಿಯೇ ಕಂಡುಬರುವುದಾದರೂ ಅದಕ್ಕೆ ಅಪವಾದಗಳೂ ಇಲ್ಲದಿಲ್ಲ. ಕ್ರಿ.ಶ. ೧೧೭೨ರ ಕುಕ್ಕನೂರಿನ ಶಾಸನದಲ್ಲಿ ೧೦೦೦ ಮಹಾಜನರು ಉಲ್ಲೇಖಗೊಂಡಿದ್ದರೆ ಕ್ರಿ.ಶ. ೧೧೮೧ರ ಶಾಸನದಲ್ಲಿ ಅದು ೧೦೦೨ ಎಂದು ಉಲ್ಲೇಖಗೊಂಡಿರುವುದುಂಟು, ಅನಂತರ ಕ್ರಿ.ಶ. ೧೩೭೯ರ ಶಾಸನದಲ್ಲಿ ಅದು ಮತ್ತೆ ೧೦೦೦ ಇರುವುದನ್ನು ಕಾಣುತ್ತೇವೆ.[೧] ಇದೇ ರೀತಿ ಚಿಕ್ಕೆರೂರಿನ ಅಗ್ರಹಾರದಲ್ಲಿ ಕ್ರಿ.ಶ. ೧೦೪೮ ರಲ್ಲಿ ೧೦೦೦ ಜನರಿದ್ದು ಕ್ರಿ.ಶ. ೧೦೮೩ರಲ್ಲಿ ೫೦೦ ಜನರು ಉಲ್ಲೇಖಗೊಂಡಿದ್ದು, ಕ್ರಿ.ಶ. ೧೧೩೦ರ ಶಾಸನದಲ್ಲಿ ೧೦೦೦ ಮಹಾಜನರೆಂದು ಉಲ್ಲೇಖ ಕಂಡುಬರುತ್ತದೆ.[೨] ಈ ರೀತಿಯ ಮಹಾಜನರ ಸಂಖ್ಯೆಯ ಏರಿಳಿತಗಳು ಅತ್ಯಂತ ಕಡಮೆಯೆಂದೇ ಹೇಳಬಹುದು.

ಮಹಾಜನರ ಸಂಖ್ಯೆ ಏನನ್ನು ಸೂಚಿಸುತ್ತದೆ ಎಂಬುದನ್ನು ಕುರಿತು ವಿದ್ವಾಂಸರು ಸಾಕಷ್ಟು ದೀರ್ಘವಾಗಿ ಚರ್ಚಿಸಿದ್ದಾರೆ. ಎ.ಎಸ್. ಆಲ್ಟೇಕರರು ಈ ವಿಷಯವನ್ನು ವಿವರವಾಗಿ ಚರ್ಚಿಸಿದರೂ, ಅದು ಕುಟುಂಬದ ಮುಖ್ಯಸ್ಥನನ್ನೋ, ಎಲ್ಲ ಬ್ರಾಹ್ಮಣ ಪುರುಷರನ್ನೋ ಅಥವಾ ವಯಸ್ಕರನ್ನು ಸೂಚಿಸುವುದೋ ಎಂಬ ವಿಷಯದಲ್ಲಿ ನಿರ್ಧಾರಕ್ಕೆ ಬಂದಂತಿಲ್ಲ.[೩] ಶಾಸನಗಳನ್ನು ಗಮನಿಸಿದರೆ ಆ ಸಂಖ್ಯೆ ಬ್ರಾಹ್ಮಣ ಕುಟುಂಬದ ಮುಖ್ಯಸ್ಥನನ್ನು ಸೂಚಿಸುವ ಹಾಗೆ ಕಾಣುತ್ತದೆ.[೪] ಮಹಾಜನರು ತಮ್ಮ ವಿದ್ವತ್ತು ಪಾಂಡಿತ್ಯ ಮತ್ತು ಸನ್ನಡತೆಗಳಿಂದ ಇಡೀ ಅಗ್ರಹಾರದ ಗೌರವಕ್ಕೆ ಪಾತ್ರರಾಗಿರುತ್ತಿದ್ದರು. ಅವರು ಅಗ್ರಹಾರಕ್ಕೆ ಸಂಬಂಧಿಸಿದ ಹಾಗೆ ಯಾವುದೇ ತೀರ್ಮಾನ ಕೈಗೊಂಡರೂ ಅದನ್ನು ಇತರರು ಗೌರವಿಸುತ್ತಿದ್ದರು ಮತ್ತು ಅದಕ್ಕೆ ಬದ್ಧರಾಗಿರುತ್ತಿದ್ದರು.

ಮಹಾಜನರು ತಮ್ಮ ಅಗ್ರಹಾರಕ್ಕೆ ಕಳ್ಳರು ನುಗ್ಗಿದಾಗ ಅಥವಾ ಇನ್ನಿತರ ಸಂಕಷ್ಟಗಳಲ್ಲಿ ನೆರವಿಗೆ ಒದಗಿದ ಜನರಿಗೆ ಗೌರವವನ್ನು ತೋರಿಸಿರುವುದು ಕಂಡುಬರುತ್ತದೆ. ಕೆಂಕೆಜಿ ಅಗ್ರಹಾರದ ಮಹಾಜನಗಳ ತುರುಗಳನ್ನು ಕಳ್ಳರು ಕದ್ದುಕೊಂಡು ಹೋಗುವಾಗ ಹುಯ್ಯಲನ್ನು ಕೇಳಿ ಹೋರಾಡಿ ತುರುಗಳನ್ನು ಮರಳಿಸಿದ ಜಕಗೌಡನ ತಮ್ಮ ಮರಿಯನಿಗೆ ಮಹಾಜನಗಳು ಕುದುರೆ, ತಂಬಟ ಸಹಿತವಾಗಿ 'ವೀರ ಕೊಡಗಿ'ಯಾಗಿ ಭೂಮಿಯನ್ನು ದಾನ ಮಾಡಿದ ವಿಷಯವನ್ನು ಆ ಊರಿನ ವೀರಗಲ್ಲಿನ ಶಾಸನ ತಿಳಿಸುತ್ತದೆ.[೫] ಅದೇ ರೀತಿಯಾಗಿ ಹಾವೇರಿ ಅಗ್ರಹಾರದ ಪರವಾಗಿ ಒಂದು ಹೋರಾಟದಲ್ಲಿ ಚೌಂಡರಸನಾಯಕನ ಮಗ ಸೋವೆಯನಾಯಕನು ತಲೆಗೊಟ್ಟುದಕ್ಕೆ ನೆತ್ತರುಕೊಡುಗೆಯಾಗಿ ಭೂಮಿಯನ್ನು ದಾನಮಾಡಿದ ವಿಷಯವನ್ನು ತಿಳಿಸುತ್ತದೆ.[೬] ಮಹಾಜನರು ಅನೇಕ ದಾನಕಾರ್ಯಗಳನ್ನು ಮಾಡಿರುತ್ತಾರೆ. ಪ್ರಸನ್ನವಿಜಯಪುರದ ಮಹಾಜನರೆಲ್ಲರೂ ಒಟ್ಟಾಗಿ ಗ್ರಾಮಾಧಿದೈವವಾದ ರಾಮನಾಥ ದೇವರ ಪಾತ್ರಭೋಗಕ್ಕೆ ದಾನ ಮಾಡಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೭] ಮಹಾಜನರನ್ನು ಅನೇಕ ಶಾಸನಗಳು 'ಶಿಷ್ಟಜನಾಶ್ರಯರ್', 'ಶರಣಾಗತ ವಜ್ರಪಂಜರರ್' ಎಂಬಂತಹ ಉದಾರವಾದ ಮಾತುಗಳಲ್ಲಿ ಹೊಗಳಿವೆ.

---

೧. Leela Shantakumari : ಪೂರ್ವೋಕ್ತ, ಪು. ೧೭೨.

೨. ಅದೇ, ಪು. ೧೭೩. ಈ ಶಾಸನದಲ್ಲಿ ಇದ್ದಕ್ಕಿದ್ದಂತೆ ೫೦೦ ಮಹಾಜನರು ಕಡಿಮೆ ಉಲ್ಲೇಖಗೊಂಡಿರುವುದು ಬಹುಶಃ ಶಾಸನದ ಕೆತ್ತುವಿಕೆಯಲ್ಲಿ ಆದ ದೋಷವಿರಬೇಕೆಂದು ಲೇಖಕಿ ಅಭಿಪ್ರಾಯಪಡುತ್ತಾರೆ.

೩. A. S.Altekar : Rastrakutas and Their Times ಪು. ೨೦೨.

೪. ನಂಬಿಯಣ್ಣನ ರಗಳೆಯೂ ಇದನ್ನು ಪೋಷಿಸುವ ಹಾಗೆ ಕಾಣುತ್ತದೆ. ನೋಡಿ: ೭ನೆಯ ಸ್ಥಳ, ಪು. ೪೭,೪೮.

೫. (ರೈ) ಎಕ VI ಚಿಕ್ಕಮಗಳೂರು ೧೫೭ ಕ್ರಿ.ಶ. ೧೧೯೫; ಇದೇ ಹೋರಾಟದಲ್ಲಿ ಅದೇ ಬಗೆಯ ಗೌರವ ದತ್ತಿಯನ್ನು ಮಡಿದ ಮಾರಗೌಡನ ಮಗನಿಗೂ ನೀಡಲಾಗಿದೆ. ಅದೇ ಸ್ಥಳದ ೧೫೮ನೆಯ ಶಾಸನ.

೬. ಎಸ್‌ಐಐ XVIII ಹಾವೇರಿ ೨೧೧ ಕ್ರಿ.ಶ. ೧೨೩೦.

೭. (ರೈ) ಎಕ III ಗುಂಡ್ಲುಪೇಟೆ ೧೨ ಕ್ರಿ.ಶ. ೧೩೭೨.

ಮಹಾಜನರು ಅಗ್ರಹಾರದ ಗೌರವಾನ್ವಿತ ವ್ಯಕ್ತಿಗಳಾದುದರಿಂದ ಸಹಜವಾಗಿ ಅನೇಕ ದಾನ ದತ್ತಿಗಳ ಸಾಕ್ಷಿಗಳಾಗಿ, ಸಂರಕ್ಷಕರಾಗಿ ಕಾರ್ಯವನ್ನು ನಿರ್ವಹಿಸಿದ್ದಾರೆ. ಹಲವು ಸಾರಿ ಸ್ಥಳೀಯ ಅಧಿಕಾರಿಗಳೊಂದಿಗೆ, ಸ್ಥಾನಪತಿಗಳೊಂದಿಗೆ ಸೇರಿಕೊಂಡು ದಾನದತ್ತಿಗಳನ್ನು ನಡೆಸಿಕೊಂಡು ಹೋಗುವ ಜವಾಬ್ದಾರಿ ಹೊತ್ತಿರುವುದುಂಟು. ಹಾವೇರಿಯ ನಖರಂಗಳು ಸಿದ್ಧನಾಥದೇವ ವಿನಾಯಕ ದೇವರ ಉಪಾಹಾರಕ್ಕೆ ಕೊಟ್ಟ ಗದ್ಯಾಣ ನಾಲ್ಕರ ವೃದ್ಧಿ ತಿಂಗಳಿಗೆ ಹಣ ಒಂದರಲ್ಲಿ ನಡೆಸಿಕೊಂಡು ಹೋಗಬೇಕೆಂದು ಜ್ಞಾನರಾಶಿದೇವರಿಗೆ ಮತ್ತು ಮಹಾಜನರಿಗೆ ಒಪ್ಪಿಸಿರುವುದು ಕಂಡುಬರುತ್ತದೆ.[೧] ಸಂತೆಕೆರೆಹಳ್ಳಿಯ ಶಾಸನ ಒಂದರಲ್ಲಿ ಮಹಾಪಸಾಯ್ತ ಬಮ್ಮನ ಮಕ್ಕಳಾದ ಸಿಂಗಯ್ಯ, ಬಲ್ಲಯ್ಯ, ಗೌಡಯ್ಯ, ಬಸವಯ್ಯಗಳು ವಿಷ್ಣು ಸಮುದ್ರದ ಸಿದ್ಧಾಯ ಸಾವಿರದ ಇನ್ನೂರು ಹೊನ್ನಿನಲ್ಲಿ ನೆಲೆಧರೆ[೨](?) ಗದ್ಯಾಣ ೧೦ನ್ನು ಖಚರೇಶ್ವರ ದೇವರಿಗೆ ವರ್ಷ ವರ್ಷ ಪರ್ಯಂತ ನೀಡಿದ್ದನ್ನು ತಿಳಿಸಿ ಅಲ್ಲಿಯ ನಾನೂರ್ವರು ಮಹಾಜನರು ಅದನ್ನು ಪ್ರತಿಪಾಲಿಸಬೇಕೆಂದು ತಿಳಿಸುತ್ತದೆ.[೩] ಇದೇ ರೀತಿ ತಿರುಪರಸ ಎಂಬುವವನು ಪ್ರಸನ್ನ ಕೇಶವದೇವರಿಗೆ ನಂದಾದೀವಿಗೆ ನಡೆಸಲು ಬಿಟ್ಟ ಗಾಣ ಮಾನೆಣ್ಣೆಯನ್ನು ನಡೆಸುವ ಜವಾಬ್ದಾರಿಯನ್ನು ಅಮರಾವತಿ ಪುರವಾದ ಅಗ್ರಹಾರಾದ ಮಹಾಜನರಿಗೆ ಬಿಡಲಾಗಿದೆ.[೪] ಅಗ್ರಹಾರದ ಮಹಾಜನರು ಆಧುನಿಕ ಕಾಲದ ವಿಶ್ವಸ್ಥ ಮಂಡಲಿ(trustee)ಯ ಹಾಗೆ ಆ ಕಾಲದಲ್ಲಿ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ.

ಕೆಲವು ಸಾರಿ ಅಗ್ರಹಾರದ ಮಹಾಜನರು ಸೀಮಾವಿವಾದಗಳಾದರೆ ಪರಿಹರಿಸಿ ಕೊಡುವ ಜವಾಬ್ದಾರಿಯನ್ನು ಹೊತ್ತಿದ್ದಾರೆ. ಕೆಲ್ಲಂಗೆರೆಯ ಒಪ್ಪಂದದ ಒಂದು ಶಾಸನದಲ್ಲಿ 'ಯೀ ಕ್ಷೇತ್ರಕ್ಕೆ ಸೀಮಾವಿವಾದವಾದಡೆ ಮಹಾಜನಂಗಳು ತಿದ್ದಿ ಕೊಡುವರು'[೫] ಎಂದು ಬರುತ್ತದೆ. ಅಷ್ಟೇ ಅಲ್ಲ, ಶಾಸನ ಮುಂದುವರಿದು ಒಪ್ಪಂದಕ್ಕೆ 'ಮಹಾಜನಂಗಳ ಶ್ರೀಹಸ್ತದೊಪ್ಪ' ಎಂದೂ ಹೇಳುತ್ತದೆ. ಸಿಂದಘಟ್ಟದ ಒಂದು ಶಾಸನ ಮಾರಾಟದ ಒಂದು ಒಪ್ಪಂದಕ್ಕೆ ಮತ್ತು ಕೆಲವು ತೆರಿಗೆಗಳ ಜವಾಬ್ದಾರಿಯನ್ನು ಹೊತ್ತು ಅದಕ್ಕೆ ಮಹಾಜನರ ಶ್ರೀಹಸ್ತದೊಪ್ಪವನ್ನು ಹಾಕಿರುವುದನ್ನು ತಿಳಿಸುತ್ತದೆ.[೬]

ಹಿರೇಲಿಂಗದ ಹಳ್ಳಿಯ ಶಾಸನ ಒಂದರಲ್ಲಿ ಹಾವೇರಿ ಅಗ್ರಹಾರದ ಮಹಾಜನ ಚೆಂದಿಸೆಟ್ಟಿಗೆ ಹೆಗಡೆಕೆಯಿ[೭] ಕೊಟ್ಟರು ಎಂದು ಹೇಳಿ ಭೂಮಿ, ಮನೆ ನಿವೇಶನ ಬಣವೆ ಮುಂತಾದುವನ್ನು ಕೊಟ್ಟ ವಿಷಯ ತಿಳಿಸುತ್ತದೆ.[೮] ಈ ಶಾಸನದಿಂದ ಹೆಗ್ಗಡೆಯಂತಹ ಕೆಲವು ಅಧಿಕಾರಿಗಳ ನೇಮಕ ಮತ್ತು ಆ ಕರ್ತವ್ಯಕ್ಕೆ ಪ್ರತಿಫಲವನ್ನು ಕೊಡುವ ಅಧಿಕಾರ ಮಹಾಜನರಿಗಿದ್ದಿತೆಂದು ಭಾವಿಸಬೇಕಾಗುತ್ತದೆ. ಲಕ್ಕುಂಡಿಯ ಒಂದು ಶಾಸನ ಪೆರ್ಗಡೆ ಕೇಶವದೇವ ಎಂಬುವವನನ್ನು 'ಶ್ರೀಸಾಸಿರ್ವರ ಪ್ರಿಯಪುತ್ರಂ' ಎಂದು ಕರೆಯುತ್ತದೆ. ಹೀಗೆ ಅನೇಕ ಅಧಿಕಾರ ನಿಯೋಗದ ಸಾಮಾಜಿಕ ಧಾರ್ಮಿಕ ಜವಾಬ್ದಾರಿಯನ್ನು ನಿರ್ವಹಿಸುತ್ತ ಒಂದು ಸಂಘಟಿತ ಸಂಸ್ಥೆಯಾಗಿ ಅದು ಕಾರ್ಯ ನಿರ್ವಹಿಸಿದೆ. ಕಬ್ಬಿನ ಹಳ್ಳಿಯ ಶಾಸನ ಒಂದು ಮಹಾಜನರು ನಾವಿದ

---

೧. ಎಸ್‌ಐಐ XVIII ಹಾವೇರಿ ೨೦೯ ಕ್ರಿ.ಶ. ೧೨೨೮.

೨. ಇದು ನೆಲೆದೆರೆ ಇರಬಹುದೆ? ನೆಲೆದೆಱೆ = ಶವವನ್ನು ಸುಡುವ ಜಾಗಕ್ಕೆ ಕೊಡಬೇಕಾದ ತೆರಿಗೆ (ಹಚಕಾ ೧೧-೩೮) 'ನೆಲದೆರೆ' ಸಾಮಾನ್ಯ ಭೂಕಂದಾಯ ಎಂಬ ಅರ್ಥದಲ್ಲೂ ಕಾವ್ಯಗಳಲ್ಲಿ ಬಳಕೆಯಾಗಿದೆ.

೩. (ರೈ) ಎಕ VI ಕಡೂರು ೧೦೦ ಕ್ರಿ.ಶ. ೧೨೪೦.

೪. ಎಂಎಆರ್ ೧೯೩೨ ತರೀಕೆರೆ ೪೭ ಕ್ರಿ.ಶ. ೧೨೨೮.

೫. (ರೈ) ಎಕ V ಅರಸಿಕೆರೆ ೧೧೩ ಕ್ರಿ.ಶ. ೧೩೪೮.

೬. (ಮೈ) ಎಕ VI ಕೃ.ಪೇಟೆ ೯೦ ಕ್ರಿ.ಶ. ೧೨೯೯.

೭. ಹೆಗಡೆ ಕೆಯಿ-ಹೆಗ್ಗಡೆಯ ಕರ್ತವ್ಯ ನಿರ್ವಹಣೆಗಾಗಿ ಕೊಟ್ಟ ಭೂಮಿ ಎಂದು ಶಾಸನದ ಸಂಪಾದಕರು ತಿಳಿಸಿದ್ದಾರೆ. ಎಸ್‌ಐಐ XVIII ಪು. ೩೧೬.

೮. ಎಸ್‌ಐಐ XVIII ಹಾವೇರಿ ೨೪೦ ಕ್ರಿ.ಶ. ೧೨೫೯.

ಮಾದನ ಮಗನಾದ ಅಇಪನಿಗೆ (ಅಯ್ಯಪ್ಪನಿಗೆ) ಭೂದಾನವನ್ನು ನೀಡಿದ ವಿಷಯ ತಿಳಿಸುತ್ತದೆ.[೧] ಕೆಲವು ಶಾಸನಗಳಲ್ಲಿ ಮಹಾಜನಗಳು ಅಗ್ನಿಷ್ಟಿಯನ್ನು ನಡೆಸುವ ಹೊಣೆಯನ್ನು ಹೊತ್ತಿರುವುದು ಕಂಡುಬರುತ್ತದೆ.[೨] ಕೆಲವು ಶಾಸನಗಳು ಮಹಾಜನಗಳು ಅಗ್ನಿಷ್ಟಿಗೆಗಾಗಿ ಮಾಡಿದ ದಾನಗಳನ್ನು ತಿಳಿಸುತ್ತವೆ.[೩]

ಮಹಾಜನರು ಅಗ್ರಹಾರಗಳಲ್ಲಿ ನಡೆಸಿದ ಆಡಳಿತ, ಸಾಮಾಜಿಕ ಜವಾಬ್ದಾರಿಗಳಷ್ಟೇ ಅವರು ವಿದ್ಯಾಭ್ಯಾಸಕ್ಕೆ ನೀಡಿದ ಕಾಣಿಕೆ ಮಹತ್ವವಾದುದು. ಸ್ವತಃ ಬಹುದೊಡ್ಡ ವಿದ್ವಾಂಸರಾಗಿದ್ದು ಜ್ಞಾನದ ನಾನಾ ಶಾಖೆಗಳಲ್ಲಿ ಪರಿಣತರಾಗಿದ್ದ ಅವರು ತಮ್ಮ ಜ್ಞಾನವನ್ನು ಸತತವಾಗಿ ಪ್ರಸಾರ ಮಾಡಿದರು. ತಮಗೆ ದಾನಿಗಳು ಒದಗಿಸಿದ ಬದುಕಿನ ವ್ಯವಸ್ಥೆಗೆ ಪ್ರತಿಫಲವಾಗಿ ಎಂಬಂತೆ ವಿದ್ಯೆಯನ್ನು ವಿದ್ಯಾರ್ಥಿಗಳಿಗೆ ಬೋಧಿಸುತ್ತಾ ಸತತಜ್ಞಾನಪ್ರಸಾರಕ್ಕೆ ಕಾರಣಕರ್ತರಾದರು.

ಅಗ್ರಹಾರಗಳು ವಿದ್ಯೆ ಮತ್ತು ಪಾಂಡಿತ್ಯದ ಕೇಂದ್ರಗಳಾಗಿದ್ದವು. ವಿವಿಧ ಶಾಸ್ತ್ರಗಳಲ್ಲಿ ಪರಿಣತರಾದ ವಿದ್ವಾಂಸರು ಸತತವಾಗಿ ಅಧ್ಯಯನ ಅಧ್ಯಾಪನಗಳಲ್ಲಿ ತೊಡಗಿರುತ್ತಿದ್ದರು. ತಳಿರೂರನ್ನು ಒಂದು ಶಾಸನ ಹೀಗೆ ವರ್ಣಿಸಿದೆ.

ಒಂದೆಡೆ ವೇದನಾದಮಯಮೊಂದೆಡೆ ವಾದ ವಿನೋದ ರಮ್ಯ ಮ
ತ್ತೊಂದೆಡೆ ವಿಸ್ಮೃತ ಸ್ಮೃತಿ ವಿಭೂಷಿತಮೊಂದೆಡೆ ತಂತ್ರಸೇವ್ಯಮಿ।
ನ್ನೊಂದೆಡೆ ಶಬ್ದ ಶಾಸ್ತ್ರ ಪರಿಭಾವಿತಮೆಂಬಿನೆಗಂ ವಿದಗ್ಧತಾ
ಮಂದಿರಮಾಯ್ತು ಪಲ್ಲವಪುರಂ ದ್ವಿಜತಾವನಮಹಾಗ್ರಹಾರದೊಳ್॥[೪]

ಹೂಲಿಯ ಶಾಸನ ಅಲ್ಲಿಯ ಮಹಾಜನರನ್ನು ಉನ್ನತವಾಗಿ ಕೀರ್ತಿಸುತ್ತಾ ಹೂಲಿಯು ವೇದಗಳ ತವರು ಮನೆಯೆಂದೂ ಶಾಸ್ತ್ರಗಳ ಗಣಿಯೆಂದೂ ವರ್ಣಿಸುತ್ತದೆ.[೫] ಅನೇಕ ಅಗ್ರಹಾರಗಳ ಬ್ರಾಹ್ಮಣರು ಎಷ್ಟು ಪರಿಶುದ್ಧರೆಂದರೆ 'ತಿಲಮಾತ್ರಕಳಂಕರಹಿತ ಶೀಲಮುಕ್ತಾಫಳಂಕ್ರಿತರುಂ'[೬] ಎಂದು ಕೀರ್ತಿತರಾಗಿದ್ದಾರೆ. ಅದೇ ಶಾಸನ ಮುಂದುವರಿದು ಚತುರ್ವೇದಪಾರಂಗತರೂ ವೈಶೇಷಿಕ ನಯ್ಯಾಯಿಕ ಲೋಕಾಯತ ಬೌದ್ಧಾರ್ಹತಾನೇಕ ತರ್ಕ ಬ್ಯಾಕರಣ ಶಾಸ್ತ್ರವಿನೋದರುಂ ಎಂದೂ ವರ್ಣಿಸಿದೆ. ಕೆಲವು ಅಗ್ರಹಾರಗಳಿಗೆ ಹೆಸರನ್ನು ಇಡುವಾಗಲೇ ಅಲ್ಲಿ ವಿದ್ಯೆಗೆ ಪ್ರಾಶಸ್ತ್ಯವಿದೆಯೆಂಬುದನ್ನು ಸೂಚಿಸುವ ಹಾಗೆ ಇಟ್ಟಿರುವುದುಂಟು. ಸೋಮನಾಥಪುರವನ್ನು 'ಮಹಾಗ್ರಹಾರಂ ವಿದ್ಯಾನಿಧಿಪ್ರಸನ್ನಸೋಮನಾಥಪುರವೆಂದು' ಕರೆಯಲಾಗಿದೆ.[೭] ಬಸವಾಪುರದ ಶಾಸನದಲ್ಲಿ ಪೆರುಮಾಳೆ ದಣ್ಣಾಯಕರ ಮಕ್ಕಳು ಮಾದಪ್ಪ ದಣ್ಣಾಯಕ ಮಾಡಿಸಿದ ಅಗ್ರಹಾರಕ್ಕೆ ವಿದ್ಯಾನಿಧಿ ಪ್ರಸನ್ನ ಕೇಶವಪುರ ಎಂದು ಹೆಸರಿಸಲಾಗಿದೆ.[೮]

ಅಗ್ರಹಾರಗಳು ವೈದಿಕ ಸಂಪ್ರದಾಯದ ವಿದ್ಯಾಕೇಂದ್ರಗಳಾಗಿದ್ದವು. ಅಧ್ಯಯನ ಅಧ್ಯಾಪನಗಳ ಜೊತೆಗೆ ವಿವಿಧ ಸಾಮಾಜಿಕ ಜವಾಬ್ದಾರಿಗಳನ್ನು ಹೊತ್ತು ಅಗ್ರಹಾರದ ಬ್ರಾಹ್ಮಣರು ಕ್ರಿಯಾಶೀಲರಾಗಿದ್ದರು. ಕೆಲವು ಅಗ್ರಹಾರಗಳ ವಿದ್ಯಾಚಟುವಟಿಕೆಗಳನ್ನು

---

೧. ಎಸ್ಐಐ XV ಬಾಗೇವಾಡಿ ೬೪೫ ಕ್ರಿ.ಶ. ೧೩ ಶಮಾ.

೨. ಎಇ XII ಶೋರಾಪುರ ೩೨ ಬಿ೧ ಕ್ರಿ.ಶ. ೧೦೭೭; ಎಂಎಆರ್ ೧೯೩೦ ಸಾಗರ ೬೯ ಕ್ರಿ.ಶ. ೧೨೪೩.

೩. (ಮೈ) ಎಕ V ತಿ.ನರಸೀಪುರ ೫೩ ಕ್ರಿ.ಶ. ೧೧೩೫.

೪. (ರೈ) ಎಕ V ಅರಸಿಕೆರೆ ೧೨೭ ಕ್ರಿ.ಶ. ೧೧೮೫.

೫. ಎಇ XVIII ಹೂಲಿ ೧೯೦ ಕ್ರಿ.ಶ. ೧೧೬೨.

೬. ಕಸಾಪಪ ೨೮-೧ ಹಾನಗಲ್ಲು ಕ್ರಿ.ಶ. ೧೨೩೮.

೭. (ಮೈ) ಎಕ V ತಿ.ನರಸೀಪುರ ೮೯ ಕ್ರಿ.ಶ. ೧೩೦೦.

೮. (ಮೈ) ಎಕ IV ಚಾಮರಾಜನಗರ ೨೩೫ ಕ್ರಿ.ಶ. ೧೩೧೬.

ಗಮನಿಸಬಹುದು. ಕೊಂಡಗುಳಿಯ ಶಾಸನ[೧]ವೊಂದರಲ್ಲಿ ಕೇಸಿಮಯ್ಯ ಮತ್ತು ಗಣಪತಿ ದಂಡನಾಯಕರು ಸೇರಿ ವಿದ್ಯಾದಾನಕ್ಕಾಗಿ 'ಸೂತ್ರ ಸಂಹಿತ ಪಿರಿಯ ಗ್ರಂಥಂಗಲ(ಳಂ) ಪೇಳ್ವವುಪಾಧ್ಯಾಯರ್ಗೆ' ನಿಧಿಯನ್ನು, 'ಸಂಹಿತೆಯಂ ಕಿಱೆಯ ಗ್ರಂಥಂಗಳುಂ ಯಾಜ್ಞವಲ್ಕಿ ಸಹಿತ ಪೇಳ್ವ ಉಪಾಧ್ಯಾಯರ್ಗೆ ಮತ್ತಾ ಅಕ್ಷರ ವ್ಯಾಕರಣವನ್ನು ಹೇಳುವ ಬಾಲಶಿಕ್ಷೆ ಹೇಳುವ ಉಪಾಧ್ಯಾಯರ್ಗೆ' ದಾನವನ್ನು ನೀಡಿದರೆಂದು ಹೇಳಲಾಗಿದೆ. ಈ ದಾನಗಳ ಸ್ವರೂಪವನ್ನು ನೋಡಿದರೆ ಅಗ್ರಹಾರಗಳಲ್ಲಿ ಪ್ರಾಥಮಿಕ ಹಂತದ ಬಾಲಶಿಕ್ಷೆಯಿಂದ ಹಿಡಿದು ವಿವಿಧ ಹಂತದ ಉನ್ನತ ವಿದ್ಯಾಭ್ಯಾಸದ ಸೌಲಭ್ಯ ಇದ್ದಂತೆ ತಿಳಿದುಬರುತ್ತದೆ. ಬಾಲಶಿಕ್ಷೆಯಲ್ಲದೆ ಸ್ಮರಣೆಯಲ್ಲಿಟ್ಟು ಕೊಳ್ಳಲು ಅನುಕೂಲವಾಗುವಂತೆ ಸೂತ್ರಗಳಲ್ಲಿ ಅಳವಡಿಸಿಕೊಂಡ ವೇದಪಾಠವನ್ನು ಹಾಗೂ ಹಿರಿಯ ಗ್ರಂಥಗಳನ್ನು ಮತ್ತು ಕಿರಿಯ ಗ್ರಂಥಗಳನ್ನಲ್ಲದೆ ವ್ಯಾಖ್ಯಾನ ಗ್ರಂಥಗಳನ್ನು ಕಲಿಯಲು ಅಲ್ಲಿ ಅವಕಾಶ ಕಲ್ಪಿಸಲಾಗಿದ್ದಿತು. ಹೊನ್ನೇಕೆರೆ ಶಾಸನವು[೨] ವೇದಗಳೊಂದಿಗೆ ವೇದಾಂತ ಮತ್ತು ಪ್ರಾಭಾಕರಗಳಲ್ಲಿ ಪ್ರಾವೀಣ್ಯ ಪಡೆದ ಮಹಾಜನರು ಅಲ್ಲಿದ್ದರೆಂದು ತಿಳಿಸುತ್ತದೆ. ಸೋಮನಾಥಪುರದ ಶಾಸನ ಒಂದರಲ್ಲಿ ಸರ್ವಶಾಸ್ತ್ರದುಪಾಧ್ಯಾಯರಿಗೆ ತೀರ್ಥವೃತ್ತಿಯನ್ನು ನೀಡಿದ ವಿಷಯವಿದೆ.[೩] ದಿಂಡುಗೂರ ಅಗ್ರಹಾರದಲ್ಲಿ ಖಂಡಿಕಕ್ಕೆ ಭಟ್ಟವೃತ್ತಿಗಾಗಿ ನೀಡಿದ ದಾನವನ್ನು ಒಂದು ಶಾಸನ ತಿಳಿಸುತ್ತದೆ.[೪] (ಭಟ್ಟವೃತ್ತಿಯ ಬಗ್ಗೆ ಮುಂದೆ ವಿವೇಚಿಸಲಾಗಿದೆ.) ಗುಂಡ್ಲುಪೇಟೆ ತಾಲ್ಲೂಕಿನ ಒಂದು ಶಾಸನ ನಾರಸಿಂಹ ಭಟ್ಟ ಎಂಬ ಉಪಾಧ್ಯಾಯರನ್ನು 'ಪದವಾಕ್ಯ ಪ್ರಮಾಣಜ್ಞ' ಎಂದು ಕೀರ್ತಿಸುತ್ತದೆ.[೫] ಮುರುಂಡಿಯ ಶಾಸನ ಒಂದರಲ್ಲಿ[೬] ಶ್ರೀಕರಣಹೆಗ್ಗಡೆ ಎಱೆಯಣ್ಣ ಎನ್ನುವವನು ಸೋವಿಯಣ್ಣ ಎಂಬುವರನ್ನು ಇಪ್ಪತ್ತು ವಿದ್ಯಾರ್ಥಿಮಾಣಿಗಳಿಗೆ ಬೋಧಿಸಲು ನೇಮಕ ಮಾಡಿದನು. ಅಲ್ಲದೆ ವಿದ್ಯಾರ್ಥಿಗಳು ಉಳಿದುಕೊಳ್ಳಲು ವಸತಿ ಮತ್ತು ಅವರಿಗೆ ಅಡುಗೆ ಮಾಡಲು ಬಾಣಸಗಿತ್ತಿಯನ್ನು ನೇಮಕ ಮಾಡಿದನೆನ್ನುವ ವಿಷಯವನ್ನು ತಿಳಿಸುತ್ತದೆ. ಇಲ್ಲಿಯ ವಿದ್ಯಾರ್ಥಿಗಳಿಗೆ ಬೋಧಿಸಲು ನಿಯುಕ್ತ ಆದ ಸೋವಿಯಣ್ಣ ಶ್ರೀಮದಗ್ರಹಾರ ಬೋಳೆಗೆ ಸೇರಿದವನಾಗಿದ್ದನು.

ಅಗ್ರಹಾರಗಳಲ್ಲಿ ವಾಸಿಸುತ್ತಿದ್ದ ವಿವಿಧ ವಿದ್ವಾಂಸರ ಹೆಸರುಗಳ ಆರಂಭದಲ್ಲಿ ಅಥವಾ ಅಂತ್ಯದಲ್ಲಿ ಕಂಡುಬರುವ ವೃತ್ತಿಸೂಚಕ ಅಥವಾ ವಿದ್ವತ್‌ಸೂಚಕ ವಿಶೇಷಣಗಳು ಗಮನಾರ್ಹವಾಗಿವೆ. ವೈಯಾಕರಣ ಸೋಯಿದೇವಭಟ್ಟ, ಪುರಾಣದನಂತ ಭಟ್ಟ, ವೇದಾಂತದ ಮಂಚಭಟ್ಟ, ವೇದಾರ್ಥದ ಯೋಗೇಶ್ವರ ಭಟ್ಟ, ಸಾಮವೇದಿ ಪದ್ಮನಾಭ ಭಟ್ಟೋಪಾಧ್ಯಾಯ, ಘಟಿಕಾವಾದಿ ವಿಷ್ಣುದೇವ, ಹರಿಹರಘಳಿಸಾಸ, ಮಾಧವ ಘಳಿಸರ ಮೊದಲಾದ ಹೆಸರುಗಳು ಬಂದಳಿಕೆಯ ಒಂದು ಶಾಸನದಲ್ಲಿ ಉಕ್ತವಾಗಿವೆ.[೭] ಇದೇ ರೀತಿ ಸಾಮವೇದಿಭಟ್ಟ, ಕಾಶ್ಮೀರಭಟ್ಟ ಎಂದು ನಿಲ್ಗುಂದದ ಶಾಸನ ತಿಳಿಸುತ್ತದೆ.[೮] ರಾಘವ ಘಳಿಸ್ಸರು ಎಂದು ಕೊಣ್ಣೂರಿನ ಶಾಸನ ತಿಳಿಸುತ್ತದೆ.[೯] ಶ್ರೀಧರ ಕ್ರಮಿತ, ಪದ್ಮನಾಭಷಳಂಗಿ.... ನಾರಣಘೈಸಾಸ, ಸುರಪತಿ ನಾರಣಕ್ರಮಿತ, ಇಶ್ವರ ಕ್ರಮಿಂತ, ಸೋವಣ್ಣಕ್ರಮಿತ[೧೦] ಇಂಥ ಹೆಸರು ಖಚಿತವಾಗಿ ಒಂದಲ್ಲ ಒಂದು ಪಾಂಡಿತ್ಯ ದ್ಯೋತಕವಾಗಿವೆ.

---

೧. ಎಇ XXXVII-IV ಸಿಂದಗಿ ಕ್ರಿ.ಶ. ೧೧೩೨.
೨. (ರೈ) ಎಕ XI ಹೊಳಲಕೆರೆ ೧೩೬ ಕ್ರಿ.ಶ. ೧೩೦೨.
೩. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.
೪. (ರೈ) ಎಕ V ಚನ್ನರಾಯಪಟ್ಟಣ ೧೭೨ ಕ್ರಿ.ಶ. ೧೨೦೯.
೫. (ಮೈ) ಎಕ III ಗುಂಡ್ಲುಪೇಟೆ ೧೬೮ ಕ್ರಿ.ಶ. ೧೪೯೭.
೬. (ರೈ) ಎಕ V ಅರಸಿಕೆರೆ ೧೩೮ ಕ್ರಿ.ಶ. ೧೧೭೪.
೭. (ರೈ) ಎಕ VII ಶಿಕಾರಿಪುರ ೨೩೫ ಕ್ರಿ.ಶ. ೧೨೦೭.
೮. ಎಇ XIX ಹರಪನಹಳ್ಳಿ ಕ್ರಿ.ಶ. ೧೧೨೩.
೯. ಎಸ್‌ಐಐ XV ಬೀಳ್ಗಿ ೫೪೨ ಕ್ರಿ.ಶ. ೧೧೪೯-೫೦.
೧೦. ಕಇ IV ಹಿರೇಕೆರೂರು ೨೫ ಕ್ರಿ.ಶ. ೧೦೫೪. ಕ್ರಮಿತ (<ಕ್ರಮವಿತ್) = ಕ್ರಮಾಗತವಾಗಿ ವೇದಾಧ್ಯಯನ ಮಾಡಿದವನು; ಷಳಂಗಿ (=ಷಡಂಗವಿತ್) ಷಡಂಗಗಳನ್ನು ಅರಿತವನು; ಘೈಸಾಸ (ಘಳಿಸಾಸ-ಘಟಿಕಾಸಾಹಸ) = ಘಟಿಕಾಸ್ಥಾನದಲ್ಲಿ ಮಾನ್ಯತೆ ಪಡೆದವನು.

ಪ್ರಾಚೀನ ಕರ್ನಾಟಕದಲ್ಲಿ ವಿದ್ಯಾಭ್ಯಾಸವು ಅಗ್ರಹಾರಗಳಲ್ಲಿ ಯಶಸ್ವಿಯಾಗಿ ನಡೆದುಬಂದಿದೆ. ಅಗ್ರಹಾರಗಳಲ್ಲಿದ್ದ ಬ್ರಾಹ್ಮಣರಿಗೆ ಊಟ ಬಟ್ಟೆ ವಸತಿಗಳ ಚಿಂತೆಯನ್ನು ಅಗ್ರಹಾರ ಸ್ಥಾಪಿಸಿದ ದಾನಿಗಳು ಸಂಪೂರ್ಣವಾಗಿ ನಿವಾರಿಸುತ್ತಿದ್ದುದರಿಂದ ಅವರು ತಮ್ಮ ಎಲ್ಲ ಸಮಯವನ್ನು ಅಧ್ಯಯನ ಅಧ್ಯಾಪನಗಳಿಗೆ ಮೀಸಲಿಡಲು ಸಾಧ್ಯವಾಗುತ್ತಿತ್ತು.

**ಬ್ರಹ್ಮಪುರಿ:**

ಅಗ್ರಹಾರಗಳು ಮತ್ತು ಬ್ರಹ್ಮಪುರಿಗಳು ವಿದ್ಯಾಭ್ಯಾಸ ಕೇಂದ್ರಗಳ ದೃಷ್ಟಿಯಿಂದ ಒಂದೇ ಆಗಿದ್ದವು ಎಂದು ಭಾವಿಸಬಹುದು. ಬ್ರಹ್ಮಪುರಿಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಿಸುತ್ತಿದ್ದವರೂ ಬ್ರಾಹ್ಮಣರೇ ಆಗಿದ್ದರು. ಅಗ್ರಹಾರ ಬ್ರಹ್ಮಪುರಿಗಳ ನಡುವೆ ಇದ್ದ ವ್ಯತ್ಯಾಸವೆಂದರೆ ಅಗ್ರಹಾರ ಇಡೀ ಒಂದು ಊರು ಅಥವಾ ಕೆಲವು ಹಳ್ಳಿಗಳ ಸಮಷ್ಟಿಯಾಗಿದ್ದರೆ 'ಬ್ರಹ್ಮಪುರಿಗಳು ಊರಿನ ಅಥವಾ ನಗರದ ಒಂದು ಭಾಗವಾಗಿದ್ದವು.'[೧] ಆದರೆ ಅಗ್ರಹಾರದ ಬ್ರಾಹ್ಮಣರಿಗಿದ್ದ ಅಧಿಕಾರ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಇರಲಿಲ್ಲ. ಸಂಖ್ಯೆಯ ದೃಷ್ಟಿಯಿಂದ ಹೋಲಿಸಿದರೆ ಅಗ್ರಹಾರಗಳು ಅಪಾರ ಸಂಖ್ಯೆಯಲ್ಲಿದ್ದವು; ಬ್ರಹ್ಮಪುರಿಗಳು ನೂರಾರು ಮಾತ್ರ ದೊರೆಯುತ್ತವೆ. ಇದಕ್ಕೆ ಸಹಜವಾಗಿ ಕರ್ನಾಟಕದಲ್ಲಿ ಗ್ರಾಮಗಳ ಸಂಖ್ಯೆ ಅಧಿಕವಾಗಿದ್ದು ನಗರಗಳ ಸಂಖ್ಯೆ ಕಡಮೆ ಇದ್ದುದೇ ಕಾರಣವೆಂದು ವಿದ್ವಾಂಸರು ಗಮನಿಸಿದ್ದಾರೆ.

ದಾನಿಗಳು ಬ್ರಹ್ಮಪುರಿಗಳನ್ನು ನಿರ್ಮಿಸಿ ಅಲ್ಲಿರಲು ನಾನಾ ಗೋತ್ರದ ಬ್ರಾಹ್ಮಣರನ್ನು ಕರೆಸಿ ಅವರಿಗೆ ಅನುಕೂಲಗಳನ್ನು ಕಲ್ಪಿಸಿ ಧನ್ಯರಾದೆವೆಂದು ಭಾವಿಸುತ್ತಿದ್ದರು. ಶ್ರೀಮದ್ರಾಜಧಾನಿ ಅಣ್ಣಿಗೇರಿಯಲ್ಲಿ ಸರ್ವಾಧಿಕಾರಿ ಮಲ್ಲಿಸೆಟ್ಟಿ ಬ್ರಹ್ಮಪುರಿಯನ್ನು ನಿರ್ಮಿಸಿ ವಿವಿಧ ಗೋತ್ರದ ಬ್ರಾಹ್ಮಣರಿಗೆ ವೃತ್ತಿಗಳನ್ನು ನೀಡಿದ ವಿಷಯವನ್ನು ಶಾಸನ ನಿರೂಪಿಸುತ್ತದೆ.[೨] ಭಾರದ್ವಾಜ ಕಾಶ್ಯಪ, ವಿಶ್ವಾಮಿತ್ರ, ಶ್ರೀವತ್ಸ, ಗೌತಮ, ಹಾರೀತ -ಮುಂತಾದ ಗೋತ್ರಗಳ ಬ್ರಾಹ್ಮಣರಿಗೆ ಅನುಕೂಲ ಮಾಡಿ ಮನೆಯ ನಿವೇಶನಗಳನ್ನು ಬಣವೆ ಮತ್ತು ಕೊಠಾರಿಗಳಿಗೆ ವ್ಯವಸ್ಥೆ ಮಾಡಿದ್ದನ್ನು ಅದೇ ಶಾಸನ ತಿಳಿಸುತ್ತದೆ.

ಒಂದು ಊರು ಅಥವಾ ನಗರದಲ್ಲಿ ಅಗತ್ಯಕ್ಕೆ ತಕ್ಕಂತೆ ಒಂದು ಅಥವಾ ಹೆಚ್ಚು ಬ್ರಹ್ಮಪುರಿಗಳು ಇರುತ್ತಿದ್ದವು. ಬಳ್ಳಿಗಾವೆಯನ್ನು ಒಂದು ಶಾಸನದಲ್ಲಿ ವರ್ಣಿಸುತ್ತಾ 'ಧನದಪ್ರತಿಮಲ್ಲರೆನಿಪ ನಗರಂಗಳಿಂ ಪಲವುಂ ಪಂಚಮಠಂ ಪಲವುಂ ಬ್ರಹ್ಮಪುರಿಗಳು ವಿವಿಧ ನಾನಾರಮ್ಯ ಹರ್ಮ್ಯಗಳಿಂ ಮನೋಹರಮೆನಿಪ ಬಲಿಪುರದೊಳ್...'[೩] ಎಂದು ಅಲ್ಲಿ ಅನೇಕ ಬ್ರಹ್ಮಪುರಿಗಳಿದ್ದವು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಅಣ್ಣಿಗೇರಿಯ ಒಂದು ಶಾಸನದಿಂದ ಅಲ್ಲಿ ಐದು ಬ್ರಹ್ಮಪುರಿಗಳಿದ್ದುದು ತಿಳಿದುಬರುತ್ತದೆ.[೪] ಬಿಜಾಪುರ ಜಿಲ್ಲೆಯ ಕಡ್ಲೆವಾಡದಲ್ಲಿ ಎಂಟು ಬ್ರಹ್ಮಪುರಿಗಳಿದ್ದುದು ತಿಳಿದುಬರುತ್ತದೆ.[೫] ರಾಜರು, ಅಧಿಕಾರಿಗಳು ಮತ್ತು ಶ್ರೀಮಂತರು ಬ್ರಹ್ಮಪುರಿ ನಿರ್ಮಾಣ ತುಂಬ ಪುಣ್ಯದ ಕಾರ್ಯ ಎಂದು ನಂಬಿದ್ದರು. ದೇವಾಲಯಗಳನ್ನು ತಮ್ಮ ಅಥವಾ ಆಪ್ತಬಂಧುಗಳ ಹೆಸರಿನಲ್ಲಿ ನಿರ್ಮಿಸುವ ಪದ್ಧತಿ ಇದ್ದಂತೆ ಬ್ರಹ್ಮಪುರಿಗಳನ್ನೂ ನಿರ್ಮಿಸುವ ಸಂಪ್ರದಾಯವಿದ್ದಿತು. ಪ್ರಧಾನ ಪೆರುಮಾಳೆ ದಂಡನಾಯಕ ಪೆರುಮಾಳೆಪುರವಾಗಿ ಮಾಡಿದ ಬ್ರಹ್ಮಪುರಿಗಿರಿ ಎಂದು ಒಂದು ಶಾಸನ ಹೇಳುತ್ತದೆ.[೬]

---

೧. G. S. Dixit : Local Self Government in Medieval Karnataka. ಪು. ೧೨೧. ಉದಾಹೃತ A. Venkata Subbaiah: A Twelfth Century University in Mysore ಕ್ಯುಜೆ ಎಂ.ಎಸ್. VII, ಪು. ೧೬೭-೬೮

೨. ಧಾತಾಶಾ-೭೨ ಕ್ರಿ.ಶ. ೧೨೪೮.

೩. (ರೈ) ಎಕ VII ಶಿಕಾರಿಪುರ ೧೦೮ ಕ್ರಿ.ಶ. ೧೧೬೪.

೪. ಎಸ್ಐಐ XV ನವಲುಗುಂದ ೭೨ ಕ್ರಿ.ಶ. ೧೧೮೬-೮೮.

೫. ಎ.ವಿ. ನರಸಿಂಹಮೂರ್ತಿ : ಕರ್ನಾಟಕದ ಸೇವುಣರ ಇತಿಹಾಸ, ಪು. ೧೦೯.

೬. (ರೈ) ಎಕ XI ಚಿತ್ರದುರ್ಗ ೭ ಕ್ರಿ.ಶ. ೧೨೮೫.

ಕೆಲವು ಸಾರಿ ಆ ಮೊದಲೇ ಇದ್ದ ಬ್ರಹ್ಮಪುರಿಗಳಿಗೆ ದಾನಗಳನ್ನು ಕೊಟ್ಟು ಅವನ್ನು ಅಧಿಕ ಸದೃಢಗೊಳಿಸುವ ರೀತಿಯನ್ನೂ ಕಾಣಬಹುದು. ಗುತ್ತವಂಶದ ವಿಕ್ರಮಾದಿತ್ಯನು ತನ್ನ ಮಗಳು ತುಳುವಲದೇವಿಯು ಮರಣ ಹೊಂದಲು ತುಂಗಭದ್ರೆಯ ದಡದಲ್ಲಿ ತುಳುವಲೇಶ್ವರ ದೇವಾಲಯ ಕಟ್ಟಿಸಿ ದಾನಗಳನ್ನು ಮಾಡಿದನಂತರ ತುಳುವಲ ದೇವಿಯರ ಪುಣ್ಯಾರ್ಥವಾಗಿ ಬ್ರಹ್ಮಪುರಿಗೆ ಭೂಮಿ ದಾನವನ್ನು ಮಾಡಿರುವುದು ಹರಳಹಳ್ಳಿಯ ಶಾಸನ ಒಂದರಲ್ಲಿ ಉಕ್ತವಾಗಿದೆ.[೧]

ಅಗ್ರಹಾರದ ಮಹಾಜನರಿಗೆ ಹೋಲಿಸಿದರೆ ಅವರಷ್ಟು ಅಧಿಕಾರ ವ್ಯಾಪ್ತಿ ಬ್ರಹ್ಮಪುರಿಯ ಮಹಾಜನರಿಗೆ ಇರದೇ ಹೋದರೂ ಕೂಡ ಕೆಲವು ಸಂದರ್ಭಗಳಲ್ಲಿ ದಾನದತ್ತಿಗಳ ಸಂರಕ್ಷಣೆಯಂತಹ ಜವಾಬ್ದಾರಿ ಇವರ ಮೇಲೂ ಇರುತ್ತಿದ್ದಿತು. ಉದಾಹರಣೆಗೆ ಹೊಸಕೋಟೆಯ ಶಾಸನವೊಂದು ಸೇನಬೋವ ನಾಗಣ್ಣನು ಐದು ಗದ್ಯಾಣಗಳನ್ನು ನೀಡಿ ಅದರ ಬಡ್ಡಿಯಲ್ಲಿ ಶಿಕೇಶ್ವರ ದೇವರ ತಾಣದೀಪವನ್ನು ಬೆಳಗಿಸಲು ವಿನಂತಿಸಿ ಆ ದಾನವನ್ನು ಶಿಕೇಶ್ವರ ದೇವಾಲಯದ ಸ್ಥಾನಪತಿಗಳ ಮತ್ತು ಬ್ರಹ್ಮಪುರಿಗಳ ವಶದಲ್ಲಿ ಬಿಟ್ಟಿರುವುದನ್ನು ತಿಳಿಸುತ್ತದೆ.[೨] ಇದೇ ರೀತಿ ಹುಣನಾಯಕ ಎಂಬುವನು ಗೋವಿಂದಪುರದ ಪಂಚವಿಂಶತಿ ನಾರಾಯಣ ದೇವರ ಬ್ರಹ್ಮಪುರಿಗಳ ಕಯ್ಯಲಗ್ನಿಷ್ಟಿಗೆಗೆ ಕೊಟ್ಟ ಗದ್ಯಾಣ ೧೮ ವೃದ್ಧಿಯಲ್ಲಿ ಮಹಾಜನಗಳು ಶಾಶ್ವತವಾಗಿ ನಡೆಸಬೇಕೆಂದು ಶಾಸನ ತಿಳಿಸುತ್ತದೆ.[೩] ಕೆಲವು ಶಾಸನಗಳಲ್ಲಿ ಬ್ರಹ್ಮಪುರಿಗಳನ್ನು ಅಗ್ರಹಾರಗಳೆಂದು ಕರೆದಿದೆ.[೪]

ಅಗ್ರಹಾರಗಳು ಯಾವ ರೀತಿಯಲ್ಲಿ ವೈದಿಕ ಸಂಪ್ರದಾಯದ ವಿದ್ಯಾಭ್ಯಾಸಕ್ಕೆ ಗಮನ ಕೊಡುತ್ತಿದ್ದವೋ ಅದೇ ರೀತಿಯಲ್ಲಿ ಬ್ರಹ್ಮಪುರಿಗಳೂ ಮಾಡುತ್ತಿದ್ದವು. ಶಾಸನಗಳನ್ನು ಗಮನಿಸಿದರೆ ಬ್ರಹ್ಮಪುರಿಗಳ ರಚನೆಗೆ ಕೇಂದ್ರವಾಗಿ ಒಂದು ದೇವಾಲಯ ಇರುತ್ತಿದ್ದುದು ಕಂಡುಬರುತ್ತದೆ. ಬಿಜಾಪುರದ ಶ್ರೀಮೂಲಸ್ಥಾನದೇವರ ಬ್ರಹ್ಮಪುರಿಯಾಗಿ ಒಂದು ಬ್ರಹ್ಮಪುರಿಯನ್ನು ಶಾಸನ ತಿಳಿಸುತ್ತದೆ.[೫] ಉದ್ರಿಯ ಶಾಸನ ಲಕ್ಷ್ಮೀನಾರಾಯಣ ದೇವರ ಬ್ರಹ್ಮಪುರಿಯೆಂದು ಹೇಳುತ್ತದೆ.[೬]

ರಾಜಧಾನಿ ಪಟ್ಟಣ ಹುಲಿಗೆರೆಯಲ್ಲಿ ರಾಜ್ಯಾಭ್ಯುದಯ ನಿಮಿತ್ತವಾಗಿ ಶ್ರೀಧರ ದಂಡನಾಯಕ ಪಾರಮೇಶ್ವರ ದತ್ತಿಯಾಗಿ ಬ್ರಹ್ಮಪುರಿ ನಿರ್ಮಿಸಿ ದಾನ ಮಾಡಿದಾಗ ವೃತ್ತಿಗಳನ್ನು ಪಡೆದ ಕೆಲವು ವಿದ್ವಾಂಸರ ಹೆಸರುಗಳು ಹೀಗಿವೆ. ಬಹುಕಳಾಬ್ರಹ್ಮ ವಾಸುದೇವಭಟ್ಟರು, ಮಹಾವಾದಿ ಚಂಗದೇವಭಟ್ಟರು, ಸರಸ್ವತಿ ಸೋಮಯಾಜಿ ಭಟ್ಟರು, ಆತ್ಮವಿತ್ತುಗಳಪ್ಪ ಅಪ್ಪಣ ಭಟ್ಟರು, ಶ್ರೀರಣದ್ವೇದಿ ಭಟ್ಟರು, ತಾರ್ಕಿಕ ದೇವಣ ಭಟ್ಟರು, ವಾಚಸ್ಪತಿ ಮಹಾದೇವ ಭಟ್ಟರು, ಉಭಯ ವೈಯಾಕರಣೆ ಮಾಧವ ಭಟ್ಟರು, ಪಾಣಿನೀಯರ ಕೇಶವಭಟ್ಟರು... ನಾವಿಯಣ ಘಳಿಸಾಸರು, ದಶಗ್ರಂಥಿ ಈಶ್ವರ ಘಳಿಸಾಸರು... ಜ್ಯೋತಿಸ ಪದ್ಮನಾಭ ಭಟ್ಟರು... ಸಹಜ ಕವಿ ನಾಗದೇವ ಪಂಡಿತರು... ಸೂತ್ರಧಾರಿ ರೇವೋಜ[೭]. ಇತ್ಯಾದಿ. ಇದೇ ರೀತಿ ಕುಕ್ಕನೂರಿನ ಶಾಸನ ಒಂದರಲ್ಲಿ ನಾರಾಯಣ ಭಟ್ಟೋಪಾಧ್ಯಾಯ, ಸೋಮೇಶ್ವರ ಭಟ್ಟೋಪಾಧ್ಯಾಯ, ವೇದಾಂತದ ಸೋಮೇಶ್ವರ ಭಟ್ಟೋಪಾಧ್ಯಾಯ, ನಾರಾಯಣ ಘಳಿಸಾಸರು... ನಾರಾಯಣ ಷಡಂಗಿಯ -ಎಂಬಂತಹ ಹೆಸರುಗಳು

---

೧. ಎಸ್‌ಐಐ XVIII ಹಾವೇರಿ ೩೦೦ ಕ್ರಿ.ಶ. ೧೨೧೩.

೨. (ಮೈ) ಎಕ VI ಪಾಂಡವಪುರ ೨೨೮ ಕ್ರಿ.ಶ. ೧೩೫೯.

೩. (ರೈ) ಎಕ VII ಶಿಕಾರಿಪುರ ೧೬೪ ಕ್ರಿ.ಶ. ೧೧೪೯.

೪. ಎಸ್‌ಐಐ XV ನವಲಗುಂದ ೪೯ ಕ್ರಿ.ಶ. ೧೧೫೪.

೫. ಎಸ್‌ಐಐ XVIII ಬಿಜಾಪುರ ೧೮೫ ಕ್ರಿ.ಶ. ೧೧೭೩.

೬. (ರೈ) ಎಕ VIII ಸೊರಬ ೧೩೫ ಕ್ರಿ.ಶ. ೧೨೧೭.

೭. ಎಸ್‌ಐಐ XX ಶಿರಹಟ್ಟಿ ೧೪೪ ಕ್ರಿ.ಶ. ೧೧೬೬.

ಕಂಡುಬರುತ್ತವೆ.[1] ಈ ಎಲ್ಲ ಹೆಸರುಗಳು ಬ್ರಹ್ಮಪುರಿಯ ವಿದ್ವಾಂಸರು ವಿವಿಧ ಜ್ಞಾನಶಾಖೆಗಳಲ್ಲಿ ಪಡೆದಿದ್ದ ವಿದ್ವತ್ತನ್ನು ಸೂಚಿಸುತ್ತವೆ. ಮನಗೋಳಿಯ ಶಾಸನದಲ್ಲಿ ಕೌಮಾರವನ್ನು ವಕ್ಕಾಣಿಸುವ ಉಪಾಧ್ಯಾಯರಿಗೆ ಐದು ಮತ್ತರು ಭೂಮಿಯನ್ನು ಕೊಟ್ಟದ್ದನ್ನು ಹೇಳಿದೆ ಮತ್ತು ಶಾಸನದ ಕೊನೆಯ ಭಾಗದಲ್ಲಿ ಕೌಮಾರನುಪಾಧ್ಯಾಯರಿಗೆ ನಿವೇಶನವನ್ನು ಕೊಟ್ಟ ವಿಷಯವನ್ನು ತಿಳಿಸುತ್ತದೆ.[2]

**ಘಟಿಕಾಸ್ಥಾನ:**

ಅಗ್ರಹಾರ, ಬ್ರಹ್ಮಪುರಿಗಳಂತೆ ಘಟಿಕಾಸ್ಥಾನಗಳೂ ಪ್ರಾಚೀನ ಕರ್ನಾಟಕದ ವಿದ್ಯಾಕೇಂದ್ರಗಳಾಗಿದ್ದವು. ಘಟಿಕಾಸ್ಥಾನದ ಸ್ವರೂಪದ ವಿಚಾರ ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆಗೆ ಒಳಗಾಗಿದೆ. ಅವು ಆ ಕಾಲದ ಪ್ರೌಢ ವಿದ್ಯಾಕೇಂದ್ರಗಳಾಗಿದ್ದವು ಎಂಬ ವಿಷಯದಲ್ಲಿ ಅಷ್ಟು ಭಿನ್ನಾಭಿಪ್ರಾಯವಿದ್ದಂತಿಲ್ಲ. ಘಟಿಕಾಸ್ಥಾನ ಧಾರ್ಮಿಕ ಕೇಂದ್ರವೆಂದು ಪಾಠಕ್ ಅವರು ಹೇಳಿದ್ದನ್ನು ಮತ್ತು ಕಿಲ್‌ಹಾರ್ನ್ ಅವರು ಅದು ಬ್ರಹ್ಮಪುರಿಯಂತೆ ಎಂದು ಹೇಳಿರುವುದನ್ನು ಗಮನಿಸಿ ಅದು ಒಂದು ರೀತಿಯ ಧಾರ್ಮಿಕ ಕೇಂದ್ರವೆಂದು ಬಿ.ಎಲ್. ರೈಸ್ ಅವರು ಭಾವಿಸಿದಂತಿದೆ.[3] ಎಸ್.ವಿ. ವೆಂಕಟೇಶ್ವರ ಅವರು ಉಪಾಧ್ಯಾಯರು ವಿದ್ಯಾರ್ಥಿಗಳು ಕೂಡಿ ಚರ್ಚೆ ನಡೆಸುತ್ತಿದ್ದ ಮತ್ತು ಮಹಾ ವಿದ್ವಾಂಸರ ಸಂಪರ್ಕದಿಂದ ಧಾರ್ಮಿಕ ಸಾಹಿತ್ಯದ ಅತ್ಯುತ್ತಮ ಜ್ಞಾನವನ್ನು ಪಡೆಯಲು ಸಾಧ್ಯವಾಗಿದ್ದ ಶ್ರೇಷ್ಠತಮ ಸಂಸ್ಥೆಯೇ ಘಟಿಕಾಸ್ಥಾನವೆಂದು ಭಾವಿಸಿದ್ದಾರೆ. ಅಲ್ಲಿಯ ವಿದ್ಯಾಭ್ಯಾಸದ ಮಟ್ಟ ಎಷ್ಟು ದೊಡ್ಡದಾಗಿತ್ತೆಂದರೆ ಅಧ್ಯಯನವೆಲ್ಲ ಮುಗಿಸಿದ ವಿದ್ವಾಂಸರು ಕೂಡ ವಿನಯದಿಂದ ಆ ಸಂಸ್ಥೆಯನ್ನು ಸಮೀಪಿಸಿ ಜ್ಞಾನದ ತುಣುಕಗಳನ್ನು ಆರಿಸಿಕೊಳ್ಳಬೇಕಾಗಿತ್ತು ಎಂದು ಭಾವಿಸುತ್ತಾರೆ.[4] ಘಟಿಕಾಸ್ಥಾನಗಳ ಬಗ್ಗೆ ದೊರೆಯುವ ಬಿಡಿ ವಿವರಗಳಿಗೂ ವಿದ್ವಾಂಸರ ವಿವರಣೆಗಳಿಗೂ ಸಂಪೂರ್ಣವಾಗಿ ತಾಳೆಯಾಗುತ್ತಿದ್ದಂತಿಲ್ಲ.[5] ಇದುವರೆಗಿನ ವಿದ್ವಾಂಸರ ಚರ್ಚೆಗಳ ಹಿನ್ನೆಲೆಯಲ್ಲಿ ಘಟಿಕಾಸ್ಥಾನಗಳು ಉಚ್ಚ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವೆಂದೂ ಮತ್ತು ಅಗ್ರಹಾರಗಳಲ್ಲಿ ಅಥವಾ ದೇವಾಲಯಗಳಲ್ಲಿ ಇದ್ದುವು ಎಂಬುದನ್ನು ಬಹುತೇಕ ವಿದ್ವಾಂಸರು ಒಪ್ಪಿದಂತಿದೆ. ಬ್ರಹ್ಮಪುರಿಗಳಿಗೆ ಹೋಲಿಸಿದರೂ ಘಟಿಕಾಸ್ಥಾನಗಳು ಕಡಮೆ ಎಂದೇ ಹೇಳಬಹುದು. ನಮ್ಮ ಅಧ್ಯಯನಾವಧಿಯಲ್ಲಿ ಕಂಡುಬರುವ ಕೆಲವು ಘಟಿಕಾಸ್ಥಾನಗಳ ಉಲ್ಲೇಖಗಳನ್ನು ಗಮನಿಸಬಹುದು. ಕರ್ನಾಟಕದ ಕುಂತಳ ಭಾಗದಲ್ಲಿ ಧರ್ಮಕ್ಕೆ ನೆರ್ಮಮುಂ ಭೋಗಕ್ಕಾಗರಮಾದ ಘಟಿಕಾಸ್ಥಾನಗಳಿದ್ದುವೆಂದು ಶಾಸನವೊಂದು ತಿಳಿಸುತ್ತದೆ.[6] ಕಾಮಗೊಂಡನಹಳ್ಳಿಯ ಒಂದು ಶಾಸನ ಹೆಂಜೇಱು ಪಟ್ಟಣದ ಮಹಾ ಘಟಿಕಾಸ್ಥಾನ ಶ್ರೀನೊಣಂಬೇಶ್ವರ ದೇವರ ಸನ್ನಿಧಾನದಲ್ಲಿದ್ದುದನ್ನು ತಿಳಿಸುತ್ತದೆ.[7] ಕ್ರಿ.ಶ. ೧೨೦೫ರ ಹೇಮಾವತಿಯ ಶಾಸನ ಬಹುಶಃ ಅದೇ ಹೆಂಜೇಱು ಪಟ್ಟಣದ ಮಹಾಘಟಿಕಾಸ್ಥಾನ ನೊಣಂಬೇಶ್ವರ ದೇವರ ಉಲ್ಲೇಖವನ್ನು ಮಾಡಿದೆ. ಅಲ್ಲಿಯ ಅಂಗಭೋಗಕ್ಕೆ, ಪಾತ್ರಪಾವುಳಕ್ಕೆ ಮತ್ತು ಹನ್ನೆರಡು ಬ್ರಾಹ್ಮಣರಿಗೆ, ಹನ್ನೆರಡು ತಪೋಧನರಿಗೆ, ನಾಲ್ವರು

---

೧. ಕಇಅಪ್ರ ರಾಯಚೂರು ೬೬ ಕ್ರಿ.ಶ. ೧೧೭೦.

೨. ಎಇ V ಬಾಗೇವಾಡಿ ೩೭ ಕ್ರಿ.ಶ. ೧೧೬೧.

೩. B.L. Rice : Mysore and Coorg from the Inscriptions ಪು. ೨೧೦.

೪. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ ಪು. ೨೨೪ರಲ್ಲಿ ಉದಾಹರಿತವಾಗಿದೆ. S. V. Venkateshwara : Indian Culture through the ages, Vol. I ಪು.೨೪೩-೪.

೫. Leela ShantaKumari : ಪೂರ್ವೋಕ್ತ ಪು. ೨೧೪.
ಎಂ. ಚಿದಾನಂದಮೂರ್ತಿ, ಪೂರ್ವೋಕ್ತ ಪು. ೨೨೪; ಜ್ಯೋತ್ಸ್ನಾ ಕಾಮತ್ : ಕರ್ನಾಟಕದ ಶಿಕ್ಷಣ ಪರಂಪರೆ, ಪು. ೩೧-೩೫.

೬. (ರೈ) ಎಕ VII ಶಿಕಾರಿಪುರ ೧೯೭ ಕ್ರಿ.ಶ. ೧೧೮೨.

೭. (ರೈ) ಎಕ XII ಶಿರಾ ೨೩ ಕ್ರಿ.ಶ. ೧೧೬೭.

ಘಳಿಯಾರದವರು, ಇಬ್ಬರು ಪೂಜಾರಿಗಳಿಗೆ ಹೀಗೆ ಒಟ್ಟು ಮೂವತ್ತು ಜನರಿಗೆ ಮಾಡಿದ ಆಹಾರದಾನ ಮತ್ತು ವಿವಿಧ ದಾನಗಳನ್ನು ನೀಡಿದ ವಿಷಯವನ್ನು ತಿಳಿಸುತ್ತದೆ.[೧] ಈ ಶಾಸನೋಕ್ತ ದಾನ ಮಹಾಘಟಿಕಾಸ್ಥಾನಕ್ಕೆ ಕೊಟ್ಟ ದಾನವಾಗಿರುವುದರಿಂದ ಮತ್ತು ಅಲ್ಲಿದ್ದ ಘಳಿಯಾರದವರಿಗೂ ದಾನ ಸಂದಿರುವುದು ಗಮನಾರ್ಹವಾಗಿದೆ. ಇವರು ಘಟೀಯಂತ್ರವನ್ನು ನೋಡಿಕೊಳ್ಳುತ್ತಿದ್ದವರು. ಹರಳಹಳ್ಳಿಯ ಶಾಸನದಲ್ಲಿ ಘಟಿಕಾಸ್ಥಾನಾಚಾರ್ಯ ಚಿಕ್ಕಮನ ಉಲ್ಲೇಖ ಬರುವುದರಿಂದ ಘಟಿಕಾಸ್ಥಾನಗಳಿಗೆ ಆಚಾರ್ಯರಿರುತ್ತಿದ್ದುದನ್ನು ಖಚಿತಪಡಿಸುತ್ತದೆ.[೨] ಆದರೆ ಆಚಾರ್ಯರ ಕಾರ್ಯಸ್ವರೂಪ ಸ್ಪಷ್ಟವಾಗುವುದಿಲ್ಲ. ಘಟಿಕಾಸ್ಥಾನಗಳು ಕೇವಲ ವೈದಿಕ ಧರ್ಮದ ಕಕ್ಷೆಯಲ್ಲಿ ಮಾತ್ರ ಬರುತ್ತಿದ್ದವೆಂದು ಭಾವಿಸುವಂತಿಲ್ಲ. ಜೈನಧರ್ಮದ ಒಂದು ಶಾಸನದಲ್ಲಿ... ಶ್ರೀ ಶಾನ್ತಿನಾಥ ಘಟಿಕಾಸ್ಥಾನದ ಮಣ್ಡಳಾಚಾರ್ಯರಪ್ಪ ಶ್ರೀಭಾನುಕೀರ್ತ್ತಿಸಿ...[೩] ಎಂದು ಬರುವುದರಿಂದ ಘಟಿಕಾಸ್ಥಾನಗಳು ಕೇವಲ ವೈದಿಕ ಬ್ರಾಹ್ಮಣರಿಗೆ, ವೈದಿಕ ವಿದ್ಯಾಕೇಂದ್ರಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ ಎಂದು ಹೇಳಬಹುದು.

ಒಬ್ಬ ವಿದ್ವಾಂಸನ ವಿದ್ವತ್ತು ಆತನು ಎಷ್ಟು ಘಟಿಕಾಸ್ಥಾನಗಳಲ್ಲಿ ಭಾಗವಹಿಸಿ ಮನ್ನಣೆ ಪಡೆದವನಾಗಿದ್ದ ಎನ್ನುವುದರ ಮೇಲೆ ನಿರ್ಧಾರವಾಗುತ್ತಿದ್ದಿತು. 'ಚೌಸಟ್ಟಿ ಘಟಿಕಾಸ್ತಾನೂನ (ಚೌಸಟ್ಟಿ=ಅರವತ್ನಾಲ್ಕು) ಗೋಯಿಸರುಂ ಅಷ್ಟಾದಶ ಪಟ್ಟಣ ಪವಿತ್ರೀಗಾತ್ರರುಂ' ಎಂದು ಮುಂತಾಗಿ ಗೊಪಣದೇವರನ್ನು ಕೀರ್ತಿಸಿರುವುದುಂಟು.[೪] ಘಟಿಕಾಸ್ಥಾನಗಳು ಪ್ರೌಢ ವಿದ್ಯಾಕೇಂದ್ರಗಳಾಗಿದ್ದು ಒಬ್ಬ ವಿದ್ವಾಂಸ ಘಟಿಕಾಸ್ಥಾನದಲ್ಲಿ ಮನ್ನಣೆ ಪಡೆದವನು ಎಂಬುದು ವಿದ್ವತ್ತಿನ ಶಿಖರವನ್ನು ಮುಟ್ಟಿದವನು ಎಂದು ಜನ ಭಾವಿಸುತ್ತಿದ್ದಿರಬೇಕು.[೫] ಘಟಿಕಾಸಾಹಸಿ ಘಳಿಸಾಸ ಆಗಿ ಘೈಸಾಸವಾಗಿ ಘೈಸ ಆಗಿರಬೇಕೆಂದು ಎಂ. ಚಿದಾನಂದ ಮೂರ್ತಿಯವರು ಭಾವಿಸುತ್ತಾರೆ. ಘಳಿಸಾಸ ಎಂದು ಕೊನೆಯಾಗುವ ಕೆಲವು ಹೆಸರುಗಳನ್ನು ಅಗ್ರಹಾರ ಮತ್ತು ಬ್ರಹ್ಮಪುರಿಗಳಲ್ಲಿ ಈಗಾಗಲೇ ಗಮನಿಸಲಾಗಿದೆ.

ಗಳಿಗೆ ಬಟ್ಟಲು ಎನ್ನುವುದು ಕಾಲವನ್ನು ಅಳೆಯುವ ಒಂದು ರಂಧ್ರವಿರುವ ಮಣ್ಣಿನ ಪಾತ್ರೆಯಾಗಿದ್ದು, ಅದಕ್ಕೆ ಸಣ್ಣ ತೂತು ಮಾಡಿ ನೀರಲ್ಲಿ ಇಟ್ಟು ಅದರಲ್ಲಿ ನೀರು ತುಂಬಿಕೊಳ್ಳುವಷ್ಟು ಕಾಲಕ್ಕೆ ಒಂದು ಘಳಿಗೆ ಎಂದು ನಿಶ್ಚಯಿಸಲಾಗುತ್ತಿತ್ತು.[೬] ನಂಬಿಯಣ್ಣನ ರಗಳೆಯ ವೃದ್ಧ ಮಾಹೇಶ್ವರ ಪ್ರಸಂಗದಲ್ಲಿ ಘಳಿಗೆವಟ್ಟಲು ಮುರಿದ ವಿಷಯ ಬರುತ್ತದೆ.[೭] ಪ್ರಾಚೀನ ಕರ್ನಾಟಕದ ದೇವಾಲಯಗಳಲ್ಲಿ ಈ ಯಂತ್ರಗಳು ಇದ್ದುದು ತಿಳಿದುಬರುತ್ತದೆ. ಸಮಯವನ್ನು ಅಳೆಯುವ ಈ ಸಾಧನಗಳು ಮುಹೂರ್ತಿಕರಿಗೆ, ಜ್ಯೋತಿಷಿಗಳಿಗೆ, ವಿದ್ವಾಂಸರಿಗೆ ಅತ್ಯಗತ್ಯವಾಗಿದ್ದವು. ಪ್ರಾಚೀನ ಉನ್ನತ ವಿದ್ಯಾಕೇಂದ್ರಗಳಾಗಿದ್ದ ಘಟಿಕಾಸ್ಥಾನಗಳು ಆ ಕಾಲದ ಉನ್ನತ ವಿದ್ಯೆಯ ಪ್ರತೀಕಗಳಾಗಿದ್ದವು.

---

೧. ಎಸ್ಐಐ VI ಮಡಕಸಿರ ೫೫೮ ಕ್ರಿ.ಶ. ೧೨೦೫.

೨. ಎಸ್ಐಐ XVIII ಹಾವೇರಿ ೨೨೭ ಕ್ರಿ.ಶ. ೧೩ ಶಮಾ.

೩. (ರೈ) ಎಕ VIII ಸೊರಬ ೩೮೪ ಕ್ರಿ.ಶ. ೧೨೩೭.

೪. ಐಎಸ್‌ಡಿ ಉ. ಸೊಲ್ಲಾಪುರ ೨೬, ಕ್ರಿ.ಶ. ೧೨೧೮; ಕೆಲವು ಶಾಸನಗಳಲ್ಲಿ 'ಅಱುವತ್ತುನಾಲ್ಕು ಘಟಿಕಾಸ್ಥಾನ'ಗಳ ಉಲ್ಲೇಖ ಬರುತ್ತದೆ. ತೇರದಾಳದ ಶಾಸನದಲ್ಲಿ ಅಱುವತ್ತುನಾಲ್ಕು ಘಟಿಕಾಸ್ಥಾನವು, ಗವಱೆ, ಗಾತ್ರಿಗ, ಸೆಟ್ಟಿ, ಸೆಟ್ಟಿಗುತ್ತ ಮುಂತಾದವರೊಂದಿಗೆ ಮಹಾನಾಡಾಗಿ ಸೇರಿದ ವಿಷಯ ಬರುತ್ತದೆ. ಕಇ V ಜಮಖಂಡಿ ೯೮ ಕ್ರಿ.ಶ. ೧೧೮೧. ಆ ಅರವತ್ನಾಲ್ಕು ಘಟಿಕಾಸ್ಥಾನಗಳು ಯಾವುವು, ಅವುಗಳ ವಿವರಗಳೇನು ಎಂಬುದು ತಿಳಿಯುವುದಿಲ್ಲ.

೫. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೨೪-೨೫.

೬. ಕ.ಕ. ನಿಘಂಟು II ಪು. ೨೪೬೫.

೭. ನಂಬಿಯಣ್ಣನ ರಗಳೆ ೬ನೆಯ ಸ್ಥಲ, ಪು. ೩೭.

**ದೇವಸ್ಥಾನ ಮತ್ತು ಮಠಗಳು:**

ಕರ್ನಾಟಕದಲ್ಲಿ ದೇವಸ್ಥಾನಗಳು ಮತ್ತು ಮಠಗಳು ವಿದ್ಯಾಭ್ಯಾಸದ ವಿಷಯದಲ್ಲಿ ಬಹುಮುಖವಾದ ಸೇವೆಯನ್ನು ಸಲ್ಲಿಸಿವೆ. ದೇವಸ್ಥಾನ ಮತ್ತು ಮಠಗಳನ್ನು ಪ್ರತ್ಯೇಕಿಸಿ ನೋಡುವುದು ಕಠಿಣವೇನೊ ಎಂಬಂತೆ ಅವು ಒಂದಕ್ಕೊಂದು ಪೂರಕವಾಗಿ ಬೆಳೆದಿವೆ. ದೇವಸ್ಥಾನಗಳು ಮತ್ತು ಮಠಗಳು ಶತಮಾನಗಳ ಕಾಲ ಪೂರಕವಾಗಿ ಬೆಳೆದು ಜನರ ಧಾರ್ಮಿಕ ಮತ್ತು ಆಧ್ಯಾತ್ಮಿಕ ಅಗತ್ಯಗಳನ್ನು ಪೂರೈಸಿವೆ.[೧] ಕೆಲವು ಮಠಗಳು ಸ್ವತಂತ್ರ ಅಸ್ತಿತ್ವವನ್ನು ಹೊಂದಿದಂತೆ ಕಂಡುಬರುವುದಾದರೂ ಅಧಿಕ ಮಠಗಳು ದೇವಾಲಯಗಳಿಗೆ ಹೊಂದಿಕೊಂಡಂತೆಯೇ ಇರುತ್ತಿದ್ದವು. ದೇವಸ್ಥಾನಗಳನ್ನು ಕಟ್ಟಿಸಿದಾಗ ಮತ್ತು ಅದಕ್ಕೆ ದಾನಗಳನ್ನು ನೀಡಿದಾಗ ಆ ದೇವಾಲಯದ ಜೀರ್ಣೋದ್ಧಾರ, ಪೂಜೆ ಮುಂತಾದವುಗಳಿಗೆ ದಾನ ಮಾಡಿದಂತೆ ವಿದ್ಯೆಗಾಗಿಯೂ ದಾನ ಮಾಡುತ್ತಿದ್ದರು. ಅನೇಕ ಶೈವ ದೇವಸ್ಥಾನಗಳು, ಜೈನಬಸದಿಗಳು ಆಯಾ ಧರ್ಮದ ಯತಿಗಳ ವಾಸಸ್ಥಾನಗಳೂ ಆಗಿದ್ದವು. ಅವರು ಸಾಮಾನ್ಯವಾಗಿ ಬಹುದೊಡ್ಡ ವಿದ್ವಾಂಸರು, ಜ್ಞಾನಿಗಳು ಆಗಿದ್ದು ಅಧ್ಯಾಪನವನ್ನು ಮಾಡುತ್ತಿದ್ದರು. ಹೀಗೆ ದೇವಸ್ಥಾನಗಳು ವಿದ್ಯಾಕೇಂದ್ರಗಳಾಗಿ ಪರಿಣಮಿಸಿದ್ದು ೯-೧೦ನೆಯ ಶತಮಾನದನಂತರ ಎಂದೂ ಬೌದ್ಧ ವಿಹಾರಗಳನ್ನು, ಜೈನ ಬಸದಿಗಳನ್ನು ಗಮನಕ್ಕೆ ತೆಗೆದುಕೊಂಡರೆ ಆ ಕಾಲ ಇನ್ನೂ ಹಿಂದೆ ಹೋಗಬಹುದೆಂಬ ಅಭಿಪ್ರಾಯವಿದೆ.[೨] ಬೌದ್ಧವಿಹಾರಗಳಲ್ಲಿ ಮತ್ತು ಜೈನಬಸದಿಗಳಲ್ಲಿ ಆರಂಭದಲ್ಲಿ ನೀಡುತ್ತಿದ್ದ ಶಿಕ್ಷಣ ಯತಿವರ್ಗಕ್ಕೆ ಮೀಸಲಾಗಿದ್ದಿರಬೇಕು.

ಅಣ್ಣಿಗೇರಿಯ ಒಂದು ಶಾಸನ 'ಶ್ರೀಮನ್ನಾಗೇಶ್ವರ ದೇವಾಲಯದ ಮಾಟಕೂಟ ಪ್ರಸಾದ ಅಂಗಭೋಗರಂಗಭೋಗ ತಪೋಧನರಾಹಾರದಾನ ವಿದ್ಯಾದಾನಕ್ಕಂ ಗೀತವಾದ್ಯನ್ರಿತ್ಯಮನ್ನದಾನಮಿನಿತರ್ಕ್ಕಂ'[೩] ಎಂದು ತಿಳಿಸುತ್ತದೆ. ಕೇಶವೇಶ್ವರ ದೇವಾಲಯದಲ್ಲಿ ಋಗ್ವೇದವನ್ನು ಹೇಳಿಕೊಡುವ ವ್ಯವಸ್ಥೆ ಇದ್ದಿತ್ತು.[೪] ಹರಿಹರದ ಒಂದು ಸಂಸ್ಕೃತ ಶಾಸನದಲ್ಲಿ ವಿಜಯ ಪಾಂಡ್ಯನ ಸರ್ವಾಧ್ಯಕ್ಷ ಕುಮಾರ ಪೆರ್ಮಾಡಿ ದಂಡನಾಥ ಹರಿಹರ ದೇವಾಲಯಕ್ಕೆ ೬.೦೦ ನಿಷ್ಕಗಳನ್ನು ದಾನಮಾಡಿ ಪೂಜೆ, ಬ್ರಾಹ್ಮಣ ಭೋಜನಗಳ ಜೊತೆಯಲ್ಲಿ ಅಕ್ಷರಶಿಕ್ಷಾ, ವ್ಯಾಕರಣ ಮೀಮಾಂಸಾ ವೇದಾಂತ ವ್ಯಾಖ್ಯಾನ, ಋಗ್ವೇದ ಯಜುರ್ವೇದಗಳ ಅಧ್ಯಾಪನಕ್ಕಾಗಿ ವ್ಯವಸ್ಥೆ ಮಾಡಿರುವುದು ಕಂಡುಬರುತ್ತದೆ. ಅಲ್ಲದೆ ಶಾಸನದ ಮುಂದಿನ ಭಾಗದಲ್ಲಿ ಯಾವ ಯಾವ ಬೋಧನೆಗೆ ಎಷ್ಟೆಷ್ಟು ಸಲ್ಲಬೇಕು ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಋಗ್ವೇದಕ್ಕೆ ೬ ನಿಷ್ಕಗಳು
ಯಜುರ್ವೇದಕ್ಕೆ ೬ ನಿಷ್ಕಗಳು
ಅಕ್ಷರ ಶಿಕ್ಷೆಗೆ ಭತ್ತಾಯ ೬ ನಿಷ್ಕ
ಭಟ್ಟವೃತ್ತಿ...
ವೇದಾಂತಸ್ಯ...೧...
ರೂಪಾವತಾರ... ೬ ನಿಷ್ಕ[೫]

ಇದು ಆ ಕಾಲದಲ್ಲಿ ದೇವಸ್ಥಾನಗಳಲ್ಲಿದ್ದ ಶಿಕ್ಷಕರ ಸಂಭಾವನೆಯ ಮೊತ್ತವನ್ನು ತಿಳಿಸುತ್ತದೆ. ನಂದಿಹಳ್ಳಿಯ ಒಂದು ಶಾಸನದಲ್ಲಿ ಜಂಬುಖಂಡಿಯ ವಾಮನಭಟ್ಟ ಉಪಾಧ್ಯಾಯರಿಗೆ, ತೆಕಣ್ಣವೆಗೆ ಹುಟ್ಟಿದ ಚಂದ್ರಭಟ್ಟ ಉಪಾಧ್ಯಾಯರಿಗೆ ವಿದ್ಯಾಭ್ಯಾಸಕ್ಕಾಗಿ

---

೧. P.V. Kane : History of Dharmashastra II(ii), ಪು. ೯೦೯.
೨. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೧೬.
೩. ಎಸ್‌ಐಐ XV ನವಲಗುಂದ ೧೨೨ ಕ್ರಿ.ಶ. ೧೧೭೩.
೪. (ರೈ) ಎಕ V ಚನ್ನರಾಯಪಟ್ಟಣ ೨೪೫ ಕ್ರಿ.ಶ. ೧೨೧೦.
೫. (ರೈ) ಎಕ XI ದಾವಣಗೆರೆ ೩೯ ಕ್ರಿ.ಶ. ೧೧೬೮.

ದಾನಗಳನ್ನು ನೀಡಲಾಗಿದೆ.[೧] ಸುಗ್ಗಿ ಹಳ್ಳಿಯ ಶಾಸನದಲ್ಲಿ ದಣ್ಣಾಯಕ ಬೊಮ್ಮಣ್ಣನು ತಮ್ಮ ಕುಲದೇವತೆಯಾದ ಚವುಡೇಶ್ವರಿಯನ್ನು ಪ್ರತಿಷ್ಠಾಪಿಸಿ ವೇದಾರ್ಥದ ಮುಂಚಣ್ಣನಿಗೆ ದಾನ ಕೊಟ್ಟ ವಿಷಯ ನಿರೂಪಿತವಾಗಿದೆ.[೨] ಜೈನಬಸದಿಗಳಲ್ಲಿಯೂ ವಿದ್ಯಾಭ್ಯಾಸ ನಡೆಯುತ್ತಿದ್ದುದು ಶಾಸನಗಳಲ್ಲಿ ನಿರೂಪಿತವಾಗಿದೆ. ಚಿಕ್ಕಮಾಗಡಿಯ ಒಂದು ತ್ರುಟಿತ ಶಾಸನದಲ್ಲಿ ಪ್ರಧಾನ ಶಂಕರ ಶಾಂತಿನಾಥ ಬಸದಿಯನ್ನು ಕಟ್ಟಿಸಿದಾಗ ಕದಂಬರಾಜನಾದ ಬೊಪ್ಪ ಕೆಲವು ದಾನಗಳನ್ನು ಮಾಡಿರುವ ವಿಷಯ ಬರುತ್ತದೆ; ಋಷಿಗಳ ಆಹಾರದ ಜೊತೆಯಲ್ಲಿ ವಿದ್ಯಾರ್ಥಿಗಳಿಗೂ, ದಾನ ನೀಡಿದ ವಿಷಯ ಅಲ್ಲಿ ನಿರೂಪಿತವಾಗಿದೆ.[೩] ಜೈನಯತಿಗಳು ಮಹಾ ವಿದ್ವಾಂಸರೂ ಆಗಿರುತ್ತಿದ್ದರು. ತೆವರತೆಪ್ಪದ ಒಂದು ಶಾಸನದಲ್ಲಿ ಮುನಿಚಂದ್ರದೇವನೆಂಬ ಜೈನ ಗುರುವನ್ನು 'ಸಮಸ್ತ ಪರಮಾಗಮದೊಳು ಪದಶಾಸ್ತ್ರದೊಳು ಪ್ರಮಾಣಾಂತರದೊಳು ಸಮಸ್ತಗಣಿತಂಗಳೊರ್ವನೆ ತಜ್ಞನಾಗಿ ಚೈರಂತನ ಮಾರ್ಗದಿಂ ನಡೆದು ವಿಶ್ವನುತಂ ಮುನೀಂದ್ರದೇವ ಸೈದ್ಧಾಂತಿಕ ಚಕ್ರವರ್ತಿ ಜಸಮಂದೆಸೆಯಂತುವರಂ ನಿಮಿರ್ಚಿದಂ'[೪] ಎಂದು ವರ್ಣಿಸಲಾಗಿದೆ. ಬಸದಿಗಳಲ್ಲಿ ಪರಮಾರ್ಥ ವಿದ್ಯೆಗಳ ಜೊತೆ ಬೇರೆ ಬೇರೆ ವಿಷಯಗಳನ್ನೂ ಬೋಧಿಸಲಾಗುತ್ತಿತ್ತು ಎಂಬುದನ್ನು ಈ ಗುರುವಿನ ಕೀರ್ತಿ ಪರೋಕ್ಷವಾಗಿ ತಿಳಿಸುತ್ತದೆ.

ಕರ್ನಾಟಕದಲ್ಲಿ ಕಾಳಾಮುಖರು ಪ್ರಭಾವಶಾಲಿಗಳಾದಂತೆ ದೇವಾಲಯ ಮತ್ತು ಮಠಗಳು ಶಕ್ತಿಯುತವಾಗಿ ಬೆಳೆದವು. ಅಲ್ಲದೆ ಅವು ವಿದ್ಯಾಕೇಂದ್ರಗಳಾಗಿ ಪ್ರಾಚೀನ ಕರ್ನಾಟಕದಲ್ಲಿ ಬಹುದೊಡ್ಡ ಸೇವೆಯನ್ನು ಸಲ್ಲಿಸಿವೆ. ಅನೇಕ ದೇವಾಲಯ ಮಠಗಳಲ್ಲಿರುತ್ತಿದ್ದ ಸ್ಥಾನಪತಿಗಳಲ್ಲಿ ಕೆಲವರು ಬಹುದೊಡ್ಡ ವಿದ್ವಾಂಸರು, ಜ್ಞಾನಿಗಳು ಆಗಿರುತ್ತಿದ್ದರು. ಅವರು ವಿದ್ಯಾಕ್ಷೇತ್ರಕ್ಕೆ ಸಲ್ಲಿಸಿದ ಬಹುಮುಖ ಸೇವೆ ಗಮನಾರ್ಹವಾದುದು. ಮುನವಳ್ಳಿಯ ಶಾಸನ ಸರ್ವೇಶ್ವರ ಯತಿಯನ್ನು 'ರುಗುವೇದ ಸಾಮವೇದ ಯಥರ್ವಣ ಯಜುರ್ವ್ವೇದ ವೇದಾಂತ ಷಟ್ತರ್ಕ ಬ್ಯಾಕರಣ ಛಂದಶು ನಿಘಂಟು ಕಾವ್ಯ ನಾಟಕ ಸಕಟಿ ವಿದ್ಯಾವಿನೋದರುಂ'[೫] ಎಂದು ಕೀರ್ತಿಸಿದೆ. ಮುಳುಗುಂದದ ತೆಲ್ಲಿಗೇಶ್ವರ ಸ್ಥಾನಾಚಾರ್ಯರಾದ ಕೇದಾರದೇವರ ಪುತ್ರ ಭಾಸ್ಕರಾಚಾರ್ಯರ ಕರ್ಮನಿಷ್ಠೆ ಮತ್ತು ವಿದ್ವತ್ತಿನ ಬಲ್ಮೆಯನ್ನು ಕಂಡು ಹೆಗ್ಗಡೆ ಚವುಂಡಯ್ಯ ಮುಂತಾದವರು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಆಚಾರ್ಯರನ್ನು ವಿದ್ಯಾನಿಧಿಯೆಂದೂ ಸರ್ವಶಾಸ್ತ್ರಕುಶಲನೆಂದೂ ಹೇಳುತ್ತದೆ. ಅಲ್ಲದೆ ಆ ದೇವಾಲಯಕ್ಕೆ ಹೊಂದಿದಂತೆ ತೆಲ್ಲಿಗೇಶ್ವರ ಮಠ ಇದ್ದುದನ್ನು ಶಾಸನ ಉಲ್ಲೇಖಿಸುತ್ತದೆ.[೬] ಕೊಕಟನೂರಿನ ಒಂದು ಶಾಸನದಲ್ಲಿ ಸ್ವಯಂಭು ವಿಶ್ವೇಶ್ವರ ದೇವರ...ದಾಚಾರ್ಯ ವಿದ್ಯಾರಾಶಿ ಪಂಡಿತದೇವರಿಗೆ ಕೊಟ್ಟ ದಾನಗಳಲ್ಲಿ ಮಠದ ತಪೋಧನರಿಗೂ ವಿದ್ಯಾರ್ಥಿಗಳಿಗೂ ಸಲ್ಲುವುದೆಂದು ತಿಳಿಸಲಾಗಿದೆ.[೭] ಬ್ರಹ್ಮಸಮುದ್ರದ ನಾಕನಾಥೇಶ್ವರ ದೇವಾಲಯಕ್ಕೆ ಹೊಂದಿಕೊಂಡಂತೆ ನೈಷ್ಠಿಕ ಸ್ಥಾನವಿದ್ದಿತು. ಅದರ ಆಚಾರ್ಯ ತ್ರಿಲೋಚನಾಚಾರ್ಯರಿಗೆ ಶ್ರೀಕರಣದ ಹೆಗ್ಗಡೆ ಅನೇಕ ದಾನಗಳನ್ನು ನೀಡಿದ. ಅದರಲ್ಲಿ ವೇದ ಖಂಡಿಕ ಶಾಸ್ತ್ರ ತರ್ಕ ಅಕ್ಷರ ಖಂಡಿಕ...ಗಳು ಉಲ್ಲೇಖಗೊಂಡಿವೆ.[೮] ಮುತ್ತಗಿಯಲ್ಲಿದ್ದ ಶ್ರೀರಾಮೇಶ್ವರ ದೇವಾಲಯಕ್ಕೆ ಹೊಂದಿಕೊಂಡಿದ್ದ

---

೧. (ರೈ) ಎಕ XII ಚಿಕ್ಕನಾಯಕನಹಳ್ಳಿ ೪೩ ಕ್ರಿ.ಶ. ೧೧೭೧.

೨. (ರೈ) ಎಕ V ಚನ್ನರಾಯಪಟ್ಟಣ ೨೩೮ ಕ್ರಿ.ಶ. ೧೨೪೯.

೩. (ರೈ) ಎಕ VII ಶಿಕಾರಿಪುರ ೧೯೭ ಕ್ರಿ.ಶ. ೧೧೮೨.

೪. (ರೈ) ಎಕ VIII ಸೊರಬ ೩೪೫ ಕ್ರಿ.ಶ. ೧೧೭೧.

೫. ಕಇ I ಸೌಂದತ್ತಿ ೩೧ ಕ್ರಿ.ಶ. ೧೨೫೨.

೬. ಎಸ್ಐಐ XV ಗದಗು ೨೨೦ ಕ್ರಿ.ಶ. ೧೨೦೭.

೭. ಕಇ II ಅಥಣಿ ೨೫ ಕ್ರಿ.ಶ. ೧೧೬೯.

೮. (ರೈ) ಎಕ VI ಕಡೂರು ೫೧ ಕ್ರಿ.ಶ. ೧೧೬೯.

'ಮಠದ ಜೀರ್ಣೋದ್ಧಾರಕ್ಕೆ ತಪೋಧನರ ಚಾತ್ರರಶನಾಚ್ಛಾದನಕ್ಕೆ' ದಾನವನ್ನು ನೀಡಲಾಗಿದೆ.[೧] ಮಠಗಳು ವಿವಿಧ ಮಟ್ಟದಲ್ಲಿ ವಿದ್ಯಾಕೇಂದ್ರಗಳಾಗಿ ವಿದ್ಯಾಪ್ರಸಾರವನ್ನು ಮಾಡಿವೆ.

ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯಕ್ಕೆ ಹೊಂದಿದಂತಿದ್ದ ಕೋಡಿಯ ಮಠ ವೈವಿಧ್ಯಮಯವಾದ ಸೇವೆಯಿಂದ ಆ ಕಾಲದ ಬಹುದೊಡ್ಡ ಸಾಂಸ್ಕೃತಿಕ ಕೇಂದ್ರವಾಗಿದ್ದಿತು. ವಿದ್ಯಾಕ್ಷೇತ್ರಕ್ಕೆ ಅದು ನೀಡಿದ ಕಾಣಿಕೆ, ಮಾಡಿದ ಪ್ರೋತ್ಸಾಹ, ನೀಡಿದ ಬೆಂಬಲ ಅಸಾಧಾರಣವಾದುದು. ಕ್ರಿ.ಶ. ಸು. ೧೦೬೦ರಲ್ಲಿ ಸ್ಥಾಪಿತವಾಗಿರಬಹುದಾದ ಕೇದಾರೇಶ್ವರ ಮಠ (ಕೋಡಿಯ ಮಠ) ಹಲವಾರು ಶ್ರೇಷ್ಠ ಸ್ಥಾನಪತಿಗಳನ್ನು ಹೊಂದಿದ್ದಿತು. ಕೆಲವರಂತೂ 'ಸರ್ವಜ್ಞಕಲ್ಪ', 'ವಿದ್ಯಾಬ್ಧಿ' ಎಂದು ಮುಂತಾಗಿ ಹೆಸರು ಪಡೆದವರು. ಈ ಪರಂಪರೆಯಲ್ಲಿ ಬಂದ ಗೌತಮನ ಶಿಷ್ಯನಾದ ಎರಡನೆಯ ವಾಮಶಕ್ತಿ ಅತ್ಯಂತ ಪ್ರಸಿದ್ಧನಾದವನು. ಕೆಲವು ಶಾಸನಗಳು ಅವನನ್ನು 'ರಾಜಗುರು' ಎಂದು ಹೊಗಳಿವೆ.[೨] ಅಲ್ಲಿಯ ಒಂದು ಶಾಸನ ವಾಮಶಕ್ತಿಯನ್ನು 'ವದನಂ ವಾಣೀ ಲೀಲಾ ಸದನಂ' ಎಂದು ಕೀರ್ತಿಸುತ್ತದೆ.[೩] ಬಳ್ಳಿಗಾವೆಯ ಒಂದು ಶಾಸನ ಅಲ್ಲಿ ನಡೆಯುತ್ತಿದ್ದ ವೈವಿಧ್ಯಮಯವಾದ ಚಟುವಟಿಕೆಗಳನ್ನು ತಿಳಿಸುತ್ತದೆ.[೪] ಅಲ್ಲಿ ಕೌಮಾರ, ಪಾಣಿನೀಯ, ಶಾಕಟಾಯನ ಶಬ್ದಾನುಶಾಸನಾದಿ ವ್ಯಾಕರಣಗಳನ್ನು ಕಲಿಯಲು ಅವಕಾಶವಿದ್ದಿತು; ಚತುರ್ವೇದಗಳು, ನ್ಯಾಯ, ವೈಶೇಷಿಕ, ಮೀಮಾಂಸಾ, ಸಾಂಖ್ಯ ಬೌದ್ಧಾದಿ ದರ್ಶನ ಮತ್ತು ಲಾಕುಳ ಸಿದ್ಧಾಂತ, ಪಾತಂಜಲಾದಿ ಯೋಗಶಾಖೆಗಳ ಅಧ್ಯಯನ ನಡೆಯುತ್ತಿದ್ದುದಲ್ಲದೆ, ಅದು ವಿವಿಧ ಕಥಕ, ಗಾಯಕ, ವಾದಕ, ವಾಂಶಿಕ, ನರ್ತಕ, ವೈತಾಳಿ ಮುಂತಾದ ಕಲಾವಿದರನ್ನೂ ಆಕರ್ಷಿಸುತ್ತಿತ್ತು. ಪುರಾಣ, ಕಾವ್ಯ, ನಾಟಕ ಮುಂತಾದವುಗಳ ಅಧ್ಯಯನ ಅಲ್ಲಿ ನಡೆಯುತ್ತಿತ್ತು. ಎಲ್ಲ ಕಡೆಯಿಂದ ಬಂದ ಸನ್ಯಾಸಿಗಳ, ಭಿಕ್ಷುಕರ, ರೋಗಿಗಳ, ಕಲಾವಿದರ ಆಶ್ರಯ ಸ್ಥಾನವೂ ಆಗಿದ್ದಿತು. ಶಾಸನೋಕ್ತವಾದ ವಿವಿಧ ಜ್ಞಾನ ಕಲಾಶಾಖೆಗಳು ಆ ಮಠದ ಅಧ್ಯಯನ ಅವಕಾಶದ ವ್ಯಾಪ್ತಿಯನ್ನು ತಿಳಿಸುತ್ತದೆ. ಈ ಕಾರಣಗಳಿಂದ ದೇಶದ ವಿವಿಧ ಭಾಗಗಳಿಂದ ವಿದ್ವಾಂಸರನ್ನು, ವಿದ್ಯಾರ್ಥಿಗಳನ್ನು ಆಕರ್ಷಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಈ ಎಲ್ಲ ಸಾಧನೆಗಳನ್ನು ಗಮನಿಸಿ ಎ. ವೆಂಕಟಸುಬ್ಬಯ್ಯನವರು ಅದನ್ನು ಹನ್ನೆರಡನೆಯ ಶತಮಾನದ ವಿಶ್ವವಿದ್ಯಾಲಯ ಎಂದು ಕರೆದಿದ್ದಾರೆ.[೫] ಇಷ್ಟು ಉಜ್ವಲವಾಗಿ ಬೆಳಗಿ ಕೀರ್ತಿ ಶಿಖರವನ್ನು ಮುಟ್ಟಿದ ಕೇದಾರೇಶ್ವರ ಮಠ ಬಹುಶಃ ಅನಂತರ ಬಂದ ಸ್ಥಾನಪತಿಗಳು ಅಷ್ಟು ಶಕ್ತಿಶಾಲಿಗಳಲ್ಲದ ಕಾರಣವೋ ಏನೋ ಅಷ್ಟು ಪ್ರಭಾವಶಾಲಿಯಾಗಿ ಉಳಿಯಲಿಲ್ಲ. ಕ್ರಿ.ಶ. ೧೨೧೧ರ ಬಳಿಕ ಆ ಮಠದ ಉಲ್ಲೇಖವೂ ಮುಂದಿನ ಶಾಸನಗಳಲ್ಲಿ ಮರೆಯಾಯಿತು.

**ಶಿವಪುರಗಳು:**

ಅಗ್ರಹಾರ ಮತ್ತು ಬ್ರಹ್ಮಪುರಿಗಳಂತೆ ಶಿವಪುರಗಳು ದಾನಿಗಳು ವ್ಯವಸ್ಥೆ ಮಾಡಿಕೊಟ್ಟ ಊರುಗಳು. ಶಿವಪುರವೆಂದರೆ ವೀರಶೈವ ಧರ್ಮದ ಯತಿಗಳಿಗೆ ಮತ್ತು ಭಕ್ತರಿಗೆ ನೀಡಲ್ಪಟ್ಟ ಗ್ರಾಮವೆಂದೂ ಅದು ಬ್ರಾಹ್ಮಣರಿಗೆ ಕೊಡುತ್ತಿದ್ದ ಅಗ್ರಹಾರ ಅಥವಾ ಬ್ರಹ್ಮಪುರಿಗಳಿಗೆ ಸಮಾನವಾದವುಗಳೆಂದೂ ಒಂದು ಅಭಿಪ್ರಾಯವಿದೆ.[೬] ಆದರೆ ಶಿವಪುರಗಳನ್ನು ಶೈವ ಮತ್ತು ವೀರಶೈವರಿಗೆ ನೀಡಿರುವುದು ಕಂಡುಬರುತ್ತದೆ. ಬ್ರಾಹ್ಮಣರ ವಾಸಕ್ಕಾಗಿ ನೀಡಿರುವುದು ಬ್ರಹ್ಮಪುರಿಗಳಾದಂತೆ ಶಿವಭಕ್ತರಿಗೆ

---

೧. ಎಸ್ಐಐ XV ಬಾಗೇವಾಡಿ ೧೦೪ ಕ್ರಿ.ಶ. ೧೧೬೫.

೨. (ರೈ) ಎಕ VII ಶಿಕಾರಿಪುರ ೧೦೫ ಕ್ರಿ.ಶ. ೧೧೯೨.

೩. (ರೈ) ಎಕ VII ಶಿಕಾರಿಪುರ ೧೦೪ ಕ್ರಿ.ಶ. ೧೧೫೬.

೪. (ರೈ) ಎಕ VII ಶಿಕಾರಿಪುರ ೧೦೨ ಕ್ರಿ.ಶ. ೧೧೬೨.

೫. A. Venkatasubbaiah : A Twelvfeth century University in Mysore. ಕ್ಯುಜೆಎಂಎಸ್ VII-೩, ಪು. ೧೭೬.

೬. ಎಂಎಆರ್ ೧೯೩೩ ಪು. ೨೫೨.

ನೀಡಿರುವುದು ಶಿವಪುರಗಳಾಗಿದ್ದವು. ಬಹುಶಃ ಬ್ರಹ್ಮಪುರಿಯ ಸಾಮ್ಯದ ಮೇಲೆ ಶಿವಪುರ ಎಂಬ ಪದ ರೂಪುಗೊಂಡಿರಬೇಕು. ನಮ್ಮ ಅಧ್ಯಯನಾವಧಿಯಲ್ಲಿ ಗಮನಕ್ಕೆ ಬಂದ ಸುಮಾರು ಏಳೆಂಟು ಶಿವಪುರಗಳಲ್ಲಿ ವಿದ್ಯಾಭ್ಯಾಸಕ್ಕೆ ವಿಶೇಷವಾಗಿ ಯಾವುದೇ ದಾನವನ್ನು ನೀಡಿದಂತೆ ಕಂಡುಬರುವುದಿಲ್ಲ.[೧] ಕೋಗುಂಡಿಯ ಶಾಸನದಲ್ಲಿ 'ಶಿವಪುರವಾದ ಮಹಾಗ್ರಹಾರ ಕೋಗುಂಡಿ'[೨] ಎಂಬ ಮಾತು ಬರುತ್ತದೆ. ಇದು ಅಗ್ರಹಾರವಾಗಿದ್ದು ಶೈವ ಪ್ರಭಾವಕ್ಕೆ ಒಳಗಾಗಿ ಶಿವಪುರವಾಗಿರಬಹುದೇ ಎಂಬ ಅನುಮಾನಕ್ಕೆ ಎಡೆಗೊಡುತ್ತದೆ. ಅದೇ ಶಾಸನದಲ್ಲಿ ಕೋಗುಂಡಿಯ ಇನ್ನೂರು ಮಹಾಜನರ ಉಲ್ಲೇಖವೂ ಬರುತ್ತದೆ. ವೀರಶೈವ ಧರ್ಮದವರಿಗೆ ನೀಡಿರುವ ಶಿವಪುರಗಳ ವೈಶಿಷ್ಟ್ಯವೆಂದರೆ ವೃತ್ತಿಗಳನ್ನು ಹಂಚುವಾಗ ಕೆಲವು ವೃತ್ತಿಗಳನ್ನು ಸ್ತ್ರೀಯರಿಗೂ ಕೊಟ್ಟಿರುವುದು.[೩] ಶಿವಪುರವಾಗಿ ದಾನ ಕೊಟ್ಟಿದ್ದ ಬಿದಿರಕೋಟೆಯನ್ನು ಮಾದೆಯ ನಾಯಕನೆಂಬುವನು 'ಬಲು ಹಿಂದೆ' ಬಿಡದಿರಲು ವೀರಮಲಯ್ಯ ತನ್ನನ್ನು ತಾನು ಇರಿದುಕೊಂಡು 'ನಾಲ್ಕು ಗಡಿಗಳ ಕಲ್ಲು ಕಂಡು' ಶಿವಪುರವನ್ನು ಪಡೆದು ಸೋಮನಾಥಪುರವನ್ನಾಗಿ ಮಾಡಿದ ವಿಷಯವನ್ನು ಬಿದಿರುಕೋಟೆಯ ಶಾಸನ ತಿಳಿಸುತ್ತದೆ.[೪] ಶಿವಪುರಗಳಲ್ಲಿ ವಿದ್ಯಾಚಟುವಟಿಕೆಗಳಿಗಿಂತಲೂ ಧಾರ್ಮಿಕ ಚಟುವಟಿಕೆಗಳು ಹೆಚ್ಚು ನಡೆದಂತೆ ಕಂಡುಬರುತ್ತದೆ.

### ಪ್ರಾಥಮಿಕ ವಿದ್ಯಾಭ್ಯಾಸ:

ವಿದ್ಯಾರ್ಥಿಗಳಿಗೆ ಪ್ರಾಥಮಿಕ ಹಂತದಲ್ಲಿ ಏನೇನು ವಿಷಯಗಳನ್ನು ಬೋಧಿಸುತ್ತಿದ್ದರು ಮತ್ತು ಆ ಹಂತದ ವಿದ್ಯಾಭ್ಯಾಸ ಸ್ವರೂಪ ಹೇಗಿರುತ್ತಿತ್ತು ಎಂಬ ವಿಷಯಗಳ ಮೇಲೆ ಶಾಸನಗಳು ಹೆಚ್ಚು ಬೆಳಕನ್ನು ಚೆಲ್ಲುವುದಿಲ್ಲ. ವಿದ್ಯಾಭ್ಯಾಸದ ಆರಂಭ ವಿದ್ಯಾರ್ಥಿಯ ೫ನೆಯ ವಯಸ್ಸಿನಲ್ಲಿ ಆಗುತ್ತಿತ್ತು.[೫] ಮನುವು ಬ್ರಾಹ್ಮಣರಿಗೆ ಚಿಕ್ಕ ವಯಸ್ಸಿನಲ್ಲಿಯೂ ಕ್ಷತ್ರಿಯನಿಗೆ ೧೧ನೆಯ ವಯಸ್ಸಿನಲ್ಲಿಯೂ ವೈಶ್ಯನಿಗೆ ೧೨ನೆಯ ವಯಸ್ಸಿನಲ್ಲಿಯೂ ವಿದ್ಯಾರಂಭವೆಂದು ಹೇಳಿರುವುದುಂಟು.[೬] ಆದರೆ ನಿಜವಾದ ವಿದ್ಯಾಭ್ಯಾಸ ಆರಂಭವಾಗುತ್ತಿದ್ದುದು ಉಪನಯನದನಂತರವೇ. ಉಪನಯನವನ್ನು ಬ್ರಾಹ್ಮಣರಿಗೆ ೮ನೆಯ ವರ್ಷದಲ್ಲಿಯೂ ಕ್ಷತ್ರಿಯನಿಗೆ ೧೧ನೆಯ ವರ್ಷದಲ್ಲಿಯೂ ವೈಶ್ಯನಿಗೆ ೧೨ನೆಯ ವರ್ಷದಲ್ಲಿಯೂ ಆಗಬೇಕೆಂದು ಮನು ಹೇಳಿರುವುದರಿಂದ ಅದು ಹಿಂದೆ ಸೂಚಿಸಿದ ವಿದ್ಯಾರಂಭದ ವಯಸ್ಸೇ ಆಗಿದೆ.[೭] ಉಪನಯನವೆಂದರೆ ವೇದಾಭ್ಯಾಸಕ್ಕೆ ವಿದ್ಯಾರ್ಥಿಯನ್ನು ಗುರುವಿನ ಬಳಿಗೆ ಕರೆದುಕೊಂಡು ಹೋಗಲು ಅಣಿ ಮಾಡುತ್ತಿದ್ದ ಬ್ರಹ್ಮೋಪದೇಶದ ಒಂದು ಸಂಸ್ಕಾರವೆನ್ನಬಹುದು.

ಕನ್ನಡ ಶಾಸನಗಳಲ್ಲಿ ಬಾಲಶಿಕ್ಷೆಗಾಗಿ ಕೊಟ್ಟ ಕೆಲವು ದಾನಗಳ ಉಲ್ಲೇಖಗಳು ಬರುತ್ತವೆ. ಮುರುಂಡಿಯ ಶಾಸನವು ಎಜೆಯಣ್ಣನೆಂಬುವನು ಸೋವಿಯಣ್ಣ ಎಂಬುವವನನ್ನು 'ಕರ್ಣಾಟ ಬಾಲಸಿಕ್ಷೆಯಂ ಮಾಡುವಂತಾಗಿ' ನೇಮಿಸಿ ಇಪ್ಪತ್ತು

---

೧. (ಮೈ) ಎಕ VII ಮಂಡ್ಯ ೩೪ ಕ್ರಿ.ಶ. ೧೨೫೧; (ರೈ) ಎಕ IX ಚಿತ್ರದುರ್ಗ ೭೯ ಕ್ರಿ.ಶ. ೧೨೧೪ (?) ಎಸ್‌ಐಐ IX(i) ೩೬೫ ಕ್ರಿ.ಶ. ೧೨೧೫; ಕಇ I ಸೌಂದತ್ತಿ ೩೦ ಕ್ರಿ.ಶ. ೧೨೨೨; (ರೈ) ಎಕ XVI ಗುಬ್ಬಿ ೭೬ ಕ್ರಿ.ಶ. ೧೨೫೨; (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦ (ಮೈ) ಎಕ IV ಕೊಳ್ಳೇಗಾಲ ೧೩ ಕ್ರಿ.ಶ. ೧೨೦೪.

೨. (ರೈ) ಎಕ XI ಚಿತ್ರದುರ್ಗ ೭೯ ಕ್ರಿ.ಶ. ೧೨೧೪(?)

೩. (ರೈ) ಎಕ XVI ಗುಬ್ಬಿ ೭೬ ಕ್ರಿ.ಶ. ೧೨೫೨; (ಮೈ) ಎಕ VII ಮಂಡ್ಯ ೩೪ ಕ್ರಿ.ಶ. ೧೨೫೧.

೪. (ಮೈ) ಎಕ VII ಮಂಡ್ಯ ೩೪ ಕ್ರಿ.ಶ. ೧೨೫೧.

೫. '...ವಜ್ರಕುಮಾರನೆಂದು ಪೆಸರನಿಟ್ಟು ಕೊಂಡಾಡಿ ನಡೆಪಿ ಬಳಿಕ್ಕಮಯ್ದು ವರುಷದಂದು ಜೈನೋಪಾಧ್ಯಾಯರ ಸಮೀಪದೊಳೋದಿಗಿಡುವುದುಂ...' ಧರ್ಮಾಮೃತಂ ೮-೧೦೬ನೆಯ ಪದ್ಯದನಂತರ, ಪು. ೩೮೦.

೬. Keval Motwani : Manu Dharmashastra. ಪು. ೭೬.

೭. P.V. Kane : ಪೂರ್ವೋಕ್ತ II(i) ಪು. ೨೭೪-೭೫.

ವಿದ್ಯಾರ್ಥಿ ಮಾಣಿಗಳಿಗೆ ಅವಕಾಶವನ್ನು ಮತ್ತು ಇವರಿಗಾಗಿ ಅಡುಗೆ ತಯಾರು ಮಾಡುವ ಬಾಣಸಗಿತ್ತಿಯನ್ನು ವ್ಯವಸ್ಥೆ ಮಾಡಿದ್ದನ್ನು ನಿರೂಪಿಸುತ್ತದೆ.[೧] ಈ ದತ್ತಿಯನ್ನು ವಿದ್ಯಾರ್ಥಿಗಳಿಗೆ ಕನ್ನಡ ಅಕ್ಷರಾಭ್ಯಾಸಕ್ಕಾಗಿ ನೀಡಿದೆ. ಇಟ್ಟಗಿಯ ಒಂದು ಶಾಸನ 'ಋಗ್ವೇದದ ಬಾಲಶಿಕ್ಷೆಯ ಖಂಡಿಕ ಯಜುರ್ವೇದ ಬಾಲಶಿಕ್ಷೆಯ ಖಂಡಿಕ ಅಂತಾಯೆರಡು ಖಂಡಿಕಗಳು ನಡೆವಂತೆ' ದಾನ ಕೊಟ್ಟಿರುವುದನ್ನು ತಿಳಿಸುತ್ತದೆ.[೨] ವೇದಗಳ ಭಾಗಗಳನ್ನು ಬಾಲಕರಿಗೆ ಬಾಯಿಪಾಠದ ಮೂಲಕ ಕಲಿಸುತ್ತಿದ್ದ ಒಂದು ಕ್ರಮವನ್ನು ಅದು ಸೂಚಿಸುತ್ತದೆ. ಕೊಂಡಗುಳಿಯ ಶಾಸನ ಅಕ್ಷರ ವ್ಯಾಕರಣ ಮತ್ತು ರೂಪಾವತಾರ ಇವುಗಳನ್ನು ಹೇಳಿ, ಬಾಲಶಿಕ್ಷೆಯನ್ನು ಬೋಧಿಸುವ ಉಪಾಧ್ಯಾಯರಿಗೆ ದತ್ತಿಯನ್ನು ನೀಡಲಾಗಿದೆ ಎಂದಿದೆ. ಇದಲ್ಲದೆ ಸೂತ್ರ ಸಂಹಿತೆಯ ಹಿರಿಯ ಗ್ರಂಥಗಳನ್ನು ಹೇಳುವ ಮತ್ತು ಸಂಹಿತೆಯ ಕಿರಿಯ ಗ್ರಂಥಗಳ ಜೊತೆ ಯಾಜ್ಞವಲ್ಕ್ಯವನ್ನು ಹೇಳುವ ಉಪಾಧ್ಯಾಯರಿಗೆ ದತ್ತಿಯನ್ನು ನೀಡಲಾಗಿದೆ.[೩] ಈ ಶಾಸನದಲ್ಲಿ ಬರುವ ಅಕ್ಷರಾಭ್ಯಾಸ, ರೂಪಾವತಾರ,[೪] ವ್ಯಾಕರಣ ಬೋಧನೆ ಪ್ರಾಥಮಿಕ ವಿದ್ಯಾಭ್ಯಾಸವನ್ನು ಸೂಚಿಸುತ್ತದೆ. ಹುಲಗೂರಿನ ತಾಮ್ರ ಶಾಸನದಲ್ಲಿಯೂ ಬಾಲಶಿಕ್ಷವೆಂಬ ಮಾತು ಬರುತ್ತದೆ. ಆ ಶಾಸನವಿರುವ ಸಂಪುಟವನ್ನು ಸಂಪಾದಿಸಿರುವ ಎ.ಎಂ. ಅಣ್ಣಿಗೇರಿಯವರು ಅದು ಉಚ್ಚಾರಣೆಯ ಪ್ರಾಥಮಿಕ ನಿಯಮಗಳನ್ನು ಹೇಳುವುದೆಂದೂ ಅದು ಆರು ವೇದಾಂಗಗಳಲ್ಲಿ ಒಂದೆಂದೂ ಅಭಿಪ್ರಾಯಪಟ್ಟಿದ್ದಾರೆ.[೫] ಅಕ್ಷರ ಶಿಕ್ಷೆ ಮತ್ತು ರೂಪಾವತಾರದ ಬೋಧನೆಗಾಗಿ ದತ್ತಿಯನ್ನು ನೀಡಿರುವ ವಿಷಯ ಹರಿಹರದ ಶಾಸನದಲ್ಲಿದೆ.[೬] ತಡಿಮಾಲಿಂಗಿಯ ಶಾಸನದಲ್ಲಿ 'ನಾಗರ ಕಂನಡ ತಿಗುಳಾರ್ಯವನೋದಿಸುವ ಬಾಲಶಿಕ್ಷೆ ಉಪಾದ್ಯರ ಜೀವಿತಕ್ಕೆ ವರ್ಷ ೧ಕ್ಕೆ ಗದ್ಯಾಣಂ ಆರು'[೭] ಎಂಬ ಮಾತು ಬರುತ್ತದೆ. ಈ ಶಾಸನದಲ್ಲಿ ಉಕ್ತವಾಗಿರುವ ಲಿಪಿಗಳ ಕಲಿಸುವಿಕೆಯ ಬಗ್ಗೆ ಬರೆಯುತ್ತಾ 'ಹಳೇಬೀಡು ಪುರಾತನ ಚರಿತ್ರೆ'ಯನ್ನು ಉದಾಹರಿಸಿ ಜಿ.ಎಸ್. ದೀಕ್ಷಿತ್ ಅವರು ಸಂಸ್ಕೃತ, ಕನ್ನಡ, ತಮಿಳು ಮತ್ತು ಮರಾಠಿ ಲಿಪಿಗಳನ್ನು ಕಲಿಸುತ್ತಿದ್ದುದನ್ನು ಸೂಚಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.[೮]

ಪ್ರಾಥಮಿಕ ವಿದ್ಯಾಭ್ಯಾಸ ಬಹುಮಟ್ಟಿಗೆ ಅಕ್ಷರಾಭ್ಯಾಸ, ಪ್ರಾಥಮಿಕ ವ್ಯಾಕರಣಾಂಶಗಳು ಮತ್ತು ವೇದಗಳ ಬಾಯಿಪಾಠ ಮತ್ತು ಕೆಲವು ಪ್ರಾರಂಭಿಕ ವಿಷಯಗಳನ್ನು ಒಳಗೊಂಡಿತ್ತೆಂದು ಭಾವಿಸಬಹುದು. ವಿದ್ಯಾರ್ಥಿಗಳು ತಪ್ಪು ಮಾಡಿದಾಗ ತಿದ್ದಲು ಕೆಲವು ಸಾರಿ ಓಜುಗಟ್ಟಿಗೆಯನ್ನು ಬಳಸುತ್ತಿದ್ದರೆಂದು ಬಸವಣ್ಣನವರ ಒಂದು ವಚನದ ಸೂಚನೆಯನ್ನನುಸರಿಸಿ ಊಹಿಸಬಹುದು.[೯]

---

೧. (ರೈ) ಎಕ V ಅರಸಿಕೆರೆ ೧೩೮ ಕ್ರಿ.ಶ. ೧೧೭೪.

೨. ಎಇ XIII ಗದಗು ೪ ಕ್ರಿ.ಶ. ೧೧೧೨.

೩. ಎಇ XXXVII ಭಾಗ IV ಸಿಂದಗಿ ಕ್ರಿ.ಶ. ೧೧೩೨.

೪. ರೂಪಾವತಾರ ಎಂಬ ವ್ಯಾಕರಣದ ಉಲ್ಲೇಖ ಇನ್ನೂ ಕೆಲವು ಕನ್ನಡ ಶಾಸನಗಳಲ್ಲಿ ದೊರೆಯುತ್ತದೆ. ( (ರೈ) ಎಕ XI ದಾವಣಗೆರೆ ೩೯ ಕ್ರಿ.ಶ. ೧೧೬೮) ಅದು ಧರ್ಮಕೀರ್ತಿಯೆಂಬ ಬೌದ್ಧ ಭಿಕ್ಷುವಿನಿಂದ ರಚಿತವಾಗಿದ್ದು, ಅಗ್ರಹಾರಗಳಲ್ಲಿಯೂ ಪಠ್ಯಪುಸ್ತಕದಂತೆ ಬಳಕೆಯಾಗುತ್ತಿದ್ದಿತು. ವಿದ್ಯಾಭ್ಯಾಸ ಧಾರ್ಮಿಕ ಮಿತಿಗಳನ್ನು ಮೀರಿ ಬೆಳೆದಿತ್ತು ಎನ್ನುವುದನ್ನು ಇದು ಸೂಚಿಸುತ್ತದೆ. ಆ ಗ್ರಂಥದ ಆರಂಭದಲ್ಲಿಯೇ ಅದು ಚಿಕ್ಕ ವಯಸ್ಸಿನವರಿಗೆ ಎಂದು ಗ್ರಂಥಕಾರ ಸ್ಪಷ್ಟಪಡಿಸಿದ್ದಾನೆ. ರೂಪಾವತಾರವನ್ನು ಸಂಪಾದಿಸಿರುವ ಎಂ. ರಂಗಾಚಾರ್ಯ ಅವರು ಅದು ೧೨ನೆಯ ಶತಮಾನದ ಉತ್ತರ ಭಾಗದಲ್ಲಿ ರಚಿತವಾದುದು ಎಂದಿದ್ದಾರೆ. ಆದರೆ ಪ್ರಸ್ತುತ ಶಾಸನ ಸಂಪುಟವನ್ನು ಸಂಪಾದಿಸಿರುವ ಡಾ. ಕೆ.ವಿ. ರಮೇಶ್ ಅವರು ಅದರ ಉಲ್ಲೇಖ ಕ್ರಿ.ಶ. ೧೧೩೨ರ ಶಾಸನದಲ್ಲಿಯೇ ಬಂದಿರುವುದರಿಂದ ಅದು ೧೧ನೆಯ ಶತಮಾನದ ಮಧ್ಯಭಾಗದಲ್ಲಿಯೇ ರಚಿತವಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ನೋಡಿ: ಎಇ XXXVII, ಪು. ೧೯೧.

೫. ಕಇ IV ಶಿಗ್ಗಾವ್ ೫೪ ಕ್ರಿ.ಶ. ೧೨೪೫.

೬. (ರೈ) ಎಕ XI ದಾವಣಗೆರೆ ೩೯ ಕ್ರಿ.ಶ. ೧೧೬೮.

೭. (ಮೈ) ಎಕ V ತಿ.ನರಸೀಪುರ ೨೩೮ ಕ್ರಿ.ಶ. ೧೨೯೦.

೮. ಜಿ.ಎಸ್. ದೀಕ್ಷಿತ್ : 'ಹಳೇಬೀಡು ಪುರಾತನ ಚರಿತ್ರೆ : ಪರಿಶೀಲನೆ' ಇ.ದ ೨-೧, ಪು. ೧೯.

೯. 'ಎಡದ ಕಯ್ಯಲು ಹಾಲ ಬಟ್ಟಲು ಬಲದ ಕೈಯಲು ಓಜುಗಟ್ಟಿಗೆ' ಬ.ವ. ೩೮೮.

**ಪ್ರೌಢ ವಿದ್ಯಾಭ್ಯಾಸ:**

ಪ್ರೌಢ ವಿದ್ಯಾಭ್ಯಾಸಕ್ಕೆ ಯಾವ ಸೌಲಭ್ಯಗಳು ಇದ್ದವು ಮತ್ತು ಅಧ್ಯಯನ ವಿಷಯಗಳು ಯಾವುವು ಎಂಬ ವಿಷಯವನ್ನು ಮುಂದೆ ಗಮನಿಸಬಹುದು. ವಿದ್ಯಾಭ್ಯಾಸಕ್ಕೆ ನೀಡಿದ ಕೆಲವು ದತ್ತಿಗಳಲ್ಲಿ 'ಭಟ್ಟ ವೃತ್ತಿ' ಮತ್ತು 'ಛಾತ್ರ ವೃತ್ತಿ' ಎಂಬ ಮಾತುಗಳು ಬಳಕೆಯಾಗಿವೆ. ಕನ್ನಡ ಶಾಸನಗಳಲ್ಲಿ ಬರುವ ಬಿಡಿ ಉಲ್ಲೇಖಗಳಿಂದ ಆ ಪದಗಳ ವಿವರಣೆಯನ್ನು ಸಮರ್ಥವಾಗಿ ಮಾಡುವುದು ಕಠಿಣವೇ ಆಗಿದ್ದಂತಿದೆ. ಭಟ್ಟ ವೃತ್ತಿಯ ಕೆಲವು ಉಲ್ಲೇಖಗಳನ್ನು ಗಮನಿಸಬಹುದು. ಗದಗಿನ ಒಂದು ಶಾಸನ ಬಾಯಿಕಬ್ಬೆ ಎಂಬುವವಳು ತಮ್ಮಯ್ಯನಾದ ಚಿದಣ್ಣನ ಗೌರವಾರ್ಥವಾಗಿ(?) ತೋಟದ ಗುತ್ತಿಗೆಯಿಂದ ಬಂದ ಹಣದಲ್ಲಿ ಭಟ್ಟವೃತ್ತಿ ಮತ್ತು ಛಾತ್ರ ವೃತ್ತಿಗಳನ್ನು ನಡೆಸುವಂತೆ ವ್ಯವಸ್ಥೆ ಮಾಡಿದಳೆಂದು ತಿಳಿಸುತ್ತದೆ.[೧] ಬ್ರಾಹ್ಮಣಪಲ್ಲಿಯ ಒಂದು ತಮಿಳು ಶಾಸನ ಭಟ್ಟವೃತ್ತಿಯಾಗಿ ಭೂಮಿಯನ್ನು ಸೋಮನಿಗೆ ಕೊಟ್ಟ ವಿಷಯವನ್ನು ತಿಳಿಸುತ್ತದೆ.[೨] ಬೇಗೂರಿನ ಕೇಶವದೇವರಿಗೆ ದಾನಕೊಟ್ಟ ನಂತರ ಕೆಲವು ವೃತ್ತಿಗಳಲ್ಲಿ 'ಭಟ್ಟವೃತ್ತಿಯೊಂದು ಖಂಡಿಕವೃತ್ತಿ...' ಇತ್ಯಾದಿಗಳಿಗೆ ನೀಡಲಾಗಿದೆ.[೩] ಹಳೇಬೀಡಿನ ಒಂದು ಶಾಸನದಲ್ಲಿ ಪೊಳಾಲುವದೇವ 'ಚ್ಛಾತ್ರಭಿಕ್ಷೆ'ಯ ಧರ್ಮಕ್ಕೆ ಬೀಜವೊನ್ನಾಗಿ ಕೊಟ್ಟ ಗದ್ಯಾಣ ೧ ಎಂದು ಬರುತ್ತದೆ.[೪] ಅದೇ ಶಾಸನ 'ಆ ದೇವರ ಭಂಡಾರಿ ರಾಮಣ್ಣ ಕೊಂಡ ಗದ್ಯಾಣಂ ನಾಲ್ಕು ೫ ಐದು ಹೊನ್ನಿನ ಬಡ್ಡಿಯಲು ವರ್ಷಂಪ್ರತಿ ಚ್ಛಾತ್ರ ಭಿಕ್ಷೆಯ ಬೇಡಿ ಬಂದ ಬ್ರಾಹ್ಮಣರಿಗೆ ಕೊಡುತ ಬಹರು' ಎಂದು ತಿಳಿಸುತ್ತದೆ. ಇದು ವಿದ್ಯಾರ್ಥಿಗಳು ಶಿಕ್ಷಣ ದತ್ತಿಗಳನ್ನು ಬಯಸಿ ಬರುತ್ತಿದ್ದರು ಎಂಬುದಕ್ಕೆ ಸೂಚನೆಯಾಗಿದೆ. ಮುತ್ತಗಿಯ ಶಾಸನ 'ಚಾತ್ರರಶನಾಚ್ಛಾದನ'ಕ್ಕೆ (ವಿದ್ಯಾರ್ಥಿಗಳ ಆಹಾರ ಮತ್ತು ವಸ್ತ್ರಗಳಿಗಾಗಿ) ವ್ಯವಸ್ಥೆ ಮಾಡಿರುವುದನ್ನು ತಿಳಿಸುತ್ತದೆ.[೫]

ಭಟ್ಟವೃತ್ತಿಯ ವಿವರಣೆಯನ್ನು ಎಂ. ಚಿದಾನಂದಮೂರ್ತಿಯವರು ಎಸ್. ಕೃಷ್ಣಸ್ವಾಮಿಯವರ ಗ್ರಂಥದಲ್ಲಿ ಕೊಟ್ಟಿರುವ ಚಿಂಗಲಪೇಟೆ ಜಿಲ್ಲೆಯ ಶಾಸನದ ಆಧಾರದಿಂದ ಮಾಡಿದ್ದಾರೆ.[೬] ಭಟ್ಟವೃತ್ತಿಯನ್ನು ಪಡೆಯುವ ವಿದ್ವಾಂಸ ವೇದಗಳು, ವ್ಯಾಕರಣ, ಅಲಂಕಾರ, ದರ್ಶನ ಮುಂತಾದವುಗಳಲ್ಲಿ ಪಾರಂಗತನಾಗಿದ್ದು ಅವನ್ನು ಸಮರ್ಥವಾಗಿ ಬೋಧಿಸುವ ಸಾಮರ್ಥ್ಯವನ್ನು ಪಡೆದಿರಬೇಕಿತ್ತು. 'ಪ್ರೌಢ ಉಪಾಧ್ಯಾಯರ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಭಟ್ಟವೃತ್ತಿ ಎಂದು ಕರೆದರೆ, ಪ್ರೌಢ ವಿದ್ಯಾರ್ಥಿಗಳ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಚಟ್ಟವೃತ್ತಿ ಎಂದು ಕರೆದಿದ್ದಾರೆ' ಎಂದು ಆ ಎರಡು ಪದಗಳಿಗೆ ಅವರು ವಿವರಣೆ ನೀಡಿದ್ದಾರೆ.[೭]

**ಅಧ್ಯಯನದ ವಿಷಯಗಳು:**

ಪ್ರಾಚೀನ ಕಾಲದ ಅನೇಕ ವಿದ್ವಾಂಸರನ್ನು ಕೀರ್ತಿಸುವಾಗ ಅವರು ಪಡೆದಿದ್ದ ವಿವಿಧ ವಿಷಯಗಳ ಜ್ಞಾನವನ್ನು ಶಾಸನಗಳು ಹೇಳಿವೆ. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳ ಉಲ್ಲೇಖ, ಇಡಿಯಾಗಿ ಚತುರ್ವೇದವೆಂದು

---

೧. ಎಸ್ಐಐ XVIII ಗದಗು ೩೪೦ ಕ್ರಿ.ಶ. ೧೧ ಶಮಾ.

೨. (ರೈ) ಎಕ X ಶ್ರೀನಿವಾಸಪುರ ೩೬ ಕ್ರಿ.ಶ. ೧೨೮೮.

೩. (ರೈ) ಎಕ VII ಶಿಕಾರಿಪುರ ೧೨೩ ಕ್ರಿ.ಶ. ೧೧೫೮.

೪. (ರೈ) ಎಕ V ಬೇಲೂರು ೧೦೪ ಕ್ರಿ.ಶ. ೧೨೮೦.

೫. ಎಸ್ಐಐ XV ಬಾಗೇವಾಡಿ ೧೦೪ ಕ್ರಿ.ಶ. ೧೧೬೫.

೬. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೨೯.

೭. ಅದೇ, ಪು. ೨೨೯. ಛಾತ್ರವೃತ್ತಿಗಳೇ ಚಟ್ಟವೃತ್ತಿ ಎಂಬ ರೂಪದಲ್ಲೂ ಬಳಕೆಯಾಗಿವೆ.

ಅಥವಾ ಬಿಡಿಬಿಡಿಯಾಗಿ ಹೆಸರಿಸಿ ಅಸಂಖ್ಯ ಶಾಸನಗಳಲ್ಲಿ ಬಂದಿದೆ. ಅದೇ ರೀತಿ ಅನೇಕ ಶಾಸನಗಳಲ್ಲಿ 'ವೈಶೇಷಿಕ ನಯ್ಯಾಯಿಕ ಲೋಕಾಯತ ಸಾಂಖ್ಯ ಬೌದ್ಧಾರ್ಹತಾನೇಕ ತರ್ಕ್ಕ ಬ್ಯಾಕರಣ ಶಾಸ್ತ್ರ'ಗಳ ವಿಶಾರದರ ವಿಷಯಗಳು ಬಂದಿವೆ.[೧] ವಿದ್ವಾಂಸರು ಪದಾರ್ಥ ವಾಕ್ಯಾರ್ಥ ಕೋವಿದರೂ ಆಗಿದ್ದರೆಂದು ಶಾಸನಗಳು ಹೇಳುತ್ತವೆ; 'ಸಕಳವ್ಯಾಕರಣಾರ್ತ್ತಶಾಸ್ತ್ರ ಸದಳಂಕಾರವು ಪೌರಾಣ ನಾಟಕ ಕಾವ್ಯ' ಮುಂತಾದವುಗಳು ಅವರ ಅಧ್ಯಯನ ವಿಷಯಗಳಾಗಿದ್ದವು.[೨] ದೇವಸ್ಥಾನ ಹಕ್ಕಲಿನ ಶಾಸನ ನಾಟಕ, ಇತಿಹಾಸ, ಮೀಮಾಂಸಾ, ಭರತ, ಗಣಿತ, ವಾಚ್ಯಾಯನಾದಿ (ವಾತ್ಸಾಯನಾದಿ) ಸಕಲಶಾಸ್ತ್ರ ಪ್ರವೀಣರೆಂದು ಅಗ್ರಹಾರದ ಬ್ರಾಹ್ಮಣರನ್ನು ಹೊಗಳಿದೆ.[೩] ವೇದಗಳನ್ನು ಭಾಗಗಳನ್ನಾಗಿ ಮಾಡಿಕೊಂಡು ಅಭ್ಯಾಸ ಮಾಡುತ್ತಿದ್ದುದನ್ನು ಖಂಡಿಕವೆಂದು ಕರೆಯುತ್ತಿದ್ದರು. ಕೆಲವು ಶಾಸನಗಳು ಈ ಖಂಡಿಕ ಅಭ್ಯಾಸಕ್ಕಾಗಿ ದತ್ತಿಗಳನ್ನು ನೀಡಿರುವುದನ್ನು ತಿಳಿಸುತ್ತವೆ. ಬೆಂಗಳೂರಿನ ಮ್ಯೂಸಿಯಮ್ಮಿನಲ್ಲಿರುವ ತಾಮ್ರಶಾಸನ ಒಂದರಲ್ಲಿ 'ಋಗ್ವೇದ ಖಂಡಿಕ ವೃತ್ತಿ ೧, ಯಜುರ್ವೇದ ಖಂಡಿಕ ವೃತ್ತಿ ೧, ಸಾಮವೇದ ಖಂಡಿಕ ವೃತ್ತಿ ೧' ಎಂದು ತಿಳಿಸುತ್ತದೆ.[೪] ಕೆಲವು ಶಾಸನಗಳಲ್ಲಿ ಸರ್ವಶಾಸ್ತ್ರದುಪಾಧ್ಯಾಯರಿಗೆ[೫] ದತ್ತಿಗಳನ್ನು ನೀಡಲಾಗಿದೆ. 'ಸರ್ವಶಾಸ್ತ್ರ' ಪದದ ಅರ್ಥವ್ಯಾಪ್ತಿ ಸ್ಪಷ್ಟವಾಗುವುದಿಲ್ಲ.

ಮಹಾಕಾವ್ಯಗಳಾದ ರಾಮಾಯಣ ಮಹಾಭಾರತಗಳು ಮತ್ತು ಮನುಧರ್ಮಶಾಸ್ತ್ರ ಅಧ್ಯಯನ ವಿಷಯಗಳಾಗಿದ್ದವು.[೬] ವ್ಯಾಕರಣಗಳಲ್ಲಿ ಪ್ರಾಥಮಿಕ ಹಂತಕ್ಕೆ ರೂಪಾವತಾರ, ಪ್ರೌಢ ಹಂತಗಳಿಗೆ ಕೌಮಾರ,[೭] ಶಾಕಟಾಯನ, ಪಾಣಿನಿ, ಶಬ್ದಾನುಶಾಸನಾದಿ ವ್ಯಾಕರಣಗಳು ಬಳಕೆಯಾಗುತ್ತಿದ್ದವು. ಬಳ್ಳಿಗಾವೆಯ ಶಾಸನ ಒಂದರಲ್ಲಿ ವಾಮಶಕ್ತಿಯನ್ನು ವರ್ಣಿಸುವಾಗ 'ಶಬ್ದೇ ಪಾಣಿನಿ ಪಂಡಿತೋ ನಯಚಯೇ ಶ್ರೀ ಭೂಷಣಾಚಾರ್ಯಕಃ ನಾಟ್ಯಾದೌ ಭರತೇಮುನಿಶ್ಚ ಭರತಃ ಕಾವ್ಯೇಷು ಮಾಘಃ ಸ್ವಯಂಸಿದ್ಧಾನ್ತೇ ಲಕುಲೀಶ್ವರಃ ಶಿವಪದೇಸ್ಕಂದಃ...' ಎಂದಿದೆ.[೮] ಬಳ್ಳಿಗಾವೆಯ ಇನ್ನೊಂದು ಶಾಸನ ಷಡುದರ್ಶನಗಳನ್ನು, ಪಾತಂಜಲಾದಿಯೋಗ ಶಾಸ್ತ್ರಗಳನ್ನು, ಅಷ್ಟಾದಶಪುರಾಣ ಮುಂತಾದುವನ್ನು ಹೆಸರಿಸುತ್ತದೆ.[೯] ಬಸವಣ್ಣನವರ ಒಂದು ವಚನ ಸುಮಾರು ಅರವತ್ತಕ್ಕೂ ಮೇಲ್ಪಟ್ಟು ವಿವಿಧ ವಿದ್ಯೆಗಳ ಪಟ್ಟಿಯನ್ನು ಕೊಡುತ್ತದೆ.[೧೦]

ಶಾಸನಗಳಲ್ಲಿ ಕಂಡುಬರುವ ಅಧ್ಯಯನ ವಿಷಯಗಳು ಬೆರಗುಗೊಳಿಸುವಷ್ಟು ವೈವಿಧ್ಯಮಯವಾಗಿವೆ. ಅವೆಲ್ಲವುಗಳ ವಿವರವಾದ ಚರ್ಚೆ ನಮ್ಮ ಅಧ್ಯಯನ ವ್ಯಾಪ್ತಿಯನ್ನು ಮೀರಿದ್ದೆಂದು ಭಾವಿಸಬೇಕಾಗಿದೆ. ಮೇಲಿನ ಅಧ್ಯಯನ ವಿಷಯಗಳ ಒಂದು ನೋಟವೇ ಕನ್ನಡನಾಡಿನಲ್ಲಿ ಆಗ ಇದ್ದ ಅಧ್ಯಯನದ ವಿಷಯ ವೈವಿಧ್ಯವನ್ನೂ ವ್ಯಾಪ್ತಿಯನ್ನೂ ಸ್ಥೂಲವಾಗಿ ತಿಳಿಸಬಲ್ಲದು.

---

೧. ಕಸಾಪಪ (ಲೇಖನ) ೨೮-೧ ಹಾನಗಲ್ಲು ಕ್ರಿ.ಶ. ೧೨೩೮.

೨. (ರೈ) ಎಕ V ಅರಸಿಕೆರೆ ೩೮ ಕ್ರಿ.ಶ. ೧೨೦೦.

೩. (ರೈ) ಎಕ VIII ಸೊರಬ ೨೭೬ ಕ್ರಿ.ಶ. ೧೨೧೫.

೪. (ರೈ) ಎಕ IX ಬೆಂಗಳೂರು ೬ ಕ್ರಿ.ಶ. ೧೨೫೩.

೫. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೬. ಎಇ XVIII ೨೧೨ ಕ್ರಿ.ಶ. ೧೧೬೨.

೭. ಎಇ V ಬಾಗೇವಾಡಿ ೩೭ ಕ್ರಿ.ಶ. ೧೧೬೧.

೮. (ರೈ) ಎಕ VII ಶಿಕಾರಿಪುರ ೯೬ ಕ್ರಿ.ಶ. ೧೧೭೯.

೯. (ರೈ) ಎಕ VII ಶಿಕಾರಿಪುರ ೧೦೨ ಕ್ರಿ.ಶ. ೧೧೬೨.

೧೦. ಬ.ವ. ೧೧೧೧. ೬೪ ವಿದ್ಯೆ ಅಥವಾ ಕಲೆಗಳ ವಿಷಯದಲ್ಲಿ ಏಕಾಭಿಪ್ರಾಯವಿಲ್ಲ. ಸಂಖ್ಯೆಯ ವಿಷಯವೂ ಭಿನ್ನವಾಗಿದೆ. ನೋಡಿ: ಮ. ಶ್ರೀಧರಮೂರ್ತಿ: ೬೪ ಕಲೆಗಳು ಅನುಬಂಧ ಪು. ೫೬-೬೮.

ರಾಜಕುಮಾರರಿಗೆ ಯಾವ ರೀತಿಯ ವಿದ್ಯಾಭ್ಯಾಸ ನಡೆಯುತ್ತಿತ್ತು ಎನ್ನುವುದು ಶಾಸನಗಳಿಂದ ಖಚಿತವಾಗಿ ತಿಳಿದು ಬರುವುದಿಲ್ಲ. ಅವರ ವೃತ್ತಿಯ ದೃಷ್ಟಿಯಿಂದ ಅಗತ್ಯವಾದ ಶಸ್ತ್ರಾಸ್ತ್ರ ವಿದ್ಯೆ, ಆಡಳಿತಾತ್ಮಕ ವಿಷಯಗಳು, ನ್ಯಾಯಶಾಸ್ತ್ರ, ಅರ್ಥಶಾಸ್ತ್ರ, ಸಾಹಿತ್ಯಕಲೆ ಮುಂತಾದವನ್ನು ಕಲಿಸುತ್ತಿದ್ದರೆಂದು ಭಾವಿಸಬಹುದು. ಅನೇಕ ರಾಜರು ಗಜಶಾಸ್ತ್ರ, ಅಶ್ವಶಾಸ್ತ್ರ ಮುಂತಾದವನ್ನು ಬಲ್ಲವರಾಗಿದ್ದರು. ಬಲ್ಲಾಳನ ಶೌರ್ಯವನ್ನು ಹೊಗಳುವಾಗ ತನ್ನ ಒಂದು ಆನೆಯ ಬಲದಿಂದ ಅಪಾರ ಸಂಖ್ಯೆಯಲ್ಲಿದ್ದ ಸೇವುಣರ ಬಲವನ್ನು ನಾಶಪಡಿಸಿದನೆಂದು ಕೆಲವು ಶಾಸನಗಳು ತಿಳಿಸುತ್ತವೆ.[೧] ಇದನ್ನು ನೋಡಿದರೆ ಗಜಶಾಸ್ತ್ರದಲ್ಲಿ ಬಲ್ಲಾಳನಿಗೆ ಪರಿಣತಿ ಇದ್ದಿತೆಂದು ಭಾವಿಸಬಹುದು. ಕಲ್ಯಾಣಿ ಚಾಳುಕ್ಯರ ಸಾಮಂತರಾಜನಾದ ವೀರಪಾಂಡ್ಯ ಶಸ್ತ್ರ ಶಾಸ್ತ್ರಗಳಲ್ಲಿ ಪರಿಣತನಾಗಿದ್ದನು.

> ತುರಗಾರೋಹಣವಿದ್ದೆಗೋಜನೆನಿಪಂ ರೇವನ್ತದೇವಂಗೆ ಸ
> ದ್ಗುರುವೆನ್ದುಂ ಭೃಗುವಿಂಗೆ ಶಸ್ತ್ರಕಳೆಯೊಳು ಶಾಸ್ತ್ರಾಗಮಜ್ಞಾನದೊಳು
> ಪಿರಿಯಂ ಪದ್ಮಭವಂಗೆ ದುಷ್ಟಗಜ ಶಿಕ್ಷಾಚಾರ್ಯ್ಯನಿಂದ್ರಂಗೆ ನಲು
> ದೊರೆಯಾರ್ಬ್ಭೂಪತಿ ವೀರಪಾಂಡ್ಯ ನಿನಗೀ ವಿಶ್ವಂಭರಾಚಕ್ರದೊಳು॥[೨]

ತುರಗಾರೋಹಣ ವಿದ್ಯೆಯಲ್ಲಿ ರೇವಂತನಿಗೇ ಗುರುವೆಂದೂ ಶಸ್ತ್ರಕಳೆಯಲ್ಲಿ ಭೃಗುವಿಗೇ ಸದ್ಗುರುವೆಂದೂ ಶಾಸ್ತ್ರಾಗಮಜ್ಞಾನದಲ್ಲಿ ಬ್ರಹ್ಮನಿಗೂ ಹಿರಿಯನೆಂದೂ ದುಷ್ಟಗಜಗಳಿಗೆ ಶಿಕ್ಷಣ ನೀಡುವುದರಲ್ಲಿ ಇಂದ್ರನಿಗೇ ಆಚಾರ್ಯನೆಂದು ವೀರಪಾಂಡ್ಯನನ್ನು ಕೀರ್ತಿಸಲಾಗಿದೆ.

ವಿಷ್ಣುವರ್ಧನನು ಖಡ್ಗವಿದ್ಯೆಯಲ್ಲಿ ಅಸಾಧಾರಣಪರಿಣತನಾಗಿದ್ದನೆಂದು ಕೆಲವು ಶಾಸನಗಳು ತಿಳಿಸುತ್ತವೆ.[೩] ರನ್ನುಗಿದೇವನೆಂಬ ಅಧಿಕಾರಿಯೊಬ್ಬನನ್ನು 'ತುರಗಾರೋಹಣಕೋವಿದ'[೪]ನೆಂದು ಒಂದು ಶಾಸನ ವರ್ಣಿಸುತ್ತದೆ. ಕೆಲವು ಶಾಸನಗಳಲ್ಲಿ ಬತ್ತೀಸಾಯುಧಗಳ ಉಲ್ಲೇಖ ಬರುತ್ತದೆ. ಒಂದು ಶಾಸನದಲ್ಲಿ ೩೨ ಆಯುಧದಲು ಪರಿಣತರುಂ ಎಂಬ ಮಾತು ಬರುತ್ತದೆ.[೫] ಈ ಆಯುಧಗಳು ಯಾವುವು ಎಂಬ ವಿಷಯದಲ್ಲಿ ಏಕಾಭಿಪ್ರಾಯವಿಲ್ಲ.

ರಾಜರು ಶಸ್ತ್ರಗಳನ್ನು ಕಲಿಯುತ್ತಿದ್ದಂತೆ ಅನೇಕ ಶಾಸ್ತ್ರಗಳನ್ನೂ ಕಲಿತಿರುತ್ತಿದ್ದರು. ಈಶ್ವರ ದೇವನೆಂಬುವವನು 'ಅರಸಂಗೆ ನೃಸಿಂಹಂಗಕ್ಕರಮುಂ ಲೆಕ್ಕಮುಮನೋಜೆಯಿಂ ತಿಳಿಪಿ ಕಳಾಪರಿಣತೆಯಂ ಮೆಱಿದು ಚಮೂವರರೊಳು ಸಮನಾಗಿ ಸಂದನೀಶ್ವರಂ'[೬] ಎಂದಿದೆ. ಹೊಯ್ಸಳದೊರೆ ಈಶ್ವರದೇವನಿಂದ ಅಕ್ಷರಗಳನ್ನು ಮತ್ತು ಲೆಕ್ಕಶಾಸ್ತ್ರಗಳನ್ನು ಕಲಿತನೆಂದು ಈ ಶಾಸನ ತಿಳಿಸುತ್ತದೆ. ಬಂಮಭೂಪಾಲನೆಂಬುವನು ನಯಶಾಸ್ತ್ರವಿಶಾರದನಾಗಿದ್ದನೆಂದು ಸಾತೇನಹಳ್ಳಿಯ ಶಾಸನ ತಿಳಿಸುತ್ತದೆ.[೭] ನಯಶಾಸ್ತ್ರವೆಂದರೆ ರಾಜನೀತಿಶಾಸ್ತ್ರವಾಗಿದ್ದು ರಾಜರಿಗೆ, ಮಂತ್ರಿ ಮುಂತಾದವರಿಗೆ ಇದರ ಜ್ಞಾನ ತುಂಬ ಅಗತ್ಯವಾಗಿತ್ತು.

---

೧. ಎಸ್‌ಐಐ IX(i) ಹಡಗಲಿ ೩೪೦ ಕ್ರಿ.ಶ. ೧೨೨೪; (ರೈ) ಎಕ VIII ಸೊರಬ ೧೪೦ ಕ್ರಿ.ಶ. ೧೧೯೮.

೨. ಎಸ್‌ಐಐ IX(i) ಹರಪನಹಳ್ಳಿ ೨೬೭ ಕ್ರಿ.ಶ. ೧೧೬೦.

೩. (ರೈ) ಎಕ V ನಾಗಮಂಗಲ ೧೨೭ ಕ್ರಿ.ಶ. ೧೧೪೫.

೪. ಕಇ V ಹಾನಗಲ್ಲು ೪೨ ಕ್ರಿ.ಶ. ೧೨೩೯.

೫. (ರೈ) ಎಕ VII ಮತ್ತು VIII (ಪೂರಕ ಸಂಪುಟ) ಸೊರಬ ೫೮೬ ಕ್ರಿ.ಶ. ೧೨೦೧. ಆಯುಧಗಳ ವಿವರಗಳಿಗ ನೋಡಿ, ಶ್ರೀವತ್ಸ ನಿಘಂಟು, ಪು. ೫೫-೫೬ ಮತ್ತು ಕ.ಕ. ನಿಘಂಟು VI ಪು. ೬೨೩೦.

೬. (ರೈ) ಎಕ V ಚನ್ನರಾಯಪಟ್ಟಣ ೨೦೩ ಕ್ರಿ.ಶ. ೧೨೨೩.

೭. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

ಮಂತ್ರಿಗಳಾಗಿದ್ದವರು ತುಂಬ ವಿದ್ಯಾವಂತರಾಗಿರುತ್ತಿದ್ದರು. ಎರಡನೆಯ ಬಲ್ಲಾಳನ ಮಂತ್ರಿ ಚಂದ್ರಮೌಳಿಯನ್ನು ಒಂದು ಶಾಸನ 'ವರತರ್ಕಾಂಬುಜ ಭಾಸ್ಕರಂ ಭರತಶಾಸ್ತ್ರಾಂಬೋಧಿ ಚಂದ್ರಂ ಸಮುದ್ದುರ ಸಾಹಿತ್ಯ ಲತಾವಾಲನೆಸೆದಂ ನಾನಾ ಕೋವಿದಂ ಸ್ಥಿರ ಮಂತ್ರಂ...' ಎಂದು ವರ್ಣಿಸುತ್ತದೆ.[೧] ಯಾದವ ಸಿಂಘಣನ ಅಧಿಕಾರಿ ಕಲಿದೇವ ಠಕ್ಕುರನನ್ನು ಒಂದು ಶಾಸನ 'ತುರಗಾರೋಹಣ ಕೋವಿದ'ನೆಂದು ಕರೆದಿದೆ.[೨] ಬೊಂಮ ಎನ್ನುವವನನ್ನು ವರ್ಣಿಸುವ ಒಂದು ಪದ್ಯದಲ್ಲಿ ಅವನು 'ವಾರವಿಳಾಸಿನಿಯರಿಗೆ ಮನ್ಮಥನಂತೆಯೂ, ಶತ್ರುಗಳ ಕಣ್ಣಿಗೆ ಯಮನಂತೆಯೂ, ಬೇಡುವ ಜನರಿಗೆ ಕಲ್ಪವೃಕ್ಷದಂತೆಯೂ ಕಾಣುವ ಅವನು ಹೇಗೆ ಬಹುರೂಪಿಣಿ ಎಂಬ ವಿದ್ಯೆಯನ್ನು ಸಾಧಿಸಿದನೆಂಬ' ಆಶ್ಚರ್ಯ ಸೂಚನೆ ಇದೆ.[೩] ಶಾಸನಗಳಲ್ಲಿ ಶಸ್ತ್ರಾಸ್ತ್ರಗಳ ವಿದ್ಯೆಗೆ ಸಂಬಂಧಿಸಿದಂತೆ ಹೆಚ್ಚು ವಿವರಗಳು ತಿಳಿದುಬರುವುದಿಲ್ಲ. ಆದರೂ ಕೆಲವು ವಿದ್ಯೆಯನ್ನು ಕಲಿತವರ ಉಲ್ಲೇಖಗಳಿಂದ ಆ ವಿದ್ಯಾಭ್ಯಾಸ ನಡೆಯುತ್ತಿದ್ದಿತು ಎಂದು ಪರೋಕ್ಷವಾಗಿ ಗ್ರಹಿಸಬಹುದು.

**ಇತರ ಕೆಲವು ವಿದ್ಯೆಗಳು:**

ಬೇರೆ ಬೇರೆ ಕೆಲವು ವೃತ್ತಿಗಳಿಗೆ ಅಗತ್ಯವಾದ ವೃತ್ತಿ ಶಿಕ್ಷಣ ಜನರಿಗೆ ಹೇಗೆ ದೊರೆಯುತ್ತಿತ್ತು ಎಂಬ ವಿಷಯದಲ್ಲಿ ಶಾಸನಗಳು ನೇರವಾಗಿ ಹೇಳದೇ ಹೋದರೂ ಅದರ ಬಗ್ಗೆ ಅಲ್ಲಲ್ಲೇ ಸುಳಿವುಗಳನ್ನು ನೀಡುತ್ತವೆ. ಸಾಮಾನ್ಯವಾಗಿ ಅನೇಕ ಕಸುಬುಗಳು ವಂಶಪಾರಂಪರ್ಯವಾಗಿ ಮುಂದುವರಿಯುತ್ತಿದ್ದವು. ತಂದೆಯು ಮಗನನ್ನು ತನ್ನ ಜೊತೆಯಲ್ಲಿಟ್ಟುಕೊಂಡು ಕೆಲಸ ಮಾಡುತ್ತಿದ್ದ. ಹೀಗಾಗಿ ಮಗನಿಗೆ ಕಲಿಕೆ ಮತ್ತು ಮಾಡುವಿಕೆ ಜೊತೆಜೊತೆಯಲ್ಲೇ ನಡೆಯುತ್ತಿತ್ತು.[೪] ಇದನ್ನೇ ಆಲ್ಟೇಕರರು ತಮ್ಮ ಗ್ರಂಥದಲ್ಲಿ ಗೃಹ ಶಿಕ್ಷಣ ಮತ್ತು ಅಭ್ಯಾಸಿ ವ್ಯವಸ್ಥೆಗಳೇ ಸಾಮಾನ್ಯ ಪದ್ಧತಿಗಳಾಗಿದ್ದು ಮುಂದಿನ ತಲೆಮಾರಿಗೆ ಕೊಡುತ್ತಿದ್ದ ಶಿಕ್ಷಣಗಳೆಂದು ಕರೆದಿದ್ದಾರೆ.[೫] ಈ ಶಿಕ್ಷಣಕ್ರಮ ಬಹುಮಟ್ಟಿಗೆ ಶಿಲ್ಪ, ನೆಯ್ಗೆ, ಬಡಗಿ, ಗಣಿ, ಚಿನಿವಾರಿಕೆ, ಕುಂಬಾರಿಕೆ, ಕಮ್ಮಾರಿಕೆ, ವ್ಯಾಪಾರ[೬] ಮುಂತಾದ ವೃತ್ತಿಗಳಿಗೆ ಅನ್ವಯಿಸುತ್ತಿತ್ತು. ವೈದ್ಯ ವೃತ್ತಿಯೂ ಬಹುಶಃ ವಂಶಪಾರಂಪರ್ಯವಾಗಿ ಬಂದಿದ್ದು ಅದೂ ಕೂಡ ಮೇಲೆ ಸೂಚಿಸಿದ ರೀತಿಯಲ್ಲೇ ಬೆಳೆದು ಬಂದಿರಬೇಕು. ವೈದ್ಯನಾದ ದೇವಪಿಳ್ಳೆಯಣ್ಣ ಎಂಬುವವನನ್ನು 'ನೋಡೆ ಧನ್ವಂತರಿವೋಲ್' ಎಂದು ಕೀರ್ತಿಸಲಾಗಿದೆ.[೭] ಬಹಳಷ್ಟು ವೃತ್ತಿಗಳಿಗೆ ಮನೆಗಳೇ ಶಿಕ್ಷಣ ಕೇಂದ್ರಗಳಾಗಿರುತ್ತಿದ್ದವು; ತಂದೆಯೇ ಗುರುವಾಗಿರುತ್ತಿದ್ದನು. ಸಾಮಾನ್ಯವಾಗಿ ವೃತ್ತಿಕಾರ ತನ್ನ ತಂದೆಯ ಹೆಸರು ಹೇಳಿ ಅನಂತರ ತನ್ನ ಹೆಸರು ಹೇಳಿಕೊಂಡರೆ ಅಂಥ ಕಡೆಗಳಲ್ಲಿ ತಂದೆಯ ಬಳಿ ಶಿಕ್ಷಣ ಪಡೆದವನು ಎಂದು ಭಾವಿಸಬಹುದು. ಆದರೆ ಎಲ್ಲ ಸಂದರ್ಭಗಳಲ್ಲಿ ತಂದೆಯ ಬಳಿಯೇ ಶಿಕ್ಷಣ ಲಭಿಸುತ್ತಿತ್ತು ಎಂದು ಹೇಳುವಂತೆಯೂ ಇಲ್ಲ. ಕೆಲವು ಸಾರಿ ಮನೆಯಲ್ಲಿ ಪಡೆದ ಶಿಕ್ಷಣ ಸಾಲದೆ ಹೊರಗಿನ ಪರಿಣತರ ಬಳಿಯೂ ಶಿಕ್ಷಣ ಪಡೆದಿರುವ ಸಾಧ್ಯತೆ ಇರುತ್ತದೆ. ಹೊರಗಿನ ಪರಿಣತ ಗುರುವಿನ ಬಳಿ ಶಿಕ್ಷಣ ಪಡೆದ ವೃತ್ತಿಗಾರ ಗುರುವಿನ ಹೆಸರು ಹೇಳಿ ಅನಂತರ ತನ್ನ ಹೆಸರನ್ನು ಹೇಳಿಕೊಂಡಿರುತ್ತಾನೆ.

---

೧. (ಮೈ) ಎಕ II ಶ್ರವಣಬೆಳಗೊಳ ೪೪೪ ಕ್ರಿ.ಶ. ೧೧೮೧.

೨. ಕಸಾಪಪ (ಲೇಖನ) ೨೮-೧ ಹಾನಗಲ್ಲು ಕ್ರಿ.ಶ. ೧೨೩೮.

೩. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪. ಒಬ್ಬ ವ್ಯಕ್ತಿ ಬೇರೆ ಬೇರೆ ವೇಷಗಳನ್ನು ಹಾಕಿ ಜನಗಳ ಮನರಂಜನೆ ಮಾಡಿ ಸಂಪಾದಿಸುತ್ತಿದ್ದ ಒಂದು ವೃತ್ತಿ. ವಿವರಗಳಿಗೆ ನೋಡಿ: ಪಿ.ವಿ. ನಾರಾಯಣ : ವಚನ ಸಾಹಿತ್ಯ -ಒಂದು ಸಾಂಸ್ಕೃತಿಕ ಅಧ್ಯಯನ, ಪು. ೩೧೨-೩೧೫.

೪. K.A.N. Shastri : History of South India ಪು. ೩೨೧.

೫. A.S. Altekar : ಪೂರ್ವೋಕ್ತ ಪು. ೧೯೫.

೬. ಶಿವಭಕ್ತನಾದ ಆದಯ್ಯನಿಗೆ ಅವನ ತಂದೆ ವರ್ತಕತನದ ಕೆಲವು ವಿಷಯಗಳನ್ನು ತಿಳಿಸಿದ ವಿಷಯವನ್ನು ಆದಯ್ಯನ ರಗಳೆಯಲ್ಲಿ ಹರಿಹರ ಚಿತ್ರಿಸಿದ್ದಾನೆ.

೭. (ರೈ) ಎಕ V ಅರಸಿಕೆರೆ ೯ ಕ್ರಿ.ಶ. ೧೨೮೬.

ತಂದೆಯಿಂದ ಮಗ ಶಿಕ್ಷಣ ಕಲಿತಿದ್ದ ಸಂದರ್ಭದಲ್ಲಿ ತಂದೆಯ ಹೆಸರು ಹೇಳಿ, ತನ್ನ ಹೆಸರು ಹೇಳಿರುವುದುಂಟು. ಉದಾಹರಣೆಗೆ ಒಂದು ಶಾಸನದ ಕೊನೆಯ ಭಾಗದಲ್ಲಿ 'ಬರೆದಾತ ಸೇನಭೋವ ಕೇಶಿಯಂಣ್ಣಗಳ ಮಗ ಸಿಂಗಣ್ಣ ಮಂಗಳಮಹಾಶ್ರೀ'[೧] ಎಂದು ಬಂದಿದೆ. ತಂದೆಯಲ್ಲದೆ ಅಣ್ಣ ಅಥವಾ ಅನ್ಯ ಹಿರಿಯರಿಂದ ಕಲಿತಿದ್ದರೆ ಅವರನ್ನು ಮೊದಲು ಹೇಳುವುದುಂಟು. 'ಶ್ರೀ ಬೆಳ್ಗೊಳದ ಹೊಯ್ಸಳಾಚಾರಿಯ ತಮ್ಮಂ ವೈಚೋಜಂ ಗೆಯ್ದ ಸಾಸನ'[೨] ಎಂದು ಒಂದು ಶಾಸನದಲ್ಲಿ ಹೇಳಿದೆ.

ಗುರುವಿನಿಂದ ಶಿಕ್ಷಣ ಪಡೆದ ಸಂದರ್ಭದಲ್ಲಿ ಗುರುವಿನ ಹೆಸರನ್ನು ಹೇಳಿದನಂತರ ಶಿಷ್ಯನ ಹೆಸರನ್ನು ಹೇಳಲಾಗುವುದು. ಅಮೃತಾಪುರದ ಶಾಸನವನ್ನು ಬರೆದವನು 'ಲೊಕ್ಕಿಗುಂಡಿಯ ಮಹದೇವಂಣ್ಣಗಳ ಶಿಷ್ಯ ನಾಕಣ್ಣ'[೩]. ಇಂಥ ಕಡೆ, ಬರಹವನ್ನು ನಾಕಣ್ಣ ಮಹದೇವಣ್ಣನಿಂದ ಕಲಿತದ್ದು ಎಂಬುದು ಸ್ಪಷ್ಟ. ಕಾಗಿನೆಲ್ಲಿಯ ಕಂಬದ ಮೇಲೆ ಕೆತ್ತಿರುವ ಶಾಸನದಲ್ಲಿ 'ರೂವಾರಿ ಚಾವನ ಛಾತ್ರಂ ರೂವಾರಿ ಕೊಮ್ಮಂ ಬಿರುದ ರೂವಾರಿ ಭೈರವಂ' ಎಂದಿದೆ.[೪] ಇಲ್ಲಿ ರೂವಾರಿ ಚಾವನ ಬಳಿ ಶಿಷ್ಯನಾಗಿ ಕೊಮ್ಮ ರೂವಾರಿಕೆಯನ್ನು ಕಲಿತನೆಂದು ಸಹಜವಾಗಿ ಭಾವಿಸಬಹುದು. ಕೊಳೂರಿನ ಶಾಸನದ ಕೊನೆಯಲ್ಲಿ 'ಕೇತಮಲ್ಲನೋದಿಸಿದ ಉಪಾಧ್ಯಾಯಂ ಮಾಳಪಯ್ಯ ಬರೆದ ಬೆಸಗೆ'[೫] ಎಂದು ಬಂದಿದೆ. ಇಲ್ಲಿಯೂ ಕೇತಮಲ್ಲನ ಬಳಿ ವಿದ್ಯಾಭ್ಯಾಸ ಮಾಡಿದ ಉಪಾಧ್ಯಾಯ ವೃತ್ತಿಯಲ್ಲಿದ್ದ ಮಾಳಪಯ್ಯ ಬರೆದ ಬರೆಹ ಎಂದು ಭಾವಿಸಬೇಕು.

ಆರ್.ಕೆ. ಮುಖರ್ಜಿಯವರು ಹೇಳುವಂತೆ ಯಾವುದೇ ಯುವಕ, ಉದ್ಯೋಗವನ್ನು ಕಲಿಯುವ ಮೊದಲು ತನ್ನ ಹಿರಿಯರ ಅಪ್ಪಣೆ ಪಡೆದುಕೊಳ್ಳಬೇಕು. ಅನಂತರ ಗುರುವಿನ ಬಳಿ ವಿದ್ಯಾಭ್ಯಾಸಕ್ಕೆ ನಿಂತ ಮೇಲೆ ಗೊತ್ತುಪಡಿಸಿದ ನಿರ್ದಿಷ್ಟ ಕಾಲದವರೆಗೆ ಕಲಿಯಬೇಕಿತ್ತು; ಅವಧಿಗೆ ಮೊದಲೇ ಬಿಟ್ಟು ಹೋಗುವಂತಿರಲಿಲ್ಲ. ಅಲ್ಲದೆ ಕಲಿಯುವ ದಿನಗಳಲ್ಲಿ ನಿರ್ಮಿಸಿದ ವಸ್ತುಗಳೆಲ್ಲವೂ ಗುರುವಿಗೇ ಸೇರುತ್ತಿದ್ದವು. ಅನಂತರ ತನ್ನ ಶಕ್ತ್ಯಾನುಸಾರ ಗುರುದಕ್ಷಿಣೆ ನೀಡಿ ಅಲ್ಲಿಂದ ತೆರಳಬೇಕಿತ್ತು. ಇಚ್ಛೆಪಟ್ಟರೆ ಗುರುವಿನ ಬಳಿಯೇ (ಸಂಬಳ ಸಹಿತ) ಉದ್ಯೋಗಕ್ಕೆ ನಿಲ್ಲಬಹುದಿತ್ತು.[೬]

ಶಿಲ್ಪಿಗಳಾಗಲಿ ಕಲಾಕಾರರಾಗಲಿ ಅನಕ್ಷರಸ್ಥರಾಗಿರುವ ಸಾಧ್ಯತೆ ಇಲ್ಲ. ಏಕೆಂದರೆ ರಾಮಾಯಣ, ಮಹಾಭಾರತ ಮತ್ತು ಬೇರೆ ಬೇರೆ ಧರ್ಮಗಳ ಪುರಾಣ ಪ್ರಸಂಗಗಳನ್ನು ಶಿಲೆಯಲ್ಲಿ ಮೂಡಿಸಬೇಕಾದರೆ ಸಾಹಿತ್ಯಜ್ಞಾನ ಅಗತ್ಯವಾಗಿ ಬೇಕಾಗಿತ್ತು. 'ಮೊದಲಿಂದಂ ಕಳಶಂಬರಂ ಮೆರೆವ ನಾನಾ ಚಿತ್ರಪತ್ರಂಗಳಿಂ ಮುದದಿಂ ಬೀರುವ ಭಾರತಾದಿ ಕಥೆಯಂ ಮೆಯ್ವೆತ್ತ ಕೂಟಂಗಳಿಂ'[೭] ಎಂದು ಹೇಳುವ ಶಾಸನ ಭಾಗವೊಂದರಲ್ಲಿ ಶಿಲೆಯಲ್ಲಿ ಮಹಾಭಾರತ ಮುಂತಾದ ಕತೆಗಳು ಮೂಡಿರುವುದನ್ನು ತಿಳಿಸುತ್ತದೆ. ಬೇಲೂರು, ಹಳೇಬಿಡು, ಸೋಮನಾಥಪುರ ಮುಂತಾದ ಸ್ಥಳಗಳ ದೇವಾಲಯಗಳಲ್ಲಿ ರಾಮಾಯಣ, ಮಹಾಭಾರತ, ಭಾಗವತ, ಪುರಾಣಗಳಿಂದ ಆಯ್ದು ನಿರ್ಮಿಸಿದ ಶಿಲ್ಪಸಮೂಹಗಳನ್ನು ಕಾಣಬಹುದಾಗಿದೆ. ಕಾವ್ಯ, ಪುರಾಣ ಮತ್ತು ಶಿಲ್ಪಶಾಸ್ತ್ರಾಧ್ಯಯನ ಶಿಲ್ಪಿಗಳಿಗೆ ಅತ್ಯಗತ್ಯವಾಗಿ ಬೇಕಾಗಿತ್ತು. ಕನ್ನಡದ ಪಂಪ ನೇಮಿಚಂದ್ರಾದಿ ಕವಿಗಳ ಕೃತಿಗಳಲ್ಲಿರುವ ಯಕ್ಷ -ಯಕ್ಷಿಯರ ಮೂರ್ತಿ ಲಕ್ಷಣವನ್ನು ಜಿನಬಸದಿಗಳ ಯಕ್ಷ-ಯಕ್ಷಿಯರ ಶಿಲಾಮೂರ್ತಿಗಳಲ್ಲಿ ಕಾಣಬಹುದೆಂದು ಎಸ್. ಶೆಟ್ಟರ್ ಸೂಚಿಸುತ್ತಾರೆ.[೮] ಈ ಕಾರಣದಿಂದ ಶಿಲ್ಪಿಗಳಿಗೆ ಕಾವ್ಯಶಾಸ್ತ್ರ ಪುರಾಣಗಳ ಜ್ಞಾನ ಇದ್ದಿತೆಂದು ಭಾವಿಸಬಹುದು.

---

೧. (ರೈ) ಎಕ VI ಕಡೂರು ೯೨ ಕ್ರಿ.ಶ. ೧೨೫೯.
೨. (ಮೈ) ಎಕ VI ಕೃ.ಪೇಟೆ ೨೨ ಕ್ರಿ.ಶ. ೧೨ ಶಮಾ.
೩. (ರೈ) ಎಕ VI ತರೀಕೆರೆ ೪೫ ಕ್ರಿ.ಶ. ೧೧೯೭.
೪. ಎಸ್ಐಐ XVIII ಹಿರೇಕೆರೂರು ೩೪೫ ಕ್ರಿ.ಶ. ೧೧-೧೨ ಶಮಾ.
೫. ಎಸ್ಐಐ XVIII ಹಾವೇರಿ ೩೩೯ ಕ್ರಿ.ಶ. ೧೧ ಶಮಾ.
೬. R. K.Mookerji : Ancient Indian Education ಪು. ೩೫೦.
೭. (ಮೈ) ಎಕ VII ಮಂಡ್ಯ ೨೯ ಕ್ರಿ.ಶ. ೧೨೩೪.
೮. ಎಸ್. ಶೆಟ್ಟರ್: 'ಸಾಹಿತ್ಯ ಮತ್ತು ಕಲೆ', (ಸಂ) ಎಂ. ಚಿದಾನಂದಮೂರ್ತಿ ಮತ್ತು ಇತರರು. ಶ್ರೀಕಂಠ ತೀರ್ಥ, ಪು. ೭೨೧.

ಸಂಗೀತ, ನೃತ್ಯ ಮುಂತಾದ ಲಲಿತಕಲೆಗಳ ಅಭ್ಯಾಸಕ್ಕೆ ಅರಮನೆಗಳು, ದೇವಾಲಯಗಳು ಅವಕಾಶವನ್ನು ಮಾಡುತ್ತಿದ್ದವು. ದೇವಾಲಯಗಳ ಆಶ್ರಯದಲ್ಲಿ ಇರುತ್ತಿದ್ದ ಸಂಗೀತ ನೃತ್ಯಗಳ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ಗಮನಿಸಲಿದ್ದೇವೆ. ದೇವಾಲಯದ ರಂಗಭೋಗದ ಪರಿವಾರವಾಗಿ ಇರುತ್ತಿದ್ದ ನರ್ತಕಿಯರು, ಗಾಯಕರು, ವಾದ್ಯಗಾರರು ಶಾಸನಗಳಲ್ಲಿ ಉಲ್ಲೇಖಗೊಂಡಿದ್ದಾರೆ. ದೇವಾಲಯದ ಈ ಸೇವೆಗಾಗಿಯೇ ಇದ್ದ ನಾಗವಾಸ ಎಂಬ ವಿಶಿಷ್ಟ ಸಿಬ್ಬಂದಿಯನ್ನೇ ಕಾಣುತ್ತೇವೆ. ಸಂಗೀತ ಕಲೆಗಳಲ್ಲಿ ಪರಿಣತನಾಗಿದ್ದ 'ನಟುವ' ತಾನು ಕೊಡುವ ಆ ಕಲೆಗಳ ಶಿಕ್ಷಣಗಳಿಗಾಗಿ ದತ್ತಿಗಳನ್ನು ಪಡೆದಿರುವುದನ್ನು ಶಾಸನಗಳು ತಿಳಿಸುತ್ತವೆ.

ವಿಶ್ವನಾಥನೆಂಬ ಶ್ರೀಕರಣನ ಸುಂದರವಾದ ಬರವಣಿಗೆ ( ಆತನು ಎರಡೂ ಕೈಗಳಿಂದ ಬರೆಯಬಲ್ಲವನಾಗಿದ್ದ) ಮತ್ತು ಅವನು ನಡೆಸಿದ 'ಅವಧಾನಶತಂಗಳನ್ನು' ವಿದ್ವಾಂಸರು ಪರೀಕ್ಷಿಸಿ ಮೆಚ್ಚಿದ್ದರೆಂದು ಒಂದು ಶಾಸನ ತಿಳಿಸುತ್ತದೆ.

ದುಸರಮದಾಗೆ ಭಾರತಿಗೆ ಹಾರಮನೋಯರಮಾಗೆ ಕೋದವೋ
ಲೆಸೆವಿನಮಕ್ಕರಂ ಕರಯುಗಂಗಳೊಳಂ ಬರೆವಂ ಬುಧರ್ಪ್ಪರೀ
ಕ್ಷಿಸಿ ತಲೆದೂಗೆ ಪೇಳ್ವನವಧಾನಶತಂಗಳನಾಗಳುಂ ಶ್ರುತ
ವ್ಯಸನತೆ ಲೀಲೆ ಬಾಲ್ಯದೊಳಾಮಿೂಕರಣಾಗ್ರಣಿ ವಿಶ್ವನಾಥನಾ॥[೧]

**ಸ್ತ್ರೀ ವಿದ್ಯಾಭ್ಯಾಸ:**

ಪ್ರಾಚೀನ ಭಾರತದಲ್ಲಿ ಸ್ತ್ರೀಯರ ವಿದ್ಯಾಭ್ಯಾಸ ಅನೇಕ ಏರಿಳಿತಗಳನ್ನು ಕಂಡಿದೆ. ವೈದಿಕ ಯುಗದಲ್ಲಿ ಸ್ತ್ರೀ-ಪುರುಷರಿಗೆ ವಿದ್ಯಾಭ್ಯಾಸದ ವಿಷಯದಲ್ಲಿ ವ್ಯತ್ಯಾಸವಿಲ್ಲವೇನೊ ಎಂಬಂತೆ ಕಂಡುಬಂದು ವೈದಿಕ ಮಂತ್ರಗಳನ್ನು ಸ್ತ್ರೀಯರು ರಚಿಸಿರುವುದು ಕಂಡುಬರುತ್ತದೆ. ವೈದಿಕಯುಗದ ಗಾರ್ಗಿ, ಮೈತ್ರೇಯಿ ಮುಂತಾದವರು ಉನ್ನತಮಟ್ಟದ ಪಂಡಿತೆಯರಾಗಿದ್ದರೆಂಬುದು ಪ್ರಸಿದ್ಧ ಸಂಗತಿಯಾಗಿದೆ. ಇತಿಹಾಸ ಯುಗವೂ ಸ್ತ್ರೀ ವಿದ್ಯಾಭ್ಯಾಸದ ದೃಷ್ಟಿಯಿಂದ ಆಶಾದಾಯಕವಾಗಿಯೇ ಇದೆ. ಧರ್ಮಶಾಸ್ತ್ರಗಳ ಕಾಲದಲ್ಲಿ ಸ್ತ್ರೀ ವಿದ್ಯಾಭ್ಯಾಸ ಅಧೋಗತಿಗೆ ಮುಟ್ಟಿರುವುದು ಕಂಡುಬರುತ್ತದೆ. ಇದಕ್ಕೆ ಸಾಮಾಜಿಕ ಕಾರಣಗಳು ಮುಖ್ಯವಾಗಿರಬಹುದಾದರೂ ಆ ಕಾಲದಲ್ಲಿ ಸ್ತ್ರೀ ಶಿಕ್ಷಣ ಬಹುದೊಡ್ಡ ಹಿನ್ನಡೆಯನ್ನು ಅನುಭವಿಸಿತು. ಆ ಕಾಲದಲ್ಲಿ ಸ್ತ್ರೀಯರಿಗೆ ಉಪನಯನ ನಿರಾಕರಿಸಲಾಯಿತು. ಯಾವಾಗ ಉಪನಯನದಿಂದ ವಂಚಿತರಾದರೋ ಆಗ ಅವರು ಶೂದ್ರರಿಗೆ ಸಮಾನವಾಗಿಬಿಟ್ಟರು.[೨] ಕ್ರಮೇಣ ವಿದ್ಯಾಭ್ಯಾಸದಿಂದ ಸ್ತ್ರೀಯರು ವಂಚಿತರಾಗಿ ೧೧ನೆಯ ಶತಮಾನದಿಂದ ೧೯ನೆಯ ಶತಮಾನದ ಹೊತ್ತಿಗೆ ನೂರಕ್ಕೆ ಒಬ್ಬ ಹೆಣ್ಣುಮಗಳು ಓದಬಲ್ಲವಳಾಗಿದ್ದಳು.[೩]

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದ ಶಿವಶರಣರ ಚಳವಳಿ ಬಹುದೊಡ್ಡ ಸಾಮಾಜಿಕ ಬದಲಾವಣೆಯನ್ನು ತಂದಿತು. ವೈದಿಕ ಧರ್ಮದ ವರ್ಣಾಶ್ರಮದ ಕಟ್ಟುಪಾಡುಗಳನ್ನು ತಿರಸ್ಕರಿಸಿ ನಡೆದ ಆ ಆಂದೋಲನ ಸ್ಮೃತಿ ಮುಂತಾದವುಗಳನ್ನು ಪ್ರತಿಭಟಿಸಿ ಜಡ ಸಂಪ್ರದಾಯಗಳನ್ನು ಧಿಕ್ಕರಿಸಿ ನಿಂತಿತು. ಸ್ತ್ರೀಯರ ವಿಷಯದಲ್ಲಿ ಬಹು ಉದಾರವಾಗಿ ನಡೆದುಕೊಂಡ

---

೧. (ರೈ) ಎಕ V ಚನ್ನರಾಯಪಟ್ಟಣ ೨೦೩ ಕ್ರಿ.ಶ. ೧೨೨೩. ಈ ಶಾಸನದಲ್ಲಿ ಬರುವ 'ಅವಧಾನಶತ' ಎಂಬ ಮಾತು ಗಮನಾರ್ಹ. ಈ ಕಾಲದಲ್ಲಿ, ಅಷ್ಟಾವಧಾನಗಳು ಅಂದರೆ ಎಂಟು ವಿಷಯಗಳನ್ನು ಒಬ್ಬ ವ್ಯಕ್ತಿ ನಿರ್ವಹಿಸುವುದನ್ನು ಕಂಡಿದ್ದೇವೆ. ವಿಶ್ವನಾಥನು ಬಹುಶಃ ನೂರು ವಿಷಯಗಳನ್ನು ನಿರ್ವಹಿಸಬಲ್ಲವನಾಗಿರಬೇಕು. ಆಂಧ್ರದಲ್ಲಿ ಈಗಲೂ ಅಷ್ಟಾವಧಾನ ತುಂಬ ಪ್ರಸಿದ್ಧವಾದುದಾಗಿದೆ. ಪ್ರಾಚೀನ ಕರ್ನಾಟಕದಲ್ಲಿ 'ಶತಾವಧಾನಿ'ಗಳಿದ್ದರೆಂದು ಶಾಸನಗಳ ಆಧಾರದಿಂದ ಭಾವಿಸಬಹುದು. ಇದು ಒಂದು ಬೌದ್ಧಿಕ ಸಾಹಸವಾಗಿದೆ. ಅವಧಾನದ ವಿಶೇಷ ಚರ್ಚೆಗೆ ಆರ್. ಗಣೇಶ್ ಅವರು ರಚಿಸಿರುವ 'ಕನ್ನಡದಲ್ಲಿ ಅವಧಾನ ಕಲೆ' ಗ್ರಂಥವನ್ನು ಗಮನಿಸಬಹುದಾಗಿದೆ. ಅವಧಾನ ಕಲೆಯ ಬೆಳವಣಿಗೆಯ ಒಂದು ಚಿತ್ರ ಅಲ್ಲಿ ದೊರೆಯುತ್ತದೆ.

೨. K.M. Kapadia : Marriage and Family in India ಪು. ೨೫೩.

೩. A. S. Altekar : ಪೂರ್ವೋಕ್ತ ಪು. ೨೪೪.

ಈ ಆಂದೋಲನ ಅವರಿಗೆ ಸಾಕಷ್ಟು ಪ್ರೋತ್ಸಾಹ ನೀಡಿತು. ಈ ಪ್ರೋತ್ಸಾಹ ಮತ್ತು ಔದಾರ್ಯದಿಂದ ಸ್ತ್ರೀಯರೂ ಕೂಡ ಪುರುಷರಂತೆ ಧರ್ಮಗ್ರಂಥಗಳನ್ನು ಅಭ್ಯಸಿಸಿ ಸಾಹಿತ್ಯ ರಚನೆಗಳನ್ನು ಮಾಡಿದರು. ಆ ಕಾಲದ ಅಪೂರ್ವ ವ್ಯಕ್ತಿ ಅಕ್ಕಮಹಾದೇವಿ. ಕನ್ನಡ ಸಾಹಿತ್ಯದಲ್ಲಿ ಅದುವರೆಗೂ ಸ್ತ್ರೀ ಸಾಹಿತ್ಯ ರಚನೆಗಳೇ ಕಂಡುಬರುವುದಿಲ್ಲ. ಹನ್ನೆರಡನೆಯ ಶತಮಾನದಲ್ಲಿ ಒಮ್ಮೆಗೇ ಎಚ್ಚೆತ್ತ ಶಿವಶರಣೆಯರು ಸಾಹಿತ್ಯ ರಚನೆ ಆರಂಭಿಸಿದರು. ಆ ಕಾಲದಲ್ಲಿ ವಚನ ರಚನೆ ಮಾಡಿದ ೩೩ ಜನ ಮಹಿಳೆಯರ ವಚನಗಳು ಸಂಕಲನಗೊಂಡು ಪ್ರಕಟವಾಗಿವೆ.[1] ಸ್ತ್ರೀಯರ ಈ ಮಟ್ಟದ ಜಾಗೃತಿ ಅಪರೂಪವಾದುದೇ ಆಗಿದೆ.

ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಹಿನ್ನಡೆ ಉಂಟಾದ ಕಾರಣಗಳಲ್ಲಿ ಮದುವೆಯ ವಯಸ್ಸು ೧೬ ರಿಂದ ೧೦ ಅಥವಾ ೧೧ಕ್ಕೆ ಇಳಿದದ್ದು ಒಂದು ಕಾರಣವೆಂದು ಆಲ್ಟೇಕರ್ ಅವರು ಭಾವಿಸುತ್ತಾರೆ. ಅವರು ಅಭಿಪ್ರಾಯಪಡುವಂತೆ ಕ್ರಿ.ಶ. ೧೨೦೦ರ ಹೊತ್ತಿಗೆ ಶ್ರೀಮಂತ ಮನೆತನದ ಹೆಣ್ಣುಮಕ್ಕಳು ಮಾತ್ರ ಪ್ರತ್ಯೇಕ ಉಪಾಧ್ಯಾಯರನ್ನು ನೇಮಿಸಿಕೊಂಡು ವಿದ್ಯಾಭ್ಯಾಸ ಮಾಡತೊಡಗಿದರು.[2] ಓದು-ಬರಹ ಇವುಗಳಿಗಿಂತ ನರ್ತನ, ಸಂಗೀತ, ಕಲೆಗಳಂತಹ ವಿಷಯಗಳ ಅಭ್ಯಾಸಕ್ಕೆ ಹೆಚ್ಚು ಮಾನ್ಯತೆ ದೊರೆಯತೊಡಗಿತು. ಸಾವಿನಿರ್ಮಡಿ[3]ಯಂತಹ ಅಪರೂಪದ ವಿದ್ಯಾವಂತೆಯನ್ನು (ಕ್ರಿ.ಶ. ಸು. ೯೦೦) ಬಿಟ್ಟರೆ ಮುಂದಿನ ವಚನಕಾರರ ಕಾಲದವರೆಗೆ ಸಾಹಿತ್ಯ ರಚನೆ ಮಾಡಿದ ಸ್ತ್ರೀಯರು ದೊರೆಯುವುದಿಲ್ಲ.

ಆದರೂ ರಾಣಿಯರು, ಪ್ರಧಾನಿಗಳ, ಅಧಿಕಾರಿಗಳ ಮಡದಿಯರು ತಕ್ಕಮಟ್ಟಿಗೆ ವಿದ್ಯಾವತಿಯರಾಗಿದ್ದರೆಂದು ಭಾವಿಸಲು ಅವಕಾಶವಿದೆ. ಶಾಂತಲೆಯಂತಹ ರಾಣಿಯರು ಕಲೆಯಲ್ಲಿ ಉನ್ನತ ಸಾಧನೆಯನ್ನು ಪಡೆದವರಾಗಿದ್ದರೆಂಬುದು ಪ್ರಸಿದ್ಧವಾಗಿದೆ. ಅದೇ ರೀತಿ ಕಳಚೂರ್ಯ ಸೋವಿದೇವನ ರಾಣಿ ಸೋವಲಾದೇವಿ ಕ್ರಿ.ಶ. ೧೧೭೪ರಲ್ಲಿ ತನ್ನ ದೇಶದ ಹಾಗೂ ಇತರ ದೇಶಗಳ ಕಲಾ ಪರಿಣತರ ಸಭೆಯಲ್ಲಿ ನೃತ್ಯಮಾಡಿ ಅವರನ್ನು ಅಮಿತವಾಗಿ ಸಂತೋಷಪಡಿಸಿದಳೆಂದು ತಿಳಿದುಬರುತ್ತದೆ.[4]

ಮಂಡಲೇಶ್ವರ ಮಲ್ಲಿದೇವ ಚೋಳನ ಮಡದಿ ಸೀತಾದೇವಿಯನ್ನು ಒಂದು ಶಾಸನ 'ಶ್ರವ್ಯಕಾವ್ಯ ದಿವ್ಯ ಗೀತವಾದ್ಯ ನ್ರಿತ್ಯಾದಿ ವಿದ್ಯಾಪ್ರವೀಣೆ' ಎಂದು ಹೇಳುತ್ತದೆ. ಮತ್ತು ಅವಳು 'ಕವಿ ಗಮಕಿ ವಾದಿ ವಾಗ್ಮಿ ವೈತಾಳಿಕ ಪಾಠಕಾದಿ ಜನ ಪರಿತುಷ್ಟೆ ಶಿಷ್ಟೇಷ್ಟ ಜನಸನ್ತುಷ್ಟೆ' ಎಂದು, ಪದಚಲನಚಲಿತ ಮಣಿಮಯಮಂಜುಸಿಂಜಾನಮಂಚೇರರವಾಕೃಷ್ಣರಾಜಹಂಸಮಣ್ಡಳೆ ಎಂದು ಕೀರ್ತಿಸುತ್ತದೆ. ಸ್ವತಃ ವಿದ್ಯಾಪ್ರವೀಣೆಯಾದ ಅವಳು ವಿದ್ಯಾವಂತರನ್ನು, ಕವಿಗಳನ್ನು ಗೌರವಿಸುತ್ತಿದ್ದಳು. ಅಲ್ಲದೆ ಗಂಡನೊಂದಿಗೆ ಸೇರಿ ಹೆಂಜೆರ ಪಟ್ಟಣದ ಮಹಾಘಟಿಕಾಸ್ಥಾನ ಶ್ರೀ ನೊಣಂಬೇಶ್ವರ ಸನ್ನಿಧಾನದಲ್ಲಿ ಸತ್ರ ನಡೆಸಲು, ತಪೋಧನರಿಗೆ, ೬ ಜನ ಪರಿಚಾರಕರಿಗೆ ಮೂವತ್ತು ಮನುಷ್ಯರಿಗೆ ಆಹಾರ ದಾನಾರ್ಥವಾಗಿ ಭೂಮಿದಾನ ಮಾಡಿದ ವಿಷಯವನ್ನು ಶಾಸನವು ತಿಳಿಸುತ್ತದೆ.[5] ವೀರ ಚೌಂಡರಸನ ಪತ್ನಿ ದೇಮಲ ದೇವಿಯನ್ನು 'ದ್ವಿತೀಯ ಲಕ್ಷ್ಮೀಸೂನೆ ಅಭಿನವ ಸರಸ್ವತಿ' ಎಂದು ಶಾಸನವೊಂದು ಕರೆದಿದೆ.[6] ಎಱಿಂಗವೆಗ್ಗಡೆಯ ಮಡದಿ ಬಾಚಲನಾರಿಯನ್ನು 'ಸಜ್ಜನ ಲಕ್ಷ್ಮಿಯೆಂದು ಸಾಕ್ಷರಿಕ ಜನಂಗಳರ್ತ್ತಿಯೊಳೆ ಕೀರ್ತಿಸೆ ಬಾಚಲನಾರಿಯೊಪ್ಪುವಳ್'[7] ಎಂದು ಶಾಸನ ಹೇಳುತ್ತದೆ. ವಿದ್ಯಾವಂತರು ಅವಳನ್ನು ಕೀರ್ತಿಸುವುದನ್ನು ನೋಡಿದರೆ ವಿದ್ಯೆಗಾಗಿ ಅವಳು ತುಂಬ ಸಹಾಯ ಮತ್ತು ಪ್ರೋತ್ಸಾಹ ನೀಡಿರಬೇಕು.

---

೧. (ಸಂ) ಆರ್.ಸಿ. ಹಿರೇಮಠ : ಶಿವಶರಣೆಯರ ವಚನಗಳು. ಇದರಲ್ಲಿ ೩೨ ಎಂದು ಹೇಳಲಾಗಿದೆ. ಕರ್ನಾಟಕ ಸರ್ಕಾರದ ಸಂಪುಟದಲ್ಲಿ ೩೩ ವಚನಕಾರ್ತಿಯರ ೧೧೦೪ ವಚನಗಳು ಪ್ರಕಟವಾಗಿವೆ.

೨. A. S. Altekar : ಪೂರ್ವೋಕ್ತ ಪು. ೩೫೫.

೩ (ರೈ) ಎಕ X ಬೌರಿಂಗ್‌ಪೇಟೆ ೬೫ ಕ್ರಿ.ಶ. ಸು. ೯೦೦.

೪. ಜಿ.ಎಸ್. ದೀಕ್ಷಿತ್ : 'ಶಿಕ್ಷಣ ಮತ್ತು ವಿಜ್ಞಾನ' ಕರ್ನಾಟಕದ ಪರಂಪರೆ I, ಪು. ೪೨೧.

೫. ಎಸ್‌ಐಐ VI ಮಡಕಸಿರ ೫೫೭ ಕ್ರಿ.ಶ. ೧೧೬೮.

೬. ಎಸ್‌ಐಐ XV ಹುನಗುಂದ ೪೭ ಕ್ರಿ.ಶ. ೧೧೫೧.

೭. (ರೈ) ಎಕ V ಹಾಸನ ೬೯ ಕ್ರಿ.ಶ. ೧೧೫೫.

ಅನೇಕ ಸ್ತ್ರೀಯರು ವಿದ್ಯೆಗೆ ಹಲವು ರೀತಿಯ ಸಹಾಯವನ್ನು ಮಾಡಿದ್ದಾರೆ. ಷಡಂಗಿಯರ ಮಗ ಪದ್ಮಣ್ಣನ ಮಗಳು ಧರ್ಮಿಯಕ್ಕ ತಾನು ಮಾಡಿಸಿದ ಎಡೆಗೇರಿಯ ಬಡವಾಗಿಲ ಶ್ರೀ ಲಕ್ಷ್ಮೀನಾರಾಯಣ ದೇವರ ಅಂಗರಂಗಭೋಗಗಳಿಗೆ ದಾನ ಮಾಡಿದನಂತರ ಆ ದೇವರಲ್ಲಿ ಶಾಸ್ತ್ರ ವ್ಯಾಖ್ಯಾನ ಮಾಡಲು, ಪುರಾಣ ಹೇಳಲು ಒಬ್ಬ ಉಪಾಧ್ಯಾಯರಿಗೆ ವ್ಯವಸ್ಥೆ ಮಾಡಿದ ವಿಷಯವಿದೆ. ಅಲ್ಲದೆ ಘೈಸಾಸ ಕೇಶವದೇವನ ನೂರ ಮೂವತ್ತು ಮರಕ್ಕೆ ದೇವಸ್ಥಾನದ ತೋಟದ ಬಾವಿಯಿಂದ ನೀರನ್ನು ಎತ್ತಿಕೊಡಲು ಅವಕಾಶ ಮಾಡಿಕೊಟ್ಟಿರುವಳು.[೧] ಬಾಯಿಕಬ್ಬೆ ಎಂಬುವವಳು ತೋಟದ ಗುತ್ತಿಗೆಯಿಂದ ಬಂದ ಹಣವನ್ನು ಭಟ್ಟವೃತ್ತಿ ಮತ್ತು ಛಾತ್ರವೃತ್ತಿಗಳಿಗೆ ಬಿಟ್ಟುಕೊಟ್ಟಿರುವುದುಂಟು.[೨] ಹುಲಗೂರಿನ ಒಂದು ಸಂಸ್ಕೃತ ತಾಮ್ರ ಶಾಸನ, ಕದಂಬ ರಾಜನಾದ ಮಲ್ಲಪನ ಪಟ್ಟದರಸಿ ಪದ್ಮಲದೇವಿರಾಣಿಯು, ಐಶ್ವರ್ಯವನ್ನು ತುಚ್ಛವಾಗಿ ಕಂಡು ಹುಲ್ಲುಂಗೂರಿನಲ್ಲಿ ಬ್ರಹ್ಮಪುರಿಯನ್ನು ನಿರ್ಮಿಸಿ ೬೪ ಭಿನ್ನ ಭಿನ್ನ ಗೋತ್ರದ ವೇದ ವೇದಾರ್ಥ ತಿಳಿದ ಬ್ರಾಹ್ಮಣರು ನೆಲೆ ನಿಲ್ಲುವಂತೆ ಮಾಡಿದ ವಿಷಯವನ್ನು ತಿಳಿಸುತ್ತದೆ.[೩]

ಕ್ರಿ.ಶ. ೧೧೪೦ರ ಒಂದು ಶಾಸನ ವಿಷ್ಣುವರ್ಧನನ ರಾಣಿ ಬಮ್ಮಲದೇವಿ ಅಶ್ವವಿದ್ಯೆಯಲ್ಲಿ ಪಾರಂಗತಳಾಗಿದ್ದು ಅಶ್ವಹೃದಯವನ್ನರಿಯುವ ಜಾಣ್ಮೆ ಅವಳಿಗೆ ಸಾಧಿಸಿತ್ತು ಎಂದಿದೆ.[೪] ಇದು ಒಂದು ಅಪರೂಪದ ವಿಷಯವಾಗಿದೆ. ಸಾಮಾನ್ಯವಾಗಿ ಪುರುಷರಿಗೆ ಮೀಸಲೆಂದು ಭಾವಿಸಲಾದ ಈ ವಿದ್ಯೆಯಲ್ಲಿ ಅವಳು ಪರಿಣತಿ ಪಡೆದದ್ದು ವಿಶೇಷವಾಗಿದೆ.

ಪ್ರಾಚೀನ ಕರ್ನಾಟಕದ ಅನೇಕ ರಾಣಿಯರಲ್ಲಿ ಕೆಲವರು ರಾಜನ ಆಡಳಿತದ ಹೊಣೆಯನ್ನು ಕಡಮೆ ಮಾಡಲು ಕೆಲವು ಪ್ರದೇಶಗಳ ಆಡಳಿತಗಳನ್ನು ನೋಡಿಕೊಂಡಿದ್ದಾರೆ. ಉದಾಹರಣೆಗೆ ಬಲ್ಲಾಳನ ಮಡದಿ ಪದುಮಲದೇವಿ ಹಡಗಿಲೆ ಪ್ರದೇಶವನ್ನು ಆಳುತ್ತಿದ್ದಳು.[೫] ಬಲ್ಲಾಳನ ಇನ್ನೊಬ್ಬ ಮಡದಿ ಉಮಾದೇವಿ ಮಗರೆ ಮೂನೂರರ ಆಳ್ವಿಕೆ ನಿರ್ವಹಿಸುತ್ತಿದ್ದಳು.[೬] ಹೀಗೆ ರಾಣಿಯರು ಆಡಳಿತ ನಿರ್ವಹಣೆ ಮಾಡಬೇಕಾದರೆ ಅವರಿಗೆ ಅದಕ್ಕೆ ತಕ್ಕ ವಿದ್ಯೆಯ ಪೂರ್ವಸಿದ್ಧತೆ ಇದ್ದಿತೆಂದು ಭಾವಿಸಬೇಕಾಗುತ್ತದೆ.

ರಾಜಕುಮಾರಿಯರಿಗೆ, ಶ್ರೀಮಂತ ಪುತ್ರಿಯರಿಗೆ ವಿದ್ಯಾಭ್ಯಾಸಕ್ಕೆ ಸ್ವಂತವಾದ ಅನುಕೂಲವನ್ನು ಕಲ್ಪಿಸಲಾಗುತ್ತಿತ್ತೆಂದು ಹೇಳಬಹುದು. ಆದರೆ ದೇವಾಲಯ ಅಗ್ರಹಾರ ಬ್ರಹ್ಮಪುರಿ ಮಠ ಮುಂತಾದ ಯಾವುದೇ ಸಾರ್ವಜನಿಕ ವಿದ್ಯಾಕೇಂದ್ರಗಳಲ್ಲಿ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಕಲ್ಪಿಸಿದ ಒಂದು ಅನುಕೂಲವೂ ಶಾಸನದಲ್ಲಿ ಕಂಡುಬರುವುದಿಲ್ಲ. ಆದರೆ ಇಬ್ನಬಟೂಟ (ಕ್ರಿ.ಶ. ೧೩೩೩-೪೫) ಹೊನ್ನಾವರದಲ್ಲಿ ಹುಡುಗಿಯರಿಗಾಗಿ ೧೩ ಶಾಲೆಗಳು, ಹುಡುಗರಿಗಾಗಿ ೨೩ ಶಾಲೆಗಳಿದ್ದುವೆಂದೂ ಮತ್ತೆಲ್ಲಿಯೂ ಅಂಥದನ್ನು ನೋಡಿಲ್ಲವೆಂದು ಹೇಳಿದ್ದಾನೆ.[೭] ಆದರೆ ಈ ಅಭಿಪ್ರಾಯವನ್ನು ಶಾಸನಗಳು ಪುಷ್ಟೀಕರಿಸುವುದಿಲ್ಲ.

---

೧. ಎಸ್‌ಐಐ IX ಹರಪನಹಳ್ಳಿ ೨೬೭ ಕ್ರಿ.ಶ. ೧೧೬೦.

೨. ಎಸ್‌ಐಐ XVIII ಗದಗು ೩೪೦ ಕ್ರಿ.ಶ. ೧೧ ಶಮಾ.

೩. ಕಇ IV ಶಿಗ್ಗಾವ್ ೫೪ ಕ್ರಿ.ಶ. ೧೨೪೫.

೪. ಚನ್ನಕ್ಕ ಎಲಿಗಾರ : ಪ್ರಾಚೀನ ಕರ್ನಾಟಕದ ರಾಣಿಯರು, ಪು. ೯೨.

೫. (ಮೈ) ಎಕ I ಸೋಮವಾರಪೇಟೆ ೮೭ ಕ್ರಿ.ಶ. ೧೧೭೫.

೬. (ರೈ) ಎಕ V ಅರಸಿಕೆರೆ ೪೦ ಕ್ರಿ.ಶ. ೧೨೦೯.

೭. K. A. Neelakantha Shastri : Foreign notices of South India. ಪು. ೨೩೩-೩೪.

ಸಾರ್ವಜನಿಕ ವಿದ್ಯಾಕೇಂದ್ರಗಳಿಗೆ ಹೋಗದೇ ಹೋದರೂ ರಾಜಕುಮಾರಿಯರು, ಶ್ರೀಮಂತ ಪುತ್ರಿಯರು, ಅಧಿಕಾರಿಗಳ ಮಕ್ಕಳು ತಕ್ಕಷ್ಟು ವಿದ್ಯಾವಂತೆಯರಾಗುತ್ತಿದ್ದರೆಂದು ಕಾಣುತ್ತದೆ. ಓದು-ಬರಹಗಳ ವಿದ್ಯೆಗಿಂತ ಸಂಗೀತ, ನೃತ್ಯ, ಕಲೆಗಳ ಅಭ್ಯಾಸದ ಕಡೆ ಅವರು ಹೆಚ್ಚು ಒಲವು ತೋರಿಸುತ್ತಿದ್ದರೆಂದು ಭಾವಿಸಲು ಅವಕಾಶವಿದೆ. ಧರ್ಮಾಮೃತದ ಒಂದು ಕತೆಯಲ್ಲಿ[೧] ಮೃಗಸೇನೆ ಎಂಬ ಸೂಳೆ ಸಕಲಶಾಸ್ತ್ರ ಪ್ರವೀಣೆಯಾಗಿದ್ದಳೆಂದು ಬರುತ್ತದೆ. ಆಕೆ ಒಂದು ಸಂದರ್ಭದಲ್ಲಿ ಒಂದು ಪತ್ರವನ್ನು ಓದಿ ಅನಂತರ ಅದನ್ನು ಸೀಳಿ ಎಸೆದು ಕೆಳದಿಯನ್ನು ಕಳುಹಿಸಿ ಓಲೆ ಮತ್ತು ಕಂಠವನ್ನು ತರಿಸಿ ಪತ್ರ ಬರೆದ ವಿಷಯವಿದೆ. ಈ ಪ್ರಸಂಗ ಸೂಳೆಯೊಬ್ಬಳು ಓದು-ಬರಹ ಬಲ್ಲವಳಷ್ಟೇ ಅಲ್ಲದೆ ಸಕಲ ಶಾಸ್ತ್ರಪ್ರವೀಣೆಯಾಗಿದ್ದಳು ಎಂಬುದನ್ನು ತಿಳಿಸುತ್ತದೆ.

ಸಾತೇನಹಳ್ಳಿಯ ಶಾಸನ ವೆಣ್ಣಲೆಸೆಟ್ಟಿಕವ್ವೆಯ ಅಪರೂಪದ ಚಿತ್ರವನ್ನು ಕೊಡುತ್ತದೆ.

> ಖಳರಳವಂ ಕಳಲ್ಚಿ ನೆಱೆ ಕಳ್ಳರ ಕೊಳ್ಳಿಯ ಬಾಧೆಯಂ ಬೇಗ
> ಳ್ದಳಱೆ ತೆರಳ್ಚಿ ತೂಳ್ದಿ ನೆರೆ ಮನ್ನಯರಂನ(ನೆ)ಯವಂ ನಿರಾಕುಳಂ
> ಕಳೆದು ಬಣಂಜು ಧರ್ಮಮನೆ ಪಾಳಿಸಿ ಭೀತರನೆಯ್ದೆ ಕಾದು ನಿ
> ರ್ಮ್ಮಳತರ ಕೀರ್ತ್ತಿಯಂ ಪಡೆದಳಾರ್ಪ್ಪಡಿ ವೆಣ್ಣಲಸೆಟ್ಟಿಕವ್ವೆಯೊಳ್॥
>
> ಧರೆಗೆಸೆವೀ ಬಣಂಜು ಸಮೆಯ ಪ್ರತಿಪಾಳನ ವರ್ತ್ತಿಯಿಂದೆ ದು
> ರ್ದ್ಧರತರಮಪ್ಪ ಚಂಡಿಕೆಯೆ ವೆಣ್ಣಲೆ ನಾರಿಯೆನಿಪ್ಪ ನಾಮಮಂ
> ಧರಿಯ್ಸಿ(ಯಿಸಿ) ಕೋಣವತ್ತಿರಗಧಿಪೋತ್ತಮೆಯಾಗಿಯೆ ಪುಟ್ಟಿ ವೈರಿ ಸಂ
> ಹರಣಮನೆಯ್ದೆ ಮಾಡಿದಳೆನುತ್ತಮೆ ಬಣ್ಣಿಸುಗುಂ ಜಗಜ್ಜನಂ॥[೨]

'ಮಡದಿಯರಾವಗಂ (ಕೆ)ರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗ ಕೊಡನೊರಲಕ್ಕಿಯೆಂಬಿವನೆ ಚಿಂತಿಸಿ ಕೋಟಲೆಗೊಂಬರಲ್ಲದೇಂ' -ಎಂಬಂತೆ ಕೇವಲ ಗೃಹಕೃತ್ಯದಲ್ಲಿ ತೊಡಗದೆ ಬಣಂಜು ಸಮಯ ರಕ್ಷಣೆಗಾಗಿ ವೀರಾವೇಶದಿಂದ ಹೋರಾಡಿದಳೆಂದು ಶಾಸನ ವಿವರವಾಗಿ ವರ್ಣಿಸಿದೆ. ಈ ವಿವರಗಳನ್ನು ನೋಡಿದರೆ ಅವಳು ಶಸ್ತ್ರ ಶಾಸ್ತ್ರಗಳ ಪರಿಣತಿ ಪಡೆದವಳೆಂದು ಸ್ಪಷ್ಟವಾಗುತ್ತದೆ.

ಶಾಸನಗಳಲ್ಲಿ ಬರವಣಿಗೆಯ ಸಾಧನವಾದ ಓಲೆಯ ಉಲ್ಲೇಖ ಅನೇಕ ಕಡೆ ಬಂದಿದೆ. ಸಂತೆಗಳಲ್ಲಿ ಅವನ್ನು ಹೊರೆಗಟ್ಟಲೆ, ಕಟ್ಟುಗಟ್ಟಲೆ ಮಾರುತ್ತಿದ್ದರು. ಒಂದು ಶಾಸನದಲ್ಲಿ ಗವರೇಶ್ವರ ದೇವರ ಪೂಜಾವ್ಯವಸ್ಥೆಗಾಗಿ ಓಲೆಯ ಮಳವೆ ಹತ್ತಕ್ಕೆ ಒಂದು ಪಣವನ್ನು ತೆರಿಗೆಯಾಗಿ ಹಾಕಲಾಗಿದೆ.[೩] ಇನ್ನೊಂದು ಶಾಸನದಲ್ಲಿ ಓಲೆಯ ಹೊರೆ ಮಾರಿದರೆ ಒಂದು ಕಟ್ಟು ಎಂದು ಸಂತೆ ಆಯವನ್ನು ನಿಗದಿಪಡಿಸಲಾಗಿದೆ.[೪] ಇಂಥ ಉಲ್ಲೇಖಗಳಿಂದ ಓಲೆಯ ಪ್ರಸಾರ ಸಾಕಷ್ಟು ವ್ಯಾಪಕವಾಗಿ ನಡೆಯುತ್ತಿತ್ತೆಂದು ಭಾವಿಸಬಹುದು.

ಪ್ರಾಚೀನ ಕರ್ನಾಟಕದಲ್ಲಿದ್ದ ವಿದ್ಯಾಭ್ಯಾಸದ ಸ್ಥಿತಿಗತಿಗಳನ್ನು ಅರಿಯಲು ಶಾಸನಗಳು ಸಾಕಷ್ಟು ಸಾಮಗ್ರಿಯನ್ನು ಒದಗಿಸುತ್ತವೆ. ಅಗ್ರಹಾರ, ಬ್ರಹ್ಮಪುರಿ, ದೇವಾಲಯ, ಮಠಗಳು, ಘಟಿಕಾಸ್ಥಾನಗಳು ಹೆಚ್ಚಾಗಿ ವೈದಿಕ ವಿದ್ಯೆಗೇ ಗಮನ ಕೊಟ್ಟಂತಿವೆ. ದೈಹಿಕ ಶಿಕ್ಷಣ, ರಾಜಕುಮಾರರ ಶಿಕ್ಷಣ, ಬೇರೆ ಬೇರೆ ವೃತ್ತಿಪರ ಶಿಕ್ಷಣ ಕ್ರಮ ಮತ್ತು ಸ್ವರೂಪಗಳನ್ನು ಅರಿಯಲು ಶಾಸನಗಳು

---

೧. ಧರ್ಮಾಮೃತಂ ೧೦-ಗದ್ಯ ಪು. ೩೬,೩೭.

೨. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೩. (ರೈ) ಎಕ IX ದೊಡ್ಡಬಳ್ಳಾಪುರ ೩೧ ಕ್ರಿ.ಶ. ೧೨೬೭.

೪. ಕ.ಭಾ. ೬:೩ ಗೋಕಾಕ ಕ್ರಿ.ಶ. ೧೨೦೪ ಪು. ೪೬-೫೪.

ಅಷ್ಟಾಗಿ ಸಾಮಗ್ರಿಯನ್ನು ಒದಗಿಸುವಂತೆ ಕಾಣುವುದಿಲ್ಲ. ಶಿಲ್ಪ ಸಾಹಿತ್ಯಗಳ ಆಧಾರಗಳು ಇನ್ನೂ ಆಳವಾದ ಅಧ್ಯಯನಕ್ಕೆ ಒಳಪಡಬೇಕಿದೆ. ಅನೇಕ ಶಾಸನಗಳಲ್ಲಿ ಕನ್ನಡ ಮತ್ತು ಇತರ ಕೆಲವು ಲಿಪಿಗಳನ್ನು ಹೇಳಿಕೊಡಲು ದತ್ತಿಗಳನ್ನು ಬಿಟ್ಟಿರುವುದನ್ನು ಈಗಾಗಲೇ ಗಮನಿಸಿದ್ದೇವೆ. ಸಂಸ್ಕೃತ ಶಾಸನಗಳನ್ನು ಕನ್ನಡ ಲಿಪಿಯಲ್ಲಿಯೂ ಬರೆಯುವ ಪದ್ಧತಿ ಇದ್ದುದನ್ನು ಕಾಣುತ್ತೇವೆ. ವಿದ್ಯಾಕ್ಷೇತ್ರ ಆ ಕಾಲದಲ್ಲಿ ಪುರುಷಪ್ರಧಾನವಾಗಿಯೇ ಇರುವುದು ಕಂಡುಬರುತ್ತದೆ. ವಚನಕಾರರ ಕಾಲದಲ್ಲಿ ಸ್ತ್ರೀಯರು ಧಾರ್ಮಿಕ ಗ್ರಂಥಗಳ ಅಧ್ಯಯನ ಮಾಡಲು ಅವಕಾಶವಾಯಿತು. ವಿದ್ಯೆ ಅವರಲ್ಲಿದ್ದ ಸಹಜ ಪ್ರತಿಭೆಯನ್ನು ಸಾಹಿತ್ಯ ಸೃಷ್ಟಿಯ ಕಡೆ ಮುಖಮಾಡಿಸಿತು.

ವಚನಕಾರ್ತಿಯರು ಸಾಹಿತ್ಯ ರಚನೆಗೆ ಪ್ರಾರಂಭಿಸಿದ್ದು ಅವರಿಗೆ ದೊರಕಿದ ಆಲೋಚನೆಯ ಸ್ವಾತಂತ್ರ್ಯ ಮತ್ತು ಸಾಮಾಜಿಕ ಧಾರ್ಮಿಕ ಎಚ್ಚರಕ್ಕೆ ಸಂಕೇತವಾಗಿದೆ. ಅಕ್ಕಮಹಾದೇವಿ ಕಾವ್ಯ ದೃಷ್ಟಿಯಿಂದ ಅನೇಕ ಶ್ರೇಷ್ಠ ವಚನಗಳನ್ನು ರಚಿಸಿದ್ದಾಳೆ. ಅನೇಕ ಕಡೆ ಅಕ್ಕಮಹಾದೇವಿ ಸಂಸ್ಕೃತ ಶ್ಲೋಕಗಳನ್ನು ಉದ್ಧರಿಸಿರುವುದನ್ನು ನೋಡಿದರೆ ಅವಳಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯವಿದ್ದುದು ಸ್ಪಷ್ಟವಿದೆ. ಇದೇ ರೀತಿ ಉರಿಲಿಂಗಪೆದ್ದಿಯ ಹೆಂಡತಿಯಾದ ಕಾಳವ್ವೆ ವಚನವೊಂದರಲ್ಲಿ ಸಂಸ್ಕೃತ ಶ್ಲೋಕವನ್ನು ಉದ್ಧರಿಸಿದ್ದಾಳೆ.[೧] ಅಮುಗೆ ರಾಯಮ್ಮನು ತನ್ನ ವಚನವೊಂದರಲ್ಲಿ ಚಿತ್ಪಿಂಡಾಗಮ ಮತ್ತು ವಾತುಲಾಗಮಗಳನ್ನು ಉಲ್ಲೇಖಿಸಿದ್ದಾಳೆ.[೨] ಇಂಥ ಕೆಲವು ಉದಾಹರಣೆಗಳಿಂದ ವಚನಕಾರ್ತಿಯರಲ್ಲೂ ಕೆಲವರಿಗೆ ಸಂಸ್ಕೃತ ಭಾಷಾ ಸಾಹಿತ್ಯಗಳಲ್ಲಿ ಸಾಕಷ್ಟು ಪ್ರವೇಶ, ಪ್ರೌಢಿಮೆಗಳು ಇದ್ದುದು ಸ್ಪಷ್ಟವಾಗುತ್ತದೆ. ಕೆಲವು ವಚನಕಾರ್ತಿಯರಂತೂ ಸಾಮಾನ್ಯ ಕೆಳವರ್ಗದ ಸಾಮಾಜಿಕ ಸ್ಥಿತಿಗಳಿಂದ ಬಂದವರು. 'ತೀರ ಸಾಮಾನ್ಯವಾದ ಸಾಮಾಜಿಕ ಸ್ಥಾನಮಾನಗಳನ್ನು ಪಡೆದಿದ್ದ ವಚನಕಾರ್ತಿಯರು ಗುರುಗಳ ಬಳಿ ಕುಳಿತು ವಿದ್ಯಾರ್ಜನೆ ಮಾಡಿರುವ ಸಂಭವಗಳು ಕಡಿಮೆಯೆಂದೇ ಹೇಳಬೇಕು' ಎಂದು ಪಿ.ವಿ. ನಾರಾಯಣ[೩] ಅವರು ಅಭಿಪ್ರಾಯಪಡುತ್ತಾರೆ. ಇದು ಏನೇ ಆಗಲಿ, ಸ್ತ್ರೀ ವಿದ್ಯಾಭ್ಯಾಸಕ್ಕೆ ಅಷ್ಟೊಂದು ಪ್ರೋತ್ಸಾಹವಿಲ್ಲದ ಕಾಲದಲ್ಲಿ ವಚನಕಾರ್ತಿಯರ ಸಾಹಿತ್ಯ ರಚನೆ ಬಹುದೊಡ್ಡ ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ಜಾಗೃತಿಗೆ ನಿದರ್ಶನವೆಂದು ತಿಳಿಯಬಹುದು.

ವಚನಕಾರರು ಜ್ಞಾನದ ಬಗ್ಗೆ ಬಹುದೊಡ್ಡ ಕಾಳಜಿಯನ್ನು ಪ್ರಕಟಿಸಿದ್ದಾರೆ. 'ಅರಿವೇ ಗುರು' ಎಂಬ ಮಾತನ್ನು ಅನೇಕ ವಚನಕಾರರು ಆಡಿದ್ದಾರೆ. ಗುರು-ಶಿಷ್ಯರ ಸಂಬಂಧವನ್ನು ಕುರಿತು ಅಲ್ಲಮ ಪ್ರಭುವಿನ ಒಂದು ವಚನ ಬಹು ಸ್ವಾರಸ್ಯಕರವಾದ ಸಂಗತಿಗಳನ್ನು ಪ್ರಕಟಿಸುತ್ತದೆ.

> ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದನಯ್ಯ
> ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಯ್ದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದನಯ್ಯ
> ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದನಯ್ಯ
> ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದನಯ್ಯ
> ಗೋಗೇಶ್ವರಾ, ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನು.[೪]

ಈ ವಚನಕ್ಕೆ ಈ ಕಾಲದ ದೃಷ್ಟಿಯಿಂದ ಅರ್ಥೈಸಿದರೆ ಕಾಲದಿಂದ ಕಾಲಕ್ಕೆ ಶಿಷ್ಯನು ಇಳಿದ ಅಧೋಗತಿಯನ್ನು ಸೂಚಿಸುತ್ತದೆ. ಆದರೆ ಹದಿನೈದನೆಯ ಶತಮಾನದ ಮಹಾಲಿಂಗದೇವನು, ವಿದ್ಯಾರ್ಥಿ ಹಂತಹಂತವಾಗಿ ಬೆಳೆದು ಗುರು ಪಡೆದಿದ್ದ ಬೌದ್ಧಿಕ

---

೧. ಶಿಶವ ೨೦೯ ಪು. ೩೮೮.

೨. ಶಿಶವ ೪೧ ಪು. ೪೨೫.

೩. ಪಿ.ವಿ. ನಾರಾಯಣ : ಪೂರ್ವೋಕ್ತ, ಪು. ೨೭೭.

೪. ಅಪ್ರವ. ೫೨. ಸಮಗ್ರ ವಚನ ಸಂ. ಪ್ರಥಮ ಆವೃತ್ತಿ ೫೨.

ಮತ್ತು ಆಧ್ಯಾತ್ಮಿಕ ಮಟ್ಟವನ್ನು ಮೀರಿ ಬೆಳೆಯುತ್ತಾನೆ. ಹೀಗೆ ಶಿಷ್ಯ ಬೆಳೆದಂತೆ ಗುರು ತನ್ನ ರೀತಿಯನ್ನು ವ್ಯತ್ಯಾಸ ಮಾಡಿಕೊಳ್ಳುತ್ತಾ ಹೋಗುತ್ತಾನೆ ಎಂದು ವ್ಯಾಖ್ಯಾನಿಸಿದ್ದಾನೆ. ಗುರು ಶಿಷ್ಯರ ನಡವಳಿಕೆ, ಕ್ರಮ, ಬೆಳವಣಿಗೆ ಇವುಗಳನ್ನು ಆಧುನಿಕ ಮತ್ತು ಪ್ರಾಚೀನ ವ್ಯಾಖ್ಯಾನಗಳ ಹಿನ್ನೆಲೆಯಲ್ಲಿ ಎಂ. ಚಿದಾನಂದಮೂರ್ತಿಯವರು ಒಂದು ಲೇಖನದಲ್ಲಿ ಗಮನಿಸಿದ್ದಾರೆ.[೧]

ತೀರಾ ಪ್ರಾಚೀನ ಕಾಲದಿಂದ ಗಮನಿಸಿದರೂ ವಿದ್ಯಾಭ್ಯಾಸದಲ್ಲಿ, ಕಲಿಸುವ ಗುರು- ಕಲಿಯುವ ಶಿಷ್ಯ ಈ ಪರಿಕಲ್ಪನೆ ಉದ್ದಕ್ಕೂ ನಡೆದು ಬಂದಿದೆ. ಗುರುಕುಲಗಳಿಂದ, ದೇವಾಲಯ, ಬ್ರಹ್ಮಪುರಿ, ಅಗ್ರಹಾರ, ಮಠ, ಆಧುನಿಕ ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳವರೆಗೆ ಎಲ್ಲ ಹಂತಗಳನ್ನು ಹಾಯ್ದು ಬಂದಿದ್ದರೂ ಮೂಲ ಪರಿಕಲ್ಪನೆ ಅದೇ ಆಗಿದೆ. ಹೊರ ಆವರಣಗಳು ಬದಲಾಗಿರಬಹುದು. ಗುರು-ಶಿಷ್ಯರ ಸಂಬಂಧಗಳಲ್ಲಿ ವ್ಯತ್ಯಾಸಗಳಾಗಿರಬಹುದು, ಅನೇಕ ಹೊಸ ಹೊಸ ಸಾಧನ ಸಲಕರಣೆಗಳು ಬಂದಿರಬಹುದು. ಆದರೆ ಅವೆಲ್ಲವೂ ಮೂಲಭೂತ ಪರಿಕಲ್ಪನೆಗೆ ಕಾಲದ ಪ್ರವಾಹದಲ್ಲಿ ಒದಗಿದ ಮಾರ್ಪಾಟುಗಳಾಗಿವೆ.

ವಿದ್ಯಾಭ್ಯಾಸಕ್ಕೆ ತುಂಬ ಮಹತ್ವದ ಸ್ಥಾನ ಕರ್ನಾಟಕದಲ್ಲಿ ಸಂದಿದೆ. ಅದು ಕರ್ನಾಟಕ ಸಂಸ್ಕೃತಿಯ ಸಂರಕ್ಷಣೆಯ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಿದೆ. ವ್ಯಕ್ತಿತ್ವದ ವಿಕಾಸ ಮತ್ತು ಸಾಮಾಜಿಕ ಜವಾಬ್ದಾರಿ ಈ ಎರಡು ವಿಷಯಗಳು ವಿದ್ಯಾಭ್ಯಾಸದ ಮುಖ್ಯ ಗುರಿಗಳಾಗಿ ಕಂಡುಬರುತ್ತವೆ. ಶಿಕ್ಷಣದ ಬಗ್ಗೆ, ಶಿಕ್ಷಣಕ್ಕೆ ಕೊಡುವ ಪ್ರೋತ್ಸಾಹದ ವಿಷಯದಲ್ಲಿ ಕನ್ನಡನಾಡಿನ ಜನರಿಗೆ ಇದ್ದಂತಹ ಉದಾತ್ತ ನಂಬಿಕೆಯನ್ನು ಶಿಕಾರಿಪುರ ತಾಲ್ಲೂಕಿನ ಕ್ರಿ.ಶ. ೧೧೫೮ರ ಒಂದು ಶಾಸನ ಸಮರ್ಥವಾಗಿ ತಿಳಿಸುತ್ತದೆ. 'ಉಪಾಧ್ಯಾಯನಿಗೆ ವೃತ್ತಿಯನ್ನೂ ಜನತೆಗೆ ಶಿಕ್ಷಣದ ಅವಕಾಶವನ್ನು ಯಾರೇ ಒದಗಿಸಿಕೊಡಲಿ ಅವರು ಧರ್ಮ ಅರ್ಥ ಕಾಮಗಳನ್ನು ಸಾಧಿಸಲು ಮತ್ತೆ ಯಾವ ದಾನವನ್ನು ಮಾಡಬೇಕು? ವಿದ್ಯಾರ್ಥಿಗಳಿಗೆ ಸ್ನಾನ ಭೋಜನ ವಸ್ತ್ರ ಹಾಗೂ ಉಪಾದಾನಗಳನ್ನು ಯಾರೇ ನೀಡಲಿ ಆ ವ್ಯಕ್ತಿಯ ಇಷ್ಟಾರ್ಥಗಳೆಲ್ಲ ನೆರವೇರುತ್ತವೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ತೀರ್ಥಯಾತ್ರೆ ಹಾಗೂ ಯಜ್ಞಯಾಗಾದಿಗಳಿಂದ ಬರಬಹುದಾದ ಪುಣ್ಯಕ್ಕಿಂತಲೂ ಜ್ಞಾನದಾನದಿಂದ ಬರುವ ಪುಣ್ಯ ಕೋಟಿ ಮಡಿ ಅಧಿಕ.'[೨]

---

೧. ಎಂ. ಚಿದಾನಂದಮೂರ್ತಿ : 'ವಚನಪೂಂದರ ಅಂದಿನರ್ಥ ಮತ್ತು ಇಂದಿನರ್ಥ. ಲಿಂಗಾಯತ ಅಧ್ಯಯನಗಳು' ಪು. ೧೪೪-೧೪೯.

೨. ಡಿ.ಎಚ್. ಕೂಪರ್ : 'ಶಿಕ್ಷಣ ಮತ್ತು ವಿಜ್ಞಾನ', ಕರ್ನಾಟಕದ ಪರಂಪರೆ I. ಇಲ್ಲಿ ಉದಾಹರಿತವಾಗಿದೆ. ಪು. ೫೪೯.

'ಉಪಾಧ್ಯಾಯಸ್ಯಯೋ ವೃತ್ತಿಂ ದತ್ವಾಧ್ಯಾಪಯತೇ ಜನಾನ್
ಕಿಂ ನದತ್ತಂ ಭವೇತ್-ತೇನ ಧರ್ಮ ಕಾಮಾರ್ಥ ದರ್ಶಿನಾ
ಛಾತ್ರಾಣಾಂ ಭೋಜನಾಭ್ಯಂಗವಸ್ತ್ರಂ ಭಿಕ್ಷಾಮಥಾಪಿ ಚ
ದತ್ವಾ ಪ್ರಾಪ್ನೋತಿ ಪುರುಷಃ ಸರ್ವಾನ್ ಕಾಮಾನ್ ನ ಸಂಶಯಃ
ಯತ್ ಪುಣ್ಯಂ ತೀರ್ಥಯಾತ್ರಾಯಾಂ ಯತ್ ಪುಣ್ಯಂ ಯಜ್ಞಾನಾಂ ತಥಾ
ತತ್ ಪುಣ್ಯಂ ಕೋಟಿ ಗುಣಿತಂ ವಿದ್ಯಾದಾನಾಲ್ಲಭೇನ್ನರಃ'

# ೧೪. ಮಠಗಳು ಮತ್ತು ದೇವಸ್ಥಾನಗಳು

**ಭಾ**ರತದ ದೇವಸ್ಥಾನಗಳ ಆರಂಭದ ಇತಿಹಾಸ ಅಸ್ಪಷ್ಟವಾಗಿಯೇ ಇದೆ. ಹಿಂದೂ ದೇವಸ್ಥಾನಗಳಿಗೆ ಮೂಲ ಪ್ರೇರಣೆ ಬೌದ್ಧ ಮತ್ತು ಜೈನ ಸ್ತೂಪ ಮತ್ತು ಚೈತ್ಯಗಳೆಂಬ ಸಾಮಾನ್ಯ ಅಭಿಪ್ರಾಯವಿದೆ. ಪ್ರಾಚೀನ ದೇವಾಲಯಗಳ ಅವಶೇಷಗಳು ಸಾಂಚಿ, ನಾಗರಿ (ರಾಜಾಸ್ಥಾನ) ವಿದಿಶ (ಮಧ್ಯಪ್ರದೇಶ) ಮುಂತಾದೆಡೆ ದೊರಕಿದರೂ ಕೂಡ ಅವುಗಳಿಂದ ದೇವಾಲಯಗಳ ವಾಸ್ತುರಚನೆಯ ಬಗ್ಗೆ ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ. ದಕ್ಷಿಣ ಭಾರತದಲ್ಲಿ ನಾಗಾರ್ಜುನ ಕೊಂಡದಲ್ಲಿ ದೊರೆತ ಅವಶೇಷಗಳು ೩-ಆನೆಯ ಶತಮಾನಕ್ಕೆ ಸೇರಿದುವಾದರೂ ಅವುಗಳ ವಾಸ್ತುರಚನೆಯ ಬಗ್ಗೆಯೂ ಹೇಳಲಾಗಿಲ್ಲ.[೧] ಕರ್ನಾಟಕದ ಮಟ್ಟಿಗೆ ಕ್ರಿ.ಶ. ೧೫೦ರ ಪ್ರಾಕೃತ ಶಾಸನವೊಂದರಲ್ಲಿ ಶಾತವಾಹನ ರಾಜನೊಬ್ಬ ಮಟ್ಟಪಟ್ಟಿ ದೇವರಿಗೆ-ದತ್ತಿಯನ್ನು ಬಿಟ್ಟುಕೊಟ್ಟ ವಿಷಯ ಬರುತ್ತದೆ. ಅಲ್ಲದೆ ಆ ದೇವಸ್ಥಾನವು ಮಹಾಮುನಿಗಳ ವಾಸಸ್ಥಾನವೂ ಆಗಿದ್ದಿತ್ತೆಂದು ಆ ಶಾಸನ ತಿಳಿಸುತ್ತದೆ.[೨] ಆದ್ದರಿಂದ ಮುನಿಗಳ ವಾಸಸ್ಥಾನ (ಮಠ?) ಮತ್ತು ದೇವಾಲಯಗಳ ಸಂಬಂಧ ಅಷ್ಟಾದರೂ ಪ್ರಾಚೀನವೆನ್ನುವುದು ಸ್ಪಷ್ಟವಿದೆ. ತಾಳಗುಂದದ ಕ್ರಿ.ಶ. ಸು. ೪೫೦ರ ಮಹಾದೇವನ ದೇವಸ್ಥಾನದ ವಿಷಯ ಶಾಸನದಲ್ಲಿ ಉಲ್ಲೇಖಗೊಂಡಿದ್ದರೂ ಕರ್ನಾಟಕದಲ್ಲಿ ದೇವಾಲಯಗಳಿಗೆ ಒಂದು ಖಚಿತ ರೂಪುರೇಷೆ ಬಂದದ್ದು ಲಕುಲೀಶ ಪಾಶುಪತರ ಪ್ರವರ್ಧಮಾನದೊಂದಿಗೆ ಎಂದು ಭಾವಿಸಬಹುದು.

ಭಾರತೀಯ ಸಂಸ್ಕೃತಿಯಲ್ಲಿ ದೇವಾಲಯಗಳ ಪಾತ್ರ ಬಹುಮುಖ್ಯವಾದುದು. ದೇವಾಲಯಗಳ ಕಾರ್ಯವ್ಯಾಪ್ತಿ ಅತ್ಯಂತ ವೈವಿಧ್ಯಮಯವಾಗಿದ್ದು ಅದು ವಿಗ್ರಹ-ಪೂಜೆ ಎಂಬ ಸಂಕ್ಷಿಪ್ತ ನೆಲೆಯಲ್ಲಿ ಮಾತ್ರ ಕಾರ್ಯ ನಿರ್ವಹಿಸಿಲ್ಲ. ಅದು ಆಹಾರ, ಅಭಯ, ಭೈಷಜ್ಯ, ಶಾಸ್ತ್ರದಾನ, ಶಿಲ್ಪ, ಚಿತ್ರಕಲೆ, ಸಂಗೀತ, ನಾಟ್ಯ, ವಿದ್ಯಾ ಪ್ರಸಾರ, ನ್ಯಾಯತೀರ್ಮಾನ, ಹಣಕಾಸಿನ ಕೇಂದ್ರ, ಧಾರ್ಮಿಕ ಕೇಂದ್ರ, ಯತಿಗಳ ಆವಾಸಸ್ಥಾನ -ಹೀಗೆ ಬಹು ವ್ಯಾಪಕ ಕಾರ್ಯಗಳನ್ನು ನಿರ್ವಹಿಸುತ್ತಿತ್ತು. ಈ ಎಲ್ಲ ಕಾರ್ಯನಿರ್ವಹಣೆಯಿಂದ ವ್ಯಕ್ತಿಯ ಮತ್ತು ಸಮಾಜದ ಸರ್ವತೋಮುಖ ಅಭ್ಯುದಯಕ್ಕಾಗಿ ಭಾರತದ ದೇವಾಲಯಗಳು ನಿರ್ಮಿತವಾಗಿದ್ದವು.[೩] ಡಿ.ಎಲ್. ನರಸಿಂಹಾಚಾರ್ ಅವರು "ಹಿಂದಿನ ದೇವಾಲಯಗಳು ಊರಿಗೆ ಕಣ್ಣಾಗಿದ್ದವು. ಗ್ರಾಮ ಸಮಾಜ ಜೀವನಕ್ಕೆ ಕೇಂದ್ರವಾಗಿದ್ದವು"[೪] ಎಂದು ಅಭಿಪ್ರಾಯಪಡುತ್ತಾರೆ.

ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಅತ್ಯಂತ ಗಣನೀಯ ಸ್ಥಾನವನ್ನು ಪಡೆದಿದ್ದ ದೇವಾಲಯಗಳ ಅಧ್ಯಯನ ತುಂಬ ಕುತೂಹಲಕರವಾದುದಾಗಿದೆ. ಅವುಗಳ ನಿರ್ಮಾಣದ ಹಿಂದಿರುವ ಶ್ರದ್ಧೆ, ನಿರ್ಮಾಣಾನಂತರ ಅವುಗಳ ವ್ಯವಸ್ಥಿತ

---

೧. P. R.Srinivasan : The Indian Temple Art and Architecture ಪು. ೯೯-೧೦೦.

೨. ಎಂ. ಚಿದಾನಂದ ಮೂರ್ತಿ : ಕಶಾಸಾಂಅ, ಪು. ೧೭೩-೭೪.

೩. ಎಸ್. ಶ್ರೀಕಂಠಶಾಸ್ತ್ರಿ : ಹೊಯ್ಸಳ ವಾಸ್ತುಶಿಲ್ಪ, ಪು. ೧೨.

೪. ಡಿ.ಎಲ್. ನರಸಿಂಹಾಚಾರ್ : ಪೀಠಿಕೆಗಳು ಮತ್ತು ಲೇಖನಗಳು, ಪು. ೧೨೧.

ಕಾರ್ಯನಿರ್ವಹಣೆ ಇವು ದೇವಾಲಯಗಳನ್ನು ಆ ಕಾಲದ ಪ್ರಾತಿನಿಧಿಕ ಸಂಸ್ಥೆಗಳಾಗುವಂತೆ ಮಾಡಿದ್ದವು. ಒಂದು ಗ್ರಾಮದ, ಊರಿನ ಪ್ರಾತಿನಿಧಿಕ ಸಂಸ್ಥೆಗಳಾಗಿ ಅವು ನಿರ್ವಹಿಸಿದ ಕಾರ್ಯವೈವಿಧ್ಯ ಆ ಕಾಲದಿಂದ ಇಷ್ಟು ದೂರ ನಿಂತು ನೋಡುವ ನಮಗೆ ಆಶ್ಚರ್ಯವನ್ನು ತರುವಂತಹುದಾಗಿದೆ.

**ದೇವಾಲಯ ನಿರ್ಮಾಣ:**

ದೇವಾಲಯ ನಿರ್ಮಾಣ ಆ ಕಾಲದಲ್ಲಿ ಪ್ರಮುಖ ಪುಣ್ಯಕಾರ್ಯವೆಂದು ಪರಿಗಣಿತವಾಗಿದ್ದಿತು. ಎಲ್ಲ ಪುಣ್ಯ ಕಾರ್ಯಗಳಿಗಿಂತಲೂ ಈಶ್ವರ ಪ್ರತಿಷ್ಠೆ ಮೊತ್ತಮೊದಲನೆಯದೆಂದು 'ಈಶ್ವರ ಪ್ರತಿಷ್ಠೆ ಮಾಡಿದವನೀಶ್ವರನೆಯಕ್ಕು' ಎಂದು ನಂಬಿ ಪಬ್ಬೆಯ ನಾಯಕನು ಹಬ್ಬೇಶ್ವರ ದೇವಾಲಯವನ್ನು 'ಕಲ್ವೆಸನ'ದಲ್ಲಿ ನಿರ್ಮಿಸಿದುದಾಗಿ ಒಂದು ಶಾಸನ ತಿಳಿಸುತ್ತದೆ.[೧] ವ್ಯಕ್ತಿಯಾದವನು ಧರ್ಮಮಾರ್ಗದಿಂದ ಸಂಪಾದಿಸಿದ ಹಣವನ್ನು ದೇವತಾಪೂಜೆಗೆ ವ್ಯಯಿಸಬೇಕೆಂದೂ ಹಾಗೆ ಮಾಡಿದರೆ ಅದು ತವನಿಧಿಯಾಗಿ ಕೈ ಸೇರುವುದೆಂದು ಶಾಸನವೊಂದು ನಿರೂಪಿಸುತ್ತದೆ.[೨] ದೇವಾಲಯ ನಿರ್ಮಾಣ, ಕೆರೆ ನಿರ್ಮಾಣ ಉತ್ತಮ ಧರ್ಮಕಾರ್ಯಗಳೆಂಬ ಭಾವನೆ ಅನೇಕ ಶಾಸನಗಳಲ್ಲಿ ವ್ಯಕ್ತವಾಗಿದೆ. ಅಗ್ರಹಾರ, ಪುತ್ರ, ದೇವಾಲಯ, ಉದ್ಯಾನ, ತಟಾಕ, ಸತ್ಕೃತಿ, ನಿಧಿ ಇವುಗಳನ್ನು ಸಪ್ತ ಸಂತಾನಗಳೆಂದು ಹೆಸರಿಸಿ ಇವುಗಳನ್ನು ಪುಣ್ಯ ಸಂಪಾದನೆ ಮತ್ತು ಕೀರ್ತಿಗಾಗಿ ದಾನಿಗಳು ಕೈಗೊಳ್ಳುತ್ತಿದ್ದರೆಂದು ತೆಲುಗು ಶಾಸನ ಮತ್ತು ಕಾವ್ಯಗಳು ತಿಳಿಸುತ್ತವೆ.[೩] ಕನ್ನಡ ಶಾಸನಗಳಲ್ಲಿ ಸಪ್ತಸಂತಾನವೆಂಬ ಉಲ್ಲೇಖ ಬಾರದೇ ಹೋದರೂ ಬಿಡಿಬಿಡಿಯಾಗಿ ಅಗ್ರಹಾರ, ದೇವಾಲಯ, ಉದ್ಯಾನ, ತಟಾಕ, ನಿಧಿ ಶಾಸ್ತ್ರ ದಾನಗಳು ವಿಶೇಷವಾಗಿ ಕಂಡುಬರುತ್ತವೆ. ದೇವಾಲಯ ನಿರ್ಮಾಣಕ್ಕೆ ಕೊಟ್ಟಷ್ಟೇ ಗಮನವನ್ನು ಅವುಗಳ ನಿರಂತರ ಸಂರಕ್ಷಣೆಗೆ ಮತ್ತು ಪೂಜಾ ಕಾರ್ಯಗಳಿಗೆ ಕೊಡುತ್ತಿದ್ದರು. ಹೀಗಾಗಿ ದೇವಾಲಯವನ್ನು ಕಟ್ಟಿಸಿದ ಮೇಲೆ ಪೂಜಾಕಾರ್ಯಗಳಿಗೆ, ದೇವಾಲಯದ ದುರಸ್ತಿ ಕಾರ್ಯಗಳ ನಿರ್ವಹಣೆಯ ಖರ್ಚು ವೆಚ್ಚಗಳಿಗಾಗಿ ಸಾಕಷ್ಟು ದಾನವನ್ನು ಮಾಡುತ್ತಿದ್ದರು. ಎಷ್ಟೋ ಸಾರಿ ಆ ಸಂದರ್ಭವನ್ನು ಉಪಯೋಗಿಸಿಕೊಂಡು ವಿವಿಧ ವ್ಯಕ್ತಿಗಳು, ವಿವಿಧ ಅಧಿಕಾರಿಗಳು, ಸಂಘಗಳು ದಾನಗಳನ್ನು ನೀಡುತ್ತಿದ್ದರು. ದೇವಾಲಯ ಒಬ್ಬ ವ್ಯಕ್ತಿಯಿಂದ ನಿರ್ಮಾಣವಾದರೂ ಮುಂದೆ ಆ ದೇವಾಲಯದ ಸಂರಕ್ಷಣೆ ಇಡೀ ಊರಿನ ಜವಾಬ್ದಾರಿಯೂ ಆಗಿಹೋಗುತ್ತಿತ್ತು; ಅದರ ಸಂರಕ್ಷಣೆಗೆ ಊರಿನವರೆಲ್ಲ ಬದ್ಧರಾಗಿರುತ್ತಿದ್ದರು.

**ದೇವಾಲಯಗಳ ಹೆಸರುಗಳು:**

ದೇವಾಲಯದ ಪ್ರಧಾನ ದೈವಕ್ಕೆ ಇಡುವ ಹೆಸರೇ ದೇವಾಲಯಕ್ಕೂ ಸಲ್ಲುತ್ತಿತ್ತು. ಅನೇಕ ಸಾರಿ ವ್ಯಕ್ತಿಯ ಹೆಸರು ಸ್ವಲ್ಪ ಮಾರ್ಪಾಟಿನೊಂದಿಗೆ ದೇವರ ಹೆಸರಾಗಿ ಪರಿಣಮಿಸುತ್ತಿತ್ತು. ಒಬ್ಬ ವ್ಯಕ್ತಿ ತಾನೇ ದೇವಾಲಯವನ್ನು ನಿರ್ಮಿಸಿ ಅದಕ್ಕೆ ತನ್ನ ಹೆಸರನ್ನು ಇಡುತ್ತಿದ್ದ ಪದ್ಧತಿ ವಿಶೇಷವಾಗಿ ಇತ್ತು. ಕೆಲವು ಸಾರಿ ತಮ್ಮ ಆಪ್ತಬಂಧುಗಳ, ಗುರುಗಳ ನೆನಪಿಗಾಗಿ ಅವರ ಹೆಸರನ್ನು ಇಡುತ್ತಿದ್ದುದುಂಟು. ಅಂಥ ಕೆಲವು ಉದಾಹರಣೆಗಳನ್ನು ಗಮನಿಸಬಹುದು. ದೇವಾಲಯವನ್ನು ತಮ್ಮ ಹೆಸರಿನಲ್ಲೇ ಕಟ್ಟಿಸಿದ ನೂರಾರು ಉದಾಹರಣೆಗಳು ದೊರೆಯುತ್ತವೆ. ಚಟ್ಟ ಎನ್ನುವವನು ಚಟ್ಟೇಶ್ವರ ದೇವಾಲಯವನ್ನು ಕಟ್ಟಿಸಿದ ವಿಷಯ

---

೧. ಕಇ I ಸೌಂದತ್ತಿ ೨೫ ಕ್ರಿ.ಶ. ೧೧೮೬.

೨. (ರೈ) ಎಕ V ಅರಸಿಕೆರೆ ೧ ಕ್ರಿ.ಶ. ೧೧೬೯.

೩. ಎಸ್. ವಿದ್ಯಾಶಂಕರ : 'ಸಪ್ತ ಸಂತಾನಗಳ ಉಲ್ಲೇಖ ಕನ್ನಡ ಕೃತಿಯೊಂದರಲ್ಲಿ', ಸಾಧನೆ ೯-೪ ಪು. ೧೬-೧೮. ಕನ್ನಡ ಕೃತಿಗಳಲ್ಲಿ ಚಿಕ್ಕಮಲ್ಲಿಕಾರ್ಜುನನ ಧರ್ಮಸಂಪಾದನೆ (೫-೫೧) (ಕ್ರಿ.ಶ. ಸು. ೧೪೬೦) ಸಪ್ತ ಸಂತಾನಗಳನ್ನು ಹೇಳುವ ಏಕೈಕ ಕೃತಿ ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಆದರೆ ವಿವೇಕ ಚಿಂತಾಮಣಿಯಲ್ಲಿ (ಕ್ರಿ.ಶ.ಸು. ೧೫೦೦) ಸಪ್ತ ಸಂತಾನಗಳ ಉಲ್ಲೇಖ ಕಂಡುಬರುತ್ತದೆ. ೪-೩೭೨, ೩೭೩.

ಒಂದು ಶಾಸನದಲ್ಲಿ ಉಕ್ತವಾಗಿದೆ.[೧] ಗಳಗೆಯ ನಾಯಕ ಗಳಗೇಶ್ವರ ದೇವಾಲಯವನ್ನು ಕಟ್ಟಿಸಿದ ವಿಷಯ ತಿಳಿದುಬರುತ್ತದೆ.[೨] ಇಂಥ ಅಧಿಕ ಉದಾಹರಣೆಗಳನ್ನು ಗಮನಿಸಬಹುದು.[೩]

ತಮ್ಮ ಹತ್ತಿರದ ಬಂಧುಗಳ ಹೆಸರಿನಲ್ಲಿ ದೇವಾಲಯಗಳನ್ನು ಮತ್ತು ಬಸದಿಗಳನ್ನು ನಿರ್ಮಿಸಿದ ಉದಾಹರಣೆಗಳು ನೂರಾರು ದೊರೆಯುತ್ತವೆ. ದೇವರಸ ಎಂಬುವನ ಹೆಸರಲ್ಲಿ ಅವನ ತಮ್ಮ ಅಪ್ಪರಸನೆಂಬುವನು ದೇವಾಲಯ ನಿರ್ಮಿಸಿರುವುದು ತಿಳಿದುಬರುತ್ತದೆ.[೪] ತಾಯಿಯ ಹೆಸರಲ್ಲಿ ಮಗಳು ದೇವಾಲಯ ನಿರ್ಮಿಸಿರುವುದುಂಟು. ಬಲ್ಲಾಳನ ರಾಣಿ ಬೈಚಲದೇವಿ ತನ್ನ ತಾಯಿ ಮಾದಿಯಕ್ಕನ ಹೆಸರಿನಲ್ಲಿ ಪ್ರಸನ್ನ ಮಾಧವ ದೇವಾಲಯವನ್ನು ನಿರ್ಮಿಸಿದ್ದಾಳೆ.[೫] ಗಂಗಪ ಎನ್ನುವವನು ತನ್ನ ತಾಯಿ ಪೋಚವ್ವೆಯ ಹೆಸರಲ್ಲಿ ಮಾಡಿಸಿದ ಬಸದಿಯ ವಿಷಯ ತಿಳಿದುಬರುತ್ತದೆ.[೬] ನಾಳ್ಪ್ರಭು ಮಧುಸೂದನ ತನ್ನ ತಂದೆಯ ಹೆಸರಿನಲ್ಲಿ ಗಂಗೇಶ್ವರ ದೇವಾಲಯವನ್ನು ನಿರ್ಮಿಸಿ, ದಾನ ಮಾಡಿದ ವಿಷಯ ತಿಳಿದುಬರುತ್ತದೆ.[೭] ಕಲ್ಲಗವುಂಡ ತನ್ನಜ್ಜ ದಂಮ್ಮಗವುಡನ ಹೆಸರಿನಲ್ಲಿ ದಂಮೇಸ್ವರ ದೇವರ ಪ್ರತಿಷ್ಠೆ ಮಾಡಿಸಿದ ವಿಷಯ ತಿಳಿದುಬರುತ್ತದೆ.[೮] ಕಾಮಿಸೆಟ್ಟಿ ಮತ್ತು ವೆಣ್ಣಲೆಸೆಟ್ಟಿಕವ್ವೆಯರು ತಮ್ಮ ಪುತ್ರ ಹರಿಹರ ಶೆಟ್ಟಿಯ ಹೆಸರಲ್ಲಿ ಹರಿಹರೇಶ್ವರ ದೇವಾಲಯವನ್ನು ನಿರ್ಮಿಸಿದ ವಿಷಯ ತಿಳಿದುಬರುತ್ತದೆ.[೯] ರಟ್ಟವಂಶದ ವೀರ ವಿಕ್ರಮಾದಿತ್ಯ ತನ್ನ ರಾಣಿ ತುಳುವಲದೇವಿ ಕಾಲವಶವಾಗಲು ಅವಳ ಹೆಸರಲ್ಲಿ ತುಳುವಲೇಶ್ವರ ದೇವಾಲಯವನ್ನು ನಿರ್ಮಿಸಿದ ವಿಷಯ ತಿಳಿದುಬರುತ್ತದೆ.[೧೦] ಅಪ್ಪರಸ ಎಂಬುವನ ಹೆಸರಲ್ಲಿ ಅವನ ಮಡದಿ ದೇವವ್ವೆ ಅಪ್ಪೇಶ್ವರ ದೇವಾಲಯವನ್ನು ಕಟ್ಟಿಸಿದ ವಿಷಯ ಶಾಸನವೊಂದರಲ್ಲಿ ಉಕ್ತವಾಗಿದೆ.[೧೧] ಇದೇ ರೀತಿ ಗುರುವಿನ ಹೆಸರಿನಲ್ಲಿ ಶಿಷ್ಯರು ದೇವಾಲಯ ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಸಂಗಯ್ಯನೆಂಬುವನು ತನ್ನ ಆರಾಧ್ಯ ಗುರುವಾದ ರೆಮ್ಮರಸನ ಹೆಸರಿನಲ್ಲಿ ರೆಮ್ಮೇಶ್ವರ ಪ್ರತಿಷ್ಠೆ ಮಾಡಿಸಿದ ವಿಷಯ ತಿಳಿದುಬರುತ್ತದೆ.[೧೨] ಕೆಲವು ಸಾರಿ ಅಗಲಿದ ಆತ್ಮೀಯರ ಪರೋಕ್ಷ ವಿನಯಕ್ಕಾಗಿಯೂ ದೇವಾಲಯ ನಿರ್ಮಾಣ ಕಂಡುಬರುತ್ತದೆ. ರುದ್ರಶಕ್ತಿ ಎಂಬ ಕಾಳಾಮುಖ ಮುನಿ ತನ್ನ ಗುರು ವಾಮಶಕ್ತಿದೇವರ ಪರೋಕ್ಷವಿನಯಕ್ಕೆ ಧರೆ ಬಣ್ಣಿಸುವಂತೆ ಪೊಂಬುಳದಲ್ಲಿ ಹರಲಿಂಗ ಸ್ಥಾಪನೆ ಮಾಡಿ ಕುಮಾರ ಬೊಂತೇಶ್ವರ ಎಂಬ ಹೆಸರಿಟ್ಟ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೧೩] ಹೀಗೆ ತಮ್ಮ ಹೆಸರಿನಲ್ಲಿ, ಆತ್ಮೀಯ ಬಂಧುಗಳ ಹೆಸರಿನಲ್ಲಿ, ಗುರುಗಳ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಮಹಾಕಾವ್ಯಗಳಾದ ರಾಮಾಯಣ ಮತ್ತು

---

೧. (ರೈ) ಎಕ V ಬೇಲೂರು ೧೯೪ ಕ್ರಿ.ಶ. ೧೧೬೧.
೨. (ರೈ) ಎಕ V ಬೇಲೂರು ೧೧೪ ಕ್ರಿ.ಶ. ೧೧೭೩.
೩. (ರೈ) ಎಕ V ಚನ್ನರಾಯಪಟ್ಟಣ ೨೪೩ ಕ್ರಿ.ಶ. ೧೨೦೯; (ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೦.
೪. (ರೈ) ಎಕ V ಹೊಳೆನರಸೀಪುರ ೧೧೨ ಕ್ರಿ.ಶ. ೧೨೮೨.
೫. (ರೈ) ಎಕ VI ಕಡೂರು ೧೨೯ ಕ್ರಿ.ಶ. ೧೨೧೮.
೬. (ಮೈ) ಎಕ II ಶ್ರವಣಬೆಳಗೊಳ ೮೦ ಕ್ರಿ.ಶ. ೧೨ ಶಮಾ.
೭. (ರೈ) ಎಕ VII ಶಿವಮೊಗ್ಗ ೫ ಕ್ರಿ.ಶ. ೧೨೧೮.
೮. (ಮೈ) ಎಕ VI ಕೃಷ್ಣರಾಜಪೇಟೆ ೬೯ ಕ್ರಿ.ಶ. ೧೨೪೨.
೯. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.
೧೦. ಕಇ VI ಹಾವೇರಿ ೭೫ ಕ್ರಿ.ಶ. ೧೨೧೩.
೧೧. (ರೈ) ಎಕ V ಹೊಳೆನರಸೀಪುರ ೧೧೨ ಕ್ರಿ.ಶ. ೧೨೮೨.
೧೨. ಎಸ್ಐಐ XX ಶಿರಹಟ್ಟಿ ೨೦೬ ಕ್ರಿ.ಶ. ?.
೧೩. ಎಸ್ಐಐ XV ಗದಗು ೭೩ ಕ್ರಿ.ಶ. ೧೧೮೯.

ಮಹಾಭಾರತಗಳ ಕೆಲವು ಪಾತ್ರಗಳ ಹೆಸರುಗಳಲ್ಲಿ ದೇವಾಲಯಗಳು ನಿರ್ಮಾಣವಾಗಿರುವುದು ಕಂಡುಬರುತ್ತದೆ. ರಾವಣಾದಿ ರಾಕ್ಷಸರನ್ನು ಕೊಂದು ರಾಮೇಶ್ವರ, ಲಕ್ಷ್ಮಣೇಶ್ವರ, ಹನುಮಂತೇಶ್ವರ ದೇವಾಲಯಗಳನ್ನು ರಾಮ ಲಕ್ಷ್ಮಣರು ಸ್ಥಾಪಿಸಿ ಅಯೋಧ್ಯೆಗೆ ಹೋದರು ಎಂದು ಶಾಸನ ಒಂದು ತಿಳಿಸುತ್ತದೆ.[೧] ಹುಲಿಗುಂದದ ಶಾಸನದಲ್ಲಿ 'ಶ್ರೀ ಧರ್ಮೇಶ್ವರ ದೇವರು ಶ್ರೀ ಭೀಮೇಶ್ವರ ದೇವರು ಶ್ರೀ ಅರ್ಜುನೇಶ್ವರ ದೇವರು ಶ್ರೀ ಲಕುಲೇಶ್ವರ ದೇವರು ಶ್ರೀ ಸಹದೇವೇಶ್ವರ ದೇವರು ಯಿಂತೀ ಪಂಚಲಿಂಗೇಶ' ದೇವರುಗಳ ಪೂಜಾಕಾರ್ಯಗಳಿಗೆ ದಾನವನ್ನು ನೀಡಲಾಗಿದೆ[೨] ಎಂದಿದೆ.

ಕೆಲವು ಸಾರಿ ಯಾರಾದರೂ ವೀರನು ಹೋರಾಡಿ ಮಡಿದು ವೀರಸ್ವರ್ಗ ಪಡೆದಿದ್ದರೆ ಅವನ ಶೌರ್ಯವನ್ನು ಮೆಚ್ಚಿ ದೇವಾಲಯವನ್ನು ಕಟ್ಟಿಸಿದ ಸಂದರ್ಭಗಳೂ ಇವೆ. ಸಾಮಾನ್ಯವಾಗಿ ವೀರರಿಗಾಗಿ ವೀರಗಲ್ಲನ್ನು ನೆಡುವ ಸಂಪ್ರದಾಯವಿದ್ದರೂ ಅವರಿಗಾಗಿ ದೇವಾಲಯವನ್ನು ಕಟ್ಟುವ ಪದ್ಧತಿಯೂ ಇದ್ದಿತು. ಚಾಲುಕ್ಯ ಒಂದನೆಯ ಜಯಸಿಂಹನ ಮಹಾಸಾಮಂತ ಅಲಯ್ಯನು ಕುಪ್ಪಗುಡ್ಡೆಯಲ್ಲಿ ಮಂಡಲಿಕ ಕುಂದನೊಡನೆ ಹೋರಾಡಿ ಮಡಿಯಲು ಅವನ ಮಗ ಜಯಸಿಂಹ ತಂದೆಯ ಹೆಸರಿನಲ್ಲಿ ಅಲೇಶ್ವರ ದೇವಾಲಯವನ್ನು ಕಟ್ಟಿಸಿರುವುದು ಕಾಣುಬರುತ್ತದೆ.[೩] ವೀರರಿಗೆ ಸಲ್ಲಿಸುವ ಈ ಗೌರವ ಸಂಪ್ರದಾಯವನ್ನು ದೇವನಹಳ್ಳಿ ತಾಲ್ಲೂಕು ನಲ್ಲೂರು ಮುಂತಾದ ಕಡೆ ದೊರೆಯುವ ವೀರರ ಗುಡಿಗಳಲ್ಲಿ ಕಾಣಬಹುದಾಗಿದೆ.

ದೇವಾಲಯ ನಿರ್ಮಾಣ ರಾಜರಿಂದ, ರಾಣಿಯರಿಂದ, ಅಧಿಕಾರಿಗಳಿಂದ, ಅವರ ಬಂಧುವರ್ಗದಿಂದ, ವ್ಯಾಪಾರಿಗಳಿಂದ, ಸನ್ಯಾಸಿಗಳಿಂದ, ಸಾಮಾನ್ಯರಿಂದ ಸಾಗಿಬಂದಿದೆ. ಅನೇಕ ರಾಜರು ತಾವೇ ಅನೇಕ ಅಗ್ರಹಾರಗಳನ್ನು, ದೇವಾಲಯಗಳನ್ನು, ಕೆರೆಗಳನ್ನು ನಿರ್ಮಿಸುತ್ತಿದ್ದರು. ವಿಷ್ಣುವರ್ಧನನು ಅನೇಕ ಅಗ್ರಹಾರ, ದೇವಾಲಯ ಮತ್ತು ಕೆರೆಗಳನ್ನು ನಿರ್ಮಿಸಿದನೆಂದು ಕ್ರಿ.ಶ. ೧೧೮೫ರ ಶಾಸನವೊಂದು ತಿಳಿಸುತ್ತದೆ.[೪] ಎಷ್ಟೋ ಸಾರಿ ರಾಜರು ತಾವೇ ನೇರವಾಗಿ ದೇವಾಲಯ ನಿರ್ಮಾಣ ಮಾಡಿಸದೇ ಹೋದರೂ ತಮ್ಮ ಮಂತ್ರಿಗಳಿಗೆ ಮತ್ತು ಇತರ ಅಧಿಕಾರಿಗಳಿಗೆ ಆ ಕಾರ್ಯಗಳಲ್ಲಿ ಪ್ರೋತ್ಸಾಹ ನೀಡುತ್ತಿದ್ದರು. ಈ ದೃಷ್ಟಿಯಿಂದ ಪೋಲಾಳ್ವ ದಂಡನಾಥ ಹರಿಹರದಲ್ಲಿ ಪುನರ್ನಿರ್ಮಿಸಿದ ದೇವಾಲಯ ಗಮನಾರ್ಹವಾದದ್ದು.[೫] ಬಲ್ಲಾಳನ ಮಂತ್ರಿಗಳಲ್ಲೊಬ್ಬನಾದ ಅಮೃತದಂಡನಾಥ ಅಮೃತೇಶ್ವರ ದೇವಾಲಯ ನಿರ್ಮಿಸಿದ ವಿಷಯ ಪ್ರಸಿದ್ಧವಾಗಿದೆ.[೬] ಇದೇ ರೀತಿ ಹೊಯ್ಸಳ ಮಂತ್ರಿ ಗಂಗರಾಜ ಅನೇಕ ಜಿನಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದ. ಅವನು ಎಷ್ಟು ವ್ಯಾಪಕವಾಗಿ ಜಿನಾಲಯ ನಿರ್ಮಾಣ ಕೈಗೊಂಡನೆಂದರೆ ಗಂಗವಾಡಿ ತೊಂಬತ್ತಾರು ಸಾವಿರ ಕೊಪಣದಂತಾಯಿತಂತೆ.[೭] ಎರಡನೆಯ ಬಲ್ಲಾಳನ ಮಂತ್ರಿ ಚಂದ್ರಮೌಳಿಯ ಮಡದಿ ಆಚಿಯಕ್ಕ ಶ್ರವಣಬೆಳಗೊಳದಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದಳು.[೮] ಒಂದನೆಯ ನರಸಿಂಹನ ಭಂಡಾರಿಯಾಗಿದ್ದ ಹುಳ್ಳ ಬಂಕಾಪುರ, ಕೊಪಣ, ಕಲ್ಲಂಗೆರೆಗಳಲ್ಲಿ ಅನೇಕ ಬಸದಿಗಳನ್ನು ಜೀರ್ಣೋದ್ಧಾರ ಮಾಡಿಸಿದನು. ಅಲ್ಲದೆ ಶ್ರವಣಬೆಳಗೊಳದಲ್ಲಿ ಚತುರ್ವಿಂಶತಿ ಬಸದಿಯನ್ನು ಭವ್ಯವಾಗಿ ಕಟ್ಟಿಸಿದನು.[೯]

---

೧. ಕಇ I ಸೌಂದತ್ತಿ ೨೫ ಕ್ರಿ.ಶ. ೧೧೮೬.

೨. (ರೈ) ಎಕ XI ಚಿತ್ರದುರ್ಗ ೩೨ ಕ್ರಿ.ಶ. ೧೨೮೬.

೩. ಎಂ.ಎಂ. ಕಲಬುರ್ಗಿ : ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು, ಪು. ೯೨-೯೩.

೪. (ರೈ) ಎಕ V ಅರಸಿಕೆರೆ ೧೨೭ ಕ್ರಿ.ಶ. ೧೧೮೫.

೫. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

೬. (ರೈ) ಎಕ VI ತರೀಕೆರೆ ೪೫ ಕ್ರಿ.ಶ. ೧೧೯೬.

೭. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.

೮. (ರೈ) ಎಕ V ಚನ್ನರಾಯಪಟ್ಟಣ ೧೫೦ ಕ್ರಿ.ಶ. ೧೧೮೨.

೯. (ಮೈ) ಎಕ II ಶ್ರವಣಬೆಳಗೊಳ ೪೭೬, ೪೮೧ ಕ್ರಿ.ಶ. ೧೧೫೯.

ಅಕ್ಕಸಾಲೆ ವೃತ್ತಿಯವನಾದ ಕೇತಚಾರಿ ಬೋಗಾಚಾರಿಯಿಂದಲೂ ದೇವಾಲಯ ನಿರ್ಮಾಣ ನಡೆದಿದೆ.[1] ಹೀಗೆ ಸಮಾಜದ ಎಲ್ಲ ವರ್ಗದವರು ದೇವಾಲಯ ನಿರ್ಮಾಣದಲ್ಲಿ ಆಸಕ್ತ ತಳೆದು ಕಾರ್ಯಪ್ರವೃತ್ತರಾಗಿರುವುದು ಮೇಲ್ನೋಟಕ್ಕೇ ಎದ್ದುಕಾಣುತ್ತದೆ. ವೈಯಕ್ತಿಕ ಆಸಕ್ತಿಯಿಂದ ದೇವಾಲಯ ನಿರ್ಮಿತಿ ಆದಂತೆ ಸಾಂಘಿಕವಾಗಿಯೂ ದೇವಾಲಯ ನಿರ್ಮಾಣ ನಡೆಯುತ್ತಿದ್ದಿತು. ಉದಾಹರಣೆಗೆ ಕೊಯ್ಲಾಳ್ಗಳು ಕೊಯ್ಲಾಳೇಶ್ವರ ದೇವಾಲಯ ಕಟ್ಟಿಸಿದ್ದಾರೆ.[2] ಮೇಳಿ ಸಾಸಿರ್ವರು ಬೆಳಗುಂಬದಲ್ಲಿ ಮೇಳೇಶ್ವರ ದೇವಾಲಯವನ್ನು ಕಟ್ಟಿಸಿದ್ದಾರೆ.[3] ಶ್ರವಣಬೆಳಗೊಳದ ನಗರ ಜಿನಾಲಯವನ್ನು ನಾಗದೇವ ಕ್ರಿ.ಶ. ೧೧೯೫ರಲ್ಲಿ ಕಟ್ಟಿಸಿದನು. ಆ ಬಸದಿಗೆ ಊರಿನ ನಕರರು ಅನೇಕ ದಾನಗಳನ್ನು ನೀಡಿದ್ದರಿಂದ ಅದಕ್ಕೆ ನಗರ ಜಿನಾಲಯ ಎಂಬ ಹೆಸರು ಬಂದಿತು.[4] ಹೀಗೆ ಒಟ್ಟಿನಲ್ಲಿ ವೈಯಕ್ತಿಕ ಮತ್ತು ಸಾಂಘಿಕ ಪ್ರಯತ್ನಗಳಿಂದ ವ್ಯಾಪಕವಾಗಿ ದೇವಾಲಯ ನಿರ್ಮಾಣ ಕಾರ್ಯ ಕರ್ನಾಟಕದಾದ್ಯಂತ ನಡೆದಿರುವುದು ಕಂಡುಬರುತ್ತದೆ.

ಆ ಕಾಲದಲ್ಲಿ ದೇವಾಲಯ ನಿರ್ಮಾಣ ಬಹುವ್ಯಾಪಕ ಪ್ರಮಾಣದಲ್ಲಿ ನಡೆಯುತ್ತಿತ್ತು. ಶ್ರವಣಬೆಳಗೊಳದ ಒಂದು ಶಾಸನ ವಿನಯಾದಿತ್ಯ ನಿರ್ಮಿಸಿದ ಜಿನಮಂದಿರದ ವಿಷಯವನ್ನು ಹೀಗೆ ಹೇಳುತ್ತದೆ.

ಇಟ್ಟಿಗೆಗೆಂದಗಟ್ಟ ಕುಟೆಗಳ್ ಕೆಱೆಯಾದವು ಕಲ್ಲಗೊಂಡ ಪೆ
ರ್ವೆಟ್ಟು ಧರಾತಳಕ್ಕೆ ಸರಿಯಾದುವು ಸುಣ್ಣದ ಭಂಡಿ ಬಂದ ಪೆ
ರ್ವಟ್ಟೆಯೆ ಪಳ್ಳಮಾದುವೆನೆ ಮಾಡಿಸಿದಂ ಜಿನರಾಜಗೇಹಮಂ
ನೆಟ್ಟನೆ ಪೊಯ್ಸಳೇಶನೆನೆ ಬಣ್ಣಿಪರಾರ್ ಮಲೆರಾಜರಾಜನಂ॥[5]

ಆ ಬಸದಿ ಕಟ್ಟಿಸಲು ಇಟ್ಟಿಗೆ ತಯಾರಿಸಲು ಅಗೆದದ್ದರಿಂದ ಉಂಟಾದ ಹಳ್ಳಗಳು ಕೆರೆಗಳಾದವು, ಕಟ್ಟಡದ ಕಲ್ಲುಗಳಿಗೆ ದೊಡ್ಡ ಬೆಟ್ಟಗಳನ್ನು ಕಡಿದು ತೆಗೆದಾಗ ಅವು ನೆಲಸಮವಾದವು, ಬಸದಿಗೆ ಸುಣ್ಣವನ್ನು ಹೇರಿಕೊಂಡು ಓಡಾಡಿದ ಗಾಡಿಗಳ ಚಲನೆಯಿಂದ ದಾರಿಯೆಲ್ಲ ಹಳ್ಳವಾಗಿ ಮಾರ್ಪಟ್ಟಿತಂತೆ. ಇಷ್ಟು ಆಗಬೇಕಾದರೆ ಎಷ್ಟು ಇಟ್ಟಿಗೆ ಕಲ್ಲು ಸುಣ್ಣ ಆ ಜಿನಮಂದಿರ ನಿರ್ಮಾಣಕ್ಕೆ ವ್ಯಯವಾಗಿರಬೇಕು ಮತ್ತು ಆ ಮಂದಿರದ ಆಕೃತಿ ಎಷ್ಟು ಬೃಹತ್ತಾದುದಾಗಿರಬೇಕು ಎಂಬ ಕಲ್ಪನೆ ಮೂಡದಿರದು.

ಕರ್ನಾಟಕದ ದೇವಾಲಯಗಳು ಕೇವಲ ದೇವಮಂದಿರಗಳಾಗಿರದೆ ಕಲೆಗೆ ಅಪಾರ ಕಾಣಿಕೆಯನ್ನು ಸಲ್ಲಿಸಿವೆ. ಬೇಲೂರು, ಹಳೆಯಬೀಡು, ಬದಾಮಿ, ಸೋಮನಾಥಪುರ ಮುಂತಾದ ಅನೇಕ ದೇವಾಲಯಗಳು ತಮ್ಮ ಅಪೂರ್ವ ಕಲೆಯಿಂದ ಪ್ರಸಿದ್ಧವಾಗಿವೆ. ಕೆಲವು ಶಾಸನಗಳಲ್ಲಿ ಆ ಕಲಾನೈಪುಣ್ಯವನ್ನು ಸೂಕ್ಷ್ಮವಾಗಿ ಉಲ್ಲೇಖಿಸಿರುವುದುಂಟು. ದೇವಾಲಯಗಳನ್ನು ಇಟ್ಟಿಗೆಗಳಿಂದಲೂ ಕಲ್ಲುಗಳಿಂದಲೂ ಕಟ್ಟುತ್ತಿದ್ದರೆಂಬುದು ವಾಸ್ತುರಚನೆಯಿಂದಲೂ ಶಾಸನಗಳಿಂದಲೂ ತಿಳಿದುಬರುತ್ತದೆ. ಕೆಲವು ಶಾಸನಗಳು ಸ್ಪಷ್ಟವಾಗಿ 'ಕಲುಪೆಸದ ದೇವಾಲಯ'ವೆಂದು ತಿಳಿಸುತ್ತವೆ.[6] ಅನೇಕ ದೇವಾಲಯಗಳು ಕಲಾತ್ಮಕವಾಗಿಯೂ, ಆಕರ್ಷಕವಾಗಿಯೂ ರೂಪುಗೊಳ್ಳುತ್ತಿದ್ದವು.[7] ಎಷ್ಟೋ ದೇವಾಲಯಗಳು 'ಪಾಂಚಾಳಿಕೆಯ' ಕಾರ್ಯದ ಪರಿಪೂರ್ಣಸಿದ್ಧಿಯನ್ನು ಪಡೆದಿದ್ದವು. ಹೊಯ್ಸಳ ದಣ್ಣಾಯಕ ಹರಿಹರ ನಿರ್ಮಿಸಿದ ದೇವಾಲಯದ ವರ್ಣನೆ ಹೀಗೆ ಬಂದಿದೆ :

---

೧. (ಮೈ) ಎಕ V ತಿ.ನರಸೀಪುರ ೩೦೧ ಕ್ರಿ.ಶ. ೧೨೭೮.

೨. (ರೈ) ಎಕ V ಅರಸಿಕೆರೆ ೭೯ ಕ್ರಿ.ಶ. ೧೧೮೪.

೩. (ರೈ) ಎಕ V ಅರಸಿಕೆರೆ ೧೦೩ ಕ್ರಿ.ಶ. ೧೧೯೯.

೪. ಎಸ್. ಶ್ರೀಕಂಠಶಾಸ್ತ್ರಿ : ಪೂರ್ವೋಕ್ತ, ಪು. ೨೧೪.

೫. (ಮೈ) ಎಕ II ಶ್ರವಣಬೆಳಗೊಳ ೧೭೬ ಕ್ರಿ.ಶ. ೧೧೩೧.

೬. (ರೈ) ಎಕ VII ಶಿವಮೊಗ್ಗ ೫೫ ಕ್ರಿ.ಶ. ೧೨೧೬.

ಮೊದಲಿಂದಂ ಕಳಶಂಬರಂ ಮೆರೆವ ನಾನಾ ಚಿತ್ರಪತ್ರಂಗಳಿಂ
ಮುದಮಂ ಬೀರುವ ಭಾರತಾದಿ ಕಥೆಯಂ ಮೆಯ್ವೆತ್ತ ಕೂಟಂಗಳಿಂ
ದಿದು ಪಾಂಚಾಳಿಕೆ ತಳ್ತ ಮೇರುಗಿರಿಯೋ ಪೇಳೆಂಬಿನಂ ವಿಭ್ರಮಾ
ಸ್ಪದಮಾಗಿರ್ಪುದು ಮಲ್ಲಿಕಾರ್ಜುನ ದೇವರ... ದೇವಾಲಯಂ॥[೧]

ಬುಡದಿಂದ ಕಳಶದವರೆಗೆ ನಾನಾ ಚಿತ್ರ ರಚನೆಗಳಿಂದ, ಭಾರತಾದಿ ಕಥಾಪ್ರಸಂಗಗಳಿಂದ ಕೂಡಿದ ಶಿಲ್ಪಕಲೆ ರೂಪಾರಿಕೆಯ ಪಕ್ವತೆಗೆ ಸಾಕ್ಷಿಯೆಂಬಂತ ಇದ್ದ ಆ ದೇವಾಲಯ ಅದ್ಭುತವಾಗಿದ್ದಿತು. ದಾಸೇಶ್ವರವೆಂಬ ದೇವಾಲಯದ ಶಿಲ್ಪ ವೈಭವವನ್ನು ಶಾಸನವೊಂದು ಹೀಗೆ ವರ್ಣಿಸಿದೆ:

ತರದಿಂ ನೋಳ್ಪರ ತೋರ್ಪ ಮಾರ್ಪೊಳೆ ಪುಟಜೀವಂಬೊಯ್ದರೂ ವಾರ ಮಾ
ಭರಣಾಘಾತದ ಹ(ಲ)ವುಂ ಪ್ರತಿಕೃತಿ ವ್ಯೂಹಂಗಳಿಂ ಸೋವಭಾ
ಸುರರಂಗಂ ಮದಮತ್ತಚಿತ್ತಗಜ. ಗ್ಗಾಳಾನಸುಂಸ್ತಂಭವೀ
ಪರಿಯೆಂಬಂತಿರೆ ತೋರ್ಪ್ಪ ಕಂಬಮೆಸೆಗುಂ ದಾಸೇಶ್ವರಾವಾಸದೊಳ್॥[೨]

ಪೋಲಾಳ್ವ ದಂಡನಾಥ ೧೧೫ ಹೊನ್ನ ಕಳಶಗಳನ್ನೊಳಗೊಂಡ ಹರಿಹರ ದೇವಾಲಯವನ್ನು ನಿರ್ಮಿಸಿದ. ಆ ದೇವಾಲಯದ ಶಿಲ್ಪ ಮತ್ತು ಇತರ ಮಹತ್ವಗಳನ್ನು ಶಾಸನಗಳು ವಿಶೇಷವಾಗಿ ನಿರೂಪಿಸುತ್ತವೆ.

ದೆಸೆವೆಣ್ಗಳ್ ನೆಲೆಗೊಂಡ ಪುತ್ಥಳಿಗಳಂ ಗೋತ್ರಾದ್ರಿಗಳ್ ತುಂಗಕೂ
ಟಸಹಸ್ರಂಗಳನಿಂದು ಸೂರ್ಯವಳಯಂಗಳ್ ಪೋಲ್ವಿನಂ ಶೋ
ಭಿಸೆ ಚೆಂಬೊಂಗಳಸಂಗಳಂ ಹರಿಹರ ಶ್ರೀಗೇಹಮಂ ಕೂಡೆ ಮಾ
ಡಿಸಿದಂ ಧಾರ್ಮಿಕ ಧರ್ಮರಾಜತನಯಂ ಪೋಲಾಳ್ವದಂಡಾಧಿಪಂ॥

ಗಿರಿಯೋ ಕೂಟಮೋ ಸೂರ್ಯನೋ ಕಲಶಮೋ ದಿಗ್ಭಿತ್ತಿಯೋ ಭಿತ್ತಿಯೋ
ದೊರೆವತ್ತಾ ದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಳಮೋ
ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ ಪೋಲಾಳ್ವ ದಂಡೇಶನ
ಚ್ಚರಿಯಪ್ಪಂತಿರೆ ಮಾಡಿದಂ ಹರಿಹರ ಶ್ರೀದೇವತಾವಾಸಮಂ॥

ಇದು ಪದ್ಮಾವಸಥಂ ದಿವಾಕರನವೊಲ್ ಕೀರ್ತ್ಯುನ್ನತಂ ಪಾತ್ರದಾ
ನದವೊಲ್ ಸತ್ಕುಮುದಂ ಸರೋವರದವೊಲ್ ಘಂಟಾನ್ವಿತಂ ದಿಗ್ಗಜೇಂ
ದ್ರದವೊಲ್ ತಾನೆನಿಪನ್ನೆಗಂ ಹರಿಹರ ಶ್ರೀಗೇಹಮಂ ಮಾಡಿದಂ
ಯದುಭೂಪಾಳನ ದಂಡನಾಥತಿಳಕಂ ಪೋಲಾಳ್ವ ದಂಡಾಧಿಪಂ॥

ನಗವಾಯಿ ಕುಮುದಂಗಳಿಂ ನೆಗೆದ ಜಂಘಾಕಾಂಡದಿಂ ರನ್ನವ
ಟ್ಟಿಗೆಯಿಂ ದಂಡಲತಾವಿಚಿತ್ರಚಿತ್ರಮಯಪತ್ರವ್ರಾತದಿಂ ಘಂಟೆಯಿಂ
ಬಗೆಯಿಂ ಬಲ್ಸೆಜಿಗೆಯ್ವ ಪುತ್ತಳಿಗಳಿಂ ರಂಗಸ್ಥಳೀಸ್ತಂಭಮಾ
ವಗಮೊಪ್ಪುತ್ತಿರೆ ರಂಜಿಕುಂ ಹರಿಹರ ಶ್ರೀದೇವತಾಮಂದಿರಂ॥[೩]

ಹೀಗೆ ಇನ್ನೂ ಅನೇಕ ಶಾಸನಗಳಲ್ಲಿ ದೇವಾಲಯಗಳ ರಚನೆ ಮತ್ತಿತರ ಮಹತ್ವಗಳನ್ನು ಕುರಿತು ಹೊಗಳಲಾಗಿದೆ.

---

೧. (ಮೈ) ಎಕ VII ಮಂಡ್ಯ ೨೯ ಕ್ರಿ.ಶ. ೧೨೩೪.

೨. ಕಇ VI ಹಾವೇರಿ ೭೪ ಕ್ರಿ.ಶ. ೧೧೮೮.

೩. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

ದೇವಾಲಯಗಳನ್ನು ಕಟ್ಟಿದ ಶಿಲ್ಪಿಗಳಿಗೆ ಮತ್ತು ಇತರ ಕೆಲಸಗಾರರಿಗೆ ಹಣದ ರೂಪದಲ್ಲಿ ಮತ್ತು ಭೂಮಿರೂಪದಲ್ಲಿ ಪ್ರತಿಫಲವನ್ನು ಕೊಡುತ್ತಿದ್ದರು. ಬೊಮ್ಮರಾಸಿ ಎನ್ನುವವನು ದೇವಾಲಯದ ಶಿಖರದ ಇಟ್ಟಿಗೆಯ ಕೆಲಸಕ್ಕೆ (ಕಟ್ಟಿದವನ ಹೆಸರಿನ ಭಾಗ ಶಾಸನದಲ್ಲಿ ತ್ರುಟಿತವಾಗಿದೆ) ಭೂಮಿಯನ್ನು ಕೊಟ್ಟ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೧] ಬಸದಿಯೊಂದಕ್ಕೆ 'ಗಂಧ ಗುಡಿಯನ್ನು' (ಗಂಧದ ಬಾಗಿಲು) ಮಾಡಿಕೊಟ್ಟಿದ್ದಕ್ಕಾಗಿ ಹದಿನೈದು ಗದ್ಯಾಣಗಳನ್ನು ಕೊಟ್ಟ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೨]

ಎಷ್ಟೋ ಸಾರಿ ಇಡೀ ದೇವಾಲಯವನ್ನು ಕಟ್ಟಿಸಲು ಆರ್ಥಿಕ ಸ್ಥಿತಿ ಇಲ್ಲದವರು ಅಥವಾ ಅವಕಾಶವಿಲ್ಲದವರು ದೇವಾಲಯದ ಯಾವುದಾದರೂ ಭಾಗವನ್ನೋ ಅಥವಾ ಕಂಭವನ್ನೋ ಮಾಡಿಸಿ ತೃಪ್ತಿಪಡುತ್ತಿದ್ದರು. (ಈ ಕಾಲದಲ್ಲಿಯೂ ಒಂದು ಕಂಭವನ್ನೋ ಅಥವಾ ಒಂದು ಮೆಟ್ಟಿಲನ್ನೋ ಮಾಡಿಸುವ ಪದ್ಧತಿ ಇರುವುದನ್ನು ಅನೇಕ ದೇವಾಲಯಗಳಲ್ಲಿ ಕಾಣಬಹುದು). ಶ್ರವಣಬೆಳಗೊಳದ ಗೊಮ್ಮಟೇಶ್ವರ ವಿಗ್ರಹದ ಸುತ್ತ ಗಂಗರಾಜನೆಂಬುವನು ಸುತ್ತಾಲಯವನ್ನು ಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೩] ಸಿದ್ಧೇಶ್ವರ ದೇವಾಲಯದ ನಾಲ್ಕು ಕಂಭಗಳನ್ನು ಬೇರೆ ಬೇರೆ ವ್ಯಕ್ತಿಗಳು ಮಾಡಿಸಿದ್ದನ್ನು ಒಂದು ಶಾಸನ ತಿಳಿಸುತ್ತದೆ.[೪] ದೇವಾಲಯ ನಿರ್ಮಾಣದಲ್ಲಿ ಹೇಗೆ ಅನೇಕ ವ್ಯಕ್ತಿಗಳು ಸಹಕರಿಸುತ್ತಿದ್ದರೋ ಅದೇ ರೀತಿ ಜೀರ್ಣೋದ್ಧಾರಕ್ಕೆ, ಎಣ್ಣೆಗೆ (ತೆಲ್ಲಿಗರು), ಹೂವಿಗೆ (ಮಾಲೆಗಾರರು), ನಾನಾ ವ್ಯಾಪಾರಿಗಳು, ಸುಂಕದ ಅಧಿಕಾರಿಗಳು ತಮಗೆ ಅನುಕೂಲವಾದ ದಾನಗಳನ್ನು ನೀಡುತ್ತಿದ್ದುದನ್ನು ಅನೇಕ ಶಾಸನಗಳು ತಿಳಿಸುತ್ತವೆ. ವೈಯಕ್ತಿಕವಾಗಲ್ಲದೆ ಅನೇಕ ವರ್ತಕ ಶ್ರೇಣಿಗಳು, ಊರಿನ ಬೇರೆ ಬೇರೆ ಶ್ರೇಣಿಗಳು ದಾನ ಕಾರ್ಯವನ್ನು ಮಾಡುತ್ತಿದ್ದುದಲ್ಲದೆ ಅದನ್ನು ನಿರ್ವಹಿಸಿಕೊಂಡು ಹೋಗುವ ಜವಾಬ್ದಾರಿಯನ್ನೂ ಹೊತ್ತುಕೊಂಡಿರುವುದನ್ನು ಕಾಣುತ್ತೇವೆ.

**ಜೀರ್ಣೋದ್ಧಾರ:**

ದೇವಾಲಯಗಳ ಸಂರಕ್ಷಣೆಗೆ, ನಿರಂತರ ಪೂಜಾಕಾರ್ಯಗಳಿಗೆ ದಾನ ಕಾರ್ಯಗಳು ನಡೆಯುತ್ತಿದ್ದುದು ಸಾವಿರಾರು ಶಾಸನಗಳಲ್ಲಿ ನಿರೂಪಿತವಾಗಿದೆ. ದೇವಸ್ಥಾನ ನಿರ್ಮಿಸಿದಾಗ ಕೊಟ್ಟ ದಾನಗಳು ಮಾತ್ರವಲ್ಲ, ಅನಂತರವೂ ನಿರಂತರವಾಗಿ ದಾನ ಕಾರ್ಯಗಳು ನಡೆಯುತ್ತಲೇ ಇದ್ದವು. ದಾನಿಗಳು ಎಷ್ಟೇ ಉದಾರವಾಗಿ ದಾನ ನೀಡಿದ್ದರೂ ಕಾಲ ಕ್ರಮೇಣ ಪ್ರಾಕೃತಿಕ ಕಾರಣಗಳಿಂದ, ಯುದ್ಧಗಳ ಕಾರಣದಿಂದ, ಪರಮತದ್ವೇಷದಿಂದ, ಮಾನವ ಸಹಜ ನಿರ್ಲಕ್ಷ್ಯದಿಂದ -ಹೀಗೆ ಯಾವುದಾದರೂ ಕಾರಣದಿಂದ ದೇವಾಲಯಗಳು ಜೀರ್ಣವಾಗುತ್ತಿದ್ದವು. ಅಂತಹ ಸಮಯದಲ್ಲಿ ದಾನಿಗಳು ಮುಂದೆ ಬಂದು ಜೀರ್ಣೋದ್ಧಾರ ಮಾಡಿಸಿ ಅನೇಕ ದಾನಗಳನ್ನು ಮಾಡಿರುವುದುಂಟು. ದೇವಾಲಯಗಳನ್ನು ಕಟ್ಟಿಸುವುದು ಎಷ್ಟು ಪುಣ್ಯಕಾರ್ಯವೆಂದು ಭಾವಿಸಲಾಗಿದ್ದಿತೋ ಅಷ್ಟೇ ಅವುಗಳ ಜೀರ್ಣೋದ್ಧಾರ ಕಾರ್ಯವೂ ಪುಣ್ಯಕಾರ್ಯವೆಂದು ಭಾವಿಸಲಾಗಿತ್ತು. ಜೀರ್ಣೋದ್ಧಾರಕ್ಕಾಗಿ ಮಾಡಿದ ದಾನವನ್ನು ಹೇಳುವ ವಿಪುಲ ಶಾಸನಗಳು ದೊರೆಯುತ್ತವೆ. ಬೇಲೂರಿನ ಚೆನ್ನಕೇಶವ

---

೧. ಎಸ್‌ಐಐ XX ಜಮಖಂಡಿ ೨೧೯ ಕ್ರಿ.ಶ. ೧೨೭೯.

೨. (ಮೈ) ಎಕ IV ಹುಣಸೂರು ೩೭ ಕ್ರಿ.ಶ. ೧೩೦೩-೪. ಅರ್ಹಂತನಿಗಾಗಿ ನಿರ್ಮಿಸುತ್ತಿದ್ದ ಗಂಧದ ಕುಟೀರ. ಇಲ್ಲಿ ಅದು ಗರ್ಭಗುಡಿಯ ದ್ವಾರವನ್ನು ಹೇಳುವ ಹಾಗೆ ಕಾಣುತ್ತದೆ.

೩.. (ಮೈ) ಎಕ II ಶ್ರವಣಬೆಳಗೊಳ ೨೭೪ ಕ್ರಿ.ಶ. ೧೨ ಶ.ಮಾ.

೪. ಎಸ್‌ಐಐ XVIII ಹಾವೇರಿ ೩೪೯ ಕ್ರಿ.ಶ. ೧೩ ಶ.ಮಾ.

ಹೀಗೆ ದೇವಾಲಯದ ಒಂದೊಂದು ಭಾಗವನ್ನು ಮಾಡಿಸಿಕೊಡುವ ಪದ್ಧತಿ ಸಹಕಾರ ತತ್ವವಾಗಿರುವಂತೆ ಆರ್ಥಿಕವಾಗಿಯೂ ಅನುಕೂಲಕರವಾಗಿದೆ.

ದೇವಾಲಯದ ಶಿಖರದ ಮರವೆಸನವೆಲ್ಲ ಕೊಳೆತು ಮುರಿದು ಬಿದ್ದಾಗ ಮಹಾಪ್ರಧಾನಿ ಖಂಡೆಯ ರಾಯ ಸೋಮಯ್ಯ ದಂಡನಾಯಕ ನೋಡಿ ಮರಗೆಲಸವನ್ನು ಬಲಿಷ್ಠಗೊಳಿಸಬೇಕೆಂದು ತನ್ನ ಅಧೀನದ ಅಧಿಕಾರಿ ರಂಗಣ್ಣನಿಗೆ ಹೇಳಲು ಅವನು ಮರಗೆಲಸವನ್ನು ಮಾಡಿಸಿ ಜೀರ್ಣವಾದ ಭಾಗಗಳೆಲ್ಲವನ್ನು ಬಲಗೊಳಿಸಿ, ಬಿದ್ದ ಇಟ್ಟಿಗೆಗಳೆಲ್ಲವನ್ನೂ ಸರಿಪಡಿಸಿದ ವಿಷಯವನ್ನು ಶಾಸನವೊಂದು ನಿರೂಪಿಸುತ್ತದೆ.[೧] ಹಳೇ ಆಲೂರಿನ ಬಸದಿಯೊಂದು ಜೀರ್ಣವಾಗಲು ಆ ಊರಿನ ವೇಳರು (ಒಂದು ಜಾತಿ) ಕೋವರು (< ಗೋಪ=ದನಗಾಹಿ) ಕುಣಂದರು (?) ನಲ್ಲೊಡೆಯರು (?) ಇವರ ಸಂತತಿಯವರೆಲ್ಲ ಸೇರಿ ಅದನ್ನು ಜೀರ್ಣೋದ್ಧಾರ ಮಾಡಿಸಿ ಅದಕ್ಕೆ ಗದ್ದೆ ಬೆದ್ದಲು ತೋಟ ಮನೆ ಒಳಗಾದ ದೇವದಾನ ಸರ್ವ ನಮಸ್ಯವಾಗಿ ಬಿಟ್ಟು ಆದಿಯಣ್ಣ ಚೆಲುವಣ್ಣಗಳಿಗೆ ಆ ಬಸದಿಯ ಸ್ಥಾನವನ್ನು ನೀಡಿ ಸಂತಾನ ಪರಂಪರೆಯಾಗಿ ಅದನ್ನು ನೋಡಿಕೊಳ್ಳಲು ವ್ಯವಸ್ಥೆ ಮಾಡಿರುವುದುಂಟು.[೨] ಜೋಡಿಬಸವನ ಪುರದಲ್ಲಿ ವಾಸುದೇವನು ಕಟ್ಟಿಸಿದ ಇಟ್ಟಿಗೆ ರಚನೆಯ ಹರಿಹರ ದೇವಾಲಯ ಜೀರ್ಣವಾಗಿರಲು ಕೇಶವದೇವನು (ಶಿವ ಕಲ್ಯಾಣ ನಂಬಿ ಎಂದೂ ಅವನಿಗೆ ಹೆಸರು) ಅದನ್ನು ಕಲ್ಲಿನಲ್ಲಿ ಕಟ್ಟಿಸಿದನು.[೩] ದೇಹ ಮತ್ತು ಧನಗಳು ನಾಶವಾಗುವಂಥವು. ಕೆಡದ ಐಶ್ವರ್ಯವೆಂದರೆ ಧರ್ಮವೊಂದೇ ಎಂದು ನಂಬಿ ಧರ್ಮ ಕಾರ್ಯ ಪ್ರವೃತ್ತನಾಗಿ ನೀರಗುಂದ ಅಗ್ರಹಾರದಲ್ಲಿದ್ದ ಭೀಮೇಶ್ವರ ದೇವರ ನಂದಾದೀವಿಗೆಗೆ, ಅಂಗಭೋಗಕ್ಕೆ ನಿವೇದ್ಯಕ್ಕೆ ದಾನ ಮಾಡಿದ ವಿಷಯ ತಿಳಿದುಬರುತ್ತದೆ.[೪]

ದೇವಾಲಯದ ನಂದಾದೀಪ ನಿರಂತರವಾಗಿ ಬೆಳಗುತ್ತಿರಬೇಕೆಂಬುದು ದಾನಿಗಳ ಆಕಾಂಕ್ಷೆಯಾಗಿರುತ್ತಿತ್ತು. ಹೀಗಾಗಿ ದೀಪಕ್ಕೆ ಬೇಕಾದ ಎಣ್ಣೆಗೆ ಶಾಶ್ವತ ವ್ಯವಸ್ಥೆಯನ್ನು ಮಾಡುತ್ತಿದ್ದರು. ದೇವಾಲಯಗಳ ಆವರಣದಲ್ಲಿ ಅಥವಾ ಸಮೀಪದಲ್ಲಿ ಗಾಣಗಳಿಗೆ ವ್ಯವಸ್ಥೆಯನ್ನು ಮಾಡಿರುತ್ತಿದ್ದರು. ದೇವಾಲಯಗಳ ಆವರಣದಲ್ಲಿ ಗಾಣವನ್ನು ನಿರ್ಮಿಸುವುದು ಪುಣ್ಯಕಾರ್ಯಗಳಲ್ಲಿ ಒಂದೆಂಬ ಭಾವನೆ ಬಲವಾಗಿ ಇದ್ದಿತು.[೫] ದೇವಾಲಯಗಳಿಗೆ ನಿರಂತರವಾಗಿ ತೈಲವನ್ನು ಒದಗಿಸುತ್ತಿದ್ದ ತೆಲ್ಲಿಗರನ್ನು ಮತ್ತು ಅವರ ಸಂಘವನ್ನು ಅನೇಕ ಶಾಸನಗಳು ವಿಶೇಷವಾಗಿ ಹೊಗಳಿವೆ.[೬] ಒಬ್ಬ ವ್ಯಕ್ತಿ ದೇವಾಲಯವನ್ನು ಕಟ್ಟಿಸಿ ಪೂಜಾಕಾರ್ಯಗಳು ನಿರಂತರವಾಗಿ ನಡೆದು ಬರಲು ದಾನಗಳನ್ನು ಸಾಮಾನ್ಯವಾಗಿ ನೀಡುತ್ತಿದ್ದನು. ಅದೇ ಸಂದರ್ಭದಲ್ಲಿ ಅನೇಕ ವ್ಯಕ್ತಿಗಳು-ಸಂಘಗಳು ದಾನಗಳನ್ನು ನೀಡುತ್ತಿದ್ದರು. ಮುಂದೆಯೂ ಕಾಲದಿಂದ ಕಾಲಕ್ಕೆ ದಾನಿಗಳು ಆ ದೇವಾಲಯ ಸುಸ್ಥಿತಿಯಲ್ಲಿದ್ದು ಪೂಜಾಕಾರ್ಯಗಳು ನಿರಂತರವಾಗಿ ನಡೆಯುವಂತೆ ದಾನ ದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ.

## ದೇವಾಲಯ-ಉದ್ಯೋಗಗಳು:

ದೇವಾಲಯಗಳು ಆ ಕಾಲದಲ್ಲಿ ಬಹುದೊಡ್ಡ ಸಾಂಸ್ಕೃತಿಕ ಕೇಂದ್ರಗಳಾಗಿದ್ದಂತೆ ನೂರಾರು ಜನರಿಗೆ ಉದ್ಯೋಗಗಳನ್ನು ಒದಗಿಸಬಲ್ಲ ಉದ್ಯೋಗ ಕೇಂದ್ರಗಳೂ ಆಗಿದ್ದವು. ಸಣ್ಣ ಪುಟ್ಟ ದೇವಾಲಯಗಳಲ್ಲಿ ಉದ್ಯೋಗಗಳು ಬಹು ಪರಿಮಿತವಾಗಿರುತ್ತಿದ್ದವಾದರೂ ದೊಡ್ಡ ದೊಡ್ಡ ದೇವಾಲಯಗಳು ವೈವಿಧ್ಯಮಯ ಉದ್ಯೋಗಗಳನ್ನು ಜನರಿಗೆ ಒದಗಿಸುತ್ತಿದ್ದವು. ಶಾಸನಗಳಲ್ಲಿ ಕಂಡುಬರುವ ಕೆಲವು ಉದ್ಯೋಗಗಳನ್ನು ಗಮನಿಸುವುದರ ಮೂಲಕ ದೇವಾಲಯಗಳು ಒದಗಿಸುತ್ತಿದ್ದ ವೈವಿಧ್ಯಮಯ ಉದ್ಯೋಗಗಳ ಒಂದು ಚಿತ್ರವನ್ನು ಪಡೆಯಬಹುದು. ದೇವಾಲಯದ ಪೂಜಾಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿಕೊಂಡು

---

೧. (ರೈ) ಎಕ V ಬೇಲೂರು ೨೪ ಕ್ರಿ.ಶ. ೧೨೯೮.

೨. (ಮೈ) ಎಕ IV ಚಾಮರಾಜನಗರ ೧೯೫ ಕ್ರಿ.ಶ. ೧೨೭೮.

೩. (ಮೈ) ಎಕ V ತಿ.ನರಸೀಪುರ ೩೬ ಕ್ರಿ.ಶ. ೧೨೩೯-೪೦.

೪. ಎಸ್ಐಐ IX(i) ಹರಪನಹಳ್ಳಿ ೨೯೩ ಕ್ರಿ.ಶ. ೧೧೬೨.

೫. (ಮೈ) ಎಕ V ತಿ.ನರಸೀಪುರ ೩೨೨ ಕ್ರಿ.ಶ. ೧೧೭೯.

೬. ಎಸ್ಐಐ XX ಶಿರಹಟ್ಟಿ ೧೯೩ ಕ್ರಿ.ಶ. ೧೨೧೭; ಎಇ XX ಬಾಗಲಕೋಟೆ ೧೧೨ ಕ್ರಿ.ಶ. ೧೧೬೭.

ಹೋಗಲು ಪೂಜಾರಿಗಳನ್ನು ನಿಯಮಿಸುತ್ತಿದ್ದರು.[೧] ಪೂಜಾರಿಯ ಕರ್ತವ್ಯ ನಿಯಮಿತ ಸಮಯಗಳಲ್ಲಿ ಪೂಜಾಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗುವುದೇ ಆಗಿತ್ತು. ಸಾಮಾನ್ಯವಾಗಿ ಪೂಜೆಗಳು ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲ ನಡೆಯುತ್ತಿದ್ದವು. ಅದನ್ನೇ ಶಾಸನಗಳು ತ್ರಿಕಾಲ ಪೂಜೆಯೆಂದು ಕರೆದಿರುವುದು.[೨] ಬಿಜಾಪುರದ ಒಂದು ಶಾಸನ[೩] ಕ್ಷೇತ್ರವಾಸಿ ಎಂಬ ಪೂಜಾರಿಯನ್ನು ಅನ್ಯ ಪೂಜಾರಿಗಳಿಂದ ಪ್ರತ್ಯೇಕಿಸಿ ಹೇಳುವ ಹಾಗೆ ಕಾಣುತ್ತದೆ. ಕ್ಷೇತ್ರವಾಸಿಯೂ ಪೂಜಾರಿಯಾಗಿದ್ದು ಅವನು ಆ ದೇವಾಲಯದ ಆವರಣದಲ್ಲೇ ವಾಸವಾಗಿದ್ದು ಪೂಜಾಕಾರ್ಯಗಳನ್ನು ನಿರ್ವಹಿಸುತ್ತಿದ್ದವನೆಂದೂ ಪೂಜಾರಿ ಆ ದೇವಾಲಯದ ಆವರಣದಲ್ಲಿ ವಾಸಿಸದೆ ಅಲ್ಲಿಗೆ ಅನ್ಯಸ್ಥಳದಿಂದ ಬಂದು ಪೂಜಾಕಾರ್ಯಗಳನ್ನು ನಿರ್ವಹಿಸುತಿದ್ದನೆಂದೂ ಆ ಶಾಸನದ ಮಟ್ಟಿಗೆ ಭಾವಿಸಬೇಕಾಗುತ್ತದೆ. ಅದೇ ಶಾಸನ ಕ್ಷೇತ್ರವಾಸಿಯ ಲಕ್ಷಣಗಳನ್ನು ವಿವರವಾಗಿ ಕೊಡುತ್ತದೆ. 'ಅಲುಬ್ಧ(ಃ) ಸತ್ಯವಾದೀ ಬ್ರಹ್ಮಚಾರೀ ದ್ರಿಡಬ್ರತಃ ಸಿವಭಕ್ತಃ ಕ್ಷಮಾಯುಕ್ತಃ ಕ್ಷೇತ್ರವಾಸೀ ಸವುಚ್ಯತೇ॥ ಪ್ರಾತಸ್ನಾಯಿ ನಕ್ತಭೋಜೀ ಸಪೂಜಾ(ರು) ರ್ಹಸ್ತಪೋಂನ್ವಿತಃ ಯೇತದ್ಗುಣಯ್ಯಹೀನಸ್ತು ಪೂಜಕೋಪಿನಚಾರ್ಹತಿ॥' ಬಹು ಉದಾತ್ತವಾದ ಗುಣ ಮತ್ತು ನಡತೆಯನ್ನು ಕ್ಷೇತ್ರವಾಸಿಯ ಸ್ಥಾನ ನಿರೀಕ್ಷಿಸುತ್ತದೆ. ಆಸೆಪಡದವನು, ಸತ್ಯವಾದಿ, ಬ್ರಹ್ಮಚಾರಿ, ದೃಢವ್ರತಿ, ಶಿವಭಕ್ತ, ಮತ್ತು ಕ್ಷಮಾಶೀಲನಾದವನು ಕ್ಷೇತ್ರವಾಸಿ ಎಂದು ಕರೆಯಲ್ಪಡುತ್ತಾನೆ. ಅಲ್ಲದೆ ಪ್ರಾತಃಕಾಲದಲ್ಲಿ ಸ್ನಾನವನ್ನೂ, ರಾತ್ರಿ ಮಾತ್ರ ಭೋಜನವನ್ನು ಮಾಡುವವನಾಗಿದ್ದು ಪೂಜೆ ಮತ್ತು ತಪಸ್ಸಿನಲ್ಲಿ ತೊಡಗಿದವನಾಗಿರಬೇಕು. ಇವುಗಳಲ್ಲಿ ಯಾವೊಂದು ಗುಣವಿಹೀನನಾದರೂ ಪೂಜೆ ಮಾಡಲು ಅನರ್ಹನಾಗುತ್ತಾನೆ. ಅಲ್ಲದೆ ಅದೇ ಶಾಸನ ದೇವಿಯ ಪ್ರಸಾದವು ಬೆಳಗಿನದು ಗಣಮಠಕ್ಕೂ, ಮಧ್ಯಾಹ್ನದ್ದು ಪೂಜಾರಿಗಳಿಗೂ, ಸಾಯಂಕಾಲದ್ದು  ಕ್ಷೇತ್ರವಾಸಿಗೆ ಸಲ್ಲುವುದೆಂದು ಸ್ಪಷ್ಟಪಡಿಸುತ್ತದೆ. ಆದ್ದರಿಂದ ಕ್ಷೇತ್ರವಾಸಿ ಮತ್ತು ಪೂಜಾರಿ ಇವರನ್ನು ಖಚಿತವಾಗಿ ಬೇರ್ಪಡಿಸಿ ಹೇಳಿದೆ.

ಒಂದು ದೇವಾಲಯಕ್ಕೆ ಹಲವು ಪೂಜಾರಿಗಳು ಇರುತ್ತಿದ್ದರು. ಅಂಥ ಸಂದರ್ಭದಲ್ಲಿ ನಿರ್ದಿಷ್ಟ ಜನರಿಗೆ ನಿರ್ದಿಷ್ಟ ದಿನಗಳ ಪೂಜೆಯ ಅನುಕ್ರಮವನ್ನು ಖಚಿತವಾಗಿ ನಿಗದಿಮಾಡುತ್ತಿದ್ದರು. ಹಳೇಬೀಡಿನ ಶಾಸನವು ಬಾಚಣ್ಣನೆಂಬುವನು ೩೨ ದಿನಗಳ ಪೂಜಾನುಕ್ರಮವನ್ನು ಬಲ್ಲಾಳ ಭಟ್ಟ, ಗಂಗಾಧರ ಭಟ್ಟ, ಧರ್ಮಲಿ ಭಟ್ಟ ಮುಂತಾದವರಿಗೆ ಹಂಚಿದ ವ್ಯವಸ್ಥೆಯನ್ನು ನಿರೂಪಿಸುತ್ತದೆ.[೪] ಕೆಲವು ಶಾಸನಗಳಲ್ಲಿ 'ತಮ್ಮಡಿ'[೫] ಎಂಬ ಪದ ಪೂಜಾರಿ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಈಗಲೂ ತಮ್ಮಡಿ ಎಂಬ ಪದ ಕೆಲವು ದೇವಾಲಯಗಳಲ್ಲಿ ಅದೇ ಅರ್ಥದಲ್ಲಿ ಪ್ರಯೋಗವಾಗುತ್ತಿದೆ. ಅಡಿಗ ಎಂಬ ಪದವೂ ಪೂಜಾರಿ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಅದು ಕುಲನಾಮವಾಗಿಯೂ ಈಗ ಬಳಕೆಯಾಗುತ್ತಿದೆ. ಕೆಲವು ಶಾಸನಗಳು ಪೂಜಾರಿಗಳನ್ನು 'ದೇಹಾರಿ'[೬] ಎಂದು ಕರೆದಿದೆ.

ಕೆಲವು ಶಾಸನಗಳಲ್ಲಿ ಕಂಡುಬರುವ 'ನಂಬಿಯರು'[೭] - ದೇವಾಲಯದ ಅಧಿಕಾರ ವರ್ಗಕ್ಕೆ ಸೇರಿದ್ದು ಬಹುಶಃ ಸ್ಥಾನಿಕನಂತಹ ಒಬ್ಬ ಅಧಿಕಾರಿಯನ್ನು ಸೂಚಿಸುತ್ತದೆ. ಹಿಂದೆ ಒಂದು ಶಾಸನದಲ್ಲಿ ಗಮನಿಸಿದ ಕ್ಷೇತ್ರವಾಸಿ ಪೂಜಾರಿಯಂತೆ

---

೧. ಕಇ II ಅಕ್ಕಲಕೋಟೆ ೩೪ ಕ್ರಿ.ಶ. ೧೨೨೩; (ರೈ) V ಚನ್ನರಾಯಪಟ್ಟಣ ೨೩೮ ಕ್ರಿ.ಶ. ೧೨೪೯.

೨. ಎಸ್‌ಐಐ XVIII ಬಿಜಾಪುರ ೩೮೧ ಕ್ರಿ.ಶ. ೧೨೭೮.

೩. ಎಸ್‌ಐಐ XVIII ಬಿಜಾಪುರ ೩೮೧ ಕ್ರಿ.ಶ. ೧೨೭೮.

೪. (ಮೈ) ಎಕ VI ಪಾಂಡವಪುರ ೨೩೨ ಕ್ರಿ.ಶ. ೧೨-೧೩ ಶ.ಮಾ.

೫. (ರೈ) ಎಕ IX ಚನ್ನಪಟ್ಟಣ ೭೩ ಕ್ರಿ.ಶ. ೧೩೧೮.

೬. ಕಇ I ಸೌಂದತ್ತಿ ೩೩ ಕ್ರಿ.ಶ. ೧೨೪೬.

೭. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

ಇವನನ್ನು ಛಾಪಿಸಬಹುದೆಂದು ಕಾಣುತ್ತದೆ. ದೇವಾಲಯದ ಯಾವ ಯಾವ ಪೂಜೆಗಳು ಯಾವ ಯಾವ ತಿಥಿ ನಕ್ಷತ್ರಗಳಲ್ಲಿ ನಡೆಯಬೇಕೆಂಬುದನ್ನು ನಿಯೋಜಿಸುತ್ತಿದ್ದವನು ಜ್ಯೋತಿಷ್ಯಶಾಸ್ತ್ರಜ್ಞ.[೧] ದೇವತಾಪೂಜೆಗೆ ಹೂಗಳನ್ನು ಒದಗಿಸುತ್ತಿದ್ದವರು ಮಾಲೆಗಾರರು.[೨] ಬಾಗೇವಾಡಿ ತಾಲ್ಲೂಕಿನ ಮುತ್ತಗಿ ಶಾಸನವು, ಬೀಚಣ್ಣ ವಂಶಪಾರಂಪರ್ಯವಾಗಿ ಹೂವಿನ ಸರ ೧೨ ಒಪ್ಪಿಡಿಯರಳು ಮತ್ತು ಸೇವೆಯ ಬಾಡು ಪ್ರತಿನಿತ್ಯವೂ ಮತ್ತು ವರ್ಷಕ್ಕೊಮ್ಮೆ ಹುಣಸೆಮರವೊಂದರ ಹಣ್ಣನ್ನು ದೇವಾಲಯಕ್ಕೆ ನೀಡಬೇಕೆಂದು ತಿಳಿಸುತ್ತದೆ.[೩] ದೇವಾಲಯಕ್ಕೆ ಅಗತ್ಯವಾದ ಹೂ ಹಣ್ಣುಗಳನ್ನು ಒದಗಿಸುವ ಕಾರ್ಯವನ್ನು ತೋಟಿಗರೂ[೪] ಮಾಡುತ್ತಿದ್ದರು. ಪೂಜಾಕಾರ್ಯಗಳಿಗೆ ಮತ್ತು ಅಭಿಷೇಕಕ್ಕೆ ಅಗತ್ಯವಾದ 'ಅಘ್ರಣಿ'ಯನ್ನು ತರಲು ಕೆಲವರು ನಿಯುಕ್ತರಾಗಿರುತ್ತಿದ್ದರು.[೫] ಕಲಿದೇವರಿಗಾಗಿ ಪ್ರತಿವರ್ಷ ಲಕ್ಷ ಗಡುಗೆ ಅರ್ಘ್ಯವನ್ನು ನಾಲ್ಕು ಜನ ತರುವರೆಂದು ಒಂದು ಶಾಸನ ತಿಳಿಸುತ್ತದೆ.[೬] ಕೆಲವು ಶಾಸನಗಳಲ್ಲಿ ಸಿಂಗಾರಿಗಳ ಉಲ್ಲೇಖ ಬರುತ್ತದೆ.[೭] ಇವರನ್ನು ಕೆಲವು ಶಾಸನಗಳಲ್ಲಿ ಶೃಂಗಾರಿಗಳೆಂದು ಕರೆದಿವೆ. ಇವರು ಬಹುಶಃ ದೇವತಾ ವಿಗ್ರಹಗಳನ್ನು ತೊಳೆದು ಅಲಂಕಾರ ಮಾಡಲು ನಿಯುಕ್ತರಾದವರಾಗಿರಬೇಕು.[೮] ಮಂಗಳೂರಿನ ಒಂದು ಶಾಸನದಲ್ಲಿ ತಂತ್ರಿಯ ಉಲ್ಲೇಖ ಬರುತ್ತದೆ. ಬಂಕೇಶ್ವರ ದೇವಾಲಯದ ಸ್ಥಾನದ ತಂತ್ರಿಯು ಪ್ರತಿ ಸಂಕ್ರಾಂತಿ ಅವಭೃತ ಸ್ನಾನದ ಎಲ್ಲ ಕರ್ತವ್ಯಗಳನ್ನು ನಿರ್ವಹಿಸಬೇಕೆಂದು ಅದೇ ಶಾಸನ ತಿಳಿಸುತ್ತದೆ.[೯] ಬಿಜಾಪುರದ ಶಾಸನದಲ್ಲಿ ಗಮನಿಸಿದ ಕ್ಷೇತ್ರವಾಸಿಯಂತೆ 'ಸ್ಥಾನದ ತಂತ್ರಿ'ಗಳು ಇರುತ್ತಿದ್ದರು.

ದೇವಾಲಯಗಳಲ್ಲಿ ಪೂಜಾಸಮಯದಲ್ಲಿ ಹಾಡಲು, ಸಂಗೀತ ವಾದ್ಯಗಳನ್ನು ನುಡಿಸಲು ಅನೇಕ ಕಲಾವಿದರು ನಿಯುಕ್ತರಾಗಿರುತ್ತಿದ್ದರು. ಅಂತಹ ಕೆಲವು ಕಲಾವಿದರನ್ನು ಶಾಸನಗಳು ಹೆಸರಿಸುತ್ತವೆ. ಜಗಳೆಯನ್ನು ನುಡಿಸಲು ಜಗಳೆಕಾಜಿರಿರುತ್ತಿದ್ದರು.[೧೦] ಶಂಖ ಊದುವವರಿರುತ್ತಿದ್ದರು.[೧೧] ಕೊಳಲನ್ನು ನುಡಿಸುತ್ತಿದ್ದವರು ವಾಸಿಕಾಜಿರು.[೧೨] (ವಂಶ- ವಾಸಿ. ವಂಶ=

---

೧. ಎಸ್‌ಐಐ XVIII ಬಿಜಾಪುರ ೩೮೧ ಕ್ರಿ.ಶ. ೧೨೭೮.

೨. ಎಸ್‌ಐಐ IX(i) ಹಡಗಲಿ ೩೪೫ ಕ್ರಿ.ಶ. ೧೨೩೩-೩೪.

೩. ಎಸ್‌ಐಐ XV ಬಾಗೇವಾಡಿ ೯೯ ಕ್ರಿ.ಶ. ೧೧೫೯.

೪. (ರೈ) ಎಕ V ಚನ್ನರಾಯಪಟ್ಟಣ ೨೩೮ ಕ್ರಿ.ಶ. ೧೨೪೯.

೫. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

೬. ಎಸ್‌ಐಐ IX(i) ಹರಪನಹಳ್ಳಿ ೨೫೫ ಕ್ರಿ.ಶ. ೧೧೪೮.

೭. (ರೈ) ಎಕ V ಬೇಲೂರು ೧೧೫ ಕ್ರಿ.ಶ. ೧೨೨೦.

೮. ಬೆಂಗಳೂರಿನ ಶ್ರೀಲಾಲದಾಸ್ ವೆಂಕಟರಮಣಸ್ವಾಮಿ ದೇವಾಲಯದ ಅರ್ಚಕರಾದ ಕೆ.ವಿ. ಕೃಷ್ಣಮಾಚಾರ್ ಅವರು ತಿಳಿಸುವಂತೆ ಪ್ರಸ್ತುತದಲ್ಲಿ ದೇವತಾವಿಗ್ರಹಗಳ ವಿಶೇಷ ಅಲಂಕಾರ ಮಾಡುವವರನ್ನು 'ಅಲಂಕಾರ ವಿದ್ವಾನ್' ಎಂದು ಕರೆಯುವ ರೂಢಿ ಇದೆ.

೯. ತುನಾಶಾ-೧ ಮಂಗಳೂರು ೩೬ ಕ್ರಿ.ಶ. ೧೨೦೪. ತಂತ್ರಿ= ಆಗಮೋಕ್ತ ರೀತಿಯಲ್ಲಿ ಪೂಜೆ ನಡೆಸುವವನು ಕನ್ನಡ-ಕನ್ನಡ ನಿಘಂಟು ಸಂ.೩ಪು. ೩೨೧೧.

೧೦. (ರೈ) ಎಕ VII ಹೊನ್ನಾಳಿ ೮ ಕ್ರಿ.ಶ. ೧೨೨೮. ಜಗಳೆ=ಒಂದು ಬಗೆಯ ವಾದ್ಯ; ಕಂಚಿನ ತಾಳ; ಕಂಸಾಳ ಕ.ಕ. ನಿಘಂಟು-ಸಂ.೩, ಪು. ೨೯೫೩.

೧೧. (ರೈ) ಎಕ VII ಹೊನ್ನಾಳಿ ೮ ಕ್ರಿ.ಶ. ೧೨೨೮.

೧೨. ಐಕೆಡಿ ದ. ಕೊಲ್ಲಾಪುರ ೨೩ ಕ್ರಿ.ಶ. ೧೧೮೭. ವಿವೇಕ ಚಿಂತಾಮಣಿ, ಪಂಪಾಸ್ಥಾನ ವರ್ಣನ ಮುಂತಾದ ಕೃತಿಗಳಲ್ಲಿ ೧೮ ವಿವಿಧ ಬಗೆಯ ಕೊಳಲುಗಳ ಉಲ್ಲೇಖಗಳಿವೆ. ವಿವರಗಳಿಗ ನೋಡಿ: ಎಂ. ಚಿದಾನಂದ ಮೂರ್ತಿ : ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತ ವಿಚಾರ, ಪು. ೧೨೫-೧೨೯.

ಬಿದಿರು, ವಾಂಶ= ಕೊಳಲು). ಒತ್ತುಕಾಜಿ[೧] ಎನ್ನುವುದು ಏರಿಳಿತಗಳಿಲ್ಲದ ಒಂದು ವಾದ್ಯವನ್ನು ನುಡಿಸುವವನನ್ನು ಸೂಚಿಸುತ್ತದೆ. ಮದ್ದಳಿಗರ ವಿಷಯವನ್ನು ಶಾಸನಗಳು ಉಲ್ಲೇಖಿಸುತ್ತವೆ. ಒಂದು ಶಾಸನ ಉತ್ತಮದ ಮುದ್ದಳಿಗ ಮತ್ತು ಮಧ್ಯಮದ ಮದ್ದಳಿಗನೆಂದು ಹೆಸರಿಸುತ್ತದೆ.[೨] ಆವುಜಿಗರ ಉಲ್ಲೇಖ ಬರುತ್ತದೆ.[೩] ಆವುಜ ೧೬-೧೭ ಶತಮಾನದಲ್ಲಿ ಬಳಕೆಯಲ್ಲಿದ್ದ ತಾಳವಾದ್ಯಗಳ ಗುಂಪಿಗೆ ಸೇರಿದ ಚರ್ಮವಾದ್ಯ. ಆವುಜದಲ್ಲಿ ಅನೇಕ ಪ್ರಭೇದಗಳಿವೆ.[೪] ಮೊಕರಿಗನ ಉಲ್ಲೇಖ ಬರುತ್ತದೆ.[೫] ಇಬ್ಬರು ಡವರಿಗರನ್ನು ಒಂದು ಶಾಸನ ಉಲ್ಲೇಖಿಸುತ್ತದೆ.[೬] ಡವರಿಗ=ಡಮರುಗವನ್ನು ನುಡಿಸುವವನು [ಡವರ (<ಡಮರ) + ಇಗ] ನಾರಸಿಂಹದೇವರ ತ್ರಿಕಾಲದ ಭೋಗಕ್ಕಾಗಿ ದಿಂಡಿಗೆ(ದಂಡಿಗೆ) ವಾದ್ಯವನ್ನು ಬಾರಿಸುವಂತಾಗಿ -ಎಂದು ಶಾಸನದಲ್ಲಿ ಉಲ್ಲೇಖಗೊಂಡಿದೆ.[೭] ಇದು ದಂಡದಿಂದ ಕೂಡಿದ ತಂತೀವಾದ್ಯ; ಹೆಗಲ ಮೇಲೆ ಇಟ್ಟುಕೊಂಡು ನುಡಿಸುವ ವಾದ್ಯ. ಪುರದ ತಳವಾರನೊಬ್ಬನು ಕಾಹಳೆ ಯೆರಡಾಳಿನಲು ನಡೆಯಲು ಭೂಮಿದಾನ ಮಾಡಿದ್ದಾನೆ.[೮] ಸವಗಾಣೆಯರು (=ಸಮಾನವಾದ ಮಟ್ಟದ ಗಾಯಕಿಯರು) ಇಬ್ಬರು ಒಂದು ದೇವಾಲಯದಲ್ಲಿದ್ದುದು ತಿಳಿದುಬರುತ್ತದೆ.[೯] ದೇವಾಲಯಗಳಲ್ಲಿ ಪಂಚ ಮಹಾವಾದ್ಯಗಳನ್ನು ನುಡಿಸುತ್ತಿದ್ದರೆಂದು ತಿಳಿದು ಬರುವುದಾದರೂ ಆ ವಾದ್ಯಗಳ ಬಗ್ಗೆ ಏಕಾಭಿಪ್ರಾಯವಿಲ್ಲ. ಒಟ್ಟಿನಲ್ಲಿ ದೇವಾಲಯಗಳು ತ್ರಿಕಾಲ ಪೂಜಾಸಮಯದಲ್ಲಿ ವಿವಿಧ ವಾದ್ಯ ಮತ್ತು ಗಾಯನಗಳಿಗೆ ಕಲಾವಿದರನ್ನು ನಿಯುಕ್ತಗೊಳಿಸುತ್ತಿದ್ದವು. ವಾದ್ಯಕಾರರಾಗಲಿ ಗಾಯಕರಾಗಲಿ ಅಸಾಧಾರಣರಾಗಿದ್ದರೆಂದು ಒಂದು ಶಾಸನ ಹೇಳುತ್ತದೆ. 'ಭರತಗಗ್ಗಳಮಪ್ಪ ವಾದ್ಯ ವಿದರಂ ಗೇಯಕ್ಕಾವಾ ತುಂಬರದ್ರೋರ್ದ್ದರೆಯಲ್ಲೆಂಬ ಸುಗಾಯಕ ಪ್ರಕರಮಂ...'[೧೦]

ದೇವಾಲಯ ರಕ್ಷಣೆಗಾಗಿ 'ಅಂಘರಿಕ'ರು[೧೧] ಇರುತ್ತಿದ್ದರು. ಕೆಲವು ಶಾಸನಗಳು ಅವರನ್ನು ಅಂಗರಕ್ಕರೆಂದು ಕರೆದಿವೆ.[೧೨] ಅವರ ಮುಖ್ಯಸ್ಥನಿಗೆ ಅಂಗರಕ್ಕನಾಯಕ[೧೩]ನೆಂದು ಕರೆಯುತ್ತಿದ್ದರು. ದೇವಸ್ಥಾನದ ಅಂಗಳ ಮುಂತಾದುವನ್ನು ಶುಚಿಗೊಳಿಸಲು ಸೇವಕರಿರುತ್ತಿದ್ದರು. ಶಾಸನ ಒಂದರಲ್ಲಿ ರಾಜಾಂಗಳವ ಬೋಹರಿಸುವ ದಾನಿಯ ಉಲ್ಲೇಖ ಬರುತ್ತದೆ.[೧೪] ದೇವಾಲಯದ

---

೧. ಐಕೆಡಿ ದ. ಕೊಲ್ಲಾಪುರ ೨೩ ಕ್ರಿ.ಶ. ೧೧೮೭. 'ಒತ್ತುಕಾಡು' ಎಂದು ತೆಲುಗು ಶಾಸನಗಳಲ್ಲಿ ದೊರೆಯುತ್ತದೆ. ಇಗ್ಲಾಆಪ್ರ, ಪು.೬೪.

೨. ಎಸ್‌ಐಐ XVIII ಬಿಜಾಪುರ ೩೮೧ ಕ್ರಿ.ಶ. ೧೨೭೮.

೩. ಐಕೆಡಿ ದ. ಕೊಲ್ಲಾಪುರ ೨೩ ಕ್ರಿ.ಶ. ೧೧೮೭.

೪. ಬಿ.ವಿ.ಕೆ. ಶಾಸ್ತ್ರೀ : 'ಆವುಜ : ಹಿಂದೆ ಬಳಕೆಯಲ್ಲಿದ್ದ ಒಂದು ವಾದ್ಯ', ಸಾಧನೆ ೧:೪, ಪು. ೧೩೫-೪೧.

೫. ಐಕೆಡಿ ದಕ್ಷಿಣ ಕೊಲ್ಲಾಪುರ ೨೩. ಕ್ರಿ.ಶ. ೧೧೮೭. ಮೊಕರಿ, ಮೊಖರಿ - ಶಂಖ (ಇಗ್ಲಾಆಪ್ರ ಪು.೨೪೪). ಇದು ಬೇರೆ ವಾದ್ಯ ಇರಬಹುದೇ?

೬. ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೭. ಎಸ್‌ಐಐ XVIII ಬಿಜಾಪುರ ೨೭೧ ಕ್ರಿ.ಶ. ೧೩೦೪.

೮. ಎಸ್‌ಐಐ XVIII ಬಿಜಾಪುರ ೩೮೧ ಕ್ರಿ.ಶ. ೧೩೦೪. ಪೂಜಾಸಮಯದಲ್ಲಿ ಬಾರಿಸಲಾಗುತ್ತಿದ್ದ ದೊಡ್ಡ ನಗಾರಿಯೇ ಕಾಹಳೆ.

೯. ಐಕೆಡಿ ದ. ಕೊಲ್ಲಾಪುರ ೨೩ ಕ್ರಿ.ಶ. ೧೧೮೭.

೧೦. ಐಕೆಡಿ ದ. ಸೊಲ್ಲಾಪುರ ೨೩ ಕ್ರಿ.ಶ. ೧೧೮೭.

೧೧. (ರೈ) ಎಕ V ಚನ್ನರಾಯಪಟ್ಟಣ ೨೩೮ ಕ್ರಿ.ಶ. ೧೨೪೯.

೧೨. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೧೩. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೧೪. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.

ಅಂಗಳ ಮುಂತಾದುವನ್ನು ರಂಗೋಲಿ ಹಾಕಿ ಅಲಂಕರಿಸುತ್ತಿದ್ದ 'ರಂಗವಾಲಿಯವರು' ಇರುತ್ತಿದ್ದರು.[೧] ದೇವಾಲಯದ ಸೇವೆಗೆ ಪರಿಚಾರಕ[೨]ರಿರುತ್ತಿದ್ದರು. ಅವರು ದೇವಾಲಯದ ಸಹಾಯಕ ವರ್ಗವಾಗಿದ್ದು ಅಡುಗೆ ಮಾಡುವ ಕಾರ್ಯವನ್ನೂ ಕೈಗೊಳ್ಳುತ್ತಿದ್ದರು. ಶಾಸನವೊಂದು ಅಂಘರಿಕ, ಮಾಲೆಗಾರರನ್ನು ಹೆಸರಿಸುತ್ತ 'ಬಾಹ್ಯ'[೩] ಎಂದೊಬ್ಬನನ್ನು ಹೆಸರಿಸುತ್ತದೆ. ಅದು ದೇವಾಲಯದ ಹೊರ ಆವರಣದ ಸೇವೆಯನ್ನು ಮಾಡುವವನನ್ನು ಸೂಚಿಸುವಂತೆ ಕಾಣುತ್ತದೆ. ಕೆಲವು ಶಾಸನಗಳಲ್ಲಿ ಶೂದ್ರ ಪರಿವಾರದ[೪] ಉಲ್ಲೇಖ ಬರುತ್ತದೆ. ಇದು ದೇವಾಲಯದ ಹೊರ ಆವರಣದ ಸೇವೆಗಾಗಿ ನಿಯಮಿಸಿಕೊಂಡ ವರ್ಗವನ್ನು ಸೂಚಿಸುವಂತೆ ಕಾಣುತ್ತದೆ. ಶಾಸನವೊಂದರಲ್ಲಿ ಬರುವ ಆಧಾರಕ ಜೀವಿಗೆ[೫] ದೇವಾಲಯದ ಸೇವೆಗೆ ಆರು ಗದ್ಯಾಣಗಳನ್ನು ನೀಡಲಾಗಿದೆ. ಆದರೆ ಅವನ ಸೇವಾಸ್ವರೂಪ ತಿಳಿಯುವುದಿಲ್ಲ. ಶಾಸನವೊಂದರಲ್ಲಿ ಹೊಲಗಾಹಿಗನ[೬] ಉಲ್ಲೇಖ ಬರುತ್ತದೆ. ಅದು ದೇವಾಲಯದ ಹೊಲ ಕಾಯುವ ವ್ಯಕ್ತಿಯನ್ನು ನಿರ್ದೇಶಿಸುತ್ತದೆ.

ದೇವಸ್ಥಾನದ ವೆಚ್ಚದ ಬಾಬತ್ತಿನಲ್ಲಿ ಅಕ್ಕಸಾಲೆಗೆ, ಕುಂಬಾರರಿಗೆ, ಅಗಸನಿಗೆ ಮತ್ತು ನಾವಿದನಿಗೆ ನಿಶ್ಚಿತ ಗದ್ಯಾಣಗಳನ್ನು ನೀಡಬೇಕೆಂದು ಶಾಸನವೊಂದು ತಿಳಿಸುತ್ತದೆ.[೭] ದೇವಾಲಯದ ಕೆಲಸಗಳಿಗೆ ಬಡಗಿ, ಕಮ್ಮಾರರನ್ನು ನೇಮಿಸಿಕೊಂಡದ್ದನ್ನು ಶಾಸನ ತಿಳಿಸುತ್ತದೆ.[೮] ದೇವಾಲಯದ ಕಟ್ಟಡದ ಸಂರಕ್ಷಣೆಗೆ ಕಲ್ಲುಕುಟಿಗರನ್ನು ನೇಮಿಸಿಕೊಳ್ಳುತ್ತಿದ್ದರು. ಸಂಗಮೇಶ್ವರ ದೇವಾಲಯದ 'ಕಲುವೆಸದ ಜೀರ್ಣೋದ್ಧಾರಕ್ಕೆ ಗೊರವೋಜನನ್ನು' ನೇಮಿಸಿಕೊಂಡದ್ದನ್ನು ಶಾಸನವೊಂದು ತಿಳಿಸುತ್ತದೆ.[೯] ದೇವಾಲಯದ ಪ್ರಸಾದ ಮತ್ತು ಆಹಾರ ದಾನದ ಸಿದ್ಧತೆಗಾಗಿ ಬಾಣಸಿಗರನ್ನು[೧೦] ನೇಮಿಸಿಕೊಳ್ಳುತ್ತಿದ್ದರು. ದೇವಾಲಯಕ್ಕೆ ಸಂಬಂಧಿಸಿದ ಹಾಗೆ ಇರುತ್ತಿದ್ದ ಗಾಣಗಳಿಂದ ಎಣ್ಣೆಯನ್ನು ತೆಗೆಯಲು ಗಾಣಿಗರನ್ನು ನೇಮಿಸಿಕೊಳ್ಳುತ್ತಿದ್ದರು.[೧೧] ದೇವಾಲಯಗಳಲ್ಲಿ ದೇವಾಲಯಗಳ ಭೂಮಿಯಿಂದ ಮತ್ತು ದಾನಗಳಿಂದ ಬರುತ್ತಿದ್ದ ಹೇರಳ ಧಾನ್ಯ ಸಂಗ್ರಹ ಇರುತ್ತಿತ್ತು. ಅಂಥ ಸಂಗ್ರಹಗಳನ್ನು 'ದೇವರ ಕೊಠಾರಿಕೆ'[೧೨] ಎಂದು ಕರೆಯುತ್ತಿದ್ದರು. ಅದನ್ನು ನೋಡಿಕೊಳ್ಳುತ್ತಿದ್ದ ಕೊಠಾರಿ ವೀಶಯ[೧೩] ಎಂಬ ವ್ಯಕ್ತಿಯ ಉಲ್ಲೇಖ ಶಾಸನವೊಂದರಲ್ಲಿ ಬರುತ್ತದೆ. ದೇವಾಲಯಕ್ಕೆ ಹೊಂದಿಕೊಂಡಂತೆ ಇರುತ್ತಿದ್ದ ಅನ್ನಛತ್ರಗಳಿಗೆ, ಮಠಗಳಿಗೆ, ದೇವಾಲಯದ ಪ್ರಸಾದಕ್ಕೆ ಪ್ರತಿನಿತ್ಯ ಸಾಕಷ್ಟು ದವಸಧಾನ್ಯಗಳು ವ್ಯಯವಾಗುತ್ತಿದ್ದವು. ಅವುಗಳನ್ನು ಸಂಗ್ರಹಿಸಲು, ಪ್ರತಿನಿತ್ಯ ವಿತರಣೆ ಮಾಡಲು

---

೧. (ರೈ) ಎಕ V ಚನ್ನರಾಯಪಟ್ಟಣ ೨೩೮ ಕ್ರಿ.ಶ. ೧೨೪೯.
೨. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.
೩. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.
೪. (ಮೈ) ಎಕ III ಗುಂಡ್ಲುಪೇಟೆ ೧೨ ಕ್ರಿ.ಶ. ೧೩೭೨.
೫. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.
೬. (ರೈ) ಎಕ V ಬೇಲೂರು ೧೪೦ ಕ್ರಿ.ಶ. ೧೨೦೦.
೭. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.
೮. ಕಇ II ಅಕ್ಕಲಕೋಟೆ ೩೪ ಕ್ರಿ.ಶ. ೧೨೨೩ (?)
೯. ಕಇ II ಅಕ್ಕಲಕೋಟೆ ೩೪ ಕ್ರಿ.ಶ. ೧೨೨೩ (?)
೧೦. (ರೈ) ಎಕ V ಬೇಲೂರು ೮೯ ಕ್ರಿ.ಶ. ೧೨೮೦.
೧೧. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.
೧೨. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.
೧೩. (ರೈ) ಎಕ V ಬೇಲೂರು ೧೧೫ ಕ್ರಿ.ಶ. ೧೨೨೦.

ಧಾನ್ಯ ಭಂಡಾರಿಯ ಅಗತ್ಯವಿದ್ದಿತು. ಆ ಧಾನ್ಯ ಭಂಡಾರಿಯನ್ನು ಕೊಠಾರಿ ಎಂದು ಕರೆಯುತ್ತಿದ್ದರು. ದವಸವನ್ನು ಶುದ್ಧಿಗೊಳಿಸಿಕೊಡುವ ಕಾರ್ಯದ ಮೇಲ್ವಿಚಾರಣೆಗೆ ದವಸಿಗ[೧]ನಿರುತ್ತಿದ್ದನು. ಅದೇ ರೀತಿ 'ನೆಲ್ಲ ಮೆದುವ (ಮಿದಿ=ಕುಟ್ಟು) ಕೂಲಿ'ಯ[೨] ಉಲ್ಲೇಖ ಶಾಸನವೊಂದರಲ್ಲಿ ಬರುತ್ತದೆ. ಇದು ಬತ್ತವನ್ನು ಕುಟ್ಟುವ ಕೂಲಿಯ ವಿಷಯವನ್ನು ಹೇಳುತ್ತದೆ.

ದೇವಾಲಯಕ್ಕೆ ವಿವಿಧ ಮೂಲಗಳಿಂದ ಬರುತ್ತಿದ್ದ ಹಣವನ್ನು ವ್ಯವಸ್ಥಿತವಾಗಿ ಇಡಲು ಮತ್ತು ದೇವರ ಆಭರಣ, ವಸ್ತ್ರ ಮುಂತಾದ ಬೆಲೆಬಾಳುವ ವಸ್ತುಗಳನ್ನು ಸಮರ್ಪಕವಾಗಿ ಕಾಪಾಡಲು ಭಂಡಾರಿಯೊಬ್ಬನಿರುತ್ತಿದ್ದ. ಆ ಭಂಡಾರವನ್ನು 'ದೇವರ ಭಂಡಾರ'ವೆಂದು ಕರೆಯುತ್ತಿದ್ದರು.[೩] ಹೊಸಗುಂದದ ಶಾಸನ ಕಂಚಿಕಾದೇವಿಯ ದೇವಾಲಯದ ಭಂಡಾರಿಯಾಗಿ ಸೋಮೆಯ ನಾಯ್ಕನನ್ನು ನೇಮಿಸಿದ್ದನ್ನು ತಿಳಿಸುತ್ತದೆ.[೪] ಅಲ್ಲದೆ ಅವನು ಆ ಸ್ಥಳಕ್ಕೆ ಒಡೆಯನೆಂದೂ ಅದು ಹೇಳುತ್ತದೆ. ದೇವಾಲಯಕ್ಕೆ ಸಂಬಂಧಿಸಿದ ಲೆಕ್ಕಪತ್ರಗಳನ್ನಿಡಲು ಸೇನಬೋವನಿರುತ್ತಿದ್ದ. ಅಕ್ಕಲಕೋಟೆಯ ಶಾಸನವೊಂದು 'ಸಂಗಮೇಶ್ವರ ದೇವರ ಹಿಟ್ಟಿನ ಸೇನಬೋವ ಯೀಸ್ವರ ದೇವಂಗೆ ಮತ್ತರ ೧೨'[೫] ಎಂದು ಅವನಿಗೆ ದೊರೆಯುವ ಪ್ರತಿಫಲವನ್ನು ಸೂಚಿಸುತ್ತದೆ. ಕೆಲವು ಶಾಸನಗಳಲ್ಲಿ ಅದ್ದಿಕ (=ಅಧ್ಯಕ್ಷ) ಎಂಬ ಅಧಿಕಾರಸೂಚಕ ಪದ ದೇವಾಲಯದ ಅಧಿಕಾರವರ್ಗಕ್ಕೆ ಸಂಬಂಧಿಸಿದಂತೆ ಬಳಕೆಯಾಗಿದೆ.[೬] ಇದು ಮೇಲ್ವಿಚಾರಣೆಯ ಅಧಿಕಾರಿಯನ್ನು ಸೂಚಿಸುತ್ತದೆ. ದೇವಾಲಯಗಳಲ್ಲಿ ಈಗಿನಂತೆ ಪುರಾಣ ಪ್ರವಚನಕ್ಕೆ ನೇಮಿಸಿಕೊಳ್ಳುತ್ತಿದ್ದರು[೭]. ಸೋಮನಾಥಪುರದ ಶಾಸನವೊಂದರಲ್ಲಿ 'ಅಪ್ಪಣೆಯವರು'[೮] ಎಂಬ ದೇವಾಲಯದ ಉದ್ಯೋಗಿಗಳನ್ನು ಹೆಸರಿಸುತ್ತದೆ. ಆದರೆ ಅವರ ಕಾರ್ಯ ಸ್ವರೂಪ ಸ್ಪಷ್ಟವಾಗುವುದಿಲ್ಲ. ಅದೇ ಶಾಸನದ ಮುಂದಿನ ಭಾಗದಲ್ಲಿ 'ಬಾಣಸದ ಅಪ್ಪಣೆ ಐದಕ್ಕಂ ಗದ್ಯಾಣಂ ಇಪ್ಪತ್ತು' ಎಂದು ಬರುತ್ತದೆ. ಮಂಗಳೂರಿನ ಶಾಸನದಲ್ಲಿ 'ಪಾದಮೂಲದವರು ನಿವೇದ್ಯಕ್ಕೆ ಯಿಕ್ಕುವ ಅಕ್ಕಿ ಹೊತ್ತು ತಪ್ಪಿದಡೆ...' ಎಂದು ಬರುವುದರಿಂದ ಪಾದಮೂಲದವರು ನೈವೇದ್ಯದ ಸಿದ್ಧತೆಗೆ ನಿತ್ಯಪಡಿಯನ್ನು ಧಾನ್ಯ ಸಂಗ್ರಹದಿಂದ ಕೊಡುವ ವ್ಯವಸ್ಥೆಯನ್ನು ನೋಡಿಕೊಳ್ಳುವವರು ಎಂದು ಭಾವಿಸಬಹುದು.[೯] ಸೋಮನಾಥಪುರದ ಶಾಸನ,[೧೦] ದೇವಾಲಯದ ವಿವಿಧ ಸೇವೆಗಳನ್ನು ನಿರ್ವಹಿಸುವ ವ್ಯಕ್ತಿಗಳಿಗೆ ಕೊಡಬೇಕಾದ ನಿಶ್ಚಿತ ಕೊಡುಗೆಯನ್ನು ಹೆಸರಿಸುತ್ತ ಹಡಪದೋಲಗಕ್ಕೆ, ಕುಡಿನೀರವೋಲಗಕ್ಕೆ, ಶ್ರೀಗಂಧದೋಲಗಕ್ಕೆ, ಸೀಗುರಿ ಚಾಮರದೋಲಗಕ್ಕೆ,

---

೧. (ರೈ) ಎಕ V ಚನ್ನರಾಯಪಟ್ಟಣ ೨೩೮ ಕ್ರಿ.ಶ. ೧೨೪೯.

೨. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.

೩. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.

೪. (ರೈ) ಎಕ VIII ಸಾಗರ ೧೩೫ ಕ್ರಿ.ಶ. ೧೩೨೦.

೫. ಕಇ II ಅಕ್ಕಲಕೋಟೆ ೩೪ ಕ್ರಿ.ಶ. ೧೨೨೩ (?)

೬. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

೭. ಎಸ್ಐಐ XV ನವಲಗುಂದ ೧೦೦ ಕ್ರಿ.ಶ. ೧೧೬೧.

೮. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬. 'ಅಪ್ಪಣೆಯವರು' ಯಾವ ಕಾರ್ಯವನ್ನು ಹೇಳುತ್ತದೆ ಎನ್ನುವುದು ಸ್ಪಷ್ಟವಾಗುವುದಿಲ್ಲ. ಈಗಲೂ ಕೆಲವು ಊರುಗಳಲ್ಲಿ ದೇವರನ್ನು ಅಪ್ಪಣೆ ಕೇಳುವ ಪದ್ಧತಿ ಇದೆ. ಆದರೆ ಇದೇ ಶಾಸನದ ಮುಂದಿನ ಭಾಗದಲ್ಲಿ ಬಾಣಸದ ಅಪ್ಪಣೆಯವರು ಎಂದು ಬರುವುದರಿಂದ ಅರ್ಥ ಖಚಿತವಾಗುವುದಿಲ್ಲ.

೯. ತುನಾಶಾ ೧ ಮಂಗಳೂರು ೩೬ ಕ್ರಿ.ಶ. ೧೨೦೪; ತೆಲುಗು ಶಾಸನಗಳಲ್ಲಿ ದೀಪದ ಕಂಬಗಳಿಗೆ ದೀಪದ ಬತ್ತಿಗಳನ್ನು ಒದಗಿಸುವವರು ಎಂಬ ಅರ್ಥವಿದೆ. ಇಗ್ಲಾಆಪ್ರ, ಪು. ೧೮೮.

೧೦. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

ಹನ್ನೆರಡು ಮುದ್ರೆಯ ವೋಲಗಕ್ಕೆ,[೧] ಭಂಡಾರದೋಲಗಕ್ಕೆ, ಕರ್ಪೂರದಾರತಿಯವರಿಗೆ, ಭಟ್ಟಗುತ್ತರು(?)[೨], ಕೊತ್ತಿಯಂ ಮೇಗೆ(?) ಮುಂತಾದವರಿಗೆ ಕೊಡಬೇಕಾದ ಗದ್ಯಾಣಗಳನ್ನು ತಿಳಿಸುತ್ತದೆ. ಓಲಗ ಉತ್ತರ ಪದವಾಗಿ ಬರುವ ವಿವಿಧ ಸೇವೆಗಳು ದೇವಾಲಯದ ವಿವಿಧ ಊಳಿಗಗಳನ್ನು ತಿಳಿಸುತ್ತವೆ. ದೇವಾಲಯದ ಸೇವೆಗೆ ಒಪ್ಪಿಕೊಂಡು ವೇತನ ಪಡೆಯುತ್ತಿದ್ದವರನ್ನು 'ಜೀವಿತ ವರ್ಗ್ಗ'ವೆಂದು ಶಾಸನಗಳು[೩] ಕರೆದಿವೆ. ಸೇವೆಗೆ ಸೇರ್ಪಡೆಯಾದ ಮೇಲೆ ಅದನ್ನು ನಿಯಮಿತವಾಗಿ ನಡೆಸಿಕೊಂಡು ಹೋಗಬೇಕಿತ್ತು. ಸೇವೆಗೆ ತೊಡಗಿದ ಪುರುಷನಾಗಲಿ ಸ್ತ್ರೀಯಾಗಲಿ ಅವಶ್ಯ ಕಾರ್ಯದ ಮೇಲೆ ಊರಿಂದ ಹೊರಹೋದ ದಿವಸ ಮತ್ತು ವ್ಯಾಧಿ ಹೊಂದಿದ್ದ ದಿವಸ ಬಿಟ್ಟು ಉಳಿದಂತೆ ಕೇಶವ ದೇವರಿಗೆ ನಿತ್ಯ ಸೇವೆಯನ್ನು ಮಾಡದಿದ್ದರೆ ತಮ್ಮ ಕುಲದ ಇಪ್ಪತ್ತೊಂದು ತಲೆಯ ಪಿತೃಗಳನ್ನು ಸ್ವಹಸ್ತದಿಂದ ವಧಿಸಿದ ದೋಷವೆಂದು ಬೇಲೂರಿನ ಶಾಸನ ಎಚ್ಚರಿಸುತ್ತದೆ.[೪] ಉಳಿದ ಸೇವೆಗಳಲ್ಲಿದ್ದಂತೆ ದೇವಾಲಯಗಳ ಸೇವೆಯಲ್ಲಿಯೂ ಸೋಮಾರಿತನ, ಕೆಲಸಗಳ್ಳತನ, ವಂಚನೆಗಳು ಇದ್ದುವೆಂದು ಕಾಣುತ್ತದೆ. ಮಂಗಳೂರಿನ ಶಾಸನ, ದೇವಾಲಯದ ವಿವಿಧ ಕರ್ತವ್ಯಗಳನ್ನು ಸಮರ್ಪಕವಾಗಿ ನೆರವೇರಿಸದ ತಂತ್ರಿಗೆ, ಪಾದಮೂಲದವರಿಗೆ, ಅಧ್ಯಕ್ಷನಿಗೆ, ಸೇನಬೋವನಿಗೆ, ಅಧಿಕಾರಿಗೆ, ಅಂಗಡಿಯ ಅಧಿಕಾರಿ ಮುಂತಾದವರಿಗೆ ವಿವಿಧ ಮೊತ್ತದ ದಂಡವನ್ನು ವಿಧಿಸುವುದಲ್ಲದೆ ಈ ಎಲ್ಲವನ್ನು ವಿಚಾರಿಸಿ ರಕ್ಷಿಸದಿದ್ದರೆ ಅರಸನಿಗೆ 'ಗಂಗೆ ರಾಮೇಶ್ವರದಲು ಸಾವಿರ ಕವಿಲೆ ಸಾವಿರ ಬ್ರಾಹ್ಮಣರ ಕೊಂದ ಪಾಪ' ಎಂದು ತಿಳಿಸುತ್ತದೆ.[೫] ಕೆಲವು ಶಾಸನಗಳಲ್ಲಿ ಬ್ರಾಹ್ಮಣರಿಗೆ ಮತ್ತು ವೈಷ್ಣವರಿಗೆ[೬] ಜೀವಿತ ಗದ್ಯಾಣಗಳನ್ನು ನೀಡಿರುವುದುಂಟು. ಆದರೆ ಅವರ ನಿರ್ದಿಷ್ಟ ಕರ್ತವ್ಯ ಶಾಸನಗಳಿಂದ ಸ್ಪಷ್ಟವಾಗುವುದಿಲ್ಲ.

ಪ್ರಾಚೀನ ಕಾಲದಿಂದಲೂ ದೇವತಾಸೇವೆಗೆ ನೀಡಿರುವ ದಾನಗಳಲ್ಲಿ 'ಅಂಗಭೋಗ', 'ರಂಗಭೋಗ' ವಿಶೇಷವಾಗಿ ಕಾಣಿಸಿಕೊಳ್ಳುತ್ತವೆ. ವಿಗ್ರಹಕ್ಕೆ ಸಲ್ಲುವ ಅಭಿಷೇಕ, ಗಂಧಲೇಪನ, ಪುಷ್ಪಾರ್ಚನೆ, ಧೂಪ, ದೀಪ ಮುಂತಾದ ಸೇವೆಗಳು ಅಂಗಭೋಗ, ವಿಗ್ರಹದ ಮುಂದೆ ರಂಗಮಂಟಪದಲ್ಲಿ ನಡೆಯುವ ಗೀತ, ನೃತ್ಯ, ಸಂಗೀತ ಸೇವೆಗಳು ರಂಗಭೋಗಗಳೆಂದು ಪರಿಗಣಿತವಾಗಿವೆ. ದೇವಾಲಯದ ಬಹುಪಾಲು ಉದ್ಯೋಗ ಈ ಅಂಗಭೋಗ ರಂಗಭೋಗದ ಸುತ್ತ ಇರುವುದನ್ನು ಕಾಣುತ್ತೇವೆ.

**ದೇವದಾಸಿ-ಪಾತ್ರ-ಸೂಳೆ-ನಾಗವಾಸ ಇತ್ಯಾದಿ.**

ರಂಗಭೋಗದ ಉದ್ಯೋಗಗಳಲ್ಲಿ ಗಾಯನ, ಸಂಗೀತಗಳನ್ನು ಈಗಾಗಲೇ ಗಮನಿಸಲಾಗಿದೆ. ಅನೇಕ ದೇವಾಲಯಗಳಲ್ಲಿ ಗಾಯನ, ಸಂಗೀತಗಳೊಂದಿಗೆ ನರ್ತನ ಸೇವೆಯೂ ಇರುತ್ತಿದ್ದಿತು. ಮಂಗಳೂರಿನ ಒಂದು ಶಾಸನ ಕೂತಾಡುವ ಬಾಕೆನೆಂಗೆಯವರು[೭] ಅಂದರೆ ದೇವಸ್ಥಾನದ ನರ್ತಕಿಯರ ಬಗ್ಗೆ ಹೇಳುತ್ತದೆ. ಶಾಸನಗಳು ರಂಗಭೋಗದ ಉದ್ಯೋಗಗಳನ್ನು ಹೇಳುವಾಗ ಪಾತ್ರದವರು,

---

೧. ಇದು ಶ್ರೀವೈಷ್ಣವ ಧರ್ಮದ ಶಾಸನವಾಗಿರುವುದರಿಂದ 'ಹನ್ನೆರಡು ಮುದ್ರೆವೋಲಗ' ಎನ್ನುವುದು ವಿಷ್ಣುವಿನ ವಿಗ್ರಹಕ್ಕೆ ಒತ್ತುವ ದ್ವಾದಶ ಪುಂಡ್ರಗಳನ್ನು ಸೂಚಿಸುತ್ತದೆ.

೨. ಭಟ್ಟಗುತ್ತ - ಭಟ್ಟ = ಬ್ರಾಹ್ಮಣ ವಿದ್ವಾಂಸ, ಗುತ್ತ = ಗುಂಪು, ಸಮೂಹ (ಸೆಟ್ಟಿಗುತ್ತ ಇದ್ದ ಹಾಗೆ) ಬ್ರಾಹ್ಮಣ ವಿದ್ವಾಂಸರ ಗುಂಪಿಗೆ ಕೊಟ್ಟ ದಾನವಿರಬಹುದೆ?

೩. ಎಂಎಆರ್ ೧೯೨೯ ಬೇಲೂರು ೮ ಕ್ರಿ.ಶ. ೧೩ ಶ.ಮಾ.

೪. ಎಂಎಆರ್ ೧೨೩೯ ಬೇಲೂರು ೮ ಕ್ರಿ.ಶ. ೧೩ ಶ.ಮಾ.

೫. ತುನಾಶಾ-೧ ಮಂಗಳೂರು ೩೬ ಕ್ರಿ.ಶ. ೧೨೦೪.

೬. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

೭. ತುನಾಶಾ-೧ ಮಂಗಳೂರು ೩೬ ಕ್ರಿ.ಶ. ೧೨೦೪. ಕೂತಾಡು=ನರ್ತಿಸು, ಕುಣಿ; ಬಾಕೆನೆಂಗೆಯವರು- ಬಾಕೆ-(?)ನೆಂಗೆ- (ತಮಿ. ನಂಗೈ)=ಸ್ತ್ರೀ.

ಸೂಳೆಯರು ಎಂದು ಹೇಳುತ್ತವೆ. ಹೀಗೆ ದೇವಾಲಯಗಳಲ್ಲಿ ದೇವರ ಸೇವೆಗೆಂದು ಮೀಸಲಾದಂತೆ ಸ್ತ್ರೀಯರನ್ನು ಬಿಡುವ ಪದ್ಧತಿ ಅನೇಕ ವಿದೇಶಗಳಲ್ಲಿ ಕೂಡ ಪ್ರಾಚೀನ ಕಾಲದಿಂದಲೂ ಇದ್ದಿತು.[೧] ಭಾರತದ ದೇವಾಲಯಗಳಲ್ಲಿ ಈ ಸಂಪ್ರದಾಯ ಕ್ರಿ.ಶ. ೩ನೆಯ ಶತಮಾನದಿಂದ ಆರಂಭವಾಗಿರಬಹುದೆಂದು ವಿದ್ವಾಂಸರು ಭಾವಿಸುತ್ತಾರೆ. ಕರ್ನಾಟಕದಲ್ಲಿ ಕ್ರಿ.ಶ. ೭೭೮-೭೯ರಲ್ಲಿ ಆ ಸಂಪ್ರದಾಯ ಇದ್ದುದನ್ನು ಪಟ್ಟದಕಲ್ಲಿನ ದೇವಾಲಯದ ಶಾಸನದ ಆಧಾರದಿಂದ ಗುರುತಿಸಲಾಗಿದೆ.[೨] ಮುಂದೆ ಈ ಸಂಪ್ರದಾಯ ವ್ಯಾಪಕವಾಗಿ ಬೆಳೆಯುತ್ತ ಬಂದಿತು. ಬಸರಾಳಿನ ಒಂದು ಶಾಸನದಲ್ಲಿ ದೇವಾಲಯಕ್ಕೆ ಸಂಬಂಧಿಸಿದ ವಿವಿಧ ಉದ್ಯೋಗಿಗಳಿಗೆ ಗದ್ಯಾಣಗಳನ್ನು ನಿಗದಿಗೊಳಿಸುತ್ತ 'ದೇವರಾರತಿಯ ಸೂಳೆಯರಿಗೆ ಮೂರು ಗದ್ಯಾಣ'ಗಳನ್ನು ಹೇಳಲಾಗಿದೆ.[೩] ಇವರು ದೇವರ ಮೆರವಣಿಗೆ ಮತ್ತು ಇತರ ವಿಶೇಷ ಸಂದರ್ಭಗಳಲ್ಲಿ ಆರತಿ ಎತ್ತುವವರು. ಅನೇಕ ಶಾಸನಗಳು ಇವರನ್ನು ಪಾತ್ರದವರು ಎಂದು ಕರೆದಿವೆ.[೪] ಕೆಲವು ಶಾಸನಗಳಲ್ಲಿ ಕಂಬದ ಸೂಳೆ[೫]ಯರೆಂದು ಅವರನ್ನು ಕರೆಯಲಾಗಿದೆ. ಇದು ಗರ್ಭಗುಡಿಯ ಮುಂಭಾಗದಲ್ಲಿ ಬೇರೆ ಬೇರೆ ಕರ್ತವ್ಯಗಳನ್ನು ಹೊತ್ತು ಬೇರೆ ಬೇರೆ ಕಂಬಗಳ ಹತ್ತಿರ ನಿಂತುಕೊಳ್ಳುವ ಸೇವೆಯನ್ನು ಸೂಚಿಸುತ್ತದೆ ಎಂಬ ಎಂ. ಚಿದಾನಂದ ಮೂರ್ತಿಯವರ ಅಭಿಪ್ರಾಯವನ್ನು ಅನುಸರಿಸಿ ಭಾವಿಸಬಹುದು.[೬] ದೇವಾಲಯಗಳಿಗೆ ಪಾತ್ರದವರನ್ನು ಬಿಡುವುದು ಪುಣ್ಯಕಾರ್ಯವೆಂದು ವ್ಯಕ್ತಿಗಳು ಭಾವಿಸಿದ್ದಂತೆ ಸಂಘಗಳೂ ನಂಬಿದ್ದವು. ನಾಗವ್ವೆಯ ಮಗನಾದ ಹಿರಿಯ ರಾಮಣ್ಣ ಕೇತವ್ವೆ ಎಂಬುವಳನ್ನು ಪಾತ್ರದವಳಾಗಿ ಒಂದು ದೇವಾಲಯಕ್ಕೆ ನಿಯೋಜಿಸಲು ವೀರ ಪಾಂಚಾಳರು ಒಂದಾಗಿ ಅವಳ ಜೀವಿತಕ್ಕೆ ಕೊಟ್ಟ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೭] ಬುಜಗೌಡನಪುರದ ಶ್ರೀಯೆಯನ ಬಸದಿಗೆ ನಿತ್ಯ ನಿವೇದ್ಯದ ಜೊತೆಗೆ 'ಪಾತ್ರಹಾರೊಳಕಂ.... ದಾನಕಂ.....' ಎಂದು ದಾನದ ಪ್ರಸ್ತಾಪ ಬರುತ್ತದೆ.[೮] ಪಾಠದೋಷವಿರುವ ಈ ಶಾಸನಭಾಗ ಪಾತ್ರಕ್ಕಾಗಿ ಕೊಟ್ಟ ದಾನವನ್ನು ಬಹುಶಃ ಸೂಚಿಸುತ್ತದೆ. ಶಾಸನಗಳಲ್ಲಿ ಸೂಳೆಯರಿಗೆ, ಪಾತ್ರದವರಿಗೆ ದಾನ ಕೊಟ್ಟ ಉಲ್ಲೇಖಗಳು ಬರುತ್ತದೆ. ಅವರಿಬ್ಬರೂ ದೇವರ ಸೇವೆಗೆ ಮೀಸಲಾದವರಾದರೂ ಪಾತ್ರ ಶಬ್ದವು ನೃತ್ಯ ಗೀತಾದಿಗಳಲ್ಲಿ ಪರಿಣತಳಾದವಳನ್ನು, ಸೂಳೆ ಶಬ್ದವು ಉಳಿದ ಸೇವಾಕಾರ್ಯಗಳನ್ನು ಮಾಡುವವಳನ್ನು ಸೂಚಿಸುತ್ತದೆ ಎಂದು ಅಭಿಪ್ರಾಯವಿದೆ.[೯] ಇಲ್ಲಿಯೇ ಇನ್ನೊಂದು ವ್ಯತ್ಯಾಸವನ್ನು ಗಮನಿಸಬಹುದು. 'ದೇವದಾಸಿಯರೆಲ್ಲರೂ ವೇಶ್ಯೆಯರೇ ಆಗಿದ್ದರೂ ವೇಶ್ಯೆಯರೆಲ್ಲರೂ ದೇವದಾಸಿಯರಲ್ಲ. ದೇವಸ್ಥಾನದ ದತ್ತಿಗಳಲ್ಲಿ 'ಸೂಳೆ' ಎಂಬ ಮಾತು ಬಂದರೆ ಅದು ದೇವದಾಸಿಯನ್ನು ಸೂಚಿಸುತ್ತದೆ. ಬೇರೆಯ ಕಡೆ ಬಂದಾಗ ಅದು ವೇಶ್ಯೆಯನ್ನು ಸೂಚಿಸುತ್ತದೆ.'[೧೦] ದೇವದಾಸಿಯರನ್ನು

---

೧. A. S. Altekar : The Position of Women in Hindu Civilization ಪು. ೧೮೪:೫.

೨. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೧೮೨.

೩. (ಮೈ) ಎಕ VII ಮಂಡ್ಯ ೩೦ ಕ್ರಿ.ಶ. ೧೨೩೭.

೪. (ಮೈ) ಎಕ III ಗುಂಡ್ಲುಪೇಟೆ ೧೨ ಕ್ರಿ.ಶ. ೧೩೭೨.

೫. ಎಸ್ಐಐ XV ಮುದ್ದೇಬಿಹಾಳ ೩೮ ಕ್ರಿ.ಶ. ೧೧೪೮.

೬. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ ಪು. ೧೮೪.

೭. (ಮೈ) ಎಕ III ಗುಂಡ್ಲುಪೇಟೆ ೧೭ ಕ್ರಿ.ಶ. ೧೩೭೨.

೮. (ಮೈ) ಎಕ V ಮೈಸೂರು ೨೨೪ ಕ್ರಿ.ಶ. ೧೧೭೩.

೯. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೧೮೨-೧೮೩.

೧೦. ಅದೇ, ಪು. ೧೮೫.

ದೇವಾಲಯಗಳಿಗೆ ಆಯ್ಕೆ ಮಾಡುವಾಗ ಅವರ ಸೌಂದರ್ಯವನ್ನು ಲಕ್ಷಿಸಿ ನಿಯೋಜಿಸುತ್ತಿದ್ದರೆಂದು ಕಾಣುತ್ತದೆ. ಒಂದು ಶಾಸನದಲ್ಲಿ 'ರಂಭಾದಿಡಂಬಕ್ಕ... ಯಿ ಮೇಲೆನಿಸಿರ್ದ್ದ ಲಚ್ಚಣೆಯರಂ ಶ್ರೀಸಿದ್ಧನಾಥಂಗೆ ತಂದಿರಿಸಿ ಖೆಯಿದೇವನು ಕೀರ್ತಿವಡೆದಂ'[೧] ಎಂದು ಬರುತ್ತದೆ. ಶಾಸನ ಮುಂದುವರಿದು 'ಸುರಕಾನ್ತಾನೀಕವೆಳ್ತಂದುದೊ ಮನ(ಮೊ) ನಾಗಕಾಂತಾಸಮೂಹಂ ಭರದಿಂದ ಬಂದಿರ್ದುದೋ ಖಚರಪತಿ ಸ... ರಾಗದಿಂದೊಲ್ದು ಸಿಂದಿರ್ದುದೋ ಪೇಳೆಂಬರದಟೆಂದಂ ಕರಮೆಸೆದಿರ(ಲೀ) ಗೀತ ವಾದ್ಯಂಗಳಿಂದಂ ಸ್ಥಿರಮೆನೆ ಸಿದ್ಧನಾಥಗಿರಿಸಿದನಿವ... ಭಕ್ತಿಯಿಂ ಖೆಯಿದೇವ' ಎಂದಿದೆ. ಮಂದುಬ್ಬೆಯ ಶ್ರೀ ಸಿದ್ಧನಾಥ ದೇವರಿಗೆ ಏರ್ಪಡಿಸಿದ ರಂಗಭೋಗದ ವಿವರಗಳನ್ನು ನೀಡುವಾಗ ಶಾಸನ ಈ ವಿವರಗಳನ್ನು ನೀಡುತ್ತದೆ. ಈ ಶಾಸನದಲ್ಲಿ ಬರುವ 'ಲಚ್ಚಣೆ' (ಪ್ರಾ.ಣಚ್ಚಣೀ < ಸಂ. ನರ್ತನೀ) ಪಾತ್ರದವರನ್ನು ಸೂಚಿಸುತ್ತದೆ. ಇವರು ನರ್ತನದಲ್ಲಿ ವಿಶೇಷ ಪರಿಣತಿಯನ್ನು ಪಡೆದವರಾಗಿದ್ದು ದೇವಾಲಯದ ರಂಗಭೋಗಸೇವೆಗೆ ನಿಯುಕ್ತರಾದವರಾಗಿರುತ್ತಿದ್ದರು.

ಸೂಳೆಯರು ಪ್ರತ್ಯೇಕ ಕೇರಿಗಳಲ್ಲಿ ವಾಸಿಸುತ್ತಿದ್ದರು. ದಾನ ಭೂಮಿಯ ಮೇರೆಯನ್ನು ಹೇಳುವ ಸಂದರ್ಭದಲ್ಲಿ ಶಾಸನವೊಂದು 'ಸೂಳೆಗೇರಿ'[೨]ಯನ್ನು ಹೇಳುತ್ತದೆ. ಕೆಲವು ಶಾಸನಗಳು ಅವರ ಮೇಲೆ ವಿಧಿಸುತ್ತಿದ್ದ 'ಸೂಳೆದೆಜ್ಜೆ'[೩] ಎಂಬ ತೆರಿಗೆಯನ್ನು ಹೇಳುತ್ತವೆ. ಶಾಸನಗಳನ್ನು ಗಮನಿಸಿದರೆ ವೇಶ್ಯೆಯರಿಗೆ ಈಗಿರುವಂತೆ ಆ ಕಾಲದಲ್ಲಿ ಸಾಮಾಜಿಕವಾಗಿ ನಿಕೃಷ್ಟ ಸ್ಥಾನವಿದ್ದಂತಿಲ್ಲ. ಏಕೆಂದರೆ ಶಾಸನಗಳಲ್ಲಿ ಎಲ್ಲಿಯೂ ಅವರ ಬಗ್ಗೆ ಅವಹೇಳನಕರ ಮಾತುಗಳು ಬಂದಿಲ್ಲ. ಅಲ್ಲದೆ ಕೆಲವು ಶಾಸನಗಳಲ್ಲಿ ಅವರು ದೇವಾಲಯಗಳಿಗೆ ಅನೇಕ ದಾನಗಳನ್ನು ನೀಡಿರುವುದು ಕಂಡುಬರುತ್ತದೆ.[೪]

ಕನ್ನಡದ ಕೆಲವು ಕಾವ್ಯಗಳಲ್ಲಿ ಮತ್ತು ಶಾಸನಗಳಲ್ಲಿ ಬರುವ 'ನಾಗವಾಸ' ದೇವಸ್ಥಾನದ ವಿಶಿಷ್ಟ ವರ್ಗದ ಒಂದು ಸಿಬ್ಬಂದಿಯನ್ನು ಸೂಚಿಸುತ್ತದೆ. ದೇವಾಲಯಗಳ ವಿವಿಧ ಸಿಬ್ಬಂದಿಗೆ ದಾನ ದತ್ತಿಗಳನ್ನು ಕೊಡುವಾಗ ನಾಗವಾಸಕ್ಕೆ,[೫] ದೇವರ ಭೋಗದ ನಾಗವಾಸದ ಜೀವಿತ ಗ ೩೦'[೬] ಎಂದು ಮುಂತಾಗಿ ಬರುತ್ತದೆ. ನಾಗವಾಸವು ದೇವದಾಸಿಯರ ವಾಸದ ಪ್ರದೇಶವನ್ನೂ ಪರ್ಯಾಯವಾಗಿ ಅವರ ಸಮೂಹವನ್ನು ನಿರ್ದೇಶಿಸುತ್ತದೆ.[೭] ಕೆಲವು ಕಾವ್ಯಗಳಲ್ಲಿ[೮] ಮತ್ತು ಶಾಸನಗಳಲ್ಲಿ[೯] ಬಳಕೆಯಾಗಿರುವ ನಟ್ಟುವ, ನಟುವ ಎಂಬ ಪದ ಸಂಗೀತ ನರ್ತನಗಳಲ್ಲಿ ಪರಿಣತನಾದ ವ್ಯಕ್ತಿಯನ್ನು ಅಥವಾ ನಾಟ್ಯಾಚಾರ್ಯನನ್ನು ಸೂಚಿಸುತ್ತದೆ. ಕೆಲವು ಶಾಸನಗಳಲ್ಲಿ ಸೂಳೆವಳ,[೧೦] ಸೂಳೆವಾಳ[೧೧] ಎಂಬ ಉದ್ಯೋಗಗಳು ಉಲ್ಲೇಖಗೊಂಡಿವೆ. ಅವು

---

೧. ಐಕೆಡಿ ದ. ಸೊಲ್ಲಾಪುರ ೨೩ ಕ್ರಿ.ಶ. ೧೧೮೭.

೨. (ರೈ) ಎಕ XI ದಾವಣಗೆರೆ ೫ ಕ್ರಿ.ಶ. ೧೧೬೬.

೩. (ರೈ) ಎಕ XI ದಾವಣಗೆರೆ ೧೩೩ ಕ್ರಿ.ಶ. ೧೦೭೧.

೪. ಬಿ.ಆರ್. ಹಿರೇಮಠ : ಕಳಚುರಿ ಬಿಜ್ಜಳನ ಶಿರೋಳ ಶಾಸನ ಸಾಧನೆ ೧೪-೪ ಮುಧೋಳ ಕ್ರಿ.ಶ. ೧೧೩೪ ಪು. ೩೧-೩೪. ಪಾತ್ರದ ಮಾಳವೆ- ಈಕೆ ಕ್ರಿ.ಶ. ೧೨೭೩-೧೨೮೦ರ ಅವಧಿಯಲ್ಲಿ ಹೊಯ್ಸಳೇಶ್ವರ ದೇವಾಲಯದ ಪಾತ್ರದವಳಾಗಿ ಸೇವೆ ಸಲ್ಲಿಸಿ ಕನಿಷ್ಠ ನಾಲ್ಕು ಬಾರಿಯಾದರೂ ಅಲ್ಪ ಕಾಣಿಕೆಗಳನ್ನು ಕೊಟ್ಟಿದ್ದಾಳೆ. ನೋಡಿ: ಎಸ್. ಶೆಟ್ಟರ್ : 'ಹಳೆಯಬೀಡಿನ ಹಲವು ಶಾಸನಗಳು: ಕಾಲ ಹಾಗೂ ವಿಷಯ ವಿಮರ್ಶೆ' ಸಾಧನೆ ೫-೨ ಪು. ೫೭.

೫. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೬. (ಮೈ) ಎಕ VII ಮಂಡ್ಯ ೩೦ ಕ್ರಿ.ಶ. ೧೨೩೭.

೭. ನಾಗವಾಸದ ಹೆಚ್ಚಿನ ವಿವರಗಳಿಗೆ ನೋಡಿ: ಎಂ. ಚಿದಾನಂದ ಮೂರ್ತಿಯವರ "ನಾಗವಾಸ" ಎಂದರೇನು? ಎಂಬ ಲೇಖನ. ಲಿಂಗಾಯತ ಅಧ್ಯಯನ, ಪು. ೯೭-೧೦೮.

೮. ಅನಂತನಾಥ ಪುರಾಣಂ, ೩-೧೧.

೯. ಎಇ XIII ಬಂಕಾಪುರ ೧೪ ಕ್ರಿ.ಶ. ೧೦೫೫.

೧೦. ಎಸ್ಐಐ XX ಸಿಂದಗಿ ೩೦೦ ಕ್ರಿ.ಶ. ೧೨ ಶ.ಮಾ.

೧೧. ಐಕೆಡಿ ದಕ್ಷಿಣ ಸೊಲ್ಲಾಪುರ ೨೩ ಕ್ರಿ.ಶ. ೧೧೮೭.

ಸೂಳೆಯರ ಮೇಲ್ವಿಚಾರಕರನ್ನು ಸೂಚಿಸುತ್ತದೆ. ಅನೇಕ ಶಾಸನಗಳಲ್ಲಿ ಕಂಡುಬರುವ ಭೋಗದವರು[೧] ಎಂಬ ಉಲ್ಲೇಖ ರಂಗಭೋಗದವರನ್ನು ಕುರಿತು ಹೇಳುವುದೆಂದು ಭಾವಿಸಬೇಕಾಗುತ್ತದೆ.

ದೇವದಾಸಿ ಪದ್ಧತಿ ಬಂದಾಗ ಆರಂಭದಲ್ಲಿ ಬ್ರಾಹ್ಮಣರು ವಿರೋಧಿಸಿದರೆಂದೂ ರಾಜರು ಒತ್ತಾಯಪೂರ್ವಕವಾಗಿ ಅದನ್ನು ಜಾರಿಗೆ ತಂದದ್ದರಿಂದ ಪ್ರತಿಭಟನೆಯಿಂದ ಯಾವ ಪ್ರಯೋಜನವೂ ಆಗಲಿಲ್ಲವೆಂದು ಎ.ಎಸ್. ಆಲ್ಟೇಕರ್ ಅವರು ಅಭಿಪ್ರಾಯಪಡುತ್ತಾರೆ.[೨]

ದೇವದಾಸಿ ಪದ್ಧತಿ ದಕ್ಷಿಣ ಭಾರತದಲ್ಲಿ ಸಾಕಷ್ಟು ವ್ಯಾಪಕವಾಗಿ ಬೆಳೆದುಬಂದಿತು. ಈ ಸಂಪ್ರದಾಯ ಈಗಲೂ ಉಳಿದುಬಂದಿರುವುದು ಗಮನಾರ್ಹವಾಗಿದೆ. ಎಡ್ಗರ್ ಥರ್ಸ್ಟನ್ ಅವರು ತಮ್ಮ ಗ್ರಂಥದಲ್ಲಿ ಪ್ರಾಚೀನ ಹಿಂದೂ ಕೃತಿಗಳನ್ನು ಆಧರಿಸಿ ಏಳು ವಿಧದ ದೇವದಾಸಿಯರನ್ನು ಗುರುತಿಸುತ್ತಾರೆ.[೩] ಕನ್ನಡ ಶಾಸನಗಳಲ್ಲಿ ಕಂಡುಬರುವ ದೇವದಾಸಿಯರು ಯಾವ ಕಾರಣದಿಂದ, ಯಾವ ಹಿನ್ನೆಲೆಯಲ್ಲಿ ದೇವದಾಸಿಯರಾದರೆಂಬ ವಿವರಗಳು ಶಾಸನಗಳಿಂದ ಲಭ್ಯವಾಗುವುದಿಲ್ಲ. ಸೂಳೆ, ಪಾತ್ರ ಪದಗಳು ಅವರನ್ನು ಕುರಿತು ಬಳಕೆಯಾದಂತೆ ಕ್ರಮೇಣ ಬಸವಿ ಪದ ಬಳಕೆಯಾಗಿದೆ. ಹದಿನಾಲ್ಕನೆಯ ಶತಮಾನದ ಎರಡು ಶಾಸನಗಳಲ್ಲಿ ಬಸವಿ ಪದ ಬಳಕೆಯಾಗಿರುವುದನ್ನು ಚನ್ನಕ್ಕ ಎಲಿಗಾರ ಅವರು ಗುರುತಿಸಿದ್ದಾರೆ.[೪] ದೇವದಾಸಿ ಪದ್ಧತಿ ಕರ್ನಾಟಕದಲ್ಲಿ ಯಾವುದೇ ಘನ ಉದ್ದೇಶದಿಂದ ಬೆಳೆದು ಬಂದಿದ್ದರೂ ಕೂಡ ಅದು ತನ್ನೆಲ್ಲ ಘನತೆಯನ್ನು ಕಳೆದುಕೊಂಡು ಈಗ ಸಮಾಜದ ಒಂದು ಅನಿಷ್ಟ ಅಂಶವಾಗಿ ಉಳಿದಿದೆ.

ದೇವಾಲಯಗಳು ಆಗ ವಿದ್ಯಾಭ್ಯಾಸದ ಚಟುವಟಿಕೆಯನ್ನು ಕೈಗೊಳ್ಳುತ್ತಿದ್ದುದರಿಂದ ಅವು ವಿದ್ಯಾರ್ಥಿಗಳಿಗೆ ಪಾಠವನ್ನು ಬೋಧಿಸಲು ಗುರುಗಳನ್ನು ನೇಮಕ ಮಾಡಿಕೊಳ್ಳುತ್ತಿದ್ದವು. ಈ ವಿಷಯವನ್ನು ಮುಂದೆ ಸ್ವಲ್ಪ ವಿವರವಾಗಿ ಗಮನಿಸಲಾಗಿದೆ. ದೇವಾಲಯಗಳು ನೀಡುತ್ತಿದ್ದ ವ್ಯಾಪಕ ಉದ್ಯೋಗಗಳಿಗೆ ಪ್ರತಿಫಲವಾಗಿ ಆ ಕಾಲದಲ್ಲಿ ಇತರ ಉದ್ಯೋಗಗಳಿಗೆ ನೀಡುತ್ತಿದ್ದಂತೆ ಜಮೀನನ್ನು ಕೊಡುವ ಪದ್ಧತಿ ಕಂಡುಬರುತ್ತದೆ.[೫] ಕೆಲವು ದೇವಾಲಯಗಳಲ್ಲಿ ವರ್ಷಕ್ಕೆ ಇಷ್ಟೆಂದು ನಿರ್ದಿಷ್ಟ ಮೊತ್ತದ ಹಣವನ್ನು ನೀಡಲಾಗುತ್ತಿದ್ದಿತು.[೬] ಒಟ್ಟಿನಲ್ಲಿ ದೇವಾಲಯಗಳು ಆ ಕಾಲದ ಬಹುದೊಡ್ಡ ಉದ್ಯೋಗಕೇಂದ್ರಗಳಾಗಿ ಕಾರ್ಯ ನಿರ್ವಹಿಸಿರುವುದನ್ನು ಶಾಸನಗಳಿಂದ ಮನಗಾಣಬಹುದು.

---

೧. (ಮೈ) ಎಕ VII ನಾಗಮಂಗಲ ೧೩೦ ಕ್ರಿ.ಶ. ೧೧೭೯.

೨. A. S. Altekar : ಪೂರ್ವೋಕ್ತ, ಪು. ೧೮೨-೩.

೩. Edgar Thurston : Castes and Tribes of Southern India. II, ಪು. ೧೨೫. ಅವರು ಕೊಡುವ ವಿವರಗಳು ಹೀಗಿವೆ: ೧) ದತ್ತಾ-ತನ್ನನ್ನು ತಾನು ದೇವಾಲಯಕ್ಕೆ ಕಾಣಿಕೆಯಾಗಿ ಕೊಟ್ಟುಕೊಂಡವಳು. ೨) ವಿಕ್ರೀತಾ-ದೇವಾಲಯಕ್ಕೆ ತನ್ನನ್ನು ಮಾರಿಕೊಂಡವಳು ೩) ಭೃತ್ಯಾ-ತನ್ನ ಕುಟುಂಬದ ಒಳಿತಿಗಾಗಿ ದೇವಾಲಯದ ಸೇವೆಗೆ ಸಮರ್ಪಿಸಿಕೊಂಡವಳು. ೪) ಭಕ್ತಾ-ದೇವಾಲಯವನ್ನು ಭಕ್ತಿಯ ಕಾರಣದಿಂದ ಸೇರಿದವಳು ೫) ಹೃತಾ-ಬದುಕಿನ ಮಾರ್ಗ ಬದಲಾಯಿಸಿ ದೇವಾಲಯಕ್ಕೆ ಕೊಡಲ್ಪಟ್ಟವಳು. ೬) ಅಲಂಕಾರ-ಸಂಗೀತ ನೃತ್ಯಗಳಲ್ಲಿ ಪರಿಣತಳಾಗಿದ್ದು ರಾಜ ಅಥವಾ ಗಣ್ಯ ವ್ಯಕ್ತಿಯಿಂದ ದೇವಾಲಯಕ್ಕೆ ನೀಡಲ್ಪಟ್ಟವಳು. ೭) ರುದ್ರಗಣಿಕಾ ಅಥವಾ ಗೋಪಿಕಾ-ಕ್ರಮವಾಗಿ ವೇತನ ಪಡೆಯುತ್ತಾ ದೇವಾಲಯದ ಸಿಬ್ಬಂದಿಯಾಗಿದ್ದು ಗಾಯನ ನರ್ತನ ಸೇವೆ ಮಾಡುವವಳು. ಕರ್ನಾಟಕದ ದೇವದಾಸಿಯರು ಯಾವ ವಿಧಗಳಲ್ಲಿ ಅಳವಡುತ್ತಾರೆ ಎಂದು ಖಚಿತವಾಗಿ ಹೇಳುವುದು ಕಠಿಣ; ವಿಶೇಷ ಅಧ್ಯಯನ ಅಗತ್ಯವಿದೆ.

೪. ಚನ್ನಕ್ಕ ಎಲಿಗಾರ : ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು. ೧೦೯.

೫. ಐಕೆಡಿ ದ. ಕೊಲ್ಲಾಪುರ ೨೩ ಕ್ರಿ.ಶ. ೧೧೮೭; ಎಸ್‌ಐಐ XX ಸಿಂದಗಿ ೩೦೦ ಕ್ರಿ.ಶ. ೧೨ ಶ.ಮಾ. ಈ ಶಾಸನಗಳಲ್ಲಿ ವಿವಿಧ ಉದ್ಯೋಗಿಗಳಿಗೆ ನಿರ್ದಿಷ್ಟವಾದ ಮತ್ತರು ಅಳತೆಯ ಜಮೀನನ್ನು ನೀಡಲಾಗಿದೆಯೆಂದು ಹೇಳಿದೆ.

೬. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬; (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

## ಮಠಗಳು : ದೇವಸ್ಥಾನಗಳು:

ದೇವಸ್ಥಾನಗಳ ಮತ್ತು ಮಠಗಳ ಬೆಳವಣಿಗೆಯ ಅಭ್ಯಾಸ ತುಂಬ ಕುತೂಹಲಕರವಾದುದು. ಸಾಮಾನ್ಯವಾಗಿ 'ಹಿಂದೂ ಧರ್ಮಗಳ ಮಠಗಳಿಗೆ ಪ್ರೇರಣೆ ಬೌದ್ಧವಿಹಾರ'ಗಳೆಂದು ವಿದ್ವಾಂಸರು ಭಾವಿಸುತ್ತಾರೆ.[೧] ದೇವಾಲಯದ ಆವರಣದಲ್ಲಿ ಅಥವಾ ಅದಕ್ಕೆ ಹೊಂದಿಕೊಂಡಂತೆ ಮಠಗಳಿರುತ್ತಿದ್ದವು. ಸ್ಥಳೀಯರಾದ ಯತಿಗಳು ಮತ್ತು ಯಾತ್ರೆಗಾಗಿ ಬರುತ್ತಿದ್ದ ಯತಿಗಳು ಮಠಗಳಲ್ಲಿ ಉಳಿದುಕೊಳ್ಳುತ್ತಿದ್ದರೆಂದು ಭಾವಿಸಬಹುದು. ವಚನಗಳಲ್ಲಿ ಮಠವೆನ್ನುವುದು ಭಕ್ತನ ಮನೆ ಎಂಬ ಅರ್ಥದಲ್ಲಿ ಬಳಕೆಯಾಗಿದೆ.[೨] ಲಕುಲೀಶ ಪಾಶುಪತರು ಕರ್ನಾಟಕದಲ್ಲಿ ಕ್ರಮೇಣ ನೆಲೆಯೂರಿದಂತೆ ಮಠಗಳು ಬೆಳೆದು ಬಂದವೆಂಬ ಸಾಮಾನ್ಯ ಭಾವನೆ ಇದೆ. ಅನೇಕ ಶೈವ ದೇವಾಲಯಗಳಿಗೆ ದಾನದೊಂದಿಗೆ ಶೈವಯತಿಗಳ ಆಹಾರದಾನಕ್ಕೂ ದಾನಗಳು ಉದಾರವಾಗಿ ನೀಡಲ್ಪಟ್ಟಿವೆ. ಉದಾಹರಣೆಗೆ ಬಿಟ್ಟಯ್ಯನು ಚಟ್ಟಯ್ಯನ ಹಳ್ಳಿಯಲ್ಲಿ ಒಂದು ಕೆರೆ ಕಟ್ಟಿಸಿ ಸೋಮನಾಥದೇವರ ಪ್ರತಿಷ್ಠೆಯನ್ನು ಮಾಡಿಸಿ ಚಿಕಜೀಯರ ಕಾಲು ತೊಳೆದು ದೇವರಂಗಭೋಗ ನಂದಾದೀವಿಗೆ ನಿವೇದ್ಯಕ್ಕೆ ದಾನ ಮಾಡಿ ಮಠಪತಿಗಳ ಆಹಾರದಾನಕ್ಕೆ ನೀಡಿದ ದತ್ತಿಗಳನ್ನು ಒಂದು ಶಾಸನ ತಿಳಿಸುತ್ತದೆ.[೩] ಕೆಲವು ಮಠಗಳು ಸ್ವತಂತ್ರವಾಗಿಯೂ ಅಸ್ತಿತ್ವದಲ್ಲಿ ಇದ್ದುವೆಂದು ಭಾವಿಸಲು ಅವಕಾಶವಿದೆ. ಆಣೆಹಳ್ಳಿ ತೋಪಿನಲ್ಲಿ ನೂತನವಾಗಿ ಮಠ ಕಟ್ಟಿದ ವಿಷಯ ತಿಳಿದು ಅದಕ್ಕಾಗಿ ಭೂಮಿಯನ್ನು ವಿನಿಮಯ ಮಾಡಿಕೊಂಡ ವಿಷಯವನ್ನು ತಾಮ್ರಶಾಸನವೊಂದು ತಿಳಿಸುತ್ತದೆ.[೪] ಸಾಮಾನ್ಯವಾಗಿ ಮಠಗಳು ದೇವಾಲಯಗಳಿಗೆ ಹೊಂದಿದಂತೆ ಇರುತ್ತಿದ್ದುದೇ ಅಧಿಕವೆಂಬಂತೆ ಕಾಣುತ್ತದೆ. ಸ್ವತಂತ್ರ ಮಠಗಳ ವಿವರಗಳು ಶಾಸನಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ದೇವಸ್ಥಾನಗಳನ್ನು, ಮಠಗಳನ್ನು ವ್ಯವಸ್ಥಿತವಾಗಿ ಬೆಳೆಸಿದ ಶೈವಯತಿಗಳು ಸ್ಥಾನಪತಿಗಳಾಗಿದ್ದುಕೊಂಡು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕಾರ್ಯಗಳನ್ನು ತುಂಬ ಯಶಸ್ವಿಯಾಗಿ ನಿರ್ವಹಿಸಿದರು. ಅವರು ಕಟ್ಟಿ ಬೆಳೆಸಿದ ಮಠಗಳಿಗೆ ಸಂಬಂಧಪಟ್ಟಂತೆ ಬಳಕೆಯಾಗುವ ಸ್ಥಾನಪತಿ,[೫] ಸ್ಥಾನಾಚಾರ್ಯ,[೬] ಮಠಪತಿ,[೭] ಗಣಮಠ,[೮] ಗಣಕುಮಾರ,[೯] ಗಣಕುಮಾರಿ[೧೦] ಎಂಬಂತಹ ಪದಗಳು, ಆ ಮಠಗಳು ವ್ಯವಸ್ಥಿತವಾಗಿ ಬೆಳೆದಿದ್ದವು ಎಂಬುದನ್ನು ಸೂಚಿಸುತ್ತವೆ. ಮಠಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯನ್ನು ಮಠದೆರೆ[೧೧] ಎಂದು ಕರೆಯಲಾಗಿದೆ. ದೇವಸ್ಥಾನ ಮತ್ತು

---

೧. P.V.Kane : History of Dharmashastra II(ii), ಪು. ೯೦೭.

೨. ಬ.ವ. ೮೬೪ ಭಕ್ತನ ಮಠವೆಂದು ಜಂಗಮ ನಡೆದು
ಬಂದಲ್ಲಿ ಆ ಭಕ್ತನು ಕಾಣುತ್ತ ಆಸನ ತ್ಯಜತೆಯ
ಮಾಡುತ್ತ......... ತನು ಕರಗಿ ಮನ ಕರಗಿ ನೋಡಿ
ಮಾಡುವದು ಭಕ್ತಿ ಸ್ಥಲ.

೩. (ರೈ) ಎಕ VI ಕಡೂರು ೧೧೭ ಕ್ರಿ.ಶ. ೧೨೦೮.

೪. (ರೈ) ಎಕ XII ಚಿಕ್ಕನಾಯಕನಹಳ್ಳಿ ೩೮ ಕ್ರಿ.ಶ. ೧೧೭೨.

೫. ಎಸ್ಐಐ XV ಬಾಗೇವಾಡಿ ೯೭ ಕ್ರಿ.ಶ. ೧೧೫೮.

೬. (ರೈ) ಎಕ VII ಶಿಕಾರಿಪುರ ೯೬ ಕ್ರಿ.ಶ. ೧೧೭೯.

೭. (ರೈ) ಎಕ VI ಕಡೂರು ೧೧೭ ಕ್ರಿ.ಶ. ೧೨೦೮.

೮. ಸಾಧನೆ ೯:೪ ಕ್ರಿ.ಶ. ೧೨೦೯ ಪು. ೮೫-೮೬.

೯. ಎಸ್ಐಐ IX(i) ಹರಪನಹಳ್ಳಿ ೩೩೯ ಕ್ರಿ.ಶ. ೧೨೨೨.

೧೦. (ರೈ) ಎಕ VI ಕಡೂರು ೧೧೭ ಕ್ರಿ.ಶ. ೧೨೦೮.

೧೧. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.

ಮಠಗಳ ನಿರ್ಮಾಣ ತುಂಬ ವ್ಯಾಪಕ ಪ್ರಮಾಣದಲ್ಲಿ ನಡೆದಿರುವುದನ್ನು ಸಮಕಾಲೀನ ಶಾಸನಗಳು ದೃಢಪಡಿಸುತ್ತವೆ. ದೇವಸ್ಥಾನಗಳು ಮತ್ತು ಮಠಗಳು ಪಡೆದ ದಾನಗಳನ್ನು ಗಮನಿಸಿದರೆ ಅವು ಸಮಕಾಲೀನ ಸಮಾಜದಲ್ಲಿ ಪಡೆದ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವ ಅರಿವಾಗುತ್ತದೆ. ಮಠಗಳಿಗೆ ಸಂಬಂಧಿಸಿದಂತೆ ಮೇಲೆ ಉಲ್ಲೇಖಿಸಿದ ಕೆಲವು ಪಾರಿಭಾಷಿಕ ಪದಗಳ ಖಚಿತ ವಿವರಣೆ ಇನ್ನೂ ಸಾಧ್ಯವಾದಂತಿಲ್ಲ.

**ಸ್ಥಾನಪತಿ:**

ದೇವಸ್ಥಾನಗಳ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದ ಮುಖ್ಯರನ್ನು ಸ್ಥಾನಪತಿ ಅಥವಾ ಸ್ಥಾನಿಕ ಎಂದು ಸಾಮಾನ್ಯವಾಗಿ ಕರೆಯುತ್ತಿದ್ದರು; ಅವರನ್ನು ಸ್ಥಾನಾಚಾರ್ಯ ಎಂದೂ ಶಾಸನಗಳು ಕರೆದಿವೆ. ಜೈನಬಸದಿಗಳಲ್ಲಿಯೂ ಅವರನ್ನು ಆಚಾರ್ಯ,[೧] ಮಂಡಲಾಚಾರ್ಯ, ಮಹಾಮಂಡಲಾಚಾರ್ಯ[೨] ಎಂದು ಕರೆಯುತ್ತಿದ್ದರು. ಶೈವ ಸ್ಥಾನಾಚಾರ್ಯ ಮತ್ತು ಜೈನ ಆಚಾರ್ಯರ ಕಾರ್ಯವ್ಯಾಪ್ತಿ ಬಹುಮಟ್ಟಿಗೆ ಸಮಾನವಾಗಿ ಕಂಡುಬರುವುದಾದರೂ ಅವರ ಕಾರ್ಯವ್ಯಾಪ್ತಿಗಳನ್ನು ಕುರಿತಂತೆ ಆಳವಾದ ಅಧ್ಯಯನ ನಡೆಯಬೇಕಾಗಿದೆ. ಸ್ಥಾನಪತಿಗಳು ತಮ್ಮ ಅಪಾರ ವಿದ್ವತ್ತು, ತಪಸ್ಸು ಮತ್ತು ನಡತೆಯಿಂದ ಅಸಾಧಾರಣ ವ್ಯಕ್ತಿತ್ವವನ್ನು ಪಡೆದಿದ್ದರು. ಕೆಲವು ಕೇಂದ್ರಗಳಂತೂ ನೈಷ್ಠಿಕ ಕೇಂದ್ರಗಳಾಗಿದ್ದುದನ್ನು ಶಾಸನಗಳು ಖಚಿತವಾಗಿ ಹೇಳುತ್ತವೆ. ಅನೇಕ ಸ್ಥಾನಗಳ ಆಚಾರ್ಯರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದು ಅಸಾಧಾರಣ ಸಾಧಕರಾಗಿದ್ದರು. ಉದಾಹರಣೆಗೆ ಬೆಣಚಮಟ್ಟಿಯ ಶಾಸನ ಚಂದ್ರಮೌಳಿ ಯತೀಂದ್ರನನ್ನು ನೈಷ್ಠಿಕಾಗ್ರಗಣ್ಯನೆಂದು ಕೀರ್ತಿಸುತ್ತದೆ.[೩] ಕೆಲವು ಮಠಗಳಂತೂ ನೈಷ್ಠಿಕ ಬ್ರಹ್ಮಚರ್ಯವನ್ನು ಅನುಸರಿಸದ ಗುರುಗಳನ್ನು ಮಠದಿಂದ ಹೊರಹಾಕಿ ಪರಮನೈಷ್ಠಿಕರನ್ನು ಆ ಸ್ಥಾನದಲ್ಲಿ ಸ್ಥಾಪಿಸಬೇಕೆಂದು ಹೇಳುತ್ತವೆ.[೪] ಸ್ಥಾನಪತಿಗಳು ದಾನಸ್ವೀಕಾರ, ತಪಸ್ಸು, ವಿದ್ಯಾದಾನ ಮತ್ತು ಸಾಮಾಜಿಕ ಕಾರ್ಯಗಳನ್ನು ಪ್ರಮುಖವಾಗಿ ನಿರ್ವಹಿಸುತ್ತಿದ್ದರು. ಬಳ್ಳಿಗಾವೆಯ ಕೋಡಿಮಠದಂತಹ ಕೇಂದ್ರಗಳು ಆ ಕಾಲದ ಬಹುದೊಡ್ಡ ಸಾಂಸ್ಕೃತಿಕ ಕೇಂದ್ರವಾಗಿ ಕಾರ್ಯನಿರ್ವಹಿಸಿರುವುದು ಪ್ರಸಿದ್ಧ ಸಂಗತಿಯೇ ಆಗಿದೆ. ಕೇದಾರೇಶ್ವರ ದೇವಾಲಯದ ಸ್ಥಾನಪತಿಯಾಗಿದ್ದ ವಾಮಶಕ್ತಿ ಸುಮಾರು ಕ್ರಿ.ಶ. ೧೧೫೬ ರಿಂದ ಕ್ರಿ.ಶ. ೧೧೯೩ರ ವರೆಗೆ ಆ ಸ್ಥಾನ ನಿರ್ವಹಿಸಿದ್ದು ಸುಮಾರು ಹತ್ತು ಶಾಸನಗಳಲ್ಲಿ ಕೀರ್ತಿತನಾಗಿರುವ ಅವನು ಆ ಕಾಲದ ಶೈವಧರ್ಮಕ್ಕೆ, ಅದರ ಪ್ರಸಾರಕ್ಕೆ ಬಹುದೊಡ್ಡ ಕಾಣಿಕೆ ಸಲ್ಲಿಸಿದ್ದಾನೆ. ಅಲ್ಲದೆ ಆತನು ಚಾಳುಕ್ಯ, ಕಳಚೂರ್ಯ ಮತ್ತು ಹೊಯ್ಸಳ ರಾಜಮನೆತನಗಳ ಆಳ್ವಿಕೆಯಲ್ಲಿ ಸುಮಾರು ೪೦ ವರ್ಷಗಳ ಕಾಲ ದಾನದತ್ತಿಗಳನ್ನು ಸ್ವೀಕರಿಸಿ 'ರಾಜಗುರು'ವೆಂದು ಪೂಜ್ಯನಾಗಿದ್ದನು. ಎಲ್ಲ ಸ್ಥಾನಿಕರಿಂದ ಉನ್ನತ ಆದರ್ಶವನ್ನು ನಿರೀಕ್ಷಿಸುವುದು ಕಠಿಣವಾದರೂ[೫] ಹೆಚ್ಚಿನ ಸ್ಥಾನಿಕರು ಆ ಸ್ಥಾನಕ್ಕೆ ಯೋಗ್ಯರಾಗಿಯೇ ನಡೆದುಕೊಂಡಂತಿದೆ.

---

೧. (ರೈ) ಎಕ VII ಶಿಕಾರಿಪುರ ೧೯೭ ಕ್ರಿ.ಶ. ೧೧೮೨.

೨. ಕಇ I ಸೌಂದತ್ತಿ ೩೨ ಕ್ರಿ.ಶ. ೧೨೨೯.

೩. ಎಇ XX ರೋಣ ೧೨ ಕ್ರಿ.ಶ. ೧೧೬೬.

೪. ಎಇ XV ಜತ್ ೨೦ ಕ್ರಿ.ಶ. ೧೧೭೨.

೫. ಜಸಮಳಿದು ಧನಮನಾರ್ಜ್ಜಿಸಿ
ಅಸಬ್ರಿಯದಿಂ ದೇವಾಲಯದೊಡವೆಗಳಂತ
ರಿಸುವ ದುರ್ವ್ಯಸಿಲಿಗಳಂ ಹೋಲಿಸದಿರು
ವಸುಮತಿಯೊಳು ನೆಗಳ್ದ ಬಲ್ಲರಾಸಿಬ್ರತಿಯಂ॥

ಕೀರ್ತಿ ಕಳೆದುಕೊಂಡು ಹಣ ಸಂಪಾದಿಸಿ ದೇವಾಲಯದ ಆಸ್ತಿಯನ್ನು ದುರ್ವ್ಯಸನಗಳಿಗೆ ಬಳಸುತ್ತಿದ್ದ ಸ್ಥಾನಿಕರೂ ಇದ್ದರೆಂದು ಈ ಶಾಸನ ಪದ್ಯ ಸೂಚನೆ ಕೊಡುತ್ತದೆ. (ರೈ) ಎಕ VI ಕಡೂರು ೩೭ ಕ್ರಿ.ಶ. ೧೧೮೭.

ದೇವಸ್ಥಾನಗಳು, ಮಠಗಳು ಹೆಚ್ಚಾಗಿ ಒಂದಕ್ಕೊಂದು ಹೊಂದಿಕೊಂಡೇ ಇರುತ್ತಿದ್ದವು. 'ದೇವಸ್ಥಾನದ ಆಸ್ತಿಯೂ ಮಠದ ಆಸ್ತಿಯೂ ಒಂದೇ; ಅಥವಾ ಮಠಕ್ಕೆ ಪ್ರತ್ಯೇಕ ಆಸ್ತಿಯೇ ಇದ್ದಿಲ್ಲ.'[೧] ಕೇದಾರೇಶ್ವರ ದೇವಸ್ಥಾನಕ್ಕೆ ಹೊಂದಿಕೊಂಡಿದ್ದ ಕೋಡಿಮಠ ಆ ಕಾಲದ ಬಹು ಉನ್ನತ ಸಾಂಸ್ಕೃತಿಕ ಕೇಂದ್ರವಾಗಿದ್ದಿತು. ಆ ಕೇಂದ್ರದ ಪ್ರಸಿದ್ಧ ಸ್ಥಾನಾಚಾರ್ಯ ವಾಮಶಕ್ತಿ ದೊಡ್ಡ ಜ್ಞಾನಿಯಾಗಿದ್ದನು. ಅವನನ್ನು ಶಾಸನವೊಂದು 'ವದನಂ ವಾಣೀ ಲೀಲಾ ಸದನಂ' ಎಂದು ಕೀರ್ತಿಸುತ್ತದೆ. ಅಲ್ಲಿಯ ಒಂದು ಶಾಸನ ಅಲ್ಲಿ ನಡೆಯುತ್ತಿದ್ದ ವೈವಿಧ್ಯಮಯ ಚಟುವಟಿಕೆಗಳನ್ನು ತಿಳಿಸುತ್ತದೆ.[೨] ಕೋಡಿಮಠಕ್ಕೆ ನಾನಾ ಪ್ರದೇಶಗಳಿಂದ ಬಡವ, ಕುಂಟ, ಕಿವುಡ, ಕಥಕ, ಗಾಯಕ, ವಾದಕ, ವಾಂಶಿಕ, ನರ್ತಕ, ವೈತಾಳಿ, ನಗ್ನ, ಭಗ್ನ, ಕ್ಷಪಣಕ, ಏಕದಂಡಿ, ತ್ರಿದಂಡಿ, ಹಂಸ, ಪರಮಹಂಸ ಮುಂತಾದವರು ಬಂದು ದಾನವನ್ನು ಸ್ವೀಕರಿಸುತ್ತಿದ್ದರು. ಅಲ್ಲದೆ ಅನಾಥರಾದ ರೋಗಿಗಳು ಬಂದು ಚಿಕಿತ್ಸೆ ಪಡೆಯುತ್ತಿದ್ದರು. ಅದು ಎಲ್ಲ ಜನರಿಗೆ ಅಭಯಸ್ಥಾನವಾಗಿತ್ತು. ಹೀಗೆ ದೇವಾಲಯ ಮಠಗಳು ನಡೆಸುತ್ತಿದ್ದ ವೈವಿಧ್ಯಮಯವಾದ ಸೇವೆ ಬೆರಗುಗೊಳಿಸುವಂತಹುದಾಗಿದೆ. ಬಳ್ಳಿಗಾವೆಯಲ್ಲಿ ಕೋಡಿಮಠವಲ್ಲದೆ ಪಂಚಲಿಂಗ ಮಠ, ಅಗ್ನೀಶ್ವರ ಮಠ, ಉಭಯ ದ್ವಾದಶ ನಾರಾಯಣ ಮಠ, ಕಲ್ಲೇಶ್ವರ ಮಠ, ಜಗದೇಕ ಮಲ್ಲೇಶ್ವರ ಮಠ, ತ್ರಿಪುರಾಂತಕ ಮಠ, ನರಸಿಂಹದೇವರ ಮಠ, ಭೇರುಂಡೇಶ್ವರ ಮಠ, ಬೌದ್ಧ ಮಠ, ಮೂಲಸ್ಥಾನದ ನಂದಿಕೇಶ್ವರ ಮಠ ಮುಂತಾದವು ಇದ್ದುವೆಂದು ತಿಳಿದುಬರುತ್ತದೆ.[೩] ಕೆಲವು ಶಾಸನಗಳಲ್ಲಿ ಕೆಲವು ದಾನಗಳಿಗೆ ಪಂಚಮಠದಾಚಾರ್ಯರು[೪] ಸಾಕ್ಷಿಗಳಾಗಿರುವುದುಂಟು. ಈ ಪಂಚಮಠ ನಿಶ್ಚಿತವಾಗಿ ಯಾವ ಮಠಗಳನ್ನು ಸೂಚಿಸುತ್ತದೆ ಎನ್ನುವುದು ಸ್ಪಷ್ಟವಿದ್ದಂತಿಲ್ಲ.[೫] ಕೆಲವು ಶಾಸನಗಳಲ್ಲಿ ಅಗ್ನಿಷ್ಠಿಗೆಯ ಮಠ[೬]ವೆಂದು ಉಲ್ಲೇಖ ಬರುತ್ತದೆ. ಇದರ ಅರ್ಥವೂ ಸ್ಪಷ್ಟವಾಗುವುದಿಲ್ಲ.

**ದೇವಾಲಯ-ವಿದ್ಯಾಭ್ಯಾಸ:**

ದೇವಾಲಯಗಳು ಮತ್ತು ಮಠಗಳು ಆ ಕಾಲದಲ್ಲಿ ಬಹುದೊಡ್ಡ ವಿದ್ಯಾಕೇಂದ್ರಗಳಾಗಿದ್ದವು. ಕೆಲವು ಘಟಿಕಾಸ್ಥಾನಗಳು ದೇವಸ್ಥಾನಗಳಿಗೆ ಹೊಂದಿಕೊಂಡಂತೆ ಇರುತ್ತಿದ್ದವು. ಹೇಮಾವತಿಯ ಒಂದು ಶಾಸನದಲ್ಲಿ ನೊಣಂಬೇಶ್ವರ ದೇವಾಲಯಕ್ಕೆ ಹೊಂದಿದಂತೆ ಘಟಿಕಾಸ್ಥಾನವಿದ್ದುದು ತಿಳಿದುಬರುವುದಲ್ಲದೆ ಆ ದೇವಾಲಯಕ್ಕೆ ಹೊಂದಿದಂತೆ ಛತ್ರವೂ ಇದ್ದುದು ತಿಳಿದುಬರುತ್ತದೆ.[೭] ಘಟಿಕಾಸ್ಥಾನಗಳೂ ವಿದ್ಯಾಕೇಂದ್ರಗಳಾಗಿದ್ದವು ಎಂದು ಬಹುಮಟ್ಟಿಗೆ ವಿದ್ವಾಂಸರು ಒಪ್ಪಿರುವುದನ್ನು ಗಮನಿಸಬಹುದು.

ಮಠಗಳು ವಿದ್ಯಾಭ್ಯಾಸದ ವಿಷಯದಲ್ಲಿ ಬಹುದೊಡ್ಡ ಸೇವೆಯನ್ನು ಕೈಗೊಂಡಿರುವುದಕ್ಕೆ ಕೇದಾರೇಶ್ವರ ಮಠ ಅಥವಾ ಕೋಡಿಯ ಮಠ ಅತ್ಯುತ್ತಮವಾದ ಉದಾಹರಣೆಯಾಗಿದೆ. ಕೋಡಿಯ ಮಠದ ಸ್ಥಾನಾಚಾರ್ಯರಲ್ಲಿ ಅನೇಕರು ಜ್ಞಾನಿಗಳು ವಿದ್ವಾಂಸರು ಆಗಿದ್ದ ವಿಷಯ ಪ್ರಸಿದ್ಧವಾಗಿಯೇ ಇದೆ. ಆ ಮಠವು ತನ್ನ ಬಹುಮುಖ ಚಟುವಟಿಕೆಗಳಲ್ಲಿ ವಿದ್ಯಾಭ್ಯಾಸಕ್ಕೂ

---

೧. ಎಂ. ಚಿದಾನಂದ ಮೂರ್ತಿ : ಕಶಾಸಾಂಅ, ಪು. ೧೮೭.

೨. (ರೈ) ಎಕ VII ಶಿಕಾರಿಪುರ ೧೦೨ ಕ್ರಿ.ಶ. ೧೧೬೨.

೩. ಎಚ್.ಆರ್. ರಘುನಾಥಭಟ್ : ಕರ್ನಾಟಕ ಶಾಸನ ಕಲೆ, ಪು. ೧೫೫.

೪. ಎಸ್‌ಐಐ IX(i) ಬಳ್ಳಾರಿ ೩೩೬ ಕ್ರಿ.ಶ. ೧೨೧೯; (ರೈ) ಎಕ VI ಕಡೂರು ೧೪೩ ಕ್ರಿ.ಶ. ೧೨೭೫.

೫. ಗ್ರಾಮದಲ್ಲಿರುವ ಹರಿ, ಹರ, ಬ್ರಹ್ಮ, ಜಿನ ಮತ್ತು ಬುದ್ಧ ಈ ಐದು ದೇವರ ಮಠಗಳ ಮುಖ್ಯಸ್ಥರು ಇಲ್ಲವೆ ಅವರ ಪ್ರತಿನಿಧಿಗಳ ಸಮಿತಿ ಎಂಬ ಅಭಿಪ್ರಾಯವಿದೆ.

೬. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

೭. ಎಸ್‌ಐಐ VI ಮಡಕಸಿರ ೫೫೭ ಕ್ರಿ.ಶ. ೧೧೬೮.

ಪ್ರಮುಖ ಸ್ಥಾನವನ್ನು ಕೊಟ್ಟಿದ್ದಿತು. ಕೋಡಿಯ ಮಠದ ಗುರುಗಳ ಪಾಂಡಿತ್ಯ ಮತ್ತು ಅಲ್ಲಿ ಬೋಧಿಸಲಾಗುತ್ತಿದ್ದ ಪಠ್ಯ ವಿಷಯಗಳು ನಾನಾ ಪ್ರದೇಶಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿತ್ತು. ಋಗ್ವೇದ, ಯಜುರ್ವೇದ ಮುಂತಾದ ಚತುರ್ವೇದಗಳು, ಕೌಮಾರ, ಪಾಣಿನೀಯೆ, ಶಾಕಟಾಯನ, ಶಬ್ದಾನುಶಾಸನಾದಿ ವ್ಯಾಕರಣಗಳು, ನ್ಯಾಯ, ವೈಶೇಷಿಕ, ಮೀಮಾಂಸಾ, ಸಾಂಖ್ಯ ಬೌದ್ಧಾದಿ ದರ್ಶನಗಳು, ಲಾಕುಳ ಸಿದ್ಧಾಂತ, ಪಾತಂಜಲಾದಿ ಯೋಗಗಳ ಶಾಸ್ತ್ರಾಧ್ಯಯನಗಳು, ಅಷ್ಟಾದಶ ಪುರಾಣ, ಕಾವ್ಯ, ನಾಟಕ ಮುಂತಾದ ಸಾಹಿತ್ಯ ಶಾಖೆಗಳು ಅಲ್ಲಿಯ ಅಧ್ಯಯನದ ವಿಷಯಗಳಾಗಿದ್ದವು. ವಿವಿಧ ಜ್ಞಾನ, ಶಾಖೆಗಳ ಉಲ್ಲೇಖ, ವಿವಿಧ ಲಲಿತ ಕಲೆಗಾರರು ಅಲ್ಲಿಗೆ ಆಕರ್ಷಿತರಾಗುತ್ತಿದ್ದ ವಿವರಗಳು, ಆ ಸ್ಥಳ ವಿದ್ಯೆಯ, ಕಲೆಯ ಪ್ರಮುಖ ಕೇಂದ್ರವಾಗಿದ್ದಿತು ಎನ್ನುವುದನ್ನು ಖಚಿತಪಡಿಸುತ್ತದೆ. ಇಷ್ಟೊಂದು ವೈವಿಧ್ಯಮಯವಾದ ಜ್ಞಾನಪ್ರಸಾರಕ್ಕೆ ಅಗತ್ಯವಾದ ಗುರುಗಳ ವಿದ್ವತ್ತು, ಪಾಂಡಿತ್ಯಗಳು ಆ ಸ್ಥಳವನ್ನು ಜ್ಞಾನಕೇಂದ್ರವನ್ನಾಗಿ ಮಾಡಿದ್ದರಲ್ಲಿ ಆಶ್ಚರ್ಯವಿಲ್ಲ. ದೇವಾಲಯಗಳಲ್ಲಿ ಪುರಾಣ ಓದುವ ಪುರಾಣ ಭಟ್ಟರು ಅತ್ಯಂತ ಜನಪ್ರಿಯ ಶಿಕ್ಷಕರಾಗಿರುತ್ತಿದ್ದರು. ಅವರು ಮುಂಜಾವಿನ ಹೊತ್ತು ಬಾಲ ಶಿಕ್ಷಣದ ವರ್ಗ ನಡೆಸುತ್ತಿದ್ದರು. ಸಂಜೆಯ ಹೊತ್ತು ವಯಸ್ಕರಿಗೆ ಪುರಾಣ ಓದಿ ಹೇಳಿ ಸರಳ ಭಾಷೆಯಲ್ಲಿ ಅದನ್ನು ವಿವರಿಸಿ ನಿತ್ಯಜೀವನದಲ್ಲಿ ಅದರ ಸಂದೇಶವನ್ನು ಅಳವಡಿಸುವ ಕಲೆಯನ್ನು ವಿವರಿಸುತ್ತಿದ್ದರು.[೧] ಪುರಾಣ ಪಠಣದ ಮೂಲಕ ಬಹುಮುಖಿಜ್ಞಾನವನ್ನು ಪ್ರಸಾರ ಮಾಡುವ ವಿಧಾನ ದೇವಾಲಯಗಳಲ್ಲಿ ನಡೆಯುತ್ತಿದ್ದಿತು.

ದೇವಾಲಯಗಳು ಆ ಕಾಲದಲ್ಲಿ ವಿದ್ಯಾಭ್ಯಾಸದ ಪ್ರಮುಖ ಜವಾಬ್ದಾರಿಯನ್ನು ಹೊತ್ತಿದ್ದವು. ಕೇಶವೇಶ್ವರ ದೇವಾಲಯದಲ್ಲಿ ಹೇಳುವ ಋಗ್ವೇದ ಖಂಡಿಕಕ್ಕೆ ದಾನವನ್ನು ಬಿಡಲಾಗಿದೆಯೆಂದು ಒಂದು ಶಾಸನ ಹೇಳುತ್ತದೆ.[೨] ಹರಿಹರದ ಒಂದು ಸಂಸ್ಕೃತ ಶಾಸನದಲ್ಲಿ[೩] ಹರಿಹರ ದೇವರ ತ್ರಿಕಾಲ ಪೂಜೆಗಾಗಿ ಮಾಡಿದ ದಾನದ ಜೊತೆಯಲ್ಲಿ 'ಅಕ್ಷರಸಿಕ್ಷಾ ವ್ಯಾಕರಣ ಮೀಮಾಂಸಾ ವೇದಾಂತ ವ್ಯಾಖ್ಯಾನ ರುಗ್ಯಜುರ್ವೇದದ್ವಯಾಧ್ಯಾಪನಾರ್ಥಮೇವ' ದಾನಗಳನ್ನು ಮಾಡಲಾದ ವಿಷಯ ಬಂದಿದೆ. ಶಾಸನದ ಮುಂದಿನ ಭಾಗದಲ್ಲಿ ಋಗ್ವೇದಕ್ಕೆ, ಯಜುರ್ವೇದಕ್ಕೆ, ಅಕ್ಷರ ಶಿಕ್ಷೆಗೆ, ವೇದಾಂತ, ರೂಪಾವತಾರಗಳ ಬೋಧನೆಗೆ ಪ್ರತ್ಯೇಕ ದಾನಗಳನ್ನು ನೀಡಲಾಗಿದೆ ಎಂದಿದೆ. ಬೇಗೂರಿನ ಒಂದು ಶಾಸನದಲ್ಲಿ[೪] ಕೇಶವ ದೇವರಿಗಾಗಿ ದಾನ ಕೊಟ್ಟಾಗ ಆ ವೃತ್ತಿಗಳಲ್ಲಿ ಭಟ್ಟವೃತ್ತಿ ಒಂದು, ಖಂಡಿಕವೃತ್ತಿ ಒಂದು, ಅಗ್ನಿಷ್ಟಗೆ ವೃತ್ತಿ ಒಂದು ಎಂದು ಬರುತ್ತದೆ. ಇದು ದೇವಾಲಯಕ್ಕೆ ದಾನ ಕೊಡುವಾಗ ಅದರ ಅಂಗವೆಂದು ಭಾವಿಸಿ ವಿದ್ಯಾಭ್ಯಾಸಕ್ಕೂ ದಾನ ಕೊಟ್ಟಿರುವುದನ್ನು ಸೂಚಿಸುತ್ತದೆ. ಅನೇಕ ದೇವಾಲಯಗಳಿಗೆ ಹೊಂದಿಕೊಂಡಂತೆ ಬ್ರಹ್ಮಪುರಿಗಳು ಇರುತ್ತಿದ್ದವು. ಬ್ರಾಹ್ಮಣ ವಿದ್ವಾಂಸರು ವಾಸಿಸುವ ಪಟ್ಟಣಗಳ ಭಾಗಗಳು ಬ್ರಹ್ಮಪುರಿಗಳಾಗಿರುವುದರಿಂದ ಅವು ವಿದ್ಯಾಕೇಂದ್ರಗಳಾಗಿದ್ದವು. ಸಂಗಮೇಶ್ವರ ದೇವಾಲಯಕ್ಕೆ ಹೊಂದಿದಂತೆ ಬ್ರಹ್ಮಪುರಿ ಇದ್ದುದನ್ನು ಅಕ್ಕಲಕೋಟೆಯ ಶಾಸನ ತಿಳಿಸುತ್ತದೆ.[೫] ಅದೇ ರೀತಿ ಬಿಜಾಪುರದ 'ಶ್ರೀಮೂಲಸ್ಥಾನದೇವರ ಬ್ರಹ್ಮಪುರಿ'ಯ ಪ್ರಸ್ತಾಪ ಒಂದು ಶಾಸನದಲ್ಲಿ ಬರುತ್ತದೆ. ಯೋಗನಾಥದೇವರಿಗೆ ಮಹಾಜನರು ನೀಡಿದ ಒಂದು ದಾನದಲ್ಲಿ 'ಅಗ್ನಿಷ್ಠಿಗೆಯ ಮಠದಲ್ಲಿ ನಾಲ್ಕು ಘಳಿಗೆ ಸ್ರುತಿ (=ವೇದ) ಹೇಳುವರು ಉಳಿದ ಹೊತ್ತು ಮಕ್ಕಳಿಂಗೆ ಕೊಜಿತೆಯಿಲ್ಲದೆ ಹೇಳುವರು' ಎಂದು ಒಂದು ಶಾಸನ ನಿರೂಪಿಸುತ್ತದೆ.[೬] ಹೀಗೆ ದೇವಾಲಯಗಳಲ್ಲಿ, ಅವುಗಳಿಗೆ ಹೊಂದಿಕೊಂಡಂತೆ ಇರುತ್ತಿದ್ದ ಮಠ, ಬ್ರಹ್ಮಪುರಿ,

---

೧. ಜ್ಯೋತ್ಸ್ನಾಕಾಮತ್: ಕರ್ನಾಟಕದ ಶಿಕ್ಷಣ ಪರಂಪರೆ ಪು. ೮೧.

೨. (ರೈ) ಎಕ V ಚನ್ನರಾಯಪಟ್ಟಣ ೨೪೫ ಕ್ರಿ.ಶ. ೧೨೧೦.

೩. (ರೈ) ಎಕ XI ದಾವಣಗೆರೆ ೩೯ ಕ್ರಿ.ಶ. ೧೧೬೮.

೪. (ರೈ) ಎಕ VII ಶಿಕಾರಿಪುರ ೧೨೩ ಕ್ರಿ.ಶ. ೧೧೫೮.

೫. ಕಇ II ಅಕ್ಕಲಕೋಟೆ ೩೩ ಕ್ರಿ.ಶ. ೧೨೧೧.

೬. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧.

ಘಟಿಕಾಸ್ಥಾನಗಳಲ್ಲಿ ವಿದ್ಯಾಭ್ಯಾಸದ ಚಟುವಟಿಕೆ ಸತತವಾಗಿ ನಡೆಯುತ್ತಿತ್ತು. ಅಲ್ಲಿ ಅಕ್ಷರ ಶಿಕ್ಷಣದಂತಹ ಪ್ರಾರಂಭಿಕ ವಿದ್ಯಾಭ್ಯಾಸದಿಂದ ಹಿಡಿದು ವೇದ ವೇದಾಂತದಂತಹ ಪ್ರೌಢ ವಿಷಯಗಳೂ ಬೋಧಿತವಾಗುತ್ತಿದ್ದವು.

**ಪೂಜೆಗಳು-ಹಬ್ಬಗಳು-ವ್ರತಗಳು:**

ದೇವಾಲಯಗಳಿಗೆ ನೀಡಲಾಗುತ್ತಿದ್ದ ವಿವಿಧ ದಾನ ದತ್ತಿಗಳನ್ನು ಗಮನಿಸಿದರೆ ಅಲ್ಲಿ ನಡೆಯುತ್ತಿದ್ದ ವಿಪುಲ ಸಂಖ್ಯೆಯ ಪೂಜೆ-ಉತ್ಸವ-ಹಬ್ಬಗಳು ಆಶ್ಚರ್ಯವನ್ನು ತರಲಾರವು. ದಾನಿಗಳ ಉದ್ದೇಶ ನಿಶ್ಚಿತ ಪೂಜಾಕಾರ್ಯಗಳು ನಿರಂತರವಾಗಿ ನಡೆಯಲಿ ಎಂಬುದೇ ಆಗಿದೆ. ಭಾರತೀಯರು ಮನೆಗಳಲ್ಲಿ ಪೂಜೆ, ವ್ರತಗಳನ್ನು ಮಾಡಿದಂತೆ ದೇವಾಲಯಗಳಲ್ಲೂ ಮಾಡುವ ಪದ್ಧತಿ ಕಂಡುಬರುತ್ತದೆ. ಕೆಲವು ಶಾಸನಗಳಲ್ಲಿ ಮೇಲಿಂದ ಮೇಲೆ ಕೆಲವು ಹಬ್ಬಗಳ ಪ್ರಸ್ತಾಪ ಕಂಡುಬರುತ್ತದೆ. ಅನೇಕ ಶಾಸನಗಳಲ್ಲಿ 'ಚೈತ್ರ ಪವಿತ್ರ'ವೆಂಬ ವಿಶೇಷ ಪೂಜೆ ಉಕ್ತವಾಗಿದೆ.[೧] ಈ ಪೂಜೆಯನ್ನು ಚೈತ್ರಮಾಸದಲ್ಲಿ ನಡೆಯುವ ಶುದ್ಧೀಕರಣದ ಉತ್ಸವವೆಂಬಂತೆ ಫ್ಲೀಟ್, ಹುಲ್ಷ್, ರೈಸ್ ಮುಂತಾದ ವಿದ್ವಾಂಸರು ಭಾವಿಸಿದಂತಿದೆ. ಆರ್. ನರಸಿಂಹಾಚಾರ್ ಅವರು ಚೈತ್ರ ಮತ್ತು ಪವಿತ್ರ ಎರಡು ಪ್ರತ್ಯೇಕ ಉತ್ಸವಗಳನ್ನು ಸೂಚಿಸುವುದನ್ನು ಸ್ಪಷ್ಟಪಡಿಸಿದ್ದಾರೆ. ಅವೆರಡೂ ಪ್ರತ್ಯೇಕ ಉತ್ಸವಗಳೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಅನೇಕ ಶಾಸನಗಳಲ್ಲಿ ಚೈತ್ರ ಪವಿತ್ರಗಳು ಜೊತೆಯಾಗಿ ಉಕ್ತವಾಗಿರುವಂತೆ ಕೆಲವು ಶಾಸನಗಳಲ್ಲಿ ಬಿಡಿಯಾಗಿಯೂ ಉಕ್ತವಾಗಿವೆ. ಉದಾಹರಣೆಗೆ ಬೇಲೂರು ತಾಲ್ಲೂಕಿನ ಒಂದು ಶಾಸನದಲ್ಲಿ ಚೈತ್ರಕ್ಕೆ ಗದ್ಯಾಣ ೪ ಬಿಟ್ಟ ವಿಷಯ ನಿರೂಪಿತವಾಗಿದೆ.[೨] ಪವಿತ್ರಾರೋಪಣವೂ ಬೇರೊಂದು ಶಾಸನದಲ್ಲಿ ಪ್ರತ್ಯೇಕವಾಗಿ ಉಕ್ತವಾಗಿದೆ.[೩] ಚೈತ್ರವು ಚೈತ್ರ ಮಾಸದಲ್ಲಿ ನಡೆಯುವ ಉತ್ಸವ. ಪವಿತ್ರವು ಆಷಾಢ ಮತ್ತು ಕಾರ್ತಿಕ ಮಾಸಗಳ ಹುಣ್ಣಿಮೆಗಳ ಮಧ್ಯೆ ಆಚರಿಸುವ ಒಂದು ಉತ್ಸವವಾಗಿದ್ದು ಹತ್ತಿಯ ಅಥವಾ ರೇಷ್ಮೆಯ ಹಾರಗಳನ್ನು ವಿಗ್ರಹಗಳ ಕೊರಳು ಮುಂತಾದ ಅಂಗಗಳಿಗೆ ಹಾಕುವ ಪದ್ಧತಿ ಇರುವುದನ್ನು ವಿದ್ವಾಂಸರು ಗಮನಿಸಿದ್ದಾರೆ.[೪] ಕೆಲವು ಶಾಸನಗಳಲ್ಲಿ ಈ ಹಬ್ಬವನ್ನೇ ನೂಲ ಪರ್ವ[೫] ಎಂದು ಗುರುತಿಸಿದೆ. ಇದು ಈ ಕಾಲದಲ್ಲಿಯೂ ಉಳಿದುಬಂದಿದೆ.[೬]

ಹಬ್ಬಗಳ ಆಚರಣೆ ಕೌಟುಂಬಿಕ ನೆಲೆಯಲ್ಲಿ ಆಚರಿಸಲ್ಪಟ್ಟಂತೆ ದೇವಸ್ಥಾನಗಳಂತಹ ಸಾಮಾಜಿಕ ನೆಲೆಯಲ್ಲಿಯೂ ಆಚರಿಸಲ್ಪಡುತ್ತಿದ್ದವು. 'ಹಾಗೆ ನೋಡಿದರೆ ಭಾರತೀಯರಲ್ಲಿ ಮನೆಗಳಲ್ಲಿ ಆಚರಿಸುವ ಹಬ್ಬಗಳು ದೇವಸ್ಥಾನಗಳಲ್ಲಿ ಆಚರಿಸುವ ಹಬ್ಬಗಳು ಎಂಬ ಭೇದವೇ ಇಲ್ಲವೆನ್ನಬಹುದು.'[೭]

ಅನೇಕ ಶಾಸನಗಳಲ್ಲಿ ದೀಪಾವಳಿ, ಬಾದುಂಬೆ, ಕಾರಹುಣ್ಣಿಮೆಯ ಪ್ರಸ್ತಾಪ ಬರುತ್ತದೆ. ಹಾವೇರಿ ತಾಲ್ಲೂಕಿನ ಒಂದು ಶಾಸನ ಈ ಹಬ್ಬಗಳನ್ನು 'ಮಹಾಪರ್ವ'[೮]ಗಳೆಂದು ಕರೆದಿದೆ. ದೀಪಾವಳಿ ಹಬ್ಬವಂತೂ ಭಾರತದಾದ್ಯಂತ ಪ್ರಸಿದ್ಧವಾದ

---

೧. ಕಇ V ಖಾನಾಪುರ ೬೪ ಕ್ರಿ.ಶ. ೧೧೭೩.

೨. (ರೈ) ಎಕ V ಬೇಲೂರು ೧೧೫ ಕ್ರಿ.ಶ. ೧೨೨೦.

೩. ಎಸ್‌ಐಐ XV ಗದಗು ೧೭೬ ಕ್ರಿ.ಶ. ೧೨೩೬.

೪. ಈ ವಿಷಯದ ಚರ್ಚೆಗೆ ನೋಡಿ ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೧೯೨.

೫. (ರೈ) ಎಕ V ಬೇಲೂರು ೧೧೫ ಕ್ರಿ.ಶ. ೧೨೨೦.

೬. ಈಗಲೂ ಪವಿತ್ರ ಅಥವಾ ನೂಲು ಪರ್ವದಲ್ಲಿ ಹತ್ತಿ ಅಥವಾ ರೇಷ್ಮೆಯ ಹಾರಗಳನ್ನು ದೇವರ ವಿಗ್ರಹಗಳಿಗೆ ಅರ್ಪಿಸುವ ಪದ್ಧತಿ ಇದೆ.

೭. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೧೯೨.

೮. ಎಸ್‌ಐಐ XVIII ಹಾವೇರಿ ೧೫೧ ಕ್ರಿ.ಶ. ೧೧೪೮.

ಹಬ್ಬವಾಗಿದೆ. ಇದು ಆ ಕಾಲದಲ್ಲಿ ಎಲ್ಲ ಧರ್ಮೀಯರೂ ಆಚರಿಸುತ್ತಿದ್ದ ಹಬ್ಬವಾಗಿದ್ದಂತಿದೆ.[೧] ಇವುಗಳಲ್ಲದೆ ಶಾಸನಗಳು ಕಾರಪರ್ವ,[೨] ಶಿವರಾತ್ರಿ,[೩] ದವನ,[೪] ವನದ ಪರ್ವ,[೫] ಸಂಕ್ರಾಂತಿ,[೬] ಮಹಾನವಮಿ[೭] ಮುಂತಾದ ಹಬ್ಬಗಳನ್ನು ಹೆಸರಿಸುತ್ತವೆ. ಇವುಗಳಲ್ಲಿ ಬಹುತೇಕ ಹಬ್ಬಗಳು ಇಂದಿಗೂ ಉಳಿದುಬಂದಿವೆ. ಕೆಲವು ಶಾಸನಗಳಲ್ಲಿ ಪಂಚಪರ್ವಗಳ ಪ್ರಸ್ತಾಪ ಬರುತ್ತದೆ. ಅದು ಐದು ನಿರ್ದಿಷ್ಟ ವಿಶೇಷ ದಿನಗಳನ್ನು ಸೂಚಿಸುತ್ತದೆ.[೮]

ದೇವಾಲಯಗಳಲ್ಲಿ ತ್ರಿಕಾಲ ಪೂಜಾವಿಧಿಗಳು ಈ ಕಾಲದಲ್ಲಿ ನಡೆಯುವಂತೆ ಆ ಕಾಲದಲ್ಲಿಯೂ ನಡೆಯುತ್ತಿದ್ದವು. ತ್ರಿಕಾಲ ಪೂಜಾವಿಧಿಯನ್ನು ಶಾಸನಗಳು ನಿರೂಪಿಸುತ್ತವೆ.[೯] ಈ ತ್ರಿಕಾಲ ಪೂಜೆಯನ್ನೇ ತ್ರಿಸಂಧ್ಯಾ ಕಾಲ ಪೂಜೆಯೆಂದು[೧೦] ಶಾಸನವೊಂದು ಕರೆದಂತಿದೆ. ಇದು ಬೆಳಗ್ಗೆ ಮಧ್ಯಾಹ್ನ ಮತ್ತು ಸಂಜೆಗಳನ್ನು ಸೂಚಿಸುತ್ತದೆ. ಅನೇಕ ಶಾಸನಗಳು ಗ್ರಹಣ ಕಾಲದಲ್ಲಿ ದೇವಾಲಯಗಳಲ್ಲಿ ನಡೆಯುತ್ತಿದ್ದ ವಿಶೇಷ ಪೂಜೆಗಳನ್ನು ಹೆಸರಿಸುತ್ತವೆ.[೧೧] ಒಂದು ಶಾಸನ ನಿತ್ಯೋತ್ಸವದಿಂದ ಹಿಡಿದು ಪಕ್ಷೋತ್ಸವ, ಮಾಸೋತ್ಸವ, ರಥೋತ್ಸವ ಮತ್ತು ವರ್ಷೋತ್ಸವಗಳನ್ನು ಹೆಸರಿಸುತ್ತದೆ.[೧೨] ಶಿವರಾತ್ರಿಯನ್ನು ಜೈನರು ತಮ್ಮದೆಂದು ಹೇಳಿಕೊಂಡಂತೆ ಅವರು 'ಜಿನರಾತ್ರಿ'ಯನ್ನು ಆಚರಿಸುತ್ತಿದ್ದುದನ್ನು ಶಾಸನವೊಂದು ತಿಳಿಸುತ್ತದೆ. ಮಾಘ ಮಾಸದ ಚತುರ್ದಶಿಯಲ್ಲಿ ಜಿನರಾತ್ರಿ ಮಹೋತ್ಸವಕ್ಕೆ ನೀಡಿದ ದಾನದ ವಿಷಯವನ್ನು ತಾಮ್ರ ಶಾಸನವೊಂದು ನಿರೂಪಿಸುತ್ತದೆ.[೧೩]

ಅನೇಕ ಶಾಸನಗಳಿಂದ ಬೇರೆ ಬೇರೆ ಪೂಜೆಗಳು ನಡೆಯುತ್ತಿದ್ದ ವಿಷಯ ತಿಳಿದುಬರುತ್ತದೆ. ಹೊಯ್ಸಳೇಶ್ವರ ದೇವರಿಗೆ ಚೈತ್ರ ಬ೨ನೆಯ ದಿನ 'ಪೋಕುಳಿಯಭಿಷೇಕ'ಕ್ಕೆ ಮಾಡಿದ ದಾನದ ವಿಷಯ ಶಾಸನೋಕ್ತವಾಗಿದೆ.[೧೪] ಇನ್ನೊಂದು ಶಾಸನದಲ್ಲಿ

---

೧. ಕೊಂಡಗುಳಿ ಕೇಶಿರಾಜ ಈ ಹಬ್ಬವನ್ನು ಹೆಸರಿಸುತ್ತಾನೆ. ಶೀಲಮಹತ್ವದ ಕಂದ : ೫೮; ಬ್ರಹ್ಮಶಿವನೂ ಈ ಹಬ್ಬ ಜಿನನಿಂದ ಉಂಟಾಯಿತೆಂದು ಹೇಳುತ್ತಾನೆ. ಸ.ಪ. ೨-೪೫.

೨. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.

೩. (ರೈ) ಎಕ IX ಚನ್ನಪಟ್ಟಣ ೬೬ ಕ್ರಿ.ಶ. ೧೨೮೮.

೪. (ಮೈ) ಎಕ VI ಕೃ.ಪೇಟೆ ೮೬ ಕ್ರಿ.ಶ. ೧೧೭೯.

೫. (ರೈ) ಎಕ V ಬೇಲೂರು ೧೧೫ ಕ್ರಿ.ಶ. ೧೨೨೦.

೬. (ರೈ) ಎಕ VI ಕಡೂರು ೬೮ ಕ್ರಿ.ಶ. ೧೨೯೧.

೭. (ರೈ) ಎಕ V ಬೇಲೂರು ೧೧೫ ಕ್ರಿ.ಶ. ೧೨೨೦.

೮. (i) ದವನ, ವಸಂತ, ಪವಿತ್ರಾರೋಪಣ, ದೀಪೋತ್ಸವ, ನವಾನ್ನ.
(ii) ಚತುರ್ದಶೀ, ಅಷ್ಟಮೀ, ಅಮಾವಾಸ್ಯಾ, ಪೂರ್ಣಿಮಾ, ರವಿಸಂಕ್ರಾಂತಿ. ಶ್ರೀವತ್ಸ ನಿಘಂಟು ಈ ಎರಡು ಗುಂಪನ್ನು ಹೆಸರಿಸುತ್ತದೆ. ಪು. ೨೫೨-೫೩.

೯. (ರೈ) ಎಕ VI ತರೀಕೆರೆ ೩೬ ಕ್ರಿ.ಶ. ೧೧೭೮(?)

೧೦. (ರೈ) ಎಕ V ಚನ್ನರಾಯಪಟ್ಟಣ ೨೬೩ ಕ್ರಿ.ಶ. ೧೧೮೬.(?)

೧೧. ಎಸ್‌ಐಐ XVIII ಬಿಜಾಪುರ ೧೭೮ ಕ್ರಿ.ಶ. ೧೧೬೩; ಎಸ್‌ಐಐ XX ಇಂಡಿ ೨೧೦ ಕ್ರಿ.ಶ.(?) ಈ ಕಾಲದಲ್ಲಿ ಅಂದರೆ ೧೬-೨-೧೯೮೦ರಂದು ನಡೆದ ಪೂರ್ಣ ಸೂರ್ಯಗ್ರಹಣದಂದು ನಡೆದ ವಿಶೇಷ ಪೂಜೆಯ ವಿವರಗಳಿಗೆ ನೋಡಿ: ಎಂ. ಚಿದಾನಂದಮೂರ್ತಿ: ಪೂರ್ಣ ಸೂರ್ಯಗ್ರಹಣ, ಪು .೯೦-೧೧೨.

೧೨. (ರೈ) ಎಕ X ಮುಳಬಾಗಿಲು ೧೮ ಕ್ರಿ.ಶ. ೧೨೩೪.

೧೩. (ರೈ) ಎಕ XI ಹೊಳಲಕೆರೆ ೧ ಕ್ರಿ.ಶ. ೧೧೫೪.

೧೪. (ರೈ) ಎಕ V ಬೇಲೂರು ೯೦ ಕ್ರಿ.ಶ. ೧೨೮೧.

ಬಸಂತದೋಕುಳಿಯ ಪ್ರಸ್ತಾಪ ಬಂದಿದೆ.[೧] ಕೆಲವು ಶಾಸನಗಳಲ್ಲಿ 'ಅಯಿಂದ್ರ ಪರ್ವ'[೨]ಕ್ಕೆ ದಾನಗಳನ್ನು ನೀಡಲಾಗಿದೆ ಎಂದು ಹೇಳಿದೆ. ಆದರೆ ಅದರ ಸ್ವರೂಪ ತಿಳಿದುಬರುವುದಿಲ್ಲ. ತಮಿಳುನಾಡಿನ ಶ್ರೀವೈಷ್ಣವ ಧರ್ಮದ ಪ್ರಭಾವದಿಂದ ಕರ್ನಾಟಕದ ಕೆಲವು ಶ್ರೀವೈಷ್ಣವ ದೇವಾಲಯಗಳಲ್ಲಿ ತಿರುವಾಯ್ಮೊಳಿಯ[೩] ಪಠಣ ಪ್ರಾರಂಭವಾಯಿತು. ಇದು ತಮಿಳುನಾಡಿನ ದೇವಾಲಯಗಳಲ್ಲಿದ್ದ ಪದ್ಧತಿ. ಕ್ರಮೇಣ ಕನ್ನಡನಾಡಿನ ಶ್ರೀವೈಷ್ಣವ ದೇವಾಲಯಗಳಲ್ಲಿ ಪ್ರವೇಶ ಪಡೆಯಿತು.

ಅನೇಕ ಜೈನಮಂದಿರಗಳಲ್ಲಿ ಹಲವಾರು ನೋಂಪಿಗಳನ್ನು ಆಚರಿಸುತ್ತಿದ್ದರು. ನೋಂಪಿಯ ಆಚರಣೆಯ ಕೊನೆಯಲ್ಲಿ ತೀರ್ಥಂಕರರ ಪ್ರತಿಮೆಗಳನ್ನು ಮಾಡಿಸುವ, ಗುಡಿಗಳನ್ನು ಕಟ್ಟಿಸುವ ಪದ್ಧತಿ ಇದ್ದಿತು. ಉದಾಹರಣೆಗೆ ಸಂಬುದೇವನ ಮದವಳಿಗೆ ಬೊಮ್ಮವ್ವೆ ಆಣತಿಯ ನೋಂಪಿಯ ಕೊನೆಯಲ್ಲಿ ಚತುರ್ವಿಂಶತಿ ತೀರ್ಥಂಕರರನ್ನು ಮಾಡಿಸಿದ ವಿಷಯ ಆ ವಿಗ್ರಹದ ಪ್ರಭಾವಳಿಯ ಮೇಲೆ ಕೆತ್ತಲ್ಪಟ್ಟಿದೆ.[೪] ಇದೇ ರೀತಿ ಆಚಣ್ಣನ ಮಗ ದೇವಣನು ಸಿದ್ಧಚಕ್ರದ ನೋಂಪಿಗಾಗಿ ಪಂಚಪರಮೇಷ್ಠಿಗಳ ಪ್ರತಿಮೆಯನ್ನು ಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೫] ಲಕ್ಕುಂಡಿಯ ಬಸದಿಯೊಂದನ್ನು ನೋಂಪಿಯ ಬಸದಿ ಎಂದು ಕರೆಯಲಾಗಿದೆ.[೬] ಶಾಸನಗಳಲ್ಲಿ ಕೀಳ್ಕೋಗು ನೋಂಪಿ, ಗಣಪೂಜೆ, ಪಂಚೋಪಚಾರ ಪೂಜೆ, ವಿಮಾನ ಪೂಜೆಗಳ ಉಲ್ಲೇಖಗಳು ಬರುತ್ತದೆ.[೭] ಸಿರಿದೇವಿ ಎಂಬುವವಳು ಕ್ಷಿತಿರುಹ (=ವೃಕ್ಷ) ನೋಂಪಿಯ ಅಂಗವಾಗಿ ಮಾವು, ನೇರಿಲೆ, ಈಳೆ, ಹಲಸು, ಖರ್ಜೂರ, ತೆಂಗು ಮುಂತಾದ ಫಲವೃಕ್ಷಗಳನ್ನು ಮತ್ತು ಅನೇಕ ವನಸ್ಪತಿಗಳನ್ನು ಬೆಳೆಸುತ್ತಾಳೆ.[೮] ಜೈನಮಂದಿರಗಳಲ್ಲಿ ಜೀವದಯಾಷ್ಟಮಿ, ನಂದಿಕೇಶ್ವರದಷ್ಟಮಿ ಹಬ್ಬಗಳು ವಿಶೇಷವಾಗಿ ಆಚರಿಸಲ್ಪಡುತ್ತಿದ್ದವು. ಮಲೆಯೂರಿನ ಒಂದು ಸಂಸ್ಕೃತ ಶಾಸನದಲ್ಲಿ ಪಾರ್ಶ್ವನಾಥನನ್ನು ಪೂಜಿಸಲು ಪಂಚಪರ್ವ[೯]ಗಳಿಗೆ ಮತ್ತು ಋಷಿಗಳ ಆಹಾರದಾನಕ್ಕೆ ಚಿಕ್ಕತಾಯಿ ಒಂದು ಹಳ್ಳಿಯನ್ನು ದಾನ ಮಾಡಿದ ವಿಷಯ ಉಕ್ತವಾಗಿದೆ. ಬಸ್ತಿಹಳ್ಳಿಯ ಶಾಸನದಲ್ಲಿ ಮಹಾವಡ್ಡಬ್ಯವಹಾರಿಯೊಬ್ಬ ತಾನು ಕಟ್ಟಿಸಿದ ಶಾಂತಿನಾಥದೇವರ ಬಸದಿಯಲ್ಲಿ ನಡೆಯಬೇಕಾದ ಪೂಜಾಕಾರ್ಯಗಳನ್ನು ನಿಯೋಜಿಸಿರುವ ವಿಷಯ ಬಂದಿದೆ. ನಂದೀಶ್ವರ, ಶ್ರುತಪಂಚಮೀ ಪುಷ್ಪಾಂಜಳಿ, ಜೀವದಯಾಷ್ಟಮಿ, ಜಕ್ಕಣಬ್ಬೆಯುಯ್ಯಲ ಪರ್ವ, ಗ್ರಹಣ, ಸಂಕ್ರಮಣ ದೀಪೋತ್ಸವಕ್ಕೆಂದು ದಾನವನ್ನು ನೀಡಲಾಗಿದೆ.[೧೦] ಈ ಶಾಸನದಲ್ಲಿ ವಿವಿಧ ಹಬ್ಬಗಳಲ್ಲಿ ನಡೆಯಬೇಕಾದ ಪೂಜಾಕಾರ್ಯಗಳನ್ನು ತಿಳಿಸಲಾಗಿದೆ. ಹೊಳಲಕೆರೆಯ ಒಂದು ಶಾಸನ, ಜೈನ ಬಸದಿಯೊಂದರಲ್ಲಿ ನಡೆಸಲು ಉದ್ದೇಶಿಸಿದ ಅನೇಕ ಪೂಜಾ

---

೧. ಎಸ್‌ಐಐ XV ಬಾಗಲಕೋಟೆ ೧೫೫ ಕ್ರಿ.ಶ. ೧೨೦೬. ಓಕುಳಿಯ ಆಚರಣೆ ಪಂಪಭಾರತ (೧೪-೨೦), ಕುಮಾರವ್ಯಾಸ ಭಾರತ ಮುಂತಾದ ಕೃತಿಗಳಲ್ಲಿ ಉಲ್ಲೇಖಗೊಂಡಿದೆ.

೨. ಎಸ್‌ಐಐ IX(i) ಹರಪನಹಳ್ಳಿ ೨೬೦ ಕ್ರಿ.ಶ. (?) (ರೈ) ಎಕ V ಚನ್ನರಾಯಪಟ್ಟಣ ೨೬೯ ಕ್ರಿ.ಶ. ೧೨೭೬.

೩. (ಮೈ) ಎಕ VI ಪಾಂಡವಪುರ ೬೮ ಕ್ರಿ.ಶ. ೧೨೮೬.

೪. (ಮೈ) ಎಕ V ಕೃಷ್ಣರಾಜನಗರ ೫೯ ಕ್ರಿ.ಶ. ೧೨ ಶಮಾ.

೫. ಕಇಆಪ್ರ ರಾಯಚೂರು ೧೧ ಕ್ರಿ.ಶ. ೧೨ ಶಮಾ.

೬. ಕಇಆಪ್ರ ರಾಯಚೂರು ೧೦ ಕ್ರಿ.ಶ. ೧೨ ಶತಮಾ.

೭. (ಸಂ) ಎಂ.ಎಂ. ಕಲಬುರ್ಗಿ : ಧಾತಾಶಾಪು, XIX

೮. ಎಸ್‌ಐಐ XX ಇಂಡಿ ೧೭೫ ಕ್ರಿ.ಶ. ೧೧೯೦.

೯. (ಮೈ) ಎಕ IV ಚಾಮರಾಜನಗರ ೩೭೧ ಕ್ರಿ.ಶ. ೧೧೮೧.
ಹಿಂದೂ ದೇವಾಲಯಗಳಲ್ಲಿ ಕಂಡುಬರುವ 'ಪಂಚ ಪರ್ವ'ಗಳಾದ ದವನ, ವಸಂತ, ಪವಿತ್ರಾರೋಪಣ, ದೀಪೋತ್ಸವ, ನವಾನ್ನಗಳು ಜೈನ ಪಂಚಪರ್ವಗಳಿಂದ ಭಿನ್ನವೋ ಅಭಿನ್ನವೋ ಸ್ಪಷ್ಟವಾಗುವುದಿಲ್ಲ.

೧೦. (ರೈ) ಎಕ V ಬೇಲೂರು ೧೨೯ ಕ್ರಿ.ಶ. ೧೧೯೨.

ಉತ್ಸವ ಹಬ್ಬಗಳನ್ನು ಹೆಸರಿಸುತ್ತದೆ. 'ದೇವಾಮಹೋತ್ಸವ'ದ ವಿವರ ಹೀಗಿದೆ. ವಿಮಾನಶುದ್ಧಿ, ಅಂಕುರಾರ್ಪಣ, ಬ್ರಹಚ್ಛಾಂತಿಕ, ಮಂತ್ರನ್ಯಾಸ, ಅಂಗನ್ಯಾಸ, ಕೇವಲಜ್ಞಾನ ಮಹಾಹೋಮ, ಮಹಾಸ್ನಪನಾಭಿಷೇಕಕ್ಕೆ ಅಗ್ರೋದಕ ಪ್ರಭಾವನೆಯನ್ನು, ಕಲಶ ಪ್ರಭಾವನೆಯನ್ನು ಮಾಡಿಸಿ ಪುಣ್ಯೋಪಾರ್ಜ್ಜನೆಯನ್ನು ಮಾಡಿಸಿಕೊಂಡರು 'ವರ್ಷಂಪ್ರತಿ ಅಕ್ಷಯ ತದಿ(ಗೆ)ಯಲ್ಲಿ ನಡೆಯುವ ಮಹೋತ್ಸವ ಪ್ರಭಾವನೆಗಮಾರು ಅಷ್ಟಾಹ್ನಿಕ ಪರ್ವ್ವಗಳಿಗೆ ಶ್ರಾವಣಪೌರ್ನ್ನೆಮಿವುತ್ಸವಕ್ಕೆ ಬಾದ್ರಪದ ಶುದ್ಧ ಚತುರ್ದ್ದಶಿ ಅನಂತನ ನೋಹಿ ಕಲಶ ಪ್ರಭಾವನೆ ಮಹಾ ಆರಾಧನೆ ಮುಂತಾದ್ದಕ್ಕೆ ಕಾರ್ತಿಕ ಮಾಸದಲ್ಲಿ ಕೃತ್ತಿಕೋತ್ಸವಕ್ಕೆ ಮಾಘ ಬ ಚತುದ್ದಶಿಯಲ್ಲು ಜಿನರಾತ್ರಿ ಮಹೋತ್ಸವಕ್ಕೆ...'[೧] ಎಂದು ದಾನದ ವಿವರಗಳನ್ನು ತಿಳಿಸುತ್ತದೆ. ಈ ಹಬ್ಬ ಆರಾಧನೆಗಳಲ್ಲಿ ಕೆಲವಾದರೂ ಈ ಕಾಲದಲ್ಲಿಯೂ ಉಳಿದುಬಂದಿರುವ ಸಾಧ್ಯತೆ ಇದೆ.

ದೇವಾಲಯಗಳಲ್ಲಿ ಭಗವಂತನನ್ನು ಜೀವಂತ ವ್ಯಕ್ತಿಯಂತೆ ಭಾವಿಸಿ ಎಲ್ಲ ರೀತಿಯ ಭೋಗಗಳನ್ನು ಆತನಿಗೆ ಅರ್ಪಿಸುವುದು ರೂಢಿಯಲ್ಲಿದೆ. ಹೀಗೆ ಸಲ್ಲಿಸುವ ಭೋಗಗಳಲ್ಲಿ ಅಷ್ಟವಿಧಾರ್ಚನೆ ಅಂಗಭೋಗದಲ್ಲಿ ಅಳವಡುತ್ತದೆ. ದೇವರಿಗೆ ಸಲ್ಲುವ ಅಷ್ಟವಿಧಾರ್ಚನೆಗೆ ಅನೇಕರು ದಾನಗಳನ್ನು ನೀಡಿದ್ದಾರೆ.[೨] ದೇವರಿಗೆ ಅರ್ಪಿತವಾಗುತ್ತಿದ್ದ ವಿವಿಧ ನೈವೇದ್ಯಗಳು ಭಕ್ಷ್ಯಗಳು ಶಾಸನಗಳಲ್ಲಿ ಉಕ್ತವಾಗಿವೆ. ಅನೇಕ ಶಾಸನಗಳು ಹಾಲುಮಂಡಗೆಯ ಉಲ್ಲೇಖವನ್ನು ಮಾಡುತ್ತವೆ.[೩] ಶಾಸನಗಳಲ್ಲಿ ಪಂಚಾಮೃತದ ಉಲ್ಲೇಖ ಬರುತ್ತದೆ.[೪] ಮೊಸರೋಗರ ಕಣಿಕದ ಮಂಡಗೆ ಅಕ್ಕಿ-ಪಾಯಸಗಳ ಉಲ್ಲೇಖ ಶಾಸನಗಳಲ್ಲಿ ಬಂದಿದೆ.[೫] ಮೃಷ್ಟಾನ್ನಕ್ಕಿಯ ನೈವೇದ್ಯವನ್ನು ಒಂದು ಶಾಸನ ನಿರೂಪಿಸುತ್ತದೆ.[೬] ತುಯ್ಯಲ ನೈವೇದ್ಯವನ್ನು ಒಂದು ಶಾಸನ ತಿಳಿಸುತ್ತದೆ.[೭] ಸೋಮನಾಥಪುರದ ಶಾಸನವೊಂದರಲ್ಲಿ ವಿವಿಧ ಉತ್ಸವಗಳಲ್ಲಿ ತಯಾರಾಗುತ್ತಿದ್ದ ಹುಗ್ಗಿ, ಹಚ್ಚಂಬಲೆ (= ಸೊಪ್ಪಿನ ಅಂಬಲಿ?) ಥಳವಳಿಗೆಯ ಪಕ್ವಾನ್ನ, ಥಳವಳಿಗೆಯ ಚಕ್ಕುಲಿಗಳ ಉಲ್ಲೇಖ ಬರುತ್ತದೆ.[೮] ಕೆಲವು ಶಾಸನಗಳಲ್ಲಿ ಪಂಚ ಭಕ್ಷ್ಯಗಳ ಉಲ್ಲೇಖ ಬರುತ್ತದೆ.[೯]

---

೧. (ರೈ) ಎಕ XI ಹೊಳಲಕೆರೆ ೧ ಕ್ರಿ.ಶ. ೧೧೫೪.

೨. (ಮೈ) ಎಕ II ಶ್ರವಣಬೆಳಗೊಳ ೩೩೭ ಕ್ರಿ.ಶ. ೧೨ ಶಮಾ.
ಅಷ್ಟವಿಧಾರ್ಚನೆಗಳು : ಜಲ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ- ಶ್ರೀವತ್ಸ ನಿಘಂಟು, ಪು. ೬೬. ಆದರೆ ಇವು ಏಕರೂಪದಲ್ಲಿಲ್ಲ. ವಿವರಗಳಿಗೆ ಅದೇ ಪುಟವನ್ನು ನೋಡಿ.

೩. ಎಸ್‌ಐಐ XV ಗದಗು ೪೮ ಕ್ರಿ.ಶ. ೧೧೫೨; ಎಸ್‌ಐಐ IX(i) ಹಡಗಲಿ ೩೭೨ ಕ್ರಿ.ಶ. ೧೨೭೨.

೪. (ಮೈ) ಎಕ V ತಿ. ನರಸೀಪುರ ೮೮ ಕ್ರಿ.ಶ. ೧೨೭೬.
ದೇವರ ಅಭಿಷೇಕಕ್ಕೆ ಉಪಯೋಗಿಸುವ ಐದು ಮಧುರ ಪದಾರ್ಥಗಳ (ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆ) ಮಿಶ್ರಣ.

೫. ಎಸ್‌ಐಐ IX(i) ಆಲೂರು ೩೭೬ ಕ್ರಿ.ಶ. ೧೨೭೬.

೬. ಎಸ್‌ಐಐ VII ಬಾರಕೂರು ೩೫೪ ಕ್ರಿ.ಶ. ೧೩೧೫.

೭. ಎಸ್‌ಐಐ XV ಗದಗು ೪೮ ಕ್ರಿ.ಶ. ೧೧೫೨. ಇದು ಹಾಲು ಸಕ್ಕರೆ ಮುಂತಾದ ಪದಾರ್ಥಗಳನ್ನು ಬಳಸಿ ತಯಾರಿಸುವ ಸಿಹಿ ಪದಾರ್ಥ; ಒಂದು ಬಗೆಯ ಪಾಯಸ. ಇದರ ಉಲ್ಲೇಖ ವಡ್ಡಾರಾಧನೆ, ಧರ್ಮಾಮೃತ ಮುಂತಾದ ಕೃತಿಗಳಲ್ಲೂ ಬಂದಿದೆ.

೮. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬. ಫಲವಳಿಗೆ=ಮಂಟಪಕ್ಕೆ ಕಟ್ಟುವ ಎಲೆ, ವಸ್ತ್ರ, ಹಣ್ಣು, ಆಹಾರ ಪದಾರ್ಥ ಮೊದಲಾದವು. ಈಗಲೂ ಶ್ರೀವೈಷ್ಣವರಲ್ಲಿ ಗೋಕುಲಾಷ್ಟಮಿ ಹಬ್ಬದಲ್ಲಿ ಶ್ರೀಕೃಷ್ಣನ ಮೂರ್ತಿಯನ್ನು ಕೂರಿಸುವ ಮಂಟಪಕ್ಕೆ ವಿವಿಧ ತಿನಿಸು ಮತ್ತು ಹಣ್ಣುಗಳನ್ನು ಕಟ್ಟುವ ಪದ್ಧತಿ ಇದೆ. ಇದಕ್ಕೆ 'ಫಲವಸ್ತ್ರ' ಎನ್ನುತ್ತಾರೆ.

೯. (ರೈ) ಎಕ XI ದಾವಣಗೆರೆ ೪೯ ಕ್ರಿ.ಶ. ೧೨೮೦(?). ಪಂಚಭಕ್ಷ್ಯಗಳು - ಅತಿರಸ, ಹೋಳಿಗೆ, ಲಡ್ಡು, ಜಿಲೇಬಿ ಮತ್ತು ಅಪೂಪ. ಶ್ರೀವತ್ಸ ನಿಘಂಟು, ಪು. ೩೦೧.

ದೇವರಿಗೆ ಅರ್ಪಿಸುವ ನೈವೇದ್ಯಗಳನ್ನು ಶಾಸನಗಳು ಉಪ್ಪಾರ, ಉಪಾರ (< ಸಂ.ಉಪಾಹಾರ) ಎಂದು ಕರೆದಿವೆ.[೧] ಉಪಾರ ಗಡುಗೆ[೨] ಎನ್ನುವುದು ನೈವೇದ್ಯದ ಪಾತ್ರೆ ಇರಬೇಕು. ನೈವೇದ್ಯ ಸಿದ್ಧತೆಗಾಗಿ ಮತ್ತು ದೇವಾಲಯ, ಮಠ ಛತ್ರಗಳಿಗೆ ಬರುತ್ತಿದ್ದ ಭಕ್ತಾದಿಗಳಿಗೆ ಪ್ರಸಾದ ಮತ್ತು ಭೋಜನಕ್ಕೆ ಆಹಾರ ಸಿದ್ಧಪಡಿಸಲು ಬಾಣಸಿಗರು ನೇಮಕಗೊಳ್ಳುತ್ತಿದ್ದುದನ್ನು ಈ ಹಿಂದೆಯೇ ಗಮನಿಸಲಾಗಿದೆ. ಕೆಲವು ಶಾಸನಗಳಲ್ಲಿ ತಾಂಬೂಲದ ಪ್ರಸ್ತಾಪ ಬಂದಿದೆ.[೩] ಒಂದು ಶಾಸನದಲ್ಲಿ ಬೆಣ್ಣೆ ಸೇವೆಯ ಉಲ್ಲೇಖವಿದೆ.[೪] ಬಹುಶಃ ಈ ಕಾಲದಲ್ಲಿ ಬಳಕೆಯಲ್ಲಿರುವಂತೆ ವಿಗ್ರಹವನ್ನು ಸಂಪೂರ್ಣವಾಗಿ ಬೆಣ್ಣೆಯಿಂದ ಅಲಂಕರಿಸುವ ಸೇವೆ ಇದಾಗಿರಬಹುದು. ಕೊಳಗಗಟ್ಟಲೆ ತುಪ್ಪ ನಾನಾ ಹೋಮಗಳಿಗೆ ಬಳಕೆಯಾಗುವುದನ್ನು ಶಾಸನಗಳು ತಿಳಿಸುತ್ತವೆ.[೫] ಹಾಲು, ಮೊಸರು, ತುಪ್ಪ ಇವು ವಿವಿಧ ಅಭಿಷೇಕಗಳಲ್ಲಿ ಬಳಕೆಯಾಗುತ್ತಿದ್ದವು.[೬]

ಕೆಲವು ದೇವಾಲಯಗಳಲ್ಲಿ ಮದ್ಯ-ಮಾಂಸಗಳನ್ನು ಅರ್ಪಿಸುವ ಪದ್ಧತಿ ಇದ್ದಿತು. ಪ್ರಸಿದ್ಧ ಶಾಕ್ತ ಕೇಂದ್ರವಾಗಿದ್ದ ಕೋಲಾರದ ಕೋಲಾರಮ್ಮನ ದೇವಾಲಯದಲ್ಲಿ ಸಪ್ತಮಾತೃಕೆಯರ ಆರಾಧನೆ ವಿಶೇಷವಾಗಿ ನಡೆಯುತ್ತಿತ್ತು. ಅಲ್ಲಿ ಯೋಗಿನಿ ಯೋಗೀಶ್ವರರ ಪೂಜೆಗಾಗಿ ನಿಗದಿತ ಪ್ರಮಾಣದ ಮದ್ಯವನ್ನು ಮತ್ತು ಕುರಿಗಳನ್ನು ಅರ್ಪಿಸುತ್ತಿದ್ದ ವಿಷಯ ಶಾಸನವೊಂದರಲ್ಲಿ ನಿರೂಪಿತವಾಗಿದೆ.[೭] ಈ ರೀತಿಯ ಪೂಜಾಪದ್ಧತಿಗಳು ಶಾಸನೋಕ್ತವಾಗಿರುವುದು ತುಂಬಾ ಕಡಮೆ ಎಂದು ಹೇಳಬಹುದು. ಗ್ರಾಮದೇವತೆಗಳಿಗೆ ಮತ್ತು ಕೆಲವು ಕ್ಷುದ್ರದೈವಗಳಿಗೆ ಮದ್ಯಮಾಂಸಗಳನ್ನು ಅರ್ಪಿಸುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ.

ದೇವಾಲಯ ಆ ಕಾಲದ ಬಹುದೊಡ್ಡ ಗ್ರಾಹಕನಾಗಿದ್ದಿತು. ವಿವಿಧ ಪೂಜೆ, ಹಬ್ಬ, ಉತ್ಸವಗಳಿಗೆ, ನೈವೇದ್ಯ ಸಿದ್ಧತೆಗಳಿಗೆ, ಭೋಜನ ಸಿದ್ಧತೆಗೆ ಎಷ್ಟೆಷ್ಟು ರೀತಿಯ ವಸ್ತುಗಳನ್ನು, ದವಸ ಧಾನ್ಯಗಳನ್ನು ಮತ್ತು ಪೂಜಾ ಸಾಮಗ್ರಿಗಳನ್ನು ಬಳಸುತ್ತಿತ್ತೆಂದರೆ ಅದನ್ನು ಬಹುದೊಡ್ಡ ಗ್ರಾಹಕನೆಂದು ಸುಲಭವಾಗಿ ಪರಿಗಣಿಸಬಹುದು. ಸೋಮನಾಥಪುರದ ಶಾಸನವೊಂದರಲ್ಲಿ ಬರುವ ವಿವರವಾದ ನಿತ್ಯಪಡಿವರ್ಣನೆ ಆ ದೃಷ್ಟಿಯಿಂದ ಗಮನಾರ್ಹವಾಗಿದೆ.[೮]

**ದೇವಾಲಯ-ನ್ಯಾಯಾಲಯ:**

ದೇವಾಲಯಗಳು ಆ ಕಾಲದಲ್ಲಿ ತುಂಬಾ ಸಂಕೀರ್ಣವಾದ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ಆ ಕಾರ್ಯಗಳಲ್ಲಿ ನ್ಯಾಯ ನಿರ್ಣಯವೂ ಒಂದಾಗಿತ್ತು. ಅಪರಾಧಗಳನ್ನು ನಿರ್ಣಯಿಸುವ ಪ್ರಾಚೀನ ವಿಧಾನಗಳಲ್ಲಿ ದಿವ್ಯವೂ ಒಂದಾಗಿತ್ತು. ಅಪರಾಧ ನಿರ್ಧಾರಕ್ಕೆ ಮಾನುಷವಾದ ಯಾವುದೇ ಸಾಕ್ಷಿಗಳಿಲ್ಲದಾಗ ದೈವವನ್ನು ಆಶ್ರಯಿಸುತ್ತಿದ್ದರು. ಆದ್ದರಿಂದ ಅದನ್ನು ದಿವ್ಯವೆಂದು ಕರೆಯುತ್ತಿದ್ದರು. ಅನೇಕ ದೇಶಗಳಲ್ಲಿ ಈ ವಿಧಾನ ಬಳಕೆಯಲ್ಲಿದ್ದಿತು. ಕಾಣೆಯವರ ಗ್ರಂಥದಲ್ಲಿ ದಿವ್ಯವನ್ನು

---

೧. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.

೨. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.

೩. ಎಸ್ಐಐ XVIII ಬಿಜಾಪುರ ೧೮೧ ಕ್ರಿ.ಶ. ೧೧೭೦.

೪. (ರೈ) ಎಕ IX ನೆಲಮಂಗಲ ೫೭ ಕ್ರಿ.ಶ. ೧೩೧೯.

೫. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೬. ಹಾಲು ಮೊಸರು ಮತ್ತು ಕಬ್ಬಿನ ರಸದಿಂದ ಜಿನನಿಗೆ ಅಭಿಷೇಕವಾಗುತ್ತಿದ್ದುದನ್ನು ಧರ್ಮಾಮೃತ ನಿರೂಪಿಸುತ್ತದೆ. (೧೦-೨೧).

೭. (ರೈ) ಎಕ X ಕೋಲಾರ ೧೦೮ ಕ್ರಿ.ಶ. ೧೦೭೧.

೮. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬. ಈ ಶಾಸನದಲ್ಲಿ ಬರುವ ವಿವಿಧ ದವಸಧಾನ್ಯಗಳ ಉಲ್ಲೇಖಗಳ ಜೊತೆ ವಿವಿಧ ದೇವರುಗಳಿಗೆ ಅರ್ಪಿಸುತ್ತಿದ್ದ ವಸ್ತ್ರ, ಸೀರೆ, ಸತ್ತಿಗೆ ಹಂಜರ, ಕಸ್ತೂರಿ, ಅರಿಶಿಣ, ಕುಂಕುಮ, ದೀಪದ ಬತ್ತಿಗೆ ಹತ್ತಿ, ಅಡಕೆ, ಎಲೆ, ಉಪ್ಪು, ಸೀಗೆಕಾಯಿ ಇತ್ತಾದಿಗಳ ವಿವರಗಳಿವೆ.

ನಡೆಸುವ ವಿಧಾನ, ಕ್ರಮ ಮುಂತಾದವುಗಳ ವಿವರವಾದ ವರ್ಣನೆಯನ್ನು ಕಾಣಬಹುದು.[೧] ದಿವ್ಯಗಳ ಸಂಖ್ಯೆ ಪ್ರಾಚೀನ ಕೃತಿಗಳಲ್ಲಿ ಮತ್ತು ಶಾಸನಗಳಲ್ಲಿ ಏಕರೂಪವಾಗಿಲ್ಲ. ಕನ್ನಡ ಶಾಸನಗಳು ಏಳು ದಿವ್ಯಗಳನ್ನು ಹೇಳುತ್ತವೆ.[೨] ಸ್ಕಾಂದಪುರಾಣದ ಮಾಹೇಶ್ವರ ಖಂಡದಲ್ಲಿ ಅಷ್ಟವಿಧ ದಿವ್ಯಗಳನ್ನು ಸವಿಸ್ತಾರವಾಗಿ ವರ್ಣಿಸಲಾಗಿದೆ. ಅವು ಅನುಕ್ರಮವಾಗಿ ಶಪಥ, ಕೋಶ, ಘಟಿಕಾ, ವಿಷ, ಅಗ್ನಿ, ತಪ್ತಮಾಷಕ, ಫಾಲ ಮತ್ತು ತಂಡುಲ.[೩] ಕೆಲವು ದಿವ್ಯಗಳಂತೂ ಕ್ರೂರವಾಗಿದ್ದು ಹಿಂಸಾತ್ಮಕವಾಗಿವೆ. ಪ್ರಾಚೀನ ಕರ್ನಾಟಕದಲ್ಲಿ ದಿವ್ಯಗಳನ್ನು ಸ್ಮೃತಿಯಲ್ಲಿ ಉಕ್ತವಾಗಿರುವಂತೆಯೇ ನಡೆಸುತ್ತಿದ್ದರೆಂದು ಹೇಳುವುದು ಕಷ್ಟ. ಅನುಕೂಲಕ್ಕೆ ತಕ್ಕಂತೆ ಮಾರ್ಪಾಟುಗಳನ್ನು ಮಾಡಿ ಸರಳಗೊಳಿಸಿಕೊಂಡಿರಬಹುದು.[೪] ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಅಲ್ಲಲ್ಲಿ ದಿವ್ಯಗಳ ಉಲ್ಲೇಖಗಳು ಬಂದಿರುವುದುಂಟು. ಸಿದ್ಧರಾಮಚಾರಿತ್ರ, ಬಸವಣ್ಣನವರ ವಚನಗಳು ಮುಂತಾದ ಕೃತಿಗಳಲ್ಲಿ ದಿವ್ಯದ ಕೆಲವು ಉಲ್ಲೇಖಗಳು ಬರುತ್ತವೆ. ನಮ್ಮ ಅಧ್ಯಯನಾವಧಿಯ ಕೆಲವು ಶಾಸನಗಳಲ್ಲಿ ದಿವ್ಯಗಳು ಉಕ್ತವಾಗಿವೆ. ವಾಮಶಕ್ತಿ ಎಂಬ ಒಬ್ಬ ಶೈವ ತಪಸ್ವಿ ತಾನು ದೂರ್ವಾಸ ವಂಶದವನೆಂದು ಸ್ಥಾಪಿಸಲು ದಿವ್ಯವನ್ನು ಹಿಡಿದು ಗೆದ್ದನೆಂದು ಒಂದು ಶಾಸನ ತಿಳಿಸುತ್ತದೆ: 'ಆ ಮುನಿ ದೂರ್ವ್ವಾಸಾನ್ವಯನೆ ಮಾತನುಪಹತನೆಂದು ದಿಬ್ಯಂಬಿಡಿದಾ ವಾಮಶಕ್ತಿಬ್ರತೀಶಂ ಭೂಮಿಸ್ತುತನೆನಿಸಿ ಜಯಿಸಿ ಪೆಸರ್ವಡೆದೆಸೆದಂ.'[೫] ತಾಳಗುಂದದ ಪ್ರಣವೇಶ್ವರ ದೇವಾಲಯದಲ್ಲಿ ಸಪ್ತದಿವ್ಯಗಳು ನಡೆಯುತ್ತಿದ್ದವೆಂದೂ ಅದರಿಂದ ಬಂದ ಹಣವನ್ನು ಪೂಜಾಕಾರ್ಯಗಳಿಗೆ ವಿನಿಯೋಗಿಸಬೇಕೆಂದೂ ಶಾಸನವೊಂದು ಹೇಳುತ್ತದೆ.[೬] ಸೀಮಾವಿವಾದವೊಂದು ದಿವ್ಯದ ಮೂಲಕ ಪರಿಹಾರವಾದ ವಿಷಯವನ್ನು ಶಾಸನವೊಂದು ನಿರೂಪಿಸುತ್ತದೆ. ಮುರಡಿಪುರದವರಿಗೂ ಗರುಡನಹಳ್ಳಿಯವರಿಗೂ ಸೀಮಾಸಂಬಂಧದ ವಿವಾದ ಉಂಟಾಗಿ ಬಲಾತ್ಕಾರದಿಂದ ಕಲ್ಲನ್ನು ನಟ್ಟರೆಂದು ಮುರಡಿಪುರದವರು ಮುಂಡಿಗೆಯನ್ನು[೭] ಇಕ್ಕಲು ಕನ್ನಯ್ಯ ಎಂಬುವವನು ಆ ಕಲ್ಲನ್ನು ಮುರಿಯದಿರಿ ಎಂದು ವಾದಿಸಿ ಅದನ್ನು ಪ್ರಮಾಣಿಸಲು ದೋರಸಮುದ್ರದ ಹೊಯ್ಸಳೇಶ್ವರ ಸನ್ನಿಧಿಯಲ್ಲಿ ದಿವ್ಯ ಹಿಡಿದು ಗೆದ್ದು ಜಯಪತ್ರ ಪಡೆದ ವಿಷಯವನ್ನು ಈ ಶಾಸನ ನಿರೂಪಿಸುತ್ತದೆ.[೮] ಈ ಶಾಸನದ ಪಾಠ ಅಲ್ಲಲ್ಲಿ ಅಶುದ್ಧವಿದ್ದು ಖಚಿತ ವಿವರಣೆ ಹೇಳುವುದು ಸ್ವಲ್ಪ ಕ್ಲಿಷ್ಟವಾಗಿದ್ದರೂ ಮಂಡ್ಯ ಜಿಲ್ಲೆಯ ಒಂದು ವಿವಾದ ದೋರಸಮುದ್ರದಲ್ಲಿ ಪರಿಹಾರವಾಗಿರುವುದು ಸ್ಪಷ್ಟವಿದೆ. ಆದರೆ ದಿವ್ಯ ನಡೆದ ಸ್ವರೂಪದ ವಿವರಗಳು ಸ್ಪಷ್ಟವಾಗುವುದಿಲ್ಲ. ಭೂಮಿಗೆ ಸಂಬಂಧಪಟ್ಟ ವಿವಾದವೊಂದು ದಿವ್ಯದ ಮೂಲಕ ಬಂದಣಿಕೆ ಗ್ರಾಮದ

---

೧. P. V. Kane : ಪೂರ್ವೋಕ್ತ, ಪು. ೩೬೧-೭೮.

೨. ಎಂ. ಚಿದಾನಂದಮೂರ್ತಿ : ಕಶಾಸಾಂಅ, ಪು. ೧೯೬.

೩. ಜಿ.ಎಂ. ಉಮಾಪತಿ ಶಾಸ್ತ್ರಿ : 'ದಿವ್ಯ ಪದದ ನಿರ್ವಚನ', ಪ್ರಕ ೫೦-೩, ಪು. ೧೨೯-೧೪೦.

೪. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೧೯೭.

೫. ಕಇ VI ಸೌಂದತ್ತಿ ೭೩ ಕ್ರಿ.ಶ. ೧೨೨೮.

೬. (ರೈ) ಎಕ VII ಶಿಕಾರಿಪುರ ೧೮೫ ಕ್ರಿ.ಶ. ೧೧೫೮.

೭. ಈ ಶಾಸನ ಭಾಗದಲ್ಲಿ ಬರುವ ಮುಂಡಿಗೆಯೇ ಸರಿಯಾದ ಪಾಠವೆಂದು ಎಂ. ಚಿದಾನಂದಮೂರ್ತಿಯವರು ಲೇಖನವೊಂದರಲ್ಲಿ ಅಭಿಪ್ರಾಯಪಟ್ಟಿದ್ದರು. ಸಂಪುಟದ ಪರಿಷ್ಕೃತ ಆವೃತ್ತಿಯಲ್ಲಿ ಅದು ಮುಂಡಿಗೆ ಎಂಬ ಪಾಠದಿಂದಲೇ ಪ್ರಕಟವಾಗಿದೆ. 'ಕನ್ನಡದ ಕೆಲವು ಕಾವ್ಯಗಳಲ್ಲಿ ಪ್ರಯೋಗವಾಗಿರುವ ಮುಂಡಿಗೆ ಅಥವಾ ಮುಡಿಗೆಗೆ ಟೊಪ್ಪಿಗೆ ಅಥವಾ ತಲೆಯ ಮೇಲಿನ ಉಡುಪು ಎಂದು ಮೂಲಾರ್ಥ. ಇಬ್ಬರ ಮಧ್ಯೆ ವಾದ ಎದ್ದಾಗ ಅವರಲ್ಲಿ ಒಬ್ಬನು ತನ್ನ ತಲೆಯ ಮೇಲಿನ ಉಡುಪನ್ನು ತೆಗೆದು ಎಸೆದರೆ ಅದು ಸವಾಲಿನ ಸೂಚಕವಾಗಿದ್ದಿತು. ಇನ್ನೊಬ್ಬನು ಅದನ್ನು ಎತ್ತಿಕೊಂಡರೆ ಆ ಸವಾಲನ್ನು ಅಂಗೀಕರಿಸಿದಂತಾಗುತ್ತಿತ್ತು.' ಈ ಸಂಪ್ರದಾಯ ಹಿಂದೆ ಪ್ರಚಲಿತವಿದ್ದು ಈಗ ಲುಪ್ತವಾದಂತಿದೆ. 'ಮುಂಡಿಗೆ' ವಿವರಗಳಿಗೆ ನೋಡಿ 'ಪ್ರಾಚೀನ ಕರ್ನಾಟಕದಲ್ಲಿ ದಿವ್ಯ ಮತ್ತು ಮುಂಡಿಗೆ' ಸಂಶೋಧನ ತರಂಗ, ಪು. ೮೭-೧೦೪.

೮. (ಮೈ) ಎಕ VII ಮಂಡ್ಯ ೨೫ ಕ್ರಿ.ಶ. ೧೨೭೫.

ಕಲಿದೇವರ ದೇವಸ್ಥಾನದಲ್ಲಿ ನಿರ್ಧಾರವಾದುದು ತಿಳಿದುಬರುತ್ತದೆ.[೧] ಈಚಿನ ಕಾಲದ ಶಾಸನವೊಂದರಲ್ಲಿ ಕುಂಬಾರರ ಮದುವೆ ಸಮಯದಲ್ಲಿ ಅಗಸರು ಚಪ್ಪರಕ್ಕೆ ಮೇಲುಕಟ್ಟು ಕಟ್ಟಲು ಮತ್ತು ನಾಯಿಂದರು ಕಾಲುಗುರು ತೆಗೆಯಲು ನಿರಾಕರಿಸಿದಾಗ ಕುಂಬಾರರು ಹರದನ ಹಳ್ಳಿಯ ದಿವ್ಯಲಿಂಗೇಶ್ವರನ ಮುಂದೆ ಕಾದ ತುಪ್ಪದಲ್ಲಿ ಕೈಯಿಕ್ಕಿ ದಿವ್ಯವನ್ನು ಗೆದ್ದು ಅವರ ಬೇಡಿಕೆ ಈಡೇರಿಸಿಕೊಂಡ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೨] ಹರದನಹಳ್ಳಿಯ ದಿವ್ಯಲಿಂಗೇಶ್ವರ ದೇವಸ್ಥಾನದಲ್ಲಿ ಜನಗಳು ದಿವ್ಯಗಳನ್ನು ಹಿಡಿದು ಗೆಲ್ಲುತ್ತಿದ್ದುದರಿಂದ ಅದು ಭೂಮಿಯಲ್ಲಿ ದಿವ್ಯಲಿಂಗೇಶ್ವರವೆಂದು ಪ್ರಸಿದ್ಧವಾಯಿತು ಎಂದು ಸಿದ್ಧೇಶ್ವರ ಪುರಾಣದ ಉಕ್ತಿಯನ್ನು ಉದಾಹರಿಸಿ ಎಂ. ಚಿದಾನಂದಮೂರ್ತಿಯವರು ಸ್ಪಷ್ಟಪಡಿಸಿದ್ದಾರೆ.[೩]

ದಿವ್ಯಗಳ ಉಲ್ಲೇಖಗಳು ಶಾಸನಗಳಲ್ಲಿ ಕಡಮೆಯೆಂದೇ ಹೇಳಬಹುದು. ವಿವಾದಗಳು ಬಗೆಹರಿಯದ ಅನಿವಾರ್ಯ ಸ್ಥಿತಿ ಮುಟ್ಟಿದಾಗ ಮಾತ್ರ ದಿವ್ಯಗಳು ನಡೆಯುತ್ತಿದ್ದವೆಂದು ಭಾವಿಸಬಹುದು. ಶಾಸನಗಳನ್ನು ಗಮನಿಸಿದರೆ ತಾಳಗುಂದದ ಪ್ರಣವೇಶ್ವರ, ಹರದನ ಹಳ್ಳಿಯ ದಿವ್ಯಲಿಂಗೇಶ್ವರ, ದೋರಸಮುದ್ರದ ಹೊಯ್ಸಳೇಶ್ವರ ದೇವಸ್ಥಾನಗಳು ದಿವ್ಯಕ್ಕೆ ಪ್ರಸಿದ್ಧವಾಗಿವೆ. ಬಹುಶಃ ದೈವಭಯ ದಿವ್ಯ ಪೂರ್ವದಲ್ಲಿಯೇ ಜನರನ್ನು ವಿವಾದಗಳಿಂದ ದೂರ ಮಾಡುತ್ತಿದ್ದಿರಬೇಕು. ದಿವ್ಯಗಳಿಂದ ದೇವಾಲಯಗಳಿಗೆ ಆದಾಯ ಅಧಿಕವಾಗುತ್ತಿತ್ತು. ದೇವರೇ ನ್ಯಾಯಾಧಿಪತಿಯಾಗಿ ಪರೋಕ್ಷವಾಗಿ ತೀರ್ಮಾನ ಕೊಡುತ್ತಾನೆ ಎಂದು ಜನ ಭಾವಿಸುತ್ತಿದ್ದಿರಬೇಕು. ಹೀಗಾಗಿ ಕೆಲವೇ ಕೆಲವು ತೀವ್ರ ವಿವಾದಗಳು ಮಾತ್ರ ದಿವ್ಯದ ಮೂಲಕ ಪರಿಹಾರವಾಗುತ್ತಿದ್ದವು.

ದೇವಸ್ಥಾನಗಳು ಬಹುದೊಡ್ಡ ಧಾರ್ಮಿಕ ಘರ್ಷಣೆಯ ಕೇಂದ್ರಗಳೂ ಆಗಿರುವುದುಂಟು. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದಲ್ಲಿ ಏಕಾಂತದ ರಾಮಯ್ಯನಿಗೂ ಕೆಲವು ಜೈನಧರ್ಮೀಯರಿಗೂ ನಡೆದ ವಿವಾದ, ಏಕಾಂತದ ರಾಮಯ್ಯ ಶಿವಪಾರಮ್ಯವನ್ನು ಸಾರಲು ಶಿರಪವಾಡವನ್ನು ಮೆರೆಯುವಲ್ಲಿ ಅಂತ್ಯಗೊಂಡಿತು. ಈ ವಿಷಯ ಅಬ್ಬಲೂರಿನ ಶಾಸನ ಮತ್ತು ದೇವಾಲಯದ ಶಿಲ್ಪ ಶಾಸನಗಳಲ್ಲಿ ವ್ಯಕ್ತವಾಗಿವೆ.[೪] ಏಕಾಂತದ ರಾಮಯ್ಯನ ಶಿರಪವಾಡ ಧರ್ಮಶಾಸ್ತ್ರಗಳಲ್ಲಿ ಬರುವ 'ಸಶಿರಸ್ಕ' ಮಹಾದಿವ್ಯವೆಂದು ಜಿ.ಎಂ. ಉಮಾಪತಿ ಶಾಸ್ತ್ರಿ ಅವರು ಭಾವಿಸುತ್ತಾರೆ.[೫]

ದಿವ್ಯಗಳು ಕೆಲವು ಸಾರಿ ಅತಿಕ್ರೂರ ಪರಿಣಾಮವನ್ನು ಮಾಡಿರುವುದುಂಟು. ಒಬ್ಬ ಹೆಣ್ಣುಮಗಳು ತೆರಿಗೆಯ ಬಾಕಿಯನ್ನು ಕೊಡಬೇಕಾಗಿಲ್ಲವೆಂದು ಹೇಳಿದರೂ ಬಿಡದೆ ಗ್ರಾಮಾಧಿಕಾರಿ ಅವಳನ್ನು ದಿವ್ಯಕ್ಕೆ ಒಳಗುಮಾಡಿದಾಗ ಆ ದಿವ್ಯದ ಯಾತನೆಯನ್ನು ಅಥವಾ ಅವಮಾನವನ್ನು ಸಹಿಸಲಾರದೆ ಅವಳು ಆತ್ಮಹತ್ಯೆಯನ್ನು ಮಾಡಿಕೊಂಡ ಪ್ರಕರಣ ಒಂದನ್ನು ಟಿ.ವಿ. ಮಹಾಲಿಂಗಂ ಅವರು ಉದಾಹರಿಸುತ್ತಾರೆ.[೬] ಅಧಿಕಾರಿಯದೇ ತಪ್ಪೆಂದು ಮುಂದೆ ಅನೇಕರು ಸೇರಿ ತೀರ್ಮಾನಿಸಿ, ಅಧಿಕಾರಿ ೩.೨ ಕಾಸುಗಳನ್ನು ದಂಡ ತೆರಬೇಕೆಂದು ವಿಧಿಸಿತು. ದಿವ್ಯಗಳ ಆಚರಣೆ ಆಧುನಿಕ ಕಾಲದಲ್ಲಿ ಉಳಿದುಬರದಿದ್ದರೂ ದೀಪದ ಶಾಸ್ತ್ರ (ಉರಿಯುವ ದೀಪಕ್ಕೆ ಬೆರಳನ್ನು ಹಿಡಿಯುವುದು), ಸೆರಗಿನಲ್ಲಿ ಕೆಂಡ ಹಾಕಿಸುವುದು ಮುಂತಾದ ಮಾತುಗಳಲ್ಲಿ ಉಳಿದು ಬಂದಿರುವುದುಂಟು.

---

೧. ಪೂರ್ವೋಕ್ತ, ಪು. ೯೬-೯೭.

೨. (ಮೈ) ಎಕ IV ಯಳಂದೂರು ೨ ಕ್ರಿ.ಶ. ೧೭ ಶಮಾ.

೩. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೯೮-೯೯.

೪. ಎಇ V ಕ್ರಿ.ಶ. ೧೨೦೦ ಪು. ೨೪೫; ಎಇ XIX ಕ್ರಿ.ಶ. ೧೨೦೦ ಪು. ೧೪೧.

೫. ಜಿ.ಎಂ. ಉಮಾಪತಿಶಾಸ್ತ್ರಿ : ಪೂರ್ವೋಕ್ತ, ಪು. ೧೩೯-೧೪೦.

೬. T.V. Mahalingam : South Indian Polity ಪು. ೨೩೦.

**ದೇವಾಲಯದ ಆದಾಯ-ಖರ್ಚು:**

ದೇವಾಲಯಗಳಿಗೆ ಅನೇಕ ಮೂಲಗಳಿಂದ ಆದಾಯ ಸಂದಾಯವಾಗುತ್ತಿತ್ತು. ದೇವಾಲಯಗಳನ್ನು ಕಟ್ಟಿದಾಗ ಅದರ ಸಂರಕ್ಷಣೆಗೆ, ಪೂಜಾ ಕಾರ್ಯಗಳಿಗೆ ಮತ್ತು ಇತರ ಸಾಂದರ್ಭಿಕ ವೆಚ್ಚಗಳಿಗೆ ಕಟ್ಟಿಸಿದವರು ಮತ್ತು ಇತರರು ಅನೇಕ ರೀತಿಯ ಭೂದಾನವನ್ನೋ ದ್ರವ್ಯದಾನವನ್ನೋ ಮಾಡಿರುತ್ತಿದ್ದರು. ಇದಲ್ಲದೆ ಕಾಲ ಕಾಲಕ್ಕೆ ರಾಜರು, ಅಧಿಕಾರಿಗಳು ಮತ್ತು ಧರ್ಮಿಷ್ಠರು ದಾನದತ್ತಿಗಳನ್ನು ನೀಡುತ್ತಿದ್ದರು. ಹೀಗಾಗಿ ದೇವಾಲಯದ ಆಸ್ತಿ ತುಂಬ ಸಂಪದ್ಭರಿತವಾಗಿ ಬೆಳೆದು ಅಧಿಕ ವರಮಾನವನ್ನು ಕೊಡುತ್ತಿದ್ದಿತು. ಹೀಗೆ ಬರುತ್ತಿದ್ದ ಅಧಿಕ ವರಮಾನವನ್ನು ವೃದ್ಧಿಗೊಳಿಸಲು ದೇವಾಲಯದ ಆಡಳಿತ ವರ್ಗ ಅನೇಕ ಮಾರ್ಗಗಳನ್ನು ಅನುಸರಿಸುತ್ತಿದ್ದಿತು.

ಆಡಳಿತ ವರ್ಗ ಬೇರೆ ಬೇರೆ ವ್ಯಾಪಾರಿಗಳಿಗೆ ಮತ್ತು ಇತರರಿಗೆ ಬಡ್ಡಿಗಾಗಿ ಹಣವನ್ನು ಕೊಡುತ್ತಿದ್ದುದುಂಟು. ದೇವಾಲಯಗಳ ಆದಾಯ ಎಷ್ಟು ಅಧಿಕ ಮೊತ್ತದಲ್ಲಿ ಇರುತ್ತಿತ್ತೆಂದರೆ ಆದಾಯದ ಹಣವನ್ನು ಲಾಭದಾಯಕವಾಗಿ ವ್ಯಾಪಾರಿ ಸಂಘಗಳಿಗೆ ಮತ್ತು ಇತರ ಗ್ರಾಮೀಣ ಸಂಘಗಳಿಗೆ ಸಾಲರೂಪದಲ್ಲಿ ಬಡ್ಡಿಗೆ ನೀಡಲಾಗುತ್ತಿತ್ತು.[೧]

ದೇವಾಲಯದ ಆದಾಯದಲ್ಲಿ ಸಾಕಷ್ಟು ಭಾಗ ದೇವಾಲಯದ ಬೇರೆ ಬೇರೆ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದ ಸಿಬ್ಬಂದಿ ವರ್ಗಕ್ಕೆ ಹೋಗುತ್ತಿದ್ದಿತು. ದೊಡ್ಡ ದೊಡ್ಡ ದೇವಾಲಯಗಳ ಆರ್ಥಿಕ ನಿರ್ವಹಣೆ ತುಂಬ ಜಟಿಲವಾಗಿಯೇ ಇದ್ದಿರಬೇಕು. ಏಕೆಂದರೆ ಜಮೀನು, ತೋಟಗಳಿಂದ ಬರುತ್ತಿದ್ದ ಆದಾಯ, ಹಣದ ವೃದ್ಧಿಯಿಂದ ಬರುತ್ತಿದ್ದ ಆದಾಯ, ನಿತ್ಯದ ಆದಾಯ ಮತ್ತು ಸಿಬ್ಬಂದಿಯ ವೇತನ, ಪ್ರತಿನಿತ್ಯದ ಪೂಜೆ, ನೈವೇದ್ಯದ ಆಹಾರ ಸಿದ್ಧತೆ ಮುಂತಾದ ವೆಚ್ಚಗಳು, ದೇವಾಲಯದ ಜೀರ್ಣೋದ್ಧಾರ, ಸುಣ್ಣ ಬಣ್ಣ ಮುಂತಾದ ಸಂರಕ್ಷಣೆಯ ಕಾರ್ಯಗಳು, ವಿಶೇಷ ಉತ್ಸವಗಳು, ದೇವಾಲಯ ಮಠ ಛತ್ರಗಳಿಗೆ ಬಂದು ಹೋಗುತ್ತಿದ್ದ ಜನರಿಗೆ ಊಟ ವಸತಿ ವ್ಯವಸ್ಥೆ -ಹೀಗೆ ದೇವಾಲಯ ಬಹುದೊಡ್ಡ ಆರ್ಥಿಕ ವ್ಯವಸ್ಥೆಯನ್ನು ತೂಗಿಸಬೇಕಾಗುತ್ತಿತ್ತು. ದೇವಾಲಯಗಳ ಆಡಳಿತ ತುಂಬ ಸಂಕೀರ್ಣ ಸ್ವರೂಪದಿಂದ ಕೂಡಿದ್ದು ಇಲ್ಲಿಯೂ ರಾಜ್ಯಾಡಳಿತದಂತೆ 'ಬಾಹತ್ತರ ನಿಯೋಗ' ಆಡಳಿತ ವ್ಯವಸ್ಥೆ ಇದ್ದಿತು.[೨]

**ದೇವಾಲಯ-ಹಸು, ಎಮ್ಮೆ, ಆಡು, ಕುರಿ ಇತ್ಯಾದಿ**

ಆಕಳುಗಳನ್ನು, ಆಡುಕುರಿಗಳನ್ನು ದೇವಾಲಯಗಳಿಗೆ ದಾನವಾಗಿ ಕೊಡುತ್ತಿದ್ದ ಪದ್ಧತಿ ತಮಿಳುನಾಡು ಮತ್ತು ಆಂಧ್ರದಲ್ಲಿ ಇದ್ದಂತೆ ತಿಳಿದುಬರುತ್ತದೆ. ಎಂ. ಚಿದಾನಂದಮೂರ್ತಿಯವರು ಈ ಪದ್ಧತಿ ಕರ್ನಾಟಕದಲ್ಲಿ ಅಷ್ಟಾಗಿ ಇದ್ದಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ.[೩] ಆದರೆ ಕ್ರಿ.ಶ. ೧೧೫೦ರ ಅನಂತರದ ಕೆಲವು ಶಾಸನಗಳಲ್ಲಿ ಆ ಪದ್ಧತಿ ಇರುವುದು ಕಂಡುಬರುತ್ತದೆ. ತಲಕಾಡಿನ ತುಂಬ ತ್ರುಟಿತವಾದ ತಮಿಳು ಶಾಸನ ಒಂದು (ದಾನಿಯ ಹೆಸರು ಮತ್ತು ವಿವರಗಳು ನಷ್ಟವಾಗಿದೆ) ಕುರಿ ಅಥವಾ ಹಸುವನ್ನು ಬಸದಿಗೆ ದಾನವಾಗಿ ನೀಡಿ ಅದನ್ನು ಒಬ್ಬ ಕುರುಬನ ವಶಕ್ಕೆ ಒಪ್ಪಿಸಿ ತ್ರಿಸಂಧ್ಯಾಕಾಲದಲ್ಲಿ ದೀಪವನ್ನು ಬೆಳಗಿಸಲು ವ್ಯವಸ್ಥೆ ಮಾಡಬೇಕೆಂದು ತಿಳಿಸುತ್ತದೆ.[೪] ಬೆಣ್ಣೆಹಳ್ಳಿಯ ಶಾಸನವೊಂದು 'ನಲ್ಲೆಮ್ಮೆಯ ಉಗ್ರಾಣಿ ನಾರಣವೆಗ್ಗಡೆಯ ಗಿರಿಪಯ್ಯ ಪಿರಿಯಣ್ಣ' ಎಂಬುವನು ವಿರೂಪಾಕ್ಷ ದೇವರ ಸೇವೆಗಾಗಿ ನಲ್ಲೆಮ್ಮೆ ಮತ್ತು ನಲ್ಲಾವುಗಳನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೫] ಈ ರೀತಿ ಹಸುಗಳನ್ನು, ಆಡುಗಳನ್ನು, ಕುರಿಗಳನ್ನು ದೇವಾಲಯಕ್ಕೆ ದಾನ ಮಾಡಿ ಅವನ್ನು

೧. Romila Thapar : The Past and Prejudice. ಪು. ೪೩.

೨. K.A. Neelkanata Shastri : A History of South India ಪು. ೩೦೪.

೩. ಕಶಾಸಾಂಅ, ಪು. ೧೯೯.

೪. (ಮೈ) ಎಕ V ತಿ.ನರಸೀಪುರ ೧೭೦ ಕ್ರಿ.ಶ. ೧೧ ಶಮಾ.

೫. ಎಸ್ಐಐ IX(i) ಹರಪನಹಳ್ಳಿ ೩೪೮ ಕ್ರಿ.ಶ. ೧೨೮೨.

ಒಬ್ಬನಿಗೆ ಅಥವಾ ಕೆಲವು ವ್ಯಕ್ತಿಗಳ ವಶಕ್ಕೊಪ್ಪಿಸಿ, ಅವುಗಳನ್ನು ಸಾಕುವವರು ಒಂದು ನಿಶ್ಚಿತ ಪ್ರಮಾಣದ ತುಪ್ಪವನ್ನು ಪ್ರತಿನಿತ್ಯ ದೇವಾಲಯದ ದೀಪವನ್ನು ಬೆಳಗಿಸಲು ನೀಡಬೇಕೆಂದು ವ್ಯವಸ್ಥೆ ಮಾಡುತ್ತಿದ್ದರು. ಈ ಪದ್ಧತಿ ಸಮುದ್ರ ತೀರದ ಆಂಧ್ರದ ಜಿಲ್ಲೆಗಳಲ್ಲಿ ಅಧಿಕವಾಗಿ ರೂಢಿಯಲ್ಲಿದ್ದಂತೆ ತಿಳಿದುಬರುತ್ತದೆ. ಹೀಗೆ ದೇವಾಲಯಕ್ಕೆ ಕೊಡಲ್ಪಟ್ಟ ಪ್ರಾಣಿಗಳನ್ನು 'ಇನುಪ ಎಡ್ಲು' ಎಂದು ಕರೆಯುತ್ತಿದ್ದರು. ತೆಲುಗು ಶಾಸನಗಳಲ್ಲಿ ಕಂಡುಬರುವ 'ವೆಲ್ಲೆಡ್ಲು' ತಮಿಳು ಶಾಸನಗಳಲ್ಲಿ ಕಂಡುಬರುವ 'ವೆಲ್ಲಾಡು'ಗೆ ಸಮಾನಾರ್ಥಕವಾಗಿದ್ದು ಅದು ದೇವಾಲಯಗಳಿಗೆ ಬಿಟ್ಟ ಆಡುಗಳನ್ನು ಸೂಚಿಸುವ ಹಾಗೆ ಕಾಣುತ್ತದೆ.[೧] ಕಡ್ಲೆವಾಡದ ಶಾಸನವೊಂದು ಸೋವರಸನೆಂಬ ಸಾದವೆರ್ಗಡೆ 'ಆಡುಕುಜೆಯೊಕ್ಕಲ ಸಾದ'ವನ್ನು ದೇವಾಲಯದ ಪೂಜಾ ಕಾರ್ಯಗಳಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೨] ದನಗಳ ಮೇಲೆ ಹಾಕುತ್ತಿದ್ದ 'ಬಾಲಪಣ' ಎಂಬ ತೆರಿಗೆಯನ್ನು ಈ ಹಿಂದೆ ಗಮನಿಸಲಾಗಿದೆ. ತುಂಬಾ ತ್ರುಟಿತವಾದ ಹುಬ್ಬಳ್ಳಿಯ ಶಾಸನವೊಂದು, ದೇವರ ಕಪಿಲೆಯ ಹೋರಿ ಮತ್ತು ಐದು ಎತ್ತುಗಳನ್ನು ದೇವಾಲಯಗಳಿಗೆ ದಾನ ನೀಡಿ ಅವುಗಳನ್ನು ಬಾಡಿಗೆಗಾಗಿ ದುಡಿಸಿಕೊಂಡು ಅದರಿಂದ ಬಂದ ಆದಾಯವನ್ನು ದೇವಾಲಯಗಳಿಗೆ ಬಳಸಬೇಕೆಂದು ಹೇಳುತ್ತದೆ.[೩] ಈ ಶಾಸನದಲ್ಲಿ ಉಕ್ತವಾಗಿರುವ ದೇವರ ಕಪಿಲೆಯ ಹೋರಿ, ದೇವರ ಹೆಸರಿನಲ್ಲಿ ಬಿಡುತ್ತಿದ್ದ ದೇವರ ಗೂಳಿ ಅಥವಾ ಎತ್ತನ್ನು ಸೂಚಿಸುವ ಹಾಗೆ ಕಾಣುತ್ತದೆ.

ಮಂಗಳೂರಿನ ಶಾಸನವೊಂದು 'ದೇವಾಲಯದಲು ಅರಮನೆ ಕಟ್ಟುವ ಮರಿಯಾದೆಯಿಲ್ಲ'[೪] ಎಂದು ಹೇಳುತ್ತದೆ. ದೇವಾಲಯದ ಆವರಣದಲ್ಲಿ ಅರಮನೆಯಂತಹ ಕಟ್ಟಡಗಳು ಬಂದರೆ ದೇವಾಲಯದ ಪ್ರಾಮುಖ್ಯ ಮತ್ತು ಪಾವಿತ್ರ್ಯ ಹಾಳಾಗುವುದೆಂಬ ಉದ್ದೇಶವಿರಬಹುದು. ಈ ಮಾತು ಬರಲು ಒದಗಿಬಂದ ಸಂದರ್ಭವಾವುದು ಎಂಬುದು ಸ್ಪಷ್ಟವಾಗುವುದಿಲ್ಲ.

**ಸಮಾರೋಪ:**

ದೇವಾಲಯ ಕೇವಲ ಪೂಜಾಮಂದಿರವಾಗಿ ತನ್ನ ಕಾರ್ಯವನ್ನು ಪ್ರಾಚೀನ ಕಾಲದಲ್ಲಿ ನಿರ್ವಹಿಸಿಲ್ಲ; ಅದು ಒಂದು ಧಾರ್ಮಿಕ ಸಂಸ್ಥೆಯಾದಂತೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ನ್ಯಾಯ ತೀರ್ಮಾನ ಮಾಡುವ ಕೇಂದ್ರವಾಗಿ ತುಂಬ ಸಂಕೀರ್ಣ ಸ್ವರೂಪದ ಕಾರ್ಯವನ್ನು ನಿರ್ವಹಿಸಿದೆ. ದೇವಾಲಯದ ಆ ಕೆಲವು ಕಾರ್ಯಕ್ಷೇತ್ರಗಳನ್ನು ಸ್ವಲ್ಪಮಟ್ಟಿಗೆ ಇದುವರೆಗೂ ಗಮನಿಸಲಾಗಿದೆ. ದೇವಾಲಯಗಳು ಕೆಲವು ಶಾಸನಗಳಲ್ಲಿ ದೇಹಾರವೆಂದು[೫] ಕರೆಯಲ್ಪಟ್ಟಿವೆ. ದೇವಾಲಯಗಳು ಸ್ವತಂತ್ರವಾಗಿ ಮತ್ತು ಮಠಗಳೊಂದಿಗೆ ಸೇರಿ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ನಿರ್ವಹಿಸಿರುವುದನ್ನು ಕಂಡಿದ್ದೇವೆ. ಬೌದ್ಧ, ಜೈನ, ವೈಷ್ಣವ ಮತ್ತು ಶೈವಧರ್ಮಗಳು ಬೆಳೆದುದ್ದು, ಪ್ರಚಾರಗೊಂಡದ್ದು ದೇವಸ್ಥಾನಗಳ ಬೆಳವಣಿಗೆಯಿಂದ ಎಂದರೆ ಉತ್ಪ್ರೇಕ್ಷೆಯಾಗಲಾರದು.

---

೧. S. S. RamachandraMurthy : 'A Note on the terms Inupayedlu and Velledlu' Svastisri, ಪು. ೩೬೭-೨೭೦.

೨. ಎಸ್‌ಐಐ XX ಸಿಂದಗಿ ೧೩೯ ಕ್ರಿ.ಶ. ೧೧೬೩.

೩. ಎಸ್‌ಐಐ XV ಹುಬ್ಬಳ್ಳಿ ೧೭೯ ಕ್ರಿ.ಶ. ೧೨೨೪.

೪. ತುನಾಶಾ I ಮಂಗಳೂರು ೩೬ ಕ್ರಿ.ಶ. ೧೨೦೪.

೫. ಎಸ್‌ಐಐ XVIII ಹಾವೇರಿ ೨೪೯ ಕ್ರಿ.ಶ. ೧೨೬೫. ದೇಹಾರ ಪದವು ಜೈನರಲ್ಲಿ ಸಾರ್ವಜನಿಕ ಮತ್ತು ವೈಯಕ್ತಿಕ ದೇವಾಲಯ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಧರ್ಮಾಮೃತಂ (೬-೮೭ನೆಯ ಪದ್ಯದನಂತರ, ೧೨:೫೩) ವಚನಕಾರರಲ್ಲಿ ವೈಯಕ್ತಿಕ ಪೂಜೆ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ದೇಹಾರದ ನಿಷ್ಪತ್ತಿ ಮತ್ತು ವಿವರವಾದ ಚರ್ಚೆಗೆ ನೋಡಿ: ಎಂ. ಚಿದಾನಂದಮೂರ್ತಿ: ' ಕನ್ನಡ "ದೇವಾರಂ : ದೇಹಾರಂ" ತಮಿಳು "ತೇವಾರ" ಸಂವಾದಿಪದ' ಶ್ರೀಕಂಠ ತೀರ್ಥ, ಪು. ೪೫೯-೪೬೬.

ವೀರಶೈವಧರ್ಮ ವಚನಕಾರರ ಕಾಲದಲ್ಲಿ ದೇವಾಲಯ ನಿರ್ಮಾಣವನ್ನು ತಿರಸ್ಕರಿಸಿದಂತೆ ಕಂಡುಬಂದರೂ ಮುಂದೆ ಬಹುಬೇಗ ಆ ಸಂಸ್ಥೆಯನ್ನು ಒಪ್ಪಿಕೊಳ್ಳಬೇಕಾಯಿತು. ವಚನಕಾರರ ಕಾಲಕ್ಕಾಗಲೇ ದೇವಾಲಯಗಳು ಎಷ್ಟು ಪ್ರಬಲ ಮತ್ತು ಬಲಿಷ್ಠ ಸಂಸ್ಥೆಗಳಾಗಿ ಬೆಳೆದಿದ್ದುವೆಂದರೆ ಅವನ್ನು ತಿರಸ್ಕರಿಸುವ ಪ್ರಯತ್ನ ನಿಷ್ಫಲವಾಗಿ ಬಹುಬೇಗ ವೀರಶೈವಧರ್ಮವೂ ದೇವಾಲಯ ನಿರ್ಮಾಣವನ್ನು ಬೆಂಬಲಿಸುವುದು ಅಗತ್ಯವಾಯಿತು.

ದೇವಸ್ಥಾನಗಳು ತಮ್ಮ ಅಂಗಸಂಸ್ಥೆಗಳಂತೆ ಬೆಳೆಸಿಕೊಂಡ ಮಠಗಳೊಂದಿಗೆ ಸೇರಿ ಬಹುದೊಡ್ಡ ಸಾಮಾಜಿಕ ಕಾರ್ಯಗಳನ್ನು ನಿರ್ವಹಿಸಿವೆ. ಹಸಿದವರಿಗೆ ಆಹಾರ, ತಪಸ್ವಿಗಳಿಗೆ ಆಶ್ರಯ ಸ್ಥಾನ, ರೋಗಿಗಳಿಗೆ ಔಷಧಿ, ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ, ಕಲೆಗಾರರಿಗೆ ಆಶ್ರಯ, ನೂರಾರು ಉದ್ಯೋಗಿಗಳಿಗೆ ಉದ್ಯೋಗಗಳು, ನ್ಯಾಯ ತೀರ್ಮಾನ, ದವಸಧಾನ್ಯ ವಸ್ತುವಿಶೇಷಗಳನ್ನು ಕೊಳ್ಳುವ ಬಹುದೊಡ್ಡ ಗ್ರಾಹಕ, ಹಣಕಾಸು ನಿರ್ವಹಣಾ ಸಂಸ್ಥೆ, ಧಾರ್ಮಿಕ ಕೇಂದ್ರ -ಹೀಗೆ ವೈವಿಧ್ಯಮಯ ಸೇವೆಗಳನ್ನು ನಿರ್ವಹಿಸುತ್ತ[೧] ಒಂದು ಊರಿನ ಅಥವಾ ನಗರದ ಕಣ್ಣಾಗಿ, ನಾಡಿನ ಸಾಂಸ್ಕೃತಿಕ ಕೇಂದ್ರಗಳಾಗಿ ಕಾರ್ಯವನ್ನು ನಿರ್ವಹಿಸಿವೆ.

●●

---

೧. ದೇವಾಲಯದ ಆಡಳಿತ ಬಹುವ್ಯಾಪಕವಾಗಿರುತ್ತಿತ್ತು. ಹೆಚ್ಚಿನ ವಿವರಗಳಿಗೆ ನೋಡಿ- ಜೆ. ಎಂ. ನಾಗಯ್ಯನವರ 'ದೇವಾಲಯ: ಆಡಳಿತ ವ್ಯವಸ್ಥೆ' ಎಂಬ ಲೇಖನ-ಅಭಿಜ್ಞ, ಸಾ.ಶಿ. ಮರುಳಯ್ಯ ಅಭಿನಂದನ ಗ್ರಂಥ. ಪು. ೪೭೭-೪೯೫.

# ೧೫. ಯುದ್ಧಪದ್ಧತಿ

ಎಲ್ಲ ದೇಶಗಳ ರಾಜ್ಯಾಡಳಿತದಲ್ಲಿ ಯುದ್ಧ ಒಂದು ಅನಿವಾರ್ಯ ಎಂಬಂತಹ ಪದ್ಧತಿಯಾಗಿ ಬೆಳೆದು ಬಂದಿದೆ. ಯುದ್ಧದ ಹಿನ್ನೆಲೆಯಲ್ಲಿ ಮಾನವನ ಮಹತ್ವಾಕಾಂಕ್ಷೆ, ಸ್ವಾರ್ಥ, ಸ್ಪರ್ಧೆ, ಸೇಡು, ಅಸಹನೆ, ಕಲಹಪ್ರಿಯತೆ, ಅಹಂಕಾರದಂತಹ ಮನೋಭಾವಗಳು ತಮ್ಮ ಪ್ರಕರ್ಷ ಸ್ಥಿತಿಯಲ್ಲಿ ಪ್ರಕಟಗೊಂಡು ಯುದ್ಧಕ್ಕೆ ಕಾರಣವಾಗುತ್ತವೆ. ಅನೇಕ ಸಂದರ್ಭಗಳಲ್ಲಿ ಸ್ವರಕ್ಷಣೆ ಮತ್ತು ಸ್ವರಾಜ್ಯ ರಕ್ಷಣೆಗಾಗಿಯೂ ಯುದ್ಧ ಮಾಡುವುದು ಅನಿವಾರ್ಯವಾಗುತ್ತಿತ್ತು. ಕ್ರಮೇಣ ಯುದ್ಧವು ರಾಜ್ಯಾಡಳಿತದ ಒಂದು ಅವಿಭಾಜ್ಯ ಅಂಗವೆಂಬಂತೆ ಬೆರೆತು ಹೋಗಿದೆ. ನಾಗರಿಕತೆ ಅಥವಾ ಪ್ರಜಾಪ್ರಭುತ್ವಗಳು ಬೆಳೆದುಬಂದರೂ ಯುದ್ಧಗಳು ಕಡಮೆಯಾಗದೆ ಇತಿಹಾಸದ ಒಂದು ಸ್ಥಿರ ಅಂಶವಾಗಿಯೇ ಉಳಿದಿವೆ.[೧] ಯಾವುದೇ ವಿವಾದವನ್ನು ಪರಿಹರಿಸಿಕೊಳ್ಳಲು ಯುದ್ಧವಲ್ಲದೆ ಬೇರೆ ಬೇರೆ ವಿಧಾನಗಳು, ಮಾರ್ಗಗಳು ಇರಲು ಸಾಧ್ಯವಿದೆಯಾದರೂ ಮಾನವನ ಇತಿಹಾಸದುದ್ದಕ್ಕೂ ಕ್ಷೋಭೆಗಳನ್ನು ತಂದ ಹಲವಾರು ಯುದ್ಧಗಳು ನಡೆಯುತ್ತಾ ಬಂದಿವೆ. ರಾಜನು ಸ್ವರಕ್ಷಣೆಗಾಗಿ, ರಾಜ್ಯ ರಕ್ಷಣೆಗಾಗಿ, ರಾಜ್ಯ ವಿಸ್ತರಣೆಗಾಗಿ, ಐಶ್ವರ್ಯ ಸಂಗ್ರಹಣೆಗಾಗಿ ಮಹತ್ವಾಕಾಂಕ್ಷೆಯಿಂದ ಯುದ್ಧ ಮಾಡಿರುವುದುಂಟು. ಇಂಥ ಯುದ್ಧಗಳಿಗಾಗಿ ಅದನ್ನು ರಾಜ್ಯಾಡಳಿತದ ಒಂದು ಸಿದ್ಧಾಂತವಾಗಿ ಪರಿಗಣಿಸಿ ಸೈನ್ಯ ವ್ಯವಸ್ಥೆಯನ್ನು, ಶಸ್ತ್ರಾಸ್ತ್ರ ಸಂಗ್ರಹಣೆಯನ್ನು ವಿಶೇಷವಾಗಿ ಮಾಡಬೇಕಾಯಿತು. ರಾಜ್ಯಾದಾಯದಲ್ಲಿ ಸಾಕಷ್ಟು ದೊಡ್ಡ ಮೊತ್ತ ಸೈನ್ಯ ವ್ಯವಸ್ಥೆಗೆ ವೆಚ್ಚವಾಗುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ.

ಪ್ರಾಚೀನ ಕರ್ನಾಟಕದ ಸಾಮಾಜಿಕ ಮೌಲ್ಯಗಳಲ್ಲಿ ವೀರಕ್ಕೆ ಒಂದು ಪ್ರಮುಖಸ್ಥಾನವಿದೆ. ಗ್ರಾಮರಕ್ಷಣೆಗೆ, ಹೆಣ್ಣಿನ ರಕ್ಷಣೆಗೆ, ಗೋರಕ್ಷಣೆಗೆ, ನಾಡಿನ ರಕ್ಷಣೆಗೆ, ಒಡೆಯನ ಪರವಾಗಿ ತನ್ನ ಋಣ ತೀರಿಸಲು, ಬೇಟೆಗಾಗಿ, ದುಷ್ಟಮೃಗಗಳ ನಾಶಕ್ಕಾಗಿ ಹೀಗೆ ನಾನಾ ಕಾರಣಗಳಿಗಾಗಿ ಶೌರ್ಯ ಪ್ರದರ್ಶನವನ್ನು, ಅಸಾಧಾರಣ ಕಲಿತನವನ್ನು ಪ್ರಕಟಿಸಿರುವುದು ಸಾವಿರಾರು ಶಾಸನಗಳಲ್ಲಿ ನಿರೂಪಿತವಾಗಿರುವುದನ್ನು ಕಾಣಬಹುದಾಗಿದೆ. ಪ್ರಾಚೀನ ಕಾಲದ ಕನ್ನಡಿಗರ ಕಲಿತನ ಎಷ್ಟು ಸುವಿಖ್ಯಾತವಾಗಿದ್ದಿತೆಂದರೆ ದೂರದ ಬಂಗಾಳದಿಂದಲೂ ದೊರೆಗಳು ಈ ನಾಡಿನಿಂದ ಸೈನಿಕರನ್ನು ಕರೆಸಿಕೊಳ್ಳುತ್ತಿದ್ದರು.[೨]

ಒಂದು ಸಾಮ್ರಾಜ್ಯದ ಆಳ್ವಿಕೆ ಸ್ಥಿರವಾಗಿರಬೇಕಾದರೆ ರಾಜನಲ್ಲಿ ಬಹು ದೊಡ್ಡ ಸುಸಜ್ಜಿತ ಸೈನ್ಯ ಅತ್ಯಗತ್ಯವಾಗಿ ಇರಬೇಕಾಗುತಿತ್ತು. ಹೀಗಾಗಿ ರಾಜರು ತಮ್ಮ ಸೈನ್ಯಬಲವನ್ನು ಬಹು ವ್ಯಾಪಕವಾಗಿ ಸುಸಜ್ಜಿತವಾಗಿ ವ್ಯವಸ್ಥೆ ಮಾಡಿಕೊಂಡಿರುತ್ತಿದ್ದರು. ರಾಜರ ಆದ್ಯ ಕರ್ತವ್ಯಗಳಲ್ಲಿ 'ದುಷ್ಟಶಿಕ್ಷೆ ಶಿಷ್ಟರಕ್ಷಣೆ' ಒಂದಾಗಿದ್ದುದರಿಂದ ಈ ತಾತ್ವಿಕ ಹಿನ್ನೆಲೆಯಲ್ಲಿ ರಾಜರು ತಮ್ಮ ಎಲ್ಲ ಅನ್ಯಭಾವನೆಗಳನ್ನು ಅದರಲ್ಲಿ ಅಡಗಿಸಿಬಿಡುತ್ತಿದ್ದರು. ರಾಜರು ಇಡೀ ರಾಜ್ಯಾಡಳಿತದ ಕೇಂದ್ರ ಬಿಂದುಗಳಾದಂತೆ ಸೈನ್ಯ ಶಕ್ತಿಯ ಮೂಲಬಿಂದುವೂ ಆಗಿರುತ್ತಿದ್ದರು. ಸ್ವತಃ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದುದಲ್ಲದೆ ಅನೇಕ

---

೧. Will and Ariel Durant : The Lessons of History XI, ಪು. ೮೧.

"War is one of the constants of history and has not diminished with civilization or democracy."

೨. ಎಂ. ಚಿದಾನಂದಮೂರ್ತಿ ಕಶಾಸಾಂಅ, ಪು. ೨೪೫.

ಸಂದರ್ಭಗಳಲ್ಲಿ ಯುದ್ಧಗಳ ನೇತೃತ್ವವನ್ನೂ ವಹಿಸುತ್ತಿದ್ದರು. ಭಿಲ್ಲಮನು ಹೊಯ್ಸಳರ ಮೇಲೆ, ಜೈತುಗಿಯು ಕಾಕತೀಯರ ಮೇಲೆ, ಮತ್ತು ಸಿಂಘಣನು ಗುರ್ಜರರ ಮೇಲೆ ಯುದ್ಧ ಮಾಡಿರುತ್ತಾರೆ.[೧] ಇದೇ ರೀತಿಯಲ್ಲಿ ಎರಡನೆಯ ಬಲ್ಲಾಳನು ಸೇವುಣರ ಮೇಲಿನ ಅನೇಕ ಯುದ್ಧಗಳ ನೇತೃತ್ವ ವಹಿಸಿದ್ದನ್ನು ಶಾಸನಗಳು ತಿಳಿಸುತ್ತವೆ.[೨] ಹೀಗೆ ರಾಜರು ಸ್ವತಃ ಶೌರ್ಯ ಪ್ರಕಟಣೆಯ ಮೂಲಕ ಶತ್ರು ಸೈನ್ಯದಲ್ಲಿ ಭೀತಿಯನ್ನು, ಸ್ವಸೈನ್ಯದಲ್ಲಿ ಸ್ಫೂರ್ತಿಯನ್ನು ಉಕ್ಕಿಸುತ್ತಿದ್ದರು. ಬಲ್ಲಾಳನ ಬಿಲ್ವಿದ್ಯೆಯ ಸಾಮರ್ಥ್ಯವನ್ನು ಒಂದು ಶಾಸನ ಹೀಗೆ ನಿರೂಪಿಸುತ್ತದೆ.

ಬಿಲ್ಲೊಳ್ ಮುನ್ನಂ ಪಿನಾಕಾಯುಧನೆ ಸಕಲ ಚಕ್ರಾಯುಧಂ ಜಾಮದಗ್ನ್ಯಂ
ಬಲ್ಲಂ ರಾಮಂ ನದೀಜಂ ಕಲಶಜನಿನಜಂ ಬಲ್ಲನಿಂದ್ರಾತ್ಮಜಾತಂ
ಬಲ್ಲಂ ಕೇಳಿಂದು ಬಲ್ಲಾಳನೆ ಕಲಿಗಳ ದೇವಂ ಜಗಂ ಮೆಚ್ಚೆ ಬಿಲ್ಲೊಳ್
ಬಲ್ಲಂ ಮತ್ತಿಲ್ಲ ಬಿಲ್ಲರ್ ಬಿರುದರಿದೆ ವಲಂ ಡಂಗುರಂ ಧಾತ್ರಿಗೆಲ್ಲಂ॥[೩]

ಬಿಲ್ವಿದ್ಯೆಯಲ್ಲಿ ಶಿವ, ವಿಷ್ಣು, ಪರಶುರಾಮ, ರಾಮ, ಭೀಷ್ಮ, ದ್ರೋಣ, ಕರ್ಣ, ಅರ್ಜುನ ಇವರೆಲ್ಲ ಈ ಮೊದಲು ಪ್ರಖ್ಯಾತರಾಗಿದ್ದರು. ಈಗ ಬಲ್ಲಾಳನೇ ಶ್ರೇಷ್ಠ ಬಿಲ್ಲುಗಾರನೆಂದು ಭೂಲೋಕದಲ್ಲಿ ಖ್ಯಾತನಾಗಿದ್ದಾನೆಂದು ತಿಳಿಸುತ್ತದೆ. ವಿಷ್ಣುವರ್ಧನನು ಖಡ್ಗ ವಿದ್ಯೆಯಲ್ಲಿ ಅಸಾಧಾರಣನಾಗಿದ್ದನೆಂದು ಶಾಸನಗಳು ತಿಳಿಸುತ್ತವೆ.[೪] ರಾಜರಿಗೆ ಬಳಸಲಾದ ಅನೇಕ ವಿಶೇಷಣಗಳು ('ಮಲಪರೊಳ್ಗಂಡ', 'ಶನಿವಾರಸಿದ್ಧಿ', 'ಉಚ್ಚಂಗಿಕೊಂಡ', 'ಕದನ ಪ್ರಪಂಚ', 'ತ್ರಿಭುವನ ಮಲ್ಲ', 'ಆಹವ ಮಲ್ಲ' ಇತ್ಯಾದಿ) ಅವರ ಶೌರ್ಯ ಪರಾಕ್ರಮಗಳನ್ನು ತಿಳಿಯಪಡಿಸುತ್ತವೆ.[೫]

ರಾಜನ ಬಳಿ ಅಪಾರವಾದ ಸೈನ್ಯ ಬಲವಿರುತ್ತಿತ್ತು. ಸೇವುಣರ ಸೈನ್ಯದಲ್ಲಿ ಎರಡು ಲಕ್ಷ 'ಸುತ್ಥಣೆ' ಯರು (=ವೀರರು?) ಮತ್ತು ಹನ್ನೆರಡು ಸಾವಿರ ಅಶ್ವಾರೋಹಿಗಳು ಇದ್ದರೆಂದು ಶಾಸನವೊಂದರಿಂದ ತಿಳಿದು ಬರುತ್ತದೆ.[೬] ಚಾಳುಕ್ಯ ವಿಕ್ರಮಾದಿತ್ಯನ ಸಾಮಂತರಾದ ಶಿಲಾಹಾರರ ಸೈನ್ಯದ ವರ್ಣನೆ ಮಾಡುತ್ತ ಒಂದು ಶಾಸನ ಹದಿನೆಂಟು ಸಾವಿರ ಕುದುರೆಗಳು, ಕೊಂತಗಳನ್ನು ಹಿಡಿದ ಎಂಬತ್ತು ಸಾವಿರ ವೀರರು ಮತ್ತು ಲೆಕ್ಕವಿಲ್ಲದಷ್ಟು ಪದಾತಿ ಬಲವಿದ್ದಿತೆಂದು ತಿಳಿಸುತ್ತದೆ.[೭] ಇನ್ನೊಂದು ಶಾಸನ ಸೇವುಣರಲ್ಲಿ ಗಜಸೈನ್ಯ ಏಳೆಂಟು ನೂರು, ಅಶ್ವ ಸೈನ್ಯ ಏಳೆಂಟು ಸಾವಿರ, ಪದಾತಿ ಸೈನ್ಯ ಏಳೆಂಟು ಲಕ್ಷವಿದ್ದಿತೆಂದು ತಿಳಿಸುತ್ತದೆ.[೮] ಇವು ಉತ್ಪ್ರೇಕ್ಷಿತ ಸಂಖ್ಯೆಗಳೋ ಅಥವಾ ವಾಸ್ತವ ಸಂಖ್ಯೆಗಳೋ ಎಂಬ ಅನುಮಾನ ಬರಲು ಸಾಧ್ಯವಿದೆಯಾದರೂ ಒಟ್ಟಿನಲ್ಲಿ ರಾಜರು ಅಪಾರ ಸೈನ್ಯಬಲವನ್ನು ಹೊಂದಿದ್ದರು ಎಂಬುದರಲ್ಲಿ ಅನುಮಾನವಿಲ್ಲ.

---

೧. ಎ.ವಿ. ನರಸಿಂಹಮೂರ್ತಿ : ಕರ್ನಾಟಕದ ಸೇವುಣರ ಇತಿಹಾಸ, ಪು. ೭೮-೭೯.

೨. (ರೈ) ಎಕ V ಅರಸಿಕೆರೆ ೨೧೬ ಕ್ರಿ.ಶ. ೧೨೦೦.
(ರೈ) ಎಕ VIII ಸೊರಬ ೧೪೦ ಕ್ರಿ.ಶ. ೧೧೯೮.

೩. (ರೈ) ಎಕ VI ಚಿಕ್ಕಮಗಳೂರು ೭೭ ಕ್ರಿ.ಶ. ೧೧೮೦.

೪. (ರೈ) ಎಕ V ಹಾಸನ ೬೫ ಕ್ರಿ.ಶ. ೧೧೪೯.

೫. ಈ ಬಿರುದುಗಳಲ್ಲಿ ಹಲವು ಸಾಂಪ್ರದಾಯಿಕದಂತೆ ತೋರುವುದಾದರೂ ಉಚ್ಚಂಗಿಕೊಂಡ, ಶನಿವಾರಸಿದ್ಧಿ ಹೊಯ್ಸಳ ಬಲ್ಲಾಳನ ಸಾಧನೆಗಳ, ಪರಾಕ್ರಮಗಳ ಮೂಲಕ ಮೂಡಿಬಂದವು. ಎಷ್ಟೋ ಬಿರುದುಗಳನ್ನು ಮುಂದಿನ ರಾಜರು ಸಾಂಪ್ರದಾಯಿಕವಾಗಿ ಸೇರಿಸಿಕೊಳ್ಳುತ್ತಿದ್ದರು.

೬. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪. ಕುಮಾರವ್ಯಾಸನ ಕೃತಿಯಲ್ಲಿಯೂ ಬಳಕೆಯಾಗಿರುವ ಈ ಪದ ಗಮನಾರ್ಹವಾಗಿದೆ. ಸುತ್ಥಣೆ=ಪದಾತಿಬಲ; ಕಾಲ್ಬಲ; ಕಾಲಾಳು. ಕಕ.ನಿಘಂಟು. ಸಂ. ೮. ಪು. ೮೫೯.

೭. ಕಇ II ಅಕ್ಕಲುಕೋಟೆ ೧೨ ಕ್ರಿ.ಶ. ೧೧೧೪.

೮. (ರೈ) ಎಕ XV ಅರಸಿಕೆರೆ (ಪೂರಕ ಸಂಪುಟ) ೨೧೬ ಕ್ರಿ.ಶ. ಸು. ೧೨೦೦.

ರಾಜರು ತಮ್ಮಲ್ಲಿ ಅಪಾರ ಸೈನ್ಯವಿದ್ದರೂ ಸ್ವತಃ ಯುದ್ಧದಲ್ಲಿ ಭಾಗವಹಿಸುತ್ತಿದ್ದರು.

ಅರಸುಗಳೆಂಬರ್ ಬವರದೊಳ್ ಸೆರಗಿಂ ಪೆಱಗಿರ್ಪ ಬುದ್ಧಿಯಿಂ
ದರನೆಲೆಯೆಂದು ಮಾಡಿ ಪೆಱರಂ ಪೆಱರಿಂದಮೆ ಗೆಲ್ವರಲ್ಲದಿಂ
ತಿರೆ ಪೆಱಗಾಗೆ ತನ್ನ ಬಲಮನ್ಯ ಬಲಂ ಬೆಱಗಾಗಲೊಂದೆ ಸಿಂ
ಧುರದೊಳೆ ಗೆಲ್ವರೇ ಪಗೆಯನಾರ್ ಸಮನಿಂತಸಹಾಯಶೂರನೊಳ್॥[೧]

ರಾಜರು ರಣರಂಗದ ಕೊನೆಯಲ್ಲಿ ನಿಂತು ಶತ್ರುಗಳನ್ನು ಅನ್ಯರಿಂದ ಗೆಲ್ಲುತ್ತಾರೆಂಬ ಅಪಖ್ಯಾತಿಯನ್ನು ಹೋಗಲಾಡಿಸುವಂತೆ ತನ್ನ ಸೈನ್ಯ ಮತ್ತು ಶತ್ರುಸೈನ್ಯಗಳೆರಡೂ ಬೆರಗಾಗುವಂತೆ ಒಂದೇ ಆನೆಯ ಬಲದಿಂದ ಹೋರಾಡಿ ಗೆದ್ದ ವಿಷಯವನ್ನು ಒಂದು ಶಾಸನ ನಿರೂಪಿಸುತ್ತದೆ. ಸಿಂದ ವಂಶದ ರಾಜನಾದ ಚಾಮುಂಡ ಯುದ್ಧಗಳಲ್ಲಿ ಭಾಗವಹಿಸಿದ್ದ ಮಹಾ ಶೂರ. ಅವನನ್ನು ಒಂದು ಶಾಸನ ಹೀಗೆ ಕೀರ್ತಿಸಿದೆ :

ಅನತಾರಾತಿ ನೃಪಾಳರಂ ಬೆದಱೆ ಬೆಂಕೊಂಡರ್ಥಮಂ ವಸ್ತುವಾ
ಹನಮಂ ಪೆಂಡಿರ ತಂಡಮಂ ಗುಡಿಗಳಂ ಗೂಡಾರಮಂ ನಾಡುಮಂ
ಮುನಿಸಿಂದಿರ್ಕುಟಿಗೊಳ್ವುದೆಂಬುದೆ ವಿನೋದಂ ತನ್ನೊಳೆಂದಂದು ಪೇೞ್
ಘನ ಶೌರ್‍ಯಂಬಡೆದಿರ್ಪರಾರ್ ತೊಡರ್ದು ಚಾಮುಂಡಾವನೀಪಾಳನೊಳ್॥[೨]

ಚಾಮುಂಡನ ಪರಾಕ್ರಮಕ್ಕೆ ಶತ್ರುಗಳು ಹೆದರಿ ಓಡಲು ಅವರ ಬೆನ್ನು ಹತ್ತಿ ಹಣ, ವಸ್ತು, ವಾಹನ, ಸ್ತ್ರೀಸಮೂಹ, ಧ್ವಜ, ಗೂಡಾರ ಮತ್ತು ನಾಡನ್ನು ಕೋಪದಿಂದ ವಶಪಡಿಸಿಕೊಂಡನೆಂದು ತಿಳಿಸುತ್ತದೆ. ಇದೇ ರೀತಿ ಬಿಜ್ಜಳ, ನರಸಿಂಹ ಮುಂತಾದ ರಾಜರು ಯುದ್ಧರಂಗದಲ್ಲಿ ಪ್ರದರ್ಶಿಸಿದ ಶೌರ್ಯವನ್ನು ಶಾಸನಗಳು ನಿರೂಪಿಸುತ್ತವೆ.[೩]

ರಾಜನು ಕೆಲವು ಸಂದರ್ಭಗಳಲ್ಲಿ ಸೈನ್ಯದ ನೇತೃತ್ವ ವಹಿಸಿದಂತೆ ಕಂಡುಬರುವುದಾದರೂ ಸೈನ್ಯಕ್ಕೆ ಮುಖ್ಯಸ್ಥನಾಗಿ ಸೇನಾಧಿಪತಿ ಇರುತ್ತಿದ್ದನು. ಮಹಾಭಾರತವನ್ನು ಗಮನಿಸಿದರೆ ಯುದ್ಧದ ಮೊದಲು ಸೇನಾಪತಿಯ ಆಯ್ಕೆಯನ್ನು ಮಾಡುವುದು ಕಂಡುಬರುತ್ತದೆ. ಆದರೆ ಪ್ರಾಚೀನ ಕನ್ನಡನಾಡಿನ ಶಾಸನಗಳನ್ನು ಗಮನಿಸಿದರೆ, ಸೇನಾಪತಿಯ ಹುದ್ದೆ ಸ್ಥಿರವಾಗಿದ್ದು ಯುದ್ಧ ಮತ್ತು ಶಾಂತಿ ಸಮಯಗಳೆರಡರಲ್ಲೂ ಏಕರೀತಿಯಾಗಿದ್ದಂತೆ ಕಂಡುಬರುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಸೇನಾಪತಿಯ ಹುದ್ದೆಯನ್ನು ಶಾಶ್ವತವೆಂದು ಪರಿಗಣಿಸಿ ಅದಕ್ಕೆ ೪೮,೦೦೦ ಪಣಗಳನ್ನು ವೇತನವೆಂದು ಹೇಳಲಾಗಿದೆ.[೪] ಅನೇಕ ಯುದ್ಧಗಳ ನೇತೃತ್ವವನ್ನು ಸೇನಾಪತಿಗಳೇ ವಹಿಸುತ್ತಿದ್ದರು. ಮೊತ್ತಹಳ್ಳಿಯ ಒಂದು ಶಾಸನ ಬಲ್ಲಾಳನ ಸೇನಾಪತಿಯಾದ ಸೊಸಿಯಪ್ಪನನ್ನು 'ಬಲಗಯ್ಯ ಸೇನಾಧಿಪತಿ' ಎಂದು ಕರೆದಿದೆ.[೫] ಕೇಶಿಮಯ್ಯನಂತಹ ಅಧಿಕಾರಿ ರಾಯ ಮುರಾರಿ ಸೋವಿದೇವನಿಗೆ ಅನೇಕ

---

೧. (ರೈ) ಎಕ XV ಅರಸಿಕೆರೆ (ಪೂರಕ ಸಂಪುಟ) ೨೧೬ ಕ್ರಿ.ಶ. ಸು. ೧೨೦೦. 'ಅರನೆಲೆ'ಗೆ ಕನ್ನಡ ಕನ್ನಡ ನಿಘಂಟಿನಲ್ಲಿ 'ಮುಂದುಗಡೆಯ ಸೈನ್ಯಕ್ಕೆ ಬೆಂಬಲವಾಗಿ ಹಿಂದುಗಡೆಯಿರುವ ಸೈನ್ಯ' -ಎಂದು ಅರ್ಥ ಮಾಡಲಾಗಿದೆ. ಇದು ಸರಿ ಇದ್ದಂತಿಲ್ಲ. ಅರಸು + ನೆಲೆ = ಅರನೆಲೆ ಎಂದಾದರೆ ಯುದ್ಧರಂಗದಲ್ಲಿ ರಾಜನು ಇರುವ ನೆಲೆಯನ್ನು ಅದು ಸೂಚಿಸುವ ಹಾಗೆ ಕಾಣುತ್ತದೆ. ಅದೇ ನಿಘಂಟು ನೀಡಿರುವ ಪಂಡಿತ ಪ್ರಭಣ್ಣನವರ 'ಸೇನಾವ್ಯೂಹ ರಚನೆಯಲ್ಲಿ ಅರಸನಿರಬೇಕಾದ ಸ್ಥಾನ' ಎಂಬ ಅರ್ಥ ಹೆಚ್ಚು ಸಮೀಪವಾಗಿದೆ. ಸಂ.೧ ಪು ೩೯೪.

೨. ಇಆ IX ಹುನಗುಂದ ೯೭ ಕ್ರಿ.ಶ. ೧೧೬೯.

೩. (ರೈ) ಎಕ VII ಶಿಕಾರಿಪುರ ೧೯೭ ಕ್ರಿ.ಶ. ೧೧೮೧.

೪. V. R. Ramachandra Dixitar : War in Ancient India ಪು. ೨೨೮.

೫. (ಮೈ) ಎಕ VII ಮಂಡ್ಯ ೭೮ ಕ್ರಿ.ಶ. ೧೧೯೧.

ದೇಶಗಳನ್ನು ಗೆದ್ದುಕೊಟ್ಟ ವಿಷಯ ತಿಳಿದು ಬರುತ್ತದೆ.[೧] ಸೇನಾಪತಿಗಳು ರಾಜರ ಪರವಾಗಿ ಹೋರಾಡಿ ಯುದ್ಧಗಳನ್ನು ಗೆದ್ದು ಸಾಮ್ರಾಜ್ಯದ ಗಡಿಗಳನ್ನು ವಿಸ್ತರಿಸುತ್ತಿದ್ದರು.

ಶಾಸನಗಳಲ್ಲಿ ಸೇನಾಪತಿ ಎಂಬ ಪದಕ್ಕಿಂತಲೂ ದಂಡನಾಯಕ ಎಂಬ ಪದವೇ ಅಧಿಕವಾಗಿ ಬಳಕೆಯಾಗಿದೆ. ಶಾಸನಗಳಲ್ಲಿ ಒಬ್ಬ ಅಧಿಕಾರಿಗೆ ಅನೇಕ ಸಾರಿ ನಾಲ್ಕೈದು ಅಧಿಕಾರದ ವಿಶೇಷಣಗಳನ್ನು ಬಳಸುವುದರಿಂದ ಅವರು ನಿಶ್ಚಿತವಾಗಿ ಯಾವ ಅಧಿಕಾರವನ್ನು ಹೊಂದಿದ್ದರೆಂಬುದನ್ನು ಹೇಳುವುದು ಸಂದಿಗ್ಧವಾಗುತ್ತದೆ. ದಂಡನಾಯಕ ಪದವೂ ಕೂಡ ಅನೇಕ ಅಧಿಕಾರದ ಜೊತೆ ಉಲ್ಲೇಖಗೊಂಡಿರುವುದುಂಟು. ಕೆಲವು ಸಾರಿ ದಂಡನಾಯಕ ಎನ್ನುವ ಒಂದೇ ಪದ ವಿಶೇಷಣವಾಗಿ ಬಳಕೆಯಾಗಿದೆ. ಪ್ರಾಚೀನ ಕಾಲದಲ್ಲಿ ಸೈನ್ಯದ ಅಧಿಕಾರಿಗಳಿಗೆ ಮತ್ತು ಆಡಳಿತದ ಅಧಿಕಾರಿಗಳಿಗೆ ಅಷ್ಟೇನೂ ವ್ಯತ್ಯಾಸವಿರಲಿಲ್ಲವೆಂದು ಟಿ.ವಿ. ಮಹಾಲಿಂಗಮ್ ಅವರು ಅಭಿಪ್ರಾಯಪಟ್ಟಿದ್ದಾರೆ.[೨] ಬಿ.ಆರ್. ಗೋಪಾಲ್ ಅವರು, ಬಹುತೇಕ ಅಧಿಕಾರಿಗಳು ದಂಡನಾಯಕರೆಂದು ಕರೆಯಲ್ಪಡಲು ಕಾರಣ ಅವರೆಲ್ಲರೂ ಸೈನ್ಯ ಸೇವೆಯನ್ನು ಮಾಡಬೇಕಾಗಿದ್ದುದು ಎಂದು ಅಭಿಪ್ರಾಯಪಡುತ್ತಾರೆ.[೩] ದಂಡನಾಯಕರು ಸೇನಾಪತಿಗಳು ಮಾತ್ರವಲ್ಲದೆ ರಾಜ್ಯದ ವಿವಿಧ ಶಾಖೆಗಳಲ್ಲಿ ಹಿರಿಯ ಅಧಿಕಾರಿಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರೆಂದು ಎ.ವಿ. ನರಸಿಂಹಮೂರ್ತಿ[೪] ಅವರು ಅಭಿಪ್ರಾಯಪಡುತ್ತಾರೆ. 'ಆ ಕಾಲದಲ್ಲಿ ಸೈನ್ಯದ ಅಧಿಕಾರಿಗಳಲ್ಲದ ವಿವಿಧ ಶಾಖೆಗಳ ಹಿರಿಯ ಅಧಿಕಾರಿಗಳಿಗೂ ದಂಡನಾಯಕರೆಂಬ ವಿಶೇಷಣಗಳನ್ನು ಬಳಸುತ್ತಿದ್ದುದು ಆ ಕಾಲದ ಪದ್ಧತಿಯಾಗಿದ್ದಿತೆಂದು ಪಿ.ಬಿ. ದೇಸಾಯಿ ಅವರು ಭಾವಿಸುತ್ತಾರೆ.'[೫]

ಆ ಕಾಲದ ಶಾಸನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಷ್ಟನ್ನು ಗ್ರಹಿಸಬಹುದು; ದಂಡನಾಯಕ ಮೂಲತಃ ಸೈನ್ಯಕ್ಕೆ ಸಂಬಂಧಿಸಿದ ಅಧಿಕಾರವನ್ನು ಹೇಳುವುದಾದರೂ ಈ ವಿಶೇಷಣ ಎಲ್ಲ ಸಾರಿಯೂ ಸೈನ್ಯಾಡಳಿತವನ್ನು ಸೂಚಿಸುವುದಿಲ್ಲ. ಅದು ಬಹುಮಟ್ಟಿಗೆ ಒಂದು ವರಿಷ್ಠ ಹುದ್ದೆಯ ಅಧಿಕಾರಿ ವಿಶೇಷಣದಂತೆ ಬಳಕೆಯಾಗಿದೆ.

ಸೇನಾಪತಿಯ ಹುದ್ದೆ ತುಂಬ ಜವಾಬ್ದಾರಿಯುತವಾದುದಲ್ಲದೆ ಸಂಪೂರ್ಣ ನಂಬಿಕೆಗೆ ಪಾತ್ರವಾದುದು. ಸೂಕ್ತಿಸುಧಾರ್ಣವದಲ್ಲಿ ದಂಡನಾಥನ ಲಕ್ಷಣಗಳನ್ನು ಹೀಗೆ ಹೇಳಲಾಗಿದೆ.

> ಮಧುರಾಳಾಪ ಪ್ರಸಂಗಂ ಪರಹಿತನಮಳಂ ಸನ್ನಾಹಶಸ್ತ್ರಾ
> ಯುಧಸಾರಂ ಭಾರಕಾರ್ಯಂ ರಿಪು ಜಯಪಟು ಸಾಮಂತ ಶಿಷ್ಟೇಷ್ಟನಾನಾ
> ವಿಧ ತಂತ್ರಂ ನಿಷ್ಕಳಂಕಂ ಋಜುಮತಿ ಕುಶಲಂ ಸತ್ಯಶೌಚಾಭಿಮಾನಾಂ
> ಬುಧಿಯಥೋದ್ಯೋಗಿ ಶಕ್ತಿತ್ರಯನಿಧಿಯೆನೆ ಸಂದಿರ್ದವಂ ದಂಡನಾಥಂ॥[೬]

ಮಧುರವಾಗಿ ಮಾತನಾಡಬಲ್ಲವನು, ಪರಹಿತ ಬುದ್ಧಿಯುಳ್ಳವನು, ಪರಿಶುದ್ಧನು, ವಿವಿಧ ಶಸ್ತ್ರಾಯುಧಗಳ ಬಳಕೆ ತಿಳಿದವನು, ಯಾವಾಗಲೂ ಸಿದ್ಧವಾಗಿರುವವನು, ಕಾರ್ಯಭಾರ ಹೊತ್ತವನು, ಶತ್ರುಗಳನ್ನು ಸೋಲಿಸಬಲ್ಲವನು, ಸಾಮಂತ ಮತ್ತು ಇತರ ಆಪ್ತ ಜನರನ್ನು ಹೊಂದಿದವನು, ವಿವಿಧ ತಂತ್ರಗಳಲ್ಲಿ ನಿಪುಣನು, ನೇರವಾದ ಮನಸ್ಸುಳ್ಳವನು, ಬುದ್ಧಿವಂತನು,

---

೧. (ರೈ) ಎಕ VII ಶಿಕಾರಿಪುರ ೯೨ ಕ್ರಿ.ಶ. ೧೧೬೮.

೨. T. V.Mahalingam :South Indian Polity ಪು. ೧೨೦.

೩. B.R. Gopal : The Chalukyas of Kalyana and the Kalachuris ಪು. ೩೯೫.

೪. ಎ.ವಿ. ನರಸಿಂಹಮೂರ್ತಿ : ಪೂರ್ವೋಕ್ತ ಪು. ೮೦.

೫. P.B.Desai : Basvesvara and His Times ಪು. ೧೮೦-೮೧.

೬. ಸೂಕ್ತಿಸುಧಾರ್ಣವಂ ೧೬:೧೬.

ಸತ್ಯವಂತನು, ಶುಚಿವಂತನು ಆಗಿದ್ದು ಸಮುದ್ರದಂತೆ ಸದಾ ಚೈತನ್ಯಶೀಲನೂ ಆಗಿದ್ದು ಮೂರೂ ಶಕ್ತಿಗಳನ್ನು[೧] ಹೊಂದಿರುವವನು ದಂಡನಾಥನಾಗಲು ಸೂಕ್ತ ವ್ಯಕ್ತಿಯಾಗಿರುತ್ತಾನೆ.

ಸಾಮಾನ್ಯವಾಗಿ ಸೈನ್ಯಾಧಿಕಾರಿ ಹುದ್ದೆಗೆ ಕ್ಷತ್ರಿಯನನ್ನು ಆಯ್ಕೆ ಮಾಡುವ ಪದ್ಧತಿ ಇದ್ದಿತಾದರೂ ಬ್ರಾಹ್ಮಣರನ್ನೂ ಆ ಹುದ್ದೆಗಳಿಗೆ ಆಯ್ಕೆ ಮಾಡುತ್ತಿದ್ದುದು ಕಂಡು ಬರುತ್ತದೆ. ಹೊಯ್ಸಳರಲ್ಲಿ ದಂಡನಾಯಕನಾಗಿದ್ದ ಚಂದ್ರಮೌಳಿ ಬ್ರಾಹ್ಮಣನಾಗಿದ್ದು ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದಾನೆ. ಅವನನ್ನು 'ನುತ ಬಲ್ಲಾಳ ನೃಪಾಳ ದಕ್ಷಿಣಭುಜಾದಂಡಂ'[೨] ಎಂದು ಶ್ರವಣಬೆಳಗೊಳದ ಶಾಸನವೊಂದು ಕೀರ್ತಿಸಿದೆ. ಪೋಲಾಳ್ವ ದಂಡನಾಥನು ಅಸಾಧಾರಣ ದಂಡಾಧಿಪತಿಯಾಗಿದ್ದು 'ಸಮರಕ್ಕಾಯುಧಂ ಈವ ಕೆಯ್' ಆಗಿದ್ದು ಚಕ್ರವರ್ತಿಗೆ ಎಲ್ಲ ವಿಷಯಗಳಲ್ಲಿಯೂ ಬೆಂಬಲ ನೀಡುತ್ತಿದ್ದುದು ಕಂಡುಬರುತ್ತದೆ.[೩] ಬಿಜ್ಜಳನ ಚಮೂಪ ಮಹಾದೇವ ದಂಡಾಧಿಪನ ತಂದೆ ಕಾಳಿದಾಸನನ್ನು ಶಾಸನವೊಂದು 'ಆಜಿರಂಗದೊಳ್ ತೊಡರ್ದ್ದಗೆ ಕೊಂದನೆಂಬುದಿದು ಭೇರಿಯ ಘೋಸ' ಎಂದು ಅವನ ಕಾರ್ಯಪಟುತ್ವವನ್ನು ಶ್ಲಾಘಿಸಿದೆ.[೪] ಮೂರನೆಯ ವೀರ ಬಲ್ಲಾಳನ ಮಂತ್ರಿಯಾದ ಬಿಲ ಚೊಕ್ಕಯ್ಯನನ್ನು ಅನೇಕ ವಿಶೇಷಣಗಳೊಂದಿಗೆ ಕೀರ್ತಿಸುತ್ತ 'ಸಮಸ್ತ ಸೇನಾಪತಿ' 'ಬಿಲುವಿದ್ಯೆ ರಾಮ' 'ಶ್ರೀ ವೀರಬಲ್ಲಾಳ ದೇವರ ಕಟ್ಟಿದಲಗೆಂದು' ಶಾಸನವೊಂದು ಕರೆದಿದೆ.[೫]

ಸೇನಾಪತಿಗಳ ಅಧೀನದಲ್ಲಿ ಪಡೆವಳರು ಇರುತ್ತಿದ್ದರು. ಇವರು ಸೈನ್ಯದ ಒಂದು ನಿರ್ದಿಷ್ಟ ಪಡೆಯ ಮುಖ್ಯಸ್ಥರಾಗಿರುತ್ತಿದ್ದರು. ಅನೇಕ ಶಾಸನಗಳು ಪಡೆವಳರ ಉಲ್ಲೇಖವನ್ನು ಮಾಡುತ್ತವೆ. ಕೆಲವು ಪಡೆವಳರು ರಾಜನಿಗೆ ಅತ್ಯಂತ ನಿಷ್ಠಾವಂತರಾಗಿರುತ್ತಿದ್ದರು. ಚಾವಣ ಎಂಬ ಪಡೆವಳನು ಗರುಡನಾಗಿದ್ದನೆಂದು ತಿಳಿದು ಬರುತ್ತದೆ.[೬] ಹಡವಳರು (=ಪಡೆವಳ) ಅನೇಕ ಯುದ್ಧಗಳಲ್ಲಿ ಹೋರಾಡಿರುವ ವಿಷಯ ಶಾಸನಗಳಲ್ಲಿ ನಿರೂಪಿತವಾಗಿದೆ.[೭]

ಸೇನಾಪತಿಯ ಅಧೀನದಲ್ಲಿ ಕರಿ ತುರಗ ಸಾಹಣಿಗಳು ಇರುತ್ತಿದ್ದರು. ಶಾಸನಗಳಲ್ಲಿ 'ಕರಿ ತುರಗ ಪಟ್ಟ ಸಾಹಣಿ'ಗಳ ಉಲ್ಲೇಖಗಳು ಬರುತ್ತದೆ. ಪಟ್ಟ ಅಧಿಕಾರಸೂಚಕ ಪದವಾಗಿದೆ. ಕೆ.ವಿ. ರಮೇಶ್ ಅವರು ಸಾಹಣಿ ಪದವನ್ನು ಸಂಸ್ಕೃತದ 'ಸಾಧನಿಕ' ಪದದಿಂದ ನಿಷ್ಪತ್ತಿ ಮಾಡುತ್ತಾರೆ. ಶಾಸನವೊಂದರ ಆಧಾರದಿಂದ ಅವರು ಯುದ್ಧ ಕುದುರೆಗಳನ್ನು ಅಭಿವೃದ್ಧಿ ಪಡಿಸುವ ಅಧಿಕಾರಿಯೆಂದು ಭಾವಿಸುತ್ತಾರೆ.[೮] ತೆಲುಗು ಶಾಸನಗಳಲ್ಲಿ ಬರುವ ಸಾಹಣಿಗೆ ಅಶ್ವದಳದ ನಾಯಕ ಎಂಬ ಅರ್ಥವನ್ನು ಕೊಡಲಾಗಿದೆ.[೯] ಬಿ. ಆರ್. ಗೋಪಾಲ್ ಅವರು ಆನೆ ಮತ್ತು ಕುದುರೆಗಳಿಗೆ ಶಿಕ್ಷಣ ಕೊಡುವ ಸೈನ್ಯ ಶಿಕ್ಷಣದ

---

೧. ಶಕ್ತಿತ್ರಯಗಳು: ೧) ಮಂತ್ರಶಕ್ತಿ (ಜ್ಞಾನಬಲ), ೨) ಪ್ರಭುಶಕ್ತಿ (ಕೋಶ ದಂಡಬಲ), ೩) ಉತ್ಸಾಹ ಶಕ್ತಿ (ವಿಕ್ರಮಬಲ).

೨. (ಮೈ) ಎಕ II ಶ್ರವಣಬೆಳಗೊಳ ೫೭೧ ಕ್ರಿ.ಶ. ೧೧೮೧.

೩. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

೪. (ರೈ) ಎಕ VIII ಸೊರಬ ೨೭೭ ಕ್ರಿ.ಶ. ೧೧೬೫.

೫. (ಮೈ) ಎಕ IV ಚಾಮರಾಜನಗರ ೨೯೫ ಕ್ರಿ.ಶ. ೧೩೭೭.

೬. (ರೈ) ಎಕ V ಹಾಸನ ೫೭ ಕ್ರಿ.ಶ. ೧೧೫೫.

೭. (ಮೈ) ಎಕ VI ಕೃಷ್ಣರಾಜಪೇಟೆ ೪೩ ಕ್ರಿ.ಶ. ೧೨ ಶಮಾ; (ರೈ) ಎಕ VII ಶಿವಮೊಗ್ಗ ೫ ಕ್ರಿ.ಶ. ೧೨೧೮.

೮. K.V. Ramesh : A History of South Canara ಪು. ೨೫೧.

೯. ಇಗ್ಲಾಆಪ್ರ, ಪು. ೩೧೧.

ಅಧಿಕಾರಿಯನ್ನು ಕರಿತುರಗ ಪಟ್ಟ ಸಾಹಣಿ ಸೂಚಿಸುವುದೆಂದು ಭಾವಿಸುತ್ತಾರೆ.[೧] ಕನ್ನಡ ಶಾಸನಗಳಲ್ಲಿ 'ಅಶ್ವಾಧ್ಯಕ್ಷದ ಹೆಗಡೆ'[೨] ಎಂಬ ಅಧಿಕಾರ ಸೂಚಕ ಪದ ಬಳಕೆಯಾಗಿದ್ದು ಅದು ಅಶ್ವಗಳ ಮೇಲ್ವಿಚಾರಣೆಯ ಅಧಿಕಾರವನ್ನು ಸೂಚಿಸುತ್ತದೆ. ಮಡಿಕೇರಿ ತಾಲ್ಲೂಕಿನ ಒಂದು ಶಾಸನದಲ್ಲಿ ಅಶ್ವಾಧ್ಯಕ್ಷದ ಹರಿಯಣ್ಣನ ಉಲ್ಲೇಖವಿದೆ.[೩]

ಅನೇಕ ಶಾಸನಗಳಲ್ಲಿ ಮಾವುತರ ಉಲ್ಲೇಖಗಳು ಬರುತ್ತವೆ. ರಾಜರ ಪಟ್ಟದಾನೆಗಳನ್ನು ಮತ್ತು ಗಜಸೈನ್ಯದ ಭಾಗವಾದ ಆನೆಗಳನ್ನು ನೋಡಿಕೊಳ್ಳುತ್ತಿದ್ದವರು ಮಾವುತರು. ಬಲಿಷ್ಠ ಪ್ರಾಣಿಯಾದ ಆನೆಯನ್ನು ಪಳಗಿಸುವ ಮತ್ತು ನಿಯಂತ್ರಿಸುವ ಕಾರ್ಯವನ್ನು ಅವರು ನಿರ್ವಹಿಸುತ್ತಿದ್ದರು. ಶಾಸನಗಳಲ್ಲಿ ಅವರನ್ನು 'ಮಾವಂತ' ಎಂದು ಕರೆಯಲಾಗಿದೆ. ಅವರು ಅನೇಕ ಧಾರ್ಮಿಕ ಕಾರ್ಯಗಳಲ್ಲೂ ಭಾಗವಹಿಸಿರುವುದು ಕಂಡುಬರುತ್ತದೆ.[೪]

ಯುದ್ಧಭೂಮಿ ಪರಸ್ಪರ ಕೊಲ್ಲಲು, ನಾಶಮಾಡಲು ಸೇರಿದ ಸ್ಥಳವಾದುದರಿಂದ ಹಿಂಸೆ ಮತ್ತು ಕ್ರೌರ್ಯವನ್ನು ಅಲ್ಲಿ ಗರಿಷ್ಠ ಪ್ರಮಾಣದಲ್ಲಿ ಕಾಣಬಹುದು. ಶಾಸನಗಳಿಂದ ಆ ಕಾಲದ ಯುದ್ಧಗಳ ಭೀಕರ ಚಿತ್ರವೊಂದನ್ನು ಕಾಣುತ್ತೇವೆ. ವೀರರು ಪ್ರಾಣದ ಹಂಗನ್ನು ತೊರೆದು ಹೋರಾಡುತ್ತಿದ್ದರು. ಸೋತು ಜೀವ ಉಳಿಸಿಕೊಳ್ಳುವುದಕ್ಕಿಂತ ಸಾವಿನಿಂದ ದೊರೆಯುವ ವೀರಸ್ವರ್ಗವೇ ಮೇಲೆಂಬ ಭಾವನೆ ಅಧಿಕವಾಗಿ ಇದ್ದಿತು. ಹೊಯ್ಸಳ ರಾಜನು ಸೊರಟೂರಿನಿಂದ ಬೆಳ್ವೊಲದವರೆಗೆ ಭೂಮಿಯನ್ನು ಉಳುಮೆ ಮಾಡಿ, ಸೇವುಣ ಸೈನ್ಯದ ವೀರರ ದೇಹಗಳನ್ನೇ ಗೊಬ್ಬರವಾಗಿ ಚೆಲ್ಲಿದನೆಂದು ಶಾಸನವೊಂದು ತಿಳಿಸುತ್ತದೆ.[೫] ಹುಲಿಕೆರೆಯ ಶಾಸನವೊಂದು ಸಮರಾಂಗಣದ ರೌದ್ರ ಚಿತ್ರವನ್ನು ಹೀಗೆ ಕೊಡುತ್ತದೆ :

> ನೆಣದ ಬಣಂಬೆ ಪೆರ್ವ್ವೆಣದ ಬೆಟ್ಟು ಕರುಳ್ಗಳ ಬಳ್ಳವಳ್ಳಿ ಸಂ
> ದಣಿಸಿದ ಕಂಡ ವರ್ಧಿಸುವ ಪಂದಲೆ ನೆತ್ತರನೀಂಟಿ ರಾಗದಿಂ
> ಕುಣಿ ಕುಣಿದಾಡಿ ಪಾಡುವ ನಿಶಾಟೆಯರೆಂಬಿವಱಿಂದೆ ಸಂಗರಾಂ
> ಗಣಮತಿರೌದ್ರಮಾಗಿಱೆದು ಕೊಲ್ವುದು ಬಪ್ಪನ ಗನ್ಧವಾರಣಂ॥[೬]

ಕೊಬ್ಬಿನ ರಾಶಿ, ಹೆಣಗಳ ರಾಶಿ, ಕರುಳುಗಳ ಬಳ್ಳಿ, ರಾಶಿಬಿದ್ದ ಮಾಂಸದಲ್ಲಿ ಮುಳುಗಿದ ತಲೆಗಳು, ರಕ್ತವನ್ನು ಕುಡಿದು ಕುಣಿದು ಹಾಡುವ ಪಿಶಾಚಿಗಳಿಂದ ಸಮರಾಂಗಣ ಭಯಂಕರವಾಗಿದ್ದಿತು. ಬಲ್ಲಾಳನ ಒಂದು ಶಾಸನದಲ್ಲಿ ಭೂಮಿದೇವಿಯು ಕುಡಿಯಲಾರದಷ್ಟು ರಕ್ತವನ್ನು ಚೆಲ್ಲಿಸಿದನೆಂದೂ ಮಾರ್ಗಗಳು ಮುಂಡಗಳಿಂದ ತುಂಬಿಹೋಗಿ ದಾರಿಯೇ ಕಾಣುತ್ತಿರಲಿಲ್ಲವೆಂದು ವರ್ಣನೆ ಬರುತ್ತದೆ.[೭] ಬಿಜ್ಜಳನ ಶೌರ್ಯವನ್ನು ಕೀರ್ತಿಸುವ ಶಾಸನವೊಂದು ಯುದ್ಧದ ಭೀಕರ ಚಿತ್ರವನ್ನು ಕೊಡುತ್ತದೆ.

> ಸುರಿದ ಕರುಳ್ ಕರುಳ್ತೊಡರೆ ಬಿದ್ದ ಭಟರ್ ಭಟರಸ್ತ್ರಘಾತದಿಂ
> ದುರುಳ್ದ ಹಯಂ ಹಯಂಗಳೆಡೆಯೊಳ್ ಕುಣಿವಟ್ಟೆಗಳಟ್ಟೆಯಿಂ ಭಯಂ

---

೧. B. R.Gopal : ಪೂರ್ವೋಕ್ತ ಪು. ೩೯೫.

೨. (ಮೈ) ಎಕ II ಶ್ರವಣಬೆಳಗೊಳ ೫೭೨ ಕ್ರಿ.ಶ. ೧೨ ಶ.ಮಾ.

೩. (ಮೈ) ಎಕ I ಮಡಿಕೇರಿ ೭ ಕ್ರಿ.ಶ. ೧೨ ಶಮಾ.

೪. (ರೈ) ಎಕ V ಅರಸಿಕೆರೆ ೧೫೦ ಕ್ರಿ.ಶ. ೧೧೯೫; (ರೈ) ಎಕ V ಅರಸಿಕೆರೆ ೪ ಕ್ರಿ.ಶ. ೧೧೯೭(?)

೫. (ರೈ) ಎಕ V ಚನ್ನರಾಯಪಟ್ಟಣ ೧೭೯ ಕ್ರಿ.ಶ. ೧೧೯೦.

೬. (ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೧.

೭. ಎ.ವಿ. ನರಸಿಂಹಮೂರ್ತಿ : ಪೂರ್ವೋಕ್ತ, ಪು. ೮೬.

ಕರತರಮಾಗೆ ನೋಟ್ಟಿ ಮರುಳಾ ಮರುಳಂ ಗೆಲೆ ಸೋವ ತನ್ನಿಶಾ
ಚರಿಯರೆನಲ್ಕೆ ನೋಡಲರಿದಾಯ್ತು ರಣಂ ಗಿರಿದುರ್ಗಮಲ್ಲನಾ ॥[೧]

ಯುದ್ಧರಂಗದಲ್ಲಿ ಸುರಿದಂತಹ ಕರುಳು, ಅವನ್ನು ತೊಡರಿ ಬೀಳುವ ಯೋಧರು, ವೀರರ ಆಯುಧಗಳ ಪೆಟ್ಟಿನಿಂದ ಉರುಳಿದ ಕುದುರೆಗಳು, ಇವುಗಳೆಡೆಯಲ್ಲಿ ಕುಣಿಯುವ ಮುಂಡಗಳು ಭೀಕರವಾಗಿ ಕಂಡು ಇವನ್ನು ನೋಡುತ್ತಿದ್ದ ಮರುಳುಗಳು, ಅವುಗಳನ್ನು ಓಡಿಸುವ ನಿಶಾಚರಿಯರು ರಣರಂಗವನ್ನು ನೋಡಲು ಅಸಾಧ್ಯವಾಗುವಂತೆ ಮಾಡಿದೆ. ಕೆಲವು ಕಡೆ ಯುದ್ಧರಂಗದ ಚಿತ್ರಣದಲ್ಲಿ ಉತ್ಪ್ರೇಕ್ಷೆ, ಕವಿಕಲ್ಪನೆ ಇರಬಹುದಾದರೂ ಶಾಸನಗಳು ಕೊಡುವ ಯುದ್ಧಚಿತ್ರಗಳು ಬಹುತೇಕ ವಾಸ್ತವಕ್ಕೆ ಹತ್ತಿರವಾಗಿರುವಂತೆ ತೋರುತ್ತದೆ.

ಸೈನ್ಯದ ವಿಷಯವನ್ನು ಹೇಳುವಾಗ ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ಚತುರಂಗಬಲವೆಂದು ಸಾಂಪ್ರದಾಯಿಕವಾಗಿ ಹೇಳುವುದು ಕಂಡು ಬರುವುದಾದರೂ ನಮ್ಮ ಅಧ್ಯಯನಾವಧಿಯ ಕೆಲವು ಶತಮಾನಗಳ ಮೊದಲೇ ರಣರಂಗದಲ್ಲಿ ರಥಗಳ ಬಳಕೆ ನಿಂತು ಹೋಗಿದ್ದಿತು. ಎ.ಎಲ್. ಬಾಷಂ ಅವರು ಅಭಿಪ್ರಾಯ ಪಡುವಂತೆ ಕ್ರಿಸ್ತಶಕದ ಆರಂಭದಿಂದೀಚೆಗೆ ಯುದ್ಧಗಳಲ್ಲಿ ರಥಗಳ ಬಳಕೆ ನಿಂತು ಹೋಗಿ ಗುಪ್ತರ ಕಾಲಕ್ಕೇ ಅವು ಕೇವಲ ವಸ್ತುಗಳನ್ನು ಸಾಗಿಸಲು ಬಳಕೆಯಾಗುತ್ತಿದ್ದವು.[೨] ಉಳಿದಂತೆ ಗಜಬಲ, ಅಶ್ವಸೈನ್ಯ ಮತ್ತು ಪದಾತಿಗಳ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತವೆ. ಸಮಕಾಲೀನ ಶಾಸನಗಳು, ವೀರಗಲ್ಲುಗಳ ಶಿಲ್ಪಗಳು ಈ ಅಭಿಪ್ರಾಯವನ್ನು ಸಂಪೂರ್ಣವಾಗಿ ಬೆಂಬಲಿಸುತ್ತವೆ.

### ಗಜ ಸೈನ್ಯ:

ಗಜ ಸೈನ್ಯ ಪ್ರಾಚೀನ ಕರ್ನಾಟಕದ ಬಹು ಪ್ರಬಲ ಶಕ್ತಿಗಳಲ್ಲಿ ಒಂದಾಗಿದ್ದಿತ್ತು. ಆನೆಗಳು ವಿವಿಧೋಪಯೋಗಿಗಳಾಗಿದ್ದವು. ಯುದ್ಧಭೂಮಿಗೆ ಹೋಗುವ ಮಾರ್ಗದ ಮರಗಿಡ ಪೊದೆಗಳನ್ನು ನಾಶಪಡಿಸಿ ದಾರಿ ಮಾಡಬಲ್ಲವಾಗಿದ್ದವು. ರಣರಂಗದಲ್ಲಿ ಶತ್ರುಗಳ ಮೇಲೆ ನುಗ್ಗಿ ಸೈನ್ಯವನ್ನು ಅಲ್ಲೋಲಕಲ್ಲೋಲ ಮಾಡುತ್ತಿದ್ದವು.[೩] ಮದಿಸಿದ ಆನೆಗಳು ಯುದ್ಧರಂಗದಲ್ಲಿ ದೊಡ್ಡ ಕೋಲಾಹಲವನ್ನೇ ಮಾಡುತ್ತಿದ್ದವು. ಯಶಸ್ತಿಲಕ ಚಂಪೂವಿನಲ್ಲಿ ಬೇರೆ ಬೇರೆ ಆನೆಗಳ ವಿವಿಧ ಮದಸ್ಥಿತಿಗಳನ್ನು ತಿಳಿಸಲಾಗಿದೆ.[೪] ದಕ್ಷಿಣ ಭಾರತದಲ್ಲಿ ಆನೆಗಳು ಸಮೃದ್ಧವಾಗಿ ದೊರೆಯುತ್ತಿದ್ದುದರಿಂದ ಅವುಗಳನ್ನು ಯುದ್ಧಗಳಲ್ಲಿ ವಿಶೇಷವಾಗಿ ಬಳಸುತ್ತಿದ್ದರು. ದಕ್ಷಿಣ ಭಾರತದ ಐಶ್ವರ್ಯ ಮತ್ತು ಆನೆಗಳ ಮೇಲೆ ದೆಹಲಿಯ ಸುಲ್ತಾನರಿಗೆ ವಿಶೇಷವಾದ ಆಸಕ್ತಿ ಇದ್ದು, ಅನೇಕ ಸಂದರ್ಭಗಳಲ್ಲಿ ಆಕ್ರಮಣ ಮಾಡಿ ಸೇವುಣ ಮತ್ತು ಹೊಯ್ಸಳರಿಂದ ಅವುಗಳನ್ನು ಪಡೆದಿರುವುದು ಕಂಡುಬರುತ್ತದೆ.[೫] ಅಗ್ನಿ ಪುರಾಣವು ಒಂದು ಆನೆಯ ಮೇಲೆ ಆರು ಜನ ಯೋಧರು ಕುಳಿತು ಯುದ್ಧಮಾಡಬಹುದೆಂದು ಸೂಚಿಸುತ್ತದೆ; ಇಬ್ಬರು ಕೊರಳಿನ ಮೇಲೆ ದಂಡವನ್ನು ಹಿಡಿದು, ಇಬ್ಬರು ಬೆನ್ನ ಮೇಲೆ ಕುಳಿತ ಬಿಲ್ಲುಗಾರರು ಮತ್ತು ಇನ್ನಿಬ್ಬರು ಹಿಂಭಾಗದಲ್ಲಿ ಖಡ್ಗ ಹಿಡಿದು

---

೧. (ರೈ) ಎಕ VII ಶಿಕಾರಿಪುರ ೧೦೨ ಕ್ರಿ.ಶ. ೧೧೬೨. ಈ ಶಾಸನ ಪದ್ಯ ಬಹುಮಟ್ಟಿಗೆ ಪಂಪಭಾರತದ ೯ನೆಯ ಆಶ್ವಾಸದಲ್ಲಿ ಬರುವ ಅರ್ಜುನನ ಪರಾಕ್ರಮದ ವರ್ಣನೆಯ ನೇರ ಪ್ರಭಾವಕ್ಕೆ ಒಳಗಾಗಿದೆ. ಪಂ.ಭಾ. ೯-೫೭.

೨. A. L. Basham : The Wonder that was India. ಪು. ೧೩೦.

೩. V.R. Ramachandra Dixitar : ಪೂರ್ವೋಕ್ತ ಪು. ೧೭೧.

೪. K.K. Handiqui : Yashastilaka and Indian Culture. ಪು. ೧೧೧.

೫. S. Krishnaswamy Iyengar : South India and Muhammadan invasions ಪು. ೯೪

V. Srinivasan : 'A History of Allaudin Mohammed' ಜೆಐಯುಬಿ XVIII-i New Series, ಪು. ೫.

ಯುದ್ಧಮಾಡಬಹುದೆಂದು ತಿಳಿಸುತ್ತದೆ. ಒಂದು ಆನೆಯನ್ನು ರಕ್ಷಿಸಲು ಮೂರು ಜನ ರಾವುತರಿರಬೇಕೆಂದು ತಿಳಿಸುತ್ತದೆ.[೧] ಎಂ. ಚಿದಾನಂದಮೂರ್ತಿಯವರು ಬೇಗೂರಿನ ಶಿಲ್ಪದ ಆಧಾರದ ಮೇಲೆ ಸವಾರನಲ್ಲದೆ ಆನೆಯ ಮೇಲೆ ಇಬ್ಬರು ಸೈನಿಕರಿರುತ್ತಿದ್ದರೆಂದು ತಿಳಿಸಿದ್ದಾರೆ.[೨] ಕೋಲಾರದ ಕೋಲಾರಮ್ಮನ ದೇವಾಲಯದ ಆವರಣದಲ್ಲಿರುವ ವೀರಗಲ್ಲಿನಲ್ಲಿ ಆನೆಯ ಮೇಲೆ ಒಟ್ಟು ನಾಲ್ಕು ಜನರಿದ್ದಾರೆ. ಒಬ್ಬ ಕೊರಳಿನ ಮೇಲೆ (ಆನೆಯನ್ನು ನಡೆಸುವವನು), ಇಬ್ಬರು ಬೆನ್ನಿನ ಮೇಲಿರುವ ಅಂಬಾರಿಯ ಮೇಲೆ, ಇನ್ನೊಬ್ಬ ಹಿಂಭಾಗದಲ್ಲಿ ಹೋರಾಡುವಂತೆ ಚಿತ್ರಿಸಲಾಗಿದೆ.

ಆನೆಗಳ ಜೊತೆ ಹೋರಾಡಿ ಮಡಿದ ಅನೇಕ ವೀರರ ವಿಷಯ ತಿಳಿದು ಬರುತ್ತದೆ. ವೀರಬಲ್ಲಾಳನಿಗೂ ಸಂಕಮನಿಗೂ ಮಡವಳ್ಳಿಯಲ್ಲಿ ಕಾಳಗವಾದಾಗ ಬಿಪ್ಪರದ ಬಮ್ಮಣ ಆನೆಯ ಮಸ್ತಕವನಿಱಿದು ಸುರಲೋಕ ಪ್ರಾಪ್ತವಾದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೩] ಕೆಂಬಾಳಿನ ಒಂದು ಶಾಸನ ಮೂರನೆಯ ನರಸಿಂಹನಿಗೂ ರಾಮನಾಥನಿಗೂ ಯುದ್ಧವಾದಾಗ 'ಆನೆಗಾಳೆಗ'ದಲ್ಲಿ ಕೆಂಬಾಳ ಯಿರಿಗೆಸೆಟ್ಟಿಗೆ ಹೊರಯ್ಯ ಹೋರಾಡಿ ಮಡಿದ ವಿಷಯವನ್ನು ತಿಳಿಸುತ್ತದೆ.[೪] ಸಾವಂತ ಬೂವಯ್ಯನನ್ನು 'ಆನೆವೇಂಟೆಕಾಱ'ನೆಂದು ಒಂದು ಶಾಸನ ಕರೆದಿದೆ. ಕಾಟಿವಯ್ದಿಮಲೆಯಂ ಪೊಕ್ಕಾಡುತಂ ತಂಮ್ಮ ದೋರ್ಬ್ಬಲದಿಂದುಗ್ರಮದೇಭಮಂ ಪಿಡಿದಚ್ಚಾಳುಕ್ಯ ಚಕ್ರೇಶ್ವರ(ಂ)ಗೊರ್ಲವಿಂ ದೋರ್ಬ್ಬಲಮಂ ಕೊಟ್ಟವರ್ಗ್ಗೆ ಸಾವನ್ತನಾಮಾಂಕುಶಂಗಳನಿನ್ತನ್ವಿತಮಾಯ್ತು ತನ್ನ ಕಾಲದೊಳು ಸಾವಂತ ನಾಮಾಂಕುಶ'[೫]ವೆಂದು ಅವನಿಗೆ ಹೆಸರಾಯಿತು. ಅವನು ಕಾಟಿವಯ್ದಿಮಲೆಯಲ್ಲಿ ಆನೆಗಳನ್ನು ತನ್ನ ಸಾಮರ್ಥ್ಯದಿಂದ ಹಿಡಿದು ರಾಜನ ಮೆಚ್ಚುಗೆ ಪಡೆದನು, ಸಾಮಂತರಿಗೆ ಅಂಕುಶದಂತೆ ಇದ್ದು 'ಸಾವಂತನಾಮಾಂಕುಶ'ನೆಂದೇ ಪ್ರಖ್ಯಾತನಾಗಿದ್ದನು. ಪಾಠ ತುಂಬ ಅಸ್ಪಷ್ಟವಾಗಿರುವ ಒಂದು ಶಾಸನದಲ್ಲಿ ಒಕ್ಕಲನ್ ಆಳುತನಂಗೆಯೆ ಆನೆಯ ಕೊನ್ದು ಕಾದಿ... ಕೊಣ್ದುಬಿದ್ದನ್... ಬಿಯಕ್ಕಟ್ಟಿಡಿಯೊಳ್[೬] ಎಂದು ಬರುತ್ತದೆ. ಆನೆಗಾಳಗದಲ್ಲಿ ವೀರನೊಬ್ಬ ಮಡಿದ ವಿಷಯವನ್ನು ಇದು ತಿಳಿಸುತ್ತದೆ. ವೀರಬಲ್ಲಾಳನ ಆಜ್ಞೆಯಿಂದ ಮಸಣನ ಮಗನಾದ ಬಿಟ್ಟಯನು ಘಂಟೆಯಿಂದ ಕೂಡಿದ ಆನೆಯನ್ನು ಕುದುರೆಯ ಮೇಲಿನಿಂದ ಆಕ್ರಮಣ ಮಾಡಿ ಇರಿದ ವಿಷಯ ತಿಳಿದು ಬರುತ್ತದೆ.[೭] ಬಳ್ಳಿಗಾವೆಯ ಒಂದು ಶಾಸನ ಮಾದಿಸೆಟ್ಟಿ ಎಂಬುವನು ಆನೆಯನ್ನು ಕೆಡವಿ ಹೋರಾಡಿ ಮಡಿದ ವಿಷಯವನ್ನು ತಿಳಿಸುತ್ತದೆ.[೮] ತರೀಕೆರೆ ತಾಲ್ಲೂಕಿನ ಶಾಸನದಲ್ಲಿ ನಾಗಗಾವುಂಡನ ಮಗ ಕೇತನ ಪರಾಕ್ರಮವನ್ನು ವರ್ಣಿಸುವಾಗ ಅವನ ಪರಾಕ್ರಮವನ್ನು ಆನೆಯು ರಣರಂಗದಲ್ಲಿ ನಡೆಸುವ ಕೋಲಾಹಲಕ್ಕೆ ಸಮೀಕರಿಸಲಾಗಿದೆ.

ಛಟ ಛಟ ಛಚ್ಛಟಚ್ಛಟ ಎನಲ್ ಮುಱಿದತ್ತಿದಿರಾಂತ ಬೀರರಂ<br>
ಘಟೆ ಘಟೆ ತಾಗೆ ನುರ್ಗ್ಗಿದುದು ಕೋಟಿಲುಗಳ್ ನೆಳಿಲಂ ನೆಡಿಲ್ಲೆನಲ್<br>
ಭಟರನನೇಕರಂ ಭರದೆ ಸೀಳ್ದುದು ಸಜ್ಜ್ಱನೆ ಸಜ್ಜ್ಱನಲ್ ಮದೋ<br>
ತ್ಕಟಮಿದೆ ಕೇತನೆಂಬ ಕಲಿನಾಗಗವುಂಡನ ಗಂಧವಾರಣಂ॥[೯]

---

೧. V.R.Ramachandra Dixitar : ಪೂರ್ವೋಕ್ತ ಪು. ೧೭೦.

೨. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೨೬೪.

೩. (ರೈ) ಎಕ VI ಮೂಡಗೆರೆ ೩೩ ಕ್ರಿ.ಶ. ೧೧೭೯ (?)

೪. (ರೈ) ಎಕ V ಚನ್ನರಾಯಪಟ್ಟಣ ೨೦೬ ಕ್ರಿ.ಶ. ಸು. ೧೨೬೦ (?)

೫. (ರೈ) ಎಕ VII ಹೊನ್ನಾಳಿ ೭ ಕ್ರಿ.ಶ. ೧೨೦೪.

೬. ಎಸ್ಐಐ IX(i) ಪುಂಗನೂರು ೧೨

೭. ಎಂಎಆರ್ ೧೯೩೧ ಬೇಲೂರು ೨ ಕ್ರಿ.ಶ. ೧೧೭೯.

೮. (ರೈ) ಎಕ VII ಶಿಕಾರಿಪುರ ೧೨೨ ಕ್ರಿ.ಶ. ೧೨೮೪.

೯. (ರೈ) ಎಕ VI ತರೀಕೆರೆ ೪೨ ಕ್ರಿ.ಶ. ೧೨೦೫.

ಆನೆಗಳು ಪರಸ್ಪರ ಹೋರಾಡಿ ಅವುಗಳ ದಂತಗಳು ಮುರಿದು ಬಿದ್ದವು. ಅನೇಕ ಭಟರನ್ನು ಸೀಳಿ ಮದಿಸಿದ ಆನೆಯಂತೆ ಕೇತನು ಮೆರೆದನೆಂದು ವರ್ಣಿಸುತ್ತದೆ. ಎರಡನೆಯ ನಾರಸಿಂಹನ ಪರಾಕ್ರಮವನ್ನು ಹೇಳುವಾಗ 'ಕಲಿನೃಸಿಂಹನ ಪಟ್ಟದಾನೆ ಮೆಟ್ಟದ ರಣರಂಗವಿಲ್ಲ'[೧] ಎಂದು ಶಾಸನ ಹೇಳುತ್ತದೆ. ಒಬ್ಬ ರಾಜನಲ್ಲಿ ಎಷ್ಟೇ ಗಜ ಸೈನ್ಯವಿದ್ದರೂ ರಾಜನ ಒಂದು ಆನೆಗೆ ಮಾತ್ರ ವಿಶೇಷ ಪ್ರಾಶಸ್ತ್ಯವಿರುತ್ತಿತ್ತು. ಅದನ್ನು ಸಾಮಾನ್ಯವಾಗಿ ರಾಜನಲ್ಲದೆ ಅನ್ಯರು ಬಳಸುವ ಹಾಗಿರಲಿಲ್ಲ. ಅದನ್ನು ಪಟ್ಟದ ಆನೆ ಎಂದು ಕರೆಯುತ್ತಿದ್ದರು. ಇದೇ ರೀತಿ ಪಟ್ಟದ ಕುದುರೆ ಇದ್ದಿರುವ ಸಾಧ್ಯತೆ ಇದೆ. ಸೈನ್ಯದ ಮೇಲೆ ಆನೆಯನ್ನು ನುಗ್ಗಿಸಿದಾಗ ಎಷ್ಟೋ ವೀರರು ಅದರ ಕಾಲ್ತುಳಿತಕ್ಕೆ ಸಿಕ್ಕಿ ಸಾಯುತ್ತಿದ್ದರು. ಕೇತಯನಾಯಕನೆಂಬುವನು ಆನೆಯ 'ಕಾಲಬಾಯಲಿ ಬಿದ್ದ'ನೆಂದು ಶಾಸನವೊಂದು ತಿಳಿಸುತ್ತದೆ.[೨] ಆನೆಯನ್ನು ನಿಯಂತ್ರಿಸಲು ಅಂಕುಶವನ್ನು ಉಪಯೋಗಿಸುತ್ತಿದ್ದರು. ಅದರ ಉಲ್ಲೇಖ ಶಾಸನವೊಂದರಲ್ಲಿ ಬಂದಿದೆ.[೩] ಬಸವಣ್ಣನವರ ವಚನಗಳಲ್ಲಿಯೂ ಅದರ ಉಲ್ಲೇಖ ಬಂದಿದೆ.[೪]

ಮದಿಸಿದ ಆನೆಗಳನ್ನು ನಿಯಂತ್ರಿಸುವುದು ಮತ್ತು ಯುದ್ಧ ರಂಗದಲ್ಲಿ ಆನೆಗಳನ್ನು ಎದುರಿಸಿ ಹೋರಾಡಿ ಕೊಲ್ಲುವುದು ಸಾಹಸದ ಕಾರ್ಯಗಳೆಂದು ಪರಿಗಣಿತವಾಗಿದ್ದವು. ಹನ್ನೆರಡನೆಯ ಶತಮಾನದ ಶರಣರಲ್ಲೊಬ್ಬನಾದ ಮಡಿವಳ ಮಾಚಯ್ಯನ ವಿಗ್ರಹವನ್ನು ಅಮ್ಮಿನಭಾವಿಯ ಮಡಿವಳರು ಪ್ರತಿಷ್ಠಾಪಿಸಿದ ವಿಷಯವನ್ನು ಶಾಸನ ತಿಳಿಸುತ್ತದೆ.[೫] ಈ ಶಾಸನದ ಮೇಲ್ಭಾಗದ ಶಿಲ್ಪದಲ್ಲಿ ಆನೆಯನ್ನು ಮರ್ದಿಸುತ್ತಿರುವುದನ್ನು ಚಿತ್ರಿಸಲಾಗಿದೆ. ಇದೇ ರೀತಿ ಆನೆಯನ್ನು ಮರ್ದಿಸುತ್ತಿರುವ ಶಿಲ್ಪ ಮುಳುಗುಂದದಲ್ಲಿಯೂ ದೊರೆಯುತ್ತದೆ.[೬]

ಆ ಕಾಲದ ಯುದ್ಧಗಳಲ್ಲಿ ಆನೆಗಳನ್ನು ಸಾರ್ವತ್ರಿಕವಾಗಿ ಬಳಸುತ್ತಿದ್ದರೆಂದು ಶಾಸನ ಮತ್ತು ಶಿಲ್ಪಗಳ ಆಧಾರದಿಂದ ಹೇಳಬಹುದು.

**ಅಶ್ವದಳ:**

ಆ ಕಾಲದ ಯುದ್ಧಗಳಲ್ಲಿ ಕುದುರೆಗಳಿಗೆ ವಿಶೇಷ ಪ್ರಾಶಸ್ತ್ಯವಿದ್ದಿತು. ತುರುಗೋಳಾಗಿರಲಿ, ಇತರ ಯುದ್ಧಗಳಾಗಿರಲಿ ಕುದುರೆಗಳು ಪ್ರಮುಖ ಪಾತ್ರವನ್ನು ವಹಿಸಿವೆ. ವೇಗದ ಚಲನೆಗೆ ಹೆಸರುವಾಸಿಯಾದ ಕುದುರೆಗಳು ಆ ಕಾಲದ ಯುದ್ಧಗಳಲ್ಲಿ ಸೈನ್ಯದ ಪ್ರಮುಖ ಶಕ್ತಿಯಾಗಿದ್ದುದರಲ್ಲಿ ಆಶ್ಚರ್ಯವಿಲ್ಲ. ಹೆಚ್ಚು ಸಂಖ್ಯೆಯ ಆನೆಗಳನ್ನಿಟ್ಟುಕೊಳ್ಳುವುದಾಗಲಿ ಅವನ್ನು ಸಂರಕ್ಷಿಸುವುದಾಗಲಿ ಸುಲಭದ ಕೆಲಸವಲ್ಲ. ಆನೆಗೆ ಹೋಲಿಸಿದರೆ ಕುದುರೆಗಳ ಸಂರಕ್ಷಣೆ ಸುಲಭವಾಗಿದ್ದಿತೆಂದು ಕಾಣುತ್ತದೆ. ಹೀಗಾಗಿ ಪದಾತಿಯನ್ನು ಬಿಟ್ಟರೆ ಉಳಿದಂತೆ ಹೆಚ್ಚು ಸೈನ್ಯ ಅಶ್ವದಳದ್ದಾಗಿರುತ್ತಿತ್ತು. ಸೇವುಣರ ಸೈನ್ಯದಲ್ಲಿ ಹನ್ನೆರಡು ಸಾವಿರ

---

೧. (ರೈ) ಎಕ XII ದಾವಣಗೆರೆ ೨೫ ಕ್ರಿ.ಶ. ೧೨೨೪.

೨. (ರೈ) ಎಕ V ಚನ್ನರಾಯಪಟ್ಟಣ ೨೩೨ ಕ್ರಿ.ಶ. ೧೨೯೦.
ಈ ರೀತಿ ಆನೆಯೊಡನೆ ಹೋರಾಡಿ ಅದರ ಕಾಲ್ತುಳಿತಕ್ಕೆ ಸಿಕ್ಕಿ ಸತ್ತ ವ್ಯಕ್ತಿಯನ್ನು ಹೇಳುವ ವೀರಗಲ್ಲುಗಳು ದೊರೆಯುತ್ತವೆ. ಎಆರ್‌ಐಇ ಹಿರೇಕೆರೂರು ಕ್ರಿ.ಶ. ೧೩ ಶಮಾ.

೩. (ರೈ) ಎಕ VII ಹೊನ್ನಾಳಿ ೭ ಕ್ರಿ.ಶ. ೧೨೦೪.

೪. ಬ.ವ. ಕರಿ ಘನ ಅಂಕುಶ ಕಿಱಿದೆನ್ನಬಹುದೆ? (೬)
ಕರಿಯಂಜುವುದು ಅಂಕುಶಕಯ್ಯಾ (೨೫)

೫. ಕಭಾ : ೬:೪ ಕ್ರಿ.ಶ. ೧೨೮೪.

೬. ಅದೇ.

ಅಶ್ವಾರೋಹಿಗಳಿದ್ದರೆಂದು ಒಂದು ಶಾಸನ ತಿಳಿಸಿದರೆ[೧] ಚಾಳುಕ್ಯ ವಿಕ್ರಮಾದಿತ್ಯನ ಸಾಮಂತರಾದ ಸಿಲಾಹಾರರ ಸೈನ್ಯದಲ್ಲಿ ಹದಿನೆಂಟು ಸಾವಿರ ಕುದುರೆಗಳಿದ್ದುವೆಂದು ಒಂದು ಶಾಸನ ಹೇಳುತ್ತದೆ.[೨] ಅಬ್ಬಲೂರಿನ ಶಾಸನವೊಂದು ಸೇವುಣರ ಸಾಮಂತ ಸಿಂಘಣದೇವರಸ ಬನವಾಸಿಯನ್ನು ಆಳುತ್ತಿರುವಾಗ ಬೆಳಗುವಟ್ಟಿಯ ಈಶ್ವರದೇವ ಹಲವು ಮನ್ನೆಯರೊಂದಿಗೆ ಸಾತಳಿಗೆ ನಾಯಕನೊಂದಿಗೆ ಹತ್ತು ಸಾವಿರ ಆಳು, ಸಾವಿರ ಕುದುರೆಗಳ ಜೊತೆಯಲ್ಲಿ ಅಬ್ಬಲೂರನ್ನು ಮುತ್ತಿ ತುರುಗಳನ್ನು ಅಪಹರಿಸಿದ ವಿಷಯವನ್ನು ತಿಳಿಸುತ್ತದೆ.[೩]

ಟಿ.ವಿ. ಮಹಾಲಿಂಗಮ್ ಅವರು, ವಿಜಯನಗರ ಸಾಮ್ರಾಜ್ಯದಲ್ಲಿ ಕುದುರೆಗೆ ಒಂದು ನಿಶ್ಚಿತವಾದ ರಾಜ ಚಿಹ್ನೆಯನ್ನು ಮಾಡುವ ಪದ್ಧತಿ ಇದ್ದಿತೆಂದೂ, ಅಂಥ ಗುರುತು ಮಾಡಿದ ಕುದುರೆಗಳನ್ನು ರಾವುತರಿಗೆ ನೀಡಿ ಆ ಕುದುರೆಗಳ ಸಂರಕ್ಷಣೆಗೆ ಪ್ರತಿತಿಂಗಳಿಗೆ ಇಷ್ಟೆಂದು ವೆಚ್ಚವನ್ನು ಭರಿಸುತ್ತಿದ್ದರೆಂದೂ ಈ ಪದ್ಧತಿ ಬಹುಶಃ ಮುಸ್ಲಿಮರ ಪದ್ಧತಿಯಾಗಿದ್ದು ಅದನ್ನು ವಿಜಯನಗರದ ಅರಸರು ಅನುಸರಿಸಿರುವರೆಂದು ಅಭಿಪ್ರಾಯಪಟ್ಟಿದ್ದಾರೆ.[೪] ಆದರೆ ಶಾಸನಗಳಲ್ಲಿ ಕಂಡು ಬರುವ 'ಕುರುಹಿನ ಕುದುರೆ'ಯ ಉಲ್ಲೇಖ 'ರಾಜರ ಗುರುತುಮಾಡಿದ ಕುದುರೆ' ಎಂಬ ಅರ್ಥವನ್ನು ನೀಡುವುದಾದರೆ ಈ ಪದ್ಧತಿ ಮುಸ್ಲಿಂ ಪೂರ್ವದಲ್ಲಿಯೇ ದಕ್ಷಿಣಭಾರತದಲ್ಲಿ ಇದ್ದಿತೆಂದು ಹೇಳಬೇಕಾಗುತ್ತದೆ. ಏಕೆಂದರೆ ಕುರುಹಿನ ಕುದುರೆಯ ಉಲ್ಲೇಖ ಕ್ರಿ.ಶ. ೧೨೪೭ ರ ಹೊನ್ನಾಳಿ ಶಾಸನದಲ್ಲಿ ಕಂಡುಬರುತ್ತದೆ.[೫] ಅಲ್ಲದೆ ಕುದುರೆಗಳಿಗೆ ಕ್ರಮಸಂಖ್ಯೆ ಹಾಕುವ ಪದ್ಧತಿ ಇದ್ದಿತೆಂದೂ, 'ಹಮ್ಮೀರಮರ್ದನ' ಗ್ರಂಥದಲ್ಲಿ ರಾಜನ ಹೆಸರನ್ನು ಗುರುತು ಮಾಡಿದ ಅಶ್ವವೊಂದನ್ನು ಬಳುವಳಿಯಾಗಿ ಕೊಟ್ಟ ವಿಷಯ ನಿರೂಪಿತವಾಗಿರುವುದನ್ನು ಎ. ವಿ. ನರಸಿಂಹಮೂರ್ತಿಯವರು ತಿಳಿಸಿದ್ದಾರೆ.[೬]

ತುರುಗೋಳಿನ ವಿಷಯವನ್ನು ಹೇಳುವ ಅನೇಕ ಶಾಸನಗಳಲ್ಲಿ ಕುದುರೆಗಳು ಬಳಕೆಯಾಗಿರುವುದನ್ನು ಕಾಣಬಹುದು. ಕ್ಷಿಪ್ರ ಧಾಳಿಗೆ ಅವು ಅತ್ಯುಪಯುಕ್ತವಾಗಿದ್ದವು. ಅನೇಕ ವೀರರು ರಾವುತರೊಂದಿಗೆ ಹೋರಾಡುವಾಗ ರಾವುತರೊಂದಿಗೆ ಕುದುರೆಗಳನ್ನೂ ಕೊಂದ ವಿಷಯ ಶಾಸನಗಳಲ್ಲಿ ಉಕ್ತವಾಗಿದೆ. ವೀರನಾರಸಿಂಗದೇವನ ಮೇಲಿನ ಯುದ್ಧದಲ್ಲಿ ಬೈಚನು 'ಕುದುರೆ ತಿವಿದು ಬಿದ್ದ' ಸಂಗತಿ ತಿಳಿದು ಬರುತ್ತದೆ.[೭] ತುರುಗೋಳಿಗೆ ಬಂದಾಗ ದನಗಳನ್ನು ಓಡಿಸಿಕೊಂಡು ಹೋಗಲು ಕುದುರೆಗಳು ತುಂಬ ಉಪಯುಕ್ತವಾಗುತ್ತಿದ್ದವು. ತುರುಗಳನ್ನು ರಕ್ಷಿಸಲು ಹೋರಾಡುತ್ತಿದ್ದ ವೀರರು ವೈರಿಗಳ ವೇಗ ಮತ್ತು ಶಕ್ತಿಯನ್ನು ಕುಂಠಿತಗೊಳಿಸಲು ಕುದುರೆಗಳನ್ನು ಇರಿಯುತ್ತಿದ್ದರು. ಇದನ್ನು ತಿಳಿಸುವ ಅನೇಕ ಶಾಸನಗಳು ದೊರೆಯುತ್ತವೆ.[೮]

ಅನೇಕ ಶಾಸನಗಳಲ್ಲಿ 'ಕುದುರೆಗಾಳಿಗ'ದ ಉಲ್ಲೇಖ ಬರುತ್ತದೆ. ಇದು ಅಶ್ವದಳಗಳ ಮಧ್ಯೆ ನಡೆದ ಯುದ್ಧವನ್ನು ಸೂಚಿಸುತ್ತದೆ.[೯]

---

೧. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

೨. ಕಇ II ಅಕ್ಕಲಕೋಟೆ ೧೨ ಕ್ರಿ.ಶ. ೧೧೧೪.

೩. ಎಇ V ಅಬ್ಬಲೂರು ೨೫ ಎಫ್ ಕ್ರಿ.ಶ. ೧೨೧೯.

೪. T.V. Mahalingam : ಪೂರ್ವೋಕ್ತ ಪು. ೧೮೦.

೫. (ರೈ) ಎಕ VII ಹೊನ್ನಾಳಿ ೫೫ ಕ್ರಿ.ಶ. ೧೨೪೭.

೬. ಎ.ವಿ. ನರಸಿಂಹಮೂರ್ತಿ : ಪೂರ್ವೋಕ್ತ, ಪು. ೮೬-೮೭.

೭. ಎಂಎಆರ್ ೧೯೪೩ ಬೇಲೂರು ೩ ಕ್ರಿ.ಶ. ೧೨೭೧.

೮. (ರೈ) ಎಕ VII ಹೊನ್ನಾಳಿ ೩೫ ಕ್ರಿ.ಶ. ೧೧೮೭; ಕಇ IV ಹಿರೇಕೆರೂರು ४३ ಕ್ರಿ.ಶ. ೧೨೬೪.
(ರೈ) ಎಕ VI ಚಿಕ್ಕಮಗಳೂರು ೩೬ ಕ್ರಿ.ಶ. ೧೨೯೨.

೯. (ರೈ) ಎಕ XII ತಿಪಟೂರು ೨೧ ಕ್ರಿ.ಶ. ೧೨೩೭; ಕಶಾಸಾಂಅ, ಪು. ೨೬೬.

ಆನೆಗಳು ಈ ನಾಡಿನಲ್ಲಿ ವಿಪುಲ ಸಂಖ್ಯೆಯಲ್ಲಿ ದೊರೆಯುತ್ತಿದ್ದಂತೆ ಜಾತ್ಯಶ್ವಗಳು ದೊರೆಯುತ್ತಿರಲಿಲ್ಲ. ತುರುಷ್ಕ ದೇಶದ ಕುದುರೆಗಳು ಪ್ರಸಿದ್ಧವಾಗಿದ್ದವು.[1] ಅಲ್ಲದೆ ಕಾಂಬೋಜ, ಸಿಂಧು, ಅರಟ್ಟ (ಪಂಜಾಬ್), ವನಾಯು(ಭಾರತದ ಪಶ್ಚಿಮ ಭಾಗದ ರಾಜ್ಯ), ಬಾಹ್ಲಿಕ, ಪಾಪೆಯ, ಸೌವೀರ ತೈತಲದ (=ಕಳಿಂಗ) ತಳಿಗಳ ಕುದುರೆಗಳು ತುಂಬಾ ಬೇಡಿಕೆಯಲ್ಲಿದ್ದವು.[2] ಅಶ್ವಶಾಸ್ತ್ರವನ್ನು ಸಂಪಾದಿಸಿರುವ ಜಿ.ಜಿ. ಮಂಜುನಾಥನ್ ಅವರು ಬಾಗೇವಾಡಿಯ ಶಾಸನವೊಂದರ ಆಧಾರದ ಮೇಲೆ ಆ ಕೃತಿಯ ಕರ್ತೃ ಅಭಿನವಚಂದ್ರನ ಕಾಲ ಹನ್ನೆರಡನೆಯ ಶತಮಾನದ ಮಧ್ಯಭಾಗವೆಂದು ನಿರ್ಧರಿಸಿದ್ದಾರೆ.[3] ಅಭಿನವಚಂದ್ರನು ನರ್ಮದೆಯ ಉತ್ತರಕ್ಕಿರುವ ಐವತ್ನಾಲ್ಕು ಕ್ಷೇತ್ರಗಳ ಕುದುರೆಗಳು ಕುಲ, ಬಲ, ತೇಜಸ್ವರೂಪ, ಜವ ಪ್ರಮಾಣದಲ್ಲಿ ಪರಿಪೂರ್ಣವೆಂದಿದ್ದಾನೆ.

ಖರ ಗಂಧರ್ವ ಖರೋಷ್ಠ ವಿಭವಂ ಕಾಂಬೋಜ ಜಾಳಂಧರಂ
ತುರಗಂ ಮಾಳವ ಕೊಂಗ ಕೋಶಲ ವರಾಳಂ ಬರ್ಬರ ತೈತಿಲಂ
ದುರಭಾನೀ ಕರಹಾಟ ಮಾಗಧ ಕಳಿಂಗಂ ಸಿಂಧು ಕೊಲ್ಲಾಪುರಂ
ತುರಗ ಸೇವುಣಮಾದಿಯಾಗಲಿನಿತುಂ ಕ್ಷೇತ್ರಂಗಳೊಳ್ ಪುಟ್ಟುಗುಂ||[4]

ಈ ಪದ್ಯದಿಂದ ಆ ಕಾಲದಲ್ಲಿ ಇತರ ಪ್ರದೇಶಗಳ ಜೊತೆ ಕೊಲ್ಲಾಪುರ, ಸೇವುಣ (ಸೇವುಣ ರಾಜ್ಯ?) ರಾಜ್ಯಗಳು ಅಶ್ವಗಳನ್ನು ಅಭಿವೃದ್ಧಿಪಡಿಸುವ ಕೇಂದ್ರಗಳಾಗಿದ್ದುವೆಂದು ಭಾವಿಸಲು ಅವಕಾಶವಿದೆ.

ಯುದ್ಧದ ಅನೇಕ ಸಂದರ್ಭಗಳಲ್ಲಿ ವೀರರ ನೇರ ಆಕ್ರಮಣಕ್ಕೆ ಒಳಗಾಗುತ್ತಿದ್ದ ಕುದುರೆಗೆ ಯಾವ ರೀತಿಯಲ್ಲಿ ರಕ್ಷಣೆ ಒದಗುತ್ತಿತ್ತು ಎಂಬುದು ಕುತೂಹಲದ ಸಂಗತಿಯಾಗಿದೆ. ರಾವುತನೇ ತನ್ನ ಮತ್ತು ತನ್ನ ಕುದುರೆಯ ರಕ್ಷಕನಾಗಿರುತ್ತಿದ್ದನು. ಆರ್. ಶೇಷಶಾಸ್ತ್ರಿಯವರು ವೀರಗಲ್ಲುಗಳ ಶಿಲ್ಪಗಳನ್ನು ಅಧ್ಯಯನ ಮಾಡಿ- ಕುದುರೆಯ ಹೊಟ್ಟೆಯ ಭಾಗವನ್ನು ಜೀನು ಸಂಪೂರ್ಣವಾಗಿ ಮುಚ್ಚುತ್ತಿದ್ದುದನ್ನು ಮತ್ತು ಸವಾರನಿಗೆ ಕುಳಿತುಕೊಳ್ಳಲು ಅನುಕೂಲವಾಗುವಂತೆ ಅದನ್ನು ಉಬ್ಬು ತಗ್ಗುಗಳಿಂದ ಮಾಡುತ್ತಿದ್ದುದ್ದನ್ನು, ಅದನ್ನು ಹಿಂದುಗಡೆ ಕುದುರೆಯ ಬಾಲದ ಕೆಳಗೆ ಹಾದು ಬಂದ ಪಟ್ಟಿಯಿಂದ ಮತ್ತು ಕುದುರೆಯ ಕತ್ತಿನ ಕೆಳಗೆ ಹಾದು ಬಂದ ಪಟ್ಟಿಯಿಂದ ಕಟ್ಟುತ್ತಿದ್ದುದನ್ನು ತಿಳಿಸುತ್ತಾರೆ.[5] ವಚನಗಳಲ್ಲಿ ಕುದುರೆಗೆ ಬಳಸುವ ಕಡಿವಾಣ ಮತ್ತು ಹಲ್ಲಣಗಳ ಉಲ್ಲೇಖ ಬರುತ್ತದೆ.[6]

ಕೆಲವು ಯುದ್ಧಗಳಲ್ಲಿ ವಿರಳವಾಗಿ ಒಂಟೆಗಳು ಭಾಗವಹಿಸಿರುವುದು ಕಂಡು ಬರುತ್ತದೆ. ಹನ್ನೆರಡನೆಯ ಶತಮಾನದವರೆಗೆ ಒಂಟೆಗಳು ಯುದ್ಧದಲ್ಲಿ ಬಳಕೆಯಾದಂತೆ ತಿಳಿದುಬರುವುದಿಲ್ಲ. ಶಿವಮೊಗ್ಗ ಕೋಟೆಯ ಪೋಲಿಸ್ ಸ್ಟೇಷನ್ನಿನಲ್ಲಿರುವ ಕ್ರಿ.ಶ. ೧೨೫೪ರ ವೀರಗಲ್ಲಿನ ಶಿಲ್ಪದಲ್ಲಿ ಒಂಟೆಯನ್ನು ಕಾಣಬಹುದು.[7]

---

೧. (ರೈ) ಎಕ VII ಶಿಕಾರಿಪುರ ೧೯೭ ಕ್ರಿ.ಶ. ಸು. ೧೧೮೨.

೨. Shyamsundar Nigam : Economic Organisations of Ancient India ಪು. ೧೯೫-೯೬.

೩. ಅಶ್ವಶಾಸ್ತ್ರದ ರಚನೆಯ ಕಾಲವನ್ನು ಆರ್. ನರಸಿಂಹಾಚಾರ್ ಅವರು ಕ್ರಿ.ಶ. ಸು. ೧೪೦೦ ಎಂದಿದ್ದಾರೆ ಕ.ಕಚ I, ಪು. ೫೨೨.

೪. ಅಶ್ವಶಾಸ್ತ್ರ : ೬-೭೭. ಈ ಶಾಸನದಲ್ಲಿ ಬಂದಿರುವ ಜಾಳಂಧರ ತ್ರಿಗರ್ತನಾಡಾಗಿದೆ. ಅದು ಈಗಿನ ಲಾಹೋರ್.

೫. ಕರ್ನಾಟಕದ ವೀರಗಲ್ಲುಗಳು, ಪು. ೧೭೮.

೬. ಅಪ್ರವ : ೨೫೯, ೧೨೭.

೭. ಆರ್. ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೮೪.

ಸೇವುಣ ಸಂಕಮನಿಗೂ ಹೊಯ್ಸಳರಿಗೂ ನಡೆದ ಯುದ್ಧದಲ್ಲಿ ಒಂಟೆಯ ಪಡೆಯೊಡೆಯ ಅಚ್ಚಸಾಹಣಿ ಸಂಕಮನನ್ನು ಪರಾಭವಗೊಳಿಸಿ ಮಡಿದ ವಿಷಯ ಶಾಸನ ಒಂದರಲ್ಲಿ ಬಂದಿದೆ.[೧]

**ಪದಾತಿ:**

ಯಾವುದೇ ಸೈನ್ಯದಲ್ಲಿ ಕಾಲಾಳುಗಳ ಸಂಖ್ಯೆ ಬಹು ದೊಡ್ಡದಾಗಿರುತ್ತಿತ್ತು. ಶಾಸನಗಳಲ್ಲಿ ಅವರನ್ನು ಕಾಲಾಳು,[೨] ಪದಾತಿ[೩] ಸುತ್ಥಣಿ ಎಂದು ಕರೆಯಲಾಗಿದೆ. ಸೇವುಣರ ಸೈನ್ಯದಲ್ಲಿ ಏಳೆಂಟು ಲಕ್ಷ ಕಾಲಾಳುಗಳಿದ್ದರೆಂದು ಶಾಸನವೊಂದರಿಂದ ತಿಳಿದು ಬರುತ್ತದೆ.[೪] ಕಾಲಾಳುಗಳು ನೆಲದ ಮೇಲೆ ನಿಂತು ಯುದ್ಧಮಾಡುವವರು. ಆನೆ ಮತ್ತು ಅಶ್ವಗಳ ಮೇಲಿನಿಂದ ಯುದ್ಧಮಾಡುವವರು 'ಮೇಲಾಳು'ಗಳು. ಯುದ್ಧದ ಒಂದು ಭೀಕರ ಚಿತ್ರವನ್ನು ಕೊಡುವ ಶಾಸನವೊಂದರಲ್ಲಿ ಸುರಿದು ಬಿದ್ದ ಕರುಳುಗಳನ್ನು ತೊಡರಿ ಕಾಲಾಳುಗಳು ಬಿದ್ದಂತಹ ವಿಷಯ ನಿರೂಪಿತವಾಗಿದೆ.[೫]

**ಆಯುಧಗಳು:**

ಗಜ ಸೈನ್ಯವಾಗಲಿ, ಅಶ್ವದಳವಾಗಲಿ, ಪದಾತಿಯಾಗಲಿ ಯುದ್ಧದಲ್ಲಿ ಬಳಸುತ್ತಿದ್ದ ಆಯುಧಗಳು ವಿಶೇಷವಾಗಿರುತ್ತಿದ್ದವು. ಶತ್ರುವನ್ನು ಕೊಲ್ಲಲು ಇಲ್ಲವೇ ತೀವ್ರವಾಗಿ ಘಾಸಿಗೊಳಿಸಲು ಸಾಧ್ಯವಾಗುವ ಆಯುಧವನ್ನು ಬಳಸುತ್ತಿದ್ದರು. ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ಅನೇಕ ಆಯುಧಗಳ ಉಲ್ಲೇಖಗಳು ಬರುತ್ತವೆ. ಆದರೆ ಆಯುಧಗಳ ಹೆಸರಿಗೂ ಶಿಲ್ಪಗಳಲ್ಲಿ ಕಂಡು ಬರುವ ಆಯುಧಗಳಿಗೂ ಹೊಂದಿಕೆಯಾಗುವಂತೆ ಅರ್ಥೈಸುವುದು ಪೂರ್ಣವಾಗಿ ಸಾಧ್ಯವಾಗಿಲ್ಲ. ಆರ್. ಶೇಷಶಾಸ್ತ್ರಿಯವರು ವೀರಗಲ್ಲಿನ ಶಿಲ್ಪಗಳಿಗೆ ಸಂಬಂಧಿಸಿದಂತೆ ಅಂಥ ಒಂದು ಅಧ್ಯಯನ ಪ್ರಯತ್ನವನ್ನು ನಡೆಸಿದ್ದಾರೆ.[೬] ಆದರೂ ದೇವಾಲಯಗಳಲ್ಲಿ ಮತ್ತು ಇತರ ಶಿಲ್ಪಗಳಲ್ಲಿ ಕಂಡು ಬರುವ ವಿವಿಧ ವಿಗ್ರಹಗಳ ಕೈಗಳಲ್ಲಿರುವ ಆಯುಧಗಳನ್ನು ಸಮಗ್ರವಾಗಿ ಅಭ್ಯಾಸ ಮಾಡುವ ಅಗತ್ಯವಿದೆ.

ಪ್ರಾಚೀನ ಕೃತಿಗಳಾದ ಅಗ್ನಿಪುರಾಣ, ಶುಕ್ರನೀತಿಸಾರ ಮುಂತಾದವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ವಿಭಾಗಿಸಿ ಅವನ್ನು ಯಂತ್ರಮುಕ್ತ, ಪಾಣಿಮುಕ್ತ, ಮಂತ್ರಮುಕ್ತ, ಮುಕ್ತಸಂಧಾರಿತ ಎಂದು ಮುಂತಾಗಿ ವಿಭಾಗ ಮಾಡಿ ಹೇಳಿದೆ. ನೀತಿಪ್ರಕಾಶವು ಮುಕ್ತ, ಅಮುಕ್ತ ಮತ್ತು ಮಂತ್ರ ಮುಕ್ತವೆಂದು ಹೇಳುತ್ತದೆ.[೭] ಆದರೆ ಈ ವಿಭಜನೆ ಬಹು ಮಟ್ಟಿಗೆ ಕೃತಕವೆಂದು ವಿದ್ವಾಂಸರು ಭಾವಿಸುತ್ತಾರೆ.[೮] ಜನ್ನ ಕವಿಯು ಅನಂತನಾಥ ಪುರಾಣದಲ್ಲಿ ಆಯುಧಗಳನ್ನು ಇಸುವ, ಇಡುವ, ಇಱಿವ ಮತ್ತು ಪೊಯ್ವ ಆಯುಧಗಳೆಂದು ವಿಭಾಗಿಸುತ್ತಾನೆ.[೯] ಆದರೆ ಈ ವಿಭಾಗಕ್ರಮಕ್ಕೆ ಶಾಸನೋಕ್ತವಾದ ಎಲ್ಲ ಆಯುಧಗಳನ್ನು ಹೊಂದಿಸುವುದು ಸದ್ಯಕ್ಕೆ ಸಾಧ್ಯವಿಲ್ಲ. ಆದುದರಿಂದ ಶಾಸನಗಳಲ್ಲಿ ದೊರೆತ ಆಯುಧಗಳ ವಿವರಗಳನ್ನು ಒಂದು ಕ್ರಮದಲ್ಲಿ ನೀಡಲು ಪ್ರಯತ್ನಿಸಲಾಗಿದೆ.

---

೧. ಎಂಎಆರ್ ೧೯೩೭; ೨೧.

೨. (ರೈ) ಎಕ VIII ಸಾಗರ ೧೫೦ ಕ್ರಿ.ಶ. ೧೨೫೫.

೩. ಕ಼ಇ II ಅಕ್ಕಲುಕೋಟೆ ೧೨ ಕ್ರಿ.ಶ. ೧೧೧೪.

೪. (ರೈ) ಎಕ V ಅರಸಿಕೆರೆ ೨೧೬ ಕ್ರಿ.ಶ. ೧೨೦೦.

೫. (ರೈ) ಎಕ VII ಶಿಕಾರಿಪುರ ೧೦೨ ಕ್ರಿ.ಶ. ೧೧೬೨.

೬. ಕರ್ನಾಟಕದ ವೀರಗಲ್ಲುಗಳು ಪು. ೧೬೯-೭೨. ಮತ್ತು ಅದೇ ಗ್ರಂಥದಲ್ಲಿ ಕೊಟ್ಟಿರುವ ವಿವಿಧ ಆಯುಧಗಳ ಛಾಯಾಚಿತ್ರಗಳನ್ನು ಮತ್ತು ರೇಖಾಚಿತ್ರಗಳನ್ನು ನೋಡಬಹುದು.

೭. V.R.Ramachandra Dixitar : ಪೂರ್ವೋಕ್ತ ಪು. ೭೫.

೮. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೭೨.

೯. ಅನಂತನಾಥಪುರಾಣಂ ೧೪-೧. ವ.

**ಬಿಲ್ಲು ಬಾಣಗಳು:**

ಯಾವುದೇ ಬಲ ಪ್ರಯೋಗಿಸಲು ತುಂಬ ಅನುಕೂಲಕರವಾದ ಆಯುಧ ಇದಾಗಿದೆ. ಶತ್ರುವಿನಿಂದ ಸಾಕಷ್ಟು ಸುರಕ್ಷಿತ ದೂರದಲ್ಲಿದ್ದುಕೊಂಡು ಶತ್ರುವನ್ನು ಘಾಸಿಗೊಳಿಸಲು ಉಪಯುಕ್ತವಾದ ಆಯುಧವಾಗಿದೆ. ಬಿಲ್ಲು ಮತ್ತು ಬಾಣಗಳ ಉಲ್ಲೇಖ ಅನೇಕ ಶಾಸನಗಳಲ್ಲಿ ಬಂದಿದೆ.[೧] ಬಿಲ್ಲಿನ ಮುಂದಿನ ಭಾಗವನ್ನು 'ದಂಡೆ' ಎಂದು ಕರೆಯುತ್ತಿದ್ದರು.[೨] (ಸಂ : ದಂಡ) ಈ ಬಿಲ್ಲಿನ ದಂಡೆಯ ಎರಡೂ ಕೊನೆಗಳಿಗೆ 'ತಿರು'ವನ್ನು[೩] (=ನಾರಿ) ಬಿಗಿದು ದಂಡೆ ಬಾಗುವಂತೆ ಕಟ್ಟುತ್ತಿದ್ದರು. ಹೀಗೆ ಸ್ವಲ್ಪ ಬಾಗಿದ ಬಿಲ್ಲನ್ನು ವೀರಗಲ್ಲುಗಳ ಶಿಲ್ಪಗಳಲ್ಲಿ ಕಾಣಬಹುದು. ಬಿಲ್ಲಿನ ಹಗ್ಗವನ್ನು ಮೀಟುವುದನ್ನು ಜೇವೊಡೆ[೪] ಎಂದು ಕರೆದಿದ್ದಾರೆ. ಗೊಗ್ಗಿದೇವನು ಕೆನ್ನೆವರೆಗೆ ಎಳೆದು ಬಾಣಗಳನ್ನು ಪ್ರಯೋಗ ಮಾಡುತ್ತಿದ್ದನೆಂಬ ವರ್ಣನೆ ಇದೆ.[೫] ಶಿವವ್ಯಾಸ ಧನುರ್ವೇದದಲ್ಲಿ ಬಿಲ್ಲ ಅಳತೆ ೪x೨೪ ಅಂಗುಲಗಳೆಂದು ಹೇಳಿದೆ. ಕೋದಂಡ ಮಂಡನದಲ್ಲಿ ಹದಿನೆಂಟು ರೀತಿಯ ಬಿಲ್ಲುಗಳನ್ನು ಮತ್ತು ಅವುಗಳಿರಬೇಕಾದ ತೂಕವನ್ನು ಹೇಳಲಾಗಿದೆ.[೬] ಬಿಲ್ಲಿಗೆ ಹೂಡಿ ಪ್ರಯೋಗಿಸುತ್ತಿದ್ದುವನ್ನು ಬಾಣಗಳೆಂದೂ,[೭] ಅಂಬುಗಳೆಂದೂ[೮] ಕರೆಯುತ್ತಿದ್ದರು. ಬಾಣದ ಒಂದು ಕೊನೆ ಮೊನಚಾಗಿ ಇರುತ್ತಿತ್ತು, ಇನ್ನೊಂದು ಕೊನೆಗೆ ವೇಗ ಗಳಿಸಲು ಗರಿಗಳನ್ನು ಕಟ್ಟುತ್ತಿದ್ದರು.[೯] ಶಾಸನಗಳಲ್ಲಿ ಕೆಲವು ಬಾಣಗಳ ಉಲ್ಲೇಖಗಳು ಬರುತ್ತದೆ. ತೀರಿಕೆ[೧೦] ಕಕ್ಕಂಬು, ಮೊನೆಯಂಬು, ಕೆಲ್ಲಂಬು,[೧೧] ಪಾರೆಯಂಬುಗಳ[೧೨] ಉಲ್ಲೇಖ ಕಂಡುಬರುವುದಾದರೂ ಅವುಗಳ ನಿರ್ದಿಷ್ಟ ಸ್ವರೂಪವನ್ನು ತಿಳಿಯುವುದು ಸಾಧ್ಯವಾಗಿಲ್ಲ.

**ಖಡ್ಗ :**

ಆಕ್ರಮಣಕಾರಿ ಆಯುಧಗಳಲ್ಲಿ ಪ್ರಧಾನವಾದುದು ಮತ್ತು ಶತ್ರುವನ್ನು ಸಮೀಪದಲ್ಲಿ ಎದುರಿಸಿ ನೇರವಾಗಿ ಘಾಸಿ ಮಾಡುವ ಆಯುಧವಿದು. ಮಹಾಭಾರತದ ಕಾಲದಿಂದಲೂ ಇದು ಪ್ರಸಿದ್ಧವಾದ ಆಯುಧವಾಗಿದೆ. ಮಹಾಭಾರತದ ಸಹದೇವ ಖಡ್ಗ ವಿದ್ಯೆಯಲ್ಲಿ ವಿಶೇಷ ಪರಿಣತನಾಗಿದ್ದನು. ರೊದ್ದವ ಗೋವನನ್ನು ಒಂದು ಶಾಸನ 'ಖಡ್ಗ ಸಹದೇವ' ಎಂದು ಕರೆಯುತ್ತದೆ.[೧೩] ಖಡ್ಗದ ಹುಟ್ಟಿನ ಬಗ್ಗೆ ನಕುಲನಿಗೆ ಭೀಷ್ಮರು ವಿವರಗಳನ್ನು ತಿಳಿಸುತ್ತಾರೆ.[೧೪] ಇದು ಬಹುಮಟ್ಟಿಗೆ ಖಡ್ಗದ

---

೧. (ರೈ) ಎಕ VIII ಸೊರಬ ೧೭೫ ಕ್ರಿ.ಶ. ೧೧೫೬.

೨. (ರೈ) ಎಕ VII ಹೊನ್ನಾಳಿ ೨೭ ಕ್ರಿ.ಶ. ೧೧೭೨; ಹೊನ್ನಾಳಿ ೨೮ ಕ್ರಿ.ಶ. ೧೧೯೭.

೩. (ರೈ) ಎಕ VIII ಸೊರಬ ೧೭೫ ಕ್ರಿ.ಶ. ೧೧೫೬ '...ಬಿಲ್ಲ ತಿರುವಂ ಪರಿವನ್ನಂ ಎಚ್ಚು...'

೪. ಎಸ್‌ಐಐ XV ನವಲಗುಂದ ೫೯ ಕ್ರಿ.ಶ. ೧೧೮೪.

೫. ಅದೇ.

೬. V. R.Ramachandra Dixitar : ಪೂರ್ವೋಕ್ತ ಪು. ೯೬.

೭. ಎಸ್‌ಐಐ XV ನವಲಗುಂದ ೫೯ ಕ್ರಿ.ಶ. ೧೧೮೪.

೮. (ರೈ) ಎಕ VIII ಸೊರಬ ೧೭೫ ಕ್ರಿ.ಶ. ೧೧೫೬.

೯. ಆರ್.ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೭೧. ಅಂಬಿಗರ ಚೌಡಯ್ಯನ ವಚನ ೧೯.'ಅಂಬಿನ ಹಿಳಿಕಿನಲ್ಲಿ ಕಟ್ಟಿದ ವಿಹಂಗನ ಗರಿಯಂತೆ' ಸ.ವ.ಸಂ. ೬ ಚಿತ್ರ ಸಂಪುಟದಲ್ಲಿರುವ ಬೇಟೆಗಾರ್ತಿಯ ಶಿಲ್ಪದಲ್ಲಿ ಬಿಲ್ಲು ಮತ್ತು ಬಾಣಗಳನ್ನು ಗಮನಿಸಬಹುದು.

೧೦. (ರೈ) ಎಕ VII ಶಿಕಾರಿಪುರ ೧೩೬ ಕ್ರಿ.ಶ. ೧೧೭೮.

೧೧. ಎಂಎಆರ್ ೧೯೩೦ ಸಾಗರ ೬೬ ಕ್ರಿ.ಶ. ೧೧೯೪.

೧೨. (ರೈ) ಎಕ VII ಹೊನ್ನಾಳಿ ೨೭ ಕ್ರಿ.ಶ. ೧೧೬೫.

೧೩. (ರೈ) ಎಕ XII ಶಿರಾ ೩೭ ಕ್ರಿ.ಶ. ೧೧೯೦.

೧೪. V. R.Ramachandra Dixitar : ಪೂರ್ವೋಕ್ತ ಪು. ೧೧೬-೧೭.

ಖಡ್ಗ ಮೂಲತಃ ಬ್ರಹ್ಮನಿಂದ ನಿರ್ಮಾಣವಾಗಿ ರುದ್ರನಿಗೆ ನೀಡಲ್ಪಟ್ಟು ಕ್ರಮೇಣ ವಿಷ್ಣು - ಪುರೂರವ - ನಹುಷ - ಯಯಾತಿ- ಭರತ - ರಘು - ಭಾರದ್ವಾಜ - ದ್ರೋಣ - ಕೃಪ - ಅನಂತರ ಪಾಂಡವರಿಗೆ ಬಂದಿತೆಂದು ತಿಳಿಸುತ್ತಾರೆ.

ಪೌರಾಣಿಕವಾದ ಉಗಮವನ್ನು ಹೇಳುವುದಾದರೂ ಖಡ್ಗ ಎಲ್ಲ ಯೋಧರ ಪೂಜಾರ್ಹ ಆಯುಧವಾಗಿದೆ. ಅದಕ್ಕೆ ಕರವಾಳು,[೧] (ಬಾಳ್), ಕೂರಸಿ[೨] (ಕೂರ್ = ಹರಿತವಾದ, ಅಸಿ = ಕತ್ತಿ) ಮುಂತಾದ ಪರ್ಯಾಯ ಹೆಸರುಗಳಿವೆ. ಇರಿಯಲು ಮತ್ತು ತುಂಡರಿಸಲು-ಹೀಗೆ ಎರಡು ರೀತಿಯಲ್ಲಿ ಶತ್ರುಗಳನ್ನು ಕೊಲ್ಲಲು ಉಪಯುಕ್ತವಾಗಿದ್ದಿತು. ಕರವಾಳಿನಿಂದ ಶತ್ರು ಸೈನಿಕರ ಶಿರಗಳನ್ನು ಕತ್ತರಿಸಿ ರಾಶಿಹಾಕಿದ ವಿಷಯ ಒಂದು ಶಾಸನದಲ್ಲಿ ಬಂದಿದೆ.[೩]

**ಕೊಂತ:**

ಇದನ್ನು ಖಡ್ಗದಂತೆ ಒಂದು ಕೈಯಲ್ಲಿ ಹಿಡಿದು ಇನ್ನೊಂದು ಕೈಯಲ್ಲಿ ಅಡ್ಡಣ (=ಗುರಾಣಿ) ಹಿಡಿದು ಯುದ್ಧ ಮಾಡುತ್ತಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ.[೪] ಕೊಂತದಿಂದ ಒಬ್ಬ ವೀರ ಎಲ್ಲ ಕುದುರೆಗಳನ್ನು ಇರಿದ ವಿಷಯ ಒಂದು ಶಾಸನದಲ್ಲಿ ಉಕ್ತವಾಗಿದೆ.[೫]

**ಸಬಳ:**

ಇದು ಈಟಿಯಂತೆ ಉದ್ದವಾದ ಆಯುಧ. ಇದು ವಿಶೇಷವಾಗಿ ಕೋಟೆಗಾಳಗದಲ್ಲಿ ಬಳಕೆಯಾಗುತ್ತಿದ್ದಿರಬೇಕು. ಏಕೆಂದರೆ ಇದು ಉದ್ದವಾಗಿದ್ದು, ಮೊನೆ ಚೂಪಾಗಿದ್ದುದರಿಂದ ಶತ್ರುವನ್ನು ದೂರದಿಂದಲೇ ಕೊಲ್ಲಲು ಇಲ್ಲವೇ ಘಾಸಿಗೊಳಿಸಲು ಉಪಯುಕ್ತವಾಗಿದ್ದಿತು.[೬] ಶಾಸನವೊಂದರಲ್ಲಿ 'ನೇಪಾಳನ ಬೆಂನೊಳೆ ಬಳೆದಿರ್ದ ಮಹಾಸಬಳಂ'[೭] ಎಂಬ ಮಾತು ಬರುವುದರಿಂದ ಸಬಳದಿಂದ ಎದೆಯಲ್ಲಿ ಇರಿದರೆ ಅದು ಬೆನ್ನಿನಲ್ಲಿ ಕಾಣಿಸಿಕೊಳ್ಳುವಷ್ಟು ಮೊನಚಾಗಿದ್ದ ಆಯುಧ ಎಂಬುದು ಸ್ಪಷ್ಟವಾಗುತ್ತದೆ. ಸಬಳವನ್ನು ಹಿಡಿದು ಹೋರಾಡುತ್ತಿದ್ದವರನ್ನು 'ಸಬಳಿಗರು' ಎಂದು ಶಾಸನವೊಂದು ಕರೆದಿದೆ.[೮] ಆ ಕಾಲದ ಅನೇಕ ಶಾಸನಗಳಲ್ಲಿ ಅದನ್ನು ಬಳಸಿ ಹೋರಾಡುತ್ತಿದ್ದ ವಿಷಯ ನಿರೂಪಿತವಾಗಿದೆ.[೯] ಇದನ್ನು ನೇರವಾಗಿ ತಿವಿಯಲು ಮತ್ತು ಎಸೆಯಲು ಬಳಸುತ್ತಿದ್ದರು.

**ಸುರಿಗೆ:**

ಇದು ಖಡ್ಗದ ರೀತಿಯ ಆಯುಧವೆನ್ನಬಹುದು. 'ಇದು ಕಬ್ಬಿಣದ ಸಲಾಕೆಯ ಹಾಗೆ ಉದ್ದವಾಗಿದ್ದು ತಳಭಾಗದಲ್ಲಿ ಹಿಡಿಯಿರುತ್ತದೆ'[೧೦]. ಹರಿಹರನ ರಗಳೆಯೊಂದರಲ್ಲಿ 'ದೃಷ್ಟಿವಾರಿ'ಯ ನೇಮವನ್ನು ಕೈಗೊಂಡ ಸುರಗಿ ಚೌಡಯ್ಯನ ವಿಷಯ

---

೧. (ರೈ) ಎಕ XII ಚಿಕ್ಕನಾಯಕನಹಳ್ಳಿ ೨೧ ಕ್ರಿ.ಶ. ೧೧೬೦.

೨. (ರೈ) ಎಕ VII ಶಿಕಾರಿಪುರ ೨೪೨ ಕ್ರಿ.ಶ. ೧೧೬೩.

೩. (ರೈ) ಎಕ XII ಚಿಕ್ಕನಾಯಕನಹಳ್ಳಿ ೨೧ ಕ್ರಿ.ಶ. ೧೧೬೦.

೪. (ರೈ) ಎಕ VII ಶಿಕಾರಿಪುರ ೨೪೫ ಕ್ರಿ.ಶ. ೧೧೮೩.

೫. (ರೈ) ಎಕ VIII ಸೊರಬ ೪೯೮ ಕ್ರಿ.ಶ. ೧೭೭೭.

೬. ಆರ್. ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೭೦.

೭. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೮. (ರೈ) ಎಕ VIII ಸೊರಬ ೧೯ ಕ್ರಿ.ಶ. ೧೧೫೨.

೯. (ಮೈ) ಎಕ VII ಕೃ.ಪೇಟೆ ೭೭ ಕ್ರಿ.ಶ. ೧೧೭೯; (ರೈ) ಎಕ V ಬೇಲೂರು ೧೧೪ ಕ್ರಿ.ಶ. ೧೧೭೩.

೧೦. ಪೂರ್ವೋಕ್ತ ಗ್ರಂಥ, ಪು. ೧೭೧ ಈ ಆಯುಧ ಚಿತ್ರದುರ್ಗದ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿರುವ ವಿಷಯವನ್ನು ಆರ್. ಶೇಷಶಾಸ್ತ್ರಿ ಅವರು ತಿಳಿಸಿದ್ದಾರೆ.

ಬರುತ್ತದೆ. ಅವನು ತನ್ನ ದೃಷ್ಟಿಗೂ ಶಿವನಿಗೂ ಮಧ್ಯೆ ಬಂದವರನ್ನು ಕೊಲ್ಲುತ್ತೇನೆಂಬ ವ್ರತವನ್ನು ತೊಟ್ಟವನು. ತಾನು ಸದಾ ಹಿಡಿದಿರುತ್ತಿದ್ದ ಆಯುಧದಿಂದ ಅವನಿಗೆ 'ಸುರಿಗೆ'ಯ ಚೌಡಯ್ಯನೆಂಬ ಅಭಿದಾನವಿರಬೇಕು. ಸುರಿಗೆಯ ಉಲ್ಲೇಖ ಕೆಲವು ಶಾಸನಗಳಲ್ಲಿ ಬಂದಿದೆ.[೧]

**ಕೃಪಾಣ:**

ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಕೃಪಾಣ[೨] ಚಿಕ್ಕ ಆಕಾರದ ಖಡ್ಗದಂತಹ ಆಯುಧವಿರಬೇಕು. ಈಗ ಸಿಖ್ಖರು ಧರಿಸುವ 'ಕಿರ್‌ಪಾಣ್' ಪದ ಕೃಪಾಣದಿಂದ ಬಂದಿದೆ ಎನ್ನಬಹುದು.

**ಕಕ್ಕಡೆ:**

ಇದು ಕೈಯಿಂದ ಎಸೆಯುವ ಶೂಲದಂತಹ ಆಯುಧವೆಂದು ಎಂ. ಚಿದಾನಂದ ಮೂರ್ತಿಯವರು ಭಾವಿಸುತ್ತಾರೆ.[೩] ಆರ್. ಶೇಷಶಾಸ್ತ್ರಿಯವರು ಕಾಯ್ಕಿಣಿಯ ವೀರಗಲ್ಲುಗಳ ಶಿಲ್ಪವನ್ನು ಆಧರಿಸಿ ಇದು ಇರಿಯಲು ಮತ್ತು ಎಸೆಯಲು ಬರುವಂತಹ ಆಯುಧವೆಂದು ಭಾವಿಸುತ್ತಾರೆ.[೪] ಇದು ಆ ಕಾಲದ ಅನೇಕ ಶಾಸನಗಳಲ್ಲಿ ಉಲ್ಲೇಖಗೊಂಡಿದೆ[೫]. 'ಕಕ್ಕಳ'[೬] ಎಂಬ ರೂಪದಲ್ಲಿ ದೊರೆಯುವ ಆಯುಧವೂ ಇದೇ ಆಗಿರಬೇಕು.

**ಅಡ್ಡಾಯುಧ:**

ಇದು ಒಂದು ಬಗೆಯ ಕತ್ತಿ ಎಂಬ ಅರ್ಥವನ್ನು ಕನ್ನಡ ನಿಘಂಟು ನೀಡಿ, ಅಡ್ಡ ಎಂಬುದು ಅರ್ಧದ ತದ್ಭವವಿರಬಹುದೆಂದು ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಿದೆ. ಎಂ. ಚಿದಾನಂದ ಮೂರ್ತಿಯವರು ಸಂಸ್ಕೃತದ ಅರ್ಧಕ್ಕೆ ಸಂವಾದಿಯಾಗಿ ಪ್ರಾಕೃತದಲ್ಲಿ ಅಡ್ಡ ಇರುವುದನ್ನು ತೋರಿಸಿ, ಅಡ್ಡಾಯುದ್ಧವು ಅಡ್ಡ + ಆಯುಧವೇ ಆಗಿದೆ ಎಂದು ಅದಕ್ಕೆ ಚಿಕ್ಕ ಆಯುಧ ಎಂಬುದು ಮೂಲಾರ್ಥವೆಂದು ತಿಳಿಸಿದ್ದಾರೆ. ಅಡ್ಡ ಶಬ್ದಕ್ಕೆ ಅರ್ಧ ಎಂಬ ಅರ್ಥದ ಜೊತೆಯಲ್ಲಿ ಸ್ವಲ್ಪ, ಚಿಕ್ಕದು ಎಂಬ ಅರ್ಥವಿರುವುದನ್ನೂ ತಿಳಿಸಿದ್ದಾರೆ. ಆದ್ದರಿಂದ ಅಡ್ಡಾಯುಧ ಖಡ್ಗದಂತಹ ಚಿಕ್ಕ ಆಕಾರದ ಆಯುಧವೆಂದು ಭಾವಿಸಬಹುದು.[೭] ಅಡ್ಡಾಯುಧದ ಹರಿಯಣ್ಣ[೮]ನೆಂಬ ಮಂತ್ರಿಯ ಉಲ್ಲೇಖ ಕೆಲವು ಶಾಸನಗಳಲ್ಲಿ ಬರುತ್ತದೆ. ಆ ಆಯುಧವನ್ನು ಬಳಸುವುದರಲ್ಲಿ ಪರಿಣತನಾದುದರಿಂದ ಅಥವಾ ಸದಾ ಅದನ್ನು ಧರಿಸುತ್ತಿದ್ದುದರಿಂದ ಅವನಿಗೆ ಆ ಹೆಸರು ಬಂದಿರಬೇಕು.

**ಗಂಡಕತ್ತರಿ:**

ಕೆಲವು ಶಾಸನಗಳಲ್ಲಿ ಗಂಡಕತ್ತರಿ ಉಲ್ಲೇಖಗೊಂಡಿದೆ. ಇದು ಯುದ್ಧದಲ್ಲಿ ಬಳಕೆಯಾಗುತ್ತಿದ್ದ ಆಯುಧವಲ್ಲ. ಅಬ್ಬಲೂರು ಚರಿತೆಯ ಗ್ರಂಥದಲ್ಲಿ ಲಕ್ಷ್ಮೇಶ್ವರ ನಿಂಬಯ್ಯಮಠದ ಗಂಡಗತ್ತರಿಯ ಚಿತ್ರವನ್ನು ಕೊಡಲಾಗಿದೆ.[೯] ಇದು ಅರ್ಧವೃತ್ತಾಕಾರವಾಗಿದ್ದು

---

೧. (ರೈ) ಎಕ VI ಚಿಕ್ಕಮಗಳೂರು ೧೫೮ ಕ್ರಿ.ಶ. ೧೧೯೫.

೨. (ರೈ) ಎಕ V ಚನ್ನರಾಯಪಟ್ಟಣ ೧೯೭ ಕ್ರಿ.ಶ. ೧೨೨೩.

೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೭೬.

೪. ಆರ್. ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೭೧.

೫. ಎಸ್‌ಐಐ XX ಹಾನಗಲ್ಲು ೧೨೬ ಕ್ರಿ.ಶ. ೧೧೮೬; (ರೈ) ಎಕ VII ಹೊನ್ನಾಳಿ ೯೮ ಕ್ರಿ.ಶ. ೧೧೬೬ (?).

೬. (ರೈ) ಎಕ VII ಶಿಕಾರಿಪುರ ೧೫೦ ಕ್ರಿ.ಶ. ೧೧೭೧.

೭. ಎಂ. ಚಿದಾನಂದಮೂರ್ತಿ : ' "ಅಡ್ಡಾಯುಧ" (ಅಢಾಯುಧ), "ಅಡ್ಡ ಹೆಸರು" ಶಬ್ದಗಳ ನಿಷ್ಪತ್ತಿ'. ಸಾಧನೆ ೬:೧, ಪು.೧೩೦-೩೧.

೮. (ಮೈ) ಎಕ VII ಮಂಡ್ಯ ೨೯, ೩೧ ಕ್ರಿ.ಶ. ೧೨೩೪, ೧೨೬೭.

೯. (ಸಂ) ಎನ್. ಬಸವಾರಾಧ್ಯ : ಅಬ್ಬಲೂರು ಚರಿತೆ, ಮೈ.ವಿ.ವಿ. ಮೈಸೂರು, ೧೯೭೩.

ಎರಡೂ ಮೊನೆಗಳನ್ನು ತಿರುಗಿಸಿ ಬಾಗಿಸಲಾಗಿದೆ. ಗಂಡಕತ್ತರಿಯ ಒಳಭಾಗ ಹರಿತವಾಗಿದ್ದು ಅದನ್ನು ಕಟ್ಟುಹಾಕಿದ್ದ ವ್ಯಕ್ತಿಯ ಕತ್ತಿನ ಭಾಗಕ್ಕೆ ಇಟ್ಟು ಬಾಗಿದ ಎರಡು ಕೊಕ್ಕೆಗಳಿಗೆ ಹಗ್ಗವನ್ನು ಕಟ್ಟಿ ಬಲವಾಗಿ ಎಳೆದಾಗ ಕತ್ತು ಕತ್ತರಿಸಿ ಬೀಳುತ್ತಿದ್ದಂತೆ ಕಾಣುತ್ತದೆ. ಅಬ್ಬಲೂರು ಚರಿತೆಯಲ್ಲಿ ಬರುವಂತೆ ಏಕಾಂತದ ರಾಮಯ್ಯನ ಶಿರವನ್ನು ಕತ್ತರಿಸಿದ್ದು 'ಕಂಧರಗತ್ತರಿ'[೧]ಯಲ್ಲಿ. ಇದೇ ಗಂಡಕತ್ತರಿ ಇರಬೇಕು. ಇದು ಮರಣದಂಡನೆಯಂತಹ ಶಿಕ್ಷೆಯಲ್ಲಿ ಮತ್ತು ಆತ್ಮಬಲಿಯಲ್ಲಿ ಬಳಕೆಯಾಗುತ್ತಿದ್ದುದಾಗಿರಬೇಕು.

**ಗೇಣ್:** ಇದು ಚಿಕ್ಕ ಆಕಾರದ ಸುಮಾರು ಒಂದು ಗೇಣಿನಷ್ಟು ಉದ್ದದ ಆಯುಧವಾಗಿದ್ದು, ಶತ್ರುವನ್ನು ತೀರ ಹತ್ತಿರದಿಂದ ಮುಖಾಮುಖಿಯಾಗಿ ಎದುರಿಸುವಾಗ ಬಳಸುತ್ತಿದ್ದರೆಂದು ಕಾಣುತ್ತದೆ. ಇದು, ಕಠಾರಿ ಮತ್ತು ಬಾಕು ಒಂದೇ ರೀತಿಯ ಆಯುಧಗಳಿದ್ದಂತೆ ತೋರುತ್ತದೆ. ಗೇಣನ್ನು ಚಿಕ್ಕ ಒರೆಯಲ್ಲಿ ಇಟ್ಟುಕೊಂಡು ಸೊಂಟಪಟ್ಟಿಗೆ ಸಿಕ್ಕಿಸಿಕೊಳ್ಳುತ್ತಿದ್ದರು. ಶಾಸನವೊಂದರಲ್ಲಿ ಗೇಣ್ಗಳ ಕಿತ್ತಿಱಿವಂ[೨] ಎಂದು ಬರುವುದರಿಂದ ಇದು ಇರಿಯಲು ಉಪಯುಕ್ತವಾಗಿದ್ದಿತೆಂದು ಗ್ರಹಿಸಬಹುದು.

**ಶೂಲ:**

ಇದು ಸೂಲ[೩] ಎನ್ನುವ ರೂಪದಲ್ಲಿಯೂ ಶಾಸನಗಳಲ್ಲಿ ಬಳಕೆಯಾಗಿದೆ. ಈಟಿಯಂತೆ ಉದ್ದವಾದ ಆಯುಧವಾಗಿದ್ದು ಒಂದು ಕಡೆ ಹರಿತವಾದ ಮೊನೆಯುಳ್ಳದ್ದಾಗಿದ್ದಿತು. ಇದನ್ನು ನೇರವಾಗಿ ತಿವಿಯಲು ಮತ್ತು ಎಸೆಯಲು ಪ್ರಯೋಗಿಸುತ್ತಿದ್ದರೆಂದು ಕಾಣುತ್ತದೆ. ಪುರಾಣ ಕಾವ್ಯಗಳಲ್ಲಿ ಕಂಡು ಬರುವ 'ತ್ರಿಶೂಲ' ಮೂರು ಮೊನೆಯುಳ್ಳ ಇದೇ ರೀತಿಯ ಆಯುಧವಾಗಿದ್ದು ಈಶ್ವರನ ಆಯುಧವೆಂದು ಪ್ರಸಿದ್ಧವಾಗಿದೆ. ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಸೂಲಿಗೆ[೪] (ಸಂ. ಶೂಲಿಕ) ಬಹುಶಃ ಶೂಲವನ್ನೇ ಹೇಳುತ್ತದೆ.

**ಕಟಕತ್ತಿ:**[೫] ಇದು ಖಡ್ಗದ ಒಂದು ಪ್ರಭೇದವಿರಬಹುದು.

**ಚಕ್ರ:**

ಕೆಲವು ಶಾಸನಗಳಲ್ಲಿ ವಿರಳವಾಗಿ ಪ್ರಯೋಗವಾಗಿರುವ ಈ ಆಯುಧ ಎಸೆಯುವ ಆಯುಧವಾಗಿರುತ್ತದೆ. 'ಪಾಱುವ ಚಕ್ರಂ' ಎಂಬ ಶಾಸನ ಪ್ರಯೋಗ ದೊರೆಯುತ್ತದೆ.[೬] ಚಕ್ರಾಯುಧದಲ್ಲಿ ಎಂಟು, ಆರು ಮತ್ತು ನಾಲ್ಕು ಅರಗಳು ಇರುತ್ತವೆ. ಮತ್ತು ಕೌಟಿಲ್ಯನು ಅದು ಚಲಿಸುವ ಒಂದು ಯಂತ್ರವೆಂದು ಭಾವಿಸುತ್ತಾನೆ.[೭]

---

೧. ಅಬ್ಬಲೂರು ಚರಿತೆ, ೪:೭೪. ಕಂದರ= (ಕೊರಳು;ಕುತ್ತಿಗೆ) +ಕತ್ತರಿ=ಕಂದರಗತ್ತರಿ. ಗಳ=ಕಂಠ, 'ಗಳಗಂಡಗತ್ತರಿ' ಶತ್ರುಗಳ ಶಿರಸ್ಸನ್ನು ಕತ್ತರಿಸುವವನು (ಒಂದು ಬಿರುದು) ಸತ್ಯರತ್ನಾಕರಂ ಗಳಗಂಡಗತ್ತರಿ....ಕುಮಾರ ಬೊಂಮದೇವರಸರು ಕಞ. IV ೪೩ ಕ್ರಿ.ಶ. ೧೨೬೪.

೨. (ರೈ) ಎಕ VII ಶಿಕಾರಿಪುರ ೧೫೦ ಕ್ರಿ.ಶ. ೧೧೭೧.

೩. (ರೈ) ಎಕ VI ಚಿಕ್ಕಮಗಳೂರು ೮೭ ಕ್ರಿ.ಶ. ೧೧೮೦ (?)

೪. (ರೈ) ಎಕ VII ಶಿಕಾರಿಪುರ ೧೩೬ ಕ್ರಿ.ಶ. ೧೧೭೮.

೫. (ಮೈ) ಎಕ VII ನಾಗಮಂಗಲ ೬೨ ಕ್ರಿ.ಶ. ೧೨೧೮.

೬. (ರೈ) ಎಕ VI ಶಿಕಾರಿಪುರ ೧೩೬ ಕ್ರಿ.ಶ. ೧೧೭೮.

೭. V. R.Ramachandra Dixitar : ಪೂರ್ವೋಕ್ತ ಪು. ೧೦೯.

**ಸೊಂಟಗೆ:**

ಇದು ಖಡ್ಗದಂತೆ ಕತ್ತರಿಸಬಲ್ಲ ಒಂದು ಆಯುಧ. ಹರಿಪ ಎನ್ನುವವನ ಶೌರ್ಯವನ್ನು ವರ್ಣಿಸುತ್ತ 'ವೀರ ಭಟರಂ ನೆಜಿಕಿ ಸೊಂಟಗೆಗೊಂಡು ವೈರಿಭೂಪ್ರಭುಗಳ ಮಸ್ತಕಾವಳಿಗಳಂ ಮುಳ್ಳಿಂ ಪೊಡೆಸೆಂಡುವೊಯ್ದಂ'[೧] ಎಂದು ಒಂದು ಶಾಸನ ಹೇಳುತ್ತದೆ.

**ಗಾಳ:**

ಇದನ್ನು ಬೆಟಗೇರಿ ಕೃಷ್ಣಶರ್ಮ ಅವರು ಹಗ್ಗದಿಂದ ಮಾಡಿದ ಆಯುಧವೆಂದು ಹೇಳಿದ್ದಾರೆ.[೨] ಶಾಸನಗಳಲ್ಲಿ 'ಗಂಟಲ ಗಾಳ'[೩] ಎಂದು ಬರುವುದರಿಂದ ಇದು ಹಗ್ಗದಿಂದ ಕುಣಿಕೆಯು ಹಾಗೆ ಮಾಡಿ ಶತ್ರುಗಳ ಕುತ್ತಿಗೆ ಎಳೆದು ಕೊಲ್ಲುತ್ತಿದ್ದುದಾಗಿರಬಹುದು.

**ಪರಸು:**[೪]

ಕೊಡಲಿ ಎಂಬ ಅರ್ಥವುಳ್ಳ ಇದು ( ಸಂ. ಪರಶು) ಶತ್ರುಗಳನ್ನು ಸೀಳಲು ಉಪಯುಕ್ತವಾದ ಆಯುಧವಾಗಿದ್ದಿತು.[೫] ಶಾಸನಗಳಲ್ಲಿ ದೊರೆಯುವ ಕುಠಾರವೂ[೬] ಇದೇ ಆಯುಧ.

**ಸಲ್ಲಹ:**[೭]

ಮೊನಚು ತುದಿಯುಳ್ಳ ಕಬ್ಬಿಣದ ಉದ್ದನೆಯ ಕೋಲು ( ಸಂ. ಶಲ್ಯ ).

**ಡೊಂಕೆ:**[೮]

ಕೊಕ್ಕೆಯಂತಹ ಒಂದು ಆಯುಧವಿರಬೇಕು.

**ಕರಗಸ:**[೯]

ಇದು ಕೋಟೆಗಾಳಗದಲ್ಲಿ ಉಪಯುಕ್ತವಾಗಿದ್ದ ಯುದ್ಧೋಪಕರಣ. ಶತ್ರುಗಳು ಕೋಟೆಯನ್ನು ಹತ್ತಿ ಬರಲು ಹಾಕಿಕೊಳ್ಳುತ್ತಿದ್ದ ಮರದ ಏಣಿಯನ್ನು ಕತ್ತರಿಸಲು ಇದನ್ನು ಬಳಸುತ್ತಿದ್ದರೆಂದು ಕಾಣುತ್ತದೆ. ಇದು ಗರಗಸ ಎನ್ನುವ ರೂಪದಲ್ಲಿ ಈಗಲೂ ಬಡಗಿಗಳು ಬಳಸುವ ಉಪಕರಣವಾಗಿದೆ (< ಸಂ. ಕ್ರಕಚ).

---

೧. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.
೨. ಕರ್ನಾಟಕದ ಜನಜೀವನ, ಪು. ೫೯.
೩. (ರೈ) ಎಕ VIII ನಗರ ೩೩ ಕ್ರಿ.ಶ. ೧೨೯೦.
೪. (ರೈ) ಎಕ VII ಶಿಕಾರಿಪುರ ೧೩೬ ಕ್ರಿ.ಶ. ೧೧೭೮.
೫. ಧರ್ಮಾಮೃತಂ: 'ಪರಸಿನೊಳಿರ್ದೆಯಂ ಸೀಳ್ದುಂ ೩-೭೩.'
೬. (ರೈ) ಎಕ XII ಚಿಕ್ಕನಾಯಕನಹಳ್ಳಿ ೨೧ ಕ್ರಿ.ಶ. ೧೧೬೦.
೭. ಎಸ್ಐಐ IX(i) ಕೂಡ್ಲಿಗಿ ೩೪೩ ಕ್ರಿ.ಶ. ೧೨೨೬.
೮. (ರೈ) ಎಕ IX ಕಾನಕಾನಹಳ್ಳಿ ೨೮ ಕ್ರಿ.ಶ. ೧೨೯೨.
೯. ಎಸ್ಐಐ IX(i) ಹರಪನಹಳ್ಳಿ ೨೭೬ ಕ್ರಿ.ಶ. ೧೨೨೬.

**ಗದೆ:**[೧] ತುದಿ ಗುಂಡಾದ ಆಕಾರವಿದ್ದು ಹಿಡಿಕೆಯುಳ್ಳ ಆಯುಧ. ಇದು 'ಪೊಯ್ವ' ಆಯುಧವಾಗಿದೆ. (ಸಂ. ಗದಾ)

**ಹಥಳ:**[೨] ಬಾರುಕೋಲು; ಚಾವಟಿ (ಕ.ಕ. ನಿಘಂಟು. ಸಂ. ೮. ಪು. ೮೮೧೪) ಇದನ್ನು ಯುದ್ಧಾಶ್ವಗಳನ್ನು ನಡೆಸಲು ಬಳಸುತ್ತಿದ್ದರು. ಇದನ್ನು ಯುದ್ಧ ಸಾಮಗ್ರಿ ಎನ್ನಬಹುದು.

**ಗೊಗ್ಗೆ :**[೩] ಚಂದ್ರಪ್ರಭ ಪುರಾಣಂ, ಅನಂತನಾಥ ಪುರಾಣಂ ಮುಂತಾದ ಕಾವ್ಯಗಳಲ್ಲಿ ಗೆಗ್ಗೆ ಮತ್ತು ಗಗ್ಗೆ ಎನ್ನುವ ಪ್ರಯೋಗಗಳಿವೆ. "ಕೋಟೆಯನ್ನು ಹತ್ತುವ ಸಾಧನ ವಿಶೇಷ" (ಪಂಡಿತ ಪ್ರಭಣ್ಣ ನಿಘಂಟು); "ಕೋಟೆ ಕಾಳಗದಲ್ಲಿ ಕೋಟೆಯನ್ನು ಉರುಳಿಸಲು ಉಪಯೋಗಿಸುತ್ತಿದ್ದ ಒಂದು ಸಾಧನ" (ಕ.ಕ. ನಿಘಂಟು. ಸಂ. ೩ ಪುಟ. ೨೫೯೨).

**ಮೊಗ್ಗರ:**[೪] (?)

**ಪಜ್ಜಳಂ:**[೫] (?)

**ದಬ್ಬುಕ:**[೬] ಕಲ್ಲನ್ನು ಸೀಳುವ ಉಪಕರಣ; ಉಳಿ. ಇದನ್ನು ಆಯುಧವೆನ್ನುವುದಕ್ಕಿಂತಲೂ ಸಮರೋಪಕರಣವೆಂದು ಕರೆಯಬಹುದು. ಹೊರಗಿನಿಂದ ಕೋಟೆಯನ್ನು ಪ್ರವೇಶಿಸಲು ಸಾಧ್ಯವಾಗದೆ ಇದ್ದಾಗ, ಕೋಟೆಯ ಕಲ್ಲುಗಳನ್ನು ಸೀಳುವುದರ ಮೂಲಕ ದುರ್ಬಲಗೊಳಿಸುತ್ತಿದ್ದರೆಂದು ಕಾಣುತ್ತದೆ.

**ನಿಚ್ಚಣಿಗೆ:**[೭]

ಕೋಟೆಯನ್ನು ಹತ್ತಲು ಉಪಯುಕ್ತವಾದ ದೊಡ್ಡ ಏಣಿ. (ಸಂ. ನಿಶ್ರೇಣಿಕಾ) ಇದೂ ಕೂಡ ಸಮರೋಪಕರಣವಾಗಿದೆ.

**ಗುರಾಣಿ:** ಇದನ್ನು ರಕ್ಷಣಾಯುಧವೆಂದು ಕರೆಯಬಹುದು. ಶತ್ರುಗಳ ಅಸ್ತ್ರ ಶಸ್ತ್ರಗಳಿಂದ ತಪ್ಪಿಸಿಕೊಳ್ಳಲು ಇದನ್ನು ಅಡ್ಡ ಹಿಡಿದು ರಕ್ಷಿಸಿಕೊಳ್ಳಲು ಬಳಸುತ್ತಿದ್ದರು. ಗುರಾಣಿಯನ್ನು ಹಿಂದಿನ ಶಾಸನಗಳಲ್ಲಿ 'ಪಲಗೆ' ಎಂದು ಕರೆಯಲಾಗಿದೆ.[೮] ನಮ್ಮ ಅಧ್ಯಯನಾವಧಿಯ ಶಾಸನಗಳಲ್ಲಿ ಅದನ್ನು ಹರಿಗೆ,[೯] ಅಡಣ[೧೦] ಎಂದು ಕರೆಯಲಾಗಿದೆ. ವಿವಿಧ ಅಲಂಕರಣದ ಗುರಾಣಿಗಳನ್ನೂ ಬಳಸುತ್ತಿದ್ದರು.[೧೧]

**ಬತ್ತೀಸಾಯುಧ:** ಮೂವತ್ತೆರಡು ಬಗೆಯ ಆಯುಧಗಳು. ಒಂದು ಶಾಸನದಲ್ಲಿ ಬಿಲ್ಲ ಮೂನೂರ್ವರನ್ನು ಕುರಿತು ಹೇಳುವಾಗ '೩೨ ಆಯುಧದಲು ಪರಿಣತರುಂ'[೧೨] ಎಂದು ಬರುತ್ತದೆ. ಒಂದು ಶಾಸನದಲ್ಲಿ 'ಬತ್ತೀಸ ಶಸ್ತ್ರ ಶಾಸ್ತ್ರ ಪ್ರವೀಣ' ಎಂಬ

---

೧. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೭೫.

೨. (ರೈ) ಎಕ V ಚನ್ನರಾಯಪಟ್ಟಣ ೧೯೭ ಕ್ರಿ.ಶ. ೧೨೨೩.
ಎಸ್‌ಐಐ IX(i) ಕೂಡ್ಲಿಗಿ ೩೪೩ ಕ್ರಿ.ಶ. ೧೨೨೬.

೩. ಎಸ್‌ಐಐ XV ನವಲಗುಂದ ೫೯ ಕ್ರಿ.ಶ. ೧೧೮೪.

೪. ಎಸ್‌ಐಐ XV ನವಲಗುಂದ ೫೯ ಕ್ರಿ.ಶ. ೧೧೮೪.

೫. (ರೈ) ಎಕ XII ಚಿಕ್ಕನಾಯಕನಹಳ್ಳಿ ೨೧ ಕ್ರಿ.ಶ. ೧೧೬೦.

೬. ಎಸ್‌ಐಐ IX(i) ಹರಪನಹಳ್ಳಿ ೨೭೬ ಕ್ರಿ.ಶ. ೧೧೮೩.

೭. ಎಸ್‌ಐಐ IX(i) ಹರಪನಹಳ್ಳಿ ೨೭೬ ಕ್ರಿ.ಶ. ೧೧೮೩.

೮. ಎಂ. ಚಿದಾನಂದಮೂರ್ತಿ : ಕಶಾಸಾಂಅ, ಪು. ೨೭೭.

೯. (ರೈ) ಎಕ VIII ಸೊರಬ ೯ ಕ್ರಿ.ಶ. ೧೧೫೨.

೧೦. (ರೈ) ಎಕ VII ಶಿಕಾರಿಪುರ ೨೪೪ ಕ್ರಿ.ಶ. ೧೨೦೩.

೧೧. ಆರ್. ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೭೨.

೧೨. (ರೈ) ಎಕ VII ಮತ್ತು VIII (ಪೂರಕ ಸಂಪುಟ) ಸೊರಬ ೫೮೬ ಕ್ರಿ.ಶ. ೧೨೦೧.

ವಿಶೇಷಣ ಒಬ್ಬ ವೀರನಿಗೆ ಬರುತ್ತದೆ.[೧] ಬತ್ತೀಸಾಯುಧಗಳ ಉಲ್ಲೇಖ ಬಸವಣ್ಣನವರ ವಚನದಲ್ಲಿದೆ.[೨] ವಿವೇಕ ಚಿಂತಾಮಣಿಯಲ್ಲಿ ಎಲ್ಲ ಆಯುಧಗಳ ಹೆಸರುಗಳು ಕಂಡು ಬರುತ್ತದೆ.[೩] ಆದರೆ ಈ ಆಯುಧಗಳ ಪಟ್ಟಿ ಬೇರೆ ಬೇರೆ ಗ್ರಂಥಗಳಲ್ಲಿ ಬೇರೆ ಬೇರೆಯಾಗಿವೆ. ಬತ್ತೀಸಾಯುಧಗಳ ಪ್ರವೀಣನೆಂಬುದು ವಾಸ್ತವವಾಗಿ ಎಲ್ಲ ಮೂವತ್ತೆರಡು ಆಯುಧಗಳಲ್ಲಿ ಪರಿಣತನಲ್ಲದಿದ್ದರೂ ಅನೇಕ ಆಯುಧಗಳಲ್ಲಿ ಪರಿಣತ ಎಂದು ಗ್ರಹಿಸಬಹುದೆಂದು ಕಾಣುತ್ತದೆ. ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳನ್ನು ಆಧರಿಸಿ ಯುದ್ಧ ಕಲೆಯನ್ನು ವಿವರವಾಗಿ ಚಿತ್ರಿಸಿರುವ ಗ್ರಂಥ ಪ್ರಕಟವಾಗಿದೆ.[೪]

**ಯುದ್ಧ ಪೋಷಾಕು:**

ಯೋಧರು ಧರಿಸುತ್ತಿದ್ದ ಕವಚ, ವಸ್ತ್ರ, ಆಭರಣ ಮುಂತಾದವುಗಳನ್ನು ಕುರಿತು ವಿದ್ವಾಂಸರು ಅಧ್ಯಯನವನ್ನು ನಡೆಸಿದ್ದಾರೆ.[೫] ವೀರಗಲ್ಲುಗಳನ್ನು ಗಮನಿಸಿದರೆ ಸಾಮಾನ್ಯವಾಗಿ ವೀರರು ಮೊಳಕಾಲಿನಿಂದ ಮೇಲಕ್ಕೆ ವೀರಗಚ್ಚೆಯನ್ನು ಉಟ್ಟಿರುವುದು ಕಂಡುಬರುತ್ತದೆ. 'ಮೊಳಕಾಲಿನಿಂದ ಕೆಳಗಿರುವ ವೀರಗಚ್ಚೆಯನ್ನು ಎಲ್ಲಿಯೂ ಬಿಡಿಸಿಲ್ಲ.' ಈ ವೀರಗಚ್ಚೆಗೆ ಕೆಲವೊಮ್ಮೆ ನಿರಿಗೆಗಳು ಇರುವಂತೆ ಬಿಡಿಸಲಾಗಿದೆ. ಈ ಕಚ್ಚೆ ಬಿಗಿಯಾಗಿರುವಂತೆ ಒಂದು ರೀತಿಯ ಪಟ್ಟಿಯನ್ನು ಹೊಟ್ಟೆಗೆ ಕಟ್ಟಿಕೊಳ್ಳುತ್ತಿದ್ದರೆಂದು ತೋರುತ್ತದೆ.[೬] ವೀರರು ತಲೆಗೆ, ಬಾಹುಗಳಿಗೆ ಮತ್ತು ದೇಹಕ್ಕೆ ಕವಚವನ್ನು ಧರಿಸುತ್ತಿದ್ದುದಕ್ಕೆ ಶಾಸನಗಳ[೭] ಮತ್ತು ಶಿಲ್ಪಗಳ[೮] ಆಧಾರಗಳು ಇವೆ. ಆದರೆ ಹೆಚ್ಚಿನ ವೀರಗಲ್ಲಿನ ಶಿಲ್ಪಗಳು ಇಂಥ ಕವಚಗಳನ್ನು ಧರಿಸುವಂತೆ ಚಿತ್ರಣಗೊಂಡಿಲ್ಲ.[೯] ವೀರರು ತಮ್ಮ ಕೂದಲು ಕೆದರದಂತೆ ಮತ್ತು ಸುಂದರವಾಗಿ ಕಾಣುವಂತೆ ಮುಡಿಯನ್ನು ಬಟ್ಟೆಯಿಂದ ಕಟ್ಟಿಕೊಳ್ಳುತ್ತಿದ್ದರು.[೧೦] ವೀರಗಲ್ಲಿನ ಶಿಲ್ಪಗಳನ್ನು ಗಮನಿಸಿದರೆ ವೀರರು ಕೊರಳಿಗೆ ಹಾರಗಳನ್ನು, ಕಿವಿಗೆ ಆಭರಣವನ್ನು ಧರಿಸಿರುವುದು ಕಂಡುಬರುತ್ತದೆ. ವೀರಗಲ್ಲುಗಳ ಶಿಲ್ಪಗಳಲ್ಲಿ ವೀರರು ಪಾದರಕ್ಷೆಗಳನ್ನು ಧರಿಸಿದಂತೆ ಕೆತ್ತಲಾಗಿಲ್ಲ. ತುಳಿಲಾಳ್ಗಳು ಪಾದರಕ್ಷೆ ಧರಿಸುತ್ತಿದ್ದಂತೆ ಮಹಾಬಲಕವಿಯ ನೇಮಿನಾಥ ಪುರಾಣದಲ್ಲಿ ಚಿತ್ರಣಗೊಂಡಿದೆ.[೧೧] ಬಮ್ಮ ಎನ್ನುವವನಿಗೆ ಕೋಟೆಯೊಂದನ್ನು ಗೆಲ್ಲು ಎಂದು ವೀಳೆಯ ಕೊಟ್ಟಾಗ ಅವನು 'ವುಟ್ಟನು ಪೊಂಬಟ್ಟೆಗಳಂ ಕಟ್ಟಿದ ನೂಲ್ಪಟ್ಟದಾಮ ಸಿರಪಟ್ಟಿಗಳಂ'[೧೨] ಎಂದು ವರ್ಣನೆ ಬರುತ್ತದೆ. ಯುದ್ಧಗಳಿಗೆ ಹೋಗುವಾಗ ವೀರರು 'ಸಿರಪಟ್ಟಿ'ಗಳನ್ನು ಧರಿಸುತ್ತಿದ್ದರೆಂದು ಇದರಿಂದ ತಿಳಿದುಬರುತ್ತದೆ. ವೀರರು ತಮ್ಮ ತಲೆಗೂದಲನ್ನು ಎತ್ತಿ ಕಟ್ಟುತ್ತಿದ್ದ ಬಟ್ಟೆಯೇ ಸಿರಪಟ್ಟಿಯಾಗಿರಬೇಕು. ಇದನ್ನು ವೀರಗಲ್ಲಿನ ಶಿಲ್ಪಗಳು ಬೆಂಬಲಿಸುತ್ತವೆ.

---

೧. ಎಸ್ಐಐ XV ಬಾಗೇವಾಡಿ ೧೧೬ ಕ್ರಿ.ಶ. ೧೧೭೧.

೨. ಬವ. ೭೩೮.

೩. ವಿ.ಚಿಂ : ಖಡ್ಗ, ಕರಾಚೂರಿ, ಕಕ್ಕಡ, ಕಡುಗತ್ತಿ, ಸೆಣೆಗತ್ತಿ, ಸಬಳ, ಈಟಿ, ಇದುರುಗತ್ತಿ, ಉಬ್ಬಣ, ಕಬ್ಬಿಣ ಕೋಲು, ಚಕ್ರ, ಚಂಡು, ಪೋಲೆ, ಚಲ್ಲೆಹ, ಬಲ್ಲೆಹ, ಬಂಕು, ಬಾಣ, ಗದೆಯ, ನರಾದಿ, ಶೂಲ, ಶಿರಾದಿ, ಚೂರಿ, ಚಿಕ್ಕತಾರಿ, ಕಿರಸೆ, ಪರಶು, ಪಾಶ, ಪಟ್ಟೆಯ, ಮಟ್ಟ, ಅಂಕುಶ, ವಂಕಿ, ಲೌಡಿ ಮತ್ತು ಜವದಾಡೆ ಪು. ೨೧೪.

೪. ಎಚ್. ಜಿ. ಶ್ರೀಧರ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧ ಕಲೆ. ಆಯುಧಗಳ ವಿವರಗಳು ಪು. ೬೬-೭೫.

೫. ಎಂ. ಚಿದಾನಂದಮೂರ್ತಿ : ಕಶಾಸಾಂಅ, ಪು. ೨೭೮; ಆರ್. ಶೇಷಶಾಸ್ತ್ರಿ : ಕರ್ನಾಟಕದ ವೀರಗಲ್ಲುಗಳು, ಪು. ೧೮೪-೧೮೭.

೬. ಆರ್. ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೮೬-೮೭.

೭. (ರೈ) ಎಕ VI ಕಡೂರು ೩೦ ಕ್ರಿ.ಶ. ೧೧೭೦.

೮. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೭೮ ಮತ್ತು ಅದೇ ಪುಟದ ಅಡಿಟಿಪ್ಪಣಿಗಳು.

೯. ಆರ್. ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೮೭.

೧೦. ಅದೇ, ಪು. ೧೮೫.

೧೧. ಎಸ್. ಶೆಟ್ಟರ್ : 'ತುಳಿಲಾಳ್ಗಳ್'. ಸಾಧನೆ ೯:೩, ಪು. ೫೪.

೧೨. (ರೈ) ಎಕ VIII ನಗರ ೩೩ ಕ್ರಿ.ಶ. ೧೨೯೦.

**ಯುದ್ಧ ವಾದ್ಯಗಳು:**

ಯುದ್ಧಗಳಿಗೆ ಹೊರಡುವಾಗ ಮತ್ತು ಯುದ್ಧ ನಡೆಯುವಾಗ ವಾದ್ಯಗಳನ್ನು ಮೊಳಗಿಸುತ್ತಿದ್ದ ವರ್ಣನೆ ಅನೇಕ ಸಾಹಿತ್ಯ ಕೃತಿಗಳಲ್ಲಿ ಮತ್ತು ಶಾಸನಗಳಲ್ಲಿ ನಿರೂಪಿತಗೊಂಡಿದೆ. ಪಂಪಭಾರತ, ಕುಮಾರ ರಾಮನ ಸಾಂಗತ್ಯಗಳಲ್ಲಿ ಯುದ್ಧವಾದ್ಯಗಳು ವಿಶೇಷವಾಗಿ ಕಂಡುಬರುತ್ತವೆ. ಶಾಸನಗಳಲ್ಲಿ ಕಂಡು ಬರುವ ಕೆಲವು ಯುದ್ಧ ವಾದ್ಯಗಳನ್ನು ಗಮನಿಸಬಹುದು. ಸಾವಂತ ಠಕ್ಕುರನ ಪರಾಕ್ರಮವನ್ನು ವರ್ಣಿಸುವಾಗ 'ನಿಮಿರ್ದ್ದು ವೈರಿಭಟರಂ ಸೀಳ್ದಂ ನಭಕೆತ್ತಿದಂ, ಭೇರಿ ಶಂಖ ಮೃದಂಗ ನಾದ ರಭಸಂ ತೀವಲ್ಕೆ'[೧] ಎಂದು ಬರುತ್ತದೆ. ವೀರನ ವೀರಾವೇಶವನ್ನು ಅಧಿಕಗೊಳಿಸುವಂತೆ ಆ ವಾದ್ಯಗಳನ್ನು ನುಡಿಸಿದ ವಿಷಯ ತಿಳಿದು ಬರುತ್ತದೆ. ಅಲ್ಲಮಭೂಪನೆಂಬ ವೀರನ ಪಟಹಧ್ವನಿ ಕೇಳಿ ಶತ್ರು ರಾಜರು ನೀರಿನ ಆಶ್ರಯವನ್ನು ಬೇಡುತ್ತಿದ್ದರೆಂದು ಒಂದು ಶಾಸನ ತಿಳಿಸುತ್ತದೆ.[೨] ವೀರಬಲ್ಲಾಳನು ಭೇರಿಯನ್ನು ಹೊಯ್ಸಿದ ವಿಷಯ ಒಂದು ಶಾಸನದಲ್ಲಿ ನಿರೂಪಿತವಾಗಿದೆ.[೩] ಹರಹನೆಂಬ ವೀರನ ಕಾಳೆಯ ಧ್ವನಿಗೆ ವೈರಿಗಳು ಹೆದರುತ್ತಿದ್ದರೆಂದು ಒಂದು ಶಾಸನ ತಿಳಿಸುತ್ತದೆ.[೪] ಇದೇ ರೀತಿ ಬಿಜ್ಜಳನ 'ಭೇರೀರವ' ದಿಂದ ಗೂರ್ಜರ, ಪಾಂಡ್ಯ, ಮಾಳವರು ಹೆದರಿದರೆಂದು ಶಾಸನವೊಂದು ತಿಳಿಸುತ್ತದೆ.[೫] ಪಂಪಭಾರತದಲ್ಲಿ ಯುದ್ಧಾರಂಭ ಸೂಚನೆಗೆ ಮತ್ತು ಯುದ್ಧಾಂತ್ಯ ಸೂಚನೆಗೆ ವಿಶೇಷ ವಾದ್ಯಗಳನ್ನು ಬಳಸುತ್ತಿದ್ದುದನ್ನು ಗಮನಿಸಲಾಗಿದೆ.[೬] ಎಂ. ಚಿದಾನಂದಮೂರ್ತಿಯವರು ವೀರಗಲ್ಲುಗಳ ಶಿಲ್ಪಗಳ ಮೇಲೆ ಮೂಡಿ ಬಂದಿರುವ ರಣವಾದ್ಯಗಳಲ್ಲಿ ಕೆಲವನ್ನು ಗುರುತಿಸಿದ್ದಾರೆ. ಯುದ್ಧ ರಂಗದಲ್ಲಿ ಕಹಳೆ, ಜಾಗಟೆ, ಮೃದಂಗ, ಪಱೆಗಳನ್ನು ಬಾರಿಸುತ್ತಿರುವುದನ್ನು ಬೇರೆ ಬೇರೆ ವೀರಗಲ್ಲುಗಳಲ್ಲಿ ಗುರುತಿಸಿ ವಾದ್ಯಕಾರರೆಲ್ಲರೂ ನಿರಾಯುಧರಾಗಿ ಯುದ್ಧರಂಗದ ಮಧ್ಯೆ ಅಥವಾ ಅಂಚಿನಲ್ಲಿ ನಿಂತಿರುವಂತೆ ಚಿತ್ರಿತವಾಗಿರುವುದರಿಂದ ಬಹುಶಃ ಇವರನ್ನು ಕೊಲ್ಲುತ್ತಿರಲಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ.[೭]

ಶಂಖನಾದವು ಸಮರ ಪ್ರಾರಂಭ ಮತ್ತು ಮುಕ್ತಾಯವನ್ನು ಸೂಚಿಸುತ್ತದೆಯೆಂದೂ ಯುದ್ಧದ ಕೊನೆಯಲ್ಲಿ ಶಂಖನಾದವಾದರೆ ಅದನ್ನು ಊದಿದವನ ಪಕ್ಷಕ್ಕೆ ಜಯವೆಂದು ಅದು ಸೂಚಿಸುವುದೆಂದು ಕೆ. ಶ್ರೀಕಂಠಯ್ಯ ಅಭಿಪ್ರಾಯ ಪಡುತ್ತಾರೆ.[೮] ಆದರೆ ಈ ಸಂಗತಿಯನ್ನು ಶಾಸನಗಳ ಆಧಾರದಿಂದ ಖಚಿತಪಡಿಸಲು ಸಾಧ್ಯವಾಗುವುದಿಲ್ಲ.

ಸಾಮಂತರಿಗೆ, ಅಧಿಕಾರಿಗಳಿಗೆ ಮತ್ತು ದೇವಾಲಯಗಳಿಗೆ ಇದ್ದ ವಾದ್ಯಮರ್ಯಾದೆಯಿಂದ ಭಿನ್ನವಾಗಿ ಇದ್ದದ್ದು ಬೇಟೆಗೆ ಹೊರಡುವಾಗ ಬಳಸುತ್ತಿದ್ದ ಚರ್ಮವಾದ್ಯ. ಧರ್ಮಾಮೃತದಲ್ಲಿ 'ಪಂಚಮಹಾಶಬ್ದವನೊಲ್ಲದೆ ಬೇಂಟೆಪಱೆಯಂ ಪೊಯ್ಸಿ'[೯] ಎಂಬ ಮಾತು ಬರುತ್ತದೆ. ಪಱೆ ಎನ್ನುವುದು ರಣವಾದ್ಯಗಳಲ್ಲಿ ಒಂದು; 'ಬೇಂಟೆಪಱೆ' ಬೇಟೆಯ ಕಾಲದಲ್ಲಿ ಬಳಸುತ್ತಿದ್ದ ವಿಶಿಷ್ಟವಾದ ಪಱೆ ಇರಬೇಕು.

---

೧. ಕಸಾಪಪ ೨೮:೧ ಹಾನಗಲ್ಲು ಕ್ರಿ.ಶ. ೧೨೩೮.

೨. ಕಇ IV ಹಿರೇಕೆರೂರು ೧೩ ಕ್ರಿ.ಶ. ೧೧೬೫.

೩. (ಮೈ) ಎಕ II ಶ್ರವಣಬೆಳಗೊಳ ೫೬೫ ಕ್ರಿ.ಶ. ೧೧೭೩.

೪. (ರೈ) ಎಕ VI ಕಡೂರು ೧೪೯ ಕ್ರಿ.ಶ. ೧೨೦೫.

೫. ಆರ್. ನರಸಿಂಹಾಚಾರ್ಯ (ಸಂ) ಶಾಪಮಂ, ಪು. ೧೫೬.

೬. ಆರ್.ಶೇಷಶಾಸ್ತ್ರೀ, ಪೂರ್ವೋಕ್ತ, ಪು. ೧೬೭.

೭. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೭೮-೭೯.

೮. ಕನ್ನಡ ಕಾವ್ಯಗಳಲ್ಲಿ ಸಮರ ಚಿತ್ರಗಳು, ಪು. ೧೦೧.

೯. ಧರ್ಮಾಮೃತಂ ೭:೬೨ ಪದ್ಯದನಂತರದ ಗದ್ಯ, ಪು. ೩೧೨.

ಕಾಡುಪ್ರಾಣಿಗಳನ್ನು ಓಡಿಸಲು ಕಹಳೆ, ಕೊಂಬು, ಶಂಖ, ಹರೆ ಮುಂತಾದ ರಣವಾದ್ಯಗಳನ್ನು ಬಳಸುತ್ತಿದ್ದರೆಂದು ಟಿಬೆಟ್ಟಿನ ಬೌದ್ಧ ಪ್ರವಾಸಿಯೊಬ್ಬ ಅಭಿಪ್ರಾಯಪಟ್ಟಿದ್ದಾನೆ. ಪ್ರ.ಕಂ. ೩. I, ಪು.೪೨೦.

**ಧ್ವಜಗಳು:**

ಧ್ವಜಗಳು ಯಾವುದೇ ಜನಾಂಗಕ್ಕೆ ಮೇಲ್ಮೆಯ ಮತ್ತು ಪ್ರಾಬಲ್ಯದ ಸಂಕೇತವಾಗಿ ಭಾವನಾತ್ಮಕ ಸಂಬಂಧವನ್ನು ಉಳ್ಳವಾಗಿವೆ. ವೀರರ, ಯೋಧರ ಪೌರುಷವನ್ನು ಅಧಿಕಗೊಳಿಸುವ ಶಕ್ತಿ ಧ್ವಜಗಳಿಗಿವೆ. ಯುದ್ಧಕ್ಕೆ ಸೈನ್ಯ ಹೊರಟಿತೆಂದರೆ ಅದರೊಂದಿಗೆ ಬಹು ಸಂಖ್ಯೆಯ ಧ್ವಜಗಳೂ ಇರುತ್ತಿದ್ದವು. ಯುದ್ಧರಂಗದಲ್ಲಿ ಧ್ವಜಗಳನ್ನು ಎತ್ತಿ ಹಿಡಿಯುತ್ತಿದ್ದರು. ಆನೆಗಳ ಅಂಬಾರಿಗಳ ಮೇಲೆ ಧ್ವಜಗಳಿರುತ್ತಿದ್ದವು.[೧] ಅನೇಕ ವೀರಗಲ್ಲುಗಳಲ್ಲಿ ಧ್ವಜಗಳನ್ನು ಹಿಡಿದಿರುವ ವೀರರನ್ನು ಕಾಣಬಹುದು.[೨] ಬೇರೆ ಬೇರೆ ವೀರಗಲ್ಲುಗಳಲ್ಲಿ ಧ್ವಜಗಳ ಆಕಾರ ಬೇರೆ ಬೇರೆ ಬೇರೆಯಾಗಿರುವುದನ್ನು ಗಮನಿಸಲಾಗಿದೆ.[೩]

ಧ್ವಜಗಳಂತೆ ರಾಜರ, ಸಾಮಂತರ ಛತ್ರಿಗಳನ್ನು ಯುದ್ಧಗಳಿಗೆ ಹೊರಡುವಾಗ ರಣರಂಗಕ್ಕೆ ತೆಗೆದುಕೊಂಡು ಹೋಗುತ್ತಿದ್ದ ಪದ್ಧತಿ ಇದ್ದಿತು. ವೀರಗಲ್ಲುಗಳ ಶಿಲ್ಪದಲ್ಲಿ ಹೋರಾಡುತ್ತಿರುವ ವೀರನು ಪ್ರಮುಖ ವ್ಯಕ್ತಿ ಅಥವಾ ಅಧಿಕಾರಸ್ಥ ಎನ್ನುವುದನ್ನು ತೋರಿಸಲೆಂಬಂತೆ ಅವನಿಗೆ ಛತ್ರಿಯನ್ನು ಹಿಡಿದಿರುವಂತಹ ಶಿಲ್ಪಗಳನ್ನು ಕಾಣಬಹುದು. ಯುದ್ಧದಲ್ಲಿ ಗೆದ್ದಾಗ ಶತ್ರುಗಳ ಧ್ವಜಗಳನ್ನು ತರುತ್ತಿದ್ದಂತೆ ಛತ್ರವನ್ನೂ ತರುತ್ತಿದ್ದುದು ಕಂಡುಬರುತ್ತದೆ.[೪]

**ಸಮರ ಪರಿವಾರ:**

ಯುದ್ಧ ಭೂಮಿಗೆ ಅಗತ್ಯವಾದ ಸಾಮಾನು ಸರಂಜಾಮುಗಳನ್ನು ಹೊರುವ, ಒದಗಿಸುವ ಒಂದು ಸೈನಿಕೇತರಪಡೆಯೂ ಇರುತ್ತಿದ್ದಿತು. ಇಂಥ ಸೈನಿಕೇತರ ಪಡೆಯನ್ನು 'ಕೀಳಾಳು' ಎಂದು ಕರೆಯುತ್ತಿದ್ದರು. ಒಂದು ಗ್ರಾಮದ ತುರುಗಳನ್ನು ಅಪಹರಿಸಿ ಊರಳಿವನ್ನು ಮಾಡಿದಾಗ ವೀರನೊಬ್ಬನು ತುರುಗಳನ್ನು ರಕ್ಷಿಸಿ ಕೋಲಾಳುಗಳನ್ನು ಕೊಲ್ಲುತ್ತಾ ಬರಲು 'ಕೀಳಾಳು ಕಾಣಲೊಡಂ ಕೈಮುಗಿಯಲಾ ಕಣದೊಳಗೆ...' ಹೋರಾಡಿ ಮಡಿದ ವಿಷಯ ಬರುತ್ತದೆ.[೫] ಪಂಪಭಾರತ, ಪಂಚತಂತ್ರ ಮುಂತಾದವುಗಳಲ್ಲಿ ಕೀಳಾಳುಗಳಿಂದ ವಸ್ತುಗಳನ್ನು ಹೊರಿಸಿಕೊಂಡು ಬರುವ ಹಾಗೂ ಆಯುಧಗಳನ್ನು ಅವರಿಂದ ಪಡೆಯುವ ಮತ್ತು ಹಿಂತಿರುಗಿಸುವ ವಿವರಗಳು ದೊರೆಯುತ್ತವೆ.[೬] ಕಾಯ್ಕಿಣಿಯ ವೀರಗಲ್ಲಿನಲ್ಲಿ ರಣವಾದ್ಯವನ್ನು ಬಾರಿಸುತ್ತಿರುವವರನ್ನು, ವೀರನ ಪಲ್ಲಕ್ಕಿಯ ಹಿಂದೆ ಇಬ್ಬರು ಸಾಮಗ್ರಿಯನ್ನು ಹೊತ್ತು ನಡೆದಿರುವುದನ್ನು ಕಾಣಬಹುದಾಗಿದೆ.[೭] ಕೋಲಾರದ ವೀರಗಲ್ಲಿನಲ್ಲಿ ಇಬ್ಬರು ಕಾವಡಿಗಳನ್ನು ಹೊತ್ತವರನ್ನು ಮತ್ತು ಹುನಗುಂದದ ವೀರಗಲ್ಲಿನಲ್ಲಿ ಒಬ್ಬ ವ್ಯಕ್ತಿ ಕಾವಡಿಯನ್ನು ಹೊತ್ತಿರುವುದನ್ನು ಕಾಣಬಹುದು. ಯುದ್ಧದ ಸಾಧನ ಸಾಮಗ್ರಿಗಳನ್ನು ಹೊರುತ್ತಾ ಒದಗಿಸುತ್ತ ಯುದ್ಧರಂಗದಲ್ಲಿರುತ್ತಿದ್ದ ಇವರನ್ನು ಕೀಳಾಳುಗಳೆಂದು ಕರೆಯುತ್ತಿದ್ದರು. ಇವರು ವೀರನೊಬ್ಬನಿಗೆ ಕೈ ಮುಗಿದು ಶರಣಾಗಿರುವುದನ್ನು ಗಮನಿಸಿದರೆ, ಇವರು ಆಯುಧಗಳನ್ನು ಹಿಡಿಯುತ್ತಿದ್ದುದು ವೀರರಿಗೆ ಒದಗಿಸಲು ಮಾತ್ರವೇ ಹೊರತು ಹೋರಾಡಲು ಅಲ್ಲವೆಂದು ಭಾವಿಸಬೇಕಾಗುತ್ತದೆ.

---

೧. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೭೯.

೨. ಕೋಲಾರಮ್ಮ ದೇವಾಲಯದ ಆವರಣದಲ್ಲಿರುವ ವೀರಗಲ್ಲಿನಲ್ಲಿ ಅದನ್ನು ಕಾಣಬಹುದು.

೩. ಆರ್.ಶೇಷಶಾಸ್ತ್ರೀ : ಪೂರ್ವೋಕ್ತ, ಪು. ೧೭೩-೭೪.

೪. (ರೈ) ಎಕ XII ಚಿಕ್ಕನಾಯಕನಹಳ್ಳಿ ೩೬ ಕ್ರಿ.ಶ. ೧೧೭೭.

೫. ಎಸ್ಐಐ XVIII ರಾಣೆಬೆನ್ನೂರು ೨೧೭ ಕ್ರಿ.ಶ. ೧೨೩೫.

೬. ಪಂಪ ಭಾರತ. ೮-೫೪ ವಚನ; ಪಂಚತಂತ್ರ ೧೯೫-೯.

೭. ಆರ್.ಶೇಷಶಾಸ್ತ್ರೀ : ಪೂರ್ವೋಕ್ತ, ಪು. ೧೬೮-೬೯.

ರಾಜರು ಯುದ್ಧಗಳಿಗೆ ಹೋಗುವಾಗ ಅಪಾರವಾದ ಪರಿವಾರವನ್ನು ಕರೆದುಕೊಂಡು ಹೋಗುತ್ತಿದ್ದರು. ಆನೆ ಕುದುರೆಗಳ ಜೊತೆ ಭಂಡಾರ ಮತ್ತು ರಾಣಿಯರನ್ನು ಕರೆದುಕೊಂಡು ಹೋಗುತ್ತಿದ್ದರೆಂಬುದಕ್ಕೆ ಸೂಚನೆಗಳಿವೆ. ಮಾಧವ ದಂಡಾಧಿಪನು 'ಶತ್ರುಗಳ ಆನೆ ಕುದುರೆ ಭಂಡಾರ ಪೆಂಡಿರು ಧವಳಛತ್ರವನ್ನು' ಗೆದ್ದು ತಂದು ತನ್ನ ರಾಜನಿಗೆ ಕೊಟ್ಟನೆಂದು ಶಾಸನವೊಂದು ಹೇಳುತ್ತದೆ.[೧] ಯುದ್ಧದ ಸಮಯದಲ್ಲಿ ಜನರಿಂದ ಮೂವಿಟ್ಟಿಯನ್ನು [೨] ಪಡೆಯುತ್ತಿದ್ದರು. ಅನೇಕ ಶಾಸನಗಳು ರಾಜರು ಮಾಡಿಸುತ್ತಿದ್ದ ಈ ಮೂವಿಟ್ಟಿಗಳ ಉಲ್ಲೇಖವನ್ನು ಮಾಡುತ್ತವೆ.[೩]

**ಯುದ್ಧದ ನಿಯಮಗಳು-ಧರ್ಮಯುದ್ಧ :**

ಯುದ್ಧ ಮೂಲತಃ ಶತ್ರುಗಳನ್ನು ಎಲ್ಲ ರೀತಿಯಲ್ಲೂ ನಾಶಮಾಡುವ ಉದ್ದೇಶದ್ದೇ ಆದರೂ ಕೆಲವು ನಿಶ್ಚಿತ ನಿಯಮಗಳನ್ನು ತೀರಾ ಪ್ರಾಚೀನ ಕಾಲದಿಂದಲೂ ಶಾಸ್ತ್ರ ಗ್ರಂಥಗಳು ಹೇಳುತ್ತಾ ಬಂದಿವೆ. ಯುದ್ಧಗಳಲ್ಲಿ ಅವನ್ನು ಕೆಲವು ಮಟ್ಟಿಗೆ ಅನುಸರಿಸುತ್ತಲೂ ಬಂದಿರಬೇಕು. ವೀರನು ಹೋರಾಡಲು ಆರಿಸಿಕೊಳ್ಳಬೇಕಾದ ವೀರ, ಯಾರನ್ನು ಕೊಲ್ಲಬಾರದು, ಯಾರನ್ನು ರಕ್ಷಿಸಬೇಕು ಎಂಬಂತಹ ವಿಷಯಗಳಲ್ಲಿ ಕೆಲವು ನಿಯಮಗಳನ್ನು ಅನುಸರಿಸಿಕೊಂಡು ಬರುತ್ತಿದ್ದರು. ಕರ್ನಾಟಕದ ಶಾಸನಗಳನ್ನು ಗಮನಿಸಿದರೆ ಇಂಥ ಕೆಲವು ನಿಯಮಗಳನ್ನು ಅನುಸರಿಸುತ್ತಿದ್ದಂತೆ ಕಂಡುಬರುತ್ತದೆ.

ಶಾಸನವೊಂದರಲ್ಲಿ ಮಲ್ಲನೆಂಬ ವೀರನ ವರ್ಣನೆ ಹೀಗಿದೆ- ಅವನು ಶರಣೆಂದು ಬಂದವರನ್ನು ಕಾಯುವನು. ಯುದ್ಧಕ್ಕೆ ನಿಂತರೆ ಅವರ ಸೀಸಕ ಬಾಹುರಕ್ಕೆಗಳು ಕಾಯಲಾರವು. ಅವರನ್ನು ಕಾಯಲು 'ಉಟ್ಟ ನಿಜಿ', ಬಿಟ್ಟ ಸಿರಂ ಮುಗಿದಿದ 'ಕೆಯ್ ಸಮಂತಿಕ್ಕಿದ ಕೆಯ್ದು ಹೊಕ್ಕ ಜಳಮಪ್ಪಿದ ಲಿಂಗಮೆ ಕಾವುವಾಜಿಯೊಳ್'[೪] ಎಂದು ಬರುತ್ತದೆ. ಯಾರು ಉಟ್ಟ ಬಟ್ಟೆಯನ್ನು ತೆಗೆಯುವರೊ, ತಲೆಗೂದಲನ್ನು ಕೆದರಿಕೊಳ್ಳುವರೊ, ಕೈಮುಗಿದು ಶರಣಾಗುವರೋ, ಆಯುಧವನ್ನು ಕೆಳಗಿಡುವರೊ, ನೀರನ್ನು ಪ್ರವೇಶಮಾಡುವರೊ, ಲಿಂಗವನ್ನಪ್ಪಿಕೊಳ್ಳುವರೋ ಅಂಥವರನ್ನು ಅವನು ಕೊಲ್ಲುವುದಿಲ್ಲ. ಇನ್ನೊಂದು ಶಾಸನ ಬೆಟ್ಟವನ್ನು ಏರಿದವರನ್ನು, ಬಟ್ಟೆ ತೆಗೆದಿರುವವರನ್ನು, ನದಿಗಳಲ್ಲಿ ಇಳಿದವರನ್ನು, ಬೆರಳು ಕಚ್ಚಿದವರನ್ನು, ಹುತ್ತವನ್ನೇರಿದವರನ್ನು ಕೊಲ್ಲುತ್ತಿರಲಿಲ್ಲವೆಂದು ತಿಳಿಸುತ್ತದೆ.[೫] ಇನ್ನೊಂದು ಶಾಸನದಲ್ಲಿ ಹುಲ್ಲು ಕಚ್ಚಿದವರನ್ನು, ಹುತ್ತವನ್ನು ಹತ್ತಿದವರನ್ನು ಕೊಲ್ಲಲೊಲ್ಲದೆ ಹೋರಾಡಿ ಮಡಿದ ವೀರನ ವಿಷಯ ಬರುತ್ತದೆ.[೬] ಬಿಜ್ಜಳನ ಪರಾಕ್ರಮವನ್ನು ವರ್ಣಿಸುವ ಒಂದು ಶಾಸನ ಅವನು ಎದುರಾದವರನ್ನು ತುಂಡರಿಸಿದನೆಂದೂ ಹೋರಾಡದೆ ಓಡುವವರು ದೇವಾಲಯವನ್ನು ಅಥವಾ ಕಾಡನ್ನು ಹೊಗುವಂತೆ ಮಾಡಿದನೆಂದು ತಿಳಿಸುತ್ತದೆ.[೭]

---

೧. (ರೈ) ಎಕ XII ಚಿಕ್ಕನಾಯಕನಹಳ್ಳಿ ೩೬ ಕ್ರಿ.ಶ. ೧೧೭೭.

೨. ಪ್ರತಿಫಲವಿಲ್ಲದೆ ಮಾಡಬೇಕಾದ ಒತ್ತಾಯದ ಕೆಲಸವೇ 'ಬಿಟ್ಟಿ'. ಅದು ಮೂರು ರೀತಿಯದು; ಅದೇ ಮೂವಿಟ್ಟಿ. ೧) ಶೋಧನ ಕರ್ಮ - ಮಾರ್ಗ ಮಧ್ಯದ ರಸ್ತೆಯನ್ನು ಸರಿಪಡಿಸುವುದು; ಸೇತುವೆ ನದಿ ಬಾವಿ ಇತ್ಯಾದಿಗಳನ್ನು ಪರೀಕ್ಷಿಸುವುದು. ೨) ವಹನ ಕರ್ಮ - ಆಯುಧ, ಕವಚ, ಧಾನ್ಯ ಮುಂತಾದುವನ್ನು ಹೊರುವುದು ೩) ಅಪನಯನ ಕರ್ಮ - ಪೆಟ್ಟು ತಿಂದು ಕೆಳಕ್ಕೆ ಬಿದ್ದ ಸೈನಿಕರನ್ನು ಅವರ ಆಯುಧಗಳ ಸಮೇತ ಹೊರುವುದು. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೫೬.

೩. (ರೈ) ಎಕ XI ದಾವಣಗೆರೆ ೩೨ ಕ್ರಿ.ಶ. ೧೧೭೦; (ಮೈ) ಎಕ II ಶ್ರವಣಬೆಳಗೊಳ ೬೯ ಕ್ರಿ.ಶ. ೧೨ ಶಮಾ.

೪. (ರೈ) ಎಕ VI ಕಡೂರು ೩೦ ಕ್ರಿ.ಶ. ೧೧೭೦.

೫. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.

೬. ಎಂಎಆರ್ ೧೯೩೦ ಸಾಗರ ೬೭ ಕ್ರಿ.ಶ. ೧೧೬೪.

೭. ಎಸ್‌ಐಐ XV ಬಾಗೇವಾಡಿ ೧೧೫ ಕ್ರಿ.ಶ. ೧೧೭೦.

ಹೀಗೆ ವೀರನಿಗೆ ಯಾರೇ ಆಗಲಿ ಶರಣಾಗತರಾದರೆ ಅಥವಾ ಮೇಲಿನ ಯಾವುದೇ ರೀತಿಯಲ್ಲಿ ನಡೆದುಕೊಂಡರೆ ಅಂಥವರನ್ನು ಕೊಲ್ಲುತ್ತಿರಲಿಲ್ಲ. ವೀರಗಲ್ಲಿನ ಶಿಲ್ಪವೊಂದರಲ್ಲಿ ತಲೆ ಕೆದರಿಕೊಂಡು ವೀರನ ಪಾದಗಳ ಮೇಲೆ ಬಿದ್ದಿರುವ ವ್ಯಕ್ತಿಯನ್ನು ಕಾಣಬಹುದಾಗಿದೆ. ಆದರೆ ವೀರನೊಂದಿಗೆ ಹೋರಾಡಿ ಮಡಿದ ವೀರರ ತಲೆಯ ಮುಡಿಗಳು ಕಟ್ಟಿದಂತೆ ಚಿತ್ರಿಸಲಾಗಿದೆ.[೧] ತಲೆಗೂದಲನ್ನು ಕೆದರಿಕೊಳ್ಳುವುದೂ ಸಹ ಶರಣಾಗತನಾಗುವ ಒಂದು ಸಂಕೇತವೇ ಎಂಬ ಆರ್. ಶೇಷಶಾಸ್ತ್ರಿಯವರ ಅಭಿಪ್ರಾಯವನ್ನು 'ಬಿಟ್ಟ ಸಿರಂ' ಎಂಬ ಶಾಸನದ[೨] ಮಾತು ಸಮರ್ಥಿಸುತ್ತದೆ.

ಯುದ್ಧದಲ್ಲಿ ವಿಜಯವನ್ನು ಪಡೆದಾಗ ಗೆದ್ದ ಸೈನಿಕರು ಅನೇಕ ದುಷ್ಕೃತ್ಯಗಳಲ್ಲಿ ತೊಡಗಿರುತ್ತಿದ್ದರೆಂಬುದಕ್ಕೆ ಶಾಸನಗಳಲ್ಲಿ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. ಸೈನಿಕರು ಊರನ್ನು ಸುಡುವ, ಬೆಳೆಗಳನ್ನು ನಾಶಪಡಿಸುವ, ಲೂಟಿಮಾಡುವ, ಹೆಂಗಸರ ಮಾನಾಪಹರಣ ಮಾಡುವಂತಹ ಹೀನ ನಡವಳಿಕೆಗಳಲ್ಲಿ ತೊಡಗುತ್ತಿದ್ದರು. ನೇರವಾಗಿ ಶತ್ರುಗಳಲ್ಲದ ಅಮಾಯಕ ಪ್ರಜೆಗಳ ಮೇಲೆ ಈ ರೀತಿಯ ದುರಾಕ್ರಮಣ ಮಾಡುತ್ತಿದ್ದುದು ಯುದ್ಧದ ಭೀಕರ ಪರಿಣಾಮವಾಗಿದ್ದಿತು. ಸಿಂಹಣ ದೇವನು ಮೂವತ್ತುಸಾವಿರ ಕುದುರೆ... ಮತ್ತು ಅಪಾರ ಸೈನ್ಯದೆಂದಿಗೆ ಬಂದು ಗುತ್ತಿದುರ್ಗವನ್ನು ಆಕ್ರಮಣಮಾಡಿ ನಾಡ ಸುಟ್ಟು ಸೂರೆ ಮಾಡಿದ ವಿಷಯ ಶಾಸನವೊಂದರಿಂದ ತಿಳಿದುಬರುತ್ತದೆ.[೩] ಯುದ್ಧಕ್ಕೆ ಬಯಲನ್ನು ಆರಿಸಿಕೊಳ್ಳಬೇಕು, ಸಮಾನ ವೀರನು ಸಮಾನ ವೀರನೊಂದಿಗೆ ಹೋರಾಡಬೇಕು ಎಂಬಂತಹ ನಿಯಮಗಳು ಅನುಸರಿಸಲ್ಪಡುತ್ತಿದ್ದವೆ ಎಂಬುದು ಪ್ರಶ್ನೆಯಾಗುತ್ತದೆ. 'ಪ್ರಾಚೀನ ಕರ್ನಾಟಕದಲ್ಲಿ ಈ ನೀತಿಯನ್ನು ಎಷ್ಟರಮಟ್ಟಿಗೆ ಅನುಸರಿಸುತ್ತಿದ್ದರೋ ತಿಳಿಯದು'[೪] ಎಂ. ಚಿದಾನಂದಮೂರ್ತಿ ಸಂಶಯ ಸಕಾರಣವಾಗಿಯೇ ಇದೆ.

**ಯುದ್ಧಪೂರ್ವದಲ್ಲಿ :**

ಯುದ್ಧಗಳು ಅನೇಕ ಕಾರಣಗಳಿಂದ ನಡೆಯುತ್ತಿದ್ದವು. ರಾಜನು ತನ್ನ ಉದ್ದೇಶ ಸಫಲತೆಗೆ ಸಾಮ, ದಾನ, ಭೇದ ಮಾರ್ಗಗಳನ್ನು ಅನುಸರಿಸಿ ವಿಫಲನಾದನಂತರವೇ ದಂಡವನ್ನು ಅನುಸರಿಸಬೇಕೆಂದು ಪ್ರಾಚೀನ ಶಾಸ್ತ್ರ ಗ್ರಂಥಗಳು ಹೇಳಿವೆ. ಯಾವುದೇ ದೊಡ್ಡ ಯುದ್ಧದ ಹಿಂದೆ ಸಾಕಷ್ಟು ಪೂರ್ವ ಸಿದ್ಧತೆ ಇರುತ್ತಿತ್ತು. ಯುದ್ಧದ ಸ್ಥಿತಿ ಬಂದಾಗ ಮಂತ್ರಿಗಳ ಜೊತೆ ರಾಜನು ತುಂಬ ಗೌಪ್ಯವಾಗಿ ಮಂತ್ರಾಲೋಚನೆಯ ಸಭೆಯನ್ನು ನಡೆಸುತ್ತಿದ್ದನು. ಇಂಥ ಸಭೆಗಳಲ್ಲಿ ಸಂಧಿವಿಗ್ರಹಿ ಬಹು ಪ್ರಮುಖವಾದ ಸ್ಥಾನವನ್ನು ವಹಿಸುತ್ತಿದ್ದನೆಂದು ಹೇಳಬಹುದು. ಕನ್ನಡ ಶಾಸನಗಳಲ್ಲಿ ಅನೇಕ ಸಂಧಿವಿಗ್ರಹಿಗಳ ಉಲ್ಲೇಖ ಕಂಡು ಬರುತ್ತವೆ. ಅವರ ಕಾರ್ಯ ತುಂಬ ಜವಾಬ್ದಾರಿಯುತವಾದುದಾಗಿತ್ತು.

ಕುಂಜನಂಬಿ[೫] ಎಂಬುವವನು ಹೊಯ್ಸಳ ರಾಜನಿಗೆ ಸಂಧಿವಿಗ್ರಹಿಯಾಗಿ ತುಂಬ ಸಮರ್ಥವಾಗಿ ಕಾರ್ಯನಿರ್ವಹಿಸಿದಂತೆ ತಿಳಿದುಬರುತ್ತದೆ. ಮೂಲತಃ ರತ್ನಪಡಿ ವ್ಯಾಪಾರಿಯ ವಂಶದಿಂದ ಬಂದ ಅವನು ರತ್ನಪರೀಕ್ಷೆಯಲ್ಲಿ ಹೇಗೆ ಸಹಜವಾಗಿ ಪರಿಣತನೋ ಹಾಗೆಯೇ ಬೇರೆ ಬೇರೆ ರಾಜರ ಚಿತ್ತವೃತ್ತಿಗಳನ್ನು ಅರಿಯುವುದರಲ್ಲೂ ಸಮರ್ಥನಾಗಿದ್ದನು. ಹೊಯ್ಸಳ ರಾಯನಿಗೂ ಉತ್ತರದ ಸೇವುಣರಿಗೂ ಸಮರ್ಥವಾಗಿ ಸಂಧಿಯನ್ನು ಏರ್ಪಡಿಸಿ ಸತ್ಯವಾಕ್ಯನೆಂದೂ, ದಯಾಳಂಕಾರನೆಂದೂ ಕೀರ್ತಿತನಾಗಿದ್ದನು. ಶಾಸ್ತ್ರ ಗ್ರಂಥಗಳು ನಿರೀಕ್ಷಿಸುವ ಉತ್ತಮ ಗುಣಗಳನ್ನು ಕನ್ನಡನಾಡಿನ ಸಂಧಿವಿಗ್ರಹಿಗಳು ಹೊಂದಿದ್ದರು ಎಂದು ಹೇಳಬಹುದು.

---

೧. ಆರ್. ಶೇಷಶಾಸ್ತ್ರೀ : ಪೂರ್ವೋಕ್ತ, ಪು. ೧೬೭.

೨. (ರೈ) ಎಕ VI ಕಡೂರು ೩೦ ಕ್ರಿ.ಶ. ೧೧೭೦.

೩. (ರೈ) ಎಕ VIII ಸೊರಬ ೩೮೯ ಕ್ರಿ.ಶ. ೧೨೩೯.

೪. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೭೦.

೫. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.

ಯಾವುದೇ ಕಾರಣಕ್ಕೆ ಸಂಧಾನ ವಿಫಲವಾದರೆ ಯುದ್ಧ ಅನಿವಾರ್ಯವಾಗುತ್ತಿತ್ತು. ರಾಜನು ತನ್ನ ಮೂಲ ಸೈನ್ಯಬಲದ ಜೊತೆಯಲ್ಲಿ ಸಾಮಂತರಿಂದ, ಬಂಧುಗಳಿಂದ, ಸ್ನೇಹಿತರಿಂದ, ಸೈನ್ಯವನ್ನು ಸಂಗ್ರಹಿಸಬೇಕಾಗುತ್ತಿತ್ತು. ಅದರೊಂದಿಗೆ ಸಾಕಷ್ಟು ದೊಡ್ಡ ಮೊತ್ತದ ಶಸ್ತ್ರಾಸ್ತ್ರಗಳ ಸಂಗ್ರಹವನ್ನೂ ಮಾಡಿಕೊಳ್ಳಬೇಕಾಗುತ್ತಿದ್ದಿತು. ರಾಜನು ಶತ್ರುವನ್ನು ಎದುರಿಸುವ ಪ್ರದೇಶಕ್ಕೆ ಹೋಗಲು ಸರ್ವಸಿದ್ಧತೆಗಳನ್ನೂ ಮಾಡಿಕೊಂಡು ಹೊರಡುತ್ತಿದ್ದನು. ರಾಜನ ಜೊತೆಯಲ್ಲಿ ಮಂತ್ರಿಗಳು, ಸೇನಾಧಿಪತಿ, ಇತರ ಅಧಿಕಾರಿಗಳು, ಅಪಾರ ಸೈನ್ಯ, ಪರಿವಾರ,[೧] ರಾಣಿಯರು, ಭಂಡಾರ ಹೀಗೆ ಬಹು ದೊಡ್ಡ ಸಂಖ್ಯೆಯ ಜನಸಮೂಹ ಹೊರಡುತ್ತಿತ್ತು. ಅಲ್ಲಲ್ಲೇ ಬೀಡು ಬಿಡುತ್ತಾ ಪ್ರಯಾಣ ಮುಂದುವರಿಯುತ್ತಿತ್ತು.[೨] ಇಂಥ ಒಂದು ಬೀಡುಬಿಟ್ಟಾಗ ಹೊಸವುರಿನಲ್ಲಿ ತೋಟಕ್ಕೆ ನಷ್ಟವಾದಾಗ ರಾಜನು ಪರಿಹಾರವಾಗಿ ಕೆಲವು ತೆರಿಗೆಗಳನ್ನು ಶಾಶ್ವತವಾಗಿ ಬಿಟ್ಟ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೩] ಸೈನಿಕರು ಬೀಡು ಬಿಟ್ಟಾಗ ಕೆಲವು ಸಾರಿ ಅತಿರೇಕವಾಗಿ ನಡೆದುಕೊಳ್ಳುತ್ತಿದ್ದರೆಂದು ಇದರಿಂದ ಭಾವಿಸಬಹುದು.

ಯುದ್ಧದ ಮೊದಲು ಆಯುಧಗಳನ್ನು ಸಾಣೆಹಿಡಿದು ಹರಿತಗೊಳಿಸಿಕೊಳ್ಳುತ್ತಿದ್ದರು. ಬಲ್ಲಾಳ ಎಂಬ ದಂಡನಾಥನ ಪರಾಕ್ರಮುವನ್ನು ಹೇಳುವ ನೆಪದಲ್ಲಿ ಆಯುಧಗಳನ್ನು ಹರಿತಗೊಳಿಸುವ ವಿಷಯ ಹೀಗೆ ನಿರೂಪಿತವಾಗಿದೆ. 'ವಿರೋಧಿರಾಯರಥಿನೀಶರ ನೆತ್ತಿಯ ತುಪ್ಪಸಾಣೆಯೊಳ್ ಕಿಡಿಗಿಡಿಗುಟ್ಟೆ ಘಾರುಘಾಣಿಲೆಂಬಿನೆಗಂ ಮಸೆವಂ ಕೃಪಾಣಮಂ'[೪].

**ರಣವೀಳ್ಯ :**

ರಾಜ ಅಥವಾ ಅಧಿಕಾರಿಗಳು ಕೆಲವು ಸಾರಿ ಯುದ್ಧಕ್ಕೆ ಮೊದಲು ವೀರನೊಬ್ಬನನ್ನು ಕರೆದು ವೀಳೆಯವನ್ನು ಕೊಟ್ಟು ಒಂದು ಅಸಾಧಾರಣ ಯುದ್ಧ ಕಾರ್ಯಕ್ಕೆ ನಿಯೋಜಿಸುತ್ತಿದ್ದರು. ಹೀಗೆ ವೀಳ್ಯವನ್ನು ಪಡೆಯುವುದು ಬಹು ದೊಡ್ಡ ಗೌರವವೆಂದು ವೀರರು ತಿಳಿದಿದ್ದರು. ಕೋಟೆ ಸೋಮೆಯನಾಯಕನು ಬಂಕಿಯನಾಯಕನ ಮೇಲೆ ಆಕ್ರಮಣ ಮಾಡಿದಾಗ ಕಾನಿಲಿಚಿಲಾವೆಯಲ್ಲಿ ಬೀಡು ಬಿಟ್ಟಿದಾಗ ಮಾಸೂರ ಜಕ್ಕೆಯ ಬಮ್ಮೆಯ ನಾಯಕನನ್ನು ಕರೆಸಿ 'ಪರೆಯಾಳದ ವೀಳೆಯಮಂ' ಕೊಟ್ಟು ದುರ್ಗವೊಂದನ್ನು ಮುತ್ತಲು ಹೇಳಿದಾಗ ಅವನು ಸಿದ್ಧವಾಗಿ ವೀರಾವೇಶದಿಂದ ಹೋರಾಡಿ ಮಡಿದ ವಿಷಯವನ್ನು ಶಾಸನ ತಿಳಿಸುತ್ತದೆ.[೫] 'ಪರೆಯಾಳದ ವೀಳೆಯಮಂ' ಎಂಬ ಮಾತು ಹರಿವಾಣದಲ್ಲಿ ವೀಳೆಯವನ್ನು ಇಟ್ಟುಕೊಡುತ್ತಿದ್ದುದನ್ನು ಸೂಚಿಸುತ್ತದೆ. ಯುದ್ಧ ನಡೆಯುವಾಗಲೂ ಈ ರೀತಿ ವೀಳೆಯವನ್ನು ಕೊಟ್ಟು ನಿಯೋಜಿಸುತ್ತಿದ್ದರು. ಮಹಾಮಂಡಳೇಶ್ವರ ಬೀರರಸನು ಹೊಸಗುಂದವನ್ನು ಮುತ್ತಿ ಕಾದುತ್ತಿರುವಾಗ ಬಲ್ಲೆಯ್ಯನ ಅಳಿಯನಾದ ಬೊಮ್ಮಬುವನ್ನು ಕರೆದು ವೀಳೆಯವನ್ನು ಕೊಟ್ಟು ಕಾಳಗಕ್ಕೆ ನಡೆ ಎಂದಾಗ ಶತ್ರು ಸೈನ್ಯದಲ್ಲಿ ಕುದುರೆಯನ್ನು ಕೆಡವಿ ತಿವಿದು ಹೋರಾಡಿ ಮಡಿದ ವಿಷಯವನ್ನು ಒಂದು ಶಾಸನ ತಿಳಿಸುತ್ತದೆ.[೬] ಇದೇ ರೀತಿ ಸೊಡ್ಡಿಗನು 'ವೀಳೆಯಮಂ ತಳದುಕೊಂಡಸಾಳ್ದನ ಕಯ್ಯೊಳು'. ಒಡೆಯನು ಯುದ್ಧಕ್ಕೆ ಅಣಿಯಾಗು ಎಂದು ವೀಳೆಯವನ್ನು ಕೈಯಾರೆ ಕೊಟ್ಟಾಗ ಹೋರಾಡಿ ಮಡಿಯುತ್ತಾನೆ.[೭]

---

೧. (ರೈ) ಎಕ XII ಚಿಕ್ಕನಾಯಕನಹಳ್ಳಿ ೩೬ ಕ್ರಿ.ಶ. ೧೧೭೭.

೨. (ರೈ) ಎಕ VIII ನಗರ ೩೩ ಕ್ರಿ.ಶ. ೧೨೯೦.

೩. ಎಸ್‌ಐಐ XV ಗದಗು ೨೦೭ ಕ್ರಿ.ಶ. ೧೧೯೨.

೪. (ರೈ) ಎಕ V ಚನ್ನರಾಯಪಟ್ಟಣ ೧೯೭ ಕ್ರಿ.ಶ. ೧೨೨೩.

೫. (ರೈ) ಎಕ VIII ನಗರ ೩೩ ಕ್ರಿ.ಶ. ೧೨೯೦.

೬. (ರೈ) ಎಕ VIII ಸಾಗರ ೮೫ ಕ್ರಿ.ಶ. ೧೨೮೨.

೭. (ರೈ) ಎಕ VIII ಸಾಗರ ೮೬ ಕ್ರಿ.ಶ. ೧೨೮೨.

ಭಾರತೀಯ ಸಂಸ್ಕೃತಿಯಲ್ಲಿ ತಾಂಬೂಲಕ್ಕೆ ವಿಶೇಷ ಗೌರವವಿದ್ದಿತು.[೧] ಇಂದಿಗೂ ಶುಭ ಸಂದರ್ಭಗಳಲ್ಲಿ ತಾಂಬೂಲವನ್ನು ಜನರಿಗೆ ಕೊಡುವುದು ಒಂದು ಗೌರವದ ಸಂಕೇತವಾಗಿದೆ. ಯುದ್ಧದ ಸಂದರ್ಭಗಳಲ್ಲಿ ಒಬ್ಬ ವೀರನನ್ನು ಆಯ್ಕೆ ಮಾಡಿ ವೀಳೆಯವನ್ನು ಕೊಟ್ಟು ಅವನನ್ನು ಯುದ್ಧಕ್ಕೆ ನಿಯುಕ್ತಗೊಳಿಸುತ್ತಿದ್ದುದು ದೊಡ್ಡ ಗೌರವವೆಂಬ ಭಾವನೆ ಇದ್ದಿತು.[೨] ತಾಂಬೂಲವನ್ನು ಕೊಡುವುದು ಗೌರವದ ಸಂಕೇತವಾಗಿದ್ದಂತೆ, ಒಡೆಯನು ಒಬ್ಬ ವ್ಯಕ್ತಿಗೆ ಯುದ್ಧದ ಸಂದರ್ಭದಲ್ಲಿ ತಾಂಬೂಲವನ್ನು ಕೊಟ್ಟರೆ ಅದು ಅವರಿಬ್ಬರ ಮಧ್ಯೆ ಏರ್ಪಟ್ಟ ಒಂದು ಒಪ್ಪಂದದ ಸಂಕೇತವೂ ಆಗಿದ್ದಿತು.

**ಯುದ್ಧ ಪ್ರಭೇದಗಳು:**

ಕನ್ನಡ ಶಾಸನಗಳನ್ನು ಮತ್ತು ವೀರಗಲ್ಲುಗಳನ್ನು ಗಮನಿಸಿದರೆ ಸಾಕಷ್ಟು ಸಂಖ್ಯೆಯಲ್ಲಿ ಯುದ್ಧಗಳು ನಡೆದಿರುವುದು ಕಂಡುಬರುತ್ತದೆ. ಆದರೆ ಎಲ್ಲವೂ ಯುದ್ಧವೆಂಬ ಪದದ ಬಳಕೆಗೆ ಹೊಂದುವುದಿಲ್ಲ. ಹಲವಾರು ಸೀಮಾವಿವಾದಗಳು, ಗೋಗ್ರಹಣಗಳು, ಕಳ್ಳರ ಹಾವಳಿಗಳು, ಬೇಡರ ಹಾವಳಿಗಳು ಸಾವು ನೋವಿನಲ್ಲಿ ಪರ್ಯವಸಾನವಾಗಿದೆ. ಇವುಗಳಲ್ಲಿ ಹಲವಾದರೂ ಕೇವಲ ಘರ್ಷಣೆಗಳೆಂದು ಕರೆಯಲು ಅರ್ಹವಾಗಿವೆ. ಆದರೆ ಅವೆಲ್ಲವನ್ನು ಯುದ್ಧಗಳಿಂದ ಪ್ರತ್ಯೇಕಿಸಿ ವಿಶ್ಲೇಷಿಸುವ ಉದ್ದೇಶ ಸದ್ಯದ ಅಧ್ಯಯನದ ಉದ್ದೇಶದಲ್ಲಿ ಸಾಧ್ಯವಿಲ್ಲ. ಆದ್ದರಿಂದ ಪ್ರಮುಖವಾದ ಕೆಲವು ಯುದ್ಧದ ಪ್ರಭೇದಗಳನ್ನು ಗುರುತಿಸಿ ಅವುಗಳನ್ನು ತಿಳಿಯಲು ಪ್ರಯತ್ನಿಸಲಾಗಿದೆ.

**ತುರುಗೋಳ್:**

ತುರುಗೋಳ್ ಎನ್ನುವುದು ಅನೇಕ ಸಂದರ್ಭಗಳಲ್ಲಿ ಯುದ್ಧವೆಂಬುದಕ್ಕಿಂತ ಯುದ್ಧಕ್ಕೆ ಪೀಠಿಕೆಯಾಗುತ್ತಿತ್ತು. 'ತುಱುಗೋಳ್' (ತುಱು+ ಕೋಳ್. ಕೋಳ್ ಎನ್ನುವುದು ತೆಗೆದುಕೊ ಎಂಬರ್ಥದ ಕೊಳ್ ಧಾತುವಿನ ಭಾವನಾಮ) ಎಂದು ಎಂ. ಚಿದಾನಂದ ಮೂರ್ತಿಯವರು ಅರ್ಥೈಸಿದ್ದಾರೆ[೩]. ತುರುಗೋಳಿನ ಮುಖ್ಯ ಉದ್ದೇಶ ದನಗಳನ್ನು ಅಪಹರಿಸುವುದು. ತುರುಗಳನ್ನು ಅಪಹರಿಸುವುದು ಮತ್ತು ತುರುಗಳ ಅಪಹರಣವನ್ನು ತಡೆದು ಅವುಗಳ ರಕ್ಷಣೆಗೆ ಹೋರಾಡುವುದು ಈ ಎರಡೂ ತುರುಗೋಳಿನ ಹೋರಾಟಗಳೆಂದೇ ಗುರುತಿಸಲ್ಪಟ್ಟಿವೆ. ಆರ್. ಶೇಷಶಾಸ್ತ್ರಿಯವರು ತುರುಗೋಳಿನ ಉದ್ದೇಶಗಳನ್ನು ಎರಡಾಗಿ ವಿಶ್ಲೇಷಿಸಿದ್ದಾರೆ. ಒಂದು, ಕಳ್ಳರು ಕಳ್ಳತನದ ಉದ್ದೇಶದಿಂದ ಮಾಡಿದ ಗೋಗ್ರಹಣ[೪] ಇನ್ನೊಂದು, ರಾಜಕೀಯ ಉದ್ದೇಶದಿಂದ ಮಾಡಿದ ಗೋಗ್ರಹಣ. ಇವೆರಡೂ ಮೂಲತಃ ದನಗಳನ್ನು ಅಪಹರಿಸುವುದೇ ಆಗಿದ್ದರೂ ಕೂಡ ಉದ್ದೇಶ ಬೇರೆಯಾಗಿರುವುದನ್ನು ಗುರುತಿಸಬಹುದು. ಕಳ್ಳರು ಮಾಡುತ್ತಿದ್ದುದನ್ನು ತಮ್ಮ ಅಗತ್ಯಕ್ಕಾಗಿ ಮಾಡುತ್ತಿದ್ದ ಲೂಟಿ ಎಂದು ಕರೆಯಬಹುದು. ಕಳ್ಳರಿಂದ ಅಥವಾ ಬೇಡರಿಂದ ಗೋವುಗಳನ್ನು ರಕ್ಷಿಸಿ ಹೋರಾಡಿ ಮಡಿದ ಅನೇಕ ವೀರರ ವೀರಗಲ್ಲುಗಳು ದೊರೆಯುತ್ತವೆ.[೫] ರಾಜಕೀಯ ದೃಷ್ಟಿಯಿಂದ ಮಾಡಿದ ಗೋಗ್ರಹಣ ಯುದ್ಧಕ್ಕೆ ಆಹ್ವಾನ ನೀಡುವ ಇಲ್ಲವೇ ಆ ಊರಿನವರಿಗೆ, ಆ ಪ್ರದೇಶದ ರಾಜನಿಗೆ, ಸಾಮಂತನಿಗೆ ಒಂದು ರೀತಿಯ ಸವಾಲನ್ನು ಒಡ್ಡುವ, ಅಪಮಾನಿಸುವ ಉದ್ದೇಶಕ್ಕಾಗಿ ಮಾಡಿದ್ದಾಗಿ ಕಂಡುಬರುತ್ತದೆ.

---

೧. ಕೆ. ಶ್ರೀಕಂಠಯ್ಯ : 'ಕನ್ನಡ ಕಾವ್ಯಗಳಲ್ಲಿ ತಾಂಬೂಲ ಚರ್ವಣ', ಕಸಾಪಪ ೬೬:೧, ಪು. ೨೬-೩೪.

೨. B. L. Rice : Mysore and Coorg from Inscriptions ಪು. ೧೭೧.

೩. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೨೮೨.

೪. ಆರ್. ಶೇಷಶಾಸ್ತ್ರೀ : ಪೂರ್ವೋಕ್ತ, ಪು. ೧೩೯.

೫. (ರೈ) ಎಕ VI ಚಿಕ್ಕಮಗಳೂರು ೧೫೭ ಕ್ರಿ.ಶ. ೧೧೯೫; (ರೈ) ಎಕ VII ಹೊನ್ನಾಳಿ; ೪೮ ಕ್ರಿ.ಶ. ೧೨೧೬. (ರೈ) ಎಕ VI ಕಡೂರು ೪೭ ಕ್ರಿ.ಶ. ೧೧೯೫ (?).

ಗೋಗ್ರಹಣದ ಖಚಿತ ಇತಿಹಾಸವನ್ನು ಮಹಾಭಾರತದ ವಿರಾಟಪರ್ವದಲ್ಲಿ ಗುರುತಿಸಬಹುದಾಗಿದೆ. ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದ ಪಾಂಡವರನ್ನು ಹಿಡಿಯುವ ರಾಜಕೀಯ ಉದ್ದೇಶದಿಂದ ದುರ್ಯೋಧನ ವಿರಾಟನ ಗೋವುಗಳನ್ನು ಹಿಡಿಯುವುದು ಸ್ಪಷ್ಟವೇ ಇದೆ. ಪಾಂಡವರು ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲಿದ್ದರೂ ಗೋರಕ್ಷಣೆಗೆ ಮುಂದಾಗುತ್ತಾರೆ. ಆದ್ದರಿಂದ ಗೋವುಗಳ ರಕ್ಷಣೆಗೆ ಮುಂದಾಗಬೇಕಾದುದು ಆ ಕಾಲದ ಮತ್ತು ಅನಂತರದ ಕಾಲದ ಒಂದು ಪ್ರಮುಖ ಮೌಲ್ಯವಾಗಿರುವುದನ್ನು ಶಾಸನಗಳಿಂದಲೂ, ಕಾವ್ಯಗಳಿಂದಲೂ ಗುರುತಿಸಬಹುದು.

ರನ್ನ ಕವಿಯ ಗದಾಯುದ್ಧದ ಒಂದು ಪದ್ಯ ಆ ಮೌಲ್ಯವನ್ನು ಸ್ಪಷ್ಟ ಮಾತುಗಳಲ್ಲಿ ಆಡಿ ತೋರಿಸುತ್ತದೆ.

> ತುಱುಗೋಳೊಳ್ ಪೆಣ್ಬುಯ್ಯಲೊ
> ಳೆಱೆವೆಸದೊಳ್ ನೆಂಟನೆಡಱೊಳೂರಳಿವಿನೊಳಂ
> ತಱಿಸಂದು ಗಂಡುತನಮನೆ
> ನೆಱಪದವಂ ಗಂಡನಲ್ಲನೆಂತು ಷಂಡಂ॥[೧]

ತುರುಗೋಳಿನಲ್ಲಿ, ಹೆಂಗಸರು ಹುಯ್ಯಲಿಡುವಾಗ, ಒಡೆಯನ ಕಾರ್ಯದಲ್ಲಿ, ನೆಂಟರ ಕಷ್ಟದಲ್ಲಿ, ಊರಳಿವಿನಲ್ಲಿ ತನ್ನ ಪೌರುಷವನ್ನು ತೋರ್ಪಡಿಸದವನು ಪುರುಷನಲ್ಲ, ಅವನು ಷಂಡನೆಂದು ಹೇಳಲಾಗಿದೆ.

ಗೋಗ್ರಹಣದ ಸಂದರ್ಭದಲ್ಲಿ ಹೋರಾಡಿ ಮಡಿದ ನೂರಾರು ವೀರರ ವೀರಗಲ್ಲುಗಳು ಕರ್ನಾಟಕದಾದ್ಯಂತ ದೊರೆಯುತ್ತವೆ. ತುರುಗಳು ತನ್ನ ಊರಿನವೇ ಆಗಿರಬೇಕೆಂದೂ ಇರಲಿಲ್ಲ. ಒಬ್ಬ ವೀರನು ಯಾವುದೋ ಕಾರ್ಯಾರ್ಥವಾಗಿ ನೆರೆಯೂರಿಗೆ ಹೋಗಿದ್ದಾಗ ಅಲ್ಲಿ ತುರುಗಳ ಅಪಹರಣವಾಗಲು ಕಂಡು, ಹೋರಾಡಿ ಮೇಲಾಳನ್ನು ಇರಿದು ಕುದುರೆಗಳನ್ನು ಹಿಡಿದು ತುರುಗಳನ್ನು ಹಿಂತಿರುಗಿಸುತ್ತಾನೆ.[೨] ತುರುಗೋಳಿನಲ್ಲಿ ಕುದುರೆಗಳ ಬಳಕೆ ವಿಶೇಷವಾಗಿದ್ದಿತೆಂದು ಹೇಳಬಹುದು. ಏಕೆಂದರೆ ತುರುಗೋಳಿನ ಕ್ಷಿಪ್ರ ಕಾರ್ಯಾಚರಣೆಗೆ ಅವು ಅನುಕೂಲವಾಗಿದ್ದವು.

ತುರುಗಳನ್ನು ಕಳ್ಳತನದಿಂದ ಅಪಹರಿಸಿಕೊಂಡು ಹೋದವನನ್ನು ಎಲ್ಲಿಯೂ ಹೊಗಳಿರುವುದು ಕಂಡುಬರುವುದಿಲ್ಲ. ಆದರೆ ಅರಸನ ಆಜ್ಞೆಯಂತೆ ಶತ್ರುಪಕ್ಷದ ರಾಜ್ಯದ ಮೇಲೆ ದಾಳಿ ಮಾಡಿ ಕೆಚ್ಚಿನಿಂದ ತುರುಗಳನ್ನು ಹಿಡಿದು ಸವಾಲು ಎಸೆದು ಶತ್ರು ತಮ್ಮ ಮೇಲೆ ಬೀಳುವಂತೆ ಮಾಡಿ, ಅವರೊಡನೆ ಹೋರಾಡಿ ಸತ್ತ ವೀರರನ್ನು ಹೊಗಳಿರುವ ವೀರಗಲ್ಲುಗಳು ಅಪರೂಪವಾಗಿಯಾದರೂ ದೊರೆಯುತ್ತವೆ.[೩] ಹೆಚ್ಚಿನ ವೀರಗಲ್ಲುಗಳಲ್ಲಿ ತುರು ರಕ್ಷಣೆಗೆ ಹೋರಾಡಿದವನೇ ನಿಜವಾದ 'ವೀರ'ನಂತೆ ಪರಿಗಣಿತನಾಗಿ ಅವನ ಶೌರ್ಯ, ಪರಾಕ್ರಮಗಳನ್ನು ಕೀರ್ತಿಸಲಾಗಿದೆ.

ಕೊರಕೋಡಿನ ಶಾಸನ ಹಲವಾರು ದೃಷ್ಟಿಗಳಿಂದ ತುರುಗೋಳಿನ ಉತ್ತಮ ವಿವರಗಳನ್ನು ಒಳಗೊಂಡಿದೆ. ಶ್ರೀಮನ್ಮಹಾಮಂಡಳೇಶ್ವರ ಜಗದೇಕರಸನು ಕಾಳರಸ ಎಂಬುವನಿಗೆ ಕೊರಕೋಡಿನ ತುರುಗಳನ್ನು ಹಿಡಿದು ತರುವಂತೆ ಆಜ್ಞಾಪಿಸುತ್ತಾನೆ. ಅದರಂತೆ ಕಾಳರಸ ಸೈನ್ಯದೊಡನೆ ಬಂದು ತುರುಗಳನ್ನು ಹೊಡೆದುಕೊಂಡು ಹೆಂಗಸರ ಉಡೆ ಉಚ್ಚಿ ಹೋಗುತ್ತಿರುತ್ತಾನೆ. ಆಗ ಬಾವಗಾವುಂಡನ ಮಕ್ಕಳಾದ ದೇವಗಾವುಂಡ ಮತ್ತು ಮಲ್ಲಗಾವುಂಡ ಬಿಲ್ಲುಬಾಣಗಳನ್ನು ತೆಗೆದುಕೊಂಡು ಆ ಊರಿನ ಹೆಬ್ಬಾಗಿಲಿನಲ್ಲಿ ಅಡ್ಡ ನಿಂತು ತಡೆಯುತ್ತಾರೆ. ಅವರು ಎಷ್ಟು ಬಾಣಗಳ ಪ್ರಯೋಗವನ್ನು ಮಾಡಿದರೆಂದರೆ ಅವರ

---

೧. ಗದಾಯುದ್ಧ ೩:೮.

೨. (ರೈ) ಎಕ VII ಶಿವಮೊಗ್ಗ ೩೭ ಕ್ರಿ.ಶ. ೧೧೪೦.

೩. ಆರ್. ಶೇಷಶಾಸ್ತ್ರೀ : ಪೂರ್ವೋಕ್ತ, ಪು. ೧೪೬.

ಬಿಲ್ಲಿನ ಹಗ್ಗಗಳು ಹರಿದುಹೋಗುತ್ತವೆ. ಆಗ ಸೊಂಟಕ್ಕೆ ಕಟ್ಟಿದ್ದ ಅಲಗನ್ನೇ ತೆಗೆದುಕೊಂಡು ಹೋರಾಡಿ ಹಲವು ಶತ್ರುಗಳನ್ನು ಕೊಂದು ಮಡಿದು ಉರುಳುತ್ತಾರೆ. ಅವರ ಮೈತುಂಬ ಕೊಂತಗಳು ಮತ್ತು ಬಾಣಗಳು ನೆಟ್ಟಿರುತ್ತವೆ. ಅವರ ಹೆಣಗಳನ್ನು ಮೆಟ್ಟಿಕೊಂಡು ದನಗಳು ಹೋಗುತ್ತವೆ. ಇದನ್ನು ಕಂಡು ಅವರ ತಮ್ಮ ಬಪ್ಪಗಾವುಂಡ ಸಹಿಸದೆ ಅಣ್ಣಂದಿರು ಅದದ್ದನ್ನೇ ತಾನಾಗಲು ಬಯಸಿ ಶತ್ರುಸೈನ್ಯವನ್ನು ಬೆನ್ನು ಹತ್ತುತ್ತಾನೆ. ಅಷ್ಟರಲ್ಲಿ ಉದ್ದರೆಯ ಮಾಂಡಳಿಕ ಏಕ್ಕಲರಸನ ಆಳುಕುದುರೆಗಳು ಬರಲು ಹಾಲ್ಗಟ್ಟದಲ್ಲಿ ಒಡ್ಡನ್ನು ಒಡ್ಡಿ, ಶತ್ರುಗಳನ್ನು ಕೊಂದು, ದನಗಳನ್ನು ಹಿಂತಿರುಗಿಸಿ ಅನಂತರ ತನ್ನಿಬ್ಬರು ಅಣ್ಣಂದಿರಿಗೆ ಜಲದಾನ ಕ್ರಿಯೆಗಳನ್ನು ಮಾಡಿ ವೀರಗಲ್ಲನ್ನು ನಿಲ್ಲಿಸುತ್ತಾನೆ.[೧] ಈ ಶಾಸನ ಸ್ಪಷ್ಟವಾಗಿ ತುರುಗಳನ್ನು ಅಪಹರಿಸಲು ಊರೊಳಗೆ ಶತ್ರುಗಳು ನುಗ್ಗಿದ ವಿಷಯವನ್ನು ಮತ್ತು ಊರ ಹೆಬ್ಬಾಗಿಲಿನಲ್ಲಿ 'ಗುಹೆಯ ಬಾಗಿಲೊಳು ಸಿಂಹನಿರ್ಪಂತೆ' ಸಹೋದರರು ತಡೆದದ್ದನ್ನು ತಿಳಿಸುತ್ತದೆ. ಇಲ್ಲಿ ತುರುಗಳನ್ನು ಅಪಹರಿಸುವುದರೊಂದಿಗೆ ಹೆಂಗಸರ ಉಡೆಗಳನ್ನು ಬಿಚ್ಚಿ ಅಪಮಾನವನ್ನು ಮಾಡಿದ್ದಾರೆ. ಇದರಿಂದ ಇದು ಪ್ರಮುಖವಾಗಿ ರಾಜಕೀಯ ಉದ್ದೇಶದ ತುರುಗಾಳಗ ಎಂಬುದು ಸ್ಪಷ್ಟವಿದೆ.

ತುರುಗೋಳಿನಲ್ಲಿ ಹೋರಾಡಿ ತುರುಸೆರೆಯನ್ನು ಬಿಡಿಸಿದ ವೀರರ ನೂರಾರು ಶಾಸನಗಳು ದೊರೆಯುತ್ತವೆ.[೨] ಸಾಧಾರಣವಾಗಿ ತುರುಗೋಳನ್ನು ಗೋಗ್ರಹಣ[೩] ಎಂಬ ಹೆಸರಿನಿಂದ ಕರೆಯುವುದು ಹಿಂದಿನಿಂದಲೂ ವಾಡಿಕೆಯಾಗಿರುವುದಾದರೂ ಎಲ್ಲ ಸಾರಿಯೂ ಗೋವುಗಳನ್ನು ಮಾತ್ರ ಅಪಹರಿಸುತ್ತಿರಲಿಲ್ಲ; ಗೋವುಗಳೊಂದಿಗಿರುತ್ತಿದ್ದ ಎಮ್ಮೆಗಳನ್ನೂ ಅಪಹರಿಸುತ್ತಿದ್ದರು. ಇದು ಶಾಸನಗಳಲ್ಲಿ ಮತ್ತು ಶಿಲ್ಪಗಳಲ್ಲಿ[೪] ವ್ಯಕ್ತವಾಗಿದೆ. ಹುಲ್ಲಿಯ ಜಂಗುಳಿಯ ಕೇತನೆಂಬುವನು 'ಹೆಣ್ಣುಸೆಱೆ ಗೋಮಹಿಷಿಗಳ ಮಗುಳ್ಚಿ ತುರಗಕಳನಿಱಿದು ಸುಭಟರ ಕೊಂದು ಸುರಲೋಕಪ್ರಾಪ್ತನಾದ' ವಿಷಯ ಶಾಸನವೊಂದರಲ್ಲಿ ಬಂದಿದೆ.[೫]

ತುರುಗೋಳಿನಲ್ಲಿ ಆಕ್ರಮಣಕಾರರಿಗೆ ಪೂರ್ವಯೋಜನೆ, ತಂತ್ರ, ಪೂರ್ವ ನಿಶ್ಚಿತ ಕಾಲ ಇವುಗಳ ಅನುಕೂಲವಿರುತ್ತಿತ್ತು. ಆದರೆ ತುರುಗಳನ್ನು ಸಂರಕ್ಷಿಸುವವರಿಗೆ ದಾಳಿ ಅನಿರೀಕ್ಷಿತವಾಗಿದ್ದು, ಆಕ್ರಮಣಕ್ಕೆ ಇದ್ದಕ್ಕಿದ್ದಂತೆ ಮುಖಾಮುಖಿಯಾಗಬೇಕಾಗುತ್ತಿತ್ತು. ಅಂಥ ಅನಿರೀಕ್ಷಿತ ಸಂದರ್ಭಗಳಲ್ಲೂ ವೀರರು ಧೈರ್ಯದಿಂದ, ನೈತಿಕ ಬಲದಿಂದ ಹೋರಾಡಿರುವುದನ್ನು ಶಾಸನಗಳು ಕೀರ್ತಿಸಿವೆ.

ಒಂದು ಶಾಸನದ ಕೊನೆಯಲ್ಲಿ ಮಲ್ಲೋಜನ ಮಗ ರೂವಾರಿ ಮಲ್ಲೋಜನನ್ನು ಅವನ ಅಸಾಧಾರಣ ಬರವಣಿಗೆಗಾಗಿ ಕೀರ್ತಿಸಲಾಗಿದೆ. 'ಪುಟದೊಳು ಗೋಗ್ರಹಣಮನುತ್ಕಟಮಾಗಿರೆ ಬರೆದು ಮೆಚ್ಚಿಪುದರಿಂ ಕಾಪಿಂ ದಿಟದಿಂ ಮೂಱುಂರಾಯರ ಕಟಕದ ಬಿರುದರ ಲೇಖಕೋಪಾಧ್ಯಾಯ ಈ ಶಾಸನಮಂ ಮಲ್ಲೋಜನ ಮಗ ರೂವಾರಿ ಮಲ್ಲೋಜ ಖಣ್ಡರಿಸಿದ' ಎಂದು ಶಾಸನದಲ್ಲಿದೆ.[೬] ಈ ಶಾಸನವನ್ನು ಕಂಡರಿಸಿದ ಮಲ್ಲೋಜನು ಒಂದು ಪುಟದಲ್ಲಿ ಗೋಗ್ರಹಣವನ್ನು ಉತ್ಕಟವಾಗಿ ಬರೆದು ಮೆಚ್ಚಿಸಿದನೆಂದು ಹೇಳಲಾಗಿದೆ.

---

೧. (ರೈ) ಎಕ VIII ಸೊರಬ ೧೭೫ ಕ್ರಿ.ಶ. ೧೧೫೬.

೨. (ಮೈ) ಎಕ VII ಮದ್ದೂರು ೧೦೯ ಕ್ರಿ.ಶ. ೧೧೮೨-೮೩; (ರೈ) ಎಕ XI ಚಿತ್ರದುರ್ಗ ೬೬ ಕ್ರಿ.ಶ. ೧೨೩೪(?) ಎಸ್‌ಐಐ XVIII ಹಾವೇರಿ ೩೫೩ ಕ್ರಿ.ಶ. ೧೨ ಶಮಾ; (ಮೈ) ಎಕ VI ಪಾಂಡವಪುರ ೨೫೮ ಕ್ರಿ.ಶ. ೧೨೭೩.

೩. (ರೈ) ಎಕ XII ತುಮಕೂರು ೪೯ ಕ್ರಿ.ಶ. ೧೨೬೯.

೪. ಎಂ.ಎಂ. ಕಲಬುರ್ಗಿ : ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು. ೭೬.

೫. (ಮೈ) ಎಕ VI ಕೃ.ಪೇಟೆ ೭೮ ಕ್ರಿ.ಶ. ೧೨೨೪.

೬. (ರೈ) ಎಕ V ಅರಸಿಕೆರೆ ೧೪೧ ಕ್ರಿ.ಶ. ೧೧೫೯.

ಕೆಲವು ಶಾಸನಗಳಲ್ಲಿ 'ಹಟ್ಟಿಗಾಳೆಗ', 'ಹಟ್ಟಿಗಾಳೆಗದೊಳ್ ಗೆಲ್ವಾತ', 'ಹಟ್ಟಿಗಾಳೆಗಕ್ಕೆ ಮಲೆವ ನಾಯಕರ ಗಂಡರುಂ' ಎಂಬಂತಹ ಮಾತುಗಳು ಬರುತ್ತವೆ. ಇವು ಪರೋಕ್ಷವಾಗಿ ತುರುಗಾಳೆಗವನ್ನು ಸೂಚಿಸಬಹುದೆಂಬ ಸಂಶಯ ಬರುತ್ತದೆ. ಸಿಂದೆಯನಾಯಕನೆಂಬ ಸಾಮಂತನನ್ನು ಹಟ್ಟಿಗಾಳೆಗದೊಳ್ ಗೆಲ್ವಾತಂ ಎಂಬ ವಿಶೇಷಣದೊಂದಿಗೆ ಕೀರ್ತಿಸಲಾಗಿದೆ.[೧] ಈ ಶಾಸನದ ಅನುವಾದವನ್ನು ಕೊಡುವಾಗ ಸಂಪಾದಕರು 'cattle-raid' ಎಂದು ಅನುವಾದಿಸಿ ಪ್ರಶ್ನೆ ಚಿಹ್ನೆಯನ್ನು ಹಾಕಿದ್ದಾರೆ. ಅದೇ ಸ್ಥಳದ (ಬೆಳ್ಳೂರು, ನಾಗಮಂಗಲ ತಾಲ್ಲೂಕು) ಇನ್ನೊಂದು ಶಾಸನದಲ್ಲಿ 'ಹಟ್ಟಿಗಾಳೆಗಕ್ಕೆ ಮಲೆವ ಸಾಮಂತರ ಗಂಡ' ಇತ್ಯಾದಿ ವಿಶೇಷಣಗಳಿಂದ ಎಡಗಯ್ಯ ಸೇನಾನಾಯಕ ಕಾಚಿದೇವನ ವಿಷಯ ಉಲ್ಲೇಖಗೊಂಡಿದೆ. ಅಲ್ಲದೆ ಅದೇ ಶಾಸನದಲ್ಲಿ 'ಹಟ್ಟಿಗಾಳೆಗಮಂ ತದ್ಬಾಹುಬಲದಿಂದೆ ಗೆಲ್ವತಿ ಸಾಹಸನಂ ಪಡೆದ ಸಿಂದನೆಂಬಾತ್ಮಜನಂ'[೨] ಎಂಬ ಉಲ್ಲೇಖವಿದೆ. ಅಗ್ರಹಾರ ಬಾಚಹಳ್ಳಿಯ ಶಾಸನಗಳಲ್ಲಿ ಮುಗಿಲಕುಲಕ್ಕೆ ಸೇರಿದ ಅನ್ವಯಾಗತ ಲೆಂಕವಾಳಿಗಳ ವಂಶದ ಗಂಡನಾರಾಯಣಶೆಟ್ಟಿಯನ್ನು ಎರಡು ಶಾಸನಗಳಲ್ಲಿ[೩] ಇತರ ಕೆಲವು ವಿಶೇಷಣಗಳೊಂದಿಗೆ 'ಹಟ್ಟಿಗಾಳೆಗಕ್ಕೆ ಮಲೆವ ನಾಯಕರ ಗಂಡರುಂ' ಎಂಬ ಮಾತನ್ನು ಬಳಸಿ ಕೀರ್ತಿಸಲಾಗಿದೆ. ಈ ಶಾಸನ ಪ್ರಯೋಗಗಳಿಂದ ಅವರು ಹಟ್ಟಿಗಾಳೆಗದಲ್ಲಿ ಮಹಾ ಪರಾಕ್ರಮಿಗಳು ಎಂದು ತಿಳಿದುಬರುತ್ತದೆ. ಹಟ್ಟಿಗಾಳೆಗ ಯಾವ ರೀತಿಯ ಯುದ್ಧ ಎಂಬುದು ಕುತೂಹಲದ ಪ್ರಶ್ನೆಯಾಗಿದೆ.

ಹಟ್ಟಿ-ಪಟ್ಟಿಗಳಿಗೆ ಅನೇಕ ಅರ್ಥಗಳಿರುವುದಾದರೂ ದನಕುರಿ ಮೊದಲಾದುವನ್ನು ಕೂಡುವ ಮನೆ ಎಂಬುದು ಮುಖ್ಯಾರ್ಥಗಳಲ್ಲಿ ಒಂದಾಗಿದೆ.[೪] ಹಟ್ಟಿ ಈಗಲೂ ಕೊಟ್ಟಿಗೆ, ದನಗಳನ್ನು ಕಟ್ಟುವ ಕೂಡುವ ಸ್ಥಳ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ. ಪಟ್ಟಿಗಾಳಗಕ್ಕೆ ಹಟ್ಟಿ ಹಟ್ಟಿಗಳ ನಡುವೆ ನಡೆಯುವ ಕಾಳೆಗ ಎಂಬ ಅರ್ಥವನ್ನು ಕನ್ನಡ ನಿಘಂಟಿನಲ್ಲಿ ಕೊಡಲಾಗಿದೆ. ತುರುಗೋಳಿನಲ್ಲಿ ಗ್ರಾಮದೊಳಗೆ ನುಗ್ಗಿ ತುರುಗಳನ್ನು ಅಪಹರಿಸುತ್ತಿದ್ದುದು ಒಂದು ರೀತಿಯದಾದರೆ ಊರಿನ ಹೊರವಲಯದಲ್ಲಿ, ಹುಲ್ಲುಗಾವಲುಗಳಲ್ಲಿ ಮೇಯುತ್ತಿದ್ದ ದನಗಳನ್ನು ಅಪಹರಿಸುತ್ತಿದ್ದುದು ಇನ್ನೊಂದು ರೀತಿ. (ಇದು ವಿಶೇಷವಾಗಿ ಕಳ್ಳರು ಅನುಸರಿಸುತ್ತಿದ್ದ ಮಾರ್ಗ). ಮೊದಲ ರೀತಿಯ ತುರುಗೋಳ್ ಅಧಿಕವಾಗಿ ರಾಜಕೀಯದ ಉದ್ದೇಶದ್ದಾಗಿರುವುದರಿಂದ ಅಲ್ಲಿ ಸವಾಲೆಸೆದು ಮೂದಲಿಸುವ ನಡವಳಿಕೆ ಇರುತ್ತಿತ್ತು. ಈ ಮಾತಿಗೆ ವರ್ಧಮಾನ ಚರಿತೆ ಪುಷ್ಟಿ ಕೊಡುತ್ತದೆ. 'ಪುಟ್ಟಿದ ನೀಜೆಯರೆಲ್ಲರಿಗೀ ಪರಿ ಪುಟ್ಟುವುದೊಡನೆ ರೋಗಗಳು ಪಟ್ಟಿಗಾಳೆಗದವರಂದದಿ ಕಡಿದರ ಮುಟ್ಟಿ ಮೂದಲಿಸಿ ಕಾದುವರು.[೫]' ಹಟ್ಟಿಗಾಳೆಗದಲ್ಲಿ ಬಹುಶಃ ಎಸೆದ ಸವಾಲನ್ನು ಸ್ವೀಕರಿಸಿ ಮೂದಲಿಸಿ ಕಾದುವುದು ಪ್ರಮುಖವಾಗಿದ್ದಿರಬೇಕು.ಹಿರಿಯೂರಿನ ಒಂದು ತುರುಗೋಳಿನ ಶಾಸನ[೬] ಕಲ್ಲಿಸೆಟ್ಟಿಯ ಮಗ ಕುವಲಬಲ್ಲಗಾವುಂಡನು ತುರುಗಳನ್ನು ಅಪಹರಿಸಲು ಸೀಬಯನೆಂಬುವನು ಹಲವರನ್ನು ಕೊಂದು ತುರುಗಳನ್ನು ಮರಳಿಸಿ ಸುರಲೋಕಪ್ರಾಪ್ತನಾಗುತ್ತಾನೆ. ಅವನು ಹೋರಾಡಿದ ರೀತಿಯನ್ನು ಹೇಳುವಾಗ ಶಾಸನ 'ಅವನು.... ಮೂದಲ್ಸಿ ಹಲರಂ ಕೊಂದು ಸ್ವಾಮಿಕಾರ್ಯ' ಎಂದು ಹೇಳುತ್ತದೆ.[೭]

---

೧. (ಮೈ) ಎಕ VII ನಾಗಮಂಗಲ ೮೦ ಕ್ರಿ.ಶ. ೧೧೯೯.

೨. (ಮೈ) ಎಕ VII ನಾಗಮಂಗಲ ೮೧ ಕ್ರಿ.ಶ. ೧೨೨೩-೨೪.

೩. (ಮೈ) ಎಕ VI ಕೃಷ್ಣರಾಜಪೇಟೆ ೮೨, ೮೪ ಕ್ರಿ.ಶ. ೧೨೫೬, ೧೨೯೧.

೪. ಕ.ಕ. ನಿಘಂಟು V ಪು. ೫೧೨೩.

೫. ವಚ ೮:೧೦೩ .

೬. (ರೈ) ಎಕ VII ಶಿವಮೊಗ್ಗ ೩೬ ಕ್ರಿ.ಶ. ೧೧೮೦.

೭. ಹೆಚ್ಚಿನ ಚರ್ಚೆಗೆ ನೋಡಿ ಸಿ.ಯು. ಮಂಜುನಾಥ್ : 'ಹಟ್ಟಿಗಾಳೆಗ-ಒಂದು ಟಿಪ್ಪಣಿ' ಜಿಎಸ್‌ಎಸ್ ೭೫ ಪು. ೪೧೧-೪೧೫.

ಹಟ್ಟಿಗಾಳೆಗದ ಉಲ್ಲೇಖ ಹಿಂದೆ ಗಮನಿಸಿದ ನಾಲ್ಕು ಶಾಸನಗಳಲ್ಲಿ ನನ್ನ ಗಮನಕ್ಕೆ ಬಂದಿದೆ. ಅಧಿಕ ಶಾಸನಗಳಲ್ಲಿ ಆ ಪದ ಬಳಕೆಯಾದಂತೆ ಕಂಡುಬರುವುದಿಲ್ಲ. ಆದರೆ ಪಾರ್ಶ್ವನಾಥ ಪುರಾಣ, ವರ್ಧಮಾನ ಚರಿತೆಗಳಲ್ಲಿ ಅದು ಉಲ್ಲೇಖಿಗೊಂಡಿದೆ. ಈ ದೃಷ್ಟಿಯಿಂದ 'ಹಟ್ಟಿಗಾಳೆಗ' ತುರುಗೋಳಿಗೆ ಮತ್ತು ಗೋಗ್ರಹಣಕ್ಕೆ ಇದ್ದಂತಹ ಇನ್ನೊಂದು ಹೆಸರೆಂದು ಭಾವಿಸಬಹುದು.

ತುರುಗೋಳಿನಲ್ಲಿ ಸ್ತ್ರೀಯರು ಭಾಗವಹಿಸಿರುವುದುಂಟು. ಹೊಯ್ಸಳ ಬಲ್ಲಾಳನ ರಾಣಿ ಉಮಾದೇವಿ ಬೆಳಗುತ್ತಿಯ ಮೇಲೆ ಮೂರು ಬಾರಿ ಆಕ್ರಮಣ ಮಾಡಿದಳು. ಅವಳು ಆಕ್ರಮಣ ಕಾಲದಲ್ಲಿ ತುರುಗಳನ್ನು ಅಪಹರಿಸಿದಾಗ, ಅದನ್ನು ಸ್ಥಳೀಯ ವೀರರು ರಕ್ಷಿಸಿ ಹೋರಾಡಿ ಮಡಿದ ವಿಷಯವನ್ನು ಶಾಸನಗಳು ತಿಳಿಸುತ್ತವೆ. 'ತೊಟ್ಟೆನೆಲುಮ್ಮಾ ಬಾಯಿಯ ಕಟ್ಟಾಳ್ಗಳ್ ಕುದುರೆವೆರಸು ತುಱುಗೊಳೆ' ಗಟ್ಟೆಯನಾಯಕನೆಂಬುವನು ಹೋರಾಡಿ ತುರುಗಳನ್ನು ರಕ್ಷಿಸಿ ಮಡಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೧] ಇನ್ನೊಂದು ದಾಳಿಯಲ್ಲಿ ಉಮಾಬಾಯಿ ತುರುಗಳನ್ನು ಸೆರೆಹಿಡಿಯಲು ಮೈಲೆಯನಾಯಕನು ತುರುಗಳನ್ನು ರಕ್ಷಿಸಿ ಹೋರಾಡಿ ಮಡಿಯುತ್ತಾನೆ.[೨] ಉಮಾದೇವಿಯು ಮತ್ತೊಂದು ಸಾರಿ ಕವುಡಿವೊಳೆಯಲ್ಲಿ ಬೀಡುಬಿಟ್ಟು ಬೆಳಗುತ್ತಿಯ ಮೇಲೆ ದಾಳಿ ಮಾಡುವಾಗ ಕತ್ತಗಿ ಗ್ರಾಮದ ಗೋವುಗಳನ್ನು ಅಪಹರಿಸುತ್ತಾಳೆ. ಆಗ ಚೀಲಯನೆಂಬುವನು ಹೋರಾಡಿ ಮಡಿದ ವಿಷಯ ಶಾಸನದಲ್ಲಿ ನಿರೂಪಿತವಾಗಿದೆ.[೩] ಬಲ್ಲಾಳನ ಇನ್ನೊಬ್ಬ ರಾಣಿ ಚೋಳಮಹಾದೇವಿ ಕೆಂಬಾಳನ್ನು ಆಳುತ್ತಿರುವಾಗ 'ದುಷ್ಟ ಕಷ್ಪರ' ಮಾತುಗಳನ್ನು ಕೇಳಿ ಬೇವೂರನ್ನು ಮುತ್ತಲು ತನ್ನ ಸೈನಿಕರಿಗೆ ಆಜ್ಞೆ ಕೊಟ್ಟಳು. ಸೈನಿಕರು ತುರುಗಳನ್ನು ಸೆರೆ ಹಿಡಿದು ಒಯ್ಯುವಾಗ ಕೇತಮಲ್ಲನೆಂಬ ವೀರನು ಹೋರಾಡಿ ಮಡಿಯುತ್ತಾನೆ. ಕೊನೆಗೆ ಚೋಳಮಹಾದೇವಿಗೆ ತನ್ನ ತಪ್ಪಿನ ಅರಿವಾಗಿ, ಮಡಿದ ಕೇತಮಲ್ಲನ ಮಗನಿಗೆ ದತ್ತಿ ಕೊಡಿಸಿದ ವಿಷಯ ಶಾಸನವೊಂದರಲ್ಲಿ ನಿರೂಪಿತವಾಗಿದೆ.[೪]

ತುರುಗೋಳಿನ ಯುದ್ಧದಲ್ಲಿ ತುರುರಕ್ಷಣೆಗಾಗಿ ಹೋರಾಡಿ ಮಡಿದ ಏಕೈಕ ಸ್ತ್ರೀ ಲಕ್ಕಮ್ಮಗಾವುಂಡಿ. ಕ್ರಿಶ. ೧೦೪೧ಕ್ಕೆ ಸೇರಿದ ಸಿದ್ಧನಹಳ್ಳಿಯ ವೀರಗಲ್ಲು ಮಾಚಗಾವುಂಡನ ಮಗಳು ಲಕ್ಕಮ್ಮಗಾವುಂಡಿಯು ಸಜಕ್ಕನೂರಿನ ಹಸು ಮತ್ತು ಎಮ್ಮೆಗಳನ್ನು ರಕ್ಷಿಸಿ ಹೋರಾಡಿ ಸತ್ತು ಸ್ವರ್ಗ ಸೇರಿದ ವಿಷಯವನ್ನು ನಿರೂಪಿಸುತ್ತದೆ.[೫]

**ಪೆಣ್ಬುಯ್ಯಲ್:**

ಹುಯ್ಯಲು ಎಂದರೆ ಕೂಗು, ಆರ್ತನಾದ ಎಂದು ಅರ್ಥ. ಹೆಂಗಸರು ಅಪಾಯದಲ್ಲಿದ್ದಾಗ, ಆತಂಕಕ್ಕೆ ಸಿಲುಕಿಕೊಂಡಾಗ ಸಹಾಯಯಾಚನೆಗಾಗಿ ಕೂಗುತ್ತಿದ್ದರು. ಅದನ್ನೇ ರನ್ನ ಕವಿ 'ಪೆಣ್ಬುಯ್ಯಲ್' ಎಂದು ಕರೆದಿರುವುದು. ತುರುಗಳನ್ನು ಅಪಹರಿಸುತ್ತಿದ್ದಂತೆ ಹೆಂಗಸರನ್ನೂ ಅಪಹರಿಸುತ್ತಿದ್ದರು.[೬] ಇಲ್ಲವೇ ಅವರ ವಸ್ತ್ರಗಳನ್ನು ಅಪಹರಿಸುವುದರ ಮೂಲಕ ಅವಮಾನಿಸುತ್ತಿದ್ದರು. ಅನೇಕ ಶಾಸನಗಳಲ್ಲಿ ಹೆಂಗಸರಿಗೆ ಮಾಡುವ ಈ ಅವಮಾನವನ್ನು 'ಪೆಂಡಿರುಡೆವುರ್ಚ' ಎಂದು ಹೇಳಿರುವುದುಂಟು. ಅಂಥ ಸಂದರ್ಭದಲ್ಲಿ ಯಾವುದೇ ವ್ಯಕ್ತಿ ಆ ಹೆಂಗಸರ ಮಾನಸಂರಕ್ಷಣೆಗೆ ಧಾವಿಸಿ ಶತ್ರುಗಳೊಂದಿಗೆ ಹೋರಾಡುತ್ತಿದ್ದನು. ಇಂಥ ಸಂದರ್ಭಗಳಲ್ಲಿ ನಡೆಯುತ್ತಿದ್ದ ಯುದ್ಧಗಳನ್ನು 'ಪೆಣ್ಬುಯ್ಯಲ್'ಎಂದು ಗುರುತಿಸಲಾಗಿದೆ.

---

೧. (ರೈ) ಎಕ VII ಹೊನ್ನಾಳಿ ೩೭ ಕ್ರಿ.ಶ. ೧೧೯೬.

೨. (ರೈ) ಎಕ VII ಹೊನ್ನಾಳಿ ೩೮ ಕ್ರಿ.ಶ. ೧೧೯೬.

೩. (ರೈ) ಎಕ VII ಹೊನ್ನಾಳಿ ೨೮ ಕ್ರಿ.ಶ. ೧೧೯೭.

೪. (ರೈ) ಎಕ V ಚನ್ನರಾಯಪಟ್ಟಣ ೨೦೫ ಕ್ರಿ.ಶ. ಸು. ೧೨೦೦.

೫. ಎಂ.ಎಂ. ಕಲಬುರ್ಗಿ : ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು. ೭೫.

೬. (ರೈ) ಎಕ XII ಚಿಕ್ಕನಾಯಕನಹಳ್ಳಿ ೩೬ ಕ್ರಿ.ಶ. ೧೧೭೭.

ಬನವಸೆನಾಡ ಹೆಗ್ಗಡೆ ದಂಡನಾಯಕ ಚೊಳಿಕ್ಕ ಕೇಸಿಮಯ್ಯನು ಸಂತಳಿಗೆ ನಾಡ ಸಮೀಪ ಬಾಡದ ಮೇಲೆ ಆಕ್ರಮಣ ಮಾಡಿ 'ಪೆಂಡಿರ ಉಡೆ ಉಚ್ಚಿಕೊಂಡು ಹೋಹಲ್ಲಿ' ಸೋವಿಸೆಟ್ಟಿಯ ಮಗ ಕಾಳೆಯನಾಯಕ ಪ್ರತಿಭಟಿಸಿ ಕುದುರೆಯನ್ನು ಕೊಂದು 'ತುಱುಗಳನ್ನು ಮರಳಿಸಿ ಸುರಲೋಕಪ್ರಾಪ್ತ' ನಾಗುತ್ತಾನೆ.[೧] ಇಂಥ ಇನ್ನೂ ಅನೇಕ ನಿದರ್ಶನಗಳು ದೊರೆಯುತ್ತವೆ.[೨]

ಊರುಗಳ ಮೇಲೆ ಆಕ್ರಮಣ ಮಾಡುತ್ತಿದ್ದ ಅಕ್ರಮಣಕಾರರು ಸ್ತ್ರೀಯರ ವಸ್ತ್ರಗಳನ್ನು ಅಪಹರಿಸುವುದರ ಮೂಲಕ ಅವರನ್ನು ತೀವ್ರವಾಗಿ ಅಪಮಾನಗೊಳಿಸುತ್ತಿದ್ದರು. ಒಮ್ಮೊಮ್ಮೆ ಕೇವಲ ಸ್ತ್ರೀಯರನ್ನು ಅವಮಾನಗೊಳಿಸುವ ಉದ್ದೇಶದಿಂದಲೂ ದಾಳಿಕಾರರು ಬರುತ್ತಿದ್ದರು.[೩] ಹೀಗೆ ಹೆಂಗಸರನ್ನು ಅಪಮಾನಿಸಿದಾಗ ಬಳಸುತ್ತಿದ್ದ ಪದ 'ಪೆಂಡಿರುಡೆವುರ್ಚಿ', 'ಪೆಣ್ಣುಡೆವುರ್ಚಿ' ಮುಂತಾದವು. ಸಿ.ಟಿ.ಎಂ.ಕೊಟ್ರಯ್ಯ ಅವರು 'ಪಂಡಿರುಡೆವುರ್ಚು' ಪದವನ್ನು ಅರ್ಥೈಸುತ್ತಾ ಉಡಿ ಎನ್ನುವುದು ಸುಮಂಗಲಿತನದ ಚಿಹ್ನೆಯೆಂದೂ ಅದು ವಿಧವೆಯ ವಿರುದ್ಧ ಪದವೆಂದು ಅರ್ಥೈಸಿ 'ಉಡಿಯುಚ್ಚು' ಎಂಬುದು ಸುಮಂಗಲಿಯರು ಗಂಡಂದಿರನ್ನು ಕಳೆದುಕೊಂಡು ವಿಧವೆಯರಾದ ಸ್ಥಿತಿಯನ್ನು ಹೇಳುತ್ತದೆ ಎಂದು ಭಾವಿಸುತ್ತಾರೆ.[೪] ಆದರೆ ಈ ವಿವರಣೆ ಅಷ್ಟು ಸಮರ್ಪಕವಾಗಿದ್ದಂತಿಲ್ಲ. ಲೇಖಕರು ಹೇಳುವಂತೆ 'ಉಡಿ' - ಸುಮಂಗಲಿಯರಿಗೆ ಶುಭ ಸಂದರ್ಭಗಳಲ್ಲಿ ಅಕ್ಕಿ, ಹಣ್ಣು, ವಸ್ತ್ರ ಮುಂತಾದುವನ್ನು ಸೀರೆಯ ಒಂದು ಭಾಗದಲ್ಲಿ ಹಾಕಿಕೊಡುವ ಪದ್ಧತಿ ಇದೆಯಾದರೂ ಅದು ಶಾಸನದ ಸಂದರ್ಭದಲ್ಲಿ ಅಷ್ಟು ಹೊಂದುವುದಿಲ್ಲ. ಆದ್ದರಿಂದ ಶಾಸನದ ಸಂದರ್ಭದಲ್ಲಿ ಸ್ತ್ರೀಯರ ವಸ್ತ್ರಗಳನ್ನು ಅಪಹರಿಸು, ವಿವಸ್ತ್ರಗೊಳಿಸು ಎಂಬ ಅರ್ಥವೇ ಹೆಚ್ಚು ಅರ್ಥಪೂರ್ಣವಾಗಿದೆ. ಗೀತಾಚಾರ್ಯ ಅವರು ಒಂದು ಲೇಖನದಲ್ಲಿ[೫] ಶಾಸನ ಸಂದರ್ಭದಲ್ಲಿ ಉಡೆ ವಸ್ತ್ರವೆಂದು ವ್ಯಾಖ್ಯಾನಿಸುವುದೇ ಸೂಕ್ತವೆಂದಿದ್ದಾರೆ. ಅದೇ ಲೇಖನದಲ್ಲಿ ಅವರು ಅಬ್ಬಲೂರಿನ ಬ್ರಹ್ಮೇಶ್ವರ (ಈಗಿನ ಬಸವೇಶ್ವರ) ದೇವಾಲಯದ ಎಡಬಧಿಯಲ್ಲಿರುವ ವೀರಗಲ್ಲಿನ ಶಿಲ್ಪದಲ್ಲಿ ಇಬ್ಬರು ವೀರ ಸಹೋದರರು ಯುದ್ಧ ಮಾಡುತ್ತಿರುವ ಸಂದರ್ಭವನ್ನು ವಿವರಿಸಿದ್ದಾರೆ. "ಒಬ್ಬೊಬ್ಬ ವೀರನ ಹಿಂದೆ ಕೆಳಗೆ ಮೂವರು ಸ್ತ್ರೀಯರನ್ನು ಮೇಲೆ ನಾಲ್ಕು ಹಸುಗಳನ್ನು ಕೆತ್ತಿದ್ದಾರೆ. ಈ ಸ್ತ್ರೀಯರಲ್ಲಿ ಮೇಲಿನವರು ಸಂಪೂರ್ಣ ಬೆತ್ತಲೆಯಾಗಿದ್ದಾರೆ ಮತ್ತು ಕೆಳಗಿನವರು ಅರೆಬೆತ್ತಲೆಯಾಗಿದ್ದಾರೆ (ಸೊಂಟದ ಕೆಳಗೆ ಉಡುಪಿದೆ) ಮತ್ತು ವೀರನ ಹಿಂದೆ ನಿಂತಿರುವ ಮೊದಲ ಸ್ತ್ರೀಯರು ಕಂಕುಳಲ್ಲಿ ಮಗುವನ್ನು ಹಿಡಿದಿದ್ದಾರೆ. ಶತ್ರುಗಳಲ್ಲಿ ಕೆಲವರು ಶರಣಾಗತರಾಗಿದ್ದಾರೆ. ಇನ್ನೂ ಕೆಲವರು ಸತ್ತಿದ್ದಾರೆ". ಅದೇ ಸ್ಥಳದ ಎರಡನೆಯ ವೀರಗಲ್ಲಿನ ಶಿಲ್ಪದಲ್ಲಿಯೂ ಸ್ತ್ರೀಯರ ಮತ್ತು ಗೋವುಗಳ ರಕ್ಷಣೆಗಾಗಿ ವೀರರು ಹೋರಾಡುತ್ತಿರುವ ಶಿಲ್ಪವನ್ನು ಅವರು ಗುರುತಿಸಿ ವಿವರಿಸಿದ್ದಾರೆ. ವೀರನ ಹಿಂದೆ ತುರುಗಳನ್ನು ಮತ್ತು ಸ್ತ್ರೀಯರನ್ನು ಚಿತ್ರಿಸುವುದರ ಮೂಲಕ ಅವರನ್ನು ರಕ್ಷಿಸುವುದನ್ನು ಸೂಚಿಸುವುದಲ್ಲದೆ ಶಾಸನಗಳಲ್ಲಿ ಬರುವ 'ತುರುಗಳಂ ಪಿಂತಿಕ್ಕಿ' ಎಂಬುದಕ್ಕೆ ಶಿಲ್ಪದಲ್ಲಿ ಖಚಿತ ವ್ಯಾಖ್ಯಾನ ಇರುವುದನ್ನು ತೋರಿಸಿದ್ದಾರೆ. ಇಂಥ ಪೆಣ್ಬುಯ್ಯಲಿನ ಇನ್ನೂ ಕೆಲವು ನಿದರ್ಶನಗಳನ್ನು ಆರ್. ಶೇಷಶಾಸ್ತ್ರಿಯವರು ನೀಡಿದ್ದಾರೆ.[೬] ಅವರು ದೊಡ್ಡ ಉಳ್ಳರ್ತಿಯ ವೀರಗಲ್ಲನ್ನು ವ್ಯಾಖ್ಯಾನಿಸುತ್ತಾ ವಿವಸ್ತ್ರಳಾದ ಸ್ತ್ರೀಯ ಮಾನಹಾನಿಗೆ ಪ್ರಯತ್ನಿಸಿದವರನ್ನು ವೀರನು ಕೊಲ್ಲುತ್ತಿರುವಂತೆಯೂ, ಪುರುಷನೊಬ್ಬ

---

೧. (ರೈ) ಎಕ VII ಶಿಕಾರಿಪುರ ೧೮೧ ಕ್ರಿ.ಶ. ೧೧೭೦.

೨. (ರೈ) ಎಕ VII ಶಿಕಾರಿಪುರ ೭೫ ಕ್ರಿ.ಶ. ೧೧೭೫; (ರೈ) ಎಕ VIII ಸೊರಬ ೧೯೩ ಕ್ರಿ.ಶ. ೧೧೬೩.

೩. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೮೪.

೪. C. T. M. Kotrayya : 'A Note on the term- 'Udiucchi' of the Kannada Inscriptions': Studies in Indian Epigraphy ೩, ಪು. ೧೨೮-೧೩೭.

೫. ನಾ. ಗೀತಾಚಾರ್ಯ : 'ಪೆಣ್ಬುಯ್ಯಲ್ -ಒಂದು ವಿಶ್ಲೇಷಣೆ' ಸಾಧನೆ ೯:೪, ಪು. ೭೪-೮೧.

೬. ಆರ್. ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೨೩.

ಅಸಹಾಯಕ ಸ್ತ್ರೀಯ ಮೇಲೆ ಆಕ್ರಮಣ ಮಾಡುತ್ತಿರುವಂತೆಯೂ ಶಿಲ್ಪವನ್ನು ರಚಿಸಲಾಗಿರುವುದನ್ನು ಗುರುತಿಸಿ ಶಾಸನ ಪಾಠದಲ್ಲಿ 'ಪೆಣ್ಬುಯ್ಯಲ್' ಅಥವಾ 'ಪೆಂಡಿರುಡೆಯುರ್ಚು' ಎಂಬ ಪದಗಳಿರದೆ 'ಊರಟೆವು' ಎಂದಿರುವುದನ್ನು ಗಮನಕ್ಕೆ ತಂದಿದ್ದಾರೆ.

ಒಟ್ಟಾಗಿ ಶಾಸನಗಳ ಶಿಲ್ಪ ಮತ್ತು ಪಾಠಗಳ ಹಿನ್ನೆಲೆಯಲ್ಲಿ ಪೆಣ್ಬುಯ್ಯಲ್ ಯುದ್ಧಾಹ್ವಾನವಾಗಿಯೂ, ಯುದ್ಧಪ್ರಚೋದಕವಾಗಿಯೂ ಕೆಲವು ಸಾರಿ ಯುದ್ಧದ ಪರಿಣಾಮವಾಗಿಯೂ ಆಗುತ್ತಿದ್ದಂತೆ ಕಂಡುಬರುತ್ತದೆ.

**ಗಡಿ ಯುದ್ಧಗಳು:**

ಊರುಗಳ ಮಧ್ಯೆ ಆಗಾಗ್ಗೆ ಗಡಿಗಳ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಮೂಡಿ ಘರ್ಷಣೆಗಳು, ಯುದ್ಧಗಳು ನಡೆದು ಸಾವು ನೋವುಗಳು ಉಂಟಾಗುತ್ತಿದ್ದವು. ಪ್ರತಿ ಊರುಗಳಿಗೆ ವಿವರವಾದ ಗಡಿಗಳನ್ನು ಗುರುತು ಮಾಡಿರುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ಊರಿನ ಹಿರಿಯರು ಮುಖ್ಯಸ್ಥರು ಸೇರಿ ಘರ್ಷಣೆಗೆ ಅವಕಾಶ ಕೊಡದೆ ವಿವಾದಗಳನ್ನು ಪರಿಹರಿಸುತ್ತಿದ್ದರು. 'ಸೀಮಾ ಸಂಬಂಧದ ಕಾಳಗದಲ್ಲಿ ಮಡಿದ ವೀರಗಲ್ಲುಗಳ ಸಂಖ್ಯೆಯನ್ನು ಗಮನಿಸಿದರೆ ಇಂಥ ಭಿನ್ನಾಭಿಪ್ರಾಯಗಳು ಬಹುಪಾಲು ನ್ಯಾಯ ತೀರ್ಮಾನಗಳಲ್ಲಿಯೇ ಮುಕ್ತಾಯವಾಗುತ್ತಿದ್ದವು ಎಂದು ತೋರುತ್ತದೆ.[೧]' ಕೆಲವು ಸಾರಿ ಘರ್ಷಣೆಗಳು ಪ್ರಾರಂಭವಾದ ಮೇಲೂ ಅಕ್ಕ ಪಕ್ಕದ ಗ್ರಾಮದವರು ಸೇರಿ ಘರ್ಷಣೆಯನ್ನು ತಡೆದು ಪರಿಹಾರವನ್ನು ಮಾಡುತ್ತಿದ್ದರು.

ಕಮ್ಮತಿಗೆರೆಯ ಬಯಲಿನ ಸಂಬಂಧವಾಗಿ ಅಣೂರು ಮತ್ತು ಕೋಡಹಳ್ಳಿಗಳಿಗೆ ಘರ್ಷಣೆ ನಡೆದಾಗ ಬೆಣ್ಣೆಯನ ಮಗ ಕಿಡಿಗ ಮತ್ತು ಇನ್ನೂ ಅನೇಕರು ಮರಣಹೊಂದಿದ ವಿಷಯ ತಿಳಿದುಬರುತ್ತದೆ.[೨] ಮಹಾಗ್ರಹಾರ ಶಾಂತಿಗ್ರಾಮ ಮತ್ತು ಕೋರಮಂಗಲದ ದುದ್ದದ ಸೀಮಾಸಂಬಂಧವಾಗಿ ಘರ್ಷಣೆಯಾದಾಗ ಬಿಟ್ಟಿಯೋಜನ ಮಕ್ಕಳಾದ ಬಮ್ಮೋಜ ಮಸಣೋಜರು ಹೋರಾಡಿ ಮಡಿದರು.[೩] ಊರು ಊರುಗಳ ಗಡಿವಿವಾದವಲ್ಲದೆ ಕೆಲವು ಸಾರಿ ನಾಡಿನ ಗಡಿಗಾಗಿ ವಿವಿಧ ಊರುಗಳಿಂದ ಜನರು ಹೋಗಿ ತಮ್ಮ ನಾಡಿನ ಪರವಾಗಿ ಹೋರಾಡುತ್ತಿದ್ದರು. ವಾಟಾಳಿನ ಒಂದು ಶಾಸನ ಆ ಊರಿನ ಬುತಿಕಾಜಿ[೪] ಸಾಂಕಪಾಳರ ಕುಲದ ಬಾಬಾಚಾರಿ ನಾಡಿನ ಸೀಮಾಸಂಬಂಧವಾಗಿ ಹೋರಾಡಿ ಮಡಿದ ವಿಷಯವನ್ನು ತಿಳಿಸುತ್ತದೆ.[೫]

ಇಂದಲೂರಿನವರಿಗೂ ಉಪ್ಪವಳ್ಳಿಯವರಿಗೂ ಪೊಲಮೇರೆಗಾಗಿ ಕಾದಾಟ ನಡೆದಾಗ ಚಂಡಗಾವುಂಡ ಮತ್ತು ಇತರರು ಮರಣ ಹೊಂದುತ್ತಾರೆ. ಆಗ ತೊಂಬತ್ತು ನಾಡೂರ ಕಣೆಗಿಲ ದೇಕಣಹೆಗಡೆಯರು ಎರಡೂ ಪಕ್ಷದಲ್ಲಿ ಸಾವು ನೋವಾಗಬಾರದೆಂದು ಎರಡೂ ಊರಿನ ಹಿರಿಯರನ್ನು ಕರೆಸಿ ಎರಡೂ ಊರುಗಳ ಗಡಿಗಳನ್ನು ಹೊಸದಾಗಿ ಗುರುತು ಮಾಡಿ ನ್ಯಾಯ ತೀರ್ಮಾನ ಮಾಡುತ್ತಾರೆ.[೬]

ಕೆಲವು ಸಾರಿ ಗಡಿ ವಿವಾದಗಳನ್ನು ಅನಿವಾರ್ಯವಾಗಿ ಘರ್ಷಣೆಯ ಹಾದಿಯನ್ನು ಹಿಡಿಯುತ್ತಿದ್ದವು. ಬೆಣ್ಣೆವೂರು ಮತ್ತು ಮಲವೂರಿಗೆ ಸೀಮಾಸಂಬಂಧದ ಕಲಹನಾದಾಗ ಅದರಲ್ಲಿ ಜಕ್ಕ ಮತ್ತು ಚವುಡರು ಮರಣ ಹೊಂದಿದ ವಿಷಯ

---

೧. ಆರ್. ಶೇಷಶಾಸ್ತ್ರೀ : ಪೂರ್ವೋಕ್ತ ಪು. ೧೨೩.

೨. (ರೈ) ಎಕ VI ಚಿಕ್ಕಮಗಳೂರು ೭೨ ಕ್ರಿ.ಶ. ೧೨೩೦.

೩. (ರೈ) ಎಕ V ಹಾಸನ ೭೦ ಕ್ರಿ.ಶ. ೧೧೮೦(?)

೪. 'ಬುತಿಕಾಜಿ' ಎನ್ನುವುದು ಯಾವ ವೃತ್ತಿಯನ್ನು ಸೂಚಿಸುವುದೋ ತಿಳಿಯದು.

೫. (ಮೈ) ಎಕ V ತಿ.ನರಸೀಪುರ ೨೯೬ ಕ್ರಿ.ಶ. ೧೧೯೬.

೬. ಎಂಎಆರ್ ೧೯೩೨ ಚಿಕ್ಕಮಗಳೂರು ೧೨ ಕ್ರಿ.ಶ. ೧೧೯೦.

ತಿಳಿದು ಬರುತ್ತದೆ.[1] ಕೆಲವು ಸಾರಿ ಖುದ್ದಾಗಿ ರಾಜನೇ ಘರ್ಷಣೆಗೆ ಅವಕಾಶವೀಯದೆ ಗಡಿವಿವಾದಗಳನ್ನು ಪರಿಹರಿಸಿರುವುದುಂಟು.[2]

ಪ್ರತಿಯೊಂದು ಹಳ್ಳಿಗೂ ಖಚಿತವಾಗಿ ಗಡಿಗಳನ್ನು ಗೊತ್ತುಮಾಡಿರುತ್ತಿದ್ದರು. ದೇಗಾವೆ ಎಂಬ ಅಗ್ರಹಾರದ ಗಡಿಗಳನ್ನು ನಿರೂಪಿಸುವ ಒಂದೇ ಉದ್ದೇಶದಿಂದ ಹೊರಟಿರುವ ಶಾಸನವೊಂದಿದೆ.[3] ದಾನಿಗಳಾಗಲಿ, ಅಧಿಕಾರಿಗಳಾಗಲಿ ಮೇರೆಯ ಬಗ್ಗೆ ಯಾವುದೇ ಭಿನ್ನಾಭಿಪ್ರಾಯ ಉದ್ಭವಿಸಬಹುದೆಂಬ ಕಾರಣದಿಂದ ತುಂಬ ಕರಾರುವಾಕ್ಕಾಗಿ ದಾನಭೂಮಿಯ ಮೇರೆಗಳನ್ನು ವಿವರವಾಗಿ ಕೊಡುವುದನ್ನು ಸಾವಿರಾರು ಶಾಸನಗಳಲ್ಲಿ ಕಾಣುತ್ತೇವೆ. ಒಂದು ಗ್ರಾಮದವರು ಗಡಿಯ ಒತ್ತುವರಿ ಮಾಡಿದಾಗ ಘರ್ಷಣೆಗೆ ಅವಕಾಶವಾಗುತ್ತಿತ್ತು. ಗ್ರಾಮಾಡಳಿತವೂ ಒಂದು ರೀತಿಯಲ್ಲಿ ಸ್ವತಂತ್ರ ಆಡಳಿತ ಘಟಕದಂತೆ ವ್ಯವಹರಿಸಲ್ಪಡು ತ್ತಿದ್ದುದರಿಂದ ತಮ್ಮ ತಮ್ಮ ಗಡಿ ರಕ್ಷಣೆ ಆಯಾ ಊರಿನವರ ಜವಾಬ್ದಾರಿಯೇ ಆಗಿರುತ್ತಿತ್ತು. ವಿಸ್ತಾರವಾದ ಅರ್ಥದಲ್ಲಿ ತೆಗೆದುಕೊಂಡರೆ ಸಾಮಂತರಿಗೆ, ರಾಜರಿಗೆ ನಡೆದ ಯುದ್ಧಗಳೂ ಒಂದು ರೀತಿಯಲ್ಲಿ ಗಡಿಯುದ್ಧಗಳೇ ಆಗಿವೆ.

**ಊರಳಿವು:**

ಇದು ಊರಿನ ನಾಶವನ್ನು ಹೇಳುತ್ತದೆ. ಗೆದ್ದ ರಾಜನು ತಾನು ಗೆದ್ದ ಪ್ರದೇಶಗಳನ್ನು ಲೂಟಿ ಮಾಡಿಸುವ, ಸುಡಿಸುವ, ಹೆಂಗಸರ ಮಾನಭಂಗ ಮಾಡಿಸುವಂತಹ ಅಕೃತ್ಯದಲ್ಲಿ ತೊಡಗುತ್ತಿದ್ದಾಗ ಸ್ಥಳೀಯ ವೀರರು ನಡೆಸುತ್ತಿದ್ದ ಹೋರಾಟವನ್ನು ಇದು ತಿಳಿಸುತ್ತದೆ. ಇದನ್ನು ಶಾಸನಗಳು 'ಊರಳಿವು,' 'ಊರು ಹುಯ್ಯಲು" ಎಂದು ಕರೆದಿವೆ. ಹೊಯ್ಸಳ ವಿಷ್ಣುವರ್ಧನ ಭಟ್ಟದ ಪ್ರದೇಶದಲ್ಲಿ ದಾಳಿ ಮಾಡಿದಾಗ ಅಡಿಕೆ, ತೆಂಗು ಮುಂತಾದ ಬೆಳೆಗಳನ್ನು, ತೇಗದ ಮರಗಳನ್ನು ಸುಟ್ಟ ವಿಷಯ ತಿಳಿದು ಬರುತ್ತದೆ.[4] ಇಂಥ ಸಂದರ್ಭಗಳಲ್ಲಿ ಸ್ಥಳೀಯ ವೀರರು ತಮ್ಮ ಊರಿನ ರಕ್ಷಣೆಗಾಗಿ, ಗೋವುಗಳ ಮತ್ತು ಸ್ತ್ರೀಯರ ರಕ್ಷಣೆಗಾಗಿ ಹೋರಾಡುತ್ತಿದ್ದರು. ಈ ಹೋರಾಟಗಳಲ್ಲಿ ಅನೇಕ ಸಾವು ನೋವುಗಳು ಸಹಜವಾಗಿ ಉಂಟಾಗುತ್ತಿದ್ದವು.

ಸತ್ರದ ಹಳ್ಳಿಯನ್ನು ಉದ್ಧರೆಯ ಎಕ್ಕಲರಸ ಆಕ್ರಮಣ ಮಾಡಿ ಅದನ್ನು ಸುಟ್ಟು ಹೋಗುವಾಗ ಎಱೆಯಮ ಗಾವುಂಡನ ಮಗ ಮಣ್ಣಿಯಗಾವುಂಡ ಹೋರಾಡಿ ಮಡಿದ ವಿಷಯ ಶಾಸನವೊಂದರಿಂದ ತಿಳಿದು ಬರುತ್ತದೆ.[5] 'ಗುತ್ತಿಯ ಮಂಡಳಿಕ ಬಮ್ಮಣ್ಣ ಬಾಳೆಯೂರನ್ನು ಇಱೆದು ಊರಳಿವುಗೈದಾಗ ಮುಂಜಗಾವುಂಡನ ಮಗ ಬಮ್ಮಗಾವುಂಡನ ತಂಮ ರಾಮಯ' ಹೋರಾಡಿ ಮಡಿದ ವಿಷಯ ತಿಳಿದು ಬರುತ್ತದೆ.[6] ಇಂಥ ಊರಳಿವಿನ ಸಂದರ್ಭದಲ್ಲಿ ಸೈನಿಕರು ಸ್ತ್ರೀಯರ ಮಾನಭಂಗವನ್ನೂ ಮಾಡುತ್ತಿದ್ದರು. ಅದೇ ಶಾಸನದ ಕೊನೆಯಲ್ಲಿ ದಾಳಿಕಾರರು "ಹೆಣ್ಣುಡೆಯನುಚ್ಚೆ ಕೂರಿಡೆ ಮನೆಯ ಹೊಱವಟ್ಟು ಲೋಕ (ಹೊ)ಗಳತ್ತಳ್ತಿಱೆದಂ ರಾಮಗೌಡನೂರಳಿವೆಡೆಯೊಳು" ಎಂದು ಬರುತ್ತದೆ. ಊರಳಿವಿನಲ್ಲಿ ಶತ್ರುಗಳು ಹೆಂಗಸರ ಮಾನಭಂಗಕ್ಕೆ ಪ್ರಯತ್ನಿಸಿದಾಗ ಅವರು ಕೂಗಿಡಲು ಅವನು ಮನೆಯಿಂದ ಹೊರಬಂದು ಹೋರಾಡಿದ ವಿಷಯವನ್ನು ಶಾಸನ ತಿಳಿಸುತ್ತದೆ.

ತುಡಿನೀರಿನ ಶಾಸನವೊಂದು 'ಸಿಂಘಣದೇನಾಯ್ಕ ಮುಖ್ಯವಾಗಿ ಮೂವತ್ತು ಸಾವಿರ ಕುದುರೆ ದಳ' ಬಂದು ಗುತ್ತಿದುರ್ಗವನ್ನು ಆಕ್ರಮಿಸಿ ನಾಡ ಸುಟ್ಟು ಸೂರೆ ಮಾಡುತ್ತ ಬರಲು ಇಡಗೌಡ ಹೆಗ್ಗಡೆ, ಬಲ್ಲಯ್ಯನ ಮಗ ಹರಿಪಯನು ಯಡನಾಡು

---

೧. ಎಸ್‌ಐಐ XVIII ರಾಣೆಬೆನ್ನೂರು ೨೧೦ ಕ್ರಿ.ಶ. ೧೨೨೮.

೨. (ರೈ) ಎಕ VII ಚನ್ನಗಿರಿ ೭೨ ಕ್ರಿ.ಶ. ೧೨೨೦.

೩. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೨೮೬.

೪. William Coelho : The Hoysala Vamsa ಪು. ೨೫೯.

೫. (ರೈ) ಎಕ VIII ಸೊರಬ ೯೯ ಕ್ರಿ.ಶ. ೧೧೫೯.

೬. ಕಇ V ಹಾನಗಲ್ಲು ೩೬ ಕ್ರಿ.ಶ. ೧೧೬೩.

ತಾಳಗುಪ್ಪೆಯಲ್ಲಿ ಕಾಳೆಯ ಪಡಳನ ಮಗ ಹೆಮ್ಮಯ್ಯನ ಜೊತೆಯಲ್ಲಿ ಹೋರಾಡಿ ಶತ್ರುಬಲವನ್ನು ನಾಶಮಾಡಿ ಹಲವರನ್ನು ಕೊಂದು ಹೋರಾಡಿ ಮಡಿಯುತ್ತಾನೆ[೧] ಎಂದು ತಿಳಿಸುತ್ತದೆ. ತೆಂಕಣಹಳ್ಳಿಯ ಊರಳಿವಿನಲ್ಲಿ ಕಿಜುಗತೂತ ಹೆಗ್ಗಡೆಯರ ಪೆರುಮಗವುಂಡನ ಮಗ ಮಾರಪ್ಪನೂ ಅಳಿಯ ಮಾದೆಯನೂ ಎಡಗೈಬಲಗೈಯಾಗಿ ಹೋರಾಡಿ ಮಡಿದ ವಿಷಯವನ್ನು ಶಾಸನವೊಂದು ಹೇಳುತ್ತದೆ.[೨]

ಊರಳಿವಿನಲ್ಲಿ ಗೋವುಗಳನ್ನು ಹೊಡೆದುಕೊಂಡು ಹೋಗುತ್ತಿದ್ದರು. ಮುಗದೂರಿನ ಬಾಚಗೌಂಡನ ಆಳು ಎರಬೋವನು ಊರಳಿವನ್ನು ತುರುಗಳ ಅಪಹರಣವನ್ನು ತಡೆಯಲು ಹೋರಾಡಿ ಮಡಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೩] ಇಂಥ ಊರಳಿವಿನಲ್ಲಿ ಹೋರಾಡಿದ ಅನೇಕ ನಿದರ್ಶನಗಳು ದೊರೆಯುತ್ತವೆ.[೪]

ಊರಳಿವಿನಲ್ಲಿ ತುರುಗಳ ಅಪಹರಣ ಹಾಗೂ, ಸ್ತ್ರೀಯರ ಮಾನಭಂಗವನ್ನು ಮಾಡುತ್ತಿದ್ದುದಲ್ಲದೆ, ಸ್ತ್ರೀಯರನ್ನು ಅಪಹರಿಸುತ್ತಿದ್ದುದೂ ಉಂಟು. ಪಾಂಡ್ಯದೇವರಸನು ಉದ್ದರೆಯಲ್ಲಿ ಬೀಡುಬಿಟ್ಟು (?) 'ಊರಿಂದ ಉದೆಉಬ್ಬೆ[೫]ಸೂಳೆಯಂ ಕೊಂಡು ತುರುವಂ ಕೊಂಡು ಹೋಗುತ್ತಿರಲು ಕರಿಮಾಜಿ ಲೀಲೋಜನ ಲೊಪಳೋಜನು ಇವರ ಸರವಂ ಕೇಳಿ ಹಹಾಹ ದೆಂದು ಹರಿತಂದು ತಾಗಿ ತಳ್ತಿಜಿ'... ಹಲಕೂಡೆ ತುರುವಂ ಮಗುಳ್ಚಿ' ಸುರಲೋಕಪ್ರಾಪ್ತನಾಗುತ್ತಾನೆ.[೬]

ಕೆಲವು ಸಾರಿ ರಾಜಾಜ್ಞೆಯನ್ನು ಪಾಲಿಸದಿದ್ದಾಗಲೂ ಅಧಿಕಾರಿಗಳು ಒಂದು ಊರಿನ ಮೇಲೆ ಆಕ್ರಮಣ ಮಾಡಿ ಊರನ್ನು ಸೂರೆಗೊಂಡು ಸ್ತ್ರೀಯರನ್ನು ಅಪಮಾನಿಸಿ, ಸ್ತ್ರೀಯರನ್ನು ಮತ್ತು ತುರುಗಳನ್ನು ಅಪಹರಿಸಲು ಮುಂದಾಗುತ್ತಿದ್ದರು. ಇಂಥವು ಶತ್ರುನಾಡಿನ ರಾಜರಿಂದ ಆದ ಊರಳಿವುಗಳಲ್ಲ, ಇವು ಊರಿನವರ ಮೇಲೆ ರಾಜನ ಪರವಾಗಿ ಅಧಿಕಾರಿಗಳು ತೋರಿಸುವ ಪ್ರತೀಕಾರವಾಗಿದೆ. ಹೊಯ್ಸಳ ವೀರನರಸಿಂಹನು ಹಾಲುತೊರೆಯನ್ನು ಅಗ್ರಹಾರವಾಗಿ ಪರಿವರ್ತಿಸಿದಾಗ, ಅದರಂತೆ ರಾಜಾಜ್ಞೆ ಹೊರಟಿತು. ಆಗ ಮಹಾಜನಗಳನ್ನು ಕರೆತಂದು ಅವರಿಗೆ ಅದನ್ನು ವಶಕ್ಕೆ ಕೊಡಿ ಎಂದು ಹೇಳಿದಾಗ ಗಾವುಂಡುಗಳು ಒಲ್ಲದೆ ತಿರಸ್ಕರಿಸಿದರು. ಆಗ ಅಧಿಕಾರಿಗಳು ಸೈನ್ಯದೊಂದಿಗೆ ಬಂದು ಆಕ್ರಮಣ ಮಾಡಿ 'ಊರೆಲ್ಲವಂ ಸೂಱೆಗೊಂಡು ಉಡೆ ಉರ್ಚಿ ಹೆಣ್ಣುಸೆಱೆ ತುಱುಸೆಱೆ' ಯನ್ನು ಮಾಡಲು ಹರಿಮಾರಗೌಡನ ಮಗ ಮಾರಯ ಪೆರಯನು ಉಗ್ರವಾಗಿ ಪ್ರತಿಭಟಿಸಿ ಕುದುರೆಯ ಸೈನ್ಯದೊಡನೆ ಹೋರಾಡಿ ಮಡಿಯುತ್ತಾನೆ. ಅನಂತರ ಬಹುಶಃ ಗೌಡುಗಳು ಅಗ್ರಹಾರಕ್ಕಾಗಿ ಆ ಊರನ್ನು ಬಿಟ್ಟುಕೊಟ್ಟಂತಿದೆ. ಮಹಾಜನಗಳು, ಆ ನಾಡ ಪ್ರಜೆ ಗೌಡುಗಳು ಸೇರಿ ಮಡಿದ ವೀರನಿಗೆ ಭೂಮಿದಾನವನ್ನು ಕೊಟ್ಟಂತೆ ತಿಳಿದು ಬರುತ್ತದೆ.[೭]

ಊರಳಿವು ಹೀಗೆ ನಾನಾ ಕಾರಣಗಳಿಗೆ ಆಗುತ್ತಿದ್ದವು.ಅದು ದ್ವೇಷಮೂಲವಾದ ಬರ್ಬರ ಅನಾಗರಿಕ ಅಮಾನವೀಯ ಕೃತ್ಯವಾಗಿ ಕಂಡು ಬರುತ್ತದೆ.

---

೧. (ರೈ) ಎಕ VIII ಸೊರಬ ೩೯೯ ಕ್ರಿ.ಶ. ೧೨೩೯.

೨. (ಮೈ) ಎಕ VII ಮಳವಳ್ಳಿ ೧೦೧ ಕ್ರಿ.ಶ. ೧೨೮೫.

೩. ಎಸ್‌ಐಐ XVIII ಹಾವೇರಿ ೩೪೮ ಕ್ರಿ.ಶ. ೧೧೬೫.

೪. (ರೈ) ಎಕ XVI ಚಿಕ್ಕನಾಯಕನಹಳ್ಳಿ ೧೦೬ ಕ್ರಿ.ಶ. ೧೨೪೫; ಎಸ್‌ಐಐ XVIII ರಾಣೆಬೆನ್ನೂರು ೨೬೩ ಕ್ರಿ.ಶ. ೧೨೮೫; ಕಇ IV ಹಿರೇಕೆರೂರು ೨೦ ಕ್ರಿ.ಶ. ೧೧೬೫/೬೬.

೫. ಈ ಶಾಸನ ಪಾಠ ಉದೆಉಬ್ಬೆ ಎಂಬ ಸೂಳೆಯನ್ನು ಸೂಚಿಸುವುದೋ ಅಥವಾ 'ಉಡೆ ಉರ್ಚಿ' ಎಂದಿರಬೇಕೊ ಎಂಬ ಸಂಶಯ ಬರುತ್ತದೆ.

೬. (ರೈ) ಎಕ VII ಶಿಕಾರಿಪುರ ೩೦ ಕ್ರಿ.ಶ. ೧೧೮೦.

೭. ಎಂಎಆರ್ ೧೯೩೬ ಬೇಲೂರು ೧೯ ಕ್ರಿ.ಶ. ೧೨೩೦.

**ಕೋಟೆಗಾಳೆಗ:**

ಭದ್ರವಾದ ಕೋಟೆ ರಾಜನಿಗೆ ಅತ್ಯಂತ ಪ್ರಮುಖವಾದುದೆಂದು ಪ್ರಾಚೀನ ಕಾಲದಿಂದಲೂ ಶಾಸ್ತ್ರಗ್ರಂಥಗಳು ನಿರೂಪಿಸಿವೆ. ಇದು ಸಪ್ತಾಂಗಗಳಲ್ಲಿ ಒಂದಾಗಿ ಅನೇಕ ಗ್ರಂಥಗಳಲ್ಲಿ[೧] ಮತ್ತು ಶಾಸನಗಳಲ್ಲಿ[೨] ಉಲ್ಲೇಖಗೊಂಡಿದೆ. ಕೋಟೆಯು ರಾಜನ ರಕ್ಷಣೆಯನ್ನು ಮಾಡುವುದಲ್ಲದೆ, ಶತ್ರುಗಳಿಗೆ ದುರ್ಗಮವಾಗಿಯೂ ಇದ್ದು ಆಪತ್ಕಾಲದಲ್ಲಿ ನೆರವು ಬರುವವರೆಗೂ ರಕ್ಷಿಸಿಕೊಳ್ಳಲು ಬಲವಾದ ಆಶ್ರಯವನ್ನು ನೀಡುತ್ತಿತ್ತು. ಪರಿಸರ ಮತ್ತು ರಚನೆಯ ಮೇಲೆ ಕೋಟೆಗಳನ್ನು ಅನೇಕ ವಿಧಗಳಾಗಿ ವಿಭಾಗಿಸುತ್ತಿದ್ದರು.

ಅರ್ಥಶಾಸ್ತ್ರ, ಮನುಸ್ಮೃತಿ, ಶುಕ್ರನೀತಿ, ಮಾನಸಾರ, ದುರ್ಗಸಿಂಹನ ಪಂಚತಂತ್ರ ಮತ್ತು ಮಾನಸೋಲ್ಲಾಸಗಳಲ್ಲಿ ೪ರಿಂದ ೯ ರೀತಿಯ ಕೋಟೆಗಳನ್ನು ಹೇಳಲಾಗಿದೆ. ಅವುಗಳಲ್ಲಿ ಆರು ಪ್ರಸಿದ್ಧವಾಗಿವೆ.[೩] ಅವು ಹೀಗಿವೆ[೪]. ಧನುರ್ದುರ್ಗ, ಮಹೀದುರ್ಗ, ಅಬ್ಧಿದುರ್ಗ, ವೃಕ್ಷದುರ್ಗ, ನೃದುರ್ಗ, ಗಿರಿದುರ್ಗ.

**ಧನುರ್ದುರ್ಗ:** ಸುಮಾರು ಐದು ಯೋಜನಗಳು ವಿಸ್ತಾರವಾದ ಬಯಲು ಅಥವಾ ಮರಳುಗಾಡು ಇದ್ದು, ಶತ್ರುವಿಗೆ ಉಳಿದುಕೊಳ್ಳಲು ಅವಕಾಶವಿರಬಾರದು.

**ಮಹೀದುರ್ಗ:** ಇದು ವಿಸ್ತಾರವಾದ ಸುತ್ತಿನ ಹರಹಿನಿಂದ ಕೂಡಿದ್ದು ರಥ ಮತ್ತು ಕಾಲಾಳು ಚಲಿಸಲಾರದಂತೆ ಕುಳಿಗಳಿಂದ, ಹಳ್ಳಗಳಿಂದ ಕೂಡಿರಬೇಕು.

**ಅಬ್ಧಿದುರ್ಗ:** ಶತ್ರುಗಳು ಕೋಟೆಯನ್ನು ಪ್ರವೇಶಿಸಲಾಗದಂತೆ ಸುತ್ತಲೂ ಜಲಾವೃತವಾಗಿರಬೇಕು.

**ವೃಕ್ಷದುರ್ಗ:** ಕೋಟೆಯ ಸುತ್ತ ಪೊದೆ ಮತ್ತು ದಟ್ಟ ಅರಣ್ಯವಿರಬೇಕು.

**ನೃದುರ್ಗ:** ಯಾವ ಸ್ಥಳದಲ್ಲಿ ಕೋಟೆ ಇದೆಯೋ ಅದರ ಸುತ್ತ ಎಲ್ಲ ಕಡೆಯೂ ಸ್ನೇಹಿತರಿರಬೇಕು.

**ಗಿರಿದುರ್ಗ:** ಬೆಟ್ಟಗುಡ್ಡಗಳಿಂದ ಸುತ್ತುವರಿಯಲ್ಪಟ್ಟ ಕೋಟೆ.

ಮೇಲೆ ಹೇಳಿದ ದುರ್ಗಗಳಲ್ಲೆಲ್ಲ ಗಿರಿದುರ್ಗ ಅತ್ಯುತ್ತಮವಾದದ್ದೆಂಬ ಅಭಿಪ್ರಾಯವಿದೆ. ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ ಮೂರು[೫] ರೀತಿಯ ಕೋಟೆಗಳನ್ನು ವಿಶೇಷವಾಗಿ ಹೇಳಲಾಗಿದೆ. ಗಿರಿದುರ್ಗ, ಜಲದುರ್ಗ ಮತ್ತು ವನದುರ್ಗ ಇವು 'ದುರ್ಗತ್ರಯ'ಗಳೆಂದು ಕರೆಯಿಸಿಕೊಳ್ಳುತ್ತಿದ್ದವು. ದುರ್ಗಸಿಂಹನು ಈ ಪಟ್ಟಿಗೆ ಸ್ಥಲದುರ್ಗವನ್ನು ಸೇರಿಸಿ ನಾಲ್ಕು ದುರ್ಗಗಳನ್ನು ಹೇಳಿದ್ದಾನೆ.[೬] ಕರ್ನಾಟಕದಲ್ಲಿ ಈಗ ಉಳಿದಿರುವ ಕೋಟೆಗಳನ್ನು ಗಮನಿಸಿದರೆ ಅವುಗಳಲ್ಲಿ ಗಿರಿದುರ್ಗಗಳೇ ಪ್ರಮುಖವಾಗಿವೆ. ಉದಾಹರಣೆಗೆ: ಚಿತ್ರದುರ್ಗ, ಬಳ್ಳಾರಿ, ಬಾದಾಮಿ, ಉಚ್ಚಂಗಿ ಮುಂತಾದವು.

---

೧. ಸೂಕ್ತಿಸುಧಾರ್ಣವಂ ೧೬-೪೭; ಧರ್ಮಾಮೃತಂ ೧-೭೪.

೨. ಎಸ್‌ಐಐ XVIII ಹಾವೇರಿ ೨೪೨ ಕ್ರಿ.ಶ. ೧೩ ಶಮಾ. ಫಡಕೇನೂರು ಶಾಸನ ಭೂದುರ್ಗ, ಗಿರಿದುರ್ಗ, ಜಲದುರ್ಗ, ವನದುರ್ಗ ಮುಂತಾದ ನಾನಾ ದುರ್ಗಗಳನ್ನು ಉಲ್ಲೇಖಿಸುತ್ತದೆ. ಎಸ್‌ಐಐ XV. ಪು. ೨೩೩-೨೩೫. ಕ್ರಿ.ಶ. ೧೨೫೭.

೩. ಹೆಚ್ಚಿನ ವಿವರಗಳಿಗೆ ನೋಡಿ ಚನ್ನಬಸಪ್ಪ ಎಸ್. ಪಾಟೀಲ : ಕರ್ನಾಟಕದ ಕೋಟೆಗಳು ಸಂ.೧ ಪು. ೧ ರಿಂದ ೫.

೪. P. Jagannatha Swamy : Warfare in Ancient India ಪು. ೯-೧೨.

೫. ಧರ್ಮಾಮೃತಂ ೧೨ ಗದ್ಯ, ಪು. ೧೧೧.

೬. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೨೮೮.

ಕೋಟೆಗಾಳಗದ ವಿವರಗಳು ಕೆಲವು ಮಟ್ಟಿಗೆ ಶಾಸನಗಳಲ್ಲಿ, ವಿವರವಾಗಿ ಕಾವ್ಯಗಳಲ್ಲಿ ಬಂದಿರುವುದನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ.[೧] ಅವುಗಳ ಪುನರುಕ್ತಿಗೆ ಹೋಗದೆ ಆ ಕಾಲದ ಶಾಸನಗಳು ಕೊಡುವ ವಿವರಗಳನ್ನು ಗ್ರಹಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಶಾಸನೋಕ್ತವಾಗಿರುವ ಆ ಕಾಲದ ಕೆಲವು ಕೋಟೆಗಳನ್ನು ಗಮನಿಸಬಹುದು. ಉಚ್ಚಂಗಿಯ ಕೋಟೆ ಆ ಕಾಲದ ಪ್ರಸಿದ್ಧ ಕೋಟೆಯಾಗಿದ್ದಿತು. 'ಚಿರಕಾಲ ರಿಪುಗಳ್ಗಸಾಧ್ಯಮನಿಸಿರ್ದುಚ್ಚಂಗಿಯಂ' ಮುತ್ತಿ ಅದನ್ನು ಬಲ್ಲಾಳನು ವಶಪಡಿಸಿಕೊಂಡನೆಂದು ಅನೇಕ ಶಾಸನಗಳು ಹೇಳುತ್ತವೆ.[೨] ಬಹುಶಃ 'ಉಚ್ಚಂಗಿಕೊಂಡ'ನೆಂಬ ಬಿರುದು ಅಜೇಯವಾದ ಆ ಕೋಟೆಯನ್ನು ಗೆದ್ದನಂತರವೇ ಅವನ ಬಿರುದುಗಳಿಗೆ ಸೇರ್ಪಡೆಯಾಗಿರಬೇಕು. ಉಚ್ಚಂಗಿಯಂತೆ ಕುರುಗೋಡಿನ ಕೋಟೆಯೂ ಅಷ್ಟೇ ಪ್ರಸಿದ್ಧವಾಗಿದ್ದಿತು. ಒಂದು ಶಾಸನದಲ್ಲಿ ಅದನ್ನು ಹೀಗೆ ಕೀರ್ತಿಸಲಾಗಿದೆ.

> ಚೋಳನನಾಳು ಮಾಡುವುದು ಗೂರ್ಜ್ಜರರಂ ಸಲೆ ತರ್ದ್ದಿಕುಂ ಕರಂ
> ಲಾಳನನಾಳಿಮಾಡುವುದು ಪಾಂಡ್ಯನನಂಡಲೆಗುಂ ತೆಲುಂಗ ಭೂ
> ಪಾಲನನೇಳಿದಿಕ್ಕೆಯನೆ ಮಾಡುವುದೀ ಕುಱುಗೋಡ ಕೋಟೆ ತಾಂ
> ಕಾಳೆಗವೆಂದಡೇಳು ಮಡಿ ಪೆರ್ಚ್ಚುವುದಚ್ಚರಿ ಯಾರೂ ಕಾದುವರ್॥[೩]

ಚೋಳ, ಗೂರ್ಜರ, ಲಾಳ, ಪಾಂಡ್ಯ ಮತ್ತು ತೆಲುಂಗ ರಾಜರಿಗೆ ಅಸಾಧ್ಯವಾಗಿ ಅವರೆಲ್ಲರನ್ನೂ ನಾನಾ ಸಂಕಷ್ಟಗಳಿಗೆ ಸಿಲುಕಿಸಬಲ್ಲದ್ದಾಗಿತ್ತು. ಕುರುಗೋಡಿನ ಕೋಟೆಯ ವಿಶೇಷವೆಂದರೆ ಅದು 'ಕಾಳಗವೆಂದರೆ ಏಳುಪಟ್ಟು ಹೆಚ್ಚುತ್ತಿದ್ದಿತು.' ಆ ಕೋಟೆಯನ್ನು ಎತ್ತರವಾದ ಮೂರು ಸುತ್ತಿನ ಕೋಟೆಯೆಂದು ಇನ್ನೊಂದು ಶಾಸನ ಹೇಳುತ್ತದೆ.[೪] ಈ ರೀತಿ ಕೋಟೆಗಳು ಅನೇಕ ಸುತ್ತುಗಳನ್ನು ಒಳಗೊಂಡಿರುತ್ತಿದ್ದವು. ಚಿತ್ರದುರ್ಗದ ಕೋಟೆ ಏಳುಸುತ್ತಿನ ರಚನೆ ಉಳ್ಳದ್ದಾಗಿ ಪ್ರಸಿದ್ಧವಾಗಿದೆ. ಕುರುಗೋಡ ಕೋಟೆ ಅಕ್ಕಪಕ್ಕದ ಜಲದುರ್ಗಗಳನ್ನು ಅಲೆವುದೆಂದೂ(?) ನೆರೆಹೊರೆಯ ತರುಗಿರಿದುರ್ಗಗಳನ್ನು ಇಳಿಸಿ ತನ್ನನ್ನು ಮೆರೆಯುತ್ತದೆಯೆಂದೂ ಆ ದುರ್ಗ ಯಾರಿಗೂ ಅಸಾಧ್ಯವಾದುದೆಂದೂ ಮತ್ತೊಂದು ಶಾಸನ ಹೇಳುತ್ತದೆ.[೫] ಇದೇ ರೀತಿ ಬಾದಾಮಿ, ಹಾನಗಲ್ಲು, ಗುತ್ತಿ, ಗುತ್ತವೊಳಲ್ ಮುಂತಾದ ಕೋಟೆಗಳು ಪ್ರಸಿದ್ಧವಾಗಿದ್ದವು.

ಕೋಟೆಗಾಳಗವನ್ನು ಎರಡು ದೃಷ್ಟಿಗಳಿಂದ ಗಮನಿಸಬಹುದು. ಒಂದು- ಕೋಟೆಯನ್ನು ಆಕ್ರಮಣ ಮಾಡುವವರ ದೃಷ್ಟಿಯಿಂದ, ಇನ್ನೊಂದು- ಕೋಟೆಯನ್ನು ಸಂರಕ್ಷಿಸಿಕೊಳ್ಳುವವರ ದೃಷ್ಟಿಯಿಂದ. ಸಾಮಾನ್ಯವಾಗಿ ಕೋಟೆಗಳ ಆಕ್ರಮಣದ ವರ್ಣನೆ ಬಂದಾಗ 'ಮೂವಳಸಾಗಿ' ಆಕ್ರಮಣ ಮಾಡಿದುದಾಗಿ ಶಾಸನಗಳು ತಿಳಿಸುತ್ತವೆ. ಆರ್. ಶೇಷಶಾಸ್ತ್ರಿಯವರು ಮೂವಳಸಿಗೆ 'ಮೂರು ಕಡೆಯಿಂದ ಸುತ್ತಿ ಎಂಬುದಾಗಿ ಅರ್ಥೈಸಬೇಕೆಂದು ತೋರುತ್ತದೆ'[೬] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಕೋಟೆಗಳಿಗೆ ಲಗ್ಗೆಹಾಕಿದ ಶಾಸನಗಳನ್ನು ಗಮನಿಸಿದರೆ ಆ ಅರ್ಥ ಅಷ್ಟು ಸಮಂಜಸವೆಂದು ಅನ್ನಿಸುವುದಿಲ್ಲ.

---

೧. ಎಂ. ಚಿದಾನಂದ ಮೂರ್ತಿ : ಪೂರ್ವೋಕ್ತ, ಪು. ೨೮೬-೨೯೧.
ಬೆಟಗೇರಿ ಕೃಷ್ಣಶರ್ಮ : ಕರ್ನಾಟಕದ ಜನಜೀವನ, ಪು. ೩-೬೩.
ಆರ್. ಶೇಷಶಾಸ್ತ್ರಿ : ಪೂರ್ವೋಕ್ತ, ಪು. ೧೮೭-೧೯೫.

೨. (ಮೈ) ಎಕ II ಶ್ರವಣಬೆಳಗೊಳ ೪೪೪ ಕ್ರಿ.ಶ. ೧೧೮೧.

೩. ಎಸ್ಐಐ IX(i) ಬಳ್ಳಾರಿ ೨೯೬ ಕ್ರಿ.ಶ. ೧೧೭೬.

೪. ಎಸ್ಐಐ IX(i) ಬಳ್ಳಾರಿ ೨೯೭ ಕ್ರಿ.ಶ. ೧೧೭೭.

೫. ಎಇ XIV ಬಳ್ಳಾರಿ ೨೭೦ ಕ್ರಿ.ಶ. ೧೧೮೧.

೬. ಆರ್. ಶೇಷಶಾಸ್ತ್ರೀ ಪೂರ್ವೋಕ್ತ, ಪು. ೧೮೯.

ಬಳಸಿಗೆ ಸುತ್ತುವರಿ, ಆವೃತ್ತವಾಗು ಎಂಬ ಅರ್ಥಗಳು ಇವೆ. ಇಡೀ ಕೋಟೆಯನ್ನು ಮೂರು ಹಂತಗಳಲ್ಲಿ ಸುತ್ತುವರಿದು ಎಂದು ಅರ್ಥೈಸಬಹುದಾಗಿದೆ. ಮೊದಲನೆಯ ಸುತ್ತಿನ ಸೈನ್ಯ ಕೋಟೆಗೋಡೆಯ ತೀರಾ ಸಮೀಪಕ್ಕೆ ಹೋಗಿ ಅದನ್ನು ಹತ್ತುವ, ದುರ್ಬಲಗೊಳಿಸುವ ಪ್ರಯತ್ನದಲ್ಲಿ ತೊಡಗುತ್ತಿದ್ದುದು. ಎರಡನೆಯ ಸುತ್ತಿನ ಸೈನ್ಯ ಮೊದಲ ಹಂತದ ಸೈನಿಕರಿಗೆ ಕೋಟೆಯ ಮೇಲಿನಿಂದ ಆಗುವ ಅಪಾಯಗಳನ್ನು ತಪ್ಪಿಸುತ್ತಾ ಕೋಟೆಗೆ ಲಗ್ಗೆ ಹಾಕಲು ಅನ್ಯ ಸಾಧ್ಯತೆಗಳನ್ನು, ದುರ್ಬಲ ತಾಣಗಳನ್ನು ನಿರೀಕ್ಷಿಸುವುದಾಗಿರಬೇಕು. ಮೂರನೆಯ ಹಂತದ ಸೈನಿಕರು ಯಾವುದೇ ದಿಕ್ಕಿನಿಂದಲೂ ಅನ್ಯ ಬೆಂಬಲ ಕೋಟೆಯೊಳಗಿನ ರಾಜನಿಗೆ ದೊರೆಯದಂತೆ ಮಾಡುತ್ತಿದ್ದಿತೆಂದು ಕಾಣುತ್ತದೆ. ಹೀಗೆ ಅರ್ಥೈಸಿದರೆ 'ಮೂವಳಸು' ಎಂಬ ಶಾಸನ ಪ್ರಯೋಗಕ್ಕೆ ಹೆಚ್ಚು ಅರ್ಥಪೂರ್ಣತೆ ಲಭಿಸುತ್ತದೆ. ಕುರುಗೋಡಿನ ಕೋಟೆಯನ್ನು ವರ್ಣಿಸುವ ಒಂದು ಶಾಸನ ಅದನ್ನು 'ಮುಗಿಲುದ್ದವಾಗಿ ಮೂವಳಸಿದ ಕೋಟೆಯಿಂ' ಎಂದು ಹೇಳುತ್ತದೆ.[೧] ಇಲ್ಲಿಯೂ ಮೂವಳಿಸಿದ ಕೋಟೆ ಎನ್ನುವುದು ಮೂರು ಹಂತದ ಕೋಟೆಯ ರಚನೆಯನ್ನು ಹೇಳುತ್ತದೆ.

ಬೇರೆ ಯುದ್ಧಗಳಿಗೂ ಕೋಟೆಗಾಳೆಗಗಳಿಗೂ ಅನೇಕ ವ್ಯತ್ಯಾಸಗಳಿವೆ. ಕೋಟೆಗಾಳೆಗಕ್ಕೆ ಅನೇಕ ವಿಶೇಷ ಸಾಧನ ಸಲಕರಣೆಗಳು ಅತ್ಯಗತ್ಯವಾಗಿ ಬೇಕು. ಹೀಗೆ ಸಕಲ ಪರಿಕರಗಳೊಂದಿಗೆ ಬಂದು ಮೂವಳಸಾಗಿ ಆಕ್ರಮಣ ಮಾಡುತ್ತಿದ್ದರು. ಮಾದಿಸೆಟ್ಟಿಯು ತನ್ನ ಸಮಸ್ತ ಸಾಮಗ್ರಿ ಸಹಿತ ಬಂದು ಕುಂದುಗೊಳದ ಕೋಟೆಯನ್ನು 'ಮೂವಳಸಾಗೆ ಸುತ್ತಿ ಮುತ್ತಿ ಮಹಾ ಲಗ್ಗೆ ಮಾಳ್ಪದುಂ' ಸಂಕನು ಭೀಕರವಾಗಿ ಸೆರಗು ಬೆರಗಿಲ್ಲದೆ ಹೋರಾಡಿದ ವಿಷಯವನ್ನು ಶಾಸನ ತಿಳಿಸುತ್ತದೆ.[೨] ಕೊಡಕಣೆಯ ಶಾಸನ ತೈಲಪನ ಕುಮಾರ ಕಾಮದೇವನ ಪ್ರಧಾನ ಇಮ್ಮಡಿ ರಾಹುತ್ತರಾಯ ಕಲ್ಲವೆಗ್ಗಡೆ 'ಕೊಡಕಣೆಯ ದುರ್ಗವಂ ಮೂಱುಸುತ್ತಾಗಿ ಮುತ್ತೆ' ಆ ಪುರವರಾಧೀಶ್ವರ ಕೇತಗಾವುಂಡನು ಭಯಂಕರವಾಗಿ ಹೋರಾಡಿ ಕಲ್ಲವೆಗ್ಗಡೆಯ ಎಲ್ಲಾ ಸೈನ್ಯವನ್ನು ಬರಿಗೆಯ್ದು ಅನಂತರ ಶಿವಲೋಕಪ್ರಾಪ್ತನಾದ ವಿಷಯವನ್ನು ತಿಳಿಸುತ್ತದೆ.[೩]

ಕೋಟೆಯನ್ನು ಆಕ್ರಮಣ ಮಾಡುವವರಿಗೂ ಅನೇಕ ಅಡಚಣೆಗಳಿರುತ್ತಿದ್ದವು. ಕೋಟೆ ದುರ್ಗಮವಾಗಿದ್ದಾಗ ಅದನ್ನು ಪ್ರವೇಶಿಸಿ, ಶತ್ರುಗಳನ್ನು ಸೋಲಿಸಿ ಕೋಟೆಯನ್ನು ಕೈವಶಮಾಡಿಕೊಳ್ಳುವುದು ಸುಲಭವಾಗಿರಲಿಲ್ಲ. ಕೋಟೆಯ ಮೇಲಿನಿಂದ ಸತತವಾಗಿ ಆಗುತ್ತಿದ್ದ ಆಘಾತಗಳನ್ನು ಎದುರಿಸುವುದು ಒಂದಾದರೆ ಕೋಟೆಯೊಳಗಿನ ರಾಜನ ಸಹಾಯಕ್ಕೆ ಹೊರಗಿನಿಂದ ಯಾವ ಕ್ಷಣದಲ್ಲಾದರೂ ಅನ್ಯ ಸೈನ್ಯ ಬಂದು ತಮ್ಮನ್ನು ಆಕ್ರಮಣ ಮಾಡಬಹುದಿತ್ತು.

ಕೋಟೆಯನ್ನು ಪ್ರವೇಶಿಸಲು ಸಾಧ್ಯವಾಗದಾಗ ಕೋಟೆಯನ್ನು ಸುಡುವ ಇಲ್ಲವೇ ಕೋಟೆಯ ಗೋಡೆಯ ಕಲ್ಲುಗಳನ್ನು ಕೀಳುವ ಪ್ರಯತ್ನಗಳು ನಡೆಯುತ್ತಿದ್ದವು.[೪] ಎರಡನೆಯ ವಿಧಾನಕ್ಕೆ ವಿದೇಶಿ ಪ್ರವಾಸಿಗರ ಮತ್ತು ಕನ್ನಡ ಕಾವ್ಯಗಳ ವರ್ಣನೆ ಪೋಷಕವಾಗಿದೆ. ಇಂಥ ಮಾರ್ಗಗಳ ಜೊತೆಯಲ್ಲಿ ನಾನಾ ಪರಿಕರಗಳನ್ನು ಉಪಯೋಗಿಸಿ ಕೋಟೆ ಗೋಡೆಯನ್ನು ಹತ್ತುವ ಪ್ರಯತ್ನಗಳು ನಡೆಯುತ್ತಿದ್ದುವು. ಮಾದಿಸೆಟ್ಟಿ ಕುಂದುಗೊಳದ ಕೋಟೆಯನ್ನು ಆಕ್ರಮಣ ಮಾಡಿದಾಗ ಸಂಕನೆಂಬುವನು 'ಗಿಳಿಯಂತೆ ತನೆಯನೇಱೆ'[೫] ಎದುರು ಬಂದ ವೀರರನ್ನು ಸೀಳುತ್ತಾನೆ. ಭಯಂಕರವಾಗಿ ಹೋರಾಡುತ್ತಾ ಕಣೆ ಕಕ್ಕಡೆಗಳು ಉಂಟು ಮಾಡಿದ ಗಾಯಗಳಿಂದ ಹೊರಸೂಸುವ ರಕ್ತದಿಂದ, ಅರಳಿ ಬಿದ್ದ ಬಂದುಗೆಯ (ಒಂದು ಬಗೆಯ ಕೆಂಪು ಹೂವು) ಹಾಗೆ ಕಲಿ ಸಂಕನು ಉರುಳಿ ಬಿದ್ದನೆಂದು ವರ್ಣಿಸಲಾಗಿದೆ.[೬] ಶಾಸನ ಕವಿಯ ಶ್ಲೇಷೆ ಮತ್ತು ಉಪಮಾನ ಅರ್ಥಪೂರ್ಣವಾಗಿದೆ.

---

೧. ಎಸ್‌ಐಐ IX(i) ಬಳ್ಳಾರಿ ೨೯೭ ಕ್ರಿ.ಶ. ೧೧೭೭.

೨. ಎಸ್‌ಐಐ XX ಹಾನಗಲ್ಲು ೧೨೬ ಕ್ರಿ.ಶ. ೧೧೮೬.

೩. (ರೈ) ಎಕ VIII ಸೊರಬ ೧೯ ಕ್ರಿ.ಶ. ೧೧೫೨.

೪. ಆರ್. ಶೇಷಶಾಸ್ತ್ರೀ : ಪೂರ್ವೋಕ್ತ, ಪು. ೧೯೦.

೫. 'ತನೆಯನೇಱೆ' ಎನ್ನುವುದು 'ತೆನೆಯನೇಱೆ' ಎಂದಿರಬೇಕು. ತೆನೆ= ಕೋಟೆಯ ಮೇಲ್ಭಾಗದ ಗಾಲಿಯಾಕಾರದ ರಚನೆ. ಇದನ್ನು ಅನಂತನಾಥ ಪುರಾಣಂ, ಕುಮಾರವ್ಯಾಸ ಭಾರತ ಮುಂತಾದ ಕೃತಿಗಳೂ ಹೇಳುತ್ತವೆ.

೬. ಎಸ್‌ಐಐ XX ಹಾನಗಲ್ಲು ೧೨೬ ಕ್ರಿ.ಶ. ೧೧೮೬.

ಕೋಟೆಯನ್ನು ಏರಿ ಶತ್ರುಗಳನ್ನು ಆಕ್ರಮಣ ಮಾಡಿ ಹೋರಾಡುವುದು ದೊಡ್ಡ ಸಾಹಸ ಕಾರ್ಯವಾಗಿದ್ದಿತು. ವೀರಬಲ್ಲಾಳನ ಬಯಕೆಯಂತೆ ಮಹಾಪ್ರಧಾನ ಮಲ್ಲೆಯ ದಣ್ಣಾಯಕ ಉದಿರೆಯನ್ನು ಮುತ್ತಲು ಹರಿಯಣನಿಗೆ ಆಜ್ಞೆ ನೀಡಿದಾಗ ಅವನು ಉದಿರೆ ಕೋಟೆಯನ್ನು ಮುತ್ತಿ, ಕೋಟೆಯನ್ನೇರಿ ಅಲ್ಲಿ ಹಲವರನ್ನು ಕೊಂದು ಅನಂತರ ಮಡಿಯುತ್ತಾನೆ.[೧]

ಜನ್ನನ ಅನಂತನಾಥ ಪುರಾಣದಲ್ಲಿ ವಸುಷೇಣನ ಸೈನ್ಯ ಚಂಡಶಾಸನನ ದುರ್ಗವನ್ನು ಮುತ್ತಿ·ಮೂವಳಸಾಗಿ ಬಳಸಿ ಬೀಡುಬಿಟ್ಟನಂತರ ಮಾರನೆಯ ದಿನ ಕೋಟೆಯ ಹೊರ ಆವರಣದ ಎಲ್ಲವನ್ನೂ ವಿವರವಾಗಿ ಪರೀಕ್ಷಿಸುತ್ತಿದ್ದ ವರ್ಣನೆ ಬರುತ್ತದೆ. ಪ್ರವೇಶಿಸುವ, ಹೊರಬರುವ, ನೀರಕಂಡಿಯ, ಕುದುರೆಗಂಡಿಯ ತೆರಪುಗಳನ್ನು ಬಳಸಿ ನೋಡುತ್ತಾ ಬರುತ್ತಿದ್ದ ವರ್ಣನೆಯೂ ಇದೆ. ಹೊರಗಿನಿಂದ ಮಾಡುವ ನಿರೀಕ್ಷಣೆ, ಒಳಗಿನವರು ಮಾಡಿಕೊಳ್ಳುತ್ತಿದ್ದ ಸಿದ್ಧತೆ ಈ ಎಲ್ಲ ಕೋಟೆಗಾಳಗದ ಅನೇಕ ವಿವರಗಳನ್ನು ಕವಿ ಕೊಟ್ಟಿದ್ದಾನೆ.[೨] ಆದರೆ ಅಲ್ಲಿ ಬರುವ ಕೆಲವು ಆಯುಧಗಳು, ಸಾಧನ ಸಾಮಗ್ರಿಗಳ ಸ್ವರೂಪವನ್ನು ಗ್ರಹಿಸುವುದು ಸಾಧ್ಯವಾದಂತಿಲ್ಲ. ಕನ್ನಡ ಕಾವ್ಯಗಳನ್ನು ಆಧರಿಸಿ ಬೆಟಗೇರಿ ಕೃಷ್ಣಶರ್ಮ[೩] ಮತ್ತು ಕೆ. ಶ್ರೀಕಂಠಯ್ಯ[೪] ಅವರು ಕೋಟೆಗಾಳಗದ ಅನೇಕ ವಿವರಗಳನ್ನು ಸಂಗ್ರಹಿಸಿ ಚರ್ಚಿಸಿದ್ದಾರೆ.

ಕೋಟೆಯ ಒಳಗಿದ್ದು ಕೋಟೆಯನ್ನು ಹೊರಗಿನ ಶತ್ರುಗಳಿಂದ ರಕ್ಷಿಸಿಕೊಳ್ಳುವುದು ಸುಲಭದ ಕೆಲಸವಾಗಿರಲಿಲ್ಲ. ಆಕ್ರಮಣ ಮಾಡಿದ ಶತ್ರುಗಳನ್ನು ಎದುರಿಸಲು ನಾನಾ ರೀತಿಯ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಕೋಟೆಯ ರಕ್ಷಣೆಗೆ ಸಂಬಂಧಿಸಿದ ಹಾಗೆ ಬಹುಶಃ ಯಾವುದೇ ಅನ್ಯಶಾಸನಗಳು ಕೊಡದ ವಿವರಗಳನ್ನು ಕಲ್ಕೇರಿಯ ಶಾಸನ ಒದಗಿಸುತ್ತದೆ.

> ಅಱ್ ಸಱೆ ತೋರಗಲು ಕವಣೆಗಲು ಕಣೆ ಭಂಡಿಯ ಗಾಲಿ ಕಲ್ಲೆ ಹೆ
> ಗ್ಗೊಟಿದುಱಿಯೆಣ್ಣೆ ಕಾಯ್ದ ಮಣಲಗ್ಗದ ಢೇಂಕಣೆ...ದುಂದುವಂ
> ತುಱುಗಿ ಹೊದಲ್ದು ತೋರ್ಪ ಮುಗಿಲಟ್ಟಳೆಯಿಂ ಗಿಡಗಂಗಳಿಂ ಭಯಂ
> ಕರಮೆನಿಸಿರ್ದ ಕುಂದಗೊಳಮಂ ಮುಗಿಲಂ ತುಡುಕುತ್ತಮಿರ್ಪುದಂ॥[೫]

ಕೋಟೆಯನ್ನು ಆಕ್ರಮಿಸಲು ಬರುವ ವೀರರನ್ನು ತಡೆಯಲು ಅಱ್ಸಱೆ (=ಬಂಡೆಗಳ ಮಳೆ), ತೋರಗಲು (=ದೊಡ್ಡ ಕಲ್ಲು), ಕವಗಣೆಗಲು(=ಕವಣೆಯ ಮೂಲಕ ಬೀಸುವ ಕಲ್ಲುಗಳು), ಕಣೆ (ಕಣೆ =ಬಾಣ), ಭಂಡಿಯ ಗಾಲಿ(□= ಬಂಡಿ ಚಕ್ರ), ಕಲ್ಲೆ= (?). ಹೆಗ್ಗೊಱದು (ಹೆಗ್ಗೊರಡು?= ಮರದ ದೊಡ್ಡ ತುದಿಯ ದಿಮ್ಮಿಗಳು), ಉರಿಯೆಣ್ಣೆ (=ಕಾಯಿಸಿದ ಎಣ್ಣೆ), ಕಾಯ್ದ ಮಣಲ್ (=ಕಾಯಿಸಿದ ಮರಳು), ಢೇಂಕಣೆ[೬] (=ಒಂದು ಆಯುಧ), ಮುಗಿಲಟ್ಟಳೆ = ಕೋಟೆಯ ಎತ್ತರದಲ್ಲಿರುವ ಬುರುಜು; ಇದು ಆಯುಧಗಳನ್ನಿಡಲು ಮತ್ತು ಕಾವಲುಗಾರರು ಇರಲು ಕಟ್ಟಿದ ಕೊಠಡಿ (ಸಂ. ಅಟ್ಟಾಲ), ಗಿಡಗಂ(=ಡೇಗೆ)ಕೋಟೆಯನ್ನು ಹತ್ತಿ ಬರುವ ಶತ್ರುಗಳ ಮೇಲೆ ಬಿಡಲು ಗಿಡಗಗಳನ್ನು ಸಾಕುತ್ತಿದ್ದಿರಬಹುದೆ? (ಆದರೆ

---

೧. (ರೈ) ಎಕ VII ಶಿಕಾರಿಪುರ ೨೪೪ ಕ್ರಿ.ಶ. ೧೨೦೩.

೨. ಅನಂತನಾಥಪುರಾಣಂ, ಪು. ೨೭೦-೨೭೨.

೩. ಕರ್ನಾಟಕ ಜನಜೀವನ ಗ್ರಂಥದಲ್ಲಿ 'ಕನ್ನಡಿಗರ ಕೋಟೆಗಾಳೆಗ' ಎಂಬ ಲೇಖನ, ಪು. ೩-೬೩.

೪. ಕೆ. ಶ್ರೀಕಂಠಯ್ಯ : ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಪು. ೧೫೮-೧೬೪.

೫. ಎಸ್‌ಐಐ XX ಹಾನಗಲ್ಲು ೧೨೬ ಕ್ರಿ.ಶ. ೧೧೮೬.

೬. ಇದು ಡೆಂಕಣೆ, ಡೆಂಕಣ ರೂಪದಲ್ಲಿಯೂ ದೊರೆಯುತ್ತದೆ. ಇದಕ್ಕೆ ಕನ್ನಡ ಕನ್ನಡ ನಿಘಂಟಿನಲ್ಲಿ ಕೋಟೆಗಾಳಗದಲ್ಲಿ ಕಲ್ಲು ಗುಂಡುಗಳನ್ನು ಎಸೆಯುವ ಯಂತ್ರ, ಸಬಳದಂತಹ ಆಯುಧ ವಿಶೇಷ, ಧ್ವಜಸ್ತಂಭ, ಕೋಟೆಯ ಮೇಲಿನ ಬುರುಜು ಎಂಬ ಅರ್ಥಗಳನ್ನು ಕೊಡಲಾಗಿದೆ. ಬೆಟಗೇರಿ ಕೃಷ್ಣಶರ್ಮರು ಧ್ವಜಸ್ತಂಭ ಎಂಬ ಅರ್ಥವನ್ನು ಒಪ್ಪದೆ ಅದು ಭವ್ಯವಾದ ಆಯುಧ ವಿಶೇಷವೆಂದು ಭಾವಿಸುತ್ತಾರೆ. ಕರ್ನಾಟಕದ ಜನಜೀವನ, ಪು. ೫೬. ಡೆಂಕಣಿಕೋಟೆ ಎಂಬ ಸ್ಥಳನಾಮವಿರುವುದು ಗಮನಿಸಬೇಕಾದ ಅಂಶವಾಗಿದೆ. (ತಮಿಳುನಾಡು-ಧರ್ಮಪುರಿ ಜಿಲ್ಲೆ).

ಇದನ್ನು ಬೆಂಬಲಿಸುವ ಅನ್ಯ ಆಧಾರಗಳು ಇದ್ದಂತಿಲ್ಲ. ಮುಸ್ಲಿಂ ದೊರೆಗಳು ಗಿಡಗಗಳನ್ನು ಪಕ್ಷಿ ಬೇಟೆಯಲ್ಲಿ ಬಳಸುತ್ತಿದ್ದುದು ಮಾತ್ರ ತಿಳಿದುಬರುತ್ತದೆ). ಇವೆಲ್ಲವುಗಳಿಂದ ಕುಂದಗೊಳದ ಕೋಟೆ ಭಯಂಕರವಾಗಿದ್ದಿತೆಂದು ವರ್ಣಿಸಲಾಗಿದೆ.

ಕೋಟೆಯ ಮೇಲಿನಿಂದ ಶತ್ರುಗಳ ಮೇಲೆ ಕಲ್ಲುಗಳನ್ನು, ಕಾಯಿಸಿದ ಎಣ್ಣೆ, ಮರಳು ಮುಂತಾದುವನ್ನು ಸುರಿಯುತ್ತಿದ್ದರೆಂದು ಸಮಕಾಲೀನ ಕೃತಿಗಳಾದ ಅನಂತನಾಥಪುರಾಣ, ಚಂದ್ರಪ್ರಭ ಪುರಾಣಗಳು ತಿಳಿಸುತ್ತವೆ.[೧]

ಕೋಟೆಯೊಳಗೇ ನಿಂತು ಹೋರಾಡುವ ಕ್ರಮ ಸಾಕೆನಿಸಿದಾಗ ಅಥವಾ ವೈರಿಬಲ ಕ್ಷೀಣಿಸಿದೆ ಎನಿಸಿದಾಗ, ಮಿತ್ರ ಸೈನ್ಯದ ಬೆಂಬಲ ದೊರೆತಾಗ ಬಹುಶಃ ಕೋಟೆಯ ಬಾಗಿಲು ತೆಗೆದು ಶತ್ರುಗಳ ಮೇಲೆ ಬೀಳುತ್ತಿದ್ದರೆಂದು ಕಾಣುತ್ತದೆ. ಕೆಲವು ಸಾರಿ ಮದ್ದಾನೆಗಳನ್ನು ನುಗ್ಗಿಸಿ ಕೋಟೆಯ ಬಾಗಿಲುಗಳನ್ನು ಭೇದಿಸುತ್ತಿದ್ದರು.[೨] ಆಗ ಕೋಟೆಯಿಂದ ಹೊರಬಂದು ಶತ್ರುವನ್ನು ಎದುರಿಸುವುದು ಅನಿವಾರ್ಯವಾಗುತ್ತಿತ್ತು.

ಕೊಡಕಣಿಯ ದುರ್ಗವನ್ನು ಕಲ್ಲವೆಗ್ಗಡೆ ಮೂರು ಸುತ್ತಾಗಿ ಬಳಸಿದಾಗ 'ಆ ಪುರವರಾಧೀಶ್ವರನಾದ ಕೇತಗಾವುಂಡ ಬಿರುದಂ ಬಿತ್ತರಿಸಲೆಂದು ಹರಿಗೆಯನ್ನು ದಂಡೆಗೇರ್‍ಸಿಕೊಂಡು ಕಿತ್ತಗಠಾರದಿಂ (=ಕಠಾರದಿಂ?)ವಂಕಮಂ ತೆಗೆಸಿ ನಿಃಸಂಕವ್ರಿತ್ತಿಯಿಂ ಪೊಱಿಮಟ್ಟು ಮುಂತಾದ ಮಾರ್ಬ್ಬಲದ ಉರವಣೆಯಂ ಕಂಡು ಆನೆಗಂಡ ಸಿಂಹದಂತೆ' ಶತ್ರುಗಳ ಮೇಲೆ ಬಿದ್ದ ವಿಷಯವನ್ನು ಶಾಸನ ತಿಳಿಸುತ್ತದೆ.[೩] ಈ ಶಾಸನವು ವಂಕಮಂ ತೆಗೆಸಿ (ಕೋಟೆಯ ದ್ವಾರವನ್ನು ತೆಗೆಸಿ) ಯುದ್ಧ ಮಾಡಿದ್ದನ್ನು ತಿಳಿಸುತ್ತದೆ. ಯೆಮ್ಮಿಗನೂರಿನ ಒಂದು ಶಾಸನದಲ್ಲಿ ಬಳಗವತ್ತಿಯ ಕೋಟೆಯಿಂದ ಹೊರಬಂದು ಮಲ್ಲೆಯನಾಯಕನು ಹೋರಾಡಿದ ವಿಷಯ ನಿರೂಪಿತವಾಗಿದೆ.[೪]

ಕೆಲವು ಸಾರಿ ಕೋಟೆಯನ್ನು ಪ್ರವೇಶಿಸಲಾಗದೆ ಅಥವಾ ಶತ್ರುವೂ ಕೋಟೆಯಿಂದ ಹೊರಬರದಿದ್ದಾಗ ಉಪಾಯದಿಂದ ಕೋಟೆಯೊಳಗಿನವರು ಹೊರಬರುವಂತೆ ಮಾಡಲಾಗುತ್ತಿದ್ದಿತು. ಮಂಡಳಿಕರಾದ ಬಮ್ಮರಸ ಮತ್ತು ಬೀರರಸರು ಹೊಯ್ಸಳ ಮಂಡಳಿಕನ ಗಿಣ್ಣಲಗುಂಡಿಯ ಕೋಟೆಯನ್ನು ಮುತ್ತಿದರೂ ಇವರ ಪರಾಕ್ರಮಕ್ಕೆ ಜಗ್ಗದೇ ಇದ್ದಾಗ ಹೊಯ್ಸಳ ಮಂಡಳಿಕನನ್ನು 'ಉಪಾಯದಿಂ ಹೊಱವಣ್ಡಿಸಿದ' ವಿಷಯ ಬರುತ್ತದೆ.[೫] ಶಾಸನದಲ್ಲಿ ಹೊರಹೊರಡಿಸಲು ಬಳಸಿದ ಉಪಾಯದ ವಿವರಗಳಿಲ್ಲ. ಆ ಸಂದರ್ಭದಲ್ಲಿ ಹೊಯ್ಸಳ ಮಂಡಳಿಕನು ಮಡಿಯಲು ಅವನ ಪರವಾಗಿ ಕೇತಮಲ್ಲಸೆಟ್ಟಿಯ ಮಗ ಮಸಣ ಹೋರಾಡಿ ಮಡಿಯುತ್ತಾನೆ.

---

೧. ಅನಂತನಾಥ ಪುರಾಣಂ, ೧೧-೮೩,೮೪.
ಚಂದ್ರಪ್ರಭ ಪುರಾಣಂ, ೫-೧೦೫,೧೦೬.

೨. ಎಂ.ಚಿದಾನಂದಮೂರ್ತಿ, ಪೂರ್ವೋಕ್ತ ಪು. ೨೯೦.

೩. (ರೈ) ಎಕ VIII ಸೊರಬ ೧೯ ಕ್ರಿ.ಶ. ೧೧೫೨.

೪. ಕಇ IV ಹಿರೇಕೆರೂರು ೧೯ ಕ್ರಿ.ಶ. ೧೨೧೮.

೫. ಕಇ IV ಹಿರೇಕೆರೂರು ೧೭ ಕ್ರಿ.ಶ. ೧೧೬೬. ಇದೇ ಯುದ್ಧದಲ್ಲಿ ಮಡಿದ ಕೇತಮಲ್ಲನ ವೀರಗಲ್ಲು ಸೊರಬ ತಾಲ್ಲೂಕಿನ ಹಿರೇಚಿವುಟಿಯಲ್ಲಿರುವುದನ್ನು ಆರ್. ಶೇಷಶಾಸ್ತ್ರಿಯವರು ಗುರುತಿಸಿದ್ದಾರೆ. ಅವರು ಶಾಸನವನ್ನು ಅರ್ಥೈಸುತ್ತ 'ಕೋಟೆಯಲ್ಲಿ ಹೊಯ್ಸಳ ಮಾಂಡಳಿಕನು ಇವರ ಪರಾಕ್ರಮಕ್ಕೆ (ಬಮ್ಮರಸ, ವೀರರಸ) ಜಗ್ಗದೇ ಹೋದಾಗ ಅವನನ್ನು ಉಪಾಯದಿಂದ ಹೊರಗೆ ಹಾಕಲು ಪ್ರಯತ್ನಿಸುತ್ತಾರೆ. ಆ ಪ್ರಯತ್ನ ಯಶಸ್ವಿಯಾಗುತ್ತದೆ. ಆ ಪ್ರಯತ್ನದಲ್ಲಿ ಕೇತಮಲ್ಲಸೆಟ್ಟಿ ಮತ್ತು ಅವನ ಮಗನಾದ ಮಸಣ ಇಬ್ಬರೂ ಅವರಿಗೆ ಸಹಾಯ ಮಾಡಿ ಸಾಯುತ್ತಾರೆ' ಎಂದಿದ್ದಾರೆ. (ಕರ್ನಾಟಕದ ವೀರಗಲ್ಲುಗಳು, ಪು. ೧೯೧) ಆದರೆ ವಾಸ್ತವವಾಗಿ ಈ ಶಾಸನದಲ್ಲಿ ಬರುವಂತೆ ಮಸಣನು ಹೊಯ್ಸಳ ಮಾಂಡಳಿಕನ ಪರವಾಗಿ ಹೋರಾಡುತ್ತಾ ಮಡಿಯುತ್ತಾನೆ. ಶಾಸನದಲ್ಲಿ ಬರುವಂತೆ 'ಅನ್ತು ತಂನೊಡನುಂಡ ಹೊಯ್ಸಣ ಮಣ್ಡಳಿಕಂಗಳಿವಾದಡಾತನಿಂ ಮುನ್ನೆ ನಡದು ತವಗೆ ಮಾಱಾನ್ತು...' ವೈರಿಗಳನ್ನು ಕೊಂದು ಮಡಿಯುತ್ತಾನೆ ಎಂಬುದರಲ್ಲಿ ಅವನು ಹೊಯ್ಸಳ ಮಾಂಡಳಿಕನ ಪರವಾಗಿ ಹೋರಾಡಿರುವುದು ಸ್ಪಷ್ಟವಿದೆ. ತಂದೆ ಮತ್ತು ಮಗನ ವೀರಗಲ್ಲುಗಳು ಬೇರೆ ಬೇರೆ ಸ್ಥಳಗಳಲ್ಲಿ ದೊರೆತಿರುವುದು ಸ್ವಲ್ಪ ವಿಲಕ್ಷಣವಾಗಿದೆ.

ಕೋಟೆಗಾಳಗವನ್ನು ವೀರಗಲ್ಲುಗಳ ಶಿಲ್ಪದಲ್ಲಿ ಶಿಲ್ಪಿಗಳು ಹಕ್ಕಿನೋಟದ ಮತ್ತು ಪಾರ್ಶ್ವ ನೋಟದ ತಂತ್ರದಲ್ಲಿ ಬಿಡಿಸಿರುವುದು ಕಂಡುಬರುತ್ತದೆ. ಈ ಎರಡು ರೀತಿಯ ತಂತ್ರದ ಶಿಲ್ಪಗಳ ವಿವರಗಳನ್ನು ಆರ್. ಶೇಷಶಾಸ್ತ್ರಿ ಅವರ ಗ್ರಂಥದಲ್ಲಿ ಕಾಣಬಹುದು.[೧] ಕರ್ನಾಟಕದಲ್ಲಿ ನಡೆದ ಕೋಟೆಗಾಳಿಗದಲ್ಲಿ ಹೋರಾಡಿದ ವೀರರನ್ನು ಕುರಿತ ಅನೇಕ ಶಾಸನಗಳು ದೊರೆಯುತ್ತವೆ.[೨]

ಕನ್ನಡನಾಡಿನ ಶಾಸನಗಳು, ಶಿಲ್ಪಗಳು ಮತ್ತು ಕನ್ನಡ ಕಾವ್ಯಗಳಲ್ಲಿ ಚಿತ್ರಣಗೊಂಡಿರುವ ಕೋಟೆಗಾಳಿಗದ ವಿವರಗಳನ್ನು, ವಿವಿಧ ಬಗೆಯ ಆಯುಧ ಸಾಧನ ಸಾಮಗ್ರಿಗಳನ್ನು, ತಂತ್ರಗಳನ್ನು ಗಮನಿಸಿದರೆ ಕನ್ನಡಿಗರು ಕೋಟೆಗಾಳೆಗದಲ್ಲಿ ತುಂಬ ಪರಿಣತರಾಗಿದ್ದರೆಂದು ತಿಳಿಯಬಹುದು.

**ನೌಕಾಯುದ್ಧ :**

'ಕರ್ನಾಟಕದ ಕೆಲವು ಅರಸರು ನೌಕಾಸೇನೆ ಕಟ್ಟಿದ್ದಕ್ಕೂ, ನೌಕಾಯಾತ್ರೆ ಮಾಡಿದ್ದಕ್ಕೂ ಅಲ್ಲಲ್ಲಿ ಕೆಲವು ಉದಾಹರಣೆಗಳು ದೊರೆಯುವುದಾದರೂ ಕನ್ನಡಿಗರು ನೌಕಾಯುದ್ಧದಲ್ಲಿ ಅಷ್ಟೇನೂ ಪರಿಣತರಾಗಿರಲಿಲ್ಲವೆಂದು ಹೇಳಬಹುದು' ಎಂದು ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.[೩] ಹೊಯ್ಸಳ, ಸೇವುಣ, ಚಾಳುಕ್ಯ ರಾಜವಂಶಗಳ ಶಾಸನಗಳಲ್ಲಿ ನೌಕಾಯುದ್ಧದ ಉಲ್ಲೇಖಗಳು ನಮ್ಮ ಅಧ್ಯಯನಾವಧಿಯಲ್ಲಿ ಇಲ್ಲವೆಂದೇ ಹೇಳಬಹುದು. ಕೆ.ವಿ. ರಮೇಶ್ ಅವರು, ಗೋವಾ ಪ್ರಾಂತದಲ್ಲಿ ಕನ್ನಡ ಭಾಷೆ ಮತ್ತು ಲಿಪಿಯಲ್ಲಿರುವ ಹನ್ನೊಂದನೆಯ ಶತಮಾನದ ಗೋವೆಯ ಕದಂಬ ಮನೆತನದ ಒಂದನೆಯ ಜಯಕೇಶಿಯ ಆಳ್ವಿಕೆಯ ಕಾಲದ ಶಾಸನದ ಮೇಲ್ಭಾಗದಲ್ಲಿ ನೌಕಾಯುದ್ಧದ ದೃಶ್ಯಗಳನ್ನು ಕೆತ್ತಿರುವುದನ್ನು ವಿದ್ವಾಂಸರ ಗಮನಕ್ಕೆ ತಂದಿದ್ದಾರೆ.[೪]

**ದೊಡ್ಡ ಯುದ್ಧಗಳು :**

ರಾಜರು ಮಹತ್ವಾಕಾಂಕ್ಷೆಯಿಂದ ಸಾಮ್ರಾಜ್ಯದ ವಿಸ್ತರಣೆಗಾಗಿ ದೊಡ್ಡ ಯುದ್ಧಗಳನ್ನು ಮಾಡಲು ಮುಂದಾಗುತ್ತಿದ್ದರು. ಅನೇಕ ಶಾಸನಗಳು ದೊಡ್ಡ ಯುದ್ಧಗಳನ್ನು 'ಪಿರಿಯ ಬವರ'[೫]ವೆಂದು ಕರೆದಿವೆ. ಹೊಯ್ಸಳರಿಗೂ ಸೇವುಣರಿಗೂ ಅನೇಕ ಯುದ್ಧಗಳು ನಡೆಯುತ್ತಿದ್ದವು. ಎರಡನೆಯ ಬಲ್ಲಾಳನಿಗೂ ಸೇವುಣರ ಭಿಲ್ಲಮನಿಗೂ ನಡೆದ ಸೊರಟೂರಿನ ಯುದ್ಧ ಇತಿಹಾಸದಲ್ಲಿ ತುಂಬ ಪ್ರಸಿದ್ಧವಾದುದು. ಈ ನಿರ್ಣಾಯಕ ಯುದ್ಧ ನಡೆದ ಕಾಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.[೬]

---

೧. ಆರ್. ಶೇಷಶಾಸ್ತ್ರೀ : ಪೂರ್ವೋಕ್ತ, ಚಿತ್ರಗಳ ಸಂಖ್ಯೆ ೧೯೫, ೧೯೬, ೧೯೭, ೧೯೮, ೧೯೯.

೨. (ಮೈ) ಎಕ I ಸೋಮವಾರಪೇಟೆ ೮೦ ಕ್ರಿ.ಶ. ೧೨೯೬; ಕಇ V ಸಿದ್ಧಾಪುರ ೫೬ ಕ್ರಿ.ಶ. ೧೧೮೪-೫; (ಮೈ) ಎಕ V ಕೃಷ್ಣರಾಜನಗರ ೪೩ ಕ್ರಿ.ಶ. ೧೨ ಶಮಾ; (ರೈ) ಎಕ VII ಹೊನ್ನಾಳಿ ೪೨ ಕ್ರಿ.ಶ. ೧೨೧೫.

೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೯೧.

೪. ಕರ್ನಾಟಕದ ಶಾಸನ ಸಮೀಕ್ಷೆ, ಪು. ೪೫-೪೬.

೫. (ರೈ) ಎಕ VIII ಸಾಗರ ೯೩ ಕ್ರಿ.ಶ. ೧೧೬೦; (ರೈ) ಎಕ VI ಚಿಕ್ಕಮಗಳೂರು ೫೫ ಕ್ರಿ.ಶ. ೧೧೯೫.

೬. ಫ್ಲೀಟ್ ಅವರು ಕ್ರಿ.ಶ. ೧೧೯೧ನೆಯ ಜೂನ್ ತಿಂಗಳನಂತರವೆಂದೂ, ಎ. ವೆಂಕಟಸುಬ್ಬಯ್ಯನವರು ಕ್ರಿ.ಶ. ೧೧೯೦ನೆಯ ಡಿಸೆಂಬರ್ ೯ಕ್ಕೆ ಮೊದಲು ಎಂದೂ ಭಾವಿಸುತ್ತಾರೆ. ಸಿ.ಬಿ. ರಾಮಚಂದ್ರಪ್ಪ : 'ಸೊರಟೂರಿನ ಕದನ (ಕ್ರಿ.ಶ. ೧೧೯೧-೧೧೯೨)' ಮಾ.ಕ. ೬:೨, ಪು. ೭-೧೩.

ಶ್ರೀನಿವಾಸ ರಿತ್ತಿಯವರು ಕ್ರಿ.ಶ. ೧೧೮೯ರ ಡಿಸೆಂಬರ್ ಅನಂತರ ಮತ್ತು ೧೧೯೦ರ ಡಿಸೆಂಬರ್ ಒಳಗೆ ನಡೆದಿರಬೇಕೆನ್ನುತ್ತಾರೆ. The Sevunas, ಪು. ೮೪.

ಎ.ವಿ. ನರಸಿಂಹಮೂರ್ತಿಯವರು ಕ್ರಿ.ಶ. ೧೧೯೧ ಎಂದಿದ್ದಾರೆ. ಕರ್ನಾಟಕದ ಸೇವುಣರ ಇತಿಹಾಸ, ಪು. ೪೩.

ಗದುಗಿಗೆ ಸುಮಾರು ಹನ್ನೆರಡು ಮೈಲಿಗಳ ದೂರದಲ್ಲಿರುವ ಸೊರಟೂರಿನಲ್ಲಿ ಆ ಯುದ್ಧ ನಡೆಯಿತು. ಭಿಲ್ಲಮನು ಜೈತುಗಿ ಎಂಬುವನನ್ನು ದಂಡನಾಯಕನನ್ನಾಗಿ ನೇಮಿಸಿಕೊಂಡು ಅಪಾರ ಸೈನ್ಯದೊಂದಿಗೆ ಬಲ್ಲಾಳನನ್ನು ಎದುರಿಸಿದನೆಂದು ತಿಳಿದುಬರುತ್ತದೆ. ಹರಿಹರ ಮತ್ತು ಆನೆಕೆರೆಯ ಶಾಸನಗಳು ಸೊರಟೂರಿನ ಯುದ್ಧವನ್ನು ವರ್ಣಿಸುತ್ತವೆ. ಎರಡು ಲಕ್ಷ ವೀರರು ಹನ್ನೆರಡು ಸಾವಿರ ಅಶ್ವದಳವಿದ್ದ ಸೇವುಣರ ಸೈನ್ಯವನ್ನು ಬಲ್ಲಾಳನು ಸೊರಟೂರಿನಿಂದ ಕೃಷ್ಣವೇಣೀ ನದಿಯ ದಡದವರೆಗೂ ಬೆನ್ನಟ್ಟಿದನೆಂದು ಹರಿಹರದ ಶಾಸನ ತಿಳಿಸುತ್ತದೆ.[೧] ಬಲ್ಲಾಳನ ವಿಜಯವನ್ನು ಆನೆಕೆರೆ ಶಾಸನವು '....ತಾಳ್ದಿದನೋ ವಿಕ್ರಾಂತಮಂ ಯಾದವಕುಳತಿಳಕಂ ವೀರಬಲ್ಲಾಳದೇವಂ ಇನ್ನುಂ ಬೀರದ ತೋರ ಬಿತ್ತನಗೆವೊಯ್ದನ್ತಿರ್ಪ್ಪುದಾರೂಢಸಂಪನ್ನಂ ದಕ್ಷಿಣ ಚಕ್ರಿ ಗೆಲ್ದ ಸೊಱಟೂರಿಂ ಬೆಳ್ವೊಲಂ ಮುಟ್ಟೆ ಸಂಚ್ಚನ್ನೋಧ್ಧಿ ಷ್ಟಕೃಷೀವಳಾವಳಿಹಳ ಪ್ರಾಗ್ಭಾಗನಿಷ್ಕಿಲಿತೋತ್ಪನ್ನಂ ಸೇವುಣ ಸೈನ್ಯ ಸದ್ಭಟಕರೋಟೀಕೋಟಿಸಂಘಟ್ಟನಂ'[೨] ಎಂದು ಹೇಳಿದೆ. ಅಸಂಖ್ಯಾತ ಸೇವುಣ ಸೈನಿಕರ ಹೆಣಗಳ ರಸಗೊಬ್ಬರದಿಂದ ಕೃಷಿಗೆ ಯೋಗ್ಯವಾದ ಫಲವತ್ತಾದ ಭೂಮಿಯನ್ನಾಗಿ ಪರಿವರ್ತಿಸಿದ ಬಲ್ಲಾಳನು, ತಾನು ಗೆದ್ದ ಪ್ರದೇಶಗಳಲ್ಲಿ ಹೊಯ್ಸಳರ ಅಧಿಕಾರ ಬೀಜವನ್ನು ಬಿತ್ತಿದನು ಎಂದು ನಿರೂಪಿಸುತ್ತದೆ. ಈ ನಿರ್ಣಾಯಕ ಯುದ್ಧದಲ್ಲಿ ಭಿಲ್ಲಮನು ಮಡಿಯದಿದ್ದರೂ ಅನಂತರ ಮಡಿದನೆಂದು ಡೆರೆಟ್ ಅವರು ಭಾವಿಸುತ್ತಾರೆ.[೩]

ಇಂಥ ದೊಡ್ಡ ಯುದ್ಧಗಳಲ್ಲಿ ಅಪಾರವಾದ ಸಾವು-ನೋವುಗಳು ಸಹಜವಾಗಿ ಉಂಟಾಗುತ್ತಿದ್ದವು. ಆನೆಕೆರೆ ಶಾಸನದ ಮಾತುಗಳಿಂದ ಸೊರಟೂರಿನ ಯುದ್ಧದಲ್ಲಿ ನಡೆದಿರಬಹುದಾದ ಅಪಾರ ಜೀವಹತಿಯ ಪ್ರಮಾಣವನ್ನು ಕಲ್ಪಿಸಿಕೊಳ್ಳಬಹುದು. ಅಲ್ಲಾವುದ್ದೀನನು ದಕ್ಷಿಣದ ದಂಡಯಾತ್ರೆಯಲ್ಲಿ ದೇವಗಿರಿಯನ್ನು ಆಕ್ರಮಿಸಿದಾಗ (ಕ್ರಿ.ಶ. ೧೨೯೬), ಹೊಯ್ಸಳರ ದೋರಸಮುದ್ರವನ್ನು (ಕ್ರಿ.ಶ. ೧೩೧೦) ಆಕ್ರಮಿಸಿದಾಗ ನಡೆದಿರಬಹುದಾದ ಯುದ್ಧದ ರೀತಿ, ಯುದ್ಧದ ಪ್ರಮಾಣ ನಮಗೆ ಖಚಿತವಾಗಿ ತಿಳಿದುಬರುವುದಿಲ್ಲ. ದೆಹಲಿಯ ಸೈನ್ಯದ ಜೊತೆ ನಡೆದ ಯುದ್ಧಗಳಲ್ಲಿ ಮಡಿದ ವೀರರಿಗೆ ನಿರ್ಮಿಸಿದ ವೀರಗಲ್ಲುಗಳಿಂದ, ನೀಡಿದ ದಾನಗಳಿಂದ, ಹಾಕಿಸಿದ ಶಾಸನಗಳಿಂದ ಕೆಲವು ವಿವರಗಳು ಮಾತ್ರ ದೊರೆಯುತ್ತವೆ.[೪]

ಯುದ್ಧಗಳಲ್ಲಿ ಗೆದ್ದವರು ಸೋತವರನ್ನು ತಮ್ಮ ಅಧೀನರನ್ನಾಗಿ ಮಾಡಿಕೊಂಡು ಕಪ್ಪಕಾಣಿಕೆಗಳನ್ನು ಸಂಗ್ರಹಿಸುತ್ತಿದ್ದರು.[೫] ಮೂರನೆಯ ಬಲ್ಲಾಳನಿಗೆ, ಸೇವುಣರಾಮಚಂದ್ರನಿಗೆ ಸೋಲುಂಟಾದಾಗ ಅಪಾರ ಮೊತ್ತದ ಬಂಗಾರ, ಬಹು ಸಂಖ್ಯೆಯ ಆನೆ ಕುದುರೆಗಳನ್ನು ದೆಹಲಿಯ ಸುಲ್ತಾನನಿಗಾಗಿ ತೆಗೆದುಕೊಂಡು ಹೋದುದು ತಿಳಿದುಬರುತ್ತದೆ.[೬]

ಯುದ್ಧಗಳಲ್ಲಿ ಸೈನ್ಯವನ್ನು ಯಾವ ರೀತಿಯಲ್ಲಿ ಸಂಯೋಜಿಸುತ್ತಿದ್ದರು, ಯಾವ ವ್ಯೂಹಗಳನ್ನು ರಚಿಸುತ್ತಿದ್ದರು ಎನ್ನುವುದರ ಬಗ್ಗೆ ಶಾಸನಗಳಿಂದ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಕೊಟೆಗಾಳೆಗದಲ್ಲಿ 'ಮೂವಳಸು' ಎಂಬ ಮಾತು ವಿಶೇಷವಾಗಿ

---

೧. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

೨. (ರೈ) ಎಕ V ಚನ್ನರಾಯಪಟ್ಟಣ ೧೭೯ ಕ್ರಿ.ಶ. ೧೧೯೦.

೩. J. D.M. Derrett : The Hoysalas ಪು. ೯೫.

೪. (ರೈ) ಎಕ V ಹಾಸನ ೫೧ ಕ್ರಿ.ಶ. ೧೩೧೦; ಮಾ.ಕ. ೧೬(೨,೩,೪) ಗಂಗಾವತಿ ಕ್ರಿ.ಶ. ೧೩೧೫; (ರೈ) ಎಕ V ಅರಸಿಕೆರೆ ೩೧ ಕ್ರಿ.ಸ. ೧೩೩೧; (ರೈ) ಎಕ VI ಕಡೂರು ೭೫ ಕ್ರಿ.ಶ. ೧೩೪೨.

೫. (ರೈ) ಎಕ VIII ಸಾಗರ ೧೫ ಕ್ರಿ.ಶ. ೧೨೧೮.

೬. S. Krishnaswamy : ಪೂರ್ವೋಕ್ತ ಪು. ೯೪.

V. Srinivasan : ಪೂರ್ವೋಕ್ತ ಲೇಖನ, ಪು. ೫.

ಕಂಡುಬರುತ್ತದೆ. ಬಿಟ್ಟೆಯ ಎಂಬುವವನ ಹೋರಾಟವೊಂದನ್ನು'... ದುತ್ತಿಲಾಚಕ್ರವ್ಯೂಹದ ಹೊಕ್ಕಿರ್ದುರ್ಕ್ಕಾಳಭಿಮನ್ಯುನಂತೆ ಬಿಟ್ಟೆಯನಿಜೆದಂ' ಎಂದು ವರ್ಣಿಸಲಾಗಿದೆ.[೧] ಅನೇಕ ಶಾಸನಗಳಲ್ಲಿ 'ಒಡ್ಡನೊಡ್ಡಿ ಕಾದುವಲ್ಲಿ'[೨] ಎಂಬ ಮಾತು ಬರುತ್ತದೆ. ಇದು ಶತ್ರುಸೈನ್ಯವನ್ನು ಎದುರಿಸಲು ಸೈನ್ಯವನ್ನು ರಚಿಸುತ್ತಿದ್ದ ಒಂದು ವಿಶಿಷ್ಟ ಕ್ರಮವನ್ನು ಸೂಚಿಸುತ್ತದೆ. ಕೆಲವು ಶಾಸನಗಳಲ್ಲಿ 'ನಡಗೋಂಟೆ' ಎಂಬ ಮಾತು ಬರುತ್ತದೆ. 'ಕರಿಘಟೆ ಕೂಡೆ ನೂಂಕಿದವು ವಾಜಿದಳಂ ನಡೆತಂದು ವೊಡ್ಡಣಂ ತರದಿಂದಮೊಡ್ಡಿ ನಡೆಗೋಂಟೆವೊಲೆತ್ತಿಬರುತ್ತಮಿರ್ದುವಾ'[೩]. ಇಲ್ಲಿ ಆನೆ, ಕುದುರೆ ದಳಗಳನ್ನು ಮತ್ತು ಪದಾತಿ ಸೈನ್ಯವನ್ನು ಬಳಸಿಕೊಂಡು ಸೈನ್ಯದ ರಕ್ಷಣೆಗಾಗಿ ರಚಿಸುತ್ತಿದ್ದ ಒಂದು ವಿಶಿಷ್ಟ ವ್ಯೂಹ ರಚನೆಯಾಗಿ 'ನಡೆಗೋಂಟೆ'[೪] ಬಳಕೆಯಾಗಿಯೆಂದು ತಿಳಿಯಬಹುದು.

ಪ್ರಾಚೀನ ಕನ್ನಡ ಶಾಸನಗಳು ಮತ್ತು ಕಾವ್ಯಗಳು ಕನ್ನಡಿಗರ ಸಮರ ತಂತ್ರಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ಒದಗಿಸುತ್ತವೆ. ಕನ್ನಡಿಗರು ಹೇಗೆ ವೀರವನ್ನು ಒಂದು ಮೌಲ್ಯವಾಗಿ ಅಳವಡಿಸಿಕೊಂಡಿದ್ದರೋ ಅದಕ್ಕೆ ಅಗತ್ಯವಾಗಿ ಅನೇಕ ಸಮರತಂತ್ರಗಳನ್ನೂ ರೂಪಿಸಿಕೊಂಡಿದ್ದರು.

**ಯುದ್ಧಾನಂತರ:**

ಯುದ್ಧಗಳಲ್ಲಿ ಯಾವ ಪಕ್ಷದವರೇ ಗೆಲ್ಲಲಿ, ಎರಡೂ ಪಕ್ಷಗಳಲ್ಲಿ ಅಪಾರವಾದ ಸಾವು-ನೋವುಗಳು ಆಗುತ್ತಿದ್ದವು. ಅನೇಕ ಶಾಸನಗಳಲ್ಲಿ ರಣರಂಗದ ಭೀಕರವಾದ ವರ್ಣನೆಗಳು ಬರುತ್ತವೆ. ಹೆಣಗಳ ರಾಶಿ, ಹೊರಸೂಸುವ ಕರುಳು, ರಕ್ತದ ಪ್ರವಾಹ ಮುಂತಾದ ವರ್ಣನೆಗಳು ಕಂಡುಬರುತ್ತವೆ. ಕೆಲವು ಶಾಸನಗಳಲ್ಲಿ 'ಜವನೊಕ್ಕಲಿಕ್ಕಿದಂತಾಗಿ'[೫] (ಯಮನು ಒಕ್ಕಲುಮಾಡಿದಂತೆ) ಎಂಬಂತಹ ಮಾತುಗಳು ಬರುತ್ತವೆ. ಶಾಸನ ಒಂದರಲ್ಲಿ 'ಕರುಳ ತೊಡರ್ಪ್ಪು ಕೊಳ್ಮಿದುಳ ಜಾಜೆಕೆ ಕಂಡದ ಕುಂಡ ತೂಳ್ದ ನೆತ್ತರ ಪೊನಲಟ್ಟೆಯಟ್ಟುಳಿ... ಗಳ ತಿಂತಿಣಿಯಾದುದೇಂ...' ಎಂದು ಯುದ್ಧರಂಗದ ವರ್ಣನೆ ಬಂದಿದೆ.[೬] ರಣರಂಗದಲ್ಲಿ ವಿವಿಧ ಸ್ಥಿತಿಗಳಲ್ಲಿ ಬಿದ್ದ ಹೆಣಗಳ ರಾಶಿಯಲ್ಲಿ ಕರುಳುಗಳು ಹೊರಸೂಸಿ ಕಾಲಿಗೆ ತೊಡರುತ್ತವೆ. ಮೆದುಳ ರಾಶಿ ಜಾರಿಸುತ್ತದೆ. ಮಾಂಸಖಂಡಗಳ ರಾಶಿ, ಹರಿವ ರಕ್ತದ ಪ್ರವಾಹ ಇವುಗಳಿಂದ ರಣರಂಗ ಭೀಕರವಾಗಿದೆ. ಕೆಲವು ವೀರಗಲ್ಲುಗಳು ರಣರಂಗದ ಭೀಕರ ಚಿತ್ರವನ್ನು ಶಿಲ್ಪದಲ್ಲಿಯೂ ಕಂಡರಿಸಿರುವುದುಂಟು. ನಿದರ್ಶನಕ್ಕೆ ಕೋಲಾರದ ಕೋಲಾರಮ್ಮ ದೇವಸ್ಥಾನದಲ್ಲಿರುವ ವೀರಗಲ್ಲಿನಲ್ಲಿ ರಣಹದ್ದಿನ ಚಿತ್ರವಿದೆ. ಸತ್ತ ವೀರನೊಬ್ಬನ ಕರುಳನ್ನು ಕಿತ್ತು ತಿನ್ನುತ್ತಿರುವ ನಾಯಿಯ ಚಿತ್ರಣವಿದೆ. ವೀರ ಮತ್ತು ಆನೆಯ ಮಧ್ಯೆ ರುಂಡವಿಲ್ಲದ ಒಬ್ಬ ವೀರ ನರ್ತಿಸುತ್ತಿರುವಂತಿದೆ. ಅನೇಕ ವೀರರು ಗಾಯಗಳಾಗಿ ಮಲಗಿದ್ದಾರೆ.[೭]

---

೧. (ರೈ) ಎಕ VIII ಸೊರಬ ೨೦ ಕ್ರಿ.ಶ. ೧೧೭೯.

೨. (ರೈ) ಎಕ VIII ಸೊರಬ ೨೫೫ ಕ್ರಿ.ಶ. ೧೧೫೮.

೩. (ರೈ) ಎಕ V ಅರಸೀಕೆರೆ ೮೨ ಕ್ರಿ.ಶ. ೧೨೩೩.

೪. 'ನಡಗೋಂಟೆ' ಪದ ಗಿರಿಜಾ ಕಲ್ಯಾಣ, ಕುಮಾರವ್ಯಾಸ ಭಾರತ ಇನ್ನೂ ಮುಂತಾದ ಕೃತಿಗಳಲ್ಲಿ ಬಳಕೆಯಾಗಿದೆ. ಬೆಟಗೇರಿ ಕೃಷ್ಣಶರ್ಮರು ನಡೆಗೋಟೆಯನ್ನು 'ದಾಳಿಯಿಕ್ಕುವುದಕ್ಕೆ ಹೊರಟ ಸೈನ್ಯದ ಸಂರಕ್ಷಣೆಗಾಗಿ ರಚಿಸಿದ ಕೃತ್ರಿಮ ದುರ್ಗಗಳಿವು... ಈ ನಡೆಗೋಂಟೆ, ಪಡಿಗೋಂಟೆಗಳನ್ನು ಗಾಲಿಗಳ ಸಹಾಯದಿಂದ ಸಾಗಿಸುತ್ತಿರಬಹುದು' ಎಂದಿದ್ದಾರೆ. ಪೂರ್ವೋಕ್ತ, ಪು. ೬೨.

೫. (ರೈ) ಎಕ VIII ತೀರ್ಥಹಳ್ಳಿ ೧೭೭ ಕ್ರಿ.ಶ. ೧೨೫೪.

೬. (ರೈ) ಎಕ VII ಹೊನ್ನಾಳಿ ೫೧ ಕ್ರಿ.ಶ. ೧೧೯೫.

೭. ಕೋಲಾರಮ್ಮನ ದೇವಾಲಯದ ಆವರಣದಲ್ಲಿರುವ ವೀರಗಲ್ಲು ಯುದ್ಧದ ಅನೇಕ ವಿವರಗಳನ್ನು ಒದಗಿಸುತ್ತದೆ.

ಹೀಗೆ ಭೀಕರವಾದ ಯುದ್ಧಗಳಲ್ಲಿ ಭಾಗವಹಿಸಿ ತಮ್ಮ ರಾಜರಿಗೆ ವಿಜಯವನ್ನು ದೊರಕಿಸಿಕೊಟ್ಟ, ಗೋವುಗಳ, ಸ್ತ್ರೀಯರ, ಊರಿನ ರಕ್ಷಣೆಗಾಗಿ ಹೋರಾಡಿದ ವೀರರನ್ನು ಸ್ಮರಣೆಯಲ್ಲಿಟ್ಟುಕೊಳ್ಳಲು ಮತ್ತು ವೀರಮರಣವನ್ನು ಪಡೆದವರಿಗೆ ಸದ್ಗತಿ ದೊರೆಯಲೆಂದು ವೀರಗಲ್ಲುಗಳನ್ನು ನೆಟ್ಟು ಶಾಸನ ಹಾಕಿಸುತ್ತಿದ್ದರು. ವೀರರು ಯುದ್ಧಗಳಲ್ಲೇ ಭಾಗವಹಿಸಬೇಕೆಂದಿರಲಿಲ್ಲ. ಊರಿಗೆ ನುಗ್ಗಿದ ದುಷ್ಟ ಮೃಗವನ್ನು ಎದುರಿಸಿದವರಾಗಿರಲಿ, ಕಳ್ಳರು ಆಕ್ರಮಣ ಮಾಡಿದಾಗ ಹೋರಾಡಿ ಮಡಿದವರಾಗಲಿ, ಬೇಟೆಯಲ್ಲಿ ಪರಾಕ್ರಮ ಮೆರೆದವರಾಗಿರಲಿ, ಇನ್ನೂ ಅನೇಕ ಸಂದರ್ಭಗಳಲ್ಲಿ ಪರಾಕ್ರಮವನ್ನು ಮೆರೆದವರಿಗೆ ವೀರಗಲ್ಲುಗಳನ್ನು ನಿರ್ಮಿಸಿದ ಪರಂಪರೆ ಇದೆ. ವೀರಗಲ್ಲಿನಲ್ಲಿ ಆ ವೀರನು ಪ್ರದರ್ಶಿಸಿದ ಪ್ರಮುಖ ವೀರ ಕಾರ್ಯವನ್ನು ಶಿಲ್ಪದಲ್ಲಿ ಸಾಮಾನ್ಯವಾಗಿ ಮೂಡಿಸಿರುವುದುಂಟು. ವೀರಗಲ್ಲುಗಳು ಕೆಲವು ಸಾರಿ ಶಾಸನ ಸಹಿತವಾಗಿಯೂ ಶಾಸನರಹಿತವಾಗಿಯೂ ಇರುತ್ತವೆ. ಆರ್. ಶೇಷಶಾಸ್ತ್ರಿಯವರು ವೀರಗಲ್ಲನ್ನು ನಿಲ್ಲಿಸುವಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡೂ ಇರುವುದನ್ನು ಗುರುತಿಸುತ್ತಾರೆ.[೧]

ವೀರಗಲ್ಲುಗಳ ನಿರ್ಮಾಣ ಕೇವಲ ವೀರರಿಗೆ ಮಾತ್ರ ಸೀಮಿತವಾಗಿರಲಿಲ್ಲ. ಬೇಟೆಗಳಲ್ಲಿ ತಮಗೆ ಅಗತ್ಯ ನೆರವು ನೀಡಿ ಹೋರಾಡಿ ಮಡಿದ ನಾಯಿಗಳಿಗೂ ವೀರಗಲ್ಲುಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಆತಕೂರು ಶಾಸನ ಆ ದೃಷ್ಟಿಯಿಂದ ಗಮನಾರ್ಹವಾದದ್ದು. ಇದಲ್ಲದೆ ನಾಯಿಗಳಿಗಾಗಿ ಹಾಕಿಸಿದ ಇನ್ನೂ ಕೆಲವು ವೀರಗಲ್ಲುಗಳು ಶಾಸನಸಹಿತವಾಗಿ ಮತ್ತು ಶಾಸನರಹಿತವಾಗಿ ದೊರೆಯುತ್ತವೆ.[೨]

ವೀರಗಲ್ಲನ್ನು ನಿರ್ಮಿಸಿದ ಸಂದರ್ಭಗಳನ್ನು ಗಮನಿಸಿದರೆ ಮಡಿದ ವೀರನ ಆತ್ಮೀಯ ಸ್ಮರಣೆ, ವೀರನ ಸದ್ಗತಿ ಒಂದು ನೆಲೆಯಾದರೆ ವೀರನ ಶೌರ್ಯವನ್ನು ಲೋಕಕ್ಕೆ ತಿಳಿಯಪಡಿಸುವುದು ಇನ್ನೊಂದು ಪ್ರಮುಖ ನೆಲೆಯಾಗಿದ್ದಿತು. ಅದು ಸಮಕಾಲೀನ ಸಮಾಜಕ್ಕೆ ಮತ್ತು ಮುಂದಿನ ಪೀಳಿಗೆಗಳಿಗೆ ಶೌರ್ಯ, ಉತ್ಸಾಹ ಮತ್ತು ಸ್ಫೂರ್ತಿಯನ್ನು ನೀಡಬಲ್ಲದ್ದಾಗಿದ್ದಿತು.

ವೀರಗಲ್ಲುಗಳಲ್ಲಿ 'ಪರೋಕ್ಷ ವಿನಯ' ಎಂಬ ಮಾತು ವಿಶೇಷವಾಗಿ ಬರುತ್ತದೆ. ವೀರನು ಮಡಿದಿದ್ದರೂ ಅವನ ವೀರ ವ್ಯಕ್ತಿತ್ವವನ್ನು ಗುರುತಿಸಿ ಅವನ ವೀರತನಕ್ಕೆ ಅವನ ಅನುಪಸ್ಥಿತಿಯಲ್ಲಿ ಸಲ್ಲಿಸುವ ಗೌರವ ಎನ್ನುವ ಅರ್ಥದಲ್ಲಿ ಇದನ್ನು ಗ್ರಹಿಸಬಹುದು. ಅತ್ತಿಕುಪ್ಪೆಯ ತುರುಗಳನ್ನು ಕಳ್ಳರು ಅಪಹರಿಸಿದಾಗ ಅಂಕರಸನು ಹೋರಾಡಿ ತುರುಗಳನ್ನು ಹಿಂತಿರುಗಿಸಿ ಮರಣ ಹೊಂದುತ್ತಾನೆ. ಆಗ ಅಂಕರಸನ ಮಗ ಮಹಾದೇವ 'ಪರೋಕ್ಷ ವಿನೆಯಕೆ ಕಲ್ಲನಿಱಿಸಿದ' ವಿಷಯ ಶಾಸನವೊಂದರಲ್ಲಿ ಬರುತ್ತದೆ.[೩]

ವೀರಗಲ್ಲನ್ನು ನಿಲ್ಲಿಸುವುದು ಆಚರಣೆಯ ಒಂದು ಭಾಗವಾಗಿದ್ದಿತು. ವೀರನು ಎಲ್ಲಿಯೇ ಹೋರಾಡಿ ಮಡಿಯಲಿ ಅವನ ಸ್ವಂತ ಊರಿನಲ್ಲಿ ವೀರಗಲ್ಲನ್ನು ನಿಲ್ಲಿಸುವುದು ಸಾಮಾನ್ಯ ಪದ್ಧತಿ. ದೋರಸಮುದ್ರದ ಬೀಡಿನಲ್ಲಿ ಇಟ್ಟಗೆಯ ಕೇರಿಯಲ್ಲಿ ಖಾಣದ ಬಸವೆಯದಣ್ಣಾಯಕರ ಮಗ ಅಮಿತ ದಣ್ಣಾಯಕ ಗುಜ್ಜರರೊಂದಿಗೆ ಹೋರಾಡಿ ಮಡಿಯುತ್ತಾನೆ. ಅವನ ವೀರಗಲ್ಲಿನ ಶಾಸನ ತರೀಕೆರೆ ತಾಲ್ಲೂಕು ಅಮೃತಾಪುರದಲ್ಲಿದೆ.[೪] ಸಾಮಾನ್ಯವಾಗಿ ವೀರರ ರಕ್ತಸಂಬಂಧಿಗಳು ಇಲ್ಲವೇ ಅಧಿಕಾರಿಗಳು, ಗ್ರಾಮದ ಜನರು ಅಥವಾ ಅಗ್ರಹಾರದ ಪ್ರಮುಖರು ಸೇರಿ ವೀರಗಲ್ಲುಗಳನ್ನು ನಿರ್ಮಿಸಿ ವೀರರಿಗೆ ಗೌರವ ಸಲ್ಲಿಸುತ್ತಿದ್ದರು. ನಿದರ್ಶನಕ್ಕೆ ಕೆಲವನ್ನು ಗಮನಿಸಬಹುದು. ಒಂದು ಕೋಟೆಗಾಳಗದಲ್ಲಿ ಹೋರಾಡಿ ಮಡಿದ ಕನಕನಾಯಕನ ಸ್ಮರಣೆಗಾಗಿ ಅವನ ಮಡದಿ ನಾಗವ್ವೆ ವೀರಗಲ್ಲನ್ನು ಮಾಡಿಸಿದ ವಿಷಯ ತಿಳಿದುಬರುತ್ತದೆ.[೫] ಒಂದು ಹೋರಾಟದಲ್ಲಿ ಮಿಂಡಗೌಡನ

---

೧. ಆರ್. ಶೇಷಶಾಸ್ತ್ರೀ : ಪೂರ್ವೋಕ್ತ, ಪು. ೭೧.

೨. ಅದೇ, ಪು. ೭೩.

೩. (ಮೈ) ಎಕ IV ಪಿರಿಯಾಪಟ್ಟಣ ೧೨ ಕ್ರಿ.ಶ. ೧೧೭೨.

೪. (ರೈ) ಎಕ VI ತರೀಕೆರೆ ೪೬ ಕ್ರಿ.ಶ. ೧೨೧೪.

೫. (ರೈ) ಎಕ IX ಬೆಂಗಳೂರು ೪೬ ಕ್ರಿ.ಶ. ೧೧೫೫.

ಮಗ ಮಿಂಡನು ಹೋರಾಡಿ ಮಡಿಯಲು ಆತನ ತಮ್ಮ ಮಸಣಿತಮ್ಮ ಕಲ್ಲನ್ನು ನಿಲ್ಲಿಸಿ ಪೂಜೆಗಾಗಿ ದಾನ ಕೊಡುತ್ತಾನೆ.[೧] ಕಸಿಗೆಯ ಒಂದು ಶಾಸನದಲ್ಲಿ ಬಟ್ಟವೆಗ್ಗಡೆಯ ಮಗ ಡಾಣವೆಗ್ಗಡೆ ಹೋರಾಡಿ ಮಡಿಯಲು ಆತನ ಹೆಗ್ಗಡತಿ ಮಾಚವ್ವೆ ಆತನ ತಮ್ಮ ಮಾದಿವೆಗ್ಗಡೆ ಆತನ ಮಗ ಬಟ್ಟವೆಗಡೆ ಸೇರಿ ವೀರಗಲ್ಲನ್ನು ನಿರ್ಮಿಸಿದ ವಿಷಯ ತಿಳಿದುಬರುತ್ತದೆ.[೨] ಸೀಗೆಬಾಗಿನ ಗೋಪಗೌಡ ಮತ್ತು ಆತನ ಮಕ್ಕಳು ಬೊಮ್ಮಯ್ಯ, ಹರಿಪಯ್ಯ, ಮಸಣಯ್ಯ, ರಾಮನಾಥ ದೇವನ ವಡಿಗೆಯಾಗಿ (?) ಹೋಗಿ ಮರಳಿ ಬರುತ್ತಿರುವಾಗ ಹೋರಾಟದಲ್ಲಿ ಭಾಗವಹಿಸಬೇಕಾಗಿ ಬಂದು ನಾಲ್ವರೂ ಹೋರಾಡಿ ಮಡಿಯುತ್ತಾರೆ. ಆಗ ಬಹುಶಃ ಕಿರಿಯ ಮಗ ಮಲ್ಲಗೌಡ ವೀರಗಲ್ಲನ್ನು ನಿರ್ಮಿಸಿದಂತಿದೆ.[೩]

ಅಧಿಕಾರಿಗಳು ತಮ್ಮ ಆಜ್ಞಾನುಸಾರವಾಗಿ ಹೋರಾಡಿ ಮಡಿದ ವೀರರಿಗಾಗಿ ವೀರಗಲ್ಲನ್ನು ಹಾಕಿಸುತ್ತಿದ್ದರು. ಮುರಾರಿ ಸೋಮೆಯನಾಯಕನ ಆಜ್ಞಾನುಸಾರವಾಗಿ ನಾಗ ಎಂಬುವವನು ಹೋರಾಡಿ ಮಡಿಯಲು 'ಅರಸಾಳುತನಕ್ಕೆ ಮೆಚ್ಚಿ' ವೀರಗಲ್ಲನ್ನು ಹಾಕಿಸುತ್ತಾನೆ.[೪] ತಿದಿವಳ್ಳಿಯ ಗಾವುಂಡುಗಳೊಡನೆ ಸಂಕಾಚಾರಿಯ ಮಗ ಕವಿಲೆಚಾರಿ ಕಿರಿಯ ಕಲುಕಣಿಯ ಯುದ್ಧಕ್ಕೆ ಹೋಗಿ ಹೋರಾಡಿ ಮಡಿಯಲು ಅವನಿಗೆ ಸಮಸ್ತ ಪ್ರಭು ಗಾವುಂಡುಗಳು ಸೇರಿ ಚಿದಿರವಳ್ಳಿಯಲ್ಲಿ ಗದ್ದೆಯನ್ನು ದಾನವಾಗಿ ನೀಡುತ್ತಾರೆ.[೫] ಕೆಂಕೆರೆ ಅಗ್ರಹಾರದ ಮಹಾಜನಗಳ ತುರುಗಳನ್ನು ಕಳ್ಳರು ಕದ್ದುಕೊಂಡು ಹೋಗುವಾಗ ಹುಯ್ಯಲನ್ನು ಕೇಳಿ ಜಕಗೌಡನ ತಮ್ಮ ಮರಿಯನು ಹೋರಾಡಿ ತುರುಗಳನ್ನು ಮರಳಿಸಲು ಮಹಾಜನಗಳು ಅವನಿಗೆ ಕುದುರೆ ತಂಬಟ ಸಹಿತವಾಗಿ 'ವೀರಕೊಡಗಿ'ಯಾಗಿ ಭೂಮಿದಾನವನ್ನು ನೀಡಿದ ವಿಷಯ ವೀರಗಲ್ಲಿನಲ್ಲಿ ನಿರೂಪಿತವಾಗಿದೆ.[೬]

ವೀರರ ಹೋರಾಟಕ್ಕೆ ಒಂದು ವಿಶಿಷ್ಟ ಮನೋಭಾವ, ಹಿನ್ನೆಲೆ ಇರುತ್ತಿತ್ತು. ಆ ವಿಶಿಷ್ಟ ಸ್ಥಿರ ಮೌಲ್ಯವನ್ನು ಅನೇಕ ವೀರಗಲ್ಲುಗಳು ಉಲ್ಲೇಖಿಸುತ್ತವೆ.

> ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ
> ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ॥[೭]
>
> ದ್ವಾವಿಮೌ ಪುರುಷೌ ಲೋಕೋ ಸೂರ್ಯಮಂಡಲಭೇದಿನೌ
> ಪರಿವ್ರಾಡ್ ಯೋಗಯುಕ್ತಶ್ಚ ರಣೇಭಿಮುಖೇ ಹತಃ॥[೮]

ಮೊದಲನೆಯ ಶ್ಲೋಕವು- ಗೆದ್ದರೆ ಐಶ್ವರ್ಯ, ಮರಣ ಹೊಂದಿದರೆ ಸುರಾಂಗನೆ, ಅಶಾಶ್ವತವಾದ ದೇಹದ ಮಮತೆ ತೊರೆದು ಯುದ್ಧದಲ್ಲಿ ಹೋರಾಡುವಂತೆ ಪ್ರೋತ್ಸಾಹಿಸುತ್ತದೆ. ಎರಡನೆಯ ಶ್ಲೋಕವು-ಲೋಕದಲ್ಲಿ ಸೂರ್ಯ ಮಂಡಲವನ್ನು ಭೇದಿಸಬಲ್ಲವರು ಇಬ್ಬರು ಪುರುಷರು ಮಾತ್ರ ಇದ್ದಾರೆ. ಒಬ್ಬ ಪರಿವ್ರಾಜಕನಾದ ಯೋಗಿ ಇನ್ನೊಬ್ಬ ರಣರಂಗದಲ್ಲಿ ಹೋರಾಡಿ ಹತನಾದ ಯೋಧ ಎನ್ನುತ್ತದೆ. ಇಂಥ ಉದಾತ್ತ ಭಾವನೆಗಳನ್ನು ಓದು ಬರಹ ಬಲ್ಲವರಿಗೆ ಮನದಟ್ಟು

---

೧. (ರೈ) ಎಕ VI ಚಿಕ್ಕಮಗಳೂರು ೧೧೮ ಕ್ರಿ.ಶ. ೧೨೮೪.

೨. (ರೈ) ಎಕ VI ಚಿಕ್ಕಮಗಳೂರು ೮೧ ಕ್ರಿ.ಶ. ೧೧೭೨.

೩. (ರೈ) ಎಕ XII ಚಿಕ್ಕನಾಯಕನಹಳ್ಳಿ ೩೩ ಕ್ರಿ.ಶ. ೧೨೯೫.

೪. (ರೈ) ಎಕ VII ಶಿಕಾರಿಪುರ ೨೪೫ ಕ್ರಿ.ಶ. ೧೧೮೫.

೫. ಎಂಎಆರ್ ೧೯೩೩ ತಿ.ನರಸೀಪುರ ೬೩ ಕ್ರಿ.ಶ. ೧೩ ಶಮಾ.

೬. (ರೈ) ಎಕ VI ಚಿಕ್ಕಮಗಳೂರು ೧೫೭ ಕ್ರಿ.ಶ. ೧೧೯೫.

೭. ಎಸ್ಐಐ IX(i) ಹರಪನಹಳ್ಳಿ ೩೮೬ ಕ್ರಿ.ಶ. ೧೨೯೨-೯೩.

೮. ಕಇ V ಹಾನಗಲ್ಲು ೯೭ ಕ್ರಿ.ಶ. ೧೧೪೧.

ಮಾಡಿಕೊಟ್ಟರೆ ಓದು ಬರಹ ಬಾರದ ಸಾಮಾನ್ಯ ಜನರಿಗೆ ವೀರರಿಂದ ದೊರೆಯಬಹುದಾದ ವೀರಸ್ವರ್ಗವನ್ನು, ದೈವತ್ವದ ಪರಿಕಲ್ಪನೆಯನ್ನು ಶಿಲ್ಪದ ಮೂಲಕ ಮಾಡಿರುವುದುಂಟು.

ಸಾಮಾನ್ಯವಾಗಿ ವೀರಗಲ್ಲಿನ ಕೆಳ ಹಂತದಲ್ಲಿ ವೀರಗಲ್ಲಿನ ಮುಖ್ಯ ವಿಷಯವಾದ ವೀರನ ಹೋರಾಟದ ಶಿಲ್ಪವಿರುತ್ತದೆ. ಇಲ್ಲಿ ವೀರನು ಶತ್ರುಗಳೊಂದಿಗೆ ಕಾದಾಡುತ್ತಿರುವಂತೆಯೂ ಅವನು ಸ್ತ್ರೀಯರನ್ನು ಅಥವಾ ತುರುಗಳನ್ನು ರಕ್ಷಿಸುತ್ತಿದ್ದರೆ ಆ ವಿವರಗಳೂ ಬಂದಿರುತ್ತವೆ. ಎರಡನೆಯ ಹಂತದಲ್ಲಿ ಹೋರಾಡಿ ಮಡಿದ ವೀರರನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವಂತೆ ಚಿತ್ರಣವಿರುತ್ತದೆ.[೧] ಮೇಲಿನ ಹಂತದಲ್ಲಿ ವೀರನು ಸ್ವರ್ಗದಲ್ಲಿ ಅಥವಾ ತನ್ನಿಷ್ಟದೈವದ ಸಾನ್ನಿಧ್ಯದಲ್ಲಿ ಇರುವಂತೆ ಸಾಮಾನ್ಯವಾಗಿ ಚಿತ್ರಸಲಾಗುತ್ತದೆ. ಶಿಲ್ಪಿಗಳು ಕಲಾತ್ಮಕತೆ ಮತ್ತು ಸೌಲಭ್ಯದ ದೃಷ್ಟಿಗಳಿಂದ ಅನೇಕ ಮಾರ್ಪಾಟುಗಳನ್ನು ಮಾಡಿಕೊಂಡಿರುವುದುಂಟು. ಸಾಮಾನ್ಯ ನಿಯಮದಂತೆ ವೀರನು ವೀರಗಲ್ಲಿನ ಬಲಭಾಗದಲ್ಲಿಯೂ ಅವನ ವಿರುದ್ಧ ಹೋರಾಡುವ ಶತ್ರುಗಳು ಎಡಭಾಗದಲ್ಲಿಯೂ ಇದ್ದು ಹೋರಾಡುತ್ತಿರುವಂತೆ ಚಿತ್ರಿಸಲಾಗಿರುತ್ತದೆ.[೨]

ಯುದ್ಧಗಳಲ್ಲಿ ಹೋರಾಡಿ ಮಡಿದ ಮತ್ತು ಗ್ರಾಮದ, ತುರುಗಳ, ಸ್ತ್ರೀಯರ ಪರವಾಗಿ ಹೋರಾಡಿ ಮಡಿದ ವೀರನ ಕುಟುಂಬಕ್ಕೆ ಒದಗಬಹುದಾದ ನಿರ್ಗತಿಕತನವನ್ನು ಗಮನಿಸಿದ್ದ ಅಧಿಕಾರಿಗಳು, ಗ್ರಾಮದ ಮುಖ್ಯಸ್ಥರು ಆ ವೀರನ ಕುಟುಂಬದವರು ನಿರ್ಗತಿಕರಾಗದ ಹಾಗೆ ಅವರ ಕುಟುಂಬ ನಿರ್ವಹಣೆಗೆ ಅಗತ್ಯವಾದ ಭೂಮಿಯನ್ನು ಕೊಟ್ಟು ಮೃತನ ಕುಟುಂಬಕ್ಕೆ ಬದುಕಿನ ದಾರಿಯನ್ನು ಕಲ್ಪಿಸುವುದು ತಮ್ಮ ನೈತಿಕ ಮತ್ತು ಸಾಮಾಜಿಕ ಜವಾಬ್ದಾರಿಯೆಂದು ತಿಳಿದಿದ್ದರು. ಆದ್ದರಿಂದ ಮೃತನ ಕುಟುಂಬಗಳಿಗೆ ಆರ್ಥಿಕ ನೆಲೆಯಾಗಿ ಭೂಮಿಯನ್ನು ಕೊಡುತ್ತಿದ್ದರು. ಅಂತಹ ಕೊಡುಗೆಗಳನ್ನು 'ನೆತ್ತರು ಕೊಡುಗೆ'ಗಳೆಂದು ಕರೆಯುತ್ತಿದ್ದರು. 'ಹಾಹರಿಯ (ಈಗಿನ ಹಾವೇರಿ) ಅಗ್ರಹಾರದ ಮಹಾಜನಗಳ ಆಳು ಚೌಂಡರನಾಯಕನ ಮಗ ಸೋವೆಯ ನಾಯಕನು ಮನ್ನೆಯ ಗಂಗಿದೇವರ ವಿರುದ್ಧ ಹೋರಾಡುವಾಗ ಮಡಿಯಲು 'ನೆತರುಗೆಯ್ಯಾಗಿ' ಭೂಮಿಯನ್ನು ಕೊಡುತ್ತಾರೆ'[೩]. ಕೆಲವು ಶಾಸನಗಳಲ್ಲಿ ಈ ಕೊಡುಗೆಗಳನ್ನು ನೆತ್ತರುಗೊಡೆ,[೪] ನೆತ್ರಪಟ್ಟು[೫] ಎಂದು ಕರೆದಿದೆ. ಬ್ರಹ್ಮಸಮುದ್ರ ಅಗ್ರಹಾರದ ಒಂದು ಶಾಸನದಲ್ಲಿ ಮಹಾಜನಗಳು 'ಈವೂರ ತಱಗಮಡಿಗಿ[೬](?) ಮಾಡಿದ ಗೌವುಡೆಗಳಿಗೆ ಪೂರ್ವ್ವಮರಿಯಾದೆಯ ವುಂಬಳಿಯ ಭೂಮಿಗೆ ಕಾರಣ್ಯಂಗೆಯಿದು ಕೊಟ್ಟ ಸಾಸನ' ಎಂದು ಕೆಲವು ವಿವರಗಳನ್ನು ನೀಡಲಾಗಿದೆ. ಶಾಸನದ ಕೊನೆಯ ಭಾಗದಲ್ಲಿ 'ಬ್ರಹ್ಮಸಮುದ್ರದ ಅಶೇಷಮಹಾಜನಂಗಳು ಕರೆಗೌಡಪೆರುಮಾಳೆ ಗೌಡಂಗಳಿಗೆ ಕಿಳ್ಪೋಗಿನ ನೆತ್ತರುಕೊಡಗಿಯ ಕೆಯಿ ಮತ್ತುರುವೆರಡಕ್ಕೆ ಕಂಬ ೨೩೦ ಕೆ ಸರ್ವ್ವಬಾಧೆ ಪರಿಹಾರವಾಗಿ'[೭] ಎಂದು ಬರುತ್ತದೆ.

---

೧. ಒಂದು ಶಾಸನದಲ್ಲಿ ಹಡವಳ ಮಾಚೆಯ ಹಾಲುಘಟ್ಟವನ್ನು ಆಕ್ರಮಿಸಿ ತುರುಗಳನ್ನು ಅಪಹರಿಸಲು ಬಮ್ಮಗಾವುಂಡ ಮತ್ತು ಮುದಗಾವುಂಡರು ಹೋರಾಡಿ ಮಡಿಯುತ್ತಾರೆ. ಆಗ 'ದೇವಕನ್ನಕಿಯರು ತವಗೆ ತವಗೆಂಬ ನೀತಿಯಿಂ' ಅವರನ್ನು ಕರೆದೊಯ್ದದ್ದಾಗಿ ಶಾಸನ ಹೇಳುತ್ತದೆ. (ರೈ) ಎಕ VIII ಸೊರಬ ೫೦೩ ಕ್ರಿ.ಶ. ೧೨೪೯.

೨. ಆರ್. ಶೇಷಶಾಸ್ತ್ರಿ ಅವರು ವೀರಗಲ್ಲಿನ ಶಿಲ್ಪಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ನೋಡಿ- ಪೂರ್ವೋಕ್ತ, ಪು. ೨೬೯-೩೧೬.

೩. ಎಸ್ಐಐ XVIII ಹಾವೇರಿ ೨೧೧ ಕ್ರಿ.ಶ. ೧೨೩೦.

೪. (ರೈ) ಎಕ VIII ಸೊರಬ ೯೩ ಕ್ರಿ.ಶ. ೧೨೮೮.

೫. (ರೈ) ಎಕ X ಗೌರಿಬಿದನೂರು ೪೧ ಕ್ರಿ.ಶ. ೧೧೮೦.

೬. (ರೈ) ಎಕ VI ಕಡೂರು ೫೪ ಕ್ರಿ.ಶ. ೧೨೬೧. ತಱಗನುಡುಗು= ಭೂಶುದ್ಧಿ ಮಾಡು (ಕ.ಕ. ನಿಘಂಟು. ಸಂ. ೩. ಪುಟ. ೩೪೯).

೭. ಈ ಶಾಸನದಲ್ಲಿ ವೀರನ ಹೋರಾಟದ ಪ್ರಸ್ತಾಪವಿಲ್ಲ. ಶಾಸನದಲ್ಲಿ ಉಂಬಳಿಯ ಉಲ್ಲೇಖವಿದೆ. ಡಾ. ಶೇಷಶಾಸ್ತ್ರಿಯವರು ಉಂಬಳಿ ಎಂಬ ಪದ ಸುಮಾರು ೧೫ನೆಯ ಶತಮಾನದನಂತರ ವೀರಗಲ್ಲುಗಳ ಪಾಠದಲ್ಲಿ ಪಾರಿಭಾಷಿಕ ಪದವಾಗಿ ಬಳಕೆಯಾಗುತ್ತದೆ ಎನ್ನುತ್ತಾರೆ. (ಕರ್ನಾಟಕದ ವೀರಗಲ್ಲುಗಳು ಪು. ೨೧೭.) ಈ ಶಾಸನದಲ್ಲಿ ಬರುವ ಕಿಳ್ಪೋಗಿನ ನೆತ್ತರು ಕೊಡಗಿಯ ಸ್ವರೂಪ ತಿಳಿಯುವುದಿಲ್ಲ. ಆದರೆ ಇದು ನೆತ್ತರ ಕೊಡುಗೆಯೇ ಆಗಿರುವುದರಿಂದ ಉಂಬಳಿ ಪದಪ್ರಯೋಗ ವೀರಗಲ್ಲಿನ ಪಾಠದಲ್ಲಿ ಕ್ರಿ.ಶ. ೧೨೯೧ ರಷ್ಟು ಹಿಂದೆ ಹೋಗುತ್ತದೆ.

ರಾಜರು, ಅಧಿಕಾರಿಗಳು, ಗ್ರಾಮಪ್ರಮುಖರು ಮುಂತಾದವರು ದಾನದತ್ತಿಗಳನ್ನು ಕೊಟ್ಟು ತಮ್ಮ ಜವಾಬ್ದಾರಿಯನ್ನು ಪೂರೈಸಿಕೊಂಡರೂ ಕುಟುಂಬಗಳಿಗೆ ಅದು ಬಹುದೊಡ್ಡ ನಷ್ಟವೇ ಆಗುತ್ತಿದ್ದಿತು. ಮಡಿದ ಮಗ, ಗಂಡ, ಸಹೋದರರ ಬಗ್ಗೆ ಎಷ್ಟೇ ಹೆಮ್ಮೆ ಎನಿಸಿದರೂ ಹತ್ತಿರದ ಬಂಧುಗಳಿಗೆ ತುಂಬ ನೋವನ್ನು, ಸಂಕಟವನ್ನು ಕೊಡುವಂತಹ ಭೀಕರ ಯಾತನೆಯಾಗಿತ್ತು. ಅನೇಕ ಸ್ತ್ರೀಯರು ತಮ್ಮ ಗಂಡಂದಿರ ಜೊತೆಯಲ್ಲಿ ಸಹಗಮನವನ್ನು ಮಾಡಿರುವುದುಂಟು.[೧] ಇಂಥ ಸ್ಥಿತಿಯಲ್ಲಿ ತಂದೆ ತಾಯಿಗಳನ್ನು ಕಳೆದುಕೊಂಡ ಮಕ್ಕಳು ಅನಾಥರಾಗುತ್ತಿದ್ದರು. ಇನ್ನು, ವಯಸ್ಸಿಗೆ ಬಂದ ಮಕ್ಕಳನ್ನು ಕಳೆದುಕೊಂಡ ವೃದ್ಧ ತಂದೆತಾಯಿಗಳ ನೋವಿನ ಭಾವನೆಗಳು ಹೇಗಿದ್ದವು ಎಂಬ ವಿಷಯಗಳನ್ನು ನಾವು ಕಲ್ಪಿಸಿಕೊಳ್ಳಬೇಕಾಗುವುದು.

ಯುದ್ಧಗಳಲ್ಲಿ ಗೆದ್ದ ರಾಜರು ಸೋತವರ ಆನೆ ಕುದುರೆ ಭಂಡಾರ, ಸ್ತ್ರೀಯರು, ಧವಳ ಛತ್ರಗಳನ್ನು ವಶಪಡಿಸಿ ಕೊಳ್ಳುತ್ತಿದ್ದರು.[೨] ಯುದ್ಧ ಬಂಧಿಗಳನ್ನು ಕಾರಾಗೃಹದಲ್ಲಿಡುತ್ತಿದ್ದರು ಇಲ್ಲವೇ ಕೆಲವರನ್ನು ತೊತ್ತುಗಳನ್ನಾಗಿ ಮಾಡಿಕೊಳ್ಳುತ್ತಿದ್ದರು.[೩] ದೆಹಲಿಯ ಸುಲ್ತಾನರ ಪರವಾದ ದಾಳಿಗಳಲ್ಲಿ ದೇವಾಲಯಗಳು ಸಾಕಷ್ಟು ನಾಶವಾದದ್ದಕ್ಕೆ ನಿದರ್ಶನಗಳಿವೆ.[೪]

ಯುದ್ಧಗಳಿಂದ ಜನಜೀವನ ಸಾಕಷ್ಟು ಅಸ್ತವ್ಯಸ್ತವಾಗುತ್ತಿದ್ದರೂ ವ್ಯವಸಾಯ, ದೇವಸ್ಥಾನ ನಿರ್ಮಾಣ, ಕೈಗಾರಿಕೆ, ಕೆರೆಕಟ್ಟೆಗಳ ನಿರ್ಮಾಣ, ಕಲೆ ಮತ್ತು ಸಾಹಿತ್ಯ ಕೃತಿಗಳ ಸೃಷ್ಟಿಗಳು ಸತತವಾಗಿ ನಡೆಯುತ್ತಿದ್ದುದನ್ನೂ ಕಾಣುತ್ತೇವೆ. ಅದೇ ರೀತಿಯಲ್ಲಿ ಊರಳಿವಿನಲ್ಲಿ, ಊರುಗಳನ್ನು ಸುಡುವುದು, ಬೆಳೆಗಳನ್ನು ನಾಶಪಡಿಸುವುದು, ಸ್ತ್ರೀಯರ ಮೇಲಿನ ಅತ್ಯಾಚಾರ, ಲೂಟಿ ಮುಂತಾದ ಅಕೃತ್ಯಗಳನ್ನೂ ಯುದ್ಧಗಳ ಪರಿಣಾಮಗಳಾಗಿ ಕಾಣುತ್ತೇವೆ. ದೊಡ್ಡ ಸಾಮ್ರಾಜ್ಯಗಳ ಗಡಿಪ್ರದೇಶಗಳಲ್ಲಿದ್ದವರಂತೂ ಸದಾ ಪ್ರಕ್ಷುಬ್ಧ ಸ್ಥಿತಿಯಲ್ಲಿಯೇ ಇರಬೇಕಾಗಿದ್ದಿತೆಂದು ಕಾಣುತ್ತದೆ. ಆದರೆ, ಯಾವುದೇ ರಾಜ ಯಾವುದೇ ಪ್ರಾಂತ್ಯವನ್ನು ವಶಪಡಿಸಿಕೊಂಡರೂ ಹಿಂದಿನ ರಾಜನು ಕೊಟ್ಟಿದ್ದ ದಾನ ದತ್ತಿಗಳನ್ನು ಸಾಮಾನ್ಯವಾಗಿ ಮುಂದುವರಿಸಿಕೊಂಡು ಬರುತ್ತಿದ್ದಂತೆ ಕಂಡುಬರುತ್ತದೆ. ಆ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ಸಂಖ್ಯೆ, ಕೆರೆಗಳ ಸಂಖ್ಯೆ, ಸಾಹಿತ್ಯ ನಿರ್ಮಿತಿ ಇವುಗಳನ್ನು ಗಮನಿಸಿದರೆ ಯುದ್ಧಗಳು ಸತತವಾಗಿ ನಡೆಯುತ್ತಿದ್ದರೂ ರಾಜ್ಯದ ಎಲ್ಲ ಭಾಗವೂ ಕ್ಷೋಭೆಗೆ ಅಷ್ಟಾಗಿ ಒಳಗಾಗುತ್ತಿರಲಿಲ್ಲವೆಂದು ಭಾವಿಸಬಹುದಾಗಿದೆ.

**ವೀರರ ಪ್ರಭೇದಗಳು:**

ಪ್ರಾಚೀನ ಕರ್ನಾಟಕದಲ್ಲಿ ವೀರತ್ವ ಅಥವಾ ಪರಾಕ್ರಮ ಒಂದು ಪ್ರಮುಖ ಮೌಲ್ಯವಾಗಿದ್ದುದು ಪ್ರಸಿದ್ಧವಾಗಿಯೇ ಇದೆ. ಆಗಿನ ಗ್ರಾಮಗಳಲ್ಲಿ ವೀರರು ಗ್ರಾಮರಕ್ಷಣೆಗೆ, ಸ್ತ್ರೀರಕ್ಷಣೆಗೆ, ತುರುರಕ್ಷಣೆಗೆ, ಸ್ವರಕ್ಷಣೆಗೆ ಹೋರಾಡಿರುವುದನ್ನು ನೋಡಿದರೆ ಊರಿನ ಪುರುಷರೆಲ್ಲರಿಗೂ ಶಸ್ತ್ರಾಸ್ತ್ರಗಳ ಶಿಕ್ಷಣ, ತರಬೇತಿಗಳು ಇದ್ದಿತೆಂದು ಭಾವಿಸಬೇಕಾಗುತ್ತದೆ. ಏಕೆಂದರೆ ವೀರತ್ವ ಆ ಕಾಲದ ಮೌಲ್ಯವೇ ಆಗಿದ್ದರೂ ಅದನ್ನು ಪ್ರಕಟಿಸಲು ಶಸ್ತ್ರಾಸ್ತ್ರಗಳ ಪ್ರಯೋಗದ ಜ್ಞಾನ, ಪೂರ್ವಸಿದ್ಧತೆ ಅತ್ಯಗತ್ಯ. ಎಲ್ಲರಿಗೂ ಈ ಶಿಕ್ಷಣ ಕೊಡಲು ಯಾವ ರೀತಿಯ ವಿದ್ಯಾಭ್ಯಾಸ ವ್ಯವಸ್ಥೆ ಇದ್ದಿತು ಎನ್ನುವುದು ಶಾಸನಗಳಿಂದ ತಿಳಿದು ಬರುವುದಿಲ್ಲ. ಆಪತ್ತು ಬಂದಾಗ ಬೇರೆ ಬೇರೆ ವೃತ್ತಿಯವರು ಹೋರಾಡಿರುವುದನ್ನು ನೋಡಿದರೆ ಅವರಿಗಿದ್ದ ಶಸ್ತ್ರಾಸ್ತ್ರಗಳ ವಿದ್ಯೆಯ ಅರಿವಿನ ಬಗ್ಗೆ ಕುತೂಹಲವಾಗುತ್ತದೆ. ಊರುಗಳಲ್ಲಿ ತಮ್ಮ ವೃತ್ತಿಗಳಲ್ಲಿ ತೊಡಗಿದ್ದ ಅಗಸರ ಸೋಮೆಯನಾಯ್ಕ,[೫] ನಾವಿದರ

---

೧. ಎಂಎಆರ್ ೧೯೨೯ ಚಾಮರಾಜನಗರ ೪೨ ಕ್ರಿ.ಶ. ೧೨ ಶಮಾ; (ರೈ) ಎಕ VII ಶಿಕಾರಿಪುರ ೩೮ ಕ್ರಿ.ಶ. ೧೧೩ ಇತ್ಯಾದಿ.

೨. (ರೈ) ಎಕ XII ಚಿಕ್ಕನಾಯಕನಹಳ್ಳಿ ೩೬ ಕ್ರಿ.ಶ. ೧೧೭೭.

೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೯೨.

೪. ಕಇಅಪ್ರ : ಕಲ್ಯಾಣ ೭ ಕ್ರಿ.ಶ. ೧೩೨೬.

೫. ಎಸ್‌ಐಐ XVIII ಹಾವೇರಿ ೩೯೧ ಕ್ರಿ.ಶ. ೧೩ ಶಮಾ.

ಮಾಚಗಾವುಂಡನ ಮಗ ಮಾದಿಯಣ್ಣನ ತಮ್ಮ ಚಿಕ್ಕಣ್ಣ,[೧] ಬಳೆಗಾರ ಕೇಸವಸೆಟ್ಟಿಯ ಬೀಚಿಯಸೆಟ್ಟಿ,[೨] ಬಡಗಿ ಗೋಮೋಜನ ಮಗ ರಾಮೋಜ,[೩] ತೆಲ್ಲಿಗ ಮಲ್ಲೆಯ ನಾಯಕನ ಮಗ,[೪] ದೀವರ ಬೀರ ಮಹಿಮೆಯನ ತಮ್ಮ ಚವುಡೆಯ,[೫] ಕುಱುಬರ ಕಾಟಿಗೌಡ,[೬] ಕಮ್ಮಾರ ಸಾಂತೋಜನ ಮಗ ತೈಲೋಜ,[೭] ಅಕ್ಕಸಾಲೆ ಜಕ್ಕೋದ್ದರಯ ಮಗ ಕಲ್ಲುವೊಚ...[೮] ಇವರೆಲ್ಲರೂ ಭಿನ್ನ ಭಿನ್ನ ಸಂದರ್ಭಗಳ ಅಗತ್ಯಕ್ಕಾಗಿ ಹೋರಾಡಿ ವೀರ ಮರಣವನ್ನು ಪಡೆದವರು.

ಪ್ರಾಚೀನ ಕರ್ನಾಟಕದ ರಾಜರಲ್ಲಿ ಗಜಸೈನ್ಯ, ಅಶ್ವದಳ ಮತ್ತು ಪದಾತಿ ಸೈನ್ಯ ಪ್ರಚಲಿತವಾಗಿದ್ದಿತು. ಸೈನ್ಯದಲ್ಲಿ ಶಸ್ತ್ರಾಸ್ತ್ರಗಳಲ್ಲಿ ಪರಿಣತರಾದ ಬಲಶಾಲಿಯಾದ ಪಡೆಯೇ ಇರುತ್ತಿತ್ತು. ಅಲ್ಲದೆ ವಿಶಿಷ್ಟವಾದ ವೀರರ ಪಡೆಯೂ ಇರುತ್ತಿತ್ತು. ರಾಜನ ನೆಚ್ಚಿನ ಭಂಟರಾಗಿ, ಪ್ರಾಮಾಣಿಕ, ನಿಷ್ಠ ಹೋರಾಟಗಾರರಾಗಿ, ಧೈರ್ಯಸಾಹಸಗಳ ಮೂರ್ತಿಗಳಾಗಿ, ಅಪೂರ್ವ ತ್ಯಾಗಶಾಲಿಗಳಾಗಿ ಕೆಲವು ವೀರರು ಮತ್ತು ವೀರರ ಸಂಘಟನೆಗಳು ಇರುತ್ತಿದ್ದವು. ಅಂತಹ ಕೆಲವು ವಿಶಿಷ್ಟ ವೀರರ ಪ್ರಭೇದಗಳನ್ನು ಗುರುತಿಸಬಹುದು.

**ಲೆಂಕರು:**

ಲೆಂಕರು ವಿಶಿಷ್ಟ ವೀರರಾಗಿದ್ದು ಶಸ್ತ್ರಾಸ್ತ್ರಗಳ ಶಿಕ್ಷಣವನ್ನು ಪಡೆದ ಯೋಧರಾಗಿದ್ದರು. ಎಂ. ಚಿದಾನಂದ ಮೂರ್ತಿಯವರು 'ಲೆಂಕ' ಪದವನ್ನು ದ್ರಾವಿಡ ಮೂಲದ ಪದವೆಂದೂ ಇದರ ಮೂಲ ಇಳ ಅಥವಾ ಎಳ (=ಎಳೆಯದು), ತಮಿಳಿನಲ್ಲಿ ಇಳಕು ಎಂದರೆ ಹೊಸದಾಗಿ ಚಿಗುರು ಎಂದರ್ಥ. ತೆಲುಗಿನಲ್ಲಿ ಲೇಕ (=ಸೇವಕ) ಇದರ ಮೂಲ ಲೇಂಕ ಅಥವಾ ಲೆಂಕವೆಂದೂ ತೆಲುಗಿನ ಮೂಲಕ ಲೆಂಕ ಕನ್ನಡಕ್ಕೆ ಬಂದಿರಬೇಕೆಂದು ಹೇಳಿ ಕನ್ನಡದಲ್ಲಿ 'ಲೆಂಕ' ಎಂದರೆ ಯುವಕ ಸೈನಿಕ ಎಂದು ಅರ್ಥವೆಂದು ಹೇಳಿದ್ದಾರೆ.[೯] ಲೆಂಕರು ಶಾಂತಿಸಮಯಗಳಲ್ಲಿ ತಮ್ಮ ತಮ್ಮ ಊರುಗಳಲ್ಲಿ ವಾಸಿಸುತ್ತಿದ್ದು, ಯುದ್ಧ ಸಮಯಗಳಲ್ಲಿ ಸೈನ್ಯದೊಂದಿಗೆ ಸೇರಿ ಹೋರಾಡುತ್ತಿದ್ದಂತಿದೆ. ಲೆಂಕರು ತಮ್ಮ ಆಳರಸರ ಬೆಂಬಲವಾಗಿ ನಿಂತು ಹೋರಾಟ ಮಾಡಿರುವುದು ಕಂಡುಬರುತ್ತದೆ. ಮಹಾ ಮಂಡಳೇಶ್ವರ ಕಾವದೇವರಸ ಕಲ್ಲಿಗೊಡ್ಡೆಗೆ ಎತ್ತಿ ಬಂದು ಕಾದುತ್ತಿರುವಾಗ ತ್ರಿಭುವನಮಲ್ಲ ಹರಿಯಮಸೆಟ್ಟಿಯು ಬೀಳಲು ಲೆಂಕ ಕಬ್ಬಿಲ ಚಟ್ಟ ಹಲವರನ್ನು ಕೊಂದು ಸುರಲೋಕಕ್ಕೆ ಹೋದದ್ದನ್ನು ಒಂದು ಶಾಸನ ತಿಳಿಸುತ್ತದೆ.[೧೦] ಕಲಘಟಗಿ ತಾಲ್ಲೂಕಿನ ಸಂಗಮೇಶ್ವರ ಗ್ರಾಮದಲ್ಲಿ ಗೌಡ ಮನೆತನದ ಚಟ್ಟಗಾವುಂಡನು ತಾನು 'ಜಯಕೇಶಿಯ ಲೆಂಕ' ಎಂದು ಕರೆದುಕೊಂಡಿದ್ದಾನೆ.[೧೧]

---

೧. (ರೈ) ಎಕ VI ಮೂಡಗೆರೆ ೪ ಕ್ರಿ.ಶ. ೧೧೯೪.
೨. (ರೈ) ಎಕ VI ಕಡೂರು ೧೩೦ ಕ್ರಿ.ಶ. ೧೨೦೫.
೩. ಎಸ್‌ಐಐ XVIII ರಾಣೆಬೆನ್ನೂರು ೨೦೫ ಕ್ರಿ.ಶ. ೧೨೨೬.
೪. (ರೈ) ಎಕ V ಅರಸಿಕೆರೆ ೧೩೭ ಕ್ರಿ.ಶ. ೧೨೧೧ (?)
೫. (ರೈ) ಎಕ VIII ಸೊರಬ ೪೯೨ ಕ್ರಿ.ಶ. ೧೨೩೯.
೬. ಎಸ್‌ಐಐ XVIII ರಾಣೆಬೆನ್ನೂರು ೨೧೫ ಕ್ರಿ.ಶ. ೧೨೩೪.
೭. (ರೈ) ಎಕ VIII ಸೊರಬ ೧೩೧ ಕ್ರಿ.ಶ. ೧೧೫೯.
೮. (ರೈ) ಎಕ IX ಚನ್ನಪಟ್ಟಣ ೬೪ ಕ್ರಿ.ಶ. ೧೧೭೬.
೯. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೨೬೮ ಅಡಿಟಿಪ್ಪಣಿ.
೧೦. ಕಇ IV ಹಿರೇಕೆರೂರು ೪ ಕ್ರಿ.ಶ. ೧೨೦೩.
೧೧. ಆರ್.ಎನ್. ಗುರವ : 'ಆಯುಧ ಜೀವಿಗಳ ಸಂಘಗಳು' ಕಭಾ ೧೦:೧, ಪು. ೨-೫.

ಇದೇ ರೀತಿ ಅನೇಕ ಲೆಂಕರು ಒಡೆಯರ ಪರವಾಗಿ ಹೋರಾಡಿ ಪ್ರಾಣ ತ್ಯಾಗವನ್ನು ಮಾಡಿರುವುದು ಕಂಡುಬರುತ್ತದೆ. 'ಕೊಳೆಯೂರ ಕೋಟೆಯ ಮುತ್ತಿ ಪಲಸೋಗೆಯ ಮಾದಿಗವುಂಡನ ಪಟ್ಟದ ಮಗ ಕೇತಬೋವನ ಸುಪುತ್ರ ಮಾರಸಿಂಗ ಕೋಟೆಯ ಕೊಂಡು ಆಳವರಸಿ ಬಿದಕಲ್ಲು ಶ್ರೀ ಲೆಂಕರ ಗಣ್ಡ' ಎಂಬ ಮಾತು ಬರುತ್ತದೆ.[೧] ಬಳ್ಳಿಗಾವೆಯ ಒಂದು ಶಾಸನದಲ್ಲಿಯೂ ಕೇತಮಲ್ಲನಾಯಕನನ್ನು ಲೆಂಕರ ಗಂಡ ಎಂದು ಕರೆಯಲಾಗಿದೆ.[೨]

ಲೆಂಕರು ಸ್ವಾಮಿನಿಷ್ಠ ಯೋಧರು. ಅವರ ನಿಷ್ಠೆ ಎಷ್ಟು ಉಗ್ರವಾದುದೆಂದರೆ ಯಾವುದೇ ಕಾರಣಕ್ಕೆ ತಮ್ಮ ಸ್ವಾಮಿಯ ಮರಣವಾದರೆ ತಮ್ಮ ಪ್ರಾಣವನ್ನು ತ್ಯಾಗ ಮಾಡುತ್ತಿದ್ದರು. ಇದಕ್ಕೆ ಶಾಸನಗಳಲ್ಲಿ ನಿದರ್ಶನಗಳು ದೊರೆಯುತ್ತವೆ. ಮಹಾ ಪ್ರಧಾನ ಬಲವೆಗ್ಗಡೆಯ ಮಗ ಬಿದ್ದರಸನು ಸುರಲೋಕ ಪ್ರಾಪ್ತನಾಗಲು 'ಲೆಂಕವಳಿಯಲ್ಲಿ ವೀರತನಂ ತನಗೆಸಿಸಿ ಬೀರ ಡೊಂಗಿನ ಬಸನಂ ಕೊಟ್ಟು ಪಡೆದಂ ಸಗ್ಗದ ಸುಖವನು' ಎಂದು ಒಂದು ವೀರಗಲ್ಲಿನಲ್ಲಿದೆ.[೩] ಕೆಲವು ಲೆಂಕರು ವಂಶ ಪಾರಂಪರ್ಯವಾಗಿ ರಾಜವಂಶಗಳಿಗೆ ನಿಷ್ಠರಾಗಿದ್ದು ರಾಜರು ಮರಣ ಹೊಂದಿದಾಗ ಪ್ರಾಣತ್ಯಾಗ ಮಾಡುತ್ತಿದ್ದರು. ಈ ಕ್ರಮವನ್ನು 'ಅನ್ವಯಾಗತ ಲೆಂಕವಾಳಿ' ಎಂದು ಶಾಸನ ಬಣ್ಣಿಸಿರುವುದುಂಟು.[೪] (ಈ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುವುದು).

ಲೆಂಕರು ತಮ್ಮದೇ ಆದ ಸಂಘಟನೆಯನ್ನು ಮಾಡಿಕೊಂಡಿದ್ದರು. ಮೋರಿಗೆರೆಯ ಶಾಸನದಲ್ಲಿ 'ಲೆಂಕ ಸಾಸಿರ್ವರ' ಉಲ್ಲೇಖ ಬರುತ್ತದೆ.[೫] ಹೀಗೆ ಲೆಂಕರು ಸಂಘಟಿಸಿಕೊಂಡಿದ್ದ ಸಂಘಕ್ಕೆ 'ಲೆಂಕ ಸಾಸಿರ್ವರು' ಎಂಬ ಹೆಸರಿದ್ದಂತೆ ತಿಳಿದು ಬರುತ್ತದೆ.[೬] ಲೆಂಕರ ಧೈರ್ಯ, ಸಾಹಸಗಳನ್ನು ಸಮಕಾಲೀನ ಸಾಹಿತ್ಯ ಕೃತಿಗಳೂ ಉಲ್ಲೇಖಿಸಿವೆ.[೭] ಲೆಂಕರ ಜೀವಿತಕ್ಕೆ ಗ್ರಾಮ ಸಮುದಾಯದಿಂದ ಹಣ ಸಂದಾಯವಾಗುತ್ತಿದ್ದಿತೆಂದು ಹೇಳಬಹುದು. ಹಾವೇರಿ ತಾಲ್ಲೂಕಿನ ಕಳ್ಳೀಹಾಳ ಶಾಸನದಲ್ಲಿ ಮಹಾಮಂಡಳೇಶ್ವರ ಕುಂದರಾಜನ ಮಹಾದೇವಿ ಜೋಗಬ್ಬರಸಿಯ ಧರ್ಮಕ್ಕೆ ಲೆಂಕ ಮುಂಜನು ತನ್ನ ತೆರಿಗೆಯನ್ನು ಬಿಟ್ಟನೆಂದು ಹೇಳಲಾಗಿದೆ.[೮] ಲೆಂಕ ಮುಂಜನಿಗೆ ಜೀವಿತಾಂಶದ ರೀತಿಯಲ್ಲಿ ತೆರಿಗೆ ಸಲ್ಲುತ್ತಿದ್ದಿರಬೇಕು. ಇದರಿಂದ ಲೆಂಕರಿಗೆ ಆಯಾ ಪ್ರದೇಶದ ಸಾಮಂತರು ಅಥವಾ ಅಧಿಕಾರಿಗಳು ಅವರ ಜೀವಿತಕ್ಕೆ ತೆರಿಗೆಯ ರೂಪದಲ್ಲಿ ಹಣ ಬರುವಂತೆ ಏರ್ಪಾಟು ಮಾಡಿದ್ದರೆಂದು ಭಾವಿಸಬಹುದು.

---

೧. (ಮೈ) V ಕೃಷ್ಣರಾಜನಗರ ೪೨ ಕ್ರಿ.ಶ. ೧೨ ಶಮಾ.

೨. (ರೈ) ಎಕ VII ಶಿಕಾರಿಪುರ ೧೪೪ ಕ್ರಿ.ಶ. ೧೧೮೧.

೩. ಎಂಎಆರ್ ೧೯೪೩ ನಗರ ೩೩ ಕ್ರಿ.ಶ. ೧೨-೧೩ ಶಮಾ.

೪. (ಮೈ) ಎಕ VI ಕೃಷ್ಣರಾಜಪೇಟೆ ೮೨ ಕ್ರಿ.ಶ. ೧೨೫೬.

೫. ಎಸ್ಐಐ IX(i) ಹಡಗಲಿ ೧೦೧ ಕ್ರಿ.ಶ. ೧೦೪೫.

೬. ಆರ್.ಎನ್. ಗುರವ : ಪೂರ್ವೋಕ್ತ ಲೇಖನ, ಪು. ೨-೫.

೭. ಬವ: ೪೧೧. 'ಓಡುವಾತ ಲೆಂಕನಲ್ಲ ಬೇಡುವಾತ ಭಕ್ತನಲ್ಲ'
೭೨೮. ಲೆಂಕ ಕಂಡಾ ಪ್ರಾಣದಾಸೆ ಮತ್ತೇಕಯ್ಯಾ
....ಎನ್ನ ಲೆಂಕತನಕ್ಕೆ ಹಾನಿ ಕೂಡಲ ಸಂಗಮದೇವ
ಶಿ.ಭ. ಮಹಿಮಾರಗಳೆ (ಒಹಿಲಯ್ಯನ ರಗಳೆ) ಪು. ೫೮-೫೯.
ಸ.ಪು.ವ. (ಮಧುವಯ್ಯನ ವಚನ) ೨೨ ಪು. ೩೬.

೮. ಆರ್.ಎನ್. ಗುರವ : ಪೂರ್ವೋಕ್ತ, ಪು. ೫.

**ತುಟಿಲಾಳ್:**

'ತುಟಿಲ್' ಎಂಬುದು ದ್ರಾವಿಡ ಶಬ್ದವಾಗಿದ್ದು ತಮಿಳು ಮಲೆಯಾಳಂ ಭಾಷೆಗಳಲ್ಲಿ (ತೊಟು=ಪೂಜಿಸು) ಎರಗುವಿಕೆ, ನಮಸ್ಕರಿಸು ಎಂಬ ಅರ್ಥವಿದೆ. ಕನ್ನಡದಲ್ಲಿಯೂ ನಮಸ್ಕರಿಸು, ಗೌರವಿಸು ಎಂಬ ಅರ್ಥಗಳಿವೆ. ತುಟಿಲಾಳು ಪದಕ್ಕೆ ಸೇವಕ ಎಂಬ ಅರ್ಥವಿದೆ. ಆದರೆ ತುಳಿಲಾಳು, ರಾಜನ ಸೇವಕ ಅಥವಾ ಇತರ ಸಾಮಾನ್ಯ ಸೇವಕರಂತೆ ಅಲ್ಲ. 'ವೀರಸಿದ್ಧಾಂತ'ವನ್ನು[೧] ಮೈಗೂಡಿಸಿಕೊಂಡ ವಿಶಿಷ್ಟ ವೀರನಿಗೆ ಈ ಪದ ಅನ್ವಯವಾಗುತ್ತದೆ. ಒಡೆಯರಿಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟ ಮಧ್ಯಕಾಲೀನ ಸಮಾಜಕ್ಕೆ ಸೇವೆ ಸಲ್ಲಿಸಿದ ಯೋಧರಿವರು.

ಕನ್ನಡದ ಶಾಂತಿಪುರಾಣ, ಗದಾಯುದ್ಧ, ಪಂಪಭಾರತ, ಧರ್ಮಾಮೃತ ಮುಂತಾದ ಕೃತಿಗಳಲ್ಲಿ ಕಂಡುಬರುವ ತುಳಿಲಾಳ್ಗಳ ಉಲ್ಲೇಖಗಳನ್ನು ಎಸ್. ಶೆಟ್ಟರ್ ಅವರು ವಿವರವಾಗಿ ಚರ್ಚಿಸಿ ತುಳಿಲಾಳ್ಗಳ ಗುಣ, ಶೌರ್ಯ ಮತ್ತು ವ್ಯಕ್ತಿತ್ವಗಳನ್ನು ನಿರೂಪಿಸಿದ್ದಾರೆ.[೨] ಜೋಳವಾಳಿ, ವೇಳೆವಾಳಿಗಳಿಂದ ಅನೇಕ ಅಂಶಗಳಲ್ಲಿ ಭಿನ್ನವಾಗಿ ನಿಲ್ಲುವ ಇವರು ವಿಶಿಷ್ಟ ವ್ಯಕ್ತಿತ್ವವನ್ನು ರೂಪಿಸಿಕೊಂಡವರು. ತುಳಿಲಾಳುಗಳ ಕೆಲವು ಮುಖ್ಯ ಗುಣಗಳನ್ನು ಹೀಗೆ ಸಂಗ್ರಹಿಸಬಹುದು :

ತುಳಿಲಾಳು ತಪ್ಪಿಯೂ ಕತ್ತಲಾದ ಮೇಲೆ ಹೋರಾಟ ಮಾಡುವುದಿಲ್ಲ, ಅವನು ತುರುಗೋಳಿನಲ್ಲಿ ಭಾಗವಹಿಸಲು ಹಿಂಜರಿಯುತ್ತಿದ್ದನು. ಅವರು ಹೊಯ್ದಡೆ ಬೆರ್ಚುವರಲ್ಲ, ಎದುರಾಳಿಗಳ ಕುದುರೆಗಳನ್ನು ಇರಿಯುತ್ತಿರಲಿಲ್ಲ. ಇವರು ಹಿಡಿದ ಥಾಲು ಕಿರುಗೆಜ್ಜೆಯಿಂದ ಕೂಡಿದ್ದು ಇವರು ವೀರಸಿದ್ಧಾಂತದ ಆರು ಗುಣಗಳನ್ನು ಅಳವಡಿಸಿಕೊಂಡಿದ್ದು ಅಪ್ರತಿಮರಾಗಿದ್ದರು.[೩] ಇವರು ದೋಷಕ್ಕಂಜಿ ನಡೆಯುವವರು. ಒಡೆಯ ರಣರಂಗದಲ್ಲಿ ಮಡಿದರೂ ರಣರಂಗದಿಂದ ಕದಲುತ್ತಿರಲಿಲ್ಲ. ಗೆಲುವಿಗಿಂತ ಹೋರಾಟ ಮುಖ್ಯವೆಂದು ಅವರು ಭಾವಿಸುತ್ತಿದ್ದರು. ಅ.ರಾ. ಮಿತ್ರ ಅವರು ಎಸ್. ಶೆಟ್ಟರ್ ಅವರ ಲೇಖನಕ್ಕೆ ಪೋಷಕವಾಗಿ ಇನ್ನೂ ಕೆಲವು ಕಾವ್ಯ ಪ್ರಯೋಗಗಳನ್ನು ನೀಡಿ ಬಂಧುವರ್ಮನ ಹರಿವಂಶಾಭ್ಯುದಯದಲ್ಲಿ ಬಂದಿರುವ 'ಸತ್ತೊಡೆ ತುಳಿಲಸಂದೊನಾಗಂ ಕಲಿಯಕ್ಕುಂ' ಎಂಬ ಪ್ರಯೋಗವನ್ನು ಗಮನಕ್ಕೆ ತಂದು ತಮಿಳು ಭಾಷೆಯಲ್ಲಿರುವ 'ತೊಟಿಲ್‌ಸಂದೊನ್'ಗೆ ಕರ್ತವ್ಯದಲ್ಲೂ ಪೌರುಷದಲ್ಲೂ ಕೀರ್ತಿಯನ್ನು ಪಸರಿಸಿದವನು ಎಂಬ ಅರ್ಥವನ್ನು ನೀಡಿ ತೊಟಿಲ್ ಸಂದೊನ್ > ತೊಟಿಲ್‌ಸಂದ > ತುಟಿಲ್‌ಸಂದ > ತುಳಿಲ್ಸಂದ ರೂಪವಾಗುವುದನ್ನು ತೋರಿಸಿಕೊಟ್ಟಿದ್ದಾರೆ ಮತ್ತು ಕನ್ನಡ ನಿಘಂಟಿನಲ್ಲಿರುವ 'ತುಳಿಲಾಳ್' ಪದದ ಕಡೆ ಗಮನ ಸೆಳೆದಿದ್ದಾರೆ.[೪]

ಕನ್ನಡ ಕಾವ್ಯಗಳಲ್ಲಿ ವ್ಯಾಪಕವಾಗಿ ಬಳಕೆಯಾದ 'ತುಳಿಲಾಳ್' ಕನ್ನಡ ಶಾಸನಗಳಲ್ಲಿ ಅಪರೂಪವೆಂದು ಹೇಳಿ ಶ್ರವಣಬೆಳಗೊಳದ ಒಂದೇ ಒಂದು ಶಾಸನದ ಉಲ್ಲೇಖವನ್ನು ಎಸ್. ಶೆಟ್ಟರ್ ಕೊಟ್ಟದ್ದನ್ನು ಗಮನಿಸಿ, ಬಿ.ಆರ್. ಹಿರೇಮಠ ಅವರು ಕ್ರಿ.ಶ. ೧೧೧೯ ರ ಒಂದು ಶಾಸನದಲ್ಲಿ ಬರುವ ತುಳಿಲ ಸಂದವರು ಮತ್ತು ಕ್ರಿ.ಶ. ೧೨೧೪ರ ಶಾಸನದಲ್ಲಿ ಬರುವ ತುಳಿಲಾಳು ಮಾಚನು ತುಳಿಲಾಳ್ತನ ಮೈಗೂಡಿಸಿಕೊಂಡಿದ್ದ ವಿಷಯದ ಕಡೆ ಗಮನವನ್ನು ಸೆಳೆದಿದ್ದಾರೆ.[೫]

---

೧. ಕಲಿತನ, ಅಭಿಮಾನ, ಧರ್ಮ, ತ್ಯಾಗ, ಸತ್ಯ, ಶೌಚ ಈ ಆರು ಗುಣಗಳನ್ನು ಅಳವಡಿಸಿಕೊಂಡವನು ತುಳಿಲಸಂದನಾಗುತ್ತಾನೆ. ವೀರ ಸಿದ್ಧಾಂತದ ವಿವರವಾದ ಚರ್ಚೆಗೆ ನೋಡಿ. ಎಂ.ಎಂ. ಕಲಬುರ್ಗಿ : 'ವೀರಸಿದ್ಧಾಂತ', ಸಾಧನೆ ೬-೧, ಪು. ೧೪೮-೧೫೫.

೨. ಎಸ್. ಶೆಟ್ಟರ್ : 'ತುಳಿಲಾಳ್ಗಳ್' ಸಾಧನೆ ೯:೩, ಪು. ೩೯-೬೮.

೩. ತುಳಿಲಾಳ್ಗಳು ಆರು ಗುಣಗಳನ್ನು ಅಳವಡಿಸಿಕೊಂಡಿದ್ದ ರೀತಿಗೆ ಎಸ್. ಶೆಟ್ಟರ್ ಅವರ ಪೂರ್ವೋಕ್ತ ಲೇಖನ, ಪು. ೫೫-೫೮ ನೋಡಿ.

೪. ಅ.ರಾ. ಮಿತ್ರ : 'ತುಳಿಲಾಳ್ಗಳ್ -ಒಂದು ಮಂಥನ' ಸಾಧನೆ ೧೦-೧, ಪು. ೧೫೫-೧೫೮.

೫. ಬಿ.ಆರ್. ಹಿರೇಮಠ : 'ಶಾಸನಗಳಲ್ಲಿ ತುಳಿಲಾಳು' ಸಾಧನೆ ೧೦-೧, ಪು. ೧೫೮-೧೬೦.

ನಮ್ಮ ಅಧ್ಯಯನಾವಧಿಯ ಶಾಸನಗಳಲ್ಲಿರುವ ತುಳಿಲಾಳ್ಗಳ ಕೆಲವು ಪ್ರಯೋಗಗಳನ್ನು ನೋಡಬಹುದು. ಚಾಳುಕ್ಯ ಭುವನೈಕಮಲ್ಲನಲ್ಲಿ ಪಸಾಯಿತನಾಗಿದ್ದ ಲಕ್ಷ್ಮರಸನನ್ನು ಕೀರ್ತಿಸುವಾಗ ಒಂದು ಶಾಸನದಲ್ಲಿರುವ

> ಅಣುಗಾಳ್ ಕಾರ್ಯದ ಶೌರ್ಯದಾಳ್ ವಿಜಯದಾಳ್ ಚಾಳುಕ್ಯರಾಜ್ಯಕ್ಕೆ ಕಾ
> ರಣಮಾದಾಳ್ ತುಳಿಲಾಳ್ತನಕ್ಕೆ ನೆಱಿದಾಳ್ ಕಟ್ಟಾಯದಾಳ್ ಮಿಕ್ಕುಮ
> ನ್ನಣೆಯಾಳ್ ಮಾಂತನದಾಳ್ ನೆಗೞ್ತೆವಡೆದಾಳ್ ವಿಕ್ರಾಂತದಾಳ್ ಮೇಳದಾಳ್
> ರಣದಾಳಾಳ್ದನ ನಚ್ಚುವಾವೆಡೆಯೊಳಂ ವಿಶ್ವಾಸದಾಳ್ ಲಕ್ಷ್ಮಣಂ॥[೧]

ಎಂದಿದೆ. ಇದೇ ಪದ್ಯ ಗಾವರವಾಡದ ಶಾಸನದಲ್ಲಿ ಮತ್ತೆ ಬಳಕೆಯಾಗಿರುವುದನ್ನು ಕಾಣಬಹುದು.[೨] ಕಲ್ಯಾಡಿಯ ಶಾಸನದಲ್ಲಿ 'ತುಳಿಲಸಂದ ಕುಲೋದ್ಭುಭವರಪ್ಪ ಕಾಳಗವುಡ ಬೊಪ್ಪಗವುಡು'... ಎಂಬ ಮಾತು ಬರುತ್ತದೆ. ಈ ವಂಶದ ಕಾಳಗವುಡ ಶಿವಾಲಯವನ್ನು ನಿರ್ಮಿಸಿ ಕೆಲವು ದಾನಗಳನ್ನು ಮಾಡಿರುವ ವಿಷಯ ತಿಳಿದುಬರುತ್ತದೆ.[೩]

**ಬಿಲ್ಲ ಮೂನೂರ್ವರು:**

ಇವರು ಬಿಲ್ವಿದ್ಯೆಯಲ್ಲಿ ಪರಿಣತರಾಗಿದ್ದುದರಿಂದ ಈ ಹೆಸರು ಬಂದಿದೆ. ಇವರು ರಚಿಸಿಕೊಂಡ ಸಂಘಕ್ಕೆ 'ಬಿಲ್ಲ ಮೂನೂರ್ವರು' ಎಂಬ ಹೆಸರು ಸಲ್ಲುತ್ತದೆ. ಇವರು ಗ್ರಾಮೀಣ ಪರಿಸರದಲ್ಲಿ ಅಥವಾ ಅರಣ್ಯಗಳಲ್ಲಿ ವಾಸಿಸುತ್ತಿದ್ದು ತಮ್ಮದೇ ಆದ ಸಂಘ ರಚನೆ ಮಾಡಿಕೊಂಡಿರುತ್ತಿದ್ದರು.[೪] ಅವರ ಬಗ್ಗೆ ದೊರೆಯುವ 'ಕಾಡಾನೆ ಮಲ್ಲರು, ಅಡವಿ ಕಂದರ್ಪರು, ಬಿಲ್ಲೇಶ್ವರ ಪದಾರವಿಂದರು'[೫] ಎಂಬಂತಹ ವಿಶೇಷಣಗಳು ಅವರು ಅರಣ್ಯವಾಸಿಗಳಾಗಿದ್ದರು ಎಂಬುದನ್ನು ಖಚಿತಪಡಿಸುತ್ತವೆ. ಅವರಲ್ಲಿ ಎಲ್ಲರೂ ಅರಣ್ಯವಾಸಿಗಳಾಗಿರಲಿಲ್ಲವೆಂದು ತೋರುತ್ತದೆ. ಧಾರವಾಡದ ಒಂದು ಶಾಸನದಲ್ಲಿ ಪೊಳಬಿಲ್ಲ ಮೂನೂರ್ವರು ಚಂದ್ರಭೂಷಣದೇವರಿಗೆ ಕಾಲು ಕರ್ಚಿ ಒಂದು ಶಿವಾಲಯಕ್ಕೆ ದಾನ ನೀಡಿದ ವಿಷಯ ಬರುತ್ತದೆ.[೬]

ಬಿಲ್ಲ ಮೂನೂರ್ವರು ಅಸಾಧಾರಣ ಪರಾಕ್ರಮಿಗಳಾಗಿದ್ದರು. ಅವರನ್ನು ವಿಂಧ್ಯಾಟವೀಭೂಷಣರೆಂದೂ, ಉದ್ದಂಡ ವಿರೋಧಿಗಳ ದರ್ಪವನ್ನು ಅಡಗಿಸಬಲ್ಲವರೆಂದೂ, ಯುದ್ಧರಂಗದಲ್ಲಿ ಇವರನ್ನು ಎದುರಿಸುವವರು ಯಾರು ಎಂದು ಶಾಸನವೊಂದು ಪ್ರಶ್ನಿಸುತ್ತದೆ.[೭] ಕೊಡಕಣಿಯ ಶಾಸನದ ಕೆಲವು ಭಾಗಗಳು ತ್ರುಟಿತವಾಗಿರುವುದಾದರೂ ಬಿಲ್ಲ ಮೂನೂರ್ವರ ಪ್ರಶಸ್ತಿ ಅದರಲ್ಲಿ ವಿವರವಾಗಿಯೇ ಬಂದಿದೆ. ಅವರು ಛಲದಲ್ಲಿ ದುರ್ಯೋಧನನನ್ನು ಹೋಲುವರೆಂದೂ, ಭೋಗದಲ್ಲಿ ದೇವೇಂದ್ರನನ್ನು ಹೋಲುವರೆಂದೂ, 'ಮಣಲ ಸರಬಿಯ ಹೊಸೆವರುಂ' (ಮರಳಿನಲ್ಲಿ ಹಗ್ಗವನ್ನು ಹೊಸೆಯಬಲ್ಲವರು), '೩೨ ಆಯುಧದಲು ಪರಿಣತರುಂ' ಎಂದು ಮುಂತಾಗಿ ಅವರನ್ನು ವರ್ಣಿಸಲಾಗಿದೆ. ಅವರು ಬಿಲ್ಲೇಶ್ವರ ದೇವರಿಗೆ ಕೆಲವು ದಾನಗಳನ್ನು ಬಿಟ್ಟುಕೊಟ್ಟ ವಿಷಯವನ್ನು ಆ ಶಾಸನ ತಿಳಿಸುತ್ತದೆ.[೮]

---

೧. (ರೈ) ಎಕ VII ಶಿಕಾರಿಪುರ ೧೩ ಕ್ರಿ.ಶ. ೧೦೬೮.

೨. ಆರ್. ನರಸಿಂಹಾಚಾರ್‌ಶಾಸನ ಪದ್ಯಮಂಜರಿ ಪದ್ಯ ೪೦ ಕ್ರಿ.ಶ. ೧೦೭೧, ಪು. ೨೫.

೩. (ರೈ) ಎಕ V ಅರಸಿಕೆರೆ ೧೫೭ ಕ್ರಿ.ಶ. ೧೧೫೪.

೪. ಆರ್.ಎನ್. ಗುರವ : ಪೂರ್ವೋಕ್ತ, ಕಭಾ ೧೦-೧, ಪು. ೨-೮.

೫. ಎಸ್‌ಐಐ XV ಮುಂಡರಗಿ ೨೧೧ ಕ್ರಿ.ಶ. ೧೧೯೬.

೬. ಕ‌ಇ V ಧಾರವಾಡ ೩೨ ಕ್ರಿ.ಶ. ೧೨೧೫.

೭. ಎಸ್‌ಐಐ XV ಗದಗು ೩೬ ಕ್ರಿ.ಶ. ೧೧೪೮.

೮. (ರೈ) ಎಕ VII ಮತ್ತು VIII (ಪೂರಕ ಸಂಪುಟ) ಸೊರಬ ೫೮೬ ಕ್ರಿ.ಶ. ೧೨೦೧.

ಅವರ ತಮ್ಮ ಸಂಘದ ವತಿಯಿಂದ ಬಿಲ್ಲೇಶ್ವರ ದೇವಾಲಯವನ್ನು ಕಟ್ಟಿಸಿದರು. ಮನಗೋಳಿಯ ಶಾಸನದಲ್ಲಿ 'ಮಾರುವ ಹೆಡಿಗೆಯ ಹಣ್ಣು ಹಂಪಲು ಬಾಡುಕಾಯ್ಗೆ ಹಿಡಿಬಾಡು ಹಣ್ಣಂ ಬಿಟ್ಟರ್'[೧] ಎಂಬ ಮಾತುಗಳು ಬರುವುದರಿಂದ ಅವರು ಹಣ್ಣು ತರಕಾರಿಗಳನ್ನು ಬೆಳೆದು ಮಾರುವ ವೃತ್ತಿಯನ್ನು ಸಾಧಾರಣವಾಗಿ ಅನುಸರಿಸುತ್ತಿದ್ದರು ಎನ್ನಬಹುದು. ಅಧಿಕಾರಿಗಳಿಂದ ಆಹ್ವಾನ ಬಂದಾಗ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರೆಂದು ಕಾಣುತ್ತದೆ. ದೇವರಿಗೆ ಬಿಟ್ಟು ಕೊಟ್ಟ ದಾನಗಳನ್ನು ಪ್ರತಿಪಾಲಿಸುವ ಹೊಣೆಯನ್ನು ಅವರಿಗೆ ಒಪ್ಪಿಸಲಾಗಿದೆ.[೨]

ಬಿಲ್ಲ ಮೂನೂರ್ವರ ಪ್ರಶಸ್ತಿಗಳನ್ನು ಗಮನಿಸಿದರೆ ಅವರು ಬತ್ತೀಸಾಯುಧಗಳಲ್ಲಿ ಪರಿಣತರಾಗಿದ್ದರು. ವೀರ ಜೀವನವನ್ನು ಮೈಗೂಡಿಸಿಕೊಂಡವರಾಗಿದ್ದರು. ಗ್ರಾಮಗಳ ಹೊರವಲಯದಲ್ಲಿ ಅಥವಾ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತ ಹಣ್ಣು ತರಕಾರಿಗಳನ್ನು ಬೆಳೆದು ಜೀವಿಸುತ್ತಿದ್ದರು. ಆಹ್ವಾನ ಬಂದಾಗ ತಮ್ಮ ಒಡೆಯರ ಪರವಾಗಿ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರು ಎಂದು ಮುಂತಾಗಿ ತಿಳಿದುಬರುತ್ತದೆ. ಅವರು ತಮ್ಮ ಸಂಘಟನೆಯ ಮೂಲಕ ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು.

**ಜೋಳವಾಟಿ:**

ಒಡೆಯನ ಅನ್ನದ ಋಣವನ್ನು ತೀರಿಸುವ ಸಲುವಾಗಿ ವೀರರು ತೋರಿಸುವ ನಿಷ್ಠೆಯ ಮನೋಭಾವವೇ ಈ ಜೋಳವಾಟಿ. ಜೋಳ ಈಗಲೂ ಕರ್ನಾಟಕದ ಕೆಲವು ಭಾಗದ ಪ್ರಮುಖ ಆಹಾರಗಳಲ್ಲಿ ಒಂದು. 'ಜೋಳವಾಟಿ' ಎಂದರೆ (ಜೋಳ + ಪಾಟಿ) ಅನ್ನದ ಕರ್ತವ್ಯ, ಅನ್ನದ ಋಣ ಎಂದರ್ಥ (ಈ ಕಾಲದ ಉಪ್ಪಿನ ಹಂಗು ಇದ್ದಂತೆ). ಜೋಳವಾಟಿ ಎಂಬುದು ಕರ್ತವ್ಯವನ್ನು ಪಾಲಿಸುವ ವ್ಯಕ್ತಿಯನ್ನೂ ಸೂಚಿಸುತ್ತದೆ.[೩] ಜೋಳವಾಟಿಗಳು ತಮಗೆ ಆಹಾರ ಕೊಟ್ಟು ಸಲಹಿದ ಒಡೆಯನ ಸಂಕಷ್ಟಗಳಿಗೆ ನೆರವಾಗಿ ಅವನ ಪರವಾಗಿ ಹೋರಾಡುವುದು ತಮ್ಮ ಪರಮ ಕರ್ತವ್ಯವೆಂದು ತಿಳಿದಿದ್ದರು.

ಪಂಪ, ರನ್ನ, ನಾಗಚಂದ್ರ, ಕರ್ಣಪಾರ್ಯ, ನೇಮಿಚಂದ್ರ ಮುಂತಾದ ಕವಿಗಳೆಲ್ಲರೂ ಜೋಳವಾಳಿಯನ್ನು ಉಲ್ಲೇಖಿಸುತ್ತಾರೆ. ಇದು ಕ್ರಿ.ಶ. ೧೦ನೆಯ ಶತಮಾನ ಮಧ್ಯಭಾಗದಿಂದ ಕ್ರಿ.ಶ. ೧೩ನೆಯ ಶತಮಾನದವರೆಗೆ ತುಂಬಾ ಜನಪ್ರಿಯ ವ್ಯವಸ್ಥೆಯಾಗಿ ಕಾರ್ಯ ನಿರ್ವಹಿಸಿದಂತೆ ತಿಳಿದುಬರುತ್ತದೆ.[೪]

ಜೋಳವಾಟಿಗಳು ಅನೇಕ ಸಂದರ್ಭಗಳಲ್ಲಿ ಒಡೆಯರ ಪರವಾಗಿ ಹೋರಾಡಿದ ವಿವರಗಳನ್ನು ಶಾಸನಗಳು ನೀಡುತ್ತವೆ. ತುಂಬಾ ತ್ರುಟಿತವಾದ ಒಂದು ಶಾಸನದಲ್ಲಿ ಲೋಕನೆಂಬುವನು ತನ್ನ ಅರಸನ ಪರವಾಗಿ ಹೋರಾಡಿದ ವಿಷಯವಿದೆ. 'ತಪ್ಪ ಜೋಳಬಾಳು ಅರಸರ್ಗ್ಗೆ ವೇಳವಾಡಿಯ ಬಂಟರ್ತ್ತನ್ನಯ ಶರಣಾಗತ ವಜ್ರ ಪಂಜರ ನಂಟರ ತೊತ್ತು ಲೋಕ ಎಂದು ಶಾಸನ ಹೇಳುತ್ತದೆ.'[೫] ಶ್ರೀಮತು ಕುಮಾರಂ ಮಹಾರಾಯ ಬಾಳೆಯವೆಗ್ಗಡೆ ಜಿಡುವಳಿಗೆ ನಾಡಿಂಗೆ ಆಕ್ರಮಣ ಮಾಡಿದಾಗ ತುರುಂಬ ನಾಯಕಿತಿಯ ಮಗ ಕವಡಯ ಬಿಮ್ಮ 'ಜೋಳವಾಳಿವಳ ವಾಳಿಯಂ' (ಜೋಳವಾಳಿಯ ಅಪಲಿಖಿತವಿರಬೇಕು) ಮೆರೆದು ಹೋರಾಡಿ ಮಡಿದ ವಿಷಯ ತಿಳಿಯುತ್ತದೆ.[೬] ರಾಯನಾಯಕ ಎಂಬುವವನು ಒಂದು ಯುದ್ಧದಲ್ಲಿ ಹೋರಾಡಿ

---

೧. ಎಇ V ಬಾಗೇವಾಡಿ ೨೦ ಕ್ರಿ.ಶ. ೧೧೬೦.

೨. ಆರ್.ಎನ್. ಗುರವ : ಪೂರ್ವೋಕ್ತ, ಕಭಾ. ೧೦-೧, ಪು. ೮.

೩. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ ಪು. ೩೦೩.

೪. S. Settar and M. M.Kalaburgi : 'The Hero Cult', Memorial stones ಪು. ೩೪.

೫. ಎಸ್ಐಐ IX(i) ಮಂಗಳೂರು ೩೯೮ ಕ್ರಿ.ಶ. ೧೨ ಶಮಾ.

೬. (ರೈ) ಎಕ VIII ಸಾಗರ ೧೨೫ ಕ್ರಿ.ಶ. ೧೨೧೬.

ಮಡಿಯಲು ರಾಯನಾಯಕನ 'ಜೋಳವಾಳಗೆಗೆ' ಮೆಚ್ಚಿ ಕುಮಾರ ಬೀರರಸರು ಕಾರುಣ್ಯಚಿತ್ತದಿಂದ ಭೂಮಿದಾನವನ್ನು ನೀಡಿದ ವಿಷಯ ತಿಳಿದುಬರುತ್ತದೆ.[೧] ಬಿಟ್ಟೆಯ್ಯ ಎನ್ನುವವನು ತನ್ನ ಒಡೆಯನ 'ಜೋಳದ ಪಾಳಿಯ ರಿಣಮಂ ಕಳೆಯಲು...' ಹೋರಾಡಿ ಶಿವಪುರವನ್ನು ಪ್ರವೇಶಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೨]

ಬಸವಣ್ಣನವರು ವಚನ ಒಂದರಲ್ಲಿ 'ಜೋಳವಾಳಿಯಾನಲ್ಲ ವೇಳೆವಾಳಿಯವ ನಾನಯ್ಯ'[೩] ಎಂದು ಜೋಳವಾಳಿ ಮತ್ತು ವೇಳೆವಾಳಿಗಳಿಗೆ ಇರುವ ಭಿನ್ನತೆಯನ್ನು ಹೇಳಿದ್ದಾರೆ. ತಾವು ಮನುಷ್ಯನ ಅನ್ನ ಋಣಕ್ಕಾಗಿ ಹೋರಾಡುವಂಥವರಲ್ಲ, ಒಡೆಯನಿಗೆ (ಪರಮಾತ್ಮನಿಗೆ) ಸಂಪೂರ್ಣವಾಗಿ ಸಮರ್ಪಿಸಿಕೊಂಡವರು ಎಂಬುದನ್ನು ಅದು ಸೂಚಿಸುವ ಹಾಗೆ ಕಾಣುತ್ತದೆ. ಎಂ. ಎಂ. ಕಲಬುರ್ಗಿಯವರು ಭಾವಿಸುವಂತೆ 'ಯುದ್ಧದಲ್ಲಿ ಭಾಗವಹಿಸುವುದಕ್ಕೋಸುಗ ಅರಸನಿಂದ ಜೋಳ ಪಡೆಯುತ್ತಿದ್ದವರೇ ಜೋಳವಾಳಿಗಳು. ಕಾಲಕ್ರಮದಲ್ಲಿ ಯಾವುದೇ ರೂಪದ ಸಂಬಳವನ್ನು 'ಜೋಳ' ಎಂದೂ ಯಾವುದೇ ರೂಪದ ಸಂಬಳ ಪಡೆಯುವವರನ್ನು 'ಜೋಳವಾಳಿ' ಎಂದೂ ಲಕ್ಷ್ಯಾರ್ಥದಲ್ಲಿ ಕರೆಯತೊಡಗಿದಂತಿದೆ.'[೪] ಒಡೆಯರ ಋಣಕ್ಕಾಗಿ ಪ್ರಾಣವನ್ನು ಪಣವಿಟ್ಟು ಹೋರಾಡುತ್ತಿದ್ದ ಇವರು ಋಣವನ್ನೇ ಒಂದು ನಿಷ್ಠೆಯಾಗಿ, ಮೌಲ್ಯವಾಗಿ ಪರಿಭಾವಿಸಿ ಬಾಳಿದ ಯೋಧರಾಗಿದ್ದಾರೆ.

**ಬಂಟಸಾಸಿರ್ವರು:**

ಬಂಟ ಎಂದರೆ ವೀರ, ಯೋಧ ಎಂದು ಅರ್ಥ. ಇದು ಸಂಸ್ಕೃತ ಭಟದಿಂದ ಬಂದ ಪದವಾಗಿದೆ. 'ಬಂಟ ಸಾಸಿರ್ವರು' ಬಂಟರು ಸಂಘಟಿಸಿಕೊಂಡ ಸಂಸ್ಥೆಯಾಗಿದ್ದಿತು. ಇವರ ಚಟುವಟಿಕೆಗಳ ಬಗ್ಗೆ ಕೆಲವು ವಿಷಯಗಳು ಮಾತ್ರ ತಿಳಿದುಬರುತ್ತವೆ. ಒಂದು ಶಾಸನದಲ್ಲಿ ಕೋನೆಕಾರ ಬೋಚಣನು ಬಂಟೇಶ್ವರ ದೇವರ ಪೂಜಾಕಾರ್ಯಗಳಿಗಾಗಿ ಭೂಮಿ ದಾನವನ್ನು ಮಾಡಿ ಅದನ್ನು ರಾಜ ಮತ್ತು ಸಾಸಿರ್ವರು (ಮಹಾಜನರು) ಪ್ರತಿಪಾಳಿಸಬೇಕೆಂದು ಹೇಳಿದನಂತರ 'ಈ ಧರ್ಮಕ್ಕೆ ಬಂಟ ಸಾಸಿರ್ವ್ವರ ಕೊತ್ತಳಿಯೊಡೆಯರಾಗಿ ಪೂಜೆ ಪುನಸ್ಕಾರಮಂ ಮಾಡುವರು' ಎಂದು ಬರುತ್ತದೆ.[೫] ತಿಳಿವಳ್ಳಿಯ ಇನ್ನೊಂದು ಶಾಸನದಲ್ಲಿ ಕೋಣವತ್ತಿಯ ಕೇತವೆಯ ಮಗ ಬೊಪ್ಪನು ಸೂರ್ಯಗ್ರಹಣ ಸಮಯದಲ್ಲಿ ಅಗ್ನಿಪ್ರವೇಶ ಮಾಡಿ ಸೂರ್ಯಲೋಕಕ್ಕೆ ಹೋದನೆಂದೂ ಆಗ ಬಂಟಸಾಸಿರ್ವರು ಬಂಟೇಶ್ವರ ದೇವಾಲಯದ ಮುಂದೆ ಶಿಲೆಯನ್ನು ಅವನ ಸ್ಮರಣಾರ್ಥವಾಗಿ ನಿಲ್ಲಿಸಿದ ವಿಷಯ ನಿರೂಪಿತವಾಗಿದೆ.[೬]

ಮನ್ನೆಯ ಮಹಾರಾಜನೆಂಬುವನು ತಿಳಿವಳ್ಳಿಯ ಮೇಲೆ ಆಕ್ರಮಣ ಮಾಡಿ ಗೋಗ್ರಹಣ ಮಾಡಿದಾಗ ಬಂಟ ಸಾಸಿರ್ವರ ಬಂಟನಾದ ಮೊಸಳೆಯ ಬಮ್ಮ ತುರುರಕ್ಷಣೆಗಾಗಿ ಹೋರಾಡಿ ಮಡಿಯಲು ಸಾಸಿರ್ವರು ಅವನ ಮಕ್ಕಳಿಗೆ ಗದ್ದೆಯನ್ನು ಉಂಬಳಿಯಾಗಿ ಕೊಟ್ಟಂತೆ ತಿಳಿದುಬರುತ್ತದೆ.[೭]

---

೧. (ರೈ) ಎಕ VIII ಸಾಗರ ೨೭ ಕ್ರಿ.ಶ. ೧೨೪೧.

೨. (ರೈ) ಎಕ VIII ಸಾಗರ ೧೧೬ ಕ್ರಿ.ಶ. ೧೧೭೦.

೩. ಬವ. ೬೯೮.

೪. ಎಂ.ಎಂ. ಕಲಬುರ್ಗಿ : ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು. ೭೨.

೫. ಕಇ II ಹಾನಗಲ್ಲು ೨೦ ಕ್ರಿ.ಶ. ೧೧೫೫.

೬. ಕಇ V ಹಾನಗಲ್ಲು ೯೭ ಕ್ರಿ.ಶ. ೧೧೪೧.

೭. ಕಇ V ಹಾನಗಲ್ಲು ೨೨ ಕ್ರಿ.ಶ. ೧೧೨೬.

ಬಂಟಸಾಸಿರ್ವರ ಸಂಘದ ಮೂಲಕ ನಿರ್ಮಿಸಿದ ದೇವಾಲಯ ಬಂಟೇಶ್ವರ. ಬಂಟಸಾಸಿರ್ವರ ಕಾರ್ಯಚಟುವಟಿಕೆಗಳ ಬಗ್ಗೆ ಆರ್.ಎನ್. ಗುರವ ಅವರು ಹೀಗೆ ಬರೆಯುತ್ತಾರೆ. 'ತಾವು ನೆಲಸಿದ್ದ ಗ್ರಾಮದ ಮೇಲೆ ಧಾಳಿ ನಡೆದಾಗ ಶತ್ರುಗಳನ್ನು ಎದುರಿಸಿ ಅವರನ್ನು ಹಿಮ್ಮೆಟ್ಟಿಸಿ ಗ್ರಾಮದಲ್ಲಿಯ ಸ್ತ್ರೀ, ಧನ ಮತ್ತು ಗೋವುಗಳನ್ನು ರಕ್ಷಿಸುವುದು ಇವರ ಕರ್ತವ್ಯವಾಗಿತ್ತು. ವೃತ್ತಿ ವ್ಯವಸಾಯ ಮತ್ತು ಸಂಘದ ವೆಚ್ಚಕ್ಕಾಗಿ ಗ್ರಾಮ ನಿವಾಸಿಗಳಿಂದ ಗ್ರಾಮಾಧಿಕಾರಿಗಳು ಬಂಟಸಾಸಿರ್ವರ ಸಲುವಾಗಿ ಎತ್ತಿದ ವಂತಿಗೆಗೆ 'ಬಂಟವಣ'ವೆಂದು ಹೆಸರು. ತಮ್ಮ ಸಂಘದಲ್ಲಿಯ ಎಲ್ಲ ಸದ್ಯಸರಿಗೆ ಅವರವರ ಯೋಗ್ಯತೆಯ ಪ್ರಕಾರ ಹಣವನ್ನು ಮುಟ್ಟಿಸುವುದು, ಧಾಳಿಯಲ್ಲಿ ಮೃತಪಟ್ಟವರ ವಾರಸುದಾರರಿಗೆ ಜೀವಿತಕ್ಕಾಗಿ ಸಂಘದ ಹಣದಿಂದ ಭೂಮಿಯನ್ನು ಕೊಂಡುಕೊಡುವುದು ಈ ಸಂಘದ ಕಾರ್ಯಗಳಲ್ಲಿ ಕೆಲವು ಆಗಿದ್ದವು.'[೧]

ಶಾಸನವೊಂದರಲ್ಲಿ 'ಶ್ರೀಮದವಲಿಯ ಬೆಸಮಗಂ ಕಮ್ಮಾಜಸಾಂತೋಜನ ಮಗ ತೈಲೋಜ ಹನ್ನಿಪಳ್ಳಿಗೆ ಬೆಸಂಬೋಗಲು' ಗಂಡವನಾಳ ಊರ ಮುಂದೆ ಜಯಸಿಂಗ ಮಂಜಕಡಿತಾವಡಿ ಮೇಲೆ ಬೀಳಲು ಅವನು ಹೋರಾಡಿ ಕೆಲವರನ್ನು ಕೊಂದು ಮಡಿಯುತ್ತಾನೆ. ಆಗ ಅವನಿಗೆ ಪ್ರಭುಗೌಡುಗಳು ಸೇರಿ ಭೂಮಿದಾನವನ್ನು ನೀಡುತ್ತಾರೆ.[೨] ಈ ಶಾಸನದಲ್ಲಿ ತೈಲೋಜನನ್ನು 'ಆವಲಿಯ ಬೆಸಮಗ' ಎಂದು ಕರೆಯಲಾಗಿದೆ (ಆವಲಿ ಗ್ರಾಮದ ಹೆಸರಾಗಿದೆ). ಹಿಂದಿನ ಶಾಸನಗಳಲ್ಲಿ ಬರುವ ಮನೆಮಗ, ಪೊರೆದ ಮಗ (ಒಡೆಯನೊಂದಿಗೆ ಹುಗಿಸಿಕೊಳ್ಳುತ್ತಿದ್ದವರು)[೩] ಇದ್ದಂತೆ ಇವನು ಊರಿನ ಮುಖ್ಯಸ್ಥರು ನೀಡುತ್ತಿದ್ದ ಆಜ್ಞೆಗಳನ್ನು ಪರಿಪಾಲಿಸುತ್ತಿದ್ದ ವೀರನಿರಬೇಕು.

ಈ ವೀರ ಪರಂಪರೆಯಲ್ಲಿ ಗರುಡರೂ ತುಂಬಾ ಪ್ರಮುಖರಾಗಿದ್ದರು. (ಅವರ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ). ವೀರತನ ವರ್ತಕ ಕ್ಷೇತ್ರದಲ್ಲಿಯೂ ಕಂಡು ಬರುತ್ತದೆ. ಅಲ್ಲಿ ಬರುವ ವೀರಬಣಂಜಿಗ ಮತ್ತು ವೀರವಣಿಗ ಸಮಾನಾರ್ಥಕ ಪದಗಳಾಗಿ ತೋರುತ್ತವೆ.[೪] ಬಹುಶಃ ಇವರು ಪ್ರಧಾನವಾಗಿ ವೀರವೃತ್ತಿಯನ್ನು ಮೈಗೂಡಿಸಿಕೊಂಡವರಾಗಿರಬೇಕು. ಅನೇಕ ವ್ಯಾಪಾರಿಗಳು ವ್ಯಾಪಾರಕ್ಕಾಗಿ ಊರಿಂದೂರಿಗೆ ಪ್ರಯಾಣಿಸುವಾಗ ತಮ್ಮ ಸರಕನ್ನು ಮತ್ತು ಹಣವನ್ನು ಕಳ್ಳರಿಂದ ರಕ್ಷಿಸಿಕೊಳ್ಳಲು ಯೋಧ ಪಡೆಯನ್ನು ಹೊಂದಿರುತ್ತಿದ್ದರು. ಕೆಲವು ವರ್ತಕರು ಅಂಥ ಪಡೆಯನ್ನು ಹೊಂದಿರದೆ ಸ್ವತಃ ಹೋರಾಡಿ ರಕ್ಷಿಸಿಕೊಳ್ಳುತ್ತಿದ್ದರು. ನಿದರ್ಶನಕ್ಕೆ ಒಂದು ಶಾಸನವನ್ನು ಗಮನಿಸಬಹುದು. ಕೋಣಂಗೇರಿಯ ಸೋವಿಸೆಟ್ಟಿಯು ವ್ಯಾಪಾರಕ್ಕಾಗಿ ಬಡಗಲಿಗೆ ಬರುತ್ತಿರುವಾಗ ಅಣ್ಣಿಗೆರೆಯ ಹೊಲದಲ್ಲಿ ಕಳ್ಳರು ದಾಳಿ ಮಾಡಲು ಅವರೊಡನೆ ಹೋರಾಡಿ ಮಡಿಯುತ್ತಾನೆ.[೫] ವರ್ತಕ ಜಗತ್ತಿನ ವಿರಳ ಸ್ತ್ರೀಯಾದ ವೆಣ್ಣಲಸೆಟ್ಟಿಕವ್ವೆಯು ಬಣಂಜು ಧರ್ಮವನ್ನು ಪಾಲಿಸಿದಳು. ಅವಳು 'ದುಷ್ಟರ ಸಾಮರ್ಥ್ಯವನ್ನು ನಿವಾರಿಸಿ, ಕಳ್ಳರ ಕೊಳ್ಳಿಬಾಧೆಯನ್ನು ಇಲ್ಲವಾಗಿಸಿ, ಮನ್ನೆಯರ ಅನ್ಯಾಯವನ್ನು ನಿವಾರಿಸಿ ಬಣಂಜುಧರ್ಮವನ್ನು ಪಾಲಿಸಿದಳು' ಎಂದು ಶಾಸನದಲ್ಲಿ[೬] ಬರುವುದರಿಂದ ಅವಳು ಅಪರೂಪವಾದ ವೀರಧರ್ಮವನ್ನು ಅಳವಡಿಸಿಕೊಂಡಿದ್ದಳೆಂದು ಭಾವಿಸಬಹುದು.

---

೧. ಆರ್.ಎನ್. ಗುರವ : ಪೂರ್ವೋಕ್ತ ೧೦:೧, ಪು. ೮.

೨. (ರೈ) ಎಕ VIII ಸೊರಬ ೧೩೧ ಕ್ರಿ.ಶ. ೧೧೫೯.

೩. ಎಂ.ಎಂ. ಕಲಬುರ್ಗಿ ಪೂರ್ವೋಕ್ತ, ಪು. ೫೪.

೪. ಬಿ.ಆರ್. ಹಿರೇಮಠ : ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೫.

೫. ಕಇ IV ಹಿರೇಕೆರೂರು ೧೮ ಕ್ರಿ.ಶ. ೧೧೭೬.

೬. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

ಧಾರ್ಮಿಕ ಕ್ಷೇತ್ರಕ್ಕೆ ಬಂದರೆ ವೀರಶೈವರಲ್ಲಿ ಇಷ್ಟಲಿಂಗ ಕಳೆದು ಹೋದರೆ ಶಿವಭಕ್ತನು ತನ್ನನ್ನು ಕೊಂದುಕೊಳ್ಳಬೇಕೆಂಬ ಪದ್ಧತಿ ಇದ್ದಿತು. ಕೊಂಡಗುಳಿ ಕೇಶಿರಾಜನು ಇಷ್ಟಲಿಂಗ ಕಳೆದು ಹೋದಾಗ ಪ್ರಾಣತ್ಯಾಗಕ್ಕೆ ಪ್ರಯತ್ನಿಸುವ ವಿಷಯ ಹರಿಹರ ಕವಿಯ ಕೇಶಿರಾಜದಣ್ಣಾಯಕರ ರಗಳೆಯಲ್ಲಿ ಬರುತ್ತದೆ. ಆಗ ಶರಣರು ತಡೆದು, ಲಿಂಗ ದೊರೆಯದಿದ್ದರೆ ಅವನ ಇಷ್ಟದಂತೆ ನಡೆದುಕೊಳ್ಳಬೇಕೆಂದು ಹೇಳುವರು; ಲಿಂಗ ಮರಳಿ ದೊರೆಯುವುದು. ಇಷ್ಟಲಿಂಗ ಭಿನ್ನವಾದಾಗ ಆತ್ಮಘಾತಕ್ಕೆ ಮುಂದಾಗುವ ಶರಣರನ್ನು 'ಒಂದರ್ಥದಲ್ಲಿ ಇಷ್ಟಲಿಂಗದ ವೇಳೆವಾಳಿಗಳು' ಎಂದು ಎಂ.ಎಂ. ಕಲಬುರ್ಗಿಯವರು ಕರೆದಿದ್ದಾರೆ.[೧] ಇಷ್ಟಲಿಂಗ ಭಿನ್ನವಾದಾಗ ಆತ್ಮಹತ್ಯೆಗೆ ಮುಂದಾಗುವುದನ್ನು ಅಲ್ಲಮಪ್ರಭು, ಚನ್ನಬಸವಣ್ಣ ಮುಂತಾದವರು ವಿರೋಧಿಸಿದ್ದಾರೆ.[೨]

ಧಾರ್ಮಿಕ ಲೌಕಿಕ ಕ್ಷೇತ್ರಗಳೆರಡಕ್ಕೂ ಸೇರುವ 'ದಿಟ್ಟವಾರಿ'[೩] ಎಂಬ ವೀರವ್ರತ ಗಮನಾರ್ಹವಾದದ್ದು. ಧಾರ್ಮಿಕವಾಗಿ ಇದು ಭಕ್ತನು ತೊಡುವ ವೀರವ್ರತವಾಗಿದ್ದಿತು. ಭಕ್ತನು ತನಗೂ ಶಿವನಿಗೂ ಮಧ್ಯೆ ಯಾರು ಬಂದರೂ ಸಂಹರಿಸುತ್ತೇನೆಂಬ ವ್ರತ ತೊಡುವುದಾಗಿದ್ದಿತು. ಇದನ್ನು ಹರಿಹರ ಕವಿಯು ಸುರಗಿ ಚೌಡಯ್ಯನ ರಗಳೆಯಲ್ಲಿ ಚಿತ್ರಿಸಿದ್ದಾನೆ. ಎಂ. ಚಿದಾನಂದಮೂರ್ತಿಯವರು ಹರಿಹರನ ಬಸವರಾಜ ದೇವರ ರಗಳೆಯಲ್ಲಿ ಬರುವ ಬಿಜ್ಜಳನ ಆಸ್ಥಾನದಲ್ಲಿದ್ದ ಬೇರೆ ಬೇರೆ ಬಗೆಯ ವೀರರನ್ನು ವರ್ಣಿಸುವ ಭಾಗದಲ್ಲಿ 'ದಿಟ್ಟವಾರಿಯ ಧೀರರು' ಇದ್ದುದನ್ನು ಗಮನಕ್ಕೆ ತಂದು ಇವರು ರಾಜನನ್ನು ಸದಾ ತಮ್ಮ ದೃಷ್ಟಿಯಲ್ಲಿಟ್ಟುಕೊಂಡಿದ್ದು ಅವನ ಕ್ಷೇಮದ ಹೊಣೆಯನ್ನು ಹೊತ್ತಿದ್ದ ವೀರಪಂಗಡದವರು ಇರಬಹುದು ಎಂದು ಅಭಿಪ್ರಾಯಪಡುತ್ತಾರೆ.[೪] ಇವರನ್ನು ಲೌಕಿಕ ಕ್ಷೇತ್ರದ ದಿಟ್ಟವಾರಿಗಳೆಂದು ಪರಿಗಣಿಸಬಹುದು.

---

೧. ಎಂ.ಎಂ. ಕಲಬುರ್ಗಿ ಪೂರ್ವೋಕ್ತ : ಪು. ೨೫.

೨. ಎಸ್. ವಿದ್ಯಾಶಂಕರ : 'ವಚನಕಾರರು ಹಾಗೂ ಆತ್ಮಬಲಿ' ಎಂಬ ಲೇಖನ. 'ವಚನಾನುಶೀಲನ' ಪು. ೪೨೫-೪೩೫.

೩. ಎಂ. ಚಿದಾನಂದ ಮೂರ್ತಿ : 'ದಿಟ್ಟವಾರಿ - ವಿಶಿಷ್ಟ ಭಕ್ತರು ಮತ್ತು ಶೂರರು (ಶಬ್ದದ ಅರ್ಥ ಮತ್ತು ನಿಷ್ಪತ್ತಿ)' - ಲಿಂಗಾಯತ ಅಧ್ಯಯನಗಳು - ಪು. ೪೫೭-೪೬೫.

೪. ಅದೇ, ಪು. ೪೬೩.

# ೧೬. ಆತ್ಮಬಲಿ: ಬೇರೆ ಬೇರೆ ಪ್ರಕಾರಗಳು

ಹುಟ್ಟಿದ ಪ್ರತಿಯೊಂದು ಜೀವಿಗೂ ಸಾವು ಅನಿವಾರ್ಯ ಕೊನೆಯಾಗಿದೆ. ಆಯುಸ್ಸು ಮುಗಿದು ಸಾವು ತಾನಾಗಿ ಬರುವುದು ಒಂದು ರೀತಿಯಾದರೆ, ವ್ಯಕ್ತಿಯು ತನಗೆ ಅತ್ಯಂತ ಪ್ರಿಯವಾದ ಪ್ರಾಣವನ್ನು ತಾನಾಗಿ ಕೊನೆಗೊಳಿಸಿಕೊಳ್ಳುವ ಇನ್ನೊಂದು ರೀತಿಯನ್ನೂ ಕಾಣುತ್ತೇವೆ. ಇದರಲ್ಲಿ ಎರಡು ರೀತಿಗಳನ್ನು ಗುರುತಿಸಬಹುದು. ಒಂದು, ವ್ಯಕ್ತಿಯಾದವನು ತನ್ನ ವೈಯಕ್ತಿಕ ನಿರ್ಧಾರದಿಂದ ತನ್ನ ಬದುಕನ್ನು ತಾನಾಗಿ ಕೊನೆಗೊಳಿಸಿಕೊಳ್ಳುವುದು. ಇದು ಆತ್ಮಹತ್ಯೆ. ಇದಕ್ಕೆ ತನ್ನ ಬದುಕನ್ನು ಕೊನೆಗೊಳಿಸಿಕೊಳ್ಳುವುದಕ್ಕಿಂತ ದೊಡ್ಡ ಧ್ಯೇಯ ಇರಲಾರದು. ಇದಕ್ಕೆ ಧರ್ಮ, ಸಮಾಜ ಮತ್ತು ಕಾನೂನುಗಳ ಸಮ್ಮತಿ ಇರುವುದಿಲ್ಲ. ಇದು 'ಆತ್ಮಹತ್ಯೆ' ಎಂದು ಕರೆಯಿಸಿಕೊಳ್ಳುತ್ತದೆ. ಎರಡನೆಯ ರೀತಿ, ವ್ಯಕ್ತಿ ತನಗೆ ಅತ್ಯಂತ ಪ್ರಿಯವಾದ ಪ್ರಾಣದ ಆಸೆಯನ್ನು ತೊರೆದು ತಾನು ನಂಬಿದ ಆದರ್ಶಕ್ಕೆ ಮತ್ತು ಉದಾತ್ತವೆಂದು ನಂಬಿದ ಭಾವನೆಗಾಗಿ ಬದುಕನ್ನು ತಾನಾಗಿ ಕೊನೆಗೊಳಿಸಿಕೊಳ್ಳುವುದು. ಇದಕ್ಕೆ ಧರ್ಮದ, ಸಮಾಜದ ಸಮ್ಮತಿ ಇರುತ್ತದೆ. ಇದು ಅಜ್ಞಾತವಾಗಿ ಆತ್ಮಹತ್ಯೆಯಂತೆ ಮರೆಯಲ್ಲಿ ನಡೆಯುವುದಾಗಿರದೆ ಸಾರ್ವಜನಿಕವಾಗಿ ನಡೆಯುವಂತಹುದಾಗಿದೆ. ಇದನ್ನು 'ಆತ್ಮಬಲಿ' ಎನ್ನಬಹುದು. ಆತ್ಮಹತ್ಯೆ ಜೀವವಿಮುಖಿಯಾದ ಹೇಡಿಗಳ ಕಾರ್ಯವೆಂದೂ ಬದುಕಿನಿಂದ ಪಲಾಯನವೆಂದೂ ಸಮಾಜ ಅದನ್ನು ಕೀಳಾಗಿ ಭಾವಿಸಿ ಖಂಡಿಸುತ್ತದೆ. ಆದರೆ ಆತ್ಮಬಲಿಯನ್ನು ಸಮಾಜ ವೀರತ್ವದ ಉದಾತ್ತ ಕಾರ್ಯವೆಂದು ಭಾವಿಸಿ ಅವರಿಗಾಗಿ ಸ್ಮಾರಕಗಳನ್ನು ನಿರ್ಮಿಸುವುದರ ಮೂಲಕ ಗೌರವದ ನಮನಗಳನ್ನು ಸಲ್ಲಿಸಿ ಆತ್ಮಬಲಿಯನ್ನು ಅಮರಗೊಳಿಸುತ್ತದೆ. ಈ ದೃಷ್ಟಿಗಳಿಂದ ಆತ್ಮಹತ್ಯೆ ಮತ್ತು ಆತ್ಮಬಲಿಗಳಿಗೆ ಇರುವ ವ್ಯತ್ಯಾಸಗಳನ್ನು ಸ್ಪಷ್ಟಪಡಿಸಿಕೊಳ್ಳುವುದು ತೀರಾ ಅಗತ್ಯವಾಗಿದೆ.

ಪ್ರಾಚೀನ ಭಾರತದಲ್ಲಿ ಆತ್ಮಹತ್ಯೆಯನ್ನು ಪಾಪಕಾರ್ಯವೆಂದೂ ಹೇಡಿಗಳ ನಡವಳಿಕೆಯೆಂದೂ ತಿರಸ್ಕರಿಸಲಾಗಿದೆ. ಆದರೂ ಸ್ಮೃತಿ ಪುರಾಣಗಳು ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ದೇಹತ್ಯಾಗಕ್ಕೆ ಅನುಮತಿಯನ್ನು ನೀಡಿರುವುದು ಕಂಡು ಬರುತ್ತದೆ. ಬ್ರಾಹ್ಮಣ ಹತ್ಯೆಯಂತಹ ಮಹಾಪಾಪದ ಪ್ರಾಯಶ್ಚಿತ್ತ ರೂಪವಾಗಿ, ವೃದ್ಧನಾಗಿ, ದೊಡ್ಡ ರೋಗಕ್ಕೆ ತುತ್ತಾಗಿ ತನ್ನ ನಿತ್ಯ ಕರ್ಮಗಳನ್ನು ಮಾಡಿಕೊಳ್ಳಲಾಗದ ಸ್ಥಿತಿಯಲ್ಲಿ, ಗೃಹಸ್ಥನಾಗಿ ಆರೋಗ್ಯಶಾಲಿಯಾಗಿದ್ದರೂ ತನ್ನ ಲೌಕಿಕ ಭೋಗ ಭಾಗ್ಯಗಳ ಮೇಲಿನ ಆಸೆಗಳೆಲ್ಲವೂ ಮುಗಿದು ವೈರಾಗ್ಯಪರವಾಗಿ ಮನಸ್ಸು ಸಂಪೂರ್ಣ ಒಲಿದಿದ್ದರೆ, ಮೋಕ್ಷಾಕಾಂಕ್ಷೆಯಿಂದ ಧಾರ್ಮಿಕವಾಗಿ ದೇಹತ್ಯಾಗ ಬಯಸಿದ್ದರೆ- ಇಂಥ ಕೆಲವು ನಿರ್ಬಂಧಗಳಿಗೆ ಒಳಪಟ್ಟಂತೆ ದೇಹತ್ಯಾಗವನ್ನು ಮಾಡಲು ಅವಕಾಶವಿದ್ದಿತು.[೧]

ಭಾರತದಲ್ಲಿ ನಡೆಯುತ್ತಿದ್ದ ವಿವಿಧ ರೀತಿಯ ದೇಹತ್ಯಾಗಗಳನ್ನು ಚೀನಾದೇಶದ ಬೌದ್ಧ ಪ್ರವಾಸಿ ಹ್ಯುಯೆನ್‌ತ್ಸಾಂಗ್, ಅಲ್ಬೆರೂನಿ ಮುಂತಾದ ವಿದೇಶಿ ಪ್ರವಾಸಿಗರು ಉಲ್ಲೇಖಿಸಿರುವುದು ಕಂಡುಬರುತ್ತದೆ.[೨] ಆತ್ಮಬಲಿಯನ್ನು ಅದರ ಸ್ವರೂಪ

---

೧. P. V. Kane : History of Dharmashastra- IV ಪು. ೬೦೪.

೨. ಎಂ. ಚಿದಾನಂದಮೂರ್ತಿ ಕಶಾಸಾಂಅ, ಪು. ೩೦೦. ಹಾಗೆಯೇ, ವಾಸಿಯಾಗದ ಕಾಯಿಲೆಗೆ ತುತ್ತಾಗಿ ಅತ್ಯಂತ ಯಾತನಾಮಯ ಸ್ಥಿತಿಯಲ್ಲಿ ಚೇತರಿಕೆ ಅಸಾಧ್ಯ ಎಂಬಂತಹ ಪರಿಸ್ಥಿತಿಯಲ್ಲಿ ರೋಗಿಗೆ ದಯಾಮರಣ (Mercy killing) ನೀಡುವ ವಿಷಯದಲ್ಲಿ ಆಧುನಿಕ ವೈದ್ಯಕೀಯ ಜಗತ್ತು ಇತ್ತೀಚೆಗೆ ಚರ್ಚಿಸುತ್ತಿದೆ.

ಮತ್ತು ಅದರ ಹಿಂದಿರುವ ಪ್ರೇರಣೆಗಳ ದೃಷ್ಟಿಯಿಂದ ಧಾರ್ಮಿಕ ಮತ್ತು ಲೌಕಿಕವೆಂದು ಸ್ಥೂಲವಾಗಿ ಎರಡು ವಿಭಾಗ ಮಾಡಬಹುದು. ಆದರೆ ಭಾರತದಲ್ಲಿ ಯಾವುದನ್ನೂ ಧಾರ್ಮಿಕ ಮತ್ತು ಲೌಕಿಕವೆಂದು ನಿರ್ದಿಷ್ಟವಾಗಿ ಗೆರೆ ಎಳೆದು ವಿಭಾಗಿಸುವುದು ಕಠಿಣವೆಂದೇ ಹೇಳಬಹುದು.

ಧಾರ್ಮಿಕ ಬಲಿದಾನದಲ್ಲಿ ವ್ಯಕ್ತಿಗಳು ತಾವು ನಂಬಿದ ದೈವ ಅಥವಾ ಧರ್ಮದ ಪ್ರೇರಣೆಯಿಂದ ಒಂದು ನಿರ್ದಿಷ್ಟ ಶುಭದಿನ ಅಗ್ನಿಪ್ರವೇಶದ ಮೂಲಕವೋ, ಜಲಪ್ರವೇಶದ ಮೂಲಕವೋ, ಎತ್ತರದಿಂದ ಬೀಳುವುದರ ಮೂಲಕವೋ ಅಥವಾ ಒಂದು ನಿರ್ದಿಷ್ಟ ದಿನದಿಂದ ಆಹಾರ ಪಾನೀಯಗಳನ್ನು ತ್ಯಜಿಸುವುದರ ಮೂಲಕವೋ ಮರಣವನ್ನು ತಂದುಕೊಳ್ಳುತ್ತಿದ್ದರು.

ಕನ್ನಡ ಶಾಸನಗಳನ್ನು ಗಮನಿಸಿದರೆ ಈ ರೀತಿ ಧಾರ್ಮಿಕ ಉದ್ದೇಶಗಳಿಂದ ಆತ್ಮ ಬಲಿಹೊಂದಿದ ಹಲವಾರು ನಿದರ್ಶನಗಳು ದೊರೆಯುತ್ತವೆ. ಈ ರೀತಿಯ ಮರಣಗಳಿಗೆ ಸೂರ್ಯಗ್ರಹಣದ ದಿನವನ್ನು ಆರಿಸಿಕೊಂಡಿರುವುದು ಕೆಲವು ನಿದರ್ಶನಗಳಲ್ಲಿ ಕಂಡು ಬರುತ್ತದೆ. ಬಾಳೂರಿನ ಶಾಸನ ಸಾಹಣಿ ಮೊಲ್ಲೆಯನ ಮಗ ಚಂಡನು ಸೂರ್ಯಗ್ರಹಣದ ದಿನ 'ಕಿಚ್ಚು ಹಾಯ್ದು' ಸ್ವರ್ಗಸ್ಥನಾದ ವಿಷಯವನ್ನು ತಿಳಿಸುತ್ತದೆ.[೧] ತಿಳಿವಳ್ಳಿಯ ಶಾಸನದಲ್ಲಿ ಕೋಣವತ್ತಿಯ ಬೊಪ್ಪನು ಸೂರ್ಯಗ್ರಸಣ ನಿಮಿತ್ತವಾಗಿ ಪ್ರಾಣತ್ಯಾಗ ಮಾಡಿ ಸೂರ್ಯಲೋಕ ಪ್ರಾಪ್ತನಾಗುತ್ತಾನೆ ಎಂದಿದೆ.[೨] ದೇವರ ಬಂಟನಾದ ಬಾಚಿಗನು ಗ್ರಹಣದ ದಿನ ನಾಗಾರ್ಜುನದಲ್ಲಿ ಆತ್ಮ ಬಲಿಯಾದಾಗ ಅವನ ಗುರು ನಾಗರಾಶಿ ಪಂಡಿತರು ಶಾಸನ ಸ್ತಂಭವನ್ನು ನಿಲ್ಲಿಸಿದಂತೆ ತಿಳಿದುಬರುತ್ತದೆ.[೩] ರಾಜೆಯಜೀಯ...ಭಟ್ಟ ಅಗ್ನಿಪ್ರವೇಶ ಮಾಡಲು ಬಹುಶಃ ಅವನ ಅಣ್ಣ ನಾರಸಿಂಹ ಕಲ್ಲನ್ನು ನಿಲ್ಲಿಸಿದ್ದಾನೆ[೪] ಎಂದು ಮೂಗೂರಿನ ಶಾಸನ ತಿಳಿಸುತ್ತದೆ. ಮುಗುಳಗೆರೆಯ ಶಾಸನ ತೆಲುಗುನಾಡಿನ ಮಲ್ಲೆಯ ಸೂರ್ಯಗ್ರಹಣದಂದು ಆತ್ಮ ಬಲಿಯಾದ ವಿಷಯವನ್ನು ತಿಳಿಸುತ್ತದೆ.[೫] ಅದೇ ಊರಿನ ಇನ್ನೊಂದು ಶಾಸನ ಬಮ್ಮನೆಂಬುವನು ಆತ್ಮ ಬಲಿಯಾದ ವಿಷಯವನ್ನು ತಿಳಿಸುತ್ತದೆ.[೬]

ಗ್ರಹಣದ ದಿನ ಆತ್ಮ ಬಲಿಯನ್ನು ಮಾಡಿಕೊಳ್ಳಲು ಮುಖ್ಯ ಕಾರಣ ಅದು ಪುಣ್ಯ ದಿನವೆಂಬ ನಂಬಿಕೆಯೇ ಕಾರಣವಾಗಿದೆ. ಈ ಆತ್ಮ ಬಲಿಗಳೆಲ್ಲವೂ ಮೋಕ್ಷಾಪೇಕ್ಷೆಯಿಂದ ಪ್ರೇರಿತವೆಂದು ಭಾವಿಸಬಹುದು. ಇಂಥ ಹಿಂದೂ ಧಾರ್ಮಿಕ ಆತ್ಮ ಬಲಿಗಳನ್ನು ಬ್ರಹ್ಮಶಿವನು ತಿರಸ್ಕಾರದಿಂದ ಕಂಡಿದ್ದಾನೆ.

ರವಿಯ ವಿಮಾನಂ ರಾಹುವಿ  
ನ ವಿಮಾನಕಡ್ಡಮಾಗೆ ತತ್ಪತಿಯ ರಾ  
ಹುವೆ ನುಂಗಿತೆಂದು ತಡೆದಿರ  
ದೆ ವಹ್ನಿಯಂ ಪೊಕ್ಕು ಮುರುಟಿ ಸಾವರ್ ಮೂಢರ್[೬]

ಸೂರ್ಯನ ವಿಮಾನಕ್ಕೆ ರಾಹುವಿನ ವಿಮಾನ ಅಡ್ಡ ಬಂದರೆ ಸೂರ್ಯನನ್ನು ರಾಹು ನುಂಗಿದನೆಂದು ಅಗ್ನಿ ಪ್ರವೇಶ ಮಾಡಿ ಮೂಢರಾದವರು ಸುಟ್ಟು ಸಾಯುವರೆಂದು ಅಪಹಾಸ್ಯ ಮಾಡಿದ್ದಾನೆ. ಇನ್ನೊಂದು ಪದ್ಯದಲ್ಲಿ, ತೊನ್ನು ಬಂದವರು ಅಗ್ನಿಪ್ರವೇಶ ಮಾಡಿದರೆ ದೇವತೆಗಳಾಗುತ್ತಾರೆಂದು, ಹಾಗೆ ಮಾಡಿ ಸುಟ್ಟು ಸಾಯುವರೆಂದು ಹೇಳಿದ್ದಾನೆ.[೭] ಗ್ರಹಣದ ದಿನಗಳಲ್ಲಿ

---

೧. ಕ಼ V ಹಾನಗಲ್ಲು ೯೬ ಕ್ರಿ.ಶ. ೧೧೩೦.

೨. ಕ಼ V ಹಾನಗಲ್ಲು ೯೭ ಕ್ರಿ.ಶ. ೧೧೪೧.

೩. ಎಆರ್ಐ಼ ೧೯೫೮-೫೯ ನಾಗವಂದ, ಹಿರೇಕೆರೂರು (ತಾ) ೫೮೬ ಕ್ರಿ.ಶ. ೧೧೨೦ ಪು. ೮೪.

೪. ಎಂ. ಚಿದಾನಂದ ಮೂರ್ತಿ : ಪೂರ್ಣಸೂರ್ಯಗ್ರಹಣ, ಪು. ೨೮.

೫. (ರೈ) ಎಕ VII ಶಿಕಾರಿಪುರ ೨೯೦ ಕ್ರಿ.ಶ. ೧೧೪೧.

೬. ಎಂ. ಚಿದಾನಂದಮೂರ್ತಿ ಪೂರ್ವೋಕ್ತ ಪು. ೩೦.

೭. ಸ.ಪ. ೧೨-೨೬.

ಅಗ್ನಿಪ್ರವೇಶ ಮಾಡಿ ಆತ್ಮಬಲಿ ಮಾಡಿಕೊಳ್ಳುತ್ತಿದ್ದುದು ಆ ಕಾಲದಲ್ಲಿ ಪ್ರಚಲಿತವಾಗಿದ್ದ ಪದ್ಧತಿಯೆಂದು ತಿಳಿಯಬಹುದು. ಕರ್ನಾಟಕದಲ್ಲಿ ಆ ಕಾಲದಲ್ಲಿ ಸೂರ್ಯಾರಾಧನೆ ಪ್ರಚಲಿತವಾಗಿದ್ದುದಕ್ಕೆ ಸಾಕಷ್ಟು ದೇವಾಲಯಗಳು, ಶಿಲ್ಪ ಮತ್ತು ಶಾಸನಗಳು ನಿದರ್ಶನವನ್ನು ಒದಗಿಸುತ್ತವೆ.[೨] ಅಲ್ಲದೆ ಆ ಕಾಲದಲ್ಲಿ ಸೌರರು ಕರ್ನಾಟಕದಲ್ಲಿ ಕ್ರಿಯಾಶೀಲರಾಗಿದ್ದುದು ಶಾಸನ ಮತ್ತು ಸಾಹಿತ್ಯ ಕೃತಿಗಳಿಂದ ದೃಢಪಟ್ಟಿದೆ.

ಜಲ ಪ್ರವೇಶಮಾಡಿ ಆತ್ಮಬಲಿಯಾದ ನಿದರ್ಶನವೆಂದರೆ ಕಲ್ಯಾಣ ಚಾಳುಕ್ಯ ಚಕ್ರವರ್ತಿ ಆಹವಮಲ್ಲ ಕುರುಗೋಡಿನ ಸಮೀಪದ ತುಂಗಭದ್ರಾ ನದಿಯನ್ನು ಪ್ರವೇಶಿಸಿ ಪ್ರಾಣತ್ಯಾಗ ಮಾಡಿರುವುದು. ಈ ವಿಷಯ ಶಾಸನೋಕ್ತವಾಗಿದೆ.[೩]

ಬೌದ್ಧ ಧರ್ಮ ಆತ್ಮಬಲಿಯನ್ನು ಬಹಳವಾಗಿ ವಿರೋಧಿಸುತ್ತದೆ. ಮಾನವನು ತನಗೆ ನಿಗದಿಯಾದ ಆಯುಸ್ಸನ್ನು ಪೂರ್ಣವಾಗಿ ಬದುಕಬೇಕು. ವ್ಯಕ್ತಿ ಬದುಕಿನಲ್ಲಿ ಕಾಯಬೇಕು. ಅವಸರದಿಂದ ಆತ್ಮಹತ್ಯೆ ಮಾಡಿಕೊಂಡರೆ ಆಧ್ಯಾತ್ಮಿಕ ಪ್ರಗತಿಯಲ್ಲವೆಂದು ಹೇಳುತ್ತದೆ. ಸನ್ಯಾಸಿ, ಅರ್ಹತ್ ತನ್ನನ್ನು ತಾನು ಕೊಂದುಕೊಳ್ಳಕೂಡದೆಂದು ವಿಧಿಸುತ್ತದೆ. ಆದರೂ ಕೆಲವು ಬೌದ್ಧ ಕತೆಗಳಲ್ಲಿ ಆತ್ಮಹತ್ಯೆಯನ್ನು ಹೇಳಿರುವುದುಂಟು. ಮಹಾಯಾನದ ಹೊತ್ತಿಗೆ ಆತ್ಮಹತ್ಯೆಗೆ ಸಮ್ಮತಿ ಸಿಕ್ಕ ಹಾಗೆ ಕಾಣುತ್ತದೆ. ಭೈಷಜ್ಯರಾಜನು ದೇಹದ ಮೇಲೆ ಎಣ್ಣೆಯನ್ನು ಹಾಕಿಕೊಂಡು ಹತ್ತಿಸಿಕೊಂಡಂತಹ ನಿದರ್ಶನಗಳಿವೆ. ಏನೇ ಆದರೂ ಬೌದ್ಧ ಧರ್ಮ ಆತ್ಮಹತ್ಯೆಯ ಕಡೆಗೆ ತನ್ನ ಒಲವನ್ನು ತೋರಿಸಿದ ಹಾಗಿಲ್ಲ.[೪]

ಜೈನಧರ್ಮ ವೈರಾಗ್ಯವನ್ನು ತನ್ನ ಉನ್ನತ ತತ್ವವಾಗಿ ಬೋಧಿಸಿದೆ. ಸಮಾಧಿಮರಣವನ್ನು ಜೈನಧರ್ಮ ಪ್ರಧಾನ ವಿಷಯವಾಗಿ ಪ್ರತಿಪಾದಿಸಿದೆ. ಬಹುಶಃ ಹಿಂದೂ ಧರ್ಮದ ಯಾವ ಪಂಥವೂ ಈ ವಿಷಯವನ್ನು ಪ್ರಧಾನ ವಿಷಯವನ್ನಾಗಿ ಮಾಡಿಕೊಂಡಿಲ್ಲ. ಜೈನಧರ್ಮ ಕೆಲವು ನಿರ್ಬಂಧಗಳನ್ನು ವಿಧಿಸಿ ಧಾರ್ಮಿಕ ಮರಣವನ್ನಪ್ಪಲು ಅವಕಾಶವನ್ನು ನೀಡಿದೆ. ವಾಸಿಯಾಗದ ರೋಗ ಬಂದಾಗ, ಕ್ಷಾಮದ ಕಾಲದಲ್ಲಿ, ಅಪಾಯ, ಮುಪ್ಪು ಇವು ಪರಿಹಾರವಿಲ್ಲವೆಂದಾಗ ಧಾರ್ಮಿಕ ವಿಧಿಯಿಂದ ಮರಣವನ್ನಪ್ಪಲು ಅವಕಾಶವಿದೆ. ರತ್ನಕರಂಡಕ, ಶಾಸ್ತ್ರಸಾರ ಸಮುಚ್ಚಯ, ಭಗವತೀ ಆರಾಧನಾ ಮೊದಲಾದ ಗ್ರಂಥಗಳು ಈ ವಿವರಗಳನ್ನು ತಿಳಿಸುತ್ತವೆ.[೫] ಸಾಮಾನ್ಯವಾಗಿ ಇಂಥ ಧಾರ್ಮಿಕ ಮರಣಗಳು ಪ್ರಶಸ್ತ ಅಥವಾ ಪವಿತ್ರ ಸ್ಥಳಗಳಾದ ಬಸದಿಗಳಲ್ಲಿ ಅಥವಾ ಬೆಳ್ಗೊಳ, ಕೊಪ್ಪಳ ಮುಂತಾದ ಪುಣ್ಯ ಕ್ಷೇತ್ರಗಳಲ್ಲಿ ನಡೆಯುತ್ತಿದ್ದವು.

ಜೈನ ಧಾರ್ಮಿಕ ಗ್ರಂಥಗಳು ನಲ್ವತ್ತೆಂಟು ರೀತಿಯ ಧಾರ್ಮಿಕ ಮರಣಗಳನ್ನು ಹೇಳಿದರೂ ಅವು ಕೆಲವು ಗುಂಪುಗಳಲ್ಲಿ ಅಳವಡುತ್ತದೆ. ಭಗವತೀ ಸೂತ್ರ ಮತ್ತು ಭಗವತೀ ಆರಾಧನಾ ಗ್ರಂಥಗಳು ಕ್ರಮವಾಗಿ ಹದಿನಾಲ್ಕು ಮತ್ತು ಹದಿನೇಳು ರೀತಿಯ (ಐದು ಶೀರ್ಷಿಕೆಯಲ್ಲಿ ಅಳವಡುತ್ತವೆ) ಧಾರ್ಮಿಕ ಮರಣಗಳನ್ನು ಹೇಳುತ್ತದೆ.[೬] ಶ್ರವಣಬೆಳಗೊಳದ ಶಾಸನಗಳ ಆಧಾರದ ಮೇಲೆ ಎಸ್. ಶೆಟ್ಟರ್ ಅವರು ಆರಾಧನ, ಪಂಚಪಾದ, ಸನ್ಯಸನ, ಸಲ್ಲೇಖನ, ಸಮಾಧಿ, ಪಂಡಿತಮರಣ

---

೧. ಸ.ಪ. ೧೨-೨೭.

೨. ಎಸ್‌ಐಐ IX(i) ಕಲ್ಯಾಣದುರ್ಗ ೨೭೩ ಕ್ರಿ.ಶ. ೧೧೭೯.

೩. (ರೈ) ಎಕ VII ಶಿಕಾರಿಪುರ ೧೩೬ ಕ್ರಿ.ಶ. ೧೦೬೮.

೪. Encylopaedia of Religion and Ethics: XII ಪು. ೨೫.

೫. ಎಂ.ಎಂ. ಕಲಬುರ್ಗಿ : ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು. ೬.

೬. S. Settar : Pursuing Death: ಪು. ೧೩-೧೪. ಈ ಗ್ರಂಥದಲ್ಲಿ ಜೈನ ಧಾರ್ಮಿಕ ಮರಣದ ತತ್ವ ಮತ್ತು ಪದ್ಧತಿಯನ್ನು ಸಮಗ್ರವಾಗಿ ಚರ್ಚಿಸಲಾಗಿದೆ. ಸನ್ಯಸನ ಮರಣ ಪು. ೨೪೩-೨೯೪, ಸಮಾಧಿ ಮರಣ ಪು. ೧೦೭-೧೫೩, ಸಲ್ಲೇಖನ ಪು.೧೭೭-೨೧೨. ಮುಂತಾದ ಮರಣಗಳ ವಿವರವಾದ ಚರ್ಚೆಯನ್ನು ನೋಡಬಹುದು.

ಮತ್ತು ಪೌಗ್ಗಮಣ ಎಂದು ಏಳು ರೀತಿಯಲ್ಲಿ ಗುರುತಿಸುತ್ತಾರೆ.[೧] ಇವುಗಳಲ್ಲಿ ಹೆಚ್ಚು ವ್ಯಾಪಕವಾಗಿ ಬಳಕೆಯಲ್ಲಿದ್ದವು ಸನ್ಯಸನ ವಿಧಿ, ಸಮಾಧಿ ಮರಣ ಮತ್ತು ಸಲ್ಲೇಖನ ವಿಧಿಗಳೆಂದು ಕಂಡು ಬರುತ್ತದೆ. ಕೆಲವು ಧಾರ್ಮಿಕ ಮರಣಗಳು ಯಾವ ವಿಧಿಯಿಂದ ನಡೆದವು ಎಂಬುದು ಶಾಸನಗಳಿಂದ ಸ್ಪಷ್ಟವಾಗುವುದಿಲ್ಲ.

ಸನ್ಯಸನ ವಿಧಿಯಿಂದ ಮರಣ ಹೊಂದಿದ ಕೆಲವು ನಿದರ್ಶನಗಳನ್ನು ಗಮನಿಸಬಹುದು. ಸಕಳಚಂದ್ರದೇವನೆಂಬುವನು ಸನ್ಯಸನ ವಿಧಿಯಿಂದ ಮರಣ ಹೊಂದಿದ ವಿಷಯವನ್ನು ನೆಗ್ಲೂರಿನ ಶಾಸನ ತಿಳಿಸುತ್ತದೆ.[೨] 'ಸಾತಿಸೆಟ್ಟಿಯರ ಮಡದಿ ಕಾಮವೆ ಸನ್ಯಸನವನ್ನು ತಳೆದು ಸ್ವರ್ಗಸ್ತೆ'[೩]ಯಾದಳೆಂದು ಶಾಸನವೊಂದರಿಂದ ತಿಳಿದು ಬರುತ್ತದೆ.

ಸಮಾಧಿವಿಧಿಯಿಂದ ಮರಣಹೊಂದಿದ ವಿಷಯವನ್ನು ಕೆಲವು ಶಾಸನಗಳು ತಿಳಿಸುತ್ತವೆ. ಜಕ್ಕಯನ ಮಡದಿ ಮಾದವೆ ಸಮಾಧಿವಿಧಿಯಿಂದ ಸ್ವರ್ಗಸ್ಥಳಾದಳೆಂದು ಶಾಸನವೊಂದು ತಿಳಿಸುತ್ತದೆ.[೪] 'ಪಟ್ಟಣಸ್ವಾಮಿ ಮಾಳಿಸೆಟ್ಟಿಯರ ಮಡದಿ ಪದ್ಮೆವೆಯು ಸುಚಿತ್ತದಿಂ ಸಮಾಧಿ ಕೂಡಿ ಸ್ವರ್ಗಪ್ರಾಪ್ತೆಯಾದ'ಳೆಂದು ತಿಳಿದುಬರುತ್ತದೆ.[೫] ಮಲಧಾರಿ ದೇವರ ಗುಡ್ಡನಾದ ಚೋಳಯನು ಸಮಾಧಿವಿಧಿಯಿಂದ ಮುಡಿಪಿ ಸ್ವರ್ಗಸ್ಥನಾದನೆಂದು ಶಾಸನವೊಂದು ತಿಳಿಸುತ್ತದೆ.[೬]

ಸಲ್ಲೇಖನ ವಿಧಿಯಿಂದ ಮರಣ ಹೊಂದಿದ ವಿಷಯವನ್ನು ಅನೇಕ ಶಾಸನಗಳು ತಿಳಿಸುತ್ತವೆ. ಜಿನನಾಥಪುರದ ಶಾಸನವೊಂದು ಕಾಳಬ್ಬೆ ಎಂಬುವವಳು ಸಲ್ಲೇಖನ ವಿಧಿಯಿಂದ ಮರಣ ಹೊಂದಿದ ವಿಷಯವನ್ನು ತಿಳಿಸುತ್ತದೆ.[೭] ಜೋಡಿ ಬಸವನಪುರದ ಶಾಸನವು ಚಂದ್ರಪ್ರಭಮುನಿಯು ಸಲ್ಲೇಖನವಿಧಿಯಿಂದ ಪ್ರಾಣತ್ಯಾಗ ಮಾಡಿದ ವಿಷಯವನ್ನು ತಿಳಿಸುತ್ತದೆ.[೮]

ಜೈನ ಧರ್ಮಾನುಯಾಯಿಗಳಾಗಿ ವ್ರತಹಿಡಿದು ಮರಣಹೊಂದಿದವರಲ್ಲಿ ಮೂರು ದಿನಗಳಿಂದ ಮೂವತ್ತು ದಿನಗಳವರೆಗೆ ಬದುಕಿದ್ದನ್ನು ಎಂ.ಎಂ. ಕಲಬುರ್ಗಿಯವರು[೯] ಗುರುತಿಸಿದ್ದಾರೆ. ಜೈನ ಸಮಾಧಿಮರಣಕ್ಕೆ ನಿಶ್ಚಿತ ಕಾರಣಗಳನ್ನು ಹೇಳಿದ್ದರೂ ಅನ್ಯ ಕಾರಣಗಳಿಗಾಗಿ ಸಮಾಧಿ ಮರಣಗಳು ನಡೆದಿರುವುದುಂಟು. ಸತ್ಯವೆಗ್ಗಡೆ ಎಂಬುವವನು ಯಾವುದೋ ಯುದ್ಧದಲ್ಲಿ ಮಡಿಯಲು ಅವನ ಇಬ್ಬರು ಮಡದಿಯರು (ಹಿರಿಯವಳ ಹೆಸರು ನಷ್ಟವಾಗಿದೆ, ಕಿರಿಯವಳು ಬಾಚವೆ) ಆಧ್ಯಾತ್ಮಗುರು ನ್ಯಾಯಕೀರ್ತಿದೇವನ ಸಮ್ಮುಖದಲ್ಲಿ ಸನ್ಯಸವಿಧಿಯಿಂದ ಮರಣ ಹೊಂದಿರುವುದು ತಿಳಿದುಬರುತ್ತದೆ.[೧೦] ಇದೇ ರೀತಿ ಮಗಳು ಶಾಂತಲೆಗಾಗಿ ತಾಯಿ ಮಾಚಿಕಬ್ಬೆ, ಮಲ್ಲಿಸೆಟ್ಟಿಗಾಗಿ ಪ್ರಿಯಪುತ್ರ ಮಾಳಯ್ಯ, ಅತ್ತೆ ಮಾಳವ್ವೆಗಾಗಿ ಸೊಸೆ ಚೌಡಿಯಕ್ಕ

---

೧. S. Settar : Inviting Death. ಪು. ೧೦೧.

೨. ಎಸ್ಐಐ XVIII ಹಾವೇರಿ ೨೩೪ ಕ್ರಿ.ಶ. ೧೨೫೧.

೩. ಕಇ VI ಹಿರೇಕೆರೂರು ೪೯ ಕ್ರಿ.ಶ. ೧೨೭೧.

೪. ಎಸ್ಐಐ XVIII ಹಾವೇರಿ ೨೫೦ ಕ್ರಿ.ಶ. ೧೨೬೬.

೫. (ರೈ) ಎಕ VII ಶಿಕಾರಿಪುರ ೧೪೮ ಕ್ರಿ.ಶ. ೧೧೮೬(?)

೬. (ರೈ) ಎಕ VIII ಸೊರಬ ೧೧೩ ಕ್ರಿ.ಶ. ೧೨೪೯.

೭. (ಮೈ) ಎಕ II ಶ್ರವಣಬೆಳಗೊಳ ೫೩೯ ಕ್ರಿ.ಶ. ೧೨೧೪.

೮. (ಮೈ) ಎಕ V ತಿ.ನರಸೀಪುರ ೩೮ ಕ್ರಿ.ಶ. ೧೧೮೩.

೯. ಎಂ.ಎಂ. ಕಲಬುರ್ಗಿ : ಪೂರ್ವೋಕ್ತ, ಪು. ೧೨.

೧೦. ಎಂಎಆರ್ ೧೯೪೩ ಬೇಲೂರು ೧೫ ಕ್ರಿ.ಶ. ೧೧೭೦.

ಹಿಡಿದ ಸಲ್ಲೇಖನಗಳು ಉದಾಹರಣೆಯಾಗಿವೆ. ಇದು ಜೈನ ಸಮಾಧಿಮರಣದ ವಲಯ ವಿಸ್ತಾರವಾಗುತ್ತಿದ್ದುದರ ಅಂದರೆ ಹಿಂದೂ ಮರಣಕ್ಕೆ ಹೊಂದಿಕೊಳ್ಳುತ್ತಿದ್ದುದರ ಸೂಚನೆಗಳಾಗಿವೆ ಎಂದು ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.[೧]

ಜೈನ ಧಾರ್ಮಿಕ ವಿಧಿಗಳ ಅನುಸಾರವಾಗಿ ವ್ರತತೊಟ್ಟು ಮರಣ ಹೊಂದಿದ ವ್ಯಕ್ತಿಗಳಿಗೆ ಸ್ಮಾರಕಗಳನ್ನು ನಿರ್ಮಿಸುತ್ತಿದ್ದರು. ಆ ಸ್ಮಾರಕಗಳನ್ನು ನಿಸಿದಿ, ನಿಸಿದ್ಧಿ, ನಿಶಿಧಿ, ನಿಷಿದಿ ಮುಂತಾದ ರೂಪಗಳಿಂದ ಶಾಸನಗಳು ಕರೆದಿವೆ. (ಈ ವಿಷಯದ ಚರ್ಚೆ ಹಿಂದೆಯೇ ಬಂದಿದೆ) ಶ್ರವಣಬೆಳಗೊಳದಲ್ಲಿ ದೊರೆಯುವ ೧೦೮ ನಿಷಿದಿ ಶಾಸನಗಳನ್ನು ಗಮನಿಸಿದರೆ ಸುಮಾರು ೫೬ ಕ್ರಿ.ಶ. ೭ನೆಯ ಶತಮಾನಕ್ಕೆ ಸಂಬಂಧಿಸಿದವು. ಕ್ರಿ.ಶ. ೮ನೆಯ ಶತಮಾನದಲ್ಲಿ ೩, ೯ನೆಯ ಶತಮಾನದಲ್ಲಿ ೧,೧೦ನೆಯ ಶತಮಾನದಲ್ಲಿ ೪, ೧೧ನೆಯ ಶತಮಾನದಲ್ಲಿ ೪, ೧೨ನೆಯ ಶತಮಾನದಲ್ಲಿ ೧೨, ೧೩ನೆಯ ಶತಮಾನದಲ್ಲಿ ೩, ೧೪ನೆಯ ಶತಮಾನದಲ್ಲಿ ೬, ಅನಂತರದ ಶತಮಾನಗಳಲ್ಲಿ ೪ ಶಾಸನಗಳು ಈ ವಿಷಯವನ್ನು ನಿರೂಪಿಸುತ್ತವೆ. ಇದರಿಂದ ಕ್ರಿ.ಶ. ೭ನೆಯ ಶತಮಾನದಲ್ಲಿ ಮತ್ತು ೧೨ನೆಯ ಶತಮಾನದಲ್ಲಿ ಸಮಾಧಿ ಮರಣವನ್ನಪ್ಪುವ ಪದ್ಧತಿ ಅಧಿಕವಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ ಎಂದು ಬಿ.ವಿ. ಶಿರೂರ ಅವರು ಅಭಿಪ್ರಾಯ ಪಡುತ್ತಾರೆ.[೨] ಅನ್ಯ ಪ್ರದೇಶಗಳಲ್ಲಿಯೂ ಹನ್ನೆರಡು ಹದಿಮೂರನೆಯ ಶತಮಾನದ ಕಾಲದ ಶಾಸನಗಳಲ್ಲಿ ಜೈನ ಧಾರ್ಮಿಕ ಮರಣಗಳು ಸಾಕಷ್ಟು ನಡೆದಿರುವುದು ಕಂಡು ಬರುತ್ತದೆ. ನಮ್ಮ ಅಧ್ಯಯನಾವಧಿಯಲ್ಲಿ ಶ್ರವಣಬೆಳಗೊಳ ಬಿಟ್ಟು ಸುಮಾರು ಐವತ್ತಕ್ಕೂ ಮೇಲ್ಪಟ್ಟು ಜೈನ ಧಾರ್ಮಿಕ ಮರಣಗಳು ನಡೆದಂತೆ ಶಾಸನಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಸನ್ಯಸನ ವಿಧಿಯಿಂದ ಮರಣವನ್ನಪ್ಪುವವರು ರತ್ನಕರಂಡಕ ನಿರೂಪಿಸುವಂತೆ ಮೊದಲ ಘಟ್ಟದಲ್ಲಿ ಗಟ್ಟಿ ಆಹಾರವನ್ನು ತ್ಯಜಿಸಬೇಕು, ಎರಡನೆಯ ಘಟ್ಟದಲ್ಲಿ ಗಟ್ಟಿ ದ್ರವಾಹಾರವನ್ನು ತ್ಯಜಿಸಬೇಕು, ಮೂರನೆಯ ಘಟ್ಟದಲ್ಲಿ ಎಲ್ಲ ರೀತಿಯ ಆಹಾರಗಳನ್ನು ತ್ಯಜಿಸಬೇಕು.[೩]

ಇಂಥ ಧಾರ್ಮಿಕ ಮರಣಗಳಲ್ಲಿ ಗುರುವಿನ ಅಪ್ಪಣೆ ಪಡೆದು ಶಿಷ್ಯರು ಮರಣ ವ್ರತ ಕೈಗೊಳ್ಳುತ್ತಿದ್ದಂತೆ ಕಂಡುಬರುತ್ತದೆ. ಅನೇಕ ನಿಷಿದಿ ಶಾಸನಗಳಲ್ಲಿ ಗುರು ಉಪದೇಶ ಮಾಡುತ್ತಿರುವಂತೆಯೂ ಶಿಷ್ಯ ಅಥವಾ ಶಿಷ್ಯೆ ಆಲಿಸುತ್ತಿರುವಂತೆಯೂ ಮಧ್ಯೆ ವ್ಯಾಸಪೀಠವಿರುವಂತೆಯೂ ಚಿತ್ರಿಸಲಾಗಿರುತ್ತದೆ. ಕೆಲವು ಸಾರಿ ವ್ಯಾಸಪೀಠದ ಮುಂದೆ ಧಾರ್ಮಿಕ ಬಲಿ ಮಾಡಿಕೊಳ್ಳುವ ವ್ಯಕ್ತಿ ಕುಳಿತಂತೆಯೂ ಚಿತ್ರಣಗೊಂಡಿರಬಹುದು. ಬಂದಳಿಕೆಯ ಶಾಂತಿಬಸದಿಯ ಮುಂದೆ ಇರುವ ಒಂದು ನಿಷಿದಿ ಕಲ್ಲಿನಲ್ಲಿ ಇಂಥ ಒಂದು ಶಿಲ್ಪವನ್ನು ಕಾಣಬಹುದು.

ಸಾಮಾನ್ಯವಾಗಿ ನಿಷಿದಿ ಸ್ಮಾರಕಗಳು ಶಿಲಾಫಲಕಗಳಾಗಿರುತ್ತಿದ್ದರೂ ಕೆಲವು ಸಾರಿ ಸ್ತಂಭಾಕಾರವಾಗಿಯೂ ಇರುತ್ತಿದ್ದವು. ಕೆಲವು ಸಾರಿ ಶಿಲಾಸ್ತಂಭಗಳನ್ನು ಮಂಟಪಗಳಲ್ಲಿಯೂ ಅಳವಡಿಸಿರುವುದುಂಟು. ಕೆಲವು ಸಾರಿ ವಿಶೇಷ ವ್ಯಕ್ತಿಗಳಿಗಾಗಿ ಬಸದಿಗಳನ್ನು ನಿರ್ಮಿಸಿರುವುದೂ ಕಂಡುಬರುತ್ತದೆ.[೪]

ಶೈವರಲ್ಲಿ ಅನೇಕ ಬೀಭತ್ಸ ಆಚರಣೆಗಳನ್ನುಳ್ಳ ಪಂಥಗಳು ಕಂಡು ಬಂದರೂ ಆತ್ಮಬಲಿಯನ್ನು ಬೋಧಿಸಿದ ಹಾಗೆ ಕಂಡುಬರುವುದಿಲ್ಲ. ಕಾಪಾಲಿಕರು ಹಸಿ ತಲೆಗಳನ್ನು ಪೋಣಿಸುತ್ತಿದ್ದರೆಂಬ ಉಲ್ಲೇಖ ಶಾಸನವೊಂದ[೫]ರಲ್ಲಿ

---

೧. ಪೂರ್ವೋಕ್ತ, ಪು. ೧೩.

೨. ಶ್ರವಣಬೆಳಗೊಳ, ಪು. ೩೧೫.

೩. S. Settar and Ravi K. Korisettar : Nisidhis in Karnataka- A Survey : Memorial Stones. ಪು.೨೮೪.

೪. ಎಂ.ಎಂ. ಕಲಬುರ್ಗಿ ಪೂರ್ವೋಕ್ತ, ಪು. ೧೩-೧೪.

೫. (ಮೈ) ಎಕ II ಶ್ರವಣಬೆಳಗೊಳ ೬೪ ಕ್ರಿ.ಶ. ೧೦ ಶಮಾ.

ದೊರೆಯುವುದಾದರೂ ಅದು ಕೇವಲ ಬೀಭತ್ಸ ಆಚರಣೆಯೇ ಹೊರತು ಆತ್ಮಬಲಿಯಲ್ಲ. ಶೈವ (?) ಧರ್ಮಕ್ಕೆ ಸೇರಿದ ಏಕಾಂತದ ರಾಮಯ್ಯನು ಶಿರಃಪವಾಡವನ್ನು ಮೆರೆಯುವನಾದರೂ ಅದು ಆತ್ಮಬಲಿಯ ಉದ್ದೇಶದ್ದಲ್ಲ. ಜೈನರೊಂದಿಗೆ ನಡೆದ ಸ್ಪರ್ಧೆಯ ಒಂದು ಪರೀಕ್ಷೆಗಾಗಿ ಅದು ನಡೆಯಿತು. ಆದ್ದರಿಂದ ಅದನ್ನು ಆತ್ಮಬಲಿಯೆಂದು ಪರಿಗಣಿಸಲು ಸಾಧ್ಯವಿಲ್ಲ. ಆದರೆ ಕಾಕತೀಯ ಮತ್ತು ರೆಡ್ಡಿಗಳ ಕಾಲದ ಆಳ್ವಿಕೆಯ ಕಾಲದಲ್ಲಿ ನೆರೆನಾಡಾದ ಆಂಧ್ರದಲ್ಲಿ ಶೈವಭಕ್ತರು ಕಣ್ಣು, ಕೈ, ನಾಲಗೆ, ತಲೆಗಳನ್ನು ಕತ್ತರಿಸಿಕೊಳ್ಳುವ ಪದ್ಧತಿ ಇದ್ದಿತೆಂದೂ ಶ್ರೀಶೈಲದ ಮಲ್ಲಿಕಾರ್ಜುನ ದೇವಾಲಯದ ಆವರಣದಲ್ಲಿ ಕ್ರಿಶ. ೧೩೭೮ ರಲ್ಲಿ ಅನ್ನವೇಮಾ ರೆಡ್ಡಿ ಮೂವತ್ತೆಂಟು ಸ್ತಂಭಗಳ 'ವೀರ ಶಿರೋ ಮಂಡಪ' ಕಟ್ಟಿಸಿದನೆಂದೂ ಹಾಗೆ ಅಲ್ಲಿ ಅಂಗಾಂಗಗಳನ್ನು ಅರ್ಪಿಸುತ್ತಿದ್ದವರನ್ನು ಏಕಾಂಗವೀರರೆಂದು ಕರೆಯಲಾಗಿದೆ ಎಂದು ತಿಳಿದು ಬರುತ್ತದೆ.[೧] ಇದನ್ನೇ ತಮಿಳುನಾಡಿನಲ್ಲಿ 'ತಲೈಬಲಿ' ಎಂದು ಕರೆಯುತ್ತಿದ್ದಂತೆ ಕಾಣುತ್ತದೆ.

ವೀರಶೈವ ಧರ್ಮ ಆತ್ಮಬಲಿಯನ್ನು ವಿರೋಧಿಸುವುದು ಕಂಡು ಬರುತ್ತದೆ. ಇಷ್ಟಲಿಂಗ ಯಾವುದೇ ಕಾರಣಕ್ಕೆ ಭಿನ್ನವಾದರೆ ಅಥವಾ ಕಳೆದು ಹೋದರೆ ಪ್ರಾಣ ಕಳೆದುಕೊಳ್ಳುವ ಪದ್ಧತಿ ಬಸವಪೂರ್ವ ಸಮಾಜದಲ್ಲಿ ಪ್ರಚಲಿತವಿದ್ದಂತೆ ಕಂಡು ಬರುತ್ತದೆ. ಬಸವಣ್ಣನವರ ಸಮಕಾಲೀನರು ಈ ಪದ್ಧತಿಯನ್ನು ಉಗ್ರವಾಗಿಯೇ ವಿರೋಧಿಸಿದ್ದಾರೆ. ಕೊಂಡಗುಳಿ ಕೇಶಿರಾಜನು ನದಿಯ ತೀರದಲ್ಲೊಮ್ಮೆ ಲಿಂಗಪೂಜೆಯನ್ನು ಕೈಗೊಳ್ಳುವಾಗ ಒಂದು ಗರುಡ ಆ ಲಿಂಗವನ್ನು ಕಚ್ಚಿಕೊಂಡು ಹೋಗಿ ನದಿಯಲ್ಲಿ ಹಾಕಿದಾಗ ಅವನು ಆತ್ಮಬಲಿಗೆ ಮುಂದಾಗಲು, ಶರಣರು ಅವನನ್ನು ತಡೆದು ಲಿಂಗವನ್ನು ಹುಡುಕೋಣವೆಂದೂ ದೊರೆಯದಿದ್ದರೆ ತಿಳಿದ ಹಾಗೆ ಮಾಡಬೇಕೆಂದೂ ಹೇಳುತ್ತಾರೆ. ಅನಂತರ ಲಿಂಗವು ದೊರೆಯುತ್ತದೆ. ಇದನ್ನು ಹರಿಹರ ತನ್ನ ಕೇಶಿರಾಜ ದಣ್ಣಾಯಕರ ರಗಳೆಯಲ್ಲಿ ನಿರೂಪಿಸಿದ್ದಾನೆ.[೨] ಆದರೆ ಬಹುತೇಕ ವಚನಕಾರರೆಲ್ಲರೂ ಲಿಂಗವು ಭಿನ್ನವಾದರೆ, ಕೆಳಗೆ ಬಿದ್ದರೆ, ಕಳೆದು ಹೋದರೆ ಪ್ರಾಣವನ್ನು ಕಳೆದುಕೊಳ್ಳಬೇಕಿಲ್ಲವೆಂದು ಹೇಳಿದ್ದಾರೆ.[೩] ಚನ್ನ ಬಸವಣ್ಣನು ಕೆಳಗೆ ಬಿದ್ದ ಲಿಂಗವನ್ನು ಎತ್ತಿಕೊಂಡು 'ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವುದೆ ವ್ರತವು' ಎಂದು ಹೇಳಿದ್ದಾನೆ.[೪] ಹೀಗೆ ಮಾಡದೆ 'ಸಮಾಧಿ ದುರ್ಮರಣ ಮಾಡಿಕೊಂಡೆಹೆನೆಂದು ಪರಿವಡೆ ಮಹಾಪಾತಕ ನಾಯಕ ನರಕ' ಎಂದಿದ್ದಾನೆ.[೫] ಸಿದ್ಧರಾಮನು ತನ್ನ ಒಂದು ವಚನದಲ್ಲಿ 'ಲಿಂಗ ಹೋಯಿತ್ತೆಂದು ಅಂಗವ ಬಿಡುವವನ ನೋಡಿ ಎನ್ನಂಗ ನಡುಗಿತ್ತಯ್ಯ'[೬] ಎಂದಿದ್ದಾನೆ. ಎಸ್. ವಿದ್ಯಾಶಂಕರ ಅವರು, ವಚನಕಾರರು 'ತಮ್ಮ ಸಮಕಾಲೀನ ಸಮಾಜದಲ್ಲಿ ನಿಷ್ಠೆಯ ಹೆಸರಿನಲ್ಲಿ ದೇಹತ್ಯಾಗವನ್ನು ನಾನಾ ಪ್ರಕಾರಗಳಲ್ಲಿ ಮಾಡುತ್ತಿದ್ದುದನ್ನು ಪ್ರತ್ಯಕ್ಷವಾಗಿ ಕಂಡು ಆ ಅಮಾನವೀಯ ಕೃತ್ಯದ ಬಗೆಗೆ ಹೇಸಿ ಅತ್ಯಂತ ತೀಕ್ಷ್ಣವಾಗಿ ಅದನ್ನು ಖಂಡಿಸಿದರು'[೭] ಎಂದು ಅಭಿಪ್ರಾಯಪಟ್ಟಿದ್ದಾರೆ.

---

೧. M. L. K. Murthy : 'Memorial Stones In Andra Pradesh' Memorial Stones ಪು. ೨೧೫.
ಆರ್. ಶೇಷಶಾಸ್ತ್ರಿ : ಕರ್ನಾಟಕದ ವೀರಗಲ್ಲುಗಳು, ಪು. ೩೭.

೨. ಕೇಶಿರಾಜ ದಣ್ಣಾಯಕರ ರಗಳೆ. ನೂತನ ಪುರಾತನರ ರಗಳೆಗಳು, ಪು. ೧೯೭.

೩. ಲಿಂಗವು ಭಿನ್ನವಾದಾಗ, ಬಿದ್ದಾಗ, ಕಳುವಾದಾಗ, ಪೀಠದಿಂದ ಬೇರೆಯಾದಾಗ ಪ್ರಾಣ ತೊರೆಯಬೇಕೆಂಬ ಅಭಿಪ್ರಾಯವನ್ನು ಅಮುಗೆರಾಯಮ್ಮನೆಂಬ ವಚನಕಾರ್ತಿ ಅನುಮೋದಿಸುತ್ತಾಳೆ. ಪಿ.ವಿ. ನಾರಾಯಣ : ವಚನ ಸಾಹಿತ್ಯ -ಒಂದು ಸಾಂಸ್ಕೃತಿಕ ಅಧ್ಯಯನ, ಪು. ೪೧೧.

೪. ಚಬವ, ೯೧೩.

೫. ಅದೇ, ೪೮೨.

೬. ಸಿರಾವ, ೧೦೦೯.

೭. ಎಸ್. ವಿದ್ಯಾಶಂಕರ : 'ವಚನಕಾರರು ಹಾಗೂ ಆತ್ಮಬಲಿ' ವಚನಾನುಶೀಲನ, ಪು. ೪೨೫-೪೩೫.

ಧಾರ್ಮಿಕ ಬಲಿದಾನದ ದೃಷ್ಟಿಯಿಂದ ನೋಡಿದರೆ, ಜೈನ ಧರ್ಮಾನುಯಾಯಿಗಳು ಹೆಚ್ಚು ಸಂಖ್ಯೆಯಲ್ಲಿ ಆತ್ಮಬಲಿಯನ್ನು ಅನುಸರಿಸಿರುವುದು ಕಂಡುಬರುತ್ತದೆ. ಜೀವನ ವೈರಾಗ್ಯವನ್ನು ಅತ್ಯಂತ ಪ್ರಬಲವಾಗಿ ಪ್ರತಿಪಾದಿಸಿದ ಆ ಧರ್ಮ ಧಾರ್ಮಿಕ ಬಲಿದಾನಗಳಿಗೆ ಹೆಚ್ಚು ಬೆಂಬಲ, ಪ್ರೋತ್ಸಾಹ ನೀಡಿದೆ. ಈ ರೀತಿಯ ದೇಹತ್ಯಾಗದಿಂದ ಪರಲೋಕದಲ್ಲಿ ಸದ್ಗತಿ, ಸ್ವರ್ಗಸುಖ ಅಥವಾ ಮೋಕ್ಷ ದೊರೆಯುವುದೆಂಬ ಭಾವನೆಯೇ ಅನೇಕರಲ್ಲಿ ಆ ಕಡೆಗೆ ಮನಸ್ಸು ಹರಿಯಲು ಪ್ರೇರೇಪಿಸಿರಬೇಕು. ಆದರೆ ಉಳಿದ ಧರ್ಮಗಳು ಯಾವುವೂ ವೈರಾಗ್ಯವನ್ನು ಆ ಧರ್ಮದಷ್ಟು ತೀವ್ರವಾಗಿ ತಮ್ಮ ಧಾರ್ಮಿಕ ತತ್ವಗಳಲ್ಲಿ ಅಳವಡಿಸಿಕೊಂಡಿಲ್ಲ. ಆ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಗೆ ಬಂದ ವೀರಶೈವವೂ ಧಾರ್ಮಿಕ ಬಲಿದಾನವನ್ನು ಸಂಪೂರ್ಣವಾಗಿ ನಿರಾಕರಿಸಿದ್ದನ್ನು ಈಗಾಗಲೇ ಗುರುತಿಸಲಾಗಿದೆ.

**ಲೌಕಿಕ ಆತ್ಮಬಲಿಗಳು:**

ಪರಮಾತ್ಮನ ಬಗ್ಗೆ ಭಕ್ತರು ಅಚಲವಾದ ನಿಷ್ಠೆಯನ್ನು ಹೇಗೆ ಪ್ರಕಟಪಡಿಸುತ್ತಿದ್ದರೋ ಅದೇ ರೀತಿಯಲ್ಲಿ ರಾಜನ ಬಗ್ಗೆ ಒಡೆಯರ ಬಗ್ಗೆ ಕೆಲವು ವೀರರು, ಸೇವಕರು ಅತ್ಯುಗ್ರವಾದ ನಿಷ್ಠೆಯನ್ನು ಪ್ರಕಟಿಸುತ್ತಿದ್ದರು. ರಾಜರು ಪ್ರತ್ಯಕ್ಷದೇವರೆಂದೇ ನಂಬಿದ್ದ, ಭಾವಿಸುತ್ತಿದ್ದ ಕಾಲ ಅದಾಗಿತ್ತು. ರಾಜರನ್ನು ಪರಮಾತ್ಮನ ಅವತಾರವೆಂದೂ ಅಥವಾ ದೈವಾಂಶ ಸಂಭೂತರೆಂದೂ ನಂಬುತ್ತಿದ್ದಂತಹ ಹಿನ್ನೆಲೆಯಲ್ಲಿ ಶಾಸನಗಳು ರಾಜರನ್ನು ಅವತಾರಗಳ ಹಿನ್ನೆಲೆಯಲ್ಲಿ ವರ್ಣಿಸುವುದುಂಟು.[೧] ರಾಜ ಅಥವಾ ಒಡೆಯ ಮರಣಹೊಂದಿ ಪರಲೋಕಕ್ಕೆ ಹೋದರೆ ಅಲ್ಲಿಯೂ ಅವನನ್ನು ಹಿಂಬಾಲಿಸಿ ಸೇವೆ ಸಲ್ಲಿಸುವ ನಿಷ್ಠೆ ಇದಕ್ಕೆ ಹಿನ್ನೆಲೆಯೆಂದು ಭಾವಿಸಬಹುದು. ಹೀಗೆ ರಾಜರಿಗೆ ಅಥವಾ ಒಡೆಯರಿಗೆ ಮರಣ ಉಂಟಾದಾಗ ಅವರೊಂದಿಗೆ ತಾವು ಚಿತೆ ಏರುವ, ಆತ್ಮಬಲಿ ಮಾಡಿಕೊಳ್ಳುವ ಪದ್ಧತಿ ಬೇರೆ ಬೇರೆ ದೇಶಗಳಲ್ಲಿ ಪ್ರಚಲಿತವಿದ್ದಂತೆ ಕರ್ನಾಟಕದಲ್ಲಿಯೂ ಪ್ರಾಚೀನ ಕಾಲದಿಂದ ರೂಢಿಯಲ್ಲಿದ್ದಿತು. ಈ ಪದ್ಧತಿಯನ್ನು ಶಾಸನಗಳು ಕೀಟ್ಟುಂಟೆ, ವೇಳೆವಾಳಿ, ಲೆಂಕ, ಗರುಡ ಮುಂತಾದ ಹೆಸರುಗಳಿಂದ ಗುರುತಿಸಿರುವುದನ್ನು ಕಾಣುತ್ತೇವೆ. ಒಡೆಯನಿಗೆ ಸೇವಕ ತನ್ನ ನಿಷ್ಠೆಯನ್ನು ಹೇಗೆ ಈ ಪದ್ಧತಿಗಳಲ್ಲಿ ಪ್ರಕಟಿಸುತ್ತಿದ್ದನೋ ಅದೇ ರೀತಿಯಲ್ಲಿ ಪತಿಯ ವಿಷಯದಲ್ಲಿ ಸತಿಯೂ ನಿಷ್ಠೆಯನ್ನು ಪ್ರಕಟಿಸಿ ಪತಿಯ ಮರಣಾನಂತರ ಆತ್ಮಬಲಿದಾನವನ್ನು ಮಾಡುವ ಪದ್ಧತಿ ಪ್ರಚಲಿತವಾಗಿದ್ದಿತು. ಅದನ್ನು ಸತಿ, ಸಹಗಮನ ಮುಂತಾದ ಹೆಸರುಗಳಿಂದ ಕರೆದಿರುತ್ತಾರೆ.

'ಕೀಟ್ಟುಂಟೆ'ಯಲ್ಲಿ 'ಕೀಟ್' ಎನ್ನುವುದು ಕೆಳಗೆ ಎನ್ನುವುದು ಸೂಚಿಸುವುದು. ಕುಂಠೆ ಎಂಬುದು ಈಗಿನ ಕುಣೆ (=ಗುಂಡಿ)ಯನ್ನು ಸೂಚಿಸುತ್ತದೆ. 'ಕೀಟ್ಟುಂಠೆಯಾದಂ' ಎಂದರೆ ತನ್ನ ಒಡೆಯನ ಚಿತೆಯ ಕೆಳಗೆ ಅಥವಾ ಸಮಾಧಿಯ ಕೆಳಗೆ ಹೂಳಲ್ಪಟ್ಟನು ಎಂದು ರೈಸ್ ಅವರು ಅರ್ಥ ಮಾಡಿದ್ದಾರೆ.[೨] ಕೀಟ್ಟುಂಟೆ ಪದ ಕ್ರಿಶ. ೯೭೭ ರ ಕಲುಗೋಡ ಶಾಸನದ ನಂತರ ಬಳಕೆಯಾಗಿಲ್ಲ.[೩]

**ವೇಳೆವಾಳಿ:**

ಒಡೆಯನ ಬಗ್ಗೆ ಸೇವಕನು ತೋರಿಸುವ ಭಕ್ತಿ ಗೌರವಗಳ ಪರಾಕಾಷ್ಠೆಯನ್ನು ಇದರಲ್ಲಿಯೂ ಕಾಣಬಹುದು. ತಮಗೆ ಅನ್ನವನ್ನು ಕೊಟ್ಟು ಸಲಹಿದ ಒಡೆಯ ಯಾವುದೇ ಕಾರಣಕ್ಕೆ ಮರಣ ಹೊಂದಿದರೆ ತಾವೂ ಮಡಿಯುವುದರ ಮೂಲಕ ನಿಷ್ಠೆಯನ್ನು ಪ್ರಕಟಪಡಿಸುತ್ತಿದ್ದರು. ಇವರು ಒಡೆಯ ಮಡಿದ ತಕ್ಷಣ ಮಡಿಯುವ ಪ್ರತಿಜ್ಞೆಯನ್ನು ಮಾಡಿರುತ್ತಿದ್ದರು. ವೇಳೆಗೊಳ್ಳುವ ಈ ಸಂಪ್ರದಾಯ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿರುವುದು ಕಂಡುಬರುತ್ತದೆ.

---

೧. (ರೈ) ಎಕ V ಹಾಸನ ೫೩ ಕ್ರಿ.ಶ. ೧೧೭೦.

೨. ಎಂ. ಚಿದಾನಂದಮೂರ್ತಿ, ಕಶಾಸಾಂಅ, ಪು. ೩೧೩.

೩. ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು. ೫೬.

ರಾಜರು ಅಥವಾ ರಾಜಪ್ರಮುಖರು ಮರಣ ಹೊಂದಿದಾಗ ಅವರಿಗೆ ಪ್ರಿಯವಾದ ವಸ್ತುಗಳೆಲ್ಲವನ್ನೂ ಅವರೊಂದಿಗೆ ಹೂಳುವ ಪದ್ಧತಿ ಇದ್ದಿತು. ಬೇಬಿಲೋನಿಯದ ಸಂಸ್ಕೃತಿಯಲ್ಲಿಯೂ ರಾಜ ಅಥವಾ ಹಿರಿಯ ಅಧಿಕಾರಿಯೊಂದಿಗೆ ಅವನಿಗೆ ಪ್ರಿಯವಾದ ವಸ್ತುಗಳನ್ನು ಹೂಳುವ ಪದ್ಧತಿ ಇದ್ದಿತು. ಆ ಬಗೆಯ ಮೂರು ಸಮಾಧಿಗಳನ್ನು ಅಗೆದಾಗ ಬಹು ಕುತೂಹಲಕರ ಅಂಶಗಳು ಹೊರಬಂದಿವೆ. ಒಂದು ಸಮಾಧಿಯಲ್ಲಿ (ಒಬ್ಬ ಹೆಣ್ಣಿನ ಸಮಾಧಿ) ಎರಡು ಚಿನ್ನದ ಕಠಾರಿಗಳು, ಶಾಸನ ಸಹಿತವಾದ ಒಂದು ಕೋನಾಕೃತಿಯ ವಸ್ತು ಇವೆ. ಆ ಸಮಾಧಿಯಲ್ಲಿ ಒಟ್ಟು ಐದು ವ್ಯಕ್ತಿಗಳ ಅವಶೇಷಗಳಿದ್ದು ಅವುಗಳಲ್ಲಿ ನಾಲ್ಕು ಸೇವಕರದು, ಒಂದು ಹೆಂಗಸಿನದು. ಆ ಹೆಂಗಸು ತಲೆಗೆ ಚಿನ್ನದ ಶಿರೋಭೂಷಣವನ್ನು ಧರಿಸಿದ್ದಾಳೆ ಮತ್ತು ಅಲಂಕೃತ ಬಂಗಾರದ ಲೋಟವನ್ನು ಕೈಯಲ್ಲಿ ಹಿಡಿದಿದ್ದಾಳೆ.[೧] ರಾಜನ ಮರಣಾನಂತರ ಭಾರತದಲ್ಲಿಯೂ ರಾಜನ ಅಂಗರಕ್ಷಕರು ಮರಣ ಹೊಂದುತ್ತಿದ್ದುದನ್ನು ವಿದೇಶಿ ಪ್ರವಾಸಿಗನಾದ ಮಾರ್ಕೊಪೋಲೊ ಕೂಡ ಹೇಳಿದ್ದಾನೆ.[೨]

ವೇಳೆವಾಳಿಯ ನಿಷ್ಪತ್ತಿ ತೊಡಕಿನದಾಗಿದೆ. ಎಂ. ಚಿದಾನಂದ ಮೂರ್ತಿಯವರು ವೇಳೆವಾೞ್ (ಈ ರೂಪವೇ ಮೂಲವಿರಬೇಕೆಂದು ಭಾವಿಸುತ್ತಾರೆ) ವೇಳೆ + ಪಾೞ್: ವೇಳೆ ಎಂದರೆ ಸಮಯ, ಆಪತ್ತು. ಪಾೞ್ = ಧರ್ಮ, ಕರ್ತವ್ಯವೆಂದು ಅರ್ಥೈಸಿ ರಾಜನ ಸಾವಿನ ಸಮಯದಲ್ಲಿ ತನ್ನ ಕರ್ತವ್ಯವನ್ನು ನಡೆಸುವವನು ಎಂದು ಅರ್ಥವನ್ನು ಹೇಳಿದ್ದಾರೆ.[೩] ಎಂ. ಎಂ. ಕಲಬುರ್ಗಿಯವರು ವೇಳೆವಾಳಿ ಸಾಧು ರೂಪವಲ್ಲವೆಂದೂ ಅದು ವೇಳವಾಳಿಯೆಂದೂ ವೇಳದ ಪ್ರಕೃತಿ ರೂಪ ಬೇಳ್ (ಸುಡು)ದಿಂದ ರೂಪುಗೊಂಡು, ಅದು ವೇಳ + ವಳ = ವೇಳ್ವಳ = ವೇಳವಳ ರೂಪ ರೂಢಗೊಂಡು, ಇದರ ಭಾವನಾಮ ವೇಳವಳಿಯಾಗಿ ಕೊನೆಗೆ ಜೋಳವಾೞಿಯ ಅನುಕರಣೆಯಿಂದ ವೇಳವಾಳಿ ರೂಪಗೊಂಡು, ಈ ಪದದ ಅಪರಿಚಿತತೆಯಿಂದಾಗಿ ಆಮೇಲೆ ವೇಳೆವಾಳಿಯೆಂಬುದು ಚಲಾವಣೆಗೆ ಬಂದಿರಬಹುದು ಎಂದು ಭಾವಿಸುತ್ತಾರೆ.[೪] ಇದು ಬಳಸುದಾರಿಯ ನಿಷ್ಪತ್ತಿಯಾದಂತಿದೆ. ಅಲ್ಲದೆ ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ 'ವೇಳೆವಾಳಿ'ಯೇ ಅಧಿಕವಾಗಿ ಪ್ರಯೋಗವಾಗಿರುವ ರೂಪವಾಗಿದೆ. ವೇಳೆವಾಳಿ ಪದ ಪ್ರಯೋಗ ಸುಮಾರು ಹನ್ನೆರಡನೆಯ ಶತಮಾನದ ಹೊತ್ತಿಗೆ ಕಡಮೆಯಾಗುತ್ತ ಲೆಂಕ ಪದ್ಧತಿಗೆ ದಾರಿಮಾಡಿಕೊಟ್ಟಂತೆ ಕಂಡುಬರುತ್ತದೆ.

ಕ್ರಿ.ಶ. ೧೧೫೦ ರ ಇಂಟಿತೊಳಲಿನ ಶಾಸನದಲ್ಲಿ ನಾರಸಿಂಹನ ಪಟ್ಟದರಸಿ ಬಮ್ಮಲದೇವಿ ಸ್ವರ್ಗಸ್ಥೆಯಾಗಲು 'ಸಿರಿವಳಲ ಚಾಕ ಗಾಉಡ ಜೋಳವಾಳಿಗಂ ವಾ(ವೇ)ಳೆವಾಳಿಗಂ ಸುರಲೋಕ ಪ್ರಾಪ್ತನಾಗಲು' ಅವನ ಮಗ ಅಣ್ಣಗೌಡ ಆಯಿತ ಗೌಡ ಚಾಗಿಗೌರು ಪರೋಕ್ಷ ವಿನಯದಿಂದ ಕಲ್ಲುಮಾಡಿಸಿದ್ದಾಗಿ ತಿಳಿದು ಬರುತ್ತದೆ.[೫] ಈ ಶಾಸನ ಚಾಕಗೌಡನ ಕರ್ತವ್ಯವನ್ನು ಹೇಳುವಾಗ 'ಜೋಳವಾಳಿಗಂ ವಾ(ವೇ)ಳೆವಾಳಿಗಂ' ಎಂಬ ಮಾತನ್ನು ಬಳಸುವುದು ಗಮನಾರ್ಹವಾಗಿದೆ. ಜೋಳವಾಳಿ ಎನ್ನುವವನು ಒಡೆಯನ ಅನ್ನದ ಋಣಪ್ರಜ್ಞೆಯನ್ನು ಇಟ್ಟುಕೊಂಡು ಒಡೆಯನ ಪರವಾಗಿ ನಿಷ್ಠೆಯಿಂದ ಹೋರಾಡುತ್ತಿದ್ದ ಯೋಧ. (ಹಿಂದಿನ ಅಧ್ಯಾಯದಲ್ಲಿ ಈ ವೀರರ ಬಗ್ಗೆ ಗಮನಿಸಲಾಗಿದೆ) ಚಾಕಗೌಡ ಜೋಳವಾಳಿಯಾಗಿದ್ದಂತೆ ರಾಣಿಯ ವಿಷಯದಲ್ಲಿ ವೇಳೆವಾಳಿಯಾಗಿ ಪ್ರತಿಜ್ಞೆಮಾಡಿದ್ದವನೆಂದು ಕಂಡುಬರುತ್ತದೆ.

---

೧. B. A.Saletore : Karnatakas Trans- oceanic contacts. ಪು. ೩೯.

೨. ಪ್ರ.ಕ.೫೦. II ಪು. ೨೬.

೩. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೩೧೨-೩೧೩.

೪. ಎಂ.ಎಂ. ಕಲಬುರ್ಗಿ ಪೂರ್ವೋಕ್ತ, ೫೨-೫೩.

೫. ಎಂಎಆರ್ ೧೯೩೬ ಬೇಲೂರು ೨೨ ಕ್ರಿ.ಶ. ೧೧೫೦.

‘ಶಿವೋದಯನಾಯಕನ ಅವ್ವೆ ಹೊನ್ನವ್ವೆ ನಾಯಕಿತಿ ಸ್ವರ್ಗಸ್ಥೆಯಾಗಲು ಮಲೆಯ... ಕಿತ್ತಿ ಹೊಂನಿ ಸಿಡಿತಲೆಯಗೊಟ್ಟು ಸುರಲೋಕ ಪ್ರಾಪ್ತಿಯಾದಲಿ...’ ಎಂದು ಒಂದು ಶಾಸನ[೧]ದಲ್ಲಿ ಬರುತ್ತದೆ. ಶಿವೋದಯನಾಯಕನೆಂಬ ಅಧಿಕಾರಿಯ ತಾಯಿಯ ಮರಣಕ್ಕಾಗಿ ಹೊನ್ನಿ ಎಂಬುವವಳು ಸಿಡಿತಲೆಗೊಟ್ಟ[೨] ವಿಷಯವನ್ನು ಹೇಳುವ ಈ ಶಾಸನ ಹೆಣ್ಣಿನ ಮರಣಕ್ಕಾಗಿ ಹೆಣ್ಣೊಬ್ಬಳು ಆತ್ಮಬಲಿಯಾದ ವಿರಳ ನಿದರ್ಶನವಾಗಿದೆ. ಈ ಶಾಸನದಲ್ಲಿ ವೇಳೆವಾಳಿ ಎಂಬ ಪದ ಬಳಕೆಯಾಗದೆ ಹೋಗಿದ್ದರೂ ಸನ್ನಿವೇಶದಿಂದ ಅದೇ ಎಂದು ಗ್ರಹಿಸಬಹುದು.

ಮಹಾಮಂಡಳೇಶ್ವರ ಸೋವಿದೇವನ ಅರಸಿ ಲಚ್ಚಲದೇವಿ ಮರಣಹೊಂದಲು ವೇಳೆವಾಳಿ ಬೊಪ್ಪಣನು ಮಡಿದನೆಂದು ಬಂದಳಿಕೆಯ ಶಾಸನವೊಂದು ತಿಳಿಸುತ್ತದೆ.[೩]

ವೇಳೆವಾಳಿಯ ಉಲ್ಲೇಖ ಶಾಸನಗಳಲ್ಲಿ ಬಂದಂತೆ ಅನೇಕ ಸಾಹಿತ್ಯ ಕೃತಿಗಳಲ್ಲಿ ಬಂದಿದೆ. ವಡ್ಡಾರಾಧನೆ, ಪಂಪಭಾರತ, ಜೀವಸಂಬೋಧನೆಗಳಲ್ಲಿ ವೇಳೆಯ ಉಲ್ಲೇಖಗಳು ಬಂದಿವೆ. ಬಸವಣ್ಣನವರ ವಚನವೊಂದರಲ್ಲಿ ‘ಜೋಳವಾಳಿಯಾನಲ್ಲ ವೇಳೆವಾಳಿಯವ ನಾನಯ್ಯ’ ಎಂಬ ಮಾತು ಬರುತ್ತದೆ.[೪] ಲೌಕಿಕ ಕ್ಷೇತ್ರದ ಒಡೆಯ ಸೇವಕರ ಪರಿಭಾಷೆಯನ್ನು ಧಾರ್ಮಿಕ ಕ್ಷೇತ್ರಕ್ಕೆ ಅನ್ವಯ ಮಾಡಿಕೊಂಡು, ತಾನು ಕೇವಲ ಅನ್ನದ ಋಣದ ಸೇವಕನಲ್ಲವೆಂದೂ ಪರಮಾತ್ಮನನ್ನು ಅತ್ಯುಚ್ಚ ಒಡೆಯನೆಂದು ಭಾವಿಸುತ್ತ ವೇಳೆವಾಳಿಯಂತೆ ತಾನು ಉನ್ನತ ನಿಷ್ಠೆಯವನು ಎಂದು ಹೇಳುವುದನ್ನು ಸೂಚಿಸುತ್ತದೆ.

ವೇಳೆವಾಳಿಗಳು ನಿಷ್ಠಾವಂತ ಸೇವಕರಾಗಿದ್ದರು. ಯಾರಿಗೆ ವೇಳೆಗೊಂಡಿರುತ್ತಿದ್ದರೋ ಅವರು ಮರಣ ಹೊಂದಿದ ನಂತರ ಆತ್ಮಬಲಿಯನ್ನು ಮಾಡಿಕೊಳ್ಳುತ್ತಿದ್ದರು. ಆದರೆ ಒಂದು ಶಾಸನದಲ್ಲಿ ‘ಬೀರವಡಿ ಸಬಳಿಯ ಅಬ್ಬಲ ಪನಾ.. ರಿತಿಗಂ ಪುಟ್ಟಿದ ಸುಪುತ್ರಂ ಬೀರವಡಿ (ಚ)ನ್ದಯ್ಯ ವೇಳವಾಳಿಗೆ ತಪ್ಪಿದಡೆ ದಾ... ತಪ್ಪುಗೊಂಡ ಜೋಳ ಬಾಳು ಅರಸರ್ಗೆ ವೇಳವಾಳಿಯ ಬಂಟರ್ತ್ತನ್ನೆಯ...’[೫] ಎಂದು ಬರುತ್ತದೆ. ತ್ರುಟಿತವಾದ ಈ ಶಾಸನದಿಂದ ಚಂದಯ್ಯನೆಂಬುವನು ವೇಳೆವಾಳಿಗೆ ಬಹುಶಃ ತಪ್ಪಿ ನಡೆದು ದಂಡವನ್ನು ತೆತ್ತ ಉಲ್ಲೇಖವಿದ್ದಂತಿದೆ. ಇದು ಅತ್ಯಂತ ವಿರಳ ಉದಾಹರಣೆಯಾಗಿದೆ.

**ಲೆಂಕರು : ಗರುಡರು:**

ಸುಮಾರು ಹನ್ನೊಂದನೆಯ ಶತಮಾನದನಂತರ ಆತ್ಮಬಲಿಗೆ ಲೆಂಕ, ಗರುಡ ಪದಗಳು ಹೆಚ್ಚು ಪ್ರಚಾರಕ್ಕೆ ಬಂದಂತಿವೆ. ಇವು ವೇಳೆವಾಳಿ ಸಂಪ್ರದಾಯದಿಂದ ಕೆಲವು ಅಂಶಗಳ ಭಿನ್ನತೆಯುಳ್ಳ ಮುಂದುವರಿಕೆಯೆಂದು ಭಾವಿಸಬಹುದು. ಎಂ. ಚಿದಾನಂದ ಮೂರ್ತಿಯವರು (ಇಳ ಅಥವಾ ಎಳ = ಎಳೆಯದು ಎಂಬ ಮೂಲದಿಂದ ಸೂಚಿಸಿ, ತಮಿಳಿನ ಇಳುಕು = ಚಿಗುರು ಎಂದಿರುವ ಅರ್ಥವನ್ನು ಪರಿಶೀಲಿಸಿ) ಲೆಂಕ ಎಂದರೆ ಯುವಕ ಸೈನಿಕ ಎಂದು ಅರ್ಥೈಸಿದ್ದಾರೆ.[೬] ಲೆಂಕರು ತಮ್ಮ ಆಳರಸರ ಪರವಾಗಿ ನಿಂತು ಹೋರಾಡಿರುವುದಕ್ಕೆ ಅನೇಕ ಶಾಸನಗಳಲ್ಲಿ ನಿದರ್ಶನಗಳಿವೆ.

---

೧. (ರೈ) ಎಕ XI ಮೊಳಕಾಲ್ಮೂರು ೧೨ ಕ್ರಿ.ಶ. ೧೨೧೫(?).

೨. ‘ಸಿಡಿತಲೆ’ ಎನ್ನುವುದು ಆತ್ಮಬಲಿಯಲ್ಲಿ ರುಂಡವನ್ನು ಹಾರಿಸಿಕೊಳ್ಳುವ ವಿಧಾನಗಳಲ್ಲಿ ಒಂದು. ಮರದ ಕೊಂಬೆ ಅಥವಾ ನೆಟ್ಟ ಗಳುವಿನ ತುದಿಯನ್ನು ಬಾಗಿಸಿ ಆತ್ಮಬಲಿಯಾಗಬೇಕಾದವನ ತಲೆಗೂದಲಿಗೆ ಕಟ್ಟಿ ಕತ್ತಿಯಿಂದ ತಲೆಯನ್ನು ಕತ್ತರಿಸಿದರೆ ಅದು ಚಂಗನೆ ಸಿಡಿಯುತ್ತದೆ. ಹಳ್ಳಿಗಳಲ್ಲಿ ಹರಕೆಯ ಭಾಗವಾಗಿ ಸಿಡಿಯಾಡುವ ಸಂಪ್ರದಾಯವಿರುವುದಾದರೂ ಇದು ಪ್ರಾಣಾಪಾಯ ತರುವಂತಹದಲ್ಲ. ನೋಡಿ: ಕಶಾಸಾಂಅ, ಪು. ೩೦೧ ಅಡಿಟಿಪ್ಪಣಿ ೧೪.

೩. (ರೈ) ಎಕ VII ಶಿಕಾರಿಪುರ ೨೪೯ ಕ್ರಿ.ಶ. ೧೧೮೫.

೪. ಬ.ವ. ೬೯೮.

೫. ತುನಾಶಾ I ಮಂಗಳೂರು ೩೦ ಕ್ರಿ.ಶ. ೧೧ನೆಯ ಶತಮಾನದ ಉತ್ತರಾರ್ಧ.

೬. ಕಶಾಸಾಂಅ, ಪು. ೨೬೮.

ಲೆಂಕರು ವೇಳೆವಾಳಿಗಳಂತೆ ಒಡೆಯರ ಮರಣಾನಂತರ ಆತ್ಮ ಬಲಿ ನೀಡಿ ತಮ್ಮ ಸ್ವಾಮಿನಿಷ್ಠೆಯನ್ನು ಪ್ರಕಟಪಡಿಸುತ್ತಿದ್ದರು. ಮಹಾಪ್ರಧಾನ ಬಲವೆಗ್ಗಡೆಯ ಮಗ 'ಬಿದ್ದರಸನು ಸುರಲೋಕಪ್ರಾಪ್ತನಾಗಲು ಲೆಂಕವಳಿಯಲ್ಲಿ ವೀರತನಂ ತನಗೆಸಿಸಿ ಬೀರಡೊಂಗಿನ ಬಸವಂ ಕೊಟ್ಟು ಪಡೆದಂ ಸಗ್ಗದ ಸುಖವನು' ಎಂದು ಒಂದು ಶಾಸನದಲ್ಲಿ ಬರುತ್ತದೆ.[೧]

ಲೆಂಕರು ಅನೇಕ ಸಾಮಾಜಿಕ ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗಿಗಳಾಗಿದ್ದರೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಕಟಿಲೇಶ್ವರ ದೇವರ ಅಂಗಭೋಗ ಮತ್ತು ಸತ್ರಕ್ಕೆ ಕಾರಿಗಿತ್ತಿಯ ಅಜುವರು ಗಾವುಂಡರು ಲೆಂಕರು ಮುಖ್ಯವಾಗಿ ಭೂಮಿದಾನವನ್ನು ಮಾಡಿದ ವಿಷಯ ತಿಳಿದು ಬರುತ್ತದೆ.[೨] ಮೇಷ ಪಾಷಾಣ ಗಚ್ಛದ ಬಸದಿಯೊಂದಕ್ಕೆ ಅಯ್ಯನ ಬ(ಳ್ವ)ಲೆಂಕ ಮಸಣ ಮಾಡಿಸಿದ ಕಂಬದ ಉಲ್ಲೇಖ ಶಾಸನವೊಂದರಲ್ಲಿ ಬಂದಿದೆ.[೩]

ಕೆಲವು ಶಾಸನಗಳಲ್ಲಿ ಲೆಂಕರು ದಾನಗಳನ್ನು ಸ್ವೀಕರಿಸಿರುವುದು ಕಂಡುಬರುತ್ತದೆ. ಚೂಡಮದೇವರ ಲೆಂಕ ಬೂವಣ್ಣ ಶಿವಪುರವೊಂದರಲ್ಲಿ ದಾನವನ್ನು ಪಡೆದಿದ್ದಾನೆ.[೪] ಲೆಂಕ ಕೇತನಿಗೆ ಗದ್ದೆ ದಾನ ನೀಡಿದ ವಿಷಯ ಶಾಸನವೊಂದರಲ್ಲಿ ಉಕ್ತವಾಗಿದೆ.[೫]

ಅನೇಕ ಶಾಸನಗಳಲ್ಲಿ 'ಲೆಂಕರ ಗಂಡ' ಎಂಬ ಮಾತು ಬಿರುದಿನಂತೆ ವೀರರ ಬಗ್ಗೆ ಬಳಕೆಯಾಗಿದೆ. ಈ ರೀತಿಯ ವಿವರಗಳನ್ನು ಹೇಳುವ ಶಾಸನಗಳಿಂದ ಲೆಂಕರು ಒಡೆಯರಿಗೆ ಕೇವಲ ಪ್ರಾಣಾರ್ಪಣೆ ಮಾಡುವವರಾಗಿರಲಿಲ್ಲ, ಅನೇಕ ಯುದ್ಧಗಳಲ್ಲಿ ಭಾಗವಹಿಸಿ ಹೋರಾಡಿದವರು ಎಂಬುದು ಸ್ಪಷ್ಟವಾಗುತ್ತದೆ. 'ಕೊಳೆಯೂರ ಕೋಟೆಯ ಮುತ್ತಿದ ಹನಸೋಗೆಯ ಮಾದಿಗವುಣ್ಡನ ಪಟ್ಟದ ಮಗ ಕೇತಬೋವನ ಸುಪುತ್ರ ಮಾರಸಿಂಗ ಕೋಟೆಯ ಕೊಂಡು ಆಳವರಿಸಿ ಬಿದ ಕಲ್ಲು॥ಲೆಂಕರ ಗಣ್ಡ'[೬]॥ಎಂದು ಶಾಸನದಲ್ಲಿ ಬರುತ್ತದೆ. ಪ್ರಿಯಪುತ್ರ, ಮನೆಯ ಮಗ ಇದ್ದ ಹಾಗೆ 'ಪಟ್ಟದ ಮಗ'ನೂ ಕೂಡ ಅದೇ ರೀತಿಯ ಅರ್ಥವನ್ನು ಕೊಡುತ್ತದೆ. ಮಾರಸಿಂಗನು ಮಾದಿಗವುಂಡನ 'ಪಟ್ಟದ ಮಗ'ನಾಗಿದ್ದು ಹೋರಾಡಿ ಮಡಿಯುತ್ತಾನೆ. ಕೊನೆಯಲ್ಲಿ ಲೆಂಕರ ಗಂಡ ಎಂದು ಬರುವ ಮಾತು ಅದಕ್ಕೆ ಪೋಷಕವಾಗಿದೆ. ತಳಾರ ಕೇತಮಲ್ಲ ನಾಯಕನು ಮಾಯಿಲೆಯ ಬವರದಲ್ಲಿ ಹೋರಾಡಿ ಮಡಿಯುತ್ತಾನೆ. ಅವನನ್ನು ಮಾತಿಗೆ ತಪ್ಪುವ ಲೆಂಕರ ಗಂಡ ಎಂದು ಕರೆಯಲಾಗಿದೆ.[೭]

ಲೆಂಕರು ವೇಳೆವಾಳಿಗಳಂತೆ ಒಡೆಯನ ಸಾವಿನನಂತರ ಮರಣಕ್ಕೆ ಧಾವಿಸುವವರಾಗಿರದೆ ಕರ್ತವ್ಯ ಪಾಲನೆಗೆ ವಿಶೇಷ ಪ್ರಾಶಸ್ತ್ಯ ಕೊಡುವವರೂ ಆಗಿದ್ದರು. ಮಹಾಮಂಡಲೇಶ್ವರ ಕಾಮದೇವರಸರು ಕೊಲ್ಲಿಗೊಡ್ಡಿಯ ಮೇಲೆ ಆಕ್ರಮಣ ಮಾಡಿದಾಗ ಹೋರಾಟದಲ್ಲಿ ತ್ರಿಭುವನಮಲ್ಲ ಹರಿಮಸೆಟ್ಟಿಯರು ಮಡಿಯಲು ಲೆಂಕ ಕಬ್ಬಿಲ ಚಟ್ಟನು ಹಲವರನ್ನು ಕೊಂದು ಮಡಿಯುತ್ತಾನೆ.[೮] ಇಲ್ಲಿ ಒಡೆಯ ಹರಿಮಸೆಟ್ಟಿ ಯುದ್ಧದಲ್ಲಿ ಮಡಿದಾಗ ಲೆಂಕ ಕಬ್ಬಿಲ ಚಟ್ಟನು ಹೋರಾಟದ ಕರ್ತವ್ಯವನ್ನು ನಿರ್ವಹಿಸಿ ಮಡಿಯುತ್ತಾನೆ.

---

೧. ಎಂಎಆರ್ ೧೯೪೩ ನಗರ ೩೩ ಕ್ರಿ.ಶ. ೧೨-೧೩ ಶಮಾ.

೨. ಎಸ್‌ಐಐ XV ರೋಣ ೧೬೫ ಕ್ರಿ.ಶ. ೧೨೨೦.

೩. ಎಸ್‌ಐಐ XVIII ಹಿರೇಕೆರೂರು ೩೪೫ ಕ್ರಿ.ಶ. ೧೧-೧೨ ಶಮಾ.

೪. (ಮೈ) ಎಕ VII ಮಂಡ್ಯ ೧೩ ಕ್ರಿ.ಶ. ೧೨೮೦.

೫. (ರೈ) ಎಕ XVI ಚಿಕ್ಕನಾಯಕನಹಳ್ಳಿ ೫೮ ಕ್ರಿ.ಶ. ೧೨೬೦.

೬. (ಮೈ) ಎಕ V ಕೃಷ್ಣರಾಜನಗರ ೪೨ ಕ್ರಿ.ಶ. ೧೨ ಶಮಾ. ಪ್ರಸ್ತುತ ಕಾಲದಲ್ಲಿಯೂ ಪರಮಾಪ್ತ ಶಿಷ್ಯ ಎನ್ನುವ ಅರ್ಥದಲ್ಲಿ ಪಟ್ಟ ಶಿಷ್ಯ ಎನ್ನುವ ಪದ ಬಳಕೆಯಲ್ಲಿದೆ.

೭. (ರೈ) ಎಕ VII ಶಿಕಾರಿಪುರ ೧೪೪ ಕ್ರಿ.ಶ. ೧೧೮೧.

೮. ಕಇ IV ಹಿರೇಕೆರೂರು ೪ ಕ್ರಿ.ಶ. ೧೨೦೩.

ಈ ನಿದರ್ಶನಗಳನ್ನು ಗಮನಿಸಿದರೆ ಲೆಂಕರು ವೀರ ಯೋಧರಾಗಿದ್ದು ಒಡೆಯನ ಕಷ್ಟದಲ್ಲಿ, ಅಪಾಯದಲ್ಲಿ ಬೆಂಬಲವಾಗಿ ನಿಂತು ಹೋರಾಡಬಲ್ಲವರಾಗಿದ್ದರು. ಒಡೆಯನ ಮರಣದ ತಕ್ಷಣ ಮರಣಕ್ಕೆ ಹಾತೊರೆಯದೆ ಕರ್ತವ್ಯಪಾಲನೆ ಮಾಡಿ ವೀರಮರಣವನ್ನು ಪಡೆಯುವವರಾಗಿದ್ದರು.

ಕೆಲವು ಶಾಸನಗಳಲ್ಲಿ ಲೆಂಕ ಎಂಬ ಮಾತು ಬಳಕೆಯಾಗದಿದ್ದರೂ ಆತ್ಮಬಲಿ ಮಾಡಿರುವ ನಿದರ್ಶನಗಳು ಇವೆ. ಇವನ್ನು ಆ ಕಾಲದಲ್ಲಿ ಪ್ರಚಲಿತವಿದ್ದ ಲೆಂಕ ಪದ್ಧತಿಗೆ ಒಳಪಟ್ಟವೆಂದು ಭಾವಿಸಬಹುದು. ಆಚಿದೇವನ ಮಡದಿ ಲಖ್ಖಿಲೆ ಮರಣ ಹೊಂದಲು ಕಲಿಮಾಯಿಗ ಮತ್ತು ವೀರ ಖೈಯ್ಯರು ತಲೆಯನ್ನು ಕತ್ತರಿಸಿಕೊಂಡು ಆತ್ಮಬಲಿಯಾದ ವಿಷಯ ತಿಳಿದು ಬರುತ್ತದೆ.[೧] ಇಲ್ಲಿ ಲಖ್ಖಿಲೆಗೆ ಇಬ್ಬರು ಲೆಂಕರಿದ್ದರೆಂಬುದು ತಿಳಿದುಬರುತ್ತದೆ. ತುಂಬಾ ತ್ರುಟಿತವಾದ ಶಾಸನವೊಂದರಲ್ಲಿ ಉತ್ತಮ ಚೋಟಿಸೆಟ್ಟಿ...ಖಡ್ಗದಿಂದ ತಲೆ ಕಡಿಸಿಕೊಂಡು ಸತ್ತ ವಿಷಯ ಶಾಸನವೊಂದರಲ್ಲಿ ತಿಳಿದು ಬರುತ್ತದೆ.[೨] ಆದರೆ ಈ ಆತ್ಮಬಲಿಗೆ ಕಾರಣವೇನೆಂಬುದು ಶಾಸನದಿಂದ ಸ್ಪಷ್ಟವಾಗುವುದಿಲ್ಲ. ಬೆನಕನ ಕೊಂಡದ ಶಾಸನದಿಂದ ಮುಳುಗುಂದದ ಚಟಯನಾಯಕ ತನ್ನ ಮಡದಿಯೊಂದಿಗೆ ತಾನು ಒಡೆಯನಿಗೆ ಕೊಟ್ಟ ಮಾತಿಗಾಗಿ ಮರಣಹೊಂದಿದಂತೆ ತಿಳಿದುಬರುತ್ತದೆ. ಇಲ್ಲಿ ಕೊಟ್ಟ ಭಾಷೆಗಾಗಿ ಮರಣ ಹೊಂದಿದ್ದಕ್ಕೆ ಮೆಚ್ಚಿ ಬೆಳುಗಲಿಯ ಕಮ್ಮಟವನ್ನು ಶಾಶ್ವತವಾಗಿ ಅವನ ಮಕ್ಕಳಿಗೆ ನೀಡಲಾಗಿದೆ.[೩] ಇದು, ಲೆಂಕನಾಗಿ ತನ್ನ ಮಡದಿಯೊಂದಿಗೆ ಮರಣ ಹೊಂದಿದ್ದಕ್ಕೆ ಮೆಚ್ಚುಗೆಯಿಂದ ಪ್ರತಿಫಲದ ಕೊಡುಗೆಯನ್ನು ಪಡೆದ ನಿದರ್ಶನವಾಗಿದೆ.

ಲೆಂಕರು ತಮ್ಮದೇ ಆದ ಸಂಘವನ್ನು ಮಾಡಿಕೊಂಡಿದ್ದರು. ಮೋರಿಗೆರೆಯ ಶಾಸನದಲ್ಲಿ 'ಲೆಂಕ ಸಾಸಿರ್ವರ' ಉಲ್ಲೇಖ ಕಂಡು ಬರುತ್ತದೆ.[೪] ಲೆಂಕರ ಜೀವಿತಕ್ಕೆ ಗ್ರಾಮ ಸಮುದಾಯ ಹಣ ಸಂದಾಯ ಮಾಡುತ್ತಿದ್ದಂತೆ ಕಂಡುಬರುತ್ತದೆ. ಹಾವೇರಿ ತಾಲ್ಲೂಕಿನ ಕಳ್ಳೀಹಾಳದ ಶಾಸನದಲ್ಲಿ ಮಹಾಮಂಡಳೇಶ್ವರ ಕುಂದರಾಜನ ಮಹಾದೇವಿ ಜೋಗಬ್ಬರಸಿಯ ಧರ್ಮಕ್ಕೆ ಲೆಂಕ ಮುಂಜನು ತನ್ನ ತೆಜುಂಯನ್ನು ಬಿಟ್ಟನೆಂದು ಹೇಳಲಾಗಿದೆ.[೫] ಇವರಿಗೆ ಜೀವನಾಂಶವು ತೆರಿಗೆಗಳ ರೂಪದಲ್ಲಿ ಸಲ್ಲುತ್ತಿದ್ದಿತೆಂದು ಭಾವಿಸಲು ಇದರಿಂದ ಅವಕಾಶವಿದೆ.

ಅಗ್ರಹಾರ ಬಾಚಹಳ್ಳಿಯ ಎರಡು ಶಾಸನಗಳು[೬] ಆತ್ಮಬಲಿಯ ಬಗ್ಗೆ ಕೆಲವು ನವೀನ ಅಂಶಗಳನ್ನು ತಿಳಿಸುತ್ತವೆ. ಆ ಶಾಸನಗಳಲ್ಲಿ 'ಅನ್ವಯಾಗತ ಲೆಂಕವಾಳಿ' ಎಂಬ ಮಾತು ಬರುತ್ತದೆ. ಇದು ಸಾಮಾನ್ಯವಾಗಿ ಬಳಕೆಯಾಗುವ ಲೆಂಕ ಪದ್ಧತಿಯಿಂದ ಸ್ವಲ್ಪ ಭಿನ್ನವಾಗಿದೆ. ಲೆಂಕರು ಯಾರಿಗೆ ಭಾಷೆಯನ್ನು ಕೊಟ್ಟಿರುತ್ತಾರೊ ಅವರು ಮಡಿದನಂತರ ತಾವು ಆತ್ಮಬಲಿಯಾಗಿ ತಾವು ಕೊಟ್ಟಿದ್ದ ಭಾಷೆಯನ್ನು ಈಡೇರಿಸಿಕೊಳ್ಳುತ್ತಾರೆ. ಆದರೆ 'ಅನ್ವಯಾಗತ ಲೆಂಕವಾಳಿ'ಯಲ್ಲಿ ಯಾವ ವಂಶಕ್ಕೆ ತಮ್ಮನ್ನು ಅನ್ವಯಾಗತ ಲೆಂಕವಾಳಿ ಎಂದು ಭಾಷೆ ಕೊಟ್ಟಿರುತ್ತಾರೊ ಆ ವಂಶದ ರಾಜರು ಮರಣ ಹೊಂದಿದಾಗ ವಂಶಪಾರಂಪರ್ಯವಾಗಿ

---

೧. ಎಸ್ಐಐ XX ಶಿರಹಟ್ಟಿ ೨೧೭ ಕ್ರಿ.ಶ. ೧೨೫೯.

೨. (ಮೈ) ಎಕ I ಸೋಮವಾರಪೇಟೆ ೮೨ ಕ್ರಿ.ಶ. ೧೧ ಶ.ಮಾ.

೩. ಎಸ್ಐಐ XVIII ರಾಣೆಬೆನ್ನೂರು ೨೬೨ ಕ್ರಿ.ಶ. ೧೨೮೪.

೪. ಎಸ್ಐಐ IX(i) ಹಡಗಲಿ ೧೦೧ ಕ್ರಿ.ಶ. ೧೦೪೫.

೫. ಆರ್.ಎನ್. ಗುರವ : 'ಆಯುಧಜೀವಿಗಳ ಸಂಘಗಳು' ಕಭಾ ೧೦-೧, ಪು. ೨-೫.

೬. (ಮೈ) ಎಕ VI, ಕೃಷ್ಣರಾಜಪೇಟೆ ೮೨, ೮೪ ಕ್ರಿ.ಶ. ೧೨೫೬, ೧೨೯೧. ಈ ಶಾಸನಗಳಿರುವ ಕಂಬಗಳನ್ನು ಸ್ಥಳೀಯರು 'ವ್ಯಾಳಿಕಲ್ಲು' ಎಂದು ಕರೆಯುತ್ತಿರುವುದು ಎಂ. ಚಿದಾನಂದ ಮೂರ್ತಿಯವರ ಗಮನಕ್ಕೆ ಬಂದಿದೆ. ಇದು ವೇಳೆವಾಳಿಯನ್ನು ಸೂಚಿಸುವ ಹಾಗೆ ಕಾಣುತ್ತದೆ. ಇದು ಪರಿಶೀಲನಾರ್ಹವಾಗಿದೆ.

ಆತ್ಮಬಲಿಯಾಗುತ್ತಾ ಹೋಗುವುದು ಕಂಡು ಬರುತ್ತದೆ. ಅಗ್ರಹಾರ ಬಾಚಹಳ್ಳಿಯ ಆ ಎರಡು ಶಾಸನಗಳಲ್ಲಿ ಹೊಯ್ಸಳ ವಂಶಕ್ಕೆ ಕೊಟ್ಟ ಭಾಷೆಯಂತೆ ತಮ್ಮನ್ನು ಅನ್ವಯಾಗತ ಲೆಂಕವಾಳಿಯಾಗಿ ಏಳು ತಲೆಮಾರುಗಳು ತಮ್ಮ ಮಡದಿ ಮತ್ತು ಕೆಲವು ಲೆಂಕ ಲೆಂಕಿತಿಯರೊಂದಿಗೆ ಆತ್ಮ ಬಲಿ ಮಾಡಿಕೊಂಡಿರುವುದು ಕಂಡುಬರುತ್ತದೆ. ಶಾಸನದಲ್ಲಿ ಇದನ್ನು 'ಹೊಯ್ಸಳ ಲೆಂಕವಾಳಿಯಂ'[1] ಎಂದು ಕರೆದಿರುವುದು ಗಮನಾರ್ಹವಾಗಿದೆ.

ಅಗ್ರಹಾರ ಬಾಚಹಳ್ಳಿಯ ಎರಡು ಶಾಸನಗಳಿಂದ ಹೊಯ್ಸಳ ವಂಶದ ರಾಜರಿಗೆ ಏಳು ತಲೆಮಾರುಗಳು ಅನ್ವಯಾಗತ ಲೆಂಕವಾಳಿಗಳಾಗಿ ತಮ್ಮ ಮಡದಿಯರು ಮತ್ತು ಲೆಂಕ ಲೆಂಕಿತಿಯರೊಂದಿಗೆ ಪ್ರಾಣಾರ್ಪಣೆ ಮಾಡಿದ ಅತ್ಯಂತ ಅಪರೂಪದ ವಿವರಗಳು ದೊರೆಯುತ್ತವೆ. ಮುಗಿಲ ಕುಲಕ್ಕೆ ಸೇರಿದವರೂ, ಕಬ್ಬಾಹು ನಾಡನ್ನು[2] ಆಳುವವರೂ, ಮಹಾ ಸಾಮಂತರೂ, ನಾನಾ ದೇಶಿಯ ಸೆಟ್ಟಿಪಟ್ಟವನ್ನು ಪಡೆದವರೂ, ಸೇವುಣ ಸೈನ್ಯವಿಭಾಡರೂ ಆದ ಇವರ ವಂಶದ ಇತಿಹಾಸ ಗಂಡನಾರಾಯಣ ಸೆಟ್ಟಿಯಿಂದ ದೊರೆಯುತ್ತದೆ. ಅವನು ತನ್ನ ಮಡದಿ ಮಾರವ್ವೆನಾಯಕಿತಿಯೊಂದಿಗೆ ಐವರು ಲೆಂಕರೊಡನೆ ಹೊಯ್ಸಳ ಎರೆಯಂಗನ ಮರಣಾನಂತರ ಆತ್ಮಬಲಿಯಾದನು. ಅವರ ಮಗ ಹೊಯಿಸಳ ಸೆಟ್ಟಿ ಅವನ ಮಡದಿ ಮಾಚವೆನಾಯಕಿತಿ ಮತ್ತು ಐವರು ಲೆಂಕರು ಬಿಟ್ಟಿದೇವರಸನಿಗಾಗಿ ಆತ್ಮಬಲಿಯಾದರು. ಹೊಯಿಸಳ ಸೆಟ್ಟಿಯ ಮಗ ಕೂರೆಯನಾಯಕನು ಮಡದಿಯರಾದ ಮಾರವೆನಾಯಕಿತಿ, ಚಿಕ್ಕ ಮಾದವ್ವೆನಾಯಕಿತಿ ಮತ್ತು ಏಳು ಜನ ಪ್ರಜೆ ಲೆಂಕರೊಡನೆ ಒಂದನೆಯ ನರಸಿಂಹನ ಮರಣಾನಂತರ ಪ್ರಾಣಾರ್ಪಣೆ ಮಾಡುತ್ತಾನೆ. ಮೊದಲ ಶಾಸನದಲ್ಲಿ ಕೂರೆಯನಾಯಕ ಮತ್ತು ಮಾರವ್ವೆನಾಯಕಿತಿಗೆ ಹುಟ್ಟಿ 'ಸುಪುತ್ರರೆನ್ನಿ' ಎಂಬ ಬಹುವಚನ ಪ್ರಯೋಗ ಬರುವುದರಿಂದ ಅವರ ಮಕ್ಕಳು ಸಿವನೆನಾಯಕ, ಲಖೆಯನಾಯಕ ಮತ್ತು ಕನ್ನೆಯನಾಯಕ ಎಂದು ಭಾವಿಸಬೇಕಾಗುತ್ತದೆ. ಸಿವನೆನಾಯಕ[3], ಐದು ಜನ ಲೆಂಕರು ಮೂರು ಜನ ಲೆಂಕಿತಿಯರು ಬಲ್ಲಾಳನ ಮರಣಾನಂತರ ಪ್ರಾಣಾರ್ಪಣೆ ಮಾಡುತ್ತಾರೆ. ಲಖೆಯ ನಾಯಕ ತನ್ನ ಮಡದಿ ಗಂಗಾದೇವಿ, ಐವರು ಲೆಂಕರು ಮತ್ತು ಮೂರು ಜನ ಲೆಂಕಿತಿಯರೊಂದಿಗೆ ನಾರಸಿಂಹನ ಮರಣಾನಂತರ ಪ್ರಾಣಾರ್ಪಣೆ ಮಾಡುತ್ತಾನೆ. ಕನ್ನೆಯ ನಾಯಕ ತನ್ನ ಮಡದಿಯರಾದ ಪೊಮ್ಮವ್ವೆ, ಜವನವ್ವೆ, ಕಲ್ಲವ್ವೆ ಮತ್ತು ಹತ್ತು ಮಾನಿಸ ಲೆಂಕಿತಿಯರು ಮತ್ತು ಇಪ್ಪತ್ತೊಂದು ಮಾನಿಸ ಲೆಂಕರೊಡನೆ ಹೊಯ್ಸಳ ಸೋಮೇಶ್ವರನ ಮರಣಾನಂತರ ಪ್ರಾಣಾರ್ಪಣೆ ಮಾಡುತ್ತಾನೆ. ಕನ್ನೆಯ ನಾಯಕನ ಮಗ ರಂಗೆಯ ನಾಯಕನು ತನ್ನ ಮಡದಿಯರಾದ ಕೇತವ್ವೆ, ಹೊನ್ನವ್ವೆ, ಮಂಚವ್ವೆ ಮತ್ತು ಹತ್ತು ಮಾನಿಸ ಲೆಂಕಿತಿಯರು, ಇಪ್ಪತ್ತು ಮಾನಿಸ ಲೆಂಕರೊಡನೆ ನಾರಸಿಂಹನ ಮರಣಾನಂತರ ಪ್ರಾಣಾರ್ಪಣೆ ಮಾಡುತ್ತಾನೆ. ಎರಡನೆಯ ಶಾಸನದಲ್ಲಿ ಕೂರೆಯ ನಾಯಕನ ಮಗ ಸಿವನೆನಾಯಕನೆಂದೂ ಲಖೆಯ ನಾಯಕನನ್ನು ಅವರ ಪುತ್ರನೆಂದು ಹೇಳಲಾಗಿದೆ. ಬಹುಶಃ ಇದನ್ನು ಕೂರೆಯ ನಾಯಕನ ಮಗನೆಂದು ಭಾವಿಸಬೇಕಾಗುತ್ತದೆ. (ಸಿವನೆನಾಯಕನ ಮಡದಿಯ ವಿಷಯ ಉಲ್ಲೇಖಗೊಳ್ಳದಿರುವುದು ಇದಕ್ಕೆ ಪೋಷಕವಾಗಿದೆ). ಕನ್ನೆಯ ನಾಯಕನನ್ನೂ ಕೂರೆಯನಾಯಕನ ಮಗನೆಂದೇ ಭಾವಿಸಬೇಕು. ಏಕೆಂದರೆ ಆ ಶಾಸನದಲ್ಲಿ ಸ್ಪಷ್ಟವಾಗಿ ಯಾರ ಮಗನೆಂದು ಉಕ್ತವಾಗಿಲ್ಲ. ಹೊಯ್ಸಳ ವಂಶದ ಲೆಂಕರಾದ ವಿಷಯವನ್ನು ಈ ಕ್ರಮದಲ್ಲಿ ಪಟ್ಟಿ ಮಾಡಬಹುದು.

---

೧. (ಮೈ) ಎಕ VI ಕೃಷ್ಣರಾಜಪೇಟೆ ೮೨ ಕ್ರಿ.ಶ. ೧೨೫೬.

೨. ಕಬ್ಬಾಹುನಾಡು ಹಿಂದಿನ ಶಾಸನಗಳಲ್ಲಿ ಬರುವ ಕಬ್ಬಪ್ಪು ನಾಡನ್ನು ಸೂಚಿಸುತ್ತದೆ.

೩. ಏಳು ತಲೆಮಾರುಗಳ ಅನ್ವಯಾಗತ ಲೆಂಕವಾಳಿಗಳಲ್ಲಿ ಸಿವನೆನಾಯಕನ ಮಡದಿಯ ಉಲ್ಲೇಖವಿಲ್ಲ. ಸಿವನೆನಾಯಕ ಮದುವೆಗೆ ಮೊದಲೇ ಬಲ್ಲಾಳನ ಮರಣಾನಂತರ ಪ್ರಾಣಾರ್ಪಣೆ ಮಾಡಿರಬೇಕು ಅಥವಾ ಅವನು ಮದುವೆಯಾಗಿರಲಾರ ಅಥವಾ ಅವನು ಪ್ರಾಣಾರ್ಪಣೆ ಮಾಡಿದ ಕಾಲಕ್ಕೆ ಪತ್ನಿಯ ಜೀವಂತವಾಗಿರಲಾರಳು.

| | |
|---|---|
| ಎರೆಯಂಗ (ಕ್ರಿ.ಶ. ೧೦೯೮-೧೧೦೦) | - ಗಂಡನಾರಾಯಣಸೆಟ್ಟಿ-ಮಾರವ್ವೆ ನಾಯಕಿತಿ ಮತ್ತು ಐವರು ಲೆಂಕರು. |
| ವಿಷ್ಣುವರ್ಧನ (ಕ್ರಿ.ಶ. ೧೧೦೮-೧೧೫೨) | - ಹೊಯಿಸಳ ಸೆಟ್ಟಿ-ಮಾಚವ್ವೆನಾಯಕಿತಿ ಮತ್ತು ಐವರು ಲೆಂಕರು. |
| ನರಸಿಂಹ I (ಕ್ರಿ.ಶ. ೧೧೫೨-೧೧೭೩) | - ಕೂರೆಯನಾಯಕ-ಮಾರವೆನಾಯಕಿತಿ, ಚಿಕ್ಕಮಾದವ್ವೆನಾಯಕಿತಿ ಮತ್ತು ಏಳುಜನ ಲೆಂಕರು. |
| ಬಲ್ಲಾಳ II (ಕ್ರಿ.ಶ. ೧೧೭೩-೧೨೨೦) | - ಸಿವನೆನಾಯಕ ಮತ್ತು ಐದು ಜನ ಲೆಂಕರು, ಮೂರು ಜನ ಲೆಂಕಿತಿಯರು. |
| ನಾರಸಿಂಹ II (ಕ್ರಿ.ಶ. ೧೨೨೦-೧೨೩೫) | - ಲಖೆಯನಾಯಕ-ಗಂಗಾದೇವಿ ಮತ್ತು ಐವರು ಲೆಂಕರು, ಮೂವರು ಲೆಂಕಿತಿಯರು. |
| ಸೋಮೇಶ್ವರ (ಕ್ರಿ.ಶ. ೧೨೩೫-೧೨೫೬) | - ಕನ್ನೆಯನಾಯಕ-ಪೊಮ್ಮವ್ವೆ, ಜವನವ್ವೆ, ಕಲ್ಲವ್ವೆ ಮತ್ತು ಹತ್ತು ಜನ ಲೆಂಕಿತಿಯರು, ಇಪ್ಪತ್ತೊಂದು ಜನ ಲೆಂಕರು. |
| ನರಸಿಂಹ (ಕ್ರಿ.ಶ. ೧೨೫೬-೧೨೯೧) | - ರಂಗೆಯನಾಯಕ-ಕೇತವ್ವೆ, ಹೊನ್ನವ್ವೆ, ಮಂಚವ್ವೆ ಮತ್ತು ಹತ್ತು ಜನ ಲೆಂಕಿತಿಯರು, ಇಪ್ಪತ್ತು ಜನ ಲೆಂಕರು. |

ಅನ್ವಯಾಗತ ಲೆಂಕರ ಮನೆತನಕ್ಕೆ ಮದುವೆಯಾಗಿ ಬಂದ ಸ್ತ್ರೀಯಾಗಲಿ ಅಥವಾ ಸ್ತ್ರೀಯರಾಗಲಿ ನಿಯಮವೆಂಬಂತೆ (ಒಂದು ಅಪವಾದವನ್ನುಳಿದು) ಗಂಡಂದಿರ ಜೊತೆ ಆತ್ಮ ಬಲಿದಾನವನ್ನು ಮಾಡಿದ್ದಾರೆ. ಅವರೊಂದಿಗೆ ಪ್ರತಿತಲೆಮಾರಿನಲ್ಲಿಯೂ ವಿವಿಧ ಸಂಖ್ಯೆಯ ಲೆಂಕರು ಮತ್ತು ಲೆಂಕಿತಿಯರು ಪ್ರಾಣಾರ್ಪಣೆಯಲ್ಲಿ ಅವರನ್ನು ಅನುಸರಿಸಿದ್ದಾರೆ. ಕೆಲವು ಲೆಂಕ ಮತ್ತು ಲೆಂಕಿತಿಯರನ್ನು ಮಾನಿಸ ಲೆಂಕ ಲೆಂಕಿತಿಯರೆಂದು ಕರೆಯಲಾಗಿದೆ. ಬಹುಶಃ ಅದು ಸೇವಕ, ಸೇವಕಿಯರನ್ನು ಸೂಚಿಸುವ ಹಾಗೆ ಕಾಣುತ್ತದೆ.

ಈ ಶಾಸನಗಳಲ್ಲಿ ಎಲ್ಲ ತಲೆಮಾರುಗಳ ಪ್ರಾಣಾರ್ಪಣೆಯ ರೀತಿಯನ್ನು ಹೇಳದೇ ಹೋದರೂ ಕೆಲವು ಆತ್ಮ ಬಲಿಗಳ ರೀತಿಯನ್ನು ವರ್ಣಿಸಿರುವುದುಂಟು. ಹೊಯ್ಸಳ ಸೋಮೇಶ್ವರ ಮರಣ ಹೊಂದಲು, ಕನ್ನೆಯ ನಾಯಕ ಅವನ ಮಡದಿಯರಾದ ಪೊಮ್ಮವ್ವೆ, ಜವನವ್ವೆ, ಕಲ್ಲವ್ವೆ ಮತ್ತು 'ಹತ್ತು ಜನ ಮಾನಿಸ ಲೆಂಕಿತಿಯರಂ ಇಪ್ಪತ್ತೊಂದು ಮಾನಿಸಲೆಂಕರುಂ ಬೆರಸಿ ಗಜಮಸ್ತಕದಲ್ಲಿ ಆಱು ಬಾರಿ ಗರುಡನನಪ್ಪಿ ಬಾಸೆಯಂ ಪೂರಯ್ಸಿದನು' ಎಂದು ಬರುತ್ತದೆ.[೧] ಈ ಮಾತುಗಳಿಗೆ ಸಮರ್ಪಕವಾದ ವಿವರಣೆಯನ್ನು ನೀಡುವುದು ಸಾಧ್ಯವಾಗಿಲ್ಲ. ಆನೆಯ ತಲೆಯ ಮೇಲೇರಿ ಆರುಬಾರಿ ಗರುಡನನ್ನು ಅಪ್ಪಿ ಭಾಷೆಯನ್ನು ಈಡೇರಿಸಿದರು ಎನ್ನುವುದು ಬಹುಶಃ ಅವರು ಪ್ರಾಣಾರ್ಪಣೆ ಮಾಡಿದ ವಿಧಾನವನ್ನು ತಿಳಿಸುವುದಾದರೂ ಅದರ ಸ್ವರೂಪ ಸ್ಪಷ್ಟವಾಗುವುದಿಲ್ಲ.

---

೧. (ಮೈ) ಎಕ VI ಕೃಷ್ಣರಾಜಪೇಟೆ ೮೨ ಕ್ರಿ.ಶ. ೧೨೫೬.

ಶಾಸನ ಮುಂದುವರಿದು 'ಗರುಡನ ಪೊಯ್ಗೆ ಮೆಯ್ಯಿಗಿದು ಸುರ್ಕ್ಕಿ ಸಹಸ್ರ ಫಣಾಧರಂ ವಸುಂಧರೆಯಡಿಗಳ್ಪು ಪೋದವನಂತನೆ ಕಂನೆಯ ನಾಯಕಂ ಭಯಂಕರ ಗರುಡಂಗೆ ಮಾರ್ಮ್ಮಲೆದು ಪೊಯ್ದುಮರ್ದ್ದಪ್ಪಿ ನಿಮಿರ್ಚ್ಚಿ ತೋಜ್‌ದಂ ಬಿರುದರ ಗೋವನುರ್ವ್ವರೆಗೆ ಸೋಮ ನೃಪಾಳನ ಲೆಂಕವಾಳಿಯಂ' ಎಂದು ಹೇಳುತ್ತದೆ. ಗರುಡನ ಹೊಡೆತವನ್ನು ತಾಳಲಾರದೆ ಆದಿಶೇಷನು ಭೂಮಿಯ ಅಡಿಯನ್ನು ಸೇರಿದನು. ಆದರೆ ಕನ್ನೆಯ ನಾಯಕನು ಅಂಥವನಲ್ಲ; ಅವನು ನೇರವಾಗಿ ಭಯಂಕರ ಗರುಡನನ್ನು ಎದುರಿಸಿ ಅಪ್ಪಿ ಲೆಂಕವಾಳಿತನವನ್ನು ತೋರಿಸಿದನು ಎಂದು ಹೇಳುತ್ತದೆ.

ಎರಡನೆಯ ಶಾಸನ[೧]ದಲ್ಲಿ ಆದಿಶೇಷನು ಗರುಡನಿಗೆ ಹೆದರಿ ಭೂಮಿಯನ್ನು ಬಿಟ್ಟು ಪಾತಾಳವನ್ನು ಮಣೆಯನ್ನು(?) ಕೊಳ್ಳುವೆನೆಂದು ಹೋಗಲು ರಂಗಯ್ಯನು ಸ್ಪರ್ಧಿಸಿ ತನ್ನ ಗುಣಶಕ್ತಿ ಪರಾಕ್ರಮಗಳಿಂದ ವೀರರು ಭಲೇ ಎನ್ನುವಂತೆ ಏಳನೆಯ ಬಾರಿ ಅಪ್ಪಿ ಲೆಂಕವಾಳಿಯನ್ನು ಸಲ್ಲಿಸಿದನೆಂದು ಬರುತ್ತದೆ. ಅದೇ ಶಾಸನದ ಕೊನೆಯ ಭಾಗದಲ್ಲಿ ಕನ್ನೆಯನಾಯಕ ತನ್ನ ಮಡದಿಯರು ಮತ್ತು ಲೆಂಕ ಲೆಂಕಿತಿಯರೊಡನೆ 'ಗಜಮಸ್ತಕದ ಮೇಲೆ ಆಱು ಬಾರಿ ಗರುಡನನಪ್ಪಿ ಬಾಸೆಯಂ ಪೂರೈಯ್ಸಿದನು' ಎಂದೂ ಮತ್ತು ರಂಗೆಯನಾಯಕನು ತನ್ನ ಮಡದಿಯರೊಂದಿಗೆ ಮತ್ತು ಲೆಂಕ ಲೆಂಕಿತಿಯರೊಡನೆ 'ಗಜಮಸ್ತಕದ ಮೇಲೆ ಆಱು ಬಾರಿ ಗರುಡನನಪ್ಪಿ ಬಾಸೆಯಂ ಪೂರೈಸಿದನು' ಎಂದೂ ಬರುತ್ತದೆ.

ಮೊದಲನೆಯ ಶಾಸನದಲ್ಲಿ ಕನ್ನೆಯನಾಯಕ ಮತ್ತು ಅವನ ಮಡದಿಯರ, ಲೆಂಕ ಲೆಂಕಿತಿಯರ ಪ್ರಾಣಾರ್ಪಣೆಯನ್ನು ಹೇಳುವ ಪದ್ಯಗಳು ತುಂಬ ಅಶುದ್ಧವಾಗಿದ್ದು ವಿವರಣೆ ಮಾಡುವುದು ಅತಿ ಕ್ಲಿಷ್ಟವಾಗಿದೆ.

ಪಡೆ ಮಾತೇಂ ರಾಯಲೆಂಕರ್ಪತಿಯ ಪೆಱಗೆ ಕೀಳ್ಬಟ್ಟು ಬಾಳ್ವೆವಂವೆತ್ತಂ
ಸುಡೆ ತಂತಂಮಂಗಮಂ ಸುತ್ತಳಿಯದೆ ತಲೆಯಂ ಬೇಱ್ ವೇಱೂಱಿ ಮೇಂಗಾ
ಲೆಡೆಯೊಳ್ ಮೆಲ್ವಾಹೆಯೆಂಬೀ ನೆವದೊಳೆ ತಪವಂ ಮಾಡುತ್ತಿರ್ದ್ದಪ್ಪರೆಂಬಂ
ತೆರದಾ (ತೆತಗಾ)ಲೋಳ್ ಹೊಂದೊಡರ್ಕ್ಕಣ್ಗೊಳೆ ಸೊಗಯಿಸುವಂ ವೀರಸಾಮಂತ ಕಂನಂ॥

ಅತಿಧೃತಿಯಿಂದವಂಗಯ್ಸಿ ಕಂನನಾಯಕನಿರ್ದು ನೋಡೆ ಸಂ
ತತಿ ಬೆಱಗಾಗೆ ಬಂಧುಜನವಾಯೆನೆ ಲೋಕದ ಹೆಂಡಿರೆಲ್ಲ ಪಾ
ಯತಿಕೆಗೆ ಮೆಚ್ಚಿ ಬಿತ್ತರಿಸೆ ಕಲ್ಲಲೆಯಾ ಜವನವ್ವೆಯುಂಮನಾ
ರತಿಗಳನೆತ್ತಿರ್ದತ್ತೊಳಪ ಪಂದಲೆಯಂ ಪತಿ ಮೆಚ್ಚ ಮೂವರುಂ॥

ಈ ಪದ್ಯಗಳಿಂದ ಕನ್ನೆಯನಾಯಕನ ಮಡದಿಯರು ಎಡಗಾಲಿಗೆ ಹೊಂದೊಡರುಗಳನ್ನು ಧರಿಸಿದ್ದುದು ತಿಳಿಯುತ್ತದೆ. ಮತ್ತು ಕನ್ನೆಯನಾಯಕ ಪ್ರಾಣಾರ್ಪಣೆ ಮಾಡುವ ಮೊದಲೇ ಅವನ ಮಡದಿಯರು ಪ್ರಾಣಾರ್ಪಣೆ ಮಾಡಿದರೆಂಬುದು ತಿಳಿಯುತ್ತದೆ. ಹಾಗೂ ಅವರ ತಲೆಗಳನ್ನು ಕತ್ತರಿಸುವುದರ ಮೂಲಕ (... ರತಿಗಳನೆತ್ತಿರ್ದತ್ತೊಳಪ ಪಂದಲೆಯಂ) ಪ್ರಾಣಾರ್ಪಣೆ ಆಯಿತೆಂಬುದು ಸ್ಪಷ್ಟವಾಗುತ್ತದೆ. ಮೇಲಿನ ಮೊದಲ ಪದ್ಯದಲ್ಲಿ 'ಬಾಳ್ವೆವಂವೆತ್ತಂ ಸುಡೆ ತಂತಂಮಂಗಮಂ' ಎಂಬುದರಲ್ಲಿ ತಮ್ಮ ತಮ್ಮ ಅಂಗಾಂಗಗಳನ್ನು ಸುಟ್ಟುಕೊಂಡ ಸೂಚನೆಯೂ ಇರುವಂತಿದೆ. ಅಗ್ರಹಾರ ಬಾಚಹಳ್ಳಿಯ ಶಾಸನಗಳಿರುವ ಶಾಸನ ಕಂಬಗಳ ಮೇಲೆ ಆನೆಯ ಮೇಲೆ ಕುಳಿತ ವ್ಯಕ್ತಿಗಳು ಗರುಡನೊಂದಿಗೆ ಹೋರಾಡುವ ಶಿಲ್ಪಗಳಿವೆ. ಆದರೂ ಅವರ ಮರಣ ಸ್ವರೂಪವನ್ನು ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ.[೨]

ಅಗ್ರಹಾರ ಬಾಚಹಳ್ಳಿಯ ಶಾಸನಗಳು ಕೊಡುವ 'ಅನ್ವಯಾಗತ ಲೆಂಕವಾಳಿ'ಯ ವಿವರಗಳು ಅಪೂರ್ವ ತ್ಯಾಗ ನಿಷ್ಠೆಗಳಿಗೆ ಪ್ರತೀಕವಾಗಿವೆ. ಏಳು ತಲೆಮಾರುಗಳಲ್ಲಿ ಕ್ರಮ ತಪ್ಪದಂತೆ ನಡೆದು ಬಂದಿರುವ ಅಪೂರ್ವ ಬಲಿದಾನ ಕನ್ನಡನಾಡಿನ ಬಲಿದಾನದ ಇತಿಹಾಸದಲ್ಲಿ ಅತ್ಯಪೂರ್ವವಾದ ನಿದರ್ಶನವಾಗಿದೆ.

---

೧. (ಮೈ) ಎಕ VI ಕೃಷ್ಣರಾಜಪೇಟೆ ೮೪ ಕ್ರಿ.ಶ. ೧೨೯೧.

೨. ಅಗ್ರಹಾರ ಬಾಚಹಳ್ಳಿಯ ಇನ್ನೊಂದು ಅಪೂರ್ಣ ಶಾಸನ 'ಯಾದವನ ಸುತನು ಸೋಮನು ಮೇದಿನೀಪತಿ ವೀರನಾರಸಿಷ್ಠಗೆ ಲೆ(ಂ)ಕಂ ಕ್ರಮವನೆಸೆದು ಗರುಡನಲೆಯದಂಬಾರಿಯೊಗ್ಗಪಿ (ಯೊಳಗಪ್ಪಿ) ಬಾಸೆಗೆ ಸಂದನು' ಎಂದು ಹೇಳುತ್ತದೆ. ಇದಕ್ಕೆ ವಿವರಣೆ ನೀಡುವುದು ಹಿಂದಿನ ಶಾಸನಗಳಂತೆ ಕ್ಲಿಷ್ಟವಾಗಿದೆ. (ಮೈ) ಎಕ VI ಕೃಷ್ಣರಾಜಪೇಟೆ ೮೩ ಕ್ರಿ.ಶ. ಸು. ೧೩ನೆಯ ಶಮಾ.

ಪ್ರಾಚೀನ ಕಾಲದಿಂದಲೂ, ವಿಷ್ಣುವಿನ ವಾಹನವಾದ ಗರುಡ ತನ್ನ ಸ್ವಾಮಿಭಕ್ತಿಗೆ, ಶೌರ್ಯಕ್ಕೆ ಅತ್ಯುತ್ತಮ ಪ್ರತೀಕವೆಂಬಂತೆ ಗಣಿಸಲ್ಪಟ್ಟಿದೆ. 'ಮೊದಮೊದಲು ಗರುಡ ಎಂಬುದು ಶೌರ್ಯ ಪತಿಭಕ್ತಿಗಳಿಗೆ ಆದರ್ಶವಾಗಿದ್ದು ಮುಂದೆ ಆದರ್ಶ ವ್ಯಕ್ತಿಗಳ ವಿಶೇಷಣವಾಗಿ, ಹೊಯ್ಸಳ ದೊರೆಗಳ ಕಾಲದಲ್ಲಿ ರಾಜನ ಸಾವಿನ ಬಳಿಕ ಆತ್ಮಹತ್ಯೆಯನ್ನು ಮಾಡಿಕೊಂಡ ವ್ಯಕ್ತಿಯನ್ನು ಸೂಚಿಸಲಾರಂಭಿಸಿತು.'[೧] ಹನ್ನೆರಡು ಹದಿಮೂರನೆಯ ಶತಮಾನದಲ್ಲಿ ಈ ಪದ್ಧತಿ ಹೆಚ್ಚು ಪ್ರಚಾರದಲ್ಲಿದ್ದಿತು.

ಅನೇಕ ಶಾಸನಗಳು ಗರುಡರ ಬಗ್ಗೆ ಉಲ್ಲೇಖಿಸುತ್ತವೆ. ಬೋಕಿಮಯ್ಯನೆಂಬ ಹಡವಳನ ಶೌರ್ಯವನ್ನು ವರ್ಣಿಸುವಾಗ 'ಬಿಟ್ಟಿದೇವ ಗರುಡಂಗಿದಿರಾಗಿ ಧರಿತ್ರಿ ಮಧ್ಯದೊಳು'[೨] ಎಂದು ಕೀರ್ತಿಸಿದೆ. ಚಾವಿಮಯ್ಯನೆಂಬ ಹಡವಳನನ್ನು 'ಬಿಟ್ಟಿದೇವನ ಗರುಡ ಸಮನೆಸೆದನೀ ಧರೆಯೊಳು'[೩] ಎಂದು ಕೀರ್ತಿಸಲಾಗಿದೆ. ಮರ್ಮರಸ ಎಂಬುವವನನ್ನು 'ಸಮೆಯದಿ ಗರುಡ' ಎಂಬ ವಿಶೇಷಣದಿಂದ ಹೇಳಲಾಗಿದೆ.[೪] ಕಂಪನಹಳ್ಳಿಯ ಶಾಸನ ತ್ರೈಪಾಳನ ಗರುಡ ಮಸಣುಗ ಬಳೆಮೆಟೆಯೆಂಬಲ್ಲಿ ಒಡ್ಡಿದ ಯುದ್ಧದಲ್ಲಿ ಹೋರಾಡಿ ಮಡಿದಂತೆ ತಿಳಿಸುತ್ತದೆ.[೫] 'ಆ ನೃಪಂಗೆ ಗರುಡಂ ತಾನೆನೆ ಪತಿಹಿತದೊಳತುಳಬಳದೊಳು ಪೆಸರೊಳ್ಪಿನಂ ವಿರಾಜಿಪಂ ದಾನ್ಯಾನಿಯಮದೊಳರಸಿಕೆಜೀಯ ಮಹದೇವರಸಂ॥'[೬] ಎಂದು ಹೇಳಲಾಗಿದೆ. ತಮಿಳಿನ ಶಾಸನ ಒಂದರಲ್ಲಿ ಸೊಕ್ಕಿಮಯ್ಯನನ್ನು ವಿಷ್ಣುವರ್ಧನನ ಗರುಡನೆಂದು ಕರೆಯಲಾಗಿದೆ.[೭] ಇವನು ಸರ್ವಾಧಿಕಾರಿ, ಸೇನಾಪತಿ, ಹಿರಿಯ ಹಡವಳ ಎಂಬ ಅಧಿಕಾರಗಳಿಂದಲೂ ಕರೆಯಲ್ಪಟ್ಟಿದ್ದಾನೆ.

ಗರುಡ ವ್ಯವಸ್ಥೆಗೆ ಅತ್ಯುತ್ತಮವಾದ ನಿದರ್ಶನವೆಂದರೆ ಕುವರ ಲಕ್ಷ್ಮನ್ನುವ ಅವನ ವಿಷಯವನ್ನು ಹಳೆಯಬೀಡಿನ ಶಾಸನ ದೀರ್ಘವಾಗಿ ವಿವರಿಸಿದೆ.[೮] ಕುವರ ಲಕ್ಷ್ಮನು ಬಲ್ಲಾಳನ ದಂಡಾಧೀಶನಾಗಿದ್ದವನು. ಅರಮನೆಯ ಆವರಣದಲ್ಲಿ ಬೆಳೆದು ಬಲ್ಲಾಳನು 'ಪೊರೆದ ಮಗ'ನೂ ಆಗಿದ್ದನು. ಬಲ್ಲಾಳನ ಕೈಪಿಡಿಯೂ, ಕಟ್ಟಿದ ಗೇಣೆನಂತೆಯೂ ಇದ್ದನು. ಅವನನ್ನು ಬಲ್ಲಾಳನ 'ಪ್ರಿಯಪುತ್ರ' ಎಂದೂ ಕರೆಯಲಾಗಿದೆ. ಒಡೆಯನ ನಿಷ್ಠಾವಂತ ಸೇವಕನು ಗರುಡನಾಗಬಯಸಿದರೆ ಅವನು ಒಡೆಯನಿಗೆ ಭಾಷೆಯನ್ನು ಕೊಟ್ಟು, ಎಡಗಾಲಿಗೆ 'ಗಂಡ ಪೆಂಡೇರ'ವನ್ನು ಧರಿಸಬೇಕಾಗುತ್ತಿತ್ತು. ಕೆಲವು ಸಾರಿ ಗಂಡನ ಅಪ್ಪಣೆ ಪಡೆದು ಗರುಡನ ಮಡದಿಯೂ ಗಂಡನಿಗೆ ಭಾಷೆ ಕೊಟ್ಟು ಅಂತಹ ಆಭರಣವನ್ನು ಧರಿಸುತ್ತಿದ್ದುದುಂಟು. ಕುವರ ಲಕ್ಷ್ಮನು ಬಲ್ಲಾಳನಿಗೆ ಭಾಷೆಯನ್ನು ಕೊಟ್ಟು ಅಂತಹ ಆಭರಣವನ್ನು ಧರಿಸಿದನು. ಅವನ ಮಡದಿ ಸುಗ್ಗಲೆಯೂ ಭಾಷೆ ಕೊಟ್ಟು ಅಂತಪ ಆಭರಣವನ್ನು ಧರಿಸಿದಳು. ಅಲ್ಲದೆ ಕುವರ ಲಕ್ಷ್ಮನ ಒಂದು ಸಾವಿರ ವೀರರು ಗರುಡರಾಗಲು ಭಾಷೆಯನ್ನು ಕೊಟ್ಟರೆಂದು ಶಾಸನ ತಿಳಿಸುತ್ತದೆ.

ಅಗ್ರಹಾರ ಬಾಚಹಳ್ಳಿಯ ಮೊದಲ ಶಾಸನದಲ್ಲಿ ಕನ್ನೆಯನಾಯಕ ಮತ್ತು ಅವನ ಮಡದಿಯರು ಎಡಗಾಲಿನಲ್ಲಿ 'ಹೊಂದೊಡರನ್ನು' ಧರಿಸಿದ್ದರೆಂದು ಹೇಳಲಾಗಿದೆ. ಕುವರ ಲಕ್ಷ್ಮನ ಶಾಸನದಲ್ಲಿಯೂ ಅದನ್ನು ಒಂದೆರಡು ಕಡೆ ಪೊಂದೊಡರ್,

---

೧. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೨೦೮-೨೦೯.

೨. (ರೈ) ಎಕ V ಹಾಸನ ೬೯ ಕ್ರಿ.ಶ. ೧೧೫೫.

೩. (ರೈ) ಎಕ V ಹಾಸನ ೫೭ ಕ್ರಿ.ಶ. ೧೧೫೫.

೪. ಎಸ್‌ಐಐ IX(i) ಹಡಗಲಿ ೩೨೯ ಕ್ರಿ.ಶ. ೧೨೦೯.

೫. (ರೈ) ಎಕ XVI (ಪೂರಕ ಸಂಪುಟ) ಚಿಕ್ಕನಾಯಕನ ಹಳ್ಳಿ ೯೮ ಕ್ರಿ.ಶ. ೧೧೬೯.

೬. (ರೈ) ಎಕ VII ಮತ್ತು VIII (ಪೂರಕ ಸಂಪುಟ) ಸೊರಬ ೫೮೨ ಕ್ರಿ.ಶ. ೧೨೦೭.

೭. (ರೈ) ಎಕ X ಬೌರಿಂಗ್‌ಪೇಟೆ ೯ ಕ್ರಿ.ಶ. ೧೧೫೫.

೮. (ರೈ) ಎಕ V ಬೇಲೂರು ೧೧೨ ಕ್ರಿ.ಶ. ೧೨೨೦.

ತೊಡರ್ ಎಂದು ಕರೆಯಲಾಗಿದೆ. ಈ ರೀತಿ ಭಾಷೆಯನ್ನು ಕೊಟ್ಟು ಆಭರಣವನ್ನು ಧರಿಸುವುದು ವಿಶೇಷ ಗೌರವವಾಗಿದ್ದಿತು. ಕೆಲವು ಶಾಸನಗಳಲ್ಲಿ ಗಂಡಪೆಂಡೇರದ ಉಲ್ಲೇಖ ಬರುತ್ತದೆ. ವೈದ್ಯನಾಥಪುರದ ಶಾಸನವೊಂದರಲ್ಲಿ ಕೇತ ದಂಡಾಧಿಪನನ್ನು 'ಸಜ್ಜನಾಧಾರಂ ಗೋತ್ರಪವಿತ್ರಸೌಖ್ಯನೆಸೆವಂ ಭೂಚಕ್ರದೊಳ್ಗಂಡಪೆಣ್ಡಾರಂ'[೧] ಎಂದು ವರ್ಣಿಸಲಾಗಿದೆ. ಅದೇ ಶಾಸನದಲ್ಲಿ ಮತ್ತೊಮ್ಮೆ ಅವನನ್ನು 'ಗಂಡಪೆಂಡಾರ'ವೆಂದು ಕರೆಯಲಾಗಿದೆ. ಶಾಸನದ ವರ್ಣನೆಯನ್ನು ಗಮನಿಸಿದರೆ ಅದು ಗರುಡನಿಗೆ ಸಮಾನಾರ್ಥಕದಂತೆ ಬಳಕೆಯಾದಂತಿದೆ. ವಿಕ್ರಮಾದಿತ್ಯ ಮಂಡಳೇಶ್ವರನನ್ನು ಕುರಿತು ಹೇಳುವ ಶಾಸನವೊಂದು 'ಬಿರುದಿನ ಅಂಕಮಾಲೆ ತೊಡರಿಕ್ಕಿದ ಕಾಲಲು ಗಂಡಪೆಂಡರಂ'[೨] ಎಂದಿದೆ. ಚಿನ್ನದ ಎಳೆಗೆ ಮುತ್ತುಗಳನ್ನು ಪೋಣಿಸಿ ಮಧ್ಯೆ ಮಧ್ಯೆ ಸಣ್ಣಬೊಂಬೆಗಳನ್ನು ಸೇರಿಸುತ್ತಿದ್ದರು. ಓಡಾಡುವಾಗ ಝಣ ಝಣ ಶಬ್ದವನ್ನು ಅದು ಮಾಡುತ್ತಿತ್ತು.[೩]

ವೀರಗಲ್ಲುಗಳ ಸಮೃದ್ಧಿಯ ಯುಗದಲ್ಲಿ ಸಾಮಾನ್ಯ ವೀರಕಾರ್ಯಗಳಿಗೂ ವೀರಗಲ್ಲುಗಳ ನಿರ್ಮಾಣವಾಗುತ್ತಿದ್ದಂತೆ ಕಾಣುತ್ತದೆ. ಕುವರಲಕ್ಷ್ಮನ ಶಾಸನ ಅದನ್ನು ಪರೋಕ್ಷವಾಗಿ ಟೀಕಿಸುವಂತೆ ಕಾಣುತ್ತದೆ.

> ಇಲ್ಲದ ಸಲ್ಲದ ಭಾಷೆಗೆ
> ಕಲ್ಲಂ ನಿಱಿಸುವರನುಱಿದೆ ನಗುವವೊಲಿರ್ಕುಂ
> ಪಲ್ಲವಿಸಿ ಕುವರಲಕ್ಷ್ಮನ
> ಕಲ್ಲ ಕವಲ್ತೆಸೆವ ಕಾಂತಿ ದಿಗ್ಭಿತ್ತಿಗಳೊಳ್

ಕುವರ ಲಕ್ಷ್ಮ, ಅವನ ಮಡದಿ ಸುಗ್ಗಲೆ ಮತ್ತು ಅವನ ಸಾವಿರ ವೀರರು ಆತ್ಮಬಲಿಯಾದುದನ್ನು ಶಾಸನ ಉಜ್ವಲವಾಗಿ ಚಿತ್ರಿಸುತ್ತದೆ.

> ದೊರೆ ಪತಿಭಕ್ತಿಗೆ ತನ್ನೊಳ್
> ಗರುಡಂ ಗರುಡಂಗೆ ತಾನೆ ದೊರೆ ಪೆಱರಾರುಂ
> ದೊರೆಯಲ್ಲರೆಂಬ ತೆಱದಿಂ
> ದೊರೆಯಾದುವು ತನ್ನ ಗರುಡನೆಸೆವಾಕೃತಿಗಳ್
>
> ವೀರದ ಶಾಸನಮುಂ ಮು
> ನ್ನಾರುಂ ನಿಱಿಸಿದರಿಲ್ಲ ಬಲ್ಲಾಳ ಧರಿ
> ತ್ರೀರಮಣನ ಮಂತ್ರಿವರಂ
> ವೀರಭಟಂ ಕುವರ ಲಕ್ಷ್ಮದಂಡೇಶನವೊಲ್
>
> ತನ್ನೊಡನೆ ತೊಱಿದ ಸುಭಟರ
> ತನ್ನ ಮನಃಪ್ರಿಯೆಯ ತನ್ನ ಪರಮಾಯುಷ್ಯಂ
> ತನ್ನಾಳ್ದಂಗಾಯ್ತೆನಿಸಿದ
> ನೇನ್ನೆಟ್ಟನೆ ಕಲಿಯೊ ಕುವರಲಕ್ಷ್ಮಚಮೂಪಂ

---

೧. (ಮೈ) ಎಕ VII ಮದ್ದೂರು ೬೯ ಕ್ರಿ.ಶ. ೧೨೬೧.

೨. ಎಸ್‌ಐಐ IX(i) ಹರಪನಹಳ್ಳಿ ೨೭೬ ಕ್ರಿ.ಶ. ೧೧೮೩.

೩. (ರೈ) ಎಕ V ಬೇಲೂರು ೧೧೨ ಕ್ರಿ.ಶ. ೧೨೨೦.
'ಅನೇಕ ವೀರಗಲ್ಲುಗಳ ಶಿಲ್ಪದಲ್ಲಿ ವೀರನ ಎಡ ಅಥವಾ ಬಲಗಾಲಿನಲ್ಲಿ ಮಾತ್ರ ಅಂದಿಗೆಯನ್ನೂ ಕಡಗವನ್ನೋ ಹಾಕಿಕೊಂಡಿರುವಂತೆ ಬಿಡಿಸಿರುವುದನ್ನು ಗಮನಿಸಬಹುದು. ಇದು ಬಹುಶಃ ಗರುಡರು ಧರಿಸುತ್ತಿದ್ದ ಗಂಡ ಪೆಂಡೇರಗಳಿರಬಹುದೇ ಎಂಬ ಅನುಮಾನ ಬರುತ್ತದೆ. ಹೊಯ್ಸಳರ ಕಾಲದ ಅಮೃತಾಪುರದ ಅಮೃತೇಶ್ವರ ದೇವಾಲಯದ ಉತ್ತರದ ಕಡೆಗೆ ಇರುವ ಶಿಲ್ಪದ ವೀರನು ಬಹುಶಃ ಗರುಡನಿರಬೇಕೆಂದು ತೋರುತ್ತದೆ. ವಿಜಯನಗರ ಕಾಲದ ಶಿಲ್ಪಗಳಲ್ಲಿಯೂ ಈ ರೀತಿ ಒಂದು ಕಾಲಿಗೆ ಆಭರಣ ಧರಿಸಿರುವುದುಂಟು.' ಆರ್. ಶೇಷಶಾಸ್ತ್ರಿ : ಪೂರ್ವೋಕ್ತ, ಪು. ೧೮೬.

ಪತಿಭಕ್ತಿಗೆ ಗರುಡ, ಕುವರಲಕ್ಷ್ಮರು ಪರಸ್ಪರ ಸಮಾನರು, ಬೇರೆ ಯಾರೂ ಇಲ್ಲವೆಂಬ ರೀತಿಯಲ್ಲಿ ಸಮಾನರಾದ ಅವನ ಮತ್ತು ಗರುಡನ ವಿಗ್ರಹಗಳು ಶೋಭಿಸಿದವು. ವೀರದ ಶಾಸನವನ್ನು ಬಲ್ಲಾಳನ ಮಂತ್ರಿಯೂ, ವೀರಭಟನೂ ಆದ ಲಕ್ಷ್ಮದಂಡೇಶನಂತೆ ಯಾರೂ ಆ ಮೊದಲು ನಿಲ್ಲಿಸಿರಲಿಲ್ಲ. ಅವನೊಂದಿಗೆ ಪ್ರಾಣತ್ಯಾಗ ಮಾಡಿದ ಅವನ ಮಡದಿ ಮತ್ತು ವೀರಭಟರ ಪರಮಾಯುಷ್ಯವು ತನ್ನ ಒಡೆಯನಿಗಾಗಿ ಎಂದು ಸಮರ್ಪಿಸಿದ ಕಲಿ ಕುವರಲಕ್ಷ್ಮ.[೧] ಕುವರಲಕ್ಷ್ಮನನ್ನು ಕುರಿತು ಹೇಳುವಾಗ 'ಬಾಸೆಗೆ ತಪ್ಪುವಂಕದ ನೆಗಟ್ಟಿಯ ಲೆಂಕರ ಗಂಡನೆಂಬುದು' ಎಂದು ಹೇಳುತ್ತದೆ. ಶಾಸನದ ಕೊನೆಯ ಭಾಗದಲ್ಲಿ 'ವೇಳೆ' ಎಂಬ ಮಾತೂ ಬಂದಿದೆ. ಇವನ ಬಗ್ಗೆ ಸಾವಿರ ವೀರರು ಭಾವಿಸಿಕೊಂಡ ಉದಾತ್ತ ಭಾವನೆ ಗಮನಾರ್ಹವಾಗಿದೆ.

ತೊಱೆದಾಳ್ದನೊಡನೆ ಸಾಯದೆ
ಪೆಱಗುಱಿದಂ ತೊಱೆದು ಸತ್ತವನ ವೇಳೆ ದಲಾ
ವಱಿವೆವದನನೆಂಬ ಗಂಡರೆ
ತೊಱೆದರ್ ಕಲಿಕುವರ ಲಕ್ಷ್ಮನೊಡನತಿಸುಭಟರ್॥

ಒಡೆಯನಿಗೆ ಭಾಷೆಕೊಟ್ಟು ಅವನೊಡನೆ ಸಾಯದೆ, ವೇಳೆಗೊಂಡವನು ಅವನು, ತಾವು ಅದನ್ನು ಅರಿಯೆವು ಎಂದು ಹೇಳುವವರು ಶೂರರೇ? ಕುವರಲಕ್ಷ್ಮನೊಡನೆ ವೀರರು ಪ್ರಾಣತ್ಯಾಗವನ್ನು ಮಾಡಿದರು. ಈ ಶಾಸನದಲ್ಲಿ ಲೆಂಕ, ಗರುಡ, ವೇಳೆ ಈ ಮೂರು ಮಾತುಗಳು ಬಳಕೆಯಾಗಿವೆ. ಈ ಮೂರೂ ಕೂಡ ಸ್ವಾಮಿ- ಭೃತ್ಯರ ಸಂಬಂಧಿಯಾದವು; ಒಡೆಯನಿಗಾಗಿ ಪ್ರಾಣಾರ್ಪಣೆ ಮಾಡುವ ಪರಮನಿಷ್ಠೆಯ ಬಲಿದಾನ ಪ್ರಕಾರಗಳು. ವೇಳೆವಾಳಿಗಳು ಒಡೆಯನ ಮರಣ ಸಮಯದಲ್ಲಿ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿದ್ದವರು ಎಂದು ಭಾವಿಸಬಹುದು. ಲೆಂಕ ಮತ್ತು ಗರುಡ ಎಂಬ ಪದ್ಧತಿಗಳನ್ನು ಪ್ರತ್ಯೇಕಿಸಿ ಗುರುತಿಸುವುದು ಕಠಿಣ ಸಮಸ್ಯೆಯಾಗಿದೆ.

ಗರುಡರ ಲಕ್ಷಣಗಳಲ್ಲಿ ಮುಖ್ಯವಾಗಿ ಎದ್ದು ಕಾಣುವುವು ಅವರು ಒಡೆಯನಿಗೆ ಭಾಷೆಯನ್ನು ಕೊಡುವುದು, ಗಂಡಪೆಂಡೇರ ಅಥವಾ ತೊಡರನ್ನು ಎಡಗಾಲಿನಲ್ಲಿ ಧರಿಸುವುದು ಮತ್ತು ಅವರು ಮರಣವನ್ನಪ್ಪುತ್ತಿದ್ದ ವಿಶಿಷ್ಟ ರೀತಿ. ಕುವರ ಲಕ್ಷ್ಮನ ಮರಣವನ್ನು ಹೇಳುವ ಸಂದರ್ಭದಲ್ಲಿ 'ಪತಿಭಕ್ತಿಗೆ ತನ್ನಲ್ಲಿ ಗರುಡ, ಗರುಡನಲ್ಲಿ ತಾನು ಸಮಾನರು. ಅನ್ಯರಾರೂ ಇಲ್ಲ ಎಂಬ ರೀತಿಯಲ್ಲಿ ಅವನ ಮತ್ತು ಗರುಡನ ಆಕೃತಿಗಳು ಶೋಭಿಸಿದವು' ಎಂಬ ಮಾತು ಗಮನಾರ್ಹವಾಗಿದೆ.

ಲೆಂಕರು ಕೂಡ ಒಡೆಯರಿಗೆ ಭಾಷೆ ಕೊಟ್ಟು ಅದನ್ನು ಸಲ್ಲಿಸುತ್ತಿದ್ದರು. ಅವರೂ ಎಡಗಾಲಿಗೆ ತೊಡರನ್ನು ಧರಿಸುತ್ತಿದ್ದರು (ಆದರೆ ಎಲ್ಲ ಲೆಂಕರೂ ತೊಡರನ್ನು ಧರಿಸುತ್ತಿದ್ದರೆಂಬುದಕ್ಕೆ ಖಚಿತ ಆಧಾರಗಳಿದ್ದಂತಿಲ್ಲ). ಇವರು ಒಡೆಯನ ಮರಣಾನಂತರ ಕೊಟ್ಟ ಭಾಷೆಯಂತೆ ಪ್ರಾಣಾರ್ಪಣೆಯನ್ನು ಮಾಡಿಕೊಳ್ಳುತ್ತಿದ್ದರು. ಅಗ್ರಹಾರ ಬಾಚಹಳ್ಳಿಯ ಶಾಸನ ಅನ್ವಯಾಗತ ಲೆಂಕವಾಳಿಯನ್ನು ಹೇಳುವಾಗ ಕನ್ನೆಯನಾಯಕ ಮತ್ತು ರಂಗೆಯ ನಾಯಕರು ತಮ್ಮ ಮಡದಿಯರು ಮತ್ತು ಲೆಂಕ ಲೆಂಕಿತಿಯರ ಜೊತೆ ಪ್ರಾಣತ್ಯಾಗ ಮಾಡುವಾಗ ಆರುಬಾರಿ, ಏಳುಬಾರಿ 'ಗರುಡನನಪ್ಪಿ' 'ಭಾಷೆಯಂ ಪೂರೈಸಿದ' ವಿಷಯ ಬರುತ್ತದೆ. ಕುವರ ಲಕ್ಷ್ಮನು ಬಲಿದಾನ ನೀಡಿದ್ದಕ್ಕೂ ಕನ್ನೆಯನಾಯಕ, ರಂಗೆಯನಾಯಕ ಬಲಿದಾನ ಮಾಡಿದ್ದಕ್ಕೂ ಸಾಮ್ಯವಿದ್ದಂತಿದೆ. ಅಗ್ರಹಾರ ಬಾಚಹಳ್ಳಿಯ ಶಾಸನಗಳಲ್ಲಿ ಅವರನ್ನು ಲೆಂಕರೆಂದು ಕರೆದಿದ್ದರೂ ಅವರ ಮರಣದ ರೀತಿ ಗರುಡ ರೀತಿಯದೇ ಆಗಿರುವಂತಿದೆ. ಲೆಂಕರು ಆನೆಯ ಮೇಲೆ ಕುಳಿತು ಗರುಡನೊಡನೆ ಹೋರಾಡಿ ಅವನನ್ನಪ್ಪಿ ಬಾಸೆಯನ್ನು ಪೂರೈಸಿದರು ಎಂದು ಬರುವುದರಿಂದ (ಇದಕ್ಕೆ ಸ್ಪಷ್ಟ ವಿವರಣೆ ಕೊಡುವುದು ಕಷ್ಟವಾದರೂ) ಪ್ರಾಣಾರ್ಪಣೆಯ ವಿಶೇಷತೆಯಲ್ಲಿ ಸಾಮ್ಯವಿರುವಂತಿದೆ.

---

೧. ಎಂ.ಜಿ. ಮಂಜುನಾಥ ಅವರು ಒಂದು ಶಾಸನವನ್ನು ಇತ್ತೀಚೆಗೆ ಗುರುತಿಸಿ ಬಲ್ಲಾಳನ ಮರಣಪೂರ್ವದಲ್ಲೇ ಕುವರಲಕ್ಷ್ಮನು ಸತ್ತಿರಬೇಕೆಂದು ತಿಳಿಸುತ್ತಾರೆ. ಏಕೆಂದರೆ ಕುವರಲಕ್ಷ್ಮನು ಸತ್ತ ಮೂರು ದಿನಗಳೊಳಗೆ ತಾನೂ ಸಾಯುತ್ತೇನೆ ಎಂದು ಭಾಷೆ ಕೊಟ್ಟಿದ್ದ ಆತನ ಗರುಡನಾದ ಬಿಲ್ಲ ಬೇಟೆಯ ಕಬ್ಬಿಲ ಜೋಗೆಯನಾಯಕನು ತಾನು ಕೊಟ್ಟ ಮಾತನ್ನು ತನ್ನ ಮಡದಿಯೊಂದಿಗೆ ನೆರವೇರಿಸಿಕೊಂಡನು. ಈ ಶಾಸನದ ಕಾಲ ಕ್ರಿ.ಶ. ೧೨೧೬. (ಮೈ) ಎಕ IX ಹಳೇಬೀಡು ೩೭೨.

ಹನ್ನೆರಡು ಹದಿಮೂರನೆಯ ಶತಮಾನದಲ್ಲಿ ಲೆಂಕ ಪದ್ಧತಿ ಸಾಕಷ್ಟು ಪ್ರಚಲಿತವಾಗಿದ್ದಿತು. ಜನ್ನಕವಿಯ ಅನಂತನಾಥ ಪುರಾಣದಲ್ಲಿ ತಮ್ಮ ಒಡೆಯರು ಮಡಿದ ಕೂಡಲೆ ತಲೆಗಳನ್ನು 'ಸಿಡಿತಲೆ'ಗಳಾಗಿ ಕೊಡುತ್ತಿದ್ದ ವಿಷಯ ತಿಳಿದು ಬರುತ್ತದೆ.[೧] ಅಲ್ಲದೆ ಲೆಂಕರೊಡನೆ ಲೆಂಕಿಯರು ಸಹಗಮನ ಮಾಡಲು ಸಿದ್ಧರಾದ ವಿಷಯವೂ ನಿರೂಪಿತವಾಗಿದೆ.[೨]

ಭಾಷೆ ಕೊಟ್ಟ ಒಡೆಯರಿಗಾಗಿ ಪ್ರಾಣಾರ್ಪಣೆ ಮಾಡುತ್ತಿದ್ದ ವಿಶಿಷ್ಟ ವೀರರನ್ನು 'ಗರುಡ'ನೆಂಬ ಹೆಸರಿನಿಂದ ಗುರುತಿಸುತ್ತಿದ್ದುದನ್ನು ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ ಅವುಗಳ ಉಲ್ಲೇಖಗಳಿಲ್ಲವೆಂದು ಅದರ ಅಸ್ತಿತ್ವದ ಬಗ್ಗೆ ಸಂದೇಹವನ್ನು ಕೆಲವು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ.[೩] ಆದರೆ ಶಾಸನಗಳಲ್ಲಿ 'ಗರುಡ' ಉಲ್ಲೇಖಗಳನ್ನು ಈಗಾಗಲೇ ಗಮನಿಸಲಾಗಿದೆ. ಇಂಗಲಗುಪ್ಪೆಯ ಶಾಸನದಲ್ಲಿ 'ಇಗಿಲ ಗುಪೆಯ ಶ್ರೀ ಆಗಲುಡಪ(ವೆ)ಗೆ ತಂಮಣ ಬಿಲವ ಪಗಡ ಆಧ'[೪] ಎಂದು ಬರುತ್ತದೆ. ತಮ್ಮಣ ಬಿಲ್ವಪನೆಂಬುವನು ಆ ಗೌಡನಿಗೆ ಗರುಡನಾದಂತೆ ಹೇಳಿದ ಹಾಗೆ ಕಾಣುತ್ತದೆ. ಸಾಹಿತ್ಯ ಕೃತಿಗಳಲ್ಲಿ ಗರುಡನೆಂಬ ಉಲ್ಲೇಖಗಳು ಕಂಡು ಬರುವುದಿಲ್ಲ.[೫]

ಒಡೆಯರಿಗಾಗಿ ಪ್ರಾಣಾರ್ಪಣೆ ಮಾಡುತ್ತಿದ್ದ ಪದ್ಧತಿ ತಮಿಳುನಾಡು ಮತ್ತು ಆಂಧ್ರ ಪ್ರದೇಶದಲ್ಲೂ ಪ್ರಚಲಿತವಿದ್ದುದು ತಿಳಿದುಬರುತ್ತದೆ. ರಾಜನಿಗಾಗಿ ಆಯ್ಕೆಯಾದ ಅಂಗರಕ್ಷಕರು ರಾಜನೊಂದಿಗೆ ಭೋಜನವನ್ನು ಪಟ್ಟಾಭಿಷೇಕದ ದಿನ ಹಂಚಿಕೊಳ್ಳುತ್ತಿದ್ದರು. ಆವರು ರಾಜನ ಪ್ರಾಣವನ್ನು ರಕ್ಷಿಸುವ ಹೊಣೆ ಹೊತ್ತವರು. ಅವರು ರಾಜನ ಮರಣಾನಂತರ ಬಹುಶಃ ಪ್ರಾಣಾರ್ಪಣೆ ಮಾಡುತ್ತಿದ್ದರು. ಇವರನ್ನು ಚೋಳರ ಕಾಲದಲ್ಲಿ 'ವೇಳೈಕಾರ'ರೆಂದೂ ಪಾಂಡ್ಯರಲ್ಲಿ 'ಆಪತ್ತೊದವಿಗಳ್' ಎಂದೂ ಕರೆಯುತ್ತಿದ್ದರು.[೬] ತಮಿಳುನಾಡಿನ ದೇವಾಲಯಗಳಲ್ಲೂ 'ವೇಲೈಕ್ಕಾರ'ರು ಇದ್ದು ಅವರು ದೇವಸ್ಥಾನದ ದೇವರಿಗೆ ನಿಷ್ಠೆಯಿಂದ ನಡೆದುಕೊಳ್ಳುತ್ತಿದ್ದುದು ತಿಳಿದುಬರುತ್ತದೆ.[೭]

ಕನ್ನಡನಾಡಿನ ಮಲೆನಾಡಿನ ಕೆಲವು ಸ್ಥಳಗಳಲ್ಲಿ 'ಗಡ್ಡಮಂಡೆ'[೮] ಎಂಬ ವಿಶಿಷ್ಟ ಪದ್ಧತಿ ತೀರಾ ಇತ್ತೀಚಿನವರೆಗೂ ಬಳಕೆಯಲ್ಲಿದ್ದಿತು. ಮಲೆನಾಡಿನ ಹರಿಜನರಲ್ಲಿ ಮತ್ತು ಊರಿನ ಗೌಡರಲ್ಲಿ ಬೆಳೆದು ಬಂದ ಈ ಸಂಪ್ರದಾಯ ವಿಶಿಷ್ಟವಾದುದು. ಗೌಡನು ಸತ್ತಾಗ ಮನೆಮಗನಿಗಿಂತಲೂ ಹೆಚ್ಚಾಗಿ ಅವನ ಸೇವಕ (ಹುಟ್ಟಾಳು) ಸಂಸ್ಕಾರದಲ್ಲಿ ಭಾಗವಹಿಸುತ್ತಾನೆ; ಗೌಡನ ಸಾವಿನ ದಿನ ಅವನು ತನ್ನ ಗಡ್ಡಮಂಡೆಗಳನ್ನು ನುಣ್ಣಗೆ ಬೋಳಿಸಿಕೊಳ್ಳುತ್ತಾನೆ. ಇವರನ್ನು ಗಡ್ಡಮಂಡೆ ಒಕ್ಕಲು ಎನ್ನುವರು. ಗೌಡನ ಶವದ ಬಾಯಲ್ಲಿ ಎಲೆ ಅಡಿಕೆ ಕುಟ್ಟಿ ಇಟ್ಟಿರುತ್ತಾರೆ. ಈ ಬಾಯ್ದಂಬುಲವನ್ನು ತೆಗೆದು ಗಡ್ಡಮಂಡೆಗೆ ಕೊಡುತ್ತಾರೆ. ಅವನು ಅದನ್ನು ಬಾಯಲ್ಲಿ ಹಾಕಿಕೊಂಡು ಹಾಗೆಯೇ ಹೋಗಿ ಗೌಡನ ಒಂದು ಗದ್ದೆಕ್ಕೆ ಅಗಿದು ಉಗಿದು ಬಿಡುತ್ತಾನೆ. ಇಂಥ

---

೧. ಅನಂತನಾಥ ಪುರಾಣಂ. ೧೨-೧೧ ವಚನ.

೨. ಅದೇ, ೧೨-೨೦.

೩. S. Settar and M.M. Kalaburgi : 'The Hero cult', Memorial Stones ಪು. ೩೧.
ಎಂ.ಎಂ. ಕಲಬುರ್ಗಿ : ಪೂರ್ವೋಕ್ತ, ಪು. ೫೯.

೪. (ಮೈ) ಎಕ VI ಪಾಂಡವಪುರ ೨೪೬ ಕ್ರಿ.ಶ. ೧೧೮೯. ಈ ಶಾಸನದ ಕೊನೆಯ ಭಾಗದಲ್ಲಿರುವ 'ಗಡ ಆಧ' ಎನ್ನುವುದು ಗರುಡ ಆದ ಎಂದಿರಬೇಕು.

೫. ಒಡೆಯನೊಂದಿಗೆ ಸಮಾಧಿಯಾಗುತ್ತಿದ್ದ ಪದ್ಧತಿಯಾದ 'ಕೀಳ್ಗುಂಟೆ'ಯೂ ಸಾಹಿತ್ಯ ಕೃತಿಗಳಲ್ಲಿ ಕಂಡುಬಂದಂತಿಲ್ಲ. ಆದರೆ ಅದು ಶಾಸನಗಳಲ್ಲಿ ಕಂಡುಬಂದಿದೆ.

೬. K. A. Nilakanta Sastry : A History of South India ಪು. ೩೧೭.

೭. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು. ೩೧೨.

೮. ಮ. ರಾಜಶೇಖರ ನಾರ್ವೆ : 'ಗಡ್ಡಮಂಡೆ ಪದ್ಧತಿ' ಸಾಧನೆ ೯-೧ ಪು. ೧೫೨-೧೫೭.

ಗದ್ದೆಯನ್ನು ಗಡ್ಡಮಂಡೆ ಗದ್ದೆ ಎನ್ನುತ್ತಾರೆ. ಅವನಿಗೆ ಗೌಡನು ಉಪಯೋಗಿಸುತ್ತಿದ್ದ ತಟ್ಟೆ, ಚೊಂಬು, ಹಾಸಿಗೆ, ಬಟ್ಟೆ ಮುಂತಾದುವನ್ನು ಕೊಡುತ್ತಾರೆ. ಹೀಗೆ ಸೇವಕ ತನಗೆ ಬೇಕಾದ ಭೂಮಿಯನ್ನು ತಾನೇ ಆರಿಸಿಕೊಳ್ಳುವ ಸ್ವಾತಂತ್ರ ಅವನಿಗೆ ಇರುತ್ತಿದ್ದುದು ಸ್ವಾರಸ್ಯವಾಗಿದೆ. ಇಲ್ಲಿ ಆತ್ಮ ಬಲಿ ಇಲ್ಲದೇ ಹೋದರೂ ಹೆಣದ ಬಾಯ್ದಂಬುಲ ಅಗಿಯುವುದು, ಮನೆಮಗನಂತೆ ಅವನು ನಡೆದುಕೊಳ್ಳುವುದರಲ್ಲಿ ವೇಳೆವಾಳಿ ರೀತಿಯ ಅವಶೇಷಗಳನ್ನು ಕಾಣಬಹುದಾಗಿದೆ.

**ಸಹಗಮನ:**

ಮಡಿದ ರಾಜನ ಅಥವಾ ವೀರನ ಜೊತೆಯಲ್ಲಿ ಅವನ ವಿಧವೆಯನ್ನು ಸುಡುವ ಪದ್ಧತಿ ಪ್ರಾಚೀನ ಭಾರತದಲ್ಲಿ ಮಾತ್ರವಲ್ಲ ಪ್ರಾಚೀನ ಗ್ರೀಸ್, ಜರ್ಮನಿ, ಯೂರೋಪು ಇನ್ನೂ ಮುಂತಾದ ದೇಶದ ಜನಾಂಗಗಳಲ್ಲಿ ಹಿಂದಿನಿಂದಲೂ ನಡೆದು ಬಂದಿದೆ.[೧] ಈ ಪದ್ಧತಿ ಚೀನಾದೇಶದಲ್ಲೂ ಆಳವಾಗಿ ಬೇರೂರಿದ್ದಿತು. ಆ ದೇಶದಲ್ಲಿ ವಿಧವೆಯಾದವಳು ಪಾತಿವ್ರತ್ಯ ಸದ್ಗುಣಗಳನ್ನು ಕಾಪಾಡಿಕೊಂಡು ಬಂದರೆ ಅವಳ ಗೌರವಾರ್ಥ ಒಂದು ಕಮಾನನ್ನು ಮಾಡಿಸಿಕೊಟ್ಟು ಅದನ್ನು ದೇವಸ್ಥಾನದಲ್ಲಿ ಪೂಜೆಗೆಂದು ಇಡಲಾಗುತ್ತಿತ್ತು.[೨] ಭಾರತದಲ್ಲಿ ವೈದಿಕಯುಗದಲ್ಲಿ ಸತಿ ಆಚರಣೆ ಬಳಕೆಯಲ್ಲಿರಲಿಲ್ಲವೆಂದು ತಿಳಿದು ಬರುವುದಾದರೂ ಅಥರ್ವಣ ವೇದದಲ್ಲಿ ಸತ್ತ ಗಂಡನೊಂದಿಗೆ ಚಿತೆಯಲ್ಲಿ ಮಲಗಿದ ಮಡದಿಯನ್ನು ಕರೆಯುವ ವಾಕ್ಯಗಳಿವೆ.[೩] ಆದರೆ ಮುಂದೆಯೂ ಸ್ಮೃತಿಕಾರರು ಅಷ್ಟಾಗಿ ಸತಿಪದ್ಧತಿಯನ್ನು ಒಪ್ಪಿದಂತೆ ಕಂಡುಬರುವುದಿಲ್ಲ. ಕ್ರಿ.ಶ. ೪ನೆಯ ಶತಮಾನದಿಂದ ಅದು ಕ್ರಮೇಣ ಪ್ರಚಾರಕ್ಕೆ ಬರಲು ಆರಂಭಿಸಿತು. ಕಾಲಕ್ರಮೇಣ ಅದು ಒಂದು ವ್ಯವಸ್ಥೆಯಾಗಿ ಬೆಳೆದಂತೆ, ಸತ್ತ ವ್ಯಕ್ತಿಯ ಜೊತೆ ಮಡದಿಯರಲ್ಲದೆ ಅವನ ವೇಶ್ಯೆಯರೂ ಸಹಗಮನ ಮಾಡುತ್ತಿದ್ದರು.[೪]

ದಕ್ಷಿಣ ಭಾರತದಲ್ಲಿ ಕ್ರಿ.ಶ. ಹತ್ತನೆಯ ಶತಮಾನದನಂತರ ಸಹಗಮನ ಹೆಚ್ಚು ಪ್ರಚಾರಕ್ಕೆ ಬಂದಂತೆ ತಿಳಿದು ಬರುತ್ತದೆ. ಕರ್ನಾಟಕದಲ್ಲಿ ದೊರೆತ ಶಾಸನವಿರುವ ಅತ್ಯಂತ ಪ್ರಾಚೀನ ಸತಿ ಸ್ಮಾರಕ ಕ್ರಿ.ಶ. ೪೦೦[೫] ಅನಂತರ ಕ್ರಿ.ಶ. ೬ನೆಯ ಶತಮಾನದ ಪೂರ್ವಾರ್ಧಕ್ಕೆ[೬] ಸೇರುತ್ತದೆ ಎಂದು ತಿಳಿಯಲಾಗಿದ್ದು ಈ ಎರಡೂ ಸಂಸ್ಕೃತ ಭಾಷೆಯಲ್ಲಿವೆ. ಕನ್ನಡ ಭಾಷೆಯಲ್ಲಿ ಸಹಗಮನದ ಸ್ಪಷ್ಟ ಐತಿಹಾಸಿಕ ನಿದರ್ಶನ ಕ್ರಿ.ಶ. ೯೭೨ರ ಶಾಸನದಿಂದ ದೊರೆಯುತ್ತದೆ. ಬಿದಿಯಣ್ಣ ಎನ್ನುವವನು ಮಡಿದಾಗ ಅವನ ಹೆಂಡತಿ ಜಕ್ಕಬ್ಬೆಯೂ ಪ್ರಾಣ ತ್ಯಜಿಸುತ್ತಾಳೆ. ಅವಳ ತಂಗಿ ಜಾಬೆಯು ಕಲ್ಲನ್ನು ನಿಲ್ಲಿಸುತ್ತಾಳೆ.[೭] ಅಲ್ಲಿಂದ ಮುಂದೆ ಇತಿಹಾಸದಲ್ಲಿ ಸಹಗಮನದ ನಿದರ್ಶನಗಳು ದೊರೆಯುತ್ತಾ ಹೋಗುತ್ತವೆ.

ನಮ್ಮ ಅಧ್ಯಯನಾವಧಿಯ ಕಾಲದಲ್ಲಿ ಸತಿ ಪದ್ಧತಿ ಸಾಕಷ್ಟು ಪ್ರಚಾರದಲ್ಲಿದ್ದುದಕ್ಕೆ ಶಾಸನಗಳಿಂದ ನಿದರ್ಶನಗಳು ದೊರೆಯುತ್ತವೆ. ಅವುಗಳಲ್ಲಿ ಕೆಲವನ್ನು ಗಮನಿಸಬಹುದು. ಹಿರೆಹಾರಕದ ಶಾಸನದಲ್ಲಿ ಬೀರಣನೆಂಬುವನು ಯುದ್ಧದಲ್ಲಿ ಹೋರಾಡಿ ಕುದುರೆಯನ್ನು ಕೊಂದು ಮಡಿದಾಗ ಅವನ ಮಡದಿ 'ಜಟಿಬಿಯವ್ವೆ ಕಲ್ಲನಿಜಿಸುವಲ್ಲಿ ಕೂಡೆ ಸ್ವರ್ಗವಂ ಸೂಜಿಗೊಂಡಳೆಂ'ದು[೮] ಬರುತ್ತದೆ. ಮಲದೇವನ ಹಳ್ಳಿಯ ಶಾಸನವೊಂದರಲ್ಲಿ ತುರುಗಾಳಿಗದಲ್ಲಿ ಮಲೆಯೂರ ವೀರಪದೇವರು ಮಡಿದಾಗ ಅವನ ಸತಿ 'ಮಸತಿ'ಯಾದಳೆಂದು ನಿರೂಪಿತವಾಗಿದೆ[೯]. ಹೊಸನಗರದ ಶಾಸನವೊಂದರಲ್ಲಿ ದುಂಮ(?) ಸ್ತಲದ

೧. Encyclopaedia of Religion and Ethics VI ಪು. ೮೪೭.
೨. Upendra Thakur : History of Suicide in India. ಪು. ೨೬೧.
೩. A. S. Altekar : The Position of Women in Hindu Civilization. ಪು. ೧೧೮.
೪. ಅದೇ, ಪು. ೧೨೭.
೫. ಬಸವರಾಜ ಕಲ್ಗುಡಿ : ಮಹಾಸತಿ ಆಚರಣೆ : ಒಂದು ಅಧ್ಯಯನ, ಪು. ೬೩.
೬. ಬಿ.ಎಸ್. ಶೇಠಿ : ಕರ್ನಾಟಕದಲ್ಲಿ ಸತಿ ಪದ್ಧತಿ, ಪು, ೧೩೯.
೭. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೩೧೬.
೮. (ರೈ) ಎಕ VII ಶಿಕಾರಿಪುರ ೩೮ ಕ್ರಿ.ಶ. ೧೧೭೩.
೯. ಎಂಎಆರ್ ೧೯೨೯ ಚಾಮರಾಜನಗರ ೪೨ ಕ್ರಿ.ಶ. ೧೨ ಶಮಾ.

ಕಾಜಬ್ಬೆಗಳು ಸತಿಯಾದ ವಿಷಯವನ್ನು ತಿಳಿಸುತ್ತದೆ.[೧] ಹಾರೋಬೆನ ಹಳ್ಳಿಯ ಶಾಸನವು ತುಱುಗಾಳಗದಲ್ಲಿ ಭಾಗವಹಿಸಿ ಮಡಿದ ಬೊಮ್ಮೆಯನಾಯ್ಕನ ಹೆಂಡತಿ '...ಬವೆನಾಯಕಿತ್ತಿ ತೋಳು ಕಯೆಗೊಟ್ಟು ಸ್ವರ್ಗ್ಗಪ್ರಾಪ್ತೆ'ಳಾದ ವಿಷಯವನ್ನು ತಿಳಿಸುತ್ತದೆ. ಅವರ 'ಊರ್ದ್ವಕ್ರಿಯೆ'ಗಳನ್ನು ಅವರ ಮಗ ಪಿಳ್ಳೆಯ ನಾಯ್ಕ ಮಾಡಿದಂತೆ ತಿಳಿದುಬರುತ್ತದೆ.[೨] ಅರುವನ ಹಳ್ಳಿಯ ಶಾಸನವೊಂದು ಕೀರ್ತಿಯರಸನ ಮಗನಾದ ನಾಗರ್ನ್ನು ಮರಣ ಹೊಂದಲು ಬಯಿಚಕ್ಕ, ಬಾಯಿದೇವಿ, ಮಾದರಗವುಡಿಯರು ಮರಣಹೊಂದಿದ ವಿಷಯವನ್ನು ತಿಳಿಸುತ್ತದೆ.[೩] ಇಟ್ಟಿಗಿಯ ಶಾಸನವು ಹರಿಕಾರ... ಪಮಗಬಾವ... ಸ್ವರ್ಗಸ್ಥನಾಗಲು ಆತನ ಮದವಳಿಗೆ ಸಹಗಮನ ಮಾಡಿ ಸ್ವರ್ಗಸ್ಥೆಯಾದ ವಿಷಯವನ್ನು ತಿಳಿಸುತ್ತದೆ.[೪] ಕೋವಿಕಾರ ದೇವೆಯ 'ಸರ್ಪದಷ್ಟವಾದಲ್ಲಿ' ಅವನ ಸತಿ ಮುದ್ದೋನಕೇತಿ ಮಹಾಸತಿಯಾಗಿ ವೈಕುಂಠಪ್ರಾಪ್ತಿಯಾದಳೆಂದು ತಿಳಿದು ಬರುತ್ತದೆ.[೫] ನಿಡುಗೋಡಿನ ಶಾಸನದಲ್ಲಿ ಹರಿಗೆ ಸಿದ್ದಣನು ಅವನ ತಂಗಿ ತಿಮ್ಮಮ್ಮನಿಗೆ 'ಮಾಸ್ತಿಕಲ್ಲ ಕಡಿಸಿ ನಿಲಿಸಿದೊ' ಎಂದು ಬರುತ್ತದೆ.[೬] ಬೆಡುಕಣಿಯ ರಾಮಗೌಡ ಸ್ವರ್ಗಸ್ಥನಾಗಲು ಅವನ ಮಡದಿ ಮಸಣಿಗೌಡಿ 'ಸಹಗಮನವಂ ಮಾಡಿದ ಮಹಾಸತಿಯಾ ಕಂಭಕೆ ಮಂಗಳ ಮಹಾಶ್ರೀ' ಎಂದು ಶಾಸನವೊಂದು ತಿಳಿಸುತ್ತದೆ.[೭]

ಇದುವರೆಗೂ ಗಮನಿಸಿದ ಶಾಸನಗಳಲ್ಲಿ ಸಹಗಮನವನ್ನು ಹೇಳಲು ಮಸತಿ, ಸತಿ, ತೋಳು ಕಯೆಗೊಟ್ಟು, ಸಹಗಮನ, ಮಹಾಸತಿ, ಮಾಸ್ತಿ, ಸಹಗಮನವಂ ಮಾಡಿದ ಮಹಾಸತಿ ಎಂಬಂತಹ ಮಾತುಗಳು ಬಳಕೆಯಾಗಿವೆ. ಇವೆಲ್ಲವೂ ಪತಿಯ ಮರಣಾನಂತರ ಪತ್ನಿಯು ಪ್ರಾಣತ್ಯಾಗ ಮಾಡಿದ್ದನ್ನು ಬೇರೆ ಬೇರೆ ಮಾತುಗಳಲ್ಲಿ ಹೇಳುತ್ತವೆ.

ಅರಸಿಕೆರೆಯ ಒಂದು ತ್ರುಟಿತ ಶಾಸನ[೮] '...ರೋಜನ ಸೊಸಿ ಮಹಾದೇವಿ ತನ್ನ ಗಂಡನಂ ಕೊಸ್ದುಂ ಸುರಲೋಕ ಪ್ರಾಪ್ತಿಯಾದಳು' ಎಂದು ತಿಳಿಸುತ್ತದೆ. ಈ ಶಾಸನ ಮಹಾದೇವಿ ಎನ್ನುವವಳು ಸತಿಯಾದುದನ್ನು ತಿಳಿಸುವುದಾದರೂ ಸರಿಯಾದ ಪಾಠ ತನ್ನ 'ಗಂಡನಂ ಕೊಣ್ಡುಂ' ಎಂದಿರಬೇಕು. ಬಹುಶಃ ಗಂಡನ ದೇಹದೊಂದಿಗೆ ಸಹಗಮನ ಮಾಡಿದಳು ಎಂದು ಭಾವಿಸಬೇಕೆಂದು ಕಾಣುತ್ತದೆ.

ಗಂಡನೊಂದಿಗೆ ಹೆಂಡತಿ ಮಡಿಯುವುದು ಸಾಮಾನ್ಯವಾಗಿ ಕಂಡುಬರುವ ಪದ್ಧತಿ. ಆದರೆ 'ಹೆಗೋಡೆ ಬಯಿರಗವುಡರು ಅವನ ಸತಿ ಸಂಗಡ ವಯಿಕುಂಠಪ್ರಾಪಿತರಾದರು' ಎಂದು ಒಂದು ಶಾಸನ ಹೇಳುತ್ತದೆ.[೯] ಇದು ಅತ್ಯಂತ ವಿರಳ ನಿದರ್ಶನವಾಗಿದೆ. ಜಾನಪದ ಸಾಹಿತ್ಯ 'ಕೆರೆಗೆ ಹಾರ'ದಲ್ಲಿ ಭಾಗೀರಥಿಯನ್ನು ಅನುಸರಿಸಿ ಅವಳ ಗಂಡ ಮಹದೇವ, ಸಾಹಿತ್ಯ ಕ್ಷೇತ್ರದಲ್ಲಿ

---

೧. ಎಂಎಆರ್ ೧೯೩೧ ಸಾಗರ ೬೧ ಕ್ರಿ.ಶ. ೧೨೩೮.

೨. (ರೈ) ಎಕ VII ಶಿವಮೊಗ್ಗ ೬೧ ಕ್ರಿ.ಶ. ೧೨೮೭.

೩. (ಮೈ) ಎಕ VII ಮದ್ದೂರು ೯೬ ಕ್ರಿ.ಶ. ೧೩೬೯.

೪. ಎಸ್ಐಐ XVIII ರಾಣೆಬೆನ್ನೂರು ೪೦೯ ಕ್ರಿ.ಶ. ೧೪ ಶಮಾ.

೫. (ರೈ) ಎಕ VIII ಸೊರಬ ೪೮೩ ಕ್ರಿ.ಶ. ೧೩೮೮.

೬. ಎಂಎಆರ್ ೧೯೩೧ ನಗರ ೭೬ ಕ್ರಿ.ಶ. ೧೪೩೪.

೭. ಕಇ V ಸಿದ್ದಾಪುರ ೧೧೬ ಕ್ರಿ.ಶ. ೧೪೩೭.

೮. (ರೈ) ಎಕ V ಅರಸಿಕೆರೆ ೮೧ ಕ್ರಿ.ಶ. ೧೨೨೫. ಈ ಶಾಸನದ ಇಂಗ್ಲಿಷ್ ಭಾಷಾಂತರ ಹೀಗಿದೆ. 'In the Kingdom (or reign) of Narasimhadeva... rojas daughter in law the Mahadevi having put her husband to death gained the world of Gods.'

೯. ಎಂ. ಎಂ. ಕಲಬುರ್ಗಿ ಪೂರ್ವೋಕ್ತ,, ಪು. ೪೦.

ಅನಂತನಾಥ ಪುರಾಣದಲ್ಲಿ ಸುನಂದೆಯನ್ನು ಅನುಸರಿಸಿ ಗಂಡನಲ್ಲದೇ ಹೋದರೂ ಚಿತೆ ಏರುವ ಚಂಡಶಾಸನ-ಇವರು ಸತಿಗಾಗಿ ಆತ್ಮಬಲಿಯಾದ ವಿರಳ ಪುರುಷರಾಗಿದ್ದಾರೆ.'

ಪತಿಯ ಮರಣಾನಂತರ ಅವನೊಡನೆ ಪ್ರಾಣತ್ಯಾಗ ಮಾಡುತ್ತಿದ್ದ ಸ್ತ್ರೀಯರನ್ನು 'ಮಹಾಸತಿ' ಎಂದು ಕರೆಯುತ್ತಿದ್ದರು. ಮಹಾಸತಿಯ ಸಂಕ್ಷಿಪ್ತರೂಪವೇ ಮಾಸ್ತಿಯಾಗಿದೆ. ಹಾಗೆ ಮರಣ ಹೊಂದಿದ ಸ್ತ್ರೀಯರ ಸ್ಮಾರಕವಾಗಿ ನಿಲ್ಲಿಸುತ್ತಿದ್ದ ಕಲ್ಲುಗಳೇ ಮಾಸ್ತಿಕಲ್ಲುಗಳು. ಸಾಮಾನ್ಯವಾಗಿ ಮಾಸ್ತಿಕಲ್ಲುಗಳಲ್ಲಿ ಎದ್ದು ಕಾಣುವ ಮುಖ್ಯ ಅಂಶವೆಂದರೆ ಎತ್ತಿದ ತೋಳಿನ ಸ್ತ್ರೀಯ ಚಿತ್ರ. ಕೆಲವು ಶಿಲ್ಪಗಳಲ್ಲಿ ಸ್ತ್ರೀ ಪುರುಷರಿಬ್ಬರ ಶಿಲ್ಪಗಳೂ ಇರುವುದುಂಟು.[೧] ಕೆಲವು ಶಿಲ್ಪಗಳಲ್ಲಿ ಪುರುಷನ ಚಿತ್ರ ಚಿಕ್ಕ ಪ್ರಮಾಣದಲ್ಲಿದ್ದು ಸ್ತ್ರೀಯ ಚಿತ್ರ ದೊಡ್ಡ ಪ್ರಮಾಣದಲ್ಲಿರಬಹುದು.[೨] ಕೆಲವು ಶಿಲ್ಪಗಳಲ್ಲಿ ಒಂದು ಕಂಬದ ಬಲಭಾಗದಿಂದ ತೋಳು ಎತ್ತಿದ ಹಾಗೆ ಇರುವುದುಂಟು. ಇದನ್ನು ಒಂಟಿ ಕೈ ಮಾಸ್ತಿಕಲ್ಲು ಅಥವಾ ವ್ಯಾಸನ ತೋಳು ಎಂದು ಕರೆಯುವ ವಾಡಿಕೆ ಇದೆ. ಕೆಲವು ಸಾರಿ ಕಂಬದಿಂದ ಎರಡು ಕೈಗಳು ಹೊರಟಂತೆ ಚಿತ್ರಣವಿರುತ್ತದೆ. ಇಂಥವು ವಿರಳವಾಗಿವೆ. ಇವನ್ನು ಇಕ್ಕೈ ಮಾಸ್ತಿಕಲ್ಲು ಎಂದು ಕರೆಯುತ್ತಾರೆ.[೩] ಮಾಸ್ತಿ ವಿಗ್ರಹಗಳು ಎಡಗೈಯಲ್ಲಿ ನಿಂಬೆಯ ಹಣ್ಣನ್ನು ಹಿಡಿದಂತೆ ಅಥವಾ ಮಾದಲ ಫಲವನ್ನು ಹಿಡಿದಂತೆ ಚಿತ್ರಣಗೊಂಡಿರುತ್ತದೆ.[೪] ಸಾಮಾನ್ಯವಾಗಿ ಮಾಸ್ತಿ ತೋಳು ಕೈತುಂಬ ಬಳೆಗಳನ್ನು ತೊಟ್ಟ ಹಾಗೆಯೂ, ಮಾಸ್ತಿವಿಗ್ರಹ ವಿಶೇಷ ಅಲಂಕಾರಯುಕ್ತವಾಗಿಯೂ ಇರುತ್ತದೆ. ಅನೇಕ ಊರುಗಳಲ್ಲಿ ಮಹಾಸತಿಯ ಸ್ಮಾರಕವಾಗಿ ಗುಡಿಗಳನ್ನು ಕಟ್ಟಿ ಆರಾಧಿಸಲಾಗುತ್ತಿದೆ.[೫] ಕೆಲವು ಕಡೆ ಖಡ್ಗ, ಕನ್ನಡಿ, ಬೆಳ್ಳಿಯ ನಿಂಬೆಹಣ್ಣು, ಬಳೆ ಮುಂತಾದುವನ್ನು ಸ್ಮಾರಕವಾಗಿ ಇಟ್ಟುಕೊಂಡಿರುವುದುಂಟು.

ಮರಣಹೊಂದಿದ ಗಂಡನ ಶವದೊಂದಿಗೆ ಹೆಂಡತಿಯು ಚಿತೆಯ ಪ್ರವೇಶ ಮಾಡಿದರೆ ಅದನ್ನು ಸಹಗಮನವೆಂದು ಕರೆಯಲಾಗಿದೆ. ಗಂಡನು ಬೇರೆ ಯಾವುದೇ ಸ್ಥಳದಲ್ಲಿ ಮರಣ ಹೊಂದಿದ್ದು ಅವನ ವಸ್ತ್ರ, ಖಡ್ಗ ಮುಂತಾದವುಗಳ ಸಾಕ್ಷಿಯಿಂದ ಸಾವು ಖಚಿತವಾದನಂತರ ಪ್ರಾಣತ್ಯಾಗ ಮಾಡುವುದನ್ನು 'ಅನುಗಮನ' ಎಂದು ಕರೆಯುತ್ತಾರೆ. ಈ ಎರಡೂ ರೀತಿಗಳನ್ನು ಕನ್ನಡನಾಡಿನಲ್ಲಿ ಗುರುತಿಸಬಹುದು. ಗಂಡನ ಮರಣ ವೀರಮರಣವೇ ಆಗಿರಬೇಕೆಂದಿಲ್ಲ, ಸಹಜ ಮರಣವಾಗಿರಬಹುದು, ವೀರಮರಣವಾಗಿರಬಹುದು, ಸರ್ಪದಷ್ಟ ಮರಣವಾಗಿರಬಹುದು. ಇಂಥ ಯಾವುದೇ ಸಂದರ್ಭದಲ್ಲಿ ಹೆಂಡತಿಯರು ಪ್ರಾಣತ್ಯಾಗವನ್ನು ಮಾಡಿರುವುದು ಕಂಡುಬರುತ್ತದೆ.

ಕರ್ನಾಟಕದ ಕೆಲವು ಸ್ಥಳಗಳಲ್ಲಿ ಮಾಸ್ತಿಯ ಆರಾಧನೆ, ಉತ್ಸವಾದಿಗಳ ಆಚರಣೆ ವಿಶೇಷವಾಗಿ ನಡೆಯುತ್ತಿರುವುದು ಕಂಡು ಬರುತ್ತದೆ. ಕೊಂಡದ ಹಳ್ಳಿ ಮತ್ತು ಚಿಕ್ಕ ಹುಡೇವಿನಲ್ಲಿ (ಚನ್ನಗಿರಿ ತಾ.) ನಡೆಯುವ ಆಚರಣೆಗಳ ವಿಶೇಷ ಅಧ್ಯಯನವನ್ನು

---

೧. ಎಂ.ಎಂ. ಕಲಬುರ್ಗಿ : ಪೂರ್ವೋಕ್ತ, ಗ್ರಂಥದಲ್ಲಿರುವ ೬ನೆಯ ಚಿತ್ರ ನೋಡಿ.

೨. ಎಂ. ಚಿದಾನಂದ ಮೂರ್ತಿ : ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ಗ್ರಂಥದ ಬೊಮ್ಮನಹಳ್ಳಿಯ ೨೦ನೆಯ ಚಿತ್ರವನ್ನು ನೋಡಿ.

೩. ಬಸವರಾಜ ಕಲ್ಗುಡಿ : ಪೂರ್ವೋಕ್ತ, ಗ್ರಂಥದಲ್ಲಿ ೧೨೫ನೆಯ ಚಿತ್ರವನ್ನು ನೋಡಿ. ಇದು ಒಬ್ಬ ಗಂಡನ ಇಬ್ಬರು ಹೆಂಡತಿಯರನ್ನು ಸೂಚಿಸುವುದೆಂದು ವಿದ್ವಾಂಸರು ಭಾವಿಸುತ್ತಾರೆ.

೪. ಎಂ. ಚಿದಾನಂದ ಮೂರ್ತಿ : ಗ್ರಾಮೀಣ ಪು. ೧೨೯. ನಿಂಬೆಹಣ್ಣು ಹಿಡಿದಿರುವುದಕ್ಕೆ ಒಂದು ವೈಶಿಷ್ಟ್ಯವಿದ್ದಂತಿದೆ. 'ಬಹುಶಃ ಅಮಂಗಳ ನಿವಾರಕವಾಗಿ ಮದುವೆಯ ಗಂಡು ಹಿಡಿದಿರುತ್ತಿದ್ದ ನಿಂಬೆಹಣ್ಣನ್ನೇ (ಸ್ವರ್ಗದಲ್ಲಿರುವ) ಗಂಡನ ಬಳಿಗೆ ಹೋಗುತ್ತೇನೆಂದು ನಂಬಿರುತ್ತಿದ್ದ ಸರ್ವಾಭರಣಭೂಷಿತೆಯಾದ ಮಾಸ್ತಿಯು ತನ್ನ ಕೈಯಲ್ಲಿ ಹಿಡಿದು ಚಿತೆಯ ಬಳಿಗೆ ಹೋಗುತ್ತಿದ್ದಳು.' ಅದನ್ನೇ ಶಿಲ್ಪದಲ್ಲಿ ಕೆತ್ತಿರುವಂತೆ ಕಾಣುತ್ತದೆ.

೫. ಕೊಂಡದ ಹಳ್ಳಿ, ಚಿಕ್ಕಹುಡೇವು (ಚನ್ನಗಿರಿ ತಾಲ್ಲೂಕು), ಮಾಚನಹಳ್ಳಿ (ಮಂಡ್ಯ ತಾ.) ಶ್ರೀರಂಗಪಟ್ಟಣ, ಕಬ್ಬರಗಿ (ರಾಯಚೂರು ತಾ.)

ಎಂ. ಚಿದಾನಂದ ಮೂರ್ತಿಯವರು ಮಾಡಿದ್ದಾರೆ.[೧] ಕೊಂಡದ ಹಳ್ಳಿಯಲ್ಲಿ ವರ್ಷಕ್ಕೊಮ್ಮೆ ನಡೆಯುವ ಉತ್ಸವ, ಮಾಸ್ತ್ಯಮ್ಮನ ಗುಡಿ, ಅದಕ್ಕೆ ಸಂಬಂಧಿಸಿದ ಹೊಲ, ಅದಕ್ಕೆ ಹೊಂದಿಕೊಂಡಂತಿರುವ ಕೊಳ, ಅದರ ಬಗ್ಗೆ ಇರುವ ಕೆಲವು ನಿಷೇಧಗಳು ಮತ್ತು ಆಚರಣೆಗಳು ಮಾಸ್ತಿಯ ಆಚರಣೆಯ ಅನೇಕ ಹಿನ್ನೆಲೆಗಳನ್ನು ಸ್ಪಷ್ಟಪಡಿಸುತ್ತವೆ.

ದಾಕ್ಷಾಯಣಿ ಅಥವಾ ಸತೀದೇವಿ ದಕ್ಷಬ್ರಹ್ಮನ ಯಾಗದಲ್ಲಿ ಪತಿನಿಂದೆಯನ್ನು ತಾಳಲಾರದೆ ಪತಿಯ ಪರವಾಗಿ ನಿಂತು, ಯಜ್ಞದಲ್ಲಿ ಪ್ರಾಣಾರ್ಪಣೆ ಮಾಡಿಕೊಂಡದ್ದು ಸತಿ ಆಚರಣೆಗೆ ಮೂಲ ಪ್ರಚೋದನೆ ಆಗಿರುವ ಸಾಧ್ಯತೆ ಇದೆ. ಇಹಲೋಕದಂತೆ ಪರಲೋಕದಲ್ಲಿಯೂ ಗಂಡನೊಂದಿಗೆ ಇರಬೇಕೆನ್ನುವುದೇ ಸತಿಪದ್ಧತಿಯ ಹಿಂದಿನ ಮುಖ್ಯ ಆಶಯವಾಗಿರಬೇಕು. ಅಥವಾ ವಿಧವೆಯ ಬಾಳು ಅತ್ಯಂತ ಕಷ್ಟಕರವಾಗಿದ್ದು ಅದರಿಂದ ಮುಕ್ತಿ ಪಡೆಯಲು ಸಾವನ್ನೇ ವೈಭವೀಕರಿಸಿ ಪರಲೋಕದಲ್ಲಿ ಗಂಡನೊಂದಿಗೆ ಸೇರುವ ಕಲ್ಪನೆಯ ಕತೆಗಳು ಬೆಳೆದು ಅದೇ ಮೌಲ್ಯವಾಗಿ ಬೆಳೆದು ಬಂದಿರಬೇಕು.

ಸಾಹಿತ್ಯ ಕೃತಿಗಳು ಉದ್ದಕ್ಕೂ ಮಹಾಸತಿಯ ಉಲ್ಲೇಖಗಳನ್ನು ಮಾಡುತ್ತಾ ಬಂದಿವೆ. ಮಹಾಭಾರತದಲ್ಲಿ ಪಾಂಡುವಿನ ಮರಣಾನಂತರ ಮಾದ್ರಿ ಚಿತೆಯನ್ನು ಪ್ರವೇಶಿಸುತ್ತಾಳೆ. ಪಂಪನೂ ಇದನ್ನು ನಿರೂಪಿಸಿದ್ದಾನೆ. ಜನ್ನ ಕವಿಯು ಅನಂತನಾಥ ಪುರಾಣದಲ್ಲಿ ಆ ಕಾಲದಲ್ಲಿ ಪ್ರಚಲಿತವಿದ್ದ ಸಹಗಮನವನ್ನು ಚಿತ್ರಿಸುವ ಹಾಗೆ ಕಂಡು ಬರುತ್ತದೆ.[೨] ಮುಂದಿನ ರಾಮನಾಥ ಚರಿತೆ, ಶ್ರೀ ಸಿದ್ಧೇಶ್ವರ ಪುರಾಣ, ಮುಂತಾದ ಕೃತಿಗಳು ಸಹಗಮನದ ವಿಷಯವನ್ನು ನಿರೂಪಿಸಿವೆ.

ಮಹಾಸತಿಯರಾದ ಸ್ತ್ರೀಯರ ಬಗ್ಗೆ ಜನಪದ ಸಾಹಿತ್ಯದಲ್ಲಿಯೂ ಅನೇಕ ವಿವರಗಳು ದೊರೆಯುತ್ತವೆ. ಈರೋಬಿ,[೩] ವಡ್ಡಗೆರೆ ನಾಗಮ್ಮ,[೪] ಮಹಾಸತಿ ವೀರದಿಮ್ಮವ್ವ, ಮಹಾಸತಿ ಪಾಡಿ ನಾಗಮ್ಮ, ಮಹಾಸತಿ ತಂಗ್ಯಮ್ಮ, ಕೊಂಡದ ಮಾಸ್ತ್ಯಮ್ಮ[೫] ಮಹಾಸತಿಯ ಹಿನ್ನೆಲೆ ಮತ್ತು ಆಚರಣೆಯ ಬಗ್ಗೆ ಬಹು ಅಮೂಲ್ಯ ವಿವರಗಳನ್ನು ಒದಗಿಸುತ್ತವೆ.

ಮಾರ್ಕೊಪೋಲೋ[೬] (ಕ್ರಿ.ಶ.೧೨೯೩) ಬಾರ್ಬೊಸ್(ಕ್ರಿ.ಶ. ೧೫೦೦), ನ್ಯೂನಿಜ್, ಸೀಸರ್ ಫ್ರೆಡರಿಕ್ ಕ್ರಿ.ಶ. (೧೫೬೦), ಪಿಯೆಟ್ರಡಲ್ಲೆವಲ್ಲೆ (ಕ್ರಿ.ಶ. ೧೬೨೩) ಮುಂತಾದ ವಿದೇಶಿ ಪ್ರವಾಸಿಗರ ಬರವಣಿಗೆಗಳಲ್ಲಿ ಸತಿಪದ್ಧತಿ ಪ್ರಚಲಿತವಾಗಿದ್ದುದು ಉದ್ದಕ್ಕೂ ಉಲ್ಲೇಖಗೊಂಡಿದೆ.

ಎಂ. ಎಸ್. ಪುಟ್ಟಣ್ಣನವರ ಮಾಡಿದ್ದುಣ್ಣೋ ಮಹಾರಾಯ ಕಾದಂಬರಿಯಲ್ಲಿ ಸಹಗಮನದ ವಿಷಯ ನಿರೂಪಿತವಾಗಿದೆ. 'ಸಹಗಮನ ಮಾಡುವ ಹೆಣ್ಣಿಗೆ ದೊರೆಯುತ್ತಿದ್ದ ಹಳದಿ ಸೀರೆ, ಅರಿಸಿನ ಕುಂಕುಮ, ತಾಂಬೂಲ ಮುಂತಾದ ವಸ್ತುಗಳು

---

೧. M. Chidananda Murthy : 'Two Masti temples in Karnataka': Hero Stones ಪು. ೧೧೭-೧೩೧; ಇದೇ ಲೇಖನದ ಕನ್ನಡ ಅವತರಣಿಕೆ ಅವರ ಗ್ರಾಮೀಣ ಗ್ರಂಥದಲ್ಲಿ 'ಪುರಾಣ, ಸಂಕೇತಗಳಲ್ಲಿ ಇತಿಹಾಸ ಸುರಕ್ಷಿತ : ಎರಡು ಮಾಸ್ತಿ ಗುಡಿಗಳ ಪ್ರತ್ಯಕ್ಷ ಅಧ್ಯಯನ' ಎಂಬ ಹೆಸರಿನಲ್ಲಿ ಅಚ್ಚಾಗಿದೆ. ಪು. ೧೧೬-೧೩೪.

೨. ಅನಂತನಾಥಪುರಾಣಂ. ೧೧-೭೩ ಗದ್ಯ; ೧೨-೧೨.

೩. (ಸಂ) ಜೀ.ಶಂ. ಪರಮಶಿವಯ್ಯ : ಜಾನಪದ ಖಂಡಕಾವ್ಯಗಳು.

೪. (ಸಂ) ಕಾಳೇಗೌಡ ನಾಗವಾರ : ಬಯಲು ಸೀಮೆ ಲಾವಣಿಗಳು; ವಡ್ಡಗೆರೆ ನಾಗಮ್ಮನ ಕಥೆಯನ್ನು ವೈಜಯಂತಿಮಾಲ ಅವರೂ ಸಂಗ್ರಹಿಸಿದ್ದಾರೆ. (ಕಸಾಪ ಪ್ರಕಟಣೆ) ೧೯೮೧.

೫. ಈ ಮಹಾಸತಿಯರನ್ನು ಕುರಿತ ಗೀತೆಗಳನ್ನು ಸಂಗ್ರಹಿಸಿದವರು ಹನೂರು ಕೃಷ್ಣಮೂರ್ತಿಯವರು. ಇವು ಬಸವರಾಜ ಕಲ್ಗುಡಿ ಅವರ ಪೂರ್ವೋಕ್ತ ಗ್ರಂಥದಲ್ಲಿ ಪ್ರಕಟವಾಗಿವೆ ಪು. ೨೧೩-೩೦೦

೬. ಪ್ರ.ಕ.ಇಂ II ಪು. ೨೭.

ಸರಕಾರದಿಂದ ದೊರೆಯುತ್ತಿದ್ದವು ಎಂದೂ ಮತ್ತು ಗಂಡನ ಸಂಗಡಲೇ ಜೀವಸಹಿತ ಚಿತೆಯನ್ನು ಏರಿದ ಹೆಂಗಸು ಉರಿಯನ್ನು ತಡೆಯಲಾರದೆ, ಈಚೆಗೆ ಎದ್ದು ಓಡಿ ಬಂದಲ್ಲಿ ರಾಜ್ಯಕ್ಕೆ ಹಾನಿ ತಟ್ಟುವುದೆಂದು ಅದಕ್ಕೆಲ್ಲ ಅಡ್ಡಿಯಾಗಿರುವ ಹಾಗೆ ಮದ್ದು ತುಂಬಿದ ಗಡಿಗೆಗಳು, ಬಾಣಗಳು, ಎಣ್ಣೆ ತುಪ್ಪದ ಗಡಿಗೆಗಳು ಇವುಗಳೆಲ್ಲವನ್ನು ಚಿತೆಯ ಮಧ್ಯ ಭಾಗದಲ್ಲಿಯೂ, ಪಕ್ಕಗಳಲ್ಲಿಯೂ ಇರಿಸುವುದಕ್ಕಾಗಿ ಬೇಕಾದ್ದನ್ನೆಲ್ಲಾ ಕೊಡಿಸುತ್ತಿದ್ದರು' ಎಂಬ ವಿವರಗಳು ಬಂದಿವೆ.[೧]

ಕ್ರಿ.ಶ. ೧೮೦೫ ರಲ್ಲಿ ತಲಕಾಡಿನ ಬ್ರಾಹ್ಮಣನೊಬ್ಬನು ಮರಣ ಹೊಂದಲು ಆತನ ಮಡದಿ ಅಗ್ನಿಪ್ರವೇಶ ಮಾಡುವುದಾಗಿ ಹಠ ಹಿಡಿಯಲು ಆ ಬಗ್ಗೆ ಮೈಸೂರು ಸರ್ಕಾರಕ್ಕೆ ಬರೆದ ಅರ್ಜಿ, ಅದಕ್ಕೆ ದಿವಾನ್ ಪೂರ್ಣಯ್ಯನವರು ಬರೆದ ಸಮ್ಮತಿಯ ವಿಷಯ ತಿಳಿದು ಬರುತ್ತದೆ.[೨] ದಕ್ಷಿಣ ಭಾರತದಲ್ಲಿ ವಿರಳವಾಗಿ, ಉತ್ತರ ಭಾರತದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಸತಿ ನಿದರ್ಶನಗಳು ದೊರೆಯುತ್ತವೆ. ಬ್ರಿಟಿಷ್ ಸರ್ಕಾರವು ಪಡೆದ ಸತಿಪ್ರಕರಣಗಳ ವರದಿಯಂತೆ ಕ್ರಿ.ಶ. ೧೮೧೫ ರಿಂದ ೧೮೨೦ ರವರೆಗೆ ಬಂಗಾಳಪ್ರಾಂತ ಒಂದರಲ್ಲೇ ೩೬೧೩ ಸತಿ ಪ್ರಕರಣಗಳು ಕಂಡು ಬರುತ್ತವೆ.[೩]

ಸತಿ ಪದ್ಧತಿಯು ರಾಜಾರಾಮಮೋಹನರಾಯ್‌ರವರ ಸತತ ಪ್ರಯತ್ನದಿಂದ ಕ್ರಿ.ಶ. ೧೮೨೯ ರಲ್ಲಿ ಕಾನೂನಿನ ಮೂಲಕ ನಿಷೇಧಿಸಲ್ಪಟ್ಟರೂ ಉತ್ತರ ಭಾರತದಲ್ಲಿ ಅಲ್ಲಲ್ಲಿ ಸತಿ ಪ್ರಕರಣಗಳು ನಡೆಯುತ್ತಲೇ ಇರುವುದು ಕಂಡುಬರುತ್ತಿದೆ. ವಿಶೇಷವಾಗಿ ರಾಜಾಸ್ಥಾನದಲ್ಲಿ ಕೆಲವು ಸತಿ ಮರಣಗಳು ನಡೆಯುತ್ತಿರುವುದಕ್ಕೆ ನಿದರ್ಶನಗಳಿವೆ. ರಾಜಾಸ್ಥಾನದ ಹಥಿದೆಹ್ ಎಂಬ ಗ್ರಾಮದಲ್ಲಿ (ಸಿರ್‌ಹತ್ ಜಿಲ್ಲೆ) ೧೯೮೦ ರಲ್ಲಿ ನೂರಾರು ಗ್ರಾಮಸ್ಥರ ಸಮ್ಮುಖದಲ್ಲಿ ಸರಸ್ವತಿ ಎಂಬ ಹೆಣ್ಣು ತನ್ನ ಗಂಡ ಹೀರಾಲಾಲನ ಚಿತೆಯಲ್ಲಿ ಭಸ್ಮವಾದ ವಿಷಯ ತಿಳಿದು ಬರುತ್ತದೆ. ಅದೇ ರೀತಿಯಲ್ಲಿ ೨೯-೨-೧೯೮೦ ರಂದು ನೀಮ್ಡಿಕೊಥಾರಿಯ ಗ್ರಾಮದ (ನಾಗಪುರ ಜಿಲ್ಲೆ) ೬೨ ವರ್ಷದ ರಜಪೂತ ಹೆಣ್ಣು ಸುಗನ್ ಕನ್ವರ್ ತನ್ನ ೭೫ ವರ್ಷದ ಗಂಡ ಸುಜನ್‌ಸಿಂಗ್ ಮರಣ ಹೊಂದಿದಾಗ ನೂರಾರು ಗ್ರಾಮಸ್ಥರ ಸಮ್ಮುಖದಲ್ಲಿ ಗಂಡನ ಶವದೊಂದಿಗೆ ಚಿತೆ ಏರಿದಳು.[೪]

ಸತಿಯ ತೀರಾ ಇತ್ತೀಚಿನ ನಿದರ್ಶನವೆಂದರೆ ೧೯೮೭ ರಲ್ಲಿ ಚಿತೆಯೇರಿದ ೧೮ ವರ್ಷ ವಯಸ್ಸಿನ ರೂಪಾ ಕನ್ವರಳದು. (ಇದೂ ರಾಜಾಸ್ಥಾನ ರಾಜ್ಯಕ್ಕೆ ಸೇರಿದ್ದು). ಅವಳು ಸತಿ ಹೋದಾಗ ಇಡೀ ದೇಶದ ತುಂಬಾ ದೊಡ್ಡ ಸುದ್ದಿಯಾಗಿ ಕೇಂದ್ರ ಸರ್ಕಾರದ ಗಮನ ಸೆಳೆದು ವಿಶೇಷವಾದ ಸುಗ್ರೀವಾಜ್ಞೆ ಹೊರಬಿದ್ದಿತು. ಅದರಂತೆ ಸತಿ ಪದ್ಧತಿಯನ್ನು ವೈಭವೀಕರಿಸುವ, ಸತಿ ಮಾತಾ ಹೆಸರಿನಲ್ಲಿ ದೇವಾಲಯಗಳನ್ನು ಕಟ್ಟುವ ಮತ್ತು ಯಾವುದೇ ರೀತಿಯಲ್ಲಿ ಸತಿಯನ್ನು ಉತ್ತೇಜಿಸುವುದು ಶಿಕ್ಷಾರ್ಹ ಅಪರಾಧವಾಗುತ್ತದೆ. ಹೀಗೆ ಸತಿ ಪದ್ಧತಿಯನ್ನು ಸಂಪೂರ್ಣವಾಗಿ ನಿಲ್ಲಿಸಲು ಕಟ್ಟುನಿಟ್ಟಾದ ಕ್ರಮಗಳನ್ನು ಅನುಸರಿಸಿದೆ.

ಆದರೂ ಅಲ್ಲಲ್ಲಿ ಸತಿ ಪ್ರಕರಣಗಳು ವರದಿ ಆಗುತ್ತಲೇ ಇವೆ. ಉತ್ತರ ಪ್ರದೇಶದ ಮಹೋಬಾ ಜಿಲ್ಲೆಯ ಸತ್ಪುರ ಗ್ರಾಮದ ಚರಣ್‌ಷಾ ೧೧-೧೧-೧೯೯೯ ರಂದು ಸತಿಯಾದ ವಿಷಯ ವರದಿಯಾಗಿದೆ.[೫] ಮಧ್ಯಪ್ರದೇಶದ ಬನಿಯಾನಿ ಗ್ರಾಮದಲ್ಲಿ ೯೫ ವರ್ಷದ ಕುರಿಯಾದೇವಿ ಸತಿಹೋದ ವಿಷಯ ಮತ್ತು ಅವಳ ನಾಲ್ಕು ಮಕ್ಕಳನ್ನು ಬಂಧಿಸಿರುವ ವಿಷಯ ವರದಿಯಾಗಿದೆ. ಕಳೆದ ಎರಡು ತಿಂಗಳಲ್ಲಿ ಅದು ಎರಡನೆಯ ವರದಿಯಾಗಿದೆ.[೬]

ಪ್ರಾಚೀನ ಕಾಲದ ಶಾಸನ, ಸಾಹಿತ್ಯದಲ್ಲಿ ಬರುವ ವರ್ಣನೆಗಳನ್ನು ನೋಡಿದರೆ ಎಲ್ಲಿಯೂ ಸತಿ ಆಗು ಎಂದು ಒತ್ತಾಯ ಮಾಡಿದಂತೆ ಕಂಡು ಬರುವುದಿಲ್ಲ.[೭] ದೇಕಬ್ಬೆಯ ಶಾಸನ ಮುಂತಾದುವನ್ನು ನೋಡಿದರೆ ಸತಿ ಹೋಗಬೇಡವೆಂದು

---

೧. ಎಂ. ಚಿದಾನಂದಮೂರ್ತಿ ಕಶಾಸಾಂಅ, ಪು. ೩೧೯.

೨. ಎಂ.ಎಂ. ಕಲಬುರ್ಗಿ : ಪೂರ್ವೋಕ್ತ, ಪು. ೩೬.

೩. M.V. Kamath : 'Sati : The Shame of a Nation' : The Illustrated weekly of India CI ೧೫ ಏಪ್ರಿಲ್ ೧೩-೧೯, ೧೯೮೦ ಪು. ೨೦-೨೩.

೪. M. V. Kamath : ಪೂರ್ವೋಕ್ತ, ಪು. ೨೦.

೫. ಸಿ.ಜಿ. ಮಂಜುಳಾ: 'ಸತಿ' ಜ್ವಲಂತ ಜಿಜ್ಞಾಸೆ, ಪ್ರಜಾವಾಣಿ ಸಾಪ್ತಾಹಿಕ ಪುರವಣಿ. ಪು. ೧-೫, ೫-೧೨-೧೯೯೯.

೬. ಪ್ರಜಾವಾಣಿ ೨೨-೯-೨೦೦೬.

೭. ದೇವರ ಕೊಂಡಾರೆಡ್ಡಿ : 'ಕರ್ನಾಟಕದಲ್ಲಿ ಮಾಸ್ತಿ'. ಸಾಧನೆ ೪-೨, ಪು. ೧೨೫.

ಬಂಧು ಬಾಂಧವರು ಕೇಳಿಕೊಂಡಿರುವುದೇ ಅಧಿಕವಾಗಿ ಕಂಡು ಬರುತ್ತಿದೆ. ಸಹಗಮನ ಪದ್ಧತಿ ಪ್ರಾಚೀನ ಕರ್ನಾಟಕದಲ್ಲಿ ಕಂಡು ಬಂದರೂ ಅದು ಕಡ್ಡಾಯವಾಗಿರಲಿಲ್ಲ. ಏಕೆಂದರೆ ಕೆಲವು ವೀರರು ಮಡಿದಾಗ ಸತ್ತ ವೀರನ ಹೆಂಡತಿಯೇ ವೀರಗಲ್ಲನ್ನು ಹಾಕಿಸಿರುವ ನಿದರ್ಶನಗಳು ದೊರೆಯುತ್ತವೆ.[೧]

ರಾಜಾಸ್ಥಾನದ ಇತಿಹಾಸದಲ್ಲಿ ಜೋಹರ್ ಪದ್ಧತಿ ಕಂಡು ಬರುತ್ತದೆ. ಯುದ್ಧದಲ್ಲಿ ತಾವು ಸೋಲುವುದು ಖಚಿತವಾದಾಗ ಶತ್ರುಗಳ ಕೈಗೆ ಸಿಕ್ಕು ಅವಮಾನ ಅನುಭವಿಸುವುದಕ್ಕಿಂತ ಸಾವು ಮೇಲೆಂದು ನಿರ್ಧರಿಸಿ ದೊಡ್ಡ ಚಿತೆಯೊಂದನ್ನು ಮಾಡಿ ಸಾವಿರಾರು ಸ್ತ್ರೀಯರು ಅದರಲ್ಲಿ ಬಿದ್ದು ಪ್ರಾಣತ್ಯಾಗ ಮಾಡುತ್ತಿದ್ದರು. ಅದನ್ನು 'ಜೋಹರ್' ಎಂದು ಕರೆಯಲಾಗಿದೆ. ಅನಂತರ ವೀರರು ಕೋಟೆಯ ಬಾಗಿಲನ್ನು ತೆಗೆದು ಸಾಧ್ಯವಾದಷ್ಟು ಶತ್ರುಗಳನ್ನು ಸಂಹರಿಸಿ ತಾವೂ ಹೋರಾಡಿ ಮಡಿಯುತ್ತಿದ್ದರು. ಚಿತ್ತೂರಿನ ಮೇಲೆ ಅಲ್ಲಾವುದ್ದೀನ್ ಖಿಲ್ಜಿ ದಾಳಿಮಾಡಿದಾಗ ಸಾವಿರಾರು ಜನ ಸ್ತ್ರೀಯರು ಅಗ್ನಿಪ್ರವೇಶ ಮಾಡಿದರೆಂದೂ, ಹದಿನಾರನೆಯ ಶತಮಾನದಲ್ಲಿ ಮತ್ತೊಮ್ಮೆ ಚಿತ್ತೂರಿನಲ್ಲಿ ಹದಿಮೂರು ಸಾವಿರ ಸ್ತ್ರೀಯರು ಅಗ್ನಿಪ್ರವೇಶ ಮಾಡಿದರೆಂದೂ ತಿಳಿದು ಬರುತ್ತದೆ. ಜೋಹರ್ ಮತ್ತು ಸಹಗಮನದಲ್ಲಿ ವ್ಯತ್ಯಾಸಗಳಿರುವುದಾದರೂ ಮೂಲ ಮನೋಭಾವ ಒಂದೇ ಆಗಿದೆ.[೨]

**ಇತರ ಕೆಲವು ಆತ್ಮಬಲಿಗಳು:**

ಧಾರ್ಮಿಕ ಮನೋಭಾವದಿಂದ, ವೈಯಕ್ತಿಕ ಮೋಕ್ಷಾಪೇಕ್ಷೆಯಿಂದ, ಒಡೆಯನಿಗಾಗಿ, ಕೊಟ್ಟ ಭಾಷೆಗಾಗಿ, ಪತಿಯನ್ನು ಪರಲೋಕದಲ್ಲೂ ಸೇರಬೇಕೆಂಬ ಕಾರಣದಿಂದ -ಹೀಗೆ ನಾನಾ ಕಾರಣಗಳಿಂದ ಪ್ರಾಣತ್ಯಾಗವನ್ನು ಮಾಡಿದ ವಿವಿಧ ವಿವರಗಳನ್ನು ಇದುವರೆಗೂ ಗಮನಿಸಿದ್ದೇವೆ. ಇನ್ನು ಕೆಲವು ವಿಲಕ್ಷಣವೆನ್ನಬಹುದಾದ ಕೆಲವು ಪ್ರಾಣತ್ಯಾಗಗಳ ವಿವರಗಳನ್ನು ಗಮನಿಸಬಹುದು.

ಗೋವಾದ ಕದಂಬವಂಶದ ಜಯಕೇಶಿರಾಜನು (ಹನ್ನೆರಡನೆಯ ಶತಮಾನ) ತನ್ನ ಪ್ರೀತಿಯ ಗಿಳಿ ಬೆಕ್ಕಿಗೆ ಆಹುತಿಯಾಗಲು ಅದನ್ನು ರಕ್ಷಿಸುವೆನೆಂದು ಅದಕ್ಕೆ ಮಾತು ಕೊಟ್ಟಿದ್ದರಿಂದ ಮತ್ತು ಅದರ ಮೇಲಿನ ಪ್ರೀತಿಯಿಂದ ಅಗ್ನಿಪ್ರವೇಶ ಮಾಡಿ ಪ್ರಾಣತ್ಯಾಗ ಮಾಡಿದ ಅಪರೂಪದ ನಿದರ್ಶನ ದೊರೆಯುತ್ತದೆ.[೩] ಕಲ್ಹಣನ ಕಾವ್ಯದಲ್ಲಿ ರಾಜ ಸುಸ್ಸಲ ಮರಣ ಹೊಂದಿದಾಗ ಅವನ ಚಿತೆ ಏರ್ಪಡಿಸಲು ಆ ಉರಿಯುವ ಚಿತೆಗೆ ಅವನ ಪ್ರೀತಿಯ ಬೆಕ್ಕು ಹಾರಿ ಆತ್ಮಾಹುತಿ ಮಾಡಿಕೊಂಡ ವಿಷಯ ನಿರೂಪಿತವಾಗಿದೆ.[೪]

ಕೆಲವು ಸಾರಿ ತೀವ್ರವಾದ ಆಸ್ತಿ ವಿವಾದಗಳು ಒಬ್ಬ ವ್ಯಕ್ತಿಯ ಪ್ರಾಣಾರ್ಪಣೆಯ ಮೂಲಕ ಪರಿಹಾರವಾಗುತ್ತಿದ್ದವೆಂದು ಕಾಣತ್ತದೆ. ರಾಯಸೆಟ್ಟಿಪುರದ ಶಾಸನ ಅಂತಹ ಒಂದು ವಿವರವನ್ನು ತಿಳಿಸುತ್ತದೆ. ಬಲ್ಲಾಳನ ಅಕ್ಕಿಕೆಯ ಕಾಲದಲ್ಲಿ ಬಿದಿರಹಳ್ಳಿ ಎಂಬ ಗ್ರಾಮವನ್ನು ಮಲ್ಲೆಯನಾಯಕ ಮತ್ತು ಸೋಮೆಯನಾಯಕರೆಂಬುವರು ಕ್ರಿ.ಶ. ೧೧೮೫ ರಲ್ಲಿ ಶಿವಪುರವಾಗಿ ಪರಿವರ್ತಿಸಿ ಕೊಡುತ್ತಾರೆ. ಆದರೆ ಮುಂದೆ ಮಾದೆಯನಾಯಕ ಎಂಬುವನು ಅದನ್ನು ಶಿವಪುರವಾಗಲು ಬಿಡದೆ ತಡೆಯೊಡ್ಡಿದ.

---

೧. ಆರ್. ಶೇಷಶಾಸ್ತ್ರಿ : ಪೂರ್ವೋಕ್ತ, ಪು. ೮೧.

ಒಂದು ಕೋಟೆಗಾಳಗದಲ್ಲಿ ಕನಕನಾಯಕನೆಂಬುವನು ಹೋರಾಡಿ ಮಡಿಯಲು ಅವನ ಹೆಂಡತಿ ನಾಗವ್ವೆ ವೀರಗಲ್ಲನ್ನು ಮಾಡಿಸಿದ ವಿಷಯವನ್ನು ನಿದರ್ಶನಕ್ಕೆ ಗಮನಿಸಬಹುದು. (ರೈ) ಎಕ IX ಬೆಂಗಳೂರು ೪೬ ಕ್ರಿ.ಶ. ೧೧೫೬.

೨. ಎಂ. ಚಿದಾನಂದ ಮೂರ್ತಿ : ವೀರಗಲ್ಲುಗಳು - ಮಾಸ್ತಿ ಕಲ್ಲುಗಳು, ಪು. ೪೫.

೩. R.N. Gurava : Kadambas of Goa and their inscriptions ಪು. ೯೭.

೪. A.S.Altekar : ಪೂರ್ವೋಕ್ತ ಪು. ೧೨೭.

ಆಗ ವೀರಮಲ್ಲೆಯ ನಾಯಕನೆಂಬುವನು (ಕ್ರಿ.ಶ. ೧೨೫೧) ತನ್ನನ್ನು 'ಕುತ್ತಿಕೊಂಡು ನಾಲ್ಕು ಸೀಮೆಯ ಕಲ್ಲ ಕಂಡು' ಮಾದೆಯ ನಾಯಕನಿಂದ ಶಿವಪುರವನ್ನು ಪಡೆದು ಸೋಮನಾಥಪುರವಾಗಿ ಪರಿವರ್ತಿಸುತ್ತಾನೆ.[1] ವೀರಮಲ್ಲೆಯ ನಾಯಕ ಈ ಘಟನೆಯಲ್ಲಿ ಮರಣಹೊಂದಿದನೆ ಇಲ್ಲವೆ ಎನ್ನುವುದು ಶಾಸನದಿಂದ ಸ್ಪಷ್ಟವಾಗದೇ ಹೋದರೂ ಅವನು ನ್ಯಾಯಕ್ಕಾಗಿ ಆತ್ಮಾಹುತಿಗೆ ಸಿದ್ಧನಾದುದು ಸ್ಪಷ್ಟವಿದೆ. ಇದು ಜಪಾನ್ ದೇಶದಲ್ಲಿ ಪ್ರಚಲಿತವಿದ್ದ 'ಹರಕಿರಿ'ಯನ್ನು ನೆನಪಿಗೆ ತರುತ್ತದೆ.

ಆಸ್ತಿಯ ವಿವಾದದ ಕಾರಣ ಒಬ್ಬ ವ್ಯಕ್ತಿ ಪ್ರಾಣತ್ಯಾಗ ಮಾಡಿದ ವಿಷಯವನ್ನು ದೊಣೆಕಲ್ಲಿನ ಶಾಸನ[2] ತಿಳಿಸುತ್ತದೆ. ಮೂರು ಜನರಲ್ಲಿ ಭೂಮಿಯ ಮೇಲಿನ ಸ್ವಾಮ್ಯದ ವಿಷಯದಲ್ಲಿ ವಿವಾದ ಉಂಟಾಗಿ 'ಮೂವರಲೋರ್ವರ್ ಸತ್ತಡಲ್ಲದೆ ಭೂಮಿ ನಿಲ್ಲದೆಂದು ಸತ್ತವರಿಗು ಮುನ್ನಿನ ಭಾಗಮಲ್ಲದೆ ಮತ್ತಮೊನ್ದು ಭಾಗಮು ತೇಜ ಸಾಮ್ಯ' (ಮೂವರಲ್ಲಿ ಒಬ್ಬರು ಸಾಯದೆ ಭೂಮಿಯ ಸ್ವಾಮ್ಯ ಉಳಿಯದೆಂದೂ ಸತ್ತವರಿಗೆ ಮೊದಲಿನ ಭೂಮಿಯ ಭಾಗದ ಅಧಿಕಾರವಲ್ಲದೆ ಮತ್ತೊಂದು ಭಾಗದ ಅಧಿಕಾರವೂ ದೊರೆಯುವುದೆಂದು) ಎಂಬಂತಹ ಮಾತು ಬಂದಾಗ ಯಾರೂ ಸಾಯಲು ಇಷ್ಟಪಡುವುದಿಲ್ಲ. ಆಗ ನಿಜ್ಜರ ಗಾವುಂಡನು ಸಾಯಲು ನಿಶ್ಚಯಿಸಿ, ತನ್ನ ಮಗ ಮಾಚಿಗಾವುಂಡನಿಗೆ ವಂಶಪಾರಂಪರ್ಯವಾಗಿ ಆಸ್ತಿಯ ಮೇಲಿನ ಅಧಿಕಾರ ಮತ್ತು ಮಾತಿನಂತೆ ಅಧಿಕ ಭೂಮಿಯನ್ನು ಕೊಡಬೇಕೆಂದು ಚಿದ್ದಯ್ಯ ಜಕ್ಕಯ್ಯರ ಎದುರಿಗೆ ಇರಿದುಕೊಂಡು ಸತ್ತು ಭೂಮಿಯನ್ನು ಪಡೆಯುತ್ತಾನೆ. ಶಾಸನದ ಪಾಠ ಕ್ಲಿಷ್ಟವಾಗಿದ್ದು ಈ ವಿವಾದಕ್ಕೆ ಕಾರಣವೇನು ಎನ್ನುವುದು ಸ್ಪಷ್ಟವಾಗುವುದಿಲ್ಲ.

ಯುದ್ಧಗಳಲ್ಲಿ, ಗೋರಕ್ಷಣೆಯಲ್ಲಿ, ಸ್ತ್ರೀಯರ ಮಾನ ರಕ್ಷಣೆಯಲ್ಲಿ, ಊರಳಿವಿನ ಸಂದರ್ಭಗಳಲ್ಲಿ, ದುಷ್ಟಮೃಗಗಳಿಂದ, ಕಳ್ಳರಿಂದ ಊರಿನ ಜನರನ್ನು ಕಾಪಾಡಲು ಹೋರಾಡಿ ಮಡಿದವರನ್ನು ವೀರರೆಂದು ಗುರುತಿಸಿ ಅವರ ಹೆಸರು, ಅವರ ಉನ್ನತಕಾರ್ಯ ಚಿರಸ್ಥಾಯಿಯಾಗುವಂತೆ ಮಾಡಲು ವೀರಗಲ್ಲುಗಳನ್ನು ಮಾಡಿಸಿ ನೆಡುತ್ತಿದ್ದುದನ್ನು ಹಿಂದೆ ನೋಡಿದ್ದೇವೆ. ಅದೇ ರೀತಿಯಲ್ಲಿ ಮೋಕ್ಷಾಪೇಕ್ಷಿಗಳಾಗಿ ಹಾಗೂ ಇನ್ನಿತರ ಧಾರ್ಮಿಕ ನಂಬಿಕೆಯಿಂದ ದೇಹತ್ಯಾಗ ಮಾಡಿದವರನ್ನು ಆ ಕಾಲದ ಜನತೆ ವೀರರೆಂದೂ ಮಹನೀಯರೆಂದೂ ಪರಿಗಣಿಸಿರುವುದು ಕಂಡುಬರುತ್ತದೆ. ಅವರ ಬಗ್ಗೆ ಸ್ಮಾರಕ ಶಿಲೆಗಳನ್ನು ನಿರ್ಮಿಸಿರುವುದು, ಶಾಸನಗಳನ್ನು ಹಾಕಿಸಿರುವುದೇ ಅವರ ಬಗ್ಗೆ ಇದ್ದ ಗೌರವ ಪೂಜ್ಯತೆಗಳಿಗೆ ಸಾಕ್ಷಿಗಳಾಗಿವೆ. ಇದೇ ರೀತಿ ಒಡೆಯರ ಬಗ್ಗೆ ವೇಳೆಗೊಂಡವರಾಗಲಿ, ಲೆಂಕರಾಗಲಿ, ಗರುಡರಾಗಲಿ ತಾವಾಗಿ ತಮ್ಮ ಪ್ರಾಣಾರ್ಪಣೆ ಮಾಡಿದ್ದರೂ ಅವರಿಗಾಗಿ ಕನ್ನಡ ನಾಡಿನ ಜನತೆ ಅಸೀಮ ಗೌರವದಿಂದ ಸ್ಮಾರಕ ಶಿಲೆಗಳನ್ನು ನಿರ್ಮಿಸಿ ಅವರ ತ್ಯಾಗ ಮತ್ತು ಪತಿಭಕ್ತಿಯನ್ನು ಸದಾ ಹಸಿರಾಗಿರಿಸಿದ್ದಾರೆ. ಹೀಗೆಯೇ ತನ್ನ ಪತಿಯ ಮರಣಾನಂತರ ಯಾವ ಒತ್ತಾಯವೂ ಇಲ್ಲದೆ ಸ್ವನಿರ್ಧಾರದಿಂದ ಧೈರ್ಯವಾಗಿ ಚಿತೆಯನ್ನು ಪ್ರವೇಶಿಸಿದ ಸ್ತ್ರೀಯರೂ ಆರಾಧನೆಗೆ, ಸ್ಮಾರಕ ಶಿಲೆಗೆ ಅರ್ಹರಾಗಿ ಜನರಿಗೆ ಕಂಡಿದ್ದಾರೆ. ಹೀಗೆ ಮನುಷ್ಯನ ಅತ್ಯಂತ ಪ್ರಿಯವಾದ ಪ್ರಾಣವನ್ನು ತೃಣವಾಗಿ ಕಂಡು ತಾವು ನಂಬಿದ ಆದರ್ಶಕ್ಕಾಗಿ, ಉನ್ನತ ನಂಬಿಕೆಗಾಗಿ ಇಹಬಂಧನವನ್ನು ತಾವಾಗಿ ಕಳಚಿಕೊಂಡ ಈ ವ್ಯಕ್ತಿಗಳ ಬದುಕು ಶೋಷಣೆಯ ಹಲವಾರು ಮುಖಗಳಾಗಿ ಆಧುನಿಕ ದೃಷ್ಟಿಯಿಂದ ನೋಡಿದಾಗ ಕಂಡುಬರಬಹುದಾದರೂ ಯಾವ ವ್ಯಕ್ತಿಗಳು ಧರ್ಮದ, ಒಡೆಯನ, ಪತಿಯ ಮುಂದೆ ಬದುಕಿನ ಎಲ್ಲ ಆಸೆ ಆಮಿಷಗಳನ್ನು ಕ್ಷುಲ್ಲಕವಾಗಿ ಪರಿಗಣಿಸಿ ಭಯಂಕರವಾದ ಸಾವನ್ನು ಬರಮಾಡಿಕೊಂಡರೊ ಅವರ ಉನ್ನತ ಮನೋಭೂಮಿಕೆಯ ಬಗ್ಗೆ ಮೊದಲು ವಿಸ್ಮಯ-ಗೌರವಗಳು ಅನಂತರದಲ್ಲಿ ವಿಷಾದದ ಭಾವನೆಗಳು ಸಹಜವಾಗಿ ಮೂಡುತ್ತವೆ.

---

೧. (ಮೈ) ಎಕ VII ಮಂಡ್ಯ ೩೪ ಕ್ರಿ.ಶ. ೧೨೫೧.

೨. ಎಸ್‌ಐಐ IX(i) ಗೂಟಿ ೧೨೩ ಕ್ರಿ.ಶ. ೧೦೫೯-೬೦.

## ೧೭. ಕಲೆ-ಸಾಹಿತ್ಯ-ಮನರಂಜನೆ

**ಕ**ರ್ನಾಟಕ ಪ್ರಾಚೀನ ಕಾಲದಿಂದಲೂ ವಿವಿಧ ಕಲೆಗಳಿಗೆ ಪ್ರಸಿದ್ಧವಾಗಿದೆ. ಆಧುನಿಕ ಕಾಲದವರು 'ಕಲೆ' ಎಂದು ಬಳಸುವ ಪದಕ್ಕೂ ಪ್ರಾಚೀನರು ಆ ಪದವನ್ನು ಬಳಸುತ್ತಿದ್ದುದಕ್ಕೂ ಅರ್ಥವ್ಯಾಪ್ತಿಯಲ್ಲಿ ತುಂಬ ವ್ಯತ್ಯಾಸವಿದೆ. ನಾವು 'ಕಲೆ'ಯನ್ನು ಅಧಿಕವಾಗಿ ಲಲಿತಕಲೆಗಳಿಗೆ ಅನ್ವಯಿಸಿದಂತೆ ಬಳಸುತ್ತೇವೆ. ಪ್ರಾಚೀನರು ಕೆಲವು ವೈಜ್ಞಾನಿಕ ತಿಳುವಳಿಕೆಗಳನ್ನೂ ಒಳಗೊಂಡಂತೆ (ಉದಾ. ವೃಕ್ಷಾಯುರ್ವೇದ, ಯಂತ್ರಮಾತೃಕಾ ಇತ್ಯಾದಿ) ಕಲೆ ಎಂಬ ಪದವನ್ನು ತುಂಬ ವ್ಯಾಪಕಾರ್ಥದಲ್ಲಿ ಬಳಸಿರುವುದು ಕಂಡುಬರುತ್ತದೆ.[೧] ಸಾಂಪ್ರದಾಯಿಕವಾಗಿ ಅರವತ್ನಾಲ್ಕು ಕಲೆಗಳನ್ನು ಪ್ರಾಚೀನ ಕಾಲದಿಂದಲೂ ಹೇಳುತ್ತ ಬರಲಾಗಿದೆ. ಜೈನ ಬೌದ್ಧ ಗ್ರಂಥಗಳು ಅವುಗಳ ಸಂಖ್ಯೆಯನ್ನು ಬೇರೆಯಾಗಿ ಹೇಳಿದೆ. ಲಲಿತ ವಿಸ್ತರದಲ್ಲಿ ೮೬ ಕಲೆಗಳನ್ನು, ಸಮಯಾವಸೂತ್ರದಲ್ಲಿ ೮೭ ಕಲೆಗಳನ್ನು ಮತ್ತು ಕಲ್ಪಸೂತ್ರದ ವ್ಯಾಖ್ಯಾನ ಗ್ರಂಥವಾದ ಕಲ್ಪಾಂತರ ವಾಚ್ಯಾನಿಯಲ್ಲಿ ೭೨ ಕಲೆಗಳನ್ನು ಹೇಳಲಾಗಿದೆ. ಕಾಮಸೂತ್ರದ ವ್ಯಾಖ್ಯಾನಕಾರನಾದ ಯಶೋಧರನು ೫೧೨ ಕಲೆಗಳಿವೆಯೆಂದು ಹೇಳಿದ್ದಾನೆ.[೨] ಆದರೂ ಸಾಂಪ್ರದಾಯಿಕವಾಗಿ ಚೌಷಷ್ಟಿ ಕಲೆಗಳೆಂದೇ ಹೆಚ್ಚು ಪ್ರಚಲಿತವಾಗಿದೆ.

ನಮ್ಮ ಅಧ್ಯಯನದಲ್ಲಿ ಒಂದೊಂದು ಕಲೆಗಳ ವಿವರಗಳನ್ನು ಗ್ರಹಿಸುವ, ಪರಿಚಯ ಮಾಡಿಕೊಡುವ ಉದ್ದೇಶವಿಲ್ಲ. ಈ ವಿಷಯವನ್ನು ಕುರಿತು ಶಾಸನಗಳಲ್ಲಿ ದೊರೆಯುವ ಮಾಹಿತಿಗಳ ಹಿನ್ನೆಲೆಯಲ್ಲಿ ಸಂಸ್ಕೃತಿಯ ಅಂಗವಾಗಿ ಅದನ್ನು ಗ್ರಹಿಸುವುದಾಗಿದೆ. ಅಲ್ಲದೆ ಶಾಸನಗಳಲ್ಲಿ ಈ ವಿಷಯಗಳಿಗೆ ಸಂಬಂಧಿಸಿದ ಹಾಗೆ ದೊರೆಯುವ ಸಾಮಗ್ರಿ ಪರಿಮಿತವಾದುದು. ಆ ಮಿತ ಸಾಮಗ್ರಿಯ ಹಿನ್ನೆಲೆಯಲ್ಲಿ ಸಂಕ್ಷಿಪ್ತವಾಗಿ ವಿಷಯವನ್ನು ನಿರೂಪಿಸಲಾಗಿದೆ.

ಕನ್ನಡದ ಕೆಲವು ಶಾಸನಗಳಲ್ಲಿ ಅರವತ್ನಾಲ್ಕು ಕಲೆಗಳ ಉಲ್ಲೇಖ ಬರುತ್ತದೆ. ಶಿಕಾರಿಪುರ ತಾಲ್ಲೂಕಿನ ಒಂದು ಸ್ಥಳದ ಮಹಾಜನರನ್ನು ಕುರಿತು ವರ್ಣಿಸುವ ಶಾಸನ ಭಾಗದಲ್ಲಿ ಅವರನ್ನು 'ಚತುಃಷಷ್ಟಿ ಕಲಾಪರಿಣತ'ರೆಂದು[೩] ಕರೆದಿದೆ. ಯಾದವ ಕನ್ನರನ ದಂಡಾಧೀಶನಾದ ಚೌಂಡರಸನನ್ನು ಕೀರ್ತಿಸುತ್ತಾ 'ಚೌಷಷ್ಟಿಕಳಾಕಳಾಪಚತುರ್ಮುಖಂ'[೪] ಎಂದು ಹೇಳಲಾಗಿದೆ.

---

೧. A. Venkatasubbiah: The Kalas. ಪು. ೧.

ವೃಕ್ಷಾಯುರ್ವೇದವು ಸಸ್ಯಗಳನ್ನು ಕುರಿತ ವಿಜ್ಞಾನವಾಗಿದೆ. ಮಣ್ಣಿನ ನಿರ್ಧಾರ, ಬೀಜಗಳ ಪರೀಕ್ಷೆ, ಬಿತ್ತನೆಯ ವಿಧಿ, ಕಸಿ ಮಾಡುವ ರೀತಿ ಮುಂತಾದ ವಿಷಯಗಳನ್ನು ಹೇಳುತ್ತದೆ. ಯಂತ್ರಮಾತೃಕಾ- ಯಂತ್ರದ್ವಾರ, ಯಂತ್ರಗೃಹ ಮುಂತಾದ ರಚನೆಗಳ ತಂತ್ರವನ್ನು ಹೇಳುವ ಹಾಗೆ ಕಾಣುತ್ತದೆ. ಇದು ಚಿನ್ನ ಬೆಳ್ಳಿ ತಾಮ್ರ ಮುಂತಾದ ಲೋಹಗಳ ಮೇಲೆ ರಚಿಸುವ ವಿವಿಧ ಕೋನಗಳನ್ನೂ ಬೀಜಾಕ್ಷರಗಳನ್ನೂ ಸೂಚಿಸುವುದೆಂಬ ಅಭಿಪ್ರಾಯವೂ ಇದೆ.

೨. ಮ. ಶ್ರೀಧರ ಮೂರ್ತಿ : ೬೪ ಕಲೆಗಳು, ಪು. V-VI.

೩. (ರೈ) ಎಕ VII ಶಿಕಾರಿಪುರ ೩೧೨ ಕ್ರಿ.ಶ. ೧೨೮೭.

೪. ಎಸ್‌ಐಐ XVIII ಹಾವೇರಿ ೨೪೨ ಕ್ರಿ.ಶ. ೧೩ ಶ.ಮಾ.

ಕುವರಲಕ್ಷ್ಮನನ್ನು 'ಅಱುವತ್ತುನಾಲ್ಕು ಕಳೆಗಳೊಳಱಿಯದ ಕಳೆಯಿಲ್ಲ' ಎಂದು ಹೇಳಲಾಗಿದೆ.[೧] ಕೆಲವು ಸಾರಿ ಶಾಸನಗಳಲ್ಲಿ ನಿರ್ದಿಷ್ಟ ಸಂಖ್ಯೆಯನ್ನು ಹೇಳದೆ 'ಬಹುಕಳಾಸಂಪಂನಂ'[೨] ಎಂದು ಹೇಳಲಾಗಿದೆ. '೬೪ ಕಲೆಗಳೆಂದು ಪಟ್ಟಿ ಮಾಡಿದವರ ಉದ್ದೇಶ ವ್ಯಕ್ತಿಯ ಸರ್ವತೋಮುಖ ಸಾಮರ್ಥ್ಯಕ್ಕೆ ಸಾಧಕವಾದ ಎಲ್ಲ ವಿಷಯಗಳನ್ನು ಒಂದೆಡೆ ಕಲೆ ಹಾಕುವುದೇ ಆಗಿತ್ತು ಎನ್ನಬಹುದಾಗಿದೆ.'[೩] ಆದರೂ ವಾಸ್ತವವಾಗಿ ೬೪ ಕಲೆಗಳಲ್ಲಿ ಪರಿಣತಿ ಹೊಂದುವುದು ಅಸಾಧಾರಣವಾದುದೇ ಆಗಿದೆ; ಒಬ್ಬ ವ್ಯಕ್ತಿಯ ವಿಶೇಷ ಕಲಾ ಪರಿಣತಿಯನ್ನು, ಸಾಮರ್ಥ್ಯವನ್ನು ಹೇಳಲು ೬೪ ಕಲೆಗಳಲ್ಲಿ ಪರಿಣತನೆಂದು ಕೀರ್ತಿಸುವ ಪದ್ಧತಿ ಬೆಳೆದುಬಂದಿರಬೇಕು.

**ಸಂಗೀತ-ನೃತ್ಯ:**

ಬಹು ಪ್ರಾಚೀನ ಕಾಲದಿಂದಲೂ ಸಂಗೀತ ನೃತ್ಯಗಳು ಭಾರತೀಯರ ಬದುಕಿನಲ್ಲಿ ಹಾಸು ಹೊಕ್ಕಾಗಿ ನೆಲಸಿರುವುದನ್ನು ಕಾಣಬಹುದು. ಸಾಮವೇದದಿಂದ ಸಂಗೀತ ಕಲೆ ಹುಟ್ಟಿತೆಂಬ ಅಭಿಪ್ರಾಯವೂ ಇದೆ. ಸಂಗೀತವನ್ನು ಗಾಂಧರ್ವವಿದ್ಯೆಯೆಂದು ಗುರುತಿಸಿರುವುದುಂಟು. ಏಕವಾಹಿನಿಯಾಗಿ ಬೆಳೆದು ಬಂದ ಸಂಗೀತ ಸುಮಾರು ೧೬ನೆಯ ಶತಮಾನದ ಹೊತ್ತಿಗೆ ಹಿಂದೂಸ್ತಾನಿ ಮತ್ತು ಕರ್ಣಾಟಕ ಸಂಗೀತಗಳೆಂಬ ಎರಡು ಪದ್ಧತಿಗಳಾಗಿ ಬೆಳೆದು ಬಂದುವೆಂದು ವಿದ್ವಾಂಸರು ಗುರುತಿಸುತ್ತಾರೆ.[೪]

ಸಂಗೀತ ಕಲೆಗೆ ಪ್ರಾಚೀನ ಕಾಲದಿಂದಲೂ ವಿಶೇಷವಾದ ಪ್ರಾಶಸ್ತ್ಯವಿದ್ದು ಆ ಕಾಲದ ರಾಜರು, ರಾಣಿಯರು, ಅಧಿಕಾರಿಗಳು ಅವರ ಮಡದಿಯರು ಮತ್ತು ಅಪಾರ ಶ್ರೋತೃಗಳು ಸಂಗೀತವನ್ನು ಬಲ್ಲವರಾಗಿದ್ದರು; ಅಲ್ಲದೆ ಸಂಗೀತ ಪ್ರೋತ್ಸಾಹಕರಾಗಿದ್ದರು. ಅಂಬಳೆಯ ಶಾಸನ ಎರಡನೆಯ ಬಲ್ಲಾಳನನ್ನು ಕುರಿತು 'ಸಂಗೀತಭಂಗೀಚತುರಭರತಂ' ಎಂದು ಹೇಳುತ್ತದೆ.[೫] ಉತ್ತಮಚೋಳನನ್ನು ಒಂದು ಶಾಸನ 'ಗೀತ ನೃತ್ಯ ವಾದ್ಯತೋದ್ಯವಿನೋದ' ನೆಂದು ಕರೆದಿದೆ.[೬] ಮಂಡಳೇಶ್ವರ ಪೆಮ್ಮಾಡಿ ದೇವರಸನನ್ನು 'ಕಾವ್ಯ ಗೀತರಸಾನುಭವವಿನೋದ'ನೆಂದು ಶಾಸನವೊಂದು ಕರೆದಿದೆ.[೭] ಕಾಮಚಮೂಪತಿಯ ತಮ್ಮನಾದ ತೇಜಿ ಚಮೂಪನನ್ನು ವರ್ಣಿಸುತ್ತ ಅವನು ನರ್ತನದಲ್ಲಿ, ಗಾಯನದಲ್ಲಿ, ಸಂಗೀತ ವಾದ್ಯ ನುಡಿಸುವುದರಲ್ಲಿ ತಿಳಿವಳಿಕೆ ಉಳ್ಳವನಾಗಿದ್ದನೆಂದು ತಾಮ್ರಶಾಸನವೊಂದು ನಿರೂಪಿಸುತ್ತದೆ.[೮]

ವಿಷ್ಣುವರ್ಧನನ ರಾಣಿ ಶಾಂತಲೆ ಸಂಗೀತ ನರ್ತನಗಳಿಂದ, ಅಸಾಧಾರಣ ವ್ಯಕ್ತಿತ್ವದಿಂದ ಆ ಯುಗದ ಖ್ಯಾತ ರಾಣಿ ಎನಿಸಿದ್ದಳು. ಎರಡನೆಯ ಬಲ್ಲಾಳನ ರಾಣಿ ಬಮ್ಮಲೆಯನ್ನು ಒಂದು ಶಾಸನ 'ಗೀತ ವಾದ್ಯನೃತ್ಯ ಸೂತ್ರಧಾರೆ'[೯] ಎಂದು ವರ್ಣಿಸಿದೆ. ಚಾಳುಕ್ಯವಂಶದ ರಾಣಿ ಲಕ್ಷ್ಮಾದೇವಿಯನ್ನು ಒಂದು ಶಾಸನ ಕೀರ್ತಿಸುತ್ತಾ 'ಶ್ರಾವ್ಯ ಕಾವ್ಯ ದಿವ್ಯ

---

೧. (ರೈ) ಎಕ V ಬೇಲೂರು ೧೧೨ ಕ್ರಿ.ಶ. ೧೨೨೦.
೨. ಎಂಎಆರ್ ೧೯೩೧ ನಗರ ೭೯ ಕ್ರಿ.ಶ. ೧೧೯೧.
೩. ಮ. ಶ್ರೀಧರಮೂರ್ತಿ : ಪೂರ್ವೋಕ್ತ, ಪು. IV.
೪. ಎಲ್. ರಾಜಾರಾವ್ : ಸಂಗೀತ ಶಾಸ್ತ್ರ ಚಂದ್ರಿಕೆ, ಪು. ೩೨೨.
೫. (ರೈ) ಎಕ VI ಚಿಕ್ಕಮಗಳೂರು ೨೨ ಕ್ರಿ.ಶ. ೧೧೭೮.
೬. (ರೈ) ಎಕ XII ತಿಪಟೂರು ೬೧ ಕ್ರಿ.ಶ. ೧೧೬೨.
೭. ಎಸ್‌ಐಐ XV ರೋಣ ೪೨.
೮. ಕಇ II ಧಾರವಾಡ ೨೯ ಕ್ರಿ.ಶ. ೧೧೮೨.
೯. (ರೈ) ಎಕ V ಚನ್ನರಾಯಪಟ್ಟಣ ೨೫೪ ಕ್ರಿ.ಶ. ೧೧೮೪.

ಗೀತವಾದ್ಯವಿದ್ಯಾಪ್ರವೀಣೆ'[೧] ಎಂದಿದೆ. ಇದೇ ರೀತಿ ಚೋಳ ರಾಜವಂಶದ ಮಲ್ಲಿದೇವನ ರಾಣಿ ಸೀತಾದೇವಿಯನ್ನು 'ಶ್ರವ್ಯಕಾವ್ಯದಿವ್ಯ ಗೀತವಾದ್ಯನೃತ್ಯವಿದ್ಯಾಪ್ರವೀಣೆ' ಎಂದು ಕೀರ್ತಿಸಿದೆ.[೨]

ಈ ಉಲ್ಲೇಖಗಳನ್ನು ಗಮನಿಸಿದರೆ ರಾಜವಂಶದ ಪುರುಷರಿಗೆ ಮತ್ತು ಸ್ತ್ರೀಯರಿಗೆ ಸಂಗೀತ ನೃತ್ಯ ವಿದ್ಯೆಯಲ್ಲಿ ಸಾಕಷ್ಟು ಪ್ರವೇಶ-ಪರಿಣತಿಗಳು ಇರುತ್ತಿದ್ದವೆಂದು ಭಾವಿಸಬಹುದು. ವಿಶೇಷವಾಗಿ ಸ್ತ್ರೀಯರು ಉಳಿದ ವಿದ್ಯಾಭ್ಯಾಸದ ಕಡೆಗಿಂತಲೂ ಈ ಲಲಿತಕಲಾ ವಿಷಯಗಳ ಕಡೆಗೇ ಹೆಚ್ಚು ಒಲಿದಿರುವುದು ಕಂಡುಬರುತ್ತದೆ. ಇದಕ್ಕೆ ಅನ್ಯವಿದ್ಯಾಭ್ಯಾಸಗಳ ವಿಷಯಗಳಲ್ಲಿ ಅವಕಾಶದ ಕೊರತೆಯೂ ಕಾರಣವಾಗಿರಬಹುದು.

ಅನೇಕ ದೇವಾಲಯಗಳಲ್ಲಿ ಪೂಜಾಸಮಯದಲ್ಲಿ ದೇವರ ಸೇವೆಗೆಂದು ಗಾಯನ ನರ್ತನವನ್ನು ಕಲಿತ ಸ್ತ್ರೀಯರನ್ನು ದೇವದಾಸಿಯರಾಗಿ ಬಿಡುವ ಪದ್ಧತಿ ಇದ್ದುದನ್ನು ಹಿಂದೆಯೇ ಗಮನಿಸಲಾಗಿದೆ. ಇಂಥ ದೇವಾದಾಸಿಯರು ಲಲಿತಕಲೆಗಳಲ್ಲಿ ಪರಿಣತರಾಗಿರುತ್ತಿದ್ದರು. ಒಂದು ಶಾಸನ 'ಸವಗಾಣಿ'ಯರಿಬ್ಬರು[೩] (=ಸಮಾನ ಗಾಯನ ಪ್ರತಿಭೆಯ ಗಾಯಕಿಯರು) ದೇವಾಲಯ ಒಂದರಲ್ಲಿದ್ದುದನ್ನು ತಿಳಿಸುತ್ತದೆ.

**ಬತ್ತೀಸರಾಗ:**

ಹನ್ನೊಂದನೆಯ ಶತಮಾನದ ಶಾಸನ ಒಂದರಲ್ಲಿ ಬತ್ತೀಸ(೩೨) ರಾಗಗಳ ಉಲ್ಲೇಖ ಬರುತ್ತದೆ. ಇದರಿಂದ ಸುಮಾರು ಹನ್ನೊಂದನೆಯ ಶತಮಾನದ ಹೊತ್ತಿಗೆ ರಾಗಗಳನ್ನು ೩೨ ಎಂದು ವಿಭಾಗಿಸಿ ಗುರುತಿಸಿರುವುದು ಗಮನಾರ್ಹವಾಗಿದೆ. ಆ ಶಾಸನ[೪] ಮೊಕರಿ (ಮೌಖರಿ=ಒಂದು ವಾದ್ಯ) ಬರ್ಮಯ್ಯನನ್ನು 'ಬತ್ತೀಸರಾಗ ಬಹುಕಳಾಬ್ರಹ್ಮ ವಾಗ್ದೇವಿ ಲಬ್ಧವರ ಪ್ರಸಾದರಂ' ಎಂದು ಕೀರ್ತಿಸಿದೆ. ಸಾಂಬಮೂರ್ತಿಯವರು ಬತ್ತೀಸರಾಗಗಳ ವಿಶೇಷತೆಯನ್ನು ಗಮನಿಸಿ 'ಎಪ್ಪತ್ತೆರಡು ಮೇಳಕರ್ತರಾಗಗಳಲ್ಲಿ ನಲ್ವತ್ತು ರಾಗಗಳು ವಿವಿದಿ ದೋಷಗಳಿಂದ ಕೂಡಿರುತ್ತವೆಯೆಂದೂ ಬರ್ಮಯ್ಯನು ವಿವಿದಿ ದೋಷಗಳಿಂದ ಮುಕ್ತವಾದ ೩೨ ರಾಗಗಳನ್ನು ಹಾಡುವುದರಲ್ಲಿ ಪರಿಣತನೆಂದೂ ತಿಳಿಸಿ ಈ ಶಾಸನ ಐತಿಹಾಸಿಕವಾಗಿ ಪ್ರಮುಖವಾದುದು' ಎಂದು ಅಭಿಪ್ರಾಯಪಟ್ಟಿದ್ದಾರೆ.[೫] ಮಾನಸೋಲ್ಲಾಸದಲ್ಲಿ ನಲ್ವತ್ತಕ್ಕಿಂತ ಹೆಚ್ಚು ಸಂಖ್ಯೆಯ ರಾಗಗಳನ್ನು ಹೇಳಿದೆ.[೬] ಬಸವಣ್ಣನವರು ಮತ್ತು ಇನ್ನೂ ಕೆಲವು ವಚನಕಾರರು ಬತ್ತೀಸರಾಗಗಳ ಉಲ್ಲೇಖವನ್ನು ಮಾಡಿದ್ದಾರೆ.[೭] ವಿವೇಕ ಚಿಂತಾಮಣಿಯಲ್ಲಿ ಬತ್ತೀಸರಾಗಗಳ ಪಟ್ಟಿಯನ್ನು ಕೊಡಲಾಗಿದೆ. ಹಿಂದಿನಿಂದಲೂ ರಾಗಗಳನ್ನು ವಿಭಾಗಿಸುವ ಪದ್ಧತಿ ಮತ್ತು ರಾಗಗಳನ್ನು ಬೆರಸಿ ಹಾಡುವ ಪದ್ಧತಿ ಇದ್ದಂತೆ ತಿಳಿದುಬರುತ್ತದೆ.

ಸಾಮಾನ್ಯವಾಗಿ ಸಂಗೀತ ನೃತ್ಯಗಳು ಒಂದಕ್ಕೊಂದು ಪೂರಕವೆಂಬಂತೆ ಜೊತೆ ಜೊತೆಯಲ್ಲಿ ಉಲ್ಲೇಖಗೊಂಡಿರುವ ಸಂದರ್ಭಗಳೇ ಹೆಚ್ಚಾಗಿ ಕಂಡುಬರುತ್ತವೆ. ಸಂಗೀತ ನರ್ತನಗಳಲ್ಲಿ ಪರಿಣತರಾದ ಕರ್ನಾಟಕದ ಅನೇಕ ರಾಣಿಯರ ವಿಷಯವನ್ನು

---

೧. ಎಸ್‌ಐಐ IX(i) ಕಲ್ಯಾಣದುರ್ಗ ೨೭೩ ಕ್ರಿ.ಶ. ೧೧೭೯.
೨. (ರೈ) ಎಕ XII ಶಿರಾ ೨೩ ಕ್ರಿ.ಶ. ೧೧೬೭.
೩. ಐಕೆಡಿ ದಕ್ಷಿಣ ಕೊಲ್ಲಾಪುರ ೨೩ ಕ್ರಿ.ಶ. ೧೧೮೭.
೪. ಎಸ್‌ಐಐ XVIII ಹಾವೇರಿ ೮೬ ಕ್ರಿ.ಶ. ೧೦೭೯.
೫. ಎಸ್‌ಐಐ XVIII ಪು. XXIX-XXX.
೬. ಮಾನಸೋಲ್ಲಾಸ ೧೧೧ ಪು. ೧೨-೨೦.
೭. ಬವ. ೪೯೮.

ಈಗಾಗಲೇ ಗಮನಿಸಲಾಗಿದೆ. ಕಳಚೂರ್ಯ ವಂಶದ ಸೋವಿದೇವನ ರಾಣಿ ಸೋವಲದೇವಿ ತನ್ನ ದೇಶದ ಮತ್ತು ಇತರ ದೇಶದ ಕಲಾಪರಿಣತರ ಸಭೆಯಲ್ಲಿ ನೃತ್ಯಮಾಡಿ ಅವರನ್ನು ಸಂತೋಷ ಪಡಿಸಿದ ವಿಷಯ ಗಮನಾರ್ಹವಾದ ಸಂಗತಿ.[೧]

ದೇವಾಲಯಗಳಲ್ಲಿ ನೃತ್ಯ ಗೀತಾದಿ ಸೇವೆ ಸಲ್ಲಿಸುವವರನ್ನು ಪಾತ್ರದವರೆಂದು ಕರೆಯಲಾಗುತ್ತಿತ್ತು. ದೇವಾಲಯಗಳಿಗೆ ಕೊಟ್ಟ ದಾನಗಳಲ್ಲಿ ಪಾತ್ರ ಮತ್ತು ಸೂಳೆ ಇಬ್ಬರೂ ಉಲ್ಲೇಖಗೊಂಡರೂ ಪಾತ್ರ ಶಬ್ದವು ನೃತ್ಯಗೀತಾದಿಗಳಲ್ಲಿ ಪರಿಣತಳಾದವಳನ್ನೂ ಸೂಳೆ ಶಬ್ದವು ಉಳಿದ ಸೇವಾಕಾರ್ಯವನ್ನು ಮಾಡುವವಳನ್ನು ಸೂಚಿಸುತ್ತದೆ.[೨] ದೇವಾಲಯದ ರಂಗಭೋಗಕ್ಕೆ ಸ್ತ್ರೀಯರನ್ನು ನಿಯೋಜಿಸುವಾಗ ಅವರ ಸೌಂದರ್ಯ ಮತ್ತು ಕಲಾಪರಿಣತಿಗಳಿಗೆ ವಿಶೇಷ ಗಮನವನ್ನು ಕೊಡುತ್ತಿದ್ದುದು ತಿಳಿದುಬರುತ್ತದೆ. ರಂಭಾದಿಗಳಿಗಿಂತಲೂ ಸುಂದರಿಯರಾದ ಲಚ್ಚಣಿ (ಸಂ.ನರ್ತನೀ)ಯರನ್ನು ಸಿದ್ಧನಾಥ ದೇವಾಲಯಕ್ಕೆ ಖೆಯಿದೇವನು ನಿಯುಕ್ತಗೊಳಿಸುತ್ತಾನೆ.[೩] ಮಂಗಳೂರಿನ ಒಂದು ಶಾಸನದಲ್ಲಿ ದೇವಾಲಯದ ರಂಗಭೋಗಸೇವೆಗೆ ನಿಯುಕ್ತರಾಗಿದ್ದ 'ಕೂತಾಡುವ ಬಾಕೆನೆಂಗೆಯವರ' ಅಂದರೆ ದೇವಸ್ಥಾನದ ನರ್ತಕಿಯರ ಉಲ್ಲೇಖ ದೊರೆಯುತ್ತದೆ.[೪] ಕೆಲವು ಶಾಸನಗಳಲ್ಲಿ[೫] ಮತ್ತು ಕಾವ್ಯಗಳಲ್ಲಿ[೬] ಕಂಡುಬರುವ ನಟ್ಟುವ, ನಟುವ ಎಂಬ ಪದ ಸಂಗೀತ ನರ್ತನಗಳಲ್ಲಿ ಪರಿಣತನಾದ ನಾಟ್ಯಾಚಾರ್ಯನನ್ನು ಸೂಚಿಸುತ್ತದೆ.

ಬಳ್ಳಿಗಾವೆಯ ಒಂದು ಶಾಸನ ವಾಮಶಕ್ತಿಯನ್ನು ಕೀರ್ತಿಸುತ್ತ 'ನಾಟ್ಯಾ ದೌ ಭರತೇ ಮುನಿಭರತಃ' ಎಂದು ಹೇಳುವುದನ್ನು ಗಮನಿಸಿದರೆ ವಾಮಶಕ್ತಿ ನಾಟ್ಯಶಾಸ್ತ್ರದಲ್ಲಿ ಪರಿಣತನಾಗಿದ್ದನೆಂದು ತಿಳಿದು ಬರುತ್ತದೆ.[೭]

**ವಾದ್ಯ ಸಂಗೀತ:**

ಗಾಯನ ನರ್ತನಗಳಿಗೆ ಪೂರಕವಾಗಿ ವಾದ್ಯಗಳ ಸಂಗೀತ ಅತ್ಯವಶ್ಯಕ; ಸ್ವತಂತ್ರವಾಗಿಯೂ ವಾದ್ಯಸಂಗೀತಕ್ಕೆ ತನ್ನದೇ ಆದ ಅಸ್ತಿತ್ವವಿದೆ. ಸಂಗೀತವನ್ನು ದೈವ ಸಾಕ್ಷಾತ್ಕಾರಕ್ಕೆ ಸಾಧಕವಾದ ಒಂದು ಕಲೆಯೆಂದು ಭಾವಿಸುತ್ತಿದ್ದುದರಿಂದ ದಾನಿಗಳು ವಿವಿಧ ವಾದ್ಯಕಾರರಿಗೆ ದಾನಗಳನ್ನು ನೀಡುವುದರ ಮೂಲಕ ದೇವಸ್ಥಾನಗಳಲ್ಲಿ ನಿಯುಕ್ತಗೊಳಿಸುವ ಪದ್ಧತಿ ಇದ್ದಿತು. ಹಾಗೆ ನಿಯುಕ್ತಗೊಳಿಸುತ್ತಿದ್ದ ವಿಷಯವನ್ನು ಮಠಗಳು ಮತ್ತು ದೇವಾಲಯಗಳು ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಶಂಖ, ಜಗಳೆ, ಮದ್ದಳೆ, ಆವುಜ, ಡವರ(ಡಮರುಗ), ದಂಡಿಗೆ, ಕಾಹಳೆ ಮುಂತಾದ ವಾದ್ಯಗಳನ್ನು ದೇವರ ತ್ರಿಕಾಲಪೂಜಾ ಸಮಯದಲ್ಲಿ ನುಡಿಸುತ್ತಿದ್ದುದು ಕಂಡುಬರುತ್ತದೆ.

ಶಾಸನ ಕವಿಗಳು ತಾವು ವರ್ಣಿಸುವ ವಿಷಯವನ್ನು ಪರಿಣಾಮಕಾರಿಯಾಗಿ ನಿರೂಪಿಸಬೇಕೆಂಬ ಬಯಕೆಯಿಂದ ಯುದ್ಧ, ಶೌರ್ಯ ಮುಂತಾದವುಗಳನ್ನು ಕೆಲವು ಸಾರಿ ಸಂಗೀತದ ಪರಿಭಾಷೆಯಲ್ಲಿ ಹೇಳಿರುವುದುಂಟು. ಅಂತಹ ಕೆಲವು ನಿದರ್ಶನಗಳನ್ನು ಗಮನಿಸಬಹುದು.

---

೧. ಜಿ.ಎಸ್. ದೀಕ್ಷಿತ್ : 'ಶಿಕ್ಷಣ ಮತ್ತು ವಿಜ್ಞಾನ' ಕರ್ನಾಟಕದ ಪರಂಪರೆ I, ಪು. ೪೨೧.

೨. ಎಂ. ಚಿದಾನಂದಮೂರ್ತಿ ಕಶಾಸಾಂಅ, ಪು. ೧೮೨-೮೩.

೩. ಐಕೆಡಿ ದಕ್ಷಿಣ ಕೊಲ್ಲಾಪುರ ೨೩ ಕ್ರಿ.ಶ. ೧೧೮೭.

೪. ತುನಾಶಾ I ಮಂಗಳೂರು ೩೬ ಕ್ರಿ.ಶ. ೧೨೦೪. (ಕೂತಾಡು = ಕುಣಿ, ನರ್ತಿಸು; ಬಾಕೆ=(?), ನೆಂಗೆ- ತಮಿಳು. ನಂಗೈ = ಸ್ತ್ರೀ)

೫. ಎಇ XIII ಬಂಕಾಪುರ ೧೪ ಕ್ರಿ.ಶ. ೧೦೫೫.

೬. ಅನಂತನಾಥ ಪುರಾಣಂ : ೩-೧೧.

೭. (ರೈ) ಎಕ VII ಶಿಕಾರಿಪುರ ೯೨ ಕ್ರಿ.ಶ. ೧೧೬೮.

ಎರಡನೆಯ ಬಲ್ಲಾಳನ ಮಂತ್ರಿ ಹರಹನ ಶೌರ್ಯವನ್ನು ವರ್ಣಿಸುತ್ತ ಒಂದು ಶಾಸನ,

ತುರಗದ ಖುರಪುಟ ವಾದ್ಯಂ
ಬಿರುದರ ಕೂರಲಗಿನೆಸವ ನಾದಮೆ ತಾಳಂ
ನರರಟ್ಟೆಯ ಪೆಕ್ಕಣದಿಂ
ಕರಮೆಸೆದುದು ಹರಹನಿಱಿದ ರಣಭೂಮಿಕೆಯೊಳ್[೧]

ಕುದುರೆಗಳ ಗೊರಸಿನ ಶಬ್ದವೇ ವಾದ್ಯಧ್ವನಿಯಾಗಿಯೂ, ವೀರರ ಹರಿತವಾದ ಖಡ್ಗಗಳಿಂದ ಹೊರಟ ನಾದವೇ ತಾಳವಾಗಿ ಪರಿಣಮಿಸಿತೆಂದೂ ರುಂಡವಿಲ್ಲದ ದೇಹಗಳ ನರ್ತನದಿಂದ ಹರಹನು ಹೋರಾಡಿದ (ಪೆಕ್ಕಣ<ಸಂ. ಪ್ರೇಕ್ಷಣ = ನೋಟ) ದೃಶ್ಯ ಶೋಭಿಸಿತೆಂದು ಹೇಳಿದೆ.

ವೀರಬಲ್ಲಾಳನು ರಣರಂಗದಲ್ಲಿ ತೋರಿದ ಪರಾಕ್ರಮವನ್ನು ಹೇಳುತ್ತಾ ಒಂದು ಶಾಸನ ಸಂಗೀತ ನೃತ್ಯಗಳ ಪರಿಭಾಷೆಯನ್ನು ಬಳಸಿದೆ.

ಧುರರಂಗಂ ನೃತ್ಯರಂಗಂ ಪರನೃಪತಿ ಕಪಾಲಾಳಿ ತಾಳಾಳಿ ನಕ್ತಂ
ಚರಿಯರ್ಕಳ್ ಪಾಡುವರ್ ತದ್ವಿಜಯರುಹಯಶಂ ದುಂದುಭಿಧ್ವಾನಮಾಗು
ತ್ತಿರೆ ವಿದ್ವಿಷ್ಟಾವನೀಪಾಳಕನಿಕರದ ರುಂಡಂಗಳಿಂ ತಾಂಡವಾಡಂ
ಬರಮಂ ಮಾಱ್ಕೊಳ್ಪಿನಿಂ ನಟ್ಟವಿಗನೆನಿಸಿದಂ ವೀರಬಲ್ಲಾಳಭೂಪಂ[೨]

ಯುದ್ಧರಂಗವೇ ಬಲ್ಲಾಳನಿಗೆ ನೃತ್ಯರಂಗವಾಯಿತೆಂದೂ ಶತ್ರುರಾಜರ ಕಪಾಲಗಳನ್ನೇ ತಾಳಗಳನ್ನಾಗಿ ಮಾಡಿಕೊಂಡು ರಾಕ್ಷಸಿಯರು ರಾಜನ ಯಶಸ್ಸನ್ನು ಹಾಡುವರೆಂದೂ ದುಂದುಭಿಯ ಧ್ವನಿ ಹೊಮ್ಮುತ್ತಿರಲು ಶತ್ರುರಾಜಸಮೂಹದ ರುಂಡಗಳನ್ನು ಧರಿಸಿ ತಾಂಡವ ನೃತ್ಯವನ್ನು ಮಾಡುವ ನಟುವಿಗನ ಹಾಗೆ ಬಲ್ಲಾಳನು ಶೋಭಿಸಿದನೆಂದು ನಿರೂಪಿಸುತ್ತದೆ.

ಯುದ್ಧಗಳಲ್ಲಿ ಯುದ್ಧಾರಂಭವನ್ನು ಸೂಚಿಸಲು, ಮುಕ್ತಾಯವನ್ನು ಸೂಚಿಸಲು ಮತ್ತು ವೀರರಲ್ಲಿ ಯುದ್ಧೋತ್ಸಾಹವನ್ನು ತುಂಬಲು ವಿವಿಧವಾದ್ಯಗಳನ್ನು ಬಳಸುತ್ತಿದ್ದರು. ಇವುಗಳನ್ನು ರಣವಾದ್ಯಗಳೆಂದು ಕರೆಯುತ್ತಾರೆ. ಯುದ್ಧಗಳಲ್ಲಿ ವಿಶೇಷವಾಗಿ ಭೇರಿ, ಶಂಖ, ಮೃದಂಗ, ಕಹಳೆ, ಪಟಹ ಮುಂತಾದ ವಾದ್ಯಗಳ ಉಲ್ಲೇಖ ಬರುತ್ತದೆ. ಈ ವಾದ್ಯಗಳಿಗೆ ಸಂಬಂಧಿಸಿದ ವಿಷಯವನ್ನು ಯುದ್ಧಪದ್ಧತಿಗೆ ಸಂಬಂಧಿಸಿದ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕೆಲವು ದೇವಾಲಯಗಳಿಗೆ ಮತ್ತು ಕೆಲವು ಅಧಿಕಾರಿಗಳಿಗೆ 'ಪಂಚಮಹಾಶಬ್ದ'ಗಳ ವಿಶೇಷ ಗೌರವ ಇರುತ್ತಿದ್ದಿತು.

ಶ್ರವಣಬೆಳಗೊಳದ ಒಂದು ಶಾಸನ ಜಿನವರ್ಮನ ಕಂಖರಿಯ ಧ್ವನಿಯಿಂದ ದುರ್ಜನರಿಗೆ ಭಯವೂ ಸುಜನರಿಗೆ ಪ್ರೀತಿಯೂ ಉಂಟಾಗುತ್ತಿದ್ದಿತೆಂದು ಹೇಳುತ್ತದೆ.[೩] ಪುಷ್ಪದಂತಪುರಾಣ, ವೀರಶೈವಾಮೃತ ಪುರಾಣ ಮುಂತಾದ ಕೃತಿಗಳೂ ಈ ವಾದ್ಯವನ್ನು ಉಲ್ಲೇಖಿಸುತ್ತವೆ. ಈ ವಾದ್ಯದ ಸ್ವರೂಪ ತಿಳಿಯುವುದಿಲ್ಲ.

ಬಲ್ಲಾಳನನ ಶೌರ್ಯವನ್ನು ಹೇಳುತ್ತ ಒಂದು ಶಾಸನ ವಿವಿಧ ವಾದ್ಯಗಳ ಧ್ವನಿಗಳನ್ನು ಅನುಕರಿಸಿ ನಿರೂಪಿಸಿರುವುದುಂಟು.

ಕಡುಪಿಂ ಚಜ್ಜಜ್ಜ ಚಜ್ಜೆಂದುಲಿವ ಕಹಳೆ ದೆಣಾಂಧಣಾಂಧಣಂಧಡಂಯೆನುತ್ತುಂ
ಪೊಡರ್ವಾ ನಿಸ್ಸಾಣರಾವಂ ಧಿಮಿಕಿಟಕಿಱಿ ಝೇಂ ದಿಮಿಕಿಟಕಿಝೇಂಗಿಕಿಱೆಂಬ ತೂರ್ಯ್ಯಂ

---

೧. (ರೈ) ಎಕ VI ಕಡೂರು ೧೪೯ ಕ್ರಿ.ಶ. ೧೨೦೬.

೨. (ರೈ) ಎಕ VIII ಸೊರಬ ೨೮ ಕ್ರಿ.ಶ. ೧೨೦೮.

೩. (ಮೈ) ಎಕ II ಶ್ರವಣಬೆಳಗೊಳ ೪೩೨ ಕ್ರಿ.ಶ. ೧೨ ಶ.ಮಾ.

ಕಡೆಪಟ್ಟಿರ್ಕ್ಕುವನು ಮೇಲುವರಿದಡೆಮಿದೆವುತ್ತು ಖರ್ಗ್ಗಂವೆಂದಾಂತು ಗೆಲ್ಲಂ
ಗುಡದುಗ್ರಾರಾತಿಯಂ ವಿಕ್ರಮನಿಳಯಂ ವೀರಬಲ್ಲಾಳದೇವನು[1]

ಈ ಪದ್ಯದಲ್ಲಿ ಮೂರು ವಾದ್ಯಗಳ ಧ್ವನಿಯ ಅನುಕರಣವನ್ನು ನಿರೂಪಿಸಲಾಗಿದೆ. ಮೊದಲನೆಯದು ಕಹಳೆ (ಸಂ.ಕಹಲಾ) ಇದು ಉದ್ದವಾಗಿ ಬಾಗಿರುವ ತುತ್ತೂರಿಯಂತಹ ವಾದ್ಯ. ಎರಡನೆಯದು ನಿಸ್ಸಾಣ (ಪ್ರಾ.ಣಿಸ್ಸಾಣ, ತಮಿಳು. ನಿಚಾಳ, ತೆಲುಗು .ನಿಸ್ಸಾಣ) ಇದು ನಿಸ್ಸಾಳ ಎಂಬ ರೂಪದಲ್ಲಿ ದೊರೆಯುತ್ತದೆ. ಇದು ಒಂದು ರಣವಾದ್ಯವಾಗಿದ್ದು ಇದರ ತಳಭಾಗ ಕಿರಿದಾಗಿದ್ದು ಮುಖಭಾಗ ಅಗಲವಾಗಿರುತ್ತದೆ. ಇದು ಬಡಿಯುವಂತಹ ಒಂದು ಚರ್ಮವಾದ್ಯ. ಮೂರನೆಯದು ತೂರ್ಯ. ಇದರ ಸ್ವರೂಪ ತಿಳಿಯದು. ಇದರ ಧ್ವನಿಯ ಅನುಕರಣೆಯನ್ನು ಗಮನಿಸಿದರೆ ಇದೂ ಕೂಡ ಬಡಿಯುವ ಚರ್ಮವಾದ್ಯದಂತಿದೆ.

ಐಯ್ಯಾವಳೆ ಐನೂರ್ವರ ಒಂದು ಪ್ರಶಸ್ತಿ ಶಾಸನ ಭಾಗದಲ್ಲಿ 'ಶಂಖ ಕಹಳೆ ಜೇಂಪಣೆ.... ವೀರಮದ್ದಲೆ ಹಲಗೆ'[2] ಎಂಬ ವಾದ್ಯಗಳ ಉಲ್ಲೇಖ ಬರುತ್ತದೆ. ಜೇಂಪಣೆ ಬಹುಶಃ ಜೇಂಗಂಟೆ - ಜಯಘಂಟೆಯಾಗಿರಬಹುದು. ಹಲಗೆ ಬಹುಶಃ ಬಡಿಯುವ ವಾದ್ಯವಾಗಿದ್ದು ಕುಂಬರ ಗುಂಡಯ್ಯನ ರಗಳೆಯಲ್ಲಿಯೂ ಉಲ್ಲೇಖಗೊಂಡಿದೆ.[3] ಚಕ್ರದಂತೆ ಸುತ್ತುತ್ತ ಚಲಿಸುವ ಜಗ್ಗಲಗೆಯೆಂಬ ದೊಡ್ಡ ಚರ್ಮವಾದ್ಯ ಹುಬ್ಬಳ್ಳಿ ತಾಲ್ಲೂಕಿನಲ್ಲಿ ವಿಶೇಷವಾಗಿ ಕಂಡುಬರುತ್ತದೆ.[4]

ಡಂಗುರ ಎಂಬ ವಾದ್ಯ ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[5] ಯಾವುದಾದರೂ ವಿಷಯವನ್ನು ಸಾರ್ವಜನಿಕವಾಗಿ ಪ್ರಕಟಿಸಲು, ಜನರ ಗಮನವನ್ನು ಸೆಳೆಯುವ ಸಲುವಾಗಿ ಬಳಸುವ ಚರ್ಮವಾದ್ಯವಾಗಿದೆ. ಈಗಲೂ ಹಳ್ಳಿಗಳಲ್ಲಿ ಸಾರ್ವಜನಿಕ ವಿಷಯಗಳನ್ನು ತಿಳಿಯಪಡಿಸುವುದಕ್ಕೆ 'ಡಂಗುರ ಹೊಡೆದು ಸಾರುವುದು' ಎಂದು ಹೇಳುತ್ತಾರೆ.

ಬಬ್ಬೆಯ ನಾಯಕನೆಂಬ ವೀರನ ಶೌರ್ಯ ಪರಾಕ್ರಮಗಳನ್ನು ವರ್ಣಿಸುತ್ತ ಒಂದು ಶಾಸನ 'ಸುಸರಣವಾದ್ಯ ಪ್ರವೀಣ'[6] ನೆಂದು ಕರೆದಿದೆ. ಸುಸರಣ ಎನ್ನುವುದು ಸುಷಿರಣ ಎಂಬ ವಾದ್ಯವಾಗಿದ್ದು, ಇದು ತೂತುಗಳಿಂದ ಕೂಡಿದ ಕೊಳಲಿನಂತಹ ಒಂದು ವಾದ್ಯವಾಗಿದೆ.

ಬಿರುದದೇವ ಎಂಬುವವನನ್ನು ಕುರಿತು ಒಂದು ಶಾಸನ 'ಕಾವ್ಯನಿಪರ(?) ನಾಳಗೆಯೊಳು ತಾರ ಮಂದ್ರ ಮಧ್ಯ ಧ್ವನಿಯಂ ಕೇಳಿಸಿದ'[7] ಎಂದು ಉಲ್ಲೇಖಿಸುತ್ತದೆ. ಬಿರುದದೇವನು ಸ್ವರಸ್ಥಾಯಿಗಳಾದ ತಾರ (ಎತ್ತರ), ಮಂದ್ರ (ಕೆಳ), ಮಧ್ಯಗಳಲ್ಲಿ ಹಾಡಬಲ್ಲ ವಿಶೇಷ ಸಾಮರ್ಥ್ಯ ಪಡೆದವನಾಗಿದ್ದನು.

ರಾಜರ ಓಲಗಗಳ ವರ್ಣನೆ ಶಾಸನಗಳಲ್ಲಿ ತುಂಬ ವಿರಳವೆಂದೇ ಹೇಳಬಹುದು. ಕಾವ್ಯಗಳಲ್ಲಿ ರಾಜಾಸ್ಥಾನಗಳ ವಿವರವಾದ ವರ್ಣನೆಗಳು ಕಂಡು ಬರುತ್ತವೆ. ಹಾವೇರಿ ತಾಲ್ಲೂಕಿನ ಶಾಸನವೊಂದು ಗುತ್ತವಂಶದ ವಿಕ್ರಮಾದಿತ್ಯನ ಓಲಗದ ವರ್ಣನೆಯನ್ನು ಹೀಗೆ ನೀಡುತ್ತದೆ :

---

೧. (ರೈ) ಎಕ V ಬೇಲೂರು ೧೪೦ ಕ್ರಿ.ಶ. ೧೨೦೦.

೨. ಎಸ್‌ಐಐ XV ಮುಂಡರಗಿ ೨೧೧ ಕ್ರಿ.ಶ. ೧೧೯೬.

೩. ಶಿಮರ, ಪು. ೨೧೫.

೪. ಎಂ. ಚಿದಾನಂದ ಮೂರ್ತಿಯವರ ಪಗರಣ ಗ್ರಂಥದಲ್ಲಿ 'ಅಪೂರ್ವ ವಾದ್ಯಮೇಳ ಜಗ್ಗಲಗೆ' ಎಂಬ ಲೇಖನದಲ್ಲಿ ಚಿತ್ರ ಸಹಿತವಾದ ವಿವರಗಳಿವೆ. ಪು. ೧೧೪-೧೧೬.

೫. (ರೈ) ಎಕ VI ಚಿಕ್ಕಮಗಳೂರು ೭೭ ಕ್ರಿ.ಶ. ೧೧೮೦.

೬. (ಮೈ) ಎಕ VI ಕೃಷ್ಣರಾಜಪೇಟೆ ೭೭ ಕ್ರಿ.ಶ. ೧೧೭೯.

೭. ಎಸ್‌ಐಐ XVIII ಹಾವೇರಿ ೧೧೩ ಕ್ರಿ.ಶ. ೧೧೧೬.

ಬೀಸುವ ಚಾಮರಂ ಪೊಳೆವ ಸೀಗುರಿ ನಾಡೆ ವಿಳಾಸಭಾವಮಂ
ಸೂಸುವ ವಾರನಾರಿಸಿಕರಂ ವರಗೀತಾನಿನಾದವಾ ಚತು
ಭ್ಭಾಶ (ಷೆ?) ಗಳಿಂದವೋದಿ ನೆಱೆ ಮೆಚ್ಚಿಪ ಮಂಗಳಪಾಠಕರ್ಕ್ಕಳಿಂ
ದೇಸೆ ಬೆಡಂಗುವೆತ್ತಸೆವುದಗ್ಗದ ವಿಕ್ರಮ ಭೂಪನೋಲಗಂ[೧]

ಚಾಮರ ಸೀಗುರಿಗಳ ಬೀಸುವಿಕೆ, ವಿಳಾಸವನ್ನು ತೋರುವ ವೇಶ್ಯೆಯರು, ಉತ್ಕೃಷ್ಟ ಗಾಯನ, ನಾಲ್ಕು ಭಾಷೆಗಳಲ್ಲಿ ಮೆಚ್ಚುವಂತೆ ಸ್ತುತಿಪಾಠಕರ ಮಂಗಳ ನುಡಿಗಳಿಂದ ವಿಕ್ರಮನ ಸಭೆ ಶೋಭಿಸುತ್ತಿತ್ತೆಂದು ಶಾಸನ ನಿರೂಪಿಸುತ್ತದೆ. ರಾಜಾಸ್ಥಾನಗಳಲ್ಲಿ ಸಂಗೀತ ನರ್ತನಗಳಿಗೆ ವಿಶೇಷವಾದ ಸ್ಥಾನವಿದ್ದುದನ್ನು ಅನೇಕ ಕಾವ್ಯಗಳು ವಿವರವಾಗಿ ನಿರೂಪಿಸಿವೆ. ಚಂದ್ರಪ್ರಭ ಪುರಾಣ, ಶಾಂತೀಶ್ವರ ಪುರಾಣ ಮುಂತಾದ ಕೃತಿಗಳು ಸಂಗೀತದ ಪರಿಭಾಷೆಯನ್ನು ಬಳಸಿ ನರ್ತನ ಗಾಯನದ ಪೂರ್ವ ಸಿದ್ಧತೆಗಳನ್ನು ವಿವರವಾಗಿ ಚಿತ್ರಣಮಾಡಿದೆ.[೨]

ಕ್ರಿ.ಶ. ೧೬ನೇ ಶತಮಾನದಲ್ಲಿ ಸಿಂಹಭೂಪಾಲನು ಲಾಸ್ಯರಂಜನವೆಂಬ ನಾಟ್ಯಶಾಸ್ತ್ರದ ಗ್ರಂಥವನ್ನು ರಚಿಸಿದ್ದಾನೆ. ಇದು ಕನ್ನಡದಲ್ಲಿದ್ದು ಸಾರಂಗದೇವನ (ಕ್ರಿಶ.೧೩ನೆಯ ಶತಮಾನ) ಸಂಗೀತರತ್ನಾಕರವೆಂಬ ಸಂಸ್ಕೃತ ಗ್ರಂಥವನ್ನು ಆಧರಿಸಿದೆ. ಲಾಸ್ಯರಂಜನದಲ್ಲಿ ನಾಟ್ಯಶಾಸ್ತ್ರದ ಅನೇಕ ವಿವರಗಳು ಚರ್ಚಿತವಾಗಿವೆ.[೩]

ಬೇಲೂರು, ಹಳೆಯಬೀಡು ಮೊದಲಾದ ಸ್ಥಳಗಳಲ್ಲಿರುವ ಹೊಯ್ಸಳರ ಕಾಲದ ಅನೇಕ ದೇವಾಲಯಗಳಲ್ಲಿ ಸಂಗೀತಗಾರರು, ವಿವಿಧ ಭಂಗಿಗಳಲ್ಲಿರುವ ನರ್ತಕರು ವಿವಿಧ ವಾದ್ಯಗಳನ್ನು ಹಿಡಿದ ವಾದಕರು ಶಿಲ್ಪಕಲೆಯಲ್ಲಿ ನಿರೂಪಿತವಾಗಿದ್ದಾರೆ. ಈ ಶಿಲ್ಪಗಳಿಂದ ಸಂಗೀತ, ನರ್ತನಗಳು ಅವಿಚ್ಛಿನ್ನವಾಗಿ ಬೆಳೆಯುತ್ತಲೇ ಬಂದಿರುವುದನ್ನು ತಿಳಿಯಬಹುದಾಗಿದೆ.[೪] ಹೊಯ್ಸಳ ಕಾಲದ ಶಿಲ್ಪದಲ್ಲಿ ವಾದ್ಯಜೋಡಿ ನಿರೂಪಿತವಾಗಿರುವುದನ್ನು ಚಿತ್ರ ಸಂಪುಟದಲ್ಲಿ ಗಮನಿಸಬಹುದು.

**ಚಿತ್ರಕಲೆ:**

ಚಿತ್ರಕಲೆಗೆ ಕರ್ನಾಟಕದಲ್ಲಿ ವಿಶೇಷವಾದ ಪ್ರಾಶಸ್ತ್ಯವಿದ್ದಿತು. ಶಿಲ್ಪಿಗಳು ವಾಸ್ತುಶಿಲ್ಪದಲ್ಲಿ ಮಾತ್ರವಲ್ಲದೆ ಚಿತ್ರಕಲೆಯಲ್ಲೂ ಪರಿಣತರಾಗಿದ್ದರು. ಕೆಲವು ಕಡೆಗಳಲ್ಲಂತೂ ಚಿತ್ರಕಲೆಯನ್ನು ಸರ್ವಕಲೆಗಳಿಗೂ ಆಧಾರಭೂತವಾದುದೆಂದು ಹೊಗಳಲಾಗಿದೆ.[೫] ಹೊಯ್ಸಳರ ಕಾಲದ ಚಿತ್ರಕಲೆ ಅಧಿಕವಾಗಿ ಅಲಂಕರಣ ಕಲೆಯಾಗಿ ಬೆಳೆದಂತೆ ಕಂಡುಬರುತ್ತದೆ. ಹಾಸನ ಜಿಲ್ಲೆಯ ಜಕ್ಕನಹಳ್ಳಿಯಲ್ಲಿರುವ ಕ್ರಿಶ.೧೧೭೦ರ ಕಾಲೇಶ್ವರ ದೇವಾಲಯದಲ್ಲಿ ನವರಂಗದ ಒಳಮಾಳಿಗೆ ಚಿತ್ರಗಳಿಂದ ಅಲಂಕೃತವಾಗಿದೆ. ಶ್ರವಣಬೆಳಗೊಳದ ಹನ್ನೆರಡನೆಯ ಶತಮಾನದ ಶಾಂತಿನಾಥಬಸದಿಯ ಒಳಭಿತ್ತಿ ಮತ್ತು ಒಳಮಾಳಿಗೆಯ ಮೇಲೆ ಹೀಗೆಯೇ

---

೧. ಎಸ್‌ಐಐ XVIII ಹಾವೇರಿ ೩೦೦ ಕ್ರಿ.ಶ. ೧೨೧೩.

ಚತುರ್ಭಾಷೆಗಳು ಯಾವುವು ಎಂಬ ಪ್ರಶ್ನೆ ಬರುತ್ತದೆ. ಅಪಭ್ರಂಶಗಳಾದರೆ ಅವನ್ನು ಮೂಜುವರೆ ಭಾಷೆಗಳು (ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಪೈಶಾಚಿ) ಎಂದು ಕರೆಯುತ್ತಾರೆ. ಉಭಯ ಭಾಷೆ ಎಂದರೆ ಕನ್ನಡ ಸಂಸ್ಕೃತ ಭಾಷೆಗಳೆಂದಾಗುತ್ತದೆ. ಬಾಳಚಂದ್ರ ಕವಿಯೂ ತನ್ನನ್ನು ಚತುರ್ಭಾಷಾ ಕವಿಯೆಂದು ಕರೆದುಕೊಂಡಿದ್ದಾನೆ. (ಎಇ XIII ಬೆಳಗಾಂ ೩೭ ಕ್ರಿ.ಶ. ೧೨೦೪) ಚತುರ್ಭಾಷೆಗಳು ಯಾವುವು ಎಂಬುದು ಸ್ಪಷ್ಟವಾಗುವುದಿಲ್ಲ.

೨. ಎಂ. ಚಿದಾನಂದಮೂರ್ತಿ : ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತ ವಿಚಾರ, ಪು. ೧೭-೨೧.

೩. (ಸಂ) ಎಚ್.ಆರ್. ರಂಗಸ್ವಾಮಿ ಅಯ್ಯಂಗಾರ್ : ಲಾಸ್ಯರಂಜನಂ ೧೯೬೬.

೪. ಎಂ.ಎಚ್. ಕೃಷ್ಣ : ಕನ್ನಡ ನಾಡಿನ ಚರಿತ್ರೆ-೩, ಪು. ೩೭.

೫. ಎಂ. ಚಿದಾನಂದಮೂರ್ತಿ ಕಶಾಸಾಂಅ, ಪು. ೪೫೯.

ಚಿತ್ರಗಳನ್ನು ಬರೆಯಲಾಗಿದೆ.[೧] ಚಂದ್ರಪ್ರಭಪುರಾಣದಲ್ಲಿ ಚಿತ್ರಕಲೆಗೆ ಸಂಬಂಧಿಸಿದ ಅನೇಕ ಪಾರಿಭಾಷಿಕ ವಿವರಗಳು ದೊರೆಯುತ್ತವೆ.[೨]

**ವಾಸ್ತುಶಿಲ್ಪ:**

ವಾಸ್ತು ಎಂದರೆ ವಾಸಮಾಡುವ ಸ್ಥಳ ಎಂದು ಅರ್ಥ. ವಾಸ್ತುಶಿಲ್ಪದಲ್ಲಿ ಪಟ್ಟಣ, ಗ್ರಾಮ, ದೇವಾಲಯ, ಅರಮನೆ, ಮನೆ ಮುಂತಾದವುಗಳನ್ನು ಕಟ್ಟುವ ವಿದ್ಯೆ ಸಮಾವೇಶಗೊಳ್ಳುತ್ತದೆ. ಈ ವಿಷಯದಲ್ಲಿ ಪ್ರಾಚೀನ ವಾಸ್ತು ಶಿಲ್ಪಿಗಳಿಗೆ ಉನ್ನತ ಪರಿಣತಿ ಇದ್ದಿತು. ಅದಕ್ಕೆ ಸಾಕ್ಷಿಯಾಗಿ ಇಂದಿಗೂ ಸುಭದ್ರ ಸ್ಥಿತಿಯಲ್ಲಿ ನೂರಾರು ದೇವಾಲಯಗಳು, ಉಳಿದು ಬಂದಿವೆ. ದೇವಾಲಯಗಳ ವಾಸ್ತು ವಿಷಯಕವಾದ ಕೆಲವು ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ.

ದೇವಾಲಯ ನಿರ್ಮಾಣಕ್ಕೆ ವಿಶೇಷ ಪ್ರಾಮುಖ್ಯವಿದ್ದುದು ಕಂಡುಬರುತ್ತದೆ. ದೇವಸ್ಥಾನ ನಿರ್ಮಿಸಿದವರು ದೇವರೇ ಆಗಿಬಿಡುತ್ತಾರೆ ಎಂಬ ನಂಬಿಕೆಯಿಂದಲೋ ಅಥವಾ ಅದು ದೊಡ್ಡ ಧರ್ಮಕಾರ್ಯ ಎಂಬ ನಂಬಿಕೆಯಿಂದಲೋ [೩] ಅಂತೂ ಕರ್ನಾಟಕದಾದ್ಯಂತ ವಿಪುಲ ಸಂಖ್ಯೆಯಲ್ಲಿ ದೇವಸ್ಥಾನಗಳ ನಿರ್ಮಾಣ ನಡೆದಿದೆ. ಕೇತೋಜ ಎಂಬ ಒಬ್ಬ ಶಿಲ್ಪಿಯನ್ನು ಒಂದು ಶಾಸನ 'ಸಾಯಿರಗುಡಿಯ ಕೇತೋಜ'[೪] ಎಂಬ ವಿಶೇಷಣದೊಂದಿಗೆ ಹೇಳುತ್ತದೆ. ಅವನು ಸಾವಿರ ಗುಡಿಗಳ ನಿರ್ಮಾಣದಲ್ಲಿ ಭಾಗವಹಿಸಿದವನು ಎಂದಾಗಬಹುದು ಅಥವಾ ಸಾವಿರ ಕೇವಲ ಅನೇಕ ಸಂಖ್ಯೆಯ ಎಂಬುದಕ್ಕೆ ಪರ್ಯಾಯವಾಗಿ ಬಳಕೆಯಾಗಿರಬಹುದು.

ಅನೇಕ ಶಾಸನಗಳು ದೇವಾಲಯಗಳ ರಚನೆಯನ್ನು ಕುರಿತು ಹೇಳುತ್ತವೆ. ದೇವಾಲಯವನ್ನು ಕಟ್ಟಲು ಶಿಲೆಗಳನ್ನು ಮತ್ತು ಇಟ್ಟಿಗೆಗಳನ್ನು ವಿಶೇಷವಾಗಿ ಬಳಸುತ್ತಿದ್ದರು. ಕೆಲವು ದೇವಾಲಯಗಳು ವಿಶೇಷವಾಗಿ ಶಿಲೆಯಿಂದಲೇ (ಕಲ್ವೆಸನ) ಕಟ್ಟಿದುವೆಂದು ಶಾಸನಗಳು ಹೇಳುತ್ತವೆ. ಹಬ್ಬೆಯ ನಾಯಕನೆಂಬುವನು ಕಲ್ವೆಸನದಿಂದಲೇ ಪ್ರಸನ್ನ ಭೈರವ ದೇವಾಲಯವನ್ನು ಕಟ್ಟಿಸಿದ ವಿಷಯ ತಿಳಿದುಬರುತ್ತದೆ.[೫]

ದೇವಾಲಯವನ್ನು ಕಟ್ಟಲು ಕಲ್ಲು, ಇಟ್ಟಿಗೆ ಮತ್ತು ಸುಣ್ಣ ತುಂಬಾ ದೊಡ್ಡ ಮೊತ್ತಗಳಲ್ಲಿ ಬೇಕಾಗುತ್ತಿದ್ದವು. ಸಾವಿರಾರು ಜನ ಶ್ರಮದಿಂದ ವರ್ಷಗಟ್ಟಲೆ ದುಡಿಯಬೇಕಾಗುತ್ತಿತ್ತು. ದೇವಾಲಯಕ್ಕೆ ಅಗತ್ಯವಾದ ಇಟ್ಟಿಗೆಗಳಿಗಾಗಿ ಅಗೆದ ಗುಂಡಿಗಳು ಕೆರೆಯಾದವು, ಕಲ್ಲುಗಳಿಗೆಂದು ಒಡೆದ ದೊಡ್ಡ ಬೆಟ್ಟಗಳು ನೆಲಸಮವಾದವು, ಸುಣ್ಣದ ಬಂಡಿಗಳು ಓಡಾಡಿದ ದಾರಿಗಳು ಹಳ್ಳಗಳಾದವು ಎಂದು ಒಂದು ಶಾಸನ ನಿರೂಪಿಸುತ್ತದೆ.[೬] ತಳಪಾಯ ಹಾಕುವುದನ್ನು 'ಕೆಸಱುಗಲ್ಲನಿಕ್ಕು' ಎಂದು ಕರೆಯುತ್ತಿದ್ದಂತೆ ಕಾಣುತ್ತದೆ.[೭] ಅನಂತರ ಕಟ್ಟಡ ನಿರ್ಮಾಣದ ಮುಂದಿನ ಕಾರ್ಯಗಳು ನಡೆಯುತ್ತಿದ್ದವು. ಶಿಖರದ ಇಟ್ಟಿಗೆಯ ಭಾಗವನ್ನು

---

೧. ಎಂ.ಎಚ್. ಕೃಷ್ಣ : ಪೂರ್ವೋಕ್ತ ಪು. ೩೩.

೨. ಚಂದ್ರಪ್ರಭ ಪುರಾಣಂ : ೧೫ ಪು. ೧೯೯-೨೦೦.

೩. ಕಇ I ಸೌಂದತ್ತಿ ೨೫ ಕ್ರಿ.ಶ. ೧೧೮೬.

೪. ಎಸ್‌ಐಐ XVIII ರಾಣೆಬೆನ್ನೂರು ೧೯೧ ಕ್ರಿ.ಶ. ೧೧೮೨.

೫. ಕಇ I ಸೌಂದತ್ತಿ ೨೫ ಕ್ರಿ.ಶ. ೧೧೮೬.

೬. (ಮೈ) ಎಕ II ಶ್ರವಣಬೆಳಗೊಳ ೧೭೬ ಕ್ರಿ.ಶ. ೧೧೩೧.

೭. ಎಂ.ಚಿದಾನಂದಮೂರ್ತಿ : ಪೂರ್ವೋಕ್ತ ಪು.೪೩೬. ಅಡಿ ಟಿಪ್ಪಣಿ ೪೩.

ನಿರ್ಮಾಣ ಮಾಡಿದ ಬೊಮ್ಮರಾಸಿ ಎಂಬುವವನಿಗೆ ಭೂಮಿಯನ್ನು ಕೊಟ್ಟ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[೧] ದೇವಾಲಯದ ಕಳಸಭಾಗದ ನಿರ್ಮಾಣ ಮುಗಿದರೆ ದೇವಾಲಯ ನಿರ್ಮಾಣ ಪೂರ್ಣಗೊಂಡಂತೆ ಆಗುತ್ತಿತ್ತು.[೨]

ಅನೇಕ ದೇವಾಲಯಗಳ ಶಿಲ್ಪಸೌಂದರ್ಯವನ್ನು ಶಾಸನಗಳು ವರ್ಣಿಸಿವೆ. ಹರಿಹರದಲ್ಲಿ ಪೋಲಾಳ್ವದಂಡನಾಥನು ಕಟ್ಟಿದ ದೇವಾಲಯಕ್ಕೆ ೧೧೫ ಬಂಗಾರದ ಕಳಸಗಳಿರುವಂತೆ ನಿರ್ಮಿಸಿದ ವಿಷಯ ತಿಳಿದು ಬರುತ್ತದೆ. ದೇವಾಲಯದ ಸೌಂದರ್ಯವನ್ನು ಶಾಸನ ವಿವರವಾಗಿಯೇ ವರ್ಣಿಸಿದೆ. ನಿದರ್ಶನಕ್ಕೆ ಒಂದು ವೃತ್ತವನ್ನು ಗಮನಿಸಬಹುದು.

ಗಿರಿಯೋ ಕೂಟಮೋ ಸೂರ್ಯನೋ ಕಲಶಮೋ ದಿಗ್ಭಿತ್ತಿಯೋ ಭಿತ್ತಿಯೋ
ದೊರೆವೆತ್ತಾ ದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಳಮೋ
ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ ಪೋಲಾಳ್ವದಂಡೇಶನ
ಚ್ಚರಿಯಪ್ಪಂತಿರೆ ಮಾಡಿದಂ ಹರಿಹರ ಶ್ರೀದೇವತಾವಾಸಮಂ[೩]

ಆ ದೇವಾಲಯವನ್ನು ನೋಡಿದರೆ ಗಿರಿಯೋ ಶಿಖರವೋ, ಸೂರ್ಯನೋ ಕಳಶವೋ, ದಿಗ್ಭಿತ್ತಿಯೋ ಗೋಡೆಯೋ ಶ್ರೇಷ್ಠರಾದ ದಿಗಂಗನೆಯರೋ ಪ್ರತಿಮೆಗಳೋ ಎಂಬಂತೆ ಪೋಲಾಳ್ವ ದಂಡನಾಥನು ಕಟ್ಟಿಸಿದ ದೇವಾಲಯ ಆಶ್ಚರ್ಯವನ್ನು ತರುವ ಹಾಗಿತ್ತು.

ಹರಿಹರ ದಣ್ಣಾಯಕ ಎಂಬುವವನು ಕಟ್ಟಿಸಿದ ಒಂದು ದೇವಾಲಯವನ್ನು ಒಂದು ಶಾಸನ ಹೀಗೆ ವರ್ಣಿಸಿದೆ.

ಮೊದಲಿಂದಂ ಕಳಶಂ ಬರಂ ಮೆಱೆವ ನಾನಾಚಿತ್ರಪತ್ರಂಗಳಿಂ
ಮುದಮಂ ಬೀಱುವ ಭಾರತಾದಿ ಕಥೆಯಂ ಮೆಯ್ವೆತ್ತ ಕೂಟಂಗಳಿಂ
ದಿದು ಪಾಂಚಾಳಿಕೆ ತಳ್ತ ಮೇರುಗಿರಿಯೋ ಪೇಳೆಂಬಿನಂ ವಿಭ್ರಮಾ
ಸ್ಪದಮಾಗಿಪ್ಪುದು ಮಲ್ಲಿಕಾರ್ಜುನ ದೇವರ... ದೇವಾಲಯಂ[೪]

ದೇವಾಲಯವು ಬುಡದಿಂದ ಕಳಶದವರೆಗೆ ಶೋಭಿಸುವ ಅನೇಕ ಚಿತ್ರ ಪತ್ರಗಳಿಂದ (ಸಸ್ಯಾಲಂಕಾರಗಳು), ಮನಸ್ಸಿಗೆ ಆನಂದವನ್ನು ನೀಡುವ ಭಾರತ ಮುಂತಾದ ಕತೆಯ ಸನ್ನಿವೇಶಗಳಿಂದ ಶೋಭಿಸುವ ಶಿಖರಗಳಿಂದ, ನಾನಾ ವಿಗ್ರಹಗಳಿಂದ ಅಲಂಕೃತವಾಗಿ ಮೇರುಗಿರಿಯೋ ಎನ್ನುವಂತೆ ಶೋಭಿಸುತ್ತಿತ್ತು ಎಂದು ವರ್ಣಿಸಲಾಗಿದೆ.

ದೇವಸ್ಥಾನ ನಿರ್ಮಾಣವನ್ನು ಕೆಲವು ಸಾರಿ ಅನೇಕ ವಾಸ್ತುಶಿಲ್ಪಿಗಳು ಸೇರಿ ನಿರ್ವಹಿಸುತ್ತಿದ್ದರು. ಕೆಲವು ಸಾರಿ (ದೇವಸ್ಥಾನ ಚಿಕ್ಕದಾಗಿದ್ದರೆ) ಇಡೀ ದೇವಾಲಯವನ್ನು ನಿರ್ಮಿಸುವ ಜವಾಬ್ದಾರಿಯನ್ನು ಒಬ್ಬ ವಾಸ್ತುಶಿಲ್ಪಿ ವಹಿಸಿಕೊಳ್ಳುತ್ತಿದ್ದನೆಂದು ಭಾವಿಸಬಹುದು. 'ಕಲುಹಂದರಾದಿಯಾಗಿ ಹೊಱ ಥರ ಸಹಿತ ರೇಓಜನ ಕೆಲಸ.[೫] ಎಂದು ಒಂದು ಶಾಸನ ಹೇಳುವುದು ಅದನ್ನು ಸೂಚಿಸುತ್ತದೆ. ಕಲುಹಂದರ (ಕಲ್ಲುಮಂಟಪ?)– ದೇವಾಲಯದ ಒಟ್ಟು ಚೌಕಟ್ಟು ಮತ್ತು ಮೇಲ್ಛಾವಣಿಯನ್ನು ಸೂಚಿಸುವಂತೆ ಕಾಣುತ್ತದೆ. ಹೊಱ ಥರ– ಹೊರಗಿನ (ಥರ = ಸ್ತರ) ಹಂತವಾದ ಶಿಖರ ಮುಂತಾದ ಭಾಗಗಳನ್ನು

---

೧. ಎಸ್ಐಐ XX ಜಮಖಂಡಿ ೨೧೯ ಕ್ರಿ.ಶ. ೧೨೬೯.

೨. (ರೈ) ಎಕ VI ಚಿಕ್ಕಮಗಳೂರು ೧೦೪ ಕ್ರಿ.ಶ. ೧೨೦೨. 'ದೇವಾಲಯವಂ ಕಳಸ ನಿರ್ಮಾಣ ಮಾಡಿ ಶಾಸನವಂ ನಿಲಿಸಿದರು' ಎಂಬುದು ಅದನ್ನು ಸೂಚಿಸುತ್ತದೆ.

೩. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪.

೪. (ಮೈ) ಎಕ VII ಮಂಡ್ಯ ೨೯ ಕ್ರಿ.ಶ. ೧೨೩೪.

೫. ಎಸ್ಐಐ XVII ರಾಣೆಬೆನ್ನೂರು ೨೯೯ ಕ್ರಿ.ಶ. ೧೧೯೨.

ಸೂಚಿಸಬಹುದು. ಕೆಲವು ಸಾರಿ ಇಬ್ಬರು ಮೂವರು ಸೇರಿ ದೇವಾಲಯ ನಿರ್ಮಾಣ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಸೋಮೋಜ ಮತ್ತು ಹರಿಯೋಜ ಸೇರಿ ಶಾಂತಲೇಶ್ವರ ದೇವಾಲಯವನ್ನು ನಿರ್ಮಿಸಿದಂತೆ ತಿಳಿದು ಬರುತ್ತದೆ.[೧] ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯದ ಮಂಟಪವನ್ನು ಬಿಸಡೋಜ, ಚಾವೋಜ ಮತ್ತು ಸಿಂಗೋಜರೆಂಬ ಮೂರು ಜನ ವಾಸ್ತುಶಿಲ್ಪಿಗಳು ಸೇರಿ ನಿರ್ಮಿಸಿದ್ದಾರೆ. ಈ ಮೂವರೂ ಗೊತ್ತಾದ ಅವಧಿಯಲ್ಲಿ ನಿರ್ಮಾಣಕಾರ್ಯವನ್ನು ಮುಗಿಸಿಕೊಟ್ಟ ವಿಷಯ ತಿಳಿದುಬರುತ್ತದೆ.[೨] ದೊಡ್ಡ ದೊಡ್ಡ ದೇವಾಲಯಗಳ ನಿರ್ಮಾಣದಲ್ಲಿ ಒಬ್ಬ ಪ್ರಧಾನ ವಾಸ್ತುಶಿಲ್ಪಿಯ ಅಧೀನದಲ್ಲಿ ಉಳಿದ ಶಿಲ್ಪಿಗಳು ಅವನ ಮಾರ್ಗದರ್ಶನದಂತೆ ಕಾರ್ಯನಿರ್ವಹಿಸುತ್ತಿದ್ದರೆಂದು ಭಾವಿಸಬಹುದು.

ದೇವಾಲಯಗಳು ಜೀರ್ಣವಾದಾಗ ಅಥವಾ ಯಾವುದಾದರೂ ಒಂದು ಭಾಗ ಶಿಥಿಲವಾದಾಗ ಅದನ್ನು ದುರಸ್ತುಗೊಳಿಸುತ್ತಿದ್ದರು. ಬೇಲೂರಿನ ಚನ್ನಕೇಶವ ದೇವಾಲಯದ ಶಿಖರದ 'ಮರವೆಸನ' ಪೆಲ್ಲ ಕೊಳೆತು ಮುರಿದು ಹೋಗಿದ್ದಾಗ ಅದನ್ನು ಬಲಿಷ್ಠಗೊಳಿಸಿ, ಮರಗೆಲಸವನ್ನು ಮಾಡಿಸಿ, ಜೀರ್ಣವಾದ ಭಾಗಗಳನ್ನು ಬಲಗೊಳಿಸಿ, ಇಟ್ಟಿಗೆಗಳೆಲ್ಲವನ್ನೂ ಸರಿಪಡಿಸಿದ ವಿಷಯ ತಿಳಿದುಬರುತ್ತದೆ.[೩]

ದೇವಾಲಯವನ್ನು ನಿರ್ಮಿಸಿದ ವಾಸ್ತುಶಿಲ್ಪಿಯನ್ನು ಶಾಸನಗಳಲ್ಲಿ ಖಚಿತವಾಗಿ ಹೇಳದೇ ಇರುವಾಗ ನಿರ್ಧರಿಸುವುದು ಕಠಿಣವಾಗುತ್ತದೆ. ಕೆಲವು ಸಾರಿ ದೇವಾಲಯದ ಒಂದು ಗೋಡೆ, ಕಂಬದ ಮೇಲೆ ಅಥವಾ ಒಂದು ಶಿಲ್ಪದ ಬುಡದಲ್ಲಿ ಶಿಲ್ಪಿಯ ಹೆಸರು ಉಕ್ತವಾಗಿರಬಹುದು. ಒಂದು ಶಿಲ್ಪದ ಬುಡದಲ್ಲಿ ಶಿಲ್ಪಿಯ ಹೆಸರಿದ್ದರೆ ಆ ಶಿಲ್ಪವನ್ನು ಅವನು ನಿರ್ಮಿಸಿದನೆಂದು ಭಾವಿಸಬಹುದು. ಆದರೆ ದೇವಾಲಯದ ಯಾವುದೋ ಒಂದು ಭಾಗದಲ್ಲಿ ಶಿಲ್ಪಿಗಳ ಹೆಸರಿದ್ದು ಉಳಿದೆಡೆ ಯಾವ ಹೆಸರೂ ಇಲ್ಲದಾಗ ಇಡೀ ದೇವಾಲಯದ ವಾಸ್ತು ಶಿಲ್ಪಿ ಯಾರು ಎಂದು ನಿರ್ಧರಿಸುವುದು ಕಷ್ಟವಾಗುತ್ತದೆ. ನಿದರ್ಶನಕ್ಕೆ ಶಂಕರೇಶ್ವರ ದೇವಸ್ಥಾನದ ತಳಪಾದಿಕಲ್ಲಿನ ಮೇಲೆ ಇಸ್ವರ, ಜಂಕಣ, ಜಾಕಂಣಸೋಜ ಎಂಬ ಹೆಸರುಗಳಿವೆ.[೪] ಇದು ಆ ಭಾಗದ ನಿರ್ಮಾಣವನ್ನು ಕುರಿತು ಹೇಳುವುದೋ ಅಥವಾ ಇಡೀ ದೇವಾಲಯದ ನಿರ್ಮಾಣವನ್ನು ಕುರಿತು ಹೇಳುವುದೋ ನಿರ್ಧರಿಸುವುದು ಸಂದಿಗ್ಧವಾಗುತ್ತದೆ.

**ಮೂರ್ತಿಶಿಲ್ಪ :**

ವಾಸ್ತು ಶಿಲ್ಪದ ಒಂದು ಒಳಭೇದವೆಂದು ಮೂರ್ತಿಶಿಲ್ಪವನ್ನು ಗ್ರಹಿಸಬಹುದು. ದೇವಾಲಯದ ಆರಾಧ್ಯ ವಿಗ್ರಹವನ್ನಾಗಲಿ ಅಥವಾ ಅಲ್ಲಲ್ಲಿ ಅಲಂಕಾರಕ್ಕಾಗಿ, ಅಗತ್ಯಕ್ಕಾಗಿ ನಿರ್ಮಿಸಿದ ವಿವಿಧ ವಿಗ್ರಹಗಳನ್ನು ಮೂರ್ತಿಶಿಲ್ಪಿಗಳು ನಿರ್ಮಿಸುತ್ತಿದ್ದರು. ಅನೇಕ ಶಿಲ್ಪಗಳ ಪೀಠಭಾಗದಲ್ಲಿ ಅದನ್ನು ನಿರ್ಮಿಸಿದ ಶಿಲ್ಪಿಯ ಹೆಸರಿರುತ್ತದೆ.

ಸಾಮಾನ್ಯವಾಗಿ ದೈವ ಶಿಲ್ಪವನ್ನು ಕೆತ್ತುವ ಮೊದಲು 'ಧ್ಯಾನ ಶ್ಲೋಕ' ವನ್ನು ಮಾಡಬೇಕೆಂದು ಶಾಸ್ತ್ರಗಳು ತಿಳಿಸುತ್ತವೆ. ಶಿಲ್ಪಿಯು ತಾನು ಯಾವ ಮೂರ್ತಿಯನ್ನು ನಿರ್ಮಾಣ ಮಾಡಬೇಕೋ ಆ ಮೂರ್ತಿಗೆ ಸಂಬಂಧಿಸಿದ ಧ್ಯಾನಶ್ಲೋಕವನ್ನು ಏಧ್ಯಕ್ತವಾಗಿ ಪಠಿಸುತ್ತಾ ಆ ದೇವತೆಗೆ ವಿಶಿಷ್ಟವಾದ ಮಂತ್ರವನ್ನು ಪುರಶ್ಚರಣೆ ಮಾಡುತ್ತಿದ್ದಂತೆ ಮನಸ್ಸಿನಲ್ಲಿ ಆ ದೇವತಾಮೂರ್ತಿ

---

೧. (ರೈ) ಎಕ V ಚನ್ನರಾಯಪಟ್ಟಣ ೧೬೧ ಕ್ರಿ.ಶ. ೧೧೮೧.

೨. (ರೈ) ಎಕ VII ಶಿಕಾರಿಪುರ ೯೬ ಕ್ರಿ.ಶ. ೧೧೭೯.

೩. (ರೈ) ಎಕ V ಬೇಲೂರು ೨೪ ಕ್ರಿ.ಶ. ೧೨೯೦.

೪. (ರೈ) ಎಕ XVI ತಿಪಟೂರು ೧೫೧ ಕ್ರಿ.ಶ. ೧೩ ಶಮಾ.

ಕ್ರಮ ಕ್ರಮವಾಗಿ ಮೈದಳೆಯುತ್ತದೆ. ಇದನ್ನೇ ಮಂತ್ರಮೂರ್ತಿಯೆಂದು ಕರೆಯುವುದು. ಹೀಗೆ ಧ್ಯಾನದಲ್ಲಿ ಕಂಡ ಮೂರ್ತಿಯನ್ನು ಮರದಲ್ಲೊ ಕಲ್ಲಿನಲ್ಲೊ ಕಡೆಯುತ್ತಾನೆ.[೧]

ವಾಸ್ತುಶಿಲ್ಪಿಗಳಿಗಾಗಲಿ, ಮೂರ್ತಿಶಿಲ್ಪಿಗಳಿಗಾಗಲಿ ಶಿಲ್ಪಶಾಸ್ತ್ರದ ಮತ್ತು ಆಗಮ ಗ್ರಂಥಗಳ ಜ್ಞಾನ ಅತ್ಯಗತ್ಯವಾಗಿದ್ದಿತು. ಆ ರೀತಿಯ ಜ್ಞಾನ ಇದ್ದುದಕ್ಕೆ ಹಿಂದಿನ ಕೆಲವು ಶಾಸನಗಳು ಆಧಾರವನ್ನು ಒದಗಿಸುತ್ತವೆ.[೨]

ಮೂರ್ತಿಶಿಲ್ಪವನ್ನು ಕೆತ್ತಿದ ಕೆಲವು ಶಿಲ್ಪಿಗಳ ಉಲ್ಲೇಖಗಳನ್ನು ಗಮನಿಸಬಹುದು. ಪಂಚಲಿಂಗೇಶ್ವರ ದೇವಾಲಯದ ದ್ವಾರಪಾಲಕ ವಿಗ್ರಹಗಳ ಪೀಠದಲ್ಲಿ ಬಲಗಡೆಯ ದ್ವಾರಪಾಲಕನ ಕೆಳಗೆ ಮಾಲಿತಮ ಎಂದೂ ಎಡಗಡೆಯ ದ್ವಾರಪಾಲಕನ ಕೆಳಗೆ ಮಲಿತಂಮ[೩] ಎಂದೂ ಕೆತ್ತಲಾಗಿದೆ. ಉಮ್ಮರಿನ ಭೈರವ ಮೂರ್ತಿಯನ್ನು ಕೆತ್ತಿದವನು ಕಲೋಜ ಎಂಬ ಶಿಲ್ಪಿಯಾಗಿದ್ದಾನೆ.[೪]

ದೇವಾಲಯದ ಸುತ್ತಲೂ ವಿವಿಧ ಚಿತ್ರಪಟ್ಟಿಕೆಗಳನ್ನು ನಿರ್ಮಿಸುತ್ತಿದ್ದ ಶಿಲ್ಪಿಗಳ ಹೆಸರುಗಳು ಕಂಡುಬರುತ್ತವೆ. ಹಳೆಯಬೀಡಿನ ಹೊಯ್ಸಳೇಶ್ವರ ದೇವಾಲಯದ ಪಶ್ಚಿಮದ ಗೋಡೆಯ ಮೇಲೆ ಅನಂತಶಾಯಿ, ಪ್ರಹ್ಲಾದ, ನರಸಿಂಹ, ರಾಮರಾವಣಯುದ್ಧವನ್ನು ರಚಿಸಿದ ಶಿಲ್ಪಿ ತಾನಗುಂದೂರ ಹರಿವಾಸಿ ಎಂಬುವನು.[೫] ಈ ಶಾಸನದಲ್ಲಿ ಬರುವ ತಾನಗುಂದ, ತಾಳಗುಂದವಾಗಿದ್ದು ಅದು ಕದಂಬರ ಸ್ಥಾನಕುಂದೂರನ್ನು ಸೂಚಿಸಬಹುದು. ಹೊಯ್ಸಳ ಕಾಲದ ಕೆಲವು ಸುಂದರ ವಿಗ್ರಹಗಳನ್ನು ನಿರ್ಮಿಸಿದ ಮಲ್ಲಿತಮ್ಮ ಮತ್ತು ಮಸಣತಮ್ಮ ಗಮನಾರ್ಹರಾದವರು. ಮಲ್ಲಿತಮ್ಮನು ನಿರ್ಮಿಸಿದ ವಿಗ್ರಹಗಳು ಸೋಮನಾಥಪುರದ ಕೇಶವ ದೇವಾಲಯದಲ್ಲಿ ಮತ್ತು ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯದಲ್ಲಿ ದೊರೆಯುತ್ತವೆ. ಮಲ್ಲಿತಮ್ಮ ಹೊಯ್ಸಳ ಶಿಲ್ಪದ ಪರಿಣತಿಗೆ ಅತ್ಯುತ್ತಮ ಪ್ರತಿನಿಧಿಯಾಗಿದ್ದಾನೆ.

ಮೂರ್ತಿಶಿಲ್ಪದ ಅತ್ಯುತ್ತಮ ಮಾದರಿಗಳಿಗೆ ಕರ್ನಾಟಕ ಪ್ರಖ್ಯಾತವಾಗಿದೆ. ಕರ್ನಾಟಕ ಶೈಲಿಯ ದೇವಾಲಯಗಳು ವಿಗ್ರಹಭಾಂಡಾಗಾರದಂತಿದ್ದು ಮೂರ್ತಿವಿದ್ಯೆಯನ್ನು ಕಲಿಯುವವರಿಗೆ ಅಮೂಲ್ಯ ಸಂಗತಿಗಳನ್ನು ಒದಗಿಸುತ್ತವೆ.[೬] ಆದರೆ, 'ವಾಸ್ತು ರಚನೆಯಲ್ಲಿ ಕಾಣಿಸುವ ಕುಸುರಿಯ ಹುಚ್ಚೇ ಇಲ್ಲಿ ಶಿಲ್ಪಿಗಳ ಅವನತಿಗೂ ಕಾರಣವಾಯಿತು. ಸುಮಾರು ಎರಡು ಶತಮಾನಗಳ ಅವಧಿಯಲ್ಲಿ ಕರ್ನಾಟಕದ ಸಾವಿರಾರು ಕಸುಬುದಾರರು ಒಬ್ಬರು ಇನ್ನೊಬ್ಬರನ್ನು ಅನುಕರಿಸುತ್ತ ಒಂದೇ ತೆರನ, ಒಂದೇ ಶೈಲಿಯ ಅಸಂಖ್ಯ ಕೃತಿಗಳನ್ನು ನಿರ್ಮಿಸಿದರು' ಎಂದು ಶಿವರಾಮಕಾರಂತರು ಹೇಳಿದ್ದಾರೆ.[೭]

**ಸಾಹಿತ್ಯ :**

ನಮ್ಮ ಅಧ್ಯಯನಾವಧಿಯ ಕಾಲದಲ್ಲಿ ಕನ್ನಡ ಸಾಹಿತ್ಯ ಕೆಲವು ಗಮನಾರ್ಹ ತಿರುವುಗಳನ್ನು ಮತ್ತು ಹೊಸ ಸಾಹಿತ್ಯ ಪ್ರಕಾರಗಳನ್ನು ಪಡೆಯಿತು. ಸಾಹಿತ್ಯ ಕ್ಷೇತ್ರಕ್ಕೆ ವಚನಕಾರರ ಪ್ರವೇಶದೊಂದಿಗೆ ಸಾಹಿತ್ಯದ ಹೊಸ ಅಭಿವ್ಯಕ್ತಿಯ ಜೊತೆಯಲ್ಲಿ

---

೧. ಎಸ್. ಕೆ. ರಾಮಚಂದ್ರರಾವ್ : ಮೂರ್ತಿಶಿಲ್ಪ ನೆಲೆ- ಹಿನ್ನೆಲೆ ಪು. ೫೫ .

೨. ಎಂ. ಚಿದಾನಂದಮೂರ್ತಿ ಪೂರ್ವೋಕ್ತ ಅ ಪು. ೪೬೪.

೩. (ಮೈ) ಎಕ VI ಕೃಷ್ಣರಾಜಪೇಟೆ ೪೦ ಕ್ರಿ.ಶ. ೧೨-೧೩ ಶಮಾ.

೪. ಎಸ್ ಐಐ XV ಬದಾಮಿ ೬೩೨ ಕ್ರಿ.ಶ. ೧೩ ಶಮಾ.

೫. ಎಸ್. ಶ್ರೀಕಂಠಶಾಸ್ತ್ರಿ : ಹೊಯ್ಸಳ ವಾಸ್ತುಶಿಲ್ಪ ಪು.೪೦.

೬. ಬಿ.ವೆಂಕೋಬರಾವ್ : ಮೈಸೂರು ದೇಶದ ವಾಸ್ತುಶಿಲ್ಪ ಪು.೪೧.

೭. ಕೆ. ಶಿವರಾಮ ಕಾರಂತ : ಭಾರತೀಯ ಶಿಲ್ಪ ಪು.೧೪೨.

ಅದರ ವಸ್ತು, ರೂಪ, ಭಾಷೆ, ಶೈಲಿಗಳಲ್ಲಿ ಗಣನೀಯ ಬದಲಾವಣೆಗಳು ಕಾಣಿಸಿಕೊಂಡು ರಾಜಾಸ್ಥಾನದ ಪಂಡಿತ ಮಂಡಳಿಯ ಆವರಣದಿಂದ ದೂರ ಸರಿದು ಜನ ಸಾಮಾನ್ಯರಿಗೆ ಹತ್ತಿರವಾಯಿತು. ಇಳಿಮುಖದ ಪ್ರಕ್ರಿಯೆಯಲ್ಲಿದ್ದ ಜೈನಧರ್ಮಕ್ಕೆ ಸಾಹಿತ್ಯ ಕ್ಷೇತ್ರದಲ್ಲಿಯೂ ಹೊಸ ಸವಾಲುಗಳನ್ನು ಎದುರಿಸಬೇಕಾದ ಪರಿಸ್ಥಿತಿ ಉಂಟಾಯಿತು. ವಚನ, ರಗಳೆ, ಷಟ್ಪದಿಗಳೆಂಬ ಮೂರು ಸಾಹಿತ್ಯ ಪ್ರಕಾರಗಳು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಹೆಚ್ಚು ಪ್ರಾಮುಖ್ಯ ಪಡೆದವು. ಈ ಅವಧಿಯ ಸಾಹಿತ್ಯದ ವಿವರವಾದ ಚರ್ಚೆಯನ್ನು ಬೆಂಗಳೂರು ಮತ್ತು ಮೈಸೂರು ವಿಶ್ವವಿದ್ಯಾಲಯಗಳು ಪ್ರಕಟಿಸಿರುವ ಸಾಹಿತ್ಯ ಚರಿತ್ರೆಗಳಲ್ಲಿ ಗಮನಿಸಬಹುದು.[1]

ಕನ್ನಡ ಶಾಸನಗಳನ್ನು ಗಮನಿಸಿದರೆ ಅನೇಕ ಶಾಸನಗಳು ಉತ್ತಮ ಕಾವ್ಯ ಶೈಲಿಯಿಂದ ರಚಿತವಾಗಿರುವುದು ಕಂಡುಬರುತ್ತದೆ. ಬಹಳಷ್ಟು ಶಾಸನಗಳನ್ನು ಬರೆದವರು ಯಾರು ಎಂಬ ವಿಷಯ ತಿಳಿದು ಬರುವುದಿಲ್ಲ. ಕನ್ನಡ ಶಾಸನ ಕವಿಗಳ ಇತಿಹಾಸದ ರಚನೆಯಾಗದೆ ಕನ್ನಡ ಸಾಹಿತ್ಯ ಚರಿತ್ರೆಯ ಇತಿಹಾಸ ಅಪೂರ್ಣವಾಗುತ್ತದೆ. ಶಾಸನ ಕವಿಗಳನ್ನು ಗುರುತಿಸುವ ಹಲವು ಪ್ರಯತ್ನಗಳು ನಡೆದಿವೆ. ಸಮಗ್ರವಾದ ಅಧ್ಯಯನವನ್ನು ಈ ಕ್ಷೇತ್ರ ನಿರೀಕ್ಷಿಸುತ್ತದೆ. ಮೇವುಂಡಿ ಮಲ್ಲಾರಿಯವರು ೧೫೦ಕ್ಕೂ ಹೆಚ್ಚು ಕವಿಗಳನ್ನು ಗುರುತಿಸಿದ್ದಾರೆ.[2] ಶ್ರೀನಿವಾಸ ರಿತ್ತಿಯವರು ಕೆಲವು ಶಾಸನ ಕವಿಗಳನ್ನು ಕುರಿತು ಚರ್ಚಿಸಿದ್ದಾರೆ.[3] ಎಂ.ಎಂ. ಕಲಬುರ್ಗಿಯವರು ಶಾಸನ ಕವಿಗಳ ವಿಷಯವನ್ನು, ಅದಲ್ಲಿರುವ ಸಮಸ್ಯೆಗಳನ್ನು ಸ್ವಲ್ಪ ವಿವರವಾಗಿಯೇ ಚರ್ಚಿಸಿದ್ದಾರೆ.[4] ಕನ್ನಡ ಅಧ್ಯಯನ ಕೇಂದ್ರದ ಸಾಹಿತ್ಯ ಚರಿತ್ರೆಯಲ್ಲಿಯೂ ಆ ವಿಷಯದ ಚರ್ಚೆ ನಡೆದಿದೆ.[5]

ಕೆಲವು ಕವಿಗಳು ಕನ್ನಡ ಕಾವ್ಯಕ್ಷೇತ್ರದಲ್ಲಿ ಪ್ರಖ್ಯಾತರಾಗಿದ್ದು ಅವರು ಶಾಸನಗಳನ್ನೂ ರಚಿಸಿದ್ದಾರೆ. ಅಂಥವರಲ್ಲಿ ಕವಿ ಜನ್ನ ಮತ್ತು ಪಾರ್ಶ್ವನಾಥರು ಪ್ರಮುಖರು. ಜನ್ನನು ಯಶೋಧರಚರಿತೆ, ಅನಂತನಾಥಪುರಾಣಗಳನ್ನು ಬರೆದು ಖ್ಯಾತನಾದನು; ಹೊಯ್ಸಳ ವಂಶದ ಆಶ್ರಯದಲ್ಲಿದ್ದು ಕವಿಚಕ್ರವರ್ತಿ ಬಿರುದನ್ನು ಪಡೆದವನು. ಇವನು ಕಾವ್ಯಗಳ ರಚನೆಗೂ ಮೊದಲು ಕೆಲವು ಶಾಸನಗಳನ್ನು ಬರೆದಿರುವುದು ಕಂಡುಬರುತ್ತದೆ. ಚನ್ನರಾಯಪಟ್ಟಣದ ೯ ಪತ್ರಗಳುಳ್ಳ ತಾಮ್ರ ಶಾಸನವನ್ನು ಕ್ರಿಶ.೧೧೯೧ರಲ್ಲಿ ರಚಿಸಿದ್ದಾನೆ. ಇನ್ನೊಂದು, ತರೀಕೆರೆ ತಾಲ್ಲೂಕಿನ (೪೫) ಅಮೃತಾಪುರದ ಶಾಸನ. ಈ ಎರಡೂ ಜನ್ನನು ಬರೆದದ್ದು ಎಂಬುದಕ್ಕೆ ಸ್ಪಷ್ಟ ಉಲ್ಲೇಖಗಳಿವೆ. ಅವನು ಇನ್ನೂ ಎರಡು ಶಾಸನಗಳನ್ನು ಬರೆದಿರುವನೆಂದು (ತರೀಕೆರೆ ೪೨, ೬೮) ಎ.ಎಂ.ಅಣ್ಣಿಗೇರಿಯವರು ಭಾವಿಸುತ್ತಾರೆ. ಅದಕ್ಕೆ ಕಾರಣ ಜನ್ನ ರಚಿಸಿದ ಅಮೃತಾಪುರದ ಶಾಸನದ ಕೆಲವು ಪದ್ಯಗಳು ೪೨ನೆಯ ಶಾಸನದಲ್ಲಿ ಬಂದಿವೆ ಮತ್ತು ಅವುಗಳಲ್ಲಿ ಒಂದೆರಡು ಪದ್ಯಗಳು ಜನ್ನನು ರಚಿಸಿದ ಕಾವ್ಯಗಳಲ್ಲಿ ಬಂದಿವೆ ಹಾಗೂ ೬೮ನೆಯ ಶಾಸನದ ಕೆಲವು ಪದ್ಯಗಳು ೪೨ನೆಯ ಶಾಸನದಲ್ಲಿ ಬಂದಿವೆ ಎನ್ನುವುದನ್ನು ಹೇಳಿದ್ದಾರೆ.[6] ಆದರೆ ಕೊನೆಯ ಎರಡು ಶಾಸನಗಳನ್ನು ಜನ್ನ ಬರೆದನೆಂಬುದರ ಬಗ್ಗೆ ಭಿನ್ನಾಭಿಪ್ರಾಯವಿದೆ.[7] ಕೊನೆಯ ಎರಡು ಶಾಸನಗಳಲ್ಲಿ ಜನ್ನನ ಹೆಸರು ಉಕ್ತವಾಗಿಲ್ಲ.

---

೧. ಸಮಗ್ರ ಸಾಹಿತ್ಯ ಚರಿತ್ರೆ-೩ (ಬೆಂವಿವಿ); ಕನ್ನಡ ಸಾಹಿತ್ಯ ಚರಿತ್ರೆ ೪ (i), (ii) (ಮೈ.ವಿವಿ)

೨. ಕನ್ನಡನಾಡಿನ ಶಾಸನ ಕವಿಗಳು.

೩. ಶ್ರೀನಿವಾಸ ರಿತ್ತಿ : ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು. ಕಸಾಪಪ ೪೧-೧, ೨, ೪೩-೨.

೪. ಶಾಸನ ವ್ಯಾಸಂಗ-೧, ಪು ೧-೨೦.

೫. ಕನ್ನಡ ಸಾಹಿತ್ಯ ಚರಿತ್ರೆ ೪-(i) ಪು. ೨೦೧-೨೭೦

೬. ಎ.ಎಂ. ಅಣ್ಣಿಗೇರಿ : 'ಜನ್ನನು ರಚಿಸಿದ ಶಾಸನಗಳು' ಸ. ಕಸಾ. ೩ ಪು. ೪೯೨.

೭. ಕಸಾಚ (ಮೈ.ವಿವಿ) IV -೨ ಪು. ೧೧೪೩.

ಪಾರ್ಶ್ವನಾಥ ಪಂಡಿತನು ಬೆಳಗಾಂ ಜಿಲ್ಲೆಯ ಕಲ್ಲುಹೊಳೆಯ ಬಸದಿಯ ಶಾಸನವನ್ನು (ಕ್ರಿಶ.೧೨೦೪) ರಚಿಸಿದ್ದಾನೆ.[೧] ಇವನು ಪಾರ್ಶ್ವನಾಥ ಪುರಾಣವನ್ನು ರಚಿಸಿದ್ದಾನೆ. ಪಾರ್ಶ್ವನಾಥ ಪಂಡಿತ ಮತ್ತು ಜನ್ನರು ಬಾಳಚಂದ್ರನನ್ನು ಸ್ಮರಿಸಿದ್ದಾರೆ. ಬಾಳಚಂದ್ರನು ರಚಿಸಿದ ಎರಡು ಶಾಸನಗಳು ದೊರೆತಿವೆ.[೨] ಬಾಳಚಂದ್ರನು ಜನ್ನನ ಮಡದಿಯಾದ ಲಕುಮಾದೇವಿಯ ಗುರುವೆಂದು ಅನಂತನಾಥ ಪುರಾಣದಿಂದ ತಿಳಿದು ಬರುತ್ತದೆ. (೧-೩೨,೩೩) ಬಾಳಚಂದ್ರನು ರಚಿಸಿರುವ ಶಾಸನಗಳಲ್ಲಿ ತನ್ನನ್ನು 'ಚತುರ್ಭಾಷಾ ಕವಿಚಕ್ರವರ್ತಿ' ಎಂದು ಕರೆದುಕೊಂಡಿದ್ದಾನೆ. ಆದರೆ ಅವನು ರಚಿಸಿದ ಸಾಹಿತ್ಯ ಕೃತಿಗಳು ದೊರೆತಿಲ್ಲ.

ಕನ್ನಡ ಶಾಸನಗಳು ಮತ್ತು ಕನ್ನಡ ಕಾವ್ಯ ಹೀಗೆ ಪರಸ್ಪರ ತುಂಬ ಹತ್ತಿರವಾದ ಸಂಬಂಧವನ್ನು ಉಳ್ಳವಾಗಿವೆ. ಸಹಜವಾಗಿ ಕನ್ನಡ ಕಾವ್ಯಗಳ ಪ್ರಭಾವ ಶಾಸನಗಳ ಮೇಲೆ ಆಗಿದೆ. ಜನ್ನನಂತಹ ಕವಿಗಳು ಆರಂಭದಲ್ಲಿ ಶಾಸನಗಳನ್ನು ರಚಿಸಿ ಅನಂತರ ಕಾವ್ಯ ಕ್ಷೇತ್ರವನ್ನು ಪ್ರವೇಶಿಸಿದ್ದಾರೆ. ಸಂಸ್ಕೃತ ಸಾಹಿತ್ಯ, ಸ್ಮೃತಿ ಮುಂತಾದುವುಗಳಿಂದ ಶ್ಲೋಕಗಳನ್ನು ಶಾಸನಗಳು ಬಳಸಿಕೊಂಡಿವೆ.

ಕಾಳಿದಾಸನ ರಘುವಂಶದ ಆರಂಭದ ಪ್ರಸಿದ್ಧ ಪ್ರಾರ್ಥನಾ ಶ್ಲೋಕವನ್ನು ಕುಮಟ್ಗಿಯ ಶಾಸನ[೩] ಪ್ರಾರ್ಥನೆಯ ಪದ್ಯವಾಗಿ ಉಪಯೋಗಿಸಿಕೊಂಡಿದೆ. ಇದೇ ರೀತಿ 'ದ್ವಾವಿಮೌ ಪುರುಷೌ...' ಎಂದು ಆರಂಭವಾಗುವ ಶ್ಲೋಕವನ್ನು ಅನೇಕ ವೀರಗಲ್ಲುಗಳಲ್ಲಿ ಕಾಣಬಹುದು. ಅದು ಆತ್ಮಬಲಿ ಶಾಸನವೊಂದರಲ್ಲಿಯೂ ಬಳಕೆಯಾಗಿದೆ.[೪] ಅದು ಮೂಲತಃ ಮಹಾಭಾರತದಿಂದ ತೆಗೆದುಕೊಂಡ ಶ್ಲೋಕವಾಗಿದೆ.

ರನ್ನ ಕವಿಯ ಕಾವ್ಯಗಳಿಂದ ಪ್ರಭಾವಿತವಾದ ಹಲವು ಶಾಸನ ಪದ್ಯಗಳನ್ನು ಎಂ.ಎಂ. ಕಲಬುರ್ಗಿಯವರು ತೋರಿಸಿಕೊಟ್ಟಿದ್ದಾರೆ.[೫] ಇದೇ ರೀತಿ ಅನೇಕ ಕವಿಗಳಿಂದ ಶಾಸನ ಕವಿಗಳು ಸಹಜವಾಗಿ ಪ್ರಭಾವಕ್ಕೆ ಒಳಗಾಗಿದ್ದಾರೆ. ಅಂತಹ ಕೆಲವು ಮುಖ್ಯ ನಿದರ್ಶನಗಳನ್ನು ಗಮನಿಸಬಹುದು. ಪಂಪಕವಿಯ ವಿಕ್ರಮಾರ್ಜುನ ವಿಜಯದ ಕೆಲವು ಪದ್ಯಗಳು ಶಾಸನಗಳ ಮೇಲೆ ಪ್ರಭಾವವನ್ನು ಬೀರಿವೆ. ಬಿಜ್ಜಳನ ಪರಾಕ್ರಮವನ್ನು ನಿರೂಪಿಸುವ ಶಾಸನ ಪದ್ಯವೊಂದು ಹೀಗಿದೆ.

ಸುರಿದ ಕರುಳ್ ತೊಡರೆ ಬಿಟ್ದಿ ಭಟರ್ ಭಟರಸ್ತ್ರ ಘಾತದಿಂ
ದುರುಳ್ದ ಹಯಂ ಹಯಂಗಳೆಡೆಯೊಳ್ ಕುಣಿವಟ್ಟೆಗಳಟ್ಟೆಯಂ ಭಯಂ
ಕರತರಮಾಗೆ ನೋಟ್ಟಿ ಮರುಳಾ ಮರುಳಂ ಗೆಲೆ ಸೋವ ತನ್ನಿಶಾ
ಚರಿಯರೆನಲ್ಕೆ ನೋಡಲರಿದಾಯ್ತು ರಣಂ ಗಿರಿದುರ್ಗಮಲ್ಲನಾ[೬]

ಈ ಪದ್ಯ ಪಂಪಭಾರತದ ಅರ್ಜುನನ ಪರಾಕ್ರಮವನ್ನು ನಿರೂಪಿಸುವ ಪದ್ಯವನ್ನು ಅನುಸರಿಸಿದೆ.[೭]

---

೧. ಆರ್.ಎನ್. ಗುರವ : 'ಪಾರ್ಶ್ವಪಂಡಿತನ ಕಲ್ಹೊಳೆಯ ಶಾಸನ' ಕಬಾ ೬: ೩ ಪು.೪೫.

೨. ಎಇ XIII ಬೆಳಗಾಂ ೩ಎ, ೩ಬಿ ಕ್ರಿ.ಶ. ೧೨೦೪.

೩. ಎಸ್ಐಐ XX ಬಿಜಾಪುರ ೧೨೯ ಕ್ರಿ.ಶ. ೧೧೮೭.

೪. ಕಇ V ಹಾನಗಲ್ಲು ೯೭ ಕ್ರಿ.ಶ. ೧೧೪೧.

೫. ಎಂ.ಎಂ. ಕಲಬುರ್ಗಿ: ಪೂರ್ವೋಕ್ತ ಪು. ೬೯-೭೦.

೬. (ರೈ) ಎಕ VII ಶಿಕಾರಿಪುರ ೧೦೨ ಕ್ರಿ.ಶ. ೧೧೬೨.

೭. ಪಂ.ಭಾ. ೯-೫೭.

ಪಂಪಕವಿ ಮಹಾಭಾರತದ ಯುದ್ಧದಲ್ಲಿ ಭೀಷ್ಮರು ಶರಶಯ್ಯೆಗೆ ಒರಗಿದ್ದನ್ನು ಅದ್ಭುತವಾಗಿ ಚಿತ್ರಿಸಿದ್ದಾನೆ. ಭೀಷ್ಮರು, ವೀರಸಿದ್ಧಾಂತದ ಹೊತ್ತಗೆಯನ್ನು ತವಣಿಕೋಲುಗಳ (ವ್ಯಾಸಪೀಠ) ಮೇಲೆ ಇಟ್ಟಂತೆ ಕಂಡರೆಂದು ವರ್ಣಿಸಿದ್ದಾನೆ. ಪಂಪನ ಆ ಪ್ರಸಿದ್ಧ ಪದ್ಯವನ್ನು[೧] ಅನುಸರಿಸಿ ಶಾಸನಕಾರನೊಬ್ಬ ಬೆಳೆಯ ಎಂಬುವವನ ಪರಾಕ್ರಮವನ್ನು ವರ್ಣಿಸಿದ್ದಾನೆ.

ಆಂತ ವಿರೋಧಿಸೇನೆಯನಗುರ್ಬಿನೊಳಾಂತಿಜಿ‌ದಲ್ಲಿ ವೀರವಿ
ಕ್ರಾಂತಸರಾಳಿಗಳು ತನುವನುರ್ಚ್ಚಲೊಡಂ ಶಿವಯೆಂದು ವೀರಸಿ
ದ್ಧಾಂತದ ಪೊಸ್ತಕಂ ತವಣಿಕೋಲೋಳಳುರ್ವಿಸಿದಂತೆ ವೀರವಿ
ಕ್ರಾಂತವನಾಸೆವಟ್ಟು ಕಲಿ ಬೆಳೆಯನೆಯ್ದಿದ ದೇವಲೋಕಮಂ[೨]

ಶಾಸನಸಾಹಿತ್ಯ ಅಧಿಕವಾಗಿ ಚಂಪೂಸಾಹಿತ್ಯದಿಂದಲೇ ಪ್ರಭಾವಕ್ಕೆ ಒಳಗಾಗಿರುವುದು ಕಂಡು ಬರುವುದಾದರೂ ಕೆಲವು ಸಾರಿ ವಚನ ಸಾಹಿತ್ಯದಿಂದಲೂ ಪ್ರಭಾವಕ್ಕೆ ಒಳಗಾಗಿದೆ. ಬಸವಣ್ಣನವರ ವಚನವಾದ

ಎನ್ನ ಕಾಯವ ದಂಡಿಗೆಯ ಮಾಡಯ್ಯ
ಎನ್ನ ಶಿರವ ಸೋರೆಯ ಮಾಡಯ್ಯ
ಎನ್ನ ನರವ ತಂತಿಯ ಮಾಡಯ್ಯ
ಎನ್ನ ಬೆರಳ ಕಡ್ಡಿಯ ಮಾಡಯ್ಯ
ಬತ್ತೀಸರಾಗವ ಹಾಡಯ್ಯ ಉರದಲೊತ್ತಿ ಬಾಜಿಸು
ಕೂಡಲಸಂಗಮದೇವಾ

ಎಂಬುದು ಕಡೂರು ತಾಲ್ಲೂಕಿನ ಕ್ರಿಶ.೧೧೯೧ರ ಶಾಸನದ ಪದ್ಯ ಒಂದರ ಮೇಲೆ ಪ್ರಭಾವ ಬೀರಿರುವುದನ್ನು ಆರ್. ಶೇಷಶಾಸ್ತ್ರಿ ಅವರು ತೋರಿಸಿಕೊಟ್ಟಿದ್ದಾರೆ.[೩]

ಅರಿಭೂಪಾಲಶಿರಗಳಿಂದೆ ಸೊರೆಯಂ ತದ್ಬಾಹುಸಂದೋಹದಿಂ
ಕರೆಯಂ ದಂಡಿಗೆ ಮಾಡಿ ಬೆನ್ನೆಸೆವ ಬೀವಿಂ ತಂತಿಯಂ ಕಟ್ಟಿ ತ
ದ್ದುರದೊಳ್ ಪಾಡುತಮಿರ್ಪ್ಪಳೊಲ್ದು ನಲವಿಂ ಶ್ರೀಕಾಂತೆಯಾನಂದದಿಂ
ಧರಣೀಶೋತ್ತಮ ನಾರಸಿಂಹನೃಪನಂ ಸದ್ಭಾವದಿಂ ಸಂತತಂ

ಶಾಸನ ಕವಿಗಳು ಕೆಲವು ಮಿತಿಗಳಲ್ಲಿ ರಚನೆಯ ಕಾರ್ಯ ನಿರ್ವಹಿಸಬೇಕಿತ್ತು. ಅದೆಂದರೆ ವಿಶೇಷವಾಗಿ ಸ್ಥಳದ ಪರಿಮಿತಿ. ಹೇಳಬೇಕಾದ ಎಲ್ಲ ವಿಷಯಗಳನ್ನೂ ಒಳಗೊಂಡಂತೆ ಅದಕ್ಕೆ ಕಾವ್ಯಮಯವಾದ ಒಂದು ಚೌಕಟ್ಟನ್ನು ಕೊಡಬೇಕಾಗಿದ್ದಿತು. ಸಾಮಾನ್ಯವಾಗಿ ಶಾಸನ ಬರೆದವರ ವಿಷಯ ಶಾಸನದ ಕೊನೆಯ ಭಾಗದಲ್ಲಿ ಬರುವುದು ಪದ್ಧತಿ. ಆದರೆ ಮಂಕಣೆಯ ಶಾಸನದ ವಿಶೇಷವೆಂದರೆ ಶಾಸನಕಾರ ವಾಮನ ಆರಂಭದಲ್ಲಿಯೇ ತನ್ನ ಶಾಸನ ಬರವಣಿಗೆಯ ವೈಶಿಷ್ಟ್ಯವನ್ನು ಹೇಳಿದ್ದಾನೆ.

ಶಾಸನವಾಗಿರೆ ಪೇಳ್ವುದು
ಶಾಸನವಂ ಬರೆವುದಂತೆ ಶಾಸನವಾಗಲ್
ಶಾಸನ ಪದ್ಧತಿ ಲಿಖಿತಂ
ಶಾಸನ ಕಾದಂಬರಿಯೆ ವಾಮನರಚಿತಂ[೪]

---

೧. ಪಂ.ಭಾ.೧೧-೪೬.

೨. ಎಂಎಆರ್ ೧೯೩೦ ಸಾಗರ ೬೬ ಕ್ರಿ.ಶ. ೧೧೯೪.

೩. ಆರ್. ಶೇಷಶಾಸ್ತ್ರಿ : 'ಈ ಕಾಲದ ಶಾಸನ ಸಾಹಿತ್ಯ' ಸ.ಸಾಚ ೩ ಪು. ೬೪೩.

೪. ಎಸ್‌ಐಐ XV ಬಾಗಲಕೋಟೆ ೧೫೫ ಕ್ರಿ.ಶ. ೧೨೦೬.

ಶಾಸನ ಪದಕ್ಕಿರುವ ವಿವಿಧ ಅರ್ಥಗಳನ್ನು ಬಳಸಿಕೊಂಡು ವಾಮನನು ಬರೆದ ಶಾಸನದ ವಿಶೇಷವನ್ನು ಈ ಪದ್ಯ ಹೇಳುತ್ತದೆ. ಶಾಸನ ಬೋಧನೆಯಾಗುವಂತೆ ಹೇಳಬೇಕು, ಶಾಸನದ (ದಾನದತ್ತಿ) ವಿಷಯ ನಿರೂಪಿತವಾಗಿರಬೇಕು, ಹಾಗೆಯೇ ಶಾಸನ (=ಆಜ್ಞೆ) ಆಜ್ಞಾರೂಪದ ಬರವಣಿಗೆಯೂ ಹೌದು. ಇದು ಶಾಸನ ಪದ್ಧತಿಯಲ್ಲಿ (ಶಾಸನ ಬರೆಯುವಾಗ ಸಾಮಾನ್ಯವಾಗಿ ಅನುಸರಿಸುವ ನಿಯಮಗಳೆಂದರೆ- ಪ್ರಾರ್ಥನೆ, ರಾಜನ ಆಳ್ವಿಕೆ, ಕಾಲ, ದಾನಿ, ದಾನ ಸ್ವೀಕರಿಸುವವರ ವಿವರ, ದಾನದ ಮೇರೆಗಳು, ಶಾಪಾಶಯ ಇತ್ಯಾದಿ) ವಾಮನನಿಂದ ರಚಿಸಲ್ಪಟ್ಟಿದ್ದರೂ ಇದು ಕಾದಂಬರಿಯೇ ( ಸಾಹಿತ್ಯ ಕೃತಿ) ಆಗಿದೆಯೆಂದು ತನ್ನ ಕೃತಿಯ ಹೆಗ್ಗಳಿಕೆಯನ್ನು ಹೇಳಿಕೊಂಡಿದ್ದಾನೆ.

ಶಾಸನಗಳನ್ನೂ ಸಾಹಿತ್ಯ ಕೃತಿಗಳನ್ನೂ ಬರೆದ ಕವಿಗಳೂ ಇದ್ದಾರೆ. ಕೇವಲ ಸಾಹಿತ್ಯ ಕೃತಿಗಳನ್ನು ಬರೆದ ಕವಿಗಳಿದ್ದಾರೆ. ಹಾಗೆಯೇ ಕೇವಲ ಶಾಸನಗಳನ್ನು ಬರೆದ ಕವಿಗಳೂ ಇದ್ದಾರೆ. ಶಾಸನವಾಗಿಯೂ ಅಪರೂಪದ ಕಾವ್ಯವಾಗಿರುವ ಗೊಮ್ಮಟಸ್ತುತಿ ಶಿಲೆಯ ಮೇಲಿನ ಅತ್ಯಂತ ವಿರಳವಾದ ಕಾವ್ಯವಾಗಿದೆ.[೧] ಗೊಮ್ಮಟೇಶ್ವರನ ಮೂರ್ತಿಯನ್ನು ನೋಡಿ ಆನಂದದಿಂದ, ಭಕ್ತಿಯಿಂದ, ಆವೇಶ ತುಂಬಿ ಹಾಡಿದ ಬೊಪ್ಪಣಪಂಡಿತನ ಕೃತಿ ಕಾವ್ಯಮಯವಾಗಿ ಹೊರಹೊಮ್ಮಿದೆ. ಇದು ಕನ್ನಡ ಶಾಸನ ಸಾಹಿತ್ಯ ಪ್ರಪಂಚದಲ್ಲಿಯೇ ವಿಶಿಷ್ಟ ಕೃತಿಯಾಗಿ ಹೆಸರು ಪಡೆದಿದೆ. ೩೨ ಪದ್ಯಗಳಿಂದ ಕೂಡಿದ (೨೭ ವೃತ್ತಗಳು, ೫ ಕಂದಪದ್ಯಗಳು) ಈ ಪುಟ್ಟ ಕೃತಿ ಗೊಮ್ಮಟೇಶ್ವರನ ಸ್ತುತಿಗಾಗಿಯೇ ಮೀಸಲಾದದ್ದು . ಗೊಮ್ಮಟಮೂರ್ತಿಯ ಸ್ಥಾಪನೆಯ ಇತಿಹಾಸ, ಪುರಾಣ, ಚಾವುಂಡರಾಯ ವಿಗ್ರಹವನ್ನು ನಿರ್ಮಿಸಿದ್ದು, ಗೊಮ್ಮಟನ ಹಿರಿಮೆ, ಗೊಮ್ಮಟನ ಅರ್ಚನೆಯಿಂದ ಮೂಡುವ ಕೃತಾರ್ಥಭಾವ ಈ ಎಲ್ಲವನ್ನೂ ಕಾವ್ಯಮಯವಾಗಿ ನಿರೂಪಿಸಲಾಗಿದೆ. ಆ ಶಿಲ್ಪದ ಔನ್ನತ್ಯವನ್ನು ನಿರೂಪಿಸುತ್ತಾ ಕವಿ,

> ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ
> ನುತ ಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನ್ನತ್ಯಮುಂ
> ನುತ ಸೌಂದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ
> ಕ್ಷಿತಿ ಸಂಪೂಜ್ಯಮೊ ಗೊಮ್ಮಟೇಶ್ವರ ಜಿನ ಶ್ರೀರೂಪಮಾತ್ಮೋಪಮಂ

ಎಂದಿದ್ದಾನೆ. ಶಿಲ್ಪವು ಉನ್ನತವಾದ ಕಾರಣಕ್ಕೇ ಸೌಂದರ್ಯವಿರುವುದಿಲ್ಲ; ಔನ್ನತ್ಯ, ಸೌಂದರ್ಯಗಳಿದ್ದರೂ ವಿಶೇಷ ಮಹಿಮೆ ಇರುವುದಿಲ್ಲ. ಹೀಗಿರುವಾಗ ಔನ್ನತ್ಯ, ಸ್ತುತಿಗೆ ಪಾತ್ರವಾಗಬಲ್ಲ ಸೌಂದರ್ಯ ಮತ್ತು ಅಧಿಕವಾಗುತ್ತಿರುವ ಮಹಿಮೆ -ಈ ಮೂರನ್ನೂ ಒಳಗೊಂಡ ಗೊಮ್ಮಟೇಶ್ವರನ ಜಿನಶ್ರೀರೂಪವು ಲೋಕಕ್ಕೆ ಪೂಜ್ಯವಾಗಿದೆಯಲ್ಲದೆ ತನಗೆ ತಾನೇ ಉಪಮಾನವಾಗಿರುವ ಅಂತಹ ವಿಗ್ರಹ ಅನ್ಯವಿಲ್ಲವೆಂದು ಅದರ ಸೌಂದರ್ಯ, ಪೂಜ್ಯತೆ, ಭವ್ಯತೆ ಮತ್ತು ಅನುಪಮ ಗುಣಗಳನ್ನು ಕೀರ್ತಿಸಲಾಗಿದೆ.

ಕವಿಬೊಪ್ಪಣನು ನಿರ್ವಾಣಲಕ್ಷ್ಮೀಪತಿ ನಕ್ಷತ್ರಮಾಲಿಕೆ ಎಂಬ ಕೃತಿಯನ್ನು ಮತ್ತು ಕೆಲವು ನೀತಿ ಕಂದಗಳನ್ನು ರಚಿಸಿದಂತೆ ತಿಳಿದು ಬರುತ್ತದೆ. ಈ ಕವಿಗೆ ಸುಜನೋತ್ತಂಸ ಎಂಬ ಬಿರುದಿರುವುದು ಪ್ರಖ್ಯಾತವೇ ಇದೆ.

ಇತ್ತೀಚೆಗೆ ಸೊಲ್ಲಾಪುರದ ಶಾಸನ ಸಂಪುಟವನ್ನು ಪ್ರಕಟಿಸಿದ ಸಂಪಾದಕರು ಕನ್ನಡದಲ್ಲಿ ವಿರಳವಾದ ಶುದ್ಧಕಾವ್ಯಶಾಸನ 'ವಿವಾಹ ಪುರಾಣ'ದ ಕಡೆ ವಿಶೇಷ ಗಮನವನ್ನು ಸೆಳೆದರು.[೨] ಎಂ.ಚಿದಾನಂದ ಮೂರ್ತಿಯವರು ಆ ಶಾಸನವನ್ನು ಸೂಕ್ಷ್ಮವಾಗಿ

---

೧. (ಮೈ) ಎಕ II ಶ್ರವಣಬೆಳಗೊಳ ೩೩೬ ಕ್ರಿ.ಶ. ಸು. ೧೧೮೦.

೨. (Ed) Srinivasa Ritti, Ananda Kumar : Inscriptions from Sollapur District.

ಅಧ್ಯಯನ ಮಾಡಿ ಆ ಶಾಸನ ಕೇವಲ ಗದ್ಯದಲ್ಲಿರುವ ಶಾಸನವಲ್ಲವೆಂದೂ ಅದು ಗದ್ಯ ಮತ್ತು ಹದಿನಾರು ಷಟ್ಪದಗಳನ್ನು ಒಳಗೊಂಡ, ಕನ್ನಡ ಸಾಹಿತ್ಯ ಸಂಸ್ಕೃತಿಗಳ ದೃಷ್ಟಿಯಿಂದ ಬಹು ಅಮೂಲ್ಯವಾದ ಶಾಸನವೆಂಬುದನ್ನು ತಮ್ಮ ಲೇಖನದಲ್ಲಿ ವಿವರವಾಗಿ ತೋರಿಸಿಕೊಟ್ಟಿದ್ದಾರೆ.[೧] 'ವಿವಾಹ ಪುರಾಣ' ಕಲ್ಲಿನ ಮೇಲಿದ್ದರೂ ಗೊಮ್ಮಟಸ್ತುತಿಯಂತೆ ಸ್ವತಂತ್ರ ಕಾವ್ಯವಾಗಿದೆ. ಇದುವರೆಗೂ ರಾಘವಾಂಕನ ಷಟ್ಪದಿ ಕೃತಿಗಳೇ ಆ ಪ್ರಕಾರದ ಮೊದಲ ಕೃತಿಗಳೆಂದು ವಿದ್ವಾಂಸರಿಂದ ಪರಿಗಣಿತವಾಗಿದ್ದವು. ಈಗ ದೊರೆತ ಶಾಸನದಿಂದ ಆ ಶಾಸನ ಕೃತಿಯೇ ಮೊದಲ ಷಟ್ಪದ ಕೃತಿಯೆಂದು ಭಾವಿಸಬೇಕಾಗುತ್ತದೆ.

ಇದು ಶಿವ ಗಿರಿಜೆಯರ ವಿವಾಹ ಕತೆಯನ್ನು ನಿರೂಪಿಸುತ್ತದೆ. ವಿಶೇಷವೆಂದರೆ ಇದು ಹರಿಹರ ಮುಂತಾದ ಕವಿಗಳು ನಿರೂಪಿಸುವ ಸಂಪ್ರದಾಯದ ಕತೆಯಲ್ಲ. ಬಹುಶಃ ೧೨-೧೩ನೆಯ ಶತಮಾನದಲ್ಲಿ ವರ್ತಕ ಸಮೂಹದಲ್ಲಿ ಪ್ರಚಲಿತವಿದ್ದ ಒಂದು ಪ್ರಾದೇಶಿಕ ಜಾನಪದ ಕಥಾಪ್ರಭೇದವೆಂದು ಎಂ.ಚಿದಾನಂದ ಮೂರ್ತಿಯವರು ಭಾವಿಸಿದ್ದಾರೆ. ವಿವಾಹದ ಕತೆಯನ್ನು ಹೀಗೆ ಸಂಗ್ರಹಿಸಬಹುದು. ಸೃಷ್ಟಿಯ ಆರಂಭದ ಕೃತಯುಗದಲ್ಲಿ ಭಗವಂತನಿಂದ ಪ್ರಕೃತಿಯನ್ನು ನಿರ್ಮಾಣ ಮಾಡಿಸುವ ಉದ್ದೇಶದಿಂದ ಆದಿಶಕ್ತಿಗೌರಿ ಗಿರಿರಾಜನ ಮಗಳಾಗಿ ಹುಟ್ಟಿ ಒಂದು ಪರ್ವತವನ್ನೇರಿ ತಪಸ್ಸಿಗೆ ತೊಡಗುತ್ತಾಳೆ. ತಪಸ್ಸಿನ ಉದ್ದೇಶ ಶಾಶ್ವತನಾದ ಪುರುಷನನ್ನು ಪಡೆಯುವುದೇ ಆಗಿದೆ. ಅವಳು ಅಂತಹ ಕಾಡಿನ ಪ್ರದೇಶದಲ್ಲಿ ಉಗ್ರವಾದ ತಪಸ್ಸನ್ನು ಆಚರಿಸಲು ಶಿವನು ಬ್ರಹ್ಮ, ವಿಷ್ಣು, ಇಂದ್ರ, ಕಾಮ ಇವರೇ ಮುಂತಾದ ದೇವತೆಗಳೊಂದಿಗೆ ಬಂದು ಅವಳನ್ನು ಮಾತನಾಡಿಸುತ್ತಾನೆ. ಅವಳು ಮೌನವಾಗಿರಲು ಶಿವನು ತನ್ನ ಆದಿರೂಪದಲ್ಲಿ ಕಾಣಿಸಿಕೊಂಡಾಗ ಅವಳು ಶಿವಸ್ತುತಿಯನ್ನು ಮಾಡುತ್ತಾಳೆ. ಶಿವನು ತನ್ನ ಪರಿವಾರದೊಂದಿಗೆ 'ನಗರ' ದಲ್ಲಿ ಬೀಡುಬಿಡುತ್ತಾನೆ. ಗಿರಿಜೆಯು ತನ್ನ ತಂದೆಯ ಬಳಿ ಎಲ್ಲವನ್ನು ನಿರೂಪಿಸಿದಾಗ ಮದುವೆಯನ್ನು ಮಾಡಲು ನಿರ್ಧರಿಸಿ ಶಿವನ ಸ್ವಾಗತಕ್ಕೆ ಏರ್ಪಾಟುಗಳನ್ನು ಮಾಡುತ್ತಾನೆ. ಶಿವ ಗಿರಿಜೆಯರ ವಿವಾಹವಾದ ವಿಷಯ ಮಾತ್ರ ಶಾಸನದಿಂದ ತಿಳಿಯುತ್ತದೆ. ಆದರೆ ಶಾಸನದ ಮುಂದಿನ ಭಾಗ ನಾಶವಾಗಿರುವುದರಿಂದ ಶಾಸನದ ಆರಂಭದಲ್ಲಿದ್ದ ಸೂಚನೆಯಂತೆ ವರ್ತಕರ ಜಾತಿಯ ಮೂಲಪುರುಷರ ಜನನದ ವಿಷಯ ತಿಳಿಯುವುದಿಲ್ಲ.

ಮಾನಸೋಲ್ಲಾಸದಲ್ಲಿ ಬರುವ ಷಟ್ಪದಿಯ ವಿವರಣೆಯನ್ನು ಅನುಸರಿಸಿ ಎಂ.ಚಿದಾನಂದ ಮೂರ್ತಿಯವರು ವಿವಾಹಪುರಾಣವು 'ಚಿತ್ರಕಥನ' ವೆಂಬ ಜಾನಪದ ಪ್ರಕಾರವಿದ್ದು ಅದರ ಲಕ್ಷಣಗಳನ್ನು ಒಳಗೊಂಡಿರುವುದನ್ನು ತೋರಿಸಿಕೊಟ್ಟಿದ್ದಾರೆ. ಕಂದ ವೃತ್ತಗಳ ಜೊತೆ ಗದ್ಯ ಬರುವುದು ಚಂಪೂ ಪ್ರಕಾರದ ಲಕ್ಷಣ. ಆದರೆ ಗದ್ಯ ಮತ್ತು ಷಟ್ಪದಗಳಿರುವ ಏಕೈಕ ಶಾಸನವೆಂಬುದನ್ನೂ ತೋರಿಸಿಕೊಟ್ಟಿದ್ದಾರೆ. ಇದು ತನ್ನ ವಸ್ತು, ಶೈಲಿ, ಛಂದಸ್ಸು, ಜಾನಪದ ಮುಂತಾದ ದೃಷ್ಟಿಗಳಿಂದ ಕನ್ನಡದಲ್ಲಿ ಇತ್ತೀಚೆಗೆ ದೊರೆತ ಅತ್ಯಂತ ಪ್ರಮುಖ ಶಾಸನವೆಂಬುದು ನಿಸ್ಸಂಶಯವಾಗಿದೆ.

ಕುರುಗುಂದದ ಶಾಸನವೊಂದು[೨] ಮಾಲ್ಲೋಜನ ಮಗ ರೂವಾರಿ ಮಲ್ಲೋಜ ಶಾಸನವನ್ನು ಕಂಡರಿಸಿದಂತೆ ಹೇಳುತ್ತದೆ. ಇವನು ಒಂದೇ 'ಪುಟದೊಳು' (ಒಂದು ತಾಳೆಗರಿಯಲ್ಲಿ) ಗೋಗ್ರಹಣದ ಕತೆಯನ್ನು ಉತ್ಕಟವಾಗಿ ರಚಿಸಿ ಮೆಚ್ಚುಗೆಯನ್ನು ಪಡೆದಂತೆ ಶಾಸನ ತಿಳಿಸುತ್ತದೆ. ವೀರಗಲ್ಲಿನ ರಚನೆಗೆ ಈ ಅಡಕ ರಚನೆಯ ಕಲೆ ಅತ್ಯಗತ್ಯವಾದುದು.

ಎಂ.ಎಂ. ಕಲಬುರ್ಗಿಯವರು[೩] ಕನ್ನಡ ಶಾಸನಗಳನ್ನು ಸಾಹಿತ್ಯದ ದೃಷ್ಟಿಯಿಂದ ನೃಪತುಂಗ ಪೂರ್ವಯುಗ (ಕ್ರಿ.ಶ. ೮೫೦ ರವರೆಗಿನ ಶಾಸನಗಳು), ನೃಪತುಂಗೋತ್ತರ ಯುಗ (ಕ್ರಿ.ಶ. ೮೫೦ ರಿಂದ ಕ್ರಿ.ಶ. ೧೩೫೦ ರವರೆಗಿನ ಶಾಸನಗಳು)

---

೧. ಎಂ. ಚಿದಾನಂದಮೂರ್ತಿ : 'ಕನ್ನಡದ ಮೊತ್ತ ಮೊದಲ ಷಟ್ಪದ ("ಅಂಶ ಷಟ್ಪದಿ") ಕಾವ್ಯ'. ಸಾಧನೆ ೧೮ : ೧-೨ ಪು. ೮-೨೯.

೨. (ರೈ) ಎಕ V ಅರಸಿಕೆರೆ ೧೪೧ ಕ್ರಿ.ಶ. ೧೧೭೯.

೩. ಎಂ.ಎಂ. ಕಲಬುರ್ಗಿ : ಪೂರ್ವೋಕ್ತ ಪು. ೫೭.

ಮತ್ತು ವಿಜಯನಗರ ಯುಗ (ಕ್ರಿ.ಶ.೧೩೩೬ರ ಅನಂತರದ ಶಾಸನಗಳು) ಎಂಬುದಾಗಿ ವಿಂಗಡಿಸಿದ್ದಾರೆ. ಅವರು ಮಾಡುವ ವಿಭಾಗ ಕ್ರಮ ಕನ್ನಡ ಭಾಷೆಯ ವೈಲಕ್ಷಣ್ಯ, ಕರ್ನಾಟಕವನ್ನು ಆಳಿದ ರಾಜಮನೆತನಗಳ ಏಳುಬೀಳು, ಶಾಸನ ಸಾಹಿತ್ಯ ಬೆಳೆದ ಉಪಕ್ರಮ ಮತ್ತು ಪಡೆದ ತಿರುವುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡಿದ್ದು, ಸಮರ್ಪಕವಾಗಿದೆಯೆಂದು ಹೇಳಬಹುದು.

**ಮನರಂಜನೆ:**

ಆ ಕಾಲದ ಜನರ ಮನರಂಜನೆಗಾಗಿ ಏನೇನು ಸಾಧನಗಳಿದ್ದವು ಎಂಬುದು ಶಾಸನಗಳಿಂದ ಅಷ್ಟಾಗಿ ತಿಳಿದು ಬರುವುದಿಲ್ಲ. ಅಲ್ಲದೆ ಅಂಥ ಅಂಶಗಳನ್ನು ಶಾಸನಗಳಿಂದ ನಿರೀಕ್ಷಿಸುವುದೂ ಸಾಧುವಾದುದಲ್ಲ. ಕಾವ್ಯಗಳಲ್ಲಿ ಬೇಟೆ, ಆನೆಕಾಳಗ, ಕುಕ್ಕುಟಕಾಳಗ, ಮಲ್ಲಯುದ್ಧ ಇಂಥ ಸ್ಪರ್ಧೆಗಳನ್ನು, ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದ ವಿಷಯಗಳು ನಿರೂಪಿತವಾಗಿವೆ. ಇವುಗಳ ಜೊತೆಗೆ ನಾಟಕ, ನರ್ತನ, ಸಂಗೀತಗಳೂ ಇರುತ್ತಿದ್ದುವು. ಇವೆಲ್ಲವೂ ಅಧಿಕವಾಗಿ ರಾಜಮನೆತನದವರ, ಅಧಿಕಾರಿಗಳ ಮತ್ತು ಶ್ರೀಮಂತರ ಮನರಂಜನೆಯ ಕೆಲವು ಸಾಧನಗಳಾಗಿದ್ದವು.

ಶಾಸನಗಳು ಬೇಟೆಯ ಅನೇಕ ವಿವರಗಳನ್ನು ಒದಗಿಸುತ್ತವೆ. ರಾಜರು ಬೇಟೆಯಾಡುತ್ತಿದ್ದುದು ವ್ಯವಸ್ಥಿತವಾದ 'ಮೃಗಯಾವಿಹಾರ'. ಆದರೆ ಶಾಸನಗಳಲ್ಲಿ ದೊರೆಯುವ ಬೇಟೆಗಳು ಮೃಗಯಾವಿಹಾರಗಳಂತಿಲ್ಲ. ಹಂದಿಗಳ ಬೇಟೆ ಆ ಕಾಲದಲ್ಲಿ ಹೆಚ್ಚು ಜನಪ್ರಿಯವಾಗಿದ್ದಂತಿದೆ. ಪೊಡಲೆಯ ಎಂಬುವವನು ಹಂದಿಯ ಬೇಟೆಯಲ್ಲಿ ಕಲಿತನದಿಂದ 'ತಳ್ತಿರಿದು' ಸತ್ತ ವಿಷಯವನ್ನು ಶಾಸನವೊಂದು[೧] ತಿಳಿಸುತ್ತದೆ. ಬೋವೋಜನೆಂಬ ವೀರನೊಬ್ಬನು ಬೇಟೆಗೆ ಹೋದಾಗ 'ಹಂದಿ ಮೇಲೆ ಹಾಯ್ದು' ಮಡಿದ ವಿಷಯ ಇನ್ನೊಂದು ಶಾಸನದಲ್ಲಿ ನಿರೂಪಿತವಾಗಿದೆ.[೨] ಸಾಮಾನ್ಯವಾಗಿ ಬೇಟೆಗಾರರು ಬೇಟೆಗೆ ಹೋಗುವಾಗ ನಾಯಿಗಳನ್ನು ಜೊತೆಯಲ್ಲಿ ಕರೆದೊಯ್ಯುತ್ತಿದ್ದರು.

ಅನಂತನಾಥ ಪುರಾಣದಲ್ಲಿ ವಸುಷೇಣನಲ್ಲಿಗೆ ಅತಿಥಿಯಾಗಿ ಬಂದಿದ್ದ ಗೆಳೆಯ ಚಂಡಶಾಸನನಿಗೆ ನಾನಾ ವಿನೋದಗಳನ್ನು ತೋರಿಸಿದ ವಿಷಯ ನಿರೂಪಿತವಾಗಿದೆ.

> ಸರಸ ಕಾವ್ಯವಿನೋದ ಗೋಷ್ಠಿಯಿನೊರ್ಮೆ ನಾಟಕಾನಾಟಿಕಾ
> ಪರಿನಟದ್ರಸಭಾವಭಂಗಿಯಿನೊರ್ಮೆ ಗೀತದ ವಾದ್ಯದ
> ಚ್ಚರಿಯ ನೃತ್ಯದ ಕೇಳ್ವೆಯಿಂ ಮುದದೊರ್ಮೆ ಜೆಟ್ಟಿಗರಪ್ಪ ಮ
> ಲ್ಲರ ಪೊಣರ್ಕೆಯಿನೊರ್ಮೆ ಪೊತ್ತುಮನೊರ್ಮೆ ವೇಷ ವಿಶೇಷದಿಂ
>
> ಒರ್ಮೆ ವಾಹವಿಳಾಸಕಂದುಕಕೇಳಿಯಿಂ ಗಜಯುದ್ಧದಿಂ
> ದೊರ್ಮೆ ವಾರುವದಂಕದಗ್ಗದ ಕಾಳೆಗಂಗಳಿನೊರ್ಮೆ ಮ
> ತ್ತೊರ್ಮೆ ಚಿತ್ರ ವಿಚಿತ್ರ ಕೌತುಕದಿಂದಮಿಂತು ನೆಗಳ್ಚಿದಂ
> ಕೂರ್ಮೆಯಿಂ ವಸುಷೇಣ ಭೂಪತಿ ಚಂಡಶಾಸನ ಭೂಪನೊಳ್[೩]

ಇದೇ ರೀತಿ ರಾಜನ ಮನರಂಜನೆಯ ವಿಷಯವನ್ನು ಸೂಕ್ತಿ ಸುಧಾರ್ಣವವೂ ಹೇಳುತ್ತದೆ. ಕುಕ್ಕುಟ, ಮಲ್ಲ, ಮೇಷ, ಮಹಿಷ, ಆನೆಗಳ ದ್ವಂದ್ವ ಹೋರಾಟಗಳ ಉಲ್ಲೇಖ ಅಲ್ಲಿ ಬಂದಿದೆ.[೪] ನಂಬಿಯಣ್ಣನ ರಗಳೆಯಲ್ಲಿಯೂ ನಂಬಿಯಣ್ಣನು

---

೧. (ರೈ) ಎಕ VII ಶಿಕಾರಿಪುರ ೧೫೯ ಕ್ರಿ.ಶ. ೧೧೮೩.

೨. (ರೈ) ಎಕ VIII ಸೊರಬ ೩೪೦ ಕ್ರಿ.ಶ. ೧೨೪೯.

೩. ಅನಂತನಾಥ ಪುರಾಣಂ ೧೧-೨೬, ೨೭.

೪. ಸೂಕ್ತಿಸುಧಾರ್ಣವಂ ೧೬-೨೮.

ವಿವಾಹತತ್ಪರನಾಗಿ ಉದ್ಯಾನವನದಲ್ಲಿ ಕಾಯುತ್ತಿರುವಾಗ ಕುಕ್ಕುಟಗಳ ಮತ್ತು ಆನೆಗಳ ಕಾಳಗವನ್ನು ನೋಡುತ್ತಿದ್ದನೆಂದು ಹರಿಹರನು ವರ್ಣಿಸಿದ್ದಾನೆ.[೧]

ಪ್ರಾಚೀನ ಕಾಲದಿಂದಲೂ ಚದುರಂಗದ ಆಟ ಬಹು ಜನಪ್ರಿಯವಾಗಿದ್ದಿತು. ಅದರ ಉಲ್ಲೇಖ ಋಗ್ವೇದ, ಅಥರ್ವವೇದ ಮತ್ತು ಬೌದ್ಧ, ಜೈನ ಕೃತಿಗಳಲ್ಲಿಯೂ ಇರುವುದು ಆ ಕ್ರೀಡೆಯ ಪ್ರಾಚೀನತೆ ಮತ್ತು ಜನಪ್ರಿಯತೆಯನ್ನು ಸೂಚಿಸುತ್ತದೆ. ಪರ್ಶಿಯಾದ ಚತುರಂಗ್, ಅರೇಬಿಯಾದ ಶತ್ರಂಜ್ ಇವು ಸಂಸ್ಕೃತದ ಚತುರಂಗದಿಂದ ಮೂಡಿಬಂದಿದ್ದು ಅದು ಇಂಡಿಯಾದಲ್ಲಿ ಹುಟ್ಟಿದ ಆಟವೆಂದು ಟೇಲರ್ ಅವರು ಅಭಿಪ್ರಾಯ ಪಟ್ಟಿದ್ದಾರೆ.[೨] ಅಕ್ಕಮ್ಮನ ವಚನವೊಂದು ಚದುರಂಗದ ಉಲ್ಲೇಖವನ್ನು ಮಾಡುತ್ತದೆ.[೩]

ಕುದುರೆಯ ಮೇಲೆ ಕುಳಿತು ಆಡುತ್ತಿದ್ದ ಒಂದು ರೀತಿಯ ಚಂಡಾಟ ಹತ್ತನೆಯ ಶತಮಾನದಲ್ಲಿ ವಿಶೇಷವಾಗಿ ಪ್ರಚಾರದಲ್ಲಿದ್ದಿತು. ರಾಷ್ಟ್ರಕೂಟವಂಶದ ಇಂದ್ರ ರಾಜನನ್ನು ಕೀರ್ತಿಸುವ ಶಾಸನದಲ್ಲಿ 'ಕಂದುಕಾಗಮ'ದಲ್ಲಿ ಪ್ರಸಿದ್ಧನೆಂದಿದೆ.[೪] ಅದು ಆಧುನಿಕ ಪೋಲೊ ಕ್ರೀಡೆಯನ್ನು ಹೋಲುವಂತೆ ಕಾಣುತ್ತದೆ. ಆ ಶಾಸನದಲ್ಲಿ ಅದರ ಕೆಲವು ಪಾರಿಭಾಷಿಕ ಪದಗಳನ್ನು ಬಳಸಿರುವುದು ಕಂಡುಬರುತ್ತದೆ. ಮುಂದಿನ ಕಾಲದ ಕೆಲವು ಶಾಸನಗಳಲ್ಲಿ ಬರುವ 'ಕಂದುಕನೀಜಿ' 'ಕಂದುಕಾಚಾರ್ಯ' ಎಂಬ ಮಾತುಗಳು ಬಹುಶಃ ಅದೇ ಕ್ರೀಡೆಯನ್ನು ಸೂಚಿಸುವಂತೆ ಕಾಣುತ್ತದೆ. ಇದು ರಾಜಕುಮಾರರ, ಶ್ರೀಮಂತರ ಕ್ರೀಡೆಯಾಗಿರುವಂತಿದೆ. ಮಾನಸೋಲ್ಲಾಸ ಉಲ್ಲೇಖಿಸುವ ಕುದುರೆಯ ಮೇಲೆ ಕುಳಿತು ಆಡುವ ಚಂಡಾಟ ಇದೇ ಆಗಿರಬೇಕು.[೫]

ಮೇಲಿನ ಮನರಂಜನೆಯ ಸಾಧನಗಳಲ್ಲದೆ ಜನಸಾಮಾನ್ಯರಲ್ಲಿ ಹೆಚ್ಚು ಪ್ರಚಲಿತವಿದ್ದ ಹಗರಣ,[೬] ಬಹುರೂಪ, ಕಲಕೇತ, ಕೋಡಂಗಿಯಾಟ[೭] ಮುಂತಾದ ಜನಪ್ರಿಯ ಮನರಂಜನೆಯ ವಿಷಯಗಳೂ ಪ್ರಚಲಿತವಿದ್ದವು. ಈ ಕಾಲದಲ್ಲಿಯೂ ಕರ್ನಾಟಕದ ಕೆಲವು ಭಾಗಗಳಲ್ಲಿ ಹಗರಣ ಪ್ರಚಲಿತವಿದೆ. ಈಗ ಬಳಕೆಯಲ್ಲಿರುವ ನೂರಾರು ಜನಪದ ಕಲೆಗಳು[೮] ಬಹುಮಟ್ಟಿಗೆ ಮನರಂಜನೆಯನ್ನೇ ಉದ್ದೇಶವಾಗಿ ಇಟ್ಟುಕೊಂಡವು ಎನ್ನುವುದರಲ್ಲಿ ಸಂಶಯವಿಲ್ಲ.

ಹೆಣ್ಣುಮಕ್ಕಳು ಉಯ್ಯಾಲೆಯನ್ನು ಆಡುತ್ತಿದ್ದುದನ್ನು ಧರ್ಮಾಮೃತ ತಿಳಿಸುತ್ತದೆ.[೯] ಇದೇ ರೀತಿ ವಚನದಲ್ಲಿ ವಾಯುಪಟ[೧೦](ಗಾಳಿಪಟ), ಚಿಟ್ಟುಮುಜಿ [೧೧] ಎಂಬ ಮಕ್ಕಳಾಟಗಳ ಉಲ್ಲೇಖಗಳು ಕಂಡುಬರುತ್ತವೆ. ಚಿಟ್ಟುಮುಜಿ ಆಟ

---

೧. ನಂಬಿಯಣ್ಣನ ರಗಳೆ : ೫ನೆಯ ಸ್ಥಲ ಪು.೩೩.

೨. V. R. Ramachandra Dixitar : War in Ancient India ಪು. ೧೪೫-೪೬.

೩. ಶಿಶವ ೧೦೮ ಪು. ೫೦೯.

೪. (ಮೈ) ಎಕ II ಶ್ರವಣಬೆಳಗೊಳ ೧೬೩ ಕ್ರಿ.ಶ. ೯೮೨.

೫. Jyotsna Kamath : Social life in Medieval Karnataka. ಪು.೮೨.

೬. ಹಗರಣದ ವಿವರವಾದ ಚರ್ಚೆಗೆ ಎಂ. ಚಿದಾನಂದ ಮೂರ್ತಿಯವರ ಪಗರಣ ಗ್ರಂಥದಲ್ಲಿ 'ಪಗರಣ (ಹಗರಣ)- ಇತಿಹಾಸದಲ್ಲಿ ಮತ್ತು ಸಮಕಾಲೀನದಲ್ಲಿ' ಎಂಬ ಲೇಖನವನ್ನು ನೋಡಿ ಪು. ೧-೩೫.

೭. ಪಿ.ವಿ. ನಾರಾಯಣ : ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ. ಪು. ೩೦೯-೩೧೫.

೮. (ಸಂ) ಗೊ.ರು. ಚನ್ನಬಸಪ್ಪ : ಕರ್ನಾಟಕ ಜನಪದ ಕಲೆಗಳು.

೯. ಧರ್ಮಾಮೃತಂ ೧೦ ಗದ್ಯ ಪು.೬.

೧೦. ಸಪುವ (ಮೆಜಿಮಿಂಡಯ್ಯ) ೬೩ ಪು. ೯೨.

೧೧. ನೂ. ಪುರ ಪು. ೪೨೮.

ಹರಿಶ್ಚಂದ್ರ ಕಾವ್ಯ, ಕುಮಾರವ್ಯಾಸ ಭಾರತ ಮುಂತಾದ ಕಾವ್ಯಗಳಲ್ಲೂ ಉಲ್ಲೇಖಗೊಂಡಿದೆ. ಈ ಕಾವ್ಯಗಳ ಸಂದರ್ಭಗಳನ್ನು ನೋಡಿದರೆ ಹುಡುಗಿಯರು ಮತ್ತು ಹುಡುಗರು ಆಡುತ್ತಿದ್ದ ಆಟವಾಗಿರುವಂತೆ ಕಂಡುಬರುತ್ತವೆ.

ಲಕ್ಕುಂಡಿ ಶಾಸನದಲ್ಲಿ ಉಲ್ಲೇಖಗೊಂಡಿರುವ 'ಕುಪ್ಪಕುಜೆ' ಎಂಬ ಮಕ್ಕಳಾಟವನ್ನು ಎಂ.ಚಿದಾನಂದಮೂರ್ತಿಯವರು ಧರ್ಮಾಮೃತದಲ್ಲಿ ಉಲ್ಲೇಖಗೊಂಡಿರುವುದನ್ನು ಸೂಚಿಸಿ ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಹಳ್ಳಿಗಳಲ್ಲಿ ಇಂದಿಗೂ ಬಳಕೆಯಲ್ಲಿರುವ ಆಟವೆಂಬುದನ್ನು ಗುರುತಿಸಿಕೊಟ್ಟಿದ್ದಾರೆ.[೧]

ಚಂಡಾಟ ಪ್ರಾಚೀನ ಕರ್ನಾಟಕದಲ್ಲಿ ತುಂಬ ಜನಪ್ರಿಯ ಕ್ರೀಡೆಗಳಲ್ಲಿ ಒಂದಾಗಿದ್ದಿತು. ಶಾಸನಗಳು ಯುದ್ಧದಲ್ಲಿ ಪ್ರಕಟಪಡಿಸುವ ಶೌರ್ಯದ ವರ್ಣನೆಯನ್ನು ಕೆಲವು ಸಾರಿ ಈ ಆಟದ ಪರಿಭಾಷೆಯಲ್ಲಿ ವರ್ಣಿಸಿರುವುದು ಕಂಡುಬರುತ್ತದೆ. ಶತ್ರುವೀರರ ರುಂಡಗಳನ್ನು 'ಪೊಡೆಸೆಂಡನಾಡೆ',[೨] 'ಪೊಡೆಸೆಂಡುವೊಯ್ದನ್'[೩] ಎಂಬಂತಹ ಮಾತುಗಳು ಬರುತ್ತವೆ. 'ಪೊಡೆ ಸೆಂಡು' ಚಂಡಾಟದ ಒಂದು ವಿಧವನ್ನು ಹೇಳುತ್ತದೆ. ಶಾಂತರರಾಜನನ್ನು ಕೀರ್ತಿಸುವಾಗ ಒಂದು ಶಾಸನ 'ಕಂದುಕಾಚಾರ್ಯಂ'[೪] ಎಂದಿದೆ. ವೀರನೊಬ್ಬನನ್ನು 'ಕಂದುಕನೀಜ'[೫] ಎಂದು ಶಾಸನವೊಂದು ಕರೆದಿದೆ. ಈ ಎರಡು ವಿಶೇಷಣಗಳು ಚಂಡಾಟದಲ್ಲಿ ಅವರಿಗಿದ್ದ ವಿಶೇಷ ಪರಿಣತಿಯನ್ನು ಸೂಚಿಸುತ್ತದೆ. ಕುಮಾರರಾಮನ ಸಾಂಗತ್ಯದಲ್ಲಿಯೂ ಕಂದುಕ ಕ್ರೀಡೆಯ ಸನ್ನಿವೇಶ ಬಂದಿರುವುದನ್ನು ಸ್ಮರಿಸಿಕೊಳ್ಳಬಹುದು.

ಕೆಲವು ಶಾಸನಗಳಲ್ಲಿ ವೀರರ ಪರಾಕ್ರಮವನ್ನು ಹೇಳುವ ಸಂದರ್ಭದಲ್ಲಿ 'ಗಿಲಿಗಿಲಿಗಂಬವನಾಡಿಸುವನಾಹವದೊಳ್'[೬] ಎಂಬ ಮಾತು ಬರುತ್ತದೆ. 'ಗಿಲಿಗಿಲಿಗಂಬವನಾಡಿಸು' ಒಂದು ಮಕ್ಕಳ ಆಟವನ್ನು ಸೂಚಿಸುತ್ತದೆ. (ಇದಕ್ಕೆ ಕನ್ನಡ- ಕನ್ನಡ ನಿಘಂಟು ಮಕ್ಕಳಾಟವೆಂದು ವಿವರಣೆ ನೀಡಿ- ಸ್ಥಾನಪಲ್ಲಟ ಮಾಡು, ಬೇರೆ ಬೇರೆ ರಕ್ಷಕರನ್ನು ಹುಡುಕುವಂತೆ ಮಾಡು ಎಂಬ ಅರ್ಥಗಳನ್ನು ಸೂಚಿಸಿದೆ.) ಅದೇ ಹೆಸರಲ್ಲದೇ ಹೋದರೂ ಕರ್ನಾಟಕದ ಕೆಲವು ಹಳ್ಳಿಗಳಲ್ಲಿ ಈ ಆಟ ಪ್ರಚುರದಲ್ಲಿದೆ. ಕಂಬಗಳಿರುವ ಮನೆ ಅಥವಾ ದೇವಸ್ಥಾನಗಳಲ್ಲಿ ಮಕ್ಕಳು ಈ ಆಟವನ್ನು ಆಡುತ್ತಾರೆ. ಐದು ಜನ ಆಟಗಾರರಿದ್ದರೆ ನಾಲ್ಕು ಕಂಬಗಳ ಅಂಕಣವನ್ನು ಆರಿಸಿಕೊಳ್ಳುತ್ತಾರೆ. ಚಪ್ಪಾಳೆ ಹಾಕಿ ನಾಲ್ಕು ಜನ ಗೆದ್ದ ಮೇಲೆ ನಾಲ್ವರೂ ಒಂದೊಂದು ಕಂಬವನ್ನು ಹಿಡಿದು ನಿಲ್ಲುತ್ತಾರೆ. ಐದನೆಯ ಹುಡುಗ ಒಂದೊಂದು ಕಂಬದ ಬಳಿಗೆ ಹೋಗಿ 'ಉಪ್ ಕೊಡ್' (ಉಪ್ಪುಕೊಡು) ಎಂದು ಕೇಳುತ್ತಾ ಬರಬೇಕು. ಆಗ ಹಾಗೆ ಕೇಳಿಸಿಕೊಂಡ ಹುಡುಗ 'ಆ ಮನೆಗೆ ಹೋಗು' ಎಂದು ಮುಂದಿನ ಕಂಬದ ಕಡೆ ತೋರಿಸುತ್ತಾನೆ. ಅವನು ಮುಂದಿನ ಕಂಬದ ಬಳಿಗೆ ಹೋಗುವುದರೊಳಗಾಗಿ ಬೇರೊಂದು ಕಂಬದ ಬಳಿಗೆ ಹೋಗಿ ಆಶ್ರಯ ಪಡೆಯಬೇಕು. ಆ ಕಂಬದ ಬಳಿ ಇದ್ದ ಹುಡುಗ ಈ ಕಂಬವನ್ನು ಬಂದು ಹಿಡಿಯಬೇಕು. ಹೀಗೆ ಕಂಬ ಬದಲಾಯಿಸುತ್ತಿರುವ ಸಂದರ್ಭದಲ್ಲಿ ಯಾರನ್ನು ಐದನೆಯ ಹುಡುಗ ಮುಟ್ಟುತ್ತಾನೊ ಅವನು ಐದನೆಯ ಹುಡುಗನ

---

೧. ಪ್ರಕರಣ ಗ್ರಂಥದಲ್ಲಿ 'ಕುಪ್ಪಕುಜೆ'- 'ಹಿಂದಿನ ಕಾಲದ ಮಕ್ಕಳ ಒಂದು ಆಟ' ಎಂಬ ಲೇಖನವನ್ನು ನೋಡಿ ಪು. ೧೬೮-೭೦.

೨. (ರೈ) ಎಕ VII ಹೊನ್ನಾಳಿ ೪೮ ಕ್ರಿ.ಶ. ೧೨೧೬.

೩. ಕಇ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೪. ಎಂಎಆರ್ ೧೯೪೦ ನಗರ ೭೯ ಕ್ರಿ.ಶ. ೧೧೯೧.

೫. (ರೈ) ಎಕ V ಚನ್ನರಾಯಪಟ್ಟಣ ೧೯೭ ಕ್ರಿ. ಶ. ೧೨೨೩.

೬ (ರೈ) ಎಕ XII ಚಿಕ್ಕನಾಯಕನಹಳ್ಳಿ ೨೧ ಕ್ರಿ. ಶ. ೧೧೬೦.

(ರೈ) ಎಕ XII ಚಿಕ್ಕನಾಯಕನಹಳ್ಳಿ ೪೩ ಕ್ರಿ. ಶ. ೧೧೭೧.

ಸ್ಥಾನಕ್ಕೆ ಬಂದು ತನ್ನ ಕಂಬವನ್ನು ಮೊದಲು ಐದನೆಯವನಾಗಿದ್ದ ಹುಡುಗನಿಗೆ ಬಿಟ್ಟುಕೊಡಬೇಕು. ಮತ್ತೆ ಆಟ ಮುಂದುವರಿಯುತ್ತದೆ. ಈ ಆಟಕ್ಕೆ 'ಉಪ್ ಕೊಡ್' ಎಂದೇ ಕರೆಯುತ್ತಾರೆ. ಈ ಆಟ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಪ್ರಚಲಿತವಿದೆ. ಈ ಆಟವನ್ನು ಚಿಕ್ಕ ಹುಡುಗರು, ಹುಡುಗಿಯರು ಸಾಮಾನ್ಯವಾಗಿ ಆಡುತ್ತಾರೆ.

ಕೆಲವು ಶಾಸನಗಳಲ್ಲಿ[೧] ಅಣ್ಣೆಕಲ್ಲಾಡು, ತಿಱಿಕಲ್ಲಾಡು ಎಂದು ವೀರರ ಪರಾಕ್ರಮವನ್ನು ವರ್ಣಿಸುವ ಸಂದರ್ಭದಲ್ಲಿ ಹೇಳಿರುವುದುಂಟು. ಈ ಎರಡೂ ಕೂಡ ಮಕ್ಕಳ ಆಟವನ್ನು ಸೂಚಿಸುತ್ತವೆ. (ಅಣ್ಣೆ ?+ ಕಲ್- ಕನ್ನಡ ಕನ್ನಡ ನಿಘಂಟು) ಇದು ಕಲ್ಲುಗಳನ್ನು ತೂರಿ ಹಿಡಿಯುವ ಒಂದು ಬಗೆಯ ಆಟ. ಈಗಲೂ ಅದನ್ನು 'ಆಣೆಕಲ್ಲಾಟ' ಎಂಬ ಹೆಸರಿನಲ್ಲಿ ಆಡುತ್ತಾರೆ. ತಿಱಿಕಲ್ಲಾಟವೂ ಅದೇ ಆಟವನ್ನು ಸೂಚಿಸುತ್ತದೆ (ತಿಱಿ = ಎಸೆ). ಈ ಆಟದಲ್ಲಿ ಕಲ್ಲನ್ನು ಎಸೆದು ಹಿಡಿಯುವುದೇ ಸ್ಪರ್ಧೆ. ಸಾಮಾನ್ಯವಾಗಿ ಆಟಕ್ಕೆ ಚಿಕ್ಕ ನಯವಾದ ಕಲ್ಲುಗಳನ್ನು ಬಳಸುತ್ತಾರೆ. ಆ ಆಟಗಳನ್ನು ಉಲ್ಲೇಖಿಸುವ ಎರಡೂ ಶಾಸನಗಳಲ್ಲಿ ಅಣ್ಣೆಕಲ್ಲು ಮತ್ತು ತಿಱಿಕಲ್ಲು ಜೊತೆಜೊತೆಯಾಗಿಯೇ ಉಲ್ಲೇಖವಾಗಿವೆ. ಈ ಆಟಗಳ ಹೆಸರು ಜೈಮಿನಿಭಾರತ, ಚೆನ್ನಬಸವಪುರಾಣ ಮುಂತಾದ ಕಾವ್ಯಗಳಲ್ಲೂ ಉಲ್ಲೇಖವಾಗಿದೆ. ಈ ಆಟಗಳು ವಿಶೇಷವಾಗಿ ಹೆಣ್ಣುಮಕ್ಕಳಲ್ಲಿ ಪ್ರಚಲಿತವಿವೆ.

---

೧. (ರೈ) ಎಕ V ಚನ್ನರಾಯಪಟ್ಟಣ ೨೦೯ ಕ್ರಿ. ಶ. ೧೧೭೪.
'ಬೆಟ್ಟನಶ್ರಮದಿನಾಟದಣ್ಣೆಕಲ್ಲಾಡಿದಂ ತಿಱಿಕಲ್ಲಾಡಿದನೇನತಿಪ್ರಬಳನೋ'
ಈ ಮೇಲಿನ ಸಾಲು (ರೈ) ಎಕ VI ಚಿಕ್ಕಮಗಳೂರು ೨೧ ಕ್ರಿ.ಶ. ೧೧೭೪ರ ಶಾಸನದಲ್ಲಿಯೂ ಬಂದಿದೆ.

## ೧೮. ಉಡುಪು-ಆಭರಣ-ಆಹಾರ-ಪಾನೀಯಗಳು

ಉಡುಪು ಮೂಲತಃ ಮಾನವ ದೇಹರಕ್ಷಣೆಗಾಗಿ ರೂಪಿಸಿಕೊಂಡದ್ದಾದರೂ ಕ್ರಮೇಣ ನಾಗರಿಕತೆ ಬೆಳೆದಂತೆ ಅದು ಸೌಂದರ್ಯಪ್ರಜ್ಞೆಗೆ, ಅಭಿರುಚಿಗೆ ತಕ್ಕಂತೆ ಬದಲಾಗುತ್ತಾ ಬಂದು ಮನುಷ್ಯನ ಬದುಕಿನ ಅನಿವಾರ್ಯ ಅಗತ್ಯ ವಸ್ತುಗಳಲ್ಲಿ ಒಂದಾಗಿಬಿಟ್ಟಿತು. ವ್ಯಕ್ತಿ ತೊಡುವ ಉಡುಪುಗಳು ಸಂಸ್ಕೃತಿಯ ಮಟ್ಟದ ಸಂಕೇತವಾಗಿ, ಆತನ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳನ್ನು ಬಿಂಬಿಸತೊಡಗಿದವು. ಉಡುಪು, ಆಭರಣಗಳು ದೇಹದ ಹೊರ ಆವರಣಗಳಾದರೂ ಅವು ಒಂದು ನಾಡಿನ ಸಂಸ್ಕೃತಿಯ ಹಾಗೂ ಅಭಿರುಚಿಯ ಆಂತರಿಕ ಬಿಂಬಗಳೂ ಆಗಿರುತ್ತವೆ.

ಪ್ರಾಚೀನ ಕಾಲದಿಂದಲೂ ಭಾರತ, ಚೀನಾದೇಶಗಳು ಅತ್ಯುತ್ತಮವಾದ ವಸ್ತ್ರಗಳ ತಯಾರಿಕೆಗೆ ಪ್ರಖ್ಯಾತವಾಗಿವೆ. ವಡ್ಡಾರಾಧನೆ, ಪಂಪಭಾರತ ಮುಂತಾದ ಕೃತಿಗಳಲ್ಲಿ ಉಲ್ಲೇಖಗೊಂಡಿರುವ ಚೀನ, ಚೀನಾಂಬರ ಎಂದೇ ಕರೆಯಲಾಗುತ್ತಿದ್ದ ವಸ್ತ್ರಗಳು ಮೂಲತಃ ಚೀನಾದೇಶದಲ್ಲಿ ತಯಾರಾಗುತ್ತಿದ್ದು ಆ ಕಾಲದ ಬೆಲೆಬಾಳುವ ನಯವಾದ ವಸ್ತ್ರಗಳಾಗಿದ್ದವು. ಕ್ರಮೇಣ ಭಾರತದಲ್ಲಿ ತಯಾರಾದ ಆ ಮಟ್ಟದ ನಯವಾದ ವಸ್ತ್ರಗಳಿಗೂ ಚೀನ, ಚೀನಾಂಬರ ಎಂದು ಕರೆದಿರಬಹುದು. ಭಾರತದಲ್ಲಿಯೂ ಶ್ರೇಷ್ಠ ದರ್ಜೆಯ ವಸ್ತ್ರಗಳನ್ನು ತಯಾರಿಸುತ್ತಿದ್ದರು (ಪಳಿ, ಪಟ್ಟಾವಳಿ ಮುಂತಾದವು). ವಸ್ತ್ರಗಳ ತಯಾರಿಕೆ ಆ ಕಾಲದಲ್ಲಿಯೂ ಬಹುದೊಡ್ಡ ಉದ್ಯೋಗವೇ ಆಗಿದ್ದಿತು. ಬಟ್ಟೆಗಳನ್ನು ವಿವಿಧ ಮಗ್ಗಗಳಲ್ಲಿ ನೇಯುತ್ತಿದ್ದರು. ನೇಯುವ ವೃತ್ತಿಯವರನ್ನು ಜೇಡರು, ಸಾಲಿಕೆಯವರು ಎಂದು ಕರೆಯುತ್ತಿದ್ದರು. ಅವರು ಅವರದೇ ಆದ ಶ್ರೇಣಿಗಳನ್ನು ರಚಿಸಿಕೊಂಡಿದ್ದರು. ಅವುಗಳನ್ನು ಜೇಡಗೊತ್ತಳಿ,[೧] ಸಾಲೆಸಾಸಿರ್ವರು[೨] ಎಂದು ಕರೆಯುತ್ತಿದ್ದರು. ಜೇಡರ ದಾಸಿಮಯ್ಯನ ಒಂದು ವಚನದಲ್ಲಿ ನೇಯ್ಗೆಯ ರೀತಿಯನ್ನು ಅದರ ಪಾರಿಭಾಷಿಕ ಪದಗಳೊಂದಿಗೆ ನಿರೂಪಿಸಲಾಗಿದೆ.

ಉಂಕೆಯ ನಿಗುಚಿ ಸಲಿಗೆಯ ಸಮಗೊಳಿಸಿ
ಸಮಗಾಲನಿಕ್ಕಿ ಅಣಿಯೇಳ ಮೆಟ್ಟಿದೆ
ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು
ಈ ಸೀರೆಯ ನೆಯ್ವವ ನಾನೋ ನೀನೋ ರಾಮನಾಥ.[೩]

ಸಂತೆಗಳಲ್ಲಿ ವಸ್ತ್ರಗಳನ್ನು ಮಾರಾಟಮಾಡುತ್ತಿದ್ದಂತೆ ನೂಲು, ಪಟ್ಟಸೂತ್ರ (ರೇಷ್ಮೆ ನೂಲು)ಗಳನ್ನೂ ಮಾರಾಟಮಾಡುತ್ತಿದ್ದರು.[೪] ನೇಕಾರರು ಮಗ್ಗಗಳಲ್ಲಿ ಹತ್ತಿ ಬಟ್ಟೆಗಳನ್ನು ಮತ್ತು ಮೃದುವಾದ ರೇಷ್ಮೆ ಬಟ್ಟೆಗಳನ್ನು ನೇಯುತ್ತಿದ್ದರು. ರೇಷ್ಮೆ ಬಟ್ಟೆಗಳನ್ನು

---

೧. ಶಾಶಿಶ ಪು. ೩೫.

೨. ಎಸ್‌ಐಐ XI(ii) ಧಾರವಾಡ ೧೨೧ ಕ್ರಿ.ಶ. ೧೦೭೧.

೩. ಜೇ.ದಾ.ವ. ೨.

೪. ಬಿ.ಆರ್. ಹಿರೇಮಠ ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೧೩.

ನೇಯುತ್ತಿದ್ದವರನ್ನು ಪಟ್ಟಗಾರರೆಂದು ಕರೆಯುತ್ತಿದ್ದರು. ಪಟ್ಟಗಾರ ಕುಲಭೂಷಣ ಸೋಮಗೌಂಡನ ಉಲ್ಲೇಖ ಒಂದು ಶಾಸನದಲ್ಲಿ ಬಂದಿದೆ.[೧] ಪಟ್ಟಗಾರರು ತಯಾರಿಸುತ್ತಿದ್ದ ವಸ್ತ್ರಗಳನ್ನು ಅರಸ ಅರಸಿಯರು ಶ್ರೀಮಂತರು ಧರಿಸುತ್ತಿದ್ದರು. ದೇವಾಲಯಗಳಿಗೆ ರೇಷ್ಮೆ ವಸ್ತ್ರಗಳನ್ನು ನೀಡುತ್ತಿದ್ದರು. ಪಟ್ಟಗಾರರು ತಯಾರಿಸುತ್ತಿದ್ದ ವಸ್ತ್ರಗಳನ್ನು ಪಟ್ಟಾವಳಿ (ಪಟ್ಟವಟಿ)ಗಳೆಂದು ಶಾಸನಗಳು ಕರೆದಿವೆ.[೨] ಇದಲ್ಲದೆ ಪಳಿ[೩] (< ಸಂ. ಫಲಿ) ಎಂಬ ವಸ್ತ್ರದ ಉಲ್ಲೇಖವೂ ಬರುತ್ತದೆ. ಈ ವಸ್ತ್ರದ ಒಂದು ವಿಧವನ್ನು ತಯಾರಿಸುವುದರಲ್ಲಿ ಲಾಟದೇಶದ ಕಾರೋಹಣ ತುಂಬ ಪ್ರಖ್ಯಾತವಾಗಿದ್ದಿತು.[೪] ಪಂಪನು ಆದಿಪುರಾಣದಲ್ಲಿ ಕಾರೋಹಣಪಟಿ ಎಂದೂ ಶಾಂತಿನಾಥನು ಸುಕುಮಾರಚರಿತೆಯಲ್ಲಿ ಕಾಲೋಹಣದ ಪಟಿ ಎಂದೂ ಉಲ್ಲೇಖಿಸಿದ್ದಾರೆ. ಈ ಎರಡೂ ಉಲ್ಲೇಖಗಳು ಒಂದೇ ಸ್ಥಳವನ್ನು ಸೂಚಿಸುತ್ತದೆ.

ಸಂತೆಗಳಲ್ಲಿ ವಸ್ತ್ರಗಳನ್ನು ಕಟ್ಟುಗಳಾಗಿ ಕಟ್ಟಿ ಮಾರಾಟ ಮಾಡುತ್ತಿದ್ದರು. ಸೀರೆಗಳ ಮಳವೆಗಳನ್ನು (ಮಳವೆ = ಸರಕಿನ ಮೂಟೆ, ಗಂಟು) ಸಂತೆಯಲ್ಲಿ ಮಾರಾಟಮಾಡುತ್ತಿದ್ದರು. ಬಟ್ಟೆಗಳನ್ನು ನೇಯುವ ಮಗ್ಗಗಳ ಮೇಲೆ ತೆರಿಗೆಯನ್ನು ಹಾಕುತ್ತಿದ್ದರು. ಅದನ್ನು ಶಾಸನಗಳು ಮಗ್ಗದೆಱೆ, ಮಗ್ಗಕಾಣಿಕೆ, ಮಗ್ಗಸುಂಕ ಎಂದು ಕರೆದಿವೆ.[೫]

ವಸ್ತ್ರದಾನವೂ ಇತರ ದಾನಗಳಂತೆ ಧರ್ಮಕಾರ್ಯವೆಂಬ ನಂಬಿಕೆ ಇದ್ದಿತು. ದೇವಾಲಯಗಳಿಗೆ ಕೊಡುವ ದಾನಗಳಲ್ಲಿ ದೇವತಾವಿಗ್ರಹಗಳಿಗೆ ವಸ್ತ್ರಗಳನ್ನು ಉಡಿಸಲು ನಿಯೋಜಿಸಲಾಗುತ್ತಿತ್ತು.[೬] ಶಾಸನವೊಂದು ಅಜ್ಜಿ (ಜೈನ ಸನ್ಯಾಸಿನಿ)ಯರಿಗಾಗಿ ನೀಡಿದ ವಸ್ತ್ರದಾನದ ವಿಷಯವನ್ನು ತಿಳಿಸುತ್ತದೆ.[೭] ರುದ್ರಶಕ್ತಿ ಪಂಡಿತನಿಗೆ ಕೌಪೀನಕ್ಕಾಗಿ ಒಂದು ಹಾಗವನ್ನು ಕೊಟ್ಟ ವಿಷಯ ಶಾಸನವೊಂದರಲ್ಲಿ ಬಂದಿದೆ.[೮] ದೇವಸ್ಥಾನವೊಂದಕ್ಕೆ ಕೊಟ್ಟ ದಾನದಲ್ಲಿ ಬ್ರಾಹ್ಮಣರ ಕಪ್ಪಡಕ್ಕಾಗಿ (ಬಟ್ಟೆ) ಎಂದು ತಿಳಿಸಲಾಗಿದೆ.[೯]

ಕೆಲವು ವಿಶೇಷ ಸಂದರ್ಭಗಳಲ್ಲಿಯೂ ವಸ್ತ್ರಗಳನ್ನು ಕೊಡುವ ಸಂಪ್ರದಾಯವಿದ್ದಿತು. ಬಲ್ಲಾಳನ ರಾಣಿ ಚೋಳಮಹಾದೇವಿ ಕೆಂಬಾಳನ್ನು ಆಳುತ್ತಿದ್ದಾಗ 'ದುಷ್ಟಕಪ್ಪರ' ಮಾತನ್ನು ಕೇಳಿ ಬೇವೂರನ್ನು ಮುತ್ತುತ್ತಾಳೆ. ಆಗ ಕೇತಮಲ್ಲನೆಂಬುವನು ಬೇವೂರಿನ ಪರವಾಗಿ ಹೋರಾಡಿ ಮಡಿಯುತ್ತಾನೆ. ಅನಂತರ ರಾಣಿಗೆ ತಾನು ತಪ್ಪೆಸಗಿದೆನೆಂಬ ಅರಿವಾಗುತ್ತದೆ. ಅನಂತರ ಅವಳು ಭಂಡಾರಿ ರಾಯಣ್ಣ ನಾಚಣ್ಣಹೆಗ್ಗಡೆಗಳನ್ನು ಕರೆದು ತನ್ನ ಪರವಾಗಿ ಕೇತಮಲ್ಲನಾಯಕನ ಮಗ ನಾರಸಿಂಹ ನಾಯಕನನ್ನು ಸಮಾಧಾನಪಡಿಸಿ (ಸಂತವಿಟ್ಟು), ಅವನಿಗೆ ವಸ್ತ್ರಗಳನ್ನು ('ಉಡೆ') ಕೊಟ್ಟು ಭೂಮಿದಾನವನ್ನು ಮಾಡುತ್ತಾಳೆ.[೧೦] ಈ ರೀತಿ ಮರಣ ಹೊಂದಿದವರ ಹತ್ತಿರದ ಬಂಧುಗಳಿಗೆ ವಸ್ತ್ರಗಳನ್ನು ಕೊಟ್ಟು ಸಮಾಧಾನ ಹೇಳುವುದು ಒಂದು ಸಂಪ್ರದಾಯವಿದ್ದಿರಬೇಕು.

---

೧. ಕಇ V ಹುಬ್ಬಳ್ಳಿ ೧೦೨ ಕ್ರಿ.ಶ. ೧೨ ಶಮಾ.

೨. ಕಇ V ಖಾನಾಪುರ ೩೩ ಕ್ರಿ.ಶ. ೧೧೭೬.

೩. ಕಇ V ಖಾನಾಪುರ ೩೩ ಕ್ರಿ.ಶ. ೧೧೭೬.

೪. ಡಿ.ಎಲ್. ನರಸಿಂಹಾಚಾರ್ : 'ಕಾರೋಹಣದ ಪಟಿ' ಪ್ರಕ. ೪೨-೩ ಪು. ೧೯೩-೯೫.

೫. (ಮೈ) ಎಕ VII ನಾಗಮಂಗಲ ೧೮೪ ಕ್ರಿ.ಶ. ೧೧೭೩; (ಮೈ) ಎಕ IV ಚಾಮರಾಜನಗರ ೪ ಕ್ರಿ.ಶ. ೧೨೮೧; (ರೈ) ಎಕ XII ಮಧುಗಿರಿ ೩ ಕ್ರಿ.ಶ. ೧೩೧೩.

೬. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬; (ಮೈ) ಎಕ II, ಶ್ರವಣಬೆಳಗೊಳ ೫೭೦ ಕ್ರಿ.ಶ. ೧೩ ಶಮಾ.

೭. ಎಸ್ಐಐ XV ಗದಗು ೬೭ ಕ್ರಿ.ಶ. ೧೧೮೫.

೮. ಕಇಆಪ್ರ ಮೆಹಬೂಬನಗರ ೪೮ ಕ್ರಿ.ಶ. ೧೧೪೮.

೯. (ರೈ) ಎಕ VI ಚಿಕ್ಕಮಗಳೂರು ೭೭ ಕ್ರಿ.ಶ. ೧೧೮೦.

೧೦. (ರೈ) ಎಕ V ಚನ್ನರಾಯಪಟ್ಟಣ ೨೦೫ ಕ್ರಿ.ಶ. ಸು. ೧೨೦೦.

ಈಗಲೂ ಮರಣ ಹೊಂದಿದವರ ಹತ್ತಿರದ ಸಂಬಂಧಿಕರಿಗೆ ಬಂಧುಗಳು ವಸ್ತ್ರಗಳನ್ನು ಕೊಟ್ಟು ಸಾಂತ್ವನದ ಮಾತುಗಳನ್ನಾಡುವ ಪದ್ಧತಿ ಇದೆ.

ರಾಜರು, ಅಧಿಕಾರಿಗಳು ಮತ್ತು ಶ್ರೀಮಂತರು ಮೃದುವಾದ ರೇಷ್ಮೆ ವಸ್ತ್ರಗಳನ್ನು ಧರಿಸುತ್ತಿದ್ದರು. ಅರಸಿಕೆರೆಯ ವ್ಯಾಪಾರಿಗಳನ್ನು ವರ್ಣಿಸುತ್ತ ಒಂದು ಶಾಸನ ಪಟ್ಟಾವಳಿಯನ್ನು ಧರಿಸಿದವರು ಎಂದು ಹೇಳುತ್ತದೆ.[೧] ಸಾಧಾರಣವಾಗಿ ಉಳಿದವರು ಹತ್ತಿಯ ವಸ್ತ್ರಗಳನ್ನು ಧರಿಸುತ್ತಿದ್ದರೆಂದು ಭಾವಿಸಬಹುದು.

ಕೆಲ್ಲಂಗೆರೆಯ ಒಂದು ಶಾಸನ ಅಲ್ಲಿಯ ಮಹಾಜನರನ್ನು ವರ್ಣಿಸುತ್ತ 'ಮುಂಜೀಯ ಯಜ್ಞೋಪವೀತಬದ್ಧರುಂ ಹೇಮಕರ್ಣ್ಣಕುಂಡಳರುಂ'[೨] ಎನ್ನುತ್ತದೆ. ಅವರು ಮುಂಜೀಯವನ್ನು (ಮುಂಜ=ಸೊದೆಹುಲ್ಲು, ಮುಂಜೀಯ= ಬ್ರಾಹ್ಮಣರು ಸೊಂಟಕ್ಕೆ ಧರಿಸುವ ಮುಂಜಹುಲ್ಲಿನ ಮೂರು ಎಳೆಯ ಪಟ್ಟಿ. ಈಗಲೂ ಉಪನಯನದಲ್ಲಿ (ಉಪನಯನವನ್ನು ಮುಂಜಿ ಎಂದು ಕರೆಯುವ ರೂಢಿ ಇದೆ.) ಅದನ್ನು ಧರಿಸುವ ಪದ್ಧತಿ ಇದೆ. ಹಿಂದಿನ ಕಾಲದಲ್ಲಿ ಬ್ರಾಹ್ಮಣರು ಅದನ್ನು ಯಾವಾಗಲೂ ಧರಿಸಿರುತ್ತಿದ್ದರೆಂದು ಕಾಣುತ್ತದೆ), ಜನಿವಾರವನ್ನು ಮತ್ತು ಕಿವಿಗಳಿಗೆ ಚಿನ್ನದ ಕುಂಡಲಗಳನ್ನು ಧರಿಸಿದ್ದರೆನ್ನಬಹುದು.

ವೀರಗಲ್ಲುಗಳಿಂದ ಆ ಕಾಲದ ಯುದ್ಧಗಳಲ್ಲಿ ಧರಿಸುತ್ತಿದ್ದ ವೇಷಭೂಷಣಗಳ ಬಗ್ಗೆ ಕೆಲವು ವಿವರಗಳು ದೊರೆಯುತ್ತವೆ. ಸಾಮಾನ್ಯವಾಗಿ ವೀರರು ಮೊಳಕಾಲಿನಿಂದ ಮೇಲಕ್ಕೆ ವೀರಗಚ್ಚೆಯನ್ನು ಉಟ್ಟಿರುವುದು ಕಂಡುಬರುತ್ತದೆ. 'ಮೊಳಕಾಲಿನಿಂದ ಕೆಳಗಿರುವ ವೀರಗಚ್ಚೆಯನ್ನು ಎಲ್ಲಿಯೂ ಬಿಡಿಸಿಲ್ಲ. ವೀರಗಚ್ಚೆಗೆ ಕೆಲವೊಮ್ಮೆ ನಿರಿಗೆಗಳು ಇರುವಂತೆ ಬಿಡಿಸಲಾಗಿದೆ. ಈ ಕಚ್ಚೆ ಬಿಗಿಯಾಗಿರುವಂತೆ ಒಂದು ರೀತಿಯ ಪಟ್ಟಿಯನ್ನು ಹೊಟ್ಟೆಗೆ ಕಟ್ಟಿಕೊಳ್ಳುತ್ತಿದ್ದರೆಂದು ತೋರುತ್ತದೆ.'[೩] ವೀರರು ತಲೆಗೆ ಬಾಹುಗಳಿಗೆ ಮತ್ತು ದೇಹಕ್ಕೆ ಕವಚವನ್ನು ಧರಿಸುತ್ತಿದ್ದುದಕ್ಕೆ ಶಾಸನಗಳ ಮತ್ತು ಶಿಲ್ಪಗಳ ಆಧಾರಗಳು ಇವೆ.[೪]

ಊರುಗಳ ಮೇಲೆ ಶತ್ರುಗಳು ಆಕ್ರಮಣಮಾಡಿದಾಗ ಸ್ತ್ರೀಯರ ವಸ್ತ್ರಗಳನ್ನು ಬಿಚ್ಚುವ ಪ್ರಯತ್ನವನ್ನು ಮಾಡುತ್ತಿದ್ದುದುಂಟು. ಇದನ್ನು 'ಪೆಣ್ಣುಡೆಯುರ್ಚು' ಎಂದು ಶಾಸನಗಳು ಕರೆದಿವೆ. ಇದು ಆ ಹೆಣ್ಣುಮಕ್ಕಳಿಗೆ ಅವಮಾನ ಮಾಡುವುದರ ಮೂಲಕ ಆ ಊರಿಗೇ ಮಾಡಿದ ದೊಡ್ಡ ಅವಮಾನವಾಗಿದ್ದಿತು. ಇದನ್ನು ಪ್ರತಿಭಟಿಸಿ ವೀರರು ಸ್ತ್ರೀಯರ ಮಾನರಕ್ಷಣೆಗೆ ಧಾವಿಸುವುದು ಕರ್ತವ್ಯವೆಂದು ಭಾವಿಸಿದ್ದರು. ಯುದ್ಧಗಳಲ್ಲಿ ಶರಣಾಗತರಾದೆವೆಂದು ತೋರಿಸಿಕೊಳ್ಳಲು ಹುತ್ತವನ್ನು ಏರುವುದು, ನೀರನ್ನು ಪ್ರವೇಶಿಸುವುದು, ಲಿಂಗವನ್ನಪ್ಪಿಹಿಡಿಯುವುದು ಮುಂತಾದ ವಿಧಾನಗಳಿದ್ದವು. ಅವುಗಳಲ್ಲಿ ಧರಿಸಿದ ವಸ್ತ್ರಾಭರಣಗಳನ್ನು ತೆಗೆದುಕೊಡುವುದೂ ಒಂದಾಗಿದ್ದಿತು. ಈ ರೀತಿ ಶರಣಾದವರನ್ನು ಯುದ್ಧಗಳಲ್ಲಿ ಸಾಮಾನ್ಯವಾಗಿ ಕೊಲ್ಲುತ್ತಿರಲಿಲ್ಲ.[೫]

ಪುರುಷರಿಗೆ ಸ್ತ್ರೀಯರ ಉಡುಗೆಗಳನ್ನು ತೊಡಿಸುವುದು ದೊಡ್ಡ ಅವಮಾನವಾಗಿದ್ದಿತು. ನಾರಸಿಂಹನ ಶೌರ್ಯವನ್ನು ಹೇಳುತ್ತ ಒಂದು ಶಾಸನ ಶತ್ರುರಾಜರು ಹಿಂಜರಿದು ದುರ್ಗವನ್ನು ಪ್ರವೇಶ ಮಾಡಿದರೆ ಅವರಿಗೆ 'ಪೆಣ್ಣುಡೆಯನುಡಿಸುಗುಂ' ಎಂದು ಹೇಳುತ್ತದೆ.[೬]

---

೧. ಎಂಎಆರ್ ೧೯೩೦ ಅರಸಿಕೆರೆ ೧ ಕ್ರಿ.ಶ. ೧೧೮೦.

೨. (ರೈ) ಎಕ V ಅರಸಿಕೆರೆ ೧೧೭ ಕ್ರಿ.ಶ. ೧೧೬೧.

೩. **ಆರ್. ಶೇಷಶಾಸ್ತ್ರಿ : ಕರ್ನಾಟಕದ ವೀರಗಲ್ಲುಗಳು** ೧೮೬-೮೭.

೪. ಪುರುಷರ ಮತ್ತು ಸ್ತ್ರೀಯರ ವಸ್ತ್ರ ವಿನ್ಯಾಸವನ್ನು ಶಾಸನ ಶಿಲ್ಪವನ್ನು ಆಧರಿಸಿ ಡಿ.ವಿ. ಪರಶಿವಮೂರ್ತಿ ಅವರು ನೀಡಿದ್ದಾರೆ. ಗಮನಿಸಿ, **ಕನ್ನಡ ಶಾಸನಶಿಲ್ಪ** ಪು. ೧೭೪-೧೮೨.

೫. (ಮೈ) ಎಕ VII ನಾಗಮಂಗಲ ೭೨ ಕ್ರಿ.ಶ. ೧೧೮೨.

೬. (ಮೈ) ಎಕ VII ನಾಗಮಂಗಲ ೧೭೩ ಕ್ರಿ.ಶ. ೧೨೩೦. ಈ ಕಾಲದಲ್ಲಿಯೂ ಪುರುಷರನ್ನು ಅವಮಾನಿಸಲು ಅಥವಾ ಪ್ರಚೋದಿಸಲು ಅರಿಶಿಣ, ಕುಂಕುಮ ಮತ್ತು ಬಳೆಗಳನ್ನು ಕಳುಹಿಸಿಕೊಡುವ ರೂಢಿಯನ್ನು ಕೆಲವು ಸಂದರ್ಭಗಳಲ್ಲಿ ಕಾಣಬಹುದು.

ಪ್ರಾಚೀನ ಕಾಲದಲ್ಲಿ 'ಸೀರೆ' ಎಂಬುದಕ್ಕೆ ಈ ಕಾಲದಂತೆ ಸ್ತ್ರೀಯರ ಉಡುಪು ಎಂಬ ಅರ್ಥ ಮಾತ್ರವಿರಲಿಲ್ಲ. ಮೂಲತಃ ಸೀರೆಗೆ (< ಸಂ.ಚೀರ ) ಬಟ್ಟೆ ಎಂಬ ಅರ್ಥವಿದ್ದಿತು. ದಕ್ಷಿಣಕನ್ನಡದ ಹೊನ್ನಾವರದಲ್ಲಿ ಸ್ತ್ರೀಯರು ಹೊಲಿಯದ ಬಟ್ಟೆಯನ್ನು ಸೊಂಟದ ಸುತ್ತಲೂ ಧರಿಸಿಕೊಂಡು ಉಳಿದ ಬಟ್ಟೆಯ ಭಾಗವನ್ನು ಹೆಗಲು ಮತ್ತು ತಲೆಯ ಮೇಲೆ ಹೊದೆಯುವರು ಎಂದು ಇಬ್ನಬಟೂಟ ಹೇಳಿದ್ದಾನೆ.[೧] ಸ್ತ್ರೀಯರು ಸೊಂಟದ ಮೇಲೆ ವಸ್ತ್ರಗಳನ್ನು ಧರಿಸುತ್ತಿದ್ದರೇ ಇಲ್ಲವೇ ಎಂಬುದು ವಿದ್ವಾಂಸರಲ್ಲಿ ಚರ್ಚೆಗೆ ಒಳಗಾದ ವಿಷಯವಾಗಿದೆ. ಕನ್ನಿಂಗ್‌ಹ್ಯಾಮರು ಮಧ್ಯಭಾರತ ಮತ್ತು ದಕ್ಷಿಣಭಾರತದ ಶಿಲ್ಪಗಳನ್ನು ಗಮನಿಸಿ ಅವುಗಳಿಂದ ಕೆಲವು ನಿರ್ಧಾರಗಳಿಗೆ ಬಂದಂತಿದೆ. ನಗ್ನತೆ ಆ ಕಾಲದಲ್ಲಿ ಈ ಪ್ರದೇಶಗಳಲ್ಲಿ ಅಶ್ಲೀಲತೆ ಎನ್ನಿಸುತ್ತಿರಲಿಲ್ಲವೆಂದೂ ಮತ್ತು ಭಾರತಕ್ಕೆ ಮುಸ್ಲಿಮರು ಬರುವವರೆಗೆ ಸೊಂಟದ ಮೇಲೆ ವಸ್ತ್ರವಿಲ್ಲದೆ ಚಿತ್ರಣಗೊಂಡಿದೆ ಎಂದಿದ್ದಾರೆ.[೨] ಇದೇ ಅಭಿಪ್ರಾಯ ಪಾಶ್ಚಾತ್ಯವಿದ್ವಾಂಸರಿಗೆ ಇದ್ದಂತಿದೆ.[೩] ಆದರೆ ಈ ಅಭಿಪ್ರಾಯಗಳನ್ನು ಒಪ್ಪದೆ ಎ.ಎಸ್. ಆಲ್ಟೇಕರ್ ಅವರು ಗಾಂಧಾರ ಶಿಲ್ಪಗಳಲ್ಲಿ ಸ್ತ್ರೀಯರು ಪೂರ್ಣ ವೇಷಭೂಷಣಗಳನ್ನು ಧರಿಸಿರುವುದನ್ನು ಉಲ್ಲೇಖಿಸಿ ಸ್ತ್ರೀಯರು ಸೊಂಟದ ಮೇಲೆ ವೇಷ ಧರಿಸದೇ ಇರುವುದು ಅಗೌರವವೆಂದು ಭಾವಿಸಲಾಗುತ್ತಿತ್ತು ಎಂದಿದ್ದಾರೆ. ಶಿಲ್ಪಗಳಲ್ಲಿ ಹಾಗೆ ಚಿತ್ರಿಸಲು ಅವರು ಎರಡು ಕಾರಣಗಳನ್ನು ನೀಡುತ್ತಾರೆ. ಆ ಕಾಲದ ಕಲಾವಿದರ ಪರಿಕಲ್ಪನೆಯಂತೆ ಸ್ತ್ರೀಯರ ಸ್ತನಗಳನ್ನು ತಾಯ್ತನದ ಪ್ರತೀಕಗಳಾಗಿ ಭಾವಿಸಿ ಅವನ್ನು ಕಾಣುವಂತೆ ಚಿತ್ರಿಸುವುದು ಸಹಜವೆಂಬಂತೆ ಭಾವಿಸಿರಬೇಕು. ಸ್ತ್ರೀಯರು ಸಾಮಾನ್ಯವಾಗಿ ಸೀರೆಯಿಂದ ಅಥವಾ ಬೇರೊಂದು ವಸ್ತ್ರದಿಂದ ದೇಹದ ಮೇಲ್ಭಾಗವನ್ನು ಮುಚ್ಚಿರುತ್ತಿದ್ದರೆಂದು ಭಾವಿಸಬಹುದು. ಎರಡನೆಯದಾಗಿ ಸ್ತ್ರೀಯ ಸೌಂದರ್ಯವನ್ನು ಅಶ್ಲೀಲವಾಗದ ಹಾಗೆ ಪ್ರಕಟಿಸುವ ಅವಕಾಶವನ್ನು ಕಲ್ಪಿಸಿದ್ದಲ್ಲದೆ ಎದೆ, ಕೊರಳು, ಭುಜಗಳ ಮೇಲೆ ಧರಿಸುತ್ತಿದ್ದ ಸುಂದರ ಆಭರಣಗಳನ್ನು ತೋರಿಸಲು ಕಲಾವಿದರಿಗೆ ಅವಕಾಶವನ್ನು ಕಲ್ಪಿಸಿತೆಂದು ಹೇಳಿದ್ದಾರೆ.[೪]

ಪಂಪಭಾರತ, ಧರ್ಮಾಮೃತ[೫] ಮತ್ತು ವಚನಗಳಲ್ಲಿ[೬] ಕುಪ್ಪಸದ (<ಕೂರ್ಪಾಸ) ಉಲ್ಲೇಖ ಸ್ಪಷ್ಟವಾಗಿದೆ. ಸ್ತ್ರೀ ಪುರುಷರಿಬ್ಬರೂ ಧರಿಸುತ್ತಿದ್ದ ಉಡುಪಾಗಿ ಅದು ಆ ಕಾಲದಲ್ಲಿ ಬಳಕೆಯಲ್ಲಿದ್ದಂತಿದೆ. ಪಂಪಭಾರತದ ಪದ್ಯದಲ್ಲಿ ಹೇಳಿರುವಂತೆ, ಅದು ಖಚಿತವಾಗಿ ಸ್ತ್ರೀಯರು ಧರಿಸುತ್ತಿದ್ದ ಉಡುಪು ಎಂಬುದರಲ್ಲಿ ಅನುಮಾನವಿಲ್ಲ.[೭] ಆದುದರಿಂದ ಮುಸ್ಲಿಮರು ಈ ನಾಡಿಗೆ ಬರುವ ಮೊದಲೇ ಸ್ತ್ರೀ ಪುರುಷರಿಬ್ಬರೂ ಸೊಂಟದ ಮೇಲೆ ಬಟ್ಟೆಗಳನ್ನು ತೊಡುತ್ತಿದ್ದುದು ಸ್ಪಷ್ಟವಿದೆ. ಪುರುಷ ಸ್ತ್ರೀಯರಿಬ್ಬರೂ ಸೊಂಟದ ಕೆಳಗೆ ಮತ್ತು ಮೇಲೆ ವಸ್ತ್ರ ಧರಿಸುತ್ತಿದ್ದರೆಂಬುದಕ್ಕೆ ವಿಜಯನಗರ ಕಾಲದ ಸಾಹಿತ್ಯವೂ ಸಮರ್ಥಿಸುವುದನ್ನು ಕಾಣಬಹುದಾಗಿದೆ.[೮]

---

೧. G. S. Ghurye : Indian Costume, ಪು. ೧೩೬.

೨. A.S. Altekar the position of Women in Hindu Civilization ಪು. ೨೮೭-೮೮ರಲ್ಲಿ ಉದಾಹರಿಸಿದ್ದಾರೆ. Tree and Serpent Worship ಪು. ೧೦೨-೩.

೩. Charles Febri : Indian Dress ಪು. ೩.

೪. A. S. Altekar : ಪೂರ್ವೋಕ್ತ, ಪು. ೨೮೭-೮೮.

೫. ಧರ್ಮಾಮೃತಂ, ೧೪:೧೩೪.

೬. ಪಿ.ವಿ. ನಾರಾಯಣ ವಚನ ಸಾಹಿತ್ಯ -ಒಂದು ಸಾಂಸ್ಕೃತಿಕ ಅಧ್ಯಯನ, ಪು. ೨೪೬.

೭. ಪಂಪಭಾರತ ೯:೧೦೩. ಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು ಕಣ್ಗೆಡಱಿದೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱಿದರ್.

೮. ಕೆ. ಶ್ರೀಕಂಠಯ್ಯ : ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಪು. ೩೪೬.

ಸ್ತ್ರೀಯರ ಸೀರೆಗಳನ್ನು ಬಹು ಆಕರ್ಷಕ ರೀತಿಯಲ್ಲಿ ನೇಯ್ಗೆ ಮಾಡಿರುತ್ತಿದ್ದರು. ಸೂಕ್ಷ್ಮ ರೀತಿಯ ಸಸ್ಯಾಲಂಕರಣದ ವಿನ್ಯಾಸಗಳನ್ನು ಶಿಲ್ಪಗಳ ಉಡುಪುಗಳಲ್ಲಿ ಕಾಣಬಹುದಾಗಿದೆ. ಕೆಲವು ಶಿಲ್ಪಗಳಲ್ಲಿ ವಸ್ತ್ರಗಳಿಗೆ ಮಣಿಗಳನ್ನು, ರತ್ನಗಳನ್ನು ಸೇರಿಸಿ ನೇಯ್ದಿರುವ ಅಥವಾ ಹೊಲಿದಿರುವುದನ್ನು ಗುರುತಿಸಬಹುದು.[೧]

ಬಟ್ಟೆಗಳಿಗೆ ಬಣ್ಣವನ್ನು ಹಾಕುವ ಕಲೆಗಾರಿಕೆ ಆ ಕಾಲದಲ್ಲಿ ಪ್ರಚಲಿತವಾಗಿದ್ದಿತು ಎಂಬುದಕ್ಕೆ ಮೋಳಿಗೆ ಮಾರಯ್ಯನ ವಚನವೊಂದು ಸೂಚನೆಯನ್ನು ನೀಡುತ್ತದೆ.[೨] ಪುರುಷರು ತಲೆಗೆ ಟೊಪ್ಪಿಗೆಗಳನ್ನು ಧರಿಸುತ್ತಿದ್ದರು.[೩] ವಸ್ತ್ರಗಳ ಅಂಗಡಿಯ ಉಲ್ಲೇಖ (ದೂಸಿಗರಂಗಡಿ) ಧರ್ಮಾಮೃತದಲ್ಲಿ ದೊರೆಯುತ್ತದೆ.[೪]

ಅನುಕೂಲವಿರುವವರೆಲ್ಲ ವಸ್ತ್ರಗಳನ್ನು ಅಗಸರಿಂದ ಶುಚಿಗೊಳಿಸಿಕೊಳ್ಳುತ್ತಿದ್ದರೆಂದು ಕಾಣುತ್ತದೆ. ಅಗಸರನ್ನು ಮಡಿವಳರೆಂದೂ ಕರೆಯುತ್ತಿದ್ದರು. ಕಲ್ಯಾಣದಲ್ಲಿ ಮಡಿವಳ ಮಾಚಯ್ಯನೆಂಬ ಶಿವಶರಣನಿದ್ದುದನ್ನು ನೆನೆಯಬಹುದು. ಬ್ರಹ್ಮಶಿವನು ಅಗಸ ಮುಟ್ಟಿದ ಸೀರೆಯನ್ನು (=ವಸ್ತ್ರ ) ಶುದ್ಧವೆಂದು, ಶೂದ್ರ ಮುಟ್ಟಿದ ಸೀರೆಯನ್ನು ಅಶುದ್ಧವೆನ್ನುವ ಬ್ರಾಹ್ಮಣರನ್ನು ಟೀಕಿಸಿದ್ದಾನೆ.[೫]

ಯತಿಗಳ ವೇಷಭೂಷಣ ತುಂಬ ಸರಳವಾಗಿರುತ್ತಿತ್ತು. ರಾಜಗುರು ಸರ್ವೇಶ್ವರರ ಒಂದು ಚಿತ್ರವನ್ನು ಶಾಸನವೊಂದು ನೀಡುತ್ತದೆ. ಅವರು ಭಸ್ಮಧಾರಣೆ ಮಾಡಿಕೊಂಡು, ಕೌಪೀನಧಾರಿಗಳಾಗಿ, ರುದ್ರಾಕ್ಷಿಮಾಲೆಯನ್ನು ಧರಿಸಿದ್ದರೆಂದು ಕಾಳಾಮುಖ ಮುನಿಗಳನ್ನು ವರ್ಣಿಸಿದೆ.[೬]

ವೀರಗಲ್ಲುಗಳ ಶಿಲ್ಪಗಳಲ್ಲಿ ಪಾದರಕ್ಷೆಯನ್ನು ಸಾಮಾನ್ಯವಾಗಿ ಕೆತ್ತಲಾಗಿಲ್ಲ. ತುಳಿಲಾಳ್ಗಳು ಪಾದರಕ್ಷೆಗಳನ್ನು ಧರಿಸುತ್ತಿದ್ದಂತೆ ಮಹಾಬಲಕವಿಯ ನೇಮಿನಾಥಪುರಾಣದಲ್ಲಿ ಬಂದಿದೆ.[೭] ಪಾದರಕ್ಷೆಗಳನ್ನು ಧರಿಸುತ್ತಿದ್ದುದಕ್ಕೆ ಬಸವಣ್ಣನವರ ಒಂದು ವಚನದಲ್ಲಿ ಸ್ಪಷ್ಟಸೂಚನೆ ಇದೆ. ದೇವಸ್ಥಾನಕ್ಕೆ ಹೋದಾಗ ಪಾದರಕ್ಷೆಗಳನ್ನು ಹೊರಗೆ ಬಿಟ್ಟು ದೇವರಿಗೆ ನಮಸ್ಕಾರ ಮಾಡುವಾಗಲೂ ಅವುಗಳ ಕಡೆಗೇ ಗಮನವಿರಿಸುವ ಭಕ್ತರ ರೀತಿಯನ್ನು ವಿಡಂಬಿಸಿದ್ದಾರೆ.[೮] ಹೆಚ್ಚು ವಿದೇಶೀಯ ಪ್ರವಾಸಿಗರು ಭಾರತದಲ್ಲಿ ಬಹಳಷ್ಟು ಜನ ಪಾದರಕ್ಷೆ ಇಲ್ಲದೆ ಇರುತ್ತಾರೆ ಎಂದೇ ಅಭಿಪ್ರಾಯಪಟ್ಟಿದ್ದಾರೆ. ಆದರೆ ಇಲ್ಲಿಯ ಜನ ಸೆಖೆಯ ಹವಾಗುಣದ ಕಾರಣ ವಸ್ತ್ರಗಳನ್ನು ಪೂರ್ತಿಯಾಗಿ ಧರಿಸದೇ ಹೋದರೂ ಪಾದರಕ್ಷೆಗಳನ್ನು ಧರಿಸುತ್ತಿದ್ದರು ಎಂದು ನಿಕಾಲೊಕಾಂಟಿಯು ಅಭಿಪ್ರಾಯಪಟ್ಟಿದ್ದಾನೆ.[೯]

---

೧. Jyotsna Kamath : Social life in Medieval Karnataka ಪು. ೩೫.

೨. ಸ.ಪುವ ೧೮ ಪು. ೪೮೭ 'ಬಣ್ಣವನೊಳಕೊಂಡ ಕಪ್ಪಡದಂತೆ'.

೩. ಬ.ದೇ.ರ ಸ್ಥಳ ೫ ಪು. ೨೦.

೪. ಧರ್ಮಾಮೃತಂ ೨:೩೩.

೫. ಸಪ ೧೧:೬೫; ಬಸವಣ್ಣನವರ ಒಂದು ವಚನದಲ್ಲಿ 'ಊರ ಸೀರೆಗೆ ಅಗಸ ತಡಬಡಿವಡದಂತೆ...' ಎಂಬ ಮಾತು (೩೦೯) ಊರಿನವರು ಒಗೆಯಲು ಕೊಟ್ಟ ವಸ್ತ್ರಗಳನ್ನು ಧರಿಸಿ ಶಿಕ್ಷೆಗೆ ಒಳಗಾದ ವಿಷಯವನ್ನು ತಿಳಿಸುತ್ತದೆ.

೬. ಕ೩ I ಸೌಂದತ್ತಿ ೩೧ ಕ್ರಿ.ಶ. ೧೨೫೨.

೭. ಎಸ್. ಶೆಟ್ಟರ್ : 'ತುಳಿಲಾಳ್ಗಳ್' ಸಾಧನೆ ೯:೩ ಪು. ೫೪.

೮. ಬವ. ೧೯೯ : 'ಹಾಗದ ಕೆರಹ ಹೊಱಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ.'

೯. Jyotsna Kamath : ಪೂರ್ವೋಕ್ತ ಪು. ೬೨.

**ಆಭರಣಗಳು:**

ದಕ್ಷಿಣಭಾರತ ಚಿನ್ನ, ವಜ್ರ, ಹರಳುಗಳಿಗೆ ಬಹುಪ್ರಾಚೀನ ಕಾಲದಿಂದಲೂ ಪ್ರಖ್ಯಾತವಾಗಿದ್ದಿತು. ಕೋಲಾರದ ಹುನಗುಂದ, ಬಿಜಾಪುರ ಜಿಲ್ಲೆಯ ಹುನಗುಂದಗಳು ಚಿನ್ನದ ಗಣಿಗಳಾಗಿದ್ದುದು ಸಾಂದರ್ಭಿಕ ಸಾಕ್ಷಿಗಳಿಂದ ವ್ಯಕ್ತವಾಗಿದೆ. ಕರ್ನಾಟಕದಲ್ಲಿ ಪುರಾತನ ಕಾಲದ ಅನೇಕ ಚಿನ್ನದ ಗಣಿಗಳಿದ್ದುದು ಈ ಶ್ರೇಷ್ಠವಾದ ಲೋಹದ ಉತ್ಪಾದನೆಯನ್ನು ನವೀಕರಿಸಲು ಮಾರ್ಗದರ್ಶನವಾಗಿದೆ.[೧] ವಜ್ರಕ್ಕೆ ವಜ್ರಕೆರೂರು, ಬಳ್ಳಾರಿಗಳು ಹಿಂದಿನಿಂದಲೂ ಪ್ರಖ್ಯಾತವಾಗಿದ್ದವು.[೨] ಕರ್ನಾಟಕದಲ್ಲಿ ಚಿನ್ನ, ವಜ್ರ ಮತ್ತು ಹರಳುಗಳ ಮಾರಾಟವೂ ಸಾಕಷ್ಟು ವ್ಯಾಪಕವಾಗಿ ನಡೆಯುತ್ತಿದ್ದಿತು. ಶ್ರವಣಬೆಳಗೊಳದ ಅನೇಕ ಶಾಸನಗಳಲ್ಲಿ ಮಾಣಿಕ್ಯ ನಗರಗಳ (ರತ್ನ ವ್ಯಾಪಾರಿಗಳು) ವಿಷಯ ಉಲ್ಲೇಖಗೊಂಡಿದೆ.[೩] ಬಾರಕೂರು ಸಮೀಪದ ಮಣಿಗರ ಕೇರಿಯ ಉಲ್ಲೇಖ ಶಾಸನದಲ್ಲಿ ಬರುತ್ತದೆ.[೪] ಮಣಿಗೇರಿ ಬೆಲೆಯುಳ್ಳ ಹರಳುಗಳನ್ನು ಮಾರುತ್ತಿದ್ದ ಮಣಿಗಾರರು ವಾಸಿಸುತ್ತಿದ್ದ ಅಥವಾ ಅವರ ಅಂಗಡಿಗಳಿದ್ದ ಬೀದಿಯನ್ನು ಸೂಚಿಸುತ್ತದೆ. ಬೇಲೂರು, ಹಳೆಯಬೀಡು ಮತ್ತು ವಿಷ್ಣುಸಮುದ್ರದ ಮಣಿಗಾರರು ವ್ಯಾಪಕವಾಗಿ ವ್ಯಾಪಾರ ಮಾಡುತ್ತಿದ್ದರು.[೫] ನರಗುಂದದ ಮೂರು ಕೇರಿಗಳಲ್ಲಿ ಒಂದಾದ ಹೇಮಗೇರಿಯಲ್ಲಿ ಇದ್ದ ಏಚಿಸೆಟ್ಟಿ ರಾಜನಿಂದ ಅಚ್ಚಿನ ಅಧಿಕಾರವನ್ನು ವಹಿಸಿಕೊಂಡ ಮೇಲೆ ಅವನಿಗೆ ಹೇಮಕುಪ್ಪಟಿ ಎಂಬ ಹೆಸರಾಯಿತೆಂದು ಒಂದು ಶಾಸನ ತಿಳಿಸುತ್ತದೆ.[೬] ಹೇಮಗೇರಿ (ಹೇಮ=ಬಂಗಾರ) ಬಂಗಾರದ ಆಭರಣಗಳನ್ನು ಮಾರಾಟಮಾಡುವ ವ್ಯಾಪಾರಿಗಳು ವಾಸಮಾಡುತ್ತಿದ್ದ ಬೀದಿಯನ್ನು ಸೂಚಿಸುತ್ತದೆ. ಒಟ್ಟಿನಲ್ಲಿ ಚಿನ್ನ, ವಜ್ರ, ಬೆಲೆಬಾಳುವ ಹರಳುಗಳ ವಹಿವಾಟು ಕರ್ನಾಟಕದಲ್ಲಿ ಸಾಕಷ್ಟು ವ್ಯಾಪಕವಾಗಿ ನಡೆಯುತ್ತಿದ್ದುದು ಕಂಡುಬರುತ್ತದೆ.

ಬೇಲೂರಿನ ಚನ್ನಕೇಶವ ದೇವಾಲಯದ ಶಿಲ್ಪಗಳಲ್ಲಾಗಲಿ, ಹಳೆಯಬೀಡು, ಸೋಮನಾಥಪುರ ಮುಂತಾದ ದೇವಾಲಯಗಳಲ್ಲಾಗಲಿ ಕಂಡು ಬರುವ ಸ್ತ್ರೀವಿಗ್ರಹಗಳ ಶಿಲ್ಪಗಳನ್ನು ಗಮನಿಸಿದರೆ ವಿವಿಧ ವಿನ್ಯಾಸದ ಆಭರಣಗಳ ಸಮೃದ್ಧ ಭಂಡಾರವನ್ನೇ ಕಾಣಬಹುದಾಗಿದೆ. ಅನೇಕ ಶಾಸನಗಳಲ್ಲಿ ಅಕ್ಕಸಾಲಿಗರ[೭] ಉಲ್ಲೇಖಗಳು ಬರುತ್ತವೆ. ಆಭರಣಗಳ ತಯಾರಿಕೆಯಲ್ಲಿ ಅವರು ವಿಶೇಷ ಪರಿಣತಿಯನ್ನು ಪಡೆದಿದ್ದುದು ಸ್ಪಷ್ಟವಿದೆ.

ಪುರುಷರು ಧರಿಸುತ್ತಿದ್ದ ಕೆಲವು ಆಭರಣಗಳನ್ನು ಗುರುತಿಸಲು ವೀರಗಲ್ಲುಗಳು ಕೆಲವುಮಟ್ಟಿಗೆ ಸಹಾಯವನ್ನು ಮಾಡುತ್ತವೆ. ವೀರರು ಕೊರಳಿಗೆ ಕಂಠಾಭರಣವನ್ನು ಧರಿಸುತ್ತಿದ್ದರು. ವಿವಿಧ ವಿನ್ಯಾಸದ ಹಾರಗಳನ್ನು ವೀರರು ಧರಿಸಿರುವುದನ್ನು ಶಿಲ್ಪಗಳಲ್ಲಿ ಗುರುತಿಸಬಹುದು. ಕೆಲವು ಶಿಲ್ಪಗಳಲ್ಲಿ ವೀರನು ಎಡ ಅಥವಾ ಬಲಗಾಲಿನಲ್ಲಿ ಮಾತ್ರ ಅಂದಿಗೆಯನ್ನೊ ಕಡಗವನ್ನೊ ಹಾಕಿಕೊಂಡಂತೆ ಬಿಡಿಸಿರುವುದನ್ನು ಗಮನಿಸಬಹುದು.[೮] ಗರುಡರು ಒಡೆಯನಿಗೆ ಭಾಷೆ ಕೊಟ್ಟನಂತರ ತೊಡುತ್ತಿದ್ದ 'ಗಂಡ ಪೆಂಡೇರ'ದ ಉಲ್ಲೇಖ ಅನೇಕ ಶಾಸನಗಳಲ್ಲಿ ಬರುತ್ತದೆ. ಆ ಆಭರಣವನ್ನು ತೊಡರ್ ಎಂದೂ ಕರೆಯುತ್ತಿದ್ದರು. ಅದು

---

೧. ಎಂ. ಸದಾಶಿವಯ್ಯ : 'ಆರ್ಥಿಕ ಭೂವಿಜ್ಞಾನ' ಕರ್ಣಾಟಕದ ಪರಂಪರೆ I, ಪು. ೩೧.

೨. Sampath Iyengar : 'The Diamonds of South India'-ಕ್ಯುಜೆಎಂಎಸ್ ೧೧೧-೪, ಪು. ೧೧೯.

೩. (ಮೈ) ಎಕ II ಶ್ರವಣಬೆಳಗೊಳ ೪೭೯ ಕ್ರಿ.ಶ. ೧೨೯೬.
(ಮೈ) ಎಕ II ಶ್ರವಣಬೆಳಗೊಳ ೩೪೩ ಕ್ರಿ.ಶ. ೧೩ ಶ.ಮಾ.

೪. ಎಸ್ಐಐ VII ಬಾರಕೂರು ೩೫೪ ಕ್ರಿ.ಶ. ೧೩೧೧.

೫. ಎಂ. ಚಿದಾನಂದಮೂರ್ತಿ ಕಶಾಸಾಂಅ ಪು. ೬೨.

೬. ಎಸ್ಐಐ XVIII ನರಗುಂದ ಪೇಟೆ ೧೬೦ ಕ್ರಿ.ಶ. ೧೨ ಶಮಾ.

೭. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೮. ಆರ್. ಶೇಷಶಾಸ್ತ್ರೀ, ಪೂರ್ವೋಕ್ತ ಪು. ೧೮೬.

ಚಿನ್ನದ ಎಳೆಗೆ ಮುತ್ತುಗಳನ್ನು ಪೋಣಿಸಿ ಮಧ್ಯೆ ಮಧ್ಯೆ ಸಣ್ಣ ಬೊಂಬೆಗಳನ್ನು ಸೇರಿಸುತ್ತಿದ್ದುದಾಗಿದ್ದು, ಧರಿಸಿ ಓಡಾಡುವಾಗ ಝಣ ಝಣ ಶಬ್ದವನ್ನು ಮಾಡುತ್ತಿತ್ತು.[೧] ಈ ಆಭರಣವನ್ನು ಕುವರಲಕ್ಷ್ಮನು ಧರಿಸಿದಂತೆ ಅವನ ಮಡದಿ ಸುಗ್ಗಲೆಯೂ ಅದನ್ನು ಧರಿಸಿದ ವಿಷಯ ತಿಳಿದು ಬರುತ್ತದೆ. ಅಗ್ರಹಾರ ಬಾಚಹಳ್ಳಿಯ ಶಾಸನಗಳಲ್ಲಿ 'ಹೊಂಬೊಡರಿನ'[೨] ಉಲ್ಲೇಖ ಬಂದಿದೆ. 'ತೊಡರ'ನ್ನು ಧರಿಸಿದ ಉಲ್ಲೇಖ ಇನ್ನೂ ಹಲವು ಶಾಸನಗಳಲ್ಲಿ ಕಂಡುಬರುತ್ತದೆ.[೩]

ರಾಜರ ಸಿಂಹಾಸನಾರೋಹಣದ ಸಮಯವನ್ನು ಶಾಸನಗಳು 'ಪಟ್ಟಬಂಧ', 'ಪಟ್ಟಬಂಧನೋತ್ಸಾಹ'ಗಳೆಂದು ಕರೆದಿವೆ. ಈ ಸಂದರ್ಭದಲ್ಲಿ ಶಾಸ್ತ್ರೋಕ್ತವಾಗಿ ಹಣೆಗೆ ಕಟ್ಟುತ್ತಿದ್ದ ಪಟ್ಟಿಯನ್ನು ಆ ಪದ ಸೂಚಿಸುತ್ತದೆ. ಅದೇ ಸಂದರ್ಭದಲ್ಲಿ ಕಿರೀಟಧಾರಣೆಯೂ ನಡೆಯುತ್ತಿದ್ದಿತು. ರತ್ನಖಚಿತವಾದ ಕಿರೀಟ ತಲೆಯ ಮೇಲೆ ಧರಿಸುವ ಟೋಪಿಯಂತಹುದಾಗಿದ್ದು ಅದನ್ನು ಮಕುಟವೆಂಬ ಹೆಸರಿನಿಂದಲೂ ಕರೆಯಲಾಗುತ್ತದೆ. ಪಟ್ಟಬಂಧ ಬಹು ವೈಭವದಿಂದ ನಡೆಯುತ್ತಿದ್ದ ರಾಜ್ಯದ ಉತ್ಸವವಾಗಿದ್ದು, ಆ ಸಮಯದಲ್ಲಿ ದೇವಾಲಯಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತಿದ್ದವು.[೪] ಕೆಲ್ಲಂಗೆರೆಯ ಶಾಸನ[೫]ದಲ್ಲಿ ಬ್ರಾಹ್ಮಣರನ್ನು ಕುರಿತು 'ಕ್ಷತ್ರಿಯ ವೈಶ್ಯ ಶೂದ್ರತ್ರಯ ಕಿರೀಟ ಪಾದಘಟ್ಟಿತರುಂ' ಎಂದು ಬರುತ್ತದೆ. ಇದು ಕ್ಷತ್ರಿಯ ವೈಶ್ಯ ಶೂದ್ರ ಈ ಮೂರೂ ಜನರು ಅವರ ಪಾದಕ್ಕೆ ನಮಸ್ಕರಿಸುತ್ತಿದ್ದ ವಿಷಯವನ್ನು ಹೇಳುತ್ತದೆ. ಆದರೆ ವೈಶ್ಯರು, ಶೂದ್ರರು ಕಿರೀಟ ಧರಿಸುತ್ತಿದ್ದುದಕ್ಕೆ ಆಧಾರಗಳಿದ್ದಂತಿಲ್ಲ. 'ಸಟ್ಟಿಪಟ್ಟ'ವೆಂಬಲ್ಲಿ ಬಹುಶಃ ಅಧಿಕಾರ ಸೂಚಕವಾಗಿ ಒಂದು ಪಟ್ಟಿಯನ್ನು ಹಣೆಗೆ ಕಟ್ಟುತ್ತಿದ್ದರೆಂದು ಭಾವಿಸಬಹುದು. ಕ್ಷತ್ರಿಯರಾಜರು ಕಿರೀಟ ಧರಿಸುತ್ತಿದ್ದುದು ಸಾಮಾನ್ಯವಾಗಿದ್ದಿತು. ಯುವರಾಜನ ಅಧಿಕಾರ ಸಂಕೇತವಾಗಿ ಒಂದು ಕಂಠಹಾರವನ್ನು ಧರಿಸುತ್ತಿದ್ದುದು ತಿಳಿದು ಬರುತ್ತದೆ.[೬]

ಆ ಕಾಲದಲ್ಲಿ ಪುರುಷರೂ ಕಿವಿಗಳಿಗೆ ಆಭರಣಗಳನ್ನು ಧರಿಸುತ್ತಿದ್ದರು. ಕೆಲ್ಲಂಗೆರೆಯ ಬ್ರಾಹ್ಮಣರ ವರ್ಣನೆಯಲ್ಲಿ ಅವರನ್ನು ವರ್ಣಿಸುತ್ತ 'ಹೇಮ ಕರ್ಣ್ಣಕುಂಡಳರುಂ[೭] ಎನ್ನಲಾಗಿದೆ. ತೀರಾ ಇತ್ತೀಚಿನವರೆಗೂ ಪುರುಷರು 'ಹತ್ತಕಡುಕು' ಎಂಬ ಕಿವಿಯ ಆಭರಣವನ್ನು ಧರಿಸುತ್ತಿದ್ದರು. ಹಿಂದೂಗಳಲ್ಲಿ ಈಗಲೂ ಗಂಡುಮಗುವಿಗೆ ಕಿವಿಚುಚ್ಚಿ ಒಂದೆರಡು ವರ್ಷಗಳಾದರೂ ಕಿವಿಯ ಆಭರಣವನ್ನು ಹಾಕುವ ಪದ್ಧತಿ ಇದೆ.

ಆಭರಣಗಳ ವಿಷಯದಲ್ಲಿ ಸ್ತ್ರೀಯರ ವಿಶೇಷ ಆಸಕ್ತಿ ಪ್ರಸಿದ್ಧ ವಿಚಾರವೇ ಆಗಿದೆ. ಯಾವುದೇ ಪ್ರಸಿದ್ಧ ಹೊಯ್ಸಳ ಸ್ತ್ರೀವಿಗ್ರಹವನ್ನು ಗಮನಿಸಿದರೂ ಅಡಿಯಿಂದ ಮುಡಿಯವರೆಗೆ ನಾನಾ ವಿನ್ಯಾಸದ ಆಭರಣಗಳನ್ನು ಧರಿಸಿರುವುದು ವಿಶೇಷ ಗಮನವನ್ನು ಸೆಳೆಯುತ್ತದೆ.[೮] ಆದರೆ ಕೆಲವು ಆಭರಣಗಳ ಹೆಸರುಗಳನ್ನು ಬಿಟ್ಟರೆ ಉಳಿದ ಆಭರಣಗಳ ಹೆಸರುಗಳೂ ನಮಗೆ ತಿಳಿದಿಲ್ಲ. ಶಿಲ್ಪ, ಚಿತ್ರಕಲೆ, ಶಾಸನ, ಸಾಹಿತ್ಯ, ವಸ್ತು ಸಂಗ್ರಹಾಲಯದಲ್ಲಿರುವ ಆಭರಣಗಳು, ಹಳೆಯ ದೇವಾಲಯಗಳಲ್ಲಿರುವ ಪ್ರಾಚೀನ ಆಭರಣಗಳು ಎಲ್ಲವನ್ನೂ ಗಮನದಲ್ಲಿರಿಸಿಕೊಂಡು ಆಭರಣಗಳ ಅಧ್ಯಯನ ಸಮಗ್ರವಾಗಿ ಹೊರ ಬಂದಿರುವುದು ಸ್ವಾಗತಾರ್ಹ ವಿಷಯವಾಗಿದೆ.

---

೧. (ರೈ) ಎಕ V ಬೇಲೂರು ೧೧೨ ಕ್ರಿ.ಶ. ೧೨೨೦.

೨. (ಮೈ) ಎಕ VI ಕೃಷ್ಣರಾಜಪೇಟೆ ೮೨ ಕ್ರಿ.ಶ. ೧೨೫೬.

೩. ಎಸ್‌ಐಐ IX(i) ಹರಪನಹಳ್ಳಿ ೨೭೬ ಕ್ರಿ.ಶ. ೧೧೮೩.

೪. (ರೈ) ಎಕ V ಬೇಲೂರು ೧೧೮ ಕ್ರಿ.ಶ. ೧೧೭೩.

೫. (ರೈ) ಎಕ V ಅರಸಿಕೆರೆ ೧೧೭ ಕ್ರಿ.ಶ. ೧೧೬೧.

೬. B. R. Gopal : The Chalukyas of Kalyana and the Kalachuris ಪು. ೩೮೯.

೭. (ರೈ) ಎಕ V ಅರಸಿಕೆರೆ ೧೧೭ ಕ್ರಿ.ಶ. ೧೧೬೧.

೮. ಛಾಯಾಚಿತ್ರ ವಿಭಾಗದಲ್ಲಿರುವ ಬಿಲ್ಲು ಬಾಣಗಳನ್ನು ಹಿಡಿದಿರುವ ಬೇಟೆಗಾರ್ತಿಯ ಶಿಲ್ಪದಲ್ಲಿ ಅಡಿಯಿಂದ ಮುಡಿಯವರೆಗೆ ಧರಿಸಿರುವ ವೈವಿಧ್ಯಮಯ ಆಭರಣಗಳನ್ನು ಗಮನಿಸಬಹುದು. ಹೊಯ್ಸಳ ಕಾಲದ ಶಿಲ್ಪ, ರಾಷ್ಟ್ರೀಯ ವಸ್ತುಸಂಗ್ರಹಾಲಯ, ದೆಹಲಿ.

ಶಾಸನಗಳಲ್ಲಿ ಕಂಡು ಬರುವ ಕೆಲವು ಮುಖ್ಯ ಆಭರಣಗಳನ್ನು ಗಮನಿಸಬಹುದು. ಅನೇಕ ಶಾಸನಗಳು ಮುತ್ತಿನ ಹಾರವನ್ನು ಉಲ್ಲೇಖಿಸುತ್ತವೆ.[೧] ಚಾಳುಕ್ಯ ಮಂಡಳೇಶ್ವರನ ಮಡದಿ ಸೀತಾದೇವಿಯನ್ನು ಒಂದು ಶಾಸನ 'ಸುರುಚಿರ ರತ್ನ ವಿರಚಿತ ಸರ್ವ್ವಾಭರಣಮಂಗಳೆ'[೨] ಎಂದಿದೆ. ಮದುವೆಯ ಸಂದರ್ಭದಲ್ಲಿ ಹೆಣ್ಣುಮಕ್ಕಳಿಗೆ ಆನೆ, ಕುದರೆ, ಶ್ರೇಷ್ಠ ವಸ್ತುಗಳ ಜೊತೆ ಚಿನ್ನದ ಆಭರಣಗಳನ್ನು ಕೊಡುತ್ತಿದ್ದರು. ಕದಂಬ ಮನೆತನದ ಜಯಕೇಶಿಗೆ ಚಾಳುಕ್ಯ ಜಗದೇಕಮಲ್ಲನು ತನ್ನ ಮಗಳಾದ ಮೈಳಲದೇವಿಯನ್ನು ಕೊಟ್ಟು ಮದುವೆ ಮಾಡುವಾಗ 'ಸಮಸ್ತ ಕಾಂಚನಾಭರಣಗಳ್ವೆರಸಿ' ಕೊಟ್ಟಂತೆ ತಿಳಿದುಬರುತ್ತದೆ.[೩] ಈಗಲೂ ಸಾಂಪ್ರದಾಯಿಕವಾಗಿ ಹೇಳುವ 'ಸಾಲಂಕೃತ ಕನ್ಯಾದಾನ' ಅದನ್ನೇ ಸೂಚಿಸುತ್ತದೆ.

ಬಲ್ಲಾಳನ ಪರಾಕ್ರಮವನ್ನು ಹೇಳುತ್ತ ಒಂದು ಶಾಸನ ಅವನಿಂದ ಶತ್ರುರಾಜರ ಪತ್ನಿಯರಿಗೆ ಆಗುತ್ತಿದ್ದ ದುರವಸ್ಥೆಯನ್ನು ಹೀಗೆ ನಿರೂಪಿಸುತ್ತದೆ.

ಬಲವದ್ಬಲ್ಲಾಳನುಗ್ರಾಹವಪಟಹರವಂ ಕರ್ಣಮಂ ತಾಗೆ ವಿದ್ವಿ
ಟ್ಕುಲಕಾಂತಾಕರ್ಣಪತ್ರಂ ಕೆಡೆವುದಣಕಮಲ್ತೊಂದೆ ಕೇಳ್ ವಿಸ್ಮಯಂ ಕ
ಣ್ಮಲರಿಂ ಬಾಷ್ಪಾಂಬು ಕೆಯ್ಯಿಂ ಕಡಗಮಡಿಗಳಿಂ ನೂಪುರಂ ವಕ್ತ್ರದಿಂ ಸುಯ್
ತಲೆಕಟ್ಟಿಂ ಮಾಲೆವೂವಾಕೆಗಳ ಗಳಕದಿಂ ಬೀೞ್ವುದುತ್ತಾರಹಾರಂ॥[೪]

ಬಲ್ಲಾಳನ ಉಗ್ರವಾದ ಪಟಹ (ಒಂದು ಚರ್ಮವಾದ್ಯ) ವಾದ್ಯದ ಧ್ವನಿ ಕಿವಿಯನ್ನು ತಲುಪಿದರೆ ಶತ್ರುರಾಜರ ಪತ್ನಿಯರ ಕರ್ಣಪತ್ರಗಳು (ಇದು ಕಿವಿಗಳಿಗೆ ಇಟ್ಟುಕೊಳ್ಳುತ್ತಿದ್ದ ತಾಳೆ ಎಲೆ (ತಾಳೆಗರಿ)ಯನ್ನು ಸೂಚಿಸುತ್ತದೆ. ಇದು ಪ್ರಾಚೀನ ಕಾಲದಲ್ಲಿ ಆಭರಣವಾಗಿ ಬಳಕೆಯಾಗುತ್ತಿತ್ತು. ಕ್ರಮೇಣ ಓಲೆ ಎಂದರೆ ಚಿನ್ನ, ವಜ್ರ ಮುಂತಾದುವನ್ನು ಬಳಸಿ ಮಾಡಿದ ಆಭರಣಗಳಿಗೂ ಅನ್ವಯವಾಗತೊಡಗಿತು) ಬೀಳುತ್ತವೆ, ಕಣ್ಣಿಂದ ಕಣ್ಣೀರು ಹನಿಗಳು, ಕೈಯಿಂದ ಕಡಗ, ಪಾದಗಳಿಂದ ನೂಪುರ (ಕಾಲಂದುಗೆ), ಮುಖದಿಂದ ನಿಟ್ಟುಸಿರು, ತಲೆಯ ಗಂಟಿನಿಂದ ಹೂಮಾಲೆ ಮತ್ತು ಕೊರಳಿಂದ ತಾರಹಾರ (ಅಚ್ಚ ಮುತ್ತಿನ ಹಾರ)ಬೀಳುತ್ತವೆ ಎಂದು ತಿಳಿಸುತ್ತದೆ. ಶತ್ರುರಾಜಪತ್ನಿಯರ ಓಲೆಗಳು, ಕಣ್ಣೀರು, ಕಡಗ, ನೂಪುರ, ಹೂಮಾಲೆ, ತಾರಹಾರಗಳ ಬೀಳುವಿಕೆ ಅವರಿಗೆ ಉಂಟಾಗಬಹುದಾದ ವೈಧವ್ಯದ ಭಯವನ್ನು ಸೂಚಿಸುತ್ತವೆ. ಆ ಕಾಲದಲ್ಲಿ ಹೆಣ್ಣಿನ ಸೌಭಾಗ್ಯ 'ಓಲೆಭಾಗ್ಯ' ಎಂದು ಕರೆಸಿಕೊಳ್ಳುತ್ತಿದ್ದು, ಓಲೆಗಳಿಗೆ ವಿಶೇಷವಾದ ಪ್ರಾಶಸ್ತ್ಯವಿದ್ದಿತು. ಪಂಪಭಾರತದಲ್ಲಿ ಜಯದ್ರಥನ ಮಡದಿ ದುಶ್ಯಲೆಯು ಅರ್ಜುನನು ತನ್ನ ಗಂಡನನ್ನು ಕೊಲ್ಲುವನೆಂದು ಪ್ರತಿಜ್ಞೆ ಮಾಡಿರುವ ವಿಷಯ ತಿಳಿದು ದುರ್ಯೋಧನನ ಬಳಿಗೆ ಬಂದು 'ಎನ್ನೋಲೆಯ ಕಡಗದಟೆವನೇಂ ನೋಡಿದಪಾ' ಎಂದು ಕೇಳುವ ವಿಷಯ ಬರುತ್ತದೆ.[೫] ಓಲೆ ಮತ್ತು ಕಡಗಗಳು ಸೌಭಾಗ್ಯದ ಲಕ್ಷಣಗಳಾಗಿದ್ದುದು ಸ್ಪಷ್ಟವಿದೆ. ಲೀಲಾವತಿ ಕಾವ್ಯದಲ್ಲಿ ಲೀಲಾವತಿಯನ್ನು ಆಶೀರ್ವದಿಸುವ ಸಮಯದಲ್ಲಿ 'ದೇವಿ ಲಕ್ಕದೀವಳಿಗೆಗಾಣು ನಿನ್ನೋಲೆ ಕಲ್ಲೋಲೆಯಕ್ಕೆ'[೬] ಎಂಬ ಮಾತು ಬರುತ್ತದೆ. ಕಲ್ಲೋಲೆ ಹರಳಿನ ವಜ್ರದ ಓಲೆಯನ್ನು ಸೂಚಿಸಬಹುದಾದರೂ ಆ ಸನ್ನಿವೇಶದಲ್ಲಿ ಅದು ಸ್ಥಿರಮುತ್ತೈದೆತನವನ್ನು ಸೂಚಿಸುತ್ತದೆ.

---

೧. ಎಸ್‌ಐಐ XV ಗದಗು ೧೨೮ ಕ್ರಿ.ಶ. ೧೧೭೪.

೨. ಎಸ್‌ಐಐ VI ಮಡಕಸಿರ ೫೫೭ ಕ್ರಿ.ಶ. ೧೧೬೮.

೩. ಸಾಧನೆ ೪-೧ ಕಲ್ಘಟಗಿ ಕ್ರಿ.ಶ. ೧೧೪೬.

೪. (ರೈ) ಎಕ VIII ಸೊರಬ ೧೪೦ ಕ್ರಿ.ಶ. ೧೧೯೮.

೫. ಪಂಪಭಾರತಂ. ೧೧-೧೨೩.

೬. ಲೀಲಾವತೀ ೧೪-೧೩೧ ವ.

ಆನೆಯ ಕುಂಭಸ್ಥಳದಲ್ಲಿ ಮುತ್ತುಗಳಿರುತ್ತಿದ್ದವೆಂಬ ಕವಿಸಮಯ ಕೆಲವು ಶಾಸನಗಳಲ್ಲಿ ವ್ಯಕ್ತವಾಗಿದೆ. ಆನೆಯ ಬಿದುವನ್ನು (ಕುಂಭಸ್ಥಳದ ಮಧ್ಯಭಾಗ. ಸಂ. ವಿದು) ಸೀಳಿ ಮುತ್ತುಗಳನ್ನು ಜಯವಧುವಿಗೆ ನರಸಿಂಹನು ತೊಡಿಸಿದಂತೆ ಒಂದು ಶಾಸನ ಹೇಳುತ್ತದೆ.[೧] ಕೆಲವು ವಿಶೇಷ ಸಂದರ್ಭಗಳಲ್ಲಿ ಮುತ್ತುಗಳನ್ನು ಸೇಸೆಗಳಾಗಿ ಅಕ್ಷತೆಯಂತೆಯೂ ಬಳಸುತ್ತಿದ್ದುದು ಕಂಡು ಬರುತ್ತದೆ.[೨] ಸಾಮಾನ್ಯವಾಗಿ ಶತ್ರುರಾಜರನ್ನು ಗೆದ್ದು ಸೂರೆಮಾಡುತ್ತಿದ್ದ ವಸ್ತುಗಳಲ್ಲಿ 'ರತ್ನಾವಳಿ'ಗಳೂ ಇರುತ್ತಿದ್ದವು.[೩] ಕುಂಜನಂಬಿಸೆಟ್ಟಿ ನಾನಾ ರತ್ನ ಪರೀಕ್ಷೆಯನ್ನು ಸಮರ್ಥವಾಗಿ ಮಾಡುತ್ತಿದ್ದನೆಂದು ಶಾಸನವೊಂದು ಹೇಳುತ್ತದೆ.[೪] ಒಂದು ಶಾಸನದಲ್ಲಿ 'ಕಲ್ಲವರದರು' (ಕಲ್ಲು + ಪರದರು)ಗಳ ಉಲ್ಲೇಖ ಬರುತ್ತದೆ.[೫] ಅದು ಹರಳುಗಳ ವರ್ತಕರನ್ನು ಸೂಚಿಸುತ್ತದೆ.

ಹವಳದ ಆಭರಣಗಳು ಇಂದಿಗೂ ತುಂಬ ಪ್ರಸಿದ್ಧವಾಗಿವೆ. ಜಾತಿ ಹವಳದ ಉಲ್ಲೇಖ ಶ್ರವಣಬೆಳಗೊಳದ ಶಾಸನದಲ್ಲಿ ಬಂದಿದೆ. ಈ ಶಾಸನದಲ್ಲಿ 'ಬೆಳಗುಳತೀರ್ಥದ ಸಮಸ್ತ ಮಾಣಿಕ್ಯ ನಖರಂಗಳು ಶ್ರೀಗೊಂಮಟಪಾರಿಶ್ವದೇವರಿಗೆ ವರ್ಷನಿಬಂಧಿಯಾಗಿ ಹೂವಿನ ಪಡಿಗೆ ಜಾತಿ ಹವಳಕ್ಕೆ ತೊಲೆಗೆ ತಾ ಕರಿದಕ್ಕೆ ವೀಸಗ ಯಿದ ಆಚಂದ್ರಾರ್ಕತಾರಂಬರಂ...' ಎಂದಿದೆ.[೬] ಕರಿದ ಎನ್ನುವುದು ಹವಳದ ಪ್ರಭೇದವನ್ನು ತಿಳಿಸುವುದೆ ಎನ್ನುವುದು ಪ್ರಶ್ನೆಯಾಗಿದೆ. ಮಾಣಿಕ್ಯರತ್ನದ ವ್ಯಾಪಾರಿಗಳು ಹವಳದ ವ್ಯಾಪಾರವನ್ನೂ ಕೈಗೊಳ್ಳುತ್ತಿದ್ದುದು ಶಾಸನದ ಮಾತಿನಿಂದ ಸ್ಪಷ್ಟವಾಗುತ್ತದೆ.

ಕೈಗಳಿಗೆ ಅಥವಾ ಕಾಲಿಗೆ ಧರಿಸುತ್ತಿದ್ದ ಬಳೆಯನ್ನು ಕಡಗ (ಸಂ. < ಕಟಕ) ಎಂದು ಕರೆಯುತ್ತಿದ್ದರು. ಈಗಲೂ ಕೈಬಳೆ ಮತ್ತು ಕಾಲ್ಬಳೆ ಎಂದು ಪ್ರತ್ಯೇಕಿಸಿ ಕರೆಯುತ್ತಾರೆ. ಕಂಕಣ ಎನ್ನುವುದು ಕೈಗೆ ಧರಿಸುತ್ತಿದ್ದ ಆಭರಣ. ಇದು ಲೋಹದ ಆಭರಣವೆಂಬುದು ಸ್ಪಷ್ಟವಿದೆ. ಬಳೆ ಎನ್ನುವುದು ಕೈಗೆ ಧರಿಸುತ್ತಿದ ಗಾಜಿನ ಆಭರಣ. ಗಾಜಿನ ಬಳೆಗಳು ಭಾರತದಲ್ಲಿ ಯಾವಾಗ ಬಳಕೆಗೆ ಬಂದವು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ವೇದಗಳಲ್ಲಿ, ಶತಪಥ ಬ್ರಾಹ್ಮಣದಲ್ಲಿ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗಾಜಿನ ಬಳಕೆಯ ಬಗ್ಗೆ ಉಲ್ಲೇಖವಿಲ್ಲ. ಆದರೆ ಹರಪ್ಪ ಮೊಹೆಂಜೊದಾರೊಗಳ ಉತ್ಖನನದಲ್ಲಿ ಗಾಜಿನ ಬಳಕೆಗೆ ಆಧಾರಗಳಿವೆ.[೭] ಧರ್ಮಾಮೃತದಲ್ಲಿ 'ಕಂಕಣಮನೊಲ್ಲದೆ ಬಳೆಯಂ ತುಡುವ' ಎಂಬ ಮಾತು ಬರುತ್ತದೆ.[೮] ಅದು ಕಂಕಣ (ಚಿನ್ನದಿಂದ ಮಾಡಿದ್ದು?) ಬೆಲೆ ಬಾಳುವುದೆಂಬುದನ್ನೂ ಬಳೆ (ಗಾಜು) ಅಷ್ಟಾಗಿ ಬೆಲೆ ಇಲ್ಲದ್ದು ಎಂಬುದನ್ನು ಸೂಚಿಸುವ ಹಾಗೆ ಕಾಣುತ್ತದೆ. ಅಲ್ಲದೆ 'ಕಲ್ಲ ಮೇಲೆ ಬಿರ್ದ ಕಾಜಿನ ಪೇಜಿನಂತೆ ನುಗ್ಗಪ್ಪುದುಂ'[೯] ಎಂಬ ಮಾತೂ ಗಾಜಿನ ಬಳಕೆ ಆಗ ವ್ಯಾಪಕವಾಗಿದ್ದುದನ್ನು ಸೂಚಿಸುತ್ತದೆ. ಯಶಸ್ತಿಲಕವೂ ಗಾಜಿನ ಬಳೆಗಳ ಬಗ್ಗೆ ಉಲ್ಲೇಖಿಸುತ್ತದೆ.[೧೦]

---

೧. (ರೈ) ಎಕ V ಅರಸಿಕೆರೆ ೧೩೮ ಕ್ರಿ.ಶ. ೧೧೭೪.

೨. (ರೈ) ಎಕ VII ಹೊನ್ನಾಳಿ ೩೫ ಕ್ರಿ.ಶ. ೧೧೮೭.

೩. (ರೈ) ಎಕ V ಅರಸಿಕೆರೆ ೨೧೭ ಕ್ರಿ.ಶ. ೧೨೩೨.

೪. (ರೈ) ಎಕ V ಅರಸಿಕೆರೆ ೧೦೮ ಕ್ರಿ.ಶ. ೧೨೫೫.

೫. (ಮೈ) ಎಕ V ತಿ.ನರಸೀಪುರ ೯೮ ಕ್ರಿ.ಶ. ೧೨ ಶಮಾ.

೬. (ಮೈ) ಎಕ II ಶ್ರವಣಬೆಳಗೊಳ ೩೪೩ ಕ್ರಿ.ಶ. ೧೨ ಶಮಾ.

೭. H.C. Bhardwaj : Aspects of Ancient Indian Technology ಪು. ೨೭-೨೮.

೮. ಧರ್ಮಾಮೃತಂ, ಪು. ೧೮.

೯. ಅದೇ, ಪು. ೩೮೫.

೧೦. K.K. Handiqui : Yashastilaka and Indian Culture ಪು. ೧೨೨.

ಆನೆಯ ದಂತದ ಬಳೆಗಳು ಆ ಕಾಲದಲ್ಲಿ ಬಳಕೆಯಲ್ಲಿದ್ದಂತೆ ತಿಳಿದುಬರುತ್ತದೆ. ನರಸಿಂಹನನ್ನು ಹೊಗಳುತ್ತಾ ಒಂದು ಶಾಸನ ಶತ್ರುರಾಜರ ಮದಿಸಿದ ಆನೆಗಳ ಕೊಂಬನ್ನು ಮುರಿದು ಬಳೆಯನ್ನು ಪಡೆದು ಜಯವಧುವಿಗೆ ತೊಡಿಸುವನೆಂದು ಹೇಳುತ್ತದೆ.[೧]

ಬೆಳಗಾಮಿನ ಒಂದು ಸಂಸ್ಕೃತ ಶಾಸನ ಸೇನಹಳ್ಳಿ, ಕಲ್ಲಕುಂದರಗೆ ಮತ್ತು ನಿಟ್ಟೂರುಗಳನ್ನು 'ಬಳೆಗಾರಸ್ಥಳ'[೨] ಎಂದು ಕರೆಯುತ್ತದೆ. ಆ ಊರುಗಳು ಬಳೆಗಳ ತಯಾರಿಕೆಗೆ, ಬಳೆಗಾರರ ವಾಸದ ಸ್ಥಳವಾಗಿ ಪ್ರಖ್ಯಾತವಾಗಿದ್ದಿರಬೇಕು.

ಹೆಚ್ಚು ಚರ್ಚೆಗೆ ಒಳಗಾಗಿರುವ ಇನ್ನೊಂದು ಆಭರಣವೆಂದರೆ 'ಮೂಗುತಿ'. ಎ.ಎಸ್. ಆಲ್ಟೇಕರ್ ಅವರು ಪ್ರಾಚೀನ ಶಿಲ್ಪ ಅಥವಾ ಚಿತ್ರಕಲೆಯಲ್ಲಿ ಮೂಗಿನ ಆಭರಣ ಎಲ್ಲಿಯೂ ಚಿತ್ರಣಗೊಳ್ಳದಿರುವುದರಿಂದ ಇದು ಮುಸ್ಲಿಮರ ಆಗಮನದನಂತರ ಅವರಿಂದ ಸ್ವೀಕರಿಸಿದ ಆಭರಣವೆಂದು ಹೇಳಿ, ಮೂಗುತಿಗೆ ಹೆಣ್ಣಿನ ಸೌಭಾಗ್ಯದ ಒಂದು ಮಹತ್ವವೂ ಇರುವುದರಿಂದ ಹೇಗೆ ವಿದೇಶೀಯ ಆಭರಣ ಸೌಭಾಗ್ಯದ ಚಿಹ್ನೆಯಾಯಿತು ಎಂದು ಪ್ರಶ್ನಿಸಿದ್ದಾರೆ.[೩] ಜ್ಯೋತ್ಸ್ನಾ ಕಾಮತ್ ಅವರೂ ಆಲ್ಟೇಕರ್ ಅವರ ಅಭಿಪ್ರಾಯವನ್ನು ಒಪ್ಪಿ ಹದಿನಾಲ್ಕನೆಯ ಶತಮಾನದನಂತರ ವಿರಳವಾಗಿ ಅದು ಕಾಣಿಸಿಕೊಳ್ಳುತ್ತದೆ ಎಂದಿದ್ದಾರೆ.[೪] ಆದರೆ ಈ ನಾಡಿಗೆ ಮುಸ್ಲಿಮರು ಬರುವ ಬಹು ಮೊದಲಿನಿಂದಲೂ ಮೂಗುತಿ ಬಳಕೆಯಲ್ಲಿದ್ದುದಕ್ಕೆ ಕನ್ನಡ ಕೃತಿಗಳು ಆಧಾರಗಳನ್ನು ಒದಗಿಸುತ್ತವೆ. ಒಂದನೆಯ ನಾಗವರ್ಮನ ಛಂದೋಂಬುಧಿಯಲ್ಲಿ ಮೂಗುತಿಯ ಉಲ್ಲೇಖವಿದೆ[೫] (ಕ್ರಿ.ಶ. ೯೯೦). ಅಕ್ಕಮಹಾದೇವಿಯ ಒಂದು ವಚನದಲ್ಲಿ ಮೂಕುತಿಯ ಉಲ್ಲೇಖವಿದೆ[೬] (ಕ್ರಿ.ಶ.೧೧೬೫). ಹರಿಹರನ ಗಿರಿಜಾಕಲ್ಯಾಣದಲ್ಲಿ 'ಮೂಗಿನ ಮುತ್ತು'[೭] ಎಂದು ಉಲ್ಲೇಖಗೊಂಡಿದೆ (ಕ್ರಿ.ಶ. ೧೨೨೦). ಅಲ್ಲದೆ ಇದಕ್ಕೆ ಕಿಟ್ಟಲ್ ಕೋಶದಲ್ಲಿ ತಮಿಳಿನ ಮೂಕೊಜ್ಜ಼ಿ , ಮಲೆಯಾಳಂನ ಮೂಕ್ಕುತ್ತಿ, ತುಳುವಿನ ಮೂಂಕುತ್ತಿ ಎಂಬ ಜ್ಞಾತಿಪದಗಳನ್ನು ಕೊಡಲಾಗಿದೆ.[೮] ಪ್ರಾಚೀನ ಶಿಲ್ಪಗಳಲ್ಲಿ ಚಿತ್ರಕಲೆಯಲ್ಲಿ ಮೂಗುತಿಯನ್ನು ಏಕೆ ಚಿತ್ರಿಸಿಲ್ಲ ಎಂಬುದು ಕುತೂಹಲದ ವಿಷಯವಾದರೂ ಅದು ಹೊರದೇಶದಿಂದ ಬಂದದ್ದು ಎಂಬ ಅಭಿಪ್ರಾಯ ಸಮ್ಮತವಾದುದಲ್ಲ.

---

೧. (ಲೈ) ಎಕ V ಅರಸೀಕೆರೆ ೧೩೮ ಕ್ರಿ.ಶ. ೧೧೭೪.

೨. ಕಇ II ಬೆಳಗಾಂ ೪೦ ಕ್ರಿ.ಶ. ೧೨೬೧.

೩. A. S.Altekar : ಪೂರ್ವೋಕ್ತ ಪು. ೩೦೧-೩೦೩.

೪. Jyotsna Kamath : ಪೂರ್ವೋಕ್ತ ಪು. ೫೩.

೫. ಗಂಡರ ಮೂಗುತಿಯೆನಿಸಿದ
ಮಂಡಳಿಕರ ಮಂತ್ರಿ ಸಂಧಿವಿಗ್ರಹಿರಾಯಂ
ಕೊಂಡಾಡಿ ಪೊರೆದನೆನೆ ಧರೆ
ಕೊಂಡಾಡದೆ ಕೊಂಡು ಕೊನೆಯದೇ ನಾಕಿಗನಂ ೧-೨೮.

೬. ಎಲ್ಲರ ಗಂಡರ ಶೃಂಗಾರದ ಪರಿಯಲ್ಲ
ಎನ್ನ ನಲ್ಲನ ಶೃಂಗಾರದ ಪರಿ ಬೇಱೆ
.........................................
ಉಂಗುಟದಲ್ಲಿ ಮೂಕುತಿ.... ಶಿಶವ ೨೮೦, ಪು. ೧೧೮.

೭. ಗಿರಿಜಾ ಕಲ್ಯಾಣಂ ೪-೯೫.

೮. ಮೂಗುತಿಯ ನಿಷ್ಪತ್ತಿ ಹೀಗಿರಬೇಕು. ಮೂಗು + ಕುತ್ತು + ಇ. (ಕುತ್ತು = ಚುಚ್ಚು) ಮೂಗು + ಕುತ್ತಿ -> ಮೂಕುತಿ - ಮೂಗುತಿ.

ಹರ್‍ಯಲೆಯ ನಿಷಿದಿ ಶಾಸನದಲ್ಲಿ ಹರ್‍ಯಲೆಯನ್ನು ಕರೆದೊಯ್ಯಲು ಬಂದ ಅಮರಾವತಿಯ ದೇವೀಸಂಕುಲವು ಅವಳನ್ನು ಹೀಗೆ ಅಲಂಕರಿಸಿದಂತೆ ವರ್ಣಿಸಲಾಗಿದೆ.

> ಬರವಂ ಕೇಳ್ದಮರಾವತೀಪುರದ ದೇವೀಸಂಕುಲಂ ಬಂದು ನೂ
> ಪುರಮಂ ಮುತ್ತಿನ ಹಾರಮಂ ಕಟಕಮಂ ಕೇಯೂರಮಂ ವಜ್ರದುಂ
> ಗುರಮಂ ಮಾಣಿಕದೋಲೆಯಂ ತುಡಿಸಿ ಬೇಗಂ ದೇವಿ ನೀನೇಱು ರಾ
> ಗರಸಂ ಕೆಯ್ಮಿಗಲೀ ವಿಮಾನಮನೆನುತ್ತುಂ ತಂದವರ್ ಸಾರ್ಚಿದರ್॥[೧]

ಅವರು ಕಾಲಂದುಗೆ, ಮುತ್ತಿನ ಹಾರ, ಬಳೆ, ಕೇಯೂರ (=ತೋಳುಬಂದಿ), ವಜ್ರದ ಉಂಗುರ, ಮಾಣಿಕ್ಯದ ಓಲೆಗಳನ್ನು ತೊಡಿಸಿದಂತ ತಿಳಿಸುತ್ತದೆ. ಕಾಲುಂಗುರವು ಶಿಲ್ಪಗಳಲ್ಲಿ ಕಂಡು ಬರುವುದಿಲ್ಲವೆಂದು ವಿದ್ವಾಂಸರು ಗುರುತಿಸುತ್ತಾರೆ. ಮಲುಹಣನ ರಗಳೆಯಲ್ಲಿ ಉಲ್ಲೇಖಗೊಂಡಿರುವ ಪಾದಮುದ್ರಿಕೆ ಬಹುಶಃ ಕಾಲುಂಗುರವನ್ನು ಸೂಚಿಸುತ್ತದೆ.[೨]

ತಾಳಿಯೂ ಗಮನಾರ್ಹವಾದ ಆಭರಣಗಳಲ್ಲಿ ಒಂದಾಗಿದೆ. ಅದು ಸೌಭಾಗ್ಯದ ಚಿಹ್ನೆಯಾಗಿದೆ. ಮದುವೆಯಾದಾಗ ಧರಿಸುವ ತಾಳಿ ಹೆಣ್ಣು ಸುಮಂಗಲಿಯಾಗಿರುವವರೆಗೆ ಅವಳ ಕೊರಳಿನಲ್ಲಿರುತ್ತದೆ. ಮಹಾದೇವಿ ಅಕ್ಕನ ರಗಳೆಯಲ್ಲಿ 'ಅಯ್ದೆದಾಳಿ ಮುತ್ತಿನೊತ್ತರಕ್ಕೆ'[೩] ಎಂಬ ಮಾತು, ತಾಳಿ ಸುಮಂಗಲಿತನದ ಸೂಚಕ ಎಂಬ ಅರ್ಥವನ್ನು ಸೂಚಿಸುವಂತೆ ಕಾಣುತ್ತದೆ. ಬಸವ ಪುರಾಣದಲ್ಲಿ[೪] ಬರುವ ಕೋಳೂರು ಕೊಡಗೂಸಿನ ಪ್ರಸಂಗದ ಮಕ್ಕಳ ಒಡವೆಗಳಲ್ಲಿ ಓಲೆ, ಮೂಗುತಿ, ತಾಳಿಗಳ ಉಲ್ಲೇಖಗಳನ್ನು ನೋಡಿದರೆ ತಾಳಿ ಮದುವೆಯಾದವರು ಮಾತ್ರ ಧರಿಸುವ ಆಭರಣವೆಂಬ ಭಾವನೆ ಆ ಕಾಲದಲ್ಲಿ ಇರಲಿಲ್ಲವೆಂದು ಕಾಣುತ್ತದೆ. ಆ ಆಭರಣಗಳೆಲ್ಲವನ್ನೂ ಬಾಲದೊಡಿಗೆಗಳ ಜೊತೆಯಲ್ಲಿ ಹೆಸರಿಸಲಾಗಿದೆ.

ಶ್ರೀಮಂತರು ಆಭರಣಗಳನ್ನು ಅಧಿಕವಾಗಿ ಧರಿಸುತ್ತಿದ್ದರು. ಅವರ ಬೆರಳಲ್ಲಿ, ಕಿವಿಯಲ್ಲಿ ಹೊಳೆಯುವ ಆಭರಣಗಳಿರುತ್ತಿದ್ದವೆಂಬ ಸೂಚನೆಯನ್ನು ಬ್ರಹ್ಮಶಿವನು ಕೊಟ್ಟಿದ್ದಾನೆ.[೫] ಬಸವಣ್ಣನವರ ಒಂದು ವಚನದಲ್ಲಿ 'ತೊತ್ತಿನ ಕೊರಳಲ್ಲಿ ಹೊಂಬಿತ್ತಾಳೆಯ[೬] ಸಿಂಗಾರವ ಮಾಡಿದಂತೆ' ಎಂದು ಬರುತ್ತದೆ. ಹೊಂಬಿತ್ತಾಳೆ ಚಿನ್ನದ ಲೇಪನ ಮಾಡಿದ ಹಿತ್ತಾಳೆಯ ಆಭರಣವನ್ನು ಸೂಚಿಸುವಂತೆ ಕಾಣುತ್ತದೆ. ಆರಾಧ್ಯ ಚಾರಿತ್ರದಲ್ಲಿ ಹೊಲತಿ ಕಂಚಿನ ಕಾಲುಂಗುರವನ್ನು, ಕೈಯಲ್ಲಿ ಗಾಟುವಳೆ (ಬಹುಶಃ ಗಾಜುವಳೆ), ಗುರುಗುಂಜಿ ಸರವನ್ನು ಹಾಕಿಕೊಂಡಂತೆ ಎಂದು ಮುಂತಾದ ವರ್ಣನೆ ಇದೆ.[೭] ಆಭರಣಗಳ ಲೋಹಗಳೇ ಅವರವರ ಆರ್ಥಿಕ ಸಾಮಾಜಿಕ ಸ್ಥಾನಮಾನಗಳನ್ನು ತಿಳಿಸುತ್ತವೆ ಎನ್ನಬಹುದು.[೮]

ಮಾನವರಿಗೆ ಇರುವ ಆಭರಣಗಳ ವ್ಯಾಮೋಹವನ್ನು ದೇವತೆಗಳಿಗೂ ಆರೋಪಿಸಿರುವುದು ಕೆಲವು ಶಾಸನಗಳನ್ನು ನೋಡಿದರೆ ಕಂಡುಬರುತ್ತದೆ. ಅನೇಕ ದೇವಾಲಯಗಳಿಗೆ ದಾನಿಗಳು ಆಭರಣಗಳನ್ನು ಮಾಡಿಸಿ ಕೊಟ್ಟಿರುವುದು ಕಂಡುಬರುತ್ತದೆ.[೯]

---

೧. (ರೈ) ಎಕ XII ತಿಪಟೂರು ೯೩ ಕ್ರಿ.ಶ. ೧೧೭೪.

೨. ಶಿ.ಮರ ಪು. ೧೦೬.

೩. ನೂಪುರ ಪು. ೧೨೮.

೪. ಬಸವಪುರಾಣಂ ೧೩-೪.

೫. ಸಪ ೪-೫೫.

೬. ಬವ ೬೩೫.

೭. ಎಂ. ಚಿದಾನಂದಮೂರ್ತಿ ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪು. ೪೫.

೮. ಹಣೆಸರ, ಬೈತಲೆಮಣಿ, ಲೋಲಾಕು, ಕುಂಡಲಿ, ನಕ್ಷತ್ರ ಕುಂಡಲ, ಕಂಠಿಹಾರ, ಮುತ್ತಿನಸರ, ತೋಳ ಬಂದಿ, ಬಳೆ, ಕಡಗ, ಕಟಿಸೂತ್ರ, ಛನ್ನವೀರ ಮುಂತಾದ ಆಭರಣಗಳ ವಿವರಗಳಿಗೆ ಗಮನಿಸಿ- ಕನ್ನಡ ಶಾಸನ ಶಿಲ್ಪ ಪು. ೧೮೨-೧೮೯.

೯. (ರೈ) ಎಕ V ಅರಸಿಕೆರೆ ೧೨೩ ಕ್ರಿ.ಶ. ೧೨೩೭; (ಮೈ) ಎಕ IV ಕೊಳ್ಳೇಗಾಲ ೧೦೪ ಕ್ರಿ.ಶ. ೧೧ ಶಮಾ.

ತಮಿಳು ಶಾಸನವೊಂದು ಕೃಷ್ಣದೈವಕ್ಕೆ ಮಾರ್ಬಣ್ಯೆಯನ್ನು (ಎದೆಪಟ್ಟಿ) ಮಾಡಿಸಿಕೊಟ್ಟಂತೆ ತಿಳಿಸುತ್ತದೆ.[೧] ಕ್ರಿಯಾಶಕ್ತಿ ಪಂಡಿತರ ಮಗಳು (ಶಿಷ್ಯೆ) ಪಾತ್ರಚೂಡಾಮಣಿ ಚಂಡವ್ವೆ ತ್ರಿಕೂಟದೇವರಿಗೆಂದು ಸುವರ್ಣ ಧ್ವಜಗಳನ್ನು ಮಾಡಿಸಿಕೊಟ್ಟಂತೆ ತಿಳಿದು ಬರುತ್ತದೆ.[೨] ತಳಾರ ಬಮ್ಮೆಯ ನಾಯಕನ ಮಗಳು ಚಾಕಮ ಬ್ರಹ್ಮ ಪುಲಿಗೆರೆಯ ಚೆನ್ನಮಾಧವ ದೇವರಿಗೆ ಜೀರ್ಣೋದ್ಧಾರಕ್ಕಾಗಿ ಸುವರ್ಣಾಭರಣಗಳನ್ನು ಮಾಡಿಸಿಕೊಟ್ಟಂತೆ ತಿಳಿದು ಬರುತ್ತದೆ.

ಅನೇಕ ಕನ್ನಡ ಕೃತಿಗಳು ಆಭರಣಗಳನ್ನು ಸಾಕಷ್ಟು ವಿವರವಾಗಿ ವರ್ಣಿಸಿವೆ.[೩] ಸ್ತ್ರೀಪುರುಷರಿಬ್ಬರೂ ಮಾಡಿಕೊಳ್ಳುತ್ತಿದ್ದ ವಿವಿಧ ರೀತಿಯ ಕೇಶಾಲಂಕಾರವನ್ನು ಸ್ತ್ರೀಶಿಲ್ಪಗಳು[೪] ಮತ್ತು ವೀರಗಲ್ಲುಗಳ ಶಿಲ್ಪಗಳು[೫] ನಿರೂಪಿಸುತ್ತವೆ. ಕೆಲವು ಶಾಸನಗಳು ಸ್ತ್ರೀಯರು ಧರಿಸುತ್ತಿದ್ದ ಮೃಗಮದ ತಿಲಕದ ಉಲ್ಲೇಖವನ್ನು ಮಾಡುತ್ತವೆ.[೬]

**ಆಹಾರ:**

ಆಹಾರ ಸಿದ್ಧಪಡಿಸುವ ಕಲೆ ಬಹು ಪ್ರಾಚೀನ ಕಾಲದಿಂದಲೂ ಒಂದು ವ್ಯವಸ್ಥಿತ ಶಾಸ್ತ್ರವಾಗಿ ಬೆಳೆದುಬಂದಿದೆ. ಅರವತ್ನಾಲ್ಕು ಕಲೆಗಳಲ್ಲಿ 'ವಿಚಿತ್ರ ಶಾಕಯೂಷಭಕ್ಷ್ಯವಿಕಾರಕ್ರಿಯಾ' (ಬಗೆ ಬಗೆಯ ಕಾಯಿಪಲ್ಯದ ತಯಾರಿಕೆಯನ್ನೂ, ಭಕ್ಷ್ಯಗಳನ್ನೂ ತಯಾರಿಸುವುದು) ಒಂದಾಗಿದ್ದು ಅದು ಪಾಕಶಾಸ್ತ್ರಕ್ಕೆ ಸಂಬಂಧಿಸಿದ ಕಲೆಯಾಗಿದೆ. ಬೇರೆ ಬೇರೆ ಸಿಹಿ ಮತ್ತು ಕಾರದ ಪದಾರ್ಥಗಳನ್ನು ಸಿದ್ಧಪಡಿಸುವ ಕಲೆಯನ್ನು ಅದು ತಿಳಿಸುತ್ತದೆ.[೭] ಅಡುಗೆ ಮಾಡುವ ಕಲೆಯನ್ನು ಸೂಪಶಾಸ್ತ್ರವೆಂದು ಕರೆಯಲಾಗುತ್ತದೆ. 'ಸೂಪ' ಎಂದರೆ ಉಪ್ಪು ಹುಳಿ ಕಾರಗಳಿಂದ ಕೂಡಿ ಉಪಯೋಗಿಸಲು ಸಿದ್ಧಗೊಳಿಸಿದ ಬೇಳೆ. ಇದನ್ನೇ ತೊವ್ವೆ ಎಂದು ಕರೆಯುವುದು. ಇದಕ್ಕೆ ಸಂಬಂಧಪಟ್ಟ ಶಾಸ್ತ್ರ ಸೂಪಶಾಸ್ತ್ರ ಎಂದು ಅರ್ಥವಾಗುತ್ತದೆ.[೮] ನಳ ಮತ್ತು ಭೀಮರು ಪಾಕಶಾಸ್ತ್ರದಲ್ಲಿ ಪರಿಣತರೆಂಬ ಸಾಂಪ್ರದಾಯಿಕ ನಂಬಿಕೆ ಇದೆ. ಕನ್ನಡ ಸಾಹಿತ್ಯದಲ್ಲಿ ಸೂಪಶಾಸ್ತ್ರಕ್ಕೆ ಸಂಬಂಧಿಸಿದ ವಿವರಗಳು ಚಾವುಂಡರಾಯನ ಲೋಕೋಪಕಾರದ ಸೂಪಶಾಸ್ತ್ರಾಧಿಕಾರದಲ್ಲಿ ದೊರೆಯುತ್ತದೆ.[೯] ಅನಂತರ ಹದಿನಾರನೆಯ ಶತಮಾನದ ಆದಿಭಾಗದ ಮೂರನೆಯ ಮಂಗರಸನ ಸೂಪಶಾಸ್ತ್ರ ವಿವರವಾಗಿ ಪಾಕಶಾಸ್ತ್ರವನ್ನು ನಿರೂಪಿಸುವ ಕೃತಿಯಾಗಿದೆ. ಕನ್ನಡಿಗರಿಗೆ ಒಂದು ವಿಶಿಷ್ಟ ಆಹಾರ ಸಂಸ್ಕೃತಿ ಇದ್ದಿತೆಂಬ ಅಭಿಪ್ರಾಯವಿದೆ[೧೦]

ಪ್ರಾಚೀನ ಭಾರತದಲ್ಲಿ ಆಹಾರ ಸಿದ್ಧತೆಯ ಶುಚಿತ್ವಕ್ಕೆ ವಿಶೇಷವಾದ ಗಮನ ಕೊಡಲಾಗುತ್ತಿತ್ತು. ಅಡುಗೆಗೆ ಪ್ರತ್ಯೇಕವಾದ ಸ್ಥಳವನ್ನು ವ್ಯವಸ್ಥೆಗೊಳಿಸಿರುತ್ತಿದ್ದರು. ಛತ್ರದ ಒಂದು ಪ್ರತ್ಯೇಕ ಭಾಗವಾಗಿ ಅದನ್ನು ಕಟ್ಟುತ್ತಿದ್ದುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[೧೧] ಛತ್ರವನ್ನು ಕಟ್ಟಿಸುವುದು, ಬಡವರಿಗೆ, ಯಾತ್ರಾರ್ಥಿಗಳಿಗೆ ಅನ್ನಪಾನಾದಿಗಳ ವ್ಯವಸ್ಥೆ ಮಾಡುವುದು

---

೧. (ಮೈ) ಎಕ V ಮೈಸೂರು ೧೨೭ ಕ್ರಿ.ಶ. ೧೩ ಶಮಾ.

೨. ಎಸ್ಐಐ XV ಗದುಗು ೬೦೯ ಕ್ರಿ.ಶ. ೧೨೨೫.

೩. ಸೂಕ್ತಿಸುಧಾರ್ಣವಂ ೭-೭೫; ಶಿ.ಮರ ಪು. ೧೦೫-೧೦೬ ಇತ್ಯಾದಿ.

೪. ಬೇಲೂರಿನ ಚನ್ನಕೇಶವ ದೇವಾಲಯದ ಮದನಿಕೆ ವಿಗ್ರಹಗಳಲ್ಲಿ ಕೇಶಾಲಂಕಾರದ ವಿಗ್ರಹವೊಂದಿದೆ.ಎಸ್. ಶ್ರೀಕಂಠಶಾಸ್ತ್ರಿ (ಹೊಯ್ಸಳ ವಾಸ್ತುಶಿಲ್ಪ, ಪು. ೩೦ರ ಎದುರು ಚಿತ್ರ) ಇದೇ ರೀತಿ ಕೇಶಪಾಶದ ವಿಗ್ರಹ ಮುಂತಾದ ವಿಗ್ರಹಗಳನ್ನು ನೋಡಬಹುದು.

೫. ಕರ್ನಾಟಕದ ವೀರಗಲ್ಲುಗಳು ಗ್ರಂಥದಲ್ಲಿ ವೀರರ ವಿವಿಧ ಕೇಶ ವಿನ್ಯಾಸಗಳ ರೇಖಾ ಚಿತ್ರಗಳನ್ನು ನೀಡಲಾಗಿದೆ. ನೋಡಿ: ಚಿತ್ರಗಳು-೧೭೮ ರಿಂದ ೧೯೪. ಕೇಶ ವಿನ್ಯಾಸದ ವಿವರಗಳಿಗೆ ನೋಡಿ- ಕನ್ನಡ ಶಾಸನ ಶಿಲ್ಪ ಚಿತ್ರಗಳು. ಪು. ೧೮೯-೧೯೩.

೬. (ರೈ) ಎಕ XII ಶಿರಾ ೬೧ ಕ್ರಿ.ಶ. ೧೧೬೭; ಎಸ್ಐಐ VI ಮಡಕಸಿರ ೫೫೭ ಕ್ರಿ.ಶ. ೧೧೬೮.

೭. ಮ. ಶ್ರೀಧರಮೂರ್ತಿ : ೬೪ ಕಲೆಗಳು ಪು. ೨೭-೨೮. ಇದನ್ನು ಶ್ರೀಧರ ಗೋಸ್ವಾಮಿ ಅವರು ಚಿತ್ರಶಾಕಾ ಪೂಪಭಕ್ಷ್ಯವಿಕಾರ ಕ್ರಿಯಾ ಎಂದು ಕರೆದಿದ್ದಾರೆ.

೮. ಎಸ್.ಎನ್. ಕೃಷ್ಣ ಜೋಯಿಸ್ : ಸೂಪಶಾಸ್ತ್ರ-ಪೀಠಿಕೆ, ಪು. VIII.

೯. ಲೋಕೋಪಕಾರಂ : ೮ನೆಯ ಅಧ್ಯಾಯ.

೧೦. ಜ್ಯೋತ್ಸ್ನಾಕಾಮತ್ : 'ಕನ್ನಡಿಗರ ಆಹಾರ ಸಂಸ್ಕೃತಿ' ಇದ ಸಂ. ಪು ೨೨೧-೨೨೪.

೧೧. ಎಸ್ಐಐ XX ಸಿಂದಗಿ ೧೧ ಕ್ರಿ.ಶ. ೧೧೮೭.

ಧರ್ಮಕಾರ್ಯಗಳಲ್ಲಿ ಒಂದೆಂಬ ಭಾವನೆ ಆಳವಾಗಿ ಇದ್ದಿತು. ಶಾಸನಗಳು ಅನೇಕ ದಾನಿಗಳನ್ನು 'ಅನ್ನದಾನ ವಿನೋದಿ'ಗಳೆಂದು ಕರೆದಿವೆ.[1] ಆದಿಗೌಂಡನು ಹಸಿದವರ ಮುಖವನ್ನು ನೋಡುತ್ತಿರಲಿಲ್ಲವೆಂದೂ ಹಸಿವು ಬಾಯಾರಿಕೆಗಳು ಅವನನ್ನು ನೋಡಿದ ಕೂಡಲೆ ಮಾಯವಾಗುತ್ತಿದ್ದವೆಂದೂ ಎಳೆಯ ಮಕ್ಕಳಿಗೆ ಹಾಲನ್ನೂ ಹಸಿದವರಿಗೆ ಅನ್ನವನ್ನೂ ಅವನು ನಿತ್ಯವೂ, ಬರಗಾಲದಲ್ಲಿಯೂ ಸಲ್ಲಿಸುವ ವ್ಯಕ್ತಿಯಾಗಿದ್ದನು ಎಂದು ಶಾಸನವೊಂದು ತಿಳಿಸುತ್ತದೆ.[2]

ಶಾಸನಗಳಲ್ಲಿ ಆಹಾರ ಪಾನೀಯಗಳಿಗೆ ಸಂಬಂಧಿಸಿದ ಹಾಗೆ ದೊರೆಯುವ ಮಾಹಿತಿಗಳನ್ನು ಎರಡಾಗಿ ವಿಂಗಡಿಸಬಹುದು. ದೇವಾಲಯಗಳಲ್ಲಿ ದೇವರ ಪ್ರಸಾದಕ್ಕಾಗಿ ತಯಾರಾಗುತ್ತಿದ್ದ ಆಹಾರ ಪದಾರ್ಥಗಳು. ಎರಡನೆಯದು ಛತ್ರ, ಮನೆ ಮುಂತಾದೆಡೆ ತಯಾರಾಗುತ್ತಿದ್ದ ಆಹಾರ ಪದಾರ್ಥಗಳು.

ದೇವಸ್ಥಾನಗಳಲ್ಲಿ ಪೂಜಾಸಮಯದಲ್ಲಿ ದೇವರಿಗಾಗಿ ಅರ್ಪಿಸಲು ತಯಾರಾಗುತ್ತಿದ್ದ ಆಹಾರ ಪದಾರ್ಥಗಳನ್ನು ಪ್ರಸಾದವೆಂದು ಕರೆಯಲಾಗುತ್ತದೆ. ದೇವರನ್ನು ಮಾನವನಂತೆ ಭಾವಿಸಿ ಮಾನವ ತನ್ನ ಎಲ್ಲ ಅಗತ್ಯಗಳನ್ನು, ಭೋಗಗಳನ್ನು ದೇವರಿಗೂ ಆರೋಪಿಸಿ ಆ ಎಲ್ಲವನ್ನೂ ದೇವರಿಗೆ ಅರ್ಪಿಸುವ ಪದ್ಧತಿ ಬಹು ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ. ಅದನ್ನೇ ಅಂಗಭೋಗ, ರಂಗಭೋಗ ಎಂದು ಶಾಸನಗಳು ಕರೆದಿರುವುದು. ದೇವಾಲಯಗಳಲ್ಲಿ ದೇವರಿಗೆ ಅರ್ಪಿಸುವ ಆಹಾರ ಪದಾರ್ಥಗಳ ವಿವರಗಳು ಶಾಸನಗಳಲ್ಲಿ ಕಂಡುಬಂದರೆ, ಅರಮನೆಗಳ ಆಹಾರ ಪದಾರ್ಥಗಳ ವಿವರಗಳು ಕಾವ್ಯಗಳಿಂದ ಅಧಿಕವಾಗಿ ತಿಳಿದು ಬರುತ್ತವೆ. ಶ್ರೀವೈಷ್ಣವ ದೇವಾಲಯಗಳಲ್ಲಿ ಅಮೃತಪಡಿಗಾಗಿ ಕೊಡುತ್ತಿದ್ದ ನಿತ್ಯಪಡಿಯಲ್ಲಿ ಆಹಾರ ಪದಾರ್ಥಗಳ ಹೆಚ್ಚು ವಿವರಗಳು ದೊರೆಯುತ್ತವೆ.

ದೇವಸ್ಥಾನಗಳಲ್ಲಿ ದೇವರಿಗೆ ಅರ್ಪಿಸುತ್ತಿದ್ದ ಆಹಾರವನ್ನು ಶಾಸನಗಳು ಉಪ್ಪಾರ, ಉಪಾರ (< ಸಂ.ಉಪಾಹಾರ) ಎಂದು ಕರೆದಿವೆ.[3] ನೈವೇದ್ಯವಿಡುತ್ತಿದ್ದ ಪಾತ್ರೆಯನ್ನು ಉಪಾರ ಗಡುಗೆ[4] ಎಂದು ಕರೆದಿದೆ. ದೇವಾಲಯಗಳಿಗೆ ಸಂಬಂಧಿಸಿದಂತೆ ಬರುವ ಕೆಲವು ನೈವೇದ್ಯ ಪದಾರ್ಥಗಳನ್ನು ಗಮನಿಸಬಹುದು. ಅನೇಕ ಶಾಸನಗಳು ಹಾಲುಮಂಡಗೆಯ ಉಲ್ಲೇಖವನ್ನು ಮಾಡುತ್ತವೆ.[5] ಕೆಲವು ಶಾಸನಗಳು ಕಣಿಕದ ಮಂಡಗೆ[6]ಯನ್ನು ಉಲ್ಲೇಖಿಸುತ್ತವೆ. ಶಾಸನಗಳು ಅಕ್ಕಿಪಾಯಸ,[7] ತುಯ್ಯಲು,[8] ಹುಗ್ಗಿ,[9] ಮೊಸರೋಗರ,[10] ಪಾಯಸ,[11] ಥಳವಳಿಗೆಯ(?) ಪಕ್ವಾನ್ನ,[12] ಫಲವಳಿಗೆಯ ಚಕ್ಕುಲಿ,[13] ಮೃಷ್ಟಾನ್ನಕ್ಕಿಯ ನೈವೇದ್ಯ,[14]

---

೧. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.
೨. (ರೈ) ಎಕ V ಬೇಲೂರು ೧೩೭ ಕ್ರಿ.ಶ. ೧೧೮೨.
೩. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.
೪. (ರೈ) ಎಕ VI ಕಡೂರು ೪೯ ಕ್ರಿ.ಶ. ೧೨೯೧.
೫. ಎಸ್‌ಐಐ XV ಹುನಗುಂದ ೨೦೩ ಕ್ರಿ.ಶ. ೧೩೦೭; (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.
೬. ಎಸ್‌ಐಐ IX(i) ಆಲೂರು ೩೭೬ ಕ್ರಿ.ಶ. ೧೨೭೬.
೭. ಅದೇ.
೮. ಎಸ್‌ಐಐ XV ಗದಗು ೪೮ ಕ್ರಿ.ಶ. ೧೧೫೨. ಹಾಲು ಸಕ್ಕರೆ ಮುಂತಾದ ಪದಾರ್ಥಗಳನ್ನು ಹಾಕಿ ತಯಾರಿಸಿದ ಒಂದು ಬಗೆಯ ಪಾಯಸ. ವಡ್ಡಾರಾಧನೆ, ಧರ್ಮಾಮೃತ ಮುಂತಾದ ಕೃತಿಗಳು ತುಯ್ಯಲನ್ನು ಉಲ್ಲೇಖಿಸುತ್ತವೆ.
೯. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.
೧೦. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.
೧೧. ಎಸ್‌ಐಐ XX ಶಿರಹಟ್ಟಿ ೧೩೭ ಕ್ರಿ.ಶ. ೧೧೬೧.
೧೨. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.
೧೩. ಅದೇ. ಫಲವಳಿಗೆ=ಮಂಟಪಕ್ಕೆ ಕಟ್ಟುವ ಎಲೆ, ವಸ್ತ್ರ, ಹಣ್ಣು, ಆಹಾರ ಪದಾರ್ಥ ಮೊದಲಾದವು. ಫಲವಳಿಗೆಯ ಚಕ್ಕುಲಿ -ಹೀಗೆ ಮಂಟಪಕ್ಕೆ ಕಟ್ಟಲು ತಯಾರಿಸಿದ ಚಕ್ಕುಲಿಗಳಾಗಿರಬಹುದು.
೧೪. ಎಸ್‌ಐಐ VII ಬಾರಕೂರು ೩೫೪ ಕ್ರಿ.ಶ. ೧೩೧೫.

ಪಂಚಭಕ್ಷ್ಯ,[೧] ಪಂಚಾಮೃತ,[೨] ಪಕ್ವಾನ್ನ[೩] ಮುಂತಾದುವನ್ನು ಉಲ್ಲೇಖಿಸುತ್ತವೆ. ಶಾಸನವೊಂದು ಉಲ್ಲೇಖಿಸುವ ಹಚ್ಚಂಬಲೆ[೪] ಹಸಿರು ಸೊಪ್ಪನ್ನು ಹಾಕಿ ತಯಾರಿಸಿದ ಅಂಬಲಿ ಇರಬಹುದು.

ಸಾಮಾನ್ಯವಾಗಿ ದೇವಾಲಯಗಳಲ್ಲಿ ಸಸ್ಯಾಹಾರ ಪದಾರ್ಥಗಳ ನೈವೇದ್ಯವೇ ಅಧಿಕವಾಗಿ ಕಂಡು ಬರುವುದಾದರೂ ವಿರಳವಾಗಿ ಕೋಲಾರಮ್ಮನ ದೇವಾಲಯದಲ್ಲಿ ಮಾಂಸಮದ್ಯಗಳ ಸಮರ್ಪಣೆ ಕಂಡು ಬರುತ್ತದೆ. ಆ ಕಾಲದ ಪ್ರಸಿದ್ಧ ಶಾಕ್ತ ಕೇಂದ್ರವಾಗಿದ್ದ ಆ ದೇವಾಲಯದಲ್ಲಿ ಸಪ್ತಮಾತೃಕೆಯರ ಆರಾಧನೆ ವಿಶೇಷವಾಗಿ ನಡೆಯುತ್ತಿದ್ದಿತು. ಅಲ್ಲಿ ಯೋಗಿನಿ ಯೋಗೀಶ್ವರರ ಪೂಜೆಗಾಗಿ ನಿಗದಿತ ಪ್ರಮಾಣದ ಮದ್ಯ ಮತ್ತು ಕುರಿಗಳನ್ನು ಅರ್ಪಿಸುತ್ತಿದ್ದ ವಿಷಯ ಶಾಸನವೊಂದರಿಂದ ತಿಳಿದುಬರುತ್ತದೆ.[೫]

ಅಡುಗೆಗಾಗಿ ಬಳಸುತ್ತಿದ್ದ ವಿವಿಧ ತರಕಾರಿಗಳನ್ನು ಶಾಸನಗಳು ಬಾಡುಕಾಯಿ ಎಂದು ಕರೆಯುತ್ತವೆ. ಬೇರೆ ಬೇರೆ ತರಕಾರಿಗಳನ್ನು ಹೆಸರಿಸುವುದೂ ಉಂಟು.[೬] ಬಾಡು ಪದಕ್ಕೆ 'ಮ್ಲಾನೇ, ಮಾಂಸೇ, ಶಾಕೇ ಚ' ಎಂದು ಶಬ್ದಮಣಿದರ್ಪಣದ ಧಾತು ಪಾಠದಲ್ಲಿ ಕೊಡಲಾಗಿದೆ.'[೭] (ಬಾಡಿದ ಮಾಂಸ, ತರಕಾರಿ ಎಂಬ ಅರ್ಥಗಳು). ಈಗಲೂ ಬಾಡು ಪದಕ್ಕೆ ಮಾಂಸ ಎಂಬ ಅರ್ಥವಿದೆ.

ಶಾಸನಗಳು ವಿಶೇಷವಾಗಿ ಹೆಸರಿಸುವ ಗಂಧಶಾಲಿ ಅಕ್ಕಿಯನ್ನು ಸುಗಂಧಶಾಲಿ ಅಕ್ಕಿ ಎಂದೂ ಕರೆಯುತ್ತಿದ್ದರು. ಆ ಕಾಲದಲ್ಲಿ ಈ ಅಕ್ಕಿ ತುಂಬಾ ಪ್ರಖ್ಯಾತವಿದ್ದಂತಿದೆ.[೮]

ಜೋಳದ ಉಲ್ಲೇಖ ಕೆಲವು ಶಾಸನಗಳಲ್ಲಿ ಬಂದಿದೆ.[೯] ಗೋದಿಯನ್ನೂ ಬಳಸುತ್ತಿದ್ದರು. ಅದು ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[೧೦] 'ರಾಗಿ ಬಡವರ ಆಹಾರವಾಗಿ ಬಹುಕಾಲದಿಂದಲೂ ಬಳಕೆಯಾಗಿರುವುದಾದರೂ ಕ್ರಿ.ಶ. ೧೦ನೆಯ ಶತಮಾನದ ಮುಂದೆ ಸಾಹಿತ್ಯ ಶಾಸನಗಳಲ್ಲಿ ಉಲ್ಲೇಖಗೊಂಡಂತಿಲ್ಲ. ಇದು ೧೫ನೆಯ ಶತಮಾನದ ಮಧ್ಯಭಾಗದಲ್ಲಿ ಬೇಸಾಯದ ಬೆಳೆಗಳಲ್ಲಿ ಒಂದಾಯಿತೆಂಬ ಅಭಿಪ್ರಾಯವಿದೆ.'[೧೧] ಶಾಸನಗಳು ಬೆಲ್ಲ, ಉಪ್ಪು, ಮೆಣಸು, ಸಂಭಾರ, ಏಲಕ್ಕಿ, ಅರಸಿನ ಮುಂತಾದ ಪದಾರ್ಥಗಳನ್ನು ಹೆಸರಿಸುತ್ತವೆ.[೧೨] ಶಾಸನಗಳು ಬೇಳೆ, ಕಡಲೆ ಮುಂತಾದುವನ್ನೂ ಹೆಸರಿಸುತ್ತವೆ.

---

೧. (ರೈ) ಎಕ XI ದಾವಣಗೆರೆ ೪೯ ಕ್ರಿ.ಶ. ೧೨೮೦(?) ಪಂಚಭಕ್ಷ್ಯಗಳು- ಅತಿರಸ, ಹೋಳಿಗೆ, ಲಡ್ಡು, ಜಿಲೇಬಿ, ಅಪೂಪ. ಶ್ರೀವತ್ಸ ನಿಘಂಟು ಪು. ೩೦. ಅತಿರಸ- ಅಕ್ಕಿ ತೆಂಗಿನಕಾಯಿ ಬೆಲ್ಲ ಇವುಗಳನ್ನು ರುಬ್ಬಿ ಅಥವಾ ಅರೆದು ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ಭಕ್ಷ್ಯ. ಅಪೂಪ-ದೋಸೆ, ಒಬ್ಬಟ್ಟು, ಇಡ್ಡಲಿ, ಅಪ್ಪ ಮುಂತಾದ ತಿನಿಸುಗಳು.

೨. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬. ಪಂಚಾಮೃತ ಅಭಿಷೇಕಕ್ಕೆ ಉಪಯೋಗಿಸುತ್ತಿದ್ದ ಐದು ಮಧುರ ಪದಾರ್ಥಗಳು- ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆಗಳ ಮಿಶ್ರಣ.

೩. (ರೈ) ಎಕ XII ಚಿಕ್ಕನಾಯಕನಹಳ್ಳಿ ೨ ಕ್ರಿ.ಶ. ೧೨೬೧. ಪಕ್ವಾನ್ನ ಎನ್ನುವುದು ಥಳವಳಿಗೆಯ ಪಕ್ವಾನ್ನದಿಂದ ಭಿನ್ನವಾಗಿರಬೇಕು.

೪. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೫. (ರೈ) ಎಕ X ಕೋಲಾರ ೧೦೮ ಕ್ರಿ.ಶ. ೧೦೭೧.

೬ ಎಸ್ಐಐ XV ಬಾಗೇವಾಡಿ ೫೪೫ ಕ್ರಿ.ಶ. ೧೧೬೫.

೭. ಶಮದ ಪು. ೨೮೭.

೮. (ರೈ) ಎಕ V ಅರಸಿಕೆರೆ ೪೦ ಕ್ರಿ.ಶ. ೧೨೦[illegible]; (ರೈ) ಎಕ V ಅರಸಿಕೆರೆ ೪೮ ಕ್ರಿ.ಶ. ೧೧೮೯; ಎಇ XIX ರೋಣ ೨೨೬ ಕ್ರಿ.ಶ. ೧೧೭೯.

೯. ಎಸ್ಐಐ XV ನವಲಗುಂದ ೧೪೯ ಕ್ರಿ.ಶ. ೧೧೯೦; ಎಇ XX ರೋಣ ೧೨ಎ ಕ್ರಿ.ಶ. ೧೧೬೭.

೧೦. (ಮೈ) ಎಕ V ತಿ.ನರಸೀಪುರ ೮೮ ಕ್ರಿ.ಶ. ೧೨೭೬.

೧೧. ಬಿ.ಜಿ.ಎಲ್. ಸ್ವಾಮಿ : ಶಾಸನಗಳಲ್ಲಿ ಗಿಡಮರಗಳು, ಪು. ೧೯.

೧೨. (ರೈ) ಎಕ IX ದೊಡ್ಡಬಳ್ಳಾಪುರ ೩೧ ಕ್ರಿ.ಶ. ೧೨೬೭.

ಕನ್ನಡ ಕಾವ್ಯಗಳು ವೈವಿಧ್ಯಮಯವಾದ ಆಹಾರ ಪದಾರ್ಥಗಳನ್ನು ನಿರೂಪಿಸುತ್ತವೆ. ವಡ್ಡಾರಾಧನೆ, ಧರ್ಮಾಮೃತ ಮುಂತಾದ ಕೃತಿಗಳು ವಿವಿಧ ಆಹಾರ ಪದಾರ್ಥಗಳನ್ನು ತಿಳಿಸುತ್ತವೆ. ಬಸವರಾಜ ದೇವರ ರಗಳೆಯು ಮಂಡಗೆ, ಗಾರಿಗೆ, ಹೂರಿಗೆ, ಹಾಲೋಗರ, ಸಣ್ಣಸೇವಗೆ, ಸರವಳಿಗೆ, ಸಣ್ಣ ಸರವಳಿಗೆ ಮುಂತಾದ ನಾನಾ ಪದಾರ್ಥಗಳನ್ನು ಹೆಸರಿಸುತ್ತದೆ.[೧] ಕಾವ್ಯಗಳು ಆಹಾರ ಪದಾರ್ಥಗಳ ತುಂಬ ವೈವಿಧ್ಯಮಯವಾದ ಚಿತ್ರವನ್ನು ಕೊಡುತ್ತವೆ. ಅವುಗಳನ್ನು ಇಲ್ಲಿ ವಿಸ್ತರಿಸುವುದಿಲ್ಲ.

ಛತ್ರಗಳಲ್ಲಿ ಪ್ರವಾಸಿಗರಿಗೆ, ಕೆಲವು ಸಾರಿ ವಿದ್ಯಾರ್ಥಿಗಳಿಗೆ ಭೋಜನ ವ್ಯವಸ್ಥೆಯನ್ನು ಕಲ್ಪಿಸಲಾಗುತ್ತಿತ್ತು. ಛತ್ರವೊಂದರಲ್ಲಿ ತಯಾರಿಸುತ್ತಿದ್ದ ಅಡುಗೆಯ ಕೆಲವು ಪದಾರ್ಥಗಳ ವಿವರಗಳು ಕಂಡು ಬರುತ್ತವೆ. 'ಮೇಲೋಗರ, ಮೆಣಸು ಮೇಲೋಗರ, ಪಳಿದ್ಯ ನಾಲ್ಕು ಬಗೆ... ಉಪ್ಪಿನಕಾಯಿ, ಮಜ್ಜಿಗೆ'[೨] ಇವುಗಳನ್ನು ಶಾಸನ ಹೆಸರಿಸುತ್ತದೆ. ಈ ಎಲ್ಲವೂ ವ್ಯಂಜನ ಪದಾರ್ಥಗಳಾಗಿವೆ.

ಈ ಕಾಲದಂತೆ ಆಗಲೂ ಸಾಮಾನ್ಯವಾಗಿ ಊಟದ ಕೊನೆಯ ಭಾಗ ಮಜ್ಜಿಗೆ ಆಗಿರುತ್ತಿತ್ತು. ಇಬ್ನಬಟೂಟನು ಊಟದ ಬಗ್ಗೆ ಹೇಳುತ್ತಾ ಮಜ್ಜಿಗೆ ಬಡಿಸಿದರೆ ಊಟಮಾಡಬೇಕಾದ್ದು ಮತ್ತೇನೂ ಇಲ್ಲವೆಂದು ಅರ್ಥ ಎಂದು ತಿಳಿಸಿದ್ದಾನೆ.[೩]

ಪ್ರಾಚೀನರು ಹಾಲು, ಮೊಸರು, ತುಪ್ಪ,[೪] ಮಜ್ಜಿಗೆ ಇವುಗಳ ವಿಶೇಷ ರುಚಿಯನ್ನು ಅರಿತಿದ್ದರು.[೫] ಪೋಲಾಳ್ವ ದಂಡನಾಥನನ್ನು ಕೀರ್ತಿಸುತ್ತಾ ಒಂದು ಶಾಸನ[೬] 'ಪೊಗಳ್ದಿಂದನ್ಯರನಂಣ್ಣ ಪೇಳ್ ಪೊಗಳ್ವುದೇ ಹಾಲುಂಡ ಮೇಲುಣ್ಬುದೇ' ಎಂದು ಹೇಳುತ್ತದೆ. ಹಾಲು ಕುಡಿದ ಮೇಲೆ ಹೇಗೆ ಅನ್ಯಪಾನೀಯ ರುಚಿಸುವುದಿಲ್ಲವೋ ಹಾಗೆಯೇ ಪೋಲಾಳ್ವನನ್ನು ಕೀರ್ತಿಸಿದ ಮೇಲೆ ಅನ್ಯರನ್ನು ಕೀರ್ತಿಸಲು ಸಾಧ್ಯವಿಲ್ಲವೆನ್ನುತ್ತದೆ. ಸೋಮೇಶ್ವರ ಶತಕದಲ್ಲಿಯೂ 'ಹಾಲುಂಡ ಮೇಲುಂಬರೇ' ಎಂಬ ಮಾತು ಬರುತ್ತದೆ. ಈ ಮಾತು ಆ ಕಾಲದಲ್ಲಿ ಒಂದು ನುಡಿಗಟ್ಟಾಗಿ ಬಳಕೆಯಾಗುತ್ತಿದ್ದಿತೆಂದು ಭಾವಿಸಬಹುದು.

ಕರ್ನಾಟಕದ ಹೆಚ್ಚಿನ ಸಂಖ್ಯೆಯ ಜನ ಸಸ್ಯಾಹಾರಿಗಳಾಗಿದ್ದರೂ ಸಾಕಷ್ಟು ಸಂಖ್ಯೆಯಲ್ಲಿ ಮಾಂಸಾಹಾರಿಗಳೂ ಇದ್ದರೆಂದು ಕಾಣುತ್ತದೆ. ಎ.ಎಸ್. ಆಲ್ಟೇಕರ್ ಅವರು ಅಭಿಪ್ರಾಯ ಪಡುವಂತೆ ಬ್ರಾಹ್ಮಣರು ಸುಮಾರು ೯ನೆಯ ಶತಮಾನದವರೆಗೂ ಮಾಂಸಾಹಾರಿಗಳಾಗಿದ್ದರೆಂದು ತಿಳಿಸುತ್ತಾರೆ.[೭] ಕರ್ನಾಟಕದಲ್ಲಿ ಬ್ರಾಹ್ಮಣರು ಮಾಂಸಭಕ್ಷಣೆಯನ್ನು ಮಾಡುತ್ತಿದ್ದರೆಂಬುದಕ್ಕೆ ದುರ್ಗಸಿಂಹ, ಬ್ರಹ್ಮಶಿವ ಮತ್ತು ವಚನಕಾರರ ಕೃತಿಗಳು ಆಧಾರಗಳಾಗಿರುವುದನ್ನು ಎಂ. ಚಿದಾನಂದಮೂರ್ತಿಯವರು ತೋರಿಸಿಕೊಟ್ಟಿದ್ದಾರೆ. ಬ್ರಾಹ್ಮಣರು ಮಧ್ಯಕಾಲೀನಯುಗದ ಬಳಿಕ- ಯಾವಾಗ ತಿಳಿಯದು- ಲಿಂಗಾಯತ ಮತದ ಪ್ರಭಾವದಿಂದಾಗಿ ಪೂರ್ಣ ಸಸ್ಯಾಹಾರಿಗಳಾದಂತೆ ಕಾಣುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.[೮]

---

೧. ಬದೇರ ಸ್ಥಲ ೫ ಪು. ೨೮.

೨. ಕಇ VI ಅಂಕೋಲ ೭೯ ಕ್ರಿ.ಶ. ೧೩೫೦.

೩. ಪ್ರಕಂಇ ೨ ಪು. ೯೬-೯೭.

೪. ಧರ್ಮಾಮೃತಂ ೧-೭೫ 'ಘೃತಮಿಲ್ಲದೂಟ'.

೫. ಅದೇ, ೧-೨ 'ಪಾಲೇ ಮರ್ದಂಬಂತಿರೆ...'

೬. (ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪; ಮಲ್ಲಿದೇವ ಎನ್ನುವವನನ್ನು ಕುರಿತು ವರ್ಣಿಸುತ್ತಾ 'ಹಾಲುಂಡ ಮೇಲುಂಬುದೇ' ಎಂದು ಮತ್ತೊಂದು ಶಾಸನ ಹೇಳುತ್ತದೆ. ಕಇ II ಜತ್ ೨೬ ಕ್ರಿ.ಶ. ೧೧೭೪.

೭. A. S. Altekar : ಪೂರ್ವೋಕ್ತ ಪು. ೭೭.

೮. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ ಪು. ೫೨.

ಅಂತೂ ಈಗಿನಂತೆ ಪ್ರಾಚೀನ ಕರ್ನಾಟಕದಲ್ಲಿ ಸಸ್ಯಾಹಾರಿ ಮತ್ತು ಮಾಂಸಾಹಾರಿ ಜನರು ಇದ್ದುದು ಸ್ಪಷ್ಟವಿದೆ. ಈ ನೂರಾರು ವರ್ಷಗಳಲ್ಲಿ ಆಹಾರ ಪದಾರ್ಥಗಳ ವಿಷಯದಲ್ಲಿ ಅಂತಹ ದೊಡ್ಡ ವ್ಯತ್ಯಾಸ ಆದಂತೆ ತಿಳಿದುಬರುವುದಿಲ್ಲ.

ಭಾರತೀಯ ಸಂಸ್ಕೃತಿಯಲ್ಲಿ ತಾಂಬೂಲಕ್ಕೆ ವಿಶೇಷವಾದ ಪ್ರಾಶಸ್ತ್ಯವಿದ್ದಿತು.[೧] ಅದು ನಿತ್ಯಜೀವನದ ಅಗತ್ಯವಸ್ತುಗಳಲ್ಲಿ ಒಂದಾದಂತೆ, ಪೂಜೆ, ಉತ್ಸವ, ಶುಭ ಸಂದರ್ಭ, ಯುದ್ಧ ಮುಂತಾದ ನಾನಾ ಸಂದರ್ಭಗಳಲ್ಲಿ ಅದರ ಬಳಕೆಯ ವ್ಯಾಪ್ತಿ ಹರಡಿದೆ. ಅಡಕೆ ಎಲೆಗಳು ಈ ನಾಡಿನ ಮೂಲ ಬೆಳೆಗಳಲ್ಲವೆಂದೂ ಅವು ಹೊರದೇಶದಿಂದ ಬಂದು ಹಿಂದೂ ಸಂಸ್ಕೃತಿಯ ನೇಯ್ಗೆಯಲ್ಲಿ ಸೇರಿಕೊಂಡ ಎಳೆಗಳೆಂದು ಬಿ.ಜಿ.ಎಲ್. ಸ್ವಾಮಿಯವರು ಅಭಿಪ್ರಾಯಪಟ್ಟಿದ್ದಾರೆ.[೨] ಎಲೆ ಬೆಳೆಯುವ ಉದ್ಯಮ ಹತ್ತು- ಹನ್ನೆರಡನೆಯ ಶತಮಾನದಲ್ಲಿ ತುಂಬಾ ವ್ಯಾಪಕವಾಗಿದ್ದಿತು. ಅದನ್ನು ಬೆಳೆಯುವ, ಕತ್ತರಿಸುವ, ಸಂಗ್ರಹಿಸುವ, ಮಾರಾಟ ಮಾಡುವ ನಾನಾ ಹಂತಗಳಲ್ಲಿ ಶ್ರೇಣಿಗಳು ರಚನೆಯಾಗಿದ್ದುದು ಅದರ ವಹಿವಾಟಿನ ವ್ಯಾಪಕತೆಗೆ ಸಾಕ್ಷಿಯಾಗಿದೆ. ಎಲೆಯ ವ್ಯಾಪಾರವನ್ನು ಮಾಡುತ್ತಿದ್ದವರು ತಂಬುಲಿಗರು. ಅವರ ವರ್ತಕ ಶ್ರೇಣಿಯ ಹೆಸರು ತಂಬುಲಿಗೆ ಸಾಸಿರ್ವರು.[೩]

ಆ ಕಾಲದಲ್ಲಿ ರಾಜರಿಗೆ ಎಲೆ ಅಡಕೆಯನ್ನು ಸಿದ್ಧಮಾಡಿಕೊಡಲು ಅಡಪದವರು ಇರುತ್ತಿದ್ದರು. ಎಲೆ ಅಡಕೆ ಸುಣ್ಣ ಮುಂತಾದುವನ್ನು ಇಟ್ಟುಕೊಳ್ಳುತ್ತಿದ್ದ ಚೀಲವನ್ನು ಅಡಪವೆಂದು ಕರೆಯುತ್ತಿದ್ದರು. ಹಡಪದ[೪] ಸಾಯಣ್ಣನ ಉಲ್ಲೇಖ ಒಂದು ಶಾಸನದಲ್ಲಿದೆ.[೫] ಕನ್ನಡ ಸಾಹಿತ್ಯ ಕೃತಿಗಳು ಎಲೆ ಅಡಕೆಯ ಆರೋಗ್ಯಕಾರಕ ಗುಣವನ್ನೂ ಅದರ ಸವಿಯನ್ನೂ ವಿಸ್ತಾರವಾಗಿಯೇ ನಿರೂಪಿಸಿವೆ. ವಿದೇಶೀಯ ಪ್ರವಾಸಿಗರೂ ಕೂಡ ತಾಂಬೂಲದ ಮಹತ್ವವನ್ನು ಗುರುತಿಸಿದ್ದಾರೆ.[೬]

ಆ ಕಾಲದ ಸಾಮಾನ್ಯ ಪದ್ಧತಿಯಂತೆ ಪ್ರತಿಯೊಂದು ವೃತ್ತಿ ಅಥವಾ ಜಾತಿಯವರು ಪ್ರತ್ಯೇಕ ಬೀದಿಗಳಲ್ಲಿ ವಾಸಿಸುತ್ತಿದ್ದರು. ಅಡುಗೆಯನ್ನು ಮಾಡುವ ವೃತ್ತಿಯವರಾದ 'ಬಾಣಸಿಗರು' ಬಾಣಸುಗೇರಿಯಲ್ಲಿ ವಾಸಿಸುತ್ತಿದ್ದರು. ಬಾಣಸುಗೇರಿಯ ಉಲ್ಲೇಖ ಶಾಸನ ಒಂದರಲ್ಲಿ ಬಂದಿದೆ.[೭] ಅನೇಕ ದೇವಾಲಯಗಳಲ್ಲಿ, ಛತ್ರಗಳಲ್ಲಿ ನಿಯುಕ್ತರಾದ ಬಾಣಸಿಗರ ಉಲ್ಲೇಖಗಳು ದೊರೆಯುತ್ತವೆ.[೮] ಛತ್ರದಲ್ಲಿ 'ಅಟ್ಟಿಕ್ಕುವ ಬ್ರಾಹ್ಮಣಿತಿ'ಯರನ್ನು ಒಂದು ಶಾಸನ ಉಲ್ಲೇಖಿಸುತ್ತದೆ.[೯]

ಅಡುಗೆಯನ್ನು ತಯಾರಿಸಲು, ಬಡಿಸಲು ಬಳಸುತ್ತಿದ್ದ ಪಾತ್ರೆಗಳನ್ನು ಭಾಜನ, ಭಾಂಡ ಎಂದು ಕರೆಯುತ್ತಿದ್ದರು. ಇವು ಹಿತ್ತಾಳೆ, ತಾಮ್ರ ಮತ್ತು ಮಣ್ಣಿನ ಮಡಕೆಗಳಾಗಿರುತ್ತಿದ್ದವು. ಶ್ರೀಮಂತರು ಬೆಳ್ಳಿಯ ಪಾತ್ರೆ-ತಟ್ಟೆಗಳನ್ನು ಬಳಸುತ್ತಿದ್ದರು. ಊಟದ ತಟ್ಟೆಯನ್ನು 'ಕಂಚು'[೧೦] ಎಂದು ಕರೆಯುತ್ತಿದ್ದರು. ವೆಣ್ಣಲೆಸೆಟ್ಟಿಕವ್ವೆಯ ಮಹತ್ವವನ್ನು ನಿರೂಪಿಸುತ್ತಾ ಒಂದು

---

೧. ಕೆ. ಶ್ರೀಕಂಠಯ್ಯ : 'ಕನ್ನಡ ಕಾವ್ಯಗಳಲ್ಲಿ ತಾಂಬೂಲ ಚರ್ವಣ' ಕಸಾಪಪ ೬೬:೧, ಪು. ೨೬-೩೪.

೨. ಬಿ.ಜಿ.ಎಲ್. ಸ್ವಾಮಿ : ಪೂರ್ವೋಕ್ತ ಪು. ೨೫-೨೬.

೩. ಬಿ.ಆರ್. ಹಿರೇಮಠ : ಪೂರ್ವೋಕ್ತ ಪು. ೯೯.

೪. ಅಡಪ ಮೂಲ ಪದವಾಗಿದ್ದು ಹಡಪ ರೂಪ ವಿಶೇಷ ತಿದ್ದುವಿಕೆಯಿಂದ (Hyper correction) ಬಂದಿರಬೇಕು. ಹಡಪದ ಅಪ್ಪಣ್ಣ ಮತ್ತು ಹಡಪದ ರೇಚಣ್ಣ ಎಂಬ ಶಿವಶರಣರು ಕಲ್ಯಾಣದಲ್ಲಿದ್ದರು. ಹಡಪ= ಕ್ಷೌರಿಕರು ತಮ್ಮ ಉಪಕರಣವನ್ನಿಟ್ಟುಕೊಳ್ಳುವ ಪೆಟ್ಟಿಗೆ. ಈಗಲೂ ಆ ಅರ್ಥದಲ್ಲಿ ಬಳಸುತ್ತಾರೆ.

೫. (ಮೈ) ಎಕ VI ಕೃಷ್ಣರಾಜಪೇಟೆ ೧೦೦ ಕ್ರಿ.ಶ. ೧೩೦೩.

೬. ಕೆ. ಶ್ರೀಕಂಠಯ್ಯ ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಪು. ೩೭೯-೮೪.

೭. ಎಸ್ಐಐ XV ಬಾಗೇವಾಡಿ ೫೪೫ ಕ್ರಿ.ಶ. ೧೧೬೫.

೮. (ರೈ) ಎಕ V ಬೇಲೂರು ೮೯ ಕ್ರಿ.ಶ. ೧೨೮೦.

೯. ಕಇ II ಅಥಣಿ ೨೧ ಕ್ರಿ.ಶ. ೧೧೪೭.

೧೦. ಬವ ೨೫೭, ೮೬೦. ಕಂಚನ್ನು ಊಟದ ತಟ್ಟೆಯಾಗಿ ಮತ್ತು ಕನ್ನಡಿಯಾಗಿ ಬಳಸುತ್ತಿದ್ದರು. 'ಉಂಬ ಬಟ್ಟಲು ಬೇಱೆ ಕಂಚಲ್ಲ; ನೋಡುವ ದರ್ಪಣ ಬೇಱೆ ಕಂಚಲ್ಲ.' ಕನ್ನಡಿಯಾಗಿ ಬಳಸುತ್ತಿದ್ದ ಕಂಚಿಗೆ ವಿಶೇಷ ಹೊಳಪನ್ನು ಕೊಡುತ್ತಿದ್ದಿರಬೇಕು.

ಶಾಸನ ಸ್ತ್ರೀಯರು ಯಾವಾಗಲೂ ಗೃಹಕೃತ್ಯದಲ್ಲಿಯೇ ತೊಡಗಿರುವರೆಂದು ತಿಳಿಸುತ್ತದೆ. ಈಗಿನಂತೆ ಆ ಕಾಲದಲ್ಲಿಯೂ ಗೃಹಕೃತ್ಯದ ಜವಾಬ್ದಾರಿ ಸ್ತ್ರೀಯರ ಮೇಲೆಯೇ ಇದ್ದಿತು.

ಮಡದಿಯರಾವಗಂ (ಕೆ) ರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗಂ
ಕೊಡನೂರಲಕ್ಕಿಯೆಂಬುವನೆ ಚಿಂತಿಸಿ ಕೋಟಲೆಗೊಂಬರಲ್ಲದೇಂ
ಮ್ರಿಡನನ ಸುಪ್ರತಿಷ್ಠೆಯನೆ ಮಾಡಿಸಿ ಕಲ್ಲೆಸನದಿಂದೆ ಗೇಹಮಂ
ಪೊಡವಿಯೊಳೊಪ್ಪೆ ಮಾಡಿಪರೆ ಸಂಸ್ತುತೆ ವೆಣ್ಣಲೆಸಟ್ಟಿಕವ್ವೆವೊಲುಂ॥[೧]

ಸ್ತ್ರೀಯರು ಯಾವಾಗಲೂ ಕೆರಸಿ (ಅಗಲಬಾಯಿಯ ಬಿದಿರು ಕುಕ್ಕೆ), ಕಾವಲಿ (ಹೆಂಚು), ಹುಟ್ಟು (ಮರದ ಉದ್ದನೆಯ ಸೌಟು), ಸಟ್ಟುಗ (ಸೌಟು- ಲೋಹದ್ದಿರಬಹುದೆ?) ಕೊಡ, ಒರಲು, ಅಕ್ಕಿ ಮುಂತಾದ ವಿಷಯಗಳನ್ನೇ ಚಿಂತಿಸುತ್ತಾ ಕಷ್ಟಪಡುತ್ತಾರೆಂದೂ ಆದರೆ ವೆಣ್ಣಲೆಸಟ್ಟಿಕವ್ವೆ ಆ ರೀತಿ ಮಾಡದೆ ದೇವಾಲಯವನ್ನು ಕಟ್ಟಿಸಿ ಶಿವನ ಪ್ರತಿಷ್ಠೆ ಮಾಡಿಸಿದ ವಿಷಯವನ್ನು ತಿಳಿಸುತ್ತದೆ. ಧರ್ಮಾಮೃತದಲ್ಲಿ ಒರಲಿನ ಉಲ್ಲೇಖ ಬರುತ್ತದೆ.[೨]

**ಪಾನೀಯಗಳು:**

ಪ್ರಾಚೀನ ಕಾಲದಿಂದಲೂ ಕನ್ನಡಿಗರಿಗೆ ಪಾನೀಯಗಳ ತಯಾರಿಕೆ ಚೆನ್ನಾಗಿ ತಿಳಿದಿತ್ತು. ಬಾಯಾರಿದ ಪ್ರಯಾಣಿಕರಿಗಾಗಿ ನೀರನ್ನು ಒದಗಿಸಲು ಅರವಟ್ಟಿಗೆಗಳನ್ನು ನಿರ್ಮಿಸುತ್ತಿದ್ದುದು ಪ್ರಖ್ಯಾತ ವಿಷಯವಾಗಿದೆ. ಲೋಕೋಪಕಾರದಲ್ಲಿ ವಿವಿಧ ಫಲಗಳಿಂದ ರಸವನ್ನು ತೆಗೆದು ಅದನ್ನು ಸಂರಕ್ಷಿಸಿಡುವ ವಿಧಾನವನ್ನು ಹೇಳಲಾಗಿದೆ. ಮಾವು, ಮಾದಲ, ಅಜನೇಜಿ್ಲ, ಹಲಸು, ಬಾಳೆಯಕಾಯಿ ಇವುಗಳಿಂದ ರಸವನ್ನು ತೆಗೆಯುವ ವಿಧಾನವನ್ನು ನಿರೂಪಿಸಲಾಗಿದೆ.[೩] ಜಿನನಿಗೆ ಅಭಿಷೇಕ ಮಾಡಬೇಕೆಂದು ಹೇಳುವ ರಸಗಳಲ್ಲಿ ಕಬ್ಬಿನ ರಸವೂ ಇದ್ದಿತು.[೪] ಹಾಲು, ಮಕ್ಕಳಿಗೆ ವಿಶೇಷವಾದ ಪಾನೀಯವಾಗಿದ್ದಿತು. ಹಾಲು, ಮಜ್ಜಿಗೆಗಳು ಜನಪ್ರಿಯ ಪಾನೀಯಗಳಾಗಿದ್ದುದು ಸ್ಪಷ್ಟವೇ ಇದೆ.

ಪಾನೀಯವಾಗಿ ಮದ್ಯ ಆ ಕಾಲದಲ್ಲಿಯೂ ಇದ್ದಿತು. ಕೋಲಾರದ ತಮಿಳು ಶಾಸನದಲ್ಲಿ ಸಪ್ತಮಾತೃಕೆಯರ ಪೂಜೆಗಾಗಿ ಕುರಿಯೊಂದಿಗೆ ನಿರ್ದಿಷ್ಟ ಪ್ರಮಾಣದ ಸುರೆಯನ್ನೂ ಸಲ್ಲಿಸಲು ಹೇಳಿದೆ.[೫] ಮದ್ಯವನ್ನು ಕಳ್ಳು ಎಂದೂ ಕರೆಯುತ್ತಿದ್ದರು. ಪಂಪನು ಮುನ್ನೂರ ಅರವತ್ತು ಜಾತಿಯ ಕಳ್ಳುಗಳನ್ನು ಹೆಸರಿಸುತ್ತಾನೆ.[೬] ಕಳ್ಳನ್ನು ಕುಡಿಯುವಾಗ ಅನುಸರಿಸುತ್ತಿದ್ದ ಕೆಲವು ಶಿಷ್ಟಾಚಾರಗಳನ್ನು ಮತ್ತು ಕುಡಿಯುವಾಗ ನೆಂಚಿಕೊಳ್ಳುತ್ತಿದ್ದ ಬಿದಿರ ಕುಡಿಯ (ಬಿದಿರ ಕಳಿಲೆಯ), ಮಾವಿನ ಮಿಡಿಯ, ಮಾರುಡಿನ (ಬಿಲ್ವಪತ್ರೆಕಾಯಿಯ ತಿರುಳಿನ), ಮೆಣಸುಗಡಲೆಯ (ಮೆಣಸು ಕಾರದ ಕಡಲೆಗಳ) ಪುಡಿಯೊಳಡಸಿದ (ಪುಡಿಯಲ್ಲಿ ತುಂಬಿದ), ಅಲ್ಲ(ದ)ಣಿಗೆಯ (ಹಸಿಶುಂಠಿಯ ಮಿಶ್ರಣವನ್ನುಳ್ಳ), ಚಕ್ಕಣಂಗಳ (ಮದ್ಯ ಕುಡಿಯುವಾಗ ನೆಂಚಿಕೊಳ್ಳುತ್ತಿದ್ದ ಕಾರದ ಮಾಂಸದ ತುಂಡು- ಪ್ರಾ. ಚಖ್ಖಣ : ಸಂ. ಚಕ್ಷಣ) ವಿಷಯಗಳನ್ನು ನಿರೂಪಿಸುತ್ತಾನೆ. ಅಲ್ಲದೆ ಮಧು, ಸೀಧು, ಕಟುಸೀಧು, ಮಾರೀಚಿ, ತೊಡರ್ಪುಕಳ್ ಮುಂತಾದ ಕಳ್ಳುಗಳನ್ನು ಹೆಸರಿಸಿದ್ದಾನೆ. ಕಳ್ಳು ಕುಡಿಯುವುದು ಕೆಟ್ಟದ್ದು ಎಂಬುದು

---

೧. ಕ಼ IV ಹಿರೇಕೆರೂರು ೧ ಕ್ರಿ.ಶ. ೧೨೦೪.

೨. ಧರ್ಮಾಮೃತಂ ಪು. ೩೪.

೩. ಲೋಕೋಪಕಾರಂ ೮-೩೨, ೩೩, ೩೪, ೩೫.

೪. ಧರ್ಮಾಮೃತಂ ೧೦-೨೧.

೫. (ರೈ) ಎಕ X ಕೋಲಾರ ೧೦೮ ಕ್ರಿ.ಶ. ೧೦೭೧.

೬. ಪಂಪಭಾರತಂ ೪-೮೭ರನಂತರದ ಗದ್ಯ ೮೮.

ಆಗಿನ ಸಾಮಾನ್ಯ ಅಭಿಪ್ರಾಯವಾಗಿದ್ದಿತು.[೧] ಆದರೂ ಆ ಕಾಲದಲ್ಲಿ ಮದ್ಯಪಾನ ವ್ಯಾಪಕವಾಗಿ ಇದ್ದಿತೆಂದು ಕಾಣುತ್ತದೆ. ಮಾನಸೋಲ್ಲಾಸ ಕೋಶಗ್ರಂಥವು (೧೧೨೬-೧೧೩೮) ಕರ್ನಾಟಕದಲ್ಲಿ ೧೦-೧೨ನೇ ಶತಮಾನದಲ್ಲಿ ಪ್ರಚಲಿತವಿದ್ದ ಹತ್ತಾರು ಮದ್ಯ ಪ್ರಕಾರಗಳನ್ನು ಅವನ್ನು ತಯಾರಿಸುವ ಬಗೆಯನ್ನು ಕೊಡ ಮೂಡುತ್ತದೆ; ಕಾವ್ಯ, ಶಿಲ್ಪ, ಭಿತ್ತಿ ಚಿತ್ರಗಳಲ್ಲಿ ಕಂಡುಬರುವ ಕನ್ನಡಿಗರ ಸುರಪಾನ ಪರಂಪರೆಯ ಒಂದು ಚಿತ್ರವನ್ನೂ ಜ್ಯೋತ್ಸ್ನಾಕಾಮತ್ ನೀಡಿದ್ದಾರೆ.[೨] ಈಚಲು, ಬೆಲ್ಲಗಳಿಂದ ಸೊಗಸಾದ ಮದ್ಯವನ್ನು ತಯಾರಿಸುತ್ತಿದ್ದರೆಂದು ಮಾರ್ಕೊಪೋಲೋ ಹೇಳಿದ್ದಾನೆ.[೩] ಮಾವು, ದಾಳಿಂಬೆ, ಬೇಲದ ಹಣ್ಣುಗಳ ತಿರುಳಿನಿಂದ ತಯಾರಿಸಿದ ಪಾನೀಯವನ್ನು ಕೆಡದ ಹಾಗೆ ಇಡುವ ವಿಧಾನವನ್ನು ಲೋಕೋಪಕಾರ ತಿಳಿಸುತ್ತದೆ. ಮದ್ಯಪಾನ ಮಾಡುವವರನ್ನು, ಸಮುದ್ರಯಾನ ಮಾಡುವವರನ್ನು ಜಾಮೀನು ತೆಗೆದುಕೊಳ್ಳಕೂಡದೆಂಬ ನಿಯಮವನ್ನು ಇಲ್ಲಿಯ ಜನ ಮಾಡಿದ್ದಾರೆ ಎಂದು ಅವನು ತಿಳಿಸಿದ್ದಾನೆ.[೪] ವಚನಕಾರರು ಅನೇಕ ಸಾಮಾಜಿಕ ಅನಿಷ್ಟಗಳ ವಿರುದ್ಧ ಧ್ವನಿ ಎತ್ತಿದಂತೆ ಮದ್ಯಪಾನವನ್ನೂ ವಿರೋಧಿಸಿದ್ದಾರೆ.[೫] ಕೆಲವು ಶಾಸನಗಳ ಶಾಪಾಶಯಗಳ ಭಾಗದಲ್ಲಿ, ದಾನವನ್ನು ಅಪಹರಿಸಿದವರು ಸುರಾಪಾನಕ್ಕೆ ಎಳಸಿದವರು ಎಂದು ಹೇಳಿದೆ. ಈ ಮೂಲಕ ಸುರಾಪಾನಕ್ಕೆ ಸಾಮಾಜಿಕವಾಗಿ ಇದ್ದ ಹೀನಸ್ಥಾನವನ್ನು ಅವು ಸೂಚಿಸುತ್ತವೆ.[೬]

●●

---

೧. ಧರ್ಮಾಮೃತಂ : ಪು. ೩೦೮. 'ಕಳ್ಳುಡಿವರನೇಕೆ ಪೊಲ್ಲರೆಂಬಂತೆ ಪಾಲ್ಗುಡಿವರನೇಕೆ ಪೊಲ್ಲರೆನ್ನರ್'.

೨. 'ಕನ್ನಡಿಗರ ಸುರಪಾನ ಪರಂಪರೆ' ಇದ ೧೬ ಪು ೧೭೦-೭೩

೩. ಪ್ರಕ೯೦ ೨ ಪು. ೩೯.

೪. ಅದೇ, ಪು. ೨೯.

೫. ಪಿ.ವಿ. ನಾರಾಯಣ ಪೂರ್ವೋಕ್ತ, ಪು. ೩೫೨.

೬. (ರೈ) ಎಕ XVI ಚಿಕ್ಕನಾಯಕನಹಳ್ಳಿ ೮೭ ಕ್ರಿ.ಶ. ೧೩೪೦.

## ೧೯. ಅಧ್ಯಯನ ಕಾಲದ ಶಾಸನಗಳ ವೈಶಿಷ್ಟ್ಯ

ಭಾರತದಲ್ಲಿ ಕರ್ನಾಟಕ, ಶಾಸನ ಸಂಪತ್ತಿಗೆ ಪ್ರಸಿದ್ಧವಾಗಿದೆ. ಶಾಸನಗಳ ಸಂಖ್ಯೆಯ ದೃಷ್ಟಿಯಿಂದ ಭಾರತದಲ್ಲಿಯೇ ತಮಿಳಿನನಂತರ ಎರಡನೆಯ ಸ್ಥಾನವನ್ನು ಪಡೆದಿದೆ.[೧] ಸಾಹಿತ್ಯಗುಣ ಮತ್ತು ವೈವಿಧ್ಯಗಳಿಂದ ಕನ್ನಡ ಶಾಸನಗಳು ಭಾರತದಲ್ಲಿಯೇ ಅದ್ವಿತೀಯವೆಂದು ಹೇಳಬಹುದು. ಕನ್ನಡ ನಾಡಿನ ಯಾವುದೇ ಒಂದು ಹಳ್ಳಿಗೆ ಹೋದರೂ ಒಂದಲ್ಲ ಒಂದು ಶಾಸನ ಕಣ್ಣಿಗೆ ಬೀಳುತ್ತದೆ ಎಂಬಷ್ಟರ ಮಟ್ಟಿಗೆ ಅದರ ವಿಪುಲತೆ ಖ್ಯಾತವಾಗಿದೆ. ನಮ್ಮ ಅಧ್ಯಯನಾವಧಿಯಲ್ಲಿ ಸುಮಾರು ನಾಲ್ಕು ಸಾವಿರಕ್ಕೂ ಹೆಚ್ಚು ಶಾಸನಗಳು ದೊರೆತಿವೆ. ಈ ಅವಧಿಯ ಶಾಸನ ಸಾಹಿತ್ಯ ಸಂಪದ್ಯುಕ್ತವೂ ಮಹತ್ವಪೂರ್ಣವೂ ಆಗಿದೆ.

ಶಾಸನಗಳು ತಮ್ಮಲ್ಲಿ ಒಳಗೊಂಡ ವಿಷಯಗಳ ದೃಷ್ಟಿಯಿಂದ, ರಚನಾಮಾಧ್ಯಮ ಮತ್ತು ರೀತಿಯಿಂದ ಬಹು ಮಹತ್ವವನ್ನು ಪಡೆದಿವೆ. ಒಂದು ಸಾಲಿನ(ಶಿಲ್ಪಿಗಳ ಹೆಸರು) ಶಾಸನಗಳಿಂದ ಹಿಡಿದು ೧೨೦ ಸಾಲುಗಳನ್ನು ದಾಟಿದ ದೀರ್ಘ ಶಾಸನಗಳೂ ಇವೆ. ಚಂಪೂ ಸಾಹಿತ್ಯದ ಹಿನ್ನೆಲೆಯಲ್ಲಿ ಮೂಡಿಬಂದ ಆ ಕಾಲದ ಕೆಲವು ಶಾಸನಗಳಂತೂ ಶಿಲಾರೂಪದ ಸಂಕ್ಷಿಪ್ತಾಕೃತಿಯ ಕಾವ್ಯಗಳಾಗಿವೆ. ಜನ್ನ, ಪಾರ್ಶ್ವನಾಥರಂಥ ಪ್ರಖ್ಯಾತ ಕವಿಗಳು ಆರಂಭದಲ್ಲಿ ಶಾಸನಗಳನ್ನು ಬರೆದು ತಮ್ಮ ಕೈ ಪಳಗಿಸಿಕೊಂಡಿರಬಹುದೆಂದು ಕನ್ನಡ ಸಾಹಿತ್ಯ ಇತಿಹಾಸದ ವಿದ್ವಾಂಸರು ಭಾವಿಸಿದ್ದಾರೆ.

ಕನ್ನಡ ಶಾಸನಗಳು ಕಾವ್ಯಗಳ ದಟ್ಟವಾದ ಪ್ರಭಾವಕ್ಕೆ ಒಳಗಾಗಿವೆ. ಪಂಪ, ರನ್ನರ ಕಾವ್ಯಗಳ ಪ್ರಭಾವ ಸಾಹಿತ್ಯಪರಂಪರೆಯ ಮೇಲೆ ಆದಂತೆ ಶಾಸನ ಸಾಹಿತ್ಯದ ಮೇಲೆಯೂ ಆಗಿದೆ. ರಗಳೆ, ತ್ರಿಪದಿ, ಪಿರಿಯಕ್ಕರಗಳನ್ನು ಅಲ್ಲಲ್ಲಿ ಬಳಸಿರುವುದುಂಟು.[೨] ಇವು ಚಂಪೂ ಸಾಹಿತ್ಯ ಕೃತಿಗಳಲ್ಲಿ ಕಂಡು ಬರುವ ಪದ್ಧತಿಯಂತೆಯೇ ಇವೆ. ವಚನ ಸಾಹಿತ್ಯ, ಹರಿಹರನ ರಗಳೆ, ರಾಘವಾಂಕನ ಷಟ್ಪದಿಯಾಗಲಿ ಶಾಸನ ಸಾಹಿತ್ಯವನ್ನು ಅಷ್ಟಾಗಿ ತಟ್ಟಲೇ ಇಲ್ಲ. ಇಡೀ ಶಾಸನ ಸಾಹಿತ್ಯ ಉದ್ದಕ್ಕೂ, ಚಂಪೂವಿನ ಬಿಗಿ ಹಿಡಿತ ದಲ್ಲಿಯೇ ಸಾಗಿ ಬಂದಿದೆ.

ಶಾಸನ ರಚನೆ ಸುಮಾರು ಹತ್ತನೆಯ ಶತಮಾನದ ಹೊತ್ತಿಗೆ ಒಂದು ಖಚಿತ ಕ್ರಮವನ್ನು ರೂಪಿಸಿಕೊಂಡಿದ್ದಿತ್ತು. ಅದರ ಒಂದು ಕ್ರಮವಿಕಾಸವನ್ನು ಈ ಕಾಲದ ಶಾಸನಗಳಲ್ಲಿ ಕಾಣುತ್ತೇವೆ. ಶಾಸನಗಳಲ್ಲಿ ದಾನ ಶಾಸನಗಳದು ಬಹುದೊಡ್ಡ ಪಾಲೇ ಇದೆ. ದಾನ ಶಾಸನಗಳು ಒಂದು ನಿಶ್ಚಿತ ಚೌಕಟ್ಟಿನಲ್ಲಿ ಸಾಗಿವೆ.[೩] ಅವು ಮಂಗಳ ಪದ್ಯದಿಂದ ಪ್ರಾರಂಭವಾಗಿ (ಇದು ಆಯಾ

---

೧. ಪಿ.ಬಿ. ದೇಸಾಯಿ : ಕನ್ನಡ ನಾಡಿನ ಶಾಸನಗಳು ಪು. ೪೦.

೨. ಎಂ.ಎಂ. ಕಲಬುರ್ಗಿಯವರು ಶಾಸನವ್ಯಾಸಂಗ ಗ್ರಂಥದ 'ಶಾಸನ ಛಂದಸ್ಸು' ಎಂಬ ಲೇಖನದಲ್ಲಿ ಶಾಸನಗಳಲ್ಲಿ ಪ್ರಯೋಗವಾದ ವಿವಿಧ ಪ್ರಕಾರಗಳ ಛಂದಸ್ಸಿನ ಅಭ್ಯಾಸವನ್ನು ಮಾಡಿದ್ದಾರೆ. ಶಾಸನವ್ಯಾಸಂಗ ೧ ಪು. ೬೨ - ಎಪಿಗ್ರಾಫಿಯ ಕರ್ನಾಟಿಕಾದ ಹೊಸ ಸಂಪುಟಗಳಲ್ಲಿ ಆಯಾ ಸಂಪುಟಗಳ ಛಂದಸ್ಸನ್ನು ಕುರಿತ ಚರ್ಚೆಯನ್ನು ನೋಡಬಹುದು.

೩. ಎಂ. ಹನುಮಂತರಾವ್ : 'ವಸ್ತು, ಸಾಹಿತ್ಯಮೌಲ್ಯ, ವಿಶೇಷತೆ.' ಕನ್ನಡ ಸಾಹಿತ್ಯ ಚರಿತ್ರೆ ೪- ೧ ಪು. ೨೭೦- ೨೭೧.

ಧರ್ಮಕ್ಕೆ ಸಂಬಂಧಿಸಿದವು ಅಥವಾ ಸಮನ್ವಯಸ್ವರೂಪದವು), ಆಳುತ್ತಿರುವ ರಾಜನ ಪ್ರಶಂಸೆ, ಅವನ ವಂಶವರ್ಣನೆ, ದೇಶ ಪ್ರಶಂಸೆ, ಭೂವಲಯ - ಭಾರತ - ಕರ್ನಾಟಕ ನಾಡು - ವರ್ಣನೆ ಅಲ್ಲಿಯ ಆಡಳಿತದ ಅಧಿಕಾರಿ - ದಾನಿಗಳ ವಿವರ - ವಂಶವಿವರ - ದಾನ ಪಡೆದವರ ವಿವರಗಳು, ದಾನದ ಸಂದರ್ಭ- ದಾನದ ಕಾಲ - ದಾನದ ಭೂಮಿಯ ಸೀಮಾ ವಿವರ, ದಾನದ ಸಾಕ್ಷಿಗಳು, ಶಾಸನ ಬರೆದ ವ್ಯಕ್ತಿ ರೂವಾರಿ ಮುಂತಾದವರ ವಿವರ, ಪುಣ್ಯಾಶಯ ಮತ್ತು ಶಾಪಾಶಯ ಇವುಗಳೊಂದಿಗೆ ಮುಗಿಯುತ್ತದೆ. (ಆದರೆ ಕೆಲವು ಶಾಸನಗಳು ಸಂಕ್ಷಿಪ್ತವಾಗಿಯೂ ಇರುವುದುಂಟು.) ಈ ಸಾಮಾನ್ಯ ಚೌಕಟ್ಟಿನಲ್ಲಿ ಕೆಲವು ಸಾರಿ ಅನೇಕ ಒಳ ವ್ಯತ್ಯಾಸಗಳನ್ನು ಮಾಡಿಕೊಂಡಿರುವ ಶಾಸನಗಳು ಇವೆ. ಕೆಲವು ಶಾಸನಗಳು ರಾಜರ ವಂಶಾವಳಿಯನ್ನು ಬಹಳ ವಿವರವಾಗಿ ಕೊಟ್ಟರೆ, ಕೆಲವು ದಾನಿಯ ವಂಶಾವಳಿಯನ್ನು ಅಧಿಕವಾಗಿ ನೀಡುವುದುಂಟು. ಹತ್ತನೆಯ ಶತಮಾನದಿಂದ ಶಾಸನಗಳು ಕ್ರಮವಾಗಿ ವಿಸ್ತಾರವಾಗುತ್ತಾ ನಡೆದಿರುವುದನ್ನು ಗಮನಿಸಬಹುದು. ಚಾಳುಕ್ಯರು ಅಧಿಕಾರಕ್ಕೆ ಬಂದನಂತರ ಶಾಸನಗಳು ವಿಸ್ತಾರವಾಗುವ ಪ್ರವೃತ್ತಿಯನ್ನು ಮಾಧವ ಎನ್ ಕಟ್ಟಿಯವರು ಗುರುತಿಸಿ ಇದು ವಿಜಯನಗರ ಸಾಮ್ರಾಜ್ಯದ ಅವನತಿಯವರೆಗೂ ಮುಂದುವರೆದಿರುವುದನ್ನು ಗುರುತಿಸುತ್ತಾರೆ.[೧] ಕೆಲವು ಶ್ರೀ ವೈಷ್ಣವ ದೇವಾಲಯಗಳಿಗೆ ಸೇರಿದ ದಾನಶಾಸನಗಳಂತೂ ದೇವಾಲಯಗಳಿಗೆ ಸಂಬಂಧಿಸಿದಂತೆ ಹೆಚ್ಚು ವಿಸ್ತಾರವಾಗಿ ವಿವರಗಳನ್ನು ನೀಡುತ್ತವೆ.[೨]

ಶಾಸನಗಳಲ್ಲಿ ವೀರಗಲ್ಲಿನ ಪಾಠ ಸಂಪೂರ್ಣವಾಗಿ ಭಿನ್ನವಾಗಿರುತ್ತದೆ. ವೀರಗಲ್ಲಿನ ಶಿಲ್ಪಗಳ ಪಟ್ಟಿಕೆಗಳ ಮಧ್ಯದ ಭಾಗಗಳಲ್ಲಿ ಹೆಚ್ಚಿನ ಶಾಸನಪಾಠಗಳು ದೊರೆಯುತ್ತವೆ. ಈ ಶಾಸನಗಳಲ್ಲಿ ವಿಸ್ತಾರಕ್ಕೆ ಅವಕಾಶ ಕಡಿಮೆ; ಸಂಕ್ಷಿಪ್ತತೆಗೆ ಪ್ರಾಶಸ್ತ್ಯ. ಹೀಗಾಗಿ ರಾಜನ ವಂಶಾವಳಿಗಾಗಲಿ, ನಾಡು ದೇಶ ಮುಂತಾದ ವಿವರಗಳಿಗಾಗಲಿ ಅವಕಾಶ ಇಲ್ಲವೆಂದೇ ಹೇಳಬಹುದು. ವೀರಗಲ್ಲಿನಲ್ಲಿ ವೀರನಿಗೇ ಪ್ರಾಶಸ್ತ್ಯ ಅವುಗಳಲ್ಲಿ ವೀರನು ಯಾವ ಯುದ್ಧದಲ್ಲಿ ಯಾರ ಪರವಾಗಿ ಹೋರಾಡಿದ, ಅವನ ಶೌರ್ಯಪ್ರದರ್ಶನದ ವರ್ಣನೆ, ಬಿಟ್ಟ ದತ್ತಿ - ಸಂಕ್ಷಿಪ್ತ ಶಾಪಾಶಯ ಸಾಮಾನ್ಯವಾಗಿ ನಿರೂಪಣೆ ಹೊಂದಿರುತ್ತವೆ. ವಿರಳವಾಗಿ ಶಾಸನಕಾರ ಶಿಲ್ಪಿಗಳ ಹೆಸರುಗಳಿರುತ್ತವೆ.[೩]

ಸಾಮಾನ್ಯವಾಗಿ ವೀರಗಲ್ಲುಗಳಂತೆ ನಿಷಿದಿಕಲ್ಲುಗಳ ಮತ್ತು ಮಾಸ್ತಿಕಲ್ಲುಗಳ ಶಾಸನಪಾಠವೂ ಸಂಕ್ಷಿಪ್ತವಾಗಿಯೇ ಇರುವುದನ್ನು ಗುರುತಿಸಬಹುದು. ಸಾಮಾನ್ಯವಾಗಿ ಈ ಶಾಸನಗಳೂ ಗದ್ಯದಲ್ಲಿಯೇ ಅಧಿಕವಾಗಿರುವುದಾದರೂ ಸಮಾಧಿ ವಿಧಿಯಿಂದ ಮರಣಹೊಂದಿದ ವಿಷಯವನ್ನು ವೃತ್ತಗಳಲ್ಲೂ ನಿರೂಪಿಸಿರುವುದುಂಟು. ಹರ್‍ಯಲೆ ಶಾಸನದಲ್ಲಿ ಒಂದು ಪಂಚಪಾದ ವೃತ್ತವೂ ಕಂಡುಬರುತ್ತದೆ.[೪]

ಕಾವ್ಯಮಯವಾದ ಅನೇಕ ಶಾಸನಗಳು ದೊರೆಯುವುದಾದರೂ ನೇರ ಕಾವ್ಯಗಳೇ ಶಾಸನಗಳ ಮೇಲೆ ಕೆತ್ತಲ್ಪಟ್ಟಿರುವುದು ಕಡಿಮೆ ಎಂದೇ ಹೇಳಬಹುದು. ಬೊಪ್ಪಣ ಪಂಡಿತನ ಗೊಮ್ಮಟ ಸ್ತುತಿ ಶಿಲೆಯ ಮೇಲೆ ಕೊರೆದಿರುವ ಅತಿ ವಿರಳವಾದ ಏಕೈಕ ಕಾವ್ಯವೆಂಬ ಹೆಗ್ಗಳಿಕೆಗೆ ಪಾತ್ರವಾಗಿತ್ತು. ಆದರೆ ಇತ್ತೀಚೆಗೆ ದೊರೆತ [೫] 'ವಿವಾಹ ಪುರಾಣ' ದ ಶಾಸನ ವಿಶೇಷವಾಗಿ

---

೧. Madhava.N. katti: 'Later kannada Inscriptions of karnataka': Archaeology of karnataka. ಪು. ೧೬೪- ೬೫.

೨. (ಮೈ) ಎಕ V ತಿ. ನರಸೀಪುರ ೮೮ ಕ್ರಿ.ಶ. ೧೨೭೬.

೩. ಆರ್. ಶೇಷಶಾಸ್ತ್ರಿ : ಕರ್ನಾಟಕದ ವೀರಗಲ್ಲುಗಳು ಪು. ೨೩೪ - ೨೩೫.

೪. (ರೈ) ಎಕ xii ತಿಪಟೂರು ೯೩ ಕ್ರಿ.ಶ. ೧೧೭೪.

೫. ಐಎಸ್ ಡಿ ದ. ಸೊಲ್ಲಾಪುರ ೪೦ ಕ್ರಿ.ಶ. ೧೨೦೦.

ಗಮನಾರ್ಹವಾದದ್ದು. ಇದು ಕಲ್ಲಿನ ಮೇಲಿದ್ದರೂ ಸ್ವತಂತ್ರ ಕಾವ್ಯವೇ ಆಗಿದೆ. ಈ ಶಾಸನ ಹಲವಾರು ದೃಷ್ಟಿಗಳಿಂದ ಮಹತ್ವಪೂರ್ಣವಾಗಿರುವುದನ್ನು ಎಂ. ಚಿದಾನಂದ ಮೂರ್ತಿಯವರು ತೋರಿಸಿಕೊಟ್ಟಿದ್ದಾರೆ.[೧]

ಚಾಳುಕ್ಯರ ಕಾಲದ ಶಾಸನಗಳಲ್ಲಿ ಶಿಲೆಗಳ ಮೇಲೆ ಶಾಸನಗಳನ್ನು ಕೆತ್ತುವಾಗ ಅಕ್ಷರಗಳನ್ನು ಸಣ್ಣದಾಗಿ ಕೊರೆಯುವ ಪ್ರವೃತ್ತಿ ಕಂಡು ಬರುತ್ತದೆ. ಚಾಳುಕ್ಯರಿಂದ ಹೊಯ್ಸಳರ ಕಾಲಕ್ಕೆ ಬರುವ ಹೊತ್ತಿಗೆ ಶಾಸನ ರಚನೆಯಲ್ಲಿ ಕೆಲವು ಮಾರ್ಪಾಟುಗಳು ಕಂಡು ಬರುತ್ತವೆ. ಶಾಸನ ಹೆಚ್ಚು ಕಲಾತ್ಮಕವಾಗಿ, ಸುಂದರವಾದ ಲಿಪಿಯಿಂದ ರಚಿತವಾಗತೊಡಗಿದವು. ಶಾಸನಕ್ಕಾಗಿ ಆಯ್ಕೆ ಮಾಡಿದ ಫಲಕವನ್ನು ಚೆನ್ನಾಗಿ ನಯಗೊಳಿಸಿ ಸರಿಯಾದ ಆಕಾರಕ್ಕೆ ತಂದು ಮೇಲ್ಭಾಗವನ್ನು ಕಲಾತ್ಮಕ ಆಕಾರಕ್ಕೆ ತರುವುದನ್ನು ಮತ್ತು ಇಡೀ ಶಾಸನ ಭಾಗಕ್ಕೆ ಅಂಚನ್ನು ಕಟ್ಟುವಂತೆ ಕಲ್ಲನ್ನು ಕೆತ್ತಿ ತಯಾರಿಸುವುದನ್ನು ಕಾಣುತ್ತೇವೆ. ಹೊಯ್ಸಳರ ಶಿಲ್ಪದಲ್ಲಿ ಸಾಮಾನ್ಯವಾಗಿ ಕಂಡುಬರುವ ಕುಸುರಿ ಕೆಲಸ ಮತ್ತು ನಯಗಾರಿಕೆಗಳಿಂದ ಶಾಸನವನ್ನು ಬರಿ ಶಾಸನವಾಗಿಸದೆ ಅದನ್ನೂ ಕಲಾತ್ಮಕ ಶಿಲ್ಪವಾಗಿ ರಚಿಸುವ ಪ್ರವೃತ್ತಿಯನ್ನು ಕಾಣುತ್ತೇವೆ. ಹರಿಹರದ ಪೋಲಾಳ್ವ ದಂಡನಾಥನ ಶಾಸನ, ಸೋಮನಾಥಪುರ ಮತ್ತು ಇತರ ಸ್ಥಳಗಳಲ್ಲಿರುವ ನೂರಾರು ಶಾಸನಗಳನ್ನು ಕಾಣಬಹುದು. ಶಾಸನಫಲಕದ ಕಲಾತ್ಮಕತೆಗೆ ಗಮನಹರಿಸಿದಂತೆ ಲಿಪಿಯ ಸೌಂದರ್ಯಕ್ಕೂ ಗಮನವನ್ನು ಕೊಟ್ಟಿದ್ದಾರೆ. ಶಾಸನಗಳಲ್ಲಿ ಬರುವ 'ಮುತ್ತಿನ ಸರಮಂ ಸಮೆದಂತೆ ಶಾನ್ತನೊ (ಳ್ಳ)ಕ್ಕರಮಂ//...[೨] 'ಸರಸತಿಯ ಕೊರಳ ಮುತ್ತವೊಲಿರೆ ವೃತ್ತಂ ಕೋಮಳಂ ಸುಭದ್ರಂ...[೩] ಎಂಬಂತಹ ಮಾತುಗಳು ಆ ಕಾಲದ ಶಿಲ್ಪಿಗಳ ರೂವಾರಿಗಳ ಕಲಾತ್ಮಕ ದೃಷ್ಟಿಯನ್ನು ತಿಳಿಸಿಕೊಡುತ್ತವೆ. ಶಾಸನ ಲಿಪಿಕಾರರು ತೋರುತ್ತಿದ್ದ ವೇಗ, ಕಲಾತ್ಮಕತೆ ಎಷ್ಟು ವಿಶಿಷ್ಟವಾಗಿದ್ದಿತೆಂದರೆ ಪ್ರಾಣಿಪಕ್ಷಿಗಳನ್ನು ಅಳವಡಿಸಿ ಸಾಲಂಕೃತ ಅಕ್ಷರಗಳನ್ನು ಬರೆಯುವುದಲ್ಲದೆ ಕೆಲವರಿಗೆ ತ್ವರಿತಲೇಖನವೂ ಒಂದು ಹೆಮ್ಮೆ ಎನಿಸಿದ್ದಿತು.[೪]

ಶಾಸನಗಳು ವಿಸ್ತಾರ ನಿರೂಪಣೆಗೆ ಒಲಿದಿರುವುದನ್ನು ಕಾಣಬಹುದು. ಪುಟ್ಟ ಕಾವ್ಯಗಳಂತೆ ಘಟನೆಗಳನ್ನು ನಿರೂಪಿಸುತ್ತಾ ಸಾಗುವುದನ್ನು ಕಾಣುತ್ತೇವೆ. ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನವಾಗಲಿ ಅಥವಾ ಹಳೆಯಬೀಡಿನ ಕುವರ ಲಕ್ಷ್ಮನ ಶಾಸನವಾಗಲಿ ಅವು ಶಾಸನಗಳೇ ಅಲ್ಲವೇನೋ ಎಂಬಂತೆ ವಿವರವಾಗಿ ವಿಷಯಗಳನ್ನು ನಿರೂಪಿಸುವುದನ್ನು ಕಾಣುತ್ತೇವೆ. ಕುವರಲಕ್ಷ್ಮನ ಶಾಸನದಂತೆ ಕಂಬಗಳ ಮೇಲೆ ದೊರೆಯುವ ಅಗ್ರಹಾರಬಾಚಹಳ್ಳಿಯ ಅನ್ವಯಾಗತ ಲೆಂಕವಾಳಿಯನ್ನು ನಿರೂಪಿಸುವ ಶಾಸನಗಳು ಗಮನಾರ್ಹವಾದವು.[೫] ಈ ಕಂಬ ಶಾಸನಗಳ ವಿಶೇಷತೆಯ ಬಗ್ಗೆ ಇನ್ನೂ ಅಧ್ಯಯನ ಆಗಬೇಕಾಗಿದೆ.

ವೀರಗಲ್ಲುಗಳ ನಿರ್ಮಾಣದ ಸಮೃದ್ಧಕಾಲದಲ್ಲಿ ಸಣ್ಣ ಪುಟ್ಟ ಕಾರಣಗಳಿಗೂ ವೀರಗಲ್ಲನ್ನು ನಿಲ್ಲಿಸುವ, ಶಾಸನ ಹಾಕಿಸುವ ಪರಿಪಾಠ ಬೆಳೆದುಬಂದಿದ್ದಿತೆಂದು ಕಾಣುತ್ತದೆ. ಕುವರ ಲಕ್ಷ್ಮನ ಶಾಸನ ಆ ಪ್ರವೃತ್ತಿಯನ್ನು ಸೂಕ್ಷ್ಮವಾಗಿ ಟೀಕಿಸುವುದನ್ನು ಕಾಣಬಹುದು.

> ಇಲ್ಲದ ಸಲ್ಲದ ಭಾಷೆಗೆ
> ಕಲ್ಲಂ ನಿ ಱಿ ಸುವರನುಱದೆ ನಗುವವೊಲಿರ್ಕುಂ

---

೧. "ಕನ್ನಡದ ಮೊತ್ತಮೊದಲ 'ಷಟ್ಪದ' ("ಅಂಶ ಷಟ್ಪದಿ") ಕಾವ್ಯ" ಸಾಧನೆ ೧೮ - ೧, ೨ ಪು. ೮ - ೨೯.

೨. ಕ ಇ V ಗದಗು ೩೮ ಕ್ರಿ.ಶ. ೧೧೬೪.

೩. (ರೈ) ಎಕ V ಅರಸಿಕೆರೆ ೧೨೩ ಕ್ರಿ.ಶ. ೧೨೩೭.

೪. ಎಂ.ಎಂ. ಕಲಬುರ್ಗಿ: ಶಾಸನ ವ್ಯಾಸಂಗ ೧ ಪು. ೨೯.

೫. (ಮೈ) ಎಕ vi ಕೃಷ್ಣರಾಜಪೇಟೆ ೮೨, ೮೪ ಕ್ರಿ.ಶ. ೧೨೫೬, ೧೨೯೧.

ಪಲ್ಲವಿಸಿ ಕುವರ ಲಕ್ಷ್ಮನ
ಕಲ್ಲ ಕವಲ್ತೆಸೆವ ಕಾಂತಿ ದಿಗ್ಭಿತ್ತಿಗಳೊಳ್[೧]

ಆ ಕಾಲದ ಶಾಸನಗಳು ಧಾರ್ಮಿಕ ದೃಷ್ಟಿಯಿಂದಲೂ ಗಮನಾರ್ಹವಾಗಿವೆ. ತಮಿಳುನಾಡಿಗೂ ಕನ್ನಡನಾಡಿಗೂ ಪರಸ್ಪರ ಸಂಪರ್ಕ ಬಹಳ ಹಿಂದಿನಿಂದಲೂ ಇದ್ದಿತು. ರಾಮಾನುಜಾಚಾರ್ಯರು ಕರ್ನಾಟಕಕ್ಕೆ ಬರುವುದರ ಮೂಲಕ ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮ ಹೆಚ್ಚಾಗಿ ಹರಡಲು ಕಾರಣವಾಯಿತು. ಶ್ರೀವೈಷ್ಣವ ಧರ್ಮಕ್ಕೆ ಸೇರಿದ ದೇವಾಲಯಗಳ, ಅಗ್ರಹಾರಗಳ ದಾನದತ್ತಿಗಳ ಶಾಸನಗಳಲ್ಲಿ ಅನೇಕ ತಮಿಳು ಪದಗಳು ಕಾಣಿಸಿಕೊಳ್ಳತೊಡಗಿದವು. (ಹಿಂದೆ ಈ ವಿಷಯ ಚರ್ಚಿಸಿದೆ). ಎರಡನೆಯ ಬಲ್ಲಾಳನ ಕಾಲದಲ್ಲಿ ಕನ್ನಡ ನಾಡಿಗೂ ತಮಿಳುನಾಡಿಗೂ ಹೆಚ್ಚು ರಾಜಕೀಯ ಸಂಬಂಧವೂ ಬೆಳೆಯಿತು. ಮುಂದೆ ಮೂರನೆಯ ನರಸಿಂಹ ಮತ್ತು ರಾಮನಾಥರ ಕಾಲದಲ್ಲಿ ಹೆಚ್ಚು ಸ್ಥಿರವಾದುದನ್ನು ಕಾಣುತ್ತೇವೆ. ಕರ್ನಾಟಕದ ಪ್ರಾಂತ್ಯದಲ್ಲಿ ದೊರಕಿದ ಸುಮಾರು ಒಂದು ಸಾವಿರ ತಮಿಳು ಶಾಸನಗಳಿವೆ. ಅವುಗಳಲ್ಲಿ ಅತ್ಯಂತ ಹೆಚ್ಚಿನ ತಮಿಳು ಶಾಸನಗಳು ದೊರೆಯುವ ಪ್ರದೇಶವೆಂದರೆ ಕೋಲಾರ ಜಿಲ್ಲೆ.[೨]

ಜೈನಧರ್ಮ ಈ ಕಾಲದಲ್ಲಿ ತನ್ನ ಪ್ರಭಾವವನ್ನು ಕಳೆದುಕೊಳ್ಳುತ್ತಾ ಶೈವಧರ್ಮದೊಂದಿಗೆ ಹೊಂದಿಕೊಳ್ಳುತ್ತಾ ಶ್ರೀ ವೈಷ್ಣವ ಧರ್ಮದೊಂದಿಗೆ ಘರ್ಷಣೆಗಳಲ್ಲಿ ಶಕ್ತಿಗುಂದುತ್ತಾ ಸಾಗಿರುವುದನ್ನು ಶಾಸನಗಳು ದಾಖಲಿಸಿವೆ. ಏಕಾಂತದ ರಾಮಯ್ಯನ ಶಾಸನ, ಅನಂತರ ಕಾಲದ ಬುಕ್ಕರಾಯನ ಶಾಸನಗಳು ಜೈನರಿಗೆ ಉಂಟಾಗುತ್ತಿದ್ದ ದುಸ್ಥಿತಿಯನ್ನು ಬಿಂಬಿಸುತ್ತವೆ.

ವೀರಶೈವ ಧರ್ಮ ದೇವಸ್ಥಾನ ನಿರ್ಮಾಣ ಕಾರ್ಯವನ್ನು ಅಷ್ಟಾಗಿ ಪ್ರೋತ್ಸಾಹಿಸಲಿಲ್ಲ, ಕೆಲವು ಮಟ್ಟಿಗೆ ನಿರಾಕರಿಸಿತು. ಹಾಗೆಯೇ ದೇವಾಲಯಗಳಿಗೆ ನೀಡುವ ದಾನದತ್ತಿಗಳನ್ನೂ ಅಷ್ಟಾಗಿ ಸಮ್ಮತಿಸಲಿಲ್ಲ. ಬಸವಣ್ಣನವರ ಒಂದು ವಚನ ದಾನವನ್ನೂ ದಾನಶಾಸನಗಳನ್ನೂ ಸೂಕ್ಷ್ಮವಾಗಿ ಟೀಕಿಸುವಂತೆ ಕಾಣುತ್ತದೆ.

ಹತ್ತು ಮತ್ತರು ಭೂಮಿ, ಬತ್ತದ ಹಯನು, ನಂದಾದೀವಿಗೆಯ
ಅವರ ನುಡಿಯನಡೆಸಿಹೆವೆಂಬವರ ಮುಖವ ನೋಡಲಾಗದು,
ಕೇಳಲಾಗದು..[೩]

ಆದರೆ ಕ್ರಮೇಣ ದೇವಾಲಯ ನಿರ್ಮಾಣ, ದಾನದತ್ತಿ ಸ್ವೀಕಾರ ಮುಂತಾದವುಗಳ ವಿಷಯದಲ್ಲಿ ಹೊಂದಾಣಿಕೆ ಮಾಡಿಕೊಂಡಿರುವುದು ಅರ್ಜುನವಾಡದ ಶಾಸನ, ಚೌಡದಾನಪುರದ ಶಾಸನಗಳಲ್ಲಿ ಪ್ರಕಟವಾಗಿದೆ.

ಮಧ್ವಾಚಾರ್ಯರಿಂದ ಪ್ರತಿಪಾದಿಸಲ್ಪಟ್ಟ ದ್ವೈತ ಸಿದ್ಧಾಂತ ಒಂದು ಪರಂಪರೆಯಾಗಿ ಹದಿಮೂರನೆಯ ಶತಮಾನದಲ್ಲಿ ಬೆಳೆಯಿತಾದರೂ ಅದು ಶಾಸನದಲ್ಲಿ ಅಧಿಕವಾಗಿ ಪ್ರತಿಫಲಿತವಾಗಿಲ್ಲವೆಂದೇ ಹೇಳಬಹುದು.

ಹೊಯ್ಸಳ, ಸೇವುಣ ರಾಜ್ಯಗಳ ಮೇಲೆ ದೆಹಲಿಯ ಸುಲ್ತಾನರ ದಾಳಿಯಾದದ್ದು ಅನೇಕ ಶಾಸನಗಳಲ್ಲಿ ನಿರೂಪಿತವಾಗಿದೆ. ಕಲ್ಯಾಣದ ಒಂದು ಶಾಸನ[೪] ಸುಲ್ತಾನ್ ಮಹಮ್ಮದ್ ತುಘಲಕ್‌ನ ಆಳ್ವಿಕೆಗೆ ಸಂಬಂಧಿಸಿದ್ದು, ಅವನ ಅಧಿಕಾರಿ ಮಹಾಪ್ರಧಾನ

---

೧. (ರೈ) ಎಕ V ಬೇಲೂರು ೧೧೨ ಕ್ರಿ.ಶ. ೧೨೨೦.

೨. K.G.Krishnan: Tamil Inscriptions in karnataka' Archeolology of karnataka ಪು. ೧೭೫. ತಮಿಳು ಶಾಸನಗಳ ಸಂಖ್ಯೆ ಕೇವಲ ಎಪಿಗ್ರಾಫಿಯ ಕರ್ನಾಟಿಕಾದ ಹಳೆಯ ಸಂಪುಟಗಳನ್ನು ಗಮನದಲ್ಲಿರಿಸಿಕೊಂಡಿರುವುದು ಜಿಲ್ಲಾವಾರು ಸಂಖ್ಯೆ ಹೀಗಿದೆ. ಮೈಸೂರು ೧೮೬, ಬೆಂಗಳೂರು ೯೮, ಕೋಲಾರ ೪೧೫.

೩. ಬವ ೨೨೫.

೪. ಕಇಅಪ್ರ. ೭ ಕ್ರಿ . ಶ. ೧೩೨೬.

ಮಲ್ಲಿಕಾಮದಿನ ಮಹಾರಾಷ್ಟ್ರಮಂಡಲದ ಅಧಿಕಾರದಲ್ಲಿದ್ದಾಗ, ಕಲ್ಯಾಣದ ಮಧುಕೇಶ್ವರ ದೇವಾಲಯ ಬಾಹುಬಲಿಸನ ದಂಗೆಯ ಕಾಲದಲ್ಲಿ ತುಂಬಾ ಹಾನಿಗೊಳಗಾಗಿರಲು, ಕಲ್ಯಾಣದ ಜನರ ಪ್ರಯತ್ನದಿಂದ ಮಧುಕೇಶ್ವರಲಿಂಗ ಪುನರ್ ಪ್ರತಿಷ್ಠೆಗೊಂಡು ಪೂಜಾಕಾರ್ಯಗಳು ನಡೆಯುವಂತೆ ಏರ್ಪಾಟಾದ ವಿಷಯವನ್ನು ತಿಳಿಸುತ್ತದೆ. ಇದು ಮುಸ್ಲಿಂ ಅಧಿಕಾರಿಯ ಆಡಳಿತದಲ್ಲಿ ಹಿಂದೂ ಶೈವ ದೇವಾಲಯ ಜೀರ್ಣೋದ್ಧಾರ ಹೊಂದಿರುವ ವಿರಳ ಉದಾಹರಣೆಯಾಗಿದೆ.

ಶಾಸನಗಳು ಆ ಕಾಲದ ಧರ್ಮ, ಸಮಾಜ, ಆರ್ಥಿಕ ಸ್ಥಿತಿಗತಿ, ಆಡಳಿತ, ವಿದ್ಯಾಭ್ಯಾಸ ಮುಂತಾದ ವಿಷಯಗಳನ್ನು ನಿರೂಪಿಸಿರುವುದು ತಿಳಿದ ವಿಷಯವೇ ಆಗಿದೆ. ಈ ಎಲ್ಲ ವಿಷಯಗಳ ನಿರೂಪಣೆಯ ವೈವಿಧ್ಯತೆಯ ನಡುವೆಯೂ ಶಾಸನ ತನ್ನ ಗುಣದ ಶಿಖರದಿಂದ ಒಂದು ರೀತಿಯ ಏಕತಾನತೆಯ ಕಡೆಗೆ ಜಾರಿದಂತೆ ಕಾಣುತ್ತದೆ. ಶಾಸನ ಪದ್ಯಗಳನ್ನು, ವರ್ಣನೆಗಳನ್ನು ಬಿಡಿಯಾಗಿ ನೋಡಿದಾಗ ಆಕರ್ಷಕವಾಗಿ ಕಂಡು ಬಂದರೂ ಒಟ್ಟಾಗಿ ನೋಡಿದಾಗ ಶಾಸನ ರಚನೆ ಏಕತಾನತೆಯ ಜಾಡಿಗೆ ಬಿದ್ದಿದೆಯೇನೋ ಎಂದು ಭಾಸವಾಗುತ್ತದೆ.[೧] ರಾಜರ ಪರಾಕ್ರಮದ ವರ್ಣನೆಗಳಲ್ಲಾಗಲಿ, ಅಧಿಕಾರಿಗಳ ಸದ್ಗುಣಗಳಾಗಲಿ, ಸ್ತ್ರೀಯರ ಸೌಂದರ್ಯ, ಪಾತಿವ್ರತ್ಯ ವರ್ಣನೆಗಳಾಗಲಿ ಒಂದು ರೀತಿಯ ಏಕತಾನತೆಯಿಂದ ಬಳಲುತ್ತಿರುವಂತೆ ಕಂಡುಬರುತ್ತದೆ. ಇದನ್ನು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ.[೨] ಆದರೆ ಈ ಮಧ್ಯದಲ್ಲಿಯೂ ನಿರೂಪಣೆಯ ಸೊಗಸಿನಿಂದ, ಶಾಸನ ಕವಿಗಳ ಪ್ರತಿಭಾ ಸ್ಪರ್ಶದಿಂದ, ಹೊಸತನದಿಂದ ಉತ್ತಮ ಶಾಸನಗಳು ರಚನೆಗೊಂಡಿವೆ ಎಂಬುದನ್ನು ಮರೆಯಬಾರದು.

ಹೊಯ್ಸಳರನಂತರ ದೊಡ್ಡ ಸಾಮ್ರಾಜ್ಯವಾಗಿ ಬೆಳೆದ ವಿಜಯನಗರ, ಶಾಸನಗಳ ದೃಷ್ಟಿಯಿಂದ ಇಳಿಮುಖದ ಕಾಲವಾಗಿಯೇ ಕಂಡುಬರುತ್ತದೆ. ಶಾಸನದ ಫಲಕ, ಲಿಪಿ, ರಚನೆ, ಕಾವ್ಯಮಯತೆ ಇವುಗಳ ದೃಷ್ಟಿಯಿಂದ ಹೊಯ್ಸಳರ ಕಾಲವೇ ಶಿಖರವೆಂದೂ ವಿಜಯನಗರ ಸಾಮ್ರಾಜ್ಯದ ಕಾಲವೇ ಅವನತಿಯ ಕಾಲವೆಂದೂ ಹೇಳಬಹುದು.

ನಾವು ಅಧ್ಯಯನಕ್ಕೆ ಆರಿಸಿಕೊಂಡ ಕಾಲ ಧರ್ಮಗಳ ಏರಿಳಿತ, ಸಾಮ್ರಾಜ್ಯಗಳ ಏರಿಳಿತ, ಸಾಹಿತ್ಯದಲ್ಲಿ ಆದ ಮಾರ್ಪಾಟುಗಳು, ಪರಕೀಯರ ದಾಳಿ ಹೀಗೆ ನಾನಾ ಅಂಶಗಳ ದೃಷ್ಟಿಯಿಂದ ಬಹು ಗಮನಾರ್ಹವಾದ ಪರ್ವಕಾಲವಾಗಿದೆ. ಎಲ್ಲ ರೀತಿಯ ಏರಿಳಿತಗಳನ್ನು ಕಂಡ ಬದುಕು ಶಾಸನಗಳಲ್ಲಿ ಪ್ರತಿಫಲಿತವಾಗಿದೆ. ಈ ದೃಷ್ಟಿಗಳಿಂದ ಕನ್ನಡ ನಾಡಿನ ಇತಿಹಾಸ ಪುನಾರಚನೆಗೆ ಶಾಸನಗಳು ಬಹು ಮುಖ್ಯ ಆಕರಗಳಾಗಿವೆ.

---

೧. ಏಕತಾನತೆಯ ರಚನೆಗೆ ಹಲವು ನಿದರ್ಶನಗಳನ್ನು ಕೊಡಬಹುದಾದರೂ ಇಲ್ಲಿ ಒಂದನ್ನು ಸೂಚಿಸಿದೆ.

ರತಿಯನ್ನಳ್ ರೂಪಿಂ ಭಾ
ರತಿಯನ್ನಳ್ ವಾಗ್ವಿಳಾಸದಿಂ ಸೌಷ್ಠವದಿಂ
ಕ್ಷಿತಿಯನ್ನಳ್ ದಾಸಿಯ ಕುಲ
ಸತಿಯೊಳಜಲೆ ನಾರಿಯಂತು ನೋಂತರುಮೋಳರೇ

ಎಂದು ಕೀರ್ತಿಸುವ ಪದ್ಯವಿದೆ. ಇದೇ ಪದ್ಯ ಒಂದು ಹೆಚ್ಚಿನ ವಿಶೇಷಣದೊಂದಿಗೆ ದೇವಿಯಕ್ಕ ಎಂಬುವವಳಿಗೂ ಬಳಕೆಯಾಗಿದೆ. ಎಇ XVIII ೨೦೪ ಕ್ರಿ.ಶ. ೧೧೬೨; ಎಇ XVIII ೧೨ ಕ್ರಿ.ಶ. ೧೧೬೨.

೨. ಶಾಸನ ವ್ಯಾಸಂಗ ೧ ಪು. ೬೩.

# ೨೦. ಉಪಸಂಹಾರ

ಕರ್ನಾಟಕದ ಇತಿಹಾಸದಲ್ಲಿ ಅನೇಕ ತಿರುವುಗಳನ್ನು ಕಂಡ ಕ್ರಿ.ಶ.೧೧೫೦-೧೩೪೦ರ ಕಾಲಘಟ್ಟ ಹಲವಾರು ದೃಷ್ಟಿಗಳಿಂದ ಮಹತ್ವದ ಕಾಲವಾಗಿದೆ. ಈ ಕಾಲದ ಸಾಂಸ್ಕೃತಿಕ ಇತಿಹಾಸವನ್ನು ಆದಷ್ಟು ಅಧಿಕೃತವಾಗಿ ಪುನಾರಚಿಸಿ ಕೊಡಲು ಈ ಮಹಾಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ. ಈ ಪ್ರಯತ್ನಕ್ಕೆ ಮೂಲ ಆಕರಗಳಾಗಿ ಶಾಸನಗಳನ್ನು, ಪೂರಕ ಆಕರಗಳಾಗಿ ಆ ಕಾಲದ ಸಾಹಿತ್ಯಕೃತಿಗಳನ್ನು, ಜಾನಪದ ಸಾಹಿತ್ಯವನ್ನು ಮತ್ತು ಸಾಂಸ್ಕೃತಿಕ ಇತಿಹಾಸದ ವಿವಿಧ ವಿಷಯಗಳ ಮೇಲೆ ವಿದ್ವಾಂಸರು ರಚಿಸಿರುವ ಲೇಖನಗಳನ್ನು ಮತ್ತು ಗ್ರಂಥಗಳನ್ನು ಉಪಯೋಗಿಸಿಕೊಳ್ಳಲಾಗಿದೆ.

ಸಂಶೋಧನೆಯ ಆರಂಭದಲ್ಲಿಯೇ ಸಂಸ್ಕೃತಿ ಅಧ್ಯಯನದ ಸ್ವರೂಪವನ್ನು ರೂಪಿಸಿಕೊಳ್ಳಲು ಪ್ರಯತ್ನಿಸಲಾಯಿತು. ಪಾಶ್ಚಾತ್ಯರಲ್ಲಿ 'ಕಲ್ಚರ್' ಪದದ ವಿವರಣೆ, ಅರ್ಥವ್ಯಾಪ್ತಿ ಕಾಲದಿಂದ ಕಾಲಕ್ಕೆ ವಿಸ್ತಾರವಾಗುತ್ತಾ ನಡೆದಿದೆ. ಮ್ಯಾಥ್ಯೂ ಅರ್ನಾಲ್ಡ್, ಟಿ.ಎಸ್.ಎಲಿಯಟ್, ಎಮರ್ಸನ್, ರೂತ್ ಬೆನಡಿಕ್ಟ್ ಮುಂತಾದ ಚಿಂತಕರು ನಡೆಸಿರುವ ಚಿಂತನೆಗಳು ಹಾಗೂ ಕನ್ನಡ ಸಂದರ್ಭದಲ್ಲಿ ಡಿ.ವಿ.ಗುಂಡಪ್ಪ, ಶಂ.ಬಾ.ಜೋಷಿ, ದೇವುಡು, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಹಾಗೂ ಮುಂದಿನ ತಲೆಮಾರಿನ ಚಿಂತಕರೂ ಹಾಗೂ ವಿದ್ವಾಂಸರಾದ ಎಂ.ಚಿದಾನಂದ ಮೂರ್ತಿ, ಎಂ.ಎಂ.ಕಲಬುರ್ಗಿ, ಯು.ಆರ್.ಅನಂತಮೂರ್ತಿ, ಬರಗೂರು ರಾಮಚಂದ್ರಪ್ಪ ಮುಂತಾದವರು ಸಂಸ್ಕೃತಿಯ ವಿಷಯದಲ್ಲಿ ಹಲವು ರೀತಿಗಳಲ್ಲಿ ಚಿಂತನೆಗಳನ್ನು ಮಾಡುವುದರ ಮೂಲಕ ರೂಪುಗೊಂಡಿರುವ ಅರ್ಥವಲಯಗಳನ್ನು ಗಮನದಲ್ಲಿರಿಸಿಕೊಂಡು ಸಾಂಸ್ಕೃತಿಕ ಅಧ್ಯಯನದ ಸ್ಥೂಲ ಚೌಕಟ್ಟನ್ನು ರೂಪಿಸಿಕೊಳ್ಳಲಾಯಿತು.

ಸಂಸ್ಕೃತಿ ಮತ್ತು ಸಾಂಸ್ಕೃತಿಕ ಅಧ್ಯಯನ ಎಂಬ ಪರಿಭಾಷೆ ಕಳೆದ ೪೦-೫೦ ವರ್ಷಗಳಿಂದ ಕನ್ನಡ ಭಾಷಾ ಸಾಹಿತ್ಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ವಿಶೇಷವಾಗಿ ಬಳಕೆಯಾಗುತ್ತಿದೆ. ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿ ಹಲವು ಹರಹುಗಳಲ್ಲಿ ವ್ಯಾಪಿಸಿದ್ದು ಅದನ್ನು ಒಂದು ನಿರ್ದಿಷ್ಟ ಚೌಕಟ್ಟಿಗೆ ಅಳವಡಿಸಿಕೊಳ್ಳುವುದು ಸುಲಭ ಸಾಧ್ಯವಲ್ಲ. ರಹಮತ್ ತರೀಕೆರೆಯವರು ಸರಿಯಾಗಿ ಗುರುತಿಸಿರುವಂತೆ 'ಕನ್ನಡದಲ್ಲಿ ಸಾಂಸ್ಕೃತಿಕ ಅಧ್ಯಯನಗಳು ಎರಡು ಕಡೆ ನಡೆದಿವೆ. ಒಂದು ಮಾನವಿಕ ಕ್ಷೇತ್ರದ ಸಾಹಿತ್ಯ, ಭಾಷೆ ಇತ್ಯಾದಿ ಶಿಸ್ತುಗಳಲ್ಲಿ. ಇನ್ನೊಂದು ಸಮಾಜ ವಿಜ್ಞಾನ ಕ್ಷೇತ್ರದ ಸಮಾಜ ಶಾಸ್ತ್ರ, ಚರಿತ್ರೆ, ಮಾನವ ಶಾಸ್ತ್ರ, ಜಾನಪದ, ಬುಡಕಟ್ಟು ಮುಂತಾದ ಶಿಸ್ತುಗಳಲ್ಲಿ. ಮುಖ್ಯ ಸಂಗತಿಯೆಂದರೆ, ಈ ಎರಡೂ ಕಡೆಯ ಶಿಸ್ತುಗಳು ಪರಸ್ಪರ ಕೊಡು ಕೊಳೆ ಮಾಡುತ್ತ ಅವುಗಳ ನಡುವಣ ಗಡಿ ಗೆರೆಗಳು ತೀವ್ರವಾಗಿ ಕಲೆಸಿಕೊಳ್ಳುತ್ತಿರುವುದು. ಇದು ಕನ್ನಡ ಸಾಂಸ್ಕೃತಿಕ ಅಧ್ಯಯನಗಳ ಪ್ರಧಾನ ಲಕ್ಷಣ.'[೧] ಇಂಗ್ಲಿಷಿನ ಕಲ್ಚರ್ ಪದ, ಅದಕ್ಕೆ ಪರ್ಯಾಯವಾಗಿ ಬಳಕೆಯಾಗುತ್ತಿರುವ ಸಂಸ್ಕೃತಿ ಶಬ್ದ ಇವು ಎರಡೂ ಭಾಷೆಗಳಲ್ಲಿ ಭಿನ್ನ ನೆಲೆಗಳಿಂದ ಹೊರಟ ಪದಗಳಾದರೂ ಅವುಗಳ ಈ ಕಾಲದ ಅರ್ಥವ್ಯಾಪ್ತಿ ದೃಷ್ಟಿಯಿಂದ ಸಮಾನಾರ್ಥಕವೆಂಬಂತೆ ಬಳಕೆಯಾಗುತ್ತಿವೆ. ಸಂಸ್ಕೃತಿ ಎಂಬುದು ಬದುಕಿನ ಒಂದು ಸ್ಥಿರ ರೀತಿಯಲ್ಲ. ಕಾಲದಿಂದ ಕಾಲಕ್ಕೆ ಬದಲಾಗುತ್ತ ಹಳೆಯ ತಲೆಮಾರಿನ ಅಂಶಗಳಲ್ಲಿ ಕೆಲವನ್ನು ಉಳಿಸಿಕೊಳ್ಳುತ್ತಾ ಹಲವನ್ನು ತಿರಸ್ಕರಿಸುತ್ತಾ ಹೊಸ ತಲೆಮಾರಿನ ಅಂಶಗಳನ್ನು ಕೂಡಿಸಿಕೊಳ್ಳುತ್ತಾ, ರೂಪಾಂತರಗೊಳ್ಳುತ್ತಾ ನಿರಂತರವಾಗಿ ಸಾಗಿ ಬರುವಂತಹದಾಗಿದೆ. ನಮ್ಮ ಅಧ್ಯಯನ ಅವಧಿಯ ಕಾಲಘಟ್ಟದಲ್ಲಿ ಜನರು ಬದುಕಿದ ರೀತಿ, ಎತ್ತಿ ಹಿಡಿದ ಮೌಲ್ಯಗಳು, ಅವರು ಅನುಸರಿಸಿದ ಧರ್ಮಗಳು, ಉಂಟಾದ ಸಂಘರ್ಷಗಳು, ಮಾಡಿಕೊಂಡ ಸಮನ್ವಯಗಳು, ಸಾಮಾಜಿಕ ರೀತಿ ನೀತಿಗಳು, ಕಟ್ಟುಪಾಡುಗಳು, ಕಟ್ಟಿಕೊಂಡ ಆಡಳಿತ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ನಡೆಸಿದ ವಿದ್ಯಾಭ್ಯಾಸ ಕ್ರಮ, ಮಠ-ದೇವಸ್ಥಾನಗಳ ಪಾತ್ರ, ಯುದ್ಧಗಳ ಕಾರಣ-ಪರಿಣಾಮ, ಆತ್ಮಬಲಿ-ಪ್ರಕಾರಗಳು, ಕಲೆ ಸಾಹಿತ್ಯ ಮನರಂಜನೆ, ವಸ್ತ್ರ ಆಭರಣ ಆಹಾರ ಪಾನೀಯಗಳು ಹೀಗೆ ಹತ್ತು ಹಲವು ವಿಷಯಗಳನ್ನು ಅಧ್ಯಯನ ಮಾಡುವುದು ಇಲ್ಲಿಯ ಉದ್ದೇಶವಾಗಿದೆ.

ಸಹಜವಾಗಿ ಇಲ್ಲಿಯ ಅಧ್ಯಯನದಲ್ಲಿ ಆ ಕಾಲದ ಸಾಮುದಾಯಿಕ ಬದುಕು ಸಾಗಿಬಂದ ರೀತಿಯನ್ನು ಕಟ್ಟಿಕೊಡುವ ಕಡೆ ಗಮನ ಹರಿಸಲಾಗಿದೆ. ಕನ್ನಡ ಸಮುದಾಯದ ಸಮಗ್ರ ಜೀವನ ಚಿತ್ರವನ್ನು ರೂಪಿಸಿ ಕೊಡುವ ಆಶಯ ಇದರ ಹಿಂದಿದೆ. ಕನ್ನಡ ಸಮುದಾಯದ ಹಿನ್ನೆಲೆಯಲ್ಲಿ ಇರುವ ಸಾಂಸ್ಕೃತಿಕ ಎಳೆಗಳನ್ನು ಗುರುತಿಸುವುದು, ರೂಪಿಸುವುದು ಇದರ ಹಿಂದಿರುವ ಆಶಯವಾಗಿದೆ. ಈ ಉದ್ದೇಶಕ್ಕೆ ಆಶ್ರಯಿಸಿರುವ ಮೂಲ ಪ್ರಮುಖ ಆಕರಗಳು

---

೧. ರಹಮತ್ ತರೀಕೆರೆ : ಸಾಂಸ್ಕೃತಿಕ ಅಧ್ಯಯನ , ಪು. ಅರಿಕೆ.

ಪ್ರಧಾನವಾಗಿ ಪ್ರಭುತ್ವ ವರ್ಗದವೆನ್ನಬಹುದಾದ ದಾಖಲೆಗಳು, ಹಾಗೆಯೇ ಕೆಲವು ವೀರಗಲ್ಲು, ಮಾಸ್ತಿಕಲ್ಲು, ನಿಸಿಧಿಕಲ್ಲು, ಆತ್ಮಬಲಿ ಮುಂತಾದ ಇತರ ಶಾಸನಗಳು ಪ್ರಭುತ್ವೇತರವೆನ್ನಬಹುದಾದ ದಾಖಲೆಗಳು. ಕೆಲವು ಮಿಶ್ರ ಸ್ವರೂಪದ ದಾಖಲೆಗಳಾದರೂ, ಸಹಜವಾಗಿ ಒಂದು ಪ್ರಮಾಣದಲ್ಲಿ ಆಕರಗಳದೇ ಒಂದು ರೀತಿಯ ಮಿತಿಯನ್ನು ಸಂಶೋಧನೆಗೆ ತರಲು ಸಾಧ್ಯವಿದೆ. ಶಾಸನಗಳ ಮಾಹಿತಿಗಳನ್ನು ಕ್ರಮಬದ್ಧವಾಗಿ ಜೋಡಿಸಿ ಕೊಟ್ಟಾಗ ಮೂಡುವ ಸಾಂಸ್ಕೃತಿಕ ಚೌಕಟ್ಟಿನ ಮಧ್ಯೆ ಮೂಡಬಹುದಾದ ಪೊಳ್ಳುಗಳು ಮೈತುಂಬಿಕೊಳ್ಳುವಂತೆ ಪೂರಕವಾಗಿ ಸಾಹಿತ್ಯ ಕೃತಿಗಳು, ಜಾನಪದ ಸಾಹಿತ್ಯ ಹಾಗೂ ವಿದ್ವಾಂಸರ ಚರ್ಚೆಗಳನ್ನು ಬಳಸಿಕೊಳ್ಳಲಾಗಿದೆ. ಈ ಕಾರಣಗಳಿಂದ ಆಕರ ನಿರ್ದೇಶಿತ ಮಾರ್ಗದಲ್ಲೇ ಸಂಶೋಧನೆ ಸಾಗುವುದು ಅನಿವಾರ್ಯವಾಗಿದೆ. ಆಕರಾವಲಂಬಿತ ಊಹೆಗಳು ಕ್ವಚಿತ್ತಾಗಿ ಅನಿವಾರ್ಯವಾದೆಡೆ ಅಗತ್ಯವಾಗಬಹುದು. ಆದಷ್ಟು ಆಕರಗಳೇ ಮಾತನಾಡುವಂತೆ ಪ್ರಯತ್ನಿಸಲಾಗಿದೆ.

ಗತಕಾಲವಾಗಿರಲಿ, ಸಮಕಾಲೀನವಾಗಿರಲಿ ಎಲ್ಲ ಸಾಂಸ್ಕೃತಿಕ ಅಂಶಗಳು ಶಾಸನ, ಶಿಲ್ಪ, ಸಾಹಿತ್ಯ, ಜಾನಪದ, ಭಾಷೆ ಬರವಣಿಗೆಗಳಲ್ಲಿ ದಾಖಲಾಗುವುದು ಸಾಧ್ಯವಿಲ್ಲ. ಯಾವುದೇ ಇತಿಹಾಸ ಹೇಳಿರುವುದಕ್ಕಿಂತ ಹೇಳದಿರುವುದೇ ಅಗಾಧ ಪ್ರಮಾಣದಲ್ಲಿರುತ್ತದೆ. ಆದ್ದರಿಂದ 'ಸಮಗ್ರ ಸಾಂಸ್ಕೃತಿಕ ಅಧ್ಯಯನ' ಒಂದು ಸಾಪೇಕ್ಷ ಆಶಯವಾಗಿರುತ್ತದೆ ಎಂಬ ಅರಿವು ನಮ್ಮ ಗಮನದಲ್ಲಿ ಇದೆ. ಈ ಅರಿವಿನೊಂದಿಗೇ ನಮ್ಮ ಅಧ್ಯಯನಾವಧಿಯ ಕರ್ನಾಟಕದ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಬದುಕಿನಲ್ಲಿ ಧರ್ಮ ಪ್ರಧಾನ ಪಾತ್ರವನ್ನು ವಹಿಸಿರುವುದನ್ನು ಕಾಣಬಹುದಾಗಿದೆ. ವೈಜ್ಞಾನಿಕ, ವೈಚಾರಿಕವೆನ್ನಬಹುದಾದ ಇಪ್ಪತ್ತನೆಯ ಶತಮಾನದಲ್ಲಿಯೂ ಧರ್ಮದ ಪ್ರಭಾವ ಕಡಮೆಯಾಗಿದೆ ಎಂದು ಭಾಸವಾಗುವುದಿಲ್ಲ. ಭಾರತದ ಪ್ರಾಚೀನ ಧರ್ಮಗಳಲ್ಲಿ ಒಂದಾದ ಶೈವವು ಪಾಶುಪತ, ಕಾಳಾಮುಖ, ಶುದ್ಧಶೈವ, ಕಾಶ್ಮೀರಶೈವ, ಹಾಗೂ ತಾಂತ್ರಿಕ ಶೈವಗಳಾದ ಕಾಪಾಲಿಕ, ನಾಥ, ಭೈರವ ಮುಂತಾದ ರೀತಿಯಲ್ಲಿ ಪ್ರಸಾರದಲ್ಲಿದ್ದವು. ಶೈವಧರ್ಮ ಮತ್ತು ಅದರ ಶಾಖೆಗಳ ಅಧ್ಯಯನ ಸರಳವಾಗಿಲ್ಲ. ಒಂದೊಂದು ಶಾಖೆಯ ಲಕ್ಷಣ ಆಚರಣಾವಿಧಿ ಮುಂತಾದವುಗಳನ್ನು ಪ್ರತ್ಯೇಕಿಸಿ ತೋರಿಸುವುದು ಪೂರ್ಣವಾಗಿ ಸಾಧ್ಯವಾಗಿಲ್ಲ. ಒಂದರ ಪ್ರಭಾವ ಇನ್ನೊಂದರ ಮೇಲಾಗಿ ಯಾವುದು ಮೂಲ ಯಾವುದು ಆನುಷಂಗಿಕ ಎಂದು ಸ್ಪಷ್ಟವಾಗಿ ವಿವರಿಸುವುದು ಕಠಿಣವಾಗಿದೆ. ಶೈವಧರ್ಮದ ಶಾಖೆಗಳನ್ನು ಗುರುತಿಸುವ ವಿಷಯದಲ್ಲಿ ಪ್ರಾಚೀನ ಕಾಲದದಲ್ಲಿಯೇ ಗೊಂದಲಗಳು ಉಂಟಾಗಿರುವುದು ಕಂಡುಬರುತ್ತದೆ.

ಪಾಶುಪತವನ್ನು ಲಕುಲೀಶ ಪಾಶುಪತವೆಂದೂ ಗುರುತಿಸುವುದು ರೂಢಿಯಲ್ಲಿದೆ. ಲಕುಲೀಶ ವಿಗ್ರಹದ ಬಲಗೈಯಲ್ಲಿ ಮಾತುಲುಂಗ ಫಲವನ್ನು ಎಡಗೈಯಲ್ಲಿ ಚಿಕ್ಕಲಾಕುಲ(ದಂಡ)ವನ್ನು ಹಿಡಿದಂತೆ ಕಂಡು ಬರುತ್ತದೆ. ಕೆಲವು ಸಾರಿ ಫಲ ಮತ್ತು ದಂಡ ಹಿಡಿಯುವಿಕೆಯಲ್ಲಿ ಕೈ ಬದಲಾದ ವಿಗ್ರಹಗಳು ಕಂಡುಬರುತ್ತವೆ. ಲಕುಲೀಶನೆಂದರೆ ದಂಡಧಾರಿಯಾದ ಶಿವನೆಂದರ್ಥ. 'ಈ ದಂಡ ಬೇರೇನೂ ಆಗಿರದೆ ನಾಲ್ಕು ವೇದಗಳೇ ಆಗಿವೆ. ಅವುಗಳನ್ನು ದಂಡದಂತೆ ಮಾಡಿಕೊಂಡು ಉಪದೇಶಿಸಿದ ಪ್ರಯುಕ್ತ 'ಲಾಕುಳಾಗಮ' ಎಂದು ಪ್ರತೀತಿಯಾಯಿತೆಂಬ ಅಭಿಪ್ರಾಯವಿದೆ.'[೧] ಕರ್ನಾಟಕಕ್ಕೆ ಲಕುಲೀಶ–ಪಾಶುಪತ ಯಾವ ಕಾಲದಲ್ಲಿ ಪ್ರವೇಶಿಸಿತು ಎಂದು ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ. ಕ್ರಿ.ಶ. ೭೦೦ರ ಕಿಗ್ಗ ಗ್ರಾಮದ ಶಾಸನದಲ್ಲಿ ಪಾಶುಪತರ ಉಲ್ಲೇಖವಿದೆ. ಕ್ರಿ.ಶ. ೨ನೆಯ ಶತಮಾನದ ಪೂರ್ವಾರ್ಧದಲ್ಲಿದ್ದನೆಂದು ಹೇಳುವ ಲಕುಲೀಶನ ವಿಷಯವು ಕೌಂಡಿಣ್ಯ ಭಾಷ್ಯ, ವಾಯು ಮತ್ತು ಲಿಂಗ ಪುರಾಣ ಮುಂತಾದವುಗಳಲ್ಲಿ ನಿರೂಪಿತವಾಗಿದೆ. ಅದರಂತೆ 'ಶಿವನು ಓರ್ವ ಬ್ರಾಹ್ಮಣ ದಂಪತಿಗಳ ಮಗನಾಗಿ ಉಲ್ಕಾಪುರಿಯಲ್ಲಿ ಜನಿಸುವನು. ಈ ದಿವ್ಯ ಮಗುವು ಅನೇಕ ಮನುಷ್ಯಾತೀತ ಪವಾಡಗಳನ್ನು ಮಾಡಿದರೂ ಹುಟ್ಟಿದ ಏಳು ತಿಂಗಳಿಗೇ ಮರಣವನಪ್ಪುವುದು. ಆವನ ತಾಯಿ ಅವನನ್ನು ಹತ್ತಿರದಲ್ಲಿದ್ದ ತೀರ್ಥವೊಂದರಲ್ಲಿ ಹಾಕಿದಳು. ಈ ಮಗುವನ್ನು ತೀರ್ಥದಲ್ಲಿನ ಆಮೆಗಳು ಜಾಲೇಶ್ವರಲಿಂಗದ ಬಳಿಗೆ ಕರೆದೊಯ್ದುವು. ಅಲ್ಲಿ ಮಗುವಿಗೆ ಮರಳಿ ಜೀವ ಬಂದು, ಕೆಲ ಕಾಲ ಅಲ್ಲಿಯೇ ಇದ್ದು ಅನಂತರ ಕಾಯಾವರೋಹಣಕ್ಕೆ ಹೋಯಿತು. ಮಗು ಬೆಳೆದು ದೊಡ್ಡವನಾದ ಮೇಲೆ ಧರ್ಮ ಪ್ರಚಾರ ಕಾರ್ಯ ನಿರ್ವಹಿಸಿದನು.'[೨] ಒಂದು ರೀತಿ ಪೌರಾಣಿಕ ಹಿನ್ನೆಲೆಯಲ್ಲಿ ಲಕುಲೀಶನ ಚಿತ್ರ ಮೂಡಿದಂತೆ ಭಾಸವಾಗುತ್ತದೆ.

---

೧. ಕೆ. ರವೀಂದ್ರನಾಥ್ : ಪಾಶುಪತರು. ಕನ್ನಡ ಅಧ್ಯಯನ ಸಂ.೧೧, ಸಂ.೧ ಮತ್ತು ೨ ಉದಾಹೃತವಾಗಿದೆ. ಮೂಲ ಆಕರ : ವಸುಂಧರಾ ಫಿಲಿಯೋಜಾ. ಕರ್ನಾಟಕದಲ್ಲಿ ಲಾಕುಳಶೈವ ಜಕ್ಕಣಾಚಾರ್ಯರು. ಪು. ೨.

೨. ಎಸ್.ವಿದ್ಯಾಶಂಕರ : ವಚನಾನುಶೀಲನ. ಪು. ೧೬೭.

ಗುಜರಾತಿನಿಂದ ಕರ್ನಾಟಕವನ್ನು ಪ್ರವೇಶಿಸಿದ ಲಾಕುಳಶೈವಧರ್ಮ ಸಾಕಷ್ಟು ಪ್ರಸಿದ್ಧಿಯಾದ ಗುರು ಪರಂಪರೆಯನ್ನೂ ಅನುಯಾಯಿಗಳನ್ನೂ ಪಡೆದಿದ್ದು ಅಪಾರವಾದ ಸಾಮಾಜಿಕ ಕಳಕಳಿಯನ್ನು ಹೊಂದಿದ ಧರ್ಮವಾಗಿದ್ದಿತು. ಹದಿನಾಲ್ಕನೆಯ ಶತಮಾನದನಂತರ ಅದು ವೀರಶೈವಧರ್ಮದಲ್ಲಿ ಲೀನವಾದಂತೆ ತಿಳಿದು ಬರುತ್ತದೆ. ಲಕ್ಕುಲೀಶನ ಶಿಷ್ಯ ಪರಂಪರೆಗೆ ಸೇರಿದ ಶ್ರೀ ಪ್ರೀತಂ ಮುನಿಗಳನ್ನು ಭೇಟಿಯಾದಾಗ ಕೆಲವು ಅಮೂಲ್ಯ ಮಾಹಿತಿಗಳು ತಿಳಿದು ಬಂದವು.[1] ಕಾಯಾವರೋಹಣ್‌ನಲ್ಲಿ (ಕಾರೋಣ್) ಲಕುಲೀಶ್ ಧಾಮದಲ್ಲಿ ವಾಸವಾಗಿರುವ ಗುರುಗಳು ಆಶ್ರಮ ಸಮೀಪದಲ್ಲೇ ಲಕುಲೀಶನ ವಿಗ್ರಹವಿರುವ ದೇವಾಲಯವಿರುವುದನ್ನು ತಿಳಿಸಿದರು. (ಚಿತ್ರ ಸಂಪುಟದಲ್ಲಿರುವ ಚಿತ್ರವನ್ನು ನೋಡಿ.) ಶೈವಧರ್ಮದ ಶಾಖೆಗಳ ಪರಸ್ಪರ ಕೊಳು ಕೊಡೆಗಳು ಹೆಚ್ಚಿನ ಅಧ್ಯಯನವನ್ನು ನಿರೀಕ್ಷಿಸುತ್ತವೆ.

ವೀರಶೈವ ಧರ್ಮದ ಆರಂಭಿಕ ಹೆಜ್ಜೆಗಳು ಪೌರಾಣಿಕ ಅಸ್ಪಷ್ಟತೆಯಲ್ಲಿ ಸ್ವಲ್ಪ ಮಸುಕಾಗಿಯೇ ಇದೆ. ಶಾಸನ ಸಾಹಿತ್ಯ ದಾಖಲೆಗಳು ಬಸವಪೂರ್ವದ ಕಡೆಗೇ ಅದರ ಆರಂಭಿಕ ಮೂಲಗಳನ್ನು ಸ್ಪಷ್ಟವಾಗಿ ನಿರೂಪಿಸುತ್ತಿವೆ. ವೀರಶೈವ ಧರ್ಮ ಹನ್ನೆರಡನೆಯ ಶತಮಾನದಲ್ಲಿ ತೀವ್ರ ಪರಿಷ್ಕರಣಕ್ಕೆ ಒಳಗಾಯಿತು. ಆ ಕಾಲದಲ್ಲಿ ವಿಶೇಷ ಸಂಘಟನೆ ವಿಘಟನೆಗೆ ಒಳಗಾದ ಈ ಧರ್ಮ ಕರ್ನಾಟಕದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಜೀವನದಲ್ಲಿ ತೀವ್ರತರವಾದ ಸಂಚಲನವನ್ನು ಉಂಟುಮಾಡಿತು. ಹೀಗಾಗಿ ಇದರ ಹಿಂದಿನ ಪಾಶುಪತ, ಕಾಳಾಮುಖ ಮುಂತಾದ ಶೈವ ಶಾಖೆಗಳು ಇದರಲ್ಲಿ ಕ್ರಮೇಣ ವಿಲೀನಹೊಂದಿದವು. ಕಲ್ಯಾಣದಿಂದ ಚದುರಿದನಂತರ ಕರ್ನಾಟಕದ ವಿವಿಧ ಭಾಗಗಳಿಗೆ ಮತ್ತು ನೆರೆ ರಾಜ್ಯಗಳಾದ ತಮಿಳುನಾಡು,[2] ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶಗಳಿಗೆ[3] ಹರಡಿದ್ದು, ನೆಲೆಯೂರಿದ್ದು ಕುತೂಹಲಕರ ಅಧ್ಯಯನದ ವಿಷಯವಾಗಿದೆ. ಶೈವಧರ್ಮದಿಂದ ವೀರಶೈವಧರ್ಮ ಬೇರೆಯಾಗಿ ಬೆಳೆದದ್ದು, ಇತರ ಶೈವ ಶಾಖೆಗಳಿಂದ ಸ್ವೀಕರಿಸಿರಬಹುದಾದ ಅಂಶಗಳು ಪರಸ್ಪರ ಪ್ರಭಾವಗಳು – ಈ ನೆಲೆಗಳಲ್ಲಿ ಸಂಶೋಧನೆ ಮುನ್ನಡೆಯಬೇಕಾಗಿದೆ.

ಜೈನಧರ್ಮ ಕರ್ನಾಟಕದಲ್ಲಿ ವ್ಯಾಪಕವಾಗಿ ಪ್ರಭಾವಪೂರ್ಣವಾಗಿ ಬಾಳಿ ಬದುಕಿದ ಧರ್ಮಗಳಲ್ಲಿ ಒಂದು. ದಿಗಂಬರ ಶಾಖೆಯೇ ಕರ್ನಾಟಕದಲ್ಲಿ ಶಕ್ತಿಶಾಲಿಯಾಗಿ ಇದ್ದದ್ದು. ಕರ್ನಾಟಕದ ಎಲ್ಲ ರಾಜಮನೆತನಗಳ ಬೆಂಬಲ ಪ್ರೋತ್ಸಾಹಗಳಿಂದ ಬೆಳೆದ ಈ ಧರ್ಮ ಕ್ರಮೇಣ ತನ್ನ ಜನಪ್ರಿಯತೆ ಕಳೆದುಕೊಂಡು ಹಿಮ್ಮೆಟ್ಟುತ್ತಿದ್ದ ಒಂದು ಚಿತ್ರ ಶಾಸನ–ಶಿಲ್ಪಗಳಿಂದ ದೊರೆಯುತ್ತದೆ. ದಿಗಂಬರ ಶಾಖೆಯಂತೆ ಯಾಪನೀಯ ಶಾಖೆಯೂ ಕರ್ನಾಟಕದ ಕೆಲವು ಭಾಗಗಳಲ್ಲಿ ಸಾಕಷ್ಟು ಪ್ರಸಾರ ಹೊಂದಿರುವ ವಿಷಯ ಶಾಸನಗಳಿಂದ ಬೆಂಬಲಿತವಾಗಿದೆ. ಯಾಪನೀಯ ಪದದ ನಿಷ್ಪತ್ತಿಯ ವಿಷಯದ ಚರ್ಚೆಯನ್ನು ಜೈನಧರ್ಮದ ಅಧ್ಯಾಯದಲ್ಲಿ ಚರ್ಚೆಮಾಡಲಾಗಿದೆ. ಆ ಚರ್ಚೆ ಮುಂದುವರೆಸಿ ಪದ್ಮನಾಭ.ಎಸ್. ಜೈನಿಯವರು ಪಾಲಿಭಾಷೆಯ ಮೂಲಕ 'ಯಾಪನೀಯ'ದ ನಿಷ್ಪತ್ತಿಯನ್ನು ನೀಡಿದ್ದಾರೆ. ಪಾಲಿಭಾಷೆಯಲ್ಲಿಯೂ ಯಾಪನೀಯ ಶಬ್ದವಿದೆ. 'ಯಾ+ಆಪೇ' ಎಂದು ಅದರ ವ್ಯುತ್ಪತ್ತಿ ಹೇಳಿ 'ಬಾಳಲು ಎಷ್ಟು ಬೇಕೋ ಅಷ್ಟು' ಮತ್ತು 'ಅಗತ್ಯಕ್ಕೆ ತಕ್ಕಷ್ಟು' ಎಂಬ ಅರ್ಥವನ್ನು ನೀಡಲಾಗಿದೆ. ಇದು ಉಳಿದ ಯತಿ ಜೀವನಕ್ಕೆ ಅಗತ್ಯವಾದ ವಸ್ತು. ಆಹಾರ ಮುಂತಾದವುಗಳನ್ನು ಹೇಳುವಂತೆ ವಸ್ತ್ರಕ್ಕೂ ಅನ್ವಯಿಸುತ್ತದೆ.[4] ಯಾಪನೀಯರ ಬಗ್ಗೆ ವಿವಿಧ ಮೂಲಗಳಿಂದ ಸಾಮಗ್ರಿಯನ್ನು ದಾಖಲೆಗಳನ್ನು ಸಂಗ್ರಹಿಸಿ ಹಂಪ.ನಾಗರಾಜಯ್ಯನವರು ಒಂದು ಪುಸ್ತಕವನ್ನು

---

೧ ಇತ್ತೀಚೆಗೆ ಬೆಂಗಳೂರಿನಲ್ಲಿ (೧೯ ಫೆಬ್ರವರಿ ೨೦೧೨ರಂದು) ಲಕ್ಕುಲೀಶನ ಶಿಷ್ಯರಾದ ಶ್ರೀ ಪ್ರೀತಂ ಮುನಿಗಳ ಪ್ರವಚನವಿರುವ ವಿಷಯ ತಿಳಿಸಿ ಗುರುಗಳಾದ ಚಿದಾನಂದಮೂರ್ತಿಯವರು ಅಲ್ಲಿಗೆ ಕರೆದೊಯ್ದರು. ಸುಮಾರು ಒಂದು ಘಂಟೆಯ ಕಾಲ ಅವರ ಜತೆ ಇದ್ದು ಅನೇಕ ಮಾಹಿತಿಗಳನ್ನು ಸಂಗ್ರಹಿಸಿದೆವು. ಹಿಂದಿನ ಗುರುಪರಂಪರೆಯ ರೀತಿಯಂತೆ ಸಾಕ್ಷಾತ್ ಲಕುಲೀಶನೇ ಬಂದು ದರ್ಶನ ನೀಡಿ ತನ್ನ ಸಂದೇಶವನ್ನು ಹೇಳಿದರಂತೆ. ಈ ಗುರುಗಳಿಗೆ ಜನವರಿ ೨೦೦೮ರಲ್ಲಿ ಸಂದೇಶ ನೀಡಿದ ವಿಷಯ ತಿಳಿಸಿದರು. ಅದರಂತೆ ಅಂದಿನಿಂದ ಅವರು ಧರ್ಮ ಪ್ರಸಾರ ಮಾಡುತ್ತಿದ್ದಾರೆ. ಅವರಿಗೆ ಭಾರತದಾದ್ಯಂತ ಅನುಯಾಯಿಗಳಿದ್ದಾರೆ. ಕರ್ನಾಟಕದಲ್ಲಿಯೂ ಬೆಂಗಳೂರಿನ ರಜಪೂತ ಕ್ಷತ್ರಿಯ ವರ್ಗದವರು ಅವರ ಅನುಯಾಯಿಗಳಿದ್ದಾರೆ. ವಿವರಗಳಿಗೆ ನೋಡಿ..ಎಂ. ಚಿದಾನಂದ ಮೂರ್ತಿ. 'ಲಕುಲೀಶನ ಶಿಷ್ಯರ ಜತೆ ಸಂದರ್ಶನ' ವಿಜಯ ಕರ್ನಾಟಕ ೧೧.೦೩.೨೦೧೨.

೨ ಪಿ.ವಿ.ಕೃಷ್ಣಮೂರ್ತಿ : ತಮಿಳುನಾಡಿನ ಕನ್ನಡ ಶಾಸನಗಳು ಪು. ೪೬. ಹಾಗೂ ಹಿಳನೆಯ ಪುಟದವರೆಗೆ.

೩ ಕೆ.ಆರ್.ಗಣೇಶ್ : ಆಂಧ್ರಪ್ರದೇಶದ ಕನ್ನಡ ಶಾಸನಗಳು ಪು. ೧೫೫ –೧೫೯.

೪ ಹಂಪ. ನಾಗರಾಜಯ್ಯ : ಯಾಪನೀಯ ಸಂಘ. ಪು.೨೧.

ರಚಿಸಿದ್ದಾರೆ. ಯಾಪನ, ಯಾಪನೀಯ, ಜಾಪುಲಿ, ಆಪುಲಿ, ಜಾವಳಿಗೆ, ಗೋಪ್ಯ, ಅರ್ಧ ಕಪ್ಪಡ, ಅರ್ಧ ಫಾಲಕ- ಎಂಬ ಹೆಸರುಗಳು ಯಾಪನೀಯರಿಗೆ ಅನ್ವಯವಾಗುವ ಪರ್ಯಾಯ ಶಬ್ದಗಳು.[1] ಯಾಪನೀಯ ಸಂಘವು ತುಂಬ ಹಳೆಯ ಸಂಪ್ರದಾಯ. ಜೈನ ಸಂಘ, ಶಾಖೆಗಳಲ್ಲಿ ಶ್ವೇತಾಂಬರ-ದಿಗಂಬರ ಎಂಬ ಪ್ರಭೇದದಷ್ಟೇ ಪ್ರಾಚೀನವಾದುದು ಯಾಪನೀಯ. ಮೂಲ ಶಾಖೆಯಿಂದ ಪ್ರಾಯಃ ಮೊಟ್ಟಮೊದಲು ಕವಲೊಡೆದು ಬೇರೆಯಾಗಿ ಬೆಳೆದದ್ದು ಯಾಪನೀಯ ಇರಬಹುದು.[2] ಯಾಪನೀಯವು ಕರ್ನಾಟಕಕ್ಕೆ ಕ್ರಿ.ಶ. ಎರಡನೆಯ ಶತಮಾನದ ಮಧ್ಯಭಾಗದಲ್ಲಿ ಪ್ರವೇಶಿಸಿತೆಂದು ಅಭಿಪ್ರಾಯ ಪಟ್ಟಿದ್ದಾರೆ. ಹಾಗೆಯೇ ಆಂಧ್ರ, ತಮಿಳುನಾಡು ಮತ್ತು ಮಹಾರಾಷ್ಟ್ರಗಳಲ್ಲೂ ಪ್ರಸಾರದಲ್ಲಿದ್ದುದನ್ನು ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ. ಯಾಪನೀಯರ ವಿಷಯದಲ್ಲಿ ಸಾಹಿತ್ಯ, ಶಿಲ್ಪ, ಶಾಸನ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಬರೆದ ಹಂಪನಾ ಅವರ ಕೃತಿ ಅಲಕ್ಷಿತವಾಗಿದ್ದ ಜೈನ ಶಾಖೆಯೊಂದರ ಬಗ್ಗೆ ಹೊಸ ಸಂಶೋಧನೆಗೆ ದಾರಿ ಮಾಡಿ ಕೊಟ್ಟಿದೆ.

ವೈಷ್ಣವ ಧರ್ಮ ಕರ್ನಾಟಕದಲ್ಲಿ ಪ್ರಬಲವಾಗಿ ಬೆಳೆದಿರುವ ಧರ್ಮ. ಅದು ಮೂರು ಸೆಲೆಗಳ ಮೂಲಕ ಬೆಳೆದು ಬಂದು ಕರ್ನಾಟಕದ ಪ್ರಬಲ ಧರ್ಮವಾಗಿ ಮುಂದುವರಿಯಿತು. ರಾಮಾನುಜಾಚಾರ್ಯರು ಕರ್ನಾಟಕಕ್ಕೆ ಆಗಮಿಸಿದ್ದರಿಂದ ವೈಷ್ಣವ ಧರ್ಮ ನವ ಚೈತನ್ಯದಿಂದ ಪ್ರಭಾವ ಬೀರಿತು. ಪ್ರಭಾವಿ ವ್ಯಕ್ತಿತ್ವವಿದ್ದ ಅವರಿಂದ ತಮಿಳುನಾಡಿನ ಪೂಜಾಪದ್ಧತಿ. ಧಾರ್ಮಿಕ ಆಚರಣೆ. ಭಾಷೆ-ಸಂಸ್ಕೃತಿಗಳ ಪ್ರಭಾವ ಕರ್ನಾಟಕದ ಮೇಲೆ ಆಯಿತು. ಶ್ರೀವೈಷ್ಣವ ಧರ್ಮದ ಪ್ರಸಾರ ಮತ್ತು ಪ್ರಭಾವದ ಜತೆಗೆ ಆ ಮೊದಲೇ ಹಿಮ್ಮೆಟ್ಟುತ್ತಿದ್ದ ಜೈನಧರ್ಮಕ್ಕೆ ಅದು ವೇಗವರ್ಧಕವಾಗಿ ಪರಿಣಮಿಸಿತು. ಈ ಹಂತದಲ್ಲಿ ಧರ್ಮ-ಧರ್ಮಗಳ ಮಧ್ಯೆ ಸ್ಪರ್ಧೆ, ಅಸೂಯೆ, ಸಂಘರ್ಷಗಳು ಕರ್ನಾಟಕದ ಧಾರ್ಮಿಕ ಚರಿತ್ರೆಯಲ್ಲಿ ಕುತೂಹಲಕರ ಅಂಶಗಳನ್ನು ಹೊರಹಾಕಿತು. ಮಧ್ವಾಚಾರ್ಯರ ಪ್ರಭಾವಿ ವ್ಯಕ್ತಿತ್ವದಿಂದ ರೂಪಗೊಂಡ ದ್ವೈತ ಗುರುಪರಂಪರೆಯ ಮಧ್ಯೆ ಇರುವ ಕೆಲವು ಸಡಿಲ ಕೊಂಡಿಗಳು ಇನ್ನೂ ಸ್ಪಷ್ಟವಾಗಲು ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

ಬೌದ್ಧ ಧರ್ಮ ಕರ್ನಾಟಕದಲ್ಲಿ ಪ್ರಭಾವಿ ಧರ್ಮವಾಗಿ ಬೆಳೆದು ನಿಲ್ಲಲಿಲ್ಲವಾದರೂ ತಕ್ಕಮಟ್ಟಿಗೆ ಪ್ರಸಾರ ಪಡೆದಿರುವುದನ್ನು ಶಾಸನ ಉಲ್ಲೇಖಗಳು, ಶಿಲ್ಪಗಳು, ಮಾಹಿತಿಗಳು ಹಾಗೂ ಇತ್ತೀಚಿನ ಕೆಲವು ಉತ್ಖನನಗಳು ಸಮರ್ಥಿಸುತ್ತವೆ. ಕಲ್ಯದ ಸಂಶೋಧನೆಗಳು, ರಾಜಘಟ್ಟದ ಉತ್ಖನನಗಳು ಹೊಸ ಬೆಳಕಿನಲ್ಲಿ ಬೌದ್ಧ ಧರ್ಮವನ್ನು ಪರಿವೀಕ್ಷಿಸುವಂತೆ ಮಾಡಿವೆ. ರಾಜಘಟ್ಟದ ಚೈತ್ಯಾಲಯ ತನ್ನ ತಳವಿನ್ಯಾಸದ ಆಕಾರದಲ್ಲಿ ಇಡೀ ದಕ್ಷಿಣ ಭಾರತದಲ್ಲೇ ಅದ್ವಿತೀಯವಾದದ್ದು ಮತ್ತು ಅಷ್ಟು ದೊಡ್ಡ ಸಂಕೀರ್ಣವುಳ್ಳ ಏಕೈಕ ಬೌದ್ಧ ಸಂಕೀರ್ಣ ಇಡೀ ದಕ್ಷಿಣ ಭಾರತದಲ್ಲೇ ವಿರಳವೆನ್ನಬಹುದು ಎಂಬ ಅಭಿಪ್ರಾಯ ಗಮನಾರ್ಹವಾದದ್ದು.

ದೊಡ್ಡ ಧರ್ಮಗಳ ಜತೆಜತೆಯಲ್ಲೇ ಅನೇಕ ತಾಂತ್ರಿಕ ಮತಗಳು ಕರ್ನಾಟಕದಲ್ಲಿ ಪ್ರಚಲಿತವಾಗಿದ್ದವು. ಪ್ರಮುಖ ಧರ್ಮಗಳ ಅಂಗಗಳಾಗಿ ಹಾಗೂ ಸ್ವತಂತ್ರವಾಗಿ ಅಸ್ತಿತ್ವಕ್ಕೆ ಬಂದ ತಾಂತ್ರಿಕ ಮತಗಳು ಕರ್ನಾಟಕದಲ್ಲಿ ಆಚರಣೆಯಲ್ಲಿದ್ದವು. ಪೂರ್ವ ಮಧ್ಯಕಾಲದಲ್ಲಿ ಎಲ್ಲ ಪ್ರಮುಖ ಧರ್ಮಗಳು ತಾಂತ್ರಿಕ ಆಲೋಚನೆಗಳ ಮತ್ತು ಆಚರಣೆಗಳ ಪ್ರಭಾವಕ್ಕೆ ಒಳಗಾಗಿದ್ದದ್ದು ಸಾಮಾನ್ಯ ವಿಷಯವಾಗಿತ್ತು. ಈ ತಾಂತ್ರಿಕ ಮತಗಳ ವಿಷಯ ಅಷ್ಟಾಗಿ ಸಮಾಜದ ಗಮನಕ್ಕೆ ಬರುತ್ತಿರಲಿಲ್ಲ. ಬಹುಮಟ್ಟಿಗೆ ಈ ತಾಂತ್ರಿಕ ಮತಗಳ ಸಾಧಕರು ಅತಿಮಾನುಷ ಸಿದ್ಧಿಗಳನ್ನು ಪಡೆಯಲು, ರಹಸ್ಯ ಆಚರಣೆಗಳ ಮೂಲಕ ಕಾರ್ಯ ಪ್ರವೃತ್ತವಾಗಿರುತ್ತಿದ್ದರು. ಸೌರ, ಗಾಣಪತ್ಯ, ಕೌಳ, ನೀಲಪಟ, ಶಾಕ್ತ, ಸಪ್ತಮಾತೃಕೆಯರ ಆರಾಧನೆ ಮುಂತಾದವುಗಳನ್ನು ಸಮಕಾಲೀನ ಆರಾಧನೆಗಳ ಹಿನ್ನೆಲೆಯಲ್ಲಿ ಹೆಚ್ಚಿನ ಅಭ್ಯಾಸ ಮಾಡಲು ಅವಕಾಶವಿದೆ.

ಧರ್ಮಗಳು ತಾತ್ವಿಕವಾಗಿ ಏನನ್ನೇ ಬೋಧಿಸಿದರೂ, ಮಾರ್ಗದರ್ಶನ ಮಾಡಿದರೂ ಜನ ತಮಗೆ ಪ್ರಿಯವಾದ, ಜನಪ್ರಿಯ ದೇವಾನುದೇವತೆಗಳನ್ನು ಆರಾಧಿಸುತ್ತಿದ್ದುದು ಕಂಡು ಬರುತ್ತದೆ. ಇಂಥ ಜನಪ್ರಿಯ ದೈವಗಳ ಸಂಖ್ಯೆಯನ್ನು ಕರಾರುವಾಕ್ಕಾಗಿ ಗುರುತಿಸುವುದು ಕಠಿಣವಾದರೂ ಶಾಸನ ಕಾವ್ಯಗಳ ಉಲ್ಲೇಖಗಳನ್ನು ಅನುಸರಿಸಿ ಕೆಲವನ್ನು ಸಮೀಕ್ಷಿಸಬಹುದಾಗಿದೆ. ಅಂಥ ಜನಪ್ರಿಯ ದೈವಗಳಲ್ಲಿ ಮೈಲಾರ ಮಾಳಚಿ, ಬಾದುಬ್ಬೆ, ಮಾರಿಕವ್ವೆ ಮುಂತಾದ ದೇವತೆಗಳು ಕರ್ನಾಟಕದಲ್ಲಿ ವಿಶೇಷವಾಗಿ ಆರಾಧನೆಗೊಳ್ಳುತ್ತಿದ್ದರು. ಕೆಲವು ದೇವತೆಗಳು ಕರ್ನಾಟಕದ ಹೊರಗೂ ಜನಪ್ರಿಯ ಆಗಿರುವುದುಂಟು. ಹಾಗೆಯೇ ಗ್ರಾಮದೇವತೆಗಳು ತಮ್ಮ ತಮ್ಮ ಗ್ರಾಮದ ಜನತೆಯ ಮೇಲೆ ವಿಶೇಷ ಪ್ರಭಾವ ಹೊಂದಿರುವುದು ಕಂಡು ಬರುತ್ತದೆ. ಗ್ರಾಮದೇವತೆಗಳನ್ನು ಕುರಿತ ಅಧ್ಯಯನ ಬಹುಶಿಸ್ತೀಯ ನೆಲೆಯಲ್ಲಿ

---

೧ ಹಂಪ.ನಾಗರಾಜಯ್ಯ : ಪೂರ್ವೋಕ್ತ. ಪು.೫.

೨ ಅದೇ. ಪು.೧೦.

ಕೈಗೊಂಡಾಗ ಹೆಚ್ಚು ಫಲಕಾರಿಯಾಗುತ್ತದೆ. ಗ್ರಾಮದೇವತೆಗಳ ಆರಾಧನಾ ಪರಂಪರೆ ಸಮಕಾಲೀನ ಬದುಕಿನಲ್ಲೂ ಹಾಸು ಹೊಕ್ಕಾಗಿರುವುದರಿಂದ ಅದರ ಅಧ್ಯಯನ ಸಂಸ್ಕೃತಿಯ ಅರಿವಿನ ಹಿನ್ನೆಲೆಯಲ್ಲಿ ಹೆಚ್ಚು ಪ್ರಯೋಜನಕರ.

ಧರ್ಮಗಳ ವಿವರವಾದ ಪರಿಶೀಲನೆಯಿಂದ ಆಯಾ ಮತ ಧರ್ಮಗಳ, ಆಚರಣೆಗಳ ಸ್ವರೂಪ ತಿಳಿದು ಬರುತ್ತದೆ. ಒಟ್ಟು ಸಮುದಾಯವಾಗಿ ಜನ ಹೇಗೆ ಸಹಬಾಳ್ವೆ ಮಾಡುತ್ತಿದ್ದರು ಎನ್ನುವುದು ಕುತೂಹಲಕರ ವಿಷಯವಾಗಿದೆ. ಜನರ ಒಳ ಸಂಬಂಧಗಳು, ಸಾಮಾಜಿಕ ಸಂದರ್ಭಗಳಲ್ಲಿ ಭಾಗವಹಿಸುವಿಕೆ, ಪಾಲ್ಗೊಳ್ಳುವಿಕೆಯ ಸ್ವರೂಪ ಹೇಗಿರುತ್ತಿತ್ತು ಎಂಬುದು ವಿಚಾರಯೋಗ್ಯವಾಗಿದೆ. ಆದರ್ಶಯುತವಾಗಿ ನೋಡಿದರೆ ಕೆಲವು ಶಾಸನಗಳಲ್ಲಿ ಪ್ರಕಟವಾಗಿರುವ ಧರ್ಮಸಾಮರಸ್ಯ ಆಶ್ಚರ್ಯ ಹುಟ್ಟಿಸುವಷ್ಟು ಗೌರವ ಭಾವನೆ ತರುವಂತಿದೆ. ಎಲ್ಲ ಕಾಲದಲ್ಲಿ ಇರುವಂತೆ ಆದರ್ಶ ಪಾಲಕರು ರಾಜನಿಂದ ಹಿಡಿದು ಸಾಮಾನ್ಯ ಪ್ರಜೆಗಳವರೆಗೂ ಇದ್ದದ್ದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಧಾರ್ಮಿಕ ಸಾಮರಸ್ಯದ ಚಿತ್ರವನ್ನು ಹಲವಾರು ಶಾಸನಗಳು ಕಟ್ಟಿಕೊಡುತ್ತವೆ. ಹಾಗೆಯೇ ಕೌಟುಂಬಿಕ ಮಟ್ಟದಲ್ಲಿಯೂ ಭಿನ್ನ ಧರ್ಮಾನುಯಾಯಿ ದಂಪತಿಗಳು ಅನ್ಯೋನ್ಯ ದಾಂಪತ್ಯ ಜೀವನ ನಡೆಸುತ್ತಿದ್ದ ಉದಾಹರಣೆಗಳು ಹಲವಾರು ದೊರೆಯುತ್ತವೆ. ದೊರೆತ ಮಾಹಿತಿಯ ಆಧಾರಗಳಿಂದ ಹೇಳುವುದಾದರೆ ಧಾರ್ಮಿಕ ಅನುಸರಣೆ ಕೌಟುಂಬಿಕ ಜೀವನಕ್ಕೆ ಅಡ್ಡಿ ಮಾಡಿದಂತಿಲ್ಲ. ಆದರೆ ಬ್ರಹ್ಮಶಿವ ಮತ್ತು ಬಸವಣ್ಣ ಇಂಥ ಕೌಟುಂಬಿಕ ಜೀವನವನ್ನು ಪುರಸ್ಕರಿಸಿಲ್ಲ. ಒಂದು ಧರ್ಮದ ಅನುಯಾಯಿಗಳು ಬೇರೊಂದು ಧರ್ಮಕ್ಕೆ ಉದಾರವಾಗಿ ದಾನ ಮಾಡಿದ ಪ್ರಸಂಗಗಳು, ಬೇರೊಂದು ಧರ್ಮದ ದೇವಾಲಯಗಳನ್ನು ಕಟ್ಟಿಸಿದ ಉದಾಹರಣೆಗಳು ಸಾಕಷ್ಟು ದೊರೆಯುತ್ತವೆ.

ಹೀಗೆ ಉದಾರವಾದಿ ಪರಧರ್ಮ ಸಹಿಷ್ಣುಗುಣ ಶಾಸನಗಳಿಂದ ದೊರೆತು, ಸುಂದರ, ಆದರ್ಶಮಯ ಚಿತ್ರ ಮೂಡಿಬಂದಂತೆ, ಇದಕ್ಕೆ ತೀರಾ ತದ್ವಿರುದ್ಧವಾದ ವಿಕೃತ ಚಿತ್ರಗಳು ಶಾಸನಗಳಿಂದ, ಶಿಲ್ಪಗಳಿಂದ ಮೂಡಿ ಬರುವುದನ್ನು ಕಾಣಬಹುದಾಗಿದೆ. ದೇವಾಲಯಗಳ ವ್ಯವಸ್ಥೆಯಲ್ಲಿ, ಅಗ್ರಹಾರಗಳಲ್ಲಿ, ಭಗ್ನ ಗುಡಿಗೋಪುರಗಳಲ್ಲಿ ಜನರ ಅಸಹಿಷ್ಣುಗುಣ ಪ್ರಕೋಪ ಸ್ಥಿತಿ ಮುಟ್ಟಿರುವುದಕ್ಕೆ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. 'ಹರಿಹರ' ಪರಿಕಲ್ಪನೆಯಿಂದ ಶೈವ ವೈಷ್ಣವರ ಮಧ್ಯೆ ಸಮನ್ವಯ ಕಲ್ಪಿಸುವ ದುರಸ್ತಿ ವ್ಯವಸ್ಥೆ ಮೊದಲಾದರೂ ಅಗ್ರಹಾರಗಳು ಶೈವಕ್ಷೇತ್ರ–ವೈಷ್ಣವಕ್ಷೇತ್ರವೆಂಬಂತೆ ತುಂಡಾಗಿರುವುದು ಶಾಸನಗಳಿಂದ ಸುವಿದಿತವಾಗಿದೆ.

ಧರ್ಮ ಎಲ್ಲ ಕಾಲದಲ್ಲಿಯೂ ಮನುಷ್ಯನನ್ನು ಭಾವನಾತ್ಮಕವಾಗಿ ಒಟ್ಟುಗೂಡಿಸುವ ಪ್ರಚೋದಕ ಶಕ್ತಿಯಾಗಿರುವುದಾದರೂ, ಅದು ಪ್ರಶಾಂತ ಬದುಕನ್ನು ಛಿದ್ರಗೊಳಿಸಿ ಘರ್ಷಣೆಗಳಿಗೆ, ವಿಪ್ಲವಗಳಿಗೆ ಕಾರಣವಾಗಿರುವುದೂ ಕಂಡು ಬರುತ್ತದೆ. ಆದರ್ಶದ ಮಾತನ್ನು ಆಡುವಾಗ 'ಕರ್ನಾಟಕ ಧಾರ್ಮಿಕ ಸಮನ್ವಯ ಭೂಮಿ' ಎಂದು ಹೇಳಿದರೂ ವಾಸ್ತವವಾಗಿ ಹಲವು ಧಾರ್ಮಿಕ ಘರ್ಷಣೆಗಳು ನಡೆದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಭಗ್ನ ದೇವಾಲಯಗಳು, ಶಿಲ್ಪಗಳು, ಹಾಳು ಬಿದ್ದಿರುವ ಅಗ್ರಹಾರಗಳು, ಊರು–ಗ್ರಾಮಗಳು ಧಾರ್ಮಿಕ ಸಂಘರ್ಷಣೆಗಳಿಗೆ ಸಾಕ್ಷಿಗಳಾಗಿವೆ. ಇವುಗಳಲ್ಲಿ ಕೆಲವು ಜನರ ಅನಾದರಣೆಯಿಂದ, ಪ್ರಾಕೃತಿಕ ಕಾರಣಗಳಿಂದ ಆಗಿರಬಹುದಾದರೂ ಹಲವು, ಧಾರ್ಮಿಕ ಮತೀಯ ವೈಷಮ್ಯಗಳಿಂದ ಎಂಬುದು ಶಾಸನೋಕ್ತ ಉಲ್ಲೇಖಗಳಿಂದ ಸ್ಪಷ್ಟವಾಗುತ್ತದೆ. ಆರ್.ಸಿ.ಮಜುಂದಾರರ ಮಾತನ್ನು ಗಮನಿಸಿದರೆ ಈ ರೀತಿಯ ಮತೀಯ ವೈಷಮ್ಯ ಕರ್ನಾಟಕಕ್ಕೆ ವಿಶೇಷವಾದದ್ದೆಂದು ಭಾವಿಸಬೇಕಾಗಿಲ್ಲ. 'ಅಷ್ಟು ಹೊತ್ತಿಗೆ ಇಡೀ ಭಾರತಾದ್ಯಂತ ಸಾಮಾನ್ಯವಾಗಿ ಬೌದ್ಧಿಕ ಮತ್ತು ಸಾಂಸ್ಕೃತಿಕ ಇಳಿಮುಖ ಪ್ರಾರಂಭವಾಗಿತ್ತು' ಎಂಬ ಮಾತು ಗಮನಾರ್ಹವಾಗಿದೆ. ಭಾರತೀಯ ಧಾರ್ಮಿಕ ಸಂಘರ್ಷಗಳ ಹಿನ್ನೆಲೆಯಲ್ಲಿ ಕರ್ನಾಟಕವನ್ನಿಟ್ಟು ನೋಡುವುದು ಅಗತ್ಯವಾಗಬಹುದು.

ಪ್ರಾಚೀನ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯನ್ನು ಶಾಸನಗಳ ಆಧಾರದಿಂದ ಕಟ್ಟಿಕೊಡುವ ಪ್ರಯತ್ನದಲ್ಲಿ ಅನೇಕ ಅಂಶಗಳನ್ನು ಗಮನಕ್ಕೆ ತೆಗೆದುಕೊಳ್ಳುವುದು ಅಗತ್ಯವಾಗುತ್ತದೆ. ಏಕ ಕಾಲದಲ್ಲಿ ಸಮಾಜ ಸಾಂಪ್ರದಾಯಿಕ ಮತ್ತು ಪರಿವರ್ತನಶೀಲತೆಯ ಚಲನೆಯಲ್ಲಿ ಇರುತ್ತದೆ. ಪ್ರಾಚೀನ ಕರ್ನಾಟಕದ ಕಾಲದ ಹೊತ್ತಿಗೆ ವರ್ಣಪದ್ಧತಿಯ ಪರಿಪಾಲನೆ ಬಹುಮಟ್ಟಿಗೆ ಕುಸಿದುಹೋಗಿದ್ದಿತೆಂಬ ಅಭಿಪ್ರಾಯವಿದೆ. ಜಾತಿ ಉಪಜಾತಿಗಳು ರೂಪಿತವಾಗಿದ್ದವು. ಆದರೂ ಸಾಂಪ್ರದಾಯಿಕವಾಗಿ ವರ್ಣಾಶ್ರಮದ ಮಾತುಗಳು ಸಮಕಾಲೀನ ಕಾವ್ಯಗಳಲ್ಲಿ ಬಳಕೆಯಾಗಿರುವುದುಂಟು. ಸಾಮಾಜಿಕ ವ್ಯವಸ್ಥೆಯ ಅಧ್ಯಾಯದಲ್ಲಿ ಚತುರ್ಥವಂಶವನ್ನು ಅರ್ಥೈಸುವಾಗ 'ಬಹುಶಃ ಚತುರ್ತ್ಥವಂಶ (ಚತುರ್ಥ) ಎಂಬ ಮಾತು ಶೂದ್ರವನ್ನು ಸೂಚಿಸುತ್ತದೆ.'[೧] ಎಂದು ಬರೆಯಲಾಗಿದೆ. ಆದರೆ ಚತುರ್ಥವಂಶವೆಂಬ ಮಾತು

೧ ಇದೇ ಗ್ರಂಥದ ಪು. ೧೮೦.

ಜೈನರಲ್ಲಿರುವ ಒಳಜಾತಿಯನ್ನು ಸೂಚಿಸುವುದೆಂದು ಹಂಪ.ನಾಗರಾಜಯ್ಯನವರು ಸೂಚಿಸುತ್ತಾರೆ. 'ಚತುರ್ಥರು, ಬೋಗಾರರು, ಸಾದರು, ಪಂಚಮರು, ವೈಶ್ಯರು ಎಂಬ ಕುಲಗಳು ಜೈನರಲ್ಲಿ ಇವೆ'[1] ಎಂದಿದ್ದಾರೆ. ಅವು ಆಯಾ ವರ್ಗ/ಜಾತಿಗಳಿಂದ ಮತಾಂತರವಾಗಿ, ಪರಿವರ್ತನೆಯಾಗಿ ಜೈನಧರ್ಮಕ್ಕೆ ಸೇರ್ಪಡೆಯಾದ ಮೂಲದ ಕಡೆಗೆ ನಿರ್ದೇಶಿಸುತ್ತವೆಯೇ ಎಂಬುದು ಪರಿಶೀಲನಾರ್ಹವಾಗಿದೆ. ಈ ಸಂದರ್ಭದಲ್ಲಿ ವೀರಶೈವ ಪರಿಸರದಲ್ಲಿ ಶಿವಭಕ್ತರಾದ ಹೊಲೆಯರನ್ನು 'ಹಿರಿಯ ಮಾಹೇಶ್ವರ'ರೆಂದು ಕರೆದಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಎಲ್ಲ ರೀತಿಯ ದಾಸಿಗಳು ಸಮಾಜದಲ್ಲಿ ಗೌರವ ಪಡೆದಿದ್ದವು. ಗೋವುಗಳನ್ನು ದಾನ ಮಾಡಿದ ಸಂದರ್ಭದಲ್ಲಿ ನಿಲ್ಲಿಸುತ್ತಿದ್ದ ಶಾಸನಗಳು ಗೋಸಾಸ ಶಾಸನಗಳು. ಇವುಗಳ ಅಧ್ಯಯನ ವ್ಯವಸ್ಥಿತವಾಗಿ ನಡೆಯಬೇಕಾಗಿದೆ.[2]

ಕರ್ನಾಟಕದ ಆರ್ಥಿಕ ವ್ಯವಸ್ಥೆ ಸುವ್ಯವಸ್ಥಿತವಾಗಿ ಇದ್ದಿತು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಮೊದಲನೆಯದಾಗಿ ಎದ್ದು ಕಾಣುವುದೇ ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದ ಸಾಮಗ್ರಿಯ ಬಾಹುಳ್ಯ. ಕೃಷಿ, ವಾಣಿಜ್ಯ-ವ್ಯವಹಾರ, ವಾಣಿಜ್ಯ ಸಂಘಟನೆಗಳು, ತೆರಿಗೆಗಳು, ದಂಡಗಳು ಹಾಗೂ ಇವುಗಳಿಗೆ ಸಂಬಂಧಿಸಿದ ಅಧಿಕಾರ ವರ್ಗ ಮುಂತಾದವುಗಳನ್ನು ನಿರೂಪಿಸುವ ವಿಪುಲ ಸಾಮಗ್ರಿ ಶಾಸನಗಳಲ್ಲಿ ನಿಕ್ಷಿಪ್ತವಾಗಿದೆ. ರಾಜರು ಹಾಕುತ್ತಿದ್ದ ತೆರಿಗೆಗಳ ವೈವಿಧ್ಯ ಬೆರಗನ್ನು ತರುತ್ತದೆ; ಹಾಗೆಯೇ ಅವುಗಳ ಆಧಿಕ್ಯವೂ ಗಮನ ಸೆಳೆಯುತ್ತದೆ. ಕೆಲವು ತೆರಿಗೆಗಳು ಸ್ಥಿರವಾಗಿದ್ದರೂ ಹೊಸ ಹೊಸ ತೆರಿಗೆಗಳು ಕಾಣಬರುತ್ತವೆ. ತೆರಿಗೆಗಳು ದೊಡ್ಡ ಪ್ರಮಾಣದಲ್ಲಿ ಕಂಡು ಬಂದರೂ ಅವು ಎಲ್ಲ ಪ್ರದೇಶದಲ್ಲಿ ಸಮಾನವಾಗಿ ಇರಲಿಲ್ಲ. ತೆರಿಗೆಗಳ್ಳತನ ಆ ಕಾಲದಲ್ಲಿಯೂ ಇದ್ದದ್ದು ತಿಳಿದು ಬರುತ್ತದೆ. ಬಡತನದ ಚಿತ್ರಗಳು ಶಾಸನಗಳಲ್ಲಿ ಅಷ್ಟಾಗಿ ಅವಕಾಶ ಪಡೆಯುವುದಿಲ್ಲ ಎಂಬುದು ಸಹಜವಾಗಿಯೇ ಇದೆ.

ಕರ್ನಾಟಕದಲ್ಲಿ ಶಾಸನಗಳಿಂದ ಆಡಳಿತ ವ್ಯವಸ್ಥೆಯ ಚಿತ್ರ ಸಮೃದ್ಧವಾಗಿ ದೊರೆಯುತ್ತದೆ. ಶಾಸನಗಳು ಮುಖ್ಯವಾಗಿ ಪ್ರಭುತ್ವ ದಾಖಲೆಗಳಾಗಿರುವುದರಿಂದ ಅಧಿಕಾರ, ಅಧಿಕಾರವರ್ಗ, ಆಡಳಿತ, ಆಡಳಿತ ವ್ಯವಸ್ಥೆ, ವ್ಯವಸ್ಥಾಪನೆಯಲ್ಲಿ ಅಧಿಕಾರ ಶ್ರೇಣಿ, ನ್ಯಾಯ ತೀರ್ಮಾನ, ವಿವಾದ ಪರಿಹಾರ ಮುಂತಾದ ವಿಷಯಗಳಿಗೆ ಸಂಬಂಧಿಸಿದ ವಿಪುಲ ಸಾಮಗ್ರಿ ದೊರೆಯುತ್ತದೆ. ಅದನ್ನು ವ್ಯವಸ್ಥಿತವಾಗಿ ಜೋಡಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಿದಾಗ ಅದು ರಾಜ್ಯಾಡಳಿತ, (ಕೇಂದ್ರಾಡಳಿತ), ಮಂಡಲದ ಆಡಳಿತ, ನಾಡಿನ ಆಡಳಿತ, ಊರುಗಳ ಆಡಳಿತ, ಪಟ್ಟಣಗಳ ಆಡಳಿತ, ಗ್ರಾಮಗಳ ಆಡಳಿತ, ಅಗ್ರಹಾರಗಳ ಆಡಳಿತ ಹೀಗೆ ಹಲವು ಹಂತಗಳಲ್ಲಿ ವ್ಯವಸ್ಥಿತವಾಗಿ ನಡೆಯುತ್ತಿದ್ದುದು ತಿಳಿದು ಬರುತ್ತದೆ. ವಿವಿಧ ಆಡಳಿತ ಶಾಖೆಗಳಿಗೆ ಸಂಬಂಧಿಸಿದ ಆಡಳಿತಕ್ಕೆ ಸಂಬಂಧಿಸಿದ ಅಧಿಕಾರವರ್ಗ, ಉದ್ಯೋಗಿಗಳು, ಸಿಬ್ಬಂದಿ ಇರುತ್ತಿದ್ದರು. ಇವುಗಳ ವ್ಯವಸ್ಥಿತ ಚಿತ್ರ ಶಾಸನಗಳಿಂದ ದೊರೆಯುತ್ತದೆ. ಅಲ್ಲಲ್ಲಿ ಕೆಲವು ಅಧಿಕಾರವರ್ಗದ ಅರ್ಥೈಸುವಿಕೆಯಲ್ಲಿ ಸಣ್ಣ ಪುಟ್ಟ ತೊಡಕುಗಳಿದ್ದರೂ ಒಟ್ಟಾಗಿ ಒಂದು ಸಾಮಾನ್ಯ ಆಡಳಿತ ಚಿತ್ರವನ್ನು ರೂಪಿಸಿಕೊಳ್ಳಬಹುದಾಗಿದೆ.

ಪ್ರಾಚೀನ ಭಾರತದಲ್ಲಿ ವಿದ್ಯಾಭ್ಯಾಸಕ್ಕೆ ಬಹು ಪ್ರಮುಖವಾದ ಸ್ಥಾನವನ್ನು ನೀಡಲಾಗಿತ್ತು. ಕರ್ನಾಟಕದಲ್ಲಿ ಔಪಚಾರಿಕ ಶಿಕ್ಷಣ ದೇವಾಲಯಗಳಲ್ಲಿ, ಮಠಗಳಲ್ಲಿ, ಅಗ್ರಹಾರಗಳಲ್ಲಿ, ಬ್ರಹ್ಮಪುರಿಗಳಲ್ಲಿ, ಘಟಿಕಾಸ್ಥಾನಗಳಲ್ಲಿ, ಶಿವಪುರಗಳಲ್ಲಿ ನಡೆಯುತ್ತಿದ್ದಿತು. ಅಧ್ಯಯನ ವಿಷಯಗಳು, ವಿದ್ವಾಂಸರ ವಿಶೇಷಣಗಳು ವಿದ್ವತ್ತಿನ ಮಹತ್ತನ್ನು ತೋರಿಸಿಕೊಡುತ್ತವೆ. ಬಾಲಶಿಕ್ಷಣದಿಂದ ಪ್ರೌಢ ಶಿಕ್ಷಣದವರೆಗೆ ವಿದ್ಯಾಭ್ಯಾಸದ ವಿವರಗಳು ದೊರೆಯುತ್ತವೆ. ವೃತ್ತಿಶಿಕ್ಷಣ ಉಲ್ಲೇಖಗಳ ಅಭಾವ ಅನೌಪಚಾರಿಕ ವಿದ್ಯಾಭ್ಯಾಸದ ವಿಷಯವಾಗಿ ಸೂಚನೆಯನ್ನು ಕೊಡುತ್ತದೆ. ಆಲ್ಟೇಕರ್ ಅವರು ಗೃಹಶಿಕ್ಷಣ ಮತ್ತು ಅಭ್ಯಾಸಿ ಶಿಕ್ಷಣ ವ್ಯವಸ್ಥೆಗಳು ಅನೌಪಚಾರಿಕ ಅಥವಾ ವೃತ್ತಿ ಶಿಕ್ಷಣ ಪದ್ಧತಿಗಳಾಗಿದ್ದವೆಂದು ಭಾವಿಸುತ್ತಾರೆ. ನೇಯ್ಗೆ, ಶಿಲ್ಪಕಲೆ, ಬಡಗಿ, ಗಣಿಗಾರಿಕೆ, ಚಿನಿವಾರಿಕೆ, ಕುಂಬಾರಿಕೆ, ಕಮ್ಮಾರಿಕೆ, ವ್ಯಾಪಾರ ಮುಂತಾದ ವೃತ್ತಿ ಶಿಕ್ಷಣಗಳಿಗೆ ಮನೆಗಳೇ ಶಿಕ್ಷಣ ಕೇಂದ್ರಗಳಾಗಿದ್ದಿರಬೇಕು. ಇದು ಬಹುಶಃ 'ನೋಡಿ ಕಲಿ ಮಾಡಿ ಕಲಿ' ಮಾರ್ಗದಲ್ಲಿ ನಡೆಯುತ್ತಿದ್ದಿರಬೇಕು. ವೃತ್ತಿ ಶಿಕ್ಷಣದಲ್ಲಿ ಪರಿಣತನಾದ ವ್ಯಕ್ತಿ ತನ್ನ ಹೆಸರು ನಮೂದು ಮಾಡುವಾಗ ತನ್ನ ಗುರು, ತನ್ನ ತಂದೆ, ತನ್ನ ಅಣ್ಣ ಮುಂತಾದವರನ್ನು ಹೆಸರಿಸುವ ಮೂಲಕ ಅವರನ್ನು ಗೌರವದಿಂದ ಸ್ಮರಿಸುವುದರ ಜತೆಯಲ್ಲಿ ಪರೋಕ್ಷವಾಗಿ ತನಗೆ ವಿದ್ಯಾಭ್ಯಾಸ ಯಾರಿಂದ ಲಭ್ಯವಾಯಿತೆಂದು ಸೂಚಿಸುವುದನ್ನು ಗಮನಿಸಬಹುದು.[3]

---

೧. ಹಂಪ.ನಾಗರಾಜಯ್ಯ : ಮೂಲ ಚೂಲ. ಪು. ೧೬೭.

೨. ಎಂ.ಚಿದಾನಂದ ಮೂರ್ತಿ : ಸಂಶೋಧನ ತರಂಗ – ಸಂ.೨, ಪು. ೨೮೭–೨೯೨, ಎಂ.ಎಂ.ಕಲಬುರ್ಗಿ : ಮಾರ್ಗ–೨, ಪು. ೧೧–೨೦,

೩. ಡಿ.ವಿ.ಪರಮಶಿವಮೂರ್ತಿ : ಕನ್ನಡ ಶಾಸನ ಶಿಲ್ಪ, ಪು. ೬೬–೭೨.

ಕರ್ನಾಟಕದಲ್ಲಿ ಸ್ತ್ರೀಯರ ಔಪಚಾರಿಕ ವಿದ್ಯಾಭ್ಯಾಸದ ಚಿತ್ರ ತುಂಬಾ ನಿರಾಶಾದಾಯಕವಾಗಿರುವುದು ಕಂಡು ಬರುತ್ತದೆ. ವಚನಕಾರರ ಸ್ತ್ರೀಪರ ನಿಲವು ಸ್ತ್ರೀಶಿಕ್ಷಣಕ್ಕೆ ದೊಡ್ಡಮಟ್ಟದ ಪ್ರೋತ್ಸಾಹ ನೀಡಿದರೂ ಅದು ಅನಂತರದಲ್ಲಿ ಮುಂದುವರಿದಿಲ್ಲ ಎಂಬುದು ಗಮನಿಸಬೇಕಾದ ಅಂಶವಾಗಿದೆ. ಸ್ತ್ರೀಶಿಕ್ಷಣಕ್ಕೆ ಸಂಬಂಧಿಸಿದ ಉಲ್ಲೇಖಗಳ ಅಭಾವವೇ ಅದರ ಸ್ಥಿತಿಗತಿಯನ್ನು ಸೂಚಿಸುತ್ತದೆ. ಸ್ತ್ರೀಶಿಕ್ಷಣ ಸಂಗೀತ, ನೃತ್ಯ, ಚಿತ್ರಕಲೆ ಮುಂತಾದವುಗಳಿಗೆ ಬಹುಮಟ್ಟಿಗೆ ಸೀಮಿತವಾಗಿರುವಂತಿದೆ.

ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳು ತುಂಬಾ ಸಂಕೀರ್ಣ ಸ್ವರೂಪದ ಪಾತ್ರವನ್ನು ಸಾಮಾಜಿಕ ಹಾಗೂ ಧಾರ್ಮಿಕ ಜೀವನದಲ್ಲಿ ವಹಿಸಿರುವುದನ್ನು ಕಾಣಬಹುದಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ದೇವಾಲಯಗಳ ಪಾತ್ರ, ಕಾರ್ಯವ್ಯಾಪ್ತಿ, ಪ್ರಭಾವ ಬಹುಮುಖಿಯಾದದ್ದು. ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಜನಜೀವನದಲ್ಲಿ ಅತ್ಯಂತ ಗಣ್ಯಸ್ಥಾನವನ್ನು ಅವು ಹೊಂದಿದ್ದವು. ದೇವಾಲಯಗಳ ನಿರ್ಮಾಣ, ನಿರ್ವಹಣೆ, ಪೂಜಾವಿಧಿಗಳು, ಸೃಷ್ಟಿಸುತ್ತಿದ್ದ ಉದ್ಯೋಗಾವಕಾಶಗಳು, ಹಣಕಾಸಿನ ಕೇಂದ್ರ, ನಿರ್ವಹಿಸುತ್ತಿದ್ದ ಕರ್ತವ್ಯಗಳು, ಧಾರ್ಮಿಕ ಕೇಂದ್ರ, ವಿದ್ಯಾ ಪ್ರಸಾರ, ಯತಿಗಳ ಆವಾಸಸ್ಥಾನ, ಶಿಲ್ಪ, ಸಂಗೀತ, ನೃತ್ಯ, ಚಿತ್ರಕಲೆ, ಭೈಷಜ್ಯ, ಅಭಯ, ಆಶ್ರಯಸ್ಥಾನ, ನ್ಯಾಯ ನಿರ್ಣಯ-ಹೀಗೆ ದೇವಾಲಯಗಳ ಹಿಂದೆ ನೂರಾರು ವಿಷಯಗಳು ತಳುಕು ಹಾಕಿಕೊಂಡಿರುತ್ತಿದ್ದವು. ಅವುಗಳಿಗೆ ಹೊಂದಿಕೊಂಡಂತೆ ಇರುತ್ತಿದ್ದ ಮಠಗಳು ಪರಸ್ಪರ ಪೂರಕವಾಗಿ ಕಾರ್ಯ ನಿರ್ವಹಿಸಿವೆ. ದೇವಾಲಯಗಳ ವಿವರವಾದ ಅಧ್ಯಯನ ನಾಡಿನ ಸಾಂಸ್ಕೃತಿಕ ದೃಷ್ಟಿಯಿಂದ ಉತ್ತಮ ಫಲಿತಾಂಶಗಳನ್ನು ನೀಡಿದೆ. ಷ.ಶೆಟ್ಟರ್ ಅವರು ಹೊಯ್ಸಳ ದೇವಾಲಯಗಳ ಬಗ್ಗೆ ರಚಿಸಿರುವ ಪುಸ್ತಕಗಳು ವಿಶೇಷವಾಗಿ ಗಮನಾರ್ಹವಾಗಿವೆ.

ಅಧ್ಯಯನ ಕಾಲದ ದೇವಾಲಯಗಳು ತಮ್ಮ ವಾಸ್ತು ಹಾಗೂ ಮೂರ್ತಿ ಶಿಲ್ಪ ದೃಷ್ಟಿಯಿಂದ ಅನೇಕ ವೈಶಿಷ್ಟ್ಯಗಳನ್ನು ಪಡೆದು ರೂಪಿತವಾಗಿ 'ಹೊಯ್ಸಳ ಶೈಲಿ' ಎಂದು ಖ್ಯಾತಿ ಪಡೆಯಿತು. ಚಾಳುಕ್ಯ ಶೈಲಿಯಿಂದ ಪ್ರೇರಿತವಾಗಿ ಬೆಳೆದರೂ ತನ್ನ ಸ್ವಂತಿಕೆಯನ್ನು ರೂಪಿಸಿಕೊಂಡು ನಾಡಿನ ದೇವಾಲಯಗಳ ರಚನೆಯಲ್ಲಿ ತನ್ನತನವನ್ನು ತೋರಿದೆ. ತಲವಿನ್ಯಾಸ, ಶಿಲ್ಪ ಬಾಹುಳ್ಯ, ಏಕದಿಂದ ಪಂಚಕೂಟದವರೆಗೆ ವಿಸ್ತರಿಸಿದ ರೀತಿಯಿಂದ ಒಂದು ಹೊಸ ವಾಸ್ತುಶಿಲ್ಪ ಶೈಲಿಯನ್ನು ಆ ಕಾಲದ ಶಿಲ್ಪಿಗಳು ರೂಢಿಗೆ ತಂದರು. ಅದೇ ಹೊಯ್ಸಳ ಶೈಲಿ. ತಮ್ಮ ಕಾಲಕ್ಕೆ ಹಿಂದೆ ಬಳಕೆಯಲ್ಲಿದ್ದ ಮರಳು ಕಲ್ಲನ್ನು ಬಿಟ್ಟು ಬಳಪದ ಕಲ್ಲನ್ನು ದೇವಾಲಯ ನಿರ್ಮಾಣಕ್ಕೆ ಬಳಸಿದ್ದರಿಂದ ಸಹಜವಾಗಿ ವಿಸ್ತಾರ ಕಡಮೆಯಾದರೂ ಅಲಂಕರಣೆಗೆ ಹೆಚ್ಚು ಅವಕಾಶವಾಗಿ ನಯಗಾರಿಕೆ, ಕುಸುರಿ ಕೌಶಲ, ಕಲಾತ್ಮಕತೆಗಳ ನಾವೀನ್ಯವನ್ನು ತಂದವು.

ನಕ್ಷತ್ರಾಕಾರದ ತಲವಿನ್ಯಾಸದಿಂದ ನಾಲ್ಕರಿಂದ ಹದಿನಾರು ಶಾಖೆಗಳುಳ್ಳ ತಲವಿನ್ಯಾಸಗಳು ಕಂಡು ಬರುತ್ತವೆ. ಈ ತಲವಿನ್ಯಾಸದ ಮೂಲೆಗಳನ್ನು ಅನುಸರಿಸಿ ಸುಮಾರು ಐದು ಅಡಿ ಎತ್ತರದ ಜಗತಿ ಇರುತ್ತದೆ. ಇದು ಅಗಲವಾಗಿದ್ದು ಅದರ ಮಧ್ಯದಲ್ಲಿ ದೇವಾಲಯವಿದ್ದು ಪ್ರದಕ್ಷಿಣಾ ಪಥಕ್ಕೆ ಇದು ಅನುಕೂಲಕರವಾಗುರುತ್ತದೆ. ಜತೆಗೆ ಪ್ರದಕ್ಷಿಣಾ ಪಥದಲ್ಲಿ ಸಾಗುತ್ತಲೇ ಹೊರಗೋಡೆಗಳ ಮೇಲೆ ರಚಿತವಾದ ಸುಂದರ ಶಿಲ್ಪ ಸೌಂದರ್ಯವನ್ನು ಕಲಾರಸಿಕರು, ಭಕ್ತರು ಸವಿಯಬಹುದು. ದೇವಾಲಯದ ಪ್ರವೇಶ ದ್ವಾರದಲ್ಲಿ ಜಗತಿಯನ್ನು ಹತ್ತಲು ಮೆಟ್ಟಿಲುಗಳಿರುತ್ತವೆ. ಹೊಯ್ಸಳ ಶೈಲಿಯ ಇನ್ನೊಂದು ವಿಶೇಷತೆ ಆ ದೇವಾಲಯಗಳ ಕಂಬಗಳಲ್ಲೂ ಕಂಡು ಬರುತ್ತದೆ. ಕಂಬಗಳ ನಿರ್ಮಾಣದಲ್ಲಿ ಲೇತ್‌ಗಳನ್ನು ಬಳಸಿ ಮಾಡಿದ ರೀತಿ ಅವುಗಳ ನುಣುಪು, ವಿನ್ಯಾಸಗಳು ಕಲಾವಂತಿಕೆಯ ಮೆರಗು ನೀಡಿವೆ. ರಾಮಾಯಣ, ಮಹಾಭಾರತ, ಭಾಗವತ, ಪಂಚತಂತ್ರ ಮತ್ತು ಅನೇಕ ಪುರಾಣಗಳಿಂದ ರೂಪಿಸಿದ ದೇವಾಲಯದ ಹೊರಗೋಡೆಗಳ ಮೇಲಿನ ಶಿಲ್ಪ ಪಟ್ಟಿಕೆಗಳು, ವಿಗ್ರಹಗಳು ಕಲೆಯ ಉತ್ಕೃಷ್ಟ ಮಾದರಿಗಳಾಗಿವೆ. ದೇವಾಲಯದ ಒಳಗೆ ಭುವನೇಶ್ವರಿ ರಚನೆಯಲ್ಲಿ ಕಂಡುಬರುವ ಸೂಕ್ಷ್ಮ ಕೆತ್ತನೆಗಳು ಕಲಾವಿದರ ಪ್ರತಿಭೆಯ ಪ್ರದರ್ಶನದ ಉತ್ತುಂಗತೆಯನ್ನು ತೋರ್ಪಡಿಸುತ್ತವೆ. ಹಾಗೆಯೇ ಅವರು ರೂಪಿಸಿದ ಮದನಿಕಾ ವಿಗ್ರಹಗಳು ಕಲಾ ಸೌಂದರ್ಯಕ್ಕೆ ಖ್ಯಾತವಾಗಿವೆ. ಕಲಾ ನಿರ್ಮಾಣದಲ್ಲಿ ಅಮೋಘವೂ ಅತ್ಯಂತ ಸುಂದರವೂ ಆದ ಶಿಲಾಬಾಲಿಕೆಯರ ವಿಗ್ರಹಗಳು ಜಗತ್ಪ್ರಸಿದ್ಧವಾಗಿವೆ. ಕಲಾ ಇತಿಹಾಸಕಾರರಿಂದ ಅನುಪಮ ಕೃತಿಗಳೆಂದು ಹೆಸರಾಗಿವೆ. ಕಂಬಗಳ ಅಗ್ರಭಾಗದಲ್ಲಿ ಬೋದಿಗೆ ಮತ್ತು ಛಾವಣಿಗಳ ನಡುವೆ ಅಡ್ಡದೂಲೆಗಳಿಗೆ ಆಧಾರಗಳಾಗಿರುವ ಹಾಗೆ ಮುಂಬಾಗಿ ನಿಂತಿರುವಂತೆ ಜೋಡಿಸಲಾಗಿದೆ. ಅನೇಕ ವೈವಿಧ್ಯಮಯ ಆಭರಣ ಧರಿಸಿರುವ ಯೌವನಭರಿತ ತರುಣಿಯರ ಶಿಲ್ಪಗಳು ಸೌಂದರ್ಯದ ಖನಿಗಳಾಗಿವೆ.

ಹೀಗೆ ಹೊಯ್ಸಳ ಶೈಲಿ ತನ್ನ ವೈಶಿಷ್ಟ್ಯಗಳಿಂದ ಎದ್ದು ಕಾಣುತ್ತದೆ. ಕಲಾ ವಿಮರ್ಶಕರು ಹೊಯ್ಸಳ ಶೈಲಿಯನ್ನು ಔತ್ತರೇಯ-ದಾಕ್ಷಿಣಾತ್ಯ ಶೈಲಿಗಳ ಮಧ್ಯವರ್ತಿಯೆಂದು ಗುರುತಿಸಿದ್ದರೂ ಔತ್ತರೇಯ ಶೈಲಿಯ ಲಕ್ಷಣಗಳು ವಿರಳವಾಗಿವೆ.

